ಬರೆಸಿರುವದರಿಂದ, ಅದರ ಯೋಗ್ಯತೆಯನ್ನು ನಾನು ವರ್ಣಿಸಲಾರೆನು. ಇಡಿಯ ಕರ್ನಾಟಕದ ಚಿತ್ತವನ್ನು ಈ ಕಾದಂಬರಿಯು ಆಕರ್ಷಿಸಿರುವದು. ಈಗಿನ ಕಾಲದಲ್ಲಿ ಈ ಕಾದಂಬರಿಯನ್ನು ಓದದ ಕನ್ನಡಿಗರು ನಿಶ್ಚಯವಾಗಿ ಅಧನ್ಯರು. ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯರ ಅಲೌಕಿಕ ಸಾಮರ್ಥ್ಯವು ಯಾವ ಕನ್ನಡಿಗರ ಸದೂರ್ಮಿಗಳನ್ನು ಸ್ಫೂರ್ತಿಗೊಳಿಸಲಿಕ್ಕಿಲ್ಲ? ಗಳಗನಾಥರ ವಿವಿಧ ಮನೋಹರ ಕಾದಂಬರಿಗಳಲ್ಲಿ ಇದು ಶ್ರೇಷ್ಠತರ ಕಾದಂಬರಿಯಾಗಿದ್ದು, ವಿದ್ಯಾರಣ್ಯರಂತ ಮಹಾತ್ಮರ ಸತ್ ಸ್ಫೂರ್ತಿಯಿಂದ ಆ ಗಳಗನಾಥರ ಹೃದಯವು ಇದರಲ್ಲಿ ಬಿಚ್ಚಿ ಇಡಲ್ಪಟ್ಟಿರುವದು.

ಈ ಮನೋಹರ ಕಾದಂಬರಿಯಲ್ಲಿ ೬೦ ಪ್ರಕರಣಗಳಿದ್ದು, ಅವುಗಳಲ್ಲಿ ೧. ವ್ಯಾವಹಾರಿಕ ಯೋಗತ್ರಯಗಳು ೨. ಧರ್ಮದ ದುರಭಿಮಾನ ೩. ವೈದಿಕ ಧರ್ಮಗಳು ೪. ಅವೈದಿಕ ಧರ್ಮಗಳು ೫. ಶಾಂತಿಯ ಪ್ರತ್ಯಕ್ಷ ಕಾರಣವು ಅಧ್ಯಯನವಲ್ಲ, ಗುರು ಕೃಪೆಯು! ೬. ಅಸ್ಪೃಶ್ಯತೆಯೂ, ಧಾರ್ಮಿಕ ವ್ಯವಹಾರವೂ ೭. ಅಸ್ಪೃಶ್ಯತೆಯೂ ರಾಜಕೀಯ ವ್ಯವಹಾರವೂ, ೮. ಸಹಯೋಗ ೯. ಅಸಹಯೋಗದ ಪ್ರಭೇದಗಳು. ೧೦. ಅಹಿಂಸಾ ತತ್ವವೂ, ರಾಜಕೀಯ ಅಹಿಂಸೆಯೂ ೧೧. ರಾಷ್ಟ್ರದ ವಿವೇಕೋದಯ (ಬ್ರಾಹ್ಮಣ ಬ್ರಾಹ್ಮಣೇತರ ವಿವೇಕ) ೧೨. ದೇಶದ್ರೋಹವೂ, ರಾಜದ್ರೋಹವೂ ೧೩. ಪರತಂತ್ರರಿಗೆ ಸೆರೆಮನೆಯೇ ಸ್ವರಾಜ್ಯವು ೧೪. ದೇಶದ್ರೋಹಿಗಳ ಹೇಸಿನತ. ೧೫ ಸಜ್ಜನರಿಗೆ ಶತ್ರುಗಳೂ ಸ್ವಕೀಯರೇ. ೧೬ ದೇಶವಿಘಾತಕ ಭೇದಭಾವನಿರಸನ. ೧೭. ರಾಜದ್ರೋಹದ ಸ್ವರೂಪ ೧೮ ಅಂತಃಕಲಹವು ಅಳಿಗಾಲದ ಲಕ್ಷಣವು ಇತ್ಯಾದಿ ಮಹತ್ವದ ವಿಷಯಗಳನ್ನು ಕುರಿತು ಶ್ರೀ ಮಾಧವಾಚಾರ್ಯರು ಸಮರ್ಪಕವಾಗಿ ನಿರ್ಣಯಿಸಿರುತ್ತಾರೆ. ಈ ಪುಸ್ತಕವನ್ನು ಪ್ರತಿ ಒಬ್ಬ ಕನ್ನಡಿಗನೂ ಮನೆಯಲ್ಲಿ ಸಂಗ್ರಹಿಸತಕ್ಕದ್ದು.

ಈ ಕಾದಂಬರಿಯು ನಮ್ಮ "ಸದ್ಗುರು" ಎಂಬ ಮಾಸಪತ್ರಿಕೆಯಲ್ಲಿ ಭಾಗಶಃ ಎರಡು ವರ್ಷ ಪ್ರಕಟವಾಗಿ, ಉಳಿದ ಕಾದಂಬರೀ ಭಾಗವನ್ನು ಸ್ವತಂತ್ರವಾಗಿ ಬರೆದು ಮುಗಿಸಿರುತ್ತದೆ. ಇದರ ಐದು ಸಾವಿರ ಪ್ರತಿಗಳಲ್ಲಿ ಇನ್ನು ಬಹಳವಾದರೆ ಎರಡುಸಾವಿರ ಪ್ರತಿಗಳು ಉಳಿದಿರಬಹುದು! ಇದನ್ನು ಮುಂಬಯಿ ವಿಶ್ವವಿದ್ಯಾಲಯದವರು ಎಂ.ಎ., ಕ್ಲಾಸಿಗೆ ಪಠ್ಯ ಪುಸ್ತಕವಾಗಿ ನಿಯಮಿಸಿರುವರು. ಬೆಂಗಳೂರಿನ ಸಾಹಿತ್ಯ ಪರಿಷತ್ತಿನ ಅವಲೋಕನಕ್ಕಾಗಿ ಇದನ್ನು ಕಳಿಸಿದಾಗ, ಈವರೆಗೆ ಮಾಡಿದ ಕನ್ನಡಿಗರ ಗೌರವದ ಸೇವಾತಿಶಯಕ್ಕಾಗಿ ಆ ಪರಿಷತ್ತು ಗಳಗನಾಥರಿಗೆ ೨೫೦ ರೂಪಾಯಿ ಉಚಿತವಾಗಿ ಕೊಟ್ಟಿದೆ. ಮೈಸೂರ ಸರ್ಕಾರದ ದೇವರಾಜ ಚಾರ್ಟಿ ಫಂಡಿನಿಂದ ಇದಕ್ಕೆ ೨೦೦ ರೂಪಾಯಿಗಳ ಉಚಿತವು ದೊರೆತಿರುವದು. ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘವೂ ಇದಕ್ಕೆ ಉಚಿತವನ್ನು ಕೊಟ್ಟಿರುವದು. ಇದರ ಬೆಲೆ ೩-೧೨-೦. ಪೋಸ್ಟು ವೆಚ್ಚ ಎಂಟು ಆಣೆ.

**೨. ಕನ್ನಡಿಗರ ಕರ್ಮಕಥೆ-೧೯೧೬:** ಘನತರವಾದ ವಿಜಯನಗರದ ರಾಜ್ಯವು ಪ್ರಸಿದ್ಧ ತಾಳೀಕೋಟೆಯ ಕಾಳಗದಿಂದ ರಸಾತಳಕ್ಕೆ ಹೇಗೆ ಹೋಯಿತೆಂಬುದನ್ನು ಈ ವಿಸ್ತೃತ ಕಾದಂಬರಿಯಲ್ಲಿ ಬಹು ಮನೋಹರವಾಗಿ ವರ್ಣಿಸಿರುತ್ತದೆ. ಇದನ್ನು

ಓದುವದರಿಂದ ಕನ್ನಡಿಗರಲ್ಲಿ ಸ್ವಾಭಿಮಾನ ಮೂಲವಾದ ಹಲವು ವಿಕಾರಗಳೂ, ವಿಚಾರಗಳೂ ಉತ್ಪನ್ನವಾಗದೆ ಇರಲಿಕ್ಕಿಲ್ಲ! ರಾಮರಾಜ, ತಿರುಮಲ, ವೆಂಕಟಾದ್ರಿ, ಮೇಹರ್ಜಾನ, ರಣಮಸ್ತಖಾನ ಮೊದಲಾದ ಪಾತ್ರಗಳ ಚರಿತ್ರ ವಾಚನದಿಂದ ಮನಸ್ಸು ತಲ್ಲೀನವಾಗಿ ಹೋಗುತ್ತದೆ ! ಈ ವಿಸ್ತೃತ ಕಾದಂಬರಿಯ ಬೆಲೆಯು ೧-೮-೦. ಪೋಸ್ಟೇಜು ೫ ಆಣೆ.

**೩. ಕುಮುದಿನಿ-೧೯೧೬:** ಇದೂ ಒಂದು ಕನ್ನಡಿಗರ ಅತ್ಯಂತವಾದ ಅಭಿಮಾನಕ್ಕೆ ಆಸ್ಪದವಾದ ಕಾದಂಬರಿಯೇ ಆಗಿರುವದು. ಈ ಐತಿಹಾಸಿಕ ಸ್ವತಂತ್ರ ಕಾದಂಬರಿಯು ವಿಜಯನಗರದ ಇತಿಹಾಸಕ್ಕೆ ಸಂಬಂಧಿಸಿದ್ದು, ಈ ಕಾದಂಬರಿಯೊಳಗಿನ ಶೋಕರಸ ಪ್ರಧಾನವಾದ "ಅಂತಕನ ಕೋಲಾಹಲ" ಎಂಬ ಪ್ರಕರಣವನ್ನು ಓದಿ ನಿಜವಾಗಿ ನಾವು ಮೂರ್ಛಿತರಾದೆವೆಂದು, ಒಬ್ಬ ಮೈಸೂರ ಸೀಮೆಯ ಸಹೃದಯ ವಾಚಕರು ತಿಳಿಸಿರುತ್ತಾರೆ. ಇದನ್ನು ಮೈಸೂರ ಸರಕಾರದವರು ಮೆಟ್ರಿಕ ಕ್ಲಾಸಿಗೆ ಪಠ್ಯ ಪುಸ್ತಕವಾಗಿ ನಿಯಮಿಸಿರುವರು. ಇದರ ಭಾಷಾಂತರವು ಸಂಸ್ಕೃತದಲ್ಲಿ ಆಗಿದೆ. ಬೆಲೆ ೧ ರೂಪಾಯಿ. ಪೋಸ್ಟೇಜು ನಾಲ್ಕು ಆಣೆ.

**೪. ದುರ್ಗದ ಬಿಚ್ಚುಗತ್ತಿ-೧೯೩೮:** ನನ್ನ "ಮಾಧವ ಕರುಣಾ ವಿಲಾಸ" ಎಂಬ ಸ್ವತಂತ್ರವಾದ ದೊಡ್ಡ ಐತಿಹಾಸಿಕ ಕಾದಂಬರಿಯ ತರುವಾಯದಲ್ಲಿ ಬರೆದ ಸ್ವತಂತ್ರ ಐತಿಹಾಸಿಕ ಕಾದಂಬರಿ ಈ 'ದುರ್ಗದ ಬಿಚ್ಚುಗತ್ತಿ' ಇದನ್ನು "ಶ್ರೀ ಮುರುಗೇಶ ಗುರುವರರು' ಪ್ರೇರಿಸಿ ಬರೆಸಿರುವರು. ಈ ಕಾದಂಬರಿಯಲ್ಲಿ ಕರ್ನಾಟಕ ಪ್ರಸಿದ್ಧಿಯ ಚಿತ್ರದುರ್ಗ ಕೋಟೆಯ ನಾಯಕರ ಮನೆತನಕ್ಕೆ ಸಂಬಂಧಿಸಿದ ವೃತ್ತಾಂತ ನಿರೂಪಿತವಾಗಿದೆ. ಇದರ ಬೆಲೆ ೧-೨-೦.

## ಮರಾಠರಿಗೆ ಸಂಬಂಧಿಸಿದುವು

**೫. ಈಶ್ವರೀಸೂತ್ರ-೧೯೧೩:** ಶಿವಾಜಿಯು ತೋರಣಗಡವೆಂಬ ದುರ್ಗವನ್ನು ತಕ್ಕೊಂಡು ಸ್ವರಾಜ್ಯವನ್ನು ಸ್ಥಾಪಿಸಿ ಸ್ವರಾಜ್ಯದ ತೋರಣ ಕಟ್ಟಿದ ಮನೋಹರ ವೃತ್ತಾಂತವು ಇವರಲ್ಲಿ ವರ್ಣಿಸಿರುತ್ತದೆ. ಇದರ ಲೋಕಪ್ರಿಯತೆಯನ್ನು ಇಷ್ಟೆಂದು ವರ್ಣಿಸಲಾಗುವದಿಲ್ಲ. ಕಾದಂಬರಿಯನ್ನು ಪುನಃ ಪುನಃ ಓದಿದರೂ ಮನಸ್ಸು ತೃಪ್ತವಾಗುವದಿಲ್ಲ. ಇದರ ಬೆಲೆ ೧ ರೂ. ಪೋಸ್ಟೇಜು ೪ ಆಣೆ.

**೬. ಮರಾಟರ ಅಭ್ಯುದಯ-೧೯೧೮:** ಮೇಲೆ ಹೇಳಿದಂತೆ ಶಿವಾಜಿಯು ರಾಜ್ಯವನ್ನು ಸ್ಥಾಪಿಸಿದ ಬಳಿಕ ಅದನ್ನು ನಾಶಮಾಡುವುದಕ್ಕಾಗಿ ವಿಜಾಪುರದ ಬಾದಶಹನು ಅಫಜುಲಖಾನನೆಂಬ ಬಲಾಢ್ಯ ಸರದಾರನನ್ನು ದೊಡ್ಡ ಸೈನ್ಯದೊಡನೆ ಕಳಿಸಲು, ಶಿವಾಜಿಯು ಆತನನ್ನು ಯುಕ್ತಿಯಿಂದ ಸಂಹರಿಸಿದ ಸಂಗತಿಯು ಇದರಲ್ಲಿ ಮನೋಹರವಾಗಿ ವರ್ಣಿಸಿರುತ್ತದೆ. ಇದನ್ನು ಓದುವಾಗ ಹಲವು ಕಡೆಯಲ್ಲಿ ವಾಚಕರ ಹೃದಯವು ಉಕ್ಕಿ ಬರುವುದೆಂಬುದು ಅನುಭವದ ಮಾತಾಗಿರುವುದು. ಬೆಲೆ ೧ ರೂ. ಪೋಸ್ಟೇಜು ೪ ಆಣೆ.

೭. **ಕಮಲಕುಮಾರಿ–೧೯೧೦:** ದಿಲ್ಲಿಯ ಬಾದಶಹನಾದ ಔರಂಗಜೇಬನು ಶಿವಾಜಿಯ ಹೆಚ್ಚಳವನ್ನು ತಡೆಯದೆ, ಉದಯಭಾನು ಎಂಬ ತನ್ನ ಶೂರ ಸರದಾರನನ್ನು ದೊಡ್ಡ ಸೈನ್ಯದೊಡನೆ ಆತನ ಮೇಲೆ ಕಳಿಸಿದಾಗ, ಶಿವಾಜಿಯ ಬಾಲಮಿತ್ರನಾದ ಅತ್ಯಂತ ಸ್ವಾಮಿನಿಷ್ಠ ತಾನಾಜಿಯು ಸಿಂಹಗಡವನ್ನು ಉದಯಭಾನುವಿನಿಂದ ಕಸಿದುಕೊಂಡು, ತನ್ನ ಒಡೆಯನ ಕಾರ್ಯವನ್ನು ಸಾಧಿಸಿದ ಮನೋಹರ ಪ್ರಸಂಗವನ್ನು ಈ ಕಾದಂಬರಿಯಲ್ಲಿ ವರ್ಣಿಸಿರುತ್ತದೆ. ಇದರ ಆರನೆಯ ಆವೃತ್ತಿಯು ಹೊರಡಬೇಕಾಗಿರುವುದು ಕಾದಂಬರಿಗಳಲ್ಲಿ ಇದನ್ನು ಸರಿಗಟ್ಟುವ ಕಾದಂಬರಿಗಳು ಅತಿ ವಿರಳವೆಂದು ಹೇಳಬಹುದು. ಬೆಲೆ ೧ ರೂ. ಪೋಸ್ಟೇಜು ೪ ಆಣೆ.

೮. **ಛತ್ರಪತಿ–೧೯೧೯:** ಮೇಲೆ ಹೇಳಿದಂತೆ ಶಿವಾಜಿಯು ಬಹು ಆಯಕಟ್ಟಿನ ಸ್ಥಳವಾದ ಸಿಂಹಗಡವನ್ನು ಸ್ವಾಧೀನಪಡಿಸಿಕೊಂಡು ಅತಿ ಬಲಿಷ್ಠನಾಗಲು, ಇದನ್ನು ಔರಂಗಜೇಬ ಬಾದಶಹನು ಸೈರಿಸದೆ, ರಾಜಾ ಜಯಸಿಂಗನೆಂಬ ತನ್ನ ಬಲಾಢ್ಯ ರಜಪೂತ ಸರದಾರನನ್ನು ದೊಡ್ಡ ಸೈನ್ಯದೊಡನೆ ಶಿವಾಜಿಯ ಮೇಲೆ ಕಳಿಸಿದನು. ಆಗ ಶಿವಾಜಿಯು ದೂರ ಲಕ್ಷ ಕೊಟ್ಟು ಜಯಸಿಂಗನೊಡನೆ ಯುದ್ಧಮಾಡದೆ ಆತನ ಸೂಚನೆಯಂತೆ ದಿಲ್ಲಿಗೆ ಬಾದಶಹನನ್ನು ಕಾಣುವದಕ್ಕಾಗಿ ಹೋಗಲು, ಬಾದಶಹನು ಆತನನ್ನು ಸೆರೆಯಲ್ಲಿರಿಸಿದನು. ಆಗ ಶಿವಾಜಿಯು ತನ್ನ ಮಗ ಸಂಭಾಜಿಯೊಡನೆ ಪೆಟ್ಟಿಗೆಯಲ್ಲಿ ಮಲಗಿಕೊಂಡು ಹೇಗೆ ಪಾರಾಗಿ ಬಂದನೆಂಬದನ್ನು ಈ ಕಾದಂಬರಿಯಲ್ಲಿ ಮನೋಹರವಾಗಿ ವರ್ಣಿಸಿರುತ್ತದೆ. ಬೆಲೆ ೧ ರೂ. ಪೋ. ೪ ಆಣೆ.

೯. **ಗೃಹಕಲಹ–೧೯೨೧:** ಇದು ಶಿವಾಜಿ ಮಹಾರಾಜರ ಮರಣ ಪ್ರಸಂಗದ ಕಾದಂಬರಿಯು. ಅತ್ಯಂತ ಶೋಕ ಪರ್ಯವಸಾಯಿ. ಇದು ಗೃಹಕಲಹದ ದುಷ್ಪರಿಣಾಮವನ್ನು ಹೃದಯಭೇದಕವಾಗಿ ವ್ಯಕ್ತಪಡಿಸುವದು. ಇದು ಅತ್ಯಂತ ಲೋಕಪ್ರಿಯವಾಗಿರುವದು ಬೆಲೆ ೧ ರೂ. ಪೋ. ೪ ಆಣೆ.

೧೦. **ಶಿವಪ್ರಭುವಿನ ಪುಣ್ಯ–೧೯೧೮:** ಶಿವಾಜಿಯ ಮಗ ಸಂಭಾಜಿಯನ್ನು ಔರಂಗಜೇಬನು ಅತಿಕ್ರೂರತನದಿಂದ ಕೊಲ್ಲಿಸಿದ ಪ್ರಸಂಗವೂ, ಶಿವಾಜಿಯ ಚಿಕ್ಕ ಮಗ ರಾಜಾರಾಮನು ಪರಿಪರಿಯ ಕಷ್ಟಗಳನ್ನು ಅನುಭವಿಸಿ, ಅಣ್ಣನ ಕಾಲದಲ್ಲಿ ನಾಶವಾದಂತಾಗಿದ್ದ ಮಹಾರಾಷ್ಟ್ರ ರಾಜ್ಯವನ್ನು ಮತ್ತೆ ಸ್ಥಾಪಿಸಿದ ಪ್ರಸಂಗವೂ ಈ ಕಾದಂಬರಿಯಲ್ಲಿ ಬಹು ಹೃದಯಂಗಮವಾಗಿ ವರ್ಣಿಸಲ್ಪಟ್ಟಿರುವವು. ಬೆಲೆ ೧ ರೂ. ಪೋ. ೪ ಆಣೆ.

೧೧. **ಸ್ವರಾಜ್ಯಸುಗಂಧ–೧೯೩೮:** ಶಿವಾಜಿಯು ಆಗಲೇ ರಾಯಗಡದಲ್ಲಿ ಛತ್ರಪತಿಯಾಗಿ ಪಟ್ಟಾಭಿಷಿಕ್ತನಾಗಿದ್ದ. ದಿಲ್ಲಿಯ ಮತ್ತು ವಿಜಾಪುರ ಬಾದಶಹನ ವಶದಲ್ಲಿದ್ದ ಅನೇಕ ಕೋಟೆಗಳನ್ನು ಗೆದ್ದುಕೊಂಡು ತನ್ನ ರಾಜ್ಯವನ್ನು ವಿಸ್ತರಿಸಿದ್ದ. ಆದರೆ ಈಗ ಆತನ ದೃಷ್ಟಿಯು 'ಕಲ್ಯಾಣ' ಮತ್ತು 'ರಾಜಮಾಚಿ' ಎಂಬ ಎರಡು ಕೋಟೆಗಳ ಕಡೆಗೆ ಕೇಂದ್ರೀಕೃತವಾಗಿತ್ತು. ಈ ಕಾದಂಬರಿಯಲ್ಲಿ ಈ ಎರಡೂ ಕೋಟೆಗಳನ್ನು ಆತನ ಸರದಾರರು ವಶಪಡಿಸಿಕೊಂಡ ವಿಷಯ ನಿರೂಪಿತವಾಗಿದೆ.

**೧೨. ಕುರುಕ್ಷೇತ್ರ-೧೯೧೯:** ಗರ್ವವು ನಾಶಕರವಾದದ್ದು. ಪ್ರತಾಪಶಾಲಿಯಾದ ಪೇಶ್ವೆ ಭಾವುಸಾಹೇಬನ ಅತಿ ಗರ್ವದ ಬಾಧೆಯಿಂದ ಪ್ರಸಿದ್ಧ ಪಾನಿಪತ್ತದ ಕಾಳಗದಲ್ಲಿ ಪೇಶ್ವೆಯವರ ಉತ್ಕರ್ಷವು ಕುಗ್ಗಿದ ದುಃಖಕಾರಕ ಸಂಗತಿಯು ಈ ಕಾದಂಬರಿಯ ಯೋಗದಿಂದ ಬೋಧಪ್ರದವಾಗಿ ಗೊತ್ತಾಗುತ್ತದೆ. ಆದರೂ ಮಹಾರಾಷ್ಟ್ರದ ಪ್ರತಾಪವೂ, ಸಾಮರ್ಥ್ಯವೂ ಎಷ್ಟು ಘನತರವಾದವಿದ್ದವೆಂಬುದನ್ನು ಈ ಕಾದಂಬರಿಯು ತೋರಿಸದೆ ಇರುವದಿಲ್ಲ. ಬೆಲೆ ೧ ರೂ. ಪೋ. ೪ ಆಣೆ.

## ರಜಪೂತರಿಗೆ ಸಂಬಂಧಿಸಿದುವು

**೧೩. ಕ್ಷಾತ್ರತೇಜ-೧೯೧೪:** ಈ ಐತಿಹಾಸಿಕ ಕಾದಂಬರಿಯಲ್ಲಿ ಔರಂಗಜೇಬನ ಹಾಗು ರಜಪೂತರ ಗುಣಸ್ವಭಾವಗಳು ಚಿತ್ತಾಕರ್ಷಣಪೂರ್ವಕವಾಗಿ ಗೊತ್ತಾಗುತ್ತವೆ. ಇದರಲ್ಲಿ ರೂಪಮತಿಯ ಕುಲೀನತೆ, ಇಂದಿರೆ-ಪದ್ಮೆ-ದುರ್ಗಾದಾಸ ಇವರ ಸ್ವಾಮಿನಿಷ್ಠೆ, ಚಂದ್ರಾವತೀರಾಣಿಯ ತೇಜಸ್ವಿತೆ, ವೈಕುಂಠಯೋಗಿಗಳ ನಿಸ್ಪೃಹತೆ, ಮೊದಲಾದವನ್ನು ಸಾಂಸಾರಿಕರಾದ ನಾವು ಲಕ್ಷಪೂರ್ವಕ ಅವಲೋಕಿಸಬಹುದಾಗಿದೆ. ಇದನ್ನು ಮುಂಬಯಿ ವಿದ್ಯಾಖಾತೆಯವರು ಮೆಟ್ರಿಕ್ಕಿಗೆ ಪಠ್ಯಪುಸ್ತಕವಾಗಿ ನಿಯಮಿಸಿದ್ದರು. ಬೆಲೆ ೧ ರೂ. ಪೋ. ೪ ಆಣೆ.

**೧೪. ಸತ್ವಸಾರ-೧೯೧೫:** ಇದೊಂದು ಸುಂದರವಾದ ಐತಿಹಾಸಿಕ ಕಾದಂಬರಿಯು. ಮೇವಾಡದ ಸುಪ್ರಸಿದ್ಧ ಮಹಾರಾಜಾ ಪ್ರತಾಪಸಿಂಹನು ಈ ೧೪ ಕಾದಂಬರಿಯ ನಾಯಕನಾಗಿದ್ದಾನೆ. ಮಹಾತ್ಮರ ಸತ್ವದಿಂದಲ್ಲದೆ ಕೇವಲ ದ್ರವ್ಯಾದಿ ಉಪಕರಣಗಳಿಂದ ಮಹಾಕಾರ್ಯಗಳು ಆಗುವದಿಲ್ಲವೆಂತಲೂ, ಸತ್ವಶಾಲಿಯನ್ನು ದ್ರವ್ಯವು ತಾನಾಗಿ ಹೊಂದುವದೆಂತಲೂ ಈ ಕಾದಂಬರಿಯು ಕಲಿಸುವದು. ಇದನ್ನು ಕನ್ನಡಿಗರು ಈ ಕಾಲದಲ್ಲಿ ಓದಿಯೇ ತೀರಬೇಕೆಂದು ಆಗ್ರಹದಿಂದ ಹೇಳುವೆನು. ಇದನ್ನು ಮುಂಬಯಿ ಯೂನಿವರ್ಸಿಟಿಯವರು ಟೆಕ್ಸ್ಟಬುಕ್ಕಾಗಿ ನಿಯಮಿಸಿದ್ದರು. ಬೆಲೆ ೧ ರೂ. ಪೋ. ೪ ಆಣೆ.

**೧೫. ತಿಲೋತ್ತಮೆ-೧೯೧೭:** ಇದೂ ಒಂದು ಐತಿಹಾಸಿಕ ಮನೋಹರ ಕಾದಂಬರಿಯೇ ಇರುತ್ತದೆ. ಈ ಕಾದಂಬರಿಯಲ್ಲಿಯ ಆಯೇಷೆ, ತಿಲೋತ್ತಮೆ, ಉಸ್ಮಾನ, ಜಗತ್ಸಿಂಗ ಮೊದಲಾದ ಸದ್ಗುಣಮಂಡಿತ ಪಾತ್ರಗಳ ಸಹವಾಸದಿಂದ ವಾಚಕರ ಹೃದಯವು ದ್ರವಿಸಿ ಅದರಲ್ಲಿ ಸದ್ಗುಣಗಳ ಅಂಕುರಗಳು ತೋರದೆ ಇರವು. ಬೆಲೆ ೧ ರೂ. ಪೋ. ೪ ಆಣೆ.

**೧೬. ಧಾರ್ಮಿಕತೇಜ-೧೯೨೮:** ಇದು ಅತ್ಯಂತ ಗೌರವದ ಮನೋಹರ ಐತಿಹಾಸಿಕ ಹೊಸ ಕಾದಂಬರಿಯು. ಛತ್ರಸಾಲನೆಂಬ ಪ್ರತಾಪಿಯಾದ ಕ್ಷತ್ರಿಯನು ಔರಂಗಜೇಬ ಬಾದಶಹನ ಕಾಲದಲ್ಲಿ ಬುಂದೇಲಖಂಡದ ಸ್ವಾತಂತ್ರ್ಯವನ್ನು ಸ್ಥಾಪಿಸಿದ ವೃತ್ತಾಂತವು ಬಹು ಗಂಭೀರವಾಗಿ ವರ್ಣಿಸಲ್ಪಟ್ಟಿರುತ್ತದೆ. ಪ್ರಾಣನಾಥ ಪ್ರಭುಗಳ ಮಹಿಮೆ ಯಲ್ಲಿಯೂ, ದಲಪತರಾಯ ಸಭಾಕರಣ-ಹೀರಾದೇವಿ-ಸುಫಲದೇವಿ-ಕಂಚುಕಿರಾಯ-ರಣದುಲ್ಲಾಖಾನ ಮೊದಲಾದ ನೀಚೋಚ್ಚ ಪಾತ್ರಗಳ ಚರಿತ್ರ ವಾಚನದಲ್ಲಿಯೂ ಮನಸ್ಸು ತೊಡಗಿಹೋಗವದು. ಬೆಲೆ ೧ ರೂ. ೮ ಆಣೆ. ಪೊ. ೫ ಆಣೆ.

**೧೭. ರಾಣಾ ರಾಜಸಿಂಹ-೧೯೨೮:** ಇದು ಔರಂಗಜೇಬನ ಕಾಲದ ಐತಿಹಾಸಿಕ ಹೊಸ ಕಾದಂಬರಿಯು. ಇದರಲ್ಲಿ ರಾಣಾ ರಾಜಸಿಂಹನ ಘನವಾದ ಯೋಗ್ಯತೆಯೂ, ಔರಂಗಜೇಬನ ಉದ್ದಾಮ ಮಹತ್ವಾಕಾಂಕ್ಷೆಯೂ, ಅನಂತಶರ್ಮರ ಸತ್ವವೂ, ಮೊಗಲ ಜನಾನಖಾನೆಯ ಸ್ಥಿತಿಯೂ ಚನ್ನಾಗಿ ಚಿತ್ರಿಸಿರುತ್ತವೆ. ಬೆಲೆ ೧೨ ಆಣೆ. ಪೋ. ೪ ಆ.

**ಸಂಕೀರ್ಣ ಕಾದಂಬರಿಗಳು**

**೧೮. ಪ್ರಬುದ್ಧ ಪದ್ಮನಯನೆ-೧೮೯೮:** ಇದೊಂದು ಕನ್ನಡಿಗರ ಪ್ರೀತಿಯ ಅತಿಮನೋಹರವಾದ ಸ್ವತಂತ್ರ ಕಾಲ್ಪನಿಕ ಕಾದಂಬರಿಯು. ಈವರೆಗೆ ಈ ಕಾದಂಬರಿಯು ಐದು ಆವೃತ್ತಿಗಳಾಗಿ ಹೋಗಿರುವವು. ಇದರ ಭಾಷಾಂತರವನ್ನು ಸಂಸ್ಕೃತದಲ್ಲಿ ಒಬ್ಬರು ಮಾಡಿರುವರು. ಹಳ್ಳಿಯ ಜನರು ಇದರ ಆಟಗಳನ್ನು ಕಟ್ಟಿ ಆಡಿರುವರು. ರಸಿಕರು ಅವಶ್ಯವಾಗಿ ಓದತಕ್ಕ ಕಾದಂಬರಿಯ ಬೆಲೆ ೧ ರೂ. ಪೋ. ೪ ಆಣೆ.

**೧೯. ರಾಣೀ ಮೃಣಾಲಿನಿ-೧೯೧೫:** ಇದಕ್ಕೆ ಈ ಹೊಸ ಆವೃತ್ತಿಯಲ್ಲಿ ಹೆಚ್ಚು ವಿಷಯವನ್ನು ಸೇರಿಸಿ ದೊಡ್ಡ ಪುಸ್ತಕವಾಗಿ ಮಾಡಿರುತ್ತದೆ. ಈ ಐತಿಹಾಸಿಕ ಕಾದಂಬರಿಯಾದರೂ ಅತ್ಯಂತ ಚಿತ್ತಾಕರ್ಷಕವಾಗಿರುವದು. ಇದರ ಸ್ವಾರಸ್ಯವೆಷ್ಟು, ಲಾಲಿತ್ಯವೆಷ್ಟು, ಗಾಂಭೀರ್ಯವೆಷ್ಟು! ಶಾಭಾಶ್! ಕಾದಂಬರಿಕಾರರಿದ್ದರೆ ಬಂಕೀಮಚಂದ್ರರಂಥ ಕಾದಂಬರಿಕಾರರಿರಬೇಕು! ಈ ಕಾದಂಬರಿಗೆ ಹೊಸದಾಗಿ ಜೋಡಿಸಿದ ವಿಷಯವು ಸ್ವತಂತ್ರವಾಗಿ ಬರೆದದ್ದು. ಬೆಲೆ ೧ ರೂ ೮ ಆಣೆ. ಪೋ ೫ ಆಣೆ.

**೨೦. ವೈಭವ-೧೯೧೨:** ಇದು ಚಾಣಿಕ್ಯ-ಚಂದ್ರಗುಪ್ತರಿಗೆ ಸಂಬಂಧಿಸಿದ ಅತಿ ಮನೋಹರವಾದ ಐತಿಹಾಸಿಕ ಕಾದಂಬರಿಯಾಗಿರುತ್ತದೆ. ಇದನ್ನು ಓದಲು ಕೈಯಲ್ಲಿ ತಕ್ಕೊಂಡವರು ಪೂರ್ಣವಾಗಿ ಮುಗಿಸದೆ ಕೆಳಗಿಡುವ ಹಾಗಿಲ್ಲೆಂದು ನಾವು ನಂಬಿಗೆಯಿಂದ ಹೇಳುವೆವು. ಕನ್ನಡ ಮುದ್ರಾಮಂಜೂಷಕ್ಕೂ ಇದಕ್ಕೂ ಏನೂ ಸಂಬಂಧವಿಲ್ಲ. ಬೆಲೆ ೧ ರೂ. ಪೋ. ೪ ಆಣೆ.

**೨೧. ಧರ್ಮರಹಸ್ಯ-೧೯೧೪:** ಇದೊಂದು ಗಂಭೀರ ವಿಚಾರದ ಐತಿಹಾಸಿಕ ಕಾದಂಬರಿಯಾಗಿರುತ್ತದೆ. ಅಶೋಕರಾಜ, ಚಿದಾನಂದಸ್ವಾಮಿ, ಜಿತೇಂದ್ರ, ಮೊಗ್ಗಲೀಪುತ್ರ ಮೊದಲಾದ ನೀಚೋಚ್ಚ ಪಾತ್ರಗಳ ವಕ್ರ-ಸರಲಗತಿಗಳೂ, ಅನುದಾತ್ತ-ಉದಾತ್ತ ಭಾವಗಳೂ ಎಷ್ಟು ಹೃದಯಂಗಮವಾಗಿ ವರ್ಣಿಸಲ್ಪಟ್ಟಿರುವವೆಂಬದನ್ನು ಬರೆಯಲಾರೆವು. ಈ ಪುಸ್ತಕವನ್ನು ಬರೆಯಲುಪಕ್ರಮಿಸಿದಾಗ ಹಲವು ಸಾರೆ ಕಣ್ಣೀರುಗಳು ಉದುರಿರುವವು. ಇದನ್ನು ಮೈಸೂರ ವಿದ್ಯಾಖಾತೆಯವರು ಮ್ಯೊಟ್ರಿಕ್ ಕ್ಲಾಸಿಗೆ ಪಠ್ಯಪುಸ್ತಕವಾಗಿ ನಿಯಮಿಸಿದ್ದರು. ಬೆಲೆ ೧ ರೂ. ಪೋ. ೪ ಆಣೆ.

**೨೨. ಸಂಸಾರ ಸುಖ-೧೯೨೬:** ಇದು ಅಕಬರಬಾದಶಹನಿಗೆ ಸಂಬಂಧಿಸಿದ ಕಾದಂಬರಿಯು. ಅಂತಹ ದೊಡ್ಡ ಬಾದಶಹನೆಂದರೇನು, ಕಡೆಗೆ ಸಂಸಾರದ ತಾಪದಿಂದ ಹಣ್ಣಾದನು. ಮಾನಸಿಂಹನ ಸೋದರಳಿಯನಾದ ಖುಸರುವಿನ ದುರ್ದೈವವನ್ನು ನೆನಿಸಿ ಮನಸ್ಸು ವಿಷಾದಪಡುವದು. ರಾಜ್ಯತೃಷ್ಣೆಯು ಎಷ್ಟು ಅನರ್ಥಕಾರಕವೆಂಬುದನ್ನು ಈ ಕಾದಂಬರಿಯು ತಿಳಿಸುತ್ತದೆ. ಬೆಲೆ ೧ ರೂ. ಪೋ. ೪ ಆಣೆ.



## ಇತರ ಕೃತಿಗಳು

| | | | |
|---|---|---|---|
| ೧. | ಪದ್ಯಾರ್ಥ ಸಾರ | – | ೧೮೯೭ |
| ೨. | ಲಘು ನಿಬಂಧ ಸಂಗ್ರಹ ಮತ್ತು ಪತ್ರವ್ಯವಹಾರ | – | ೧೮೯೯ |
| ೩. | ಚಿದಂಬರ ಚರಿತ್ರೆ | – | ೧೯೦೯ |
| ೪. | ನಿಬಂಧ ಶಿಕ್ಷಣ | – | ೧೯೧೦ |
| ೫. | ಗಿರಿಜಾ ಕಲ್ಯಾಣ ಸಾರ | – | ೧೯೧೧ |
| ೬ | ರಾಜನಿಷ್ಠೆಯು ನಮ್ಮ ಪುಣ್ಯಶಾಲಿಗಳಾದ ಸಾರ್ವಭೌಮರು | – | ೧೯೧೨ |
| ೭. | ದಾಂಪತ್ಯ | – | ೧೯೧೨ |
| ೮. | ಕುಟುಂಬ | – | ೧೯೧೩ |
| ೯. | ನಿರ್ಯಾಣ ಮಹೋತ್ಸವ | – | ೧೯೧೫ |
| ೧೦. | ಭಗವತೀ ಕಾತ್ಯಾಯಿನೀ | – | ೧೯೧೯ |
| ೧೧. | ಭಾಗವತಾಮೃತ | – | ೧೯೨೨ |
| ೧೨. | ಶೈವ ಸುಧಾರ್ಣವ | – | ೧೯೨೩ |
| ೧೩. | ರಾಮಾಯಣಾಮೃತ (ತುಲಸಿ ರಾಮಾಯಣ) | – | ೧೯೨೬ |
| ೧೪. | ಸದ್ಗುರು ಪ್ರಭಾವ | – | ೧೯೨೮ |
| ೧೫. | ಗೀತೆಯ ಶ್ರವಣಾಧಿಕಾರ | – | ೧೯೨೮ |
| ೧೬. | ವಿವೇಕಾನಂದರು ವೈದಿಕರಿಗೆ ಯಾರು? | – | ೧೯೨೮ |
| ೧೭. | ಮಹಾಭಾರತಾಮೃತ ಆದಿಪರ್ವ | – | ೧೯೩೧ |
| ೧೮. | ರಹಸ್ಯಗಳು | – | ೧೯೩೩ |
| ೧೯. | ಮಹಾಭಾರತಾಮೃತ–ಸಭಾಸದನ | – | ೧೯೩೩ |
| ೨೦. | ಕಲಿಕುಠಾರ ಅಥವಾ ಲೋಕಾಪುರಪೀಠ ಪ್ರಭಾವ ೨ನೇ ಭಾಗ | – | ೧೯೩೮ |
| ೨೧. | ನಳ ಚರಿತ್ರ | – | ೧೯೩೮ |
| ೨೨. | ವೀರ ಪ್ರತಾಪ ಅಥವಾ ಸ್ವಾಭಿಮಾನ ಸಂಭ್ರಮ | – | ೧೯೪೯ |
| ೨೩. | ಕಲಿಕುಠಾರ ಜ್ಞಾನಯೋಗ ಪ್ರಧಾನ ಖಂಡ | – | ೧೯೫೯ |
| ೨೪. | ಉತ್ತರ ರಾಮಚರಿತ್ರ ಸಾರ | – | ಸು. ೧೯೧೧ |
| ೨೫. | ಸಾಧು ಸದಾಶಿವ ಲೀಲೆ | – | ಸು. ೧೯೧೬ |
| ೨೬. | ಕನ್ಯಾ ಶಿಕ್ಷಕ | – | ಸು. ೧೯೨೦ |
| ೨೭. | ಬ್ರಾಹ್ಮಣ್ಯ ಪ್ರಾಪ್ತಿ ಸಾಧನೆ | – | ಸು. ೧೯೨೩ |
| ೨೮. | ಸುಂದರ ಲೇಖ ಸಮುಚ್ಚಯ | – | ಸು. ೧೯೨೮ |

---

ಆಧಾರ : ಗಳಗನಾಥರು ಮತ್ತು ಅವರ ಕಾದಂಬರಿಗಳು, ಕೃಷ್ಣಮೂರ್ತಿ ಕಿತ್ತೂರ
ಪ್ರ – ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ – ೧೯೭೮

# ಪ್ರಸ್ತಾವನೆ

ಪ್ರಕೃತದಲ್ಲಿ ನಮ್ಮ ಪ್ರಿಯಕನ್ನಡಿಗರೊಳಗಿನ ಕ್ಷುದ್ರ ಕಲಹವು ಕಡಿಮೆಯಾಗಿ ಒಕ್ಕಟ್ಟು ಬೆಳೆಯಬೇಕೆಂಬ ಉದ್ದೇಶದಿಂದ ಈ ಕಾದಂಬರಿಯನ್ನು ಬುದ್ಧಿಪೂರ್ವಕವಾಗಿ ಬರೆದಿದ್ದೇವೆ. ಮಹಾರಾಷ್ಟ್ರದೊಳಗಿನ ''ಅಸ್ತೋದಯ'' ಎಂಬ ಕಾದಂಬರಿಯು ಇದಕ್ಕೆ ಆಧಾರವಾದ್ದರಿಂದ ಅದರ ಕರ್ತೃಗಳಾದ ಶ್ರೀಯುತ ಲಕ್ಷ್ಮಣ ನಾರಾಯಣ ಜೋಶಿ ಇವರಿಗೆ ಅತ್ಯಂತ ಕೃತಜ್ಞರಾಗಿರುವೆವು. ಮೂಲಕಾದಂಬರಿಯ ಭಾಷಾಂತರವಾಗಲಿ, ರೂಪಾಂತರವಾಗಲಿ, ಇದು ಇರುವದಿಲ್ಲ, ಕಾದಂಬರಿಯು ಹೆಚ್ಚು ಬೋಧಪ್ರದವೂ, ಮನೋರಂಜಕವೂ ಆಗುವದಕ್ಕಾಗಿ ನಮ್ಮ ವಾಡಿಕೆಯ ಪದ್ಧತಿಯಂತೆ ಮೂಲ ಕಾದಂಬರಿಯನ್ನು ಕುಗ್ಗಿಸುವಲ್ಲಿ ಕುಗ್ಗಿಸಿ, ಹಿಗ್ಗಿಸುವಲ್ಲಿಹಿಗ್ಗಿಸಿ, ಹೊಸ ವಿಷಯ ಸೇರಿಸತಕ್ಕಲ್ಲಿ ಹೊಸ ವಿಷಯ ಸೇರಿಸಿ ಶ್ರಮಪಟ್ಟು ಹೊಸ ಪಾಕವನ್ನು ಸಿದ್ಧಮಾಡಿರುವೆವು. ವಿವೇಕಿಗಳಾದವರು ಇದರ ಉಪಯೋಗವನ್ನು ಕೇವಲ ಮನೋರಂಜನಕ್ಕಾಗಿ ಮಾಡಿಕೊಳ್ಳದೆ ತಮ್ಮ ನಡವಳಿಕೆ ತಿದ್ದಿಕೊಳ್ಳುವಲ್ಲಿ ಮಾಡಿದರೆ ನಮಗೆ ಬಹಳ ಸಂತೋಷವಾಗುವದು.

ಈ ಕಾದಂಬರಿಯ ಕಟ್ಟಕಡೆಗೆ ನಾವು ಕೊಟ್ಟಿರುವ ಉಪಸಂಹಾರದ ೯ನೇ ಚಿಕ್ಕ ಪ್ರಕರಣದಿಂದ, ಜನ್ಮಭೂಮಿಯು ಒಂದು ಗೃಹವೆಂಬ ಮಾತು ಗೊತ್ತಾಗ ಬಹುದು; ಆದ್ದರಿಂದ ಜನ್ಮಭೂಮಿಯ ಸಂಬಂಧದಿಂದ ದೇಶಬಾಂಧವರೆನಿಸಿಕೊಳ್ಳುವ ನಮ್ಮಲ್ಲಿ ಕಲಹವಿರುವದು ಸರ್ವಥಾ ಹಿತವಲ್ಲ; ಆದ್ದರಿಂದ ನಾವು ಬ್ರಾಹ್ಮಣ– ಬ್ರಾಹ್ಮಣೇತರೆಂಬ ಶುಷ್ಕಪಂಗಡ ಮಾಡಿಕೊಂಡು ಪರಸ್ಪರ ಕಲಹ ಬೆಳಸಿ ಆತ್ಮಘಾತದ ಹಾದಿಯನ್ನು ಹಿಡಿಯಬಾರದೆಂದು ಇಲ್ಲಿಯೂ ನಾವು ಹೇಳಿಕೊಳ್ಳುವೆವು; ನಮ್ಮಲ್ಲಿಯ ತಪ್ಪುಗಳನ್ನು ತಿದ್ದಲಿಕ್ಕೆ ಮಂದಿಯೇಕೆ? ನಾವೇ ನಮ್ಮೊಳಗೆ ಕಿವಿಹಿಂಡಿ ತಿದ್ದಿ ಕೊಂಡರಾಯಿತು.

ಹಾವೇರಿ<br>
ತಾ. ೨೬–೧೦–೧೯೨೧

ಕನ್ನಡಿಗರ ಸೇವಕ<br>
ಗಳಗನಾಥ

# ಕೆಟ್ಟಿದ್ದನ್ನಟ್ಟವನೇ ಜಾಣನು

ರಾಯಗಡವು ಶಿವಛತ್ರಪತಿಯ ರಾಜಧಾನಿಯು. ಆ ಪುಣ್ಯಪ್ರತಾಪಿಯು ಸಿಂಹಾಸನ ವೇರಿದ ಕೆಲವು ದಿನಗಳಲ್ಲಿಯೇ ಆತನ ತಾಯಿಯೂ, ಗೌರವದ ಮಂತ್ರಾಲೋಚಕಳೂ, ಸಾಧ್ವೀಶಿರೋಮಣಿಯೂ ಆದ ಜೀಜಾಬಾಯಿಯು ತೀರಿಕೊಂಡದ್ದರಿಂದ, ಆ ಉದಾತ್ತ ಭಾವದ ಛತ್ರಪತಿಯು ಕೂಡ ಉದಾಸೀನನಾಗಿದ್ದನು. ಮಾತೃವಿಯೋಗವಾದ ಮುಂದಿನ ಆರುವರ್ಷಗಳಲ್ಲಿ ಆತನು ತನ್ನ ಪ್ರತಾಪದಿಂದ ಹಲವು ದಾಳಿಗಳನ್ನು ಮಾಡಿ ಹೊಸ ಹೊಸ ಪ್ರಾಂತಗಳನ್ನು ಕೈವಶಮಾಡಿಕೊಂಡು ತನ್ನ ಮಹಾರಾಷ್ಟ್ರ ರಾಜ್ಯವನ್ನು ದಕ್ಷಿಣದಲ್ಲಿ ರಾಮೇಶ್ವರದವರೆಗೆ ಬೆಳೆಸಿದರೂ, ಆ ಕುಲದೀಪಕನು ಔದಾಸೀನ್ಯದಿಂದ ಕಾಲಹರಣ ಮಾಡು ತ್ತಿದ್ದನು! ತಾಯಿಯು ಬದುಕಿರುವಾಗ ಅವನ ಮುಖಕಮಲವು ಪ್ರಫುಲ್ಲಿತವಾಗಿರು ತ್ತಿದ್ದಂತೆ, ಈಗ ಒಂದು ದಿವಸ ವಾದರೂ ಇರುತ್ತಿದ್ದಿಲ್ಲ. ಆತನ ಗಂಭೀರ ಮುಖಚರ್ಯದಲ್ಲಿ ಅಲ್ಪಸ್ವಲ್ಪ ಮುಪ್ಪಿನ ಲಕ್ಷಣವು ತೋರಹತ್ತಿತ್ತು. ಜಗದಂಬೆಯಾದ ಶ್ರೀಭವಾನಿಯ, ಇಲ್ಲವೆ ಭವಾನಿಯ ಸ್ವರೂಪವೆಂದು ತಿಳಿದಿದ್ದ ತನ್ನ ತಾಯಿಯ ಆಜ್ಞೆಯನ್ನು ಪ್ರಮಾಣವೆಂದು ತಿಳಿದು ಯಾವದೊಂದು ಕಾರ್ಯವನ್ನು ಕೂಡಲೆ ಮಾಡಿಬಿಡುವದು ಆ ಭಾವಿಕನ ಸ್ವಭಾವ ವಾಗಿ ಹೋಗಿತ್ತು; ಕಾರಣ ಮಾತೃವಿಯೋಗದಿಂದ ಆತನದೊಂದು ಕೈಯೇ ಮುರಿದಹಾಗಾಗಿ, ಆತನು ಔದಾಸೀನ್ಯದಿಂದ ಕಾಲಹರಣ ಮಾಡಹತ್ತಿದನು. ಅದರಲ್ಲಿ ಹಿರಿಯಮಗನಾದ ಸಂಭಾಜಿಯ ದುರ್ವರ್ತನದಿಂದಂತು ಆತನ ಔದಾಸೀನ್ಯಕ್ಕೆ ಮತ್ತಿಷ್ಟು ಕಳೆಯೇರಿತು. ತನ್ನ ಅಂತಕಾಲದವರೆಗೆ ಸ್ವರಾಜ್ಯದ ತೊಡಕು ಬಿಡಿಸುವದರಲ್ಲಿ ಆ ಘನವಂತನು ಮಗ್ನನಾಗಿ ಹೋಗಿದ್ದರೂ, ಆತನ ಮನೋವೃತ್ತಿಯು ಒಬ್ಬಾನೊಬ್ಬ ಸರ್ವಸಂಗ ಪರಿತ್ಯಾಗಿಯ ಮನೋವೃತ್ತಿಯಂತೆ ಐಹಿಕ ಸುಖಾಸಕ್ತಿಗೆ ಹೇಸಿತ್ತು. ಬರಬರುತ್ತ ಆತನು ಸಂಸಾರದ ವಿಷಯವಾಗಿ ವಿರಕ್ತಿಯನ್ನು ತಾಳಿದನು. ಸಂಸಾರದಲ್ಲಿ ಆತನಿಗೆ ಸುಖಾನುಭವವಿಲ್ಲದಾಯಿತು. ಸಂಭಾಜಿಯು ಚಿಕ್ಕವನಿರುವಾಗಲೇ ಆತನ ತಾಯಿಯಾದ, ಅಂದರೆ ಶಿವಛತ್ರಪತಿಯ ಹಿರಿಯ ಹೆಂಡತಿಯಾದ ಸಯಿಬಾಯಿಯ ವಿಯೋಗವಾಗಲು, ಸೋಯರಾಬಾಯಿಯೆಂಬ ಚಿಕ್ಕಹೆಂಡತಿಯು ತನ್ನ ಮಗನಾದ ರಾಜಾರಾಮನನ್ನು ಪಟ್ಟಕ್ಕೆ ಕುಳ್ಳಿರಿಸಬೇಕೆಂದು ಒಂದೇಸವನೆ ಛತ್ರಪತಿಯ ಡುಬ್ಬ ಕೆರೆಯಹತ್ತಿದಳು. ಈ ಗೃಹಕಲಹದ ಬೀಜಾರೋಪಣದಿಂದಂತು ಶಿವರಾಯನ ಸಂಸಾರದ ಸವಿಯು ಪೂರಾ ಹೋದಂತಾಯಿತು. ಬರಬರುತ್ತ ಆತನಿಗೆ ಸಂಸಾರವು ತೀರ ಬೇಸರಿಟ್ಟಿತು.

ಆತನು ವಿರಕ್ತನಾಗಿ ಬಹುಮಟ್ಟಿಗೆ ಮೌನವ್ರತವನ್ನು ಸ್ವೀಕರಿಸಿ ಶ್ರೀಭವಾನೀಮಾತೆಯ ಮುಂದೆ ವ್ಯಾಘ್ರಚರ್ಮವನ್ನು ಹಾಸಿಕೊಂಡು ನಿದ್ರೆಮಾಡುವ ಪರಿಪಾಠವಿಟ್ಟನು! ರಾಯಗಡದ್ದೊಂದು ನಿಟ್ಟಿನಲ್ಲಿರುವ ಒಂದು ಗುಹೆಯಂಥ ಏಕಾಂತ ಸ್ಥಾನದಲ್ಲಿ ಕುಳಿತು ಆತನು ಯೋಗಾಭ್ಯಾಸದಿಂದ ಕಾಲಹರಣಮಾಡುತ್ತಿದ್ದನು. ''ವಾರ್ಧಕೆ ಮುನಿವೃತ್ತಿನಾಂ ಯೋಗೇನಾಂತೆ ತನು ತ್ಯಜಾಂ'' ಎಂಬ ಕಾಳಿದಾಸೋಕ್ತಿಯನ್ನು ಪ್ರತ್ಯಕ್ಷ ಆಚರಿಸಿ ತೋರಿಸಲು, ಆ ನರಪುಂಗವನು ನಿಶ್ಚಯಿಸಿದ್ದನೆಂದು ಹೇಳಬಹುದಾಗಿತ್ತು. ಶಿವಪ್ರಭುವು ಕುಳಿತುಕೊಳ್ಳುತ್ತಿದ್ದ ಆ ಗುಹೆಯಂಥ ಹೊದರನ್ನು ಈಗಲೂ ಜನರು ಪವಿತ್ರಸ್ಥಾನವೆಂದು ಭಾವಿಸುವರು!

ಹೀಗೆ ಶಿವರಾಯನು ತನ್ನ ಐವತ್ತೆರಡನೆಯ ವರ್ಷದ ವಯಸ್ಸಿನಲ್ಲಿ ಯೋಗಾಭ್ಯಾಸದಲ್ಲಿ ತೊಡಗಿರಲು, ಮೇಲೆ ಹೇಳಿದಂತೆ ಆತನ ಚಿಕ್ಕ ಹೆಂಡತಿಯು ತನ್ನ ಮಗನಿಗೆ ಪಟ್ಟವಾಗಬೇಕೆಂದು ಕೆಣಕಹತ್ತಿದಳು. ಶಿವರಾಯನು ತನ್ನ ಹದಿನೈದನೆಯ ವರ್ಷದ ವಯಸ್ಸಿನಿಂದಲೇ ಸ್ವರಾಜ್ಯ ಸ್ಥಾಪನೆಗಾಗಿ ಆಯಾಸಪಡಹತ್ತಿ ಈಗ ಬಹಳವಾಗಿ ದಣಿದು ವಿಶ್ರಾಂತಿಯನ್ನು ಹೊಂದುತ್ತಿದ್ದನು. ಇಂಥ ಹೊತ್ತಿನಲ್ಲಿ ಚಿಕ್ಕಹೆಂಡತಿಯ ಕಾಟವು! ಶಿವಶಿವ!! ಎಂಥವರನ್ನೂ ಸಂಸಾರತಾಪವು ಬಿಟ್ಟಿಲ್ಲವಲ್ಲ! ಶಿವರಾಯನಿಗೆ ಎಂಟುಜನ ಹೆಂಡಿರಿದ್ದರೆಂದು ಇತಿಹಾಸಕಾರರು ಬರೆಯುತ್ತಾರೆ; ಆದರೆ ಅವರಲ್ಲಿ ಮೂವರ ಹೆಸರು ಮಾತ್ರ ಪ್ರಸಿದ್ಧವಾಗಿರುತ್ತವೆ. ಅವರಲ್ಲಿ ಸಯಿಬಾಯಿ, ಸೋಯರಾಬಾಯಿ ಎಂಬವರಿಬ್ಬರ ಹೆಸರು ಮೇಲೆ ಬಂದಿವೆ. ಸಯಿಬಾಯಿಯ ಮಗನೇ ಸಂಭಾಜಿಯು. ಸೋಯರಾಬಾಯಿಯ ಹೊಟ್ಟೆಯಲ್ಲಿ ರಾಜಾರಾಮನೆಂಬೊಬ್ಬ ಮಗನಲ್ಲದೆ, ಬೇರೆ ಮೂವರು ಹೆಣ್ಣುಮಕ್ಕಳಿದ್ದರು. ಇನ್ನೊಬ್ಬ ಚಿಕ್ಕಹೆಂಡತಿಯ ಹೆಸರು ಪುತಳಾಬಾಯಿಯು, ಈಕೆಯು ಸಭ್ಯಳೂ, ಪತಿಭಕ್ತಿಪರಾಯಣಳೂ ಇದ್ದು, ಹೊಟ್ಟೆಯಲ್ಲಿ ಮಕ್ಕಳು ಮರಿ ಇಲ್ಲದ್ದರಿಂದ ಪತಿಸೇವೆಯ ಹೊರತು ಎರಡನೆಯದರ ಕಡೆಗೆ ಈಕೆಯು ಮನಸ್ಸು ಮಾಡುತ್ತಿದ್ದಿಲ್ಲ. ಸಯಿಬಾಯಿಯಂತು ಮೊದಲೆ ತೀರಿಕೊಂಡಿದ್ದಳು; ಅದರಿಂದ ಈಗ ಸತಿಯನ್ನು ಪೀಡಿಸತಕ್ಕವಳೆಂದರೆ ಸೋಯರಾಬಾಯಿಯೊಬ್ಬಳೇ ಒಬ್ಬಳಾಗಿದ್ದಳು! ಆದರೂ ಆ ಒಬ್ಬಳ ಕಾಟದಿಂದಲೇ ಶಿವರಾಯನು ಜರ್ಜರನಾದನು. ಆತನಿಗೆ ಬಲಾಢ್ಯ ಶತ್ರುಗಳಾದ ಮೊಗಲರ ಕಾಟಬೇಕು, ಈ ದುಷ್ಟ ಸೋಯರಾಬಾಯಿಯ ಕಾಟವು ಬೇಡೆನ್ನುವ ಹಾಗಾಗಿತ್ತು! ಗೃಹಕಲಹದ ಮಾತೇ ಇಷ್ಟು ಸೂಕ್ಷ್ಮವಾಗಿರುವದು. ನೋಡಲಿಕ್ಕೆ ಅದು ಕಟ್ಟಿಯಷ್ಟು, ಕಂಡರೂ ಭೋಗಿಸಲಿಕ್ಕೆ ಗುಡ್ಡದಷ್ಟು ಆಗುವದು. ಶತ್ರುಗಳ ಶತ್ರುತ್ವಕ್ಕಿಂತ, ಮಿತ್ರರೆನಿಸಿಕೊಳ್ಳುವ ಮನೆತನದ ಜನರ ಮಿತ್ರತ್ವಭಾವದ ಶತ್ರುತ್ವವು ನಮ್ಮಿಂದ ದೂರವಾಗಿದ್ದು, ಅದರ ಸಂಬಂಧವು ಯಾವಾಗಾದರೊಮ್ಮೆ ಆಗಿ ತಾಪವುಂಟಾಗುವದು; ಮೇಲಾಗಿ ಅದನ್ನು ಬೇಕಾದ ಉಪಾಯದಿಂದ ತಟ್ಟನೆ ಪರಿಹರಿಸಿಕೊಳ್ಳಬಹುದು; ಆದರೆ ಮನೆತನದವರ ಮಿತ್ರತ್ವಸ್ವರೂಪದ ಶತ್ರುತ್ವವು ನಮಗೆ ಹೊಂದಿಕೊಂಡಿದ್ದದ್ದರಿಂದ ಅದರ ಸಂಬಂಧತಾಪವು ನಮಗೆ ಯಾವಾಗಲು ಆಗುತ್ತದೆ; ಮತ್ತು ಅದನ್ನು ತಟ್ಟನೆ ಪರಿಹರಿಸಿಕೊಳ್ಳಲಿಕ್ಕೂ ಬರುವದಿಲ್ಲ. ಸೋಯರಾಬಾಯಿಯಂತು ಶಿವರಾಯನ ಅರ್ಧಾಂಗವೇ ಆಗಿದ್ದಳು; ಅಂದಬಳಿಕ ಆಕೆಯ ಮಿತ್ರಸ್ವರೂಪವಾದ ಶತ್ರುತ್ವವು ಶಿವರಾಯನಿಗೆ

ಎಷ್ಟು ತಾಪದಾಯಕವಾಗಿರಬಹುದೆಂಬದನ್ನು ವಾಚಕರೇ ತರ್ಕಿಸತಕ್ಕದ್ದು. ಶಿವರಾಯನು ಸರ್ವಸಾಮಾನ್ಯ ಜನರಂತೆ ಸುಸೂತ್ರದ ಮನುಷ್ಯನಿದ್ದಿಲ್ಲ. ಬಹು ಕಷ್ಟದಿಂದ ಸಂಪಾದಿಸಿದ್ದ ಸ್ವರಾಜ್ಯರೂಪವಾದ ಮಂದಿರವು ಆತನನ್ನು ಆಶ್ರಯಿಸಿ ನಿಂತಿತ್ತು. ಈ ಮಂದಿರಕ್ಕೆ ಶಿವರಾಯನ ಯೋಗದಿಂದ ಗೃಹಕಲಹಾಗ್ನಿಯ ಸಂಪರ್ಕವಾಗಿ, ಶತ್ರುಗಳು ಹಾಕುವ ಉರುವಲದಿಂದ ಆ ಅಗ್ನಿಯು ಹೊತ್ತಿ, ಅದರ ಜ್ವಾಲೆಯು ಭುಗಿಭುಗಿಲೆಂದು ಎದ್ದರೆ, ಆ ಸ್ವರಾಜ್ಯಮಂದಿರವು ಕ್ಷಣದಲ್ಲಿ ಸುಟ್ಟು, ಬೂದಿಯಾಗಬಹುದಾಗಿತ್ತು! ಆದ್ದರಿಂದ ಶಿವರಾಯನು ತನ್ನ ಮಕ್ಕಳಾದ ಸಂಭಾಜಿ–ರಾಜಾರಾಮರು ದಾಯಾದ್ಯಮತ್ಸರದಿಂದ ಕಲಹಬೆಳೆಸಿದಂತೆ ಜಾಣತನದಿಂದ ನೋಡಿಕೊಳ್ಳಬೇಕಾಗಿತ್ತು. ದಿಲ್ಲಿಯ ಮೊಗಲಬಾದಶಹನಾದ ಶಹಜಹಾನನು ತನ್ನ ನಾಲ್ವರು ಮಕ್ಕಳಿಗೆ ದೊಡ್ಡ ದೊಡ್ಡ ಅಧಿಕಾರಗಳನ್ನು ಕೊಟ್ಟು, ಸ್ವತಂತ್ರರಾಗ ಬಿಟ್ಟದ್ದರಿಂದ,ಅವರು ಒಬ್ಬರಿಗೊಬ್ಬರು ಹೊಡೆದಾಡಿ ಅವರಲ್ಲಿ ಮೂವರು ಸತ್ತುಹೋಗಲು, ಉಳಿದ ಔರಂಗಜೇಬನೆಂಬ ತಂತ್ರಗಾರನು ಕಡೆಗೆ ತಂದೆಯನ್ನೇ ಸೆರೆಯಲ್ಲಿಟ್ಟು, ತಾನು ಸಿಂಹಾಸನವೇರಿದ ಉದಾಹರಣವು ಶಿವರಾಯನ ಕಣ್ಣಿಗೆ ಕಟ್ಟಿತ್ತು; ಆದ್ದರಿಂದ ಆತನು, ಮಾತ್ಸರ್ಯಪ್ರೇರಿತಳಾಗಿ ಒಂದೇಸವನೆ ತನ್ನನ್ನು ಕಾಡುತ್ತಿರುವ ಸೋಯರಾಬಾಯಿಯ ಶಾಸನ ಮಾಡಿ, ಆಕೆಯ ಅಭಿಮಾನಿಗಳಾದ ಪ್ರಬಲ ಮಹಾರಾಷ್ಟ್ರ ಸರದಾರರ ಮನಸ್ಸು ನೋಯಿಸಲಿಕ್ಕೂ, ತನ್ನ ಚಿಕ್ಕಮಗನಾದ ರಾಜಾರಾಮನ ಮನಸ್ಸಿನಲ್ಲಿ ತನ್ನ, ಹಾಗು ತನ್ನ ಹಿರಿಯಮಗ ಸಂಭಾಜಿಯ ವಿಷಯದ ದ್ವೇಷಭಾವದ ಬೀಜವನ್ನು ಬಿತ್ತಲಿಕ್ಕೂ ಹಿಂದೆ ಮುಂದೆ ನೋಡುತ್ತಿದ್ದನು. ಇತ್ತ ತನ್ನ ತರುವಾಯದಲ್ಲಿ ಗಾದಿಯ ನಿಜವಾದ ಒಡೆಯನಾಗಿರುವ ವೀರ ಸಂಭಾಜಿಯನ್ನೂ ಶಿವರಾಯನು ದುರ್ಲಕ್ಷಿಸುವಹಾಗಿದ್ದಿಲ್ಲ. ಆ ಶಂಭುವಿನ ತಾಯಿಯು ಚಿಕ್ಕಂದಿನಲ್ಲಿಯೇ ತೀರಿ ಕೊಂಡದ್ದರಿಂದ ಶಿವರಾಯನು ಆತನನ್ನು ಯಾವಾಗಲೂ ಕಚ್ಚಿಕೊಂಡು ಓಡಾಡುವವನಂತೆ, ಹೋದಲ್ಲಿ ಸಂಗಡ ಕರಕೊಂಡು ರಕ್ಷಿಸುತ್ತಿದ್ದನು. ವಿಷಪ್ರಯೋಗದ ಗೊಂದಲವು ಅರಸು ಮನೆತನದಲ್ಲಿ ಪ್ರಾಚೀನ ಕಾಲದಿಂದ ನಡೆದು ಬಂದದ್ದರಿಂದ, ಪರದೇಶಿಮಗನೆಂಬ ಕಕ್ಕುಲತೆ ಯಿಂದ ಶಿವರಾಯನು ತನ್ನ ವೀರ ಪುತ್ರನನ್ನು ಹಾಗೆ ರಕ್ಷಿಸಿದ್ದು ಯೋಗ್ಯವೇ ಸರಿ.

ಹೀಗೆ ಸ್ವಾಭಾವಿಕವಾಗಿ ಚಿಕ್ಕಂದಿನಿಂದಲೇ ಒದಗಿದ ಶಿವರಾಯನ ಈ ಅಪರೂಪದ ಸಹವಾಸದಿಂದ ಜಾತ್ಯಾ ಶೂರನಾಗಿದ್ದ ಸಂಭಾಜಿಯಲ್ಲಿ ಪ್ರತಾಪ ಪೋಷಕವಾದ ಹಲವು ಸದ್ಗುಣಗಳು ಸೇರಿದ್ದು ಆಶ್ಚರ್ಯವಲ್ಲ. ತನ್ನ ತಂದೆಯು ಶತೃಗಳೊಡನೆ ಶೌರ್ಯದಿಂದ ಕಾದುವಾಗ, ಪ್ರಬಲ ಶತೃಗಳಿಗೆ ತನ್ನ ಬುದ್ಧಿ ಪ್ರಭಾವದಿಂದ ಮಂಕುಬೂದಿ ಹಚ್ಚುವಾಗ, ಕ್ರೂರ ಮೃಗಗಳೊಡನೆ ಬೇಟೆಯಾಡುವಾಗ ಈ ಬಾಲಕೇಸರಿಯು ಯಾವಾಗಲೂ ಹತ್ತರ ಇರುತ್ತಿದ್ದದ್ದರಿಂದ ಅವನ ಆನೆಯ ಬಲಕ್ಕೆ ರಣಮದ–ಶೌರ್ಯ–ಸಾಹಸ–ರಾಜ್ಯವ್ಯವಹಾರದ ಒಡತಗಳು–ಶತೃಗಳನ್ನು ಯುಕ್ತಿಪ್ರಯುಕ್ತಿಗಳಿಂದ ಹಣ್ಣಿಗೆ ತರುವ ರೀತಿ ಇವೆಲ್ಲ ಸಹಾಯ ಕಾರಿಯಾಗಿ ಆ ಬಾಲವೀರನಲ್ಲಿ ನೆಲಸಿದವು. ಈ ಉತ್ತಮೋತ್ತಮ ಗುಣಗಳಿಗೆ ಶಾಂತಿ, ಸುವಿಚಾರ, ಸದಾಚರಣೆಗಳನ್ನು ಜೋಡಾಗಿದ್ದರೆ ''ತಂದೆ ಕಟ್ಟಿದ ಗುಡಿಗೆ ಮಗನು ಕಳಸ

ವಿಟ್ಟನೆ''ಂಬ ಕೀರ್ತಿಗೆ ಶಂಭುವು ನಿಶ್ಚಯವಾಗಿ ಪಾತ್ರನಾಗುತ್ತಿದ್ದನು; ಆದರೆ ಮಹಾರಾಷ್ಟ್ರದ, ಅಥವಾ ಭಾರತ ಭೂಮಾತೆಯ ದುರ್ದೈವದಿಂದ ಆ ಯೋಗವು ಒದಗಿಬರಲಿಲ್ಲ. ವೀರ ಶಂಭುವಿನಲ್ಲಿ ಅವನ ಯೋಗ್ಯತೆಗೆ ಕಲಂಕವನ್ನುಂಟು ಮಾಡುವಂಥ ಸಂತಾಪ, ಅವಿಚಾರ, ದುರಾಚರಣೆ ಇವು ಪ್ರಬಲವಾಗಿದ್ದದ್ದರಿಂದ, ಅವನು ತನ್ನ ಹೆಸರಿಗೆ ಕಲಂಕ ಉಂಟುಮಾಡಿ ಕೊಳ್ಳುವಷ್ಟೇ ಅಲ್ಲ, ಸರ್ವೋತ್ತಮನೂ, ಸರ್ವಗುಣಸಂಪನ್ನನೂ ಆದ ಮಹಾರಾಷ್ಟ್ರದ ಪ್ರಿಯ ರಾಜನೆನಿಸುವ ಶಿವಭೂಪತಿಯ ಹೆಸರಿಗೂ ಕಲಂಕವನ್ನುಂಟು ಮಾಡುವಷ್ಟು ನೀಚತನದಿಂದ ವರ್ತಿಸಿ, ದುರ್ಜನಶಿಖಾಮಣಿಯೆನಿಸಿಕೊಂಡನು. ನಿದ್ರೆ, ಆಲಸ್ಯ, ಅಹಂಕಾರ, ಪರವಾಲಂಬನ, ಶೀಘ್ರಕೋಪ, ದೀರ್ಘದ್ವೇಷ ಇವಾರು ಆತ್ಮಘಾತಕ ಗುಣಗಳೆಂದು ದೊಡ್ಡವರು ಹೇಳುವರು; ಆದರೆ ಇವೆಲ್ಲ ಗುಣಗಳೂ ಒಂದೊಂದಾಗಿ ಶಂಭುವಿನಲ್ಲಿ ಸೇರುತ್ತ ನಡೆದವು. ಮಗನ ಈ ಸ್ಥಿತಿಯನ್ನು ನೋಡಿ ಶಿವರಾಯನು ದುಃಖಪಟ್ಟು, ಅವನ ಗುಣಗಳನ್ನು ತಿದ್ದಬೇಕೆಂತಲೂ, ಅವನು ರಾಜ್ಯಭಾರ ವಹಿಸಲು ತಕ್ಕವನಾಗಬೇಕೆಂತಲೂ ಆತನನ್ನು ಪಲ್ಹಾಳಗಡದಲ್ಲಿ ಪ್ರತಿಬಂಧಿಸಿಟ್ಟು, ಆತನನ್ನು ತಿದ್ದುವದಕ್ಕಾಗಿ ಕಲುಷನನ್ನು ನಿಯಮಿಸಿದ್ದನು. ದುಷ್ಟನಾದ ಈ ಕಲುಷನೆಂಬ ಕನೋಜೀ ಬ್ರಾಹ್ಮಣನಿಂದಲೇ ಸಂಭಾಜಿಯು ಹ್ಯಾಗೆ ಕೆಟ್ಟನೆಂಬದು ಈ ಕಾದಂಬರಿಯಲ್ಲಿ ಪ್ರಸಂಗವಶಾತ್ ಬರುವದು. ಹೀಗೆ ಶಿವರಾಯನು ತನ್ನ ವೀರಪುತ್ರನನ್ನು ಸೆರೆಯಲ್ಲಿಟ್ಟರೂ, ಔರಂಗಜೇಬನು ಆಘಾತಕ್ಕೆ ಎದೆಗೊಟ್ಟು ನಿಂತು ರಾಜ್ಯವನ್ನು ರಕ್ಷಿಸಿಕೊಂಡರೆ, ನಮ್ಮ ವೀರ ಶಂಭುವೇ ರಕ್ಷಿಸಿಕೊಂಡಾನೆಂಬ ಭಾವನೆಯು ಆ ಶಿವಛತ್ರಪತಿಯ ಮನಸ್ಸಿನೊಳ ಗಿಂದ ಅಳಿಸಿಹೋಗಿದ್ದಿಲ್ಲ. ಶಂಭುವಿನ ಗುಣಗಳಷ್ಟು ತಿದ್ದಿದರೆ ತೀರಿತೆಂದು ಆತನು ಭಾವಿಸಿ, ಅದಕ್ಕೆ ತಕ್ಕ ಉಪಾಯಗಳನ್ನು ಯೋಚಿಸತೊಡಗಿದ್ದನು; ಆದರೆ ಈಶ್ವರೇಚ್ಛೆಯಿಂದ ಅಮೃತವೂ ವಿಷವಾಗುವಂತೆ, ಶಿವರಾಯನು ಯೋಚಿಸಿದ ಉಪಾಯಗಳೇ ಅಪಾಯಗಳಾಗಿ ಪರಿಣಿಸಿದರೆ, ಕಾಲಮಹಿಮೆಯೆಂದು ಸುಮ್ಮನಾಗಬೇಕಲ್ಲದೆ, ಯಾರಿಗೆ ಹೆಸರಿಡುವದರಿಂದ ಏನು ಪ್ರಯೋಜನ ವಾಗುವದು? ಭವಿತವ್ಯವನ್ನು ತಪ್ಪಿಸುವದು ಯಾರಿಂದಲೂ ಆಗದಷ್ಟೇ? ಇರಲಿ.

ಹೀಗೆ ಕ್ರೂರ ಸಂಭಾಜಿಯನ್ನು ಸೆರೆಯಲ್ಲಿಟ್ಟದ್ದು ದೊಡ್ಡ ಹಾನಿಗೆ ಕಾರಣವಾಯಿತು. ತನ್ನ ಮಲತಾಯಿಯು ತನ್ನ ಮಗನಿಗೆ ಪಟ್ಟವಾಗಬೇಕೆಂಬ ದುರ್ಬುದ್ಧಿಯಿಂದ ಬುದ್ಧಿಪೂರ್ವಕವಾಗಿ ತನ್ನನ್ನು ಸೆರೆಯಲ್ಲಿಡಿಸಿರುವಳೆಂದು ಕಲ್ಪಿಸಿ, ಆ ವೀರ ತರುಣ ಮರಾಟನು ಮಾತ್ಸರ್ಯದಿಂದ ಮನಸ್ಸಿನಲ್ಲಿ ತಳಮಳಿಸಹತ್ತಿದನು. ಇದರಿಂದ ತಂದೆಯಮೇಲಿನ ಆತನ ಭಕ್ತಿಯು ಕಡಿಮೆ ಯಾಯಿತು. ತನಗೆ ಪರರಾಜ್ಯದಮೇಲೆ ದಂಡೆತ್ತಿಹೋಗಲಿಕ್ಕೆ ಸ್ವಾತಂತ್ರ್ಯವಿಲ್ಲ; ಸ್ವೇಚ್ಛೆಯಿಂದ ದಿಂದ ಬೇಟೆಯಾಡೇನೆಂದರೆ ಸ್ವಾತಂತ್ರ್ಯವಿಲ್ಲ; ಎಂದು ತಿಳಿದು ಪಂಜರದೊಳಗೆ ಸಿಕ್ಕ ಸಿಂಹವು ಸಂತಾಪದಿಂದ ಉರಿಯುವಂತೆ, ಸಂತಾಪಿಯಾದ ಸಂಭಾಜಿಯು ಒಂದೇಸವನೆ ಉರಿಯುತ್ತಿದ್ದನು. ತಾನು ಪ್ರಬುದ್ಧನಾದರೂ ತನಗೆ ಯೋಗ್ಯ ಅಧಿಕಾರವು ದೊರೆಯದ್ದಕ್ಕಾಗಿ ಒಮ್ಮೆ ಬಾಯಿಗೆ ಬಾಯಿಹತ್ತಿ ಸಿಟ್ಟಾಗಿಹೋದ ಶಂಭುವು, ನೆಟ್ಟಗೆ ಮೊಗಲರ ಛಾವಣಿಯನ್ನು ಹೊಕ್ಕು ದಿಲೇರಖಾನನನ್ನು ಕೂಡಿದನು. ಮೊಗಲರಿಗೂ ಅಷ್ಟೇ ಬೇಕಾಗಿತ್ತು, ಆದ್ದರಿಂದ

ದಿಲೇರಖಾನನು ಸಂಭಾಜಿಗೆ ಆಶ್ರಯಕೊಡಬೇಕೆಂದು ಬಾದಶಹನಿಗೆ ಬರೆದನು; ಆದರೆ ಔರಂಗಜೇಬನಿಗೆ ಅದು ಮಾನ್ಯವಾಗಲಿಲ್ಲ. ತಮ್ಮ ಕಡೆಯ ಗುಪ್ತಸಂಗತಿಗಳನ್ನು ತಿಳಿದುಕೊಳ್ಳುವದಕ್ಕಾಗಿ ಶಿವಾಜಿಯು ತನ್ನ ಮಗನನ್ನು ನಮ್ಮ ಛಾವಣಿಗೆ ಕಳಿಸಿರುವನೆಂದು ಆ ಕುಟಿಲಸ್ವಭಾವದ ತಂತ್ರಗಾರನು ಕಲ್ಪಿಸಿ, ಆಶ್ರಯ ಕೊಡುವದರಬದಲು ಸಂಭಾಜಿಯನ್ನು ಸೆರೆಹಿಡಯಬೇಕೆಂದು ಆಲೋಚಿಸಿದನು. ಈ ರೀತಿಯು ಔರಂಗಜೇಬನ ಸಂಶಯದ ಸ್ವಭಾವಕ್ಕೆ ಒಪ್ಪತಕ್ಕದ್ದೇ ಸರಿ. ಕೂಡಲೇ ಆ ಬಾದಶಹನು ಸಂಭಾಜಿಯನ್ನು ಸೆರೆಹಿಡಿಯಲಿಕ್ಕೆಂದು ಖಾನಜಾಹನ ಬಹದ್ದರನನ್ನು ಆಗ್ರಾದಿಂದ ಕಳಿಸಿದನು; ಆದರೆ ಕುಲೀನ ದಿಲೇರಖಾನನು ಜಾತಿಯಿಂದ ಯವನನಾಗಿ ಮರಾಟರ ಶತೃವಾಗಿದ್ದರೂ ಕೊಟ್ಟಮಾತು ತಪ್ಪಿಸುವಷ್ಟು ದುಷ್ಟನಿದ್ದಿಲ್ಲ; ಆದ್ದರಿಂದ ಆ ಘನವಂತನಾದ ಸರದಾರನು ಸಂಭಾಜಿಗೂ, ಶಿವಾಜಿಯಿಂದ ತನ್ನಕಡೆಗೆ ಕಳಿಸಲ್ಪಟ್ಟಿದ್ದ ಜನರಿಗೂ ಭೆಟ್ಟಿಯನ್ನು ಮಾಡಿಸಿ, ಛಾವಣಿಯಿಂದ ಓಡಿಹೋಗಲು ಸಂಭಾಜಿಗೆ ಸೂಚಿಸಿದನು. ಇದರಿಂದ ಸಂಭಾಜಿಯ ಕಣ್ಣುಗಳು ತೆರೆದು ಆತನು ಪಶ್ಚಾತ್ತಾಪ ಕ್ಕೊಳಗಾದನು. ದಿಲೇರಖಾನನು ದೊಡ್ಡಮನಸ್ಸು ಮಾಡಿದ್ದರೆ ತಾನು ನಿಶ್ಚಯವಾಗಿ ಮೊಗಲರ ಸೆರೆಯಾಳಾಗುತ್ತಿದ್ದನೆಂಬ ಎಚ್ಚರವು ಆಗ ಶಂಭುವಿಗೆ ಹುಟ್ಟಿತು. ಆತನು ತಂದೆಯಬಳಿಗೆ ಬಂದು ಪಶ್ಚಾತ್ತಾಪದಿಂದ ಆತನ ಪಾದಗಳ ಮೇಲೆ ಬಿದ್ದು ಕಣ್ಣೀರು ಸುರಿಸಿದನು. ಹೀಗೆ ಪಶ್ಚಾತ್ತಾಪ ಕ್ಕೊಳಗಾದ ಮಗನ ಮನಸ್ಸನ್ನು ಪುನಃ ಯಾವಬಗೆಯಿಂದಲೂ ಶಿವರಾಯನು ನೋಯಿಸಲಿಲ್ಲ. ಈ ಪ್ರಸಂಗದಲ್ಲಿ ಶಿವರಾಯನು ಶಂಭುವಿನ ಕೈಯಲ್ಲಿ ಸೈನ್ಯಕೊಟ್ಟು ಮೊಗಲರ ಮೇಲೆ ಕಳಿಸಿದ್ದರೆ, ಅನುಭವಿಕರಾದ ಮರಾಟ ಸರದಾರರ ಸಹಾಯದಿಂದ ಆತನು ಅತುಲ ಪರಾಕ್ರಮವನ್ನು ಪ್ರಕಟಿ ಸುತ್ತಿದ್ದನೆಂದು ಇತಿಹಾಸಕಾರರು ಬರೆದಿರುವರು; ಆದರೆ ಹಾಗೆಮಾಡಲಿಕ್ಕೆ ರಾಜಕಾರಣಗಳು ಪ್ರತಿಕೂಲವಾದದ್ದರಿಂದಲೇ ಚತುರನಾದ ಶಿವಾಜಿಯು ಮಗನನ್ನು ಮೊಗಲರ ಮೇಲೆ ದಂಡೆತ್ತಿ ಕಳಿಸದೆ, ಆತನನ್ನು ಪುನಃ ಪಲ್ಹಾಳಗಡದಲ್ಲಿ ಸೆರೆಯಲ್ಲಿಡಿಸಿರಬಹುದು. ಈ ಕಾಲದಲ್ಲಿ ಶಂಭುವಿನ ಕಾವಲಿಗಾಗಿ ತ್ರಿಯಂಬಕ ವಿಠ್ಠಲ ಕಾರಭಾರಿ, ಹಿರೋಜಫರ್ಜಂದ, ಸೋನಾಜಿ ನಾಯಿಕ ಬಂಕಿ, ಸೂರ್ಯಾಜಿಕಂಕ ಮೊದಲಾದವರನ್ನು ನಿಯಮಿಸಿದನು. ಜನಾರ್ಧನ ಪಂತ ಹಣಮಂತ ಎಂಬವನನ್ನು, ಕೊಲ್ಹಾಪುರ ಪ್ರಾಂತದಲ್ಲಿದ್ದು ಸಂಭಾಜಿಯಮೇಲೆ ಕಣ್ಣಿಡುವದಕ್ಕಾಗಿ ಶಿವರಾಯನು ನಿಯಮಿಸಿದನು.

ಈ ಮೇರೆಗೆ ಮಗನು ಹಾದಿಗೆ ಬರಬೇಕೆಂದು ಶಿವರಾಯನು ಯತ್ನಿಸಿದ್ದಲ್ಲದೆ, ಪ್ರಸಂಗ ಒದಗಿದಾಗ ತಾನು ಸ್ವತಃ ಮಗನನ್ನು ಬೋಧಿಸುತ್ತಿದ್ದನು. ತನ್ನ ತರುವಾಯ ಈತನೇ ರಾಜ್ಯಾಧಿಕಾರಿ ಯಾಗತಕ್ಕವನೆಂದು ಆತನು ನಿಶ್ಚಯಿಸಿದ್ದನು. ಹೀಗಿರುವಾಗ ಸನ್ ೧೬೭೯ನೇ ಇಸವಿಯ, ಅಂದರೆ ಶಿವರಾನಯನು ಪಟ್ಟಕ್ಕೆ ಕುಳಿತು ೫ನೇ ವರುಷದ ವಿಜಯಾದಶಮಿಯ ಉತ್ಸವವು ರಾಯ ಗಡದಲ್ಲಿ ವಿಜೃಂಭಣೆಯಿಂದ ಜರಗತಕ್ಕದ್ದಿತ್ತು. ಈ ಪ್ರಸಂಗದಲ್ಲಿ ಪಲ್ಹಾಳ ಗಡದಿಂದ ಸಂಭಾಜಿಯನ್ನು ಕರಿಸಿಕೊಂಡು ನಾಲ್ಕು ಹಿತದ ಮಾತುಗಳನ್ನು ಹೇಳಬೇಕೆಂದು ಶಿವರಾಯನು ಮಾಡಿದ್ದನು; ಯಾಕಂದರೆ ಇನ್ನು ಬೇಗನೆ ಸಂಭಾಜಿಯು ರಾಜ್ಯಾಧಿಕಾರಿ

ಯಾಗತಕ್ಕವನೆಂಬ ಭಾವನೆಯು ಶಿವರಾಯನಿಗೆ ಆಗಿತ್ತು. ಅಚ್ಚ ಮಹಾರಾಷ್ಟ್ರ ಪದ್ಧತಿಯಂತೆ ದಸರೆಯ ಹಬ್ಬದ ಉತ್ಸವವು ಪೂರ್ಣವಾದ ಬಳಿಕ ಅಂದಿನ ರಾತ್ರಿ ತಂದೆ–ಮಕ್ಕಳ ಭೆಟ್ಟಿಯಾಯಿತು. ಆಗ ಶಿವರಾಯನು ತನ್ನ ವೀರಪುತ್ರನನ್ನು ಮನ್ನಿಸಿ ಗೌರವದಿಂದ ಆತನನ್ನು ಕುರಿತು—ಸಂಭಾಜಿರಾಜರೇ, ನಮ್ಮ ಪರಮ ಶ್ರೇಷ್ಠ ಗುರುಗಳಾದ ಶ್ರೀ ಸಮರ್ಥ ರಾಮದಾಸ ಸ್ವಾಮಿಗಳೂ, ನಾವೂ ಒಮ್ಮೆ ಏಕಾಂತದಲ್ಲಿ ಕುಳಿತಾಗ ಅವರು ನನಗೆ ಮಾಡಿದ ಉಪದೇಶದ ನಾಲ್ಕು ಮಾತುಗಳನ್ನು ನಿಮಗೆ ಹೇಳುವೆವು, ಲಕ್ಷಪೂರ್ವಕವಾಗಿ ಕೇಳಿರಿ; ಮತ್ತು ಕೇಳಿದ ಆ ಮಾತುಗಳಂತೆ ನಮ್ಮ ಪಶ್ಚಾತ್ ಹ್ಯಾಗೆ ನಡೆಯಬೇಕೆಂಬುದನ್ನು ನಮ್ಮ ಸಹವಾಸ ದಿಂದುಂಟಾಗಿರುವ ಅನುಭವದ ಬಲದಿಂದ ನೀವು ಮನನಮಾಡಿ ನಿಶ್ಚಯಿಸಿರಿ ನಮ್ಮ ತರುವಾಯ ನಮ್ಮ ಭವಾನೀ ಖಡ್ಗವು ನಿಮ್ಮ ಕೈಸೇರತಕ್ಕದ್ದಾಗಿರುವದು. ಆ ರಿಪುರಕ್ತಪಾನು ಧುರೀಣವಾದ ಶ್ರೇಷ್ಠ ಖಡ್ಗವು ನಾಚಿಕೆಯಿಂದ ತಲೆತಗ್ಗಿಸುವಂಥ ಹೇಡಿತನದ ಕೆಲಸವನ್ನು ನೀವು ಸರ್ವಥಾ ಮಾಡಬಾರದು. ನಮ್ಮ ಈ ವಿಜಯಶಾಲಿಯಾದ ಖಡ್ಗದಿಂದ ಶತ್ರುಗಳ ಸಾವಿರಾರು ಶಿರಃಕಮಲಗಳು ಈ ಆರ್ಯಭೂಮಾತೆಯ ಸಂತೋಷಕ್ಕಾಗಿ ಅರ್ಪಿಸಲ್ಪಟ್ಟಿರುವವು. ಅದರಂತೆ ಇನ್ನು ನಿಮ್ಮಿಂದಲೂ ಅರ್ಪಿಸಲ್ಪಡಲಿ! ರಣಧೀರರು ಮೆಚ್ಚುವಂತೆ ನೀವು ಶೌರ್ಯಕರ್ಮವನ್ನು ಆಚರಿಸಿರಿ. ಸದ್ಯದ ನಮ್ಮ ಪ್ರಕೃತಿಮಾನದ ಮೇಲಿಂದ ನೋಡಲು, ನಮ್ಮ ಮನಸ್ಸಿನ ಸಂಕಲ್ಪಗಳೆಲ್ಲ ನಮ್ಮಿಂದ ಪೂರ್ಣವಾದಾವೆಂಬಂತೆ ತೋರುವದಿಲ್ಲ. ಆದ್ದರಿಂದ ನಮ್ಮ ಸಂಕಲ್ಪಗಳನ್ನು ನೀವು ಪೂರ್ಣ ಮಾಡಿರಿ; ಈ ಕಾರ್ಯಕ್ಕೆ ನೀವು ತಕ್ಕವರಿರುವರೆಂದು ನಮ್ಮ ನಂಬಿಗೆಯಿದೆ. ಚಂಡಿ ಯಾಗಮಾಡಿ ಅಶ್ವಮೇಧಮಾಡಬೇಕೆಂದು ನಾವು ಮಾಡಿದ್ದ ಸಂಕಲ್ಪವನ್ನು ನೀವು ಪೂರ್ಣ ಮಾಡಿರಿ; ಮತ್ತು ಅಕಸ್ಮಾತ್ತಾಗಿ ನೀವು ಆರ್ಯಭೂಮಾತೆಯ ಚಕ್ರವರ್ತಿಗಳಾಗಿ, ಧರ್ಮರಾಜನ ಕಾಲದ ಅನುಭವವನ್ನು ಆರ್ಯಭೂಮಾತೆಯ ಪ್ರಿಯಪುತ್ರರಿಗೆ ಈ ಕಲಿಯುಗದಲ್ಲಿ ತಂದುಕೊಡಿರಿ. ನೀವು ಶಹಾಜಿರಾಜರ ಮೊಮ್ಮಕ್ಕಳಾಗಿದ್ದು ನಮ್ಮ ಮಕ್ಕಳಾಗಿರುತ್ತೀರೆಂಬದನ್ನು ಚನ್ನಾಗಿ ಲಕ್ಷದಲ್ಲಿಡಿರಿ. ನರ್ಮದೆಯ ಕೆಳಗಡೆಯಲ್ಲಿರುವ ರಾಮೇಶ್ವರದ ವರೆಗಿನ ರಾಜ್ಯವು ಸಮರ್ಥರ ಕೃಪೆಯಿಂದ ಬಹುತರ ಮಹಾರಾಷ್ಟ್ರ ರಾಜ್ಯಕ್ಕೆ ಈಗ ನಮ್ಮಿಂದ ಸೇರಿಸಲ್ಪಟ್ಟಂತೆ, ನರ್ಮದೆಯ ಉತ್ತರಕಡೆಯ ಹಿಮಾಲಯದವರೆಗಿನ ರಾಜ್ಯವನ್ನು ನೀವು ವಶಮಾಡಿಕೊಂಡು ನಮ್ಮ ಮನೋದಯವನ್ನು ಸಫಲಗೊಳಿಸಿರಿ. ಈ ಆರ್ಯಭೂಮಿಯ ರಾಜಾಧಿರಾಜರೆನಿಸಿ ಕೊಂಡು ದಿಲ್ಲಿಯ ಸಿಂಹಾಸನದಮೇಲೆ ಪಟ್ಟಾಭಿಷೇಕಮಾಡಿಸಿಕೊಳ್ಳಿರಿ. ಔರಂಗಜೇಬನ ಮೇಲೆ ಎಷ್ಟು ಮಾತ್ರವೂ ವಿಶ್ವಾಸವಿಡಬೇಡಿರಿ! ಆತನ ಕಾಪಟ್ಯದ ಅನುಭವವು ಬಾಲ್ಯದಲ್ಲಿಯೇ ನಿಮಗೆ ಆಗ್ರಾದಲ್ಲಿ ಬಂದಿರುವದು; ಅದರಂತೆ ಕಳೆದ ವರ್ಷ ದಿಲೇರಖಾನನ ಕಡೆಗೆ ಹೋದಾಗ ಆ ಅನುಭವದ ಪುನರಾವರ್ತನವಾಗಿರುವದು. ಆತನು ಮಹಾ ಮೋಸಗಾರನು. ಸವಿಸವಿ ಮಾತಾಡಿ, ಇಲ್ಲದ ಆಶೆ ತೋರಿಸಿ ನಿಮ್ಮನ್ನು ಯಾವಾಗ ತನ್ನ ಬಲೆಯಲ್ಲಿ ಕೆಡವಿಕೊಂಡಾ ನೆಂಬದರ ನಿಯಮವಿಲ್ಲ; ಆದ್ದರಿಂದ ಯಾವಾಗಲೂ ಜಾಗರೂಕರಾಗಿ ಇರತಕ್ಕದ್ದು. ಅರಸನು ಅನಾಥರ ನಾಥನಾಗಿರುವನು. ಆತನು ತನ್ನ ಪ್ರಜೆಗಳನ್ನೆಲ್ಲ ಸಂಕಟಮುಕ್ತರನ್ನಾಗಿಮಾಡಿ

ಹೊಟ್ಟೆಯ ಮಕ್ಕಳಂತೆ ಅವರ ಸಂರಕ್ಷಣೆ ಮಾಡತಕ್ಕದ್ದು. ನಮ್ಮ ತರುವಾಯ ಈ ದೊಡ್ಡ ಭಾರವು ನಿಮ್ಮ ತಲೆಯಮೇಲೆ ಬೀಳುವದು. ಫಿರಂಗಿ, ಶಾಮಲ, ಡಿಂಗಾರ, ಅರಬ, ಮೊಗಲ, ನಾರಾಯರಾಲ, ಪೋರ್ತುಗೀಜ, ಫಾರಸಿ, ಆಂಗ್ರೇಜ ಇವರು ಪರದೇಶದ ಹಾಗು ಪರಧರ್ಮದ ಜನರಾಗಿದ್ದು, ಅವರ ಹಿಡತಗಳು ಬಲು ತಗಲುಬಗಲಾಗಿರುವವು. ಅವರ ಇಲ್ಲದ ಮಹತ್ವವನ್ನು ಬೆಳೆಯಗೊಡಬೇಡಿರಿ. ಅವರನ್ನು ನಾಲ್ಕುದಿನ ಇರಬಂದ ಅತಿಥಿಗಳೆಂದು ತಿಳಿದು ನಡಿಸಿಕೊಳ್ಳಿರಿ. ನೀವು ನಿಮ್ಮ ಹಟಮಾರಿತನದ, ಹಾಗು ಸ್ವಚ್ಛಂದದ ಆಚರಣೆಯನ್ನು ಬಿಟ್ಟುಕೊಟ್ಟರೆ ಐವತ್ತೆರಡು ಬಾದಶಾಹಿಗಳನ್ನು ಮುಣಗಿಸಲು ನೀವು ಸಮರ್ಥರಾಗುವಿರೆಂಬ ನಂಬಿಗೆಯು ನಮಗಿದೆ. ಶ್ರೀ ಅಂಬಾಭವಾನಿಯ ಮೇಲೆಯೂ, ಸದ್ಗುರು ಶ್ರೀಸಮರ್ಥರ ಮೇಲೆಯೂ ನಿಮ್ಮ ದೃಢವಿಶ್ವಾಸವಿರಲಿ. ಅದರಿಂದಲೇ ನಿಮ್ಮ ಕಲ್ಯಾಣವಾಗುವದು. ರಾಜಾ ರಾಮನೇನು ಚಿಕ್ಕವನಿರುತ್ತಾನನ್ನುವ ಹಾಗಿಲ್ಲ; ಆದರೆ ಇಲ್ಲದ ಅಚ್ಚೆಯ ಮೂಲಕ ಆತನಲ್ಲಿ ಕರ್ತೃತ್ವಶಕ್ತಿಯು ಉಂಟಾಗಿರುವದಿಲ್ಲ; ಮನೆಹಿಡಿದು ಕುಳಿತು ಆತನು ಅಂಜುಬರುಕ ನಾಗಿರುವನು. ನೀವು ಆತನನ್ನು ಉತ್ತಮರೀತಿಯಿಂದ ರಕ್ಷಿಸತಕ್ಕದ್ದು. ನಾವು ವೆಂಕೋಜಿರಾಜರ ಸಂಗಡ ನಡೆದುಕೊಂಡಂತೆ ನೀವು ಆತನ ಸಂಗಡ ನಡೆದುಕೊಳ್ಳತಕ್ಕದ್ದು. ಭಾಗಾದಿತನದ ಮೂಲಕ ಮಹಾರಾಷ್ಟ್ರ ಸಿಂಹಾನಸದಲ್ಲಿ ಎರಡು ತುಂಡುಗಳಾಗಗೊಡಬೇಡಿರಿ. ನಿಮ್ಮ ಸಹವಾಸದಿಂದಲೂ, ಶಿಕ್ಷಣದಿಂದಲೂ ರಾಜಾರಾಮನನ್ನು ವೀರಾಧಿವೀರನನ್ನಾಗಿ ಮಾಡಿ ಬಿಡಿರಿ. ಜಿಂಜಿರೆಯ ಸಿದ್ದಿಯು ಬಹು ಉನ್ಮತ್ತನಿರುವನು. ಅವನ ಪಾರಪತ್ಯಮಾಡದೆ ಬಿಡಬೇಡಿರಿ. ಆಢ್ಯತೆಯಿಂದ ಮೆರೆಯುವ ಸೇವಕನನ್ನು ಇಟ್ಟುಕೊಳ್ಳುವದು ರಾಜ್ಯಕ್ಕೆ ಹುಳಹತ್ತಿದ ಹಾಗೆಯೇ ಸರಿ. ಅಂಥಸೇವಕರನ್ನು ಕೂಡಲೆ ನಾಶಮಾಡಿಬಿಡತಕ್ಕದ್ದು. ರಾಜ್ಯವನ್ನು ಬಲಿಷ್ಠವಾಗಿ ಮಾಡಲಿಕ್ಕೆ ಇದೊಂದು ಗೂಢ ಔಷಧವಾಗಿರುವದು. ಎಷ್ಟು ಸಿಟ್ಟು ಬಂದರೂ ಅದನ್ನು ಹೊರಗೆಡವದೆ ಬೂದಿಮುಚ್ಚಿದ ಕೆಂಡದಂತೆ ಗುಪ್ತವಾಗಿ ಇಟ್ಟುಕೊಳ್ಳಿರಿ. ಪ್ರಸಂಗದಲ್ಲಿ ಅದರ ಕಿಡಿ ಸುರಿಸುವದರಿಂದ ಹಿತವಾಗುವದು.

ನೀವು ಸೈನ್ಯವನ್ನು ಬಿಟ್ಟು ಎಂದೂ ದೂರ ಇರಬೇಡಿರಿ. ಶತೃಗಳಿಗೆ ಅಂಜಿ ಯಾವಾಗಲೂ ಸೈನ್ಯಸಮೇತವಾಗಿದ್ದರೆ ನಿಮಗೆ ಶತೃಗಳ ಬಾಧೆಯು ತಟ್ಟದು. ನೀವು ಯಾವಪ್ರಕಾರದ ಪಾಪಸಂಗ್ರಹವನ್ನೂ ಮಾಡದೆ ಏಕಪತ್ನಿವ್ರತಸ್ಥರಾಗಿದ್ದು ಧರ್ಮಧ್ವಜವನ್ನು ಮೆರೆಸುವರು ನಿಮ್ಮ ಆದ್ಯಕರ್ತವ್ಯವೆಂಬದನ್ನು ಮರೆಯಬೇಡಿರಿ. ಕೆರಳಿದ ವ್ಯಾಘ್ರನಂತೆ ಕರಕರನೆ ಹಲ್ಲುಕಡಿದು ತಕ್ಕಸಮಯದಲ್ಲಿ ಶತೃಗಳ ಮೇಲೆ ಧುಮುಕುವವನೇ ಜಯಶಾಲಿಯಾಗುವನು. ಹಿಂದೆ ಆದದ್ದನ್ನು ಮನಸ್ಸಿನಲ್ಲಿ ತರದೆ ಸರಳತನದಿಂದ ಮುಂದಿನ ಮಾರ್ಗವನ್ನು ಕ್ರಮಿಸಿರಿ. ರಣದಲ್ಲಿ ಕಾದುತ್ತ ಕಾದುತ್ತ ಧಾರಾತೀರ್ಥದಲ್ಲಿ ಮರಣ ಒದಗಿದರೂ ಚಿಂತೆಯಿಲ್ಲ, ಆದರೆ ನೀತಿ ಭ್ರಷ್ಟತೆಯ ನರಕಕ್ಕೆ ಮಾತ್ರ ಗುರಿಯಾಗಬೇಡಿರಿ; ಅದು ಕ್ಷತ್ರಿಯರಿಗೆ ಭೂಷಣವಲ್ಲ. ಪೂರ್ವಾರ್ಜಿತ ಪುಣ್ಯವು ಬಲವತ್ತರವಾಗಿರುವದರಿಂದಲೇ ನೀವು ಭೋಸಲೆಯ ಮನೆತನದಲ್ಲಿ

ಹುಟ್ಟಿರುತ್ತೀರಿ; ಆದ್ದರಿಂದ ಸತ್ಸಂಗಮಾಡಿ ದುರ್ಜನರನ್ನು ಕಾಲಲ್ಲಿ ಮೆಟ್ಟಿರಿ. ಸತ್ಕುಲಗಳನ್ನಾಶ್ರಯಿಸಿ ಅಸತ್ಕುಲಗಳ ಉಚ್ಛೇದಮಾಡುವದರಿಂದಲೆ ಪರಾಕ್ರಮದ ಅಭಿವೃದ್ಧಿಯಾಗುವದು. ಮನುಷ್ಯನ ಪರೀಕ್ಷೆಯಿಲ್ಲದವನ ಕೆಲಸಗಳೆಲ್ಲ ಅದೂರದರ್ಶಿತನವೆಂದು ಸಿದ್ಧವಾಗಿ, ಅವು ನೆಲೆಗಾಣದೆ ಹೋಗುವವು. ಮನಸ್ಸಿನಲ್ಲಿ ಯಾವಾಗಲೂ ರಾಜಕಾರಣದ ಸಂಗತಿಗಳನ್ನು ಸೋಸಿ ನೋಡುತ್ತ ಚತುರರಾದ ಗೂಢಚಾರರನ್ನು ದೇಶದ ತುಂಬ ಪಸರಿಸಿಟ್ಟಿರಬೇಕು. ಶತ್ರುಗಳ ಗೊತ್ತು ಹಚ್ಚಿ ಅವರಿಂದ ದೂರವಾಗಿರಬೇಕು. ಶತ್ರುವು ಮಿತ್ರನಾದರೂ ಅವನ ವಿಶ್ವಾಸವಿಡದೆ ತಕ್ಕಸಂಧಿಯನ್ನು ಸಾಧಿಸಿ ಅವನ ನಿಃಪಾತಮಾಡಬೇಕು. ಕುಲೀನರಾದ ಶೂರರಿಗೆ ಯೋಗ್ಯ ಆಶ್ರಯ ಕೊಟ್ಟು ಅವರ ಸಹಾಯದಿಂದ ರಾಜ್ಯವೃದ್ಧಿಯನ್ನು ಮಾಡಬೇಕು. ತನಗಿಂತ ಶ್ರೇಷ್ಠರಾದವರೊಡನೆ ಸ್ನೇಹಬೆಳಿಸಿ ತನ್ನ ಬುದ್ಧಿಸಾಮರ್ಥ್ಯದಿಂದ ಅವರನ್ನು ಹಣ್ಣುಮಾಡಿಬಿಡತಕ್ಕದ್ದು. ತನ್ನ ಗುಟ್ಟನ್ನು ಯಾರಿಗೂ ಹೇಳಬಾರದು. ಅವರಂಗಜೇಬನನ್ನೂ ಗೆದ್ದು ಇಡಿಯ ಭರತಭೂಮಿಗೆ ಅಧಿಪತಿಗಳಾದೇವೆಂಬ ಉತ್ಸಾಹವನ್ನು ಮನಸ್ಸಿನಲ್ಲಿ ತಾಳಿರಿ. ನಿಮ್ಮ ಆಚಾರ್ಯರನ್ನೂ, ಗುರುಗಳನ್ನೂ ಕೇಳಿ ಧರ್ಮರಕ್ಷಣ ಮಾಡಿರಿ. ಏಕನಿಷ್ಠ ಸೇವಕರು ಪ್ರಸಂಗವಶಾತ್ ಅಪರಾಧ ಮಾಡಿದರೂ ಅವರು ಮಾಡುತ್ತ ಬಂದ ಸೇವೆಯನ್ನು ಮನಸ್ಸಿನಲ್ಲಿ ತಂದು ಅವರ ಅಪರಾಧಗಳನ್ನು ಕ್ಷಮಿಸಿರಿ. ಅಷ್ಟಪ್ರಧಾನರ ಮಾನ–ಮರ್ಯಾದೆಗಳನ್ನು ಯಾವಾಗಲೂ ಕಾಯಿರಿ. ಅವರು ಪ್ರಜೆಗಳ ಸ್ವಾಸ್ಥ್ಯದ ಮುಖಗಳೆಂದು ತಿಳಿಯಿರಿ. ಹಿಂಸಕನೂ, ಪಾತಕಿಯೂ ಆದವನ ಸ್ನೇಹವನ್ನು ಮಾಡಬೇಡಿರಿ. ವೇದದ ಆಜ್ಞೆಯನ್ನು ಯಾವಾಗಲೂ ಹೃದಯದಲ್ಲಿ ಜಾಗ್ರತವಾಗಿಟ್ಟುಕೊಂಡು ಕ್ರೋಧರಹಿತರಾಗಿ ಧೈರ್ಯದಿಂದ ಶತೃಗಳ ಮರ್ದನಮಾಡಿ ಆಮೇಲೆ ಐಶ್ವರ್ಯವನ್ನು ಭೋಗಿಸತಕ್ಕದ್ದು. ನೀವು ಬಾಹುಬಲದಿಂದ ಕೆರಳಿದ ಕೇಸರಿಯನ್ನು ಆಯಾಲದ ಕೂದಲುಹಿಡಿದು ಬಗ್ಗಿಸುವಿರೆಂಬ ನಂಬಿಗೆಯು ನಮಗಿರುತ್ತದೆ. ನೀವು ಪರಾಕ್ರಮದಿಂದ ಭೀಮಸೇನನಿಗೆ ಸಮಾನನಾಗಿದ್ದರೂ, ಆ ಪರಾಕ್ರಮಕ್ಕೆ ಜೋಡಾಗಿರಬೇಕಾದ ಮುತ್ಸದ್ದಿತನವನ್ನು ಅಧೀರತೆಯಿಂದ ಕಳೆದುಕೊಳ್ಳುವಿರಿ, ಈ ತಪ್ಪನ್ನು ನೆನಪಿನಲ್ಲಿಟ್ಟು ತಿದ್ದಿಕೊಂಡು ಸತ್ಕೀರ್ತಿ ಸಂಪಾದಿಸಿ ಭೋಸಲೆ ಮನೆತನವನ್ನು ಉದ್ಧರಿಸಿ. ನಿರರ್ಥಕವಾದ ಗರ್ವವನ್ನು ತೊಳೆದು ದಾಂಭಿಕತನವನ್ನು ನಾಮಶೇಷವಾಗಿ ಮಾಡತಕ್ಕದ್ದು. ಶಾಬರೀ ಮಾಂತ್ರಿಕರಿಗೆ ಎಂದೂ ಆಶ್ರಯಕೊಡಬಾರದು; ಯಾಕಂದರೆ ಅವರ ಸಹವಾಸದಿಂದ ಕೃತ್ವಶಕ್ತಿಯು ಸಡಲಿ ಘಾತವಾಗುವದು. ಜಾರಣ– ಮಾರಣ–ಮಂತ್ರತಂತ್ರ–ಉಚ್ಚಾಟನಾದಿ ಕೃತಿಗಳು ಕುಟಿಲಗಳಾಗಿದ್ದು, ಸ್ತಂಬನ ಮೋಹನಾದಿ ಗಳ ಔಷಧಿಗಳು ಕುಲಕ್ಷಯಕಾರಕಗಳಾಗಿರುವವು. ಆದ್ದರಿಂದ ಅರಸಾದವನು ಈ ಎಲ್ಲ ಮೋಹಕ ಪ್ರಶಸ್ತಿಗಳ ಕಡೆಗೆ ಹಣಿಕಿ ಸಹ ಹಾಕಲಾಗದು. ತೀಕ್ಷ್ಣಧಾರೆಯ ಶಸ್ತ್ರಗಳಂತೆ ಮಾದಕಪದಾರ್ಥಗಳ ಉಪಯೋಗವನ್ನು ಯೋಗ್ಯ ಕಾಲದಲ್ಲಿ ಮಾತ್ರ ಮಾಡಬೇಕು. ಭಾಷಣವು ಭಾವಗರ್ಭಿತವೂ, ಗಂಭೀರವೂ ಆಗುವಂತೆ ಯತ್ನಿಸುತ್ತಿರಬೇಕು. ವಾರಾಂಗನೆಯರಂಥ ಹೀನಜನರನ್ನೂ ತಮ್ಮ ಗೂಢಚಾರರಾಗಿ ಉಪಯೋಗಿಸಿಕೊಳ್ಳಬಹುದು; ಆದರೆ ಹಲ್ಲು ಮುರಿಯದೆಯಿದ್ದ ಹಾವಿನ ಮೇಲೆ ವಿಶ್ವಾಸವಿಡುವಷ್ಟೇ ಅವರ

ಮೇಲೆ ವಿಶ್ವಾಸವಿಟ್ಟು, ರಾಜಕಾರಣವನ್ನು ವಿವೇಕದಿಂದ ಸಾಗಿಸುತ್ತಿರಬೇಕು. ನುಡಿದಂತೆ ನಡೆದು ತೋರಿಸಬೇಕು. ವೇಶ್ಯೆಯರ, ಹಾಗು ವಾರಾಂಗನೆಯರ ಆಸಕ್ತಿಯು ಪದಭ್ರಷ್ಟತೆಗೆ ಕಾರಣ ವಾಗಿರುವದರಿಂದ ಯಾವಾಗಲೂ ಅವುಗಳಿಂದ ದೂರವಾಗಿರಬೇಕು. ಭೂಭಾರಹರಣಮಾಡಿ ಪ್ರಜೆಗಳ ಸಂತೋಷವೃತ್ತಿಯು ಸಂಪಾದಿಸುವ ಉದ್ದೇಶವನ್ನು ಮನಸ್ಸಿನಲ್ಲಿಟ್ಟು ಯತ್ನಮಾಡಿದರೆ ನಿಶ್ಚಯವಾಗಿ ಯಶಃಪ್ರಾಪ್ತಿಯಾಗಿ ಕೀರ್ತಿಯು ಕೈಸೇರುವದು. ಒಟ್ಟಿಗೆ, ಸಮರ್ಥರ ಈ ಉಪದೇಶವನ್ನು ವೇದತುಲ್ಯವೆಂದು ತಿಳಿದು, ಅದರಂತೆ ಆಚರಿಸಿರಿ. ನೀವು ಚತುರರಿರುವಿರಿ, ಚಟುವಟಿಕೆಯವರಿರುವಿರಿ, ರಣಬಹಾದ್ದರಿರುವಿರಿ; ಆದರೆ ತಡೆಯಲಾಗದ ನಿಮ್ಮ ಕ್ರೋಧಾವೇಶದಿಂದಲೂ, ದುಡುಕಿನಿಂದಲೂ ನಿಮ್ಮ ಸದ್ಗುಣಗಳು ಮಣ್ಣುಗೂಡಿ ಹೋಗಿ ನಿಮ್ಮ ಹೇತುವಿನ ವಿಪರ್ಯಾಸವಾಗುತ್ತಿರುವದನ್ನು ಚನ್ನಾಗಿ ವಿಚಾರ ಮಾಡಿರಿ.

ಈ ಮೇರೆಗೆ ಶೌರ್ಯಸಾಗರನೂ, ಸದ್ಗುಣಗಳ ಖನಿಯೂ ಆದ ಶಿವಾರಯನು, ಮುಂದೆ ಅರಸನಾಗಬೇಕಾಗಿರುವ ತನ್ನ ಮಗನನ್ನು ಬೋಧಿಸಿದ ಬಳಿಕ ಇಬ್ಬರೂ ಪರಸ್ಪರರನ್ನು ಆಲಿಂಗಿಸಿದರು. ಪಶ್ಚಾತ್ತಾಪದಿಂದ ಪರಿಶುದ್ಧನಾದ ಸಂಭಾಜಿಯು ತಂದೆಯ ಚರಣಗಳ ಮೇಲೆ ಮಸ್ತಕವಿಡಲು, ವೀರಪುತ್ರನ ಕಣ್ಣೀರುಗಳಿಂದ ಶಿವರಾಯನ ಪಾದಗಳು ತೊಯ್ದವು! ಆಗ ಸಹೃದಯನಾದ ಶಿವರಾಯನ ಕಣ್ಣುಗಳೂ ಭಾಷ್ಪಪೂರ್ಣವಾಗಿ, ಅವರ ನಾಲ್ಕಾರು ಹನಿಗಳು ಪಟಪಟ ಸಂಭಾಜಿಯ ಮಸ್ತಕದ ಮೇಲೆ ಬೀಳಲು, ಆ ಪಿತೃಭಕ್ತ ಪರವಶ ಪುತ್ರನಿಗೆ ಅದು ಗೊತ್ತಾಯಿತೋ ಇಲ್ಲವೋ ಹೇಳಲಾಗುವದಿಲ್ಲ, ಶಿವರಾಯನು ಮಗನಿಗೆ ರತ್ನಖಚಿತ ಹಿಡಿಕೆಯದೊಂದು "ಖಡ್ಗವನ್ನೂ, ಢಾಲನ್ನೂ, ಮಂದಿಲು–ತುರಾಯಿ–ಕಡೆಗಳನ್ನೂ, ಯುದ್ಧೋಪಯುಕ್ತವಾದ ಜರದ ಪೋಷಾಕನ್ನೂ ಕೊಟ್ಟದ್ದಲ್ಲದೆ, ಸ್ವತಃ ತಾನು ಉಪಯೋಗಿಸುತ್ತಿರುವ "ದಿಲಪಾಕ" ಎಂಬ ಹೆಸರಿನ ಅರಬಿಕುದುರೆಯನ್ನೂ, ಗಜದಂತವೆಂಬ ಹೆಸರಿನ ಬಿಳಿಯ ಆನೆಯನ್ನೂ ಇನಾಮಾಗಿ ಕೊಟ್ಟನು. ಆಗ ಪಿತಾಪುತ್ರರಿಗಾದ ಆನಂದ ವನ್ನು ವರ್ಣಿಸಲಾಸಲ್ಲ, ಮಗನು ಅತ್ಯಂತ ಕೃತಜ್ಞನಾಗಿ ವಿನಯಭಾವದಿಂದ ಕುಳಿತಿರಲು, ಶಿವಭೂಪತಿಯು ತಾಂಬೂಲ ಕೊಟ್ಟು ಆತನಿಗೆ ಹೋಗಲಪ್ಪಣೆಕೊಟ್ಟನು. ಆಗ ಬೆಳಗು ಬಂದಿತ್ತು, ಬೆಳಗಿನ ಗಂಟೆಯು ಬಾರಿಸ ತೊಡಗಿತ್ತು, ಸಂಭಾಜಿಯುಹೋಗುವಾಗ ಪುನಃತಂದೆಯ ಚರಣಕ್ಕೆರಗಲು, ಶಿವಾಜಿಯು ಪುನಃ ಮಗನನ್ನು ಅಪ್ಪಿಕೊಂಡು, ಬೆಳಗಿನ ಬ್ರಾಹ್ಮಮುಹೂರ್ತದಲ್ಲಿ ಇಲ್ಲಿಂದ ಹೊರಟು ಬಂದೋಬಸ್ತಿನಿಂದ ಪಲ್ಹಾಳಗಡಕ್ಕೆ ಹೋಗಬೇಕೆಂದು ಆಜ್ಞಾಪಿಸಿದನು. ಬಳಿಕ ಸಂಭಾಜಿಯ ಕಣ್ಣು ಬಾಷ್ಪಪೂರ್ಣವಾಗಲು, ಪಿತೃದೈವತವನ್ನು ವಿನಯದಿಂದ ನೋಡುತ್ತ ಮುಗ್ಧಾವಸ್ಥೆಯಿಂದ ಅಲ್ಲಿಂದ ಹೊರಟು ತನ್ನ ಮಂದಿರಕ್ಕೆ ಹೋದನು. ಆತನು ಇನ್ನು ಬೇಗನೆ ಪಲ್ಹಾಳಗಡಕ್ಕೆ ಹೊರಡ ಬೇಕಾಗಿತ್ತು, ಸಂಭಾಜಿಯ ಪ್ರಿಯಪತ್ನಿಯಾದ ಏಸೂಬಾಯಿಗೆ, ಇಂದು ಬೇಗನೆ ಊರಿಗೆ ಹೊರಡುವದೆಂಬದು ಮೊದಲೆ ಗೊತ್ತಾದ್ದದ್ದರಿಂದ, ಆಕೆಯು ಹೊರಡುವ ಸಿದ್ಧತೆಮಾಡಿ ಇಬ್ಬರೂ ಅತ್ತೆಯರಿಗೂ ಹೇಳಿ ಪತಿಯ ಮಾರ್ಗ ಪ್ರತೀಕ್ಷೆಮಾಡುತ್ತ ಕುಳಿತುಕೊಂಡಿದ್ದಳು. ಸಂಭಾಜಿಯು ಹೋದಕೂಡಲೆ ಆ ತರುಣದಂಪತಿಗಳು ರಾಜಾರಾಮನನ್ನು ಕಾಣುವದಕ್ಕಾಗಿ

ಹೋದರು. ಆಗ ಸಜ್ಜನನಾದ ರಾಜಾರಾಮನು ಅಣ್ಣನನ್ನೂ, ಅತ್ತಿಗೆಯನ್ನೂ ತಂದೆಯ ತಾಯಿಗಳಂತೆ ಭಾವಿಸಿ, ಅವರ ಆಶೀರ್ವಾದದ ಇಚ್ಛೆಯಿಂದ ಭಕ್ತಿಯುತನಾಗಿ ನಮಸ್ಕರಿಸಲು, ಅವರು ತಮ್ಮ ಪ್ರಿಯಪುತ್ರನನ್ನು ಆಶೀರ್ವದಿಸುವಂತೆ ಪ್ರೇಮದಿಂದ ಆಶೀರ್ವದಿಸಿದರು. ಬಳಿಕ ಏಸೂಬಾಯಿಯು ತನ್ನ ಮಹಾಲಿಗೆ ಹೋದಳು. ಸಂಭಾಜಿಯೊಬ್ಬನೇ ತನ್ನ ಇಬ್ಬರು ತಾಯಂದಿರನ್ನು ನಮಸ್ಕರಿಸಿ ಅಪ್ಪಣೆ ಪಡೆಯುವದಕ್ಕಾಗಿ ಹೊರಟು, ಮೊದಲು ಸೋಯಿರಾ ಬಾಯಿಯ ಮಂದಿರಕ್ಕೆ ಹೋದನು; ಆದರೆ ರಾಜಾರಾಮನನ್ನು ಕಾಣುವಾಗ ಇದ್ದ ಶುದ್ಧಾಂತಃ ಕರಣವು ಈಗ ಸಂಭಾಜಿಯಲ್ಲಿದ್ದಿಲ್ಲ; ಯಾಕಂದರೆ ''ಮನೋಹಿ ಜನ್ಮಾಂತರ ಸಂಗೀತಜ್ಞ'' ಎಂಬ ಕಾಲಿದಾಸೋಕ್ತಿಯಂತೆ, ಮನಸ್ಸು ಜನ್ಮಾಂತರದ ಸಂಗತಿಗಳನ್ನು ತಿಳಿದುಕೊಳ್ಳಲು ಸಮರ್ಥ ವಿರುವಾಗ, ಇದೇ ಜನ್ಮದಲ್ಲಿಯೆ ಅನ್ಯರ ಮನಸ್ಸಿನ ಸ್ಥಿತಿಯನ್ನು ತಿಳಿದುಕೊಳ್ಳಲಿಕ್ಕೆ ಅದು ಸಮರ್ಥ ವಾಗಲಿಕ್ಕಿಲ್ಲವೆ? ರಾಜಾರಾಮನ ಹೃದಯವು ಪ್ರೇಮಪೂರ್ಣವಾಗಿದ್ದರಿಂದ ಸಂಭಾಜಿಯ ಹೃದಯವೂ ಪ್ರೇಮಪೂರ್ಣವಾಯಿತು. ಈಗ ಸೋಯರಾಬಾಯಿಯ ಹೃದಯವು ಮಾತ್ಸರ್ಯಪೂರ್ಣವಾಗಿದ್ದದ್ದರಿಂದ ಅದರ ಪರಿಣಾಮವು ಸಂಭಾಜಿಯ ಹೃದಯದಲ್ಲಿಯೂ ಆಯಿತು. ಸೋಯರಾಬಾಯಿಯ ಆದರೋಪಚಾರದಲ್ಲಿ ಕೊರತೆಯಾಗಲಿಲ್ಲ; ಆಕೆಯ ಪ್ರೇಮಪ್ರದರ್ಶನದಲ್ಲಿಯೂ ಕೊರತೆಯಾಗಲಿಲ್ಲ; ಆದರೆ ಆಕೆಯ ಹೃದಯವು ಶುದ್ಧವಲ್ಲದ್ದರಿಂದ ಎಲ್ಲವ್ಯವಹಾರವು ನೋಡುವವರಿಗೆ ಸುಂದರವಾಗಿ ಆಗದೆ ಹರಿದುಹಚ್ಚಿದಹಾಗೆ ಆಯಿತು. ಆ ರಾಜಪತ್ನಿಯ ಮಾತಿನಲ್ಲಿಯೂ, ಮುಖಚರ್ಯದಲ್ಲಿಯೂ ಮಾತ್ಸರ್ಯವು ಸೂಕ್ಷ್ಮರೀತಿಯಿಂದ ಸುಳಿದಾಡುತ್ತಿತ್ತು; ಮಾತೃದರ್ಶನದಿಂದ ಸಂಭಾಜಿಗೆ ಆಗತಕ್ಕಷ್ಟು ಸಮಾಧಾನವಾಗಲಿಲ್ಲ, ಆದರೂ ಕಪಟಾಚರಣೆಯಿಂದೇ ಆಗಲೊಲ್ಲದೇಕೆ, ಆದರಸತ್ಕಾರದ ಶಿಷ್ಟಾಚಾರವಾಗಿ ಅಲ್ಲಿಂದ ಹೊರಟಬಳಿಕ ಸಂಭಾಜಿಯು ಚಿಕ್ಕತಾಯಿಯಾದ ಪುತಳಾಬಾಯಿಯ ಆಶೀರ್ವಾದವನ್ನು ಪಡಕೊಂಡು ಮನೆಗೆ ಬರಲು, ಕೂಡಲೆ ಅವರೆಲ್ಲರು ಪಲ್ಹಾಳಗಡಕ್ಕೆ ಹೊರಟರು. ಸಂಭಾಜಿಯು ಹೋಗುವಾಗ ಪುನಃ ತಂದೆಯ ದರ್ಶನಮಾಡಿ ಕೊಂಡು ಪಾದಗಳಮೇಲೆ ಮಸ್ತಕವಿಟ್ಟು ಅಪ್ಪಣೆ ತಕ್ಕೊಂಡು ಬಂದನು. ಬಳಿಕ ನಸುಕಿನಲ್ಲಿ ಸರ್ವಸನ್ನಾಹದೊಡನೆ ಅವರೆಲ್ಲರೂ ರಾಯಗಡವನ್ನು ಇಳಿಯತೊಡಗಲು, ಬಹುಮಾನಾರ್ಥ ವಾಗಿ ದುರ್ಗದ ಮೇಲೆ ತೋಫುಗಳು ಹಾರಹತ್ತಿದವು! ತನ್ನ ವೀರಪುತ್ರನು ದುರ್ಗವ ಇಳಿಯುವದನ್ನು ಶಿವರಾಯನು ನೋಡುತ್ತಲಿದ್ದನು. ಆಗ ಆತನು ಮನಸ್ಸಿನಲ್ಲಿ— ''ನಮ್ಮ ಶೂರಶಂಭುವು ದುಷ್ಟನೆಂದು ತಿರಸ್ಕರಿಸುವಲ್ಲಿ ತಾತ್ಪರ್ಯವೇನು? ''ಕೆಟ್ಟದ್ದನ್ನು ಅಟ್ಟವನೇ ಜಾಣನೆ''ನ್ನುವಂತೆ ಹಲವು ಉಪಾಯಗಳಿಂದ ಆತನನ್ನು ಹಾದಿಗೆ ತರಲೇಬೇಕು, ಎಂದು ನುಡಿಯುತ್ತ ಪೂರ್ವದಿಕ್ಕಿಗೆ ನೋಡಲು, ಶುಕ್ರೋದಯವಾಗಿ, ಆ ತೇಜಃಪುಂಜಗ್ರಹವು ತಕ್ಕಮಟ್ಟಿಗೆ ಮೇಲಕ್ಕೆ ಬಂದಿತ್ತು; ಆದರೆ ಆ ಮನೋಹರ ಗ್ರಹವನ್ನು ನೋಡಿ ಶಿವರಾಯನಿಗೆ ಆನಂದವಾಗುವದರ ಬದಲು ಆತನ ಅಂತಃಕರಣವು ಭಯದಿಂದ ವ್ಯಥಿತವಾಯಿತು!

# ಮಾತ್ಸರ್ಯಾಗ್ನಿಯು

ಮೇಲೆ ಹೇಳಿದಂತೆ ವಿಜಯಾದಶಮಿಯ ರಾತ್ರಿಯಲ್ಲಿ ತಂದೆ-ಮಕ್ಕಳ ಭೆಟ್ಟಿಯಾಗಿ ಶಿವರಾಯನು ಸಂಭಾಜಿಗೆ ಮಾಡಿದ ಉಪದೇಶವನ್ನೂ, ಉಪದೇಶಾನಂತರ ತಂದೆಯು ಮಗನಿಗೆ ಮಾಡಿದ ಬಹುಮಾನವನ್ನೂ ಮರೆಗೆ ನಿಂತು ನೋಡಿದ ಸೋಯರಾಬಾಯಿಯು ಸಂತಪ್ತಳಾದಳು. ತನ್ನ ಮಗನಿಗೆ ಪಟ್ಟವಾಗದೆ ದುಷ್ಟ ಸಂಭಾಜಿಗೆ ಪಟ್ಟವಾಗುವದಲ್ಲ ಎಂದು ಆಕೆಯು ತಳಮಳಿಸಹತ್ತಿದಳು. ಸಂಭಾಜಿಯು ದುಷ್ಟನೂ, ಪರಸ್ತ್ರೀಲಂಪಟನೂ, ಸೆರೆ ಗುಡುಕನೂ ಇರುವವನಲ್ಲದೆ, ಸ್ವತಃ ತಮ್ಮ ಮೇಲೆ ತಿರುಗಿಬಿದ್ದು ಮೊಗಲರನ್ನು ಕೂಡ ಹೋದದ್ದರಿಂದ ಇವನು ಸಿಂಹಾಸನವೇರಲು ಅಯೋಗ್ಯನೆಂದು ತಿಳಿದು, ಮಹಾರಾಜರು ಅವನನ್ನು ಪಲ್ಹಾಳಗಡದಲ್ಲಿ ಪ್ರತಿಬಂಧದಲ್ಲಿಡಿಸಿರುವರೆಂದು ಆ ರಾಜಪತ್ನಿಯು ಭಾವಿಸಿದ್ದಳು. ಸಾಧಾರಣವಾಗಿ ಜನರ ತರ್ಕವೂ ಹಾಗೆಯೇ ಆಗಿತ್ತು; ಆದರೆ ನಿಜಸ್ವರೂಪವು ಸೋಯರಾ ಬಾಯಿಗೆ ಇಂದು ಗೊತ್ತಾದ್ದರಿಂದ ಆಕೆಯ ಅಂತಃಕರಣವು ವ್ಯಥಿಥವಾಯಿತು; ಇನ್ನು ಏನು ಮಾಡಬೇಕೆಂದು ಆಕೆಯು ಯೋಚಿಸಹತ್ತಿದಳು. ತನ್ನ ಮಗನಿಗೆ ಪಟ್ಟವಾಗಬೇಕೆಂದು ಆಕೆಯು ನಿರ್ಧರಿಸಿಕೊಂಡು ಬಿಟ್ಟಿದ್ದರಿಂದ ಅದಕ್ಕೆ ಅಡ್ಡಾಗುವವರನ್ನು ನಾಶಮಾಡಲಿಕ್ಕೆ ಆಕೆಯ ಮನಸ್ಸು ಹೇಸದಾಯಿತು. ಆಕೆಯು ತನ್ನ ಮಂಚದಮೇಲೆ ಮಲಗಿಕೊಂಡು ದಾಸಿಯರನ್ನು ಹೊರಗೆ ಹೋಗಹೇಳಿ ಒಬ್ಬಳೇ ಆಲೋಚಿಸತೊಡಗಿದಳು. ಹಲವು ವಿಚಾರತರಂಗಗಳ ತಾಕಲಾಟದಿಂದ ಆಕೆಗೆ ಏನೂ ತೋಚದಾಯಿತು. ಆಕೆಯು ಉಸುರ್ಗಳೆಯುತ್ತ ಒಮ್ಮೆ ಈ ಮಗ್ಗಲಿಂದ ಆ ಮಗ್ಗಲು ಆಗುವಳು ಒಮ್ಮೆ ಬುಡುಬುಡು ಹೊರಳಾಡುವಳು, ಒಮ್ಮೆ ಎದ್ದು ಕುಳಿತುಕೊಳ್ಳುವಳು, ಮತ್ತೆ ಮಲಗುವಳು. ಹೀಗೆ ಕೆಲಕಾಲ ಕ್ರಮಿಸಲು, ಆಕೆಯ ಸಂತಾಪದ ಬರವು ತಗ್ಗಿ ಮನಸ್ಸು ದಣಿದು ಹಣ್ಣಾಯಿತು; ಆದರೂ ಉಪಾಯವು ತೋಚಲಿಲ. ಆ ಕಠೋರಹೃದಯಳು ಒಮ್ಮೆಸಂಭಾಜಿಯ ಮೇಲೆ ಹಲ್ಲು ಕಡೆಯುವಳು, ಒಮ್ಮೆ ಪತಿಯಮೇಲೆ ಸಿಟ್ಟಾಗುವಳು, ಒಮ್ಮೆ ದೌರ್ಬಲ್ಯಕ್ಕಾಗಿ ತನ್ನನ್ನೇ ಹಳಿದುಕೊಳ್ಳುವಳು. ಈ ಸ್ಥಿತಿಯಲ್ಲಿಯೂ ಸ್ವಲ್ಪ ಕಾಲ ಕ್ರಮಿಸಿದ ಬಳಿಕ ಉಪಾಯವು ತೋಚದೆ ಮನಸ್ಸು ವ್ಯಾಕುಲವಾಗಲು, ದುಃಖದಿಂದ ಆಕೆಯ ಕಣ್ಣೊಳಗಿಂದ ಬಳಬಳ ನೀರುಗಳು ಸುರಿಯಹತ್ತಿದವು. ಕೆಲಹೊತ್ತು ಆಕೆಯು ಮನದಣಿಯುವಂತೆ ಅತ್ತಳು. ಹೀಗೆ ಅತ್ತತ್ತು ದುಃಖವೇಗವು ಕಡಮೆಯಾದ ಬಳಿಕ ಎದ್ದುಕುಳಿತು ಕಣ್ಣೀರು ಸುರಿಯುತ್ತಿರುವಾಗ,ಸಹಜವಾಗಿ ಎದುರಿನ ಗೋಡೆಯ ಕಡೆಗೆ ಆಕೆಯು ನೋಡಲು, ಸಿಂಹದೊಡನೆ ಕುಸ್ತಿಯ ಹಿಡಿದಿದ್ದ ಸಂಭಾಜಿಯ ಚಿತ್ರವು ಆಕೆ ಕಣ್ಣಿಗೆ ಬಿದ್ದಿತು. ಕೂಡಲೆ ಕ್ರೋಧದಿಂದ ಆಕೆಯ ಕಣ್ಣುಗಳು ಕೆಂಪಾಗಿ ಕಿಡಿ ಗಳುದುರ ಹತ್ತಿದ್ದರಿಂದ ಕಣ್ಣೀರು ಆಟ್ಟಿಸಿದವು; ಆ ನೇತ್ರಸ್ಥವಾದ ಅಗ್ನಿಯು ಮುಖವನ್ನೆಲ್ಲ ವ್ಯಾಪಿಸಿದಂತೆ ಆಕೆ ಮೋರೆಯು ಕೆಂಪಾಯಿತು. ಕ್ರೋಧಾವೇಶದಲ್ಲಿ ಆಕೆಯು ಅವಡುಗಚ್ಚಿ ಮನಸ್ಸಿನೊಳಗೆ— ಏನು? ವೀರಾಗ್ರಣಿಗಳೆನಿಸುವ ಶಿರ್ಕೆಮನೆತನದವರ ಹೊಟ್ಟೆಯಲ್ಲಿ ಹುಟ್ಟಿದ ನಾನು ಹೀಗೆ ಕಣ್ಣೀರು

ಸುರಿಸಬೇಕೆ? ನನ್ನ ಮಗನಿಗೆ ಪಟ್ಟವಾಗಬೇಕೆಂದು ಇಚ್ಛಿಸುವ ನಾನು ದೀರ್ಘಪ್ರಯತ್ನ ಮಾಡದೆ ಹೀಗೆ ಕಣ್ಣೀರು ಸುರಿಸಿದರೆ ಆಗುವದೇನು? ಇಂದಿಗೆ ಈ ಅಳ ಬುರುಕತನವು ಸಾಕು; ಒಮ್ಮೆ ನಿರ್ಧರಿಸಿದ ಕಾರ್ಯವನ್ನು ಕೊನೆಗಾಣಿಸುವ ಪ್ರಸಂಗದಲ್ಲಿ ಎಂಥ ಕ್ರೂರೋಪಾಯ ಗಳನ್ನಾದರೂ ನಾನು ಮಾಡಿಯೇ ತೀರುವೆನು. ವಿಶ್ವಪ್ರಯತ್ನದಿಂದ ಆ ದುಷ್ಟ ಸಂಭಾಜಿಯ ನಾಶಮಾಡಿ ನನ್ನ ಮಗನ ಸಿಂಹಾಸನಾರೋಹಣದ ಮುಖ್ಯ ಕಂಟಕವನ್ನು ದೂರಮಾಡುವೆನು; ಅದು ಸಾಧಿಸದಿದ್ದರೆ ಪತಿಯ ಸಮಾಚಾರ ತಕ್ಕೊಳ್ಳಲಿಕ್ಕೂ ನಾನು ಹಿಂದೆ ಮುಂದೆ ನೋಡುವ ಹಾಗಿಲ್ಲ. ನನ್ನದೇನು ತಪ್ಪು? ಮಹಾರಾಜರಾದರೂ ನನ್ನ ಮಾತು ಯಾಕೆ ಕೇಳಬಾರದು? ಸಂಭಾಜಿಯು ಸೆರೆಗುಡುಕನು, ಘಟಿಂಗನು, ಕೊಲೆಗಡುಕನು, ಪಿತೃದ್ರೋಹಿಯು, ಜನರ ಅಪ್ರೀತಿಗೆ ಪಾತ್ರನಾದವನು. ಇಂಥವನಿಗೇ ಪಟ್ಟವಾಗಬೇಕೆಂದು ಮಹಾರಾಜರದಾದರೂ ಏನು ಹಟ? ಬಂಗಾರದಂಥ ನನ್ನ ಮಗನಾದ ರಾಜಾರಾಮನಿಗೆ ಪಟ್ಟವಾದರೇನು ಅನ್ಯಾಯ ವಾಗುವದೇ? ರಾಜಾರಾಮನನ್ನು ಯುವರಾಜನಾಗ ಮಾಡಿರೆಂದು ನಾನು ಹೇಳಿ ಹೇಳಿ ಬೇಸತ್ತೆನು; ಆದರೆ ನನ್ನ ಮಾತು ಕೇಳುವವರಾರು? ನಾನೇನು ಸಂಬಂಧಿಕಳಲ್ಲವೆ? ಆ ಕುಲಗೇಡಿ ನಿಂಬಾಳಕರನ ಮಗಳಾದ ಸಯಿಯು ಸತ್ತುಹೋಗಿರಲು, ನಾನೇ ಪಟ್ಟರಾಣಿಯ ಪದಸ್ಥಳಾಗಿರುವೆನಲ್ಲವೆ? ಅಂದಬಳಿಕ ನನ್ನ ಮಾತಿಗೆ ಏನೂ ಮಾನವಿರಬಾರದೇನು? ಆಗಲಿ, ನನ್ನ ಮಗನ ಸಿಂಹಾಸನಾರೋಹಣದ ಪ್ರಸಂಗದಲ್ಲಿ ಏನೇನು ಅನಾಹುತವಾಗುತ್ತದೋ ಆಗಲಿ, ನೋಡಿ ಬಿಡುವೆನು!

ಈ ಮೇರೆಗೆ ಅಂದುಕೊಂಡು ಆ ಕರ್ಕಸಿಯು ದೀರ್ಘವಾದ ಆಲೋಚನೆಗೆ ಒಳಗಾಗಲು, ಆಕೆ ಮನಸ್ಸಿನಲ್ಲಿ ಒಂದೊಂದೇ ದುಷ್ಟಕಲ್ಪನೆಗಳು ಬರತೊಡಗಿದವು. ಆ ಕಲ್ಪನೆಗಳು ಶಕ್ಯವಾಗಿ ತೋರಲು, ಆಕೆಗೆ ಸಮಾಧಾನವಾಗುವದು, ಅಶಕ್ಯವಾಗಿ ತೋರಲು ಅಸಮಾಧಾನವಾಗುವದು. ಹೀಗೆ ಆಕೆಯು ಒಮ್ಮೆ ಸಮಾಧಾನಪಡುತ್ತ ಮತ್ತೊಮ್ಮೆ ಅಸಮಾಧಾನಪಡುತ್ತ, ತನ್ನ ಹಂಚಿಕೆಯು ಕೊನೆಗಾಣಬೇಕಾದರೆ ಏನುಮಾಡಬೇಕೆಂಬದರ ಎಣಿಕೆ ಹಾಕಹತ್ತಿದಳು. ಹೀಗೆ ಎಣಿಕೆಹಾಕುತ್ತ ಕುಳಿತವಳು ಒಮ್ಮಿಂದೊಮ್ಮೆ ಚಟ್ಟನೆ ಎದ್ದುಹೋಗಿ ಬಹು ಗುಪ್ತರೀತಿಯಿಂದ ಕಾಯ್ದಿಟ್ಟಿದ್ದ ಒಂದು ಸಣ್ಣಪೆಟ್ಟಿಯೊಳಗಿನ ಯಾತರದೋ ಒಂದು ಪುಡಿಯನ್ನು ತೆಗೆದು, ಅಲ್ಲಿಯೇ ಸುವರ್ಣದ ತಬಕದಲ್ಲಿಟ್ಟಿದ್ದ ಒಂದು ಪಕ್ವವಾದ ಪೇರಲಹಣ್ಣನ್ನು ತಕ್ಕೊಂಡು ಹಿಚಿಕಿ ಅದರೊಳಗೆ ಆ ಪುಡಿಯನ್ನು ಹಾಕಿದಳು. ಬಳಿಕ ಆಕೆಯು ತಾನು ಪ್ರೀತಿಯಿಂದ ಸಾಕಿದ ಮಂಗನ ಕೈಯಲ್ಲಿ ಅದನ್ನು ಕೊಡಲು, ಅದು ತಿಂದ ದ್ದೊಂದೇ ತಡ, ಹಾಗೆಯೇ ನೆಲಕ್ಕೆ ಬಿದ್ದು ಪ್ರಾಣಬಿಟ್ಟಿತು. ಇದನ್ನು ನೋಡಿ ಆ ದುಷ್ಟಸ್ತ್ರೀಯು ಅಟ್ಟಹಾಸದಿಂದ ನಕ್ಕು ತಾನು ಏನು ನುಡಿಯುತ್ತೀನೆಂಬದರ ಎಚ್ಚರವಿಲ್ಲದೆ— ''ಶಂಭ್ಯಾ, ನೋಡು ಹ್ಯಾಗಿದೆ? ನಿನ್ನನ್ನು ನಾನು ಹೀಗೆ ನೆಲಕ್ಕುರಳಿಸದಿದ್ದರೆ ಶಿರ್ಕೆ ಮನೆತನದಲ್ಲಿ ಹುಟ್ಟಿ ಬೇಕೆ?'' ಎಂದು ನುಡಿಯುತ್ತಿರಲು, ''ಅಮ್ಮಾ ಇದೇನು ಅಕ್ಕಸದಮಾತು? ಅಣ್ಣನ ಹೆಸರಿನಿಂದ ಇಷ್ಟು ಆಕ್ರೋಶವೇಕೆ?'' ಎಂಬ ಶಬ್ದಗಳು ಆಕೆಯ ಕಿವಿಗೆ ಬಿದ್ದವು. ಕೂಡಲೇ ಆಕೆಯು

ಮೆಟ್ಟಿಬಿದ್ದು ಹಿಂದಿರುಗಿ ನೋಡುತ್ತಾಳೆ, ತನ್ನ ಪ್ರಿಯಪುತ್ರ ರಾಜಾರಾಮನು! ಹೀಗೆ ಅಕಸ್ಮಾತ್ತಾಗಿ ಬಂದ ಮಗನನ್ನು ಸೋಯರಾಬಾಯಿಯು ಬೆರಗಾಗಿ ನೋಡುತ್ತಿರಲು, ಅತ್ತ ಅರ್ಧಹಣ್ಣುಕೈಯಲ್ಲಿ ಹಿಡಿದುಕೊಂಡೇ ನೆಲಕ್ಕುರುಳಿದ್ದ ಮಂಗವನ್ನು ರಾಜಾರಾಮನು ಬೆರಗಾಗಿ ನೋಡುತ್ತಿದ್ದನು! ಆಗಿನ ಪ್ರಸಂಗವು ವಿಲಕ್ಷಣವಾದದ್ದೇ ಸರಿ. ತನ್ನ ಮಗನು ಹೀಗೆ ಹೇಳದೇ ಕೇಳದೇ ಅಕಸ್ಮಾತ್ ಯಾಕೆ ಬಂದನೆಂಬದರ ಗೂಢವು ಸೋಯರಾಬಾಯಿಗೆ ತಿಳಿಯಲಿಲ್ಲ, ಅತ್ತ ಈ ಮಂಗವು ಅಕಸ್ಮಾತ್ತಾಗಿ ಯಾಕೆ ಸತ್ತಿತೆಂಬದರ ಗೂಢವು ರಾಜಾರಾಮನಿಗೆ ತಿಳಿಯಲಿಲ್ಲ. ಸೋಯರಾಬಾಯಿಯು ಕುಳಿತಿದ್ದಳು, ರಾಜಾರಾಮನು ನಿಂತಿದ್ದನು, ಮಂಗವು ಸತ್ತುಬಿದ್ದಿತು. ಕೆಲ ಹೊತ್ತಿನಮೇಲೆ ರಾಜಾರಾಮನು ಮಂಗನಕಡೆಯ ತನ್ನ ದೃಷ್ಟಿಗಳನ್ನು ತಾಯಿಯಕಡೆಗೆ ಹೊರಳಿಸಿದನು. ಆಗಿನ ತಾಯಿಯ ಮುಖಲಕ್ಷಣವನ್ನು ನೋಡಿ ಆ ಶಿವಪುತ್ರನಿಗೆ ಸೋಜಿಗವಾಯಿತು. ಸೋಯರಾಬಾಯಿಯ ಕಣ್ಣು ಕೆಂಪು ಇನ್ನೂ ಪೂರಾ ಹರದಿದ್ದಿಲ್ಲ, ಆಕೆಯ ಮುಖದಲ್ಲಿ ಶೋಕ-ಸಂತಾಪ-ಆನಂದದ ಲಕ್ಷಣಗಳೆಲ್ಲ ತೋರುತ್ತಿದ್ದವು. ಇದನ್ನು ನೋಡಿ ಆ ಸಜ್ಜನನು ದಿಗಿಲುಬಿದ್ದು ತಾಯಿಯ ಚರಣಕ್ಕೆರಗಿ— ''ಅವ್ವಾ, ಇದೇನು ಸೋಜಿಗ! ಸಂತಾಪಗೊಂಡ ನೀನೇಕೆ? ಈ ಸತ್ತಮಂಗವೇಕೆ? ಹೊರಗೆ ದಾಸಿಯರಿಲ್ಲ ಒಳಗೆ ದಾಸಿಯರಿಲ್ಲ. ನೀನೊಬ್ಬಳೇ ಈ ಸತ್ತ ಮಂಗನ ಬಳಿಯಲ್ಲಿ ಕುಳಿತು ನಗುತ್ತ ಏನೋ ಕಠೋರ ಶಬ್ದಗಳನ್ನುಚ್ಚರಿಸಿದಂತೆ ತೋರಿತಲ್ಲ! ಇದರ ಗೂಢವೇನು? ರಾಜಾರಾಮನು ಬಂದು ಇಷ್ಟು ಹೊತ್ತಾದರೂ ನೀನು ಆತನನ್ನು ಮಾತಾಡಿಸದೆ ಆಶ್ಚರ್ಯದಿಂದ ಆತನ ಮೋರೆನೋಡುತ್ತ ಕುಳಿತುಕೊಂಡಿರುವೆಯಲ್ಲ! ನಿನಗೆ ಶೋಕ-ಸಂತಾಪಗಳೇಕೆ? ಮಹಾರಾಷ್ಟ್ರ ರಾಜ್ಯಸ್ಥಾಪಕನ ಹೆಂಡತಿಗೆ, ರಾಜಾರಾಮನ ಜನ್ಮದಾತ್ರಿಗೆ ಈ ಸ್ಥಿತಿಯು ಸಲ್ಲಬಹುದೇ?

ಮಗನ ಈ ಮಾತುಗಳನ್ನು ಕೇಳಿ ಸೋಯರಾಬಾಯಿಯು ನಾಚಿದಳು. ಆಕೆಯು ಮಗನ ಸೌಜನ್ಯಕ್ಕೆ ಸೇರದಿದ್ದರೂ ಆತನ ಸೌಜನ್ಯದ ಪರಿಣಾಮವು ಪ್ರಸಂಗವಶಾತ್ ಆಕೆಯ ಮನಸ್ಸಿನ ಮೇಲೆ ಆಗದೇ ಹೋಗುತ್ತಿದ್ದಿಲ್ಲ. ರಾಜಾರಾಮನು ಅತ್ಯಂತ ಸಾತ್ವಿಕನು. ತನ್ನ ತಾಯಿಯ ಅಸೂಯಾ, ಸ್ವಾರ್ಥಪರಾಯಣತೆಯೂ ಅವನಿಗೆ ಸೇರುತ್ತಿದ್ದಿಲ್ಲ, ಆತನು ಅಣ್ಣನನ್ನು ತಂದೆ ಯೆಂದ ತಿಳಿಯುತ್ತಿದ್ದನು. ಇಂಥವನು ಸೋಯರಾಬಾಯಿಯ ಒಳಸಂಚಿಗೆ ಒಳಗಾಗುವ ಬಗೆಹೇಗೆ? ಮಗನು ತನ್ನ ಘಾತಕತನಕ್ಕೆ ಒಪ್ಪನೆಂಬದು ಆಕೆಗೆ ಗೊತ್ತಿತ್ತು; ಆದರೆ ಕೆಲಮಟ್ಟಿ ಗಾದರೂ ಮಗನ ಮನಸ್ಸನ್ನು ತನ್ನ ತಂತ್ರಕ್ಕೆ ಅನುಕೂಲಮಾಡಿಕೊಳ್ಳದಿದ್ದರೆ ನಡೆಯುವಂತೆ ಇದ್ದಿಲ್ಲ ''ಹಾಳು ಗೊಂದಲದ ಮದುವೆಯನ್ನೇ ಒಲ್ಲೆನೆನ್ನುವವನಿಗೆ ಹೆಣ್ಣುನೋಡಿ ಪ್ರಯೋಜನ ವೇನೆನ್ನು''ವಂತೆ, ಅಣ್ಣನಘಾತದಿಂದ ಸಂಪಾದಿತವಾದ ಸಿಂಹಾಸನವನ್ನೇ ಒಲ್ಲೆನೆನ್ನುವವನಿಗೆ ಸಿಂಹಾಸನವ ಸಂಪಾದಿಸುವದರಿಂದಾದರೂ ಏನು ಪ್ರಯೋಜನವಾಗಬೇಕು? ಆದ್ದರಿಂದ ಒಮ್ಮೆ ಮಗನ ಮುಂದೆ ತನ್ನ ವಿಚಾರಗಳನ್ನು ಸ್ಪಷ್ಟವಾಗಿ ತಿಳಿಸಿ ಅವನ ಮನಸ್ಸನ್ನು ತಿರಿಗುಸಿ ಕೊಳ್ಳುವದು ಸೋಯರಾಬಾಯಿಗೆ ಅವಶ್ಯವಾಗಿತ್ತು; ಆಕೆಯು ಆ ಕೆಲಸವನ್ನು ಇಂದೇ ಮಾಡ ಬೇಕೆಂದು ನಿಶ್ಚಯಿಸಿದಳು. ತಾನು ವಿಷಹಾಕಿ ಮಂಗನನ್ನು ಕೊಂದದ್ದನ್ನೂ, ಇದರಂತೆಯೇ

ಸಂಭಾಜಿಯನ್ನು ಇದೇ ವಿಷದಿಂದ ಕೊಲ್ಲಬೇಕೆಂದು ನಿರ್ಧರಿಸಿ ನುಡಿದ ದುಷ್ಟಶಬ್ದಗಳನ್ನೂ ಮುಚ್ಚಿಕೊಳ್ಳಲಿಕ್ಕೆ ಆಕೆಗೆ ಬರುವಹಾಗಿದ್ದಿಲ್ಲ; ಆದ್ದರಿಂದ ಆಕೆಯು ತನ್ನ ಮಂಚದಮೇಲೆ ಕುಳಿತ ರಾಜಾರಾಮನನ್ನು ಹತ್ತಿರ ಕುಳ್ಳರಿಸಿಕೊಂಡು ಅವನ ಮೈಮೇಲೆ ಪ್ರೇಮದಿಂದ ಕೈಯಾಡಿಸಿ ಗದ್ಗದಿಡಿದು— ಬಾಳಾ, ನನ್ನ ಹೊಟ್ಟೆಯೊಳಗಿನ ಮಾತನ್ನು ನಿನ್ನ ಮುಂದೆ ಇಂದು ಸ್ಪಷ್ಟವಾಗಿ ಹೇಳಿಬಿಡುತ್ತೇನೆ. ನಿನ್ನ ತಾಯಿಯಾದ ನನ್ನ ಮಾತನ್ನು ಮೀರಬೇಡ. ಸಜ್ಜನನಾದ ನಿನ್ನ ಕಲ್ಯಾಣಕ್ಕಾಗಿ ನಾನು ಹಗಲಿರುಳು ಚಿಂತಿಸುತ್ತಿರುವೆನು. ಈಗ ನಾನು ಬಗೆಬಗೆಯ ವಿಕಾರಗಳ ಆಘಾತದಿಂದ ಹಣ್ಣಾಗುತ್ತಿರುವದು ನಿನ್ನ ಕಲ್ಯಾಣದ ಸಲುವಾಗಿಯೇ; ನೀನು ಕೇಳಿದ ಕಠೋರ ಶಬ್ದಗಳನ್ನು ಉಚ್ಚರಿಸಿದ್ದು ನಿನ್ನ ಕಲ್ಯಾಣದ ಸಲುವಾಗಿಯೇ. ಹೀಗೆ ನಿನ್ನ ಕಲ್ಯಾಣವನ್ನು ಸಾಧಿಸುವಾಗ ನಾನು ನ್ಯಾಯಾನ್ಯಾಯ ಗಳನ್ನೂ, ಸೌಮ್ಯತನ–ಕ್ರೂರತನಗಳನ್ನೂ, ಪಾಪ–ಪುಣ್ಯಗಳನ್ನೂ ಸರ್ವಥಾ ನೋಡಲಿಕ್ಕೆಲ್ಲೆಂದು ನಿಶ್ಚಸಿರುತ್ತೇನೆ. ಬಹಳ ಹೇಳುವದೇನು? ನಿನ್ನ ಕಲ್ಯಾಣವನ್ನು ಸಾಧಿಸುವಾಗ ನನಗೆ ಮರಣ ಒದಗಿದರೂ, ನಾನು ಘೋರನರಕಕ್ಕೆಳಿದರೂ ಲೆಕ್ಕಿಸೆನು; ಆದ್ದರಿಂದ ಬಾಳಾ, ರಾಜಾರಾಮಾ, ಈ ಪ್ರಸಂಗದಲ್ಲಿ ನಿನ್ನ ಹಡೆದಾಕೆಯ ಮಾತನ್ನು ನೀನು ಸರ್ವಥಾ ಮೀರಬೇಡ. ನೀನು ಮಹಾ ಸಜ್ಜನನು, ಅನ್ಯಾಯವು ನಿನಗೆ ಸಹವಾಗುವದಿಲ್ಲ, ನಾನು ನುಡಿಯುವ ಈ ಮಾತುಗಳ ಸೇರಿಕೆಯಾದರೂ ನಿನಗೆ ಇರುವದಿಲ್ಲೆಂಬವಾತೂ ನನಗೆ ಗೊತ್ತಿದೆ; ಆದರೂ ನನ್ನದಿದೊಂದು ಮಾತನ್ನು ನೀನು ನಡಿಸಲೇಬೇಕು; ಆದರೆ ಬಾಳಾ, ನಡಿಸುವೆಯಷ್ಟೇ?

ಈ ಮೇರೆಗೆ ನುಡಿದ ತಾಯಿಯ ಮಾತಿನ ಅರ್ಥವು ಸಂಭಾವಿತನಾದ ರಾಜಾರಾಮನಿಗೆ ಸ್ಪಷ್ಟವಾಗಿ ತಿಳಿಯಲಿಲ್ಲ, ಆತನು ಸ್ವಲ್ಪಹೊತ್ತು ಆಲೋಚಿಸಿ ತನ್ನ ಹಡೆದಾಕೆಯನ್ನು ಕುರಿತು— ಅವ್ವಾ, ನಿನ್ನ ಮಾತನ್ನು ನಾನು ಯಾಕೆ ಮೀರಲಿ ಆದರೆ ಹಡೆದ ತಾಯಿಯಾದ ನಿಮ್ಮನ್ನು ಘೋರನರಕದಲ್ಲಿ ಹಾಕುವಂಥ ದುಷ್ಕೃತ್ಯದಿಂದ, ಅಥವಾ ಪ್ರಸಂಗವಶಾತ್ ನಿಮ್ಮ ನಾಶವೂ ಆಗಬಹುದಾದ ಘೋರ ಪ್ರಸಂಗದಿಂದ ನನ್ನ ಕಲ್ಯಾಣವು ಹ್ಯಾಗಾಗುವದೆಂಬದು ನನಗೆ ತಿಳಿಯದಾಗಿದೆ. ಚಿಕ್ಕ–ಮಂಗಗಳನ್ನು ಕೊಲ್ಲುವದು ಮಹಾಪಾಪವೆಂದು ಕೇಳಿದ್ದೇನೆ; ಅಂದ ಬಳಿಕ ಮಂಗನನ್ನು ಕೊಂದ ಮಹಾಪಾತಕದಿಂದ ನನ್ನ ಕಲ್ಯಾಣವು ಹ್ಯಾಗಾಗುವದು? ಅವ್ವಾ, ಅಣ್ಣನನ್ನುದ್ದೇಶಿಸಿ ನೀವು ಅಭದ್ರಶಬ್ದಗಳನ್ನುಚ್ಚರಿಸಿದ್ದನ್ನು ಕೇಳಿದೆನು; ಆದರಂತೆ ಭ್ರಾತೃಹತ್ಯವು ಒದಗಿದ ಪಕ್ಷದಲ್ಲಿ ನನ್ನ ಕಲ್ಯಾಣವಾಗುವದೇ? ತಾಯಿ, ನಿಮ್ಮ ಚರಣಕ್ಕೆ ರಗುವೆನು. ಏನೂ ತಿಳಿಯದ ಮೂಢನಾಗಿರುವ ನನಗೆ ಇದ್ದದ್ದನ್ನು ಸ್ಪಷ್ಟವಾಗಿ ಹೇಳಬೇಕು ಅನ್ನಲು, ಆ ತಾಯಿ–ಮಕ್ಕಳ ಸಂಭಾಷಣವು ಕೆಳಗೆ ಬರೆದಂತೆ ಆಯಿತು.

ಸೋಯರಾಬಾಯಿ— ಅಪ್ಪಾ, ಇದ್ದದ್ದನ್ನು ಸ್ಪಷ್ಟವಾಗಿ ಹೇಳುವೆನು; ಆದರೆ ನನ್ನ ಮಾತನ್ನು ಕೇಳುವೆನೆಂದು ಮೊದಲು ವಚನಕೊಡು.

ರಾಜಾರಾಮ–ಅವ್ವಾ, ಮಗನನ್ನು ಹೀಗೆ ವಚನಬದ್ಧಮಾಡಿಕೊಳ್ಳುವದು ತಾಯಿಯ ವಾತ್ಸಲ್ಯಕ್ಕೆ ಒಪ್ಪುವದೇ ನೀನೇ ಹೇಳು! ಕೇವಲ ಆಜ್ಞೆಯಿಂದ ಬೆಳಿಸಿರುವ ನನ್ನಮೇಲೆ ಇಷ್ಟು

ಭಾರವನ್ನು ಒಮ್ಮೆಲೆ ಹಾಕುವದು ಯೋಗ್ಯವೆ? ವಚನಕೊಡಲಿಕ್ಕೆ ನನಗೆ ಸ್ವಾತಂತ್ರವೆಲ್ಲಿದೆ? ನಾನು ಗುರುಹಿರಿಯರಿಗೆ ಅಂಕಿತನಾಗಿ ನಡೆಯತಕ್ಕವನಲ್ಲವೆ? ನಮ್ಮಿಬ್ಬರಿಗೂ ಹಿರಿಯರು ಆಬಾಸಾಹೇಬರಿದ್ದಾರೆ; ಎಲ್ಲರಿಗೂ ಹಿರಿಯರು ಶ್ರೀಸಮರ್ಥರಾಮದಾಸ ಸ್ವಾಮಿಗಳವರು ಇದ್ದಾರೆ; ಆ ನಿವೃತ್ತಿಮಾರ್ಗಪರರಾದ ಶ್ರೀಸಮರ್ಥರನ್ನೂ ಪ್ರವೃತ್ತಿಮಾರ್ಗಕ್ಕೆ ಎಳೆದುಕೊಂಡ ಮಹಾರಾಷ್ಟ್ರ ರಾಜ್ಯದ ಪ್ರಜಾಮಂಡಲವಿದೆ; ಆ ಪ್ರಜಾಮಂಡಲವನ್ನೂ ಶಾಸನಗೊಳಿಸುವ ಧರ್ಮವಿದೆ. ಅಂದಬಳಿಕ ಈ ಎಲ್ಲ ಅಧಿದೈವತಗಳ ಹಂಗು ಹಿಡಿಯದೆ ಈಗ ನಾನು ಹ್ಯಾಗೆ ವಚನಕೊಡಲಿ? ತಾಯಿ, ಕ್ಷಮಿಸಬೇಕು, ನಿನ್ನ ವಾತ್ಸಲ್ಯದ ಕೂಸನ್ನು ವಚನಬದ್ಧವಾಡಿ ಹಿಂಸೆಗೆ ಗುರಿಮಾಡಬಾರದು. ನನ್ನ ಮಾತೃದೈವತವು ನೀನು ಧರ್ಮಕ್ಕೆ ಬಾಧೆಬಾರದಂತೆ ಅಪ್ಪಣೆ ಮಾಡಿದರೆ, ಪ್ರಾಣಹೋದರೂ ಅದನ್ನು ನಡೆಸುವೆನು. ಇದು ಪುತ್ರಧರ್ಮವೇ ಇರುವದು, ಅಂದಬಳಿಕ ಈ ರಾಜಾರಾಮನು ತಾಯಿಗೆ ಬೇರೆ ವಚನವೇಕೆ ಕೊಡಬೇಕು?

ಮಗನ ಈ ಮಾತುಗಳನ್ನು ಕೇಳಿ ಸೋಯರಾಬಾಯಿಯು ಚಕಿತಳಾದಳು. ಮಗನು ಮಾತಿನಿಂದ ಗಟ್ಟಿಯಾಗಿ ಬಾಯಿಕಟ್ಟಿಬಿಡಲು, ಮುಂದೆ ಏನು ಮಾತಾಡಬೇಕೆಂಬದು ಆಕೆಗೆ ತಿಳಿಯದಾಯಿತು. ಹೀಗೆ ಮುಂದುಗಾಣದೆ ಮುಗ್ಧಭಾವವಹಿಸಿದ ಆಕೆಯು, ಅಧೋವದನನಾಗಿ ವಿನಯದಿಂದ ಕುಳಿತುಕೊಂಡಿದ್ದ ಮಗನನ್ನು ಎವೆಯಿಕ್ಕದೆ ನೋಡುತ್ತಸುಮ್ಮನೆ ಕೆಲವು ಹೊತ್ತು ಕುಳಿತುಕೊಂಡಳು. ತಾಯಿಯು ಹೀಗೆ ಕುಂಠಿತಳಾಗಿ ಸುಮ್ಮನೆ ತನ್ನನ್ನು ನೋಡುತ್ತ ಕುಳಿತದ್ದನ್ನರಿತು ವಿನಯಶಾಲಿಯಾದ ರಾಜಾರಾಮನೂ ತಗ್ಗಿಸಿದ ಮುಖವನ್ನು ತಗ್ಗಿಸಿಯೇ ಬಿಟ್ಟನು. ಇತ್ತ ಮಗನು ಮುಖವನ್ನು ಎತ್ತದಾದನು; ಅತ್ತಮಾತೆಯು ಮಾತಾಡದಾದಳು; ಅತ್ತಮಂಗವು ದೀರ್ಘನಿದ್ರೆಹತ್ತಿ ಮಲಗಿಕೊಂಡುಬಿಟ್ಟಿತು; ಅಪ್ಪಣೆಯಹೊರತು ಒಳಗೆ ದಾಸಿಯರು ಬರುವಹಾಗಿದ್ದಿಲ್ಲ; ಅಂದ ಬಳಿಕ ಮಾತಾಡುವ ಪ್ರಸಂಗವು ಹ್ಯಾಗೆ ಬರಬೇಕು? ಅಷ್ಟರಲ್ಲಿ ಸೋಯರಾಬಾಯಿಯ ಲಕ್ಷವು ಈ ಮೊದಲೆಯೊಮ್ಮೆ ಹೋದಂತೆ ಅಕಸ್ಮಾತ್ತಾಗಿ ಎದುರಿಗಿನ ಗೋಡೆಯಕಡೆಗೆ ಹೋಗಲು, ಅಲ್ಲಿ ಪುನಃ ಸಂಭಾಜಿಯ ಚಿತ್ರವು ಆಕೆಯ ಕಣ್ಣಿಗೆಬಿದ್ದಿತು. ಕೂಡಲೆ ಆ ತಾಮಸಿಯಾದ ಸ್ತ್ರೀಯ ಎಚ್ಚರದಪ್ಪಿ ಆಕೆಯು ಮಗನನ್ನು ಕುರಿತು ಕರ್ಕಶಸ್ವರದಿಂದ ''ರಾಜಾರಾಮಾ, ನೀನು ಕ್ಷತ್ರಿಯ ಕುಲೋತ್ಪನ್ನನೇ ಇರುವಿಯಷ್ಟೆ? ಎಂದು ಕೇಳಲು, ರಾಜಾರಾಮನು ಕೂಡಲೆ ಮುಖವೆತ್ತಿ ತಾಯಿಯನ್ನು ನೋಡಹತ್ತಿದನು; ಆಗ ಆ ಸಾತ್ವಿಕನ ಕಣ್ಣುಗಳು ಕೆಂಪಾಗಿದ್ದು ಕ್ರೋಧದಿಂದ ಅವನ ಕೆಳದುಟಿಯು ಕಂಪಿಸುತ್ತಿರುವಂತೆ ತೋರಿತು. ಆಗ ಆತನು ತಾಯಿಯನ್ನು ಕುರಿತು ಸಂತಾಪದಿಂದ—ವೀರಮಾತೆ, ಕ್ಷಾತ್ರಧರ್ಮಸಮ್ಮತವಾದ ಯಾವ ಕಾರ್ಯಮಾಡಿದರೆ ನಿನ್ನ ಪ್ರಶ್ನಕ್ಕೆ ಉತ್ತರವು ದೊರೆಯುವದು ಬೇಗನೆ ಹೇಳು! ಇಂಥ ಅಪಮಾನಕಾರಕವಾದ ಪ್ರಶ್ನಮಾಡುವದು ವೀರಪತ್ನಿಯೆನಿಸುವ ನಿನಗೆ ಒಪ್ಪುವದಿಲ್ಲ. ನಿನ್ನ ಜನ್ಮಸ್ಥಾನವಾದ ಶಿರ್ಕೆಮನೆತನದ ಪಾವಿತ್ರ್ಯವನ್ನು ಸ್ಮರಿಸಿ, ಶಿಷ್ಟಸಮ್ಮತವಲ್ಲದ ಇಂಥ ಪ್ರಶ್ನವನ್ನು ಪುನಃ ಮಾಡಬೇಡ, ಮಾಡಿದರೆ ಈ ಶಿವಪುತ್ರನು ಸಹಿಸಲಾರನು; ಅಥವಾ ಉಭಯಕುಲಕ್ಕೂ ಕಲಂಕವನ್ನುಂಟುಮಾಡುವಂಥ ವಿಚಾರವನ್ನು ಮನಸ್ಸಿನಲ್ಲಿತರುವ ತಾಯಿಯ ಮುಖಾವ

ಲೋಕನವನ್ನು ಈ ರಾಜಾರಾಮನು ಪುನಃ ಮಾಡಲಿಕ್ಕಿಲ್ಲ. ಈ ಮೊದಲೇ ನನಗೆ ತಿಳಿಯದೆಯಿದ್ದ ಮಾತು ಈಗ ನನಗೆ ತಿಳಿಯಿತು. ನೀನು ಅಣ್ಣನನ್ನು ವಿಷಪ್ರಯೋಗದಿಂದ ಘಾತಿಸಿ ನನಗೆ ಶಿವಪ್ರಭುವಿನ ಧರ್ಮಸಿಂಹಾಸನವನ್ನು ದೊರಿಕಿಸಿಕೊಡುವ ವಿಚಾರಮಾಡಿದಂತೆ ತೋರುತ್ತದೆ. ಅವ್ವಾ, ವಿಷದ ಜಾಜ್ವಲ್ಯತೆಯನ್ನು ಪರೀಕ್ಷಿಸುವದಕ್ಕಾಗಿ ಪ್ರೀತಿಯ ಮಂಗವನ್ನು ನಿಷ್ಕರುಣೆಯಿಂದ ಕೊಂದೆಯಾ? ಇನ್ನು ಮೇಲೆ ಈ ವಿಷಯವನ್ನು ಅಣ್ಣನಮೇಲೆ ಪ್ರಯೋಗಿಸಿ ನೀನು ಆತನನ್ನು ನಾಶಗೊಳಿಸುವವಳು! ಶಾಬಾಸ! ಭೋಸಲೆಮನೆತನವನ್ನು ಚನ್ನಾಗಿ ಬೂಷಿಸುವೆ! ಏನೂ ಚಿಂತೆಯಿಲ್ಲ, ಅಣ್ಣನ ಸಂರಕ್ಷಣಕ್ಕಾಗಿ ನಾನು ಮಾಡುವ ಉಪಾಯವನ್ನು ಮಾಡುವೆನು, ಒಳ್ಳೆಯದು ಹೋಗಿಬರುತ್ತೇನೆ, ಎಂದು ನುಡಿದು ರಾಜಾರಾಮನು ತಾಯಿಯನ್ನು ನಮಸ್ಕರಿಸಿ ನಿಜವಾಗಿಯೇ ಹೊರಟು ಹೋಗಿಬಿಟ್ಟನು.

ಹೀಗೆ ಮಗನು ತನ್ನನ್ನು ನಿಷೇಧಿಸಿ ಹೊರಟು ಹೋಗಿಬಿಟ್ಟದ್ದರಿಂದ ಸೋಯರಾಬಾಯಿಗೆ ಬಹಳ ವ್ಯಸನವಾಯಿತು. ಆಕೆಯು ಮಗನಿಗೆ ಏನೂ ಹೇಳಲಾರದೆ ಸುಮ್ಮನೆ ಕುಳಿತುಕೊಂಡು ಆಲೋಚಿಸಹತ್ತಿದಳು. ಸಂಭಾಜಿಗೆ ವಿಷಪ್ರಯೋಗ ಮಾಡಬೇಕೆಂದು ಮಾಡಿದ ತನ್ನ ಆಲೋಚನೆಯು ರಾಜಾರಾಮನಿಗೆ ತಿಳಿದದ್ದು ಯೋಗ್ಯವಾಗಲಿಲ್ಲೆಂದು ಆಕೆಯು ಅಸಮಾಧಾನ ಪಟ್ಟಳು; ಆದರೆ ಎದೆಗುಂದಲಿಲ್ಲ. ಮಗನು ಕೇವಲ ಸಭ್ಯಸ್ವಭಾವದವನೂ, ಅಳ್ಳೆದೆಯವನೂ ಆದದ್ದರಿಂದ ಇಂಥ ಸಾಹಸದ ಕಾರ್ಯಕ್ಕೆ ಮನಸ್ಸುಮಾಡನೆಂತಲೂ,ನಾನು ಯೋಚಿಸುವಂತೆ ಸಂಭಾಜಿಯ ನಾಶ ಮಾಡಿಬಿಟ್ಟರೆ, ಪಟ್ಟಕ್ಕೆ ಅಧಿಕಾರಿಗಳು ಬೇರೆ ಯಾರೂ ಇಲ್ಲದ್ದರಿಂದ ರಾಜಾರಾಮನು ಸ್ವಾಭಾವಿಕವಾಗಿಯೇ ಅಧಿಕಾರಿಯಾಗುವನೆಂತಲೂ ಅದರಿಂದ ತನಗೆ ರಾಜಮಾತೆಯೆಂಬ ಪದವಿಯೂ, ದೊಡ್ಡ ಅಧಿಕಾರ–ಮಾನಗಳೂ ಪ್ರಾಪ್ತವಾಗುವವೆಂತಲೂ ಭಾವಿಸಿ ತನ್ನ ಕಾರ್ಯಸಿದ್ಧಿಗಾಗಿ ಆಕೆಯು ಮತ್ತೆ ಆಲೋಚನೆಗಳನ್ನು ಹಾಕಹತ್ತಿದಳು. ಆಕೆಯ ಮನಸ್ಸಿನಲ್ಲಿ ಏನೋ ಒಂದು ವಿಚಾರವು ಹುಟ್ಟಲು, ಕೂಡಲೆ ಆಕೆಯು ದಾಸಿಯನ್ನು ಕೂಗಿ, ಆಕೆಯು ಬಂದಕೂಡಲೆ—ಜೀವೂ, ಹೋಗು, ಈಗಲೇ ರಾಜವೈದ್ಯರನ್ನು ಕರಕೊಂಡು ಬಾ, ಎಂದು ಹೇಳಿದಳು.

ರಾಜ ವೈದ್ಯನ ಹಾದಿ ನೋಡುತ್ತ ಏನೇನೋ ಎಣಿಕೆ ಹಾಕುತ್ತ ಸೋಯರಾಬಾಯಿಯು ಕುಳಿತುಕೊಂಡಳು. ಆಕೆಯ ಮನಸ್ಸು ಬಹಳ ಚಂಚಲವಾಗಿತ್ತು. ಇನ್ನೂ ರಾಜವೈದ್ಯರು ಬರಲಿಲ್ಲವಲ್ಲ, ಎಂದು ಆಕೆಯು ಮತ್ತೊಬ್ಬ ದಾಸಿಯನ್ನು ವೈದ್ಯನ ಕಡೆಗೆ ಕಳಿಸಿದನು. ಸ್ತ್ರೀ ಸ್ವಭಾವವು ಮೊದಲೇ ಚಂಚಲ, ಅದರಲ್ಲಿ ರಾಜ್ಯಕ್ರಾಂತಿಯನ್ನು ಉಂಟುಮಾಡುವ ಪ್ರಸಂಗ, ಅಂದಬಳಿಕ ಕೇಳುವದೇನು? ಯಾವ ಮಾತಿನಲ್ಲಿಯೂ ಆಕೆಗೆ ಸಮಾಧಾನವು ಉಳಿಯದ ಆಕೆಯು ಪ್ರತಿ ಒಂದಕ್ಕೂ ಆತುರಪಡತೊಡಗಿದಳು. ಎರಡನೆಯ ದಾಸಿಯು ಹೋಗಿ ಸ್ವಲ್ಪ ಹೊತ್ತಾಗಲು ಮೂರನೆಯವಳನ್ನು ಕಳಿಸಿದಳು. ಅಷ್ಟರಲ್ಲಿ ರಾಜವೈದ್ಯನು ಅವಸರದಿಂದ ಅಲ್ಲಿಗೆ ಬಂದನು. ಬಳಿಕ ನಮಸ್ಕಾರ–ಚಮತ್ಕಾರಗಳೂ, ಯೋಗಕ್ಷೇಮದ ವಿಚಾರಗಳೂ ಆದಬಳಿಕ

ವೈದ್ಯನು ಯೋಗ್ಯಸ್ಥಳದಲ್ಲಿ ಕುಳಿತುಕೊಂಡನು. ಬಳಿಕ ಆತನು ವಿನಯದಿಂದ ತನ್ನನ್ನು ಕರೆಸಿದ ಕಾರಣವನ್ನು ಕೇಳಲು, ಸೋಯರಾಬಾಯಿಯು ಸತ್ತುಬಿದ್ದ ಮಂಗನ ಕಡೆಗೆ ಕೈಮಾಡಿ—ವೈದ್ಯ ರಾಜರೇ, ಈ ನಮ್ಮ ಪ್ರೀತಿಯ ಮಂಗವು ಅಕಸ್ಮಾತ್ತಾಗಿ ಸತ್ತಿತು; ಅದರ ಕಾರಣವೇನು ಪರೀಕ್ಷಿಸಬೇಕು, ಇದಕ್ಕೆ ಬೇನೆಯಿಲ್ಲ ಬೇಸರಿಕೆಯಿಲ್ಲ, ನೆಟ್ಟಗಿದ್ದದ್ದು ಒಮ್ಮೆಲೇ ಸಾಯಬೇಕಾದರೆ ಏನು ಕಾರಣ ವಿರುವದೋ ನೋಡಿರಿ, ಎಂದು ಹೇಳಲು, ವೈದ್ಯನು ಮಂಗನ ಬಳಿಗೆ ಹೋಗಿ ಅದನ್ನು ನೋಡಿ,ಇದು ವಿಷಪ್ರಯೋಗದಿಂದ ಸತ್ತಿದೆ. ಇಲ್ಲಿ ಈ ಪ್ರಾಣಿಗೆ ವಿಷಪ್ರಯೋಗವಾಗವ ಸಂಭವವೆಲ್ಲಿ? ವಿಷವು ಸಾಮಾನ್ಯವಾದದ್ದಲ್ಲ, ಅತ್ಯಂತ ಜಾಜ್ವಲ್ಯವಾದದ್ದು. ಇಂಥ ವಿಷವು ಮಂದಿಗೆ ದೊರೆತದ್ದು ಹ್ಯಾಗೆ? ಅದರ ಪ್ರಯೋಗವು ಈ ಮಂಗನಂಥ ಸಾಮಾನ್ಯ ಪ್ರಾಣಿಗೆ ಆದದ್ದು ಹ್ಯಾಗೆ? ಎಂದ ಆಶ್ಚರ್ಯಪಡುತ್ತಿರಲು, ಸೋಯರಾಬಾಯಿಯು–

ಸೋಯರಾಬಾಯಿ—ವೈದ್ಯರಾಜ, ಜಾಜ್ವಲ್ಯ ವಿಷವೆಂದರೇನು? ವಿಷದಲ್ಲಿಯೂ ಪ್ರಕಾರಗಳಿರುವವೋ? ಈ ಬಡಪ್ರಾಣಿಗೆ ಅಂಥ ತೀಕ್ಷ್ಣ ವಿಷವನ್ನು ಯಾರು ಹಾಕಿರುವ ರೆಂಬದನ್ನು ವಿಚಾರಮಾಡಲೇಬೇಕು; ಆದರೆ ವಿಷದಲ್ಲಿ ಯಾವ ಯಾವ ಪ್ರಕಾರಗಳಿರುವವು ಹೇಳಿರಿ ನೋಡೋಣ?

ವೈದ್ಯ–ವಿಷದಲ್ಲಿ ಹಲವು ಪ್ರಕಾರಗಳಿರುವವು. ಈ ಜಗತ್ತು ವಿಷಮಯವಾಗಿರತ್ತ ದೆಂತಲೂ ಹೇಳಬಹುದು. ಯಾವದೊಂದು ಸ್ಥಿತಿಯು ಅತಿರೇಕವೆಂದರೆ ವಿಷವು. ಊಟದ ಅತಿರೇಕವಾದರೆ ಅನ್ನವೂ ವಿಷವೇ ಆಗುವದು; ಆದರೂ ವೈದ್ಯರಾದ ನಮ್ಮಲ್ಲಿ ಕೆಲವು ಜಾತಿಯ ವಿಷಗಳು ಮಾತ್ರ ಇರುತ್ತವೆ.

ಸೋಯರಾಬಾಯಿ—ಆ ವಿಷಗಳ ಗುಣಭೇಧವನ್ನು ತಿಳಿಯಲು ನಾನು ಇಚ್ಛಿಸುವೆನು.

ವೈದ್ಯ–ಕೆಲವು ವಿಷಗಳು ಅತ್ಯಂತ ತೀಕ್ಷ್ಣವಾಗಿರುತ್ತವೆ. ಅವುಗಳ ಬರಿಯ ಕೆಲವು ಕಣಗಳೂ ಶ್ವಾಸೋಛ್ವಾಸದ ಕೂಡ ಹೊಟ್ಟೆಯಲ್ಲಿ ಹೋದರೆ ಪ್ರಾಣಿಗಳ ಸಂಹಾರ ವಾಗುವದು. ಶತೃಗಳ ನಾಶಮಾಡಲಿಕ್ಕೆ ಈ ವಿಷದ ಉಪಯೋಗವು ಉತ್ತಮ ರೀತಿಯಿಂದ ಆಗುವದು. ಇಂಥ ಪ್ರಕಾರದ ಕೆಲವು ವಿಷಗಳ ಉಪಯೋಗವನ್ನು ಚಾಣಕ್ಯನು ತನ್ನ ರಾಜಧರ್ಮನೀತಿಯಲ್ಲಿವರ್ಣಿಸಿರುವನು.

ಸೋಯರಾಬಾಯಿ—ಅಂಥ ವಿಘಲು ತಮ್ಮಲ್ಲಿಯೂ ಇರಲೇಬಹುದಲ್ಲವೇ?

ವೈದ್ಯ—ಇರುತ್ತವೇನೆಂದು ಕೇಳಬೇಕೇ?

ಸೋಯರಾಬಾಯಿ—ಅವುಗಳ ಉಪಯೋಗವನ್ನು ನೀವು ಹ್ಯಾಗೆ ಮಾಡುತೀರಿ?

ವೈದ್ಯ—ಶತ್ರುಗಳ ಮೇಲೆ ಪ್ರಯೋಗಿಸತಕ್ಕ ಶಸ್ತ್ರಾಸ್ತ್ರಗಳಿಗೂ, ಶತ್ರುಗಳಿಗೆ ಹತ್ತುವ ದಕ್ಕಾಗಿ ಕೊಡುವ ಕುದುರೆಗಳ ಕೂದಲುಗಳಿಗೂ, ಶತ್ರುಗಳಿಗೆ ಹಾಕಿಕೊಳ್ಳುವದಕ್ಕಾಗಿ ಕೊಡುವ ಪೋಷಾಕುಗಳಿಗೂ ಅವುಗಳನ್ನು ಹಚ್ಚುವೆವು.

ಸೋಯರಾಬಾಯಿ—ವಿಷವನ್ನು ಪೋಷಾಕುಗಳಿಗೆ ಹಚ್ಚುವದು ಹ್ಯಾಗೆ? ಇದು ಒಳ್ಳೇ ವಿಚಿತ್ರವಾಗಿ ತೋರುತ್ತದೆ!

ವೈದ್ಯ—ಸರಕಾರ, ಇದರಲ್ಲಿ ವಿಚಿತ್ರವೇನು? ಮೈಗೆ ಹತ್ತತಕ್ಕ ಪೋಷಾಕಿನ ಭಾಗಕ್ಕೆ ವಿಷವನ್ನು ಲೇಪಿಸದರಾಯಿತು.

ಸೋಯರಾಬಾಯಿ—ಆದರೆ ಅದರಿಂದ ದೇಹದಮೇಲೆ ಪರಿಣಾಮವು ಹ್ಯಾಗಾಗುವದು?

ವೈದ್ಯ—ನಮ್ಮ ದೇಹದ ಚರ್ಮವು ಜರಡಿಯಂತೆ ಸೂಕ್ಷ್ಮರಂದ್ರಮಯವಾಗಿರುವದು. ಆ ರಂದ್ರಗಳೊಳಗಿಂದ ಯಾವಾಗಲೂ ಮೈಯೊಳಗಿನ ಬೆವರು ಹೊರಗೆ ಬರುತ್ತಲೂ, ಹೊರಗಿನ ವಾಯುವು ಮೈಯೊಳಗೆ ಹೋಗುತ್ತಲೂ ಇರುವದು. ಮೈಯೊಳಗಿಂದ ಹೊರಗೆಬರುವ ಬೆವರಿನಿಂದ ವಿಷವು ಹಸಿಯಾಗಿ, ಆಮೇಲೆ ಹವೆಯ ಒತ್ತುವಿಕೆಯಿಂದ ಅದು ದೇಹದಲ್ಲಿ ಪ್ರವೇಶಿಸುವದು. ಹೀಗೆ ಒಮ್ಮೆ ಆ ವಿಷದ ಪ್ರವೇಶವು ದೇಹದಲ್ಲಿ ಆದಬಳಿಕ ಕೇಳುವದೇನು? ಅರಕ್ಷಣದಲ್ಲಿ ಮೈಗೆ ಬೆಂಕಿಹತ್ತಿದ ಹಾಗಾಗಿ ಪ್ರಾಣನಾಶವಾಗುವದು.

ಸೋಯರಾಬಾಯಿ—ಆ ತೀಕ್ಷ್ಣವಿಷಕ್ಕೆ ಉತಾರವಿರಬಹುದಲ್ಲವೆ?

ವೈದ್ಯ—ದೇಹದಮೇಲೆ ಆ ವಿಷದ ಪೂರ್ಣ ಪರಿಣಾಮವಾಗುವದರೊಳಗಾಗಿ ಉಪಾಯಮಾಡಿದರೆ ಉಪಾಯವು ನಡೆಯುವದು. ಪೂರ್ಣಪರಿಣಾಮವಾದಬಳಿಕ ಮಾಡಿದ ಉಪಾಯಗಳಿಂದ ಏನೂ ಪ್ರಯೋಜನವಾಗುವದಿಲ್ಲ,

ಸೋಯರಾಬಾಯಿ—ಇರಲೊಲ್ಲದೇಕೆ? ಈ ಹಾಳು ಉಸಾಬರಿಯಿಂದ ನಮಗೆ ಹೆಂಗಸರಿಗೆ ಆಗುವ ಪ್ರಯೋಜನವೇನು? ಆ ವಿಷಗಳು ಹ್ಯಾಗಿರುತ್ತವೆಂಬುದನ್ನು ಒಮ್ಮೆ ಕಣ್ಣಿನಿಂದ ನೋಡಬೇಕೆನ್ನುತ್ತೇನೆ. ನಾಳೆ ನೀವು ಬರುವಾಗ ನೋಡುವದಕ್ಕಾಗಿ ಆ ವಿಷವನ್ನು ಸ್ವಲ್ಪ ತಕ್ಕೊಂಡು ಬರ್ರಿ. ಇನ್ನು ನೀವು ಹೋಗಬಹುದು. ಈ ಮಂಗಕ್ಕೆ ವಿಷಹಾಕಿದವರ ಶೋಧ ಮಾಡಿ ಅವರಿಗೆ ತಕ್ಕಶಾಸನ ಮಾಡಿಸುವೆನು.

ಹೀಗೆ ನುಡಿದು ಸೋಯರಾಬಾಯಿಯು ವೈದ್ಯನಿಗೆ ಒಂದು ಮುತ್ತಿನ ಕಂಠಿಯನ್ನು ಕೊಟ್ಟು— ''ವೈದ್ಯರಾಜ, ಬಹುದಿವಸಗಳಿಂದ ನಿಮಗೆ ಉಚಿತವಾಗಿ ಕೊಡಬೇಕು ಕೊಡಬೇಕೆಂದು ಮಾಡಿಸಿಟ್ಟಿದ್ದ ಈ ಮುತ್ತಿನಕಂಠಿಯನ್ನು ನಿಮಗೆ ಕೊಡುವದು ಆಗಿದ್ದೇ ಇಲ್ಲ. ಈ ದಿವಸ ಅಕಸ್ಮಾತ್ ನೆನಪಾಯಿತು. ತಕ್ಕೊಂಡು ಹೋಗಿಬಿಡಿರಿ. ಪದರಿನಲ್ಲಿದ್ದವರನ್ನು ಪ್ರಸಂಗ ವಶಾತ್ ಸತ್ಕರಿಸುವದರಿಂದ ಪ್ರಯೋಜನವಾಗುತ್ತಿರುತ್ತದೆ. ನೀವಂತೂ ರಾಜವೈದ್ಯರು. ನಿಮ್ಮ ಉಪಯೋಗವು ನಮಗೆ ಹೆಜ್ಜೆ ಹೆಜ್ಜೆಗೆ ಆಗುತ್ತಿರುವದು. ನಾಳೆ ಬರುವಾಗ ಆ ವಿಷವನ್ನು ಮಾತ್ರ ಬಿಟ್ಟುಬರಬೇಡಿರಿ,'' ಎಂದು ಹೇಳಲು, ನಿಸ್ಪೃಹಿಯಾದ ರಾಜವೈದ್ಯನು ಶಂಕಿತನಾದನು. ಇತ್ತಿತ್ತ ರಾಜಮಂದಿರದಲ್ಲಿ ಘಾತಪಾತದ ಪ್ರಸಂಗಗಳು ನಡೆಯುತ್ತಿದ್ದದ್ದನ್ನೂ, ದಾಯಾದಿತನದ ಮತ್ಸರದ ಜ್ವಾಲೆಯು ದಿನದಿನಕ್ಕೆ ಹೆಚ್ಚುತ್ತಿರುವದನ್ನೂ ಆತನು ಅರಿತಿದ್ದನು; ಆದ್ದರಿಂದ ಈಗ ಉಚಿತವನ್ನು ಸ್ವೀಕರಿಸಿ ವಿಷವನ್ನ ತಂದುಕೊಡುವದು ರಾಜದ್ರೋಹವೇ ಸರಿ; ಎಂದು ತಿಳಿದು ಆತನು ಸೋಯರಾಬಾಯಿಗೆ ಸಾಷ್ಟಾಂಗ ನಮಸ್ಕಾರಮಾಡಿ—ಸರಕಾರ, ಆ ಜಾಜ್ವಲ್ಯವಾದ ವಿಷವನ್ನು ಕೊಡಲಿಕ್ಕೆ–ತೋರಿಸಲಿಕ್ಕೆ ಸಹ ರಾಜಾಜ್ಞೆಯು ಬೇಕಾಗುತ್ತದೆ; ಆದ್ದರಿಂದ

ಮಹಾರಾಜರ ಅಪ್ಪಣೆಯಿಲ್ಲದೆ ಅದನ್ನು ತೋರಿಸುವದಾಗುವದಿಲ್ಲ, ಕ್ಷಮಿಸಬೇಕು. ಈಗ ಹೊತ್ತಿಲ್ಲದ ಹೊತ್ತಿನಲ್ಲಿ ಕೊಡುವ ಈ ಉಚಿತದ ಅವಶ್ಯಕತೆಯೂ ನನಗಿಲ್ಲ; ನಾನು ಸರಕಾರದ ಪದರಿನವನಾದ್ದರಿಂದ ಪ್ರಸಂಗವಶಾತ್ ನಮ್ಮಲ್ಲಿ ಅಥವಾ ಸರಕಾರದಲ್ಲಿ ಏನಾದರೂ ಕಾರ್ಯ ಕಟ್ಟಣಗಳಾದರೆ ಕೇಳಿ–ಕಾಡಿ ಇಸಕೊಂಡು ಹೋಗುವೆನು. ಈಗ ನಿಷ್ಕಾರಣವಾಗಿ ಉಚಿತವನ್ನು ಸ್ವೀಕರಿಸಲಿಕ್ಕೆ ನನಗೆ ಸಂಕೋಚವಾಗುತ್ತದೆ; ಆದ್ದರಿಂದ ಇದು ನನ್ನದಾಗಿ ಸರಕಾರದಲ್ಲಿಯೇ ಜಮೆಯಾಗಿ ಇರಲಿ, ಎಂದು ಹೇಳಿ, ಬೆಲೆಯುಳ್ಳ ಆ ಮುತ್ತಿನ ಕಂಠಿಯನ್ನು ಸೋಯರಾ ಬಾಯಿಯ ಮುಂದಿಟ್ಟು ಮತ್ತೊಮ್ಮೆ ನಮಸ್ಕರಿಸಿ ಮನೆಗೆ ಹೊರಟುಹೋದನು. ಇದನ್ನು ನೋಡಿ ಸೋಯರಾಬಾಯಿಯು ಸೋಜಿಗಪಟ್ಟದ್ದಲ್ಲದೆ, ವೈದ್ಯನ ನಿಸ್ಪೃಹವೃತ್ತಿಗಾಗಿ ಮನಸಿನಲ್ಲಿ ಅಂಜಿದಳು.

## ಚಿತೆಯೋ? ಚಿಂತೆಯೋ?

ಹೀಗೆ ರಾಜವೈದ್ಯನು ನಿರಾಶೆಗೊಳಿಸಿದರೂ ಸಾಹಸಿಯಾದ ಸೋಯರಾಬಾಯಿಯು ನಿರಾಶೆಗೊಳ್ಳಲಿಲ್ಲ. ಆ ವೈದ್ಯನ ಕಡೆಯಿಂದ ಜಾಜ್ವಲ್ಯವಾದ ವಿಷಗಳನ್ನು ಹ್ಯಾಗೆ ಸಂಪಾದಿಸ ಬೇಕೆಂದು ಆಕೆಯು ಎಣಿಕೆಹಾಕಹತ್ತಿದಳು. ಅಂದು ಆಕೆಗೆ ವಿಷದ ಹುಚ್ಚೇ ಹಿಡದ ಹಾಗಾಯಿತು. ಆ ಹುಚ್ಚಿನಲ್ಲಿ ಆಕೆಗೆ ಊಟ–ಉಡಿಗೆಗಳು ಬೇಡಾದವು; ಹಸಿವೆ–ನೀರಡಿಕೆಗಳ ಪರಿವೆಯಿಲ್ಲ ದಾಯಿತು. ಆಕೆಯು ಒಂದೇಸವನೆ ಆಲೋಚಿಸುತ್ತ ಕುಳಿತುಕೊಂಡಳು. ಇಂದು ವಿಷಪ್ರಾಪ್ತಿಯ ಉಪಾಯವನ್ನು ಕಂಡೇ ತೀರಬೇಕೆಂದು ಆಕೆಯು ನಿಶ್ಚಯಿಸಿದಂತೆ ತೋರಿತು. ನಿಶ್ಚಯದ ಮಹಿಮೆಯು ಬಹು ದೊಡ್ಡದು! ಕೈಕೊಂಡ ಕಾರ್ಯವು ಒಳ್ಳೆಯದಿರಲಿ–ಕೆಟ್ಟದಿರಲಿ, ಅದನ್ನು ನಿಶ್ಚಯದಿಂದ ಮಾಡಿದರೆ ಫಲದೊರೆಯುವದೆಂದು ಹೇಳಬೇಕಾಗುವದು. ಅದರಂತೆ ಸೋಯರಾಬಾಯಿಗೆ ಕಡೆಗೆ ಹಂಚಿಕೆಯು ತೋಚಿತು. ಕೂಡಲೆ ಆಕೆಯು ತನ್ನ ದಾಸಿಯಾದ ಜೀವುವನ್ನು ಕೂಗಲು, ಅಲ್ಲಿಯೇ ಹೊರಗೆ ಇದ್ದ ಜೀವುವು ಓಡುತ್ತಬಂದು ''ಜೀ, ಸರಕಾರ'' ಎಂದು ಎದುರಿಗೆ ನಿಂತುಕೊಂಡಳು. ಆಗ ಸೋಯರಾಬಾಯಿಯು—

ಸೋಯರಾಬಾಯಿ—ಜೀವೂ, ನಿನ್ನ ಗಂಡನಾದ ಸುಭಾನನು ರಾಜವೈದ್ಯರ ಮನೆಯಲ್ಲಿ ಚಾಕರಿಯಿರುವನಲ್ಲವೆ? ಆತನಿಗೆ ವೈದ್ಯರು ಸಂಬಳವೇನು ಕೊಡುವರು?

ಜೀವು—ಹೌದು ಸರಕಾರ, ನಮ್ಮವರು ವೈದ್ಯರಬಳಿಯಲ್ಲಿ ಚಾಕರಿಯಿರುವರು. ಔಷಧಗಳನ್ನು ಕೊಡುವದು ಅವರ ಕೆಲಸವಂತೆ! ಅವರಿಗೆ ಪಗಾರವೇನು ಬಹಳವಿಲ್ಲ, ತಿಂಗಳಿಗೆ ಐದುರೂಪಾಯಿ; ಆದರೆ ಔಷಧ ತಕ್ಕೊಳ್ಳುವದಕ್ಕೆ ಬಂದ ದೊಡ್ಡ ಜನರು ಕೊಡುವ ಉಚಿತಗಳಿಂದಲೇ ನಮ್ಮ ಸಂಸಾರ ಸಾಗಿ ಪಗಾರದಿಂದ ವರ್ಷಾ ಒಂದು ವಸ್ತವಾಗುವದು. ಸರಕಾರ, ಈ ಟೀಕೆಯು ಈ ವರ್ಷಮಾಡಿಸಿದ್ದು, ಅಕ್ಕಸಾಲಿಗರ ಮಾನಪ್ಪನು ಇದನ್ನು ಮಾಡಿದ್ದಾನೆ.....

ಸೋಯರಾಬಾಯಿ (ನಡುವೆಬಾಯಿಹಾಕಿ)— ಜೀವೂ, ನನಗೆ ನಿನ್ನ ವಸ್ತ್ರದ ಸುದ್ದಿ ಬೇಕಾಗಿಲ್ಲ; ಹೋಗು, ನಿನ್ನ ಗಂಡನನ್ನು ಬೇಗನೇ ಕರಕೊಂಡು ಬಾ ಹೋಗು. ಈಗ ಆತನು ವೈದ್ಯರ ಮನೆಯಲ್ಲಿಯೇ ಇರಬಹುದಲ್ಲವೇ?

ಜೀವು— ಹೌದು ಸರಕಾರ, ಅವರು ವೈದ್ಯರ ಮನೆಯಲ್ಲಿಯೇ ಇರುವರು.

ಸೋಯರಾಬಾಯಿ— ಹೋಗು ಹಾಗಾದರೆ, ನಾನು ಕರೆದೆನೆಂದು ಹೇಳಿ, ಹಾಗಲ್ಲ, ನಿನ್ನದೇ ಕೆಲಸವಿರುತ್ತದೆಂದು ಹೇಳಿ ಆತನನ್ನು ಈಗಲೇ ಕರೆದುಕೊಂಡು ಹೋಗು; ಹೋಗು ಓಡುತ್ತಹೋಗು.

ಕೂಡಲೇ ಜೀವುವು ಓಡುತ್ತಹೋದಳು. ಅಷ್ಟರಲ್ಲಿ ಸೋಯರಾಬಾಯಿಯ ವಿಚಾರವು ಬದಲಾಗಿ, ಜೀವುವನ್ನು ತಿರುಗಿ ಕರಕೊಂಡು ಬರುವದಕ್ಕಾಗಿ ಮತ್ತೊಬ್ಬ ದಾಸಿಯನ್ನು ಓಡಿಸಿದಳು. ಸ್ವಲ್ಪ ಹೊತ್ತಿನಲ್ಲಿ ಜೀವುವು ತೇಗುತ್ತ ಬಂದು ನಿಂತುಕೊಳ್ಳಲು, ಸೋಯರಾ ಬಾಯಿಯು— ಈಗ ಬೇಡ, ಸಂಜೆಯಮುಂದೆ ನಿನ್ನ ಗಂಡನನ್ನು ಕರಕೊಂಡು ಬಾ, ಇನ್ನಾದರೂ ಹೊತ್ತುಮುಣಗಲಿಕ್ಕೆ ಎಷ್ಟು ಹೊತ್ತಿರುತ್ತದೆ? ಈಗೇ ಒಂಬತ್ತುತಾಸು ಮೀರಿ ಹೋಗಿರುವದು. ನಾನೂ ಮೈತೊಳೆದು ತುಳಸಿಗೆ ನೀರುಹಾಕಿ ಊಟಮಾಡುವೆನು. ಕೆಲಸಕ್ಕೆ ಈ ಕೆಟ್ಟ ಹೊಟ್ಟೆಯ ದೊಂದು ವಿಘ್ನವೇ? ಎಂದು ನುಡಿಯುತ್ತಮೈತೊಳೆಯಲಿಕ್ಕೆ ಹೋದಳು. ಮಾಡಿದ ಅಡಿಗೆಯು ಆರಿಹೋಗಿತ್ತು, ಸೋಯರಾಬಾಯಿಯು ವೈತೊಳೆಯಲಿಕ್ಕೆ ಹೋಗಹೋಗುತ್ತ ಅಡಿಗೆ ಯವರಿಗೆ— ಇನ್ನು ಮತ್ತೆ ಅಡಿಗೆ ಮಾಡಬೇಡಿರಿ. ಆರಿದ ಅಡಿಗೆಯೇ ಇರಲೊಲ್ಲದೇಕೆ, ಕೆಟ್ಟ ಹೊಟ್ಟೆಗೆ ಏನು ಹಾಕಿದರೂ ಹೋಗುತ್ತದೆ. ನಾನು ಈಗ ತುಳಸಿಗೆ ನೀರು ಹಾಕಿ ಬರುವೆನು, ಎಂದು ಹೇಳಿದಳು. ಇದನ್ನು ಕೇಳಿ ಅಡಿಗೆಯವರಿಗೆ ಆಶ್ಚರ್ಯವಾಯಿತು. ಸೋಯರಾಬಾಯಿಗೆ ಆರಿದ ಅಡಿಗೆಯು ಸರ್ವಥಾ ಸೇರುತ್ತಿದ್ದಿಲ್ಲ. ಅಂಥವಳು ಹೀಗೆ ಆಜ್ಞಾಪಿಸಿದ್ದರ ಕಾರಣವು ಅವರಿಗೆ ತಿಳಿಯದಾಯಿತು. ಸೋಯರಾಬಾಯಿಯು ಅವಸರದಿಂದ ಮೈ ತೊಳೆದು ತುಳಸಿಗೆ ನೀರು ಹಾಕುವ ಶಾಸ್ತ್ರ ಮಾಡಿದಳು; ಆದರೆ ಆಕೆಯ ಚಿತ್ತವು ವಿಷಪ್ರಾಪ್ತಿಯ ಉಪಾಯ ಹುಡುಕುವಲ್ಲಿ ಮಗ್ನವಾಗಿ ಹೋದದ್ದರಿಂದ ಯಾವ ಕೆಲಸದಲ್ಲಿಯೂ ಆಕೆಯ ಲಕ್ಷವಿದ್ದಿಲ್ಲ, ದುರ್ವೃತ್ತರಿಗೆ ಎಲ್ಲಿಯ ಪೂಜೆ–ಎಲ್ಲಿಯ ಪುನಸ್ಕಾರ! ಆಕೆಯ ಊಟದ ಕಾಟವೂ ತೀರಿತು. ಅಷ್ಟರಲ್ಲಿ ಹೊರಗೆ ಒಂದು ತಾಸು ಹೊತ್ತು ಉಳಿದಿರಬಹುದು. ಈ ತಾಸು ಯಾವಾಗ ಹೋದೀತೆಂಬ ಆತುರದಿಂದ ಆಕೆಯು ಹೊತ್ತನ್ನೇ ನೋಡುತ್ತ ಕುಳಿತುಕೊಂಡಳು. ಯಾರು ನೋಡಿದರೇನು– ನೋಡಿದಿದ್ದರೇನು, ಹೊತ್ತುಹೋಗುವ ಹಾಗೆ ಹೋಗತಕ್ಕದ್ದಷ್ಟೇ? ಆದರೆ ಸೋಯರಾಬಾಯಿಗೆ ಅಂದು ಹೊತ್ತು ಬೇಗನೆ ಹೋಗದಹಾಗೆ ಕಂಡು ಸಂತಾಪವಾಯಿತು. ''ಖೋಡಿ ಹೊತ್ತೇ ಹೋಗಲೊಲ್ಲದು'' ಎಂದು ಒಟಗುಟ್ಟುತ್ತ ಆಕೆಯು ಜೀವೂವನ್ನು ಕರೆದು— ಜೀವೂ, ಹೋಗು, ಬೇಗನೇ ಮನೆಗೆಹೋಗಿ ಸುಭಾನನು ಬಂದ ಕೂಡಲೆ ಕರಕೊಂಡು ಬಾ, ಎಂದು ಆಕೆಯನ್ನು ಮನೆಗೆ ಅಟ್ಟಿದಳು.

ಕೆಲಸದ ಹುಚ್ಚು ಹಿಡಿದವರಿಗೆ ಒಮ್ಮೊಮ್ಮೆ ಹೀಗಾಗುತ್ತದೆ; ಆದರೆ ಹುಚ್ಚು ಎಲ್ಲಿ ಹೋದರೂ ಹುಚ್ಚೇಸರಿ! ಮನುಷ್ಯನಿಗೆ ಕಾರ್ಯಸತ್ಕರಿಸಬೇಕು, ಆದರೆ ಕಾರ್ಯದ ಹುಚ್ಚು

ಕೆಲಸದ್ದಲ್ಲ, ಮಾಡತಕ್ಕ ಬೇರೆ ಕೆಲಸಗಳನ್ನು ಬಿಟ್ಟು ಒಂದೇ ಕೆಲಸದ ಬೆನ್ನು ಹತ್ತುವದೇ ಕೆಲಸದ ಹುಚ್ಚು! ಅದರಿಂದ ಒಂದಿಲ್ಲೊಂದು ಬಗೆಯ ಹಾನಿಯು ತಟ್ಟದೇ ಹೋಗದು. ಕೆಲಸದ ಹುಚ್ಚು ಹಿಡಿದ ಸೋಯರಾಬಾಯಿಯು ಎಲ್ಲ ಕೆಲಸಬಿಟ್ಟು ಚಡಪಡಿಸುತ್ತ ಸುಭಾನನ ಹಾದಿಯನ್ನು ನೋಡುತ್ತ ಕುಳಿತುಕೊಂಡಳು. ಬರಬರುತ್ತ ಹೊತ್ತುಮುಣುಗಿತು; ದೀಪಗಳು ಹಚ್ಚಿದವು; ಹೊರಗೆ ಕತ್ತಲಾದರೂ ಸುಬಾನನು ಬರಲಿಲ್ಲ, ''ಇವನೇನು ಸತ್ತಗಿತ್ತನೋ'' ಎಂದು ಆಕೆಯು ಸಂತಾಪದಿಂದ ಒಟಗುಟ್ಟುತ್ತಿರಲು, ಸುಭಾನನು ಕರಕೂಂಡು ಜೀವುವು ಬಂದಳು. ಸುಭಾನನು ಒಳಗೆ ಬಂದ ಕೂಡಲೇ ವಿನಯದಿಂದ— ''ಬಡವನ ಮುಜುರೆ ತಕ್ಕೊಳ್ಳ ಬೇಕು ಸರಕಾರ'' ಎಂದ ಮುಜುರೆ ಮಾಡಿದನು. ಸೋಯರಾಬಾಯಿಯು ನಗತ್ತು ಮುಜುರೆ ಯನ್ನು ತಕ್ಕೊಂಡು—

ಸೋಯರಾಬಾಯಿ—ಬಾ, ಸುಭಾನ, ಇತ್ತ ಬಾ, ದಿನಾಲು ವೈದ್ಯರ ಮನೆಯಲ್ಲಿ ಹೊತ್ತು ಮುಣುಗುವತನಕ ಕೆಲಸ ಮಾಡಬೇಕಾಗುತ್ತದೇನು?

ಸುಭಾನ—ಹೌದು ಸರಕಾರ, ಕೆಲಸಬಿದ್ದರೆ ಒಂದೊಂದು ದಿವಸ ರಾತ್ರಿಯಾದರೂ ಕೆಲಸ ಮಾಡಬೇಕಾಗುತ್ತದೆ; ಆದರೆ ನಮ್ಮ ವೈದ್ಯರು ಬಹಳ ಒಳ್ಳೆಯವರು, ಬಡವರಿಗೆ ಉಸುರು ಹಾಕಗೊಡುವದಿಲ್ಲ.

ಸೋಯರಾಬಾಯಿ—ನೀನು ಅಲ್ಲಿ ಮಾಡತಕ್ಕ ಕೆಲಸವೇನು?

ಸುಭಾನ—ನಾನು ಔಷಧಗಳನ್ನು ಕೊಡವೆನು ಸರಕಾರ!

ಸೋಯರಾಬಾಯಿ—ಔಷಧದ ಪೆಟ್ಟಿಗೆಗಳಲ್ಲಿಯ ಔಷಧಗಳನ್ನು ನೀನೇ ಕೊಡವೆಯೋ? ಔಷಧಗಳ ಗೊತ್ತು ನಿನಗಿರುವದೆಯೇ?

ಸುಭಾನ—ಹೌದು ಸರಕಾರ, ಔಷಧಗಳ ಗೊತ್ತು ನನಗಿರುವದು ವೈದ್ಯರು ಹೇಳಿದ ಔಷಧಗಳನ್ನು ನಾನೇ ಕೊಡುವೆನು.

ಸೋಯರಾಬಾಯಿ—ಔಷಧದ ಪೆಟ್ಟಿಗೆಗಳ ಕೀಲಿಯ ಕೈಗಳನ್ನು ನಿನ್ನ ಕಡೆಗೆ ಕೊಡವರೋ?

ಸುಭಾನ—ದಿನಾಲು ನನ್ನ ಕಡೆಗೇ ಕೊಡುತ್ತಿದ್ದರು. ಒಂದೊಂದು ದಿನ ನನ್ನ ಬಳಿ ಯಲ್ಲಿಯೇ ಕೀಲಿಯ ಕೈಗಳಿರುತ್ತಿದ್ದವು; ಆದರೆ ಈ ದಿನ ವೈದ್ಯರು ಯಾಕೋ ಕೀಲಿಯ ಕೈಗಳನ್ನು ನನ್ನ ಕೈಯೊಳಗಿಂದ ಇಸುಕೊಂಡು ತಮ್ಮ ಬಳಿಯಲ್ಲಿಟ್ಟುಕೊಂಡದ್ದಲ್ಲದೆ, ತಮ್ಮ ಅಪ್ಪಣೆ ಯಿಲ್ಲದೆ ಯಾರ ಕೈಯಲ್ಲಿಯೂ ಕೀಲಿಯ ಕೈಗಳನ್ನು ಕೊಡಬಾರದೆಂದು ಮನೆಯ ಜನರಿಗೆಲ್ಲ ಅಪ್ಪಣೆಮಾಡಿದರು ಸರಕಾರ!

ಈ ಮೇರೆಗೆ ನುಡಿದ ಸುಭಾನನ ಮಾತುಗಳನ್ನು ಕೇಳಿ ಸೋಯರಾಬಾಯಿಯು, ''ರಾಜವೈದ್ಯನು ಜಾಗರೂಕನಾದದ್ದರಿಂದ ತನಗೆ ವಿಷಯಗಳು ದೊರೆಯುವದು ಕಷ್ಟ ವಾಯಿತೆಂ''ದು ಅಸಮಾಧಾನಪಟ್ಟಳು; ಆದರೂ ಆ ದೃಢ ನಿಶ್ಚಯದ ಹೆಣ್ಣುಮಗಳು ಅಷ್ಟಕ್ಕೆ ನಿರಾಶೆಪಡದೆ ಸುಭಾನನನ್ನು ಕುರಿತು—

ಸೋಯರಾಬಾಯಿ—ಸುಭಾನ ಇರಲಿ, ಆ ಔಷಧದ ಮಾತು ತಕ್ಕೊಂಡು ಈಗ ಮಾಡುವದೇನು? ನಿನ್ನನ್ನು ನಾನು ಕರೆಸಿದ ಕಾರಣವು ಬೇರೆಯಿರುವದು. ನೀನು ನನ್ನದೊಂದು ಮಹತ್ವದ ಕೆಲಸಮಾಡಬೇಕಾಗಿದೆ. ಆ ಕೆಲಸವು ಅತಿಗುಪ್ತವಾದದ್ದು ಮತ್ತೊಬ್ಬರ ಕಿವಿಗೆ ಮುಟ್ಟತಕ್ಕದ್ದಲ್ಲ. ಇಗೋ, ಸದ್ಯಕ್ಕೆ ಈ ಗೆಜ್ಜೆಯ ಟೀಕೆಯನ್ನು ನಿನ್ನ ಹೆಂಡತಿಗೆ ಕೊಡುತ್ತೇನೆ. ನೀನು ಕೆಲಸಮಾಡಿಕೊಟ್ಟೆಯೆಂದರೆ ನಿನಗೆ ಬಹುದೊಡ್ಡ ಉಚಿತವನ್ನು ಕೊಡುವೆನು. ಯಾಕೆ? ನೀನು ನನ್ನ ಅಪ್ಪಣೆಯನ್ನು ಮನ್ನಿಸುವೆಯಷ್ಟೆ?

ಸುಭಾನ—ಸರಕಾರ! ತಮ್ಮ ಅಪ್ಪಣೆಯನ್ನು ಮನ್ನಿಸದೇನುಮಾಡಲಿ? ನಾನು ಸರಕಾರದ ನೌಕರನು. ಹೇಳಿದ ಚಾಕರಿಯನ್ನು ಮಾಡುವದು ನನ್ನ ಕೆಲಸವು. ಹೀಗಿದ್ದು ಈ ಟೀಕೆಯಾದರೂ ಯಾತಕ್ಕೆ? ಕೆಲಸವಾದ ಬಳಿಕ ಬೇಕಾದ ಇನಾಮು ಕೊಡಬಹುದು; ಈಗ ಯಾವದೂ ಬೇಡ.

ಸೋಯರಾಬಾಯಿ—ಇರಲಿ, ನಿನ್ನ ಹೆಂಡತಿಯ ಕೊರಳಿಗೆ ಇದು ಬಲುಚಂದ ಕಾಣುತ್ತದೆ. ಇದನ್ನು ನಿನ್ನ ಹೆಂಡತಿಗೆ ಕೊಡುತ್ತೇನೆ. ನೀನು ಕೆಲಸಮಾಡಿದೆಯೆಂದರೆ, ನಿನಗಾಗಿಯೇ ಬೇರೆ ದೊಡ್ಡ ಇನಾಮು ಕೊಡುವೆನು.

ದುಡ್ಡು ಯಾರಿಗೆ ಬೇಡ? ಹಣವೆಂದರೆ ಹೆಣವು ಬಾಯಿತೆರೆಯುವದೆಂಬ ನಾಣ್ಣುಡಿ ಯಿರುವದು. ಅದರಲ್ಲಿ ಸಾಂಸಾರಿಕರಿಗಂತು ದುಡ್ಡು ಬಹಿಃಪ್ರಾಣವೇ ಸರಿ. ಹೆಂಡತಿಯ ಕೊರಳೊಳಗಿನ ದೊಡ್ಡ ಗೆಜ್ಜೆಯ ಟೀಕೆಯನ್ನು ನೋಡಿ ಸುಭಾನನ ಮನಸ್ಸು ಕರಗಿ, ಆತನು ಸೋಯರಾಬಾಯಿಯ ಬಲೆಗೆ ಬಿದ್ದನು. ಆತನು ಸೋಯರಾಬಾಯಿಗೆ—

ಸುಭಾನ—ಸರಕಾರ, ನಾನು ಮಾಡುವ ಚಾಕರಿಯಾದರೂ ಏನು? ಅಪ್ಪಣೆ ಕೊಡಿಸಬೇಕು.

ಸೋಯರಾಬಾಯಿ—ನಿಮ್ಮ ವೈದ್ಯರ ಬಳಿಯಲ್ಲಿದ್ದ ಕೆಲವು ವಿಷಯಗಳು ನಮಗೆ ನೋಡಲಿಕ್ಕೆ ಬೇಕಾಗಿವೆ. ಅವನ್ನು ಕೇಳಿದರೆ ನಿಮ್ಮ ವೈದ್ಯರು— ''ಮಹಾರಾಜರ ಅಪ್ಪಣೆ ಯಿಲ್ಲದೆ ಅವನ್ನು ಕೊಡಲಿಕ್ಕೆ ಬರುವದಿಲ್ಲವೆಂ''ದು ಹೇಳಿದರು. ಅಷ್ಟಕ್ಕಿಷ್ಟಕ್ಕೆ ಮಹಾರಾಜರ ಪರವಾನಿಗೆಯನ್ನೇನು ಕೇಳುವದು? ಆವಿಷಗಳೇನು ತಿನ್ನುವವಲ್ಲ–ಉಣ್ಣುವವಲ್ಲ, ಸುಮ್ಮನೆ ನೋಡುವದಕ್ಕಾಗಿ ಸ್ವಲ್ಪ ಸ್ವಲ್ಪ ಕಳಿಸಿಕೊಡಿರೆಂದು ಹೇಳಿದರೆ ಅವರು ಗುಡ್ಡಕ್ಕೆ ಹಗ್ಗ ಹಾಕಿದರು.

ಸುಭಾನ—ಸರಕಾರ, ಇದಾವ ದೊಡ್ಡ ಮಾತು? ಮತ್ತಾವ ದೊಡ್ಡ ಚಾಕರಿ ಹೇಳುವರೋ ಎಂದು ಗಾಬರಿಯಾಗಿದ್ದೆನು. ನಿಮಗೇಕೆ ವಿಷಗಳ ಚಿಂತೆ? ಅವನ್ನು ನಾನು ತಂದುಕೊಡುವೆನು. ನಮ್ಮ ವೈದ್ಯರು ಸ್ವಲ್ಪ ಸಿಡಕ ಸ್ವಭಾವದವರು; ಆದರೆ ಆ ಸಿಡಕತನವು ಯಾವಾಗಲೂ ಇರುವದಿಲ್ಲ ಒಮ್ಮೊಮ್ಮೆ ಮನಸ್ಸು ಬಂದರೆ ಬೇಕಾದದ್ದು ಕೊಡುವರು. ಎಂಟು ಹತ್ತುದಿನ ಗಳೊಳಗಾಗಿ ಮತ್ತೆ ಕೀಲಿಕೈಗಳು ನನ್ನ ಕಡೆಗೆ ಬಂದೇ ಬರುವವು. ಏನಾದರೂ ಸಂಶಯ ಬಂದರೆ ಹೀಗೆ ಕೀಲಿಕೈಗಳನ್ನು ಇಸುಕೊಳ್ಳುವದು ನಮ್ಮ ವೈದ್ಯರ ಸ್ವಭಾವವು. ಹೀಗೆ ಎಷ್ಟೋಸಾರೆ ಕೀಲಿಯಕೈಗಳನ್ನು ಇಸುಕೊಂಡಿರುವರು, ಮತ್ತೆ ಕೊಟ್ಟಿರುವರು. ಈಸಾರೆಯೂ ಹಾಗೆಯೇ

ಆಗುವದು. ಕೀಲಿಯ ಕೈಗಳು ನನ್ನ ಕೈಗೆ ಬಂದಕೂಡಲೇ ಎಲ್ಲ ವಿಷದ ನಮೂನೆಗಳನ್ನು ನಿಮಗೆ ತಂದುಕೊಡುವೆನು. ಪ್ರಸಂಗಬಂದರೆ ವೈದ್ಯರಿಗೆ ಸಿಟ್ಟುಮಾಡಿ ನಾನು ನಿಮಗೆ ವಿಷಗಳನ್ನು ಕೊಡಿಸುವೆನು. ರಾಣಿಯು ಸರಕಾರವು ಕೇಳಿದರೆ ಸೊಟ್ಟ ವಿಷಕೊಡಲಿಕ್ಕೆ ವೈದ್ಯರು ಇಲ್ಲವೆನ್ನಬೇಕೇನು? ಅವೇನು ಕೂಳಲ್ಲ–ಬಾಳಕವಲ್ಲ, ನಿಮ್ಮದು ನಿಮಗೆ ಕೊಡಲಿಕ್ಕೆ ವೈದ್ಯರ ಗಂಟೇನು ಹೋಗುತ್ತದೆ? ಈ ಮಾತಿಗಾಗಿ ಯಾರಾದರೂ ವೈದ್ಯರಿಗೆ ಸಿಟ್ಟುಮಾಡಿ ಹೇಳಬಹುದು ಬಿಡಿರಿ.

ಸೋಯರಾಬಾಯಿ—ಸುಭಾನ, ನನ್ನ ಮಾತನ್ನು ಲಕ್ಷಪೂರ್ವಕವಾಗಿ ಕೇಳು. ನೀನು ನನಗೆ ವಿಷಗಳನ್ನು ತಂದು ಕೊಟ್ಟದ್ದು ಮತ್ತೊಬ್ಬರಿಗೆ ಗೊತ್ತಾಗಕೂಡದು. ನಿಮ್ಮ ವೈದ್ಯರ ಕಿವಿಗಂತೂ ಅದು ಮುಟ್ಟಲೇಬಾರದು. ಬೇರೆ ಯಾರ ಕಿವಿಗೂ ಮುಟ್ಟಬಾರದು. ಆ ವಿಷದ ಮಾತು ನನಗೆ ಗೊತ್ತು– ನಿನಗೆ ಗೊತ್ತು, ಮೂರನೆಯವರಿಗೆ ಗೊತ್ತಾಗಬಾರದು. ಹೀಗೆ ನೀನು ಜಾಣತನದಿಂದ ಕೆಲಸ ಮಾಡಿದರೆ ಮಾತ್ರ ನಿನಗೆ ದೊಡ್ಡ ಇನಾಮು ಸಿಗುವದು. ಹಾಗೆ ಮಹಾರಾಜರ ಒಪ್ಪಿಗೆ ಪಡೆದು ನಾನು ಬೇಕಾದಷ್ಟು ವಿಷವನ್ನು ವೈದ್ಯರಿಂದ ತರಿಸಿಕೊಳ್ಳಲಾರನೇನು? ನೀನು ಗುಪ್ತರೀತಿಯಿಂದ ಈ ಕೆಲಸಮಾಡುವೆಯೋ ಇಲ್ಲವೋ ಹೇಳು.

ಸುಭಾನ—ಆಗಲಿ ಸರಕಾರ, ನಾನೇ ಗುಪ್ತರೀತಿಯಿಂದ ವಿಷಗಳನ್ನು ತಂದು ಕೊಡುವೆನು; ಅಂಥ ಪ್ರಸಂಗ ಬಂದರೆ ನಾವೇ ಹೇಳಿ ವಿಷತರಿಸಿಕೊಂಡಿದ್ದೇವೆಂದು ಹೇಳಿ ನನ್ನನ್ನು ನೀವು ಉಳಿಸಿಕೊಳ್ಳಿರೆಂದಾಯಿತು. ನನ್ನ ಕಸರತ್ತನ್ನಾದರೂ ನೋಡಿರಿ, ಇಂದೇ ವಿಷವನ್ನು ತಂದು ಕೊಡದಿದ್ದರೆ ನಾನು ಸುಭಾನನೇ ಅಲ್ಲ.

ಈ ಮೇರೆಗೆ ನುಡಿದ ಸುಭಾನನ ಎಬಡತನದ ಮಾತುಗಳನ್ನು ಕೇಳಿ ಸೋಯರಾಬಾಯಿಯು ಮನಸ್ಸಿನಲ್ಲಿನಕ್ಕು, ಕೆಲಸವಾದಕೂಡಲೆ ಈ ಇಸಮುನ್ನು ಸಕುಟುಂಬವಾಗಿ ಗೊತ್ತಿಗೆ ಹಚ್ಚಿದರಾಯಿತು. ಮೊದಲು ವಿಷವಂತು ಕೈಗೆ ಬರಲಿ. ಇಂದು ತಂದುಕೊಡದಿದ್ದರೂ ಇನ್ನು ಎಂಟುದಿನಗಳ ಮೇಲಾದರೂ ತಂದು ಕೊಡಲಿ. ಅಷ್ಟು ಅವಸರವೇಕೆ? ಇಂದೇ ವೈದ್ಯರು ಕೀಲಿಕ್ಕೈ ಹ್ಯಾಗೆ ಕೊಟ್ಟಾರು? ಎಂದು ಅಂದುಕೊಂಡು ಸುಭಾನನಿಗೆ—ಒಳ್ಳೇದು, ಸುಭಾನ, ಬಹಳ ಸಂತೋಷವಾಯಿತು. ನೀನು ಇಂದಿಲ್ಲ ಎಂಟು ದಿನಗಳ ಮೇಲೆ ವಿಷಗಳನ್ನು ತಂದುಕೊಟ್ಟರೂ ಚಿಂತೆಯಿಲ್ಲ, ಕೆಲಸ ಬೇಗಮಾಡಿದಷ್ಟು ಇನಾಮು ಹೆಚ್ಚುಸಿಗುವದು. ಮುಖಮಾತು ನಮ್ಮ ನಿಮ್ಮ ಈ ಆಲೋಚನೆಯು ಬೇರೊಬ್ಬರ ಕಿವಿಗೆ ಮುಟ್ಟಬಾರದು ನೋಡು! ಬಹು ಜೋಕೆ. ಈಗ ನೀನು ನನ್ನ ಬಳಿಗೆ ಬಂದಿರುವ ಸುದ್ದಿಯು ಸಹ ಯಾರಿಗೂ ಹತ್ತಬಾರದು. ಹಿಡಿ; ಬಡವನ, ಐದುರೂಪಾಯಿಯ ಸಂಬಳದಿಂದ ಏನಾಗುತ್ತದೆ? ಹಬ್ಬ–ಹುಣ್ಣಿಮೆಯ ದಿವಸ ಎಂದು ಹೇಳಿ, ಹತ್ತುವರಹಗಳನ್ನು ಅವನ ಕೈಯಲ್ಲಿ ಕೊಟ್ಟಳು. ಆಗ ಸುಭಾನನು ಒಲ್ಲೆ ಒಲ್ಲೆನೆಂದು ಮುರುಕ ಮಾಡುತ್ತ ಅವನು ತಕ್ಕೊಂಡು ಸೋಯರಾಬಾಯಿಯ ಗುಲಾಮನಾಗಿ ಮುಜುರೆಮಾಡಿ ಸಂತೋಷದಿಂದ ಮನೆಗೆ ಹೋದನು.

ಸೋಯರಾಬಾಯಿಯು ನಿಶ್ಚಿಂತಳಾದಂತೆ ಒಂದು ಕ್ಷಣ ಆನಂದಪಟ್ಟಳು; ಆದರೆ ಉತ್ತರಕ್ಷಣದಲ್ಲಿ ತಾನು ಯೋಚಿಸಿರುವ ನೀಚಕಾರ್ಯದ ವಿಚಾರವು ಆಕೆಯ ಮನಸ್ಸಿನಲ್ಲಿ ಬಂದು, ಆಕೆಗೆ ಹ್ಯಾಗೆ ಹ್ಯಾಗೋ ಆಗಹತ್ತಿತು. ಆಕೆಯು ತನ್ನ ಮನಸ್ಸಿನಲ್ಲಿ–ಹೀಗೆ ನನ್ನ ಮನಸ್ಸಿನ ಚಡಪಡಿಕೆಯಾಗುವ ಕಾರಣವೇನು? ಲೋಕದಲ್ಲಿ ಯಾರು ಮಾಡದೆಯಿದ್ದ ಕೆಲಸ ವನ್ನು ನಾನೇನು ಮಾಡುವದಿಲ್ಲ, ಸ್ವಾರ್ಥವು ಯಾರನ್ನು ಬಿಟ್ಟಿರುವದು. ರಾಜ್ಯ ಪ್ರಾಪ್ತಿಯಾಗಾ ಬೇಕೆಂದು ಪಾಂಡವರು ಕೌರವರ ನಾಶಮಾಡಲಿಲ್ಲವೆ? ಶ್ರೀರಾಮನು ರಾವಣನನ್ನು ಕೊಲ್ಲ ಲಿಲ್ಲವೆ? ದೂರವೇಕೆ? ಸದ್ಯದ ದಿಲ್ಲಿಯ ಬಾದಶಹನಾದ ಔರಂಗಜೇಬನು ತನ್ನ ಅಣ್ಣ-ತಮ್ಮಂದಿರನ್ನು ಕೊಲ್ಲಿಸಿ, ತಂದೆಯನ್ನು ಸೆರೆಯಲ್ಲಿಟ್ಟು ತಾನು ಸಿಂಹಾಸನವೇರಲಿಲ್ಲವೆ? ಸದ್ಯಕ್ಕೆ ಮಹಾರಾಜರು ಮಾಡಿರುವ ರಾಜ್ಯಸ್ಥಾಪನೆಯಲ್ಲಿಯಾದರೂ ಸ್ವಾರ್ಥವೇ ಇರುತ್ತದಲ್ಲ? ಮುಸಲ್ಮಾನರನ್ನು ಬಗ್ಗುಬಡಿದು ಹಿಂದುಪದ ಪಾತಷಾಹಿಯನ್ನು ಸ್ಥಾಪಿಸಲು ಯತ್ನಿಸುವದರಲ್ಲಿ ಸ್ವಾರ್ಥವಲ್ಲದೆ ಮತ್ತೇನಿರುತ್ತದೆ? ಜೀವ ಹಿಂಸೆಯಾದ ಹೊರತು ರಾಜ್ಯಪ್ರಾಪ್ತಿಯು ಯಾರಿಗೆ ಆಗಿರುತ್ತದೆ! ಈಗ ನಾನು ರಾಜಾರಾಮನಿಗೆ ಸಿಂಹಾಸನವು ದೊರೆಯುವದಕ್ಕಾಗಿ ಮಾಡ ಬೇಕಾಗಿರುವ ಹಿಂಸೆಗೆ ಹೇಸಲಾಗದು. ಅಲ್ಪಪ್ರಯತ್ನದಿಂದ ಮಹತ್ಫಲವು ದೊರೆಯುವ ಪ್ರಸಂಗದಲ್ಲಿಯತ್ನಮಾಡದೆ ಯಾಕೆ ಬಿಡಬೇಕು? ಅತ್ತಕಡೆಯಲ್ಲಿ ನೀಚ ಶಂಭಾನನ್ನೇ ಪಟ್ಟಕ್ಕೆ ಕುಳ್ಳಿರಿಸುವ ವಿಚಾರವು ನಿಶ್ಚಿಂತವಾದಂತೆ ತೋರುತ್ತದೆ ಸಿಂಹಾಸನದ ಮಾತು ತೆಗೆದು ಕೂಡಲೆ ಹುಬ್ಬುಗಂಟಿಕ್ಕಿ ಆ ಮಾತನ್ನೇ ಬದಲಿಸಿ ಬಿಡುವರು. ಶಂಭ್ಯಾನ ದೋಷವನ್ನು ಹೇಳಿದಕೂಡಲೆ ಕವಕ್ಕನೆ ಮೈಮೇಲೆಯೇ ಬರುವರು. ಇತ್ತಿತ್ತಲಾಗಿಯಂತೂ ಅಂತಃಪುರಕ್ಕೆ ಬರುವದೇ ಅಪ ರೂಪವಾಗಿದೆ. ಬಂದರೂ ಮೌನವ್ರತ! ಒಳ್ಳೇದು. ಶಂಭ್ಯಾನು ಹ್ಯಾಗೆ ಪಟ್ಟವೇರುವನೋ ನೋಡುತ್ತೇನೆ. ಆ ದುಷ್ಟನನ್ನು ಗೊತ್ತಿಗೆ ಹಚ್ಚಬೇಕಾದರೆ ಪಲ್ಹಾಳಗಡದಲ್ಲಿರುವ ಜನರನ್ನು ಒಡಕೊಳ್ಳಬೇಕು. ಬಾಳಾಜಿ ಆವಜಿ ಚೀಟಣೀಸನು ನನ್ನ ಪಕ್ಷವಹಿಸುವ ಆಶೆಯಿಲ್ಲ; ಯಾಕಂದರೆ, ಮಹಾರಾಜರಮೇಲೆ ಆತನ ನಿಷ್ಠೆ ಬಹಳ. ರಾಮಚಂದ್ರಪಂತ ಪ್ರಲ್ಹಾದಪಂತ ಇವರು ನನ್ನ ಪಕ್ಷಕ್ಕೆ ಒಲಿಯುವ ಸಂಭವವಿದೆ. ಪಾಲ್ಹಳಗಡದ ಮುಖ್ಯಾಧಿಕಾರಿಯು ನಮ್ಮವನೇ ಇದ್ದಾನೆ. ಶಂಭ್ಯಾನ ತೀರ ಸಮೀಪದ ಸೇವಕನಾಗಿರುವ ಖುಮಾಜಿಯು ತಾನು ಒಪ್ಪಿಕೊಂಡ ಕೆಲಸವನ್ನುಮಾಡಿಯೇ ಮಾಡುವನು. ಇತ್ತಕಡೆಯ ಪ್ರಕೃತಿಯಂತು ದಿನದಿನಕ್ಕೆ ಕ್ಷೀಣವಾಗುತ್ತ ನಡೆದಿದೆ. ಮೇಲೆ ಮೇಲೆ ಬಲಗಡೆಯ ಮೊಣಕಾಲ ಬಾಯುತ್ತಿರುವದು. ಅದು ಔಷಧೋಪ ಚಾರಗಳಿಂದ ಗುಣವಾಗುತ್ತಿದ್ದರೂ, ಆದರ ಲಕ್ಷಣವೇನು ನನಗೆ ನೆಟ್ಟಗೆ ಕಾಣುವದಿಲ್ಲ. ಪ್ರಕೃತಿಯು ವಿಕೋಪಕ್ಕೆ ಹೋಗಿ ಏನಾದರೂ ವ್ಯತ್ಯಾಸವಾದ ಪಕ್ಷದಲ್ಲಿ ಅತ್ತಪಲ್ಹಾಳಗಡದಲ್ಲಿ ಪ್ರತಿಬಂಧದಲ್ಲಿಯೇ ಇರುವ ಶಂಭ್ಯಾನನ್ನು ಮತ್ತಿಷ್ಟು ಕಠಿಣ ಪ್ರತಿಬಂಧದಲ್ಲಿಡಿಸಿ ಅವನು ಮಿಸಿಕಾಡದಂತೆ ಮಾಡಿದರೆ ತೀರಿತು. ಈ ಕೆಲಸವನ್ನು ನನ್ನ ಪಕ್ಷದ ಅಲ್ಲಿಯ ಜನರು ಸಹಜವಾಗಿ ಮಾಡುವರು. ಒಳ್ಳೇದು, ಕಾರ್ಯಸಾಧನಕ್ಕೆ ಒಂದಲ್ಲ-ಎರಡಲ್ಲ, ಹಲವು ಉಪಾಯಗಳಿರುವವು. ಅವುಗಳಲ್ಲಿ ಶಕ್ಯಕಂಡ ಉಪಾಯದಿಂದ ಕಾರ್ಯವನ್ನು ಸಾಧಿಸಿದ

ರಾಯಿತು, ಎಂದು ಯೋಚಿಸಿ, ಸೋಯರಾ ಬಾಯಿಯು ರಾತ್ರಿಯ ಊಟಮಾಡಿ ಸಮಾಧಾನದಿಂದ ಆ ರಾತ್ರಿಯನ್ನು ಕಳೆದಳು.

ಮರುದಿವಸ ಬೆಳಗಾಯಿತು. ಇತ್ತ ಮಹಾರಾಜರು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಸದರಿನ ಮೇಲೆ ಆಲೋಚಿಸುತ್ತ ಕುಳಿತಿದ್ದರು. ಅವರ ಜೀವಕ್ಕೆ ಸೊಗಸಿದ್ದಿಲ್ಲ. ಗೃಹಕಲಹ ಉಂಟಾದದ್ದೂ, ಅರಮನೆಯಲ್ಲಿ ಬಗೆಬಗೆಯ ಒಳಸಂಚುಗಳು ನಡೆದದ್ದೂ ಅವರಿಗೆ ಗೊತ್ತಾಗಿತ್ತು; ಅದರಲ್ಲಿ ಸಂಭಾಜಿಯನ್ನು ಊರಿಗೆ ಕಳಿಸಿದ ದಿನ ಬೆಳಗು ಮುಂಜಾನೆ ಶುಕ್ರಗ್ರಹವು ಕಾಣುವದಕ್ಕಿಂತ ಬಹಳ ದೊಡ್ಡದಾಗಿ ತಮ್ಮ ಕಣ್ಣಿಗೆ ಕಂಡದ್ದು ಉತ್ಪಾತದ ಲಕ್ಷಣವಾಗಿ ಮಹಾರಾಜರಿಗೆ ತೋರಿತು. ಅದರಿಂದಂತು ಅವರಿಗೆ ಮತ್ತಿಷ್ಟು ಅಸಮಾಧಾನ ವಾಗಿತ್ತು, ಹೀಗೆ ನಕ್ಷತ್ರಾದಿಗಳು, ಕಾಣುವದಕ್ಕಿಂತ ದೊಡ್ಡವು ಕಾಣುವದೂ, ಕಾಣದ ಹಾಗಾಗುವದೂ ಮರಣ ಸೂಚಕಗಳಾಗಿರಬಹುದೇ ಎಂದು ಅವರು ಯೋಚಿಸತೊಡಗಿದ್ದರು. ಅಷ್ಟರಲ್ಲಿ ಸದರ ಜೋಯಿಸರು ಬಂದರು. ನಿತ್ಯಕ್ರಮದಂತೆ ಪಂಚಾಂಗ ಶ್ರವಣಾದಿಗಳು ಆದಬಳಿಕ, ಶುಕ್ರನಕ್ಷತ್ರದ ಸಂಗತಿಯನ್ನು ಮಹಾರಾಜರು ಜ್ಯೋತಿಷಿಗಳಿಗೆ ತಿಳಿಸಿದರು. ಜ್ಯೋತಿಷಿಯಮೇಲೆ ಮಹಾರಾಜರ ವಿಶ್ವಾಸ ಬಹಳ. ಕೊಂಕಣದೊಳಗಿನ ವರಖೇಡ ಜ್ಯೋತಿಷಿಗಳ ಮನೆತನದ ಆ ಪ್ರಸಿದ್ಧ ಜ್ಯೋತಿಷಿಯು ದೇವತಾ ಔಪಾಸಕನೂ, ಜ್ಯೋತಿಶ್ಶಾಸ್ತ್ರ ಪ್ರವೀಣನೂ, ಸ್ಪಷ್ಟವಕ್ತಾನೂ ಇದ್ದನು. ಆತನು ಹೇಳಿದ ಎಷ್ಟೋ ಮಾತುಗಳು ನಿಜವಾದದ್ದು ಮಹಾರಾಜರ ಅನುಭವವಕ್ಕೆ ಬಂದಿತ್ತು, ಆದ್ದರಿಂದ ''ಇದು ಅನಿಷ್ಟ ಸೂಚಕವು'' ಎಂದು ಜ್ಯೋತಿಷಿಯು ಈಗ ಹೇಳಿದ್ದರಿಂದ ಮಹಾರಾಜರಿಗೆ ಬಹಳ ಅಸಮಾಧಾನವಾಯಿತು. ಶುಕ್ರನಕ್ಷತ್ರವು ಹೀಗೆ ದೊಡ್ಡದಾಗಿ ಕಾಣುವದು ಮರಣಸೂಚಕವೆಂದೂ, ಮಹಾರಾಷ್ಟ್ರರಾಜ್ಯ ವಿಘಾತಕ ಸೂಚಕವೆಂದೂ ಜ್ಯೋತಿಷಿಯು ಸ್ಪಷ್ಟವಾಗಿ ಹೇಳಿದನು. ಆದ್ದರಿಂದ ಮಹಾರಾಜರು ಚಿಂತೆಯಿಂದ ಲೋಡಿಗೆ ಆತು ಕುಳಿತಿದ್ದರು. ಅಷ್ಟರಲ್ಲಿ ರಾಜವೈದ್ಯರೂ ಬಂದರು. ನಿತ್ಯದಂತೆ ಮಹಾರಾಜರ ಪ್ರಕೃತಿಯನ್ನು ನೋಡುವದಾಯಿತು. ಪ್ರಕೃತಿಮಾನದ ವಿಚಾರವಾಯಿತು. ಬಳಿಕ ಮಹಾರಾಜರು ಬಹು ಖಿನ್ನರಾಗಿರುವದರ ಕಾರಣವನ್ನು ವಿಚಾರಿಸಲು, ಜ್ಯೋತಿಷಿಗಳು ಎಲ್ಲ ವೃತ್ತಾಂತವನ್ನು ಹೇಳಿದರು. ಅದನ್ನು ಕೇಳಿ ವೈದ್ಯರ ಮುಖವು ಗಂಭೀರವಾಯಿತು. ಮುನ್ನಾದಿನ ಸೋಯರಾಬಾಯಿಯಲ್ಲಿ ಹೊರಟ ವಿಷದ ಪ್ರಶಕ್ತಿಯ ಸ್ಮರಣವಾಗಿ, ಒಟ್ಟಿಗೆ ಲಕ್ಷಣವು ನೆಟ್ಟಗೆ ಕಾಣುವದಿಲ್ಲವೆಂದು ವೈದ್ಯರೂ ಚಿಂತೆಗೊಳಗಾದರು. ಅತ್ತ ಜ್ಯೋತಿಷಿಗಳೂ ಆಲೋಚಿಸ ತೊಡಗಿದ್ದರು. ಹೀಗೆ ಎಲ್ಲರೂ ಅಸಮಾಧಾನದಿಂದ, ಕುಳಿತುಕೊಂಡಿದ್ದರು. ಮಹಾರಾಜರಿಗೆ ತಮ್ಮ ಮರಣದ ಚಿಂತೆಗಿಂತ ಮಹಾರಾಷ್ಟ್ರ ರಾಜ್ಯವಿಘಾತದ ಚಿಂತೆಯು ಬಹಳವಾಗಿ ಬಾಧಿಸುತ್ತಲಿತ್ತು, ಹೀಗೆ ಎಲ್ಲರೂ ಮೌನದಿಂದ ಕುಳಿತಿರಲು, ವೈದ್ಯರು ಔಷಧಸಿದ್ಧ ಮಾಡಿ ಅದನ್ನು ಸ್ವತಃ ಮಹಾರಾಜರಿಗೆ ಕೊಡುವಾಗ ''ಔಷಧಂ ಜಾನ್ಹವೀತೋಯಂ ವೈದ್ಯೋ ನಾರಾಯಣೋ ಹರಿಃ'' ಎಂದು ನುಡಿದು ಕೊಟ್ಟರು. ಮಹಾರಾಜರು ಅದನ್ನು ತೆಗೆದು ಕೊಂಡರು. ಆಗ ವೈದ್ಯರ ಮುಖದಿಂದ ನಿತ್ಯಕ್ರಮದಂತೆ— ''ನವೈದ್ಯಾಃ ಪ್ರಭೂರಾಯುಷಃ''

ಎಂಬ ವಾಗ್ಭಟಗ್ರಂಥದೊಳಗಿನ ವಚನವೂ ಹೊರಟಿತು. ವೈದ್ಯರೇನು ಆಯುಷ್ಯ ಹಾಕುವದಿಲ್ಲೆಂಬ ಸಾಮಾನ್ಯ ಜನರಲ್ಲಿಯ ಮಾತಿನ ಅರ್ಥವನ್ನೇ ಈ ವಚನವು ಹೇಳುತ್ತದೆ. ಈ ವಚನವು ಇಂದು ಮಹಾರಾಜರ ಚಿಂತೆಯನ್ನು ಮತ್ತಿಷ್ಟು ಹೆಚ್ಚಿಸಿತು; ಆದರೂ ಆ ಧೀರೋದಾತ್ತ ಪುರುಷನು ತನ್ನ ಚಿಂತೆಯನ್ನು ಹತ್ತಿಟ್ಟುಕೊಂಡು ಜ್ಯೋತಿಷಿಗಳ ಸಂಗಡಲೂ, ವೈದ್ಯರ ಸಂಗಡಲೂ ಮಾತಾಡತೊಡಗಿದನು; ಮಹಾರಾಜರಿಗೆ ಅಂತರಂಗದಲ್ಲಿ ಸಮಾಧಾನ ವಿದ್ದಿಲ್ಲೆಂಬದು ಗೊತ್ತಾಗುವಹಾಗಿತ್ತು, ಆಗ ವೈದ್ಯರು ಮಹಾರಾಜರನ್ನು ಕುರಿತು— ಪ್ರಭುಗಳಿಗೆ ಹೇಳುವ ಯೋಗ್ಯತೆ ನನ್ನದಲ್ಲ, ಎಲ್ಲ ರೋಗಗಳಲ್ಲಿ ಚಿಂತಾರೋಗವು ಕೆಟ್ಟದೆಂದು ವೈದ್ಯಶಾಸ್ತ್ರವು ಹೇಳುವದು. ಚಿಂತೆಯು ಅಗ್ನಿಸಮಾನವು ಅಗ್ನಿಯು ಒಮ್ಮೆಲೆ ಮನುಷ್ಯನನ್ನು ಸುಟ್ಟರೆ,ಚಿಂತೆಯು ಸಾವಕಾಶವಾಗಿ ಶರೀರವನ್ನು ಕ್ಷೀಣಮಾಡಿ ಕಡೆಗೆ ಮೃತದೇಹವನ್ನು ಚಿತೆಗೆ ಒಪ್ಪಿಸುವದು. ಕಾಲಕ್ಕನುಸರಿಸಿ ಆಗುವದು ತಪ್ಪುವದಿಲ್ಲ, ನಮ್ಮಂಥ ಸಾಮಾನ್ಯಜನರಿಗಿಂತ ಅರಸದಾರವರಿಗೆ ಚಿಂತೆ ಬಹಳ. ಅವರಿಗೆ ಹೊಸ ಹೊಸ ರಾಜ್ಯಗಳಿಸುವದೊಂದು ಚಿಂತೆ, ಇದ್ದ ರಾಜ್ಯವ ರಕ್ಷಿಸಕೊಳ್ಳುವದೊಂದು ಚಿಂತೆ! ಈ ಎರಡು ಚಿಂತೆಗಳಲ್ಲದೆ ಗೃಹಕಲಹವು ಉದ್ಭವಿಸಿದ್ದೊಂದು ಚಿಂತೆಯು ಮಹಾರಾಜರನ್ನು ಈಗ ಬಾಧಿಸಲು ಹೊಂಚುಹಾಕಿರುವಂತೆ ತೋರುತ್ತದೆ ಎಂದು ನುಡಿದು, ಮುನ್ನಾದಿನ ಸೋಯರಾಬಾಯಿಯ ಮನೆಯಲ್ಲಿನಡೆದ ವಿಷದಪ್ರಸಕ್ತಿಯನ್ನು ಒಂದೂ ಬಿಡದೆ ಹೇಳಿದನು. ಬಳಿಕ ಆ ಸ್ವಾಮಿನಿಷ್ಠನು ಜ್ಯೋತಿಷಿಗಳ ಕಡೆಗೆ ತಿರುಗಿ—ನೀವು ಮಹಾರಾಜರ ಕುಂಡಲಿಯನ್ನು ನೋಡಿರುವಿರೋ? ಎಂದು ಕೇಳಿದನು. ಅದಕ್ಕೆ ಜ್ಯೋತಿಷಿ ಗಳು—ನೋಡಿದ್ದೇನೆ; ಮಹಾರಾಜರಿಗೆ ಈಗ ಸಾಮಾನ್ಯಕಾಲವಿದೆ. ಮುಚ್ಚಿ ಇಟ್ಟುಕೊಳ್ಳು ವದರಿಂದ ಹಿತವಾಗದ್ದರಿಂದ ಸ್ಪಷ್ಟವಾಗಿ ಹೇಳುತ್ತೇನೆ. ಸಾಪತ್ನಬಂಧುಗಳ ಪರಸ್ಪರ ಕಲಹದಿಂದ ಮಹಾರಾಜರಿಗೂ, ಮಹಾರಾಷ್ಟ್ರದ ರಾಜ್ಯಕ್ಕೂ ಹಾನಿತಟ್ಟುವ ಸಂಭವವಿರುತ್ತದೆಂದು ಕುಂಡಲಿಯ ಮೇಲಿಂದ ಹೊರಡುತ್ತದೆ; ತೀರ ಹತ್ತರದ ಆಪ್ತರಿಂದ ಮಹಾರಾಜರಿಗೆ ವಿಷ ಪ್ರಯೋಗವಾಗುವ ಅಂಜಿಕೆಯಿರುವದು. ಅನ್ನಲು, ಮಹಾರಾಜರು ಆತುರದಿಂದ— ''ಅದಕ್ಕೇನು ಪ್ರತಿಕಾರೋಪಾಯಗಳಿಲ್ಲವೋ?'' ಎಂದು ಕೇಳಿದರು. ಅದಕ್ಕೆ ಜ್ಯೋತಿಷಿಯು— ಉಂಟು; ಹಲವು ಪ್ರತೀಕಾರೋಪಾಯಗಳನ್ನು ಶಾಸ್ತ್ರಕಾರರು ಹೇಳಿರುವರು. ಮೃತ್ಯುಂಜಯ ಜಪ, ಗ್ರಹಯಜ್ಞ ಮಹಾರುದ್ರ ಮೊದಲಾದವುಗಳನ್ನು ಮಾಡಿಸುವದರಿಂದ ಅಪಮೃತ್ಯುವಿದ್ದ ಪ್ರಸಂಗದಲ್ಲಿ ಅದರ ನಿವಾರಣವಾಗಬಹುದು; ಆದರೆ ಕಾಲಮೃತ್ಯುವಿಗೆ ಉಪಾಯವೇನು ನಡೆಯುವದು? ಆದರೂ ಸತ್ಕರ್ಮಗಳಿಂದ ಒಂದಿಲ್ಲೊಂದು ಬಗೆಯ ಲಾಭಗಳುಂಟು; ಆದ್ದರಿಂದ ಜಪಾದಿ ಅನುಷ್ಠಾನಗಳನ್ನು ಅವಶ್ಯವಾಗಿ ಆರಂಭಿಸಬೇಕು. ಎಂದು ಹೇಳಿದನು.

ಆಮೇಲೆ ಗೃಹಕಲಹದ ಸಂಬಂಧದಿಂದಲೂ, ಸಾಪತ್ನಬಂಧುಗಳ ಮಾತ್ಸರ್ಯದ ಸಂಬಂಧದಿಂದಲೂ ಅವರಲ್ಲಿ ಹಲವು ಮಾತು ಕಥೆಗಳು ನಡೆದವು. ಕಡೆಗೆ ಶಿವರಾಯನು— ರಾಜ್ಯಪ್ರಾಪ್ತಿಯೂ, ರಾಜ್ಯರಕ್ಷಣವೂ,ರಾಜ್ಯನಾಶವೂ ಕಲಹಮೂಲವಾಗಿಯೇ ಇರುವದರಿಂದ ಅರಸನಾದವನು ಕಲಹಗಳಿಗೆ ಅಂಜಲಾಗದು; ಆದರೂ ಗೃಹಕಲಹವು ಭಯಂಕರವಾದದು.

ಅದು ನಿವಾರಣವಾಗಲಿಕ್ಕೆ ಬಹಳ ಚಾತುರ್ಯಬೇಕಾಗುತ್ತದೆ. ಗೃಹಕಲಹವು ಬಾಯಲ್ಲಿ ಹಾಕಿಕೊಂಡ ಬಿಸಿತುಪ್ಪದಂತೆ ಇರುವದು. ಉಗುಳಿದರೆ ತುಪ್ಪವು ವ್ಯರ್ಥವಾಗುತ್ತದೆ, ಉಗುಳ ದಿದ್ದರೆ ಬಾಯಿಸುಡುತ್ತದೆನ್ನುವಂತೆ, ಗೃಹಕಲಹದ ಮಾತಿರುವದು. ಗೃಹಕಲಹವನ್ನು ಹುಂಬತನದಿಂದ ಮುರಿದರೆ ಸಂಸಾರಸುಖವು ಹಾಳಾಗುತ್ತದೆ; ಅದನ್ನು ನಡೆಯಗೊಟ್ಟರೆ ಸಂಸಾರದ ನಾಶವಾಗುತ್ತದೆ; ಆದ್ದರಿಂದ ಗೃಹಪತಿಯಾದವನು ಸರ್ವರ ಹಿತಕ್ಕೆ ಲಕ್ಷಗೊಟ್ಟು ತನ್ನ ತಪ್ಪುಗಳನ್ನು ತಿದ್ದಿಕೊಂಡು, ಸಹನಶೀಲತೆಯಿಂದ ತನ್ನ ವರ್ಚಸ್ಸು ಶಿಥಿಲವಾಗಗೊಡದೆ ಪ್ರೇಮದಿಂದಲೂ, ದರ್ಪದಿಂದಲೂ ಅದನ್ನು ಸಾವಕಾಶ ಮುರಿಯ ಬೇಕಾಗುವದು! ನಾವಂತು ರಾಜ್ಯರೂಪವಿಶಾಲ ಗೃಹದಲ್ಲಿರುವವರು. ನಾವು ಇದೇ ವಿಧದಿಂದ ನಮ್ಮ ಸಾಪತ್ನಬಂಧುಗಳಾದ ವೆಂಕೋಜಿರಾಯರ ಕಲಹವನ್ನು ನಂದಿಸಿದೆವು. ಈಗಾದರೂ ಸಂಭಾಜಿ–ರಾಜಾರಾಮರ ನಡುವಿನ ಕಲಹವನ್ನು ಅದರಂತೆಯೇ ಬಗೆಹರಿಸಬೇಕೆಂದು ಮಾಡಿದ್ದೇವೆ; ಆದರೆ ಅದು ಸಾವಕಾಶವಾಗತಕ್ಕ ಕೆಲಸವು. ನಮಗೆ ಆಯುಷ್ಯವಿರಬೇಕು. ಸಂಭಾಜಿಯು ಹಿರಿಯನಾದ್ದರಿಂದ ಆತನು ಇತ್ತಕಡೆಯ ರಾಜ್ಯದ ವ್ಯವಸ್ಥೆ ಮಾಡಬೇಕು. ರಾಜಾರಾಮನು ಚಿಕ್ಕವನಾದದ್ದರಿಂದ ಜಿಂಜಿಯಕಡೆಯ ರಾಜ್ಯದ ವ್ಯವಸ್ಥೆ ಮಾಡಬೇಕು; ಹೀಗಾದರೆ ಕಲಹ ಶಾಂತವಾಗುವದು; ಆದರೆ ಇದು ಒಮ್ಮೆಲೆ ಆಗತಕ್ಕ ಕೆಲಸವಲ್ಲ, ಸಂಭಾಜಿಗೆ ಚಿಕ್ಕಂದಿನಿಂದ ನಮ್ಮ ಸಹವಾಸದ ಲಾಭವಾಗಿರುವದರಿಂದ ಆತನಲ್ಲಿ ಶೌರ್ಯಾದಿ ಸದ್ಗುಣಗಳ ಅಭಿವೃದ್ಧಿಯಾಗಿರುವಂತೆ ನಮ್ಮ ದುರ್ದೈವದಿಂದ ಆತನಲ್ಲಿ ಹಲವು ದುರ್ಗುಣಗಳೂ ಪ್ರಬಲವಾಗಿರುವವು. ಆತನಲ್ಲಿಯ ದಾಯಾದಿತನಕ್ಕಿಂತ ಆತನಲ್ಲಿರುವ ಹಟಮಾರಿತನದ ಅಂಜಿಕೆಯು ನಮಗೆ ಬಹಳ ಇರುತ್ತದೆ. ನಿನ್ನೆಯೇ ನಾವು ಆತನಿಗೆ ಉಪದೇಶ ಮಾಡಿರುವೆವು. ವೃತ್ತಿಯು ತಿದ್ದುವ ಚಿನ್ಹವು ತೋರುತ್ತದೆ. ಇನ್ನ ಕೆಲವು ದಿನ ಆತನನ್ನು ಪಲ್ಹಾಳಗಡದಲ್ಲಿಯೇ ಇಟ್ಟು ಆಮೇಲೆ ಆತನ ಕೈಯಿಂದ ಸ್ವತಂತ್ರವಾಗಿ ಹಲವು ರಾಜಕಾರಣದ ಕೆಲಸಗಳನ್ನು ಮಾಡಿಸಿಕೊಂಡು ಅನುಭವಪಡೆಯುವ ವಿಚಾರಮಾಡಿದ್ದೇವೆ. ಮಕ್ಕಳು ಪ್ರಬುದ್ಧರಾದ ಬಳಿಕ ಮುದುಕರಾದವರು ಎಲ್ಲ ಕಾರಭಾರ ಗಳನ್ನು ಅವರಿಗೆ ಒಪ್ಪಿಸಿ ತಾವು ಈಶ ಚಿಂತನದಲ್ಲಿ ಕಾಲಕ್ರಮಣ ಮಾಡುತ್ತ ಹಿರಿಯರಿದ್ದಾ ರೆಂದು ಧೈರ್ಯವಿರುವಂತೆ ನಡೆದುಕೊಂಡರಾಯಿತು.

ಹೀಗೆ ಮಾತು ನಡೆದಿರುವಾಗ ಅಕಸ್ಮಾತ್ ಬಾಳಾಜಿ ಆವಜಿಯು ಅಲ್ಲಿಗೆ ಬರಲು ಆ ಮಾತು ಅಲ್ಲಿಗೇ ನಿಂತಿತು. ಬಾಳಾಜಿಯು ಮಹಾರಾಜರನ್ನು ನಮಸ್ಕರಿಸಿ ಕುಳಿತುಕೊಂಡನು. ಮಹಾರಾಜರು— ಬಾಳಾಜೀ, ಶ್ರೀಸಮರ್ಥರ ಕಡೆಗೆ ಕಳಿಸುವ ಸನದಿನ ಕೆಲಸವು ಎಲ್ಲಿಗೆ ಬಂದಿತು ಎಂದು ಕೇಳಲು, ಬಾಳಾಜಿಯು–ಸನದು ಬರೆದು ಪೂರ್ಣವಾಗಿದೆ. ಸನ್ನಿಧಿಯಲ್ಲಿ ಓದಿತೋರಿಸಿದ ಬಳಿಕ ಶಿಕ್ಕಾಮೋರ್ತಬು ಮಾಡಿ ಕಳಿಸುವದಷ್ಟು ಉಳಿದಿರುವದು; ಆದರೆ ಸನದು ಎಂದು ಕಳಿಸಲಿಕ್ಕೆ ಅಪ್ಪಣೆಯಾಗುವದು? ಎಂದು ಕೇಳಲು, ಗುರುಭಕ್ತನಾದ ಶಿವರಾಯನು— ವಿಜಯಾದಶಮಿಯ ಸುಮುಹೂರ್ತದಲ್ಲಿಯೇ ಸನದು ಬರೆದಿರುವದರಿಂದ

ಅದನ್ನು ಕಳಿಸಲಿಕ್ಕೆ ಮತ್ತೆ ಮುಹೂರ್ತ ನೋಡುವ ಅವಶ್ಯವಿಲ್ಲ. ಬೇಕಾದಾಗ ಕಳಿಸಬಹುದು. ''ಶುಭಸ್ಯಶೀಘ್ರ'' ಎಂದು ಹೇಳಿರುವದರಿಂದ ನಾಳೆಗೇ ಕಳಿಸಿಬಿಡಿರಿ. ದೇಹವು ಅಶಾಶ್ವತವಾದದ್ದು. ಬಹುದಿವಸಗಳಿಂದ ಮಾಡಬೇಕೆಂದಿದ್ದ ಗುರುಸೇವೆಯ ಸಂಕಲ್ಪವು ಒಮ್ಮೆ ಪೂರ್ಣವಾಗಿ ಹೋಗಲಿ. ಹೂ! ಓದಿರಿ, ಒಮ್ಮೆ ಸನದು ಪೂರ್ಣವಾಗಿ ಓದಿಬಿಡಿರಿ, ಎಂದು ಹೇಳಲು, ಬಾಳಾಜಿಯು ಸಂಪೂರ್ಣವಾಗಿ ಸನದನ್ನು ಓದಿದನು.

ಶ್ರೀಸಮರ್ಥ ರಾಮದಾಸಸ್ವಾಮಿಗಳ ಕೃಪೆಯಿಂದಲೇ ತನ್ನ ಸಾಮ್ರಾಜ್ಯಸ್ಥಾಪನೆಯ ಕಾರ್ಯವು ಆಯಿತೆಂಬ ದೃಢ ವಿಶ್ವಾಸವು ಶಿವರಾಯನಿಗಿದ್ದದ್ದರಿಂದ ಏನಾದರೂ ತನ್ನಿಂದ ಗುರುಸೇವೆಯು ಘಟಿಸಬೇಕೆಂದು ಆತನು ಒಮ್ಮೆ ಸಮರ್ಥರನ್ನು ಬೇಡಿಕೊಂಡನು. ಅದಕ್ಕೆ ಆ ನಿಸ್ಪೃಹಮೂರ್ತಿಯು— ಶಿವಬಾ, ಎಂಥ ಹುಚ್ಚನಪ್ಪಾ ನೀನು! ಹಿಂದಕ್ಕೆ ನೀನು ನಮಗೆ ರಾಜ್ಯಭಿಕ್ಷೆಯನ್ನು ಹಾಕಿದಾಗ ಆ ರಾಜ್ಯವನ್ನು ನಾವು ನಿನಗೆ— ''ನಮ್ಮದೇ ಎಂದು ತಿಳಿದು ನೀನು ಧರ್ಮದಿಂದ ಆಳೆ''ಂದು ಹೇಳಿ ಕೊಟ್ಟಿರುವದಿಲ್ಲವೆ? ಅಂದಬಳಿಕ ನಮ್ಮ ರಾಜ್ಯದೊಳಗಿಂದ ನೀನು ನಮಗೆ ತಿರುಗಿಕೊಡುವದೇನು? ಆದರೆ ನಿನ್ನ ಆಗ್ರಹವು ಬಹಳವಿರುವದರಿಂದ, ಚಾಫಳದಲ್ಲಿಯ ಶ್ರೀರಾಮಮಂದಿರದ ವ್ಯವಸ್ಥೆಯ ಸಲುವಾಗಿ ಏನದಾರೂ ಕೊಟ್ಟು ಸಮಾಧಾನ ಪಡುವೆಯಂತೆ; ಆದರೆ ಈಗಬೇಡ; ನಾನು ಹೇಳಿದಾಗ ಕೊಡು, ಎಂದು ಹೇಳಿದ್ದರು. ಅದರ ತರುವಾಯ ಶಿವರಾಯನು ಬಹಳ ಸಾರೆ ಗುರುಗಳನ್ನು ಕೇಳಿದರೂ, ಅದಕ್ಕೆ ಅವರು— ''ಈಗ ಬೇಡ, ನಾನು ಹೇಳಿದಾಗ ಕೊಡು'' ಎಂಬ ಒಂದೇ ಉತ್ತರವನ್ನು ಹೇಳುತ್ತ ಬಂದಿದ್ದರು. ಗುರುಗಳ ಅಪ್ಪಣೆಯಂತೆ ನಡೆಯುವದು ಶಿವರಾಯನಿಗೆ ಹಿತಕರವಾಗಿತ್ತು; ಆದರೆ ಹಾಗೆ ನಡೆಯುವದು ಆತನಿಗೆ ಸಾಧಿಸಲಿಲ್ಲ. ಆತನು ಗುರುಗಳ ಮಾತಿಗೆ ಮಹತ್ವ ಕೊಡದೆ, ಅವರು ಅತ್ಯಂತ ನಿಸ್ಪೃಹ ರಾದ್ದರಿಂದ ಹಾಗೆ ಸುಮ್ಮನೆ ನೆವಹೇಳಿ ತಪ್ಪಿಸುವರೆಂದು ಆತನು ಕಲ್ಪಿಸಿದನು. ಅದರಲ್ಲಿ ಅವರಿಗೆ ಈಗ ಅಶಕ್ತಿಯಾದದ್ದರಿಂದ ಕೊಡುವದನ್ನು ಈಗ ಕೊಟ್ಟು ಬಿಡಬೇಕೆಂದು ನಿಶ್ಚಯಿಸಿ ವಿಜಯಾದಶಮಿಯ ಸುಮುಹೂರ್ತದಲ್ಲಿ ಸನದು ಬರೆಸಿದರು. ಮಗನ ದುರ್ವರ್ತನ, ಸೋಯರಾಬಾಯಿಯ ಕಾಟ, ಗೃಹಕಲಹವು ದಿನದಿನಕ್ಕೆ ಹೆಚ್ಚಾಗುವ ಲಕ್ಷಣ ಇವುಗಳಲ್ಲಿ ಬೇನೆಯೊಂದು ಕೂಡಿಕೊಳ್ಳಲು, ಶಿವರಾಯನ ಮನಸ್ಸಿನಲ್ಲಿ ಕೆಟ್ಟ ಕಲ್ಪನೆಯುಂಟಾಗಿ, ಇದೊಂದು ಸತ್ಕೃತ್ಯವು ನನ್ನ ಜನ್ಮವಿರುವದರೊಳಗಾಗಿ ಆಗಲೆಂದು ಅವಸರ ಮಾಡಿದನು. ಈ ಪ್ರಸಂಗದಲ್ಲಿ ಗುರುಗಳ ಆಜ್ಞೆ ಮೀರಿದ್ದು ಶಿವರಾಯನ ದೊಡ್ಡ ಅಪರಾಧವೇ ಸರಿ. ''ವಿನಾಶಕಾಲೇ ವಿಪರೀತ ಬುದ್ಧಿಃ'' ಎನ್ನುವಂತೆ ಆತನಿಂದ ಸದುದ್ದೇಶದಿಂದಲೇ ಆಗಲೊಲ್ಲದೇಕೆ, ಇದೊಂದು ವಿಪರೀತಕಾರ್ಯವು ಘಟಿಸದಂತಾಯಿತು; ಈ ಮಾತಿನ ಸತ್ಯತೆಯು, ಮುಂದೆ ಸಮರ್ಥರು ಸನದನ್ನು ಶ್ರೀರಾಮನ ಮುಂದೆ ಇಡಹೇಳಿದಾಗ ತೆಗೆದ ಉದ್ಗಾರದಿಂದ ವಾಚಕರಿಗೂ ಗೊತ್ತಾಗಬಹುದು ಇರಲಿ, ಮೇಲೆ ಹೇಳಿದಂತೆ ಶಿಕ್ಕಾಮೋರ್ತಬು ಮಾಡಿ ಈ ಸನದನ್ನು ನಾಳೆಗೇ ಕಳಿಸಿಬಿಡಿರಿ, ಎಂದು ಮಹಾರಾಜರು ಸಂತೋಷದಿಂದ ಹೇಳಿದರು. ಇಷ್ಟೆಲ್ಲ

ಆಗುವದರೊಳಗೆ ಹೊತ್ತು ಬಹಳವಾದದ್ದರಿಂದ ಮಹಾರಾಜರು ಆ ಮೂವರಿಗೂ ಇಲ್ಲಿಯೇ ಭೋಜನವಾಗಲೆಂದು ಹೇಳಿದ್ದರಿಂದ, ಅವರೆಲ್ಲರು ಕೈಮುಗಿದು ಹಾಗೇ ಆಗಲೆಂದು ಭೋಜನ ಗೃಹಕ್ಕೆ ತೆರಳಿದರು.

## ದುರಾಲೋಚನೆಗಳು!

ಶ್ರೀ ಸಮರ್ಥ ರಾಮದಾಸಸ್ವಾಮಿಗಳು 'ಚಾಫಳ'ದಲ್ಲಿ ಸ್ಥಾಪಿಸಿದ ಶ್ರೀರಾಮಮಂದಿರ ಮೊದಲಾದವುಗಳ ಸಲುವಾಗಿ ಸನದು ಬರೆಸಿ ಶಿಕ್ಕಾಮೊಹರು ಮಾಡಿದ ಬಗ್ಗೆ ಶಿವರಾಯನಿಗೆ ಸಂತೋಷವಾದದ್ದನ್ನು ಹಿಂದಿನ ಪ್ರಕರಣದಲ್ಲಿ ಹೇಳಿದೆಯಷ್ಟೇ? ಆ ವಿಸ್ತಾರವಾದ ಸನದಿನ ಭಾಷಾಂತರವನ್ನು ಇಲ್ಲಿ ಕೊಡುವ ಅವಶ್ಯವಿಲ್ಲ; ಶಿವರಾಯನಂಥ ಧರ್ಮಾತ್ಮನು ಔದಾರ್ಯ ದಿಂದ ತನ್ನ ಯೋಗ್ಯತೆಗೆ ಒಪ್ಪುವಂತೆ ನೂರಾರು ಊರುಗಳನ್ನೂ, ಹೊಲಗಳನ್ನೂ ಇನಾಮಾಗಿ ಹಾಕಿಕೊಟ್ಟನೆಂಬದನ್ನಿಷ್ಟೇ ನಾವು ಹೇಳಿಬಿಡುವೆವು. ಹೀಗೆ ಶಿವಭೂಪತಿಯು ಧರ್ಮಕಾರ್ಯ ಮಾಡಿದ್ದರ ಸಾತ್ವಿಕಾನಂದವನ್ನು ಅನುಭವಿಸಿದ ಅದೇ ರಾಯಗಡದಲ್ಲಿ, ಮುಂದೆ ಸರಾಸರಿ ಒಂದು ತಿಂಗಳ ಮೇಲೆ ಅದೇ ಧರ್ಮಾತ್ಮನ ಹೆಂಡತಿಯಾದ ಸೋಯರಾಬಾಯಿಯು, ತನ್ನ ದುಷ್ಟ ಆಲೋಚನೆಯು ಸಾಧಿಸಿತೆಂದು ಆನಂದಪಡುತ್ತಿದ್ದಳು. ಆಕೆಯು ತನ್ನ ಮಂದಿರದಲ್ಲಿ ಕುಳಿತಿರುವಾಗ ತನ್ನೊಳಗೆ— ''ಸುಭಾನನು ಏನೇನೋ ಸಾಹಸಮಾಡಿ ಕಡೆಗೆ ವಿಷದ ಡಬ್ಬಿ ಯನ್ನು ಕೊಟ್ಟದ್ದರಿಂದ ನನ್ನ ಮನೋದಯವು ಬಹುಮಟ್ಟಿಗೆ ಸಾಧಿಸದಂತಾಯಿತು. ಅದನ್ನು ಪಲ್ಲಾಳಗಡಕ್ಕೆ ಸುಭಾನನ ಕೈಯಿಂದಲೇ ಕಳಿಸಿಕೊಟ್ಟಿರುವದರಿಂದ ಬೇಗನೆ ಅದು ಉಮಾಜಿಯ ಕೈಸೇರುವದು. ವಿಷವು ಕೈಸೇರಿದ ಕೂಡಲೆ ನನ್ನ ಪತ್ರದಂತೆ ಹಿರೋಜಿಯು ಸುಭಾನನನ್ನು ತಡಮಾಡದೆ ಗೊತ್ತಿಗೆ ಹಚ್ಚಿರಬಹುದು. ಇತ್ತ ಸುಭಾನನ ಹೆಂಡತಿಯ ವ್ಯವಸ್ಥೆ ಯನ್ನು ನಾನು ಮಾಡಿಸುವೆನು. ಹೀಗೆ ಮಾಡದಿದ್ದರೆ ಅವರಿಬ್ಬರು ವಿಷದ ಕಳವಿನ ಸಾಕ್ಷಿಗಳಾಗ ಬಹುದು. ರಾಜಾರಾಮನು ಪಟ್ಟವೇರುವದರೊಳಗಾಗಿ ಹೀಗೆ ಎಷ್ಟು ಕೊಲೆಗಳಾಗುವವೋ? ಇರಲಿ. ಅತ್ತ ಉಮಾಜಿಯಂತು ತನ್ನ ಕೆಲಸವನ್ನು ಸಾಧಿಸಿಯೇ ಸಾಧಿಸುವನು. ಉಮಾಜಿಯ ಚಾತುರ್ಯ ದಿಂದ ಶಂಭ್ಯಾನಿಗೆ ವಿಷಪ್ರಯೋಗವಾಗಿ, ಅವನ ನಾಶವಾದರಂತೂ ಸಂತೋಷವೆ. ಒಂದು ಪಕ್ಷದಲ್ಲಿ ಅದು ಸಾಧಿಸದಿದ್ದರೆ ನನ್ನ ಆಜ್ಞಾಪತ್ರವು ಮುಟ್ಟಿದಕೂಡಲೆ ಆ ದುಷ್ಟ ಶಂಭ್ಯಾನನ್ನು ಸೆರೆಹಿಡಿಯುವದಕ್ಕಾಗಿ ಹಿರೋಜಿ ಫರ್ಜಂದ, ಸೋನಾಜಿನಾಯಿಕ ಬಂಕಿ, ಸೂರ್ಯಾಜಿಕಂಕ ಇವರಿಗೆ ಗುಪ್ತ ಪತ್ರಗಳನ್ನೂ, ದೊಡ್ಡ ದೊಡ್ಡ ಇನಾಮುಗಳನ್ನೂ ನಾನು ಕಳಿಸಿರುವೆನು. ಅವರು ತಮ್ಮ ತಮ್ಮ ಸೈನ್ಯಗಳೊಡನೆ ಗುಪ್ತರೀತಿಯಿಂದ ನನ್ನ ಪಕ್ಷವನ್ನು ವಹಿಸಿದ್ದು, ಬಹಿರಂಗದಲ್ಲಿ ಆ ದುಷ್ಟ ಶಂಭ್ಯಾನ ಪಕ್ಷದವರಾಗಿರುವರು. ರಾಮಚಂದ್ರಪಂತ, ಅನಾಜಿದತ್ತೋ ಈ ಪ್ರಮುಖ ಮುತ್ಸದ್ದಿಗಳು ನನ್ನ ಪಕ್ಷದವರಾಗಿರುವರು. ಈ ಮುತ್ಸದ್ದಿಗಳ

ಸಹಾಯದಿಂದಲೇ ಮುಖ್ಯ ಸೇನಾಪತಿಯಾದ ಹಂಬೀರರಾವ ಮೋಹಿತೆಯನ್ನು ನನ್ನ ಕಡೆಗೆ ಮಾಡಿಕೊಳ್ಳುವೆನು; ಅಂದಬಳಿಕ ಶಂಭ್ಯಾನು ಸಿಂಹಾಸನವೇರುವ ಬಗೆಯೇನು? ಇತ್ತಕಡೆಯ ದೇಹಸ್ಥಿತಿಯು ದಿನದಿನಕ್ಕೆ ಕ್ಷೀಣವಾಗುತ್ತಲಿದೆ. ನನಗಂತು ಲಕ್ಷಣವು ನೆಟ್ಟಗೆ ಕಾಣುವದಿಲ್ಲ. ಇಲ್ಲಿ ಏನಾದರೂ ಅಸ್ತವ್ಯಸ್ತವಾದರೆ, ಕೂಡಲೆ ಶಂಭ್ಯಾನನ್ನು ಸೆರೆಯಲ್ಲಿರಿಸಿ ರಾಜಾರಾಮನನ್ನು ಪಟ್ಟಕ್ಕೆ ಕುಳ್ಳಿರಿಸುವೆನು. ನನ್ನ ಯತ್ನವು ಫಲಿಸುವ ಸುಯೋಗವಿದ್ದಂತೆ ತೋರುತ್ತದೆ. ಇಲ್ಲದಿದ್ದರೆ ಹೀಗೆ ಒಂದರಹಿಂದೊಂದು ಪ್ರಸಂಗಗಳು ನನಗೆ ಅನುಕೂಲಿಸಿ ಒದಗುತ್ತಿದ್ದಿಲ್ಲ. ಈ ಕಾರ್ಯದಲ್ಲಿ ನೀರಿನಂತೆ ದುಡ್ಡು ಮಾತ್ರ ವೆಚ್ಚಮಾಡಬೇಕಾಗಿರುವದು. ಆಗಲಿ, ದುಡ್ಡು ವೆಚ್ಚಮಾಡಿದ ಹೊರತು ಲೋಕಸಂಗ್ರಹ ವಾಗುವದಿಲ್ಲ. ಇಂದು ಸಂಜೆಗೆ ವಿಷವು ಪಲ್ಹಾಳಗಡಕ್ಕೆ ಮುಟ್ಟುವದು, ನಾಳಿಗೇ ಅದರ ಪ್ರಯೋಗವಾಗುವದು. ಅದರಂತೆ ನಾನು ಪತ್ರವನ್ನು ಬರೆದಿರುವೆನು.

ಈ ಮೇರೆಗೆ ಆಲೋಚಿಸುತ್ತ ಪಲ್ಹಾಳಗಡದ ಸುದ್ದಿಯು ಏನು ಬರುವದೆಂಬುದರ ಹಾದಿಯ ನೋಡುತ್ತ ಸೋಯರಾಬಾಯಿಯು ಚಿಂತೆಯ ಆತುರದಿಂದ ಕಾಲಹರಣಮಾಡ ಹತ್ತಿದಳು. ಅತ್ತ ಪಲ್ಹಾಳಗಡದಲ್ಲಿ ಬೇರೊಂದು ಪ್ರಕಾರವು ಒದಗಿತು. ಸುಭಾನನು ವಿಷದ ಡಬ್ಬಿಯನ್ನು ಪಲ್ಹಾಳಗಡಕ್ಕೆ ಒಯ್ದು ಅದನ್ನು ದುರ್ಗಾಧಿಪತಿಯಾದ ಹಿರೋಜಿಫರ್ಜಂದನ ಕೈಯಲ್ಲಿ ಕೊಟ್ಟನು; ಅದನ್ನು ಹಿರೋಜಿಯು ಗುಪ್ತರೀತಿಯಿಂದ ಉಮಾಜಿಗೆ ಮುಟ್ಟಿಸಿದನು. ಇನ್ನು ಹೊತ್ತು ಸಾಧಿಸಿ ಉಮಾಜಿಯು ಅದನ್ನು ಸಂಭಾಜಿಗೆ ಹಾಕತಕ್ಕವನು; ಆದರೆ ಆ ಮಾತು ಸುಲಭವಾಗಿ ಸಾಧಿಸುವಹಾಗಿದ್ದಿಲ್ಲ. ವಿಷಪ್ರಯೋಗದ ಅಂಜಿಕೆಯಿಂದ ಸಂಭಾಜಿಯು ಯಾವ ಪದಾರ್ಥವನ್ನೂ ಪರೀಕ್ಷಿಸದೆ ಗ್ರಹಣ ಮಾಡುತ್ತಿದ್ದಿಲ್ಲ. ಹೀಗೆ ಪದಾರ್ಥಗಳನ್ನು ಪರೀಕ್ಷಿಸಿ ಸ್ವೀಕರಿಸುವದು ಅರಸರ ಸಾಂಪ್ರದಾಯವೇ ಇರುವದು. ಸಂಭಾಜಿಯು ತಾನು ಸೇವಿಸತಕ್ಕ ಪದಾರ್ಥಗಳನ್ನು ಉಮಾಜಿಗೆ, ಆಮೇಲೆ ಕಲುಷನಿಗೆ ಕೊಟ್ಟು, ಅವರ ಮೇಲೆ ಏನೂ ದುಷ್ಪರಿಣಾಮವಾಗದ್ದನ್ನು ಮನಗಂಡು ಆಮೇಲೆ ತಾನು ಸ್ವೀಕರಿಸುತ್ತಿದ್ದನು. ಹೀಗಿರುವಾಗ ಅದೇ ದಿನ, ಅಂದರೆ ಸುಭಾನನು ವಿಷದ ಡಬ್ಬಿಯನ್ನು ತಂದು ಕೊಟ್ಟದಿನ ಸಂಭಾಜಿಯು ಕಲುಷನೊಡನೆ ಮದ್ಯಪಾನಮಾಡಲನು ವಾದನು. ಆಗ ಮೂರುತಾಸು ರಾತ್ರಿಯಾಗಿರ ಬಹುದು. ಉಮಾಜಿಯು ಎಲ್ಲ ಸಿದ್ಧತೆಯನ್ನು ಮಾಡಿದ್ದನು. ಬಂಗಾರದ ತಗಡು ಕೂಡಿಸಿದ ಒಂದು ಸುಂದರವಾದ ಚೌರಂಗದಮೇಲೆ ಒಂದು ಮದ್ಯ ತುಂಬಿದ ಪಾತ್ರೆಯನ್ನೂ, ಒಂದು ಗುಲಾಬಿಯ ಸರಬತ್ತು ತುಂಬಿದ ಪಾತ್ರೆಯನ್ನೂ ಇಟ್ಟು, ಅವೆರಡರ ನಡುವೆ ಬಂಗಾರದ ಗುಡಿಗುಡಿಯನ್ನು ಇಟ್ಟಿದ್ದನು. ಚೌರಂಗದ ಮೇಲೆ ಮದ್ಯಕುಡಿಯುವ ಎರಡು ಬಂಗಾರದ ಪಾತ್ರೆಗಳಿದ್ದವು. ಇವಲ್ಲದೆ ತಾಂಬೂಲದ ತಬಕ ಒಂದು ಇತ್ತು. ಸಂಭಾಜಿಯು ಬಿಳಿಯ ಬೆಳ್ಳಿಯ ಪಾತ್ರೆಯಲ್ಲಿ ಮದ್ಯವನ್ನು ಸುರುವಿನ, ಅದರಲ್ಲಿ ಗುಲಾಬಿಯ ಸರಬತ್ತನ್ನು ಹಾಕಿ ಮೊದಲು ಉಮಾಜಿಗೆ ಕೊಟ್ಟನು. ಉಮಾಜಿಯು ಕುಡಿದ ಸ್ವಲ್ಪ ಹೊತ್ತಿನ ಮೇಲೆ, ಅದರಂತೆಯೇ ಬಂಗಾರದ ಪಾತ್ರೆಯಲ್ಲಿ ಮದ್ಯವನ್ನು ಹಾಕಿ ಕಲುಷನಿಗೆ ಕೊಟ್ಟನು. ಕಲುಷನು

ಅದನ್ನು ಕುಡಿದು ಬಳಿಕ ಮದ್ಯಪಾನದ ಸಮಾರಂಭಕ್ಕೆ ಆರಂಭವಾಯಿತು. ಮದ್ಯಪಾನದ ವಿಷಯದಲ್ಲಿ ಸಂಭಾಜಿಯು ಹೆಸರಾದವನು,ಭಯಂಕರವಾದ ಈ ದುರ್ವ್ಯಸನದಿಂದಲೇ ಅವನ ನಾಶವಾದದ್ದಲ್ಲದೆ, ಮಹಾರಾಷ್ಟ್ರ ರಾಜ್ಯವೂ ನಾಶದ ಪಂಥವನ್ನು ಹಿಡಿದಿತ್ತು. ಇರಲಿ, ಹೀಗೆ ಮದ್ಯಪಾನವು ಭರದಿಂದ ನಡೆದಿರುವಾಗ ಕಲುಷನು ಸಂಭಾಜಿಯನ್ನು ಕುರಿತು—

ಕಲುಷ—ಮಹಾರಾಜ, ರಾಯಗಡದಲ್ಲಿ ಒಳಸಂಚುಗಳು ಬಹಳ ನಡೆದಿರುವಂತೆ ತೋರುತ್ತದೆ. ರಾಣೀಸಾಹೇಬರ ಕಡೆಯಿಂದ ಜನರು ಗುಪ್ತವಾಗಿ ಬರುವದು ಹೋಗುವದು ಬಹಳವೆಂದು ನಮ್ಮ ಗುಪ್ತಚಾರನು ತಿಳಿಸುತ್ತಾನೆ; ಆದರೆ ಮಹಾರಾಜರ ಸಿಟ್ಟು ತಮ್ಮ ಮೇಲೆ ಇರುವದಿಲ್ಲವಷ್ಟೆ? ದಸರೆಯದಿವಸ ಅವರು ಮಾಡಿದ ಬೋಧದಿಂದ ನೀವೇನು ತರ್ಕಿಸಿರುವಿರಿ?

ಸಂಭಾಜಿ—ನಮ್ಮ ಮೇಲಿನ ಆಬಾಸಾಹೇಬರ ಸಿಟ್ಟು ಸಂಪೂರ್ಣವಾಗಿ ಹೋಗಿರ ದಿದ್ದರೂ, ಅವರು ನನ್ನನ್ನು ಬೋಧಿಸುವಾಗ, ನೀವು ಮುಂದೆ ಅರಸರಾಗತಕ್ಕ ವರಿದ್ದದ್ದರಿಂದ ಬಹು ಜಾಗರೂಕರಾಗಿ ನಡೆಯತಕ್ಕದ್ದು. ಎಂಬಿವೇ ಮೊದಲಾದ ಆಡಿದ ಮಾತುಗಳಿಂದ ನನ್ನ ಮೇಲಿನ ಅವರ ಪ್ರೇಮವು ಯತ್ಕಿಂಚಿತ್ತಾದರೂ ಕಡಿಮೆಯಾಗಿರುವದಿಲ್ಲೆಂಬ ಅನುಭವವು ನನಗೆ ಬಂದಿತು; ಆದರೆ........

ಕಲುಷ—ಅದಕ್ಕಂತೆ ನಾನು ಕೇಳುವದು. ಆಬಾಸಾಹೇಬರ ಪ್ರೇಮವು ಸಂಪೂರ್ಣ ವಾಗಿ ನಿಮ್ಮ ಮೇಲೆ ಇದ್ದ ಪಕ್ಷದಲ್ಲಿ, ಸೋಯರಾಬಾಯಿ ಸಾಹೇಬರ ಸಂಬಂಧವಾಗಿ ತಾವು ಚಿಂತೆಮಾಡುವ ಕಾರಣವೇನು? ತಾವು ಅಂಜುವದು ಆಬಾಸಾಹೇಬರಿಗೇ ಅಲ್ಲವೇ?

ಸಂಭಾಜಿ—ಅದರಲ್ಲಿ ಸಂಶಯವೇನು? ಮುಖ್ಯ ನಮ್ಮ ಮೇಲೆ ಆಬಾಸಾಹೇಬರ ಪ್ರೇಮ ವಿದ್ದರಾಯಿತು; ಆದರೂ ಸೋಯರಾಬಾಯಿಯು ಸಾಮಾನ್ಯಮನುಷ್ಯಳಲ್ಲ; ಒಳ್ಳೇಕಾರ ಸ್ಥಾನಿಯು; ಯಾವಾಗ ಏನು ಮಾಡ್ಯಾಳೆಂಬದರ ನಿಯಮವಿಲ್ಲ; ಆದ್ದರಿಂದ ನಾವು ಬಹು ಜಾಗರೂಕರಾಗಿರಬೇಕಾಗುವದು. ನಾನು ತೀರ ಚಿಕ್ಕವನಿರುವಾಗಲೇ ನಮ್ಮ ಮಾತೃಶ್ರೀ ಯವರು ತೀರಿಕೊಳ್ಳಲು, ಆ ರಾಜಾರಾಮನ ತಾಯಿಗೆ ಮಾಹಾರಾಣಿಯ ಪದವಿಯು ಪ್ರಾಪ್ತ ವಾಯಿತು. ಅದರಿಂದಲೇ ಸಾಪತ್ನಭಾವವು ಉತ್ಪನ್ನವಾಗಿದೆ. ಯಾವದೊಂದು ಉಪಾಯದಿಂದ ಅದರ ನಿವಾರಣವಾಗದಿದ್ದರೆ, ಹಿರಿಯರಿಂದ ಸಂಪಾದಿಸಲ್ಪಟ್ಟಿರುವ ರಾಜ್ಯದ ಉಪಭೋಗವನ್ನು ಸಮಾಧಾನದಿಂದ ಮಾಡಲಿಕ್ಕೆ ನಮಗೆ ಸರ್ವಥಾ ಆಸ್ಪದವು ದೊರೆಯಲಾರದು; ಅಥವಾ ನಮ್ಮ ಜನ್ಮವಿರುವತನಕ ಹೀಗೆ ಈ ಪಲ್ಹಾಳಗಡದ ಸೆರೆಯಲ್ಲಿಯೇ ಕೊಳೆಯುವ ಪ್ರಸಂಗ ಬರಬಹುದು.

ಕಲುಷ— ಛೇ ಛೆ, ಮಹಾರಾಜ, ಹೀಗೆ ನಿರಾಶೆಪಡುವದೇಕೆ? ನನ್ನ ಮಾಂತ್ರಿಕ ಶಕ್ತಿಯ ಬಲದಿಂದ ನಾಲ್ಕಾರು ತಿಂಗಳೊಳಗೇ ನಿಮ್ಮ ರಾಜ್ಯಾರೋಹಣಕ್ಕೆ ವಿಘ್ನವಾಗುವ ಕಾಲಸರ್ಪವನ್ನು ರಕ್ತಕಾರಿ ಸಾಯುವಂತೆ ಮಾಡುವೆನು. ಆಮೇಲೆಯಾದರೂ ನಿಮಗೆ ಸಮಾಧಾನ ವಾಗಬಹುದೆ?

ಸಂಭಾಜಿ—(ಶಾಂತಚಿತ್ತದಿಂದ) ಕಬಜೀ, ನಿಮ್ಮ ಮಾತಿನ ಭಾವವು ನನಗೆ ತಿಳಿಯಿತು. ರಾಜಾರಾಮನ ವಿಷಯವಾಗಿ ಇಷ್ಟು ನಿಷ್ಠುರವಿಚಾರವು ನನ್ನ ಹೃದಯದಲ್ಲಿ ಉತ್ಪನ್ನವಾಗ ಬಹುದೆಂದು ನೀವು ಹ್ಯಾಗೆ ತಿಳಿದುಕೊಂಡಿರಿ? ನಾನು ಆಬಾಸಾಹೇಬರ ಹೊಟ್ಟೆಯಲ್ಲಿ ಹುಟ್ಟಿರುವಂತೆ, ಆತನೂ ಆಬಾಸಾಹೇಬರ ಹೊಟ್ಟೆಯಲ್ಲಿಯೇ ಹುಟ್ಟಿರುವನು. ತಾಯಂದಿರು ಇಬ್ಬರಾದರೇನಾಯಿತು? ತಂದೆ ಒಬ್ಬನಲ್ಲವೆ? ನಾವಿಬ್ಬರೂ ಒಂದೇಬೀಜದ ಅಂಕುರ ಗಳಾಗಿರುವೆವು. ರಾಜಾರಾಮನ ಜೀವಕ್ಕಾದ ಅಪಾಯವು ನಮ್ಮ ಜೀವಕ್ಕಾದ ಹಾಗೆಯೇ ಸರಿ. ಹೀಗಿರಲು, ರಾಜಾರಾಮನನ್ನು ಘಾತಿಸುವದೆಂದರೆ, ಆತ್ಮಘಾತ ಮಾಡಿಕೊಂಡ ಹಾಗಲ್ಲವೆ? ನಿಮ್ಮ ಮಂತ್ರವಿದ್ಯೆಯನ್ನು ಇಂಥ ನೀಚಕೆಲಸದಲ್ಲಿ ಉಪಯೋಗಿಸಿಕೊಂಡರೆ ದೇವರು ಮೆಚ್ಚ ಬಹುದೇ? ಮೇಲಾಗಿ ರಾಜಾರಾಮನು ಸಜ್ಜನನು.

ಯುವರಾಜರ ಈ ಮಾತುಗಳನ್ನು ಕೇಳಿ ಕಬಜಿಯು ಆಶ್ಚರ್ಯಪಟ್ಟನು. ಕಲುಷನಿಗೆ ಕಬಜಿಯೆಂತಲೂ ಹೆಸರುಂಟು. ಕವಿಜಿ ಇದರ ತದ್ಭವವು ಕಬಜಿಯಾಗಿರುವದು. ಸಂಭಾಜಿಯು ಕಲುಷನನ್ನು ಕಬಜಿಯಂತಲೇ ಕರೆಯುತ್ತಿದ್ದದ್ದರಿಂದ, ಇನ್ನುಮೇಲೆ ನಾವಾದರೂ ಹಾಗೆಯೇ ಕರೆಯೋಣ. ಸಂಭಾಜಿಯು ಈ ನೀತು ಸಂಪನ್ನತೆಯ ಔದಾರ್ಯದ ಮಾತುಕೇಳಿ ಕಬಜಿಯು ನಾಚಿ, ಮುಂದೇನು ಮಾತಾಡಬೇಕೆಂಬದನ್ನು ತಿಳಿಯಲಾರದೆ ವಿಚಾರ ಮಾಡುತ್ತ ಸುಮ್ಮನೆ ಕುಳಿತುಕೊಂಡನು. ಅದನ್ನು ನೋಡಿ ಸಂಭಾಜಿಯು—

ಸಂಭಾಜಿ—ಯಾಕೆ ಕಬಜಿ, ವಿಚಾರವೇನು ಮಾಡುವಿರಿ? ನಾವು ಕೇಳಿದ ಪ್ರಶ್ನವು ಅನ್ಯಾಯದ್ದೋ?

ಕಬಜಿ—ಅನ್ಯಾಯದ್ದು ಹ್ಯಾಗಾದೀತು ಮಹಾರಾಜ? ಭ್ರಾತೃಹತ್ಯವು ಪಾತಕವೇಸರಿ; ಆದರೆ ಆ ಮಾರ್ಗವನ್ನು ಅನುಸರಿಸದಿದ್ದರೆ, ನಿಮ್ಮ ಮಾರ್ಗವನ್ನು ನಿಷ್ಕಂಟಕವಾಗಿ ಮಾಡುವ ಬೇರೆ ಉಪಾಯವು ಯಾವದಿರುವದು? ರಾಜಾರಾಮನು ಜೀವದಿಂದಿದ್ದು, ಮಾಹಾರಾಣಿಯ ಪದವಿಯು ಸೋಯಾರಾಬಾಯಿಯವರ ಕಡೆಗಿರುವವರೆಗೆ, ತಮ್ಮ ಸಿಂಹಾಸನಾರೋಹಣದ ಸರಳ ಮಾರ್ಗವು ರಕ್ತಮಾಂಸಗಳ ಕೆಸರುಳ್ಳದ್ದಾಗುವ ಸಂಭವವಿರುತ್ತದೆಂದು ನನಗೆ ತೋರುತ್ತದೆ.

ಸಂಭಾಜಿ—ನೀವನ್ನುವದು ನಿಜವು; ಆದರೆ ಆಬಾಸಾಹೇಬರ ಮೇಲೆ ರಾಣೇಸಾಹೇಬ ರವರ ವರ್ಚಸ್ಸು ಕೂಡದಂತೆ ಮಾಡಿ, ನಾನು ಹಿರಿಯನೆಂಬ ಕಾರಣದಿಂದ ಮಹಾರಾಷ್ಟ್ರದ ಸಿಂಹಾಸನವನ್ನು ಸಂಪಾದಿಸುವ ನ್ಯಾಯದ ಉಪಾಯ ಮಾಡಿದರೆ ಹ್ಯಾಗೆ?

ಕಬಜಿ—ಮಹಾರಾಜ, ಈ ಉಪಾಯವು ಕೊನೆಗಾಣುವದು ನನಗಂತು ಅಸಂಭವ ವಾಗಿ ಕಾಣುತ್ತದೆ; ಯಾಕಂದರೆ ತಮ್ಮದೊಂದು ಪಕ್ಷವು ಕಡಿಮೆಯಾಗಿರುವದು. ಔರಂಗಜೇಬನು ತಾನು ದುರ್ಬಲ ಪಕ್ಷದವನಾಗಿದ್ದಾಗ ದಿಲ್ಲಿಯ ಬಾದಶಹನಾದ ಉದಾಹರಣವು ಕಣ್ಣೆದು ರಿಗಿರುವದಲ್ಲವೆ?

ಸಂಭಾಜಿ—ಏನಂದಿರಿ? ಆ ನೀಚ ಯವನನಂತೆ ಅಣ್ಣತಂತಮ್ಮಂದಿರನ್ನು ಕೊಲ್ಲಿಸಿ, ತಂದೆಯನ್ನು ಸೆರೆಯಲ್ಲಿಟ್ಟು ಸಿಂಹಾಸನವೇರಲು ನನಗೆ ಸೂಚಿಸುವಿರಾ? ನಾನು ಆರ್ಯನು!

ರಾಮದಾಸರ ನಿಜವಾದ ಶಿಷ್ಯನು! ಇಂಥವನ ಮುಂದೆ ನೀವು ಕೊಲೆಗಡುಕನ ಉದಾಹರಣ ವಿಡಬಹುದೇ? ಇದು ಬಹು ಆಶ್ಚರ್ಯದ ಸಂಗತಿಯು! ಕಬಜಿ, ನನ್ನನ್ನೇನು ನೀವು ಕ್ರೂರ ತೋಳವೆಂದು ತಿಳಿದಿರುವಿರೋ ಏನು!

ತಾನು ಸೂಚಿಸಿದ ಈ ಎರಡನೆಯ ಉಪಾಯವೂ ವ್ಯರ್ಥವಾದದ್ದಲ್ಲದೆ, ಸಂಭಾಜಿಯು ಸ್ವಲ್ಪ ಮನಸ್ಸಿಗೆ ಹಚ್ಚಿಕೊಂಡು ನಿಜವಾದ ಮರಾಟನಿಗೆ ಒಪ್ಪುವಂತೆ ಮಾತಾಡಿದ್ದನ್ನು ಕೇಳಿ ಕಬಜಿಯು ಕುಂಠಿತನಾಗಿ ಮೋರೆತಗ್ಗಿಸಿದನು. ಆತನು ಏನೂ ಮಾತಾಡದೆ ಸುಮ್ಮನೆ ಕುಳಿತು ಬಿಟ್ಟದ್ದನ್ನು ನೋಡಿ ಸಂಭಾಜಿರಾಜನು ಮತ್ತೆ ಆತನನ್ನು ಕುರಿತು—

ಸಂಭಾಜಿ—ಕಬಜಿ, ನಿಮ್ಮ ಈ ನೀಚ ಉಪಾಯವನ್ನು ನೆನಿಸಿ ನನಗೆ ಬಹಳ ಅಸಮಾಧಾನವಾಯಿತು. ಸದ್ಯಕ್ಕೆ ಆಬಾಸಾಹೇಬರು ರೋಗಪೀಡಿತರಾಗಿರುವರು. ದೇವರ ದಯದಿಂದ ಬೇಗನೆ ಅವರಿಗೆ ನೆಟ್ಟಗಾದ ಬಳಿಕ, ಅವರು ಈ ಮೊದಲೆ ದಕ್ಷಿಣದಲ್ಲಿ ದಿಗ್ವಿಜಯಮಾಡಿದಂತೆ, ಉತ್ತರ ದಿಗ್ವಿಜಯಕ್ಕೆ ಹೊರಟಾಗ ಅವರೊಡನೆ ದಂಡೆತ್ತಿಹೋಗಿ, ನನ್ನ ಈ ಖಡ್ಗದ ಸಹಾಯದಿಂದ ಅಲ್ಲಿ ಪರಾಕ್ರಮವನ್ನು ಪ್ರಕಟಿಸಿ, ಹಿಂದಕ್ಕೆ ಔರಂಗಜೇಬನು ನಮ್ಮ ತಂದೆ ಮಕ್ಕಳನ್ನು ಸೆರೆಯಲ್ಲಿಡಿಸಿದ ಸೇಡನ್ನು ತೀರಿಸಿಕೊಳ್ಳಬೇಕೆಂದು ನಾನು ಮನಸ್ಸಿನಲ್ಲಿ ಯೋಚಿಸಿರುವೆನು; ಅದನ್ನು ನೀವೇನು ಬಲ್ಲಿರಿ? ಈ ಮಾರ್ಗದಿಂದ ನಾನು ಆಬಾಸಾಹೇಬರ ವಿಶ್ವಾಸಕ್ಕೆ ಪಾತ್ರನಾದಬಳಿಕ, ರಾಜ್ಯಾರೋಹಣದ ನನ್ನ ರಾಜಮಾರ್ಗವು ನಿಷ್ಕಂಟಕ ವಾಗಲಿಕ್ಕಿಲ್ಲವೋ?

ಕಬಜಿ—(ಕೈ ಜೋಡಿಸಿ)ಸರಕಾರ, ತಮ್ಮ ಯುಕ್ತಿವಾದವೂ, ಉದ್ದೇಶವೂ, ಸ್ತುತ್ಯ ವಾಗಿರುವವು; ಆದರೆ ಅವು ಫಲಿಸಲಿಕ್ಕೆ ದೊಡ್ಡ ವಿಘ್ನವಿರುವದೆಂದು ನನಗೆ ತೋರುತ್ತದೆ.

ಸಂಭಾಜಿ—ಅದೇನು ವಿಘ್ನವು?

ಕಬಜಿ—ಬೇರೆ ವಿಘ್ನವೇನಿರಬೇಕು? ಸೋಯರಾಬಾಯಿಸಾಹೇಬರೇ ಆ ವಿಘ್ನವು. ಅವರು ಬದುಕಿದ್ದು ಮಹಾರಾಜರ ಕಿವಿಯನ್ನು ನಿಮ್ಮ ವಿರುದ್ಧವಾಗಿ ಊದುತ್ತಿರುವವರೆಗೆ ನಿಮ್ಮ ಈ ಮನಸ್ಸಿನೊಳಗಿನ ವಿಚಾರಗಳೆಲ್ಲ ಮನಸ್ಸಿನಲ್ಲಿಯೇ ಉಳಿಯುವವು.

ಸಂಭಾಜಿ—ಅದರ ಚಿಂತೆಮಾಡುವ ಕಾರಣವಿಲ್ಲ, ಬಾಳಾಜಿಆವಜಿಯವರು ನನಗೆ ನಿಜವಾದ ಸಂಗತಿಯನ್ನು ತಿಳಿಸಿದ್ದಾರೆ. ಸೋಯರಾಬಾಯಿ ಸಾಹೇಬರವರಮೇಲೆ ಈಗ ಆಬಾಸಾಹೇಬರ ಪ್ರೇಮವಿಲ್ಲವಂತೆ. ಈ ವಿತುಷ್ಟತೆಯುಂಟಾಗಲಿಕ್ಕೂ ನಾನೇ ಕಾರಣನಂತೆ. ಮಹಾರಾಜರು ಬಹುದಿವಸಗಳಿಂದ ರಾಣೇಸಾಹೇಬರ ಬಳಿಗೆ ಹೋಗುವದನ್ನೇ ಬಿಟ್ಟುಬಿಟ್ಟಿ ರುವರೆಂದು ಚೀಟಣೀಸರು ಬರೆದಿದ್ದಾರೆ.

ಕಬಜಿ—ಇರಬಹುದು, ಆದರೆ ಇದೇ ಸ್ಥಿತಿಯು ಕಡೆತನಕ ಉಳಿಯುವದೆಂದು ತಿಳಿಯ ಬೇಡಿರಿ. ಸ್ತ್ರೀಚಾರಿತ್ರ್ಯವು ಯಾರಿಗೂ ತಿಳಿಯದು. ದೇವಾನುದೇವತೆಗಳೂ ಸ್ತ್ರೀಜಾಲದಲ್ಲಿ ಸಿಕ್ಕಿರುವರು; ಅಂದಬಳಿಕ ಮನುಷ್ಯರ ಪಾಡೇನು? ಇಂದು ಪ್ರತಿಕೂಲವಾಗಿದ್ದ ಮಹಾರಾಜರನ್ನು ಮಹಾರಾಣೀ ಸಾಹೇಬರು ನಾಳೆ ಅನುಕೂಲ ಮಾಡಿಕೊಳ್ಳಬಹುದು;

ಯಾಕಂದರೆಅವರ ಮಹಾರಾಣೀ ಪದವೇ ಅಷ್ಟು ಮಹತ್ವದ್ದಾಗಿರುವದು. ಅವರು ಅಂತಃಪುರದಲ್ಲಿದ್ದು ಸೂತ್ರಚಾಲನ ದಿಂದ ಬೇಕಾದದ್ದನ್ನು ಅಲ್ಲಾಡಿಸಬಹುದು.

ಸಂಭಾಜಿ—ಅಹುದು, ನೀನನ್ನುವದು ಸುಳ್ಳಲ್ಲ, ಅಂತಃಪುರದಲ್ಲಿ ವಿಷಪ್ರಯೋಗಾದಿಗಳ ಗೊಂದಲವು ಬಹಳವಿರುವದು; ಆದರೆ ಅದರ ವ್ಯವಸ್ಥೆಯನ್ನು ನಾವು ಜಾಗರೂಕತೆಯಿಂದ ಮಾಡಿರುವೆವಲ್ಲವೆಯ ಕಬಜಿ—ಹೀಗೆ ಜಾಗರೂಕರಿದ್ದವರೂ ನೆಲೆಗಾಣದೆ ಹೋದ ಉದಾಹರಣಗಳು ಹಲವು ಇರುವವು. ನನಗಂತು ವಿಷಬಾಧೆಯು ಸಂಶಯವು ಬಹಳ ಬರುತ್ತದೆ. ನಮ್ಮ ಘಾತಮಾಡುವವರು ನಮ್ಮ ಹತ್ತರವೇ ಇರಬಹುದು.

ಸಂಭಾಜಿ–ಹಾಗಾದರೆ ನೀವು ಇದಕ್ಕೇನು ಹಂಚಿಕೆ ಹೇಳುವಿರಿ? ಇತ್ತ ಆ ಮದ್ಯದ ಪಾತ್ರೆಯನ್ನು ಕೊಡಿರಿ; ಮಾತಿನ ಭರದಲ್ಲಿ ಮರೆತು ಬಿಟ್ಟೇವು.

ಈ ಮೇರೆಗೆ ಸಂಭಾಷಣವು ನಡೆದಿರುವಾಗ ''ಮಧ್ಯೇ ಮಧ್ಯೇ ಸ್ವಾದೂದಕಂ'' ಎಂಬಂತೆ ಮದ್ಯಪ್ರಾಶನದ ಸಡಗರವು ಸಾಗಿಯೇ ಇತ್ತು, ಮದ್ಯಪ್ರಾಶನಾನಂತರ ಗುಡುಗುಡಿ ಸೇದುವದು; ಆಮೇಲೆ ತಾಂಬೂಲಸೇವನ; ಹೀಗೆ ಆವೃತ್ತಿಯ ಮೇಲೆ ಆವೃತ್ತಿಗಳು ಅವ್ಯಾಹತವಾಗಿ ನಡೆದಿದ್ದವು. ಇವರ ಸಂಭಾಷಣವನ್ನು ಕೇಳುತ್ತಿದ್ದ ಉಮಾಜಿಯ ಎದೆಯೊಡೆದು ನೀರಾಯಿತು. ಭಯದಿಂದ ಅವನ ಮೈಯು ಜೋರೆಂದು ಬೆವಿತಿತು. ತನ್ನ ಬಳಿಯಲ್ಲಿದ್ದ ವಿಷದ ಡಬ್ಬಿಯನ್ನು ದೂರ ಬೀಸಾಡಬೇಕೆಂದು ಆತನು ಮಾಡಿದನು; ಆದರೆ ಯಾವ ಕಾರಣದಿಂದಲೋ ಅದನ್ನು ಹಾಗೆ ಚಲ್ಲಿಕೊಡಲಿಲ್ಲ, ಅತ್ತ ಆ ವ್ಯಸನಲಂಪಟರಿಬ್ಬರು ಯಥೇಚ್ಛವಾಗಿ ಗುಡುಗುಡಿಯನ್ನು ಸೇದಿದ ಬಳಿಕ, ಕಬಜಿಯು ಸಂಭಾಜಿಯನ್ನು ಕುರಿತು—''ಮಹಾರಾಜ, ಒಂದು ಯುಕ್ತಿಯು ನನಗೆ ತೋಚಿರುವದು. ಅದನ್ನು ತಮ್ಮ ಮುಂದೆ ಹೇಳಲಿಕ್ಕೆ ಭಯ ಬರುತ್ತಿದ್ದರೂ, ಈ ಮೊದಲೆ ಸೂಚಿಸಲು ಧೈರ್ಯಮಾಡಿದಂತೆ ಈಗಲೂ ಧೈರ್ಯ ಮಾಡುವೆನು. ಸೋಯರಾಬಾಯಿಯವರ ಮೇಲೆ ಮಹಾರಾಜರ ಪ್ರೇಮವಿಲ್ಲೆಂದು ನೀವು ಹೇಳುವಿರಿ; ಮತ್ತು ಅವರು ಬಹು ಕುಟಿಲರೆಂಬದರ ಅನುಭವವೂ ನಿಮಗಾಗಿದೆ; ಅಂದಬಳಿಕ ಅವರನ್ನು ಈ ಜಗತ್ತಿನೊಳಗಿಂದ ಇಲ್ಲದಂತೆ.......

ಈ ಮೇರೆಗೆ ಕಬಜಿಯು ನುಡಿಯುತ್ತಿರಲು ಸಂಭಾಜಿಯು ನಡುವೇ ತಡೆದು—ಕಬಜಿ, ಸಾಕುಬಿಡಿರಿ; ನೀವು ಹೇಳುವ ಯುಕ್ತಿಯು ಗೊತ್ತಾಯಿತು! ಏನು? ನನಗೆ ಮಾತೃಹತ್ಯ ಮಾಡ ಹೇಳುವಿರಾ? ಮಾತೃಹತ್ಯೆಯಂಥ ಘೋರ ಕರ್ಮ ಮಾಡಿ ಯಾವ ನರಕಕ್ಕೆ ಹೋಗಲಿ? ಇಂಥ ಬಾಳಿಗೆ ಧಿಕ್ಕಾರವಿರಲಿ ಸೋಯರಾಬಾಯಿ ಸಾಹೇಬರ ಹೊಟ್ಟೆಯಿಂದ ನಾವು ಹುಟ್ಟದಿದ್ದರೂ ಅವರು ನಮ್ಮ ತಾಯಿಯಲ್ಲೇನು? ಆಬಾಸಾಹೇಬರ ಹೆಂಡಿರೆಲ್ಲ ನಮಗೆ ಮಾತೃಸಮಾನರು! ಕಬಜಿ, ನೀವು ಹೇಳಿದ ಮೂರು ಉಪಾಯಗಳೂ ಧರ್ಮಬಾಹಿರವಾದದ್ದರಿಂದ, ನಮ್ಮಂಥ ವೀರ ಕ್ಷತ್ರಿಯರು ಆಚರಿಸತಕ್ಕವಲ್ಲ; ಇಂಥ ಕ್ಷುಲ್ಲಕ ಸಂಕಟಗಳೊಳಗಿಂದ ಪಾರಾಗಿ ಹೋಗುವ ಯೋಗ್ಯ ಹಂಚಿಕೆ ಹೇಳಲಾರದ ನೀವು, ನಾಳೆ ನಾವು ನಿಮಗೆ ಮುಖ್ಯಮಂತ್ರಿಯ ಪದವಿಯನ್ನು ಕೊಟ್ಟಾಗ ರಾಜ್ಯಕಾರಭಾರವನ್ನು ಗದ್ದಲವಿಲ್ಲದಂತೆ ಹ್ಯಾಗೆ ಸಾಗಿಸುವಿರಿ? ಇರಲಿ,

ವಿಚಾರಮಾಡಿ ಯೋಗ್ಯ ಉಪಾಯವನ್ನು ಸಾವಕಾಶವಾಗಿ ಸೂಚಿಸಿರಿ ಎಂದು ಹೇಳಿ, ಉಮಾಜಿಯನ್ನು ಕರೆದರು. ಆಗ ಉಮಾಜಿಯ ಪ್ರಾಣಗಳು ನೆತ್ತಿಯಿಂದಲೇ ಹೋದವು. ''ಕಳ್ಳನ ಜೀವ ಹುಳ್ಳ ಹುಳ್ಳಗೆ'' ಎಂಬಂತೆ, ಕಬಜಿಯು ನಮ್ಮ ಘಾತ ಮಾಡುವವರು ನಮ್ಮ ಹತ್ತರವೇ ಇರಬಹುದು'' ಎಂದು ಅಂದದ್ದು ಉಮಾಜಿಯ ಅಂಜಿಕೆಯನ್ನು ಮತ್ತಿಷ್ಟು ಹೆಚ್ಚಿಸಿತು. ತನ್ನ ದ್ರೋಹವು ಕಬಜಿಗೆ ಗೊತ್ತಿರಬಹುದೇ? ಆತನ ಸೂಚನೆಯಿಂದಲೇ ಮಹಾರಾಜರು ನನ್ನನ್ನು ಈಗ ಕರೆದಿರಬಹುದೇನು? ಎಂದು ಶಂಕಿಸುತ್ತ ಹೊರಗೆ ಬಂದನು. ಆಗ ಅವನು ಭಯದಿಂದ ನಡುಗುತ್ತಿದ್ದನು; ಅವನ ಮೋರೆಯು ನಿಸ್ತೇಜವಾಗಿತ್ತು, ಅದನ್ನು ನೋಡಿ ಸಂಭಾಜಿಯು— ''ಉಮಾಜಿ, ಯಾಕೆ? ಇಷ್ಟು ಯಾಕೆ ಅಂಜುತ್ತೀ? ನಮ್ಮ ಸಂಭಾಷಣವನ್ನು ಕೇಳಿ ನಿನ್ನ ಸ್ಥಿತಿಯು ಹೀಗಾಯಿತೋ ಏನು? ಬಹುಜೋಕೆ, ಇದರೊಳಗಿನ ಒಂದು ಅಕ್ಷರವು ಎರಡನೆಯವರ ಕಿವಿಗೆ ಮುಟ್ಟಿದರೆ, ಹೀಗೆಯೇ ನಿನ್ನ ಗಂಟಲು ಹಿಚಕೇನು,'' ಎಂದು ತನ್ನ ಕೈಯೊಳಗಿನ ಎಂಟು ಬೆರಳು ಎತ್ತರವಾದ ೧೨೦ ತೊಲಿ ತೂಕ ಬಂಗಾರದ ಸುಂದರ ಪಾತ್ರೆಯನ್ನು ಹಿಚುಕಲು, ಅದು ಮುದ್ದೆಯಾಗಿ ಹೋಯಿತು! ಆದರೆ ತಾನು ಹಿಚಿಕಿದ್ದರಿಂದ ಪಾತ್ರೆಯು ಚಪ್ಪಡಿಯಾಯಿತೆಂಬ ಲಕ್ಷವು ಆ ಭೀಮಸೇನನಿಗಿದ್ದಿಲ್ಲ. ಇದನ್ನು ನೋಡಿ ಉಮಾಜಿಯು ತಣ್ಣಗಾದನು. ಆತನು— ಖಾವಿಂದ, ನಾನು ಚರಣ ಸೇವಕನು, ದ್ರೋಹಿಯು ಹ್ಯಾಗಾದೇನು? ಪ್ರಾಣ ಹೋದರೂ ಇವುಗಳಲ್ಲಿಯ ಒಂದು ಅಕ್ಷರವನ್ನಾದರೂ ಮಂದಿಯ ಮುಂದೆ ಹೇಳಲಿಕ್ಕಿಲ್ಲ, ಎಂದು ಹೇಳುತ್ತಿರಲು, ಒಬ್ಬ ಸೇವಕನು ಬಂದು— ಸರಕಾರ, ದುರ್ಗಾಧಿಪತಿಗಳಾದ ಹಿರೋಜಿ ಫರ್ಜಂದರವರು ಸರಕಾರದ ಕೆಲಸದ ಸಲುವಾಗಿ ಕಾಣಲಿಕ್ಕೆ ಬಂದಿರುವರು, ಎಂದು ವಿಜ್ಞಾಪಿಸಿದನು. ಕೂಡಲೆ ಮಹಾರಾಜರು, ಅವರನ್ನು ಒಳಗೆ ಕರೆಕೊಂಡು ಬರಬೇಕೆಂದು ಹೇಳಿ, ತಾವು ಸದರಿನ ಮೇಲೆ ಕುಳಿತುಕೊಂಡರು. ಅಷ್ಟರಲ್ಲಿ ದುರ್ಗಾಧಿಪತಿಯು ಬರಲು, 'ಹುಷಾರ' ಎಂದು ಭಾಲದಾರನು ಉದ್ಘೋಷಿಸಿದನು. ಹಿರೋಜಿಯು ವಿನಯದಿಂದ ಮಾಡಿದ ಮುಜುರೆಯನ್ನು ಸಂಭಾಜಿಯು ಸ್ವೀಕರಿಸುತ್ತ, ಇಷ್ಟು ಅವಸರದ ಕೆಲಸವೇನೆಂದು ಕೇಳುತ್ತಿರಲು, ಹಿರೋಜಿಯು ರಾಯಗಡದಿಂದ ಬಂದ ಸೇವಕನ ಕೈಯೊಳಗಿನ ಲಕೋಟಿಯನ್ನು ಯುವರಾಜರ ಮುಂದಿಟ್ಟು— ಸರಕಾರ, ನನ್ನದೇನು ಕೆಲಸವಿದ್ದಿಲ್ಲ. ರಾಯಗಡದಿಂದ ಚೀಟಣೀಸರು ಕಳಿಸಿರುವ ಈ ಮನುಷ್ಯನು, ಈ ಲಕೋಟಿಯನ್ನು ತಂದಿದ್ದು, ಮಹಾರಾಜರ ಕೈಯಲ್ಲಿಯಲ್ಲದೆ ಬೇರೆ ಯಾರ ಕೈಯಲ್ಲಿಯೂ ಇದನ್ನು ಕೊಡಬಾರದೆಂದು ಚೀಟಣೀಸರ ಅಪ್ಪಣೆಯಾಗಿರುವದೆಂದು ಹೇಳಿದ್ದರಿಂದ ಈತನನ್ನು ಕರಕೊಂಡು ಬಂದೆನು, ಎಂದು ಹೇಳಿದನು. ಸಂಭಾಜಿಯು ಲಕೋಟಿಯನ್ನು ಒಡೆಒಡೆಯುತ್ತ— ''ಈ ಸಂಬಂಧದಿಂದ ನಿಮ್ಮ ಕಡೆಗೆ ಪತ್ರ ಬಂದಿರುವದಿಲ್ಲೇನು'' ಎಂದು ಕೇಳಲು, ನನ್ನ ಕಡೆಗೇನು ಪತ್ರ ಬಂದಿಲ್ಲವೆಂದು ಹಿರೋಜಿಯು ಹೇಳಿದನು. ಅಷ್ಟರಲ್ಲಿ ಯುವರಾಜರು ಹುಬ್ಬೇರಿಸಿ ಪತ್ರ ಓದುತ್ತ ತಮ್ಮೊಳಗೆ ''ಇದರ ಅರ್ಥವೇನು?'' ಎಂದು ನುಡಿದು ವಿಚಾರಮಾಡುತ್ತ ಕುಳಿತರು. ಮತ್ತೊಮ್ಮೆ ಪತ್ರವನ್ನು ಓದಿದರು, ಮತ್ತೆ ವಿಚಾರಮಾಡುತ್ತ ಕುಳಿತರು. ಅವರು ಕಬಜಿಯನ್ನು ಕರೆಕಳುಹಲು, ಆತನು

ಬಂದು ಎದುರಿಗೆ ನಿಂತುಕೊಂಡರೂ ವಿಚಾರಮಗ್ನರಾದ ಯುವರಾಜರ ಲಕ್ಷದಲ್ಲಿ ಅದು ಬರಲೇಯಿಲ್ಲ. ''ಏನಪ್ಪಣೆ ಹೂಜೂರ'' ಎಂದು ಎರಡುಸಾರೆ ಕಬಜಿಯು ಕೇಳಿದರೂ ಯುವ ರಾಜರ ಲಕ್ಷವು ಅವನ ಕಡೆಗೆ ಹೋಗಲಿಲ್ಲ. ಕಬಜಿಯು ಮೂರನೇಸಾರೆ ಕೇಳಿದಾಗ ವಿಚಾರಮಗ್ನ ಸ್ಥಿತಿಯು ಹೋಗಿ ಯುವರಾಜರು ಸರಳವಾದ ತೀಕ್ಷ್ಣದೃಷ್ಟಿಯಿಂದ ಕಬಜಿ ಯನ್ನು ನೋಡಹತ್ತಿದರು. ಅದನ್ನು ನೋಡಿ ಕಬಜಿಯ ಮದ್ಯದ ಅಮಲು ಪೂರಾ ಇಳಿದು ಹೋಯಿತು. ಆತನು ಪುನಃ ವಿನಯದಿಂದ— ''ಹುಜೂರಿನ ಅಪ್ಪಣೆಯೇನಿರುವದು?'' ಎಂದು ಕೇಳಿದನು.

ಸಂಭಾಜಿಯ ದರ್ಪವು ಬಹಳ. ಮಹಾಬಲಿಷ್ಠರೂ, ಸಂತಾಪಿಯೂ ಆದ ಆತನು ಮದ್ಯದ ಅಮಲಿನಲ್ಲಿ ಯಾರಿಗೆ ಯಾವ ಕಾಲಕ್ಕೆ ಏನು ಮಾಡುವನೋ ಎಂಬ ಅಂಜಿಕೆಯು ಎಲ್ಲರಿಗೂ ಇರುತ್ತಿತ್ತು, ಕಬಜಿಯು ಹೀಗೆ ಪ್ರಶ್ನಮಾಡಿದ್ದನ್ನು ಕೇಳಿ ಸಂಭಾಜಿಯು— ''ಓದಿರಿ, ಈ ಪತ್ರವನ್ನು ಓದಿರಿ'' ಎಂದು ಹೇಳಿ, ಬಾಳಾಜಿ ಚೀಟಣೀಸರ ಕಡೆಯಿಂದ ಬಂದ ಪತ್ರವನ್ನು ಕಬಜಿಯ ಕೈಯಲ್ಲಿ ಕೊಟ್ಟು ಪುನಃ—''ಇದೇನು ಸಂಗತಿಯೆಂಬದರ ವಿಚಾರವು ಬೇಗನೆ ಆಗಿ, ನಿಸ್ಸಂಶಯವಾಗಲಿಕ್ಕೆಬೇಕು'' ಎಂದು ಹೇಳಿದರು. ಕಬಜಿಯು ಪತ್ರವನ್ನು ಓದುತ್ತಿರುವಾಗ ಅವನ ಮುಖದಲ್ಲಿ ಬೇರೆ ಬೇರೆ ವಿಕಾರಗಳ ಲಕ್ಷಣಗಳು ತೋರಿ, ಕಡೆಗೆ ಅವನ ಮುಖದಲ್ಲಿ ಗಾಂಭೀರ್ಯವು ನೆಲೆಗೊಳ್ಳಲು, ಆತನು ಯುವರಾಜರನ್ನು ಕುರಿತು—''ಮೊದಲು ಈ ಪತ್ರದಲ್ಲಿ ಮಾಡಿದ ಹುಕುಮನ್ನು ಅಮಲಿನಲ್ಲಿ ತರಲೇಬೇಕು, ಆಮೇಲೆ ಹೆಚ್ಚಿನ ವಿಚಾರವು'' ಅನ್ನಲು, ಯುವರಾಜರು ಸಮಾಧಾನದಿಂದ—ಅದಂತು ಸರಿಯೇ; ಚೀಟಣೀಸರು ಬರೆದಂತೆ ಆಬಾಸಾಹೇಬರ ಅಪ್ಪಣೆಯನ್ನು ನಡೆಸಲೇಬೇಕು. ಅದನ್ನು ಮುರಿಯುವ ಧೈರ್ಯವು ಯಾರಿಗಿರುವದು? ಆದರೆ ಈ ಗೂಢವೇನಿರಬಹುದು? ಅನ್ನಲು, ಕಬಜಿಯು— ಆ ಗೂಢದ ಸ್ಪಷ್ಟೀಕರಣವು ಸಾವಕಾಶವಾಗಿ ಆಗತಕ್ಕದ್ದು, ಎಂದು ಉತ್ತರ ಕೊಟ್ಟನು. ಈ ಪ್ರಶ್ನೋತ್ತರಗಳನ್ನು ಕೇಳಿ ದುರ್ಗಾಧಿಪತಿಯಾದ ಹಿರೋಜಿಯು ದಿಗಿಲುಬಿದ್ದನು. ಆತನ ಅಂತರಂಗವು ಸೋಯರಾ ಬಾಯಿಯ ಕಡೆಗಿದ್ದದ್ದರಿಂದ, ಈ ಗೂಢಪತ್ರದಿಂದ ಆತನಿಗೆ ಸ್ವಲ್ಪ ಅಂಜಿಕೆಯೂ ಬಂದಿತು; ಆದರೆ, ಆ ವೀರನು ಅದನ್ನಾವದನ್ನೂ ಲಕ್ಷಕ್ಕೆ ತಾರದೆ, ಈ ಪ್ರಸಂಗದಲ್ಲಿ ತಾನು ನಡುವೆ ಬಾಯಿಹಾಕಿ ಕೇಳಬೇಕೋ ಕೇಳಬಾರದೋ ಎಂದು ಆಲೋಚಿಸುತ್ತ ಕಡೆಗೆ ಯುವರಾಜರನ್ನು ಕುರಿತು— ''ಸರಕಾರ, ದುರ್ಗಾಧಿಪತಿಯಾದ ನನಗೇನು ತಿಳಿಸದೆ ಹೊರಗಿಂದ ಹೊರಗೇ ಸರಕಾರಿಯ ಪತ್ರವು ಬಂದಿರುತ್ತದೆಂತಲೂ, ಅದರಲ್ಲಿ ಚಮತ್ಕಾರದ ಸಂಗತಿ ಇರುತ್ತದೆಂತಲೂ ಈಗ ನಡೆದ ಪ್ರಶ್ನೋತ್ತರಗಳ ಮೇಲಿಂದ ಗೊತ್ತಾಗುತ್ತದೆ; ಆದರೆ ಅದರಲ್ಲಿ ನಾನು ಕೇಳತಕ್ಕ ಸಂಗತಿಯಿದ್ದು, ಅದನ್ನು ಕೇಳುವದಕ್ಕೆ ಸರಕಾರದ ಅಪ್ಪಣೆಯಾದರೆ ಕೇಳುವೆನು'' ಎಂದು ನುಡಿಯಲು, ಯುವರಾಜರು— ''ಇದರಲ್ಲಿಯ ಒಂದು ಅಕ್ಷರವು ಕೂಡ ಹೊರಗೆ ಒಡೆಯ ಲಾಗದೆಂದು ಸ್ಪಷ್ಟವಾದ ಅಪ್ಪಣೆಯಿರುವದರಿಂದ, ಈ ಪತ್ರವು ಗುಪ್ತವಾಗಿರತಕ್ಕದ್ದಾಗಿದೆ. ನಿಮ್ಮ ದುರ್ಗಕ್ಕೂ ಈ ಪತ್ರಕ್ಕೂ ಸಂಬಂಧವೇನು ಇಲ್ಲದಿದ್ದರಿಂದಲೂ ಮುಂದೆ ಮಾಡಬೇಕಾಗಿರುವ

ವ್ಯವಸ್ಥೆಯು ನಿಮ್ಮ ಅಧಿಕಾರ ಮೀರಿದ್ದಿರುವದರಿಂದಲೂ ಪತ್ರದ ಸಂಗತಿಯು ನಿಮಗೆ ಹೇಳಲಿಕ್ಕೆ ಬರುವಹಾಗಿಲ್ಲ. ನೀವು ಈಗ ಹೋಗಿ ಈ ಸೇವಕನಿಗೆ ಅಪ್ಪಣೆಕೊಟ್ಟು ಕಳಿಸಿರಿ; ನಾಳೆ ಬೆಳಗಿನಲ್ಲಿ ನನಗೆ ಭೆಟ್ಟಿಯಾಗಿರಿ, ಎಂದು ಹೇಳಲು, ''ಸರಕಾರದ ಮರ್ಜಿಯು'' ಎಂದು ಹೇಳಿ, ಬಂದ ಸೇವಕನೊಡನೆ ಹಿರೋಜಿಯು ಮನೆಗೆ ಹೋದನು. ಯುವರಾಜರು ಉಮಾಜಿಯನ್ನು ಕರೆತರುವದಕ್ಕಾಗಿ ಮತ್ತೊಬ್ಬ ಸೇವಕನಿಗೆ ಆಜ್ಞಾಪಿಸಿದರು.

ಯುವರಾಜರಿಂದ ಕರೆಯಬಂದದ್ದನ್ನು ಕೇಳಿ ಉಮಾಜಿಯ ಕೈಕಾಲೇ ಹೋದವು. ಸಂಭಾಜಿಗೆಹಾಕತಕ್ಕ ವಿಷದ ಬಾಧೆಯು ಇಂದು ಉಮಾಜಿಗೇ ಆದಂತಾಗಿತ್ತು, ಆತನ ಮೈಮೇಲೆ ಎಚ್ಚರವಿದ್ದಿಲ್ಲ. ಆತನು ಯುವರಾಜರ ಬಳಿಗೆ ಬರಲು, ಅವರು ದಿವಾಣಖಾನೆಯ ಬಾಗಿಲನ್ನು ಒಳಗಿಂದ ಇಕ್ಕಿಕೊಂಡು ಬಾರೆಂದು ಉಮಾಜಿಗೆ ಆಜ್ಞಾಪಿಸಿದರು. ಆಗಂತು ಉಮಾಜಿಯ ಎದೆಯು ಡವಗುಟ್ಟಹತ್ತಿತು. ಆತನು ಅಪ್ಪಣೆಯಂತೆ ಬಾಗಿಲ ಇಕ್ಕಿಕೊಂಡು ಬಂದನು. ಈ ದಿನ ಉಮಾಜಿಯು ಸುಮ್ಮಸುಮ್ಮನೆ ಭಯಗ್ರಸ್ತನಾದದ್ದಕ್ಕೂ, ಆತನ ಸಂಬಂಧವಾಗಿ ರಾಯಗಡದಿಂದ ಸಂಶಯದ ಪತ್ರ ಬರಲಿಕ್ಕೂ ಗಂಟೇಬಿದ್ದದ್ದರಿಂದ, ಆತನ ಸಂಬಂಧದಿಂದ ಯುವರಾಜರ ಸಂಶಯವು ಮತ್ತಷ್ಟು ಹೆಚ್ಚಾಯಿತು. ಅವರು, ಅತ್ಯಂತ ಭಯಗ್ರಸ್ತನಾಗಿ ನಡುಗುತ್ತ ನಿಂತಿರುವ ಉಮಾಜಿಯನ್ನು ಕುರಿತು—

ಸಂಭಾಜಿ—ಏನೋ ಉಮಾಜಿ, ನಿಮ್ಮ ಬಾಯಿಸಾಹೇಬರ ಪ್ರೀತಿಯ ದಾಸಿಯಿರುವಳಲ್ಲ, ಆಕೆಯ ಹೆಸರೇನು?

ಉಮಾಜಿ (ಸ್ವಲ್ಪ ಗಡಿಬಿಡಿಯಿಂದ)— ಆಕೆಯ ಹೆಸರು ಜೀವು ಎಂದೊ ಅಥವಾ ಗೀತೆಯೆಂದೋ ಇರಬೇಕು ಸರಕಾರ.

ಸಂಭಾಜಿ— ಯಾವದೇ ಯಾಕೆ ಇರಲೊಲ್ಲದು. ಆಕೆಯ ಗಂಡನ ಹೆಸರು ಸುಭಾನನಲ್ಲವೆ?

ಉಮಾಜಿ—ಹೌದು, ಸುಭಾನನೆನ್ನುವ ಹಾಗೆ ತೋರುತ್ತದೆ.

ಸಂಭಾಜಿ—ಅವನು ಇಂದು ಇಲ್ಲಿಗೆ ಬಂದಿದ್ದಾನಂತೆ. ಅವನೇನು ಈಗ ಹೋಗಿರುವನೋ ಇರುವನೋ? ಅವನ ಕಡೆಗೆ ಸ್ವಲ್ಪ ಕೆಲಸವಿತ್ತು.

ಉಮಾಜಿ—ಅದಾವದೂ ನನಗೆ ಗೊತ್ತಿಲ್ಲ ಸರಕಾರ!

ಹೀಗೆ ಹಾರಿಸಿಕೊಂಡು ಮಾತಾಡುವದನ್ನು ನೋಡಿ ಯುವರಾಜರು ಸಂತಾಪದಿಂದ— ಉಮ್ಯಾ, ಬಲುಜೋಕೆ, ಯಾರ ಸಂಬಂಧವಿರುತ್ತದೆಂಬದನ್ನು ಚನ್ನಾಗಿ ವಿಚಾರಮಾಡು. ಸುಭಾನನು ನಿನ್ನ ಕಡೆಗೆ ವಿಷದ ಡಬ್ಬಿಯನ್ನು ತಂದುಕೊಟ್ಟಿರುವನೆಂದು ವಿಶ್ವಸನೀಯವಾಗಿ ತಿಳಿದದೆ; ಆದ್ದರಿಂದ ಇದ್ದ ಸಂಗತಿಯನ್ನು ನಿಜವಾಗಿ ಹೇಳಿಬಿಡು, ನಿನ್ನ ಅಪರಾಧವನ್ನು ಕ್ಷಮಿಸುವೆನು.ಇದರ ಮೇಲೆಯೂ ನೀನು ಹೇಳಲಿಕ್ಕಿಲ್ಲವೆಂದು ಹಟಹಿಡಿದರೆ, ನಿಲ್ಲಿಸಿ ನಿನ್ನನ್ನು ಸುಡಿಸುವೆನು; ಆದ್ದರಿಂದ ಒಳ್ಳೆಯಮಾತಿನಿಂದ ಇದ್ದ ಸಂಗತಿಯನ್ನು ಹೇಳು, ಎಂದು ಬೇಕಾದಷ್ಟು ಅಂಜಿಕೆಹಾಕಿ ಕೇಳಿದರು; ಆದರೆ ಉಮಾಜಿಯೇನು ಅದಕ್ಕೆ ಸೊಪ್ಪುಹಾಕಲಿಲ್ಲ; ಆದ್ದರಿಂದ ಅವನನ್ನು ಸೆರೆಹಿಡದು ಹರಜಿ ರಾಜೆಮಹಾಡಿಕ ಇವರ ಕಾವಲಿನಿಂದ ಅವನನ್ನು ಕರ್ನಾಟಕಕ್ಕೆ

ಕಳಿಸಿ ಹಾಗೆ ಮಾಡಿದ್ದನ್ನು ರಾಯಗಡಕ್ಕೆ ಮಹಾರಾಜರಿಗೆ ಪತ್ರಬರೆದು ತಿಳಿಸಿದರು. ಇಂದಿನಿಂದ ಸಂಭಾಜಿಯು ವೃತ್ತಿಯು ಸಂಶಯಗ್ರಸ್ತವಾಗಿ, ಕಲುಷನಹೊರತು ತನ್ನ ಪ್ರಾಣರಕ್ಷಕರು ಮತ್ತೊಬ್ಬರಿಲ್ಲೆಂದು ಅವನ ಭಾವನೆಯಾಯಿತು! ಈ ಭಾವನೆಯೇ ಮುಂದೆ ಅವನ ನಾಶಕ್ಕೆ ಕಾರಣವಾಯಿತು.

## .... ಕಡೆಯ ಭೆಟ್ಟಿಯು! ....

ಸುಭಾನನು ರಾಜವೈದ್ಯನ ಕಣ್ಣಿಗೆ ಇಂಗುಹಚ್ಚಿ ಯಾವ ಮಾಯದಿಂದ ವಿಷದ ಡಬ್ಬಿಯನ್ನು ಎಬ್ಬಿಸಿದನೋ ಎಬ್ಬಿಸಿದನು; ಆದರೆ ವೈದ್ಯನಿಗೆ ಅದು ಗೊತ್ತಾಗದೆ ಇರಲಿಲ್ಲ. ಕೂಡಲೆ ಆತನು ಮಹಾರಾಜರಿಗೆ ಆ ಸಂಗತಿಯನ್ನು ತಿಳಿಸಿದನು. ಅಷ್ಟರಲ್ಲಿ ಬಾಳಾಜಿಯು, ಸುಭಾನನೇ ವಿಷದ ಡಬ್ಬಿಯನ್ನು ಪಲ್ಹಾಳಕ್ಕೆ ಒಯ್ದ ಸುದ್ದಿಯನ್ನು ತಂದನು. ಆಗ ಮಹಾರಾಜರು ಬಾಳಾಜಿಯಿಂದ ಒಂದು ಪತ್ರವನ್ನು ಬರೆಸಿ ಅಂದೇ ಅದನ್ನು ಒಬ್ಬ ಸೇವಕನ ಕೈಯಿಂದ ಗುಪ್ತವಾಗಿ ಪಲ್ಹಾಳಗಡಕ್ಕೆ ಕಳಿಸಿದರು. ಆ ಸೇವಕನು ಹಿರೋಜಿಯೊಡನೆ ಸಂಭಾಜಿಯ ಕೈಯಲ್ಲಿ ಪತ್ರಕೊಟ್ಟದ್ದನ್ನೂ, ಆ ಪತ್ರದಂತೆ ಉಮಾಜಿಯನ್ನು ಸೆರೆಹಿಡಿದು ಕರ್ನಾಟಕಕ್ಕೆ ಕಳಿಸಿದ್ದನ್ನು ವಾಚಕರು ಮೇಲಿನ ಪ್ರಕರಣದಲ್ಲಿ ಓದಿರುವರು. ಈ ಎಲ್ಲ ಒಳಸಂಚು ರಾಜಾರಾಮನ ತಾಯಿಯಿಂದಲೇ ಆಗಿರುವದೆಂಬದನ್ನು ಮಹಾರಾಜರು ತರ್ಕಿಸಿದ್ದರು. ಈ ಕಲಹವನ್ನು ಹ್ಯಾಗೆ ನಂದಿಸಬೇಕೆಂಬ ಚಿಂತೆಯು ಅವರನ್ನು ಬಾಧಿಸಹತ್ತಿತು. ಅವರಿಗೆ ಸೋಯರಾಬಾಯಿಯ ಭೆಟ್ಟಿಯಿಲ್ಲದೆ ಆರುತಿಂಗಳು ಆಗಿತ್ತು. ಮಹಾರಾಣಿಯು ತನಗೆ ದರ್ಶನಕೊಡಬೇಕೆಂದು ದಾಸಿಯರ ಮುಖಾಂತರವಾಗಿ ಹಲವು ಸಾರೆ ಬೇಡಿಕೊಂಡಿದ್ದಳು; ಆದರೆ ಆ ಘಾತಕವಿಚಾರದ ರಾಣಿಯನ್ನು ಕಾಣಲಿಕ್ಕೆ ಮಹಾರಾಜರಿಗೆ ಮನಸ್ಸು ಆಗಿದ್ದಿಲ್ಲ; ಮುಂದೆ ಬರಬರುತ್ತ ಒಳಸಂಚಿನ ಘಾತಕತನದ ಮಿತಿಯು ಮೀರಲು, ಒಮ್ಮೆ ರಾಣಿಯನ್ನು ಕಂಡು ಆಕೆಯ ಮನಸ್ಸಿನ ಒಲವನ್ನು ಪ್ರತ್ಯಕ್ಷವಾಗಿ ಅರಿತುಕೊಳ್ಳಬೇಕೆಂದು ನಿಶ್ಚಯಿಸಿ ಮಹಾರಾಜರು ಒಂದುದಿನ, 'ತಾವು ಇಂದು ಭೆಟ್ಟಿಗೆ ಬರುವೆವೆಂ'ದು ಮಹಾರಾಣಿಗೆ ಹೇಳಿಕಳಿಸಿದರು. ಆಗ ಆಕೆಯು ಎಲ್ಲ ಸಿದ್ಧತೆಯನ್ನು ಮಾಡಿ ಮಹಾರಾಜರ ಹಾದಿಯನ್ನು ನೋಡುತ್ತ ಕುಳಿತುಕೊಂಡಳು. ಮಹಾರಾಜರು ಅಂದು ರಾತ್ರಿ ಖಿನ್ನವದನದಿಂದ ಅಂತಃಪುರವನ್ನು ಪ್ರವೇಶಿಸಿದರು. ಈದಿನ ಆದ ಆ ಪತಿ–ಪತ್ನಿಯರ ಭೆಟ್ಟಿಯೇ ಕಡೆಯದಾಯಿತು. ಇದೇ ಕಡೆಯ ಭೆಟ್ಟಿಯಾದೀತೆಂಬ ಕಲ್ಪನೆಯು ಆಗ ಯಾರಮನಸ್ಸಿನಲ್ಲಿಯೂ ಇದ್ದಿಲ್ಲ. ಮಹಾರಾಜರಿಗೇನು ಅಂಥ ಹೇಳಿಕೊಳ್ಳುವಂಥ ಬೇನೆಯಿದ್ದಿಲ್ಲ. ಅವರು ಹೋಗುವಂತೆ ಬೇಟೆಗೆ ಹೋಗುತ್ತಿದ್ದರು. ಯಾವಾಗಾದರೂ ಅವರ ಬಲಗಡೆಯ ಮೊಣಕಾಲು ಬಾಯಿತ್ತಿತ್ತು; ಔಷಧೋಪಚಾರದಿಂದ ನೆಟ್ಟಗಾಗುತ್ತಿತ್ತು. ಇತ್ತ ಸೋಯರಾರಾಣಿಯ ಹೃದಯವು ಸವತಿಮತ್ಸರದಿಂದ ತುಂಬಿ ಹೋದದ್ದರಿಂದ ಆಕೆಯು

ಮಹಾರಾಜರ ಆದರಕ್ಕೆ ಪಾತ್ರಳಿದ್ದಿಲ್ಲ. ರಾಣಿಯಾದರೂ ಮಹಾರಾಜರ ವಿಷಯಕ್ಕೆ ಉದಾಸೀನಳೇ ಆಗಿದ್ದಳು. ಆಕೆಯು ವಸ್ತ್ರಾಲಂಕಾರಗಳಿಂದ ವಿಭೂಷಿತಳಾಗಿದ್ದಿಲ್ಲ. ಆರುತಿಂಗಳಿಂದ ಪತಿಯ ದರ್ಶನವಾಗದೆ ಯಿರುವದೊಂದು ಆಕೆಯ ಅಸಮಾಧಾನಕ್ಕೆ ಕಾರಣವಾಗಿತ್ತು, ಮಹಾರಾಜರು ರಾಜ್ಯವಿಘಾತಕ ವಾದ ಅಂತಃಕಲಹದಿಂದ ವ್ಯಥಿತವಾಗಿ ನಿರುತ್ಸಾಹದಿಂದ ತಲೆತಗ್ಗಿಸಿಕೊಂಡು ಮಂಚದಮೇಲೆ ಸುಮ್ಮನೆ ಕುಳಿತಿದ್ದರು. ಸೋಯರಾಬಾಯಿಯು ಮಹಾರಾಜರ ಬಳಿಯಲ್ಲಿ ಒತ್ತಟ್ಟಿಗೆ ನಿಂತುಕೊಂಡಿದ್ದಳು. ಆಕೆಯು ಕ್ರೋಧದರ್ಶಕ ವಿನಯದಿಂದ ಮಹಾರಾಜರನ್ನು ಕುರಿತು—

ಸೋಯರಾಬಾಯಿ— ಇಷ್ಟು ನಿರಾಕರಣ ಮಾಡಲಿಕ್ಕೆ ನನ್ನಿಂದಾದ ಅಪರಾಧವೇನು? ಆರುತಿಂಗಳಲ್ಲಿ ಒಮ್ಮೆಯಾದರೂ ಚರಣದರ್ಶವವಾಗದಷ್ಟು ಅವಕೃಪೆಯಾದ ಬಳಿಕ, ನಾನು ಜೀವದಿಂದಿದ್ದಾದರೂ ಪ್ರಯೋಜನವೇನು? ಹೀಗೆ ನಿರಾಕರಣಮಾಡುವದರಿಂದ ನಮ್ಮ ಜೀವನವು ದುಃಖಮಯವಾಗಲಿಕ್ಕಿಲ್ಲವೆ? ರಾಜಾರಾಮನನ್ನು ಯುವರಾಜನನ್ನಾಗಿ ಮಾಡಬೇಕೆಂದದ್ದೇ ತಪ್ಪೇನು?

ಮಹಾರಾಜರು—ನಿಮ್ಮ ತಪ್ಪೆಂದು ನಾವೆಲ್ಲಿ ಅನ್ನುತ್ತೇವೆ. ಸ್ವಾರ್ಥದ ದೃಷ್ಟಿಯಿಂದ ನೀವನ್ನುವದು ವಾಸ್ತವವೇಸರಿ. ಜಗತ್ತೇ ಸ್ವಾರ್ಥಮಯವದೆ. ಸ್ವಾರ್ಥಮಯರಾದವರಿಗೆ ನ್ಯಾಯಾನ್ಯಾಯ, ಪಾಪಪುಣ್ಯ ಇವುಗಳ ವಿಚಾರವು ಇರುವದಿಲ್ಲ. ಆದ್ದರಿಂದ ಸ್ವಾರ್ಥಸಾಧನ ತತ್ಪರರಾದ ನೀವು ಪತಿಯ ಸಮಾಧಾನ–ಅಸಮಾಧಾನಗಳನ್ನು ನೋಡುವ ಹಾಗಿಲ್ಲ; ಆತನಿಗೆ ದಯಾ–ದಾಕ್ಷಿಣ್ಯಗಳನ್ನು ತೋರಿಸುವಹಾಗಿಲ್ಲ; ಅಂದಬಳಿಕ ನಿಮ್ಮ ಮನಸ್ಸಿನಂತೆ ನಡೆಯಲಾರದ ನಾವು, ನಿಮಗೆ ಅಸಮಾಧಾನವನ್ನುಂಟುಮಾಡುವದಕ್ಕಾಗಿ ಮೇಲೆ ಮೇಲೆ ಯಾಕೆ ಬರಬೇಕು? ಮೇಲಾಗಿ ಮಕ್ಕಳು ಪ್ರಬುದ್ಧರಾಗಿರುವರು. ನಮಗೂ ವೃದ್ಧಾಪ್ಯಕಾಲವು ಒದಗಿದಂತಾಯಿತು; ಅಂದಬಳಿಕ ಸಂಸಾರದಿಂದ ಮನಸ್ಸನ್ನೂ ತಿರುಗಿಸಿ ಅದನ್ನು ಈಶ್ವರಚಿಂತನದಲ್ಲಿ ತೊಡಗಿಸುವದು ಹಿತವಲ್ಲವೆ? ಗೋರಿಗೆ ಹೋಗುವತನಕ ಸಂಸಾರವೇನು?

ಸೋಯರಾಬಾಯಿ—ಅದು ಹ್ಯಾಗೇ ಇರಲಿ, ರಾಜಾರಾಮನನ್ನು ಯುವರಾಜನಾಗಿ ಮಾಡುವಿರಷ್ಟೆ? ನನ್ನ ಪ್ರಶ್ನೆಗೆ ಇಂದು ಉತ್ತರಕೊಡಲೇಬೇಕು.

ಮಹಾರಾಜರು—ನಿಮ್ಮ ಪ್ರಶ್ನೆಗೆ ನಾವೇನು ಉತ್ತರಕೊಡೋಣ? ದಶರಥರಾಜನಂತೆ ನಾವು ಸ್ತ್ರೀಲಂಪಟರಾಗಿದ್ದರೆ ಆ ಮಾತು ಬೇರೆಯಿತ್ತು, ಅದರಂತೆ, ಆತನು ಕೈಕೇಯಿಗೆ ವರಗಳನ್ನು ಕೊಟ್ಟು ವಚನಬದ್ಧನಾದಂತೆ ನಾವೇನು ಬದ್ಧರಾಗುವದಿಲ್ಲ; ಆದ್ದರಿಂದ ನಿಮ್ಮ ಪ್ರಶ್ನೆಗೆ ಉತ್ತರಕೊಡಬೇಕೆಂಬ ನಿರ್ಬಂಧಕ್ಕೆ ನಾವು ಒಳಗಾಗಿರುವದಿಲ್ಲ! ಆದರೆ ಈ ರೀತಿಯು ಯೋಗ್ಯವಾದದ್ದಲ್ಲವೆಂದು ಮಾತ್ರ ಸಾರಿ ಸಾರಿ ಹೇಳುತ್ತೇವೆ. ಇದರಿಂದ ಸರ್ವಥಾ ಹಿತವಾಗಲಿಕ್ಕಿಲ್ಲ.

ಸೋಯರಾಬಾಯಿ—ನಾನೂ ಸಾರಿ ಸಾರಿ ಹೇಳುತ್ತೇನೆ, ನನ್ನ ಮಾತಿನಂತೆ ನೀವು ಏನೂ ವ್ಯವಸ್ಥೆಮಾಡುವದಕ್ಕೆ ವಚನ ಕೊಡದೆಯಿದ್ದ ಪಕ್ಷದಲ್ಲಿ ಆ ಶಂಭ್ಯಾನ......

ಮಹಾರಾಜರು(ಕಿವಿಯ ಮೇಲೆ ಕೈಯಿಟ್ಟುಕೊಂಡು)— ಬೇಡಿರಿ— ಬೇಡಿರಿ; ಆ ತಾಯಿ ಇಲ್ಲದ ಪರದೇಶಿ ಬಾಲಕನನ್ನು ಹೀಗೆ ಅಡ್ಡತಿಡ್ಡವಾದ ಒಂಟಿಹೆಸರಿನಿಂದ ಕರೆಯಬೇಡಿರಿ; ನಾನು ಅದನ್ನು ಕಿವಿಯಿಂದ ಕೇಳಲಾರೆನು; ಸರಳಹಾದಿಯಿಂದ ಹೋಗದೆ ಅಡವಿಯ ಬೀಳವದರಿಂದ ಹಿತವಾಗಲಾರದು!

ಸೋಯರಾಬಾಯಿ—ಹಾಗಾದರೆ, ಔರಂಗಜೇಬನ ಅಣ್ಣ ತಮ್ಮಂದಿರ ಅವಸ್ಥೆಯಾದಂತೆ ನನ್ನ ಮಗನ ಅವಸ್ಥೆಯಾದದ್ದನ್ನು ನೋಡುವ ಇಚ್ಛೆಯು ನಿಮಗಿರುವದೇ?

ಮಹಾರಾಜರು—ಹಾಗೆ ಹ್ಯಾಗಿದ್ದೀತು? ನಮಗೇನು ರಾಜಾರಾಮನು ಹೊರಗಿನವನೇ? ಆತನು ನಿಮಗೇ ಮಗನು, ನಮಗೇನು ಮಗನಲ್ಲವೋ? ನಿಮಗೆ ರಾಜಾರಾಮನು ಸ್ವಕೀಯನಾಗಿಯೂ, ಶಂಭುವು ಪರಕೀಯನಾಗಿಯೂ ತೋರಬಹುದು; ಆದರೆ ನಮಗೆ ಇಬ್ಬರೂ ಸ್ವಕೀಯರಾಗಿಯೇ ತೋರುವರು. ಅಂದಬಳಿಕ ನಾವು ಇಬ್ಬರ ಹಿತವೂ ಆಗುವಂತೆ ವ್ಯವಸ್ಥೆ ಮಾಡುವೆವು. ಈ ಪ್ರಸಂಗದಲ್ಲಿ ವಚನವೇಕೆ? ನಿಮ್ಮ ಹೃದಯದಲ್ಲಿ ಸವತಿ ಮಾತ್ಸರವು ತುಂಬಿರುವದು; ಆದರೆ ನಮ್ಮ ಹೃದಯದಲ್ಲಿ ಅದರ ಗಂಧವಿಲ್ಲ.

ಸೋಯರಾಬಾಯಿ—ಇರಲಿಕ್ಕಿಲ್ಲ. ನಾನು ಅದನ್ನು ತಕ್ಕೊಂಡು ಮಾಡುವದೇನು? ನಮ್ಮ ಮಾವನವರು ಭಾವನವರನ್ನು ತಂಜಾವರದ ಕಡೆಗೆ ಕಳಿಸಿ ಅವರ ವ್ಯವಸ್ಥೆಯನ್ನು ಮಾಡಿದಂತೆ, ನನ್ನ ಮಗನ ವ್ಯವಸ್ಥೆಯನ್ನು ನೀವು ಮಾಡಿ, ಆತನನ್ನು ಹುಲಿಯಬಾಯಿಗೆ ಬೀಳದಂತೆ ಮಾಡಲೇಬೇಕು.

ಮಹಾರಾಜರು— ಇಷ್ಟು ನಿಗ್ರಹದಿಂದಲೂ, ಆಗ್ರಹದಿಂದಲೂ ನಮಗೆ ಯಾಕೆ ಹೇಳಬೇಕು? ಒಂದು ಮನೆಯಲ್ಲಿ ಎರಡುಭಾಗ ಮಾಡಬಾರೆಂತಲೇ ವೆಂಕೋಜಿರಾಜರನ್ನು ಎಮಿಕೆಗೆ ತಂದು ಸ್ವಾಧೀನಪಡಿಸಿಕೊಂಡಿರುವೆವು. ಅವರು ಹ್ಯಾಗೆ ನಡೆಯಬೇಕೆಂಬ ಬಗ್ಗೆ ನಮ್ಮಿಂದ ಶಾಸನ ಪತ್ರವೂ ಹೋಗಿರುವದು. ಅದರಂತೆಯೇ ರಾಜಾರಾಮನ ಸ್ಥಿತಿಯಾದರೂ ಆದೀತು!

ಸೋಯರಾಬಾಯಿ—ನಾನಾದರೂ ಅದೇ ಮಾತು ಹೇಳುವೆನು. ಅದರಂತೆ ಏನಾದರೂ ಲೇಖೀವ್ಯವಸ್ಥೆ ಮಾಡಬೇಕೆಂಬುವದು ನನ್ನ ಮನೋದಯವು.

ಮಹಾರಾಜರು—ನಮ್ಮ ಹಿರಿಯರೇನು ಹಾಗೆ ಲೇಖಿಯ ವ್ಯವಸ್ಥೆಯನ್ನು ಮಾಡಿದ್ದಿಲ್ಲ.

ಸೋಯರಾಬಾಯಿ—ಈಗ ನೀವಾದರೂ ಮಾಡಿರುವಿರಷ್ಟೇ?

ಮಹಾರಾಜರು—ನಾನು ನಮ್ಮ ತಮ್ಮನ ಸಲುವಾಗಿ ವ್ಯವಸ್ಥೆ ಮಾಡಿರುವೆನು.

ಸೋಯರಾಬಾಯಿ—ಮಗನ ಸಲುವಾಗಿ ಹಾಗೆ ವ್ಯವಸ್ಥೆ ಮಾಡಲಿಕ್ಕೆ ತೊಂದರೆಯೇನು?

ಮಹಾರಾಜರು—ಅದು ಸಂಭಾಜಿರಾಜರ ಅಧಿಕಾರದ ಮಾತು, ನಮ್ಮದಲ್ಲ.

ಸೋಯರಾಬಾಯಿ—ಇಷ್ಟರಲ್ಲಿ ಆತನು ರಾಜನಾದನೇನು?

ಮಹಾರಾಜರು—ಅದು ನಮ್ಮ ಕುಲಪರಂಪರಾಗತವಾದ ಬಿರುದು ಇರುವದು. ರಾಜಾರಾಮನಿಗೂ ಅದು ಇರುವದು.

ಸೋಯರಾಬಾಯಿ—ಹುರುಳಿಲ್ಲದ ಬಿರುದು ತಕ್ಕೊಂಡು ಮಾಡವದೇನು?

ಮಹಾರಾಜರು—ಸರದಾರರ ಮನೆತನದಲ್ಲಿ ಮೊದಮೊದಲು ಆ ಬಿರುದುಗಳು ಹುರುಳಿಲ್ಲದವೇ ಇರುತ್ತವೆ. ಆಮೇಲೆ ಸ್ವಪರಾಕ್ರಮದಿಂದ ಅವನ್ನು ತುಂಬಿಕೊಳ್ಳಬೇಕಾಗುವದು.

ಸೋಯರಾಬಾಯಿ—ಹಾಗೆ ತುಂಬಿಕೊಳ್ಳುವ ಯೋಗವು ನನ್ನ ಮಗನಿಗೆ ಈ ಜನ್ಮದಲ್ಲಿಯಂತೂ ಇದ್ದಂತೆ ತೋರುವದಿಲ್ಲ.

ಮಹಾರಾಜರು—ಕಿರಿಯತನದ ಧರ್ಮವು ಹಾಗೆಯೇ ಸರಿ; ಅರಸನಾದ ಧರ್ಮರಾಜನನ್ನು, ಉಳಿದ ನಾಲ್ವರು ಪಾಂಡವರೂ, ಶ್ರೀರಾಮನನ್ನು ಲಕ್ಷ್ಮಣನೇ ಮೊದಲಾದವರೂ ಅನುಸರಿಸಿ ಕೀರ್ತಿಶಾಲಿಗಳೂ, ಕೃತಾರ್ಥರೂ ಆಗಲಿಲ್ಲವೆ?

ಸೋಯರಾಬಾಯಿ—ಧರ್ಮರಾಯ—ಶ್ರೀರಾಮನಂತೆ ಶಂಭುವುರಾಜಾರಾಮನನ್ನು ನಡಿಸಿಕೊಳ್ಳವನೆಂಬದಕ್ಕೆ ಹೊಣೆಯಾರು?

ಮಹಾರಾಜರ—ಬಂದು ಪ್ರೇಮವು!

ಸೋಯರಾಬಾಯಿ—ಆ ಪ್ರೇಮವು ಶಂಭವಿನಲ್ಲಿರುವದಿಲ್ಲ.

ಮಹಾರಾಜರು—ನಿಮ್ಮ ತಿಳುವಳಿಕೆಯಲ್ಲಿ ತಪ್ಪಾಗಿರುವದು.

ಸೋಯರಾಬಾಯಿ—ಅದು ಹ್ಯಾಗೆ!

ಮಹಾರಾಜರು— ಆ ಇಬ್ಬರಲ್ಲಿ ಅಕೃತ್ರಿಮವಾದ ಬಂಧುಪ್ರೇಮವಿರುವದೆಂಬ ನಂಬಿಗೆಯು ನಮಗಿರುತ್ತದೆ. ಅವರು ಬದುಕಿರುವವರೆಗೆ ಮಹಾರಾಷ್ಟ್ರದ ಸಿಂಹಾಸನದಲ್ಲಿ ಎರಡು ತುಂಡು ಮಾಡಿಲಿಕ್ಕಿಲ್ಲೆಂದು ನಾವು ನಿಶ್ಚಯವಾಗಿ ತಿಳಿದುಕೊಂಡಿರುತ್ತೇವೆ. ಅಂಥ ಪ್ರಸಂಗವೆ ಬಂದಲ್ಲಿ ಅವರಿಬ್ಬರು ಬಂಧುಪ್ರೇಮ ಬದ್ದರಾಗಿ ವಿವೇಕದಿಂದ ತಕ್ಕವ್ಯವಸ್ಥೆ ಮಾಡಿಕೊಂಡು ತಮ್ಮ ತಲೆಯಮೇಲೆ ಭಾರಹೊತ್ತು ರಾಜ್ಯರೂಪಯಂತ್ರವನ್ನು ಸರಿಯಾಗಿ ಸಾಗಿಸುವರು. ಇದೇ ನಿಜವಾದ ಧರ್ಮವು. ಹಿರಿಯರು ಕಿರಿಯರಮುಂದೆ ಅಧರ್ಮದಿಂದ ನಡೆದು ಮೇಲು ಪಂಕ್ತಿಯನ್ನು ಹಾಕಿಕೊಡುವದು ಆರ್ಯಶೀಲವಲ್ಲ; ಆದ್ದರಿಂದ ನಾವಾಗಿ ಮಕ್ಕಳ ಪಾಲುಮಾಡಿ ಇಡುವ ಧರ್ಮವಿರುದ್ಧ ಕೆಲಸವನ್ನು ಸರ್ವಥಾ ಮಾಡಬಾರದು.

ಸೋಯರಾಬಾಯಿ—ಈ ನಿಮ್ಮಧರ್ಮದ ಪರಂಪರೆಯು ಎಲ್ಲಿಯವರೆಗೆ ನಡೆಯ ಬಹುದು?

ಮಹಾರಾಜರು—ಪರಮೇಶ್ವರೀ ಯೋಜನೆಯಿರುವವರೆಗೆ.

ಸೋಯರಾಬಾಯಿ—ಮಹಾರಾಣಿಯೆಂಬ ಸಂಬಂಧದಿಂದ ನನ್ನ ಅಧಿಕಾರವೇನೂ ಇರುವದಿಲ್ಲವೋ?

ಮಹಾರಾಜರು—ಇಲ್ಲವೆಂದು ಯಾರು ಅನ್ನುವರು? ನಮ್ಮ ಪ್ರಥಮ ಕುಟುಂಬದ ವಿಯೋಗವಾದ ಬಳಿಕ ಆ ಅಧಿಕಾರವು ನಿಮ್ಮ ಕಡೆಗೇ ಬಂದಿರುವದು; ಆದರೆ ಧರ್ಮಶಾಸ್ತ್ರ ದಂತೆ ಅದು ಮರ್ಯಾದಿತವಾಗಿರವದು.

ಸೋಯರಾಬಾಯಿ—ಅದು ಹ್ಯಾಗೆ? ನನಗಿಷ್ಟು ಗೊತ್ತಾದರೂ ಆಗಲಿ.

ಮಹಾರಾಜರು— ರಾಜ್ಯದ ಸಂರಕ್ಷಣವನ್ನೂ ವ್ಯವಸ್ಥೆಯನ್ನೂ ಮಾಡುವ ಅಧಿಕಾರವು, ಮಗನು ಅಲ್ಪ ವಯಸ್ಕನಾಗಿರುವಾಗ ವಿಧವಾ ಮಹಾರಾಣಿಯ ಕಡೆಗೆ ಬರುತ್ತಿರುತ್ತದೆ; ಆದರೆ ನೀವು ಇನ್ನೂ ವಿಧವೆಯಾಗಿರುವದಿಲ್ಲ. ಇದಲ್ಲದೆ ಇಬ್ಬರು ರಾಜಪುತ್ರನೂ ಅಜ್ಞಾನಿಗಳಿರುವದಿಲ್ಲ. ಒಬ್ಬನು ಇಪ್ಪತ್ತುಮೂರು ವರ್ಷದವನಿರುವನು, ಎರಡನೆಯವನು ಹತ್ತೊಂಬತ್ತು ವರ್ಷದವನಿರುವನು. ಹೀಗೆ ಇಬ್ಬರು ಮಕ್ಕಳು ಪ್ರಬುದ್ಧರಿರುವದರಿಂದ ಕಾಯದೆಯಿಂದ ನಿಮ್ಮ ಅಧಿಕಾರವು ನಷ್ಟವಾಗಿದ್ದು, ಮಹಾರಾಣಿ ಎಂಬ ಬಿರುದಿನಿಂದ ಮೆರೆಯುವ ನಿಮ್ಮ ಬಾಧ್ಯತೆಯು, ನಾವು ಬದುಕಿರುವವರೆಗೆ ಮಾತ್ರ ನಿಮ್ಮ ಕಡೆಗೆ ಇರುವದು.

ಸೋಯರಾಬಾಯಿ— ವಿಧವೆಯಾಗಬೇಕೆಂದು ಯಾವ ಸ್ತ್ರೀಯು ಇಚ್ಛಿಸುತ್ತಿರಬಹುದು?

ಮಹಾರಾಜರು— ಲೋಭಿಯಾದವಳು!

ಸೋಯರಾಬಾಯಿ— ಲೋಭಿಯಾಗಿದ್ದವಳು ಹಾಗೆ ಇಚ್ಛಿಸಬಹುದು.

ಮಹಾರಾಜರು— ಆಯಿತು ಹಾಗಾದರೆ, ಇಲ್ಲಿಗೆ ನಮ್ಮ ನ್ಯಾಯ ನಿರ್ಣಯವಾದ ಹಾಗಾಯಿತು.

ಸೋಯರಾಬಾಯಿ— ನ್ಯಾಯವಾದದ್ದೇನೋ ನಿಜ! ಆದರೆ ನಮ್ಮಿಬ್ಬರ ಪಶ್ಚಾತ್ ಜಗಳ ತೋಟೆಗಳಾಗಬಾರದೆಂದು ಇಷ್ಟುಹೊತ್ತು ಮಾತಾಡಿದೆನು. ಇದರಲ್ಲಿ ನನ್ನ ತಪ್ಪೇನು ತೋರಿಸಿ ಕೊಡಬೇಕು.

ಮಹಾರಾಜರು— ನಿಮ್ಮ ತಪ್ಪೇನು ಇರುವದಿಲ್ಲ; ಸವತಿಮತ್ಸರಕ್ಕೆ ಕಾರಣವಾಗುವಂತೆ ಬಹುಜನ ಹೆಂಡಿರನ್ನು ಮಾಡಿಕೊಂಡದ್ದು ನಮ್ಮದೇ ತಪ್ಪು! ಅದಿರಲಿ, ನಾವಿಬ್ಬರು ಅಣ್ಣತಮ್ಮಂದಿರು ನಮ್ಮ ಜಗಳವನ್ನು ನಮ್ಮನಮ್ಮೊಳಗೆ ತೀರಿಸಿಕೊಂಡಂತೆ, ತಮ್ಮೊಳಗೇ ಜಗಳಬಂದಲ್ಲಿ ಅವರಿಬ್ಬರು ಅದನ್ನು ತಮ್ಮ ತಮ್ಮೊಳಗೇ ತೀರಿಸಿಕೊಳ್ಳುವಷ್ಟು ತಿಳುವಳಿಕೆ ಯವರಿದ್ದಾರೆ; ಆದ್ದರಿಂದ ಆ ಇಲ್ಲದ ಜವಾಬುದಾರಿಯನ್ನು ನಾನು ಮೈಮೇಲೆ ಎಳೆದುಕೊಂಡು, ತಂದೆ ಕುಳಿತು ಮಕ್ಕಳಲ್ಲಿ ಪಾಲುಮಾಡಿದನೆಂಬ ಧರ್ಮವಿರುದ್ಧವಾಗಿರುವ ದುರ್ಲೌಕಿಕಕ್ಕೆ ಯಾಕೆ ಗುರಿಯಾಗಬೇಕು? ಕಾಲಕ್ಕನುಸರಿಸಿ ಆಗುವದನ್ನು ಯಾರೂ ತಪ್ಪಿಸುವದಿಲ್ಲ. ಆದ್ದರಿಂದ ನಾನು ಧರ್ಮವಿರುದ್ಧವಾಗಿ ಆಚರಿಸದಿದ್ದರಾಯಿತು. ಅದಿರಲಿ, ಆದರೆ ನಮ್ಮ ಆ ಲಾಲಮಣಿಕುದುರೆಯ, ಹಾಗೂ ಸುಭಾನನ ಸುದ್ದಿಯೇನು? ಬೇಟೆಗೆ ಹೋಗುವದಕ್ಕಾಗಿ ಆ ಕುದರೆಯನ್ನು ಸಿದ್ಧ ಮಾಡತಕ್ಕದ್ದೆಂದು ನಾವು ಇಂದು ಬೆಳಗಿನಲ್ಲಿ ಹೇಳಿಕಳಿಸಲು, ಆ ಕುದುರೆಯನ್ನು ನಿಮ್ಮ ಅಪ್ಪಣೆಯಿಂದ ಸುಭಾನನು ಪಲ್ಹಾಳಗಡಕ್ಕೆ ಒಯ್ದಿರುವನೆಂಬ ಸುದ್ದಿಯು ಬಂದಿತು. ಸುಭಾನನು ಪಲ್ಹಾಳಗಡಕ್ಕೆ ಯಾಕೆ ಹೋಗಿರುವನು?

ಸೋಯರಾಬಾಯಿ— (ಕಿವಿಯ ಮೇಲೆ ಕೈಯಿಟ್ಟು) ತಮ್ಮ ಪಾದಸಾಕ್ಷಿಯಾಗಿ ಇದರ ಗೂಢವು ನನಗೆ ತಿಳಿಯದು. ಸುಭಾನನು ಪಲ್ಹಾಳಗಡಕ್ಕೆ ಹೋದದ್ದೇ ನನಗೆ ಗೊತ್ತಿಲ್ಲ. ಪಾಗಾದ ಮುಖ್ಯಸ್ಥನಿಗೆ ಕುದುರೆಯನ್ನು ಕೊಡಲು ನಾನು ಅಪ್ಪಣೆಯನ್ನು ಮಾಡಿರುವದಿಲ್ಲ; ಸುಭಾನನನ್ನು

ನಾನು ಪಲ್ಲಾಳಗಡಕ್ಕೆ ಕಳಿಸಿಯೂ ಇಲ್ಲ; ಇದೇನು ಲಚಂಡವವ್ವಾ ಇದು! ತಾವು ಚನ್ನಾಗಿ ಶೋಧ ಮಾಡಬೇಕು; ಇಲ್ಲದ ಅಪರಾಧಕ್ಕೆ ಯಾರು ಹೊಣೆಯಾದಾರು?

ಮಹಾರಾಜರು—ಒಳ್ಳೇದು ಅದಿರಲಿ, ಅದರ ವಿಚಾರವು ಆಗೇ ಆಗುವದು. ಬೆಳಗಿನ ನಗಾರೆಯಾದದ್ದರಿಂದ ನಾವು ಇನ್ನು ಪಾರ್ಥಿವ ಪೂಜೆಗೆ ಹೋಗಬೇಕಾಗುವದು. ಸೂರ್ಯೋದಯವಾದ ಕೂಡಲೇ ಬೇಟೆಗೆ ಹೊರಡುವದದೆ.

ಸೋಯರಾಬಾಯಿ—ಮೊಣಕಾಲು ಬಾತಿದೆ, ಜ್ವರ ಬರುತ್ತದೆ, ಈ ಸ್ಥಿತಿಯಲ್ಲಿ ಬೇಟೆಗೆ ಹೋಗುವದನ್ನು ಬಿಟ್ಟರೆ ಬರಲಿಕ್ಕಿಲ್ಲವೇನು? ಆಯಾಸದಿಂದ ಪ್ರಕೃತಿಗೆ ಹೆಚ್ಚು ಬಾಧೆಯಾದೀತೆಂದು ಹೇಳಿದೆನು.

ಮಹಾರಾಜರು—ಇಂಥ ಸಣ್ಣ ಪುಟ್ಟ ಬೇನೆಗಳಿಗಾಗಿ ಅಂಜಿ ನಾವು ಈವರೆಗೆ ನಡೆದಿದ್ದರೆ ಈ ರಾಯಗಡದಲ್ಲಿ ಈಗಿನ ಸ್ಥಿತಿಯಲ್ಲಿ ಇರಲಿಕ್ಕೆ ನಮಗೆ ಎಂದೂ ಬರುತ್ತಿದ್ದಿಲ್ಲ.

ಈ ಮೇರೆಗೆ ಮಾತಾಡುತ್ತಿರುವಷ್ಟರಲ್ಲಿ ಸ್ನಾನದ ಹೊತ್ತಾಯಿತೆಂದು ಭಾಲದಾರನು ಉದ್ಘೋಷಿಸಿದ್ದನ್ನು ಕೇಳಿ, ಮಹಾರಾಜರು ಮಂಚದಿಂದ ಎದ್ದು ಸೋಯರಾಬಾಯಿಯ ಅನುಮತಿಪಡೆದು ಹೊರಡಲು, ಸೋಯರಾಬಾಯಿಯು— ''ಈ ದಿನ ಹ್ಯಾಗೂ ಬೇಟೆಗೆ ಹೋಗೋಣವಾಗುವದು; ಸಾಯಂಕಾಲಕ್ಕೆ ಬಂದೇ ಬರಬಹುದು; ಆದ್ದರಿಂದ ಇಂದಿನ ಸಂಜೆಯ ಊಟವು ಇಲ್ಲಿಯೇ ಆಗಬೇಕು'' ಎಂದು ಹೇಳಿಕೊಂಡಳು. ಅದಕ್ಕೆ ಮಹಾರಾಜರು— ಬೇಟೆಯಿಂದ ಬಂದಬಳಿಕ ಆ ಮಾತನ್ನು ನಿರ್ಧರಿಸುವೆವು. ಎಂದು ಹೇಳಿ ಹೊರಟುಹೋದರು. ಸೋಯರಾಬಾಯಿಯು ಅವರನ್ನು ಕಳಿಸುವದಕ್ಕಾಗಿ ಅಂತಗೃಹದ ಬಾಗಿಲವರೆಗೆ ಹೋಗಿ ತಿರುಗಿ ಒಳಗೆ ಬಂದು ಮಂಚದ ಮೇಲೆ ಲೋಡಿಗೆ ಆತು ಆಲೋಚಿಸುತ್ತ ಕುಳಿತುಕೊಂಡಳು. ಸ್ವಲ್ಪ ಹೊತ್ತಿನ ಮೇಲೆ ಆಕೆಯು ಕರವಸ್ತ್ರದಿಂದ ತನ್ನ ಹಣೆಯ ಹಾಗೂ ಕೊರಳ ಬೆವರನ್ನು ಒರಸಿಕೊಂಡು ಮುಂದರಿದ ಮೇಲ್ಕಟ್ಟಿನ ಕಡೆಗೆ ದೃಷ್ಟಿಗಳನ್ನು ಚಲ್ಲಿ ಒಮ್ಮೆ ನಿಟ್ಟುಸಿರುಬಿಟ್ಟು ತನ್ನೊಳಗೆ—ಇಷ್ಟು ಬೇಗನೆ ವಿಷದ ಸುದ್ದಿಯು ಹ್ಯಾಗೆ ಹೊರಬಿದ್ದಿರಬಹುದು? ಕೆಲಸ ಮಾಡುವಾಗ ನನ್ನಿಂದಲೇ ತಪ್ಪಾಯಿತು. ನಾನು ಇಷ್ಟು ಅವಸರಮಾಡಿ ಲಾಲಮಣಿ ಕುದರೆಯನ್ನು ಕಳಿಸತಕ್ಕದ್ದಿದ್ದಿಲ್ಲ. ಆದರೇನಾಯಿತು? ಕುದುರೆಯನ್ನೂ ಸುಭಾನನನ್ನೂ ಕೂಡಿಯೇ ಗೊತ್ತಿಗೆ ಹಚ್ಚಬೇಕೆಂದು ಪಿರೋಜಿಗೆ ಪತ್ರಬರೆದಿರುವೆನಲ್ಲ; ಈವರೆಗೆ ಸುಭಾನನು ಬಾರದೆ ಇದ್ದದ್ದರಿಂದ ಅತ್ತ ಅವನ ವ್ಯವಸ್ಥೆಯಾಗಿರಬಹುದು; ಕುದುರೆಯೂ ಗೊತ್ತಿಗೆ ಹತ್ತರಿಬಹುದು. ಏನೇ ಇರಲಿ, ಹೀಗೆ ಅಂಜಿದರೆ ಹ್ಯಾಗೆ? ಇನ್ನು ಸುಬಾನನ ಹೆಂಡತಿಯಾದ ಜೀವುವನ್ನಷ್ಟು ಗೊತ್ತಿಗೆ ಹಚ್ಚತಕ್ಕದ್ದು! ಇಲ್ಲದಿದ್ದರೆ ಅದೊಂದು ಸಾಕ್ಷಿಯಾಗಿ ಕುಳಿತೀತು! ಈವರೆಗೆ ನನ್ನ ಗೂಢತಂತ್ರಗಳೆಲ್ಲ ಸಾಧಿಸುತ್ತ ಬಂದಿವೆ; ಮುಖ್ಯ ಮುಖ್ಯ ಮುತ್ಸದ್ದಿಗಳು ನನ್ನ ಕಡೆಗೆ; ಸೇನಾಪತಿಯು ನನ್ನ ಕಡೆಗೆ! ಇನ್ನು ಯಾರೂ ನನ್ನ ಕಟ್ಟಿನೊಳಗಿಂದ ಹೊರಬಿದ್ದುಹೋಗುವಹಾಗಿಲ್ಲ; ಯಾಕಂದರೆ ಹೊರಬಿದ್ದವರು ರಾಜದ್ರೋಹಿಗಳೆಂದು ಸಿದ್ಧವಾಗಿ ಘೋರಶಾಸನಕ್ಕೆ ಒಳಗಾಗಬೇಕಾಗುವದು. ಆದ್ದರಿಂದ ವಿಶ್ವಪ್ರಯತ್ನ ಮಾಡಿ

ಎಲ್ಲರೂ ಕೂಡಿ ಕಾರ್ಯವನ್ನು ಸಾಧಿಸಲೇಬೇಕಾಗಿರುವದು. ಮುಖ್ಯ ಮುಖ್ಯ ಜನರೇ ನನ್ನ ಕಡೆಗೆ ಆನಂತಾಗಿರುವದು. ಆಗದೇನು ಮಾಡ್ಯಾರು? ದುಷ್ಟ ಶಂಭ್ಯಾನ ದುರ್ಗುಣ ಗಳಿಗೂ, ದುರಾಚಾರಿಗಳಿಗೂ ಎಲ್ಲರೂ ಬೇಸತ್ತಿದ್ದು ಇವನು ರಾಜ್ಯಾಧಿಕಾರಿಯಾದರೆ ರಾಜ್ಯವು ನಿಶ್ಚಯವಾಗಿ ಮುಣುಗುವದೆಂದು ಎಲ್ಲರ ನಂಬಿಗೆಯಾಗಿ ಹೋಗಿರುವದು! ಕೂಡಿಸಲಿ, ಇನ್ನು ಶಂಭ್ಯಾನನ್ನೇ ಪಟ್ಟಕ್ಕೆ ಕೂಡಿಸಲಿ; ಹ್ಯಾಗೆ ಕೂಡಿಸುತ್ತಾರೋ ನೋಡುತ್ತೇನೆ. ಉಮಾಜಿಯ ಕಾರ್ಯವು ಸಾಧಿಸಿದ್ದರಂತೂ ಬಂಗಾರವೇ ಆಯಿತು; ನನ್ನ ರಾಜಾರಾಮನು ಅನಾಯಾಸವಾಗಿ ಸಿಂಹಾಸನಾಧಿಪತಿಯಾಗುವನು; ಅಥವಾ ಸಿಂಹಾಸನವು ತಾನಾಗಿ ಅವನಕಡೆಗೆ ನಡೆದು ಬರುವದು; ಆದರೆ ಇನ್ನೊಂದು ಮುಳುವು ಇರುವದನ್ನು ನಾನು ಮರೆತುಬಿಟ್ಟೆನಲ್ಲ! ಶಂಭ್ಯಾನ ಹೆಂಡತಿಯಾದ ಏಸಿಯು (ಏಸೂಬಾಯಿಯು) ಗಂಡು ಹಡೆದರೆ ಮತ್ತೆ ಹಿರಿಯತನದ ಹಕ್ಕು ಉಳಿಯುವದಲ್ಲವೆ? ಆದ್ದರಿಂದ ಶಂಭ್ಯಾನನ್ನು ಗೊತ್ತಿಗೆ ಹಚ್ಚುವಂತೆ, ಏಸಿಯ ಹೊಟ್ಟೆ ಯೊಳಗಿನ ಕೂಸನ್ನೂ ಗೊತ್ತಿಗೆ ಹಚ್ಚಬೇಕು. ಚತುರಳಾದ ಸೂಲಗಿತ್ತಿಗೆ ಹೇಳಿ ಈ ಕೆಲಸವನ್ನು ಮಾಡಿಸುವೆನು; ಇರಲಿ, ಇನ್ನು ಆದದ್ದನ್ನು ನೋಡಿಬಿಡುವೆನು; ನಾನು ಅಸುರೀವ್ಯಾಪಾರ ರೂಪವಾದ ಉದಧಿಯಲ್ಲಿ ಹಾರಿ ಹಿಂದಕ್ಕೆ ತಿರುಗಿ ಬಾರದಷ್ಟು ದೂರ ಹೋಗಿ ಬಿಟ್ಟಿರುವೆನು; ಅಂದಬಳಿಕ ಇನ್ನು ಹಿಂದೆಮುಂದೆ ನೋಡುವದೇಕೆ? ಆದರೆ ನಮ್ಮ ಖೋಡಿದಾಸಿಯು ಎತ್ತ ಹೋದಳು? ಅಣ್ಣಾಜಿ ದತ್ತೋನನ್ನು ಈಗಲೇ ಕರಕೊಂಡು ಬರಬೇಕಾಗಿದೆ, ಎಂದು ಅತ್ತಿತ್ತ ನೋಡಲು, ಜಿವುವು ಬಳಿಯಲ್ಲಿಯೇ ನಿಂತುಕೊಂಡಿದ್ದಳು. ಅದನ್ನು ನೋಡಿ ಸೋಯರಾ ಬಾಯಿಯು ಸ್ವಲ್ಪ ಗಾಬರಿಯಾದಳು. ತಾನು ಒಬ್ಬಳೇ ಇರುವೆನೆಂದು ತಿಳಿದು ತನ್ನೊಳಗೆ ಮಾತಾಡಿಕೊಳ್ಳುವಾಗ ಜೀವುವು ಕೇಳಬಾರದ ಮಾತುಗಳನ್ನು ಆ ತಾಮಸಿಯು ಮಾತಿನ ಭರದಲ್ಲಿ ಆಡಿಬಿಟ್ಟಿದ್ದಳು; ಆದ್ದರಿಂದ ಅವನ್ನು ಜೀವುವು ಎಲ್ಲಿ ಕೇಳಿರುವಳೋ ಎಂಬ ಸಂಕೋಚದಿಂದ ಮಹಾರಾಣಿಯು ಜೀವುವನ್ನು ಕುರಿತು—

ಸೋಯರಾಬಾಯಿ— ಜೀವ್ಯೂ, ನೀನು ಯಾವಾಗ ಬಂದೆ? ಬಂದದ್ದನ್ನು ಹೇಳದೆ ಹೀಗೆ ಅರಿಯದವಳಂತೆ ಸುಮ್ಮನೆ ನಿಂತುಕೊಳ್ಳಬೇಕೇನು? ಇದೆಲ್ಲಿಯ ರೀತಿಯನ್ನು ಕಲಿತೆ?

ಜೀವು— ಅವ್ವನವರೇ, ಕ್ಷಮಿಸಬೇಕು, ಏನೋ ವಿಚಾರ ಮಾಡುತ್ತ ಕುಳಿತಂತೆ ತೋರಿದ್ದ ರಿಂದ, ನಾನು ಬಂದದ್ದನ್ನು ಈಗ ಹೇಳಬೇಕೋ ಹೇಳಬಾರದೋ ಎಂಬ ಸಂಶಯದಿಂದ ಸುಮ್ಮನಿದ್ದೆನು; ಆದರೆ ಸರಕಾರ, ಪಲ್ಲಾಳಗಡಕ್ಕೆ ಹೋದ ನವಮ್ರಾತನು ಇನ್ನೂ ಬರಲೇ ಇಲ್ಲವಲ್ಲ? ಅವನು ನಿನ್ನೇಗೇ ಬರಬೇಕಾಗಿತ್ತಲ್ಲವೆ? ಲಾಲಮಣಿ ಕುದುರೆಯನ್ನು ಒಯ್ದೂ ಇಷ್ಟು ತಡವಾಗಬೇಕೆ? ಸರಕಾರ, ಯಾಕೋ ನಿನ್ನಿನಿಂದ ನನ್ನ ಜೀವಕ್ಕೆ ಸೊಗಸೇ ಇಲ್ಲ, ಹುಚ್ಚುಹಿಡದ ಹಾಗಾಗಿದೆ!

ನಿಜವಾಗಿ ಕೇಳಿದರೆ ಜೀವುವು ಸೋಯರಾಬಾಯಿಯ ಮಾತುಗಳನ್ನೆಲ್ಲ ಕೇಳಿದ್ದಿಲ್ಲ; ಹಾಗೆ ಕೇಳುವಂಥ ಜಾಣಳೂ ಆಕೆಯಿದ್ದಿಲ್ಲ, ಆಕೆಯು ಸಭ್ಯಳು, ಒಡೆಯಳ ಅಪ್ಪಣೆಗಾಗಿ ಪ್ರಾಣ ಕೊಡುವವಳು. ಆಕೆಯು ಇಂಥ ಹೊಯ್ಮಾಲಿತನವನ್ನು ಸರ್ವಥಾ ಅರಿಯೇ ಅರಿಯಳು. ತನ್ನ

ಗಂಡನು ಬಾರದ ಚಿಂತೆಯಿಂದ ಆತನನ್ನೇ ನೆನಿಸುತ್ತ ಸೋಯರಾಬಾಯಿಯ ಮಾತಿನ ಕಡೆಗೆ ಲಕ್ಷವಿಲ್ಲದೆ ತನ್ನ ವಿಚಾರದಲ್ಲಿ ತಾನು ನಿಂತುಬಿಟ್ಟಿದ್ದಳು. ಆ ಗಂಡಹೆಂಡಿರು ಬಡವರಾದರೂ ಅವರಲ್ಲಿ ಪರಸ್ಪರ ಪ್ರೇಮಬಹಳ. ಅವರ ಹೊಟ್ಟೆಯಲ್ಲಿ ಒಂದೇ ಒಂದು ಗಂಡು ಅಪರೂಪಕ್ಕೆ ಹುಟ್ಟಿದ್ದರಿಂದ ಸೊಗಸಿನಿಂದ ಅವರು ಸಂಸಾರಮಾಡಿಕೊಂಡಿದ್ದರು. ಇಂಥ ಪತಿಭಕ್ತಳು, ಯಾಕೋ ಎಂದೂ ಆಗದಷ್ಟು ಅಸಮಾಧಾನವು ಪತಿಯ ಸಂಬಂಧದಿಂದ ತನಗಾಗಿರುವಾಗ, ಪತಿದ್ರೋಹಿಯಾದ ಸೋಯರಾಬಾಯಿಯ ಮಾತುಗಳ ಕಡೆಗೆ ಯಾಕೆ ಲಕ್ಷಕೊಡುವಳು? ಆದರೆ ಸೋಯರಾಬಾಯಿಯು ಮಾತ್ರ, ತನ್ನ ಮಾತು ಕೇಳಿಯೇ ಗುಪ್ತಾಲೋಚನೆಯು ಹೊರಬಿದ್ದೀತೆಂದು ಅಂಜಿದಳು; ಆದರೆ ಆ ಸಮರ್ಥಳಿಗೆ ಜೀವುವನ್ನು ಪರಲೋಕಕ್ಕೆ ಕಳಿಸಲಿಕ್ಕೆ ತಡವಾಗುವಹಾಗಿದ್ದಿಲ್ಲ; ಮತ್ತು ಅದಕ್ಕೆ ಹಿಂಜರಿಯುವಷ್ಟು ದಯಾವಂತಳೂ ಆಕೆಯಿದ್ದಿಲ್ಲ; ಆದ್ದರಿಂದ ಆಕೆಯು ಜೀವುವನ್ನು ಕುರಿತು— ಎಂಥ ಹುಚ್ಚಿಯೇ ನೀನು? ಗಂಡಬರಲು ಒಂದು ದಿನ ತಡವಾದದಕ್ಕೆ ಇಷ್ಟು ಅಸಮಾಧಾನಪಡಬೇಕೇನು? ರಾಜ್ಯಕ್ಕಿಲ್ಲದ ಗಂಡನು ನಿನಗೇ ಇರುವನೇ? ಇಂದಿಲ್ಲ ನಾಳೆ ಬಂದಾನು. ಅವನು ಹೋಗಿ ತಿಂಗಳಾಗಿಲ್ಲ– ಎರಡು ತಿಂಗಳಾಗಿಲ್ಲ! ಮಹಾರಾಜರು ಆರುತಿಂಗಳು ಮನೆಗೆ ಬಾರದಿದ್ದರೂ ಮನಸ್ಸು ಕಲ್ಲುಮಾಡಿಕೊಂಡು ನಾನು ಕಾಲಕಳೆದದ್ದನ್ನು ನೀನು ನೋಡಲಿಲ್ಲವೆ? ಕೆಲಸವಂತರು ಹೀಗೆ ಇಲ್ಲದ ಚಿಂತೆಗೆ ಒಳಗಾಗ ಬಾರದು. ನಿನ್ನ ಗಂಡನೇನು ಹೋಗಬಾರದಲ್ಲಿಗೆ ಹೋಗಿರುವನೇ, ನಾಳೆಬರುವನು. ಹೋಗು, ಭೀಮಸಿಂಗನ ಬಳಿಗೆ ಹೋಗಿ ಈ ಕಾಗದವನ್ನು ಕೊಡು, ಎಂದು ಹೇಳಿ, ಒಂದು ಕಾಗದದ ಮೇಲೆ ಏನೋ ಸಂಕೇತ ಮಾಡಿ ಜೀವುವಿನ ಕೈಯಲ್ಲಿ ಕೊಟ್ಟಳು. ಪಾಪ! ಒಂದೂ ಪಾಪವರಿಯದ ಆ ಬಡವಿಯು ಏನ ಮಾಡಿಯಾಳು? ಆಕೆಯು ಎರಡನೆಯ ಮಾತಾಡದೆ ಆ ಚೀಟಿಯನ್ನು ತಕ್ಕೊಂಡು, ಆಯುಷ್ಯತೀರದ ಪ್ರಾಣಿಗಳು ಯಮಲೋಕದ ಹಾದಿಯನ್ನು ಹಿಡಿಯುವಂತೆ, ಭೀಮಸಿಂಗನ ಮನೆಯ ಹಾದಿಯನ್ನು ಹಿಡಿದಳು! ಇತ್ತ ಸೋಯರಾಬಾಯಿಯು ನೈಷ್ಠುರ್ಯ ದಿಂದ— ಹೀಗೆ ಮಾಡಿದರೆಯೇ ನನ್ನ ದುರಾಲೋಚನೆ ದುಷ್ಕೃತ್ಯಗಳು ಹೊರ ಬೀಳಲಿಕ್ಕಿಲ್ಲ! ಇಷ್ಟು ಹೊತ್ತಿಗೆ ಈ ಕೆಲಸವನ್ನು ಮಾಡಿಬಿಡಬೇಕಾಗಿತ್ತು, ಎಂದು ಒಟಗುಟ್ಟಿ ಮತ್ತೊಬ್ಬ ದಾಸಿಯನ್ನು ಕರೆದು, ಅಣ್ಣಾಜಿ ದತ್ತೋನನ್ನು ಈಗಲೇ ಕರಕೊಂಡು ಬಾ ಎಂದು ಆಕೆಯನ್ನು ಅಟ್ಟಿದಳು!

## ರಾಜಕಾರಣ

ಮಹಾರಾಜರು ಬೇಟೆಗೆ ಹೋದರಾತ್ರಿ ಸೋಯರಾಬಾಯಿಯ ಬಳಿಗೆ ಹೋಗಲಿಲ್ಲ. ಮಹಾರಾಣಿಯು ಪ್ರತಿಜ್ಞಾಪೂರ್ವಕವಾಗಿ ಸುಳ್ಳಾಡುವಷ್ಟು ವಿವೇಕಭ್ರಷ್ಟಳೂ, ಪಾಪಿಷ್ಟಳೂ ಆಗಿರುವದನ್ನು ನೋಡಿ ಅವರು ನಿರಾಶೆಪಟ್ಟರು. ಅವರ ಮನಸ್ಸು ಬಹಳ ಉದಾಸೀನ

ವಾಯಿತು. ಬೇಟೆಗೆ ಹೋದ ಆಯಾಸದಿಂದ ಅವರ ಬೇನೆಯು ಸ್ವಲ್ಪ ಹೆಚ್ಚಾದಂತೆ ತೋರಿತು. ತಮ್ಮದಂತೆ ಗೃಹಕಲಹವನ್ನು ಸೌಜನ್ಯದಿಂದ ಮುರಿಯುವ ಸಂಭವತೋರಿದ್ದರಿಂದ, ಅದನ್ನು ನೈಷ್ಠುರ್ಯದಿಂದಲೇ ಮುರಿಯಬೇಕಾಗುವದೆಂದು ಅವರು ಭಾವಿಸಿದರು. ತಮ್ಮ ಇಳಿಕೆಯ ವಯಸ್ಸಿನಲ್ಲಿ ತಮ್ಮ ಗೃಹಕಲಹ ಮುರಿಯುವದಕ್ಕಾಗಿ ಯತ್ನಿಸಬೇಕಾದದ್ದು ತಮ್ಮ ದುರ್ದೈವ ವೆಂತಲೂ ಅವರ ಭಾವನೆಯಾಯಿತು. ಶ್ರೀಸಮರ್ಥರ ಕಡೆಗೆ ಕಳಿಸತಕ್ಕ ಸನದನ್ನು ಇನ್ನೂ ಕಳಿಸಿದ್ದಿಲ್ಲ. ಮಾಡತಕ್ಕ ಸತ್ಕಾರ್ಯದಲ್ಲಿ ವಿಲಂಬ ಮಾಡುವದು ಸರಿಯಲ್ಲೆಂದು ತಿಳಿದು, ಬೆಳಗಾಗುತ್ತಲೆ ಸನದನ್ನು ಕಳಿಸತಕ್ಕದ್ದೆಂದು ಅವರು ನಿಶ್ಚಯಿಸಿದರು. ಒಮ್ಮೆ ನಿಶ್ಚಯವಾದ ಬಳಿಕ ಅದನ್ನು ತಪ್ಪದಿರುವದು ಮಹಾರಾಜರ ಸ್ವಭಾವವಾಗಿತ್ತು. ಆ ದಿನ ರಾತ್ರಿ ಅವರಿಗೆ ಚನ್ನಾಗಿ ನಿದ್ರೆ ಬರಲಿಲ್ಲ. ಅವರ ಮನಸ್ಸಿನ ಉತ್ಸಾಹವು ಅಳಿದು ಹೋಯಿತು. ಬೆಳಗಾಗುತ್ತಲೆ ಅವರು ಮೋರೋಪಂತ ಪಿಂಗಳೆ, ಅಣ್ಣಾಜಿದತ್ತೋ ಇವರನ್ನು ಕರೆಸಿ ಸಜ್ಜನಗಡಕ್ಕೆ ಇಂದೇ ಪಲ್ಲಕ್ಕಿಯು ಹೊರಡತಕ್ಕದ್ದೆಂದು ಹೇಳಿದರು. ಅವರಿಬ್ಬರು ಮುಖ್ಯಸ್ಥರಾಗಿ ಪಲ್ಲಕ್ಕಿಯೊಡನೆ ಹೋಗತಕ್ಕದ್ದೆಂದು ಗೊತ್ತಾಯಿತು. ಮಹಾರಾಜರು ಸಿಂಹಾಸನವೇರಿದ ಐದುವರ್ಷಗಳಲ್ಲಿ ಶ್ರೀಸಮರ್ಥರ ದರ್ಶನವು ಒಮ್ಮೆ ಮಾತ್ರ ಅವರಿಗೆ ಆಗಿತ್ತು. ಶ್ರೀಗುರುದರ್ಶನವಿಲ್ಲದೆ ಬಹಳ ದಿವಸಗಳಾದ್ದರಿಂದ ಅವರ ಮನಸ್ಸು ಚಡಪಡಿಸುತ್ತಿತ್ತು. ತಾವು ಸ್ವತಃ ಪಲ್ಲಕ್ಕಿಯನ್ನು ಹೊತ್ತುಕೊಂಡು ಸಜ್ಜನಗಡದ ವರೆಗೆ ಹೋಗುವದು ಅವರ ಮನಸ್ಸಿನೊಳಗಿತ್ತು; ಆದರೆ ಜಡ್ಡಾದದ್ದ ರಿಂದ ಅವರು ಅಸಮಾಧಾನದಿಂದ ತಾವು ಹೋಗುವದನ್ನು ರಹಿತಮಾಡಬೇಕಾಯಿತು. ಮಹಾರಾಜರು ಅತ್ಯಂತ ಭಾವಿಕರು, ಧರ್ಮನಿಷ್ಠರು. ತಮಗೆ ರೋಗಬಾಧೆಯಾಗಿರಲು, ಸಮರ್ಥರ ದರ್ಶನಯೋಗವು ಒದಗದೆ ಯಿದ್ದದ್ದು ದುರ್ಲಕ್ಷಣವೆಂದು ಅವರ ಕಲ್ಪನೆ ಯಾಯಿತು; ಆದರೂ ಅದನ್ನು ಮನಸ್ಸಿನಲ್ಲಿಯೇ ಇಟ್ಟುಕೊಂಡು ಪಲ್ಲಕ್ಕಿಯನ್ನು ಸಜ್ಜನಗಡಕ್ಕೆ ಕಳಿಸುವ ವ್ಯವಸ್ಥೆಯಲ್ಲಿ ತೊಡಗಿದರು. ಅಪ್ಪಣೆ ಯಂತೆ ಪಲ್ಲಕ್ಕಿಯು ಸಿದ್ಧವಾಯಿತು. ಪಲ್ಲಕ್ಕಿ ಯಲ್ಲಿ ಸನದುಹಾಕಿದ ಸುವರ್ಣದ ಡಬ್ಬಿಯನ್ನಿಟ್ಟು, ಅದನ್ನು ಬಗೆಬಗೆಯ ಹೂಮಾಲೆಗಳಿಂದ ಶೃಂಗರಿಸಿದ್ದರು. ಸುಗಂಧದ್ರವ್ಯಗಳ ಸುವಾಸನೆಯು ಇಡಿಗಿತ್ತು. ಸುರ್ಯೋದಯದ ಸಮಯದಲ್ಲಿ ಸಮಾರಂಭದಿಂದ ಪಲ್ಲಕ್ಕಿಯು ಹೊರಟಿತು. ಪಲ್ಲಕ್ಕಿಯ ಸಂಗಡ ಇಪ್ಪತ್ತೈದು ಜನ ರಾವುತರು ಹೊರಡುವದು ಗೊತ್ತಾಗಿತ್ತು. ಮಂಗಲ ವಾದ್ಯಗಳು ಬಾರಿಸತೊಡಗಿದವು. ಉತ್ಸವಪ್ರಿಯರೂ, ಭಾವಿಕರೂ ಆದ ಜನರು ನೆರೆಯ ಹತ್ತಿದರು. ಬಹು ಜನರು ಉತ್ಸವವನ್ನು ನೋಡುವದಕ್ಕಾಗಿ ತಮ್ಮ ಬಾಗಿಲು ಕಿಡಿಕೆಗಳಲ್ಲಿ ನಿಂತುಕೊಂಡರು. ಎಷ್ಟೋ ಜನರು ತಮ್ಮ ಕಟ್ಟೆ–ಮಾಳಿಗೆಗಳ ಮೇಲೆ ನೋಡುತ್ತಿದ್ದರು. ಅಲ್ಲಲ್ಲಿ ಪಲ್ಲಕ್ಕಿಗೆ ಮಂಗಳಾರತಿಗಳಾಗುತ್ತಿದ್ದವು. ಸ್ವತಃ ಮಹಾರಾಜರೂ, ಬಾಳಾಜಿಆವಜಿಯು ಪಲ್ಲಕ್ಕಿಯ ಮುಂದಿನ ದಂಡಿಗೆಗೆ ಹೆಗಲು ಕೊಟ್ಟಿದ್ದರು. ಮೋರೋ ಪಂತಪಿಂಗಳೆ, ಅಣ್ಣಾಜಿದತ್ತೋ ಇವರು ಹಿಂದಿನ ದಂಡಿಗೆಗೆ ಹೆಗಲುಕೊಟ್ಟಿದ್ದರು. ಪಲ್ಲಕ್ಕಿಯ ಮುಂದೆ ವಾದ್ಯಘೋಷವು ನಡೆದಿದ್ದು, ಎಲ್ಲಕ್ಕೂ ಮುಂದೆ ಜರಿಪಟಕಾ ನಿಶಾನೆಯು ಸಾಗುತ್ತಲಿತ್ತು. ಪಲ್ಲಕ್ಕಿಯ ಮುಂದುಗಡೆಯಲ್ಲಿ ಪ್ರಯಾಣಸ್ಥರಾದ ಹನ್ನೆರಡು ಜನ ರಾವುತರೂ,

ಹಿಂದುಗಡೆಯಲ್ಲಿ ಹದಿಮೂರು ಜನ ರಾವುತರೂ ಸಾಗಿದ್ದರು. ಪಲ್ಲಕ್ಕಿಯು ರಾಯಗಡದ ಹೊರಬಾಗಿಲವರೆಗೆ ಉತ್ಸವದಿಂದ ಬಂದಿತು. ಕೂಡೆ ದಂಡಿಗೆಗೆ ಇಬ್ಬಿಬ್ಬರಂತೆ ನಾಲ್ವರು ಬೋವಿಗಲು ಪಲ್ಲಕ್ಕಿಯನ್ನು ಹೊರುವದಕ್ಕಾಗಿ ಬಂದು ನಿಂತರು. ಆಗ "ಜಯ ಜಯ ರಘುವೀರ ಸಮರ್ಥ" ಎಂದು ಜಯ ಘೋಷ ವಾಗುತ್ತಿರಲು, ಮಹಾರಾಜರು ಪಲ್ಲಕ್ಕಿಯನ್ನು ಕೆಳಗಿಳಿಸದೆ ಹಾಗೇ ಬೋವಿಗಳ ಹೆಗಲಿಗೆ ಕೊಟ್ಟರು. ಕೂಡಲೆ ಮೋರೋಪಂತ ಪಿಂಗಳೆ, ಅಣ್ಣಾಜಿದತ್ತೋ ಇವರು ಪಲ್ಲಕ್ಕಿಯ ಒಂದೊಂದು ಮಗ್ಗಲು ನಿಂತು ಅದರ ಜೋಲಿಯನ್ನು ಸಂಬಾಳಿಸಹತ್ತಿದರು.

ಹೀಗೆ ಪಲ್ಲಕ್ಕಿಯ ದಂಡಿಗೆಗಳನ್ನು ಬೋವಿಗಳ ಹೆಗಲಮೇಲೆ ಕೊಟ್ಟ ಕೂಡಲೆ ಮಹಾರಾಜರು ಪಲ್ಲಕ್ಕಿಗೆ ಸಾಷ್ಟಾಂಗನಮಸ್ಕಾರ ಮಾಡಿದರು. ಅತ್ತ ಮೋರೋಪಂತ ಪಿಂಗಳೆಯೂ, ಅಣ್ಣಾಜಿದತ್ತೊವೂ ಸಾಷ್ಟಾಂಗವಾಗಿ ನಮಸ್ಕರಿಸಿದರು. ಬೆಳಗಿನ ತಂಪುಹವೆ ಯಲ್ಲಿ ಇನ್ನು ಹೆಚ್ಚುದೂರ ಬರುವದು ಹಿತಕರವಲ್ಲವೆಂದು ಮಹಾರಾಜರಿಗೆ ಸೂಚಿಸು ವದಕ್ಕಾಗಿ ಮೋರೋಪಂತಪಿಂಗಳೆಯು ವಿನಯದಿಂದ—ಮಹಾರಾಜ, ಇನ್ನು ಮನೆಗೆ ದಯ ಮಾಡಿಸಬೇಕು. ಮೈಯಲ್ಲಿ ಜ್ವರವಿರುವವು; ಮೊಣಕಾಲೂ ವಿಶೇಷ ದದ್ದರಿಸಿರುವದು. ಈ ಸ್ಥಿತಿಯಲ್ಲಿ ತಂಪು ಹವೆಯೊಳಗೆ ಹೆಚ್ಚು ದೂರ ಬರುವದು ಹಿತಕರವಲ್ಲ, ಅನ್ನಲು, ಆಗ ಶಿವರಾಯರ ಕಂಠವು ಸದ್ಗದಿತವಾಗಿದ್ದು, ಅವರ ಮುಖದಲ್ಲಿ ಕೃತಕೃತ್ಯತೆಯ ಲಕ್ಷಣವು ವ್ಯಕ್ತ ವಾಗಿ ಕಾಣುತ್ತಲಿತ್ತು, ಆನಂದಾತಿಶಯದಿಂದ ಅವರ ಮುಖದಿಂದ ಶಬ್ದಗಳೇ ಹೊರಡ ದಾಗಿದ್ದವು; ಆದರೂ ಅವರು ಬಹುಕಷ್ಟದಿಂದ— "ಮೋರೋಪಂತ, ಅಣ್ಣಾಜಿ, ಶ್ರೀಸಮರ್ಥರಿಗೆ ನಮ್ಮ ವಿಜ್ಞಪ್ತಿಯನ್ನು ನಿವೇದಿಸಿ ನನ್ನ ಸಾಷ್ಟಾಂಗ ಪ್ರಣಿಪಾತಗಳನ್ನು ಸಮರ್ಪಿಸಿರಿ. ಮೊಣಕಾಲು ಬಾತದ್ದರಿಂದ ಅದರ ನೋವಿಗೆ ಜ್ವರಬರುತ್ತಿರುವವೆಂಬ ಸಂಗತಿ ಯನ್ನು ತಿಳಿಸಿರಿ. ಪಲ್ಲಕ್ಕಿಯ ಮುಂದಿನ ದಂಡಿಗೆಯನ್ನು ಹೊತ್ತು ನಾವು ಸ್ವತಃ ಸಮರ್ಥರ ದರ್ಶನಕ್ಕೆ ಬರಬೇಕೆಂದು ಮಾಡಿದ್ದೆವು; ಆದರೆ ಜಡ್ಡು ಆಗಲು, ನಮ್ಮ ಮನೋದಯವು ಸಫಲ ವಾಗದ್ದರಿಂದ ಬಹಳ ಅಸಮಾಧಾನವಾಗಿರುವದೆಂಬ ಮಾತನ್ನೂ ಶ್ರೀಗಳ ಚರಣಸನ್ನಿಧಿಯಲ್ಲಿ ನಿವೇದಿಸಿರಿ! ಶ್ರೀಸಮರ್ಥರ ದರ್ಶನದ ಯೋಗವು ಒದಗಬೇಕೆಂಬ ಇಚ್ಛೆಯು ಬಹಳ ವಿರುವದು. ಈ ವರೆಗೆ ಸಮರ್ಥರ ಕೃಪೆಯಿಂದ ನಮ್ಮ ಇಚ್ಛೆಗಳು ಪರಿಪೂರ್ಣವಾಗುತ್ತ ಬಂದವು. ಅದರಂತೆ ಮುಂದೆಯಾದರೂ ಆದಾವೆಂಬ ನಮ್ಮ ನಂಬಗೆಯು ಸಂಪೂರ್ಣವಾಗಿ ಇರುವ ದೆಂಬ ನಮ್ಮ ಈ ವಿನಂತಿಯನ್ನೂ ಸನ್ನಿಧಿಗೆ ಶ್ರುತಿಪಡಿಸಿರ" ಎಂದು, ನುಡಿಯುತ್ತಿರಲು ಅವರ ಕುತ್ತಿಗೆಯ ಶಿರಗಳು ಬಿಗಿದದ್ದರಿಂದ ಮುಂದೆ ಮಾತುಗಳು ಹೊರಡದಾದವು! ಅವರ ಅಂತಃಕರಣವು ಭಕ್ತಿಯಿಂದ ಕರಗಿ ನೀರಾಗಿ ಹೋಗಿತ್ತು, ಆ ಭಕ್ತಿರಸವೇ ಕಣ್ಣುಗಳಿಂದ ಹೊರ ಬೀಳುವದೋ ಅನ್ನುವಂತೆ ಆನಂದಬಾಷ್ಪಗಳು ಸುರಿಯಹತ್ತಿದವು. ಈ ಸ್ಥಿತಿಯನ್ನು ನೋಡಿ ಮೋರೋಪಂತರೇ ಮೊದಲಾದವರ ಕಣ್ಣುಗಳೊಳಗಿಂದಲೂ ನೀರು ಬಂದವು. ಮಹಾರಾಜರ ವಿಷಯದ ಪ್ರಜಾನುರಾಗವೇ ಅಂತಹದು! ಭರತ ಭೂಮಿಯ ಕಲ್ಯಾಣಕ್ಕಾಗಿ ಬಾಲ್ಯದಾರಭ್ಯ

ಪರಿಪರಿಯ ಕಷ್ಟಗಳನ್ನನುಭವಿಸಿದ ವೀರಪುತ್ರನು, ಹೀಗೆ ರೋಗಬಾಧೆಯ ಪರಾಧೀನತೆಯಿಂದ ಮಾಡುತ್ತಿರುವಾಗ, ಯಾರ ಕಣ್ಣೊಳಗಿಂದ ನೀರು ಬರಲಿಕ್ಕಿಲ್ಲ? ಆ ಕಣ್ಣೀರು ಒರಿಸಿ ಕೊಳ್ಳುತ್ತ ಮೋರೋಪಂತನು ಮಹಾರಾಜರನ್ನು ಕುರಿತು—ಸರಕಾರ, ಅಪ್ಪಣೆಯ ಪ್ರಕಾರ ಶ್ರೀಸಮರ್ಥರ ಚರಣದಲ್ಲಿ ಎಲ್ಲ ನಿವೇದಿಸುವೆನು. ಮೈಯಲ್ಲಿ ಜ್ವರ ವಿಶೇಷವಾಗಿರುವವು; ದದ್ದರಿಸಿದ ಮೊಣಕಾಲು, ಬಹಳ ಹೊತ್ತು ನಿಲ್ಲುವದರಿಂದ ಮತ್ತಿಷ್ಟು ನೋವಾದೀತು; ಆದ್ದರಿಂದ ಇನ್ನು ತಾವು ತಿರುಗಿಹೋಗಬೇಕು, ಅನ್ನಲು, ಅಣ್ಣಾಜಿಯು—ಮೋರೋಪಂತರು ಹೇಳುವದು ನಿಜವಿರುವದು, ಹವೆಯಲ್ಲಿ ತಂಪು ವಿಶೇಷವಾಗಿರುವದು; ಆದ್ದರಿಂದ ಹೀಗೆ ಬೈಲಲ್ಲಿ ಬಹಳ ಹೊತ್ತು ನಿಲ್ಲುವದರಿಂದ ಹಿತವಾಗದು. ಪ್ರಭುಗಳು ಹಿಂದಕ್ಕೆ ತಿರುಗ ಬೇಕೆಂದು ನಾನೂ ಬೇಡಿಕೊಳ್ಳುವೆನು, ಎಂದು ಹೇಳಿದನು. ಆತನ ಈ ನಮ್ರಭಾಷಣವನ್ನು ಕೇಳಿ ಮಹಾರಾಜರು—ಅಣ್ಣಾಜೀ, ಸಕಲ ತೀರ್ಥಗಳ ಸಾರವೂ, ಸಕಲ ರಾಜಕಾರಣಗಳ ಭಾಂಡಾರವೂ, ಪರಬ್ರಹ್ಮಸ್ವರೂಪದ ನಿಧಿಯೂ, ನಿಃಸ್ವಾರ್ಥದ ತವರಮನೆಯೂ, ಶಿಷ್ಯ ಪ್ರೇಮದ ಆಗರವೂ, ಶಾಂತಿಯ ಸಾಗರವೂ ಆದ ನಮ್ಮ ಪರಾತ್ಪರ ಗುರುವಿನ ವಸತಿಸ್ಥಾನವಾದ ಸಜ್ಜನಗಡಕ್ಕೆ ಈ ಹೆಗಲಿನಿಂದ ಪಲ್ಲಕ್ಕಿಯನ್ನು ಹೊತ್ತುಕೊಂಡು ಹೋಗಬೇಕೆಂದು ನನ್ನ ಮನಸ್ಸಿನಲ್ಲಿ ಬಹಳ ಇತ್ತೆಂದು ನಾನು ಎಷ್ಟುಸಾರೆ ಹೇಳಿದರೂ ತೀರದು! ಆದರೆ ಅದು ನನ್ನ ದುರ್ದೈವದಿಂದ ಒದಗಿ ಬರಲಿಲ್ಲವಾದದ್ದರಿಂದ ಮನಸ್ಸಿಗೆ ಬಹಳ ಅಸಮಾಧಾನವಾಗಿದೆ. ಅಚ್ಚ ಕ್ಷಾತ್ರತೇಜಕ್ಕೆ ಅಚ್ಚ ಬ್ರಹ್ಮತೇಜದ ಸಹಾಯವು ದೊರೆತು, ಈ ರಾಯಗಡದ ಮೇಲೆ ಮಹಾರಾಷ್ಟ್ರದ ಸಿಂಹಾಸನದ ಪ್ರಾಣಪ್ರತಿಷ್ಠಾಪನೆಯಾದನಂತರ, ಕಳೆದ ಐದುವರ್ಷಗಳಲ್ಲಿ ಒಂದೆಂದರೆ ಒಂದೇ ಸಾರೆ ಶ್ರೀ ಸದ್ಗುರನಾಥನ ದರ್ಶನವಾಯಿತು. ಅಣ್ಣಾಜಿ, ನಾನು ಎಂಥ ಹತಭಾಗ್ಯನು! ಈಗ ಬಂಗಾರದಂಥ ಪ್ರಸಂಗವು ಒದಗಿರಲು, ಕೆಟ್ಟಬೇನೆಯು ತರುಬಿ ಹಾಕಿದ್ದು ನನ್ನ ದುರ್ಭಾಗ್ಯವಲ್ಲದೆ ಮತ್ತೇನು? ಮಾತೃಶ್ರೀಗಳವರ ತರುವಾಯದಲ್ಲಿನಮಗೆ ಅದೊಂದೇ ಹಿರಿಯತನದ ವಿಶ್ರಾಂತಿಸ್ಥಾನವು ಉಳಿದಿರುವದು. ಆ ಸ್ಥಾನವು ಪುನಃ ನನ್ನ ಕಣ್ಣಿಗೆ ಬಿದ್ದು ಮನಃಶಾಂತಿಯು ಪ್ರಾಪ್ತವಾದ ದಿನವೇ ಸುದಿನವು! ಇರಲಿ, ಮೋರೋಪಂತ, ಅಣ್ಣಾಜಿ, ನಡೆಯರಿನ್ನು; ಮುಂದಕ್ಕೆಸಾಗಿರಿ. ನಮ್ಮ ಮೊಣಕಾಲು ಬಹಳ ಸೇದಹತ್ತಿರುವದರಿಂದ ಇನ್ನು ನಿಂತುಕೊಳ್ಳುವದು ನಮ್ಮಿಂದಾದೀತೆನ್ನುವ ಹಾಗೆ ತೋರುವದಿಲ್ಲ. ನಿತ್ಯದಂತೆ ನಮ್ಮ ಬ್ರಹ್ಮಚಿಂತನದ ಗುಹೆಯಲ್ಲಿ ಕುಳಿತುಕೊಳ್ಳುವ ಹೊತ್ತು ಆಯಿತು. ನಡೆಯಿರಿ, ಮುಂದಕ್ಕೆ ಸಾಗಿರಿ. ಜಯಘೋಷಮಾಡಿರಿ. ''ಜಯ ಜಯ ರಘುವೀರ ಸಮರ್ಥ'' ಈ ಮೇರೆಗೆ ಎಲ್ಲರು ಪುನಃ ಜಯಘೋಷಮಾಡಲು, ಮಹಾರಾಜರು ಪುನಃ ನಮಸ್ಕರಿಸಿ ಬಾಳಾಜಿ ಆವಜಿಯ ಹೆಗಲಮೇಲೆ ತಮ್ಮ ಬಲಗೈಯನ್ನಿಟ್ಟು ರಾಜಮಂದಿರದ ಕಡೆಗೆ ನಡೆದರು. ಇತ್ತ ಮೋರೋ ಪಂತನೂ, ಅಣ್ಣಾಜಿಯೂ ಮಹಾರಾಜರಿಗೆ ಮುಜುರೆಮಾಡಿ ಸಜ್ಜನಗಡದ ದಾರಿಯನ್ನು ಹಿಡಿದರು. ಅವರು ಕೆಲಹೊತ್ತು ಹಾದಿಯ ನಡೆದು ಹೋದಬಳಿಕ ಅವರ ಸಂಭಾಷಣಕ್ಕೆ ಆರಂಭವಾಯಿತು.

ಶಿವರಾಯನ ಮನೆತನದಲ್ಲಿ ಈಗ ಎರಡು ಬಣಗಳಾಗಿದ್ದವೆಂಬದನ್ನು ವಾಚಕರು ಬಲ್ಲರು. ಕೆಲವರು ಸಂಭಾಜಿಯ ಬಣದವರು,ಕೆಲವರು ರಾಜಾರಾಮನ ಬಣದವರು ಇದ್ದರು. ಯಾರು ಯಾವ ಬಣದವರಿದ್ದರೂ ಶಿವಾಜಿ ಮಹಾರಾಜರ ವಿಷಯವಾಗಿಯೂ, ಮಹಾರಾಷ್ಟ್ರ ರಾಜ್ಯದ ವಿಷಯವಾಗಿಯೂ ಅವರ ಪ್ರೇಮವು ಕಡಿಮೆಯಾಗಿದ್ದಿಲ್ಲ. ಅವರೆಡು ಇಡಿಯ ಮಹಾರಾಷ್ಟ್ರ ಮಂಡಲಕ್ಕೆ ಪೂಜ್ಯವಾಗಿದ್ದವು. ಸಂಭಾಜಿಯ ಪರಾಕ್ರಮದ ವಿಷಯವಾಗಿ ಜನರ ಆದರವಿದ್ದರೂ, ಆತನ ದುರ್ಗುಣಗಳ ವಿಷಯವಾಗಿ ಕೆಲವರು ತಿರಸ್ಕಾರವುಳ್ಳವರಾಗಿ, ಈತನು ರಾಜ್ಯಕಾರಭಾರಕ್ಕೆ ಅಯೋಗ್ಯನೆಂದು ತಿಳಿದು ರಾಜಾರಾಮನ ಪಕ್ಷವನ್ನು ವಹಿಸಿದರು. ಈ ಎರಡು ಪಕ್ಷಗಳ ಚರ್ಚೆಯು ಕುಳಿತಲ್ಲಿ ನಿಂತಲ್ಲಿ, ಹಾದಿಯಲ್ಲಿ ಬೀದಿಯಲ್ಲಿ, ಎಲ್ಲ ಕಡೆಯಲ್ಲಿ ಗಟ್ಟಿಯಾಗಿ, ಇಲ್ಲವೆ ಮೆಲ್ಲಗೆ ನಡದೇ ಇರುತ್ತಿತ್ತು. ಈಗ ಪಲ್ಲಕ್ಕಿಯ ಸಂಗಡ ಹೊರಟಿದ್ದ ಇಬ್ಬರು ಮುಖ್ಯರಲ್ಲಿ ಅಣ್ಣಾಜಿಯು ಸಂಪೂರ್ಣವಾಗಿ ರಾಜಾರಾಮನ ಪಕ್ಷದವನಾಗಿದ್ದನು; ಮೋರೋ ಪಂತನ ಒಲವು ಸಂಭಾಜಿಯ ಕಡೆಗೆ ಇತ್ತು. ಬಣಗಳು ನ್ಯಾಯದವಿರಲಿ, ಅನ್ಯಾಯದವಿರಲಿ, ಪ್ರತಿ ಒಂದು ಬಣದ ಪಕ್ಷವನ್ನು ವಹಿಸುವ ಜನರು ಸಿಕ್ಕೇರಾಸಿಗುವರೆಂಬದು ವ್ಯಾವಹಾರಿಕ ಅನುಭವದ ಸಂಗತಿಯು; ಯಾಕಂದರೆ, ಮನುಷ್ಯನು ಎಂಥ ಸಜ್ಜನನಿದ್ದರೂ ಅವನಿಗೆ ಶತ್ರು ವಾದವನು ಒಬ್ಬನಾದರೂ ಇರುವನು. ಅದರಂತೆ ಮನುಷ್ಯನು ಎಂಥ ದುರ್ಜನನಿದ್ದರೂ ಅವನಿಗೆ ಮಿತ್ರನಾದವನು ಒಬ್ಬನಾದರೂ ಇರುವನು. ಈ ವೈಲಕ್ಷಣ್ಯದ ಮೂಲಕ ಬಣಗಳು, ಸ್ವಲ್ಪವಾಗಲಿ, ಬಹಳವಾಗಲಿ ಜನಸಂಗ್ರಹವಿಲ್ಲದೆ ಬರಿಯವಾಗಿ ಇರುವದಿಲ್ಲ! ಸಜ್ಜನಗಡದ ಮಾರ್ಗವ ಹಿಡಿದು ಹೋಗುತ್ತಿದ್ದ ಮೋರೋಪಂತನೂ, ಅಣ್ಣಾಜಿಯೂ ಆ ಮಾತು ಈ ಮಾತು ಆಡುತ್ತಾಡುತ್ತ ರಾಜ ಕುಟುಂಬದಲ್ಲಿಯ ಎರಡು ಬಣಗಳ ಕಡೆಗೆ ಹೊರಳಿದರು; ಆದರೆ ಎಲ್ಲರ ಸಮಕ್ಷಮ ಆಡತಕ್ಕ ಮಾತುಗಳಲ್ಲದ್ದರಿಂದ ಅವರು ಆ ಮಾತುಗಳನ್ನು ಬೆಳಸದೆ, ಮುಂದೆ ಒಂದು ಮುಕ್ಕಾಮಿನಲ್ಲಿ ಈ ಮಾತಿನ ಉಹಾಪೋಹ ಮಾಡೋಣವೆಂದು ಹೇಳಿ ಮಾರ್ಗಕ್ರಮಣಮಾಡಹತ್ತಿದರು. ಅವರು ಸುತ್ತುಮುತ್ತಲಿನ ವನಶ್ರೀಯನ್ನು ನೋಡುತ್ತ ಉಲ್ಲಾಸ ದಿಂದ ಮಾರ್ಗವನ್ನು ಕ್ರಮಿಸುತ್ತಿದ್ದರು. ಆ ವರ್ಷ ಕಾಲಕಾಲಕ್ಕೆ ಮಳೆಯಾದದ್ದರಿಂದ ಹೊಲಗಳು ಭರದಿಂದ ಬೆಳೆದು ನಿಂತಿದ್ದವು. ಅವರು ಪಾಚಾಡ, ನಾತ್ರೆ ಮಹಾಡ, ಬಿರವಾಡಿಗಳನ್ನು ದಾಟಿ, ವರಂಧೆಗೆ ಬಂದರು. ಕೆಲವರು ಅಂದು ವರಂಧೆಯಲ್ಲಿಯೇ ಇಳಿದುಕೊಳ್ಳಬೇಕೆಂದು, ಕೆಲವರು ಇದೇ ಝಪಾಟಿಯಲ್ಲಿ ವರಂಧೆಯ ಘಟ್ಟವನ್ನು ಏರಿಹೋಗಿ ಮಾಜೇದಿಯಲ್ಲಿ, ಅಥವಾ ಹಿರಡೇಶಿಯಲ್ಲಿ ಇಳಿಯೋಣವೆಂದರು, ಕಡೆಗೆ ವಾಟಾಘಾಟವಾಗಿ ಇಂದು ವರಂಧೆಯಲ್ಲಿಯೇ ಇಳಿದು ನಾಳೆ ಸೂರ್ಯೋದಯಕ್ಕಿಂತ ಮೊದಲೇ ಹೊರಡತಕ್ಕದ್ದೆಂದು ಗೊತ್ತಾಯಿತು. ಪಲ್ಲಕ್ಕಿಯು ಹೋದ ಊರುಗಳಲ್ಲೆಲ್ಲ ಜನರು ಭಕ್ತಿಪೂರ್ವಕವಾಗಿ ಉತ್ಸವಮಾಡಿ ಅದನ್ನು ಸತ್ಕರಿಸಿದರು. ವರಂಧೆಯಲ್ಲಿ ಆ ದಿನ ರಾತ್ರಿ ಇಳಿದುಕೊಂಡದ್ದರಿಂದ ಅಲ್ಲಿಯ ಜನರಿಗಾದ ಆನಂದವನ್ನು ವರ್ಣಿಸಲಾಸಲ್ಲ. ಅವರು ಮೆರವಣಿಗೆಯ ಉತ್ಸವವನ್ನು ಅತ್ಯುತ್ತಮ ರೀತಿಯಿಂದ ಮಾಡಿದರು. ಜನರ ಆದರ ಸತ್ಕಾರದಲ್ಲಿ ಯಾವ ಕೊರತೆಯೂ ಉಂಟಾಗಲಿಲ್ಲ. ಇಡಿಯ

ರಾತ್ರಿಯೆಲ್ಲ, ಪೂಜೆ, ಭಜನೆ, ಆರತಿ, ನಾಮಸಂಕೀರ್ತನ, ಪ್ರಸಾದಸೇವನ, ಜಯಘೋಷ ಮೊದಲಾದವುಗಳಲ್ಲಿಯೇ ಕಳೆದುಹೋಯಿತು. ಅರುಣೋದಯವಾಗಲು, ಎಲ್ಲರೂ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಉಲ್ಲಾಸದಿಂದ ಹಾದಿಯ ಹಿಡಿದರು.

ಶಿವರಾಯನ ಕಾಲದ ದುರ್ಗಗಳ ಹಾಗು ಘಟ್ಟಗಳ ವರ್ಣನವನ್ನು ಈಗ ಮಾಡ ದಿರುವದೇ ನೆಟ್ಟಗೆ; ಯಾಕಂದರೆ ಆ ಅಷ್ಟೈಶ್ವರ್ಯದ ಕಾಲದವರ್ಣನವನ್ನು ಈಗಿನ ಅಷ್ಟ ದಾರಿದ್ರ್ಯದ ಕಾಲದಲ್ಲಿ ಓದುವ ನಮ್ಮ ಹೊಟ್ಟೆಯಲ್ಲಿ ಕಸಿವಿಸಿಯಾಗದೆ ಹೋಗಲಿಕ್ಕಿಲ್ಲ. ಈ ಕಾಲದ ರಾಯಗಡದ ವರ್ಣವನ್ನು ಈಗಿನ ರಾಯಗಡದ ವರ್ಣನಕ್ಕೆ ಒರಿಹಚ್ಚಿನೋಡಿದರೆ ಏನುಗತಿಯಾದೀತು? ಕಾಲಮಹಿಮೆಯಿಂದ ಒದಗಿರುವ ಈ ಸ್ಥಿತ್ಯಂತರವು ಎದೆಯೊಡೆದು ನಿರಾಗುವಂತಹದಿರುತ್ತದೆ! ಈಗ ಸರಾಸರಿ ಇನ್ನೂರಾ ಇಪ್ಪತ್ತೈದು ವರ್ಷಗಳ ಹಿಂದಿನ ಸ್ವಾತಂತ್ರ್ಯದ ಆವೇಶವಿದ್ದ ಮಹಾರಾಷ್ಟ್ರಕ್ಕೆ ಈಗಿನ ನಿರ್ಜೀವ ಮಹಾರಾಷ್ಟ್ರವನ್ನು ಹೋಲಿಸುವ ದೆಂದರೆ, ಜೀವಿವಿದ್ದ ಮನುಷ್ಯನನ್ನ ಶವಕ್ಕೆಹೋಲಿಸುವಹಾಗೆಯೇ ಸರಿ. ಹೀಗೆ ಸ್ವಾತಂತ್ರ್ಯ ರೂಪ ಜೀವಕಳೆಯುಳ್ಳ ದ್ದಾಗಿದ್ದ ಮಹಾರಾಷ್ಟ್ರವು ಈಗ ನೀಚಸ್ವಾರ್ಥರೂಪವಿಷದ ಸೇವನ ದಿಂದ ಮೃತಿಹೊಂದಿ, ಶವರೂಪವಾಗಿ ಕೊಳೆಯುತ್ತ ಅಪಕೀರ್ತರೂಪ ದುರ್ಗಂಧವನ್ನು ದಿಕ್ಕು ದಿಕ್ಕುಗಳಿಗೆ ಬೀರುತ್ತಲಿದೆ! ಆಗಿನ ಭದ್ರವಾದ ದುರ್ಗಗಳೂ, ಆ ದುರ್ಗಗಳ ಸಹಾಯದಿಂದ ಸ್ವರಾಜ್ಯವನ್ನು ಶತ್ರುಗಳಿಂದ ರಕ್ಷಿಸುವಾಗ, ಹಾಗು ಉನ್ಮತ್ತರಾದ ಶತ್ರುಗಳ ರಾಜ್ಯಲಕ್ಷ್ಮಿಯನ್ನು ತಮ್ಮ ಪರಾಕ್ರಮದಿಂದ ಸೆಳೆದುಕೊಳ್ಳುವಾಗ, ತಾವೆಲ್ಲರೂ ಮಹಾರಾಷ್ಟ್ರ ವೀರಮಾತೆಯ ಮಕ್ಕಳೆಂಬ ಒಂದೇ ಒಂದು ಸದಭಿಮಾನದಿಂದ ತಮ್ಮ ಜಾತಿ–ಮತ–ಕುಲಾದಿಗಳನ್ನು ಅಡ್ಡ ತಾರದೆ, ಭುಜಕ್ಕೆ ಭುಜ ಆನಿಸಿ ಹೋರಾಡುವವೀರರು, ಆ ವೀರರನ್ನು ತಮ್ಮ ವೀರಶ್ರೀರ ಯುಕ್ತವಾದ ಅನುಪಮೇಯ ಔದಾರ್ಯದಿಂದ ಪ್ರೋತ್ಸಾಹಿಸುವ ರಾಜರೂ ಆ ರಾಜರನ್ನು ಸ್ವಕೀಯ ಭಾವದಿಂದ ನೋಡಿ ''ನಾವಿಷ್ಣುಃ ಪೃಥವೀಪತಿಹಿಃ'' ಎಂಬ ಮನು ವಾಕ್ಯವನ್ನು ನಂಬಿ ಭಾವಿಕತನದಿಂದ ಸಂತುಷ್ಟರಾಗಿ ನಡಕೊಳ್ಳುವ ಪ್ರಜೆಗಳೂ,ಆ ಪ್ರಜೆಗಳನ್ನು ''ತಮ್ಮನಾಲಿಗೆ– ತಮ್ಮ ಹಲ್ಲು'' ಎಂಬ ಎಚ್ಚರದಿಂದ ವರ್ಣಾಶ್ರಮ ಧರ್ಮದಂತೆ ಪರಿಪಾಲಿಸುವ ಸ್ವಕೀಯ ರಾಜರೂ ಈಗ ಎಲ್ಲಿ ಇರುವರು? ಆಗಿನ ನಮ್ಮ ಪೌರುಷ ಆಗಿನ ನಮ್ಮ ದರ್ಪ,ಆಗಿನ ನಮ್ಮ ಐಶ್ವರ್ಯ, ಆಗಿನ ನಮ್ಮ ಧೈರ್ಯ, ಆಗಿನ ನಮ್ಮ ರಣಮದ, ಈಗೆಲ್ಲಿ ಹೋದವು–ಯಾಕೆ ಹೋದವು? ಅವೆಲ್ಲ ಕ್ಷುದ್ರ ಭಾಗಾದಿತನದ ಗೃಹಕಲಹದಿಂದಲೇ ಎತ್ತೋ ಅದೃಶ್ಯವಾಗಿ ಹೋಗಿ, ನಾವು ಕೇವಲ ಪರಾಧೀನರಾಗಿರುವೆವಲ್ಲ! ಇದು ಕಾಲಮಹಿಮೆಯಾಗಿರಬಹು ದಲ್ಲವೆ? ಇರಲಿ.

ಆ ವೀರ ಮರಾಟರ ಪರಿವಾರವು ವರಂದಾ ಘಟ್ಟವನ್ನು ಏರತೊಡಗಿದಾಗ ಅರುಣೋದಯವಾಗಿತ್ತು. ಆ ಶಾಂತಿಸಮಯದಲ್ಲಿ ಅವರು ಘಟ್ಟವನ್ನು ಏರಿಹೋಗುವಾಗ ಅವರಿಗೆ ಮಜೋರಿ ಎಂಬ ಹೆಸರಿನ ಊರು ಹತ್ತಿತು. ಅಲ್ಲಿಯ ಜನರು ಪಲ್ಲಕ್ಕಿಯ ದರ್ಶನ ಮಾಡಿಕೊಂಡು ಪ್ರವಾಸಿಗಳ ಯೋಗ್ಯ ಆದರಾತಿಥ್ಯವನ್ನು ಮಾಡಿದನಂತರ ಅವರನ್ನು ಒಳ್ಳೇ

ಸಮಾರಂಭದಿಂದ ಹಿರಡೋಶಿ ಊರ ಅಗಸೆಯವರೆಗೆ ಕಳಿಸಿ ತಿರುಗಿ ತಮ್ಮ ಊರಿಗೆ ಬಂದರು. ಹಿರಡೋಶಿಗೆ ಮಧ್ಯಾಹ್ನವಾಗಲು, ಅವರು ಅಲ್ಲಿ ಊಟ-ಉಡಿಗೆಗಳನ್ನು ತೀರಿಸಿಕೊಂಡರು. ಮುನ್ನಾದಿನ ಅಖಂಡ ಜಾಗರಣವಾದ್ದರಿಂದ ಕೆಲವರು ಇಳಿ ಹೊತ್ತಾಗುವತನಕ ವಿಶ್ರಾಂತಿ ಹೊಂದುವದಕ್ಕಾಗಿ ಮಲಗಿಕೊಂಡರು. ಕೆಲವರು ಊರಜನರ ಸಂಗಡ ಹರಟೆಕೊಚ್ಚ ಹತ್ತಿದರು. ಆ ಊರ ಮುಖ್ಯ ಜನರೊಡನೆ ಮೋರೋಪಂತನೂ, ಅಣ್ಣಾಜಿಯೂ ಮಾತಾಡುತ್ತ ಕುಳಿತುಕೊಂಡಿದ್ದರು. ಮಾತಿನ ಪ್ರಸಂಗಗಳಲ್ಲಿ ರಾಜಕಾರಣದ ಹಲವು ಮಾತುಗಳು ಹೊರಟವು; ಅದರಿಂದ ಅಣ್ಣಾಜಿದತ್ತೂನ ಸಂಗಡ ಏಕಾಂತದಲ್ಲಿ ಕೆಲವು ಮಾತಾಡುವ ಇಚ್ಛೆಯು ಮೋರೋಪಂತನಿಗಾಯಿತು. ಎಲ್ಲರಂತೆ ಅವರಿಬ್ಬರು ಮಲಗಿಕೊಳ್ಳಲಿಲ್ಲ. ತಮ್ಮೊಳಗಿನವರಿಬ್ಬರಿಗೆ ಕಾವಲಿಗಾಗಿ ನಿಯಮಿಸಿ, ಅವರು ಬಳಿಯ ಅರಣ್ಯದಲ್ಲಿ ಒಂದೆರಡು ಮೈಲು ನಡೆದು ನಿವಾಂತ ಸ್ಥಳಕ್ಕೆ ಹೋದರು. ಅಲ್ಲಿ ಒಂದು ಒಟವೃಕ್ಷವಿದ್ದು, ಅದರ ನೆರಳು ದಟ್ಟವಾಗಿಬಿದ್ದಿತ್ತು. ಅಲ್ಲಿ ಆ ಇಬ್ಬರು ಬ್ರಾಹ್ಮಣ ಮುತ್ಸದ್ದಿಗಳ ಏಕಾಂತವು ನಡೆಯಿತು.

ಮೋರೋಪಂತ—ಅಣ್ಣಾಜಿ, ಒಟ್ಟಿಗೆ ಲಕ್ಷಣವು ನೆಟ್ಟಗೆ ಕಾಣುವದಿಲ್ಲ. ಅರುಸಮನೆತನದ ಕಲಹವು ಹೀಗೆ ಎಲ್ಲಕಡೆಗೆ ಪಸರಿಸುವದು ಒಳಿತಲ್ಲ. ಇಂಥ ಹಳ್ಳಿಪಳ್ಳಿಗಳಲ್ಲಿಯ ಜನರೂ ಓಘದಿಂದ ಗೃಹಕಲಹದ ಮಾತು ತೆಗೆಯುವದು ರಾಜ್ಯದ ಬಿಗುವಿಗೆ ಬಾಧಕವಾಗಿರುವದಲ್ಲದೆ, ಮುತ್ಸದ್ದಿಗಳೆನಿಸುವ ನಮಗೂ ಲಾಂಛನವಾಗಿರುತ್ತದೆ. ಸದ್ಯಕ್ಕೆ ರಾಯಗಡದಲ್ಲಿ ನಡೆದಿರುವದನ್ನು ಸೂಕ್ಷ್ಮರೀತಿಯಿಂದ ನಿರೀಕ್ಷಿಸಿದರೆ, ಅದರ ಮೂಲದಲ್ಲಿ ಎಂಥ ಘೋರ ವಿಷದ ಬೀಜವು ಬಿತ್ತಿರುವದೆಂಬದು ಗೊತ್ತಾಗುವದು. ಅಣ್ಣಾಜಿ, ಈ ಸಂಬಂಧದಿಂದ ನಿಮ್ಮ ಮತವೇನಿರುವದು?

ಅಣ್ಣಾಜಿ—ಮೋರೋಪಂತ, ನೀವು ಹೇಳುವಂತೆ ರಾಯಗಡದ ವಾತಾವರಣವು ಇಷ್ಟು ಕೆಟ್ಟಿರುವದೆಂಬಂತೆ ನನಗೇನು ತೋರುವದಿಲ್ಲ. ಅದರಲ್ಲೇನು ಅಪರೂಪ? ಭಾಗಾದಿತನ-ಸವತಿಮತ್ಸರಗಳಿದ್ದಲ್ಲಿ ಹೀಗಾಗತಕ್ಕದ್ದೆ? ಅದಕ್ಕೇಕೆ ಅಷ್ಟು ಮಹತ್ವಕೊಡಬೇಕು? ಸಂಭಾಜಿ ಮಹಾರಾಜರು ಒಳ್ಳೆಯ ನಡತೆಯವರಾಗಿದ್ದರೆ, ಸವತಿಮತ್ಸರಕ್ಕೆ ಮುಗುಳು ಒಡೆಯುವ ಸಂಭವವಿತ್ತೇ? ಅದೇ ರಾಜಾರಾಮ ಮಹಾರಾಜರ ಸಂಬಂಧದಿಂದ ನೋಡಿರಿ, ಒಬ್ಬರಾದರೂ ಹೆಸರಿಟ್ಟಾರೆಯೆ? ಅವರು ತಮ್ಮಷ್ಟಕ್ಕೆ ತಾವು ಗಾಂಜಿ ಅಫುಗಳ ವ್ಯಸನದಲ್ಲಿ ಮಗ್ನರಾಗಿರುವರು. ಅದರಿಂದ ಎರಡನೆಯವರಿಗೆ ಲೇಶವಾದರೂ ಉಪದ್ರವವಿಲ್ಲ. ಆದರೆ ಈ ಹಿರಿಯಮಕ್ಕಳ ರೀತಿಯನ್ನು ನೋಡಿದರೆ........

ಮೋರೋಪಂತ (ನಡುವೆ ಬಾಯಿಹಾಕಿ)—ನಾವು ರಾಜಾಕಾರಣಗಳನ್ನು ನೋಡಬೇಕೋ? ರಾಜಸ್ವಭಾವವನ್ನು ನೋಡಬೇಕೋ? ಅಕಬರನು ಜೀವದಿಂದಿರುವಾಗ ಜಹಾಂಗೀರನ ಸ್ಥಿತಿಯು ಹೇಗಿತ್ತು? ಮೈಮೇಲೆ ರಾಜ್ಯ ಕಾರಭಾರದ ಭಾರವು ಬಿದ್ದಕೂಡಲೆ ಅದೇ ಜಹಾಂಗೀರನೇ ಮುಂದಿಗೆ ಬುದ್ಧಿ ಹೇಳುವಹಾಗೆ ಆಗಲಿಲ್ಲವೇನು?

ಅಣ್ಣಾಜಿ-ಸಲೀಮನ ಸ್ಥಿತಿಯಲ್ಲಿಯೂ, ನಮ್ಮವರ ಸ್ಥಿತಿಯಲ್ಲಿಯೂ ಮಹದಂತರವಿರುತ್ತದೆ. ನಮ್ಮವರು ತಂದೆಯ ಮೇಲೆ ಸಿಟ್ಟಾಗಿ ದಿಲೇರಖಾನನ ಕಡೆಗೆ.....

ಮೋರೋಪಂತ (ಪೂರಾ ಮಾತಾಡಗೊಡದೆ)— ಆದರೆ ಅದರಿಂದ ಚನ್ನಾಗಿ ತಲೆತಾಕಿ ಪಶ್ಚಾತ್ತಾಪವಾಗಿರುವದೆಂದು ಅವರು ನನ್ನ ಮುಂದೆ ಒಳ್ಳೇ ಸಹಾನುಭೂತಿಪೂರ್ವಕವಾಗಿ ಒಪ್ಪಿಕೊಂಡಿರುತ್ತಾರೆ.

ಅಣ್ಣಾಜಿ—ನಿಮ್ಮ ಮಾತನ್ನು ನಿಜವೆಂದು ತಿಳಿದು ನಾನು ನಿಮ್ಮನ್ನು ಕೇಳುತ್ತೇನೆ, ಮಹಾರಾಜರ ತರುವಾಯ ಅವರು ಸಿಂಹಾಸನವೇರಿದರೆ, ನಮ್ಮ ನಿಮ್ಮಂಥವರ ಮಾತು ಕೇಳಿ ರಾಜ್ಯಕಾರಭಾರವನ್ನು ಸರಿಯಾಗಿ ಸಾಗಿಸಿ, ಔರಂಗಜೇಬನಂಥ ರಾಕ್ಷಸೀ ಬಲದ ಶತ್ರುವಿನ ಮೇಲೆ ಅವರು ತಮ್ಮ ಒಗರು ಕೂಡಿಸಬಹುದೇ?

ಮೋರೊಲಪಂತ(ವಿಚಾರಮಾಡಿ)—ಅಣ್ಣಾಜಿ, ನಿಮ್ಮ ಪ್ರಶ್ನವು ಬಹುಗಂಭೀರವಾಗಿದ್ದು ವಿಚಾರಮಾಡತಕ್ಕದ್ದಾಗಿದೆಯಂಬದರಲ್ಲಿ ಎಳ್ಳಷ್ಟು ಸಂಶಯವಿಲ್ಲ; ಆದರೆ ನಾವು ಒಂದು ಮಾತನ್ನು ಯಾವಾಗಲೂ ನೆನಪಿಡತಕ್ಕದ್ದು; ಅವರು ಮಹಾರಾಜರ ಹಿರಿಯಮಕ್ಕಳಿದ್ದು, ಮಹಾನ್‌ಶೂರರೂ ಇರುವರು. ಅವರಲ್ಲಿ ರಾಜಕಾರಣಕ್ಕೆ ಅವಶ್ಯಕವಾದ ಮುತ್ಸದ್ದಿತನವು ಇರುವದೋ ಇಲ್ಲವೋ ಎಂಬದನ್ನು ನೋಡುವ ಪ್ರಸಂಗವು ಒದಗಿರುವದಿಲ್ಲ; ಮತ್ತು ಅದನ್ನು ಪ್ರಕಟಮಾಡುವ ಪ್ರಸಂಗವನ್ನು ಈವರೆಗೆ ಒದಗಿಸಿಕೊಟ್ಟಿರುವದೂ ಇಲ್ಲ; ಅಂದಬಳಿಕ ಆ ಸಂಬಂಧದಿಂದ ಶುಷ್ಕವಾದ ತರ್ಕವಿತರ್ಕಗಳನ್ನು ಮಾಡುತ್ತ ಕುಳಿತುಕೊಳ್ಳುವದರಲ್ಲಿ ಅರ್ಥ ವೇನು? ಅವರು ಶಿವಾಜಿಮಹಾರಾಜರ ಜೇಷ್ಠಪುತ್ರರಿರುವರೆಂಬದನ್ನು ಮಾತ್ರ ನಾವು ಮರೆಯಬಾರದು. ಮಹಾರಾಜರು ಚಿಕ್ಕಂದಿನಿಂದ ಅವರನ್ನು ತಮ್ಮ ಗರಡಿಯ ಮನೆಯಲ್ಲಿ ಬೆಳೆಸಿರುವಂತೆ ರಾಜಾರಾಮ ಮಹಾರಾಜರನ್ನು ಬೆಳೆಸಿರುವದಿಲ್ಲ!

ಅಣ್ಣಾಜಿ—(ಸಮಾಧಾನದಿಂದ ಕೇಳಿಕೊಂಡು)ಮೋರೋಪಂತ, ನಿಮ್ಮ ಮಾತು ವಿಚಾರಮಾಡತಕ್ಕವಲ್ಲವೆಂದು ಯಾರು ಅಂದಾರು? ಆದರೆ ನಾನು ಆಗಲೇ ಕೇಳಿದಂತೆ ಅವರು ಪಟ್ಟವೇರಿದ ಬಳಿಕ ಮಹಾರಾಜರ ಪದರಿನಲ್ಲಿರುವ ನಮ್ಮ ನಿಮ್ಮಂಥವರ ಆಲೋಚನೆ ಕೇಳಿ, ರಾಜ್ಯಸಂರಕ್ಷಣವನ್ನೂ, ರಾಜ್ಯವೃದ್ಧಿಯನ್ನೂ ಮಾಡಬಹುದೇನೆಂದು ಈಗ ಮತ್ತೆ ಕೇಳುತ್ತೇನೆ. ಅದರ ಉತ್ತರವು ಹೇಳಿರಿ!

ಮೋರೋಪಂತ—ಅದರ ವಿಚಾರ ಮಾಡುವದು ನಮ್ಮ ನಿಮ್ಮ ಕೆಲಸವಲ್ಲ. ಸದ್ಯಕ್ಕೆ ಮಹಾರಾಜರು ನಮ್ಮ ತಂತ್ರದಿಂದ ರಾಜ್ಯಕಾರಭಾರ ಮಾಡುತ್ತಾರೆಂಬಂತೆ ಕಂಡುಬಂದರೂ, ನಮ್ಮ ತಂತ್ರವನ್ನು ಕೇಳುವದು ಬಿಡುವದು ಅವರ ಸಂತೋಷವನ್ನವಲಂಬಿಸಿರುವದು. ನಾಳೆ ನಮ್ಮ ನಿಮ್ಮ ತಂತ್ರದಂತೆ ನಡೆಯುವದು ಅವರ ಮನಸ್ಸಿಗೆ ಬಾರದಿದ್ದರೆ, ನಮ್ಮ ವಿಚಾರವನ್ನು ಬದಿಗೊತ್ತಿ ತಮ್ಮ ಮನಸ್ಸಿಗೆ ಬಂದಂತೆ ರಾಜ್ಯ ಕಾರಭಾರವನ್ನು ಮಾಡಲಿಕ್ಕೆ ಅವರು ರಾಜ್ಯದ ಮಾಲಕರಿರುವದಿಲ್ಲವೇನು?

ಅಣ್ಣಾಜಿ—ನೀನಾಡುವದು ಯೋಗ್ಯವು; ಆದರೆ ಅವರು ರಾಜ್ಯದ ಮಾಲಕರಿದ್ದರೂ, ಅಷ್ಟಪ್ರಧಾನರ ಆಲೋಚನೆಯಿಂದ ರಾಜ್ಯವಾಳುವ ಪದ್ಧತಿಯನ್ನು ಪ್ರಸ್ಥಾಪಿಸಿದ್ದನ್ನು ನಾವು

ಲಕ್ಷದಲ್ಲಿಡತಕ್ಕದ್ದು. ಈ ಪದ್ಧತಿಯನ್ನು ಕುರಿತು ಆಲೋಚಿಸಿದರೆ, ಅವರ ಬಹುಮತದಲ್ಲಿಯ ಆದರವು ಲಕ್ಷದಲ್ಲಿ ಬಾರದೆ ಇರಲಿಕ್ಕಿಲ್ಲ.

ಮೋರೋಪಂತ—ಈ ರಹಸ್ಯವು ನನಗೆ ತಿಳಿದಿಲ್ಲವೆಂದು ನೀವು ಭಾವಿಸಿರುವಿರೋ?

ಅಣ್ಣಾಜಿ—ಹೌದು, ನನ್ನ ಭಾವನೆಯು ಹಾಗಾದದ್ದರಿಂದಲೇ ಕೇಳಿದೆನು.

ಮೋರೋಪಂತ—ಅರಸನು ಅಲ್ಪವಯಸ್ಕನಿರಲಿ, ದುರಾಚಾರಿಯಿರಲಿ, ಹ್ಯಾಗೆ ಇರಲಿ, ತಾವು ಗೋ-ಬ್ರಾಹ್ಮಣ ಪ್ರತಿಪಾಲನಕ್ಕಾಗಿ ಸ್ಥಾಪಿಸಿದ ರಾಜ್ಯವು ಸುಯಂತ್ರವಾಗಿ ನಡೆಯಬೇಕೆಂತಲೇ ಮಹಾರಾಜರು ಈ ಅಷ್ಟಪ್ರಧಾನರ ಅನುಪಮೆಯವಾದ ಯೋಜನೆಯನ್ನು ಮಾಡಿಟ್ಟಿರುವರು; ಆದರೂ ಆ ರಾಜ್ಯಕ್ಕೆ ಅವರು ಪ್ರಜಾಸತ್ತಾತ್ಮಕ ರಾಜ್ಯವೆಂದು ಮಾತ್ರ ಹೆಸರಿಟ್ಟಿರುವದಿಲ್ಲವೆಂಬದನ್ನು ಲಕ್ಷದಲ್ಲಿಡತಕ್ಕದ್ದು.

ಅಣ್ಣಾಜಿ—ಹೆಸರಿಡುವದರಲ್ಲೇನು ಅರ್ಥವದೆ? ಹಾಗೆ ಪ್ರಜಾತಂತ್ರದಿಂದ ರಾಜ್ಯವು ನಡೆಯಬೇಕೆಂದು ಮಹಾರಾಜರ ಅಂತಸ್ಥ ಹೇತುವಿದ್ದ ಬಳಿಕ, ಅದು ಸಂಭಾಜಿ ಮಹಾರಾಜರ ಕೈಯಿಂದ ಎಷ್ಟರ ಮಟ್ಟಿಗೆ ಕೊನೆಗಾಣುವದೆಂಬದನ್ನು ಹೇಳಲಾಗುವದಿಲ್ಲ. ಅರಸರಲ್ಲಿ ಇರಬಾರದ ಎರಡು ದುರ್ಗುಣಗಳು ಅವರ ಮೈ ಉಂಡು ಹೋಗಿರುತ್ತವೆ........

ಮೋರೋಪಂತ—(ನಡುವೆ ಬಾಯಿಹಾಕಿ) ಆ ದುರ್ಗುಣಗಳ ಕಾರಣವು ಬೇರೆ ಇರುವದು. ಸದ್ಯಕ್ಕೆ ಅವರ ಕಾಲಹರಣಕ್ಕೆ ಬೇರೆ ಕೆಲಸಗಳನ್ನೇನು ಆಬಾಸಾಹೇಬರು ಒದಗಿಸಿ ಕೊಟ್ಟಿರುವುದಿಲ್ಲ. ಈ ಮೊದಲೆಯೂ ಇದರಂತೆ ನಿರುದ್ಯೋಗದಲ್ಲಿಯೇ ಅವರ ಕಾಲಹರಣ ವಾಯಿತು; ಅಂದಬಳಿಕ, ನಿರುದ್ಯೋಗವು ದುರ್ಗುಣಗಳ ತವರಮನೆಯಾದ್ದರಿಂದ, ಯಾವಾಗಲೂ ಉದ್ಯೋಗಹೀನರಾಗಿ ಕಾಲಹರಣ ಮಾಡುತ್ತಬಂದಿದ್ದ ಅವರಲ್ಲಿ ದುರ್ಗುಣ-ದುಷ್ಟಚಟಗಳು ಸೇರಿಕೊಂಡಿದ್ದರೆ ಆಶ್ಚರ್ಯವೇನು? ಒಮ್ಮೆ ಅವರ ಮೈಮೇಲೆ ರಾಜ್ಯಕಾರ ಭಾರದ ಭಾರವೊಂದು ಬೀಳಲಿ, ಅವರು ಔರಂಗಜೇಬನಿಗೆ "ಸಾಕು ದೇವರೇ" ಎಂದು ಅನಿಸದೆ ಎಂದೂ ಬಿಡಲಿಕ್ಕಿಲ್ಲ. ಅವರು ಜಾತ್ಯಾ ಒಳ್ಳೇಚಾಣಾಕ್ಷರೂ, ಸಂಶಯ ಸ್ವಭಾವದವರೂ, ಶೂರರೂ, ಉದಾಹರರೂ ಇರುವರು. ಅವರು ಎಂದೂ ವಿಶ್ವಾಸಘಾತಕಿಗಳಾಗರೆಂಬ ಬಗ್ಗೆ ನನ್ನ ಸಂಪೂರ್ಣ ನಂಬಿಗೆಯಿದೆ. ಈ ಎಲ್ಲ ಸದ್ಗುಣಗಳ ಬಗ್ಗೆ ನನಗೆ ಸರ್ವಥಾ ಸಂಶಯವಿಲ್ಲ. ಅವರು ಹುಟ್ಟಾ ಉಡಾಳರೂ, ಹಟಮಾರಿಗಳೂ, ತಾಮಸ ಸ್ವಭಾವದವರೂ, ತಟ್ಟನೆ ಧುಮುಕುವವರೂ ಇದ್ದು, ಸ್ವಚ್ಛಂದಾಚರಣೆ ಯವರಿರುವರೆಂಬ ಹಾಗೆ ನಮಗೆ ತೋರಬಹುದು; ಆದರೆ ಅವರಲ್ಲಿರುವ ಅತುಲ ಶೌರ್ಯ, ಅಚಲ ಧೈರ್ಯ, ಅದ್ಭುತಸಾಮರ್ಥ್ಯ ಮೊದಲಾದ ಯುದ್ಧೋಪಯುಕ್ತ ಗುಣಗಳನ್ನು ಅವರ ಸ್ವಭಾವಕ್ಕನುಸರಿಸಿ ನಡೆದು ಉಪಯೋಗಿಸಿ ರಾಜಕಾರಣಗಳನ್ನು ಸಾಧಿಸಿಕೊಳ್ಳುವದೇ ನಮ್ಮ ನಿಮ್ಮ ನಿಜವಾದ ಮುತ್ಸದ್ದಿತನದ ಲಕ್ಷಣವಾಗಿರುವದು. ಅವರು ರಾಜಪುತ್ರರೂ, ಶಿವರಾಯರ ಜ್ಯೇಷ್ಠ ಚಿರಂಜೀವರೂ ಆಗಿರುವ ಮಾತೇನು ಸಣ್ಣಪುಟ್ಟದಲ್ಲ. ಅವರನ್ನು ಸಂತೋಷಪಡಿಸುತ್ತಲೇ ನಾವು ಸ್ವರಾಜ್ಯದ ಸಂರಕ್ಷಣವನ್ನೂ, ವೃದ್ಧಿಯನ್ನೂ ಮಾಡತಕ್ಕದ್ದು. ಅವರ ವಿರುದ್ಧ ಒಳಸಂಚು

ಮಾಡಿದ ಬರಿಯ ಸಂಶಯ ಬಂದರೂ ಅವರ ತಾಮಸೀಸ್ವಭಾವವು ಏನುಮಾಡೀತೆಂಬದರ ತರ್ಕವನ್ನು ಯಾರೂ ಮಾಡಲಾರರು. ಆದ್ದರಿಂದ ನಿಮಗೆ ಸೂಚಿಸುವೆನು, ಸದ್ಯಕ್ಕೆ ಸೋಯರಾ ಬಾಯಿಸಾಹೇಬರು ನಡೆಸಿರುವ ಒಳಸಂಚನ್ನು ಅಲ್ಲಿಂದಲ್ಲಿಯೇ ಬಗ್ಗುಬಡಿಯದಿದ್ದರೆ, ರಾಜ್ಯದ ಮೇಲೆ ಭಯಂಕರ ಪ್ರಸಂಗ ಒದಗೀತೆಂಬದನ್ನು ಮಾತ್ರ ಚನ್ನಾಗಿ ಲಕ್ಷದಲ್ಲಿಡಿರಿ.

ಅಣ್ಣಾಜಿ—(ಕಿವಿಯ ಮೇಲೆ ಕೈಯಿಟ್ಟುಕೊಂಡು) ಸೋಯರಾಬಾಯಿಯವರೇನೋ, ಅವರ ಒಳಸಂಚೇನೋ ಅದರ ಗೊಡವೆ ನಮಗೇನು? ಅತ್ತಕಡೆಗೆ ನಾವು ಕಿವಿಗೊಡದ್ದ ರಾಯಿತು! ಮೋರೋಪಂತ, ಎಷ್ಟುಮಾಡಿದರೂ ಅದು ಗೃಹಕಲಹವು! ದೊಡ್ಡವರಮನೆಯ ಉಸಾಬರಿಯು ನಮಗೇಕೆ?

**ಮೋರೋಪಂತ—ಸರ್ವಸಾಮಾನ್ಯ ಜನರ ಗೃಹಕಲಹವಾಗಿದ್ದರೆ ನಿಮ್ಮ ಮಾತಿಗೆ ನಾನು ಒಪ್ಪಿಕೊಳ್ಳಬಹುದಾಗಿತ್ತು, ಆದರೆ ಇದು ಅಂತಹದಲ್ಲ, ಇದು ಬಹುಕಾಲ ತರುವಾಯ ಅತ್ಯಂತ** ಪರಿಶ್ರಮದಿಂದ ಸ್ಥಾಪಿಸಲ್ಪಟ್ಟಿದ್ದ ಮಹಾರಾಷ್ಟ್ರದ ಸಿಂಹಾಸನಕ್ಕೆ ಸಂಬಂಧಿಸಿದ ಗೃಹಕಲಹ ವಾಗಿರುವದು. ಇದನ್ನು ದುರ್ಲಕ್ಷಿಸುವದು, ಸುಂದರ ಮನೆಯನ್ನು ಕಟ್ಟಿಸಿ, ಅದರಲ್ಲಿರುವದಕ್ಕಾಗಿ ಹೋದ ಕೂಡಲೆ ಅದನ್ನು ಕೆಡವಿಬಿಡುವಂಥ ಆತ್ಮಘಾತವಿಚಾರ ವಿರುತ್ತದೆಂಬದನ್ನು ನಿಮ್ಮಂಥವರು ಧೂರ್ತತೆಯ ಮರೆಯಲ್ಲಿ ನಿಂತು ದುರ್ಲಕ್ಷಿಸುವದು ಯೋಗ್ಯವಲ್ಲ. ಈ ಗೃಹಕಲಹದಲ್ಲಿ ಸ್ವರಾಜ್ಯನಾಶದ ಬೀಜವಿರುತ್ತದೆ. ಆ ವಿಷಬೀಜದ ಅಂಕುರವನ್ನು ಹುಟ್ಟ ಹುಟ್ಟುವದರೊಳಗಾಗಿಯೇ ಚಿವುಟಿ ಚಲ್ಲದಿದ್ದರೆ, ಮುಂದೆ ಆ ವಿಷವೃಕ್ಷದ ಉಗ್ರಫಲವನ್ನು ಮಹಾರಾಷ್ಟ್ರರು ನಾವೆಲ್ಲರೂ ತಿನ್ನಬೇಕಾದೀತೆಂಬದರ ವಿಚಾರಮಾಡಬೇಕಲ್ಲವೆ? ಅರಸು ಮನೆತನದೊಳಗಿನ ಪಕ್ಷಭೇದಗಳನ್ನು ತಕ್ಕೊಂಡು ನಾವು ಮಾಡುವದೇನು? ನಾವು ಯಾವಾಗಲೂ ಸತ್ಯಪಕ್ಷವನ್ನನುಸರಿಸಿ ರಾಜಕಾರಣಗಳನ್ನು ಸಾಧಿಸತಕ್ಕದ್ದು. ಅರಸು ಎಂಥವನಿದ್ದರೂ, ರಾಷ್ಟ್ರಕಾರ್ಯವೆಂದು ತಿಳಿದು ರಾಜನಿಷ್ಠರಾಗಿರುವದೂ, ಯಾವ ಪ್ರಸಂಗ ದಲ್ಲಿಯೇ ಆಗಲಿ ರಾಜಾಜ್ಞೆಯನ್ನು ಪಾಲಿಸುವದೂ ನಮ್ಮ ಕರ್ತವ್ಯವಾಗಿರುವದು.

ಈ ಮೇರೆಗೆ ಮೋರೋಪಂತನು ಭಿಡೆ-ಭಾರಣೆಯಿಲ್ಲದೆ ಸರಳತನದಿಂದ ಮಾತಾ ಡುತ್ತಿರುವಾಗ ಅಣ್ಣಾಜಿಯ ಮುಖಮುದ್ರೆಯಲ್ಲಿ ಒಂದರಹಿಂದೊಂದು ಬೇರೆ ಬೇರೆ ವಿಕಾರದ ಲಕ್ಷಣಗಳು ಕಂಗೊಳಿಸಿದವು. ಆತನು ಮೋರೋಪಂತರ ಭಾಷಣವನ್ನು ಸಮಾಧಾನದಿಂದ ಕೇಳಿಕೊಂಡು—

ಅಣ್ಣಾಜಿ—ನೀವು ಹೇಳುವದೆಲ್ಲ ನನ್ನ ಮನಸ್ಸಿನಲ್ಲಿ ಬಂದಿತು. ನಿಮ್ಮ ಮಾತುಗಳಲ್ಲಿ ಲೇಶವಾದರೂ ತಪ್ಪು ಇಲ್ಲೆಂಬದನ್ನು ನಾನು ಒಪ್ಪಿಕೊಳ್ಳುತ್ತೇನೆ. ನಿಮ್ಮ ವಿಚಾರಗಳು ಸರ್ವಥೈವ ಗ್ರಾಹ್ಯವಾಗಿರುವವು; ಆದರೆ ಸ್ವತಃ ಮಹಾರಾಜರ ಇಚ್ಛೆಯೇ ಹಾಗಿರುವದಲ್ಲ? ಅದಕ್ಕೇನು ಮಾಡಬೇಕು?

ಮೋರೋಪಂತ—ಹಾಗೆಂದರೆ ಹ್ಯಾಗೆ? ಸ್ಪಷ್ಟವಾಗಿ ಹೇಳಿರಿ.

ಅಣ್ಣಾಜಿ—ಹಾಗೆಂದರೆ—ಸಂಭಾಜಿಮಹಾರಾಜರ ಕೈಯಿಂದ ರಾಜ್ಯಕಾರಭಾರವನ್ನು ಸರಿಯಾಗಿ ನಡಿಸುವದಾಗದ್ದರಿಂದ, ರಾಜಾರಾಮ ಮಹಾರಾಜರನ್ನು ತಮ್ಮ ಪಶ್ಚಾತ್ ಸಿಂಹಾಸನಾದಿಷ್ಠಿತರನ್ನಾಗಿ ಮಾಡಬೇಕೆಂದು ಅವರ ಇಚ್ಛೆಯಿರುತ್ತದೆ.

ಮೋರೋಪಂತ—ಇದು ನಿಮ್ಮ ತಪ್ಪುತಿಳುವಳಿಕೆಯು; ಹಾಗೆ ಸರ್ವಥಾ ಮಹಾರಾಜರ ಇಚ್ಛೆಯಿರುವದಿಲ್ಲ. ಇತ್ತಿತ್ತಲಾಗಿ ಸೋಯರಾಬಾಯಿ ಸಾಹೇಬರ ಮನೆಗೆ ಮಹಾರಾಜರು ಹೋಗದಿರುವದರ ಕಾರಣವು ನಿಮಗೆ ಗೊತ್ತಿರುತ್ತದಷ್ಟೆ? ತಮ್ಮ ಮಗನಿಗೆ ಪಟ್ಟವಾಗಬೇಕೆಂದು ಮಹಾರಾಜರನ್ನು ಅವರು ಪೀಡಿಸಹತ್ತಿದ್ದೇ ಕಾರಣವು. ವೈದ್ಯರ ಮನೆಯ ವಿಷದ ಕಳವೂ, ಸುಭಾನನೂ, ಲಾಲಮಣಿಕುದುರೆಯೂ ಅದೃಶ್ಯವಾದದ್ದೂ, ವಿಷದ ಸಂಶಯದಿಂದ ಉಮಾಜಿಯನ್ನು ಸೆರೆಹಿಡಿದು ಕರ್ನಾಟಕಕ್ಕೆ ಕಳಿಸಿದ್ದೂ ಇವೆಲ್ಲ ಸಂಗತಿಗಳನ್ನು ಮುತ್ಸದ್ದಿಗಳೆನಿಸುವ ನಾವು ದುರ್ಲಕ್ಷಣಮಾಡತಕ್ಕದ್ದಲ್ಲ. ಈ ಒಳಸಂಚು ಮಹಾರಾಜರಿಗೆ ಸಂಪೂರ್ಣವಾಗಿ ಗೊತ್ತಿರುತ್ತದೆ. ಅಂತೇ ಅವರು, ತಾವು ಜಡ್ಡಿನಿಂದ ಮಲಗಿದ್ದರೂ ತಮ್ಮ ಮುಖ್ಯ ಮುಖ್ಯ ಮನುಷ್ಯರನ್ನು ಬೇರೆ ಬೇರೆ ಕಡೆಗೆ ಅಂದರೆ, ಹಣಮಂತೇ ಇವರನ್ನು ಕೊಲ್ಲಾಪುರದ ಪ್ರಾಂತಕ್ಕೆ, ನಿಮ್ಮನ್ನು ಕೊಂಕಣಕ್ಕೆ, ನನ್ನನ್ನು ಉತ್ತರಕ್ಕೆ, ಹಂಬೀರಾವ ಇವರನ್ನು ಕರ್ಹಾಡದ ನಿಟ್ಟಿಗೆ ಹೀಗೆ ನಾಲ್ವರನ್ನು ನಾಲ್ಕು ದಿಕ್ಕಿಗೆ ಬಂದೋಬಸ್ತಿಗಾಗಿ ಕಳಿಸಿ ಬರಿಯ ಒಬ್ಬ ಬಾಳಾಜಿಯನ್ನೇ ತಮ್ಮ ಬಳಿಯಲ್ಲಿ ಇಟ್ಟುಕೊಳ್ಳುವದರ ಇಂಗಿತವು ಇದೇ ಇರಲಿಕ್ಕೆ ಬೇಕು.

ಈ ಮೇರೆಗೆ ನುಡಿದ ಮೋರೋಪಂತನ ಈ ಮರ್ಮಕ್ಕೆ ಹತ್ತುವ ಮಾತುಗಳನ್ನು ಕೇಳಿ ಅಣ್ಣಾಜಿಯು ಅಸಮಾಧಾನಪಟ್ಟನು. ತಾನು ಸೋಯರಾಬಾಯಿ ಸಾಹೇಬರ ಒಳಸಂಚಿನಲ್ಲಿ ಸೇರಿರುವದು ಮೋರೋಪಂತನಿಗೆ ಗೊತ್ತಿದ್ದು, ತನ್ನ ಮನಸ್ಸನು ತಿರುಗಿಸುವದಕ್ಕಾಗಿಯೇ ಈತನು ಹೀಗೆ ಮಾತಾಡುವದೆಂದು ಆತನು ಭಾವಿಸಿದನು. ಅಷ್ಟರಲ್ಲಿ ಊರಿಗೆ ಹೊರಡುವ ಹೊತ್ತು ಆಗಲು, ಅವರು ಅಲ್ಲಿಗೇ ಮಾತು ಮುಗಿಸಿ, ತಮ್ಮ ಬೀಡಾರದ ಕಡೆಗೆಹೊರಟರು. ಈ ಇಬ್ಬರು ಮುತದ್ದಿಗಳ ರಾಜಕಾರಣದ ವಿಚಾರಗಳು ಅಂದಿನದಿನವೆಲ್ಲ ಅವರ ಮನಸ್ಸಿನಲ್ಲಿ ಸುಳಿದಾಡುತ್ತಿದ್ದವು!

## ಸನದಿನ ಸಮರ್ಪಣವು

ಅವರಿಬ್ಬರು ತಮ್ಮ ಜನರಿದ್ದಲ್ಲಿಗೆ ಬರುವದರೊಳಗೆ, ಆ ಊರಜನರು ಅಲ್ಲಿ ನೆರೆದಿದ್ದರು. ಇನ್ನೊಂದುದಿನ ನಮ್ಮಲ್ಲಿದ್ದು ನಮ್ಮ ಸತ್ಕಾರವನ್ನು ಸ್ವೀಕರಿಸಿಬೇಕೆಂದು ಆ ಊರ ಮುಖ್ಯರು ಬಹಳ ಆಗ್ರಹ ಮಾಡಿದರು; ಆದರೆ ಮಹಾರಾಜರು ತಮ್ಮ ಆಜ್ಞೆಯನ್ನು ಉಲ್ಲಂಘಿಸಿದವರಿಗೆ ದೇಹಾಂತ ಪ್ರಾಯಶ್ಚಿತ್ತದ ಕಠಿಣತರ ಶಿಕ್ಷೆಕೊಡುವದನ್ನು ಅವರ ನೆನಪಿಗೆ ತಂದು ಕೊಟ್ಟು ಅಲ್ಲಿಂದ ಅವರೆಲ್ಲರು ಹೊರಡಲು ಸಿದ್ಧರಾದರು; ಬಳಿಕ ಆ ಊರಜನರು ಉತ್ಸವ

ದಿಂದ ಅವರನ್ನು ಅಗಸಿಯವರೆಗೆ ಕಳಿಸಿ ಹಿಂದಿರುಗಿದರು. ಆ ಹೊರಟ ಜನರು ಒತ್ತರದಿಂದ ಮಾರ್ಗಕ್ರಮಣಮಾಡಿ ಭೋರದಮೇಲಿಂದ ಶಿರವಳಕ್ಕೆ ಬಂದು ಅಲ್ಲಿಂದ ಸಾತಾರೆಗೆ ಹೋದರು. ಸಾತಾರೆಯಿಂದ ಸಜ್ಜನಗಡವು ಬಹಳ ದೂರ ಇರುವದಿಲ್ಲವಾದ್ದರಿಂದ ಅವರು ಸಾತಾರೆಯಲ್ಲಿ ಇಳಿಯದೆ ಸಜ್ಜನಗಡಕ್ಕೆ ಹೋಗಿಬಿಡಬೇಕೆಂದು ಮಾಡಿದ್ದರು; ಆದರೆ ಸಾತಾರೆಯ ಜನರು ಬಹಳ ಅಗ್ರಹ ಮಾಡಿದ್ದರಿಂದ ಅವರ ಒಪ್ಪತ್ತಿನ ಸತ್ಕಾರವನ್ನು ಸ್ವೀಕರಿಸಿ ಮುಂದಕ್ಕೆ ಹೋಗಬೇಕೆಂದು ನಿಶ್ಚಯಿಸಿದರು. ಭೋಜನೋತ್ತರ ಅವರು ಸ್ವಲ್ಪ ವಿಶ್ರಾಂತಿಯನ್ನು ಹೊಂದಿ ಹಾದಿಯ ಹಿಡಿದರು. ಸಜ್ಜನಗಡದ ಎತ್ತರವು ಸುಮಾರು ಎರಡು ಎರಡುವರೆ ಮೈಲು ಇರುವದು. ಮೇಲಕ್ಕೆ ಏರಿ ಹೋಗುವಹಾದಿಯು ನಾಗಮೋಡಿಯದಿದ್ದು ಮಾರ್ಗದ ಎಡಬಲಗಳಲ್ಲಿ ಗಿಡಗಳು ದಟ್ಟವಾಗಿ ಬೆಳೆದಿದ್ದವು. ಅಲ್ಲಲ್ಲಿ ಪಸರಿಸಿದ ವಿಧವಿಧದ ಗಿಡ ಗಂಟೆಗಳು ನಡನಡುವೆ ಕಾಡಬಾಳೆಯ ಎಲೆಗಳು ಹಚ್ಚಗೆ ಹಸುರುಮಯರಿದು ವನದ ಶೋಭೆಯನ್ನು ಹೆಚ್ಚಿಸುತ್ತಿದ್ದವು. ಆ ಎಲೆಗಳ ಮೇಲೆ ಉಂಟಾಗಿದ್ದ ಇಬ್ಬನಿಯ ಹನಿಗಳು ಸೂರ್ಯಕಿರಣಗಳಿಂದ ಲಕಲಕಿಸಲು, ಪಚ್ಚದ ತಬಕದಲ್ಲಿ ಮುತ್ತುಗಳನ್ನಿಟ್ಟಂತೆ ಪ್ರೇಕ್ಷಕರ ಚಿತ್ತವನ್ನು ರಂಜಿಸುತ್ತಿದ್ದವು. ಪಲ್ಲಕ್ಕಿಯನ್ನು ಹೊತ್ತುಕೊಂಡಿದ್ದ ಸಮರ್ಥರಾದ ಬೋವಿಗಳೊಡನೆ ಆ ಮಹಾರಾಷ್ಟ್ರ ವೀರರು ಒಳ್ಳೇ ವೇಗದಿಂದ ದುರ್ಗವನ್ನು ಏರುತ್ತಿದ್ದರು. ಆಗಿನ ಕಾಲದಲ್ಲಿ ದುರ್ಗಗಳನ್ನು ಏರಿಹೋಗುವದು ಮರಾಟರಿಗೆ ನೀರಹೊಳೆಯ ದಾರಿಯಾಗಿ ಹೋಗಿತ್ತು. ಆ ವೀರಪರಿವಾರವು ಹಾಹಾ ಅನ್ನುವದರೊಳಗಾಗಿ ಆ ಮುಳ್ಳುಕಂಟೆಗಳು ಬೆಳೆದಿರುವ ಮಾರ್ಗವನ್ನು ಕ್ರಮಿಸಿಹೋಗಿ ದುರ್ಗದ ಮಹಾದ್ವಾರಕ್ಕೆ ಮುಟ್ಟಿತು. ಮೋರೋಪಂತನು ಅಂದಿನ ಸಾಂಕೇತಿಕ ಶಬ್ದವನ್ನು ಉಚ್ಚರಿಸಿದ ಕೂಡಲೆ, ಮೊದಲು ದಿಂಡಿಯಮಟ್ಟಿಗೆ ತೆರದಿದ್ದ ಮಹಾದ್ವಾರವನ್ನು ಸಂಪೂರ್ಣವಾಗಿ ತೆರೆದರು. ಮಹಾದ್ವಾರದಲ್ಲಿ ಕಾಲಿಡುವ ಮೊದಲು ಅವರೆಲ್ಲರೂ ಒಮ್ಮೆಲೆ ''ಜಯ ಜಯ ರಘುವೀರಸಮರ್ಥ'' ಎಂದು ಮಹಾಘರ್ಜನೆ ಮಾಡಿ, ಆಮೇಲೆ ಮಹಾದ್ವಾರದಲ್ಲಿ ಕಾಲಿಟ್ಟು ಪಾವಟಿಗೆಯನ್ನು ಹತ್ತಹತ್ತಿದರು. ಮೊದಲನೆಯ ಪಾವಟಿಗೆಗಳನ್ನೆಲ್ಲ ಹತ್ತಿ ಒಳಗಿನ ಗುಮುಟದ ಬುಡದಲ್ಲಿ ಬಂದ ಬಳಿಕ ಪುನಃ ಬಲಗಡೆಯ ಕಮಾನಿನ ಬಾಗಿಲದ ಪಾವಟಿಗೆಗಳನ್ನು ಹತ್ತಲಾರಂಭಿಸಿದರು. ಅವನ್ನು ಏರಿಹೋದಬಳಿಕ ಅವರು ಭವ್ಯವಾದದ್ದೊಂದು ಪಾಟಾಂಗಣದಲ್ಲಿ ಬಂದರು. ಆ ಪಟಾಂಗಣವನ್ನು ದಾಟಿಹೋದ ಬಳಿಕ ಅವರು ಬೋವಿಗಳಿಗೆ ಹೇಳಿ ಪಲ್ಲಕ್ಕಿಯನ್ನು ಅಲ್ಲಿಯ ಒಂದು ಕೆರೆಯ ದಂಡೆಯ ಮೇಲೆ ಇಳಿಸಿ, ಆ ಕೆರೆಯಲ್ಲಿ ಎಲ್ಲರೂ ಕೈಕಾಲು ಮೋರೆಗಳನ್ನು ತೊಳಕೊಂಡರು. ಬಳಿಕ ಅವರು ಪಲ್ಲಕ್ಕಿಯೊಡನೆ ಸಮರ್ಥರ ಮಠದಕಡೆಗೆ ಸಾಗಿದರು. ಮಠದ ಬಳಿಯಲ್ಲಿ ಬಂದಕೂಡಲೆ ಪುನಃ ಎಲ್ಲರು ಮತ್ತೊಮ್ಮೆ ''ಜಯ ರಘುವೀರ ಸಮರ್ಥ'' ಎಂದು ಉಚ್ಚಸ್ವರದಿಂದ ಜಯಘೋಷ ಮಾಡಿ ಮಠದ ಪಡಸಾಲೆಯಲ್ಲಿ, ಆ ಪಡಸಾಲೆ ಹತ್ತುವ ಪಾವಟಿಗೆಗಳ ಮುಂದೆ ಪಲ್ಲಕ್ಕಿಯನ್ನು ಇಳಿಸಿದರು. ಆಮೇಲೆ ಮೋರೋಪಂತ ಪಿಂಗಳೆ, ಅಣ್ಣಾಜಿದತ್ತೋ ಇವರಿಬ್ಬರು ಸಮರ್ಥರ ಶಿಷ್ಯವರ್ಯರಾದ ದಿನಕರ ಗೋಸಾವಿಗಳೊಡನೆ ಶ್ರೀಸಮರ್ಥರ ಬಳಿಗೆ ರತ್ನಕರಂಡಕದೊಡನೆ ಹೋಗಿ ವಿನಯದಿಂದ ಕೈಜೋಡಿಸಿ ನಿಂತು ಕೊಂಡರು.

ಆಗ ಸಮರ್ಥರು, ಮಠದೊಳಗಿನ ತಾವು ಮಲಗುವ ಕೋಣೆಯ ಆಚೆಕಡೆಯ ಪಡಸಾಲೆಯೊಳಗಿನದೊಂದು ಖಿಡಕಿಯೊಳಗಿಂದ ದುರ್ಗದ ಕೆಳಗಿನ ವನಶೋಭೆಯನ್ನು ನೋಡುತ್ತ ಪ್ರಶಸ್ತವಾದ ವ್ಯಾಘ್ರಚರ್ಮದ ಮೇಲೆ ಕುಳಿತುಕೊಂಡಿದ್ದರು. ಸಜ್ಜನರ ವಸತಿಸ್ಥಾನದ ಆನಂದವನ್ನೇನು ವರ್ಣಿಸುವದು? ಸಂಸಾರದ ತಾಪಗಳಿಂದಲೂ, ರಾಜ್ಯಕಾರಭಾರದ ಯಾತಾಯಾತದಿಂದಲೂ ಬೇಸತ್ತಿದ್ದ ನಮ್ಮ ಆ ಇಬ್ಬರು ಬ್ರಾಹ್ಮಣ ಮುತ್ಸದ್ದಿಗಳ ಮನಸ್ಸುಗಳೂ ಆ ಆನಂದಮಯ ಸ್ಥಾನದ ಸಹವಾಸದಿಂದ ತತ್‌ಕ್ಷಣ ಆನಂದ ಪರವಶವಾದವು! ಅವರಿಗೆ ನೋಡಿದತ್ತ ಶಾಂತಿಯ ಸಾಮ್ರಾಜ್ಯವು ಪಸರಿಸಿದಂತೆ ತೋರಿತು. ಸಂಸಾರದಲ್ಲಿ ಸುಖಕ್ಕಾಗಿ ಹೊಡೆದಾಡಿ ಹೊಡೆದಾಡಿ ಎಷ್ಟು ಆಯಾಸಪಟ್ಟರೂ ದೊರೆಯದ ಶಾಂತಿಸೌಖ್ಯವು ಸತ್ಪುರುಷಸ್ಥಾನದಲ್ಲಿ ಕಾಲಿಟ್ಟ ಕೂಡಲೇ ಅವರಿಗೆ ಪ್ರಾಪ್ತವಾಯಿತು. ಆ ಪವಿತ್ರವಾದ ಆಶ್ರಮಸ್ಥಾನದಲ್ಲಿ ನೋಡಿದತ್ತ ನೈರ್ಮಲ್ಯ, ನೋಡಿದತ್ತ ಸೌಜನ್ಯ, ನೋಡಿದತ್ತ ಪ್ರಸನ್ನತೆ, ನೋಡಿದತ್ತ ಆದರಭಾವ, ನೋಡಿದತ್ತ ಪ್ರೇಮ ಇವು ಕಣ್ಣಿಗೆ ಬೀಳುತ್ತಿದ್ದವು. ಅಲ್ಲಿಯ ಕಲ್ಲು, ಮಣ್ಣು, ಗಿಡ, ಮನೆಗಳು ಕೂಡ ಆನಂದಪ್ರಾಪ್ತಿಯಿಂದ ಕೃತಾರ್ಥವಾಗಿರುವಂತೆ ತೋರುತ್ತಿತ್ತು. ಅಲ್ಲಲ್ಲಿ ಸಮರ್ಥ ಶಿಷ್ಯರು ಸತ್ಸಮಾಗಮದ ಧನ್ಯತೆಯ ಗಾಂಭೀರ್ಯದಿಂದ ಕಣ್ಣಿಗೆ ಬೀಳುತ್ತಿದ್ದರು. ಆ ಪುಣ್ಯವಂತರನ್ನು ನೋಡಿದ ಕೂಡಲೇ ಮನಸ್ಸು ಲೀನವಾಗಿ ಭಕ್ತಿಯಿಂದ ನಮಸ್ಕರಿಸಲು ಕೈಗಳು ತಾವಾಗಿ ಏಳುತ್ತಿದ್ದವು. ಅಲ್ಲಲ್ಲಿ ಆಕಳ ಕರುಗಳು, ಚಿಗರಿಯ ಮರಿಗಳು ಆನಂದದಿಂದ ಸಂಚರಿಸುತ್ತಿದ್ದವು; ನವಿಲುಗಳು ಕೇಕು ಹಾಕುತ್ತಿದ್ದವು; ಗಿಳಿಗಳು ಮಾತಾಡುತ್ತಿದ್ದವು. ಪುಷ್ಪಸುಗಂಧವೂ, ಧೂಪದ ವಾಸನೆಯೂ ಮಠದಲ್ಲೆಲ್ಲ ಇಡಗಿ, ಅಲ್ಲಿ ವ್ಯವಹರಿಸುತ್ತಿರುವವರ ಮನಸ್ಸನ್ನು ಉಲ್ಲಾಸ ಗೊಳಿಸುತ್ತಿದ್ದವು. ಸತ್ಸಮಾಗಮದ ಈ ಎಲ್ಲ ವೈಭವವು ಕಣ್ಣಿಗೆ ಬಿದ್ದ ಕ್ಷಣದಲ್ಲಿ ಅವರ ಮನಸ್ಸು ಪ್ರಸನ್ನವಾಗಿ ಹೋಗಲು, ಸಂಸಾರತಾಪದ ಸೃಷ್ಟಿಯೊಳಗಿಂದ ಹೊರಟು ಬಂದು ಆನಂದ ದಾಯಕವಾದದ್ದೊಂದು ಹೊಸ ಸೃಷ್ಟಿಯನ್ನೇ ಪ್ರವೇಶಿಸದಂತೆ ಆ ಮರಾಟಾ ಮುತ್ಸದ್ದಿಗಳಿಗೆ ಭಾಸವಾಯಿತು. ಈ ಆನಂದಮಯಸೃಷ್ಟಿಯ ಉತ್ಪತ್ತಿಸ್ಥಾನವು ಎದುರಿಗೆ ವ್ಯಾಘ್ರಚರ್ಮದ ಮೇಲೆ ವಿರಾಜಮಾನವಾಗಿರಲು, ಅವರ ದೃಷ್ಟಿಗಳು ಆ ಮೂರ್ತಿಯಲ್ಲಿ ನಟ್ಟುಹೋದವು. ಆಗ ಶ್ರೀಸಮರ್ಥರು ವನಶೋಭೆ ನೋಡುವಲ್ಲಿ ತೀರ ಮಗ್ನರಾಗಿ ಹೋಗಿದ್ದರು. ಯೋಗಿವರ್ಯರೇ ಅವರು; ಅಂದ ಬಳಿಕ ವನಶೋಭೆಯ ಅವಲೋಕನದ ಯೋಗದಿಂದ ಅವರ ಚಿತ್ತೈಕಾಗ್ರವಾಗಲಿಕ್ಕೆ ತಡವೇಕೆ ಆಗುವದು? ಹಾಗೆ ಅವರು ಏಕಾಗ್ರಚಿತ್ತದಿಂದ ವನಶೋಭೆಯನ್ನು ನೋಡುತ್ತಿರುವಾಗ ಮೋರೋಪಂತನೂ, ಅಣ್ಣಾಜಿದತ್ತೋನೂ ಬಂದದ್ದರಿಂದ ಅವರಿಗೆ ಅದು ಗೊತ್ತಾಗಲಿಲ್ಲ. ಆ ತೇಜಃಪುಂಜವಾದ ದಿವ್ಯಮೂರ್ತಿಯು ಬಲಗಡೆಯ ಕಂಕುಳಲ್ಲಿಯ ಸಣ್ಣ ಯೋಗದಂಡವನ್ನು ಭೂಮಿಯ ಮೇಲೆ ಊರಿ, ಎಡಗೈಯಿಂದ ಕಿಡಕಿಯದೊಂದು ಸಲಾಕಿಯನ್ನು ಹಿಡಿಕೊಂಡು ವನಶೋಭೆ ನೋಡುವಲ್ಲಿ ಮಗ್ನವಾಗಿ ಹೋಗಿತ್ತು. ಟೊಂಕದಲ್ಲೊಂದು ಉಡದಾರ–ಒಂದು ಲಂಗೋಟಿ ಮಾತ್ರ ಇದ್ದು, ವ್ಯಾಘ್ರ ಚರ್ಮದ ಬಳಿಯಲ್ಲಿಯೇ ಪಾದುಕೆಗಳಿದ್ದವು. ವಕ್ಷಸ್ಥಳದಲ್ಲಿ ಶುಭ್ರವಾದ ಗಡ್ಡಗಳು

ವಿರಮಿಸುತ್ತಿದ್ದು, ಕೆಲವು ತಲೆಗೂದಲುಗಳು ಹೆಗಲಮೇಲಿಂದ ಹಾದುಬಂದು ಆ ಗಡ್ಡಗಳಲ್ಲಿ ಸಮ್ಮಿಶ್ರವಾಗಿದ್ದವು. ಮೀಸೆಗಳು ಬಹಳ ದೊಡ್ಡವಿಲ್ಲದ್ದರಿಂದಲೂ, ಅವುಗಳ ತುದಿಗಳನ್ನು ಹುರಿಮಾಡಿ ಮೇಲಕ್ಕೇರಿಸಿಬಿಟ್ಟದ್ದರಿಂದಲೂ ಆ ಮೀಸೆಗಳ ಹಾಗೂ ಗಡ್ಡಗಳ ನಡುವೆ ಪಕ್ವವಾದ ತೊಂಡಿಯ ಹಣ್ಣಿನಂತೆ ಕೆಂಪಗಿದ್ದ ಕೆಳದುಟಿಯು ಆ ಶುಭ್ರಕೇಶಗಳ ಯೋಗದಿಂದ ಎದ್ದು ಕಾಣಿಸುತ್ತಿತ್ತು, ಗಿಳಿಯಮೂಗಿನಂತೆ ಇದ್ದ ಸಮರ್ಥರ ಮೂಗು, ಆ ಕೆಂಪು ಕೆಳದುಟಿಯನ್ನು ಪಕ್ವಫಲವೆಂದು ಭಾವಿಸಿ ಕುಕ್ಕಲಿಕ್ಕೆ ಟಕ್ಕುಹಿಡಿದು ಕುಳಿತಿದ್ದ ಗಿಳಿಯ ಮೂಗಿನಂತೆ ಶೋಭಿಸುತ್ತಿತ್ತು. ವಯಸ್ಸು ಎಪ್ಪತ್ತೆರಡು ವರ್ಷದ ಮನೆಗೆ ಬಂದಿದ್ದರೂ ಅವರ ಮೈಬಣ್ಣವು ಒಬ್ಬಾನೊಬ್ಬ ತರುಣ ರಾಜಪುತ್ರನ ಮೈಬಣ್ಣವನ್ನು ನಾಚಿಸುವಂತೆ ಪೀತ–ರಕ್ತ–ವರ್ಣ ಮಿಶ್ರವಾಗಿ ಇದ್ದದ್ದಲ್ಲವೆ, ಅವರ ಮೈಯ ಹುರಿಕಟ್ಟು ಚಡ್ಡಿ–ಕಾಚಿಗಳನ್ನು ಹಾಕಿ ಕುಸ್ತಿಯ ಕಣಕ್ಕೆ ಬಂದಿದ್ದ ಜಟ್ಟಿಯನ್ನು ನಾಚಿಸುವದಂತಹದಾಗಿತ್ತು. ಸಮರ್ಥರು ವಾಡಿಕೆಯಾಗಿ ಕುಳಿತು ಕೊಳ್ಳುತ್ತಿರುವ ಪದ್ಧತಿಯಂತೆ ಆಗಾದರೂ ಚಕ್ಕಮಕ್ಕಳೆ ಹಾಕಿ ಕುಳಿತುಕೊಂಡಿದ್ದರು. ಅವರು ಎತ್ತರದಲ್ಲಿ ಶಿವರಾಯನಂತೆ ಮಧ್ಯಮಮಾನದವರಾಗಿದ್ದರು. ಅಂಥ ಮುಪ್ಪಿನ ಕಾಲದಲ್ಲಿಯೂ ಅವರ ನೇತ್ರದ ದಿವ್ಯಕಾಂತಿಯು ಕಡಿಮೆಯಾಗಿದ್ದಿಲ್ಲ. ಇಂಥ ಅಪ್ರತಿಮವಾದ ದೈವೀತೇಜಸ್ಸಿನ ದಿವ್ಯಮೂರ್ತಿಯ ದರ್ಶನದಿಂದ ಮೋರೋಪಂತನೂ, ಅಣ್ಣಾಜಿಯೂ ಧನ್ಯರಾದರು.

ಹೀಗೆ ಸದ್ಗುರುಮೂರ್ತಿಯ ಮಂಗಲರೂಪವನ್ನು ಮನದಣಿಯದೆ ನೋಡುತ್ತಿದ್ದ ಆ ಬ್ರಾಹ್ಮಣಮುತ್ಸದ್ದಿಗಳು ದಿನಕರ ಗೋಸಾವಿಯ ಸಂಗಡ ''ಮನಾಚೇಶ್ಲೋಕದೊಳಗಿನ—

**ಶ್ಲೋಕ**

ಸಮರ್ಥಾಚಿಯಾ ಸೇವಕಾ ವಕ್ರಪಾಹೇ।
ಅಸಾಸರ್ವ ಭೂಮಂಡಲೀ ಕೋಣ ಆಹೇ॥
ಜಯಾಚೀ ಲಿಲಾ ವರ್ಣಿತೀ ಲೋಕ ತೀನ್ಹೀ।
ನುಪೇಕ್ಷೀ ಕದಾ ರಾಮದಾಸಾ ಭಿಮಾನೀ॥

ಎಂಬ ಶ್ಲೋಕವನ್ನು ಅಂದು ''ಜಯ ಜಯ ರಘುವೀರಸಮರ್ಥ'' ಎಂದು ಜಯಘೋಷ ಮಾಡಿದರು. ಅದರಿಂದಲೇ ಶ್ರೀ ಸ್ವಾಮಿಗಳ ಏಕಾಗ್ರತೆಯ ಭಂಗವಾಗಿ ಅವರು ಆ ಇಬ್ಬರ ಕಡೆಗೆ ತಿರುಗಿ, ಅಕ್ಷಯ್ಯವಾದ ತಮ್ಮ ನಗಮೊಗದಿಂದ ಅವರನ್ನು ನೋಡ ತೊಡಗಿದರು. ಆಗ ದಿನಕರ ಗೋಸಾವಿ ಉಪಾಧ್ಯೇ ಇವರು ಆ ಬಂದವರ ಕಡೆಗೆ ಕೈಮಾಡಿ— ''ಶಿವರಾಯರ ಕಡೆಯಿಂದ ಇವರು ಬಂದಿರುವರು'' ಎಂದು ಸಮರ್ಥರಿಗೆ ನಿವೇದನ ಮಾಡಿದರು. ಆಗ ಮೋರೋಪಂತನು ರತ್ನಕರಂಡಕವನ್ನು, ಅಣ್ಣಾಜಿಯು ಕೈಮುಟ್ಟಲು, ಶ್ರೀಗಳ ಸನ್ನಿಧಿಯಲ್ಲಿರಿಸಿ ಸಾಷ್ಟಾಂಗನಮಸ್ಕಾರ ಮಾಡಿದನು. ಅತ್ತ ಅಣ್ಣಾಜಿದತ್ತನೂ ಸಾಷ್ಟಾಂಗ ವೆರಗಿದನು. ಅವರಿಬ್ಬರು ಎದ್ದು ಕೈಜೋಡಿಸಿ ನಿಂತುಕೊಂಡಿರಲು, ದಿನಕರ ಗೋಸಾವಿಯು ಎರಡು ಕೃಷ್ಣಾಜಿನಗಳನ್ನು ಸಮರ್ಥರ ಮುಂದುಗಡೆಯಲ್ಲಿ ಹಾಸಿದನು. ಆಗ ಸಮರ್ಥರು ಅವುಗಳ ಮೇಲೆ ಕುಳಿತುಕೊಳ್ಳಬೇಕೆಂದು ಹೇಳಲು, ಅವರು ವಿನಯದಿಂದ ಮೋರೆತಗ್ಗಿಸಿ

ವೀರಾಸನದಿಂದ ಆ ಆಸನಗಳ ಮೇಲೆ ಕುಳಿತುಕೊಂಡರು. ಸಮರ್ಥರ ತೇಜಸ್ಸು ಅತ್ಯಂತ ಪ್ರಖರವಾದದ್ದು. ಅವರ ದೃಷ್ಟಿಗೆ ಕೂಡಿಸುವ ಧೈರ್ಯವು ಯಾರಿಗಾದೀತು? ಸಮರ್ಥರು ಮುಗುಳುನಗೆ ನಗುತ್ತ—

ಸಮರ್ಥರು—ಶಿವಬಾನಿಗೆ ಕ್ಷಮವೇ?

ಮೋರೋಪಂತ (ವಿಯನದಿಂದ)— ಮಂಡೆಯಾದಂತೆ ಏನೋ ಆಗಿ ಅವರ ಬಲ ಮೊಣಕಾಲು ಬಾತಿದೆ. ಜ್ವರಗಳು ಬಹಳ ಬರುತ್ತವೆ. ಸಮರ್ಥರ ಚರಣಕ್ಕೆ ಅರ್ಪಿಸುವದಕ್ಕಾಗಿ ಸಹಿ–ಸಿಕ್ಕಾಗಳನ್ನು ಮಾಡಿದ ಸನದನ್ನು ಈ ರತ್ನಕರಂಡಕದಲ್ಲಿ ಹಾಕಿ ಮಹಾರಾಜರು ಕಳಿಸಿದ್ದಾರೆ.

ಸಮರ್ಥರು— ''ಇಷ್ಟು ಅವಸರ ಮಾಡಬೇಡಿರಿ, ಇನ್ನೂ ಅವಧಿಯದೆ'' ಎಂದು ಆಗಾಗ್ಗೆ ನಿರ್ಧಾರದಿಂದ ನಾವು ಹೇಳುತ್ತಬಂದರೂ, ಶಿವಬಾನು ಈಗೇ ಅವಸರದಿಂದ ಸನದು ಕಳಿಸಿದನು! ಪ್ರಾರಬ್ಧವನ್ನು ಮೀರುವದು ಯಾರಿಂದಲೂ ಆಗುವದಿಲ್ಲೆಂಬ ಮಾತೇ ನಿಜವು. ಕಾಲಮರ್ಯಾದೆಯನ್ನು ಹೆಚ್ಚಿಸಲಿಕ್ಕೆ ನಾವು ಪ್ರಯತ್ನ ಮಾಡುತ್ತಿರಲು, ಪ್ರಾರಬ್ಧಭೋಗವು ಅದನ್ನು ಕಡಿಮೆ ಮಾಡಲಿಕ್ಕೆ ಯತ್ನಿಸುವದು, ಇದಕ್ಕಿಂತ ಹೆಚ್ಚಿನ ದುರ್ದೈವವು ಯಾವದಿರುವದು?

ಅಣ್ಣಾಜಿ—ಸಮರ್ಥರ ಈ ಸಂದಿಗ್ಧ ಭಾಷಣದ ಅರ್ಥವು ಪಾಮರರಾದ ನಮಗೆ ಹ್ಯಾಗೆ ತಿಳಿಯಬೇಕು? ಸಮರ್ಥರ ಗೂಢವು ಸಮರ್ಥರಿಗೇ ಗೊತ್ತು!

ಸಮರ್ಥರು—ಜನರು ಸ್ವಕರ್ಮಬದ್ಧರಾಗಿರುವರು; ಅಂದರೆ, ಕರ್ಮಮಾಡಬೇಕು, ಅದರ ಫಲವನ್ನು ಉಣ್ಣಬೇಕು ಎಂಬ ನಿಯಮಕ್ಕೆ ಒಳಗಾಗಿರುವರು. ಈ ಕರ್ಮಪಾಶವು ಎಂದಿಗೂ ಮುಗಿಯುವದಿಲ್ಲ; ಕರ್ಮಕ್ಕೆ ಫಲವು ದೊರೆಯುತ್ತಹೋದಂತೆ, ಹೆಚ್ಚಿನ ಫಲದ ಆಶೆಯಿಂದ ಮತ್ತೆ ಕರ್ಮಮಾಡಲು ಪ್ರವೃತ್ತಿಯಾಗುತ್ತದೆ; ಆದ್ದರಿಂದ ಆಯುಷ್ಯದ ಮರ್ಯಾದೆಯೊಂದು ಗೊತ್ತಾಗ್ಗಿರದಿದ್ದರೆ, ಮನುಷ್ಯನ ಕರ್ಮ ಮಾಡುವ ಉತ್ಸಾಹವು ಎಂದೂ ಕುಗ್ಗುತ್ತಿದ್ದಿಲ್ಲ! ಆದರೆ ಆಯುಷ್ಯ ತೀರಿದಕೂಡಲೆ, ನಮ್ಮ ಕರ್ಮಮಾಡುವ ಇಚ್ಛೆ ತೀರಿರಲಿ–ತೀರದಿರಲಿ, ನಮ್ಮ ಕೆಲಸಗಳು ಮುಗಿದಿರಲಿ—ಅರ್ಧವಾಗಿರಲಿ ನಾವು ಬಿಟ್ಟದ್ದು ಬಿಟ್ಟು, ಪರಲೋಕದ ಹಾದಿಯನ್ನು ಹಿಡಿಯಬೇಕಾಗುವದು. ಈ ಜನ್ಮದಲ್ಲಿ ತಾನು ಬದುಕುವ ಕಾಲವೆಷ್ಟು? ತಾನು ಮಾಡುವ ಕೆಲಸವೆಷ್ಟು ಎಂಬದು ಮೊದಲೇ ಗೊತ್ತಾಗ್ಗಿ ಹೋದರೆ ಈ ಲೋಕದ ಬಾಳಿನ ಸವಿಯೇ ಕೆಟ್ಟು ಹೋಗುವದು. ಸಂಸಾರದ ಸವಿಯು ಅಜ್ಞಾನದಲ್ಲಿರುತ್ತದಲ್ಲದೆ, ಜ್ಞಾನದಲ್ಲಿರುವದಿಲ್ಲ. ಆದ್ದರಿಂದ ನಾವು ಶಿವಬಾನಿಂದ ಸ್ವರಾಜ್ಯದ ಕಾರ್ಯವು ಇನ್ನೂ ಕೆಲಮಟ್ಟಿಗೆ ಆಗುವದಿರುತ್ತದೆಂದು ತಿಳಿದು ''ಈಗ ಸನದು ಕೊಡುವದು ಬೇಡ; ನಾವು ಕೇಳಿದಾಗ ಕೊಡುವೆಯಂತೆ'' ಎಂದು ಹೇಳುತ್ತ ಬಂದೆವು; ಆದರೆ ಆತನು ನಮ್ಮ ಮಾತನ್ನು ಮೀರಿ ಈಗೇ ಸನದನ್ನು ಕಳಿಸಿ ಕೊಟ್ಟದ್ದರಿಂದ, ಆತನು ರಾಜ್ಯಸ್ಥಾಪನಾರೂಪವಾದ ತನ್ನ ಕರ್ಮದಮಂಗಲಮಾಡಿ, ಅದರ ಪರಿಸಮಾಪ್ತಿಯನ್ನು ಮಾಡಿದಹಾಗಾಯಿತು. ನಿಮ್ಮ ಕೈಯಿಂದಲೇ ಈ ಸನದನ್ನು ತೆಗೆದುಕೊಂಡು

ಹೋಗಿ ಶ್ರೀಚರಣದಲ್ಲಿ ಅರ್ಪಿಸಿಬಿಡಿರಿ; ನಾವು ಅದನ್ನು ತಕ್ಕೊಂಡು ಏನು ಮಾಡೋಣ? ಯಾಕಂದರೆ—

ಭಿಕ್ಷಾ ಹ್ಮಣಜೆ ಕಾಮಧೇನು
ಸದಾಫಲನವ್ಹೆ ಸಾಮಾನ್ಯ
ಭಿಕ್ಷೇಸಿ ಜೋಕರಿ ಅಮಾನ್ಯ
ತೋ ಕರಂಟಾ ಯೋಗಿ॥

ಹೀಗೆ ನಮ್ಮ ವ್ರತವಿರುವದು; ಆದ್ದರಿಂದ ಶಿವಬಾನು ಹಿಂದಕ್ಕೆ ನಮಗೆ ಅರ್ಪಿಸಿದ ರಾಜ್ಯವನ್ನು ಅವನದು ಅವನಿಗೆ ತಿರುಗಿಕೊಟ್ಟುಬಿಟ್ಟೆವು! ಶಿವಬಾನು ಅಸಮಾನ್ಯ ಪುರುಷ ನಿರುವನು. ಆತನ ಯೋಗ್ಯತೆಯು ಜನಕರಾಯನ ಯೋಗ್ಯತೆಗೆ ಸಮಾನವಾದದ್ದು. ಆತನು ಹಿಂದಕ್ಕೆ ಎಷ್ಟೋ ಪ್ರಸಂಗಗಳಲ್ಲಿ ಶ್ರೀರಾಮೋತ್ಸವಕ್ಕಾಗಿ, ಪೂಜಾ-ನೈವೇದ್ಯಾದಿಗಳಿಗಾಗಿ ಸ್ಥಿರವಾದ ಆಸ್ತಿಯನ್ನು ಕೊಡಬೇಕೆಂದು ಯತ್ನಿಸಿದನು. ಆಗೆಲ್ಲ ನಾವು ಪ್ರತಿಬಂಧಿಸುತ್ತ ಬಂದೆವು; ನಾವು ಪ್ರತಿಬಂಧಿಸಿದ್ದು ಸಫಲವೂ ಆಗುತ್ತ ಬಂದಿತು. ಹಾಗೆ ಮಾಡುವಲ್ಲಿ ನಮ್ಮ ಉದ್ದೇಶವು ಬೇರೆ ತರದ್ದಿತ್ತು, ನಾವು ಕಾಲವಿಳಂಬಮಾಡುತ್ತ ಹೋದಂತೆ ಆತನ ಕಾಲಮೃತ್ಯುವಿನ ಆಗಮನಕ್ಕೆ ವಿಳಂಬವಾಗುತ್ತ ಹೋಗಬೇಕೆಂಬದು ನಮ್ಮ ಉದ್ದೇಶವಾಗಿತ್ತು, ಅದೊಂದು ಕವಡಿಗಂಟ ಕತನದ ನಡತೆಯನ್ನು ನಾವು ಶಿವಬಾನ ಮುಂದಿಟ್ಟಿದ್ದೆವು; ಆದರೆ ನಮ್ಮ ಮನೋದಯವು ಆತನಿಗೆ ತಿಳಿಯಲಿಲ್ಲ, ನಮಗೂ ಸ್ಪಷ್ಟವಾಗಿ ಹೇಳಲಿಕ್ಕೆ ಬರಲಿಲ್ಲ. ಹೀಗಾಗಿ ಶಿವಬಾನ ಅನ್ಯಥಾ ಭಾವನೆಗೆ ಕಾರಣವಾಯಿತು. ಆ ಭಾವನೆಯಿಂದಲೇ ಆತನು ಈಗ ಸನದನ್ನು ಕಳಿಸಿರುವನು. ಆಗಲೆ ನಾವು ಹೇಳಿದಂತೆ ಶಿವಬಾನ ಕಾರ್ಯದ ಮಂಗಲವಾಗಿ, ಆತನ ಈ ಲೋಕದ ಕರ್ತವ್ಯದ ಪರಿಸಮಾಪ್ತಿಯಾಯಿತು. ಆತನಿಂದ ಇಷ್ಟೇ ಕಾರ್ಯವಾಗಬೇಕೆಂಬ ಯೋಗವಿದ್ದ ಬಳಿಕ ಮಾಡುವದೇನು? ''ನಾವಿಷ್ಣುಃ ಪೃಥಿವೀಪತಿಃ'' ಎಂದು ಶಾಸ್ತ್ರವಿರುವದರಿಂದ, ರಾಜನ ಶಿಕ್ಷಾ-ಮೊರ್ತಬು ಆಯಿತೆಂದರೆ ಅದು ಈಶ್ವರೀ ಇಚ್ಛೆಯಂತೆಲೇ ತಿಳಿಯಬೇಕು. ನಮ್ಮ ಅಪ್ಪಣೆಯ ರಹಸ್ಯವನ್ನರಿಯದೆ ಹಟದಿಂದಲೂ, ಆಗ್ರಹದಿಂದಲೂ ಈಗ ಸನದನ್ನು ಕಳಿಸಿರುವದರಿಂದ ಆತನಿಂದ ಇಷ್ಟೇ ಕಾರ್ಯವಾಗುವ ಯೋಗವಿತ್ತೆಂದು ತಿಳಿಯಬೇಕು. ಇದಲ್ಲದೆ, ಜಾಲನಾದ ಜಾಲಮಹಮ್ಮದನೆಂಬ ಹೆಸರಿನ ಫಕೀರನೂ ಸಂತಾಪದಿಂದ ಶಿವಬಾನನ್ನು ಶಪಿಸಿರುವನು. ಅಂದಬಳಿಕ ಎಲ್ಲವೂ ಅನುಚಿತವಾಗುವದೇ ಸರಿ. ಅದಕ್ಕೆ ಉಪಾಯವಿಲ್ಲ.

ಈ ಮೇರೆಗೆ ನುಡಿದು ಸಮರ್ಥರು ಕೆಲವು ಹೊತ್ತು ಸುಮ್ಮನೆ ಕುಳಿತರು. ಆಮೇಲೆ ಅವರು ದಿವಾಕರ ಗೋಸಾವಿಯ ಕಡೆಗೆ ಮೋರೆ ತಿರುಗಿಸಿ— ದಿವಾಕರ ಗೋಸಾವಿಗಳೇ, ಇವರಿಬ್ಬರನ್ನು ಈ ಕರಡಿಗೆಯಿಂದ ಸಹಿತವಾಗಿ ಶ್ರೀಸನ್ನಿಧಿಯಲ್ಲಿ ಕರಕೊಂಡು ಹೋಗಿ, ಶ್ರೀ ಚರಣದಲ್ಲಿಯೂ ಸನದಿನ ಸಂಗತಿಯ ನಿವೇದನಮಾಡಿರಿ; ಮತ್ತು ಇವರಿಗೂ, ಇವರ ಸಂಗಡಿಗರಿಗೂ ಶ್ರೀಯ ಪ್ರಸಾದವನ್ನು ಕೊಟ್ಟು, ನಾಳೆ ಪ್ರಾತಃಕಾಲದಲ್ಲಿ ನಿರೂಪಕೊಡಿರಿ. ನಾವು ಇನ್ನು ರಾಮಘಳಿಯ ಕಡೆಗೆ ಹೋಗುವೆವು. ಎಂದು ಹೇಳಿ ಸಮರ್ಥರು ಎದ್ದು ದೊಡ್ಡ ಯೋಗದಂಡವನ್ನು ತಕ್ಕೊಂಡು ರಾಮಘಳಿಯ ಕಡೆಗೆ ಸಾಗಿದರು. ಇತ್ತ ದಿವಾಕರ

ಗೋಸಾವಿಗಳು ಅವರಿಬ್ಬರನ್ನು ಸಂಗಡ ಕರಕೊಂಡು ಶ್ರೀರಾಮಚಂದ್ರನ ಸನ್ನಿಧಿಗೆ ತೆರಳಿದರು. ಸಮರ್ಥರು ತಮ್ಮ ನಿತ್ಯದ ಅತ್ಯಂತ ವೇಗಶಾಲಿಯಾದ ನಡಿಗೆಯಿಂದ ಗಾಳಿಹೋದಂತೆ ಹೋದವರು, ದುರ್ಗವಿಳಿದು ಕ್ಷಣದಲ್ಲಿ ಕಣ್ಣಿಗೆ ಕಾಣದಂತಾದರು!

## ದುಃಖದಲ್ಲಿಯ ಆನಂದವು!

ಕಾರ್ತಿಕಮಾಸವು ಹೋಗಿ ಮಾರ್ಗಶೀರ್ಷಮಾಸಕ್ಕೆ ಆರಂಭವಾಗಿತ್ತು, ಜಾಲಿಯ ಗಿಡಗಳು ಹೂವುಗಳಿಂದ ಚಳಿತಿದ್ದವು, ಚಿತ್ರವಿಚಿತ್ರ ಪಾತರಗಿತ್ತಿಗಳು ಎಲ್ಲ ಕಡೆಯಲ್ಲಿ ಹಾರಾಡುತ್ತಿದ್ದವು. ಚಂಪಾಷಷ್ಠಿಯ ಹಬ್ಬವು ಆಗಿಹೋಗಿ ದತ್ತಜಯಂತಿಯು ಬರುತ್ತಲಿತ್ತು, ಮಾರ್ಗಶೀರ್ಷದ ಬಿಸಿಲು ಸ್ವಾಭಾವಿಕವಾಗಿಯೇ ತೀಕ್ಷ್ಣವಾಗಿರುವಂತೆ, ಆ ವರ್ಷವೂ ಇರಲು, ಅಂಥ ಆ ತೀಕ್ಷ್ಣ ಬಿಸಿಲೊಳಗಿಂದ ಸಜ್ಜನಗಡಕ್ಕೆ ಹೋಗಿದ್ದವರು ಪಲ್ಲಕ್ಕಿಯೊಡನೆ ತಿರುಗಿ ಬರುತ್ತಿದ್ದರು. ಅವರಲ್ಲಿ ಮೋರೋಪಂತನೂ, ಅಣ್ಣಾಜಿದತ್ತೂನೂ ಮಾತ್ರ ಕಾಣುತ್ತಿದ್ದಿಲ್ಲ. ಮಹಾರಾಜರು ಹಂಬೀರ ರಾವ ಮೋಹಿತೆ ಸೇನಾಪತಿಯನ್ನು ಕರ್ನಾಟಕದ ಬಂದೋಬಸ್ತಿಗಾಗಿ ನಿಯಮಿಸಿ ಕಳಿಸಿದಂತೆ, ಅಣ್ಣಾಜಿಯನ್ನು ಕೊಂಕಣಕ್ಕೂ, ಮೋರೋಪಂತನನ್ನು ಉತ್ತರಕ್ಕೂ ಹೋಗುವಂತೆ ನಿಯಮಿಸಿ, ಆದರಂತೆ ಅವರಿಗೆ ಮೊದಲೇ ಆಜ್ಞಾಪತ್ರಗಳನ್ನು ಕೊಟ್ಟಿದ್ದರು. ಸಜ್ಜನಗಡಕ್ಕೆ ಹೋಗಿ ಅಲ್ಲಿಂದ ತಮ್ಮ ತಮ್ಮ ನಿಯಮಿತ ಸ್ಥಳಗಳಿಗೆ ಹೋಗಬೇಕೆಂದು ಅಪ್ಪಣೆಯಾದ್ದರಿಂದ ಅವರು ತಮ್ಮ ತಮ್ಮ ಸ್ಥಳಗಳಿಗೆ ಹೋಗಿಬಿಟ್ಟಿದ್ದರು. ಸದ್ಯಕ್ಕೆ ರಾಯಗಡದಲ್ಲಿ ಮಹಾರಾಜರ ಬಳಿಯಲ್ಲಿ ಬಾಳಾಜಿ ಆವಜಿ ಚೀಟಣೀಸ, ಪ್ರಲ್ಹಾದನಿರಾಜಿ, ರಾಮಚಂದ್ರ ನೀಲಕಂಠ ಅಮಾತ್ಯ ಇಷ್ಟೇ ಜನ ಕರ್ತೃತ್ವಶಾಲಿಗಳು ಇದ್ದರು. ಜನಾರ್ಧನಪಂತ ಹಣಮಂತೆಯು ಕೊಲ್ಲಾಪುರದ ಬಳಿಯಲ್ಲಿ, ಜರ್ನಾದನಪಂತ ಸುಮಂತನು ಸಂಭಾಜಿಮಹಾರಾಜರ ಬಂದೋಬಸ್ತಿಗಾಗಿ ಪಲ್ಹಾಳಗಡದ ಕೆಳಗೆಡೆಯಲ್ಲಿರುತ್ತಿದ್ದರು. ಹೀಗಿರುವಾಗ ರಾಯಗಡದಲ್ಲಿ ಸೋಯರಾಬಾಯಿಯ ಒಳಸಂಚು ಒಳ್ಳೇ ಭರಕ್ಕೆ ಬಂದಿತ್ತು, ಮಹಾರಾಜರ ಪತ್ರದಂತೆ ಸಂಭಾಜಿಯು ವಿಷದಸಂಶಯ ದಿಂದ ಉಮಾಜಿಯನ್ನು ಸೆರೆಹಿಡಿದು ಕರ್ನಾಟಕಕ್ಕೆ ಕಳಿಸಿದ್ದನ್ನು ಹಿಂದೆ ಹೇಳಿರುತ್ತದೆ. ಮತ್ತು ಅಂದಿನಿಂದ ಸಂಭಾಜಿಯ ಸ್ವಭಾವವು ಸಂಶಯಗ್ರಸ್ತವಾಗಿ, ಒಬ್ಬ ಕಲುಷನಹೊರತು ಬೇರೆಯಾರ ಮೇಲೆಯೂ ಆತನ ವಿಶ್ವಾಸವು ಉಳಿಯಲಿಲ್ಲೆಂತಲೂ ಸೂಚಿಸುತ್ತದೆ. ಬಾಳಾಜಿಯು ಉಮಾಜಿಯ ವಿಷಯವಾಗಿ ಬರೆದ ಆ ಸಂಶಯಗ್ರಸ್ತವಾದ ಪತ್ರದಿಂದಲೆ ಆತನ ಸ್ಥಿತಿಯು ಹೀಗಾಯಿತೆಂದು ಹೇಳಬಹುದು. ಅದರೊಳಗೆ, ದಸರೆಯ ಹಬ್ಬದಲ್ಲಿ ಆತನು ರಾಯಗಡಕ್ಕೆ ಹೋದಾಗ ಸೋಯರಾಬಾಯಿಯು ಆಡಿದ ಹೊಟ್ಟೆಯ ಕಿಚ್ಚಿನ ಮಾತುಗಳದಿಷ್ಟು ಈಗ ನೆನಪಾಗಲು, ಕೇಳುವದೇನು? ಬೆಂಕಿಯಲ್ಲಿ ಎಣ್ಣೆ ಸುರುವಿದ ಹಾಗಾಯಿತು. ಆಗ ಆ ಮರಾಟವೀರನು ಸಂತಾಪದಿಂದ ಉರಿಯಹತ್ತಿದನು. ಆತನು ಕಲುಷವನ್ನು ಕುರಿತು—

ಸಂಭಾಜಿ(ಹುಬ್ಬು ಏರಿಸಿ ಸಂಶಯಗ್ರಸ್ತವಾದ ಮುದ್ರೆಯಿಂದ)— ಕಬಜಿ, ಪ್ರಸಂಗವು ಬಹಳ ಕಠಿಣವಾಗಿ ತೋರುತ್ತದೆ. ನಮ್ಮ ಸುತ್ತುಮುತ್ತಲಿನ ವಾತಾವರಣವು ವಿಷಮಯವಾಗುತ್ತ ನಡದಿರುವದೆಂಬ ಸಂಶಯವು ಉಮಾಜಿಯ ವಿಷಯವಾಗಿ ಬಂದ ಚೀಟಣೀಸರ ಪತ್ರದಿಂದ ನನಗೆ ಉಂಟಾಗಿದೆ; ಆದರೆ ಈ ಸಂಬಂಧದಿಂದ ನಿಮ್ಮ ಮತವೇನಿರುವದು?

ಕಬಜಿ(ಆಡ್ಯತೆಯಿಂದ)—ಈ ಸಂಬಂಧದಿಂದ ನಾನು ನನ್ನ ಉಪಾಶ್ಯ ದೈವತವಾದ ತ್ರಿಪುರ ಸುಂದರಿಯನ್ನು ಹಿಂದುಗಡೆ ಕೇಳುವೆನು. ಸದ್ಯಕ್ಕೆ ನೀವಿರುವ ವಾತಾವರಣವನ್ನು ಮಂತ್ರಸಾಮರ್ಥ್ಯದಿಂದ ತುಂಬಿಬಿಡುವೆನು; ಅಂದರೆ ನಿಮ್ಮ ಜೀವಕ್ಕೆ ಅಪಾಯವನ್ನುಂಟು ಮಾಡುವ ಸಾಮರ್ಥ್ಯವು ಯಾರಿಗೂ ಉಂಟಾಗಲಾರದು.

ಸಂಭಾಜಿ—ಹೋ ಹೋ! ನೀವನ್ನುವದು ಬಹುಯೋಗ್ಯವು. ಮೊದಲು ಸುತ್ತು ಮುತ್ತಲಿನ ಹತ್ತು ದಿಕ್ಕುಗಳನ್ನು ಮಂತ್ರ ಸಾಮರ್ಥ್ಯದಿಂದ ತುಂಬಿಬಿಡಿರಿ ನೋಡೋಣ!

ಕಬಜಿ—ಹುಜೂರ, ಅಷ್ಟು ಕೆಲಸವನ್ನು ನಾನು ಇಲ್ಲಿ ಕುಳಿತೇ ಮಾಡುವೆನು. ಅದಕ್ಕೇನು ಹೆಚ್ಚಿನ ಸಾಮಾನುಗಳ ಅವಶ್ಯಕೆಯಿಲ್ಲ, ಕೊಡುವು ತುಂಬಿದ್ದೇ ಅದೆ. ನೀರೂ ಇಲ್ಲಿಯೇ ಇರುವವು. ಈಗಲೇ ಅಪ್ಪಣೆಯಂತೆ ಮಾಡುವೆನು; ಆದರೆ ನನ್ನದೊಂದು ಮಾತನ್ನು ನೀವು ಲಕ್ಷದಲ್ಲಿಡಬೇಕಾಗುವದು.....

ಸಂಭಾಜಿ (ನಡುವೇ ಬಾಯಿಹಾಕಿ ಅವಸರದಿಂದ)—ಅದೇನು ಮಾತು?

ಕಬಜಿ—ಅದಾವ ಮಾತೆಂದರೆ, ನಾನು ಮೊದಲು ದಿಕ್ಕು ತುಂಬುವ ಮಂತ್ರವೆಂದ ಕೂಡಲೆ, ಒಂದು ಅದ್ಭುತವಾದ ಸೈತಾನೀ ಶಕ್ತಿಯು ಇಳಿದು ಬರುವದು. ಇಂಥ ಮಂತ್ರ ಶಕ್ತಿಯನ್ನು ನೋಡುವ ಅಭ್ಯಾಸವು ನಿಮಗೆ ಇಲ್ಲದ್ದರಿಂದ ನೀವು ಮೋಹಿಸಬಹುದು. ಆದ್ದರಿಂದ ನಾನು ನಿಮಗೆ ಕಣ್ಣುಮುಚ್ಚಲು ಸೂಚಿಸಿದ ಕೂಡಲೇ ನೀವು ಕಣ್ಣು ಮುಚ್ಚಿ, ತೆರೆಯ ಹೇಳಿದ ಕೂಡಲೆ ಕಣ್ಣು ತೆರೆಯಬೇಕು. ಇದೆಲ್ಲ ಒಂದು ಕ್ಷಣದಲ್ಲಿ ಮಿಂಚಿ ಹೋಗುವದು! ಆದರೆ ಮೊದಲು ಜಗದಂಬೆಯ ತೀರ್ಥ–ಪ್ರಸಾದವನ್ನು ಸ್ವೀಕರಿಸಿ, ನಾನೂ ಸ್ವೀಕರಿಸುವೆನು.

ಈ ಮೇರೆಗೆ ನುಡಿದಬಳಿಕ ಅವರಿಬ್ಬರೂ ಯಥೇಚ್ಛವಾಗಿ ಮದ್ಯಪ್ರಾಶನಮಾಡಿದರು. ಆಮೇಲೆ ಕಬಜಿಯು ಒಂದು ಪಾತ್ರೆಯಲ್ಲಿ ಗುಲಾಬಿಯ ನೀರನ್ನು ಸುರವಿಕೊಂಡು ಆಚಮನ ಮಾಡಿ— ''ಪೃಥ್ವೀಪತೀ ಮಂತ್ರಸ್ಯ'' ಎಂಬ ಮಂತ್ರದಿಂದ ತನ್ನ ಆಸನವನ್ನು ಭದ್ರಪಡಿಸಿ ಕೊಂಡು ಆಮೇಲೆ— ''ತೀಕ್ಷ್ಣದಂಷ್ಟ್ರ ಮಹಾಕಾಯ ಕಲ್ಪಾಂತ ದಹನೋಪಮ। ಭೈರಾವಾಯ ನಮಸ್ತುಭ್ಯಮನುಜ್ಞಾಂ ದಾತುಮರ್ಹಸಿ॥'' ಎಂಬ ಮಂತ್ರವನ್ನಂದು ತನ್ನ ಎಡಗಾಲ ಹಿಂಬಡ ದಿಂದ ಮೂರುಸಾರೆ ಭೂಮಿಯನ್ನು ಒದೆದನು. ಆಮೇಲೆ ಪುನಃ ಒಂದು ಪಾನಪಾತ್ರೆ ಯಲ್ಲಿ ಮದ್ಯವನ್ನು ಸುರವಿಕೊಂಡು— ''ಎಂ ಕ್ಲಿಂ ಸೌಃ ಕ್ಲಿಂ ಏಂ ಬಾಲಾ ತ್ರಿಪುರ ಸುಂದರೀ ಸ್ವಾಹಾ'' ಎಂಬ ಮಂತ್ರವನ್ನು ಜಪಿಸಿ ಆ ಪಾತ್ರೆಯೊಳಗಿನ ಮದ್ಯಪ್ರಾಶನಮಾಡಿ, ಒಂದು ಕ್ಷಣ ಸಮಾಧಿಸ್ಥಾನದ ಸೋಗು ತೋರಿಸಿದನು. ಸ್ವಲ್ಪ ಹೊತ್ತು ಆದಮೇಲೆ ಆತನು ಸಂಭಾಜಿ ಮಹಾರಾಜರನ್ನು ಕುರಿತು— ''ಮಹಾರಾಜ, ಕಣ್ಣುಚ್ಚಿಕೊಳ್ಳುವ ಸಮಯವು ಸಮೀಪಿಸಿತು,

ನಾನು ಸೂಚಿಸಿದ ಕೂಡಲೆ ಕಣ್ಣುಮುಚ್ಚಿಕೊಳ್ಳಿರಿ.'' ಎಂದು ಹೇಳಿ ಮಂತ್ರವನ್ನು ಅನ್ನ ಹತ್ತಿದನು.

ಮಂತ್ರ

''ಘಟ ಘಟ ಘಂಟಾ ಘೋರ ಘಂಟು ಯದ್ ಘಂಬನ ಘಡಶೀವೇ ತಾಲ ದ್ವಾರ ಪಾಲಭೋ, ಘೋಣ ಘಂಟಾಖ್ಯ, ತ್ಕೂಷ್ಮಾಂಡ ಪ್ರಭಾವೇನ ವ್ಯೋಮಾದವತರ! ಅಥವಾ ಆಲೋಚ! ಮಮ ಜಾರಣ—ಮಾರಣ ಯಂತ್ರಮಂತ್ರ–ತಂತ್ರ ಭಿರ್ಭಗ್ನ ವದೇನ ಪ್ರಖರ ಗಂಧಕಾಗ್ನಿಕುಂಡೇ ಹವಿವತ್ತಟ ದ್ದೇಹ ಜ್ವಲಾಸಾರ್ಥೇ. ಆಗ್ರೇ ತಪ್ತಲೋಹ ಾಲೆಕೈಃ ಭಂಕ್ತ್ವಾ ಪತಿತಭವಿಷ್ಯಸಿ!'' ಮಹಾರಾಜ ಕಣ್ಣುಮುಚ್ಚಿರಿ.

ಕೂಡಲೆ ಸಂಭಾಜಿರಾಜನು ಕಣ್ಣು ಮುಚ್ಚಿಕೊಳ್ಳಲು, ಕಬಜಿಯು ಯಾರೋ ಇಳಿದು ಬಂದಿದ್ದು ಅವರೊಡನೆ ತಾನು ಮಾತಾಡುವನೆಂದು ತೋರಿಸುವನಂತೆ ಮಾತಾಡಹತ್ತಿದನು. ಆ ಮಾತುಗಳನ್ನು ಕಣ್ಣುಮುಚ್ಚಿಕೊಂಡು ಕುಳಿತಿದ್ದ ಸಂಭಾಜರಾಜನು ಕೇಳತೊಡಗಿದನು. ಎರಡುಬಗೆಯ ಧ್ವನಿಗಳಿಂದ ಮಾತಾಡುವ ವಿದ್ಯೆಯು ಕಬಜಿಗೆ ಅತ್ಯುತ್ತಮವಾಗಿ ಸಾಧಿಸಿತ್ತು. ಅದರ ಉಪಯೋಗವನ್ನು ಈಗ ಆತನು ಮಾಡಿ, ಸರಳ ಸ್ವಭಾವದವನೂ, ನಿಷ್ಕಪಟಿಯೂ ಆದ ಸಂಭಾಜಿ ರಾಜನಮೇಲೆ ಮಂತ್ರ ವಿದ್ಯೆಯ ಪ್ರಭಾವದ ಮೋಹವನ್ನು ಚನ್ನಾಗಿ ಕೂಡ್ರಿಸಿದನು. ಕಬಜಿಯು ಕಲ್ಪಿತ ಪಿಶಾಚದ ಸಂಗಡ ಆಡಿದ ಮಾತುಗಳೇನೆಂದರೆ—

ಕಬಜಿ—ಘೋಣಘಂಟಾ.......

ಘೋಣಘಂಟಾ —ಆಜ್ಞಾ ಮಹಾರಾಜ

ಕಬಜಿ—ತೀವ್ರವಾಗಿ ಹೋಗು, ವಿದ್ಯುದ್ವೇಗದಿಂದ ಹೋಗು. ಮಹಾರಾಜರ ವಿರುದ್ಧ ವಾಗಿ ಎಲ್ಲಿ ಎಲ್ಲಿ ಏನೇನು ಒಳಸಂಚುಗಳು ನಡೆದಿರುವದೆಂಬದನ್ನು ತಿಳಿದುಕೊಂಡು ಮನೋ ವೇಗದಿಂದ ಬಂದು, ಕರ್ಣಪಿಶಾಚದಂತೆ ಅದೃಶ್ಯವಾಗಿ ನನ್ನ ಕಿವಿಯಲ್ಲಿ ಹೇಳು ನಡೆ, ಹೊರಟು ನಡೆ! ಹ! ಮಹಾರಾಜರ, ಕಣ್ಣು ತೆರೆಯಿರಿನ್ನು!

ಸಂಭಾಜಿ—(ಕಣ್ಣು ತೆರೆದು ) ಕಬಜಿ, ನಿಮ್ಮ ಮಂತ್ರಸಾಮರ್ಥ್ಯವು ಎಷ್ಟು ಅಗಾಧವಾದದ್ದಿದು! ನಿಮ್ಮಲ್ಲಿ ಇಂಥ ಪ್ರಖರವಾದ ಮಂತ್ರ ವಿದ್ಯೆಯು ಇದ್ದೀತೆಂದು ಈವರೆಗೆ ನನಗೆ ತೋರಿದ್ದಿಲ್ಲ; ಇಂದು ಸ್ಪಷ್ಟವಾಗಿ ಅನುಭವಕ್ಕೆ ಬಂದಿತು.

ಕಬಜಿ—(ಅಧ್ಯತೆಯಿಂದ) ಮಹಾರಾಜ, ತಪಸ್ಸಾಮರ್ಥ್ಯವೇನು, ಮಂತ್ರ ಸಾಮರ್ಥ್ಯ ವೇನು? ಇವೆರಡರ ಉಪಯೋಗವನ್ನು ಅಂಥ ಮಹತ್ವದ ಪ್ರಸಂಗದಲ್ಲಿಯೇ ಮಾಡ ಬೇಕಾಗುವದು. ಈ ಸಾಮರ್ಥ್ಯವಿದ್ದವರು ಸಣ್ಣಪುಟ್ಟ ಸಂಗತಿಗಳಲ್ಲಿ ಅದರ ಉಪಯೋಗ ಮಾಡಹತ್ತಿದರೆ, ಆ ಸಾಮರ್ಥ್ಯವು ಕ್ಷೀಣವಾಗುತ್ತಹೋಗಿ ಪ್ರಸಂಗದಲ್ಲಿ ಘಾತವಾಗಬಹುದು! ತಮ್ಮಂಥ ಶೂರ ವೀರರು ಹ್ಯಾಗೆ ಬೆಕ್ಕು–ನಾಯಿಗಳ ಮೇಲೆ ಖಡ್ಗವ ಪ್ರಯೋಗಿಸುವದು ಅಯೋಗ್ಯವೋ, ಅದರಂತೆ ನಮ್ಮ ಮಾಂತ್ರಿಕರ ಮಾತೂ ಇರುತ್ತದೆ. ಮಹಾರಾಜ, ಅಂಥ ಕಠಿಣಪ್ರಸಂಗದ ಹೊರತು ಅದರ ಉಪಯೋಗವನ್ನು ನಾವು ಎಂದಿಗೂ ಮಾಡುವದಿಲ್ಲ.

ಸಂಭಾಜಿ—ನಿಮ್ಮ ಮಾತು ಯೋಗ್ಯವಾದದ್ದು. ಸಿಂಹದ ನಖಪಂಜರವು ಮದ್ದಾನೆಯ ಗಂಡಸ್ಥಳವನ್ನು ಸೀಳಿದರೇ ಒಪ್ಪುವದು!

ಕಬಜಿ—ಎಂಥ ಯೋಗ್ಯ ಮಾತಾಡಿದಿರಿ ಸರಕಾರ! ಬಹಳ ಯೋಗ್ಯ ಮಾತಾಡಿದಿರಿ!

ಈ ಮೇರೆಗೆ ನುಡಿದು ಕಬಜಿಯು ಎರಡು ಮದ್ಯಪಾತ್ರೆಗಳನ್ನು ತುಂಬಿದನು. ಇಬ್ಬರೂ ಯಥೇಚ್ಛವಾಗಿ ಮದ್ಯಪ್ರಾಶನ ಮಾಡಿದರು. ಅಷ್ಟರಲ್ಲಿ ಘೋಣಘಂಟಾ ಪಿಶಾಚವು ಗುಪ್ತರೀತಿಯಿಂದ ಬಂದು ಮಾತಾಡುತ್ತದೆಂದು ಸೋಗುಮಾಡಿ ಕಬಜಿಯು ಆ ಪಿಶಾಚದೊಡನೆ ಮಾತಾಡತೊಡಗಿದನು.

ಕಬಜಿ—ಏನಂದಿ? ಶೋಧ ಮಾಡಿಕೊಂಡು ಬಂದೆನೆನ್ನುವಿಯಾ? ಒಳಿತಾಯಿತು, ಹೇಳು ಏನೇನು ಶೋಧಮಾಡಿಕೊಂಡು ಬಂದೆಯೆಂಬುದನ್ನು! ಹು, ಹೇಳು ಕೇಳುತ್ತಿರುವೆನು. ಹೀಗೇನು? ಒಳ್ಳೇದು, ಮುಂದೆ; ಅಯ್ಯಯ್ಯಪ್ಪನವರಿಗೆ! ಎಂಥ ಸಾಹಸವಿದು! ಒಳ್ಳೇದು, ಮುಂದೆ? ಇಷ್ಟೇ ಸರಿಯೆ? ಹೋಗು ಹಾಗಾದರೆ! ಯಾವಾಗಲೂ ಹೀಗೆಯೇ ಅದೃಶ್ಯವಾಗಿ ಬಂದು ನಡೆದ ಸಂಗತಿಯನ್ನು ನನ್ನ ಮುಂದೆ ಹೇಳುತ್ತಿರು. ನೀನು ಮಾಡಿದ ಕೆಲಸದ ಫಲವನ್ನು ನಾಳೆ ಬೆಳಗಿನಲ್ಲಿ ಪೂಜೆಯ ಕಾಲಕ್ಕೆ ತೀರ್ಥಪ್ರಸಾದಗಳ ರೂಪದಿಂದ ನಿನಗೆ ಕೊಡವೆನು! ಹೋಗು!

ಹೀಗೆ ನುಡಿದು ಕಬಜಿಯು ಆನಂದದ ಮುದ್ರೆಯಿಂದ ಕಣ್ಣುಮುಚ್ಚಿಕೊಂಡುಸ್ವಸ್ಥವಾಗಿ ಧ್ಯಾನಸ್ಥನಂತೆ ಸ್ವಲ್ಪಹೊತ್ತು ಕುಳಿತುಕೊಂಡನು. ತನ್ನ ಮಂತ್ರವಿದ್ಯೆಯ ವರ್ಚಸ್ಸನ್ನು ಭೋಳೆ ಸ್ವಭಾವದ ಸಂಭಾಜಿಯ ಮೇಲೆ ಚನ್ನಾಗಿ ಕೂಡ್ರಿಸಬೇಕೆಂದು ಕಬಜಿಯು ಬಹುದಿವಸಗಳಿಂದ ಹಾದಿಯ ನೋಡುತ್ತಿದ್ದನು. ಹೀಗೆ ಅನಾಯಾಸವಾಗಿ ಯೋಗ್ಯಪ್ರಸಂಗ ಒದಗಿರುವಾಗ ಆ ಧೂರ್ತನು ಅದರ ಉಪಯೋಗ ಮಾಡಿಕೊಳ್ಳದೆ ಯಾಕೆ ಬಿಟ್ಟಾನು? ಆ ದುಷ್ಟನು ಉಮಾಜಿಯ ವಿಷಯವಾಗಿ ಚಿಟಣೀಸನು ಬರೆದು ಕಳಿಸಿದ ಪತ್ರದಿಂದಲೇ ಒಂದು ನಾಟಕವನ್ನು ರಚಿಸಿದ್ದನು. ಮೇಲೆ ಹೇಳಿದಂತೆ ಆ ನಾಟಕದ ಪೂರ್ವಾರ್ಧವಾಯಿತು. ಇನ್ನು ಉತ್ತರಾರ್ಧದಪ್ರಯೋಗವನ್ನು ಈಗ ಆರಂಭಿಸಬೇಕೆಂದು ಆತನು ಧ್ಯಾನಸ್ಥನಸೋಗಿನಿಂದ ಸುಮ್ಮನೆ ಕುಳಿತುಕೊಂಡಿದ್ದನು. ಭೋಳೇ ಭಾವಿಕನಾದ ಸಂಭಾಜಿಯು, ಈ ಸ್ಥಿತಿಯಲ್ಲಿಯ ಈತನನ್ನು ಎಬ್ಬಿಸಬೇಕೋ ಎಬ್ಬಿಸಬಾರದೋ ಎಂಬ ಬಗ್ಗೆ ತನ್ನೊಳಗೇ ವಿಚಾರ ಮಾಡ ತೊಡಗಿದನು; ಆದರೆ ತನ್ನ ವಿರುದ್ಧ ರಚಿಸಿದ ಕಪಟಜಾಲವಾವುದೆಂಬದನ್ನು ಅರಿತುಕೊಳ್ಳುವ ಆತುರದಿಂದ ಆ ತರುಣ ಸಂಭಾಜಿಯು ಕಬಜಿಯೊಡನೆ ಮಾತಾಡತೊಡಗಿದನು. ಕಬಜಿಗೂ ಅಷ್ಟೇ ಬೇಕಾಗಿತ್ತು. ಆಗ ಸಂಭಾಜಿಯು ಕಬಜಿಯನ್ನು ಕುರಿತು—

ಸಂಭಾಜಿ—ಕಬಜೀ. .....

ಹೀಗೆ ಕೂಗುವ ಸಂಭಾಜಿಗೆ ಸ್ವಲ್ಪ ತಡೆಯಲು ಸೂಚಿಸುವದಕ್ಕಾಗಿ ಬಲಗೈಯ ಮುಂದೆ ಮಾಡಿ ಎಡಗೈಯನ್ನು ತನ್ನ ಮಸ್ತಕದ ಮೇಲೆ ಇಟ್ಟಕೊಂಡು ಕಬಜಿಯು ಒಂದು ದೀರ್ಘಶ್ವಾಸ ವನ್ನು ಬಿಟ್ಟನು. ಆಮೇಲೆ ನಿದ್ರೆಯೊಳಗಿಂದ ಮೆಟ್ಟಬಿದ್ದು ಏಳುವಂತೆ ಒಮ್ಮೆಲೆ ಮೈಕೊಡವಿ

ಎಚ್ಚರಗೊಳ್ಳುತ್ತಿರಲು, ಸಂಭಾಜಿಯು ಕೌತುಕದಿಂದ ಆತನನ್ನು ನೋಡುತ್ತ ಕಬಜಿ.... ಎಂದು ಮತ್ತೆ ಕರೆದನು. ಆಗ ಕಬಜಿಯು ಸಂಭಾಜಿಯನ್ನು ಸ್ಥಿರದೃಷ್ಟಿಯಿಂದ ನೋಡುತ್ತ—

ಕಬಜಿ—ಮಹಾರಾಜ, ಸಮಾಧಿ ಸ್ಥಿತಿಯಲ್ಲಿ ಕಾಣುವ ಚಮತ್ಕಾರಗಳನ್ನೂ, ಆಗುವ ಆನಂದವನ್ನು ಯಥಾಸ್ಥಿತವಾಗಿ ವರ್ಣಿಸುವದು ದುಸ್ತರವು. ಅದನ್ನು ಅನುಭವಿಕರೇ ಬಲ್ಲರು. ಸಮಾಧಿಸುಖದ ಅನುಭವವುಳ್ಳವನು ದೈವಶಾಲಿಯೇ ಸರಿ!

ಸಂಭಾಜಿ—ಈಗಿನ ನಿಮ್ಮ ಸಮಾಧಿಯಲ್ಲಿ ಏನೇನು ಚಮತ್ಕಾರಗಳು ನಿಮ್ಮ ಕಣ್ಣಿಗೆ ಬಿದ್ದವು?

ಕಬಜಿ—ಅದನ್ನು ಇಷ್ಟೆಂದು ಏನು ವರ್ಣಿಸಲಿ? ಪರಮಾನಂದವು! ಮಹಾರಾಜ, ಕೇಳಬೇಕು; ನಾನು ಮೊದಲು ಆತ್ಮರೂಪದಿಂದ ಬ್ರಹ್ಮಾಂಡವನ್ನ ಪ್ರವೇಶಿಸಿ, ಅಲ್ಲಿಂದ ವೇತಾಲನ ದ್ವಾರಪಾಲಕನಾದ ಘೋಣಘಂಟನ ಬಳಿಗೆ ಹೋಗಿ ಅವನನ್ನು ಸಂಗಡ ಕರ ಕೊಂಡು ಬಳಿಕ ರಾಯಗಡಕ್ಕೆ ಬಂದೆನು. ಅಲ್ಲಿ ಈ ಮೊದಲು ಘೋಣಘಂಟನು ನೋಡಿ ಬಂದು ನನ್ನಮುಂದೆ ಹೇಳಿದ ಸಂಗತಿಗಳನ್ನು ನಾನು ಪುನಃ ಕಣ್ಣುಮುಟ್ಟ ನೋಡಿದೆನು.

ಸಂಭಾಜಿ— ಅಲ್ಲಿ ನೋಡಿದ್ದೇನು?

ಕಬಜಿ—ಮಹಾರಾಜ, ಸಿಟ್ಟಾಗಬಾರದು! ನಿಷ್ಕಾರಣವಾಗಿ ಒಬ್ಬರ ಗೃಹಛಿದ್ರಗಳನ್ನು, ವಿಶೇಷವಾಗಿ ರಾಜಗೃಹದ ಛಿದ್ರಗಳನ್ನು ಹುಡುಕುವದು ಯೋಗ್ಯವಲ್ಲ.

ಸಂಭಾಜಿ— (ಸಿಟ್ಟಿನಿಂದ) ಕಬಜಿ, ಸುಮ್ಮನೆ ಇಲ್ಲದ ರಗಳೆ ಬೆಳಿಸಬೇಡಿರಿ. ನೋಡಿದ್ದನ್ನು ಸ್ಪಷ್ಟವಾಗಿ ಹೇಳಿರಿ. ಜೀವದ ಸುತ್ತ ಬಂದಾಗ ಸಾಮಾನ್ಯ ಗೃಹವೇನು, ರಾಜಗೃಹವೇನು? ಮನೆಗಳೆಲ್ಲ ಒಂದೇ, ಹೇಳಿರಿ, ಬೇಗನೆ.

ಕಬಜಿ—ಇದೆಲ್ಲ ಸವತಿಮಸ್ತರದ ಆಟವಿರುತ್ತದೆ; ಭಾಗಾದಿತನದ ಗೊಂದಲವಿರುತ್ತದೆ. ಇಷ್ಟರಿಂದ ನೀವು ತಿಳಿದುಕೊಳ್ಳಬಹುದಲ್ಲವೆ?

ಸಂಭಾಜಿ—ಈ ಮಾತಿನ ಸಂಶಯವಂತು ನಮಗೆ ಯಾವಾಗಲೋ ಬಂದು ಹೋಗಿರುತ್ತದೆ; ಆದರೆ ಅದರ ಸಂಬಧದ ನಿಶಚ್ಯಾತ್ಮಕವಾದ ಸ್ಪಷ್ಟ ಸಂಗತಿಗಳೇನಾದರೂ ತಿಳಿದಿದ್ದರೆ ಹೇಳಿರಿ.

ಕಬಜಿ—ನಾನು ಹೇಳುವ ಸಂಗತಿಗಳಿಗೆ ಸಾಕ್ಷಿಹೇಳುವದಕ್ಕಾಗಿ ದಾದಾಜಿಯು ಬೇಗನೆ ಇಲ್ಲಿಗೆ ಬರಬಹುದು; ಆದ್ದರಿಂದ ಸಂಶಯಪಡದೆ, ನಾನು ಹೇಳುವದನ್ನು ಸಮಾಧಾನದಿಂದ ಕೇಳಬೇಕು.

ಸಂಭಾಜಿ—ಬೇಗನೆ ಹೇಳಿರಿ.

ಕಬಜಿ—ತಮ್ಮ ಚಿಕ್ಕ ತಾಯಿಂದಿರಾದ ಸೋಯರಾಬಾಯಿಯವರು ತಮಗೆ ವಿಷಪ್ರಯೋಗ ಮಾಡುವದಕ್ಕಾಗಿ ಉಮಾಜಿಯ ಕಡೆಗೆ ವಿಷವನ್ನು ಕಳಿಸಿದರು. ಆ ಸಂಗತಿಯನ್ನು ತಿಳಿದೇ ಮಹಾರಾಜರು ಚೀಟನೀಸರ ಕಡೆಯಿಂದ.......

ಸಂಭಾಜಿ—(ನಡುವೇ ಸಂತಾಪಗೊಂಡು ಅವಡುಗಚ್ಚಿ) ಎಲೈ ದುಷ್ಟಳೇ, ನನಗೆ ಮೊದಲೇ ಈ ಮಾತಿನ ಸಂಶಯಬಂದಿತ್ತು; ಇರಲಿ ಕಬಜಿ, ಮಹಾರಾಜರಿಗೆ ಸಂಶಯಬರಲಿಕ್ಕೆ ಕಾರಣವೇನೆಂಬದು ನಿಮಗೆ ಗೊತ್ತಾಗಿದೆಯೋ?

ಕಬಜಿ—ಆ ಎಲ್ಲ ಮಾತುಗಳ ಸ್ಪಷ್ಟೀಕರಣವನ್ನು ದಾದಾಜಿಯವರು ಬಂದಬಳಿಕ ಮಾಡುವರು. ತಾವು ಇನ್ನು ಪ್ರಾಣಭಯವನ್ನು ಸರ್ವಥಾ ಹಿಡಿಯಬಾರದು. ನಾಳೆ ಪೂಜೆ ಕಾಲದಲ್ಲಿ ಒಂದು ತಾಯಿತವನ್ನು ಮಂತ್ರಿಸಿಕೊಡುವನೆ ಅದು ಯಾವಾಗಲೂ ಮೈಮೇಲಿರ ಲೆಂದರಾಯಿತು.

ಕಬಜಿಯ ಈ ಮಾತುಗನ್ನು ಕೇಳಿ ಸಂಭಾಜಿರಾಜನು ಕೆಲವೇಳೆ ಸುಮ್ಮನೆ ಕುಳಿತು ಕೊಂಡು ಆಮೇಲೆ ಒಂದು ದೀರ್ಘಶ್ವಾಸವನ್ನು ಬಿಟ್ಟು— "ಈ ಲಕ್ಷಣವೇನು ನೆಟ್ಟಗೆ ಕಾಣುವುದಿಲ್ಲ, ವಿಶ್ವಾಸವಾದರೂ ಯಾರ ಮೇಲಿಡಬೇಕು? ಕಬಜಿ, ನಮ್ಮ ರಾಜಪುತ್ರರ ಹಣೆಯಬರಹದಲ್ಲಿ ಹೀಗೆಯೇ ಬರೆದಿರುತ್ತದೆಯೋ? ಎಂದು ಕೇಳಲು ಕಬಜಿಯು—

ಕಬಜಿ—ಮಹಾರಾಜ, ಇಂದಿನಿಂದ ನೀವು ನಿಮ್ಮ ಜೀವದ ಸುರಕ್ಷಿತತೆಯ ಚಿಂತೆಯನ್ನು ಬಿಟ್ಟುಬಿಡಿರಿ. ಕಾಲನು ಬಿಟ್ಟು ಮಹಾಕಾಲನು ಪಾಶವನ್ನು ತಕ್ಕೊಂಡು ತಮ್ಮಬಳಿಗೆ ಬಂದರೂ, ಜಗನ್ಮೋಹಿನಿ ತ್ರಿಪುರಸುಂದರೀ ಚಂಡಿಯ ಈ ದಾಸನು ನಿಮ್ಮ ಬಳಿಯಲ್ಲಿ ರುವವರೆಗೆ, ಯಾರ ಕೈಯಿದಂಲೂ ನಿಮ್ಮ ರೋಮವನ್ನು ಬಗ್ಗಿಸುವದು ಕೂಡ ಆಗಲಾರದು.

ಸಂಭಾಜಿ—ದಾದಾಜಿಯು ಎಂದು ಬಂದಾರು?

ಕಬಬಿ—ನಾಳೆ ಬೆಳಗಿನಲ್ಲಿ ಇಲ್ಲಿ ಇರುವರೆಂದು ತಿಳಿಯಿರಿ.

ಸಂಭಾಜಿ—(ದುಃಖದ ಮುದ್ರೆಯಿಂದ) ಹರ ಹರ! ಕಬಜೀ, ಬೇಗೆಯರು ನಾಲ್ಕೂ ಕಡೆಯಿಂದ ಬೇಗೆಯು! ಸ್ವತಂತ್ರದಿಂದ ಯಾವ ಕೆಲಸ ಮಾಡೇನೆಂದರೂ ನನಗೆ ಪ್ರತಿಬಂಧವು! ಸೆರೆಮನೆಯು! ಭಾಗಾದಿತನವು! ಸಾಪತ್ನಮಾತೆಯ ರಾಜ್ಯಲೋಭವು! ಛಿ ಛಿ! ಬೇಸತ್ತಿತ್ತು ಜೀವವು ತೀರ ಬೇಸತ್ತಿತ್ತು! ವೈಭವ ಹೀನತೆಗಿಂತ ಮರಣವು ನೆಟ್ಟಗೆ! ನಾನು ರಾಜಕುಲದಲ್ಲಿ ಹುಟ್ಟದೆ ಬಡತನವಿದ್ದರೂ ಚಿಂತೆಯಿಲ್ಲ, ಕುಲೀನ ಮನೆತನದಲ್ಲಿ ಹುಟ್ಟಿಬಂದು, ಹಂಬೀರ ರಾವ, ಧನಾಜಿ, ನೇತಾಜಿ, ಸಂತಾಜಿ ಮೊದಲಾದ ವೀರರಂತೆ ಸ್ವಂತ ಪ್ರಯತ್ನದಿಂದ ಪ್ರಸಿದ್ಧಿಗೆ ಬರುವ ಯೋಗವನ್ನು ಪರಮೇಶ್ವರನು ಇಟ್ಟಿದ್ದರೆ ಬಹಳ ನೆಟ್ಟಗಾಗುತ್ತಿತ್ತು! ಆದರೆ ಈಗ ಹಾಗೆ ಆಶೆಮಾಡುವದು ವ್ಯರ್ಥವಾಗಿರುವದು. ದುಷ್ಟಳಾದ ಆ ನಮ್ಮ ಚಿಕ್ಕತಾಯಿಯು ತನ್ನ ಮಗನಿಗೆ ಪಟ್ಟ ಕೊಡಬೇಕೆಂದು ಒಂದೇಸವನೆ ಮಹಾರಾಜರ ಡುಬ್ಬವನ್ನು ಕೆರೆಯಹತ್ತಿದ್ದಾಳೆ. ಆಬಾಸಾಹೇಬರಿಗೆ ಒಂದೇಸವನೆ ತಾಪಕೊಡುತ್ತಲಿದ್ದಾಳೆ. ನಮ್ಮ ಮೇಲ ವಿಷಪ್ರಯೋಗ ಮಾಡುವ ಸಾಹಸಕ್ಕೆ ಹೋದದ್ದರ ಇಂಗಿತವಾದರೂ ಇದೇ ಇರುವದು. ಎಂಥ ಚಾಂಡಾಲಳು ಈ ಕ್ರೂರರಾಕ್ಷಸಿಯು! ನಾನು ಕ್ರೂರ ವ್ಯಾಘ್ರನ ಶಿಶುವೆಂಬದನ್ನು ಆ ಕುಲಘಾತಕಳು ಸೆರಗಿಗೆ ಗಂಟುಹೊಡೆದು ಕೊಂಡಿರಲಿ. ಸದ್ಯಕ್ಕೆ ಹುಲಿಯು ಪಂಜರದಲ್ಲಿ ಸಿಕ್ಕಿದ್ದರೂ ಒಮ್ಮೆ ಅದು ಪಂಜರದ ಸಲಾಕೆಗಳನ್ನು ಕಿತ್ತು ಒಗೆದು ಹೊರಬಿದ್ದರೆ ಅದರ ತೀಕ್ಷ್ಣ ನಖಪಂಜರದ

ಹೊಡತವನ್ನು ಆಕೆಯು ಸರ್ವಥಾ ತಪ್ಪಿಸಿಕೊಳ್ಳಲಾರಳು! ಪಂಜರದೊಳಗಿನ ಹುಲಿಗೆ ಯಾರಾದರೂ ಕಲ್ಲು ಒಗೆಯಬಹುದು; ಆದರೆ ಬೈಲಿನಲ್ಲಿ ಅದರ ಎದುರಿಗೆ ಯಾರು ನಿಂತಾರು? (ಸ್ವಲ್ಪಹೊತ್ತುಸುಮ್ಮನಾಗಿ ಚಿಂತಾಗ್ರಸ್ತತೆಯಿಂದ ಪುನಃ)—ಕಬಜಿ, ತನ್ನ ಮನೆತನದ ಮುಂದಿನ ವ್ಯವಸ್ಥೆಯನ್ನು ತಾನೇ ಮಾಡುವದು, ಅಥವಾ ಮಂದಿಯ ಕೈಯಿಂದ ಅದನ್ನು ಮಾಡಿಸುವದು ಯಾವ ಕಾಲದಲ್ಲಿ?

ಕಬಜಿ—ಮಹಾರಾಜ, ಅಂತ್ಯಕಾಲದಲ್ಲಿ! ಮನುಷ್ಯನಿಗೆ ಮರಣ ಕಾಲವು ಸಮೀಪಿಸಿ ತೆಂದರೆ, ಆತನು ಹಾಗೆ ತನ್ನ ಮನೆತನದ ವ್ಯವಸ್ಥೆ ಮಾಡುವದರಲ್ಲಿ ತೊಡಗುವನು.

ಸಂಭಾಜಿ— (ಖೇದಯುಕ್ತ ಸಂತಾಪದಿಂದ) ಯೋಗ್ಯ ಉತ್ತರ ಹೇಳಿದಿ! ಆ ದುಷ್ಟ ಸೋಯರಾಬಾಯಿಯು ಹೀಗೆ ಮನೆತನದ ಮುಂದಿನ ವ್ಯವಸ್ಥೆಯಲ್ಲಿ ತೊಡಗಿರುವದರ ಮೇಲಿಂದ, ಮಹಾರಾಜರ ಅಂತ ಕಾಲವು ಸಮೀಪಿಸಿತೆಂದು ಆಕೆಗೆ ಗೊತ್ತಾಗಿರಬಹುದೇನು?

ಕಬಜಿ—ಮಾನವೀ ಪ್ರಾಣಿಯ ನಾಶವನ್ನು ಮಾನವೀ ಪ್ರಾಣಿಯು ಸಹಜವಾಗಿ ಮಾಡಬಹುದು; ಹಾಗೆ ಜನನದ ವಿಷಯದಲ್ಲಿ ಮಾತ್ರ ಅದಕ್ಕೆ ಸ್ವಾತಂತ್ರ್ಯವಿಲ್ಲ.

ಸಂಭಾಜಿ—ಮನುಷ್ಯನಿಗೆ ಯಾವದರಲ್ಲಿಯೂ ಸ್ವಾತಂತ್ರ್ಯವಿರದಿದ್ದರೂ ನಿಮ್ಮ ವಿಚಾರವು ಕೇವಲ ನಿರರ್ಥಕವಾದದ್ದೆಂದು ನಾನು ಅನ್ನುವದಿಲ್ಲ; ಪ್ರಸಂಗವಶಾತ್ ಆಬಾಸಾಹೇಬರ ನಾಶಕ್ಕೂ ಆ ದುಷ್ಟಳು ಮನಸ್ಸು ಮಾಡಬಹುದೇನು?

ಈ ಮೇರೆಗೆನುಡಿಯುವಾಗ ಸಂಭಾಜಿಯ ಮುಖವು ಖಿನ್ನವಾಯಿತು. ಪೂಜ್ಯಪಿತನ ಮರಣದ ಕಲ್ಪನೆಯಿಂದ ಆ ಸರಳಹೃದಯದ ವೀರನ ಅಂತಃಕರುಣವು ವ್ಯಥಿತವಾಯಿತು. ಬಳಿಯಲ್ಲಿಯೇ ಎಡಗಡೆಗೆ ಬಿದ್ದಿರುವ ಖಡ್ಗದ ಕಡೆಗೆ ಮೇಲೆ ಮೇಲೆ ಆತನ ದೃಷ್ಟಿಯು ಹೊರುಳುತ್ತಿತ್ತು; ಆತನು ತನ್ನ ಬಲಗೈಯ ಮುಷ್ಟಿಯನ್ನು ಮೇಲೆ ಮೇಲೆ ಒತ್ತುತ್ತಿದ್ದನು, ತೆರೆಯುತ್ತಿದ್ದನು. ಹೀಗೆ ಕೆಲವು ಕಾಲವು ಕ್ರಮಿಸುತ್ತಿರಲು, ಆತನ ಮುಖದ ಮ್ಲಾನತ್ವವು ಅಳಿದು ಹೋಗಿ ಮುಖವು ಕೆಂಪಾಗತೊಡಗಿತು. ಮದ್ಯಪಾನದಿಂದ ಮೊದಲೇ ಕೆಂಪಾಗಿದ್ದ ಆತನ ದೃಷ್ಟಿಗಳು ಬರಬರುತ್ತ ಗುಲಗಂಜಿಯಂತಾದವು! ಆತನು ಸಂತಾಪದಿಂದ ಕರಕರ ಹಲ್ಲು ತಿನ್ನ ಹತ್ತಿದನು. ಕ್ರೋಧಾವೇಶದಿಂದ ಆತನ ಮೈಮೇಲಿನ ಎಚ್ಚರವು ತಪ್ಪಿತು. ಈ ಸ್ಥಿತಿಯನ್ನು ಕಬಜಿಯು ಸೂಕ್ಷ್ಮ ದೃಷ್ಟಿಯಿಂದ ಅವಲೋಕಿಸುತ್ತಿದ್ದನು. ಹೀಗೆ ಸಂಭಾಜಿರಾಜನ ಸ್ಥಿತ್ಯಂತರ ವಾಗುತ್ತಾಗುತ್ತ ಕಡೆಗೆ ಅದು ಬೇರೆ ಪಂಥವನ್ನು ಹಿಡಿಯಿತು. ಆ ತರುಣ ವೀರನ ಎಡಗೈಯು ಖಡ್ಗವನ್ನು ಎತ್ತಿಕೊಂಡಕೂಡಲೆ ಬಲಗೈಯ ಮುಷ್ಟಿಯು ಸ್ವಾಭಾವಿಕವಾಗಿಯೇ ಆ ಖಡ್ಗದ ಹಿಡಿಕೆಯನ್ನು ಗಟ್ಟಿಯಾಗಿ ಹಿಡಿಯಿತು. ಈ ಸ್ಥಿತಿಯನ್ನು ನೋಡಿ ಕಬಜಿಯು ಸ್ವಲ್ಪ ಅಂಜಿದನು. ಅಷ್ಟರಲ್ಲಿ ಸಂಭಾಜಿರಾಜನು ಕಬಜಿಯ ಮುಖವನ್ನು ಕೆಕ್ಕರಿಸಿ ನೋಡುತ್ತ—

ಸಂಭಾಜಿ—ಕಬಜಿ, ಹೇಳಿರಿ! ಹೀಗೆಯೇ ಈ ಖಡ್ಗಸಹಿತವಾಗಿ ಹೊರಬಿದ್ದು ಅಡ್ಡ ಬಂದವರನ್ನು ತುಂಡರಿಸುತ್ತ ರಾಯಗಡಕ್ಕೆ ಹೋಗಿ ಆ ದುಷ್ಟಳ ಮಂದಿರವನ್ನು ಮುತ್ತಲಾ? ಹೇಳಿರಿ, ನೀವು ನಮ್ಮ ಜೀವದ ಗೆಳೆಯರಾಗಿರುತ್ತೀರಿ! ನೀವು ಆಗಲೆ ಆಡಿದ ಮಾತಿನಕಡೆ ನನ್ನ

ಪೂರ್ಣ ಲಕ್ಷವಿರುವದು! ನೀವು ಸೂಚಿಸಿದಂತೆ ಆ ಚಾಂಡಾಲಳು ಪ್ರತ್ಯಕ್ಷ ಆಬಾಸಾಹೇಬರ ಪ್ರಾಣಹರಣ ಮಾಡಲಿಕ್ಕೂ ಹಿಂದೆ ಮುಂದೆ ನೋಡಲಿಕ್ಕಿಲ್ಲ. ಆ ಕ್ರೂರ ಕರ್ಮಕ್ಕೆ ಪ್ರವೃತ್ತಳಾಗುವದರೊಳಗೆ ಆಕೆಯ ರುಂಡವನ್ನು ಚಂಡಾಡಿ ಬಿಡುವೆನು; ಹೇಳಿರಿ, ಬೇಗನೆ ಹೇಳಿರಿ!

ಕಬಜಿ—(ಕೈ ಜೋಡಿಸಿ) ಮಹಾರಾಜ, ಹೀಗೆ ದುಮುಕುವದು ಹಿತಕರವಲ್ಲ. ಆಬಾಸಾಹೇಬರು ದುರ್ಗದ ಮೇಲೆ ತಮ್ಮ ಬಂದೊಬಸ್ತು ಮಾಡಿಕೊಂಡೇ ಇರುವರು. ಅವರ ಮುಂಜಾಗ್ರತೆಯು ಅವರನ್ನು ಬಿಟ್ಟುತೊಲಗಿದ ಬಳಿಕ ನೋಡಲಿಕ್ಕೆ ಬಂದೀತು. ಮಹಾರಾಜ, ಆಬಾಸಾಹೇಬರ ಕರ್ತೃತ್ವದ ವಿಷಯವಾಗಿಯೂ ಧೂರ್ತತ್ವದ ವಿಷಯವಾಗಿಯೂ ನಾವು ಶಂಕಿಸಬಹುದೆ? ನಿಮ್ಮ ಜೀವದ ಸಲುವಾಗಿ ಇಷ್ಟು ಜಾಗರೂಕರಾಗಿರುವವರು, ಸ್ವತಃ ತಮ್ಮ ಜೀವದ ಸಲುವಾಗಿ ಜಾಗರೂಕರಾಗಿರಲಿಕ್ಕಿಲ್ಲವೆ? ಇತ್ತಿತ್ತಲಾಗಿ ಅವರು ಮಹಾರಾಣಿಯವರೊಡನೆ ಸಂಭಾಷಣವನ್ನೂ ವರ್ಜ್ಯಮಾಡಿದ್ದುದ ಸಾವಧಾನತೆಯ ಅಸ್ತಿವಾರವಾಗಿರುವದೆನ್ನಲಿಕ್ಕೆ ಏನೂ ಬಾಧೆಯಿಲ್ಲ. ಇದಲ್ಲದೆ.......

ಸಂಭಾಜಿ— (ನಡುವೇ ಬಾಯಿಹಾಕಿ ) ಆದರೆ ಎಲ್ಲ ಅನರ್ಥಗಳ ಮೂಲವನ್ನೇ ತುಂಡರಿಸಿಬಿಡುವದು ಕ್ಷೇಮಕರವಲ್ಲವೆ!

ಕಬಜಿ—ಮಹಾರಾಜ, ತಮಗೆ ಮಾತೃಹತ್ಯದ ಪಾಪದ ದೊಡ್ಡ ಅಂಜಿಕೆಯಿರುವದಲ್ಲ?

ಸಂಭಾಜಿ— (ಎಚ್ಚತ್ತು ಮೃದು ಸ್ವರದಿಂದ ಮೆಲ್ಲನೆ) ಹೌದು ಆ ಮಾತು ನಿಜವು! ಮಾತೃ ಹತ್ಯವು ಘೋರ ನರಕಸಾಧನವು. ಹಾಯ್ ಹಾಯ್! ಇತ್ತ ಬಿದ್ದರೆ ಕೆರೆ, ಅತ್ತ ಬಿದ್ದರೆ ಬಾವಿಯೆನ್ನುವ ಹಾಗೆ ನನ್ನ ಸ್ಥಿತಿಯಾಯಿತಲ್ಲ! ಏನು ಮಾಡಬೇಕು? ಬುದ್ಧಿಗೆ ಏನೂ ತೋಚಲೊಲ್ಲದು ಇದೇನು? ಒಮ್ಮೆಲೆ ನನ್ನ ಬಲಗಣ್ಣು ಹಾರತೊಡಗಿತಲ್ಲ? ಶುಭವಾರ್ತೆಯೇನು ಬರುವದು?

ಈ ಮೇರೆಗೆ ನುಡಿಯುತ್ತಿರಲು ದ್ವಾರರಕ್ಷಕನು—ಮೆಹರಬಾನ ಖುದಾವಂತರಿಗೆ ಅರಿಕೆಯಾಗಬೇಕು! ಯುವರಾಣಿಯವರು ಗಂಡುಕೂಸನ್ನು ಹೆತ್ತರು. ಸುಖಪ್ರಸವವಾಯಿತು! ಯುವರಾಜರ ರೋದನ ಧ್ವನಿಯನ್ನು ಕೇಳಿ ದಾಸಿಯು ಆ ಮಂಗಲವಾರ್ತೆಯನ್ನು ಹೇಳಲಿಕ್ಕೆ ಬಂದಿದ್ದಾಳೆ!

ಕಬಜಿ—(ಉಲ್ಲಾಸದಿಂದ) ಸರಕಾರ, ತಕ್ಕೊಳ್ಳಿರಿ ಬಲಗಣ್ಣು ಹಾರಿದ ಸತ್ಫಲವನ್ನು! ಇದು ದುಃಖದಲ್ಲಿ ಆದ ಆನಂದವೇ ಸರಿ! ಮಹಾರಾಜ, ಆನಂದವು–ಪರಮಾನಂದವು! ಪುತ್ರೋತ್ಸವದ ಆನಂದದಲ್ಲಿ ಶ್ರೀದೇವಿಯ ತೀರ್ಥಗ್ರಹಣ ಮಾಡುವದು ಯೋಗ್ಯವು.

ಈ ಮೇರೆಗೆ ಸೂಚಿಸಲು, ಅವರಿಬ್ಬರು ಆನಂದದ ಭರದಲ್ಲಿ ಯತೇಚ್ಛ ಮದ್ಯಪಾನ ಮಾಡಿದರು!

## .... ಇದು ಸಕ್ಕರೆಯಲ್ಲ, ವಿಷವು! ....

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಸಜ್ಜನಗಡದಿಂದ ಹೊರಟಿದ್ದ ಶಿವರಾಯನ ಪಲ್ಲಕ್ಕಿಯು, ದಿವಾಕರ ಗೋಸಾವಿಗಳವರು ಕೊಟ್ಟ ಶ್ರೀ ಚರಣದ ತುಳಸಿ ಪ್ರಸಾದವನ್ನು ತಕ್ಕೊಂಡು ರಾಯಗಡಕ್ಕೆ ಬಂದು ಮುಟ್ಟಿತು. ಆಗ ಶಿವರಾಯನು ಪ್ರಸಾದವನ್ನು ಭಕ್ತಿಯಿಂದ ಸ್ವೀಕರಿಸಿ ನಮಸ್ಕಾರ ಮಾಡಿ, ನಾಲ್ಕು ತುಲಸಿಯ ದಳಗಳನ್ನು ಆದರದಿಂದ ಬಾಯಲ್ಲಿ ಹಾಕಿಕೊಂಡನು. ಬಳಿಕ ಆತನು ಪಲ್ಲಕ್ಕಿಯೊಡನೆ ಬಂದಿದ್ದ ಜನರನ್ನು ಕುರಿತು—ಶ್ರೀ ಸಮರ್ಥರು ಏನಾದರೂ ಅಪ್ಪಣೆ ಮಾಡಿರುವರೆಯೆ? ಅವರು ಅನುಗ್ರಹಿಸಿ ನನಗೆ ಆಶೀರ್ವಾದ ಹೇಳಿರುವರೆಯೆ? ಎಂದು ಕೇಳಲು, ಅವರು, ಮೋರೋಪಂತರೊಡನೆ ಆದ ಸಮರ್ಥರ ಮಾತುಗಳನ್ನು ಸ್ವಲ್ಪದರಲ್ಲಿ ಹೇಳಿ, ಶ್ರೀಸಮರ್ಥರು ಆಶೀರ್ವಾದ ಮಾಡದೆ, ಅಥವಾ ಏನನ್ನೂ ಆಜ್ಞಾಪಿಸದೆ ತಟ್ಟನೆ ಸಜ್ಜನಗಡದಿಂದ ರಾಮಘಳಿಗೆ ಹೋದ ವರ್ತಮಾನವನ್ನು ಹೇಳಿದರು. ಅದನ್ನು ಕೇಳಿ ಭಾವು ಕನಾದ ಶಿವರಾಯನಿಗೆ ಬಹಳ ಅಸಮಾಧಾನವಾಯಿತು. ಶ್ರೀಸಮರ್ಥರ ಮಾತಿನ ಗೂಡಾರ್ಥವನ್ನು ಮನಸ್ಸಿನಲ್ಲಿ ತಂದು, ಅವರು ಆಶೀರ್ವಾದ ಮಾಡದೆ, ಏನೂ ಅಪ್ಪಣೆ ಕೊಡದೆ ರಾಮಘಳಿಗೆ ಹೋದದ್ದನ್ನು ಆಲೋಚಿಸಿ, ಇದರ ಲಕ್ಷಣವು ಒಳ್ಳೆಯದಲ್ಲವೆಂದು ಆ ಮಹಾರಾಷ್ಟ್ರ ಭೂಪತಿಯು ಭಾವಿಸಿದನು. ಬಳಿಕ ಎಲ್ಲರಿಗೆ ಹೋಗಲಪ್ಪಣೆಕೊಟ್ಟು ಬಳಿಯಲ್ಲಿ ಕುಳಿತಿದ್ದ ಭಾಳಾಜಿ ಆವಜಿಯನ್ನು ಕುರಿತು–ಬಾಳಾಜಿ, ದೈವಕೊಟ್ಟದ್ದನ್ನು ಕರ್ಮಕಚ್ಚಿಕೊಂಡು ಹೋಯಿ ತೆನ್ನುವಂತೆಯೇ ಈಗ ನಾವು ಶ್ರೀಸಮರ್ಥರ ಮಾತಿನ ಅರ್ಥಮಾಡಬೇಕಾಗುವದಲ್ಲವೆ? ನಾವು ಮಾಡಿದ್ದದೊಂದು, ಅದು ಆದದ್ದೊಂದು! ನಾವು ಈಗ ಸನದು ಕಳಿಸಿದ್ದು ಯೋಗ್ಯವಾಗಿಲ್ಲ, ಅದು ಶ್ರೀಸಮರ್ಥರ ಮನಸ್ಸಿಗೆ ಬರಲಿಲ್ಲ! ಸಮರ್ಥರು ನಮ್ಮ ಕಲ್ಯಾಣಕ್ಕಾಗಿಯೇ ವಿಲಂಬ ಮಾಡುತ್ತಿದ್ದದ್ದರ ಗೂಢವನ್ನು ಅಜ್ಞಾನಿಗಳು ನಾವು ತಿಳಿಯದಾದೆವು, ಎಂದು ವಿಷಾದದಿಂದ ನುಡಿಯಲು ಬಾಳಾಜಿಯು—

**ಬಾಳಾಜಿ—ಸರಕಾರ, ಈಗಾದರೂ ಏನಾಯಿತು? ಶ್ರೀಸಮರ್ಥರಿಗೆ ಶರಣು ಹೋದರೆ** ಅವರು ಏನಾದರೂ ಮಾರ್ಗವನ್ನು ತೋರಿಸಬಹುದು; ಅಷ್ಟು ಉದಾಸವಾಗುವ ಕಾರಣವಿಲ್ಲ.

ಶಿವರಾಯ—ಇದು ಕೇವಲ ಸಮಾಧಾನದಮಾತು; ಆದರೆ ''ಆಗುವದನ್ನು ತಪ್ಪಿಸುವದು ಯಾರಿಂದಲೂ ಆಗುವದಿಲ್ಲವೆ''ಂದು ನಿರಾಶೆಯ ಉದ್ಗಾರವನ್ನು ಹೊರಪಡಿಸಿಯೇ ಸಮರ್ಥರು ತಟ್ಟನೆ ರಾಮಘಳಿಗೆ ಹೋಗಿಬಿಟ್ಟಿರುವರು. ಅವರನ್ನು ಹುಡುಕುವದು ಯಾರ ಯೋಗ್ಯತೆಯು? ಅವರೇ ಅನುಗ್ರಹಿಸಿ ಬಂದರೆ ಜನರಿಗೆ ಅವರ ದರ್ಶನವಾದೀತಲ್ಲದೆ, ಅವರನ್ನು ಹುಡುಕಿ ದರ್ಶನ ಮಾಡಿಕೊಂಡೇ ಬಿಟ್ಟೇನೆಂಬ ಹಟವು ನಡೆಯುವದು ತೀರ ಅಶಕ್ಯವು. ಈ ಮಾತಿನ ಅನುಭವವು ಎಷ್ಟೋ ಸಾರೆ ಬಂದಿದೆ; ಅಂದ ಬಳಿಕ ನಾವು ಶರಣು ಹೋಗುವದು ಹ್ಯಾಗೆ? ಅವರು ನಮ್ಮನ್ನು ಉದ್ಧರಿಸುವದು ಹ್ಯಾಗೆ? ಆ ಸದ್ಗುರುನಾಥನು ನಮ್ಮ ಮನೆಯ ಆಳೇ? ಆತನು ಸ್ವತಂತ್ರನು! ಆತನು ಅನುಗ್ರಹಿಸಿ ನನ್ನ ಆಯುಷ್ಯವೃದ್ಧಿಯ

ಉಪಾಯವನ್ನು ಸೂಚಿಸಿರಲು, ಅದರಂತೆ ನಾನು ಯಾಕೆ ನಡೆಯಬಾರದು? ಸ್ವಬುದ್ಧಿಬಲದಿಂದ ಅವರ ಆಜ್ಞೆಮೀರಿದ ಪ್ರಾಯಶ್ಚಿತ್ತವನ್ನು ನಾನು ಭೋಗಿಸಲೇಬೇಕು. ಅವರು ಸದ್ಯಕ್ಕೆ ಸನದು ಬೇಡೆಂದು ಆಗಾಗ್ಗೆ ಹೇಳುತ್ತ ಬಂದದ್ದರ ಅರ್ಥವನ್ನು ನಾವು ಅಭಿಮಾನದಿಂದ ವಿಪರೀತಮಾಡಿದ್ದೇ ನಮಗೆ ಮುಳುವು ಆಯಿತು! ಸದ್ಗುರುವಿನ ಆಜ್ಞೆಗಿಂತ, ಕ್ಷುದ್ರ ಸನದಿನ ಮಹತ್ವವು ನಮಗೆ ತೋರಿದ್ದು ನಮ್ಮ ವಿನಾಶ ಕಾಲದ ಲಕ್ಷಣವಾಗಿರುವದು! ಆಗಲಿ, ಸದ್ಗುರುನಾಥನ ಇಚ್ಛೆಯಿದ್ದಂತಾಗಲಿ! ಬಾಳಾಜಿ, ಸತ್ಪುರುಷರ ಮಾತುಗಳು ವ್ಯರ್ಥವಾದವಿರುವದಿಲ್ಲ. ಅವುಗಳ ನಿಜವಾದ ಅರ್ಥವನ್ನು ತಿಳಿದವರೇ ಧನ್ಯರು; ಆದರೆ ನಮ್ಮಂಥ ಪಾಮರರಿಗೆ ಅವುಗಳ ಅರ್ಥವು ಹ್ಯಾಗೆ ತಿಳಿಯಬೇಕು? ''ಸನದು ಕೊಡುವ ಕಾಲಾವಧಿಯನ್ನು ನಾವು ಬುದ್ಧಿಪೂರ್ವಕವಾಗಿ ಬೆಳಿಸುತ್ತಿರಲು, ಹೀಗೆ ಅವಸರಮಾಡಿದ ಬಳಿಕ ಯತ್ನವಿಲ್ಲ'' ಎಂಬ ವಾಕ್ಯವು ಎಷ್ಟು ಗೂಢವಾದದ್ದು; ಎಷ್ಟು ವಾತ್ಸಲ್ಯಪೂರ್ಣವಾದದ್ದು! ಧನ್ಯನು, ಶ್ರೀಸದ್ಗುರನಾಥನೇ ಧನ್ಯನು!

ಬಾಳಾಜಿ—ಶ್ರೀಸಮರ್ಥರು ಗೂಢಾರ್ಥವನ್ನು ಹೇಳಿದ್ದರೆ ಎಷ್ಟು ನೆಟ್ಟಗಾಗುತ್ತಿತ್ತು!

ಮಹಾರಾಜರು—ಬಾಳಾಜಿ, ನಿಮ್ಮಂಥ ತಿಳುವಳಿಕೆಯಿದ್ದವರು ಹೀಗೆ ಅನ್ನಬೇಕೆ? ತನ್ನ ಶಿಷ್ಯನು ತಮ್ಮ ಅಪ್ಪಣೆ ಮೀರುವಷ್ಟು ಅಜ್ಞಾನಿಯೂ, ಕೃತಘ್ನನೂ ಇರುವನೆಂದು ಅವರು ಹ್ಯಾಗೆ ಭಾವಿಸಬೇಕು? ಅಂಥವನು ನಾನಿದ್ದ ಪಕ್ಷದಲ್ಲಿ, ಹಿಂದಕ್ಕೆ ಮಹಾ ಮಹಾ ದೈತ್ಯರು ತಮ್ಮ ಅಮೋಘ ವರಗಳ ಯೋಗದಿಂದ ತಾವು ಅಮರರೆಂದು ತಿಳಿದು ಲೋಕಕಂಟಕರಾದಂತೆ ನಾನೂ ಆಗುತ್ತಿದ್ದಿಲ್ಲವೆಂದು ಯಾರು ಹೇಳಬೇಕು? ಸನದು ಕೊಡುವತನಕ ಮರಣವಿಲ್ಲೆಂದು ಹೇಳಿ ಬಿಟ್ಟರೆ, ಆ ವರಪ್ರದಾನರೂಪವಾದ ಹೇಳಿಕೆಯನ್ನು ಸ್ವಾರ್ಥಕ್ಕಾಗಿ ಉಪಯೋಗಿಸಿ ನಾವು ನರಕಕ್ಕೆ ಗುರಿಯಾಗಬೇಕಾಗುತ್ತಿತ್ತು, ಈಗ ಆ ಪ್ರಸಂಗ ತಪ್ಪಿದ್ದರಿಂದ ಕ್ಷೇಮವೇ ಆಯಿತು. ಈ ಜಗತ್ತಿನ ವ್ಯವಸ್ಥೆಯ ಭಾರವನ್ನು ಪರಮೇಶ್ವರನೊಬ್ಬನಲ್ಲದೆ ಬೇರೆ ಯಾರೂ ಹೊತ್ತು ಪೂರಯಿಸಲಾರರು? ನಾವಿಲ್ಲದಿದ್ದರೆ ಈಶ್ವರೀ ಸತ್ತೆಯಿಂದ ನಮ್ಮ ತಲೆಮೆಟ್ಟಿ ಹಾರುವಂಥವರು ಬಂದು ಲೋಕಸೇವೆಯನ್ನು ಮಾಡಬಹುದು. ಅಥವಾ ನಾವೇ ಪುನರ್ಜನ್ಮವನ್ನು ತಾಳಿ ಬರೋಣ! ನಮಗೆ ಲೋಕಾರಾಧನೆಯ ಪುಣ್ಯವು ಈ ಜನ್ಮದಲ್ಲಿ ಇಷ್ಟರ ಮಟ್ಟಿಗೇ ಇತ್ತೆಂದು ತಿಳಿಯಬೇಕು; ಆಗಲಿ, ಸದ್ಗುರುನಾಥನ ಇಚ್ಛೆಯಿದ್ದಂತೆ ಆಗಲಿ. ಅದಕ್ಕೆ ನಾವು ಸಂತೋಷದಿಂದ ಸಿದ್ಧರಿದ್ದರಾಯಿತು!

ಬಾಳಾಜಿ—ಮಹಾರಾಜ, ತಮ್ಮ ಘನವಂತಿಕೆಗೆ ಈ ಮಾತುಗಳು ಬಹಳವಾಗಿ ಒಪ್ಪುತ್ತವೆಂದು ನನ್ನಂಥ ಪಾಮರನು ಹೇಳುವದು ಸಾಹಸವಾಗಿರುತ್ತದೆ ಮಹಾಪುರುಷರ ಉದಯವು ಮೇಲೆ ಮೇಲೆ ಆಗುತ್ತಿರುವದಿಲ್ಲ; ಆದ್ದರಿಂದ ಶ್ರೀಸಮರ್ಥರು ನಮ್ಮ ತಪ್ಪನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳತಕ್ಕದ್ದಿತ್ತು!

ಮಹಾರಾಜರು—ಬಾಳಾಜಿ, ನಮ್ಮ ಮೇಲಿನ ನಿಮ್ಮ ಉತ್ಕಟವಾದ ಪ್ರೇಮಾದರಗಳು ಹೀಗೆ ನಿಮ್ಮಿಂದ ಮಾತಾಡಿಸುವವು. ಇದು ನಿಮ್ಮ ಶೀಲಕ್ಕೆ ಬಹಳವಾಗಿ ಒಪ್ಪುತ್ತದೆ. ನಮ್ಮ ಸದ್ಗುರುನಾಥನು ನಮ್ಮ ತಪ್ಪನ್ನೇ ಏಕೆ, ನಮ್ಮನ್ನೂ ಹೊಟ್ಟೆಯಲ್ಲಿ ಹಾಕಿಕೊಂಡು ಉದ್ಧರಿ

ಸುವಷ್ಟು ಕರುಣಾಶಾಲಿಯಿರುವನು! ಸ್ವಾಮಿನಿಷ್ಠ ಬಾಳಾಜಿ, ಈ ಬೇನೆ ಈ ಗೃಹಕಲಹದ ತಾಪ, ಈ ಸಾಮ್ರಾಜ್ಯಭಾರವಾಹಕತೆ ಇವೆಲ್ಲ ತಾಪಗಳಿಂದ ಮುಕ್ತಮಾಡುವ ಸದ್ಗುರುನಾಥನು ಕರುಣಾಶಾಲಿಯಲ್ಲದೆ ಮತ್ತೇನು? ಆಗಲಿ, ಆತನು ಮಾಡುವದೆಲ್ಲ ನಮ್ಮ ಹಿತಕ್ಕಾಗಿಯೇ ಇರುತ್ತದೆಂಬದನ್ನು ನಾವು ಈಗಾದರೂ ನಂಬೋಣ; ಹಿಂದಕ್ಕೆ ಆದದ್ದು ಆಗಿಹೋಯಿತು; ಆದರೆ ನಮ್ಮ ಜನ್ಮವಿರುವತನಕ ಕರ್ತವ್ಯಪರಾಙ್ಮುಖವಾಗಲಾಗದಲ್ಲವೆ? ಆ ಕರ್ತವ್ಯವು ಶ್ರೀ ಗುರುವು ದಯಪಾಲಿಸಿದ್ದಾದ್ದರಿಂದ ಅದನ್ನು ಮಾಡಮಾಡುತ್ತ ಈ ಲೋಕಯಾತ್ರೆ ಮುಗಿಸುವದು ಕಲ್ಯಾಣಕಾರಕವು; ಆದ್ದರಿಂದ, ಪಲ್ವಾಳಗಡಕ್ಕೆ ಹೋದ ಸುಭಾನನ ಸುದ್ದಿಯೇ ನೆಂಬದನ್ನು ಬೇಗನೆ ಗೊತ್ತುಹಚ್ಚತಕ್ಕದ್ದು; ಶ್ರೀಗುರುವು ಒಂದು ಬಗೆಯಿಂದ ಮಂಗಲಕಾರಕ ಭವಿಷ್ಯವನ್ನು ಸೂಚಿಸಿರುವದರಿಂದ ಪರೀಕ್ಷಿತ ರಾಜನಂತೆ ನಾವು ನಿದ್ರಾಲಸ್ಯಾದಿಗಳನ್ನು ಬಿಟ್ಟು ಅತಿತತ್ಪರತೆಯಿಂದ ಸಾಮ್ರಾಜ್ಯ ವ್ಯವಸ್ಥಾರೂಪವಾದ ಲೋಕಾರಾಧನೆಯನ್ನು ಮಾಡೋಣ! ಯತ್ನಮಾಡುವದು ನಮ್ಮ ಕೆಲಸವು; ಫಲಕೊಡುವದು ಈಶ್ವರನ ಕೆಲಸವು! ಇದರಲ್ಲಿ ಸುಭಾನನ ಸುದ್ದಿಯು ಗೊತ್ತಾಗಿರುವದೆಯೆ?

ಬಾಳಾಜಿ—(ವಿನಯದಿಂದ) ಮಹಾರಾಜ, ಇನ್ನೂ ಗೊತ್ತಾಗಿಲ್ಲ, ಶೋಧವು ನಡೆದಿರುವದು; ಆದರೆ ಸುಭಾನನ ಹೆಂಡತಿಯೂ ಅಂತರ್ಗೃಹದಿಂದ ಅಕಸ್ಮಾತ್ ಇಲ್ಲದ ಹಾಗೆ ಆಗಿದ್ದಾಳಂತೆ!

ಶಿವರಾಯ—(ಸಂಶಯದ ಮುದ್ರೆಯಿಂದ) ಏನು? ಸುಭಾನನ ಹೆಂಡತಿಯೂ ಇಲ್ಲದ ಹಾಗಾಗಿದ್ದಾಳೆಯೆ?

ಚಿಟಣೀಸ—ಹೌದು ಸರಕಾರ, ಈಗ ಅಂತರ್ಗೃಹದಲ್ಲಿ ನಡೆದಿರುವ ಭಯಂಕರವಾದ ಒಳಸಂಚುಗಳನ್ನು ಹಾಗೇ ನಡೆಯಗೊಟ್ಟರೆ, ಯಾವಾಗ ಎಂಥ ಅನರ್ಥಗಳಾದಾವೆಂಬದನ್ನು ಹೇಳಲಾಗುವದಿಲ್ಲ.

ಮಹಾರಾಜರು—ನಿಮ್ಮ ಮಾತುಗಳ ಭಾವವನ್ನು ನಾವು ತಿಳಿದುಕೊಂಡೆವು. ಇನ್ನು ಆ ಜನ್ಮ ರಾಣೀವಾಸಕ್ಕೆ ಹೋಗಲಿಕ್ಕಿಲ್ಲವೆಂದು ನಿಶ್ಚಯಿಸಿರುತ್ತೇವೆ. ಒಳಸಂಚಿನ ಸಂಶಯವು ನಮಗೆ ಪೂರ್ಣವಾಗಿ ಬಂದಿದ್ದರೂ. ನಿಶ್ಚಯಾತ್ಮಕವಾದ ಯೋಗ್ಯಸಾಕ್ಷಿಗಳು ದೊರೆಯದ್ದರಿಂದ ಸ್ವಲ್ಪ ತಡೆಯಬೇಕಾಗಿದೆ.

ಚಿಟಣೀಸ—ವಿಷವನ್ನು ಕದ್ದುಕೊಂಡಿದ್ದ ಸುಭಾನನು ಸಿಕ್ಕರೆ, ಎಲ್ಲ ಸಂಗತಿಗಳು ಬೈಲಿಗೆ ಬಿದ್ದೇಬೀಳುವವು. ಅಷ್ಟರಲ್ಲಿ ಸುಭಾನನ ಹೆಂಡತಿಯ ದ್ವಾರದಿಂದ ನಿಜವನ್ನು ಬೈಲಿಗೆಳೆಯ ಬೇಕೆಂದು ನಾನು ಯೋಚಿಸಿದ್ದೆನು; ಆದರೆ ಅಕಸ್ಮಾತ್ ಆಕೆಯು ಅಂತರ್ಗೃಹದಿಂದ ಇಲ್ಲದಾದಳು!

ಮಹಾರಾಜರು—ಎರಡನೆಯವರ ರಾಜ್ಯದೊಳಗಿನ ಗುಪ್ತಸಂಗತಿಗಳನ್ನು ನಮ್ಮ ಗೂಢಚಾರರು ಹೊತ್ತಿಗೆ ಸರಿಯಾಗಿ ಇದ್ದಕಿದ್ದ ಹಾಗೆ ಹೇಳುವರು; ಆದರೆ ನಮ್ಮ ಮನೆಯಲ್ಲಿ ನಡೆದ ಸಂಗತಿಗಳ ಗೊತ್ತು ನಮಗೆ ಹತ್ತದಿರುವದು ದುರ್ದೈವವಲ್ಲವೆ?

ಈ ಸಂಭಾಷಣವು ನಡೆದಿರಲು, ಪಲ್ಹಾಳಗಡಕ್ಕೆ ಸಂಭಾಜಿಯನ್ನು ಎಚ್ಚರಗೊಳಿಸುವದಕ್ಕಾಗಿ ಪತ್ರವನ್ನು ಒಯ್ದಿದ್ದ ಚಾರನು ಬಂದು—ಸುಭಾನನನ್ನೂ, ಆತನು ಒಯ್ದಿದ್ದ ಲಾಲಮಣಿಯ ಕುದರೆಯನ್ನೂ ಪಲ್ಹಾಳಗಡದ್ದೊಂದು ಕೊಳ್ಳದಲ್ಲಿಯಾರೋ ತುಂಡರಿಸಿ ಚಲ್ಲಿದ ಸುದ್ದಿಯನ್ನು ಹೇಳಿ, ಸುಭಾನನ ಹೆಸರಿನ ಕಸೂತಿ ಇದ್ದ ರಕ್ತಮುಳುಗಿದ ಅಂಗಿಯನ್ನು ಸಾಕ್ಷಿಗಾಗಿ ಮುಂದಿಟ್ಟನು. ಅದನ್ನು ನೋಡಿ ಮಹಾರಾಜರೂ, ಚಿಟಣೀಸನೂ ಚಕಿತರಾದರು. ಸುಭಾನನ ಹೆಂಡತಿಯು ಹೀಗೆಯೇ ಆಗಿರಬಹುದೆಂತಲೂ, ಒಳಸಂಚಿನ ಪ್ರಕರಣವು ಅತಿ ಭಯಂಕರವಾಗಿರುವದೆಂತಲೂ ನಿಶ್ಚಯಿಸಿ, ಅವರು ತಮ್ಮೊಳಗೇ ಆಶ್ಚರ್ಯಪಡುತ್ತ ವಿಚಾರ ಮಗ್ನರಾದರು. ಹೀಗೆ ಕೆಲಹೊತ್ತು ವಿಚಾರದಲ್ಲಿ ಕಳೆದುಹೋಯಿತು. ಆಮೇಲೆ ಚಿಟಣೀಸನು —ಸರಕಾರ, ಈ ವಿಷದ ಪ್ರಕರಣದ ಗೊತ್ತುಹಚ್ಚಿ ಅದನ್ನು ನಿರ್ಮೂಲ ಮಾಡದಿದ್ದರೆ ಪರಿಣಾಮವು ನೆಟ್ಟಗಾಗುವ ಹಾಗೆ ತೋರುವದಿಲ್ಲ. ಇಷ್ಟು ನಿರ್ಭಯದಿಂದ ಕಾರ್ಯನಡೆಸಿರುವದರಿಂದ ಒಳಸಂಚಿನ ಉಗಮವು ಪರಕೀಯರಲ್ಲಿ ಆಗಿರುವದಿಲ್ಲೆಂದು ನನಗೆ ತೋರುತ್ತದೆ. ಸನ್ನಿಧಿಯಲ್ಲಿ ಹೆಚ್ಚು ಮಾತಾಡುವ ಯೋಗ್ಯತೆಯು ನನ್ನದಲ್ಲ, ಅನ್ನಲು, ಶಿವರಾಯನು— ಚಿಟಣೀಸ, ನೀವು ಹೇಳುವ ಮಾತು ಸಂಪೂರ್ಣ ನಿಜವಿರುವದು. ಇದು ಸ್ವಜನರ ರಾಜ್ಯ ಲೋಭದ ಆಟವಾಗಿರುತ್ತದೆ. ಈ ಕೊಲೆಗಡಕರ ಸಹವಾಸದಿಂದ ಆದ ಪರಿಣಾಮವನ್ನು ಭೋಗಿಸುವ ಪ್ರಸಂಗವು ನಮಗೂ ಬರಬಹುದು! ಕಾಲಕರ್ಮಗಳೆಲ್ಲ ಕೂಡಿ ಬಂದ ಹಾಗೆ ಕಾಣುತ್ತವೆ. ಒಳ್ಳೇದು, ಇದರ ವಿಚಾರವನ್ನು ನಾಳಿಗೇ ಮಾಡಿಬಿಡೋಣ. ಎಂದು ಮಾತಾಡುತ್ತಿರುವಾಗ, ಸಂಭಾಜಿರಾಜರಿಗೆ ಪುತ್ರೋತ್ಸವ ವಾದ ಸುದ್ದಿಯು ಪಲ್ಹಾಳಗಡದಿಂದ ಬಂದಿತು. ಅದನ್ನು ಕೇಳಿ ಮಹಾರಾಜರಿಗೆ ಪರಮಾನಂದ ವಾಯಿತು. ಸಂಭಾಜಿರಾಜರು ಕಳಿಸಿದ ಕಸ್ತೂರಿಯ ಸುವರ್ಣದ ತಬಕವನ್ನೂ, ಸಕ್ಕರಿಯ ಸುವರ್ಣದ ತಬಕವನ್ನೂ ಆದರದಿಂದ ಸ್ವೀಕರಿಸಿ, ಮಹಾರಾಜರು ಮನಸ್ಸಿನಲ್ಲಿ ಶ್ರೀ ಸಮರ್ಥರ—ಹಾಗು ಅಂಬಾಬಾಯಿಯ ಸ್ಮರಣಮಾಡಿ, ತಮ್ಮ ಮಾತೃಶ್ರೀಯವರನ್ನು ನೆನಿಸಿ ಕಸ್ತೂರಿಯನ್ನು ಅವರಿಗೆ ಸಮರ್ಪಿಸಿದ ತರುವಾಯ ಅದನ್ನು ತಾವು ಸ್ವಲ್ಪ ಹಣೆಗೆ ಹಚ್ಚಿಕೊಂಡು ಚಿಟಣೀಸನ ಹಣೆಗೂ ಹಚ್ಚಿದರು. ಬಳಿಕ ಸಂತೋಷದಿಂದ ಅವರಿಬ್ಬರೂ ಸಕ್ಕರೆಯನ್ನು ಬಾಯಲ್ಲಿ ಹಾಕಿಕೊಂಡು ದುರ್ಗದಲ್ಲೆಲ್ಲ ಆನೆಯ ಮೇಲಿಂದ ಸಕ್ಕರೆ ಹಂಚಬೇಕೆಂದು ಆಜ್ಞಾಪಿಸಿದರು.

ಆಗ ಸರಾಸರಿ ಎರಡುತಾಸು ರಾತ್ರಿಯಾಗಿರಬಹುದು. ರಾಯಗಡದಲ್ಲಿ ಮಂಗಳ ವಾದ್ಯ ಗಳು ಮೊಳಗಹತ್ತಿದವು, ತೋಫುಗಳು ಹಾರು ಹತ್ತಿದವು. ಈ ಆನಂದದ ಸುದ್ದಿಯಲ್ಲಿ ಮಹಾರಾಜರ ಚಿಂತೆಯು ಬಹುಮಟ್ಟಿಗೆ ಕಡಿಮೆಯಾದದ್ದಲ್ಲದೆ, ಅವರು ವಿಷದ ವಿಚಾರಣೆಯ ವಿಷಯ ದಲ್ಲಿಯೂ ಸ್ವಲ್ಪ ಉದಾಸೀನರಾದರು. ಎಂಥ ಪ್ರಸಂಗಬಂದರೂ ಮಹಾರಾಜರು ಉದಾಸೀನ ಮಾಡುವವರಲ್ಲ; ಯಾವದೊಂದು ಮಾತಿನ ಸಂಶಯಬಂದ ಕೂಡಲೆ ಅದರ ನಿರ್ಣಯ ಮಾಡಿಬಿಡುವದು ಅವರ ಹುಟ್ಟುಗುಣವು; ಆದರೆ ''ವಿನಾಶ ಕಾಲೇ ವಿಪರೀತ ಬುದ್ಧಿಃ'' ಎನ್ನುವಂತೆ ಮೊಮ್ಮಗನು ಹುಟ್ಟಿದ ಆನಂದದ ನೆವದಿಂದಲೂ, ಸಾಕ್ಷಿಗಳಿಲ್ಲದೆ

ಸ್ವಜನರಮೇಲೆ ದೋಷಾರೋಪಣವನ್ನು ಹ್ಯಾಗೆಮಾಡಬೇಕೆಂಬ ವಿಚಾರದಿಂದಲೂ ಅವರು ಆ ಆತ್ಮಘಾತದ ವಿಷದ ವಿಚಾರಣೆಯ ಕೆಲಸವನ್ನು ಮುಂದ ಮುಂದಕ್ಕೆ ಹಾಕಹತ್ತಿದ್ದರು. ಹೀಗೆ ಮಾಡಿದ್ದೊಂದು ಅವರ ಮರಣದ ಸೂಚನೆಯಂತೆಲೇ ಹೇಳಬಹುದು; ಯಾಕಂದರೆ ಅತ್ಯಂತ ಉದಾರನು ಅಕಸ್ಮಾತ್ ಲುಬ್ಧನಾಗುವದೂ, ಅತ್ಯಂತಲುಬ್ಧನೂ ಅಕಸ್ಮಾತ್ ಉದಾರ ನಾಗುವದೂ ಮರಣಸೂಚಕವೆಂದು ಜ್ಞಾನಿಗಳು ಹೇಳುತ್ತಿರುವಂತೆ, ಅತ್ಯಂತ ಕಾರ್ಯದಕ್ಷರಾದ ಮಹಾರಾಜರು ಈಗ ಔದಾಸೀನ್ಯವನ್ನು ತಾಳಿದ್ದು ವಿನಾಶಕಾಲದ ಲಕ್ಷಣವೇ ಸರಿ! ಈ ಆನಂದದ ಪ್ರಸಂಗದಲ್ಲಿ ದುಷ್ಟ ಜನರ ಸ್ಮರಣ ಬೇಡವೆಂದು ಮಹಾರಾಜರು ಚೀಟಣೀಸನನ್ನು ಮನೆಗೆ ಕಳಿಸಿ, ತಾವು ಮೊಮ್ಮಗನು ಹುಟ್ಟಿದ ಆನಂದದ ಉಚ್ಚತರ ಮನೋರಾಜ್ಯದಲ್ಲಿ ಮಗ್ನರಾದರು.

ಸಕ್ಕರೆ ಹಂಚುವ ಕೆಲಸವು ಐದುತಾಸು ರಾತ್ರಿಗೆ ಮುಗಿಯಿತು. ಎಲ್ಲರಿಗೂ ಕೊಡುವಂತೆ, ಸೋಯರಾಬಾಯಿಗೂ ಆಕೆಯ ಮಹಾರಾಣಿಯ ಪದವಿಗೆ ಒಪ್ಪುವಂತೆ ಮರ್ಯಾದೆಯಿಂದ ಸಕ್ಕರೆಯನ್ನು ಕೊಟ್ಟಿದ್ದರು; ಆದರೆ ಆ ಸಕ್ಕರೆಯನ್ನು ನೋಡಿ ಹೊಟ್ಟೆಯಕಿಚ್ಚಿನಿಂದ ಆಕೆಯ ಮೈಮೇಲಿನ ಎಚ್ಚರವೇ ತಪ್ಪಿತು. ಸಂಭಾಜಿಗೆ ವಿಷಹಾಕುವದಕ್ಕಾಗಿ ಉಮಾಜಿಯನ್ನು ನಿಯಮಿಸಿದಂತೆ, ಏಸೂಬಾಯಿಯವರ ಹೊಟ್ಟೆಯಲ್ಲಿ ಹುಟ್ಟುವ ಕೂಸಿನ ನಾಶ ಮಾಡುವದಕ್ಕಾಗಿ ಒಬ್ಬ ಸೂಲಗಿತ್ತಿಯನ್ನೂ ಆಕೆಯು ನಿಯಮಿಸಿದ್ದಳು; ಆದರೆ ಸೋಯರಾ ಬಾಯಿಯಂಥ ನೀಚರ ಸಂಕಲ್ಪಗಳೆಲ್ಲ ಸಿದ್ಧಿಸುತ್ತ ಹೋದರೆ ಜಗತ್ತಿನ ನಾಶಕ್ಕೆ ವಿಲಂಬ ವಾಗಲಿಕ್ಕಿಲ್ಲ! ಆದ್ದರಿಂದ ಸೋಯರಾಬಾಯಿಯ ಎರಡು ಕಡೆಯ ಯತ್ನಗಳೂ ನಿಷ್ಫಲವಾದವು. ಉಮಾಜಿಯು ಸೆರೆಯಾಳಾದದ್ದನ್ನು ವಾಚಕರು ಬಲ್ಲರು. ಆ ಸೂಲಗಿತ್ತಿಯ ಯತ್ನಕ್ಕಂತೂ ಆಸ್ಪದವೇ ದೊರೆಯಲಿಲ್ಲ. ಇದರಿಂದ ಸೋಯರಾಬಾಯಿಯು ಹೊಟ್ಟೆಯಕಿಚ್ಚು ಬಿಟ್ಟು ಉರುಳುತ್ತ ಸಂತಪ್ತಳಾಗಿ ತನ್ನ ಮುಂದಿಟ್ಟಿದ್ದ ಸಕ್ಕರೆಯ ತಾಟನ್ನು ನೋಡಿ, ಇದು ಸಕ್ಕರೆಯಲ್ಲ ವಿಷವು ಎಂದು ನುಡಿದು ಅದನ್ನು ಕಾಲಿನಿಂದ ಒದ್ದಳು! ಮತ್ತು ಬಳಿಯಲ್ಲಿದ್ದ ದಾಸಿಯರಿಗೆ ಹೊರಗೆ ಹೋಗ ಹೇಳಿ ಬಾಗಿಲು ಇಕ್ಕಿಕೊಂಡು ದುಃಖದಿಂದ ಕಣ್ಣೀರು ಸುರಿಸುತ್ತಲೆ ನನ್ನ ದುರ್ದೈವವೇ? ಏನು ಮಾಡಿಬಿಟ್ಟೆಯಲ್ಲ! ನೀಚ ಶಂಭ್ಯಾನೂ ಬಲೆಯಲ್ಲಿ ಬೀಳಲಿಲ್ಲ, ಏಸಿಯ ಹುಟ್ಟಿದ ಶಿಶುವೂ ನನಗೆ ಬಲಿಯಾಗಲಿಲ್ಲ; ಆದರೇನಾಯಿತು? ನನ್ನ ಈ ಎರಡು ಉಪಾಯ ಗಳು ಸಾಧಿಸದಮಾತ್ರದಿಂದ, ನಾನು ಸುಮ್ಮನೆ ಬಿಡುವವಳೆಯೇ? ಶಂಭ್ಯಾನು ನನ್ನ ಕೈಯೊಳ ಗಿಂದ ಪಾರಾಗಿ ಹೋಗುವನೆಯೆ? ಏಸಿಯ ಕೂಸು ಆಕೆಗೆ ದಕ್ಕುವದೇ? ಇನ್ನು ಮೇಲೆ ನಾನು ಪ್ರಳಯಕಾಲದ ಚಂಡಿಯ ಅವತರಾವನ್ನು ಧರಿಸುವೆನು! ನನ್ನ ಸಂಗಡ ಭಾಷಣವನ್ನು ಕೂಡ ಮಹಾರಾಜರು ವರ್ಜಮಾಡದರಲ್ಲ! ಒಳ್ಳೇದು ನೋಡಿಕೊಳ್ಳುವೆನು. ಈ ಮಾತಿನ ಸೇಡು ತೀರಿಸಿಕೊಳ್ಳದೆ ನನ್ನ ಹೃದಯವು ಶಾಂತವಾಗಲಾರದು. ನನ್ನ ಹೃದಯವನ್ನು ಶಾಂತಮಾಡಿ ಕೊಳ್ಳದಿದ್ದರೆ ನಾನು ಶೂರ ಶಿರ್ಕೆಯ ಮನೆತನದವಳೆನಿಸಿಕೊಂಡು ಉಪಯೋಗವೇನು? ನನ್ನ ಮಗನಿಗೆ ಪಟ್ಟವಾಗದೆ ಹ್ಯಾಗೆ ಇರುವದು? ಶಂಭ್ಯಾನು ಹ್ಯಾಗೆ ಅರಸನಾಗುವನು? ಈ ಪ್ರಸಂಗದಲ್ಲಿ ನಾನು ಬಂದದ್ದನ್ನು ನೋಡಿಬಿಡುವೆನು; ನನ್ನ ಕಾರ್ಯಕ್ಕೆ ಅಡ್ಡಾದವರನ್ನು

ಮೃತ್ಯುವಿನ ದವಡೆಯಲ್ಲಿ ದೂಡಿಬಿಡುವೆನು; ಬಹಳ ಹೇಳುವದೇನು? ನನ್ನ ಕಾರ್ಯಕ್ಕೆ ವಿಘ್ನಕಾರಿಗಳಾದವರನ್ನು ತಾರತಮ್ಯವಿಲ್ಲದೆ ಚಂಡಾಡಿಬಿಡುವೆನು? ನನ್ನ ಮಹಾರಾಣಿಯ ಅಧಿಕಾರವು ವ್ಯರ್ಥವಾದದ್ದೆ? ನಾನು ಒಡ್ಡಿದ ಬಲೆಯು ಕೆಲಸಕ್ಕೆ ಬಾರದ್ದೇ? ನನ್ನ ಪಕ್ಷವನ್ನು ವಹಿಸಿರುವ ಮುತ್ಸದ್ದಿಗಳೂ, ವೀರಾಧಿವೀರರೂ ಕೈಸೋತು ಕುಳಿತರೇನು? ಸದ್ಯಕ್ಕೆ ರಾಯಗಡದ ಮೇಲೆ ಬಾಳಾಜಿಆವಜಿಯು ಒಬ್ಬನೇ ಇರುವದೊಂದು ಅನುಕೂಲವೇ ಸರಿ! ಈ ಆನಂದದ ಸಮಾರಂಭವು ಯಾರಿಗೆ? ಈ ಆನಂದದ ಸಕ್ಕರೆಯು ಯಾರಿಗೆ? ಅವನ್ನು ತಕ್ಕೊಂಡು ನಾನು ಮಾಡುವದೇನು? ನನ್ನ ವಿಷದ ಗೂಢತಂತ್ರವು ಹೊರಬಿದ್ದು ಶಂಭ್ಯಾನು ಜಾಗರೂಕನಾದದ್ದು ಬಹಳ ಘಾತವಾಯಿತು; ಯಾಕಂದರೆ ಇನ್ನು ಮೇಲೆ ಆತನು ಯಾರಮೇಲೆಯೂ ವಿಶ್ವಾಸವಿಡನು. ಈ ಸ್ಥಿತಿಯಲ್ಲಿನಾನೇನು ಮಾಡಬೇಕು? ಇನ್ನು ಯಾವ ಹಂಚಿಕೆ ಮಾಡಬೇಕು? ಈ ಪ್ರಸಂಗದಲ್ಲಿ ಎಲ್ಲ ಮುತ್ಸದ್ದಿಗಳನ್ನು ನನ್ನ ಕಡೆಗೆ ಮಾಡಿಕೊಂಡು ಕಾರ್ಯಸಾಧಿಸುವದೇ ಉತ್ತಮ ಮಾರ್ಗವು.

ಈ ಮೇರೆಗೆ ವಿಚಾರಮಾಡಿ ಪುನಃ ಸಕ್ಕರೆಯ ತಾಟಿನಕಡೆಗೆ ನೋಡಿ ಅದನ್ನು ಸಂತಾಪದಿಂದ ಝಾಡಿಸಿ ಕಾಲಿನಿಂದ ಒದೆಯಲು, ಸಕ್ಕರೆಯು ಮನೆತುಂಬ ಸೂರೆಯಾಯಿತು; ಮತ್ತು ಬಂಗಾರದ ತಾಟು ಝಣಗುಟ್ಟುತ್ತ ಅಲ್ಲಿಟ್ಟಿದ್ದ ದೀಪದ ಮೇಲೆ ಅಪ್ಪಳಿಸಲು, ದೀಪವು ಬಕ್ಕಬೋರಲು ಬಿದ್ದಿತು! ಆಗ ಪಿಶಾಚಸ್ವರೂಪಳಾದ ಸೋಯರಾಬಾಯಿಯು ಸಂತಾಪದಿಂದ ಬಾಗಿಲು ತೆರೆದು ದಾಸಿಯರನ್ನು ಕರೆದು, ಈ ಕೆಟ್ಟ ಸಕ್ಕರೆಯನ್ನು ಬಳಿದು ಶೌಚಕೂಪದಲ್ಲಿ ಹಾಕಿಬಿಡಿರಿ, ಇದು ನನ್ನ ಕಣ್ಣೆದುರಿಗೆ ಬೇಡ! ಇದು ಸಕ್ಕರೆಯಲ್ಲ, ಕಾಲಕೂಟ ವಿಷವು, ಎಂದು ನುಡಿದಳು. ದಾಸಿಯರು ಗಾಬರಿಯಾಗಿ ದೀಪಹಚ್ಚಿಕೊಂಡು ಬಂದು ಈ ಅನರ್ಥವನ್ನು ನೋಡಿ ಗಡಗಡನೆ ನಡುಗಿ ಆ ದುಷ್ಟಳ ಅಪ್ಪಣೆಯಂತೆ ಸಕ್ಕರೆಯನ್ನು ಬಳಿವ ಚಲ್ಲುವ ಉದ್ಯೋಗವನ್ನು ನಡಿಸಿದರು. ಸುಭಾನನ ಹೆಂಡತಿಯಾದ ಜೀವುವಿನ ಹೆಣವು ಒಂದು ಬಾವಿಯಲ್ಲಿ ತೇಲಾಡುತ್ತಿರುವದನ್ನು ಅವರು ಅಂದು ಕೇಳಿದ್ದರು; ಆದ್ದರಿಂದ ಈ ರಾಕ್ಷಸಿಯ ಕೈಯಲ್ಲಿ ಯಾರಗತಿಯು ಏನಾಗುವದೋ ಎಂದು ಅವರು ಭಯಗ್ರಸ್ಥರಾಗಿದ್ದರು. ಈಗ ತಮ್ಮ ಒಡೆಯಳ ಚಿತ್ತವು ಅತ್ಯಂತವಾಗಿ ಕ್ಷೋಭಿಸಿರುವದರಿಂದ ನಾವು ಇಲ್ಲಿ ಬಹಳಹೊತ್ತು ನಿಲ್ಲುವದು ಯೋಗ್ಯವಲ್ಲೆಂದು ತಿಳಿದು, ಆ ಸಕ್ಕರೆಯನ್ನೆಲ್ಲ ಬಡಬಡಬಳಕೊಂಡು ಎಲ್ಲರೂ ಹೊರಟು ಹೋದರು. ಅದನ್ನು ನೋಡಿ ಆ ಸಂತಪ್ತ ಸೋಯರಾಬಾಯಿಯು ಮನಸ್ಸಿನಲ್ಲಿ— "ಈ ರಂಡೆಯರೂ ನನ್ನ ಮೇಲೆ ತಿರುಗಿಬಿದ್ದಂತೆ ಕಾಣುತ್ತದೆ. ಇವರೆ ಜೀವುವಿನ ಖೂನಿನ ಸುದ್ದಿಯನ್ನು ಹರವಿರಬಹುದು. ಇವರೇ ಸುಭಾನನು ಪಲ್ಹಾಳಗಡಕ್ಕೆ ಹೋದಸುದ್ದಿಯನ್ನು ಮಹಾರಾಜರಿಗೆ ಮುಟ್ಟಿಸಿರಬಹುದು. ಇಲ್ಲದಿದ್ದರೆ ಇವು ಹೊರಬೀಳುವ ಬಗೆಯೇನು? ಇದರ ವಿಚಾರವನ್ನು ಮೊದಲು ಮಾಡಬೇಕು. ಇಲ್ಲದಿದ್ದರೆ ತಿಳಿದೂ ತಿಳಿದೂ ನಿಗಿನಿಗಿ ಕೆಂಡವನ್ನು ಉಡಿಯಲ್ಲಿ ಕಟ್ಟಿಕೊಂಡಂತಾದೀತು! ಈ ಸೊಟ್ಟ ದಾಸಿಯರ ಹಂಗೇನು? ಇವರಿಂದೇನಾಗ ಬೇಕಾಗಿದೆ? ಸ್ವಲ್ಪ ಸಂಶಯಬಂದರೆ ಇವರನ್ನೂ ತುಂಡರಿಸಿ ಚಲ್ಲಿದರಾಯಿತು! ಒಟ್ಟಿಗೆ ಇನ್ನು ಕಾರ್ಯವನ್ನು ನಾನು ಆದಷ್ಟು ತೀವ್ರವಾಗಿ ಸಾಧಿಸತಕ್ಕದ್ದು.

ಈ ಮೇರೆಗೆ ತನ್ನೊಳಗೆ ಅಂದುಕೊಂಡು ಆಕೆಯು ಮತ್ತೆ ಸುಮ್ಮನಾಗಿ ಆಲೋಚಿಸ ತೊಡಗಿದಳು. ಆ ದುಷ್ಟಳ ಕಣ್ಣಮುಂದೆ ತನ್ನ ನೀಚಕಾರ್ಯವೊಂದು ನಿಂತಿತ್ತಲ್ಲದೆ, ಆಕೆಗೆ ಬೇರೆಯೇನೂ ಕಾಣುತ್ತಿದ್ದಿಲ್ಲ. ಆಕೆಯು ಏನು ಮಾಡಿದರೆ ತನ್ನ ಕಾರ್ಯವು ಬೇಗನೆ ಸಾಧಿಸುವ ದೆಂದು ಆಲೋಚನ ಹಾಕಿ ಹಾಕಿ ದಣಿಯುವಾಗ ಒಂದು ಹಂಚಿಕೆಯು ತಟ್ಟನೆ ಆಕೆಯ ಮನಸ್ಸಿನಲ್ಲಿ ಹೊಳೆಯಿತು. ಆಗ ಆ ಘೋರಕರ್ಮಿಗೆ ಪರಮಾನಂದವಾಯಿತು. ಇದೇ ಹಂಚಿಕೆಯು ತಕ್ಕದ್ದೆಂದು ಆಕೆಯು ನಿರ್ಧರಿಸಿದಳು. ಮುಖ್ಯರಾದ ಮುತ್ಸದ್ದಿಗಳೂ, ಮುಖ್ಯ ಮುಖ್ಯ ವೀರರೂ ನನ್ನ ಪಕ್ಷವನ್ನು ವಹಿಸಿದಂತೆ ಆಗಿರುವದರಿಂದ, ಈ ಮುಖ್ಯ ವಿಘ್ನ ವನ್ನಷ್ಟು ದೂರಮಾಡಿಬಿಟ್ಟರೆ ಅನಾಯಾಸವಾಗಿ ನನ್ನ ಕಾರ್ಯವು ಸಾಧಿಸುವದೆಂದು ಆಕೆಯು ಭಾವಿಸಿದಳು. ರಾಜಪತ್ನಿಯೆನಿಸಿಕೊಳ್ಳುವದಕ್ಕಿಂತ ರಾಜಾಮಾತೆಯನಿಸಿಕೊಳ್ಳುವದು ಹೆಚ್ಚು ಗೌರವವಲ್ಲವೆ? ನನಗೆ ರಾಜಪತ್ನಿಯೆನಿಸಿಕೊಂಡೆನಿಸಿಕೊಂಡು ಬೇಸರ ಬಂದಿದೆ! ರಾಜ ಪತ್ನಿಯು ಹೋಗಿ ರಾಜಮಾತೆಯಾದರೆ, ನಮ್ಮ ಅತ್ತೆಯವರಾದ ಜೀಜಾಬಾಯಿಯವರಂತೆ ನನ್ನ ಗೌರವವು ಎಷ್ಟು ಹೆಚ್ಚುವದು! ಆದರೆ ಈ ರಾಜಮಾತೆಯಾಗುವ ಉಪಾಯ ವನ್ನು ಮಾತ್ರ ನನ್ನಷ್ಟಕ್ಕೆ ನಾನೇ ಬಹುಗುಪ್ತ ರೀತಿಯಿಂದ ಸಾಧಿಸತಕ್ಕದ್ದು. ಅದು ಯಾರ ಕಿವಿಗೆ ಮುಟ್ಟಿದರೂ ನನ್ನ ಕಾರ್ಯಹಾನಿಯೇ ಆದೀತು. ಆಗಲಿ, ನಾನೇ ಸಾಧಿಸುವೆನು. ಅದಕ್ಕೆ ಒಂದಲ್ಲ ಎರಡು ಉಪಾಯಗಳಿರುವುವು! ಅಂದ ಬಳಿಕ ಅದು ಸಾಧಿಸದೆ ಯಾಕೆ ಬಿಡುವದು? ಎಂದು ಗಹಗಹಿಸಿ ನಕ್ಕು ತಾಮಸೀ ಆವೇಶದಲ್ಲಿ ಆಕೆಯು ''ನರಮೇಧ ! ನರಮೇಧ!'' ಎಂದು ಗಟ್ಟಿಯಾಗಿ ಉಚ್ಚರಿಸಿದಳು!

# ನಾಮಕರಣ

ಸಂಭಾಜಿರಾಜರಿಗೆ ಪುತ್ರೋತ್ಸವವಾದ ಹನ್ನೆರಡನೆಯ ದಿವಸವು. ಅಂದೇ ರಾಜ ಪುತ್ರನಿಗೆ ಹೆಸರಿಡತಕ್ಕದಾದ್ದರಿಂದ ಪಲ್ಹಾಳಗಡದಲ್ಲಿ ಮಹೋತ್ಸವವು ಜರಗುತ್ತಲಿತ್ತು. ಆ ಸಮಾರಂಭಕ್ಕೆ ಆಬಾಸಾಹೇಬರು (ಶಿವಾಜಿ ಮಹಾರಾಜರು) ಸ್ವತಃ ಬರತಕ್ಕವರು; ಆದರೆ ಮೈಯಲ್ಲಿ ಸ್ವಸ್ಥವಿಲ್ಲದ್ದರಿಂದ ಅವರು ಬಾಳಾಜಿಆವಜಿಯುನ್ನು ತಮ್ಮ ಪ್ರತಿನಿಧಿಯಾಗಿ ಕಳಿಸಿದ್ದರು. ಬಾಳಾಜಿಯ ಅಧ್ಯಕ್ಷತೆಯಲ್ಲಿ ಆ ಮಹಾಸಮಾರಂಭವು ವಿಜೃಂಭಣೆಯಿಂದ ಜರಗುತ್ತಲಿತ್ತು. ಸಾಮಾನ್ಯ ಜನರಿಗೆ ಕರ್ಣ ಕಠೋರವಾಗಿರುವ ತೋಫುಗಳ ಧ್ವನಿಗಳು, ವೀರ ರಲ್ಲಿಯ ವೀರ್ಯವನ್ನು ಜಾಗ್ರತಗೊಳಿಸುತ್ತ ದಶದಿಕ್ಕುಗಳನ್ನು ತುಂಬುತ್ತಲಿದ್ದವು. ಶಿವರಾಯನ ರಾಜ್ಯದಲ್ಲಿರುವ 360 ದುರ್ಗಗಳೊಳಗಿಂದ ಒಂದೇ ಕಾಲದಲ್ಲಿ ತೋಫುಗಳು ಹಾರಬೇಕೆಂದು ಈ ಮೊದಲೆ ಅಪ್ಪಣೆಯಾದದ್ದರಿಂದ, ಅದರಂತೆ ಎಲ್ಲ ದುರ್ಗಗಳಲ್ಲಿ ತೋಫುಗಳು ಹಾರ ಹತ್ತಿದವು. ಅಂದಿನ ಮಹಾರಾಷ್ಟ್ರದ ಆಕಾಶಮಂಡಲದೊಳಗಿನ ಸ್ವಾತಂತ್ರಾನುಭವದ

ಒಗರುಳ್ಳ ವಾತಾವರಣವು, ಧೂಮಮಯವಾಗಿ ದೌರ್ಬಲ್ಯ ರೋಗದ ಬೀಜಗಳನ್ನು ನಿರ್ಮೂಲ ಮಾಡುತ್ತಲಿತ್ತು. ಆ ಭಯಂಕರವಾದ ತೋಫಿನ ಸಪ್ಪಳದಿಂದ ಸಾಮಾನ್ಯ ಗರ್ಭಿಣೀಸ್ತ್ರೀಯರ ಗರ್ಭಪಾತವಾಗಬಹುದಾಗಿದ್ದರು, ವೀರಪತ್ನಿಯರಿಂದ ತುಂಬಿದ ಮಹಾರಾಷ್ಟ್ರದೊಳಗಿನ ಗರ್ಭಿಣೀಸ್ತ್ರೀಯರ ಗರ್ಭಸ್ಥ ಬಾಲಕರ ಶೌರ್ಯವು ಅಭಿವೃದ್ಧಿವಾಗುತ್ತಲಿತ್ತು. ಎಲ್ಲ ಕಡೆಯಲ್ಲಿ ಮಂಗಲ ವಾದ್ಯಗಳು ಧ್ವನಿಗೆಯ್ಯುತ್ತಿದ್ದವು. ರಾಜನಿಷ್ಠ ಪ್ರಜೆಗಳ ಮನೆ ಮನೆಗಳಲ್ಲಿ ಒಂದಿಲ್ಲೊಂದು ಬಗೆಯ ಉತ್ಸವಗಳು ನಡೆದಿದ್ದು; ಎಲ್ಲಿ ದೇವತೋಪಾಸನ, ಎಲ್ಲಿ ದಾನಧರ್ಮಗಳು, ಎಲ್ಲಿ ಭೋಜನಸಮಾರಂಭಗಳು, ಎಲ್ಲಿ ಗಾನವಾದನಗಳು, ಎಲ್ಲಿ ವಿರೋಚಿತ ಯುದ್ಧವ್ಯಾಪಾರಗಳು ಮೊದಲಾದ ಸಮಾರಂಭಗಳು ಅಂತಃಕರಣಪೂರ್ವಕವಾಗಿ ಸಾಗುತ್ತಲಿದ್ದವು. ಹೀಗೆ ಅಂದಿನ ಪ್ರಾ೦ತಕಾಲದಿಂದ ಸಾಗುತ್ತಲಿದ್ದವು. **ಹೀಗೆ ಅಂದಿನ ಪ್ರಾತಃಕಾಲದಿಂದ ಸಾಯಂಕಾಲದವರೆಗೆ ಬಗೆಬಗೆಯ ಉತ್ಸವಗಳ ಮಾಲಿಕೆಗಳಿಂದ ಪಲ್ಲಾಳಗಡವು ಅಲಂಕೃತವಾಗುತ್ತಿರುವಾಗ ಬಾಳಾಜಿಆವಜಿಯು ಪದ್ಧತಿಯಂತೆ ರಾಜದರ್ಬಾರ** ನೆರೆಸಿದನು. ಸಂಭಾಜಿರಾಜರು ಮತ್ತೊಂದು ಸಮಾರಂಭದಲ್ಲಿ ತೊಡಗಿ, ಈ ರಾಜದರ್ಬಾರಕ್ಕೆ ಬರುವದನ್ನು ಮರೆತುಬಿಟ್ಟದ್ದರಿಂದ, ಬಾಳಾಜಿಆವಜಿಗೆ ಸ್ವಲ್ಪ ವಿಷಾದವಾದರೂ, ಆಬಾಸಾಹೇಬರ ಸ್ಥಾನದಲ್ಲಿದ್ದ ಆತನು ಯಾವ ಕೊರತೆಯೂ ತೋರದಂತೆ ದರ್ಬಾರದ ಕಾರ್ಯವನ್ನು ಸಾಗಿಸಿದನು. ಇದು ಹಿರಿಯರು ಮಾಡತಕ್ಕ ಕೆಲಸವಾದ್ದರಿಂದ ನಮ್ಮ ಅವಶ್ಯವಾದರೂ ಏನೆಂಬ ಆದರಭಾವದಿಂದ ಸಂಭಾಜಿರಾಜರು ದರ್ಬಾರಕ್ಕೆ ಬರಲು ಉದಾಸೀನ ಮಾಡಿದ್ದರೆಂತಲೂ ಹೇಳಬಹುದು; ಹ್ಯಾಗಿದ್ದರೂ ಅವರು ದರ್ಬಾರಕ್ಕೆ ಬಾರದಿದ್ದದ್ದರಿಂದ ಕೊರತೇಯೇನು ಆಗದೆ, ಕಿರಿಯತನದ ಧರ್ಮಕ್ಕನುಸರಿಸಿ ಒಂದು ಪ್ರಕಾರದ ಶೋಭೆಯೇ ಆ ದರ್ಬಾರಕ್ಕೆ ಬಂದಿತ್ತೆಂದು ಹೇಳಬಹುದು.

ಅಂದು ರಾತ್ರಿ ಎಂಟು ಗಂಟೆಯ ಸಮಯದಲ್ಲಿ ರಾಜಪುತ್ರನನ್ನು ತೊಟ್ಟಿಲಲ್ಲಿ ಹಾಕುವ ಸಮಾರಂಭಕ್ಕೆ ಆರಂಭವಾಯಿತು. ತೂರ್ಯಾದಿ ಮಂಗಲವಾದ್ಯಗಳು ಬಾರಿಸತೊಡಗಿದವು. ಕುಲೀನರಾದ ಸುವಾಸಿನಿ ಸ್ತ್ರೀಯರು ತೊಟ್ಟಿಲದ ಸುತ್ತು ಮುತ್ತು ಕುಳಿತುಕೊಂಡು ಮಂಜುಲ ಸ್ವರದಿಂದ ಹಾಡುತ್ತಿದ್ದರು. ಏಸೂಬಾಯಿಸಾಹೇಬರು ಸುವರ್ಣಮಂಡಿತವಾದ ತೊಟ್ಟಿಲಕ್ಕೆ ಹಚ್ಚಿದ ಬಂಗಾರದ ಸರಪಳಿಯನ್ನು ಹಿಡಕೊಂಡು ತೊಟ್ಟಿಲವನ್ನು ಮೆಲ್ಲ ಮೆಲ್ಲನೆ ತೂಗುತ್ತಲಿದ್ದರು. ಅವರ ಹೃದಯವು ಆನಂದರಸದಿಂದ ತುಂಬಿತುಳುಕಲು, ಆನಂದಬಾಷ್ಪ ಗಳುದುರುವಾಗ ಅವರ ಮುಖ ಕಮಲವು ಪ್ರಫುಲ್ಲಿತವೂ, ಸುಶೋಭಿತವೂ ಆಯಿತು. ಹಲವು ಕಡೆಯ ರಾಜಾಧಿರಾಜರಿಂದಲೂ, ಮಂತ್ರಿ–ಸರದಾರರಿಂದಲೂ, ಸೆಟ್ಟಿ–ಸಾವುಕಾರ ರಿಂದಲೂ, ಪ್ರಜಾಜನರಿಂದಲೂ ಬಂದಿದ್ದ ಬಹು ಬೆಲೆಯುಳ್ಳ ಬಾಲದೊಡಿಗೆಯ ಉಡುಗರೆ ಗಳಿಂದ ಆ ಉತ್ಸವ ಮಂದಿರವು ಇಂದ್ರ ಪುತ್ರನಾದ ಜಯವಂತನ ಮಂದಿರವನ್ನು ಹೋಲುತ್ತಲಿತ್ತು. ಪ್ರತಾಪ–ವೈಭವಗಳ ವರ್ಣನಗಳುಳ್ಳ ಬಗೆಬಗೆಯ ಜೋಗಳ ಪದಗಳನ್ನು ಹಾಡುವದಾದ ಬಳಿಕ, ಮಹಾರಾಜರು ಕಳಿಸಿದ ಮನೆಯ ಉಡುಗರೆಯನ್ನು ಬಾಳಾಜಿ ಆವಜಿಯು ಏಸುಬಾಯಿಯವರಿಗೆ ಕೊಡಿಸಿದನು. ಆ ಉಡುಗರೆಯು ಬಹು ಬೆಲೆ

ಯುಳ್ಳದ್ದಿತ್ತೆಂದು ಹೇಳಲವಶ್ಯವಿಲ್ಲ. ಆ ಬಾಲಕನ ಹೆಸರು 'ಶಿವಾಜಿ' ಎಂದು ಇಟ್ಟರೆಂದು ಇತಿಹಾಸದ ಆಧಾರಗಳಿಂದ ಹೇಳಬೇಕಾಗುತ್ತದೆ; ಆದರೆ ಅಜ್ಜಂದಿರಾದ ಶಿವಾಜಿಮಹಾರಾಜರು ಪ್ರತ್ಯಕ್ಷ ಜೀವದಿಂದಿರುವಾಗ ಅವರ ಹೆಸರನ್ನಿಡುವದು ನಮ್ಮ ಆರ್ಯ ಸಾಂಪ್ರದಾಯದ ವಿರುದ್ಧವಾಗಿರುವದು; ಅಂದಬಳಿಕ ಕೇವಲ ಸಾಂಪ್ರದಾಯಸ್ಥರಾದ ಮಹಾರಾಜರು ಹೀಗೆ ತಮ್ಮ ಹೆಸರನ್ನು ತಮ್ಮ ಮೊಮ್ಮಗನಿಗೆ ಇಡಲು ಹೇಳದೆ ತಮ್ಮ ಹಿರಿಯರಾದ 'ಶಹಾಜಿರಾಜರ' ಹೆಸರನ್ನಿಡಲಿಕ್ಕೆ ಹೇಳಿರುವದು ವಿಶೇಷ ಸಂಭವನೀಯವಾಗಿರುವದು. ಆ 'ಶಹಾಜೀ' ಎಂಬ ಹೆಸರೇ ಮುಂದೆ ಶಾಹು ಎಂಬ ರೂಪವನ್ನು ಹೊಂದಿರಬಹುದು. ಮುಂದೆ ಶಾಹುರಾಜರು ತಾವು ಅರಸರಾದ ಬಳಿಕ ತಮ್ಮ ಅಜ್ಜಂದಿರ ಮೇಲಿನ ಭಕ್ತಿಯಿಂದ ತಮ್ಮನ್ನು 'ಶಿವಾಜಿ' ಎಂದು ಕರೆಸಿಕೊಂಡಿರಬಹುದು; ಅಥವಾ ಶಿವರಾಯನ ವಿಷಯದ ಪೂಜ್ಯಬುದ್ಧಿಯುಳ್ಳ ದೊಡ್ಡದೊಡ್ಡ ಜನರು 'ಶಿವಾಜಿ' ಎಂದು ಪ್ರೇಮದಿಂದ ಅವರನ್ನು ಕರೆದಿರಬಹುದು; ಆದ್ದರಿಂದ ಮುಂದೆ ಅದೇ ಹೆಸರು ಶಾಹುರಾಜರ ಮೊಹರಿನಲ್ಲಿ ವಿರಾಜಮಾನವಾಗಿರಬಹುದು. ಹ್ಯಾಗೇ ಇರಲಿ, ನಾವಂತು ಸಾಂಪ್ರದಾಯದಂತೆ ಈಗ ರಾಜಪುತ್ರನಿಗೆ 'ಶಹಾಜಿ' ಎಂಬ ಹೆಸರನ್ನಿಟ್ಟರೆಂತಲೇ ಹೇಳುವೆವು. ಮಹಾರಾಜರು ಕಳಿಸಿದ ಉಡುಗರೆಗಳು ಬಹು ಬೆಲೆಯುಳ್ಳವಿದ್ದವೆಂದು ಹೇಳುವ ಕಾರಣವಿಲ್ಲ, ಮುತ್ತುರತ್ನಗಳನ್ನು ಕೆಚ್ಚಿದ ಒಂದು ಜರದ ಕುಂಚಿಗೆಯ ಬೆಲೆಯೇ ಸಹಸ್ರಾವಧಿ ರೂಪಾಯಿಯಾಗಬಹುದಾಗಿರಲು, ಉಳಿದ ಬಾಲದೊಡಿಗೆಗಳ ಬೆಲೆಯನ್ನು ಕಂಗಾಲ ದೇಶದೊಳಗಿನ ಕಂಗಾಲರಾದ ನಾವು ಏನು ಹೇಳೋಣ? ಹೀಗೆ ಮನೆಯ ಉಡುಗರೆಯಾದಬಳಿಕ ಅಷ್ಟಪ್ರಧಾನರ ಉಡುಗರೆಗಳಾದವು. ಬಳಿಕ ಆಪ್ತೇಷ್ಟರವಾಗಿ ಆಮೇಲೆ ಪ್ರಜಾಜನರ ಉಡುಗರೆಗಳಾದವು. ಔರಂಗಜೇಬನೇ ಮೊದಲಾದ ಮಹಾ ಧೂರ್ತರಾದಯವನ ಬಾದಶಹರಿಂದಲೂ, ಸುಲ್ತಾನಾದಿಕರಿಂದಲೂ ಉಡುಗರೆಗಳು ಬಂದಿದ್ದವೆಂದು ಹೇಳುವದುಂಟು.

ಸರ್ವರ ಉಡುಗರೆಗಳಾದ ಬಳಿಕ ಮೊದಲೇ ಗೊತ್ತುಮಾಡಿದಂತೆ ಬಂದವರೆಗೆ ಉಡುಗರೆಗಳಾದವು. ಮೊದಲು ಸ್ತ್ರೀ ವರ್ಗಕ್ಕೆ ಅರಿಸಿನ, ಕುಂಕುಮ, ಸೀರೆ, ಕುಪ್ಪಸ ಅಲಂಕಾರಗಳು ಉಡುಗರೆಗಳಾಗಿ ಅವರವರ ಯೋಗ್ಯತೆಯಂತೆ ಕೊಡಲ್ಪಟ್ಟವು. ಬಳಿಕ ಪುರುಷ ವರ್ಗಕ್ಕೆ ಉಚಿತಗಳನ್ನು ಹಂಚಿದರು. ಯಾರಿಗೆ ಆನೆ, ಯಾರಿಗೆ ಕುದುರೆ, ಯಾರಿಗೆ ಅಲಂಕಾರಗಳು, ಯಾರಿಗೆ ವಸ್ತ್ರಗಳು, ಯಾರಿಗೆ ಪಲ್ಲಕ್ಕಿಗಳು, ಯಾರಿಗೆ ನೌಬತ್ತುಗಳು, ಯಾರಿಗೆ ಶಸ್ತ್ರಗಳು, ಯಾರಿಗೆ ಛತ್ರಗಳು, ಯಾರಿಗೆ ಅಬದಾರಿಗಳು, ಹೀಗೆ ಅವರವರ ಯೋಗ್ಯತೆಯಂತೆ ವಸ್ತುಗಳು ಕೊಡಲ್ಪಟ್ಟವು. ಬಳಿಕ ರಾತ್ರಿ ದೊಡ್ಡ ಭೋಜನಸಮಾರಂಭವಾಯಿತು. ಶಿವರಾಯರು ಸ್ವತಃ ಬರದಿದ್ದರೂ, ಸಮಾರಂಭದಲ್ಲಿಯೂ ವೆಚ್ಚದಲ್ಲಿಯೂ ಕೊರತೆಯಾಗಬಾರದೆಂದು ಬಾಳಾಜಿಗೆ ಅವರು ಹೇಳಿ ಕಳಿಸಿದ್ದರು; 'ತನಯೇ ತನಯೋತ್ಪತ್ತಿಃ' ಅಂದರೆ ಮಗನ ಹೊಟ್ಟೆಯಲ್ಲಿ ಮಗನು ಹುಟ್ಟುವದು, ಅಂದರೆ ಮೊಮ್ಮಗನನ್ನು ಕಾಣುವದು ಸ್ವರ್ಗಸೌಖ್ಯದೊಳ್ಗೊಂದು ಅಂಗವಾಗಿರುತ್ತದೆಂದು ವರ್ಣನವಿರುವದು. ಅದರಲ್ಲಿ ಶಿವಾಜಿಮಹಾರಾಜರು ಸ್ವಂತ

ಪ್ರಯತ್ನದಿಂದ ಸಾಮ್ರಾಜ್ಯವನ್ನು ಸ್ಥಾಪಿಸಿ, ಪರಾಕ್ರಮದಲ್ಲಿ ತಮಗಿಂತಲೂ ಶ್ರೇಷ್ಠನಾದ ಶಂಭುವೆಂಬ ಮಗನನ್ನು ಪಡೆದು, ಆತನ ಹೊಟ್ಟೆಯಲ್ಲಿ, ಅದರಲ್ಲಿಯೂ ತಾವು ವ್ಯಾಧಿಪೀಡಿತರಾಗಿರುವಾಗ ಮೊಮ್ಮಗನನ್ನು ಕಾಣುವದು ಎಷ್ಟು ಆನಂದದಾಯಕವೆಂಬದನ್ನು ಶಿವರಾಯರೇ ಅನುಭವದಿಂದ ತಿಳಿಯಬಹುದಾದ್ದರಿಂದ ಅನ್ಯರ ವರ್ಣನಕ್ಕೆ ಅದು ಶಕ್ಯವಲ್ಲ! ಅಷ್ಟು ಆನಂದವು ಪ್ರತ್ಯಕ್ಷ ಸಂಭಾಜಿರಾಜರಿಗೆ ಆಗಿತ್ತೆಂದು ಹೇಳಲಾರೆವು; ಯಾಕಂದರೆ ಅವರು ಮಗನ ಉತ್ಸವದ ದರ್ಬಾರಕ್ಕೆ ಬರುವದನ್ನೇ ಮರೆತುಬಿಟ್ಟರು. ಆಗ ಆ ಸ್ವಚ್ಛಂದ ಪುರುಷನು ಗಾನ–ನರ್ತನ–ಮೋಹಿತನಾಗಿ ಮದ್ಯಪಾನದಿಂದ ಮೈಮರೆತು ಹೋಗಿದ್ದನು?

ಸಂಭಾಜಿಯು ಬೇರೆ ಸಮಾರಂಭದಲ್ಲಿ ತೊಡಗಿದ್ದರಿಂದ ದರ್ಬಾರಕ್ಕೆ ಬರಲಿಲ್ಲವೆಂದು ಹಿಂದೆ ಹೇಳಿದೆಯಷ್ಟೆ? ಆ ಸಮಾರಂಭವೆಂದರೆ, ತನ್ನ ಪ್ರೀತಿಪಾತ್ರಳಾದ ಮೋಹನೆಯ ಗಾಯನ ಕೇಳುತ್ತ ಮದ್ಯಪ್ರಾಶನಮಾಡುವದು! ಇಲ್ಲಿ ದರ್ಬಾರವು ನಡೆದಾಗ ಅಲ್ಲಿ ಮೋಹನೆಯ ರಂಗಮಹಲಿನಲ್ಲಿ ಆ ಸಮಾರಂಭವು ನಡೆದಿತ್ತು, ಒಂದು ವರ್ಷದ ಹಿಂದೆ ಮೋಹನೆಗೆ ಪುತ್ರೋತ್ಸವವಾಗಿದ್ದು ಆಗಮಾಡದೆ ಇದ್ದ ನಾಮಕರಣದ ಸಮಾರಂಭವನ್ನು ಸ್ವಚ್ಛಂದ ವೃತ್ತಿಯ ಸಂಭಾಜಿಯು ಈ ನಾಮಕರಣದ ಸಮಾರಂಭದಲ್ಲಿ ಮಾಡತೊಡಗಿದ್ದನು. ಆ ದಿನ ರಾತ್ರಿ ಅರಮನೆಯಲ್ಲಿ ನಾಮಕರಣ ಸಮಾರಂಭವು ನಡೆದಾಗ ಅತ್ತ ರಂಗಮಹಾಲಿನಲ್ಲಿ ಮೋಹನೆಯ ಮಗನ ನಾಮಕರಣ ಸಮಾರಂಭವು ನಡೆದಿತ್ತು, ತನ್ನ ಹೊಟ್ಟೆಯ ಮಗನ ಸಮಾರಂಭವನ್ನು ಮಾಡಲು ಆಬಾಸಾಹೇಬರು ಇದ್ದೇ ಇರುವರೆಂಬ ನಂಬಿಗೆಯಿಂದ ಸಂಭಾಜಿಯು ತಾನು ಮೋಹನೆಯ ಮಗನ ಸಮಾರಂಭವನ್ನು ಮದ್ಯಪ್ರಾಶನದ ಅಮಲಿನಲ್ಲಿ ಮಾಡುತ್ತಲಿದ್ದನು. ಈ ಸಮಾರಂಭದಲ್ಲಿ ಸಹಾಯಕನು ಕಬಜಿಯು. ಆ ಮೋಹನೆಯ ಮಗನ ಹೆಸರನ್ನು ಮದನಸಿಂಗ ನೆಂದು ಇಟ್ಟರು. ರಾತ್ರಿ ಆರು ತಾಸಾದರೂ ಬಾಳಾಜಿಯನ್ನು ಕಾಣಲಿಕ್ಕೆ ಸಂಭಾಜಿಗೆ ಕೂಡಲಿಲ್ಲ, ಬಾಳಾಜಿಗಂತು ಆತನನ್ನು ಕಂಡು ಮರುದಿನ ಸೂರ್ಯೋದಯಕ್ಕೆ ರಾಯಗಡಕ್ಕೆ ಹೊರಡುವದು ಅತ್ಯವಶ್ಯವಾಗಿತ್ತು; ಆದ್ದರಿಂದ ದರ್ಶನದ ಯೋಗವನ್ನು ಹ್ಯಾಗೆ ತಂದುಕೊಳ್ಳಬೇಕೆಂದು ಆ ಸ್ವಾಮಿನಿಷ್ಠ ಚಿಟಣೀಸನು ಆಲೋಚಿಸುತ್ತಿರುವಾಗ ಆತನಿಗೆ ಒಂದು ಯುಕ್ತಿಯು ತೋಚಿತು. ಆರುತಾಸಿನ ನಗಾರೆಯಾದ ಕೂಡಲೆ ಬಾಳಾಜಿಯ ಸಂಗಡ ನಾಲ್ಕುಜನ ಮಾವಳೇವೀರರನ್ನು ಕರಕೊಂಡು, ಒಬ್ಬೊಬ್ಬರ ಕೈಯಲ್ಲಿ ಒಂದೊಂದು ಕಾಣಿಕೆಯ ಪದಾರ್ಥಗಳ ತಬಕವನ್ನು ಕೊಟ್ಟು ನೆಟ್ಟಗೆ ಸಂಭಾಜಿಯ ರಂಗಮಹಲಿಗೆ ಹೋದನು. ಪದ್ಧತಿಯಂತೆ ಬಾಗಿಲಲ್ಲಿದ್ದ ಕಾವಲು ಗಾರರು ಅವರನ್ನು ತಡೆದರು. ಆಗ ಬಾಳಾಜಿಯು ತನ್ನ ಹೆಸರು ಹೇಳಿ ತಾನು ಬಂದಿರುವ ಸುದ್ದಿಯನ್ನು ಒಳಗೆ ತಿಳಿಸಲು ಹೇಳಿದಾಗ್ಯೂ ''ಬೆಳಗಾಗುವತನಕ ಯಾರು ಬಂದಸುದ್ದಿಯನ್ನೂ ತಿಳಿಸುವಹಾಗಿಲ್ಲ'' ಎಂದು ಕಾವಲು ಗಾರರು ತಿರುಗಿ ಉತ್ತರಕೊಟ್ಟರು. ಹಾಗೆ ಉತ್ತರ ಬರುವದೆಂದು ಬಾಳಾಜಿಯು ಮೊದಲೇ ತರ್ಕಿಸಿದ್ದನು. ಆ ಕಾವಲುಗಾರರು ಸದ್ಯಕ್ಕೆ ಸಂಭಾಜಿಯ ಆಜ್ಞೆಯನ್ನು ಪಾಲಿಸಲು ಬದ್ಧ

ರಾಗಿದ್ದರೂ ಅವರನ್ನು ಇಟ್ಟವರು ಶಿವಾಜಿಮಹಾ ರಾಜರಾದ್ದರಿಂದ, ಬಾಳಾಜಿ ಆವಜಿಯು ಅವರ ಪೂರ್ಣಪರಿಚಯದವನಾಗಿದ್ದನು. ಬಾಳಾಜಿಯು ಆ ಕಾವಲುಗಾರರಲ್ಲಿ ಒಬ್ಬನನ್ನು ಕುರಿತು—

ಬಾಳಾಜಿ—ವಿಠೋಜಿ, ನೀವು ನಿಜವಾದ ಸ್ವಾಮಿನಿಷ್ಠರೆಂಬದರಲ್ಲಿ ಸಂಶಯವಿಲ್ಲ, ನಿಮ್ಮ ಆ ಸ್ವಾಮಿನಿಷ್ಠೆಯನ್ನು ಪರೀಕ್ಷಿಸುವದಕ್ಕಾಗಿಯೇ ನಾನು ಇಂಥ ಅಪರಾತ್ರಿಯಲ್ಲಿ ಬಂದಿರುತ್ತೇನೆ. ನೀವು ನಿಮ್ಮ ಕರ್ತವ್ಯವನ್ನು ಉತ್ತಮರೀತಿಯಿಂದ ಮಾಡಿದಿರಿ. ಇಂದು ನಾಮಕರಣದ ಉತ್ಸವದ ಸಲುವಾಗಿ ಎಲ್ಲರಿಗೂ ಉಚಿತಗಳನ್ನು ಕೊಟ್ಟಿದ್ದು, ನಿಮಗೆ ಕೊಡುವದು ಹಾಗೇ ಉಳಿದಿತ್ತು; ಆದ್ದರಿಂದ ನೀವು ನಿಮ್ಮ ಉಚಿತವನ್ನು ಈಗ ಸ್ವೀಕರಿಸಿರಿ.

ಈ ಮೇರೆಗೆ ನುಡಿದು ಒಂದು ತಾಟಿನ ಮೇಲಿನ ವಸ್ತ್ರವನ್ನು ತೆರೆಯಲು ವಿಠೋಜಿಯು—

ವಿಠೋಜಿ—ನಿಮ್ಮ ಆ ಉಚಿತಗಳನ್ನು ಈಗ ನಾವು ಸ್ವೀಕರಿಸಲಾರೆವು. ಬೆಳಗಾದ ಬಳಿಕ ಸರಕಾರದ ಅಪ್ಪಣೆಯಿಂದ ಸ್ವೀಕರಿಸುವೆವು.

ಬಾಳಾಜಿ—ವಿಠೋಜೀ, ಈಗಂತು ನೀನು ಸ್ವಾಮಿಸೇವೆಯ ಪರೀಕ್ಷೆಯಲ್ಲಿ ಅತ್ಯುತ್ತಮ ರೀತಿಯಿಂದ ತೇರ್ಗಡೆಹೊಂದಿದೆ. ಮಹಾರಾಜರು ಹೀಗೆ ನಿನ್ನನ್ನು ಪರೀಕ್ಷಿಸುವದಕ್ಕಾಗಿಯೇ ನನಗೆ ಅಪ್ಪಣೆ ಕೊಟ್ಟಿದ್ದರು. ನಾಳೆ ಸೂರ್ಯೋದಯವಾದ ಕೂಡಲೆ ನಾನು ರಾಯಗಡಕ್ಕೆ ಹೋಗಲೇ ಬೇಕಾಗಿರುವದು. ಯಾಕಂದರೆ ಮಹಾರಾಜರ ಅಪ್ಪಣೆಯು ಹಾಗಾಗಿದೆ, ಮೇಲಾಗಿ ಅವರ ಪ್ರಕೃತಿಯೂ ಹೆಚ್ಚು ಅಸ್ವಸ್ಥವಾಗಿರುವದು.

ಹೀಗೆ ಬಾಳಾಜಿಯು ಇನ್ನೂ ಮುಂದೆ ಏನೋ ಮಾತಾಡುತ್ತಿರಲು, ಒಳಗಿನಿಂದ ಯಾರೋ ಒಬ್ಬರು—"ಏನು? ಮಹಾರಾಜರ ಪ್ರಕೃತಿಯು ಹೆಚ್ಚು ಅಸ್ವಸ್ಥವಾಗಿದ್ದು, ಯುವ ರಾಜರಿಗೆ ತಿಳಿಸಿಯೇ ಇಲ್ಲವೇ?" ಎಂದು ಮಾತಾಡುತ್ತಿರಲು, ಬಾಳಾಜಿಯು—"ಯುವ ರಾಜರಿಗೆ ಆ ಸುದ್ದಿಯನ್ನು ತಿಳಿಸಿ, ಇಲ್ಲಿಯ ಬಂದೋಬಸ್ತು ಹ್ಯಾಗಿರವದೆಂಬದನ್ನು ನೋಡಿ ಹೋಗುವ ದಕ್ಕಾಗಿಯೇ ನಾನು ಇಷ್ಟು ಅಪರಾತ್ರಿಯಲ್ಲಿ ಬಂದಿರುವೆನು," ಎಂದು ಕಂಡು ತುಂಡಾಗಿ ಉತ್ತರವನ್ನು ಹೇಳಿದನು. ಅದಕ್ಕೆ ಆ ಮನುಷ್ಯನು "ಬರ್‍ರಿ, ಹಾಗಾದರೆ ಒಳಗೆ ಬರ್‍ರಿ; ಆದರೆ ಬೇಡ ಒಳಗೆ ಹೋಗಿ ಯುವರಾಜರ ಒಪ್ಪಿಗೆಯನ್ನು ಕೇಳಿಕೊಂಡು ಬರುತ್ತೇನೆ" ಎಂದು ಹೇಳಿ ಅಲ್ಲಿಯೇ ಅದೃಶ್ಯನಾದನು. ಅದನ್ನು ನೋಡಿ ಬಾಳಾಜಿಯು ಸ್ತಂಭಿತನಾಗಿ ನಿಂತಲ್ಲಿ ನಿಂತುಬಿಟ್ಟನು!

ವಿಠೋಜಿ—ನೋಡಿದಿರಾ ಮರೆಗೆ ನಿಂತು ಕೇಳುವ ಇಲ್ಲಿಯ ರೀತಿಯನ್ನು! ನಿಮ್ಮ ಮಾತಿನಂತೆ ಏನಾದರೂ ಹುಚ್ಚು ಹುಚ್ಚು ಆಚಾರವಾಡಿದ್ದರೆ ದಿಂಡ ಮುಂಡಗಳು ಬೇರೆ ಯಾಗಲಿಕ್ಕೆ ತಡವಾಗುತ್ತಿದ್ದಿಲ್ಲ!

ಬಾಳಾಜಿ—ಅಪ್ಪಾ, ರಾಜ್ಯರಕ್ಷಣದ ಕಾಯದೆಗಳು ಹೀಗೆಯೇ ಇರುವವು; ಮತ್ತು ಸೇವಕರ ಪರೀಕ್ಷೆಯು ಇಂಥ ಪ್ರಸಂಗದಲ್ಲಿಯೇ ಆಗುವದು. ನಿಜವಾಗಿ ಕೇಳಿದರೆ ಈಗೊದಗಿದ ಪ್ರಸಂಗದಿಂದ ನನಗೆ ಬಹಳ ಆನಂದವಾಗಿದೆ.

ಇಷ್ಟರಲ್ಲಿ ಒಳಗಿನಿಂದ ಮೊದಲಿನ ದನಿಯಿಂದಲೇ ಬಾಳಾಜಿಗೆ—''ಬರ್ರಿ, ಒಳಗೆ ಬರ್ರಿ; ಸರಕಾರ ಸವಾರಿಯು ಒಳ್ಳೇ ಸಂತೋಷದಲ್ಲಿರುವದು, ನಿಮ್ಮನ್ನು ಕರಕೊಂಡು ಬರಲು ಅಪ್ಪಣೆಯಾಗಿದೆ.'' ಎಂದು ಹೇಳಲು, ಬಾಳಾಜಿಯು ತನ್ನ ನಾಲ್ಕು ಜನ ಸಂಗಡಿಗರೊಡನೆ ಆ ವ್ಯಕ್ತಿಯ ಹಿಂದಿನಿಂದ ಪಾವಟಿಗೆಗಳನ್ನು ಹತ್ತತೊಡಗಿದನು. ಹದಿನಾರನೆಯ ಪಾವಟಿಗೆಯನ್ನು ಹತ್ತಿಹೋದ ಕೂಡಲೆ ಮಶ್ರುವಿನ ಪರದೆಯಿಂದ ಮುಚ್ಚಿದ ರಂಗಮಹಾಲಿನ ಬಾಗಿಲು ಕಾಣಿಸಿತು. ಮುಂದೆ ಇದ್ದ ಆ ವ್ಯಕ್ತಿಯು ಆ ಪರದೆಯನ್ನು ಓರೆಮಾಡಿ ಆ ಐದು ಜನರನ್ನು ಒಳಗೆ ದಿವಾಣಖಾನೆಯಲ್ಲಿ ಕರೆದೊಯ್ದಿತು. ಸಂಭಾಜಿರಾಜನು ಸುವರ್ಣಾಂಕಿತವಾದ ಪಲ್ಲಂಗದಮೇಲೆ ಭರಜರಿಯ ಮಶ್ರುವಿನ ಗಾದಿಯಮೇಲೆ ಒಂದು ತೆಕ್ಕೆಗೆ ಆತು ಬಿದ್ದು ಕೊಂಡಿದ್ದನು. ಆತನು ಬಾಳಾಜಿಯನ್ನು ನೋಡಿದ ಕೂಡಲೆ ಎದ್ದು ಕುಳಿತುಕೊಳ್ಳಲು, ಬಾಳಾಜಿಯು ಆ ಭಾವೀ ಮಹಾರಾಷ್ಟ್ರ ಪ್ರಭುವಿಗೆ ಯೋಗ್ಯ ಮರ್ಯಾದೆಯಿಂದ ಮುಜುರೆ ಮಾಡಿ ನಾಲ್ಕೂ ತಬಕಗಳ ವಸ್ತ್ರ ತಕ್ಕೊಂಡು ಅವನ್ನು ಗಾದಿಯಮೇಲೆ ಇಟ್ಟು ಮಹಾರಾಜರ ಆಶೀರ್ವಾದ ಹೇಳಿ— ''ಅವರು ಬಹಳ ಸೋತಿದ್ದು, ದಿನಾಲು ಜ್ವರ ಬರುತ್ತವೆ'' ಎಂದು ನಿವೇದಿಸಿದನು.

ಬಾಳಾಜಿಆವಜಿಯ ಈ ಮಾತುಗಳನ್ನು ಕೇಳಿ ಸಂಭಾಜಿಯ ಬಳಿಯಲ್ಲಿ ನಿಂತಿದ್ದ ಆ ವ್ಯಕ್ತಿಗೆ—''ಕಬಜಿ, ಆಬಾಸಾಹೇಬರ ಪೀಡೆಯ ನಿವಾರಣೆಗಾಗಿ ನಾಳಿನಿಂದ ಅನುಷ್ಠಾನ ವನ್ನು ಆರಂಭಿಸಿರಿ. ಅನುಷ್ಠಾನವನ್ನು ಸ್ವತಃ ನೀವೇ ಮಾಡಿರಿ, ಬೇರೆ ಬ್ರಾಹ್ಮಣರನ್ನು ಹಚ್ಚ ಬೇಡಿರಿ,'' ಎಂದು ಹೇಳಲು, ''ಪ್ರಭುಗಳ ಅಪ್ಪಣೆ'' ಎಂದು ಕಬಜಿಯು ಕೈಜೋಡಿಸಿ ವಿಜ್ಞಾಪಿಸಿದನು. ಬಳಿಕ ಸಂಭಾಜಿಯು ಬಾಳಾಜಿಗೆ—ಬಾಳಾಜಿ, ಕುಳಿತುಕೊಳ್ಳಿರಿ, ಎಂದು ಹೇಳಲು, ಬಾಳಾಜಿಯು ಪದ್ಧತಿಯಂತೆ ವೀರಾಸನದಿಂದ ಕುಳಿತುಕೊಂಡು ಏನೋ ನೇತ್ರ ಸಂಕೇತಮಾಡಿದನು. ಕೂಡಲೆ ಸಂಭಾಜಿಯು ಕಬಜಿಯನ್ನು ಕುರಿತು—ಕಬಜೀ, ನೀವು ಈ ನಾಲ್ವರನ್ನು ಕರಕೊಂಡು ದಿವಾಣಖಾನೆಗೆ ಹೋಗಿ, ಅಲ್ಲಿ ನಮ್ಮ ಮಾರ್ಗಪ್ರತೀಕ್ಷೆಮಾಡುತ್ತ ಕುಳಿತುಕೊಳ್ಳಿರಿ, ಎಂದು ಹೇಳಿದನು. ಆಗ ಕಬಜಿಯು ಉಪಾಯವಿಲ್ಲದೆ ಆ ನಾಲ್ವರನ್ನು ಕರಕೊಂಡು ಹೋಗ ಹೋಗುವಾಗ ತನ್ನೊಳಗೆ—ಬಾಳಾಜೀ, ನೆನಪಿನಲ್ಲಿಡು. ನನ್ನ ಕೈಯಲ್ಲಿ ಅಧಿಕಾರ ಬಂದಬಳಿಕ ಇದರ ಸೇಡು ತೀರಿಸಿಕೊಳ್ಳದಿದ್ದರೆ ಮಧುರೆಯ ನಿಜವಾದ ಪಾಂಡ್ಯಾನೇ ನಾನಲ್ಲ! ಎಂದು ಒಟಗುಟ್ಟಿದನು. ಅವರು ಹೋದಬಳಿಕ ಸಂಭಾಜಿ ಬಾಳಾಜಿಯವರ ಸಂಭಾಷಣವು ಕೆಳಗೆ ಬರೆದಂತೆ ಆಯಿತು.

ಸಂಭಾಜಿ (ಉಗ್ರವಾದ ಮುದ್ರೆಯಿಂದ)—ಬಾಳಾಜಿ, ದುರ್ಗದಮೇಲೆ ಬಹಳ ತರಲಿ ಗಳಾಗಿದ್ದು ಅವುಗಳಲ್ಲಿ ನಮ್ಮ ಸೋಯರಾಬಾಯಿಸಾಹೇಬರ ಅಂಗವಿದ್ದ ಬಗ್ಗೆ ಮಹಾ ರಾಜರಿಗೆ ಸಂಶಯ ಬಂದಿರುವದೆಂದು ಕೇಳುತ್ತೇನೆ, ಇದು ನಿಜವೆ?

ಬಾಳಾಜಿ (ವಿನಯದಿಂದ ಕೈಜೋಡಿಸಿ)—ತಮ್ಮ ಕೇಳಿಕೆಯು ಸರ್ವಥೈವ ನಿಜವಿರುತ್ತದೆ.

ಸಂಭಾಜಿ—ವಿಷಯ ಕಳವಿಗೂ, ಉಮಾಜಿಯನ್ನು ಸೆರೆಹಿಡಿದು ಕರ್ನಾಟಕಕ್ಕೆ ಕಳಿಸ ಹೇಳಲಿಕ್ಕೂ ಸಂಬಂಧವೇನು?

ಬಾಳಾಜಿ—(ಸರಳತನದಿಂದ) ಸಂಬಂಧವು ತೀರ ಸರಳವಾಗಿರುವದು. ರಾಜವೈದ್ಯರ ಮನೆಯೊಳಗಿಂದ ವಿಷವನ್ನು ಕದ್ದುಕೊಂಡು ಬಂದ ಸುಭಾನನು, ಅದನ್ನು ಉಮಾಜಿಯ ಕೈಯಲ್ಲಿ ಕೊಟ್ಟನು. ಆ ವಿಷವನ್ನು ಉಮಾಜಿಯು ತಮಗೂ, ಏಸೂಬಾಯಿ ಸಾಹೇಬರಿಗೂ ಹಾಕಿ ಗರ್ಭಸ್ಥ ಶಿಶುವಿನಿಂದಸಹಿತವಾಗಿ ಒಮ್ಮೆಲೆ ಸರ್ವನಾಶವಾಗುವ ಘೋರಪ್ರಸಂಗವನ್ನು ತರತಕ್ಕ ವನೆಂಬದು ವಿಶ್ವಸನೀಯವಾಗಿ ಗೊತ್ತಾದದ್ದರಿಂದ ಅವನ ವ್ಯವಸ್ಥೆಯನ್ನು ಕೂಡಲೆ ಮಾಡಿಸ ಬೇಕಾಯಿತು.

ಸಂಭಾಜಿ—ಇದರ ಆದ್ಯ ಪ್ರವರ್ತಕರಾರು? ಲಾಲಮಣಿ ಕುದುರೆ– ಸುಭಾನ ಇವರನ್ನು ಕೊಂಡವರಾರು? ಇದರಗೊತ್ತು ಹತ್ತಿದೆಯೋ?

ಬಾಳಾಜಿ—ದಕ್ಷತೆಯಿಂದ ಶೋಧವು ನಡೆದಿರುವದು; ಆದರೆ ಒಳಸಂಚು ಬಹು ಗೂಢಸ್ಥಾನದಲ್ಲಿ ಉತ್ಪನ್ನವಾಗಿದ್ದು, ಇದಕ್ಕೆ ಕಾರಣವು ರಾಜ್ಯ ಲೋಭವೆಂಬದು ಮಾತ್ರ ವಿಚಾರಾಂತದಲ್ಲಿ ಗೊತ್ತಾಗಿದೆ; ಆದರೆ.....

ಸಂಭಾಜಿ—ಆದರೆ ಎಂದು ಸುಮ್ಮನಾಗಬೇಡಿರಿ. ನಮ್ಮ ಮುಂದೆ ಸ್ಪಷ್ಟವಾಗಿ ಹೇಳಲಿಕ್ಕೆ ನಿಮ್ಮ ರಾಜಕಾರಣವು ಅಡ್ಡಗಟ್ಟುತ್ತಿದ್ದರೆ ಮಾತ್ರ ನಮ್ಮ ಆಗ್ರಹವಿಲ್ಲ.

ಬಾಳಾಜಿ– ಮಹಾರಾಜ, ತಮ್ಮ ಮುಂದೆ ಮುಚ್ಚಿಕೊಳ್ಳತಕ್ಕಂಥ ರಾಜಕಾರಣವೇನು? ಹಾಗೆ ಮುಚ್ಚಿಕೊಳ್ಳುವದನ್ನು ಸೇವಕನು ಅಪರಾಧವೆಂದು ಭಾವಿಸುವನು.

ಸಂಭಾಜಿ—ಹೇಳಿರಿ ಹಾಗಾದರೆ ಇದ್ದದ್ದನ್ನು.

ಬಾಳಾಜಿ—ನಮ್ಮ ಗುಪ್ತಚಾರರ ಕಾತೆಯ ಪ್ರಸಿದ್ಧಿಯು ಈವರೆಗೆ ಆದದ್ದು ಪರರಾಜ್ಯದ ಸಂಬಂಧದಿಂದ; ಆದರೆ ಸ್ವರಾಜ್ಯದಲ್ಲಿ ಅದರ ಕರ್ತೃತ್ವವು ನಿಷ್ಪ್ರಯೋಜಕವಾದದ್ದೆಂದು ಅನ್ನುವ ಪ್ರಸಂಗಬಂದಿದೆ?

ಸಂಭಾಜಿ—ಅದೇಕೆ?

ಬಾಳಾಜಿ—ಒಳಸಂಚಿನ ಅಂಗಗಳಾಗಿರುವವರ ಹೆಣಗಳ ಮೇಲೆ ಹೆಣಗಳು ಬೀಳುತ್ತವೆ; ಆದರೆ ಮುಖ್ಯಾಂಗದ ಗೊತ್ತು ಮಾತ್ರ ಹತ್ತಲೊಲ್ಲದು!

ಸಂಭಾಜಿ—ಮತ್ತೆಯಾರ ಕೊಲೆಯಾಯಿತು?

ಬಾಳಾಜಿ—ಸುಭಾನನ ಹೆಂಡತಿಯ ಹೆಣವು ಒಂದು ಬಾವಿಯಲ್ಲಿ ಬಾತು ತೇಲಾಡುತ್ತಿತ್ತು.

ಸಂಭಾಜಿ—(ಅವಡುಗಚ್ಚಿ) ಈ ಸಂಬಂಧದಿಂದ ಸೋಯರಾಬಾಯಿಯ ಮಂದಿರ ದಲ್ಲಿ ಗೊಂದಲವೇಳಲಿಲ್ಲವೇನು?

ಬಾಳಾಜಿ—ಅಸಾಧ್ಯ ಗೊಂದಲವೆದ್ದಿತ್ತು; ಆದರೆ........

ಸಂಭಾಜಿ—ಆದರೆ ಏನು? ಅದೆಲ್ಲ ತೋರಿಕೆಯ ಗೊಂದಲವೆಂದು ಹೇಳುವದು ನಿಮ್ಮ ಉದ್ದೇಶವಷ್ಟೆ?

ಬಾಳಾಜಿ—ಹಾಗೆ ಹೇಳಲಿಕ್ಕೆ ಸಾಕ್ಷಿಗಳಿಲ್ಲ.

ಸಂಭಾಜಿ—ಸಂಶಯದ ವಾಸನೆಯಾದರೂ ನಿಮಗೆ ಬಂದಿದೆಯೋ ಇಲ್ಲವೋ?

ಬಾಳಾಜಿ—ವಾಸನೆಯ ರೂಪಾಂತರವು ನಾತದಲ್ಲಿಯಾಗುವದೆಂಬ ಕಲ್ಪನೆಯು ಮಾತ್ರ ದೃಢವಾಗಹತ್ತಿದೆ.

ಸಂಭಾಜಿ—ಒಳ್ಳೇದು, ನೀವು ಬಹು ಜಾಗರೂಕರಾಗಿರತಕ್ಕದ್ದು.

''ಸ್ತ್ರೀ ಬುದ್ಧಿಃ ಪ್ರಳಯಂಗತಾ'' ಎಂಬ ಉಕ್ತಿಯನ್ನು ಲಕ್ಷದಲ್ಲಿಡಿರಿ! ರಾಜ್ಯಲೋಭವು ಬಹು ಕೆಟ್ಟದು. ಔರಂಗಜೇಬನ ಪ್ರತ್ಯಕ್ಷ ಪ್ರಮಾಣವು ಕಣ್ಣೆದುರಿಗಿರುವದು. ಸ್ವಾರ್ಥದ ಸಲುವಾಗಿ ಬೇಕಾದ ಅನರ್ಥಗಳೊದಗುವ ಸಂಭವವಿರುತ್ತದೆ.

ಬಾಳಾಜಿ—ಮಹಾರಾಜರು ಹಚ್ಚಿಕೊಳ್ಳುವ ಭಸ್ಮದ ರತ್ನಖಚಿತವಾದಿ ಡಬ್ಬಿಯು ಒಂದು ದಿನ ದೇವ ಮಂದಿರದೊಳಗಿಂದ ಅಖಂಡ ಎರಡುಗಳಿಗೆ ಇಲ್ಲದ ಹಾಗಾಗಿತ್ತು. ಮುಂದೆ ಅದು ದೊರೆಯಲು, ರಾಜವೈದ್ಯರಕಡೆಗೆ ಪರೀಕ್ಷೆಗಾಗಿ ಕಳಿಸಿದರು.

ಸಂಭಾಜಿ—ಮುಂದೇನಾಯಿತು?

ಬಾಳಾಜಿ—ಆ ಭಸ್ಮದಲ್ಲಿ ರಾಜವೈದ್ಯರ ಬಳಿಯಿಂದಕಳವಾಗಿ ಹೋಗಿದ್ದ ವಿಷದ ಅಂಶವಿದ್ದದ್ದು ಗೊತ್ತಾಯಿತು.

ಸಂಭಾಜಿ—ತೆಗೆದುಕೊಳ್ಳಿರಿ, ಇದೇ ಪ್ರತ್ಯಕ್ಷಪ್ರಮಾಣವು?

ಬಾಳಾಜಿ—ಈ ವಿಷದ ಪ್ರಸಾರವು ಅಂತಃಪುರದೊಳಗಿಂದಲೇ ಆಗುತ್ತಿದ್ದು, ಅದರ ಪ್ರಸಾರಮಾಡುವ ಸಂಶಯಿತ ವ್ಯಕ್ತಿಗಳ ಹೆಣಗಳು ಬೀಳಹತ್ತಿವೆ; ಆದ್ದರಿಂದ ಮಹಾರಾಜರ ಸಂಶಯವು ದಿನದಿನಕ್ಕೆ ದೃಢವಾಗುತ್ತಲಿರುವದು.

ಸಂಭಾಜಿ—ಮೂರುದಿನದ ಹಾದಿಯ ಮೇಲಿರುವ ನಮಗೇ ಈ ಸಂಶಯವು ಎಂದೋ ಬಂದುಹೋಗಿದೆ. ನಮ್ಮನ್ನು ಸುರಳೆಸುತ್ತಿ ಮೂಲೆಗಿಟ್ಟು ರಾಜಾರಾಮನನ್ನು ಪಟ್ಟಕ್ಕೆ ಕುಳ್ಳಿರಿಸುವ ಒಳಸಂಚುಗಳು ನಡೆದಿರುವವೆಂಬದನ್ನು ನಾವು ನಿಶ್ಚಯಿಸಿ ಬಿಟ್ಟಿ ರುತ್ತೇವೆ; ಆದರೆ ನೀವು ಮಾತ್ರ ಜಾಗರೂಕರಾಗಿರತಕ್ಕದ್ದು.

ಬಾಳಾಜಿ—ಈ ಮಾತನ್ನು ಮಹಾರಾಜರಿಗೆ ತಿಳಿಸಿದ್ದೇನೆ! ಅವರು ಜಾಗರೂಕ ರಾಗಿರುವರು. ಸುತ್ತುಮುತ್ತಲಿರುವ ನಾವಾದರೂ ಜಾಗರೂಕರಾಗಿಯೇ ಮಹಾ ರಾಜರನ್ನು ರಕ್ಷಿಸುತ್ತೇವೆ.

ಸಂಭಾಜಿ—ನಾವು ನಿಮಗೆ ಪುನಃ ಹೇಳತಕ್ಕದ್ದೇನಂದರೆ– ಆಗ್ರಹದಿಂದ ಹೇಳ ತಕ್ಕದ್ದೇನಂದರೆ–ನೀವೆಲ್ಲರೂ ಮಹಾರಾಜರ ಸಂರಕ್ಷಣವನ್ನು ಜಾಗರೂಕತೆಯಿಂದ ಮಾಡಿರಿ. ಆ ಕ್ರೂರಸರ್ಪದ ಕಾರಿದ ವಿಷವು ಎರಡು ಮೂರು ಕಡೆಯಲ್ಲಿ ವ್ಯರ್ಥವಾದದ್ದರಿಂದ, ಅದು ರೊಚ್ಚಿಗೆದ್ದಿರುತ್ತದೆ. ಇನ್ನು ಮೇಲೆ ಅದು ಸಾಮ್ರಾಜ್ಯದ ಮರ್ಮಸ್ಥಾನವನ್ನು ಕಚ್ಚಲಿಕ್ಕೂ ಹಿಂದು ಮುಂದು ನೋಡಲಿಕ್ಕಿಲ್ಲ, ಅದಕ್ಕೋಸ್ಕರ ಅದು ಜಪ್ಪು ಹಾಕಿಕೊಂಡೂ ಕುಳಿತಿರ ಬಹುದು; ಆದ್ದರಿಂದ ನೀವು ಬಹುಜೋಕೆ! ನೀವು ಇಲ್ಲಿ ಒಂದುಕ್ಷಣವಾದರೂ ನಿಂತು ಕೊಳ್ಳಬೇಡಿರಿ. ನಾಳೆ ಸೂರ್ಯೋದಯವಾದ ಕೂಡಲೆ ಪರಿವಾರದೊಡನೆ ಹೊರಟು

ಹೋಗಿಬಿಡಿರಿ. ಹೊತ್ತು ಹೊತ್ತಿಗೆ ಅಲ್ಲಿಯ ಸುದ್ದಿಗಳನ್ನು ನೀವು ತಿಳಿಸುತ್ತಿರಬೇಕು. ಮಹಾರಾಜರ ಆತ್ಮ ಸ್ವರೂಪರು ನಿಜವಾದ್ದರಿಂದ ನಾವು ಇಷ್ಟು ಹೇಳುತ್ತೇವೆ. ನಾವಂತು ಪ್ರತಿಬಂಧದಲ್ಲಿಯೇ ಇರುತ್ತೇವೆನ್ನಿರಿ! ನೀವು ಇಲ್ಲಿಂದ ಹೋದಬಳಿಕ ನಮ್ಮ ಕಾವಲನ್ನು ಇನ್ನಿಷ್ಟು ಬಿಗುವು ಮಾಡಿರಿ, ಅಥವಾ ಏನು ಬೇಕಾದದ್ದು ಮಾಡಿರಿ!

ಬಾಳಾಜಿ—ಮಹಾರಾಜ, ನಿಜವಾದ ಪಕ್ಷಕ್ಕೇ ಯಾವಾಗಲೂ ಜಯ ಪ್ರಾಪ್ತಿಯಾಗುತ್ತದೆಂಬ ನಿಯಮವಿಲ್ಲ; ಆದರೂ ಈವರೆಗೂ ಮಹಾರಾಜರೊಡನೆ ಈ ಸೇವಕನು ನಡೆದುಕೊಂಡಿರುವಂತೆ ಮುಂದೆಯಾದರೂ ನಡಕೊಳ್ಳುವನು; ಇದು ಆಬಾಸಾಹೇಬರ ಪಾದಸಾಕ್ಷಿಯಾಗಿ ಹೇಳುವ ಮಾತು! ಇದರಲ್ಲಿ ಸರ್ವಥಾ ಅಂತರವಾಗಲಿಕ್ಕಿಲ್ಲ, ಈ ವಿಷಯದಲ್ಲಿ ಪ್ರಭುಗಳು ಸಂಶಯ ಪಡಬಾರದು.

ಸಂಭಾಜಿ—ಬಾಳಾಜೀ, ನಿಮ್ಮ ಈ ಶಬ್ದಗಳನ್ನು ಪೂರಾಲಕ್ಷದಲ್ಲಿಡಿರಿ. ಈ ಮೇರೆಗೆ ಸಂಭಾಷಣಗಳಾದ ಬಳಿಕ ಬಾಳಾಜಿಯು ಮುಜುರೆಮಾಡಿ ಹೊರಟುಹೋದನು.

## ಚೀಟಣೀಸನ ಮುತ್ಸದ್ದಿತನವು

ಗಂಡಸಾಗಲಿ, ಹೆಂಗಸಾಗಲಿ ಒಮ್ಮೆ ಅಡ್ಡಮಾರ್ಗಕ್ಕೆ ಬಿದ್ದರೆ ತೀರಿತು; ಮುಂದಕ್ಕೆ ಹೋದಹೋದಹಾಗೆ ಅವರು ಅಡವಿಯ ಪಾಲಾಗುವದೇ ಸರಿ! ಅದರಂತೆ ಸೋಯರಾಬಾಯಿಯು ತನ್ನ ಮಗ ರಾಜಾರಾಮನಿಗೆ ಪಟ್ಟವಾಗಬೇಕೆಂದು ತಿಳಿದು ಸಂಭಾಜಿಯ ನಾಶಕ್ಕಾಗಿ ಅಡ್ಡಮಾರ್ಗಕ್ಕೆ ಬಿದ್ದು ಅಡವಿಯ ಕೂಡತೊಡಗಿದಳು. ಆಕೆಗೆ ಕಡೆಗೂ ಪಶ್ಚಾತ್ತಾಪವಾಗಲಿಲ್ಲ– ವಿವೇಕಹುಟ್ಟಲಿಲ್ಲ, ಒಂದು ನೀಚಕರ್ಮವು ಸಾಧಿಸದಿದ್ದರೆ ಮತ್ತೊಂದು ನೀಚಕರ್ಮ, ಮತ್ತೊಂದು ಸಾಧಿಸದಿದ್ದರೆ ಇನ್ನೊಂದು ನೀಚಕರ್ಮ ಹೀಗೆ ನೀಚಕರ್ಮ ಮಾಡಿ ಮಾಡಿ ಬರಬರುತ್ತ ಆಕೆಯ ವೃತ್ತಿಯು ಹೆಚ್ಚು ಹೆಚ್ಚು ನೀಚವಾಗುತ್ತಹೋಗಿ, ಕಡೆಗೆ ಆಕೆಯು ಕೊಲೆಗಡಕರ ಸಾಲಿನಲ್ಲಿ ಸೇರಬೇಕಾಯಿತು! ಈ ಪ್ರಸಂಗದಲ್ಲಿ ಆಕೆಯು ಹಲವು ಕೊಲೆಗಳನ್ನು ಮಾಡಿಸಿದಳು. ಮೊದಲು ಕುದುರೆಸಹಿತವಾಗಿ ಸುಬಾನನಕೊಲೆ, ಆಮೇಲೆ ಆತನ ಹೆಂಡತಿಯ ಕೊಲೆ, ಅದರ ತರುವಾಯ ಅಗ್ನಿ ಹೋತ್ರದ ಭಸ್ಮವನ್ನು ಕೊಟ್ಟ ನರಸಿಂಹ ದೀಕ್ಷಿತ–ಆತನ ಹೆಂಡತಿ–ಆ ಭಸ್ಮವನ್ನು ತಂದುಕೊಟ್ಟ ಸರಸ್ವತೀಬಾಯಿ ಮೊದಲಾದವರ ಕೊಲೆಗಳಾದವು; ಯಾಕಂದರೆ ಅವರೆಲ್ಲರ ಕೊಲೆಯಾಗದಿದ್ದರೆ ಆಕೆಯು ಭಸ್ಮದಲ್ಲಿ ವಿಷಕೂಡಿಸಿದ್ದು ಹೊರಬೀಳುವ ಸಂಭವವಿತ್ತು, ಇಷ್ಟು ಮಾಡಿದರೂ ಆ ರಾಕ್ಷಸಿಯ ಕಾರ್ಯವು ಸಾಧಿಸಲಿಲ್ಲ. ಇದರಿಂದ ಆಕೆಯ ವಿಷಯವಾಗಿ ಮಹಾರಾಜರ ಅವಿಶ್ವಾಸವೂ, ಪ್ರಜೆಗಳ ಅಪ್ರೀತಿಯೂ ಮಾತ್ರ ಹೆಚ್ಚಿದವು! ಪ್ರತ್ಯಕ್ಷ ಪತಿಯ ಪ್ರಾಣಹರಣ ಮಾಡಲಿಕ್ಕೂ ಆ ದುಷ್ಟಳು ಹೇಸಲಿಲ್ಲ! ತಾನು ಭಸ್ಮದಲ್ಲಿ ವಿಷ ಕೂಡಿಸುವ ಸಾಹಸಮಾಡಿದ್ದು ವ್ಯರ್ಥ

ವಾಗಲು, ಆಕೆಯು ಪತಿಯ ಪ್ರಾಣಹರಣಕ್ಕಾಗಿ ಮತ್ತೊಂದು ಹಂಚಿಕೆಯನ್ನು ಹಾಕಿದಳು; ಯಾವ ಉಪಾಯದಿಂದಲೇ ಆಗಲಿ, ಪತಿಯ ಪ್ರಾಣಹರಣ ಮಾಡಲೇಬೇಕೆಂದು ಆಕೆಯು ನಿಶ್ಚಯಿಸಿದಳು. ಆದರೆ ಪತಿಯು ಮರಣಹೊಂದಿದ ಕೂಡಲೆ ತನ್ನ ಮಗನನ್ನು ಪಟ್ಟಕ್ಕೆ ಕೂಡಿಸಲಿಕ್ಕೆ ಅನುಕೂಲವಾಗುವಂತೆ ಎಲ್ಲ ಮುತ್ಸದ್ದಿಗಳ, ವಿಶೇಷವಾಗಿ ಬಾಳಾಜಿಆವಜಿ ಚಿಟಣೀಸನ ಮನಸ್ಸನ್ನು ಆ ದುಷ್ಟಳು ಒಲಿಸಿಕೊಳ್ಳಬೇಕಾಗಿತ್ತು, ಅದಕ್ಕೋಸ್ಕರ ಆಕೆಯು ಚೀಟಣೀಸನನ್ನು ಕರೆಕಳುಹಿ, ಆತನ ಹಾದಿಯನ್ನು ನೋಡುತ್ತ ಕುಳಿತುಕೊಂಡಿದ್ದಳು. ಈ ಮೊದಲೇ ಆ ಸಾಹಸಿಯು ಅಣ್ಣಾಜಿದತ್ತೋ, ಮೋರೋಪಂತ ಪಿಂಗಳೆ, ರಾಮಚಂತ್ರಪಂತ ಅಮಾತ್ಯ, ಮಾಲಸಾವಂತ ಮೊದಲಾದವರನ್ನು ತನ್ನ ಕಡೆಗೆ ಮಾಡಿಕೊಂಡಿದ್ದಳು. ಮುಖ್ಯವಾಗಿ ಆಕೆಯು ಬಾಳಾಜಿ ಚಿಟಣೀಸನ ಮನಸ್ಸನ್ನು ಒಲಿಸಿಕೊಳ್ಳಬೇಕಾಗಿತ್ತು, ಆತನೊಬ್ಬನು ತನ್ನ ಪಕ್ಷಕ್ಕೆ ಸೇರದಿದ್ದರೆ, ಉಳಿದವರು ಸೇರಿಯೂ ವಿಶೇಷ ಪ್ರಯೋಜನವಾಗುವಂತೆ ಇದ್ದಿಲ್ಲ. ಬಾಳಾಜಿಯನ್ನು ಒಲಿಸಿಕೊಳ್ಳುವದು ಸಾಮಾನ್ಯ ಕೆಲಸವಲ್ಲೆಂದು ಆಕೆಯು ಪೂರಾ ಅರಿತಿದ್ದಳು. ಆ ಸ್ವಾಮಿನಿಷ್ಠನು ಅಡ್ಡಹಾದಿಯ ತುಳಿಯುವ ಸಂಭವವು ಸರ್ವಥಾ ಇದ್ದಿಲ್ಲ. ಅಂಥವನ ಮನಸ್ಸನ್ನು ಒಲಿಸಿಕೊಳ್ಳುವದಕ್ಕಾಗಿ ಸೋಯರಾಬಾಯಿಯು ಬಗೆಬಗೆಯ ಆಲೋಚನೆಗಳನ್ನು ಹಾಕುತ್ತ ಕುಳಿತುಕೊಂಡಿದ್ದಳು. ಅಷ್ಟರಲ್ಲಿ ಬಾಳಾಜಿಯು ಬಂದನೆಂಬ ಸುದ್ದಿಯನ್ನು ಆಕೆಯ ದಾಸಿಯು ಹೇಳಲು, ಆತನನ್ನು ಒಳಗೆ ಕರಕೊಂಡು ಬರಲು ಆಜ್ಞೆಯಾಯಿತು. ಬಾಳಾಜಿಯು ಸೋಯರಾಬಾಯಿಯ ಎದುರಿಗೆ ಬಂದು ನಿಂತು ಯೋಗ್ಯ ಮರ್ಯಾದೆಯಿಂದ ಮುಜುರೆ ಮಾಡಿ ಪದ್ಧತಿಯಂತೆ ಆಸನದ ಮೇಲೆ ಕುಳಿತುಕೊಂಡನು. ಆಗ ಅವರಿಬ್ಬರ ಸಂಭಾಷಣಕ್ಕೆ ಆರಂಭವಾಯಿತು.

ಸೋಯರಾಬಾಯಿ—ಬಾಳಾಜಿ, ಬರಲಿಕ್ಕೆ ಇಷ್ಟೇಕೆ ತಡವಾಯಿತು? ಬಾಳಾಜಿ—ಬಾಯಿಸಾಹೇಬ, ಮಹಾರಾಜರ ಮಹಲಿನಲ್ಲಿ ಇಂದು ಪರರಾಷ್ಟ್ರದ ಕಾರ್ಯಕ್ಕೆ ಸಂಬಂಧಿಸಿದ ಕಾಗದ-ಪತ್ರಗಳನ್ನು ಬರೆಯುವ ಕೆಲಸವು ವಿಶೇಷವಿದ್ದದ್ದರಿಂದ ಬರಲಿಕ್ಕೆ ತಡವಾಯಿತು. ಇಲ್ಲದಿದ್ದರೆ ಗೊತ್ತುಮಾಡಿದ ಹೊತ್ತಿಗೇ ಬರುತ್ತಿದ್ದೆನು.

ಸೋಯರಾಬಾಯಿ—ಒಳ್ಳೇದು ಇರಲಿ, ಮಹಾರಾಜರ ಮನಸ್ಸು, ನಾನು ಹೇಳಿದಂತೆ ಮಾಡಲಿಕ್ಕೆ ಇನ್ನೂ ಒಪ್ಪುವದಿಲ್ಲವೆ?

ಬಾಳಾಜಿ-ರಾಣೀಸರಕಾರ, ಈ ಸಂಬಂಧದಿಂದ ಮಹಾರಾಜರು ತಮಗೆ ಕೊಟ್ಟ ಉತ್ತರವನ್ನೇ ನಮ್ಮಂಥ ಸೇವಕರಿಗೆ ಕೊಡತಕ್ಕವರು! ಅವರ ಮುಂದೆ ತಮ್ಮಷ್ಟು ಸಥಿಯೂ, ಅಧಿಕಾರವೂ ನಮ್ಮಂಥ ಯಃಕಶ್ಚಿತ ಸೇವಕರವು ಹ್ಯಾಗೆ ನಡೆದಾವು? ನಾವು ಕೇವಲ ಅಪ್ಪಣೆಯಂತೆ ನಡೆದುಕೊಳ್ಳುವ ನೌಕರರೆಂಬದನ್ನು ಸರಕಾರದ ಮುಂದೆ ಬಾಯಿಬಿಟ್ಟು ನಾನು ಹೇಳಬೇಕೆ?

ಸೋಯರಾಬಾಯಿ—ಮಹಾರಾಜರ ಪ್ರಕೃತಿಯು ದಿನದಿನಕ್ಕೆ ಕ್ಷೀಣವಾಗುತ್ತ ನಡೆದಿರುವದು. ಸಂಭಾಜಿಯು ಅವರ ಅಪ್ರೀತಿಗೆ ಪಾತ್ರನಾಗಿರುವಂತೆ, ರಾಜ್ಯಕಾರಭಾರ

ದೊಳಗಿನ ಬೇರೆ ಜನರ ಅಪ್ರೀತಿಗೂ ಪಾತ್ರನಾಗಿರುವನು. ಆತನನ್ನು ಕಂಡರೆ ಯಾರೂ ಸೇರುವದಿಲ್ಲ. ಆತನು ಎಲ್ಲರ ನಾಶಮಾಡಿ ತಾನೂ ನಾಶಹೊಂದುವನೆಂಬದು ಆತನ ನಡತೆಯಿಂದ ಯಾರಿಗಾದರೂ ಗೊತ್ತಾಗುವಹಾಗಿದೆ. ಇದೇ ಹೊಸದಾಗಿ ಸ್ಥಾಪಿಸಲ್ಪಟ್ಟಿರುವ ರಾಜ್ಯವು ಸುರಕ್ಷಿತವಾಗಿ ನಡೆಯಬೇಕೆಂದು ನೀವು ಇಚ್ಛಿಸುತ್ತಿರುವಿರಷ್ಟೆ?

ಬಾಳಾಜಿ–ಮಹಾರಾಜರ ಬೇನೆಯು ಅಂಥ ಅಸಾಧ್ಯವೇನು ಇರುವದಿಲ್ಲ. ಮೂವತ್ತಾರು ವರ್ಷ ಒಂದೇಸವನೆ ಸ್ವರಾಜ್ಯಸ್ಥಾಪನೆಯ ಕಾರ್ಯದಲ್ಲಿ ಅವರು ಶ್ರಮಪಟ್ಟಿರುವದರಿಂದ ಅವರಿಗೆ ಒಂದು ಪ್ರಕಾರದ ಆಯಾಸವಾದ ಹಾಗೆ ಆಗಿದೆಯಷ್ಟೆ! ವಿಶ್ರಾಂತಿಯಿಂದ ಅದು ನಿಶ್ಶೇಷ ನೆಟ್ಟಗಾಗುವದೆಂದು ನಾನು ತಿಳಿದಿರುವೆನು.

ಸೋಯರಾಬಾಯಿ—(ಸ್ವಲ್ಪ ಮೋರೆ ಸೊಟ್ಟಮಾಡಿ) ಆದರೆ ನನಗೇನು ಹಾಗೆ ಕಾಣುವದಿಲ್ಲ.

ಬಾಳಾಜಿ—ಬಾಯಿಸಾಹೇಬ, ಇದು ಆತ್ಮವಿಶ್ವಾಸದ ಪ್ರಶ್ನವಾಗಿರುವದು. ಆತ್ಮವಿಶ್ವಾಸದ ಪ್ರಭಾವದಿಂದ ಬೇಕಾದದ್ದು ಸಾಧಿಸುವದೆಂಬದು ಮಹಾರಾಜರ ಈವೊತ್ತಿನವರೆಗಿನ ಚರಿತ್ರದ ಅನುಭವದಿಂದ ಗೊತ್ತಾಗುವದಿಲ್ಲವೆ?

ಸೋಯರಾಬಾಯಿ–ಈವರೆಗಿನ ಅನುಭವದ ಮಾತು ಬೇರೆ, ಈಗಿನ ಮಾತು ಬೇರೆ. ತಾರುಣ್ಯದಲ್ಲಿ ಎಂದೂ ಬೇನೆಬೀಳದವರು, ಇಳಿಕೆಯ ವಯಸ್ಸಿನಲ್ಲಿ ಐವತ್ತುವರ್ಷವಾದ ಮೇಲೆ ಅಕಸ್ಮಾತ್ ಬೇನೆಬಿದ್ದರೆ ಅದರಿಂದ ಅವರು ಪಾರಾಗುವ ಆಸೆಯು ತೀರ ಕಡಿಮೆ! ಇದು ಬಹುದಿವಸದ ಜಗತ್ತಿನ ಅನುಭವದ ಮಾತಾಗಿರುವದಲ್ಲ? ಅದಕ್ಕೆ ಸಮಾಧಾನವೇನು? ಇದರ ಮೇಲೆ ಜಗದಂಬೆಯ ಕೃಪೆಯಿಂದ ಸರಕಾರಸವಾರಿಗೆ ಗುಣವಾಗಲಿ, ನಾನು ಶ್ರೀ ಅಂಬಾಬಾಯಿಗೆ ಉಡಿಯನ್ನು ತುಂಬುವೆನು; ಆದರೆ ಮನುಷ್ಯರದೇನು, ಯಾವ ಪ್ರಾಣಿಗಳದೇನು? ಒಂದು ಕ್ಷಣದ ನಂಬಿಗೆಯೂ ಇಲ್ಲೆಂದು ಅನ್ನುವದು ನಿರರ್ಥಕವಾದದ್ದಲ್ಲ!

ಬಾಳಾಜಿ—ಸರಕಾರದಮಾತು ನಿರರ್ಥಕವಾದದ್ದೆಂದು ನಾನಾದರೂ ಎಲ್ಲಿ ಅನ್ನುತ್ತೇನೆ? ಆದರೂ ಆತ್ಮವಿಶ್ವಾಸದಿಂದಲೂ, ಧೂರ್ತತನದಿಂದಲೂ, ಸಾಧನದಿಂದಲೂ ಮನುಷ್ಯನ ಹಲವು ಇಚ್ಛೆಗಳು ಪೂರ್ಣವಾಗುವ ಸಂಭವವಿರುವದು.

ಸೋಯರಾಬಾಯಿ—ಹಾಗಿದ್ದರೆ ಸಂಭಾಜಿಯ ವೃತ್ತಿಯನ್ನು ತಿದ್ದುವದು ಯಾಕೆ ಅಸಾಧ್ಯವಾಗಿರುವದು? ಮಹಾರಾಜರು ಚಿಕ್ಕಂದಿನಿಂದಲೇ ಆತನ ವೃತ್ತಿಯ ಸುಧಾರಣೆಗಾಗಿ ಯತ್ನಿಸುತ್ತಿರುವರಲ್ಲವೆ?

ಬಾಳಾಜಿ–ಹೌದು ಯತ್ನಿಸುತ್ತಿರುವರು. ಈವರೆಗೆ ಯತ್ನಕ್ಕೆ ತಕ್ಕಫಲವು ದೊರೆಯದಿದ್ದರೂ ಆಶೆಯಮಾರ್ಗವು ಪೂರಾ ಕಡಿದುಹೋಗಿರುವದಿಲ್ಲ.

ಸೋಯರಾಬಾಯಿ—ಇನ್ನೂ ಯಾತರ ಆಶೆ ಇಟ್ಟಿರುವಿರಿ?

ಬಾಳಾಜಿ—ನಾಳೆ ಮಹಾರಾಜರಿಗೆ ನೆಟ್ಟಗಾದಕೂಡಲೆ ಅವರು ತಮ್ಮ ಅಧಿಪತ್ಯದ ಕೆಳಗೆ ಸಂಭಾಜಿಯನ್ನು ಸೈನ್ಯ ಔರಂಗಜೇಬನೊಡನೆ ದ್ವಂದ್ವ ಯುದ್ಧಕ್ಕಾಗಿ ಉತ್ತರಕ್ಕೆ

ನರ್ಮದೆಯ ಆಚೆಗೆ ಕಳಿಸತಕ್ಕವರಿದ್ದಾರೆ. ಇತ್ತ ಮಹಾರಾಷ್ಟ್ರದ ರಾಜ್ಯಸೂತ್ರಗಳನ್ನು ಮುತ್ಸದ್ದಿಗಳ ಸಹಾಯ ದಿಂದ ರಾಜಾರಾಮ ಮಹಾರಾಜರು ನೋಡಿಕೊಳ್ಳಬೇಕಂತೆ. ಹೀಗೆ ತಾವು ಹಿರಿಯರಾಗಿ ಇಬ್ಬರ ಮೇಲೆಯೂ ಕೆಲಸದ ಭಾರಹಾಕಿ ಅವರನ್ನು ತಿದ್ದಬೇಕೆಂದು ಮಹಾರಾಜರು ಯೋಚಿಸಿರುವರು. ಮೇಲೆ, ಮಹಾರಾಜರಿಗೆ ಮಾತೃಶ್ರೀ ಜೀಜಾಬಾಯಿಯವರು ಮಂತ್ರಾಲೋಚಕರಾಗಿದ್ದಂತೆ, ತಾವು ರಾಜಾರಾಮ ಮಹಾರಾಜರಿಗೆ ಮಂತ್ರಾಲೋಚಕರಾಗಿ ಇದ್ದೇ ಇರುವಿರಿ.

ಸೋಯರಾಬಾಯಿ—(ಆಶ್ಚರ್ಯದಿಂದ) ಎಲ ಇವರ! ನನ್ನ ಮಾತಿಗೆ ಸಮ್ಮತಿಸಲು ಕಾಲಹರಣಮಾಡುವದಕ್ಕಾಗಿ ಇದೊಂದು ಹೊಸ ಯುಕ್ತಿಯನ್ನೇ ಮಹಾರಾಜರು ಯೋಚಿಸಿರುವಂತೆ ತೋರುತ್ತದೆ!

ಬಾಳಾಜಿ—(ಗಾಂಭೀರ್ಯದಿಂದ) ಬಾಯಿಸಾಹೇಬ, ಹೀಗೇಕೆ ತಿಳಿದುಕೊಳ್ಳುವಿರಿ? ಪಾರತಂತ್ರ್ಯದ ಅಮೂರ್ತಶೃಂಖಲೆಯಿಂದ ಬದ್ಧವಾಗಿದ್ದ ಮಹಾರಾಷ್ಟ್ರವನ್ನು ಉದ್ಧರಿಸಿ ಸ್ವರಾಜ್ಯದ ಪ್ರತಿಷ್ಠಾಪನೆಯನ್ನು ಸ್ವಂತದ ಕರ್ತೃತ್ವಶಕ್ತಿಯಿಂದ ಮಾಡಿರುವ ನರಶಾರ್ದೂಲರ ಆಲೋಚನೆಯು ವ್ಯರ್ಥವಾದದ್ದಾಗಬಹುದೆ? ಅವರು ತಮ್ಮ ಉತ್ತರ ವಯಸ್ಸಿನಲ್ಲಿ ಪ್ರಬುದ್ಧರೂ- ಪ್ರತಾಪಿಗಳೂ ಆದ ಇಬ್ಬರು ಮಕ್ಕಳ ಸಹಾಯದಿಂದ ಶ್ರೀಸಮರ್ಥರ, ಹಾಗು ಅಂಬಾಬಾಯಿಯ ಕೃಪೆಯಿರಲು, ಆಸೇತು ಹಿಮಾಚಲ ಮಹಾರಾಷ್ಟ್ರ ಏಕಛತ್ರಾಧಿಪತ್ಯವನ್ನು ಸ್ಥಾಪಿಸುವಲ್ಲಿ ಅಶಕ್ಯವೇನಿರುವದು?

ಸೋಯರಾಬಾಯಿ—ಮನುಷ್ಯನ ಲೋಭವು ಹೆಚ್ಚಾಗುತ್ತಹೋದಂತೆ ಅವನ ಬುದ್ಧಿಯು ಭ್ರಷ್ಟವಾಗುತ್ತದೆ. ಬುದ್ಧಿ ಭ್ರಷ್ಟವಾಯಿತೆಂದರೆ ಸರ್ವನಾಶವು ವಿಕ್ರಾಳರೂಪದಿಂದ ಮುಂದೆಬಂದು ನಿಲ್ಲುವದು!

ಬಾಳಾಜಿ—ಮಹಾರಾಜರ ಈ ಮಹತ್ವಾಕಾಂಕ್ಷೆಗೆ ಲೋಭವು ಕಾರಣವೆಂದು ನಾನು ಹೇಳುವದಿಲ್ಲ, ಅದರ ಕಾರಣವು ಧರ್ಮನಿಷ್ಠೆಯ ಪರಮಾರ್ಥವಾಗಿರುವದು.

ಸೋಯರಾಬಾಯಿ—ಅದು ಹ್ಯಾಗೆ?

ಬಾಳಾಜಿ—(ಗಾಂಭೀರ್ಯದಿಂದ) ಆರ್ಯರ ಪವಿತ್ರಕ್ಷೇತ್ರವು ಕಾಶಿಯಷ್ಟೆ? ಅಲ್ಲಿಯ ಪುರಾತನವಾದ ವಿಶ್ವೇಶ್ವರ ದೇವಸ್ಥಾನವನ್ನು ಮೂರ್ಖನೂ, ಧರ್ಮಭ್ರಾಂತನೂ ಆದ ಔರಂಗಜೇಬನು ಕೆಡವಿಸಿ ಅಲ್ಲಿ ಮಸೀದೆಯನ್ನು ಕಟ್ಟಿಸಿರುವನು! ಅಂಥವನ ಶಾಸನ ಮಾಡಿ, ಆ ಪವಿತ್ರ ಕ್ಷೇತ್ರವನ್ನು ಆತನ ದವಡೆಯೊಳಗಿಂದ ಬಿಡಿಸುವದು ನಿಜವಾದ ಆರ್ಯ ಕ್ಷತ್ರಿಯರ ಪವಿತ್ರ ಧರ್ಮನಿಷ್ಠೆಯ ಲಕ್ಷಣವಲ್ಲವೇ? ಇದರಿಂದ ಸ್ವಜನರ ಹಿತವು ಸಾಧಿಸುವದರಿಂದ ಪರಮಾರ್ಥಸಾಧನವೂ ಆಗಲಿಲ್ಲವೇನು?

ಸೋಯರಾಬಾಯಿ—(ಕುಂಠಿತಳಾಗಿ ನಿರುತ್ಸಾಹದಿಂದ) ಚೀಟಣೀಸ, ನೀವು ಅವರ ಗರಡಿಯ ಮನೆಯಲ್ಲಿ ತಯಾರಾದವರಿರುವಿರೆಂದ ಬಳಿಕ ನಿಮ್ಮ ಸಂಗಡ ಮಾತಾಡಿ ಯಾರು ಗೆಲ್ಲುವರು? ಮಹಾ ಮಹಾ ಪಂಡಿತರೇ ಕೈ ಊರುತ್ತಿರುವಾಗ ನನ್ನಂಥ ಹೆಂಗಸಿನ ಪಾಡೇನು?

ಅದಿರಲಿ, ದೇಹವು ಅಶಾಶ್ವತವು. ಮುಂದೆ ಅಣ್ಣ ತಮ್ಮಂದಿರಲ್ಲಿ ಕಲಹವು ಉತ್ಪನ್ನವಾಗದಂತೆ ಲೇಖದಿಂದ ಏನಾದರೂ ವ್ಯವಸ್ಥೆಮಾಡಿಡುವದು ನೆಟ್ಟಗಲ್ಲವೆ? ಮುಂದೆ ಜಡ್ಡು ನೆಟ್ಟಗಾದ ಬಳಿಕ ಉತ್ತರದಿಕ್ಕಿಗೆ ದಂಡೆತ್ತಿ ಹೋಗುವಾಗ ಆ ಲೇಖವನ್ನು ಹರಿದು ಚಲ್ಲಲಿಕ್ಕೆ ತಡವಾಗುವದೇನು?

ಇನ್ನು ಮಾತು ಇಲ್ಲಿಗೆ ಸಾಕುಮಾಡಿ ನಡೆದ ಸಂಗತಿಯನ್ನು ಮಹಾರಾಜರಿಗೆ ನಿವೇದಿಸುವದಕ್ಕಾಗಿ ಏಳತಕ್ಕದ್ದು, ಎಂದು ಬಾಳಾಜಿಯು ಮನಸ್ಸಿನಲ್ಲಿ ಅಂದುಕೊಂಡು ಬಹಿರಂಗವಾಗಿ—

ಬಾಳಾಜಿ—ಹ! ಯೋಗ್ಯವದೆ–ನಿಮ್ಮ ಸೂಚನೆಯು ವಿಚಾರಮಾಡತಕ್ಕದ್ದಾಗಿದೆ....

ಸೋಯರಾಬಾಯಿ—ನೀವೆಲ್ಲರೂ ಅದಕ್ಕೆ ಉತ್ತೇಜನ ಕೊಟ್ಟರೆ ಮಾತ್ರ ನಮ್ಮ ಸೂಚನೆಯು ಸಫಲವಾದೀತು!

ಬಾಳಾಜಿ–ಯೋಗ್ಯ ಸಂಧಿಯನ್ನು ನೋಡಿ ಮಹಾರಾಜರಮುಂದೆ ಈ ಮಾತು ತೆಗೆಯೋಣವಂತೆ?

ಸೋಯರಾಬಾಯಿ–(ಕಣ್ಣೀರುಸುರಿಸುತ್ತ) ಚೀಟಣೀಸ, ಹೀಗೆ ಅಂತಿಗಂತೇ ಹಾರಿಸಿ ಮಾತಾಡಬೇಡಿರಿ. ಇಷ್ಟು ಕಷ್ಟಪಟ್ಟು ಸ್ಥಾಪಿಸಿದ ಸಾಮ್ರಾಜ್ಯವು ಯವನರ ತುತ್ತಾಗಿ ಸರ್ವರ ನಾಶವಾಗುವ ಪ್ರಸಂಗವು ಒದಗೀತೆಂದು ನಾನು ಇಷ್ಟು ಹೇಳುವೆನು. ನನ್ನ ಮಾತನ್ನು ಲಕ್ಷದಲ್ಲಿಟ್ಟು, ನೀವು ಮುತ್ಸದ್ದಿಗಳೆಲ್ಲರೂ ಒಮ್ಮನಸ್ಸಿನಿಂದ ಮಹಾರಾಜರ ಮುಂದೆ ಈ ಮಾತು ತೆಗೆಯಲೇಬೇಕು. ಹೀಗೆ ಆದರೆ ಹಿತವಾಗುವದೆಂದು ಆಗ್ರಹಪಡಲೇ ಬೇಕು. ಇಲ್ಲದಿದ್ದರೆ ನಾನು ಈಗ ಹೇಳಿದ್ದರ ಪ್ರಯೋಜನವೇನೂ ಆಗುವದಿಲ್ಲ. ಚೀಟಣೀಸ, ನನ್ನ ಈ ಮಾತನ್ನು ಲಕ್ಷದಲ್ಲಿಟ್ಟು ಮಾಡತಕ್ಕದ್ದನ್ನು ಮನಃಪೂರ್ವಕವಾಗಿ ಮಾಡುವಿರಾ? ಕಳೆದ ಸಂಕ್ರಮಣದಿಂದ ನನಗೆ ದುಃಸ್ವಪ್ನಗಳು ಬಹಳ ತೋರಹತ್ತಿರುವದರಿಂದ ಅಂಜಿಕೆಬರುತ್ತದೆ.

ಹೀಗೆ ಸೋಯರಾಬಾಯಿಯು ಕಣ್ಣೀರು ಸುರಿಸಿ ಎಷ್ಟು ಡೋಕಾರಿತನ ಮಾಡಿದರೂ ಅದರ ಪರಿಣಾಮವು ಚೀಟಣೀಸನ ಮೇಲೆ ಏನೂ ಆಗಲಿಲ್ಲೆಂಬದು ಆಕೆಗೆ ಗೊತ್ತಾಯಿತು. ತನ್ನ ಎಲ್ಲ ಮಾತುಗಳನ್ನು ಕೇಳಿ ಚೀಟಣೀಸನ ಮುಖಮುದ್ರೆಯು ಮತ್ತಿಷ್ಟು ಗಂಭೀರವಾದದ್ದನ್ನು ನೋಡಿ ಆಕೆಯು ಮತ್ತೆ ಬಾಳಾಜಿಯನ್ನು ಕುರಿತು—

ಸೋಯರಾಬಾಯಿ—ಚೀಟಣೀಸ, ನನ್ನ ಮಾತನ್ನು ದುರ್ಲಕ್ಷಮಾಡಬೇಡಿರಿ. ನನ್ನ ಎಲ್ಲ ಪ್ರಯತ್ನವು ಸ್ವಾರ್ಥಕ್ಕಾಗಿ ಅಲ್ಲ, ರಾಷ್ಟ್ರಹಿತಕ್ಕಾಗಿ ಇರುತ್ತದೆ. ಕೇವಲ ನಮ್ಮ ರಾಜಾರಾಮನ ಹಿತಕ್ಕಾಗಿಯೇ ಹೇಳುತ್ತೇನೆಂದು ತಿಳಿಯಬೇಡಿರಿ. ಇದರಮೇಲೆ ಆಗುವ ಯೋಗವಿದ್ದಂತೆ ಆಗುವದು.

ಬಾಳಾಜಿ—ಅದಂತು ಸರಿಯೆ! ಆಗುವದು ಆಗಿಯೇ ತೀರುತ್ತದೆ. ಅದನ್ನು ತಪ್ಪಿಸುವದು ಯಾರಿಂದಲೂ ಆಗುವದಿಲ್ಲ. ನಿಮ್ಮ ಮಾತುಗಳನ್ನು ನಾನು ಮರೆಯುವದಿಲ್ಲ, ಯೋಗ್ಯ ಪ್ರಸಂಗ ಒದಗಿದಾಗ ಮಹಾರಾಜರಿಗೆ ಸೂಚಿಸುವೆನು; ಆದರೆ ನನ್ನ ಒಬ್ಬನ ಸೂಚನೆಯಿಂದೇನಾಗುತ್ತದೆ? ನನ್ನ ಸೂಚನೆಗೆ ಪುಷ್ಟಿಯುಂಟಾಗುವಂತೆ ಮಾಡಲು ಅಷ್ಟಪ್ರಧಾನರನ್ನು ತಿದ್ದಿ

ಕೊಳ್ಳಬೇಕು. ಅದೆಲ್ಲದರ ಸಿದ್ಧತೆಯಾದಬಳಿಕ ನನಗೆ ತಿಳಿಸಿರಿ. ಅಂದರೆ ನಾನು ಮಹಾರಾಜರಿಗೆ ಸೂಚಿಸುವ ಕೆಲಸ ಮಾಡುವೆನು.

ಸೋಯರಾಬಾಯಿ—(ಉಲ್ಲಾಸದಿಂದ) ಅಷ್ಟಪ್ರಧಾನರನ್ನು ತಿದ್ದಿಕೊಳ್ಳುವ ಕೆಲಸವು ನನ್ನನ್ನು ಕೂಡಿತು. ಅಣ್ಣಾಜಿದತ್ತೊ, ಮಾಲಸಾವಂತ, ಪ್ರಲ್ಹಾದನಿರಾಜಿ, ರಾಮಚಂದ್ರಪಂತ ಅಮಾತ್ಯ ಇವರಿಗೆ ನನ್ನ ಸೂಚನೆಯು ಸಮ್ಮತವದೆ.

ಬಾಳಾಜಿ—ಆದರೆ ಮುಖ್ಯವಾಗಿ ಮೋರೋಪಂತಪೇಶವೆ, ಹಂಬೀರರಾವಮೋಹಿತೆ ಸೇನಾಪತಿ ಇವರ ಅನುಕೂಲತೆಯನ್ನು ಸಂಪಾದಿಸಿಡತಕ್ಕದ್ದು. ಜನಾರ್ದನಪಂತ ಸುಮಂತನನ್ನೂ ನಿಮ್ಮ ಕೈಯಲ್ಲಿ ಎಳೆದುಕೊಳ್ಳತಕ್ಕದ್ದು.

ಸೋಯರಾಬಾಯಿ—ಅದನ್ನೆಲ್ಲ ನಾನು ಮಾಡುವೆನು. ನನ್ನ ಮಾತು ಮೀರಿಹೋಗುವ ಧೈರ್ಯವು ಅವರಿಗಾಗದು. ಮುಖ್ಯವಾಗಿ ನಿಮ್ಮ ಸಂಬಂಧದಿಂದಲೇ ನನಗೆ ಆದೇಶವಿತ್ತು.

ಬಾಳಾಜಿ—ಬಾಯಿಸಾಹೇಬ, ಸುಮ್ಮನೆ ನನಗೆಷ್ಟಷ್ಟು ಮಹತ್ವವೇಕೆ? ನಾನು ಹೇಳಿಕೇಳಿ ಚೀಟಣೀಸನು; ಅಪ್ಪಣೆಯಂತೆ ಪತ್ರಗಳನ್ನು ಬರೆಯುವವನು. ನಾನೇನು ಮಂತ್ರಿ ಮಂಡಲ ದೊಳಗಿನವನಲ್ಲ! ಆ ಅಷ್ಟ ಪ್ರಧಾನರ ಒಪ್ಪಿಗೆ ದೊರೆತಬಳಿಕ ನನ್ನ ಒಪ್ಪಿಗೆ ದೊರೆಯದಿದ್ದರೂ –ನನ್ನ ಒಪ್ಪಿಗೆಯಂತು ಇದ್ದೇ ಇರುವದು; ಆದರೆ ಒಂದು ಪಕ್ಷದಲ್ಲಿ ಇಲ್ಲೆಂದು ತಿಳಿಯಿರಿ. ಅದರಿಂದಾಗುವ ಕಾರ್ಯಹಾನಿಯೇನು?

ಸೋಯರಾಬಾಯಿ—ಚೀಟಣೀಸ, ನೀವು ಹೀಗೆ ಹಾರಿಸಿಕೊಂಡು ಮಾತಾಡಬೇಡಿರಿ. ನಾನೇನು ನಿನ್ನೆಮೊನ್ನೆ ಬಂದವಳಲ್ಲ, ರಾಜಕಾರಣದಲ್ಲಿಯ ನಿಮ್ಮ ಯೋಗ್ಯತೆಯನ್ನು ನಾನು ಬಲ್ಲೆನು. ಹಿರೋಜಿ ಫರ್ಜಂದ, ಸೋನಾಜಿನಾಯಕ ಬಂಕಿ, ಸೂರ್ಯಾಜಿಕಂಕ ಮಾವಳೆ ಇವರಿಗೆ ಸಂಭಾಜಿಯ ಕಾವಲನ್ನು ಬಿಗಿಮಾಡುವದಕ್ಕಾಗಿ ಕಟ್ಟಪ್ಪಣೆ ಕೊಟ್ಟಿರುವೆನು. ಒಟ್ಟಿಗೆ ಎಲ್ಲ ವ್ಯವಸ್ಥೆಯಾಗಿದೆ; ಆದರೆ ನಿಮ್ಮ ಅನುಕೂ.....

ಬಾಳಾಜಿ—ಅದರ ಚಿಂತೆ ನಿಮಗೆ ಬೇಡ; ಒಳ್ಳೇದು ನಾನು ಇನ್ನು ಬರುತ್ತೇನೆ, ಅಪ್ಪಣೆಕೊಡಬೇಕು.

ಈ ಮೇರೆಗೆ ನುಡಿದು ಬಾಳಾಜಿಯು ಹೊರಟುಬಿಟ್ಟನು. ಆತನು ಸೋಯರಾ ಬಾಯಿಯ ಮಂದಿರದಿಂದ ಹೊರಬೀಳುವಾಗ ಮನಸ್ಸಿನಲ್ಲಿ–ಎಂಥ ರಾಕ್ಷಸೀ ಅನ್ಯಾಯದ ಕಲ್ಪನೆಗಳಿವು! ನಮ್ಮಂಥ ಮುತ್ಸದ್ದಿಗಳು ಸುತ್ತುಮುತ್ತು ಸಹಾಯಕರಾಗಿರಲು, ಸಂಭಾಜಿ ರಾಜರಿಂದ ಸ್ವರಾಜ್ಯಘಾತಕ ಕೃತಿಗಳು ಹ್ಯಾಗೆ ಘಟಿಸುವವು? ಅತ್ಯಂತ ಸ್ವಾರ್ಥಪರಾಯಣ ರಾದ ಸೋಯರಾಬಾಯಿಯವರೂ, ಅವರ ಕಪಟಜಾಲದಲ್ಲಿ ಸಿಕ್ಕು ಅವರಂತೆ ಕುಣಿ ಯುತ್ತಿರುವ ಈ ಅದೂರದರ್ಶಿಗಳಾದ ಮುತ್ಸದ್ದಿಗಳೂ ಕಡೆಗೆ ಯುವರಾಜಸಂಭಾಜಿರಾಜರ ಕ್ರೋಧಾಗ್ನಿಗೆ ಆಳುತಿಯಾಗುವರೆಂದು ನನ್ನ ಮನಸ್ಸಿಗೆ ತೋರುತ್ತಲಿದೆ! ಏನೇನು ಅನರ್ಥ ಗಳಾಗುವವೋ ಈಗ ಹೇಳಲಾಗುವದಿಲ್ಲ, ಎಂದು ಒಟಗುಟ್ಟುತ್ತ ಮಹಾರಾಜರ ಮಂದಿರದ ಕಡೆಗೆ ಸಾಗಿದನು. ಇತ್ತ ಸೋಯರಾಬಾಯಿಯು ಚೀಟಣೀಸನ ನಡತೆಯ ರೀತಿಯನ್ನು ಮನಸ್ಸಿನಲ್ಲಿ ತಂದು ತನ್ನೊಳಗೆ—ಈ ಗುಮ್ಮನ ಗುಸುಕನು ಮಹಾ ಠಕ್ಕನು. ಇವನ ಮಾತುಗಳು

ಎಂದಿಗಾದರೂ ಹೀಗೆಯೇ! ಇವನು ತನ್ನ ಹಿಡತವನ್ನು ಎಂದಿಗೂ ಬಿಡನು. ಹೋಗುವಾಗ ನಮಗೆ ಅನುಕೂಲವಾಗಿ ಮಾತಾಡಿ ಹೋಗಿರುವದೇನೋ ನಿಜ; ಆದರೆ ಇವನ ಮನಸ್ಸಿನ ನಿಜವಾದ ಒಲವು ತಿಳಿಯುವದು ಬಲು ಕಠಿಣವು; ಆದರೆ ಒಳ್ಳೇ ನಂಬಿಗೆಯವನು. ಉಂಡ ಮನೆಗಳ ಎಣಿಸುವ ಸ್ವಭಾವದವನಲ್ಲ. ಒಮ್ಮೆ ಮಾಡಿದ ಪ್ರತಿಜ್ಞೆಯನ್ನು ಪ್ರಾಣಹೋದರೂ ನಡಿಸದೆ ಬಿಡಲಿಕ್ಕಿಲ್ಲ. ಈತನಿಗೆ ಮಹಾರಾಜರ ಮಾತುಗಳು ವೇದವಾಕ್ಯಗಳು; ಆದ್ದರಿಂದಲೇ ಆರಂಭದಿಂದ ಇಲ್ಲಿಯವರೆಗೆ ಅಖಂಡವಾಗಿ ಅವರ ಅತ್ಯಂತ ವಿಶ್ವಾಸಕ್ಕೆ ಪಾತ್ರನಾಗಿರುವನು; ಆದರೆ ಆತನ ಇವೇ ಗುಣಗಳು ಈಗ ನನ್ನ ಒಳಸಂಚಿಗೆ ಸಂಪೂರ್ಣ ಘಾತಕವಾಗಿವೆ. ಈ ತಾಯಿಯ ಗಂಡನು ನಮಗೆ ಅನುಕೂಲ ವಾಗದಿದ್ದರೆ, ನಾನು ಈವರೆಗೆ ಕಷ್ಟಪಟ್ಟದ್ದೆಲ್ಲ ಹೊಳೆಯಲ್ಲಿ ಹುಣಸಿಯ ಹಣ್ಣು ತೊಳೆದಹಾಗೆ ಆಗುವದೇ ಸರಿ! ಇವನು ಗೂಢಚಾರರ ಗೂಢಚಾರನು; ಮುತ್ಸದ್ದಿಗಳಲ್ಲಿಯ ಶ್ರೇಷ್ಠ ಮುತ್ಸದ್ದಿಯು; ಪ್ರತಿ ಒಂದರ ಮೂಲವನ್ನು ಗೊತ್ತುಹಚ್ಚುವಲ್ಲಿ ಒಳ್ಳೇಗಟ್ಟಿಗನು. ಹ್ಯಾಗಾದರೂ ಮಾಡಿ ಈತನನ್ನು ಸ್ವಾಧೀನಪಡಿಸಿಕೊಳ್ಳಲೇಬೇಕು. ಇಲ್ಲದಿದ್ದರೆ ನಾನು ಮಾಡಿದ್ದೆಲ್ಲ ವ್ಯರ್ಥವಾಗುವದೇ ಸರಿ. ಈತನು ನಮ್ಮ ವಿರುದ್ಧ ತಿರುಗಿ ಹೂಡಿದರೆ ಒಳಸಂಚಿನೊಳಗಿರುವ ನಮ್ಮೆಲ್ಲರ ಕೊರಳಿಗೆ ಉರುಲು ಬೀಳುವದೇ ನಿಶ್ಚಯ! ಆದ್ದರಿಂದ ನನ್ನ ವಿಷಯವಾಗಿ ಈತನಲ್ಲಿ ನಿಜವಾದ ವಿಶ್ವಾಸವು ಎಷ್ಟರಮಟ್ಟಿಗೆ ಇರುತ್ತದೆಂಬದನ್ನು ಪರೀಕ್ಷಿಸಿಯೇ ಕೆಲಸ ಮಾಡಬೇಕು. ಸುಮ್ಮನೆ ನಮಗೆ ಅನುಕೂಲವಾಗಿರುವನೆಂದು ನಂಬಿ ಮೋಸಹೋಗುವದು ಸರಿಯಲ್ಲ.

ಹೀಗೆ ಆಲೋಚಿಸುತ್ತ ಕುಳಿತಿರುವಾಗ ದಾದಾಜಿ ರಘುನಾಥ ದೇಶಪಾಂಡೆಯು ಭೆಟ್ಟಿಗೆ ಬಂದಿರುವನೆಂದು ದಾಸಿಯು ವಿಜ್ಞಾಪಿಸಿದಳು. ಅದಕ್ಕೆ ಸೋಯರಾಬಾಯಿಯು—''ಸುಮ್ಮನೆ ಹೇಳಲಿಕ್ಕೆ ಯಾಕೆಬಂದೆ? ಹೋಗು, ಬೇಗನೆ ಅವರನ್ನು ಒಳಗೆ ಕರಕೊಂಡು ಬಾ'' ಎಂದು ಹೇಳಿದಳು. ದಾಸಿಯು ಅತ್ತ ಹೋದಕೂಡಲೆ ಸೋಯರಾಬಾಯಿಯು ಮುಗುಳುನಗೆ ನಗುತ್ತ ತನ್ನ ಮಂಚದಮೇಲೆ ಬಿದ್ದುಕೊಂಡಳು. ಆಕೆಗೊಂದು ಹೊಸಯುಕ್ತಿಯು ತೋಚಿದ್ದರಿಂದ ಪರಮಾನಂದವಾಗಿತ್ತು. ಆಕೆಯ ಈಗಿನ ಆನಂದದ ಹಾವಭಾವಗಳನ್ನು ಯಾರಾದರೂ ನೋಡಿದ್ದರೆ ಈಕೆಗೆ ನಿಶ್ಚಯವಾಗಿ ಭ್ರಮೆಯಾಗಿರುವದೆಂದು ಅಥವಾ ಉನ್ಮಾದವಾಗಿರುವದೆಂದು ಹೇಳಬಹುದಾಗಿತ್ತು. ಅಷ್ಟರಲ್ಲಿ ದಾದಾಜಿ ರಘುನಾಥನು ಅಲ್ಲಿಗೆ ಬಂದು ಯೋಗ್ಯ ಮುಜುರೆ ಮಾಡಿದನು. ಸೋಯರಾಬಾಯಿಯು ಕುಳಿತುಕೊಳ್ಳಬೇಕೆಂದು ಆತನನ್ನು ಆಜ್ಞಾಪಿಸಲು, ಆತನು ಕುಳಿತುಕೊಂಡ ಬಳಿಕ ಕೆಳಗೆ ಬರೆದಂತೆ ಅವರ ಸಂಭಾಷಣಗಳಾದವು.

ಸೋಯರಾಬಾಯಿ—ದಾದಾಜೀ, ನಾನು ಈಗ ನಿಮಗೆ ಒಂದು ಮಹತ್ವದ ಕೆಲಸವನ್ನು ನಿಯಮಿಸುವೆನು. ಅದನ್ನು ನೀವು ಬಹು ಎಚ್ಚರದಿಂದ ಪೂರಯಿಸಬೇಕು. ಇಲ್ಲದಿದ್ದರೆ....

ದಾದಾಜಿ—(ಕೈಜೋಡಿಸಿ) ಎಷ್ಟು ಮಾತ್ರವೂ ಶಂಕಿಸುವ ಕಾರಣವಿಲ್ಲ. ಎಲ್ಲ ಕೆಲಸವನ್ನು ಅತಿ ಗುಪ್ತರೀತಿಯಿಂದ ಪೂರಯಿಸುವಂತೆ ಬೇಕಾದರೆ ನಾನು ಪ್ರತಿಜ್ಞೆಮಾಡುವೆನು.

ಸೋಯರಾಬಾಯಿ—ನನ್ನ ಎಲ್ಲ ಕೆಲಸಗಳು ನನ್ನ ಮನಸ್ಸಿನಲ್ಲಿದ್ದಂತೆ ಕೈಗೂಡಿ ಬಂದಲ್ಲಿ ನಿಮಗೆ ನಾನು ಚೀಟಣೀಸಿಯ ಕೆಲಸವನ್ನು ಕೊಡದೆ ಇರಲಿಕ್ಕಿಲ್ಲವೆಂಬದನ್ನು ಚನ್ನಾಗಿ ಲಕ್ಷದಲ್ಲಿಡಿರಿ. ಈ ಮಾತುಗಳು ಯಾರ ಮುಖದಿಂದ ಹೊರಬೀಳುವವೆಂಬದು ನಿಮ್ಮ ಲಕ್ಷದಲ್ಲಿರುವದಷ್ಟೆ?

ದಾದಾಜಿ—(ವಿನಯದಿಂದ) ಸರಕಾರ, ಈ ಮಾತಿನಲ್ಲಿ ಸಂಶಯವೇನು? ಪ್ರತ್ಯಕ್ಷ ರಾಜ ಮಾತೆಯವರು–ರಾಜಪತ್ನಿಯವರು ಆದವರ ಮುಖದಿಂದ ಅಸತ್ಯವಾಣಿಯು ಹೊರಡುವದುಂಟೆ? ಅದರ ಬಗ್ಗೆ ನನಗೆ ಎಳ್ಳಷ್ಟು ಅಪನಂಬಿಗೆಯು ಇರುವದಿಲ್ಲ. ಸೇವಕನು ಹೇಳಿದ ಕೆಲಸವನ್ನು ಮಾಡಲು ಸಿದ್ಧನಿದ್ದಾನೆ, ಅಪ್ಪಣೆಯಾಗಬೇಕು.

ಸೋಯರಾಬಾಯಿ–ದೂರದೇಶದಲ್ಲಿರುವ ಸೇನಾಪತಿಯೇ ಮೊದಲಾದವರ ಕಡೆಗೆ ಕಾರ್ಯನಿಮಿತ್ತದಿಂದ ಗುಪ್ತ ಪತ್ರಗಳನ್ನು ಕಳಿಸಬೇಕಾಗಿದೆ. ಆ ಮಹತ್ವದ ಕಾರ್ಯವನ್ನು ಪೂರಯಿಸಲಿಕ್ಕೆ ನಿಮ್ಮ ಹೊರತು ಬೇರೆ ಯೋಗ್ಯ ಜನರು ಇಲ್ಲ; ಆದ್ದರಿಂದ ನೀವು ಸ್ವತಃ ಗುಪ್ತ ರೀತಿಯಿಂದ ಪತ್ರಗಳನ್ನೊಯ್ದು ಮುಟ್ಟಿಸಬೇಕು. ಆಲಸ್ಯದಿಂದ ನೀವು ಎರಡನೆಯವರ ಮುಖಾಂತರ ಪತ್ರಗಳನ್ನು ಮುಟ್ಟಿಸಹೋದರೆ ನಿಮ್ಮ ಜೀವಕ್ಕೆ ಅಪಾಯವಾಗುವ ಸಂಭವವಿದೆ. ನೀವು ಕೆಲಸಮಾಡಿಕೊಂಡು ಬಂದನಂತರ ಸದ್ಯಕ್ಕೆ ಕೊಡತಕ್ಕ ಉಚಿತವನ್ನು ಕೊಟ್ಟೇ ಕೊಡುವೆವು; ಆದರೆ ಮುಂದೆ ಸಿಗಬೇಕಾಗಿರುವ ಚೀಟಣೀಸಿಯ ಕೆಲಸದ ಮೇಲೆ ಲಕ್ಷವಿಟ್ಟು ವಿಶ್ವಾಸದಿಂದ ನೀವು ಕೆಲಸಮಾಡಬೇಕು. ನಾನು ಪತ್ರಗಳನ್ನು ಬರೆದು ಇಡುವೆನು. ನೀವು ನಾಳೆ ಬೆಳಗಿನಲ್ಲಿ ಬಂದು ನನ್ನನ್ನು ಕಾಣಬೇಕು. ಹೊರಡುವ ಎಲ್ಲ ಸಿದ್ಧತೆಯನ್ನು ಮಾಡಿಕೊಂಡೇ ನನ್ನ ಬಳಿಗೆ ಬರ್ರಿ. ಪತ್ರವು ಕೈಯಲ್ಲಿ ಬಿದ್ದಕೂಡಲೆ ಪ್ರವಾಸಕ್ಕೆ ಹೊರಡಲೇಬೇಕು.

ದಾದಾಜಿ—ಆಜ್ಞಾಪ್ರಮಾಣ!

ಈ ಮೇರೆಗೆ ನುಡಿದು ದಾದಾಜಿಯು ಹೊರಟುಹೋದನು. ಇತ್ತ ಸೋಯರಾಬಾಯಿಯು ಬೇರೆ ಬೇರೆ ಮುತ್ಸದ್ದಿಗಳಿಗೂ, ಸೇನಾಧಿಕಾರಿಗಳಿಗೂ ಬರೆಯತಕ್ಕ ಪತ್ರಗಳನ್ನು ರಾತ್ರಿ ಬೆಳತನಕ ಬರೆದು, ಇಂಥ ದಿವಸವೇ ನೀವು ರಾಯಗಡಕ್ಕೆ ಬಂದು ಮುಟ್ಟಲೇಬೇಕೆಂದು ಅವರವರಿಗೆ ಆಗ್ರಹದಿಂದ ತಿಳಿಸಿದಳು.

## ಅಕೃತ್ರಿಮ ಬಂಧುಪ್ರೇಮ

ಛೆ ಛೇ! ಈ ಕನಸು ದುಃಖಕಾರಕವೇ ಸರಿ! ಎಂಥ ಭಯಂಕರಸ್ವಪ್ನವಿದು! ಆಬಾಸಾಹೇಬರು ಸ್ವರ್ಗವಾಸಿಗಳಾಗುವದೇನು, ನನಗೆ ರಾಜ್ಯಾಭಿಷೇಕವಾಗುವದೇನು? ಎಲ್ಲವೂ ವಿಪರೀತವೆ! ಸಂಭಾಜಿ ಮಹಾರಾಜರು ಜೀವದಿಂದಿರುತ್ತಿರಲು, ನನಗೆ ಪಟ್ಟಾಭಿಷೇಕವೇ? ಛೇ! ಇದು ದುಃಸ್ವಪ್ನವಲ್ಲದೆ ಮತ್ತೇನು? ನಮ್ಮ ಮಾತೃಶ್ರೀಯವರಂತು

ರಾಜ್ಯಲೋಭದಿಂದ ಎಚ್ಚರದಪ್ಪಿ ನಡೆಯುತ್ತಿರುವರು. ಅವರಿಗೆ ರಾಜ್ಯಪ್ರಾಪ್ತಿಯಹೊರತು ಎರಡನೆಯದೇನೂ ಕಾಣುವದಿಲ್ಲ. ಏನು ಬೇಕಾದದ್ದಾಗಲಿ, ನಾನಂತು ದಾದಾಸಾಹೇಬರಿಗೆ ಸರ್ವಥಾ ವಿಘ್ನಕಾರಿಯಾಗುವದಿಲ್ಲ. ನಿಮ್ಮ ಒಳಸಂಚಿಗೆ ನನ್ನ ಒಪ್ಪಿಗೆಯಿಲ್ಲೆಂದು ನಾನು ಮಾತೃಶ್ರೀಯವರಿಗೆ ಬೇಕಾದಷ್ಟು ಸಾರೆ ತಿಳಿಸಿದ್ದೇನೆ; ಪ್ರಸಂಗವಶಾತ್ ಈ ಸಂಬಂಧವಾಗಿ ಅವರನ್ನು ಸ್ಪಷ್ಟವಾಗಿ ನಿಷೇಧಿಸಿಯೂ ಇದ್ದೇನೆ. ಮೊನ್ನೆ ವಿಷಪ್ರಯೋಗದಿಂದ ಮಂಗನನ್ನು ಕೊಂದದಿವಸವಂತೂ ನಾನು ಅವರೊಡನೆ ಅತ್ಯಂತನಿಷ್ಠುರ ವಾಗಿ ನಡೆದುಕೊಂಡಿರುವೆನು; ಆದರೂ ಅವರ ದುಷ್ಟವಾಸನೆಯು ಹೋಗಲೊಲ್ಲದು! ''ಮನಸ್ಸಿನಲ್ಲಿದ್ದದ್ದು ಕನಸಿನಲ್ಲಿ'' ಎಂಬ ಉಕ್ತಿಯು ಪ್ರಸಿದ್ಧವಾಗಿರುವದು. ಅಂದಬಳಿಕ ಸಂಭಾಜಿಮಹಾರಾಜರೇ ರಾಜ್ಯಾಭಿಷಕ್ತರಾಗ ಬೇಕೆಂದು ನಾನು ಮನಃಪೂರ್ವಕವಾಗಿ ಇಚ್ಛಿಸುತ್ತಿರಲು, ನನ್ನ ಆ ಇಚ್ಛೆಗೆ ವಿರುದ್ಧವಾಗಿ ಬಿದ್ದಿರುವ ಸ್ವಪ್ನವು ನಿಸ್ಸಂಶಯವಾಗಿ ಅನಿಷ್ಟಸೂಚಕವು. ಇದನ್ನು ದುಃಸ್ವಪ್ನವೆಂತಲೇ ಹೇಳಬೇಕು. ದಾದಾಸಾಹೇಬರೇ ಗಾದಿಯ ಮಾಲಕರು; ಆದರೆ ಆಬಾಸಾಹೇಬರು ಇನ್ನೂ ಜೀವದಿಂದಿರುತ್ತಿರುವಾಗ ಈ ವಿಚಾರವನ್ನು ನಾನು ಮನಸ್ಸಿನಲ್ಲಿಯಾಕೆ ತರಬೇಕು? ಅವರು ಈ ಬೇನೆಯಿಂದ ಪಾರಗುವದಿಲ್ಲವೋ ಏನು? ಈ ಎಲ್ಲ ದುಷ್ಟಕಲ್ಪನೆಗಳ ಉತ್ಪತ್ತಿಗೆ ನಮ್ಮ ಮಾತೃಶ್ರೀಯವರೇ ಕಾರಣವು. ಅವರು ರಾಜ್ಯಪ್ರಾಪ್ತಿಗಾಗಿ ಈಗ ನಡೆಸಿರುವ ಕೊಲೆಗಳನ್ನು ನೆನಿಸಿದರೆ, ಮೈ ಕೂದಲು ನೆಟ್ಟಗಾಗುತ್ತವೆ! ಬ್ರಹ್ಮಹತ್ಯ ಮಾಡಲಿಕ್ಕೂ ನಮ್ಮ ಮಾತೃಶ್ರೀಯವರು ಹೇಸಲಿಲ್ಲವಲ್ಲ! ಸಂಭಾಜಿಮಹಾರಾಜರನ್ನು ವಿಷಪ್ರಯೋಗದಿಂದ ಕೊಲ್ಲಲಿಕ್ಕೂ, ಅತ್ತಿಗೆಯವರಾದ ಏಸುಬಾಯಿಯವರ ಗರ್ಭಸ್ಥ ಶಿಶುವನ್ನು ವಿಷಪ್ರಯೋಗ ದಿಂದ ನಾಶಗೊಳಿಸಲಿಕ್ಕೂ ಯತ್ನಿಸಿದ್ದು, ನಮ್ಮ ಭೋಸಲೆ ಕುಲಕ್ಕೆ ಲಾಂಛನವಲ್ಲವೆ? ಶಿವ ಶಿವ!! ಬ್ರಹ್ಮಹತ್ಯ–ಭ್ರಾತೃಹತ್ಯ– ಶಿಶುಹತ್ಯಗಳಂಥ ಘೋರಪಾತಕಗಳಿಗೂ ನಮ್ಮ ಮಾತೃಶ್ರೀಯವರು ಅಂಜದಾದರು! ಇಂಥವರ ಪ್ರಯತ್ನದಿಂದ ಸತ್ಫಲವು ಉತ್ಪನ್ನವಾಗ ಬಹುದೇ? ಅವರ ಆ ಘೋರಯತ್ನವು ನಿಃಸಂಶಯ– ಅನರ್ಥಕಾರಕವಾಗಿರುವದು! ಸಂಭಾಜಿ ಮಹಾರಾಜರು ನಮ್ಮ ಪೂಜ್ಯ ದಾದಾಸಾಹೇಬರು ನನಗೆ ಪಿತೃಸಮಾನರು. ಅವರಿಗೆ ವಿಧೇಯನಾಗಿ ನಡಕೊಳ್ಳುವದೇ ನನ್ನ ಧರ್ಮವು. ದಾದಾ ಸಾಹೇಬರಂಥ ನರವೀರರಿಗೆ ಆಬಾಸಾಹೇಬರ ಪಶ್ಚಾತ್ ಸಿಂಹಾಸನಾ ರೂಢರಾಗಿ, ಬಾಳಾಜಿಯೇ ಮೊದಲಾದ ಮುತ್ಸದ್ದಿ ಗಳ ಸಹಾಯದಿಂದ ರಾಜ್ಯಕಾರಭಾರವನ್ನು ನಡಿಸತಕ್ಕದ್ದು; ಆದರೆ ಈ ದುಷ್ಟವಿಚಾರ ಗಳು ಆಬಾಸಾಹೇಬರು ಜೀವದಿಂದಿರುತ್ತ ನನ್ನ ಮನಸ್ಸಿನಲ್ಲಿ ಮೇಲೆ ಮೇಲೆ ಯಾಕೆ ಬರುತ್ತಿರುವವು? ಇದರ ಲಕ್ಷಣವು ನನಗೆ ನೆಟ್ಟಗೆ ಕಾಣುವದಿಲ್ಲ! ಹಾಯ್ ಹಾಯ್! ಒಟ್ಟಿಗೆ ನಮ್ಮ ಮಾತೃಶ್ರೀಯವರ ದುರ್ವರ್ತನದ ಪರಿಣಾಮವು ಭಯಂಕರವಾಗಿ ಪರಿಣಮಿಸುವಂತೆ ತೋರುತ್ತದೆ! ಏನೇ ಇರಲಿ, ಈಗ ಬಿದ್ದಿರುವ ದುಃಸ್ವಪ್ನದ ದೋಷ ನಿವಾರಣಾರ್ಥವಾಗಿ ಏನು ಮಾಡಬೇಕೆಂಬ ಬಗ್ಗೆ ಕುಲಪುರೋಹಿತರನ್ನು ಕೇಳೋಣ!

ಈ ಮೇರೆಗೆ ರಾಜಾರಾಮ ಮಹಾರಾಜರು ಯೋಚಿಸುತ್ತ ಮಂಚದ ಮೇಲೆ ಕುಳಿತಾಗ ಬೆಳ್ಳಗೆ ಬೆಳಗಾಗಿತ್ತು. ಅಷ್ಟರಲ್ಲಿ ಒಬ್ಬ ದಾಸಿಯು ಬಾಗಿಲ ಪರದೆಯನ್ನು ಓರೆಮಾಡಿ— ''ಅಣ್ಣಾಜಿ ದತ್ತೋ ಇವರು ಸರಕಾರವನ್ನು ಕಾಣಲಿಚ್ಛಿಸುವರು'' ಎಂದು ವಿಜ್ಞಾಪಿಸಲು, ''ಅವರನ್ನು ಹೊರಗೆ ಕುಳ್ಳಿರಿಸಿಕೊಂಡಿರು,'' ಎಂದು ಹೇಳಿ, ತಾವು ಮುಖಮಾರ್ಜನಾದಿ ಗಳನ್ನು ಮಾಡುವದಕ್ಕಾಗಿ ಅಲ್ಲಿಂದ ಹೊರಟುಹೋದರು. ದುಃಸ್ವಪ್ನ ದೋಷನಿವಾರಣಾರ್ಥ ವಾಗಿ ಆಗಿನಮಟ್ಟಿಗೆ ಅವರು ಮನಸ್ಸಿನಲ್ಲಿ ವಿಷ್ಣುಸಹಸ್ರನಾಮವನ್ನು ಅನ್ನಲಾರಂಭಿಸಿದರು. ಕೆಲಹೊತ್ತಿನ ಮೇಲೆ ಅವರು ಹೊರಗೆ ಬಂದು, ತಮ್ಮ ಶಯನಾಗಾರದ ಬಳಿಯ ದಿವಾನ ಖಾನೆಯಲ್ಲಿ ಕುಳಿತುಕೊಂಡು, ಪಹರೆಮಾಡುತ್ತಿರುವ ಸಶಸ್ತ್ರ ದಾಸಿಗೆ ಅಣ್ಣಾಜಿಯನ್ನು ಕರತರು ವದಕ್ಕಾಗಿ ಆಜ್ಞಾಪಿಸಿದರು. ಆಗ ಅವರ ಚಿತ್ತವೃತ್ತಿಯು ಸಂತ್ರಸ್ತವಾಗಿದ್ದು, ಮುಖಮುದ್ರೆಯು ಉತ್ಸಾಹಹೀನವಾಗಿತ್ತು. ಅವರ ಮನಸ್ಸಿನಲ್ಲಿ ವಿವಿಧವಿಚಾರಗಳ ತರಂಗಗಳು ಉತ್ಪನ್ನ ವಾಗುತ್ತಿದ್ದಂತೆ, ಅವರ ಮುಖಮುದ್ರೆಯು ಕ್ಷಣ ಕ್ಷಣಕ್ಕೆ ಬದಲಾಗುತ್ತಿತ್ತು. ಈ ಸ್ಥಿತಿಯಲ್ಲಿ ಅಣ್ಣಾಜಿದತ್ತೋನು ಬಂದುನಿಂತದ್ದು ಅವರಿಗೆ ಗೊತ್ತೇ ಆಗಲಿಲ್ಲ. ಆಗ ಅಣ್ಣಾಜಿಯು ''ಸರಕಾರ'' ಎಂದು ಸಂಬೋಧಿಸಲು, ಅವರು ಎಚ್ಚತ್ತು ಅಣ್ಣಾಜಿಯ ಕಡೆಗೆ ನೋಡಿ ಕುಳಿತುಕೊಳ್ಳಲು ಆತನಿಗೆ ಆಜ್ಞಾಪಿಸಿದರು. ಆಗ ಅಣ್ಣಾಜಿಯು ವಿನಯದಿಂದ ಕುಳಿತು ಕೊಳ್ಳಲು, ಒಂದು ಕ್ಷಣ ಮೌನದಿಂದ ಕಾಲವು ಕ್ರಮಿಸಿದ ಬಳಿಕ ಕೆಳಗೆ ಬರೆದಂತೆ ಅವರ ಸಂಭಾಷಣಗಳಾದವು—

ಅಣ್ಣಾಜಿ—ನಾನು ಇಂದು ಸರಕಾರದ ಸನ್ನಿಧಿಯಲ್ಲಿ ಒಂದು ಅತ್ಯಂತ ಸೂಕ್ಷ್ಮವಾದ ಗುಪ್ತಸಂಗತಿಯ ಸಂಬಂಧದಿಂದ ನಾಲ್ಕು ಹಿತದಮಾತುಗಳನ್ನು ಅರಿಕೆಮಾಡಿ ಕೊಳ್ಳಲು ಬಂದಿದ್ದೇನೆ.

ರಾಜಾರಾಮ—ಹೇಳಿರಿ, ಅವಶ್ಯವಾಗಿ ಹೇಳಿರಿ. ಇಲ್ಲಿ ನಮ್ಮಿಬ್ಬರ ಹೊರತು ಮೂರನೆಯವರಂತು ಯಾರೂ ಇಲ್ಲ.

ಅಣ್ಣಾಜಿ—ಮಾಸಾಹೇಬರ ಇಚ್ಛೆಯು.... .... ....

ರಾಜಾರಾಮ(ನಡುವೇ ಬಾಯಿಹಾಕಿ)—ಅದು ನನಗೆ ಗೊತ್ತಿರುವದು. ಮಾಸಾಹೇಬರ ಇಚ್ಛೆಯನ್ನು ನಿಮ್ಮ ಮುಖದಿಂದಲೇ ಕೇಳಬೇಕೆಂಬ ಅವಶ್ಯವಿಲ್ಲ. ಅವರ ಇಚ್ಛೆಯು ಅವರ ತಿಳುವಳಿಕೆಯಂತೆ ಯೋಗ್ಯವಾದದ್ದಿರಬಹುದು; ಆದರೆ ಅದಕ್ಕೆ ನನ್ನ ಒಪ್ಪಿಗೆಯಿಲ್ಲ. ಸಂಭಾಜಿ ಮಹಾರಾಜರು ನಮ್ಮ ಅಣ್ಣಂದಿರು, ಅವರು ನಮಗೆ ಪಿತೃಸಮಾನರು; ಅವರನ್ನು ಅನುಸರಿಸಿ ಅವರ ಸಂರಕ್ಷಣಮಾಡುವದು ನಮ್ಮ ಧರ್ಮವು. ಇದಲ್ಲದೆ ಆಬಾಸಾಹೇಬರ ಪ್ರಕೃತಿಯು ದಿನದಿನಕ್ಕೆ ಅಶಕ್ತವಾಗುತ್ತ ನಡೆದಿದ್ದರೂ ಅಷ್ಟು ನಿರಾಶೆಪಡುವ ಕಾರಣವಿಲ್ಲ. ದೊಡ್ಡವರ ಕೃತಿಗಳೆಲ್ಲವೂ ದೊಡ್ಡವೆ! ಅಖಂಡ ಮೂವತ್ತಾರುವರ್ಷ ಮಹಾರಾಷ್ಟ್ರದ ಉದ್ಧಾರಕ್ಕಾಗಿ ಪರಿಶ್ರಮ ಮಾಡಿರುವದರಿಂದ ಅವರಿಗೊಂದು ಬಗೆಯ ಆಯಾಸವಾಗಿರುತ್ತದೆ. ವಿಶ್ರಾಂತಿ

ಯಿಂದ ಆ ಆಯಾಸವು ಹೋಗಿ ಮಹಾರಾಜರು ಪೂರ್ವದಂತೆ ರಾಜ್ಯವೃದ್ಧಿಯ ವಿಷಯುವಾಗಿ ಯತ್ನಿಸುವರೆಂದು ನಾವು ನಂಬಿರುತ್ತೇವೆ. ಇಂಥ ಪ್ರಸಂಗದಲ್ಲಿ ಮಾಸಾಹೇಬರು ನಿಮ್ಮ ಮುಖಾಂತರವಾಗಿ ತಮ್ಮ ಇಚ್ಛೆಯನ್ನೇನು ಪ್ರಕಟಮಾಡುವರು?

ಈ ಮೇರೆಗೆ ಮರ್ಮಕ್ಕೆ ತಗಲುವಂತೆ ಆಡಿದ ಮಾತುಗಳನ್ನು ಕೇಳಿ ಅಣ್ಣಾಜಿಯಂಥ ಮುತ್ಸದ್ದಿಯೂ ಬೆರಗಾಗಲು, ಇತರರ ಪಾಡೇನು? ತಾನು ಬಂದ ಉದ್ದೇಶವನ್ನು ರಾಜಾರಾಮ ಮಹಾರಾಜರು ಸ್ವಲ್ಪದರಲ್ಲಿಯೇ ನಿಷೇಧಿಸಿ ಮಾತಾಡಿದ್ದರಿಂದ ಅಣ್ಣಾಜಿಗೆ ಆಶ್ಚರ್ಯವಾದದ್ದಲ್ಲದೆ, ನೀರಲ್ಲಿ ಕರಗುವ ಹೆಂಡೆಯಂತೆ ಆತನ ಮನಸ್ಸಿನ ಸ್ಥಿತಿಯಾಗಿ, ತಾನು ಇಲ್ಲಿಗೆ ಯಾಕೆ ಬಂದಿದ್ದೇನೆಂಬ ಹಾಗೆ ಆತನಿಗಾಯಿತು. ಆದರೂ ಇನ್ನೊಮ್ಮೆ ಅಲ್ಲಾಡಿಸಿ ನೋಡಿ ಆಮೇಲೆ ನಡೆದಸಂಗತಿಯನ್ನು ಸೋಯರಾಬಾಯಿಯವರಿಗೆ ತಿಳಿಸಬೇಕೆಂದು ಯೋಚಿಸಿ, ಆತನು ದಿಟ್ಟತನದಿಂದ ರಾಜಾರಾಮ ಮಹಾರಾಜರಿಗೆ—

**ಅಣ್ಣಾಜಿ**—ಮಹಾರಾಜ, ತಾವಾಡುವದು ಸರ್ವಾಂಶದಿಂದ ನಿಜವಿದ್ದರೂ, ತಾವು ಸೂಕ್ಷ್ಮರೀತಿಯಿಂದ ವಿಚಾರಿಸಿ ನೋಡಿದರೆ, ಸಂಭಾಜಿಮಹಾರಾಜರಿಂದ ರಾಜ್ಯಕಾರಭಾರ ನಡಿಸುವದು ದುಸ್ತರವೆಂಬ ಮಾತು ತಮಗೇ ಗೊತ್ತಾಗಬಹುದು. ಅವರು ಬರಿಯ ದುರ್ವ್ಯಸನಿಗಳಿದ್ದರೆ ತಿದ್ದಬಹುದಾಗಿತ್ತು, ಆದರೆ ತಮ್ಮ ತಂದೆಯಮೇಲೆ ತಿರುಗಿಬೀಳುವಂಥ ಅವರ ದಡ್ಡತನವು ಆತ್ಮಘಾತಕವಲ್ಲವೆಂದು ನೀವು ಹೇಳಬಹುದೋ? ಅವರ ಈ ಗುಣಕ್ಕಾಗಿಯೇ ಮಹಾರಾಜರು ಅವರನ್ನು ಪ್ರತಿಬಂಧಿಸಿಟ್ಟಿರುವರಲ್ಲವೆ? ಇದಲ್ಲದೆ ಮಹಾರಾಜರ ಮುಖದಿಂದ ಇತ್ತಿತ್ತಲಾಗಿ—''ಮುಂದೆ ರಾಜ್ಯದ ವ್ಯವಸ್ಥೆಯು ಹ್ಯಾಗಾಗುವದೋ'' ಎಂಬ ಔದಾಸೀನ್ಯದ ಉದ್ಗಾರವು ಮೇಲೆ ಮೇಲೆ ಹೊರಡಹತ್ತಿದೆ. ಅವರ ಪ್ರಕೃತಿಮಾನವು ದಿನದಿನಕ್ಕೆ ಕ್ಷೀಣವಾಗತೊಡಗಿರುವದು; ಆದ್ದರಿಂದ ಯಾವಕಾಲಕ್ಕೆ ಏನು ಘಾತವಾದೀತೆಂಬದನ್ನು ಹೇಳಲಿಕ್ಕೆ ಬಾರದಂಥ ಪರಿಸ್ಥಿತಿಯು ಉತ್ಪನ್ನವಾಗಹತ್ತಿದೆ.... .... ....

**ರಾಜಾರಾಮ(ನಡುವೇ ಬಾಯಿಹಾಕಿ)**— ಆದರೆ ಅಂಥ ಪರಿಸ್ಥಿತಿಯು ಉತ್ಪನ್ನವಾಗಲಿಕ್ಕೆ ನಿಮ್ಮ ಒಳಸಂಚೇ ಕಾರಣವಾಗಿರುವದು. ಈದಿನ ಆ ಒಳಸಂಚನ್ನು ಮುರಿದುಬಿಟ್ಟರೆ ನಾಳೆಯ ಮೊದಲಿನ ಪರಿಸ್ಥಿತಿಯು ಉತ್ಪನ್ನವಾಗುವದು; ಆದ್ದರಿಂದ ನಿಮ್ಮ ಒಳಸಂಚನ್ನು ಮುರಿಯಿರಿ, ಆ ಘೋರವಾದ ತೃಷ್ಣೆಯನ್ನು ಪರಿತ್ಯಜಿಸಿರಿ, ಉಚ್ಚಂಖಲವಾಗಿರುವ ಲೋಭವನ್ನು ನಿರ್ಮೂಲಮಾಡಿರಿ. ಅಂತಃಕಲಹದಿಂದ, ಅಥವಾ ಭಾಗಾದಿತನದಿಂದ, ಸರ್ವನಾಶವಾಗುವದು ಸಿದ್ಧಾಂತವಾಗಿದ್ದು, ಅದನ್ನು ಮಹಾರಾಷ್ಟ್ರರಾಜ್ಯದಲ್ಲಿ ಆದರದಿಂದ ಬರಮಾಡಿಕೊಳ್ಳುವಿರಲ್ಲ! ಅಣ್ಣಾಜಿ, ನಿಮ್ಮಂಥ ಶ್ರೇಷ್ಠ ಮುತ್ಸದ್ದಿಗಳಿಗೆ, ಪರಮಪೂಜ್ಯ ಆಬಾಸಾಹೇಬರ ಕಾಲಕಿರ್ದಿಯ ಆರಂಭದಿಂದ ಅವರ ಗರಡಿಯ ಮನೆಯಲ್ಲಿ ಸಾಧನ ಮಾಡಿದ ಅಚ್ಚ ಮುತ್ಸದ್ದಿಗಳಿಗೆ ನಮ್ಮಂಥ್ಹ ಹುಡುಗರು ಬುದ್ಧಿ ಹೇಳುವ ಪ್ರಸಂಗವು ಬರತಕ್ಕದ್ದಲ್ಲ. ನಿಮ್ಮ ಹಾಗು ನಮ್ಮ ಮಾತೃಶ್ರೀಯವರ ಒಳಸಂಚಿನ ಪರಿಣಾಮವು ಆರಂಭದಲ್ಲಿ ಅಲ್ಪಸ್ವಲ್ಪ ಲಾಭದಾಯಕವಾದಂತೆ ತೋರಿದರೂ, ಪರಿಣಾಮದಲ್ಲಿ ಅತ್ಯಂತ ಹಾನಿಕಾರಕ

ವಾಗುವದೆಂಬ ನನ್ನ ಭವಿಷ್ಯವನ್ನು ಚನ್ನಾಗಿ ನೆನಪಿನಲ್ಲಿಡಿರಿ. ನಮ್ಮ ಮಾತೃಶ್ರೀಯವರ ಅಧ್ಯಕ್ಷತೆಯಲ್ಲಿ ಅವರ ವಿಚಾರದಂತೆ, ನೀವು, ಮೋರೋಪಂತ ಪಿಂಗಳೆ, ಪ್ರಲ್ಹಾದ ನಿರಾಜಿ, ರಾಮಚಂದ್ರಪಂತ ಅಮಾತ್ಯ ಮೊದಲಾದ ಮುತ್ಸದ್ದಿಗಳು ನನ್ನನ್ನು ಸಿಂಹಾಸನಾಧೀಶನನ್ನಾಗಿ ಮಾಡಲು ಆಲೋಚಿಸಿರುವಂತೆ, ಆ ಆಲೋಚನೆಯನ್ನು ಕೊನೆಗಾಣಿಸಿ ದಾದಾಸಾಹೇಬರನ್ನು ನಿರಾಶೆಗೊಳಿಸಿ ಮೂಲೆಗುಂಪು ಮಾಡಿದರೆ, ಭಯಂಕರ ಪರಿಣಾಮವಾಗುವದು ನಿಶ್ಚಯವು. ಅಣ್ಣಾಜಿ, ಹುಲಿಯೊಡನೆ ನಿಶ್ಯಸ್ತ್ರನಾಗಿ ಕಾದಿದ ರಣ—ವೀರಪುಂಗವನು ಮೂಲೆಗುಂಪಾಗಿ ಕುಳಿತುಕೊಳ್ಳಬಹುದೆ? ಆ ಶೌರ್ಯಸಾಗರನು ನಿಮ್ಮೆಲ್ಲರ ಗಂಟಲ ಹಿಚಕದೆ ಎಂದೂ ಬಿಡಲಿಕ್ಕಿಲ್ಲ!

ಈ ಮೇರೆಗೆ ಘಡಘಡಾಸಿ ಆವೇಶದಿಂದ ಆಡಿದ ರಾಜಾರಾಮನ ಮಾತುಗಳನ್ನು ಕೇಳಿ ಅಣ್ಣಾಜಿಯ ಚಿತ್ತವೃತ್ತಿಯು ವಿಲಕ್ಷಣವಾಯಿತು. ಸಂಭಾಜಿಯ ಮಹಾಬಲದ ದರ್ಪವು ಎಲ್ಲರನ್ನೂ ಅಂತರಂಗದಲ್ಲಿ ಬಾಧಿಸುತ್ತಲೇ ಇತ್ತು. ಇಂಥ ಸ್ಥಿತಿಯಲ್ಲಿ ರಾಜಾರಾಮನು ಅದನ್ನು ಸ್ಪಷ್ಟವಾಗಿ ವರ್ಣಿಸಿದ್ದರಿಂದ ಅಣ್ಣಾಜಿಯು ಮನಸ್ಸಿನಲ್ಲಿ ತತ್ತರಿಸಿದನು. ರಾಜಾರಾಮನ ಮಾತುಗಳು ಅಯೋಗ್ಯವೆಂದು ಖಂಡಿಸುವದು ಒತ್ತಟ್ಟಿಗುಳಿದು, ಇನ್ನು ಇಲ್ಲಿಂದ ಒಮ್ಮೆಲೆ ಹೇಗೆ ಎದ್ದು ಹೋಗಬೇಕೆಂತಲೂ, ಸೋಯರಾಬಾಯಿಯನ್ನು ಯಾವ ಮೋರೆಯಿಂದ ಕಾಣಬೇಕೆಂತಲೂ ಆತನು ಆಲೋಚಿಸತೊಡಗಿದನು. ಮನುಷ್ಯನು ಎಂಥ ಜಾಣನಿದ್ದರೂ, ಎಷ್ಟು ಬುದ್ಧಿಶಾಲಿ ಇದ್ದರೂ ಆತನ ತಪ್ಪು ಮುಳ್ಳಿನಂತೆ ಅಳಕುತ್ತಿರುತ್ತದೆ! ಅಣ್ಣಾಜಿಯಂಥ ಶ್ರೇಷ್ಠ ಮುತ್ಸದ್ದಿಯ ಸ್ಥಿತಿಯು ಹೀಗೆಯೇ ಆಯಿತು. ರಾಜಾರಾಮನ ಮನಸ್ಸನ್ನು ತಿರುಗಿಸಿಯೇ ತೀರುವೆನೆಂದು ಸೋಯರಾಬಾಯಿಯ ಮುಂದೆ ಆತನು ಪ್ರತಿಜ್ಞೆಮಾಡಿ ಬಂದಿದ್ದನು; ಅಂಥವನು ಈಪರಿಯ ಮಂಗಳಾರತಿ ಮಾಡಿಸಿಕೊಂಡು ಹೇಗೆ ಹೋದಾನು? ಆತನು ಮಾಡಲಿಕ್ಕೆ ಹೋದದ್ದೊಂದು ಆದದ್ದೊಂದು ಆಯಿತು! ಆತನ ಮನಸ್ಸಿನಲ್ಲಿ ಹಲವು ವಿಚಾರಗಳು ಉತ್ಪನ್ನವಾಗಿ, ಆತನು ಮಾತಾಡಲಾರದೆ ಸುಮ್ಮನೆ ಕುಳಿತುಬಿಟ್ಟನು. ಆಗ ರಾಜಾರಾಮನು—''ಯಾಕೆ ಅಣ್ಣಾಜೀ, ಸುಮ್ಮನೆ ಕುಳಿತು ಕೊಂಡಿರಿ? ನನ್ನ ಮಾತುಗಳೆಲ್ಲ ನಿಮಗೆ ಅಶಕ್ಯವಾಗಿ ತೋರುವವೋ? ತೋರಲಿ! ನಿಮ್ಮ ಕರ್ಮದ ಅನುಭವವು ನಿಮಗೇ ಆಗುವದು, ಇನ್ನು ನೀವು ಹೋಗಿರಿ. ಮಾತೃಶ್ರೀಯವರ ಮುಂದೆ ನಾನಾಡಿದ ಮಾತುಗಳನ್ನು ಹೇಳಿರಿ; ಅದರಿಂದ ಏನಾದರೂ ವಿವೇಕವು ಉತ್ಪನ್ನ ವಾದರೆ ಆಗಲಿ; ಇಲ್ಲದಿದ್ದರೆ ''ವಿನಾಶಕಾಲೇ ವಿಪರೀತಬುದ್ಧಿಃ'' ಎಂಬ ಸಿದ್ಧಾಂತವು ಪ್ರಸಿದ್ಧ ವಾದದ್ದೇ ಇರುತ್ತದೆ!''

ಕಡೆಗೆ ಅಣ್ಣಾಜಿ ದತ್ತೋನು ಹ್ಯಾಗಾದರೂ ಒಮ್ಮೆ ರಾಜಾರಾಮನ ಅಪ್ಪಣೆಪಡೆದು ಆತನ ಮಂದಿರದಿಂದ ಹೊರಬೀಳುವಾಗ ತನ್ನ ಮನಸ್ಸಿನಲ್ಲಿ—''ಸರ್ವಭಕ್ಷಕನಾದ ಕಾಲನ ಉದರ ದಲ್ಲಿ ಯಾವ ಯಾವ ಸಂಗತಿಗಳ ಸಮಾವೇಶವಾಗಿರುತ್ತದೆಂಬದನ್ನು ತಿಳಿಯುವದು ಯಾರಿಗೂ ಶಕ್ಯವಲ್ಲ. ನಾವು ರಾಜ ಸೇವಕರು; ರಾಷ್ಟ್ರಸಂರಕ್ಷಣದ ಉಪಾಯಗಳನ್ನು

ಯೋಚಿಸುವದು ನಮ್ಮ ಕರ್ತವ್ಯವಾಗಿದ್ದು, ಅದೇ ನಿಜವಾದ ನಮ್ಮ ರಾಜಸೇವೆಯೆಂದು ನಾನು ತಿಳಿದಿರುವೆನು. ಬಾಳಾಜಿಯು ಅನುಕೂಲವಾದರೆ, ಮುಂದೆ ರಾಷ್ಟ್ರಕ್ಕೆ ಒದಗಬಹುದಾಗಿರುವ ಆಪತ್ತಿಯನ್ನು ಪರಿಹರಿಸುವ ಉಪಾಯಗಳನ್ನು ಈಗಿನಿಂದಲೇ ಯೋಚಿಸಲಿಕ್ಕೆ ನಮಗೆ ಅನುಕೂಲವಾಗುವದು; ಆದರೆ ಆ ವಸ್ತಾದಿಯು ಈಗಿನಿಂದಲೇ ಎರಡೂ ದಂಡೆಯ ಮೇಲೆ ಕೈ ಇಟ್ಟಂತೆ ವ್ಯವಹರಿಸತೊಡಗಿರುವನು. ಆತನ ಹಸ್ತಾಕ್ಷರದ ಪತ್ರಗಳು ದುರ್ಗದುರ್ಗಗಳಿಗೆ ಹೋಗದಿದ್ದರೆ, ನಮ್ಮ ಒಳಸಂಚಿನ ಪ್ರಭಾವವು ಈ ರಾಯಗಡದಮಟ್ಟಿಗೇ ಸರಿ. ಒಳ್ಳೇದು, ದೇವರು ಮಾಡಿಸಿದ್ದು ಆಗಲಿ.'' ಎಂದು ಆಲೋಚಿಸುತ್ತ ಆತನು ಸೋಯರಾಬಾಯಿಯ ಮಂದಿರಕ್ಕೆ ಹೋದನು. ಅತ್ತ ಸೋಯರಾಬಾಯಿಯು ಆತನ ಹಾದಿಯನ್ನು ನೋಡುತ್ತಲೇ ಕುಳಿತಿದ್ದಳು. ಅಣ್ಣಾಜಿಯು ಸಪ್ಪಸ್ನಮೋರೆಯಿಂದ ಹೋಗಿ, ತನಗೆ ಮಂಗಳಾರತಿಯಾದದ್ದನ್ನು ಹೇಳಲು, ಸೋಯರಾ ಬಾಯಿಯು ಕ್ರೋಧಸಂತಪ್ತಳಾದಳು. ತನ್ನ ಮಗನು ಗಂಡಸಿದ್ದು ಹೆಂಗಸಿನಹಾಗೆ ಮಾತಾಡಿದ್ದು ಆಕೆಗೆ ಸಹನವಾಗಲಿಲ್ಲ. ಆತನನ್ನು ಕಿವಿಹಿಂಡಿ ಒಡಂಬಡಿಸಲಿಕ್ಕೆ ನಾನೇ ಬೇಕೆಂದು ಹೇಳಿ, ಅಣ್ಣಾಜಿಗೆ—ಅಣ್ಣಾಜಿ, ಆ ಹುಡುಗನ ಮಾತಿನಿಂದ ನಾವು ಒಡ್ಡಿರುವ ಬಲೆಯನ್ನು ತಕ್ಕೊಳ್ಳುವದು ಯೋಗ್ಯವಲ್ಲ, ಈಗ ಐದಾರು ತಿಂಗಳಿಂದ ನಡೆಸಿರುವ ಯತ್ನವನ್ನು ಒಮ್ಮೆಲೆ ನಿರರ್ಥಕವಾಗಿ ಮಾಡುವದು ನನ್ನಿಂದಾಗದು. ಇಲ್ಲಿಯವರೆಗೆ ಸಾಗಿಬಂದದ್ದು, ಇನ್ನು ಮೇಲೆ ಹ್ಯಾಗಾದೀತೆಂಬ ಅಪನಂಬಿಕೆಯಿಂದ ಕೈಕಾಲುಗೆಡುವಂಥ ಹೆಣ್ಣುಮಗಳು ನಾನಲ್ಲ. ಹಿಡಿದ ಕೆಲಸವನ್ನು ಅರ್ಧಕ್ಕೆ ಬಿಡುವದು ನಮ್ಮ ಸ್ತ್ರೀಯರ ಸ್ವಭಾವವೇ ಅಲ್ಲವು.

ಅಣ್ಣಾಜಿ—ಬಾಯಿಸಾಹೇಬ, ತಮ್ಮ ವಿಚಾರಕ್ಕೆ ನಾನು ಹೊರಗಾದವನೆಂದು ತಿಳಿಯ ಬಾರದು. ಕ್ಷುದ್ರ ಮಾನಾಪಮಾನದ ಕಾಲೊಳಗೆ ಭಯಂಕರವಾದ ರಣಕುಂಡದಲ್ಲಿ ಸಾವಿರಾರು ಸ್ವಾಮಿನಿಷ್ಠ ಸೇವಕರ ಬಲಿದಾನವಾಗಬಾರದೆಂಬ ಇಚ್ಛೆಯಿರುವದರಿಂದ ನಾವು ಹಾಗೆ ಮಾತಾಡಿದೆನು. ರಾಜಾರಾಮ ಮಹಾರಾಜರ ಇಚ್ಛೆಯಾದರೂ ಹಾಗೆಯೇ ಇರುವದರಿಂದ ಅವರು ಮೌನವ್ರತವನ್ನು ಸ್ವೀಕರಿಸಲು ನಿಶ್ಚಯಿಸಿರುವರು .... .... ....

ಸೋಯರಾಬಾಯಿ— ಆ ಷಂಢನು ಮೌನವ್ರತವನ್ನು ಸ್ವೀಕರಿಸಲು ನಿಶ್ಚಯಿಸಿದ್ದರೆ, ನಾನು ನನ್ನ ಕರ್ತೃತ್ವಶಕ್ತಿಯಿಂದ ಅವನ ವ್ರತಭಂಗಮಾಡಿ ಅವನು ಮಾತಾಡುವಂತೆ ಮಾಡುವೆನು! ಅಣ್ಣಾಜಿ, ಪ್ರಸಂಗದಲ್ಲಿ ಅವಸಾನಘಾತಕತನದ ಕೆಲಸಮಾತ್ರ ನೀವು ಮಾಡ ಬೇಡಿರಿ. ಕೆಲಸವು ತೀರ ಹಣ್ಣಿಗೆ ಬಂದಿರುತ್ತದೆ. ದಂಡೆಯು ನಾಲ್ಕೇ ಮಾರುಗೈಯಲ್ಲಿರುವದು. ಇಂಥ ಪ್ರಸಂಗದಲ್ಲಿ ನಾನು ಹಿಂದಕ್ಕೆ ಸರಿಯಲಾರೆನು. ಜನಾರ್ದನಪಂತ ಸುಮಂತರು ಸಂಭಾಜಿಯ ಬಂದೋಬಸ್ತಿಗಾಗಿ ಪಲ್ಹಾಳಗಡದ ಕೆಳಗಿರುವರು. ಹಂಬೀರರಾವ ಸೇನಾ ಪತಿಗಳು ಕರ್ಹಾಡದ ಕಡೆಗೆ ಇರುವರು. ಅವರಿಬ್ಬರ ಕಡೆಗೆ ನೀವು ಸ್ವತಃ ಹೋಗಿ ನನ್ನ ಇಚ್ಛೆಯನ್ನು ಅವರಿಗೆ ತಿಳಿಸಿ ನಿಮ್ಮ ಚಾತುರ್ಯದಿಂದ ಅವರನ್ನು ವಶಮಾಡಿಕೊಳ್ಳಿರಿ. ಮೋರೋಪಂತಪಿಂಗಳೆ ಇವರು ಒಂದೆರಡು ದಿನಗಳಲ್ಲಿ ಇಲ್ಲಿಗೆ ಬಂದುಮುಟ್ಟಬಹುದು. ಬಾಳಾಜಿಯು ನಮ್ಮ ಇಚ್ಛೆಯಂತೆ ನಡೆಯಲು ಒಪ್ಪದಿದ್ದರೆ, ಆತನು ದುರ್ಗದಲ್ಲಿಯೇ

ಇರುವನಾದ್ದರಿಂದ ಅತ್ತಿತ್ತ ಮಿಸಿಕಾಡದಂತೆ ಆತನ ವ್ಯವಸ್ಥೆ ಮಾಡಿದರಾಯಿತು. ನೀವು ಇನ್ನು ವಿಲಂಬಮಾಡಬೇಡಿರಿ. ಎಲ್ಲ ಕೆಲಸಗಳನ್ನು ಬಡಬಡ ಮಾಡಬೇಕು. ಪಲ್ಹಾಳದುರ್ಗದ ಅಧಿಪತಿಯಾದ ಹಿರೋಜಿಫರ್ಜಂದನು ನಮ್ಮವನೇ ಇದ್ದಾನೆ. ಆತನಿಂದ ದುರ್ಗದ ಬಂದೋಬಸ್ತು ಮಾಡಿಸಿರಿ. ಸರಕಾರದ ಪ್ರಕೃತಿಯು ಬಹುಸೂಕ್ಷ್ಮವಾಗಿರುವದರಿಂದ ಯಾವಕಾಲಕ್ಕೆ ಏನಾದೀತೆಂಬದನ್ನು ಹೇಳಲಾಗುವದಿಲ್ಲ, ಈ ಪ್ರಸಂಗದಲ್ಲಿ ನಾವೆಲ್ಲರೂ ಬಹು ಜಾಗರೂಕರಾಗಿರತಕ್ಕದ್ದು. ಅಂದರೇ ಸ್ವರಾಜ್ಯದ ಸಂರಕ್ಷಣವಾದೀತು. ಮೊಗಲರು ಜಪ್ಪುಹಾಕಿಕೊಂಡು ಕುಳಿತಿದ್ದದ್ದು ನಿಮಗೆ ಗೊತ್ತಿಲ್ಲವೋ? ಹೋಗಿರಿ, ನಾನು ಹೇಳಿದ ಕೆಲಸಗಳನ್ನು ತೀವ್ರ ಮಾಡಿರಿ.

ಸೋಯರಾಬಾಯಿಯ ಈ ಉತ್ಸಾಹಜನಕ ಮಾತುಗಳು ದುರ್ದೈವದಿಂದ ಅಣ್ಣಾಜಿಯ ಮನಸ್ಸಿಗೆ ಬಂದಂತೆ ತೋರಿತು. ಆತನು ಅಪ್ಪಣೆಯಂತೆ ಉತ್ಸುಕತೆಯಿಂದ ತನ್ನ ಕಾರ್ಯದಲ್ಲಿ ತೊಡಗಿದನು. ಇತ್ತ ಸೋಯರಾಬಾಯಿಯೂ, ತನ್ನ ಕಾರ್ಯದಲ್ಲಿ ತೊಡಗಿದಳು. ಅಷ್ಟರಲ್ಲಿ ಒಬ್ಬ ಅಗಸರಾಕೆಯು ಸೋಯರಾಬಾಯಿಯ ಬಳಿಗೆ ಬಂದು ಮುಜುರೆ ಮಾಡಿ, ಮಹಾರಾಜರ ಮಗ್ಗಲಹಾಸಿಗೆಗೆ ವಿಷಲೇಪಿಸಿದ ಬಗೆಯನ್ನು ತಿಳಿಸಿ, ಆ ಮಗ್ಗಲಹಾಸಿಗೆಯನ್ನು ಯೋಗ್ಯ ರೀತಿಯಿಂದ ಸಮಯನೋಡಿ ಹಾಸುವಂತೆ ! ಒಕ್ಕಲಗಿತ್ತಿಗೆ ಸೂಚಿಸಿರುವೆನೆಂತಲೂ ಹೇಳಿದಳು! ಅದನ್ನು ಕೇಳಿ ಸೋಯರಾಬಾಯಿಗೆ ಬಹಳ ಸಮಾಧಾನವಾಯಿತು. ಆಕೆಯು ಅಗಸಗಿತ್ತಿಗೆ ಕೊಡತಕ್ಕ ಉಚಿತವನ್ನು ಕೊಟ್ಟು ಕಳಿಸಿ, ತನ್ನ ಘಾತಕ ಉಪಾಯವು ಸಫಲವಾಗುವ ಹಾದಿಯನ್ನು ನೋಡುತ್ತ ಕಾಲಹರಣ ಮಾಡಹತ್ತಿದಳು. ಇದು ಸೋಯರಾಬಾಯಿಯ ವ್ಯರ್ಥವಾಗದಂಥ ಕಡೆಯ ಉಪಾಯವಾಗಿತ್ತು! ಈ ಉಪಾಯವು ಸಫಲವಾಗಲೇಬೇಕೆಂದು ಆಕೆಯು ನಂಬಿದ್ದಳು. ತನ್ನ ಬಯಕೆಯಂತೆ ಮಹಾರಾಜರ ಅಂತವಾದಕೂಡಲೆ ರಾಜಾರಾಮನನ್ನು ಪಟ್ಟಕ್ಕೆ ಕುಳ್ಳಿರಿಸಿ, ಪರಭಾರೆ ಹಿರೋಜಿಫರ್ಜಂದನಿಂದ ಪಲ್ಹಾಳಗಡದಲ್ಲಿದ್ದ ಸಂಭಾಜಿಯನ್ನು ಕಠಿಣತರವಾದ ಕಾರಾಗೃಹದಲ್ಲಿಡಿಸಬೇಕೆಂದು ಆಕೆಯು ಮಾಡಿದ್ದಳು. ಬಾಳಾಜಿಯ ಹೊರತು ಎಲ್ಲ ಮುತ್ಸದ್ದಿಗಳು ತನ್ನ ತಂತ್ರಕ್ಕೆ ಒಳಗಾಗುವರೆಂಬ ನಂಬಿಗೆಯಿದ್ದದ್ದರಿಂದ ತನ್ನ ಕಾರ್ಯಗಳು ಅನಾಯಾಸವಾಗಿ ಸಾಧಿಸುವವೆಂದು ಆಕೆಯು ತಿಳಿದುಕೊಂಡಿದ್ದಳು. ಮಹಾರಾಜರ ಪ್ರಕೃತಿಮಾನದಲ್ಲಿ ಆಗುವ ಹೆಚ್ಚುಕಡಿಮೆಗಳನ್ನು ಕ್ಷಣಶಃ ತಿಳಿಸುವಬಗ್ಗೆ ಯೋಗ್ಯ ಜನರನ್ನೂ, ಆ ರಾಕ್ಷಸಿಯು ನಿಯಮಿಸಿದ್ದಳು. ಮಹಾರಾಜರ ಬೇನೆಯು ಕಡಿಮೆಯಾಗದೆ ದಿನದಿನಕ್ಕೆ ಹೆಚ್ಚುತ್ತಿರುವದೊಂದು ಆಕೆಯ ಸಮಾಧಾನಕ್ಕೆ ಕಾರಣವಾದ ಸಂಗತಿಯಾಗಿತ್ತು. ಅಹಹ! ನೀಚಸ್ವಾರ್ಥವೇ, ನೀನು ಯಾರ ಮನಸ್ಸನ್ನು ಯಾವ ಕಾಲಕ್ಕೆ ಕೆಡಿಸಿ ಎಂಥ ಅಧಃಪತನ ಮಾಡೀಯೆಂಬದನ್ನು ಯಾರು ಹೇಳಲು ಸಮರ್ಥರು! ಮಹಾರಾಜರ ಪ್ರತ್ಯಕ್ಷ ಅರ್ಧಾಂಗವೆನಿಸುವ ಸೋಯರಾಬಾಯಿಯು ನೀಚ–ಸ್ವಾರ್ಥ–ಶೂಲಕ್ಕೆ ಬಲಿಯಾಗಿ ಪತಿಯ ಪ್ರಾಣಹರಣಮಾಡಲು ಸಿದ್ಧಳಾದಳಲ್ಲ! ಕಡೆಗೆ ಆ ದುಷ್ಟ ಸ್ತ್ರೀಯ ದುರಾಲೋಚನೆಯು ಕೈಗೂಡಿ ಮಹಾರಾಷ್ಟ್ರಕ್ಕೆ ಅನರ್ಥಪರಂಪರೆ ಗಳೊದಗಿದ್ದು ದುರ್ದೈವವೇಸರಿ!

# ಪತಿದ್ರೋಹ!

ಫಾಲ್ಗುಣ ಪೂರ್ಣಿಮೆಯು; ಇಳಿಹೊತ್ತಿನ ಸಮಯ; ಅಂದು ಶನಿವಾರ. ರಾಯಗಡದ ಜನರ ಮನಸ್ಸುಗಳು ಅಸ್ವಸ್ಥವಾದದ್ದರಿಂದ ನಿರ್ವಾಹವಿಲ್ಲದೆ ಅವರು ತಮ್ಮ ತಮ್ಮ ನಿತ್ಯ ವ್ಯವಹಾರಗಳಲ್ಲಿ ತೊಡಗಿದ್ದರು. ಯಾರ ಜೀವಕ್ಕೂ ಸೊಗಸಿದ್ದಿಲ್ಲ. ಯಾವಾಗಲೂ ಸಂಪೂರ್ಣ ವಾಗಿ ತೆರೆದಿಡುತ್ತಿದ್ದ ರಾಯಗಡದ ಸಿಂಹದ್ವಾರವು ಇಂಥ ಮಧ್ಯಾಹ್ನದಲ್ಲಿಯೂ ಗಟ್ಟಿಮುಟ್ಟಿ ಯಾಗಿ ಇಕ್ಕಿ ಲಾಲಂಡಿಗೆ ಎಳೆದುಬಿಟ್ಟಿತ್ತು. ಲಾಯದೊಳಗಿನ ಕುದುರೆಗಳು ಮೇವು ಮುಟ್ಟದಾಗಿದ್ದವು. ನಡನಡುವೆ ಬೇಟೆಯ ನಾಯಿಗಳು ಅಮಂಗಲ ಸ್ವರದಿಂದ ಒದರುತ್ತಿದ್ದವು. ಗೂಗೆಗಳ ಘೂತ್ಕಾರಗಳು ಭಯವನ್ನುಂಟುಮಾಡುತ್ತಿದ್ದವು. ಎಲ್ಲಕಡೆಯಲ್ಲಿ ಅಪಶಕುನಗಳೇ ಅಪಶಕುನಗಳು! ಎಂದೂ ಆರದೆ ಇದ್ದ ಸರಕಾರಿಯ ಅಗ್ನಿಹೊತ್ರಿಗಳ ಅಗ್ನಿಕುಂಡದೊಳಗಿನ ಅಗ್ನಿಯು ಆರಿತು. ಎಲ್ಲ ದಿಕ್ಕುಗಳು ಮೇಘಾಚ್ಛಾದಿತವಾಗಿ ಗುಡುಗು–ಸಿಡಿಲುಗಳ ಗರ್ಜನೆಯು ಅಕಾಲದಲ್ಲಿ ಆಗತೊಡಗಿತು. ಹೀಗೆ ಒಂದಲ್ಲ ಎರಡಲ್ಲ ಹಲವು ಅಪಶಕುನಗಳು ಏಕಸಮಯಾವಚ್ಛೇದದಿಂದ ಒದಗಿರಲು, ದುರ್ಗದಜನರ ಹೃದಯಗಳು ಭಯದಿಂದ ಕಂಪಿಸತೊಡಗಿದ್ದವು. ಇಂಥ ಸಮಯದಲ್ಲಿ ಬಾಳಾಜಿಆವಜಿ ಚೀಟಣೀಸನೂ, ರಾಜವೈದ್ಯನೂ, ಜ್ಯೋತಿಷಿಯೂ ಶಿವಾಜಿ ಮಹಾರಾಜರ ಶಯನಾಗಾರದ ಕಡೆಗೆ ಸಾಗಿದ್ದರು. ಅವರ ಮುಖವು ನಿಸ್ತೇಜವಾಗಿತ್ತು. ಘೋರ ಚಿಂತಾಮಗ್ನರಾಗಿ ಅವರು ಮೌನದಿಂದ ಮಾರ್ಗಕ್ರಮಣ ಮಾಡುತ್ತಿದ್ದರು. ಅವರು ಶಯನಗೃಹಕ್ಕೆ ಹೋದಾಗ ಮಹಾರಾಜರು ಇಬ್ಬರು ಸೇವಕರಿಂದ ಸೇವೆಯನ್ನು ಸ್ವೀಕರಿಸುತ್ತಲಿದ್ದರು. ಅಂದು ಅವರ ಪ್ರಕೃತಿಯು ವಿಕೋಪಗೊಂಡಿದ್ದು, ಅವರಿಗೆ ಎಳ್ಳಿಟ್ಟರೆ ಸಿಡಿಯುವಂಥ ಜ್ವರಬಂದಿದ್ದವು. ತಾವು ಜಗದಂಬೆಯ ಎದುರಿಗೆ ವ್ಯಾಘ್ರಚರ್ಮದ ಮೇಲೆ ನಿದ್ರೆಮಾಡುವೆವೆಂದು ಸೂಚಿಸಿದ್ದರಿಂದ ಒಬ್ಬ ಸೇವಕನು ವ್ಯಾಘ್ರಚರ್ಮಹಾಸಿ ಅದರ ಮೇಲೆ ಮೆತ್ತನ್ನ ಗಾದಿಯನ್ನೂ, ಅದರಮೇಲೆ ದಾಸಿಯು ಕೊಟ್ಟ ಮಗ್ಗಲ ಹಾಸಿಗೆಯನ್ನೂ ಹಾಸಿ, ಹೊರುವದಕ್ಕಾಗಿ ಶಾಲನ್ನೂ, ಆನು ವದಕ್ಕಾಗಿ ಲೋಡು–ತೆಕ್ಕೆ–ಗಿರದೆಗಳನ್ನೂ ಯಥಾಸ್ಥಿತವಾಗಿ ಇಡುವದರಲ್ಲಿ ಮಗ್ನನಾಗಿದ್ದನು. ಇನ್ನೊಬ್ಬ ಸೇವಕನು ಮೊಣಕಾಲು ತಿಕ್ಕಿ ಅದಕ್ಕೆ ಪಟ್ಟಿಯನ್ನು ಕಟ್ಟುತ್ತಿದ್ದನು. ಅಷ್ಟರಲ್ಲಿ ಮೇಲೆ ಹೇಳಿದ ಮೂವರು ಗೃಹಸ್ಥರು ಅಲ್ಲಿಗೆ ಬಂದಿದ್ದರು. ಸೇವಕನು ಬಂದು— ''ಹಾಸಿಗೆಯು ಹಾಸಿ ಸಿದ್ಧವಾಗಿದೆ'' ಎಂದು ಹೇಳಲು, ಮಹಾರಾಜರು ಬಾಳಾಜಿಯೇ ಮೊದಲಾದವರ ಸಹಾಯದಿಂದ ಅದರ ಮೇಲೆ ಹೋಗಿ ಮಲಗಿಕೊಂಡರು. ಕುತ್ತಿಗೆಯ ತನಕ ಶಾಲು ಹೊಚ್ಚಿದ್ದರು. ಮೈಯಲ್ಲಿ ಮಿತಿಮೀರಿ ಜ್ವರವಿದ್ದರೂ, ಅವರ ಅಂತರಾತ್ಮವು ಸತ್ವಮಯವಾದದ್ದರಿಂದ ಅವರು ಥಡಥಡಿಸಿ ಮಾತಾಡತೊಡಗಿದರು. ವೈದ್ಯರು ನಾಡಿಯ ನೋಡಿ, ಔಷಧವನ್ನು ಸಿದ್ಧಮಾಡತೊಡಗಿದರು. ಜ್ಯೋತಿಷಿಗಳು ಗ್ರಹಗಣಿತದ ಕುಂಡಲಿಯ ಮನನ ಮಾಡುತ್ತಲಿದ್ದರು. ಆಗ ಮಹಾರಾಜರು ಜ್ಯೋತಿಷಿಯನ್ನು ಕುರಿತು—

ಮಹಾರಾಜರು—ಏನನ್ನುವವು ಗ್ರಹದೇವತೆಗಳು?

ಜ್ಯೋತಿಷಿ—ಶನಿಯು ವಕ್ರವಾಗಿರುವನು, ಆತನ ಶಾಂತ್ಯರ್ಥವಾಗಿ ದುರ್ಗದ ಜನವೆಲ್ಲ ಇಂದು ಉಪೋಷಣ ಮಾಡಿರುವದು. ಶ್ರೀ ಮಾರುತಿಗೆ ಎಣ್ಣೆಯಿಂದ ಅಭಿಷೇಕ ವನ್ನೂ, ಶ್ರೀ ಶಂಕರನಿಗೆ ರುದ್ರಾಭಿಷೇಕವನ್ನೂ ಮಾಡತೊಡಗಿರುವರು.

ಮಹಾರಾಜರು (ಉಪಹಾಸದ ಯುಕ್ತಿಯಿಂದ)— ಒಟ್ಟಿಗೆ ದೇವತೆಗಳಿಗೂ ಲಂಚ ಬೇಕೆನ್ನುವ ಹಾಗಾಯಿತು! ಪ್ರಾರಬ್ಧ ಹಾಗೂ ಪೂರ್ವಜನ್ಮದ ಸಂಸ್ಕಾರಗಳನ್ನು ಲಂಚದಿಂದ ತಿರುಗಿಸಿದಬಳಿಕ, ಅವರು ಮನುಷ್ಯಕೋಟೆಯಲ್ಲಿಯೇ ಸೇರಬೇಕಾಯಿತು!

ಈ ಮೇರೆಗೆ ನುಡಿಯುತ್ತಿರಲು, ವೈದ್ಯರು ಔಷಧವನ್ನು ಸಿದ್ಧಮಾಡಿ ಬಂಗಾರದ ಬಟ್ಟಲಲ್ಲಿ ಹಾಕಿಕೊಟ್ಟರು. ಅದನ್ನು ತಕ್ಕೊಂಡು ವೈದ್ಯರನ್ನು ಕುರಿತು—

ಮಹಾರಾಜರು—ವೈದ್ಯರಾಜರೇ, ಔಷಧವನ್ನು ಯಾತರಮೇಲೆ ಕೊಟ್ಟಿರಿ?

ವೈದ್ಯ—ಕೃತಾಂತ ಭೈರವ ಮಾತ್ರೆಯು ಜ್ವರ ಇಳಿಸುವ ವಿಷಯದಲ್ಲಿ ಒಳ್ಳೇ ಸಮರ್ಥವಾದದ್ದು!

ಮಹಾರಾಜರು—(ನಕ್ಕು) ಸ್ವತಃ ವೈದ್ಯರು ಆಯುಷ್ಯವನ್ನು ಹೆಚ್ಚು ಮಾಡಲಾರರು; ಆದರೆ ಅವರು ಮಾಡಿದ ಮಾತ್ರೆಗಳು ಮಾತ್ರ ಹೆಸರಿನಿಂದ ಯಮನನ್ನು ಕೂಡ ಲಕ್ಷಿಸು ವದಿಲ್ಲ; ಇದೊಳ್ಳೆಯ ವಿಲಕ್ಷಣವು! ಕೃತಾಂತ ಭೈರವವೆಂಬ ಹೆಸರು ಅತ್ಯುತ್ತಮವಾದದ್ದು.

ಈ ಮೇರೆಗೆ ವಿನೋದಪರ ಭಾಷಣಗಳು ನಡೆದಿದ್ದವು; ಆದರೆ ಅಂತರಂಗದಲ್ಲಿ ಮಹಾರಾಜರಿಗೆ ಸಮಾಧಾನವಿದ್ದಿಲ್ಲ. ಅವರು ತಳಮಳಿಸುತ್ತಿದ್ದರು. ಸ್ವಲ್ಪ ಹೊತ್ತಿನಮೇಲೆ ಅವರ ಮೈ ಬೆವರಹತ್ತಿತು. ಇದು ಜ್ವರ ಇಳಿಯುವ ಲಕ್ಷಣವೆಂದು ಹೇಳಿ ವೈದ್ಯರೂ ಸಮಾಧಾನಪಟ್ಟರು; ಆದರೆ ಮೈ ಬೆವತ ಬೆವತಂತೆ ಅದು ಉರಿಯಹತ್ತಿತು. ಆಗ ಮಹಾರಾಜರು ವೈದ್ಯರಿಗೆ—ವೈದ್ಯರೇ, ಮೈ ಬೆವತದ್ದು ಸುಲಕ್ಷಣವೆಂದು ಹೇಳಿದಿರಿ; ಆದರೆ ಮೈಗೆ ಪಂಜುಹಚ್ಚಿದ ಹಾಗಾಗಿದೆ. ತಾಳುವದು ಅಸಾಧ್ಯವು, ಎಂದು ಹಾಸಿಗೆಯ ಮೇಲೆ ಹೊರಳಾಡಹತ್ತಿದರು. ಇದನ್ನು ನೋಡಿದ ಕೂಡಲೆ ವೈದ್ಯರ ಎದೆಯು ದಸಕ್ಕೆಂದಿತು! ಅವರು ಚೀಟಣೀಸರಿಗೆ ಅವಸರದಿಂದ—ಬಾಳಾಜಿ ಪಂತ, ಘಾತವಾಯಿತು, ಬೇಗನೆ ಆ ಜೊರಣಿಯ ಕೊಡಿರಿ. ಎಂದು ಕೇಳಲು, ಅವರ ಆ ರೀತಿಯನ್ನು ನೋಡಿ ಭಯಪಟ್ಟು ಬಾಳಾಜಿಯು "ಏನಾಯಿತು? ಇಷ್ಟೇಕೆ ಗಾಬರಿ" ಎಂದು ಪ್ರಶ್ನಮಾಡಿದನು. ಅದಕ್ಕೆ ವೈದ್ಯರು—ಬಾಳಾಜೀ, ಪ್ರಾರಬ್ಧವನ್ನು ತಪ್ಪಿಸುವದು ಯಾರಿಂದಲೂ ಆಗದೆಂದು ಹೇಳಬೇಕಾಗುವದು. ನಾವೆಲ್ಲರೂ ಇಷ್ಟು ಜಾಗರೂಕರಾಗಿದ್ದರೂ ಇಂಥ ಭಯಂಕರವಾದ ವಿಷಪ್ರಯೋಗವು ಮಹಾರಾಜರಿಗೆ ಹ್ಯಾಗಾಗಿರಬಹುದು? ಈ ದುಷ್ಕೃತ್ಯವನ್ನು ಯಾರು ಮಾಡಿರಬಹುದು? ಎಂದು ಕೇಳುತ್ತ ವಿಷಕ್ಕೆ ಉಪಶಮನವಾಗುವಂಥ ಔಷಧವನ್ನು ಕೊಟ್ಟರು; ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಮಹಾರಾಜರು ಉರಿ ಉರಿ ಎಂದು ಬುಡುಬುಡು ಉರುಳಾಡ ಹತ್ತಿದರು! ಅವರ ಕೈಕಾಲುಗಳಿಗೆ ಒರಟ ಬರಹತ್ತಿದವು. ಅವರು ಕೈಕಾಲು ಜಾಡಿಸಹತ್ತಿದರು.

ಅವರು ಚಟ್ಟನೆ ಎದ್ದು ಕುಳಿತು ಬಾಳಾಜಿಯನ್ನು ಕುರಿತು—''ಚೀಟಣೀಸ, ಇದು ಗೃಹ ಭೇದವು! ಭಾಗಾದಿತನವು! ರಾಜ್ಯಲೋಭವು! ಶ್ರೀಸಮರ್ಥರಕಡೆಗೆ ಯಾರನ್ನಾದರೂ ಬೇಗನೆ ಕಳಿಸಿರಿ,'' ಅನ್ನಲು, ಬಾಳಾಜಿಯು—''ಮಹಾರಾಜ, ಸ್ವಾಮಿಗಳು ಪರಳಿಯಲ್ಲಿ ಇಲ್ಲವು. ಅವರನ್ನು ಹುಡುಕುವದಕ್ಕಾಗಿ ಮನುಷ್ಯರನ್ನು ಕಳಿಸಿರುತ್ತದೆ; ಆದರೆ ಎಲ್ಲಿ ಇರುವರೆಂಬದು ಗೊತ್ತಾಗಿರುವದಿಲ್ಲ. ಸಜ್ಜನಗಡಕ್ಕೆ ಸನದು ಕೊಡಲಿಕ್ಕೆ ಇಲ್ಲಿಂದ ಪಲ್ಲಕ್ಕಿಹೋದಾಗಿನಿಂದ ಶ್ರೀಸಮರ್ಥರ ದರ್ಶನವೇ ಇಲ್ಲೆಂದು ಸುದ್ದಿ ಬಂದಿದೆ'' ಎಂದು ಹೇಳಿದನು. ಆಗ ಮಹಾರಾಜರು ವಿಷಾದದಿಂದ— ''ಬಾಳಾಜೀ, ಇಂದಿಗೆ ನಮ್ಮ ಕಥೆಮುಗಿಯಿತು; ಮಹಾರಾಷ್ಟ್ರದ ದೈವಪರೀಕ್ಷೆಯ ಕಾಲವು ಒದಗಿತು; ಮಧ್ಯಾಹ್ನದ ಸೂರ್ಯನಿಗೆ ಖಗ್ರಾಸ ಗ್ರಹಣವಾದಂತಾಯಿತು; ಮೃತ್ಯುವು ಅಕಸ್ಮಾತ್ ನಮ್ಮನ್ನು ಮುತ್ತಿತು. ಇನ್ನುಮೇಲೆ ಎಲ್ಲ ನಿಮ್ಮನ್ನೇ ಕೂಡಿದೆ. ಸ್ವಧರ್ಮ ಹಾಗು ಸ್ವರಾಜ್ಯ ಇವುಗಳ ಪರಿಪಾಲನವನ್ನು ಯೋಗ್ಯರೀತಿ ಯಿಂದ ಮಾಡಿರಿ! ಈ ಪ್ರಸಂಗದಲ್ಲಿ ನಿಮ್ಮ ದೇಹಪಾತವಾಗುವ ಪ್ರಸಂಗ ಒದಗಿದರೂ ಹಿಂಜರಿಯಬೇಡಿರಿ. ರಾಜ್ಯಲೋಭದ ಮಾತ್ಸರ್ಯದ ವಿಷವು ನಮ್ಮ ದೇಹದಲ್ಲಿ ಸೇರ ಹತ್ತಿತು! ಇನ್ನು ನಮ್ಮದು ಮುಗಿಯಿತು! ರಾಜನಿಷ್ಠೆಯಿಂದ ಚ್ಯುತಿಹೊಂದಬೇಡಿರಿ. ಸಂಭಾಜಿ ರಾಜರು ಶೂರರಿರುವರು; ಆದರೆ ಹಟಮಾರಿಗಳು! ಅವರಿಗೆ ಸಂಶಯ ಪಿಶಾಚವು ಬಡಿದು ಕೊಳ್ಳದಂತೆ ವ್ಯವಸ್ಥೆಮಾಡಿದರೆ, ರಾಜ್ಯವು ಸುಯಂತ್ರವಾಗಿ ನಡೆಯಬಹುದು. ಇಲ್ಲದಿದ್ದರೆ ಅದು ಔರಂಗಜೇಬನ ಗಂಟಲಲ್ಲಿ ಇಳಿಯುವದು. ರಾಜಾರಾಮನನ್ನು ಜೋಕೆ; ಆಗದು, ಇನ್ನು ನಮ್ಮಿಂದ ತಡೆಯುವದಾಗದು. ಮೈಗೆ ಪಂಜು ಹಚ್ಚಿದ ಹಾಗಾಗಿದೆ, ಎಂದು ನುಡಿದು ಪುನಃ ಹಾಸಿಗೆಯ ಮೇಲೆ ಬಿದ್ದು ಹೊರಳಾಡಹತ್ತಿದರು. ಅಷ್ಟರಲ್ಲಿ ಅವರ ಬಾಯಲ್ಲಿ ರಕ್ತ ದ್ದೊಂದು ಗುಳಿಗೆಯು ಬರಲು, ಅವರು ಅಂಗಾತ ಕೈಕಾಲು ಚಲ್ಲಿ ಬಿದ್ದು– ''ಜಯಹರ ಜಯಹರ ರಾಮ ರಾಮ'' ಎಂದು ಧ್ಯಾನಮಾಡಹತ್ತಿದರು! ಕ್ಷಣಮಾತ್ರದಲ್ಲಿ ಅವರ ಅಂತರಾತ್ಮನು ಹೊರಟು ಹೋದನು! ಮಹಾರಾಷ್ಟ್ರದ ಪ್ರತಾಪರವಿಯು ಅಸ್ತಂಗತನಾದನು! ಸುತ್ತಲಿನ ಜನರ ಕಣ್ಣೊಳಗಿಂದ ಅಶ್ರುಧಾರೆಗಳು ಸುರಿಯಹತ್ತಿದವು. ಬಾಳಾಜಿಯಂಥ ಶ್ರೇಷ್ಠ ಮುತ್ಸದ್ದಿಯು ಕೂಡ ದುಃಖಿತನಾಗಿ ಮುಂದುಗಾಣದೆ ಕುಳಿತುಕೊಂಡನು.

ಹೀಗೆ ಮಹಾರಾಷ್ಟ್ರ ಭೂಪತಿಯ ಪ್ರಾಣೋತ್ಕ್ರಮಣವಾದ ಸ್ವಲ್ಪ ಹೊತ್ತಿನಲ್ಲಿ ಆ ಮೂವರು ತಮ್ಮೊಳಗೆ ಏನೋ ಆಲೋಚಿಸಿದರು. ಆ ಶಯನ ಗೃಹಕ್ಕೆ ಬಿಚ್ಚುಗತ್ತಿಯ ಕಾವಲು ಇಡಲ್ಪಟ್ಟಿತು. ಚೀಟಣೀಸನು ಅಲ್ಲಿಂದ ಹೊರಬಿದ್ದನು. ವೈದ್ಯರೂ–ಜ್ಯೋತಿಷಿಯೂ ಶವದ ಬಳಿಯಲ್ಲಿ ಕುಳಿತುಕೊಂಡರು. ಬಾಳಾಜಿಯು ನೆಟ್ಟಗೆ ಪುತಳಾಬಾಯಿಯವರ ಮಂದಿರಕ್ಕೆ ಹೋದನು. ಆ ಸಾಧ್ವಿಯು ಶುಭ್ರವಸ್ತ್ರಪರಿಧಾನಮಾಡಿ ಶಂಕರನನ್ನು ಆರಾಧಿಸುತ್ತ ಕುಳಿತಿದ್ದಳು. ಆಕೆಯು ಬಾಳಾಜಿಗೆ ಕುಳಿತುಕೊಳ್ಳಲು ಸನ್ನೆಮಾಡಲು, ಆತನು ಕುಳಿತುಕೊಂಡನು. ಪುತಳಾಬಾಯಿಯವರು ಶಿವಪೂಜೆಯನ್ನು ಮುಗಿಸಿ ಬಾಳಾಜಿಯನ್ನು ಕುರಿತು— ''ಚೀಟಣೀಸ, ಇದೇನು? ಅಕಾಲದಲ್ಲಿ ಅಕಸ್ಮಾತ್ತಾಗಿ ಬಂದ್ದದು? ನಿಮ್ಮ ಮುಖಲಕ್ಷಣದಿಂದ

ಏನೋ ಅನರ್ಥವು ಒದಗಿದಂತೆ ನನಗೆ ಭಾಸವಾಗುತ್ತದೆ'' ಅನ್ನಲು, ಬಾಳಾಜಿಯು– ಬಾಯಿಸಾಹೇಬ, ಏನು ಹೇಳಲಿ? ಅಮಂಗಲವಾರ್ತೆಯನ್ನು ಹೇಳಲಿಕ್ಕೆ ನನ್ನ ನಾಲಿಗೆಯು ಏಳಲೊಲ್ಲದು. ಆದರೆ ಅತ್ಯಂತ ಕಠಿಣಹೃದಯನಾಗಿ ಅದನ್ನು ಹೇಳಲೇಬೇಕಾಗಿರುವದು, ಅನ್ನಲು ಪುತಳಾಬಾಯಿಯು– ''ಚೀಟಣೀಸ, ವ್ಯಸನಪಡಬೇಡಿರಿ; ನಿಮ್ಮ ಮಾತಿನಿಂದ ಒದಗಿದ ಅನರ್ಥದ ಕಲ್ಪನೆಯು ನನಗೆ ಆಗಿದೆ. ಇತ್ತಿತ್ತಲಾಗಿ ನನಗೆ ದುಷ್ಟ ಸ್ವಪ್ನಗಳು ಬೀಳ ತೊಡಗಿವೆ. ವೈದ್ಯರ ಮನೆಯೊಳಗಿಂದ ವಿಷವುಕಳವಾಗಿ ಹೋದಂದಿನಿಂದಲೇ ನನ್ನ ಮನಸ್ಸು ಶಂಕಿತವಾಗಿತ್ತು'' ಎಂದು ನುಡಿಯುತ್ತಿರಲು, ಚೀಟಣೀಸನು ನಡುವೆ ಬಾಯಿಹಾಕಿ— ''ಬಾಯಿಸಾಹೇಬ, ನಾವು ಎಷ್ಟು ಜಾಗರೂಕ'ರಾಗಿದ್ದರೂ ಆ ಕೆಟ್ಟ ವಿಷವು ನಮ್ಮ ಪ್ರಭುವಿನ ಪ್ರಾಣಹರಣ ಮಾಡಿತು, ಅಖಿಲ ಮಹಾರಾಷ್ಟ್ರವು ಸೂತಕದಲ್ಲಿ ಮುಣುಗಿತು!'' ಎಂದು ಹೇಳಿದನು. ಅದಕ್ಕೆ ಪುತಳಾಬಾಯಿಯು— ''ಚೀಟಣೀಸ, ಇದು ರಾಜ್ಯಲೋಭದ ಪರಿಣಾಮವು. ಭಾಗಾದಿತನದ ಮಾತ್ಸರ್ಯವು ಕಡೆಗೆ ಸರ್ವಸ್ವವನ್ನು ಮಣ್ಣುಗೂಡಿಸಿ ಬಿಟ್ಟಿತು. ಆಗಲಿ, ಇನ್ನು ಉಪಾಯವೇನಿದೆ? ಆದದ್ದು ತಿರುಗಿ ಬರುವದಿಲ್ಲವಷ್ಟೆ? ನಾನಂತು ಸಿದ್ಧಳಾಗಿರುವೆನು!''

ಬಾಳಾಜಿ—(ಆಶ್ಚರ್ಯಯುಕ್ತವಿನಯದಿಂದ) ಯಾತಕ್ಕೆ ಸರಕಾರ? ಪುತಳಾಬಾಯಿ— ಚೀಟಣೀಸ, ಸಹಗಮನಕ್ಕೆ! ನನಗೆ ಜನ್ಮಜನ್ಮಾಂತರದಲ್ಲಿ ಮಹಾರಾಜರ ಸಂಗತಿಯು ಪ್ರಾಪ್ತವಾಗಬೇಕೆಂದು, ನಾನು ಸರಕಾರದ ಸವಾರಿಯೊಡನೆ ಸತಿಹೋಗಿ ಪಾತಿವೃತ್ಯದ ಉಜ್ವಲ ಧರ್ಮವನ್ನು ಪಾಲಿಸಿ ಕೃತಾರ್ಥಳಾಗುವೆನು. ಹೋಗಿರಿ, ನೀವು ಇಲ್ಲಿ ಕ್ಷಣವಾದರೂ ನಿಂತು ಕೊಳ್ಳಬೇಡಿರಿ. ರಾಜಕಾರಣಗಳು ಸೂಕ್ಷ್ಮವಿರುವದರಿಂದ ಸಾಮ್ರಾಜ್ಯರಕ್ಷಣದ ನಿಮ್ಮಕರ್ತವ್ಯ ವನ್ನು ಮನಃಪೂರ್ವಕವಾಗಿ ಜರುಗಿಸಿರಿ. ನನ್ನ ಚಿಂತೆಯು ನಿಮಗೆ ಬೇಡ. ನಾನು ಭೂಮಿ ಯಲ್ಲಿ ಇದ್ದಿಲ್ಲವೆಂತಲೇ ತಿಳಿಯಿರಿ. ನನ್ನ ಪಶ್ಚಾತ್ ನನ್ನ ವಿಷಯವಾಗಿ ಅಳುವವರು ಯಾರೂ ಇಲ್ಲ; ಅದರಂತೆ ಈ ಕಾಲದಲ್ಲಿ ನನ್ನನ್ನು ಅಳಿಸುವಂಥ ಮೋಹಕ ವಸ್ತುಗಳೂ ಈ ಜಗತ್ತಿನಲ್ಲಿ ನನ್ನ ಪಾಲಿಗೆ ಇರುವದಿಲ್ಲ. ಮಹಾರಾಜರ ಆತ್ಮದೊಡನೆ ನನ್ನ ಆತ್ಮತೇಜವು ಹೊರಟು ಹೋಗಿರುವದರಿಂದ, ಜೀನ್ಮೃತಳಂತೆ ನಾನು ಪತಿಯ ಶವದ ಚಿತಾರೋಹಣದ ಮಾರ್ಗವನ್ನು ನೋಡುತ್ತ ನನ್ನ ದಾನ–ಧರ್ಮದ ಕೆಲಸಗಳನ್ನು ತೀರಿಸಿಕೊಳ್ಳುವೆನು. ಸುವಾಸಿನಿಯರನ್ನು ಕರೆಸುವ ವ್ಯವಸ್ಥೆ ಮಾಡಿರಿ. ನನ್ನ ಸರ್ವಸ್ವವೂ ಇಂದು ನನ್ನ ಕೈಮುಟ್ಟಿ ದಾನವಾಗಿ ಹೋಗತಕ್ಕದ್ದು! ಸುವಾಸಿನಿಯರು ಸೌಭಾಗ್ಯ ದ್ರವ್ಯಗಳ ಲೂಟಿಮಾಡಲಿ! ಅವರು ದಾನಗ್ರಹಣದಿಂದ ಸಂತುಷ್ಟರಾಗಿ ನನ್ನನ್ನು ಆಶೀರ್ವದಿಸಲಿ; ಹೂ ಏಳಿರಿಲ್ಲಿಂದ. ನೀವು ವಿಲಂಬಮಾಡುವದ ರಿಂದಾಗುವ ಅನರ್ಥದಕಲ್ಪನೆಯು ನನಗಿರುವದು'' ಎಂದು ನುಡಿಯುವ ಆ ಮಹಾಸಾಧ್ವಿಯ ಸತ್ವಯುಕ್ತ ಭಾಷಣವನ್ನು ಕೇಳಿ ಬಾಳಾಜಿಯ ಮೋಹಪಟಲವು ದೂರ ವಾಗಿ ಆತನ ಕರ್ತವ್ಯಬುದ್ಧಿಯು ಜಾಗ್ರತವಾಯಿತು! ಆತನು ಕೈಜೋಡಿಸಿ ಆ ಸತಿಮಣಿಗೆ— ಮಾತೃಶ್ರೀ, ನೀನು ಶಿವಪ್ರಭುವಿನ ಧರ್ಮಪತ್ನಿಯಾದದ್ದರಿಂದ ನನ್ನ ಮಾತೃಶ್ರೀಯಂತು

ಸರಿಯೇ; ಆದರೆ ಆರ್ಯಧರ್ಮದ ಉಜ್ವಲತೆಯ ಶ್ರೇಷ್ಠ ಲಾಂಛನವಾದ ಸತಿಧರ್ಮವನ್ನು ಪಾಲಿಸುವ ಪವಿತ್ರಮೂರ್ತಿಯು ನೀನು, ಬರಿಯ ಮಹಾರಾಷ್ಟ್ರಕ್ಕಷ್ಟೇ ಅಲ್ಲ, ಇಡಿಯ ಭರತ ಭೂಮಿಗೂ ಮಾತೃಶ್ರೀಯಾಗಿರುತ್ತೀ! ನಿನ್ನ ದರ್ಶನ ಮಾತ್ರದಿಂದ ಈ ಕ್ಷುದ್ರ ಬಾಳಾಜಿಯ ಮೋಹಪಟಲವು ದೂರವಾಯಿತು, ನಮ್ಮ ಶಿವಪ್ರಭುವಿನ ಉದಾತ್ತತೆಯು, ಈ ದಿವ್ಯ ಮಾತೃಶ್ರೀಯ ರೂಪದಿಂದ ಅವತರಿಸಿದಂತೆ ನನಗೆ ತೋರಿತು; ಎಂದು ನುಡಿದು ವಿನಯ ದಿಂದ, ನಮಿಸಲು, ಪುತಳಾಬಾಯಿಯು ನಗುತ್ತ—ಬಾಳಾಜೀ, ನನ್ನ ಕರ್ತವ್ಯಕ್ಕಿಂತ ಹೆಚ್ಚಿನ ಕೆಲಸವನ್ನೇನು ನಾನು ಮಾತಾಡುವದಿಲ್ಲ. ಮಹಾರಾಜರಿಂದ ಈ ಪಾಮರಳಿಗಾದ ಲಾಭವು ಸಾಮಾನ್ಯವಾದದ್ದಲ್ಲ. ಸದ್ಗುಣಗಳ ಖನಿಯನ್ನಾಶ್ರಯಿಸಿದ್ದರಿಂದಲೇ ನನಗೆ ಇಂಥ ನಿಸ್ವಾರ್ಥ ಬುದ್ಧಿಯು ಉತ್ಪನ್ನವಾಗಿರುವದು. ನನಗೆ ಸಂತಾನವಿಲ್ಲ. ಪಾತಿವ್ರತ್ಯಭಾಂಡಾರವೇ ನನ್ನ ಚಿರಸ್ಥಾಯಿಯಾದ ಸಂತಾನವಾಗಿರುವದು! ನನಗೆ ದುಃಖವಾಗಲಿಕ್ಕೆ ಲೇಶವೂ ಆಸ್ಪದವಿಲ್ಲ, ಸರಕಾರಸ್ವಾರಿಯ ನಿಧನದಿಂದ ನಾನು ಎಂದೂ ಆಕ್ರೋಶಮಾಡುತ್ತ ಕುಳಿತುಕೊಳ್ಳಲಾರೆನು. ನಾನು ಸ್ವಾನಂದಸಾಮ್ರಾಜ್ಯದಲ್ಲಿ ಪ್ರವೇಶಿಸಲು ಸಿದ್ಧಳಾಗಿರುವೆನು, ಎಂದು ಹೇಳಲು, ಚೀಟಣೀಸನು ಎರಡನೆಯ ಮಾತಾಡದೆ ಪುತಳಾಬಾಯಿಯವರನ್ನು ವಿನಯದಿಂದ ಪುನಃ ವಂದಿಸಿ, ಅಲ್ಲಿಂದ ಸೋಯರಾಬಾಯಿಯವರ ಮಂದಿರಕ್ಕೆ ಹೋದನು.

ಚೀಟಣೀಸನು ಸೋಯರಾಬಾಯಿಯ ಬಳಿಗೆ ಹೋಗಿ ವಂದಿಸಿ ನಿಂತುಕೊಳ್ಳಲು ಆತನ ಬಾಡಿದ ಮೋರೆಯನ್ನೂ, ಒಣಗಿದ ತುಟಿಗಳನ್ನೂ, ಅಶ್ರುಪೂರ್ಣ ನೇತ್ರಗಳನ್ನೂ ನೋಡಿ, ಸೋಯರಾಬಾಯಿಯ ಹೃದಯದಲ್ಲಿ ಆನಂದದ ಉಕ್ಕುಗಳು ಬರತೊಡಗಿದವು. ತಾನು ತನ್ನ ಕಾರ್ಯದಲ್ಲಿ ಪೂರ್ಣಯಶಸ್ವಿಯಾದೆನೆಂಬ ನಂಬಿಗೆಯು ಆಕೆಯಲ್ಲಿ ಉತ್ಪನ್ನವಾಗಹತ್ತಿತು. ಆದರೂ ಬಾಳಾಜಿಯೇ ಮೊದಲಾದ ಮುತ್ಸದ್ದಿಗಳ ಮುಂದೆ ತನ್ನ ನೀಚಕೃತ್ಯವನ್ನು ಪ್ರಕಟ ಮಾಡುವದರಿಂದ ಮುಂದಿನ ಕಾರ್ಯಕ್ಕೆ ಬಾಧೆ ಬಂದೀತೆಂದು ತಿಳಿದು, ಅಳುವ ಮೋರೆ ಯಿಂದ ಆಕೆಯು ಚೀಟಣೀಸನನ್ನು ಕುರಿತು—

ಸೋಯರಾಬಾಯಿ—ಯಾಕೆ ಚೀಟಣೀಸ, ಸುಮ್ಮನೆ ಯಾಕೆ ಕುಳಿತಿರಿ? ನಿಮ್ಮ ಮೋರೆಯು ಇಳಿದ ಹಾಗೆ ಯಾಕೆ ಕಾಣುವದು ಸರಕಾರಸ್ವಾರಿಯ ಪ್ರಕೃತಿಗೆ ಗುಣವಾಗುತ್ತಲಿದೆ ಯಷ್ಟೆ? ಏನಿದ್ದದ್ದನ್ನು ಹೇಳಿರಿ.

ಬಾಳಾಜಿ— (ದುಃಖದಿಂದ ನಿಟ್ಟುಸಿರುಬಿಟ್ಟು) ಸರಕಾರ, ಹೇಳಬಾರದ ದುಃಖವಾರ್ತೆ ಯನ್ನು ಹೇಳುವದು ನನ್ನ ಪಾಲಿಗೆ ಬಂದಿದೆ! ಅದನ್ನು ಎಷ್ಟು ಮುಚ್ಚಿಟ್ಟರೂ ಮುಚ್ಚುವ ಹಾಗಿಲ್ಲ! ಮಹಾರಾಷ್ಟ್ರರಾಜ್ಯದ ವೃದ್ಧಿಯನ್ನು ಹ್ಯಾಗೆಮಾಡಬೇಕೆಂದು ಆಲೋಚಿಸುತ್ತ ಕುಳಿತುಕೊಳ್ಳತಕ್ಕ ಸ್ಥಳದಲ್ಲಿ, ಈಗ ಬೇರೆ ಆಲೋಚನೆಗಳನ್ನು ಮಾಡುವ ಪ್ರಸಂಗ ಬಂದಿತು!

ಸೋಯರಾಬಾಯಿ—ಏನು? ಸರಕಾರದ ವಿಷಯದ ಅಮಂಗಲ ವಾರ್ತೆಯೇ? ಅಯ್ಯೋ ದುರ್ದೈವವೇ? ಬಾಳಾಜೀ, ನಾನು ದುಃಖವಾರ್ತೆಯನ್ನು ಕೇಳಲಾರೆನು. ನನ್ನ ಕಣ್ಣುಗಳು ಕತ್ತಲುಗೂಡಿಸುತ್ತವೆ; ನಾನು ಕುಳಿತುಕೊಳ್ಳಲಾರೆನು!

ಈ ಮೇರೆಗೆ ನುಡಿದು ಸೋಯರಾಬಾಯಿಯು ರಂಬಾಟಮಾಡಿ ಅಳಹತ್ತಿದಳು. ಈ ಜಗತ್ತಿನಲ್ಲಿ ಡಾಂಭಿಕತನಕ್ಕೆ ರಂಗು ಬಹಳ; ಸುಳ್ಳಿಗೆ ಸವಿಬಹಳ. ಪತಿಭಕ್ತಿಪರಾಯಣಳಾದ ಪುತಳಾಬಾಯಿಯು ಕಣ್ಣೀರುಹಾಕಲಿಲ್ಲ, ದುಃಖೋದ್ಗಾರಗಳನ್ನು ವ್ಯಕ್ತಮಾಡಲಿಲ್ಲ; ಆ ಸಾಧ್ವಿಯು ತನಗಾದ ದುಃಖವನ್ನು ತನ್ನ ಸತ್ವಾತಿಶಯದಿಂದ ನುಂಗಿಕೊಂಡಳು; ಆದರೆ ಪತಿಯ ಪ್ರಾಣ ಹರಣ ಮಾಡಿದ ದುಷ್ಟ ಸೋಯರಾಬಾಯಿಯು ಇಲ್ಲದ ದುಃಖವನ್ನು ಹೊರಗೆಡವಿ ಡೋಕಾರಿತನದಿಂದ ದನಿತೆಗೆದು ಅಳಹತ್ತಿದಳು! ಆಕೆಯು ಮತ್ತೆ ಬಾಳಾಜಿಯನ್ನು ಕುರಿತು—

ಸೋಯರಾಬಾಯಿ–ಬಾಳಾಜೀ, ಯಾರಮನಸ್ಸಿನಲ್ಲಿಯೂ ಹೀಗಾದೀತೆಂಬ ಕಲ್ಪನೆಯಾಗದಿರುವಾಗ, ಅಕಸ್ಮಾತ್ತಾಗಿ ಈ ಅನರ್ಥವು ಹ್ಯಾಗೆ ಒದಗಿತು?

ಬಾಳಾಜಿ—ಬಾಯಿಸಾಹೇಬ, ಹೀಗೆ ಎಷ್ಟೋ ಸಂಗತಿಗಳು ಅಕಸ್ಮಾತ್ತಾಗಿ ಒದಗುತ್ತಿರುತ್ತವೆ. ವೈದ್ಯರ ಮನೆಯೊಳಗಿಂದ ಅಕಸ್ಮಾತ್ತಾಗಿ ವಿಷದ ಕಳವಾಗಲಿಲ್ಲವೆ?

ಬಾಳಾಜಿಯ ಈ ಮರ್ಮಕ್ಕೆ ಹತ್ತುವ ಮಾತುಗಳನ್ನು ಕೇಳಿ ಸೋಯರಾಬಾಯಿಯ ಮನಸ್ಸಿಗೆ ಬರೆಕೊಟ್ಟಂತಾಯಿತು! ಆಕೆಯು ಸ್ವಲ್ಪ ಬೆದರಿದರೂ ಕೂಡಲೇ ಜಾಗರೂಕಳಾಗಿ ಬಾಳಾಜಿಗೆ—ಹೌದು, ಬಾಳಾಜೀ, ನಿಮ್ಮ ಮಾತು ವಾಸ್ತವವು. ಇಂಥ ಸಂಗತಿಗಳು ಅಕಸ್ಮಾತ್ತಾಗಿ ಈಶ್ವರೀ ಸಂಕೇತದಿಂದ ಒದಗುತ್ತಿರುತ್ತವೆ; ಉಪಾಯವಿಲ್ಲ. ರಾಜಾರಾಮನಿಗೆ ಈ ಸುದ್ದಿಯು ಗೊತ್ತಾಗಿದೆಯೊ? ಗೊತ್ತಾಗಿರಲಿಕ್ಕಿಲ್ಲ, ಹ್ಯಾಗೆಗೊತ್ತಾಗಬೇಕು? ಹೋಗಿರಿ, ಬಾಳಾಜೀ, ನೀವೇ ಹೋಗಿ ಆತನಿಗೆ ಈ ದುಷ್ಟವಾರ್ತೆಯನ್ನು ತಿಳಿಸಿ ಸಮಾಧಾನ ಹೇಳಿರಿ.

ಈ ಮೇರೆಗೆ ಸೋಯರಾಬಾಯಿಯು ಹೇಳಲು, ಬಾಳಾಜಿಯು ರಾಜಾರಾಮನ ಬಳಿಗೆ ಹೋದನು. ರಾಜಾರಾಮನ ದರ್ಶನವಾದ ಕೂಡಲೆ ಬಾಳಾಜಿಯ ದುಃಖವು ಒತ್ತರಿಸಿತು. ಇಬ್ಬರು ರಾಣಿಯರ ಮನೆಯಲ್ಲಿ ತಡೆದು ನಿಲ್ಲಿಸಿದ್ದ ಆತನ ಕಣ್ಣೀರುಗಳು ಒಮ್ಮೆಲೆ ಹೊರಸೂಸ ಹತ್ತಿದವು. ಆತನು ಕಣ್ಣೀರು ಸುರಿಸುತ್ತ ರಾಜಾರಾಮನಿಗೆ—ಮಹಾರಾಜ, ನಿಮ್ಮ ಮೇಲೆ ಮುಗಿಲು ಕಡಕೊಂಡು ಬಿದ್ದಂತಾಯಿತು! ಮಹಾರಾಜರು ಅಕಸ್ಮಾತ್ತಾಗಿ ನಮ್ಮನ್ನು ಬಿಟ್ಟು ಹೋದದ್ದರಿಂದ ನಾವೆಲ್ಲರೂ ಪರದೇಶಿಗಳಾದೆವು. ಎಂದು ನುಡಿಯುತ್ತಿರಲು, ಆ ಸ್ವಾಮಿಭಕ್ತನ ಕಂಠಬಿಗಿದು ಮಾತುಗಳು ಹೊರಡದಾದವು; ಆತನು ಕಣ್ಣೀರು ಸುರಿಸುತ್ತ ಸುಮ್ಮನೆ ಕುಳಿತುಕೊಂಡನು. ಈ ವರ್ತಮಾನವನ್ನು ಕೇಳಿ ರಾಜಾರಾಮನು ಮುಂದುಗಾಣದೆ ಸುಮ್ಮನೆ ಕುಳಿತುಕೊಂಡನು. ಪಿತೃವಿಯೋಗದಿಂದ ಆತನಿಗೆ ಪರಮಾವಧಿ ವ್ಯಸನವಾಯಿತು; ಆದರೂ ಆ ಶಿವರಾಯನ ಪುತ್ರನು ದುಃಖವನ್ನು ನುಂಗಿಕೊಂಡು ಗಾಂಭೀರ್ಯದಿಂದ ಬಾಳಾಜಿಗೆ—ಚಿಟಣೀಸ, ಇನ್ನು ಶೋಕಮಾಡಿದರೆ ಆಗುವದೇನು? ಏಳಿರಿ, ಸಂಭಾಜಿಮಹಾರಾಜರನ್ನು ಬೇಗನೆ ಪಲ್ಹಾಳಗಡದಿಂದ ಕರೆಸಿ ಮುಂದಿನ ಕಾರ್ಯಗಳನ್ನು ಸಾಗಿಸಿರಿ. ಇನ್ನು ಹೋದ ಮಹಾರಾಜರು ತಿರುಗಿ ಬರುವರೆಯೇ? ಎಂದು ಹೇಳಿ, ಆ ಕೂಡಲೆ ಮಂದಿರದಿಂದ ಹೊರ ಹೊರಟು ಬಾಳಾಜಿಯೊಡನೆ ತಂದೆಯ ಶಯನಾಗಾರದ ಕಡೆಗೆ ನಡೆದನು.

# ಮುತ್ಸದ್ದಿಗಳ ಅರೆದಾಟ!

ಬಾಳಾಜಿಯು ರಾಜಾರಾಮನಲ್ಲಿಗೆ ಹೋದಕೂಡಲೆ ಇತ್ತ ಸೋಯರಾಬಾಯಿಯು ರಾಜ್ಯಾಧಿಕಾರವು ತನ್ನ ಕೈಯಲ್ಲಿ ಬಂತೆಂದು ತಿಳಿದು ರಾಯಗಡದ ಬಂದೋಬಸ್ತಿನ ವ್ಯವಸ್ಥೆಯನ್ನು ಮಾಡತೊಡಗಿದಳು. ಮಹಾರಾಜರ ಮಗ್ಗಲಹಾಸಿಗೆಗೆ ವಿಷವನ್ನು ಹಚ್ಚಿದ ಅಗಸರಾಕೆಯನ್ನು ಮೊದಲು ಗೊತ್ತಿಗೆ ಹಚ್ಚಿಸಿ, ಪ್ರಸಂಗವಶಾತ್ ಸಾಕ್ಷಿಗೆ ಕಾರಣವಾಗದಂತೆ ಮಾಡಿದಳು. ಇತ್ತ ಬಾಳಾಜಿಯು ರಾಜಾರಾಮನೇ ಮೊದಲಾದವರೊಡನೆ ಮಹಾರಾಜರ ಶವದ ಬಳಿಯಲ್ಲಿ ಕುಳಿತು ಕಣ್ಣೀರು ಸುರಿಸುತ್ತಲಿದ್ದನು. ಅಷ್ಟರಲ್ಲಿ ಸೋಯರಾಬಾಯಿಯ ಕಡೆಯಿಂದ ಒಬ್ಬ ಸೇವಕನು ಬಾಳಾಜಿಯನ್ನು ಕರೆಯಬರಲು, ಆತನು ಬಹುಕಷ್ಟದಿಂದ ರಾಣಿಯವರ ಬಳಿಗೆ ಹೋದನು. ಆಗ ಸೋಯರಾರಾಣಿಯು ಒಬ್ಬಳೇ ಆಲೋಚಿಸುತ್ತ ಕುಳಿತಿದ್ದಳು. ಆಕೆಯು ಚಾಂದೇರಿಯ ಬಿಳಿಯ ಜರದ ಪತ್ತಲವನ್ನುಟ್ಟುಕೊಂಡು ಕೈಯಲ್ಲಿ ಬಿಚ್ಚುಗತ್ತಿಯನ್ನು ಹಿಡಿದು ಕಾಲಮೇಲೆ ಕಾಲುಹಾಕಿಕೊಂಡು ಮಂಚದ ಮೇಲೆ ಕುಳಿತಿದ್ದಳು. ಬಾಳಾಜಿಯು ಹೋಗಿ ಆಕೆಯ ಎದುರಿನಲ್ಲಿ ಕೈಜೋಡಿಸಿ ನಿಂತುಕೊಳ್ಳಲು, ಆಕೆಯು ಎವೆಯಿಕ್ಕದ ತೀಕ್ಷ್ಣದೃಷ್ಟಿಯಿಂದ ಆತನನ್ನು ನೋಡುತ್ತ ನಿರ್ಧಾರದ ಸ್ವರದಿಂದ—

ಸೋಯರಾಬಾಯಿ—ಬಾಳಾಜಿ, ದುರ್ಗದ ಬಂದೋಬಸ್ತಿನ ವ್ಯವಸ್ಥೆಯನ್ನು ನನ್ನ ಕೈಯಲ್ಲಿ ತಕ್ಕೊಂಡಿರುತ್ತೇನೆ. ದುರ್ಗದ ಮೇಲೆ ನಡೆದಿರುವ ಸಂಗತಿಯನ್ನು ಸದ್ಯದಮಟ್ಟಿಗಾದರೂ ಸಂಭಾಜಿಗೆ ಎಷ್ಟುಮಾತ್ರವೂ ತಿಳಿಸತಕ್ಕದ್ದಲ್ಲ. ಆತನನ್ನು ಅತ್ತಿತ್ತ ಮಿಸಿಕಾಡದಂತೆ ನೋಡಿಕೊಳ್ಳುವದಕ್ಕಾಗಿ ಜನಾರ್ದನಪಂತ ಸುಮಂತನಿಗೂ, ಸೇನಾಪತಿ ಹಂಬೀರರಾಯನಿಗೂ ಪತ್ರಗಳನ್ನು ಬರೆಯಿರಿ........

ಬಾಳಾಜಿ—(ನಡುವೇ ಬಾಯಿಹಾಕಿ) ಪತ್ರಗಳನ್ನು ಯಾರ ಸಹಿಮೊಹರುಗಳಿಂದ ಬರಿಯಲಿ?

ಸೋಯರಾಬಾಯಿ—(ಸ್ಪಷ್ಟ ಧ್ವನಿಯಿಂದ) ಯಾರದೆಂದರೆ! ನಿಮ್ಮ ಸಹಿಯಿಂದ, ರಾಜಾರಾಮನ ಮೊಹರಿನಿಂದ!

ಚೀಟಣೀಸ—(ಸರಳತನದಿಂದ) ಅವರ ಹೆಸರಿನಿಂದ ಡಂಗುರಸಾರಿದ ಹೊರತು ನನಗೆ ಹಾಗೆ ಮಾಡಲಿಕ್ಕೆ ಬರುವದಿಲ್ಲ.

ಸೋಯರಾಬಾಯಿ—(ಕಣ್ಣು ಕೆಕ್ಕರಿಸಿ) ಒಟ್ಟಿಗೆ ನಮ್ಮ ರಾಜಾರಾಮನು ಸಿಂಹಾಸನ ಮೇರುವದು ನಿಮ್ಮ ಮನಸ್ಸಿನಲ್ಲಿರುವದಿಲ್ಲವೆಂದಹಾಗಾಯಿತು.

ಚೀಟಣೀಸ—ನನ್ನ ಮಾತಿನ ಅರ್ಥವು ಹಾಗಾಗುತ್ತದೆಂದು ನನಗೇನು ತೋರುವದಿಲ್ಲ.

ಸೋಯರಾಬಾಯಿ—ಹಾಗಾದರೆ ಮುಂದೆ ಮಾಡುವದೇನು? ಸಂಭಾಜಿಯನ್ನು ಕರಕೊಂಡು ಬಂದ ಹೊರತು ಪ್ರೇತಸಂಸ್ಕಾರಕ್ಕೆ ಮಾರ್ಗವೆಲ್ಲಿರುವದು?

ಚೀಟಣೀಸ—ಅದೆಲ್ಲ ತಮ್ಮ ಇಚ್ಛೆಯನ್ನವಲಂಬಿಸಿರುವದು.

ಸೋಯರಾಬಾಯಿ—ನನ್ನ ಇಚ್ಛೆಯ ನ್ನವಲಂಬಿಸಿರುವದೆಂದು ನೀವು ಅನ್ನುತ್ತಿದ್ದರೆ, ಈಗ ಮೊದಲು ನಾನು ಹೇಳಿದಂತೆ ಪತ್ರಗಳನ್ನು ಬರೆದು ಈ ಕೂಡಲೆ ಎಲ್ಲ ವ್ಯವಸ್ಥೆಯನ್ನು ಮಾಡಿರಿ. ಅಣ್ಣಾಜಿದತ್ತೋ, ಮೋರೋಪಂತ ಪೇಶವೆ ಇವರಿಗೆ ನಾನು ಈ ಮೊದಲೆ ಪತ್ರ ಬರೆದು ಕರೆಕಳುಹಿಸಿರುತ್ತೇನೆ. ಅವರು ಇಂದೆ ನಾಳೆ ಇಷ್ಟರಲ್ಲಿ ಬರಬಹುದು. ರಾಮಚಂದ್ರ ಪಂತ ಅಮಾತ್ಯರೂ ಇಷ್ಟುಹೊತ್ತಿಗೆ ಹಾದಿಯ ನಡೆಯುತ್ತಿರಲೇಬೇಕು.

ಚೀಟಣೀಸ—ಈ ಮೂವರು ಮುಖ್ಯ ಮನುಷ್ಯರನ್ನು ತಾವು, ಮಹಾರಾಜರು ಜೀವದಿಂದಿರುವಾಗಲೇ ಹೊರಗಿನಿಂದ ಹೊರಗೇ ಪತ್ರಬರೆದು ಕರೆಸಿಕೊಂಡಿರುವದರಿಂದ, ಕೈಲಾಸವಾಸಿ ಮಹಾರಾಜರವರ ರಾಜ್ಯದಾಡಳಿತದ ಶಿಸ್ತನ್ನು ಮುರಿದಹಾಗಾಗಿರುವದು. ಇದು ಅಪರಾಧವಾಯಿತೆಂದು ಈಗ ರಾಜ್ಯಾಧಿಕಾರಿಗಳಾಗಿರುವ ತಮ್ಮ ಮುಂದೆ ನನ್ನಂಥ ನೌಕರನು ಹ್ಯಾಗೆ ಹೇಳುವ ಧೈರ್ಯ ಮಾಡಬೇಕು?

ಸೋಯರಾಬಾಯಿ— ಇಂಥ ಪ್ರಸಂಗದಲ್ಲಿ ನಿಮ್ಮಂಥ ಕರ್ತೃತ್ವಶಾಲಿಗಳ ಸಹಾಯ ವನ್ನು ಪಡೆಯದಿದ್ದರೆ ಮತ್ತೆಯಾರ ಸಹಾಯವನ್ನು ಪಡೆಯಬೇಕು?

ಹೀಗೆ ಮನಸ್ಸಿಗೆ ಹತ್ತುವಂತೆ ಆಡಿದ ಸೋಯರಾಬಾಯಿಯ ಮಾತಿನ ಮರ್ಮವನ್ನು ತಿಳಿಯದಷ್ಟು ಮೂಢನು ಬಾಳಾಜಿಯು ಇದ್ದಿಲ್ಲ. ಆತನು ಶಿವಾಜಿಮಹಾರಾಜರ ಕೈಯಲ್ಲಿ ಬಹುದಿವಸದಿಂದ ನುರಿತವನಿದ್ದು, ಒಳ್ಳೊಳ್ಳೆ ಮುತ್ಸದ್ದಿಗಳನ್ನು ಹಣ್ಣುಮಾಡುವಂಥ ಬುದ್ಧಿ ಶಾಲಿಯು ಇದ್ದನು. ಸೋಯರಾಬಾಯಿಯ ಮಾತಿನೊಳಗಿನ ಕಪಟವನ್ನು ಆತನು ಅರಿತಿದ್ದರೂ, ಮುತ್ಸದ್ದಿಗಳಲ್ಲಿ ಅವಶ್ಯವಾಗಿ ಇರಬೇಕಾಗಿದ್ದ ವಿನಯವೂ, ಶಾಂತಗುಣವೂ ಆತನಲ್ಲಿ ಸಂಪೂರ್ಣವಾಗಿ ವಾಸಿಸುತ್ತಿದ್ದದ್ದರಿಂದ ಆತನು ಸಮಾಧಾನದಿಂದ ವಿನಯಪೂರ್ವಕವಾಗಿ–

ಚೀಟಣೀಸ—ಸರಕಾರ, ತಮ್ಮ ಮಾತು ಸರ್ವಥೈವ ಒಪ್ಪತಕ್ಕದ್ದಾಗಿರುವದು. ಆದರೆ.......

ಸೋಯರಾಬಾಯಿ—ಆದರೆ ಎಂದು ಸುಮ್ಮನಾಗಬೇಡಿರಿ. ಇದು ವ್ಯರ್ಥ ಕಾಲಹರಣ ಮಾಡತಕ್ಕ ಸಮಯವಲ್ಲ; ಆದ್ದರಿಂದ ನನ್ನ ಅಪ್ಪಣೆಯಂತೆ ಸೇನಾಪತಿಗೂ, ಸುಮಂತನಿಗೂ ಪತ್ರ ಬರೆದು ಕಳಿಸಿರಿ. ಶಿಕ್ಕಾಮೊರ್ತಬುಗಳು ನಿಮ್ಮ ಬಳಿಯಲ್ಲಿಯೇ ಇರುತ್ತವೆ.

ಚೀಟಣೀಸ—ಹೌದು, ನೀವು ಹೇಳುವದು ವಾಸ್ತವವು; ಆದರೆ ಶಿಕ್ಕಾ–ಮೊರ್ತಬು ಗಳನ್ನು ಮಹಾರಾಜರು ನನ್ನ ಕೈಯಲ್ಲಿ ಕೊಡುವಾಗ, ನಾನು ಶ್ರೀ ಭವಾನಿಯ ಹಾಗು ಮಹಾರಾಜರ ಪಾದಸಾಕ್ಷಿಯಾಗಿ ಮಹಾರಾಜರ ಅಪ್ಪಣೆಯಿಲ್ಲದೆ ಶಿಕ್ಕಾ–ಮೊರ್ತಬು ಮಾಡಲಿಕ್ಕಿಲ್ಲವೆಂದು ಪ್ರಮಾಣಮಾಡಿದ್ದೇನೆ.

ಸೋಯರಾಬಾಯಿ—ನಿಮ್ಮ ಮಾತು ಒಪ್ಪತಕ್ಕದ್ದೇ ಸರಿ; ಆದರೆ ಈಗಿನ ಸ್ಥಿತಿಯಲ್ಲಿ ಮಹಾರಾಜರು ಹ್ಯಾಗೆ ನಿಮ್ಮನ್ನು ಆಜ್ಞಾಪಿಸುವರು? ಅವರ ಸ್ಥಳದಲ್ಲಿ ಜಗದಂಬೆಯಂತು ಇರುವಳಷ್ಟೆ? ಆಕೆಯ ಅಪ್ಪಣೆಯನ್ನು ಪಡೆಯಿರೆಂದರಾಯಿತು!

ಚೀಟಣೀಸ—ಹಾಗೆ ಪಡೆಯಬಹುದು; ಆದರೆ ಅಂಬಾಬಾಯಿಯು ಪ್ರತ್ಯಕ್ಷವಾಗಿ ಆಜ್ಞಾಪಿಸುವ ಬಗೆಹೇಗೆ? ಹಾಗೆ ಆಕೆಯು ಆಜ್ಞಾಪಿಸಿದರೆ ಅದನ್ನು ಮುರಿಯುವ ಧೈರ್ಯವು

ಯಾರಿಗಾದೀತು? ಮಹಾರಾಜರ ಮೃತದೇಹವನ್ನು ಸಜೀವ ಮಾಡುವ ಸಾಮರ್ಥ್ಯವು ಒಬ್ಬ ಸಮರ್ಥರ ಹೊರತು ಬೇರೆ ಯಾರಲ್ಲಿರುವದೆಂಬದನ್ನು ನಾನಂತು ಹೇಳಲಾರೆನು. ಸಮರ್ಥರನ್ನು ಕರೆದು ತರಬೇಕೆಂದರೆ ಅವರು ಸನದು ಮುಟ್ಟಿದ ದಿವಸವೇ ಅದೃಶ್ಯವಾದವರು ತಿರುಗಿ ಯಾರ ಕಣ್ಣಿಗೂ ಬಿದ್ದಿರುವದಿಲ್ಲ.

ಸೋಯರಾಬಾಯಿ–ಇದಕ್ಕೆ ಮುಂದೆ ಉಪಾಯವೇನು?

ಈ ಮೇರೆಗೆ ಪ್ರಶ್ನ ಮಾಡುತ್ತಿರಲು, ಮೋರೋಪಂತ ಪೇಶವೆ, ಅಣ್ಣಾಜಿದತ್ತೋ, ರಾಮಚಂದ್ರಪಂತ ಅಮಾತ್ಯ, ಮಾಲಸಾವಂತ, ದಾದಾಜಿ ಇವರು ಬಂದರೆಂಬ ಸುದ್ದಿಯು ಬಂದಿತು. ಸೋಯರಾಬಾಯಿಯು ಕೂಡಲೆ ಅವರನ್ನು ಕರೆಸಿಕೊಳ್ಳಲು, ಅವರೆಲ್ಲರು, ಸೋಯರಾಬಾಯಿಗೆ ಮುಜುರೆ ಮಾಡಿ ಕುಳಿತುಕೊಂಡರು. ಆಗ ಸೋಯರಾಬಾಯಿಯು ಅವರೆಲ್ಲರನ್ನು ಕುರಿತು— "ಮುಂದಿನ ವಿಚಾರವೇನು?" ಎಂದು ಕೇಳಿದಳು; ಆಗ ಒಬ್ಬರ ತುಟಿಗಳೂ ಅಲ್ಲಾಡದಾದವು. ಕೆಲಹೊತ್ತು ಅಲ್ಲಿ ಶಾಂತತೆಯ ಸಾಮ್ರಾಜ್ಯವು ಪಸರಿಸಿದಂತೆ ತೋರಿತು; ಆದರೆ ಅದು ಬಹಳಹೊತ್ತು ಉಳಿಯಲಿಲ್ಲ. ಸೋಯರಾಬಾಯಿಯು ಕಣ್ಣೀರು ಸುರಿಸುತ್ತ ದುಃಖದ ಆವಿರ್ಭಾವದಿಂದ— ನನ್ನ ಪ್ರಶ್ನೆಗೆ ಯಾರೂ ಉತ್ತರ ಕೊಡದಷ್ಟು ಭಾಗ್ಯಹೀನಳು ನಾನು ಒಂದು ಕ್ಷಣದಲ್ಲಿ ಆದೆನಲ್ಲವೆ? ನಮ್ಮ ರಾಜಾರಾಮನೂ ನಾನು ಇನ್ನು ಯಾರ ಮೋರೆ ನೋಡಬೇಕು? ಮಹಾರಾಷ್ಟ್ರರಾಜ್ಯದ ಅಲ್ಲಾಡದ ಆಧಾರಸ್ಥಂಭಗಳೂ, ಮಹಾರಾಷ್ಟ್ರ ಸಿಂಹಾಸನದ ಏಕನಿಷ್ಠ ಸೇವಕರೂ, ಮಹಾರಾಷ್ಟ್ರರಾಜ್ಯದ ಉತ್ಕರ್ಷದ ಸಲುವಾಗಿ ಅಹರ್ನಿಶ ಯೋಚಿಸುತ್ತಿರುವ ರಾಷ್ಟ್ರಭಕ್ತರೂ ಆದ ನಿಮ್ಮಂಥ ಶ್ರೇಷ್ಠ ಮುತ್ಸದ್ದಿಗಳೇ ಸುಮ್ಮನೆ ಕುಳಿತಬಳಿಕ ನಮಗೆ ಯಾರು ಸಮಾಧಾನ ಹೇಳಬೇಕು? ಹ್ಯಾಗೂ ಔರಂಗಜೇಬನು ಮಹಾರಾಷ್ಟ್ರರಾಜ್ಯವನ್ನು ನುಂಗಿ ನೀರು ಹಿಡಿಯುವದಕ್ಕಾಗಿ ಜಪ್ಪಿಸಿಕೊಂಡು ಕುಳಿತಿರುವನು; ಆತನ ಅಪಾರವಾದ ಸೇನಾಬಲವು ಸಜ್ಜಾಗಿಯೇ ಇರುವದು.....

ಈ ಮೇರೆಗೆ ಮಾತಾಡುತ್ತಿರಲು, ಅಣ್ಣಾಜಿ ದತ್ತೋನು ದುಡುಕಿನಿಂದ— "ಮಾಸಾಹೇಬ, ಇಷ್ಟು ಹತಾಶರಾಗುವ ಕಾರಣವೇನು? ರಾಜಾರಾಮ ಮಹಾರಾಜರನ್ನು ಕೂಡಲೆ ಸಿಂಹಾಸನದಮೇಲೆ ಕುಳ್ಳಿರಿಸಿಕೊಂಡು, ನಮ್ಮ ಸಾಭಾಜಿಭೋಸಲೆ ಶಿಂಗಾಣಪುರಕರರ ಕೈಯಿಂದ ಕ್ರಿಯಾಕರ್ಮಗಳನ್ನು ಮಾಡಿಸಿದರಾಯಿತು. ಮುಂದೆ ಎಂಟು–ಹತ್ತು ದಿನಗಳಲ್ಲಿ ಗಿರಿ—ದುರ್ಗಗಳ ವ್ಯವಸ್ಥೆ ಮಾಡೋಣವಂತೆ. ಇದಕ್ಕೆ ಅಡ್ಡಾಗುವವರು ಯಾರು?

ಸೋಯರಾಬಾಯಿ—ನಾನಾದರೂ ಹಾಗೇ ಅನ್ನುವೆನು; ಆದರೆ ಚೀಟಣೀಸರನ್ನು ಯಾರು ಒಡಂಬಡಿಸಬೇಕು?

ಮೋರೋಪಂತ—ಹೌದು, ಇದೊಂದು ತೊಂದರೆಯೇ ಸರಿ. ಚೀಟಣೀಸರ ಸಹಿಯಿಲ್ಲದೆ, ಬೇರೆಯವರ ಸಹಿಯಿಂದ ಆಜ್ಞಾಪತ್ರಗಳನ್ನು ಕಳಿಸಿದರೆ, ಮಹಾರಾಜರ ಅಪ್ಪಣೆಯೆಂದು ಅವನ್ನು ಯಾರೂ ತಿಳಿಯಲಾರರು! ಹೀಗಾಗುವದರಿಂದ ಇಲ್ಲದ ಅವ್ಯವಸ್ಥೆಯೂ, ತೊಂದರೆಗಳೂ ಉಂಟಾದಾವು.

ಅಣ್ಣಾಜಿ—ಇದಕ್ಕೇನು ಉಪಾಯಮಾಡಬೇಕಾದೀತು? ಏನಾದರೂ ಮಾಡಲಿಕ್ಕಂತು ಬೇಕಷ್ಟೆ?

ರಾಮಚಂದ್ರಪಂತ—ಯಾಕೆ ಚೀಟಣೀಸ, ನಿಮ್ಮ ಮತವೇನಿದೆ? ಮಹಾರಾಜರು ಬಹು ಕಷ್ಟಪಟ್ಟು ಸ್ಥಾಪಿಸಿರುವ ಸಾಮ್ರಾಜ್ಯವು ಅವರ ಪಶ್ಚಾತ್ ನಾಶವಾಗಬೇಕೆಂದು ನಿಮ್ಮ ಇಚ್ಛೆಯಂತು ಇರುವದಿಲ್ಲ, ಆಸೇತು ಹಿಮಾಚಲ ಇಡಿಯ ಭರತಭೂಮಿಯು ಮಹಾರಾಷ್ಟ್ರದ ಜರಿಪಟಕಾ ನಿಶಾನೆಯ ನೆರಳಿನಲ್ಲಿ ಬರಬೇಕೆಂಬ ನಿಮ್ಮ ಇಚ್ಛೆಯು ಈವರೆಗೂ ಸ್ಥಿರವಾಗಿದ್ದರೆ, ಮಾಸಾಹೇಬರು ಹೇಳಿದಂತೆ ನೀವು ಕೇಳತಕ್ಕದ್ದು.

ಚೀಟಣೀಸ—ತಮ್ಮ ಸದಿಚ್ಛೆಯು ಅತ್ಯಂತ ಶ್ಲಾಘನೀಯವಾಗಿರುವದು; ಆದರೆ ನನಗೆ ಪ್ರತಿಜ್ಞಾಭಂಗ ಮಾಡುವ ಧೈರ್ಯವಾಗುವದಿಲ್ಲ, ಅದಕ್ಕೆ ಉಪಾಯವೇನು ಮಾಡಬೇಕು?

**ದಾದಾಜಿ—ಮಹಾರಾಜರು ಸ್ವರ್ಗವಾಸಿಗಳಾದರು. ಸದ್ಯಕ್ಕೆ ಅವರ ಸ್ಥಳದಲ್ಲಿ ರಾಣೀಸಾಹೇಬರು ಇರುವರು; ಆದ್ದರಿಂದ ಈಗ ಅವರ ಆಜ್ಞೆಯಂತೆ ನಡೆದು ಸದ್ಯದ** ಮಟ್ಟಿಗೆ ವ್ಯವಸ್ಥೆಮಾಡಿ, ಮುಂಚೆ ಸಿಂಹಾಸನವೇರಿದವರ ಆಜ್ಞೆಯನ್ನು ಪಾಲಿಸಿದರಾಯಿತು.

ಚೀಟಣೀಸ—ನೀವು ಹೇಳುವದು ವಾಸ್ತವವಲ್ಲ ದಾದಾಸಾಹೇಬ!

ಈ ಮೇರೆಗೆ ಚೀಟಣೀಸನು ಸ್ವಲ್ಪ ಸಂತಾಪದಿಂದಲೇ ಹೇಳಿದರೂ, ಕೂಡಲೆ ಶಾಂತನಾಗಿ—''ದಾದಾಜಿ, ನಾನು ಆಬಾಸಾಹೇಬರ ಬಳಿಯಲ್ಲಿ ಏನು ಪ್ರತಿಜ್ಞೆ ಮಾಡಿರುವೆನೆಂಬದರ ಗೊತ್ತು ನಿಮಗಿರುವ ಸಂಭವವಿಲ್ಲ. ಅದನ್ನು ಈಗ ನಿಮಗೆ ಗೊತ್ತು ಮಾಡಿಕೊಡುವ ಅವಶ್ಯವೂ ಇಲ್ಲ, ನಿಮ್ಮೆಲ್ಲರ ಮಾತಿನಂತೆ ಈಗ ನನಗೆ ಪತ್ರಬರೆಯಲಿಕ್ಕೆ ಬರುವದಿಲ್ಲೆಂದು ಸ್ಪಷ್ಟ ಹೇಳಿದರೆ ಆಯಿತು.

ಮೋರೋಪಂತ—ನಿಮ್ಮ ಹಾಗೆ ನಾವೂ ಪ್ರತಿಜ್ಞೆಮಾಡಿರುವದಿಲ್ಲೇನು?

ಬಾಳಾಜಿ—ಮಾಡಿರುವದಿಲ್ಲೆಂದು ನಾನೆಲ್ಲಿ ಅನ್ನುವೆನು? ನೀವು ಹೊತ್ತುಬಂದಂತೆ ಕೊಡೆ ಹಿಡಿಯ ಹೋಗಿ ಈಗ ಪ್ರತಿಜ್ಞಾಭಂಗ ಮಾಡಿಕೊಂಡಿರುವಂತೆ ನಾನೇನು ಮಾತಾಡಿಕೊಳ್ಳ ಲಿಚ್ಛಿಸುವದಿಲ್ಲ, ನನಗೆ ಪ್ರತಿಜ್ಞಾಭಂಗ ಮಾಡಲು ನೀವೆಲ್ಲ ಒತ್ತಾಯ ಮಾಡುತ್ತಿರುವದರಿಂದ ನಾನು ಸ್ಪಷ್ಟವಾಗಿ ಮಾತಾಡುತ್ತೇನೆ, ಯಾರೂ ಸಿಟ್ಟಾಗಬಾರದು. ಈದಿನ ಬಂದ ಹಾಗೆ ಮಹಾರಾಜರ ಅಪ್ಪಣೆ ಇಲ್ಲದೆ ಎಂದಾದರೂ ನಿಮ್ಮ ನಿಮ್ಮ ಕೆಲಸಗಳನ್ನು ಬಿಟ್ಟು ನೀವು ಬಂದಿದ್ದಿರೋ? ಮಹಾರಾಜರು ಜೀವದಿಂದಿರುವಾಗಲೇ ರಾಣೀಸಾಹೇಬರ ಆಜ್ಞಾಪತ್ರವನ್ನು ತಕ್ಕೊಂಡು ದಾದಾಜಿಯವರು ನಿಮ್ಮ ಕಡೆಗೆ ಬಂದದ್ದರಿಂದ, ಇಷ್ಟು ಬೇಗನೆ ನಿಮಗೆ ಹೊರಟು ಬರಲಿಕ್ಕೆ ಅನುಕೂಲವಾಗಲಿಲ್ಲವೆ? ಅಂದಬಳಿಕ ಮಹಾರಾಜರಿರುವಾಗಲೇ ಅವರ ಆಜ್ಞಾಭಂಗಮಾಡಿದ ನೀವು, ಅವರ ಪಶ್ಚಾತ್ ನಿಮಗೆ ಸರಿದೋರಿದಂತೆ ವ್ಯವಸ್ಥೆಮಾಡಿ ಸ್ವರಾಜ್ಯದ ಸಂರಕ್ಷಣ ಮಾಡಿದರಾಯಿತು. ಈ ವಿಷಯದಲ್ಲಿ ನೀವು ಯಾರ ಹಂಗೂ ಇಡುವ ಕಾರಣವಿಲ್ಲ; ನನಗಂತೂ ಪ್ರತಿಜ್ಞಾಭಂಗ ಮಾಡುವ ಪ್ರಸಂಗವನ್ನು ತರಲೇಬೇಡಿರಿ.

ಬಾಳಾಜಿ ಚೀಟಣೀಸನ ಈ ಸ್ಪಷ್ಟವಾದ ಮಾತುಗಳನ್ನು ಕೇಳಿ ಎಲ್ಲ ಮುತ್ಸದ್ದಿಗಳೂ ದಿಗಿಲುಬಿದ್ದು ಸುಮ್ಮನಾದರು. ಒಬ್ಬರಿಗೂ ಮಾತಾಡಲಿಕ್ಕೆ ಮಾರ್ಗ ದೊರೆಯಲಿಲ್ಲ. ಹೀಗೆ ಎಲ್ಲರೂ ಸುಮ್ಮನೆ ಕುಳಿತಿರುವದನ್ನು ನೋಡಿ ಮೋರೋಪಂತನು ಬಾಳಾಜಿಯನ್ನು ಕುರಿತು—

ಮೋರೋಪಂತ—ಬಾಳಾಜೀ, ಇನ್ನು ಆದಮಾತು ಕಟ್ಟಿಕೊಂಡು ಮಾಡುವದೇನು? ಮುಂದೆ ಸುಸೂತ್ರವಾಗಿ ಕೆಲಸಸಾಗುವ ವಿಚಾರವನ್ನು ಮಾಡತಕ್ಕದ್ದು. ಈ ಪ್ರಸಂಗದಲ್ಲಿ ಎಲ್ಲರೂ ಒಮ್ಮನಸ್ಸಿನಿಂದ ಕೆಲಸಮಾಡಿದರೆ ಮಾತ್ರ ಹಿತವಾಗುವದು. ಸಂಭಾಜಿಮಹಾರಾಜರ ಸ್ಥಿತಿಯನ್ನು ನೋಡಿದರೆ ಅವರಿಂದ ಸ್ವರಾಜ್ಯಕ್ಕೆ ಯಾವ ಕಾಲದಲ್ಲಿ ಎಂಥ ಅಪಾಯ ತಟ್ಟೀ ತೆಂಬದನ್ನು ಹೇಳಲಾಗುವದಿಲ್ಲ. ಈ ಮಾತಿನ ವಿಚಾರವನ್ನು ಮಾಡುವದು ನಮ್ಮೆಲ್ಲರ ಕರ್ತವ್ಯ ವಾಗಿರುವದು. ಈ ಕರ್ತವ್ಯವನ್ನು ಸ್ಮರಿಸಿ ಬಾಲಾಜಿಯವರು ಹಂಬೀರರಾವ ಸೇನಾಪತಿ, ಜನಾರ್ದನಪಂತ ಸುಮಂತ ಇವರಿಬ್ಬರಿಗೂ ಸಂಭಾಜಿಮಹಾರಾಜರ ಬಂದೋಬಸ್ತಿನ ಬಗ್ಗೆ ಸರಕಾರಿಯ ಥೈಲಿಗಳನ್ನು ಕಳಿಸುವದು ಯುಕ್ತವೆಂದು ನಮಗೆ ತೋರುತ್ತದೆ. ಇಲ್ಲದಿದ್ದರೆ ಮಹಾರಾಜರ ಮರಣವಾರ್ತೆಯು ಸಂಭಾಜಿಮಹಾರಾಜರಿಗೆ ತಿಳಿದಕೂಡಲೆ, ಅವರು ಮೈಮರೆತು ಯಾವಕಾಲಕ್ಕೆ ಏನು ಮಾಡಿಯಾರೆಂಬದನ್ನು ಹೇಳಲಾಗುವದಿಲ್ಲ....

ಬಾಳಾಜಿ (ನಡುವೇ ಬಾಯಿಹಾಕಿ)– ಮೋರೋಪಂತ, ಮಹಾರಾಜರು ವಿವಿಧ ಪ್ರಕೃತಿಯ ಜನರನ್ನು ಅವರವರ ಒಲವಿನಂತೆ ನಡೆಸಿಕೊಂಡು, ಅವರೆಲ್ಲರ ಉಪಯೋಗವನ್ನು ಸ್ವರಾಜ್ಯಸ್ಥಾಪನೆಗಾಗಿ ಮಾಡಿಕೊಳ್ಳಲಿಲ್ಲವೆ? ಅದರಂತೆ ನಾವೆಲ್ಲರೂ ಮುತ್ಸದ್ದಿಗಳು ವಿಕ್ಷಿಪ್ತಸ್ವಭಾವದ, ಆದರೆ ಅತ್ಯಂತ ಶೂರರಾದ ಸಂಭಾಜಿ ಮಹಾರಾಜರ ಒಲವನ್ನನುಸರಿಸಿ ನಡೆದು ಅವರ ಶೌರ್ಯಾದಿ ಸದ್ಗುಣಗಳ ಉಪಯೋಗವನ್ನು ಸ್ವರಾಜ್ಯದ ಹಿತಕ್ಕಾಗಿ ಮಾಡಿ ಕೊಳ್ಳಲಿಕ್ಕೆ ಬರಲಿಕ್ಕಿಲ್ಲವೋ? ಹೀಗೆ ಮಾಡದೆ ನಾವೆಲ್ಲರೂ ಕೂಡಿ ಸಂಭಾಜಿ ಮಹಾರಾಜರನ್ನು ಮೂಲೆಗುಂಪು ಮಾಡಿ ಎರಡನೆಯ ವ್ಯವಸ್ಥೆಮಾಡಿದರೆ, ಹೆಚ್ಚು ಅನರ್ಥಕ್ಕೆ ಕಾರಣ ವಾಗುವದೆಂಬದನ್ನು ನೀವೆಲ್ಲರು ನೆನಪಿನಲ್ಲಿಡತಕ್ಕದ್ದು; ಆದ್ದರಿಂದ ಮಹಾರಾಜರ ಮರಣ ವಾರ್ತೆಯನ್ನು ಸಂಭಾಜಿ ಮಹಾರಾಜರಿಗೆ ತಿಳಿಸಿ, ಅವರನ್ನು ಕರತಂದು ಯೋಗ್ಯ ವ್ಯವಸ್ಥೆ ಮಾಡಿದರೆ, ಅವರು ಸಂಶಯಗ್ರಸ್ತರಾಗದೆ ಪ್ರಧಾನ ಮಂಡಲದ ಅದೀನರಾಗಿ ನಡೆದು ಕೊಳ್ಳ ಬಹುದೆಂದು ನಾನು ಸೂಚಿಸುವೆನು. ಮಹಾರಾಜರ ಮನಸ್ಸಿನಲ್ಲಿ ಹ್ಯಾಗಿದ್ದರೂ ಸಂಭಾಜಿ ರಾಜರಿಗೇ ರಾಜ್ಯಾಭಿಷೇಕವಾಗಬೇಕೆಂದಿತ್ತೆಂಬದನ್ನು ನಾನು ಬಲ್ಲೆನು; ಮರ್ಮಜ್ಞ ರಾದ ನಿಮಗೂ ಆ ಮಾತು ಗೊತ್ತಾಗಿರಬಹುದು. ಭಾಗಾದಿತನದ ಮಾತ್ಸರ್ಯದ ಸೆಕೆಯನ್ನು ಸ್ವರಾಜ್ಯಕ್ಕೆ ಬಡಿಯಗೊಡುವದು ನನಗಂತು ಪ್ರಶಸ್ತ ಕಾಣುವದಿಲ್ಲ; ಹಾಗೆ ಮಾಡಿದರೆ ಮಹಾ ಅನರ್ಥ ಉಂಟಾದೀತು.

ಸೋಯರಾಬಾಯ (ಸಂತಾಪದಿಂದ)– ಬಾಳಾಜೀ, ಇಷ್ಟು ಜನರದೊಂದು ವಿಚಾರ ವಾದರೆ, ನಿಮ್ಮದೊಬ್ಬರದೇ ಒಂದು ವಿಚಾರವು! ನಿಮ್ಮ ಸಹಿಯಿಂದ ಆಜ್ಞಾಪತ್ರಗಳು

ಹೋಗದಿದ್ದರೆ ದುರ್ಗಾಧಿಪತಿಗಳೇ ಮೊದಲಾದವರು ಅವನ್ನು ಮನ್ನಿಸಲಿಕ್ಕಿಲ್ಲೆಂಬ ಗರ್ವದಿಂದ ನೀವು ಇಷ್ಟು ವಿರೋಧಿಸಿ ಮಾತಾಡುವಹಾಗೆ ತೋರುತ್ತದೆ; ಆದರೆ ಬಲು ಜೋಕೆ, ನಿಮ್ಮ ಗರ್ವವನ್ನು ಕ್ಷಣದಲ್ಲಿ ಇಳಿಸೇನು? ಕಾಲವು ಬದಲಾಗಿರುವದನ್ನು ಪೂರಾ ಲಕ್ಷದಲ್ಲಿ ತಂದುಕೊಳ್ಳಿರಿ.

ಬಾಳಾಜಿ (ಕೂಡಲೆ)– ಒಡೆಯರ ಮುಂದೆ ಬಡವನಾದ ನನ್ನ ಅನ್ನಾರ್ಥಿಯ ಗರ್ವವೇನು? ಕಠಿಣಪ್ರಸಂಗದಲ್ಲಿ ಸ್ವಾಮಿಗೆ ಹಿತಕಾರಕವಾದ ವಿಚಾರಗಳನ್ನು ಸ್ಪಷ್ಟವಾಗಿ ಸೂಚಿಸುವದೇ ನಿಜವಾದ ಸ್ವಾಮಿಭಕ್ತಿಯೆಂದು ನಾನು ತಿಳಿದಿರುವೆನು. ಯೋಗ್ಯಕಂಡದ್ದನ್ನು ಹೇಳುವದು ಸೇವಕನಧರ್ಮ, ಅದರಂತೆ ನಡೆಯುವದು ಬಿಡುವದು ಸೇವ್ಯರಧರ್ಮ. ಯೋಗ್ಯ ತೋರಿದಂತೆ ಮಾಡಲು ಮಾಸಾಹೇಬರು ಸಮರ್ಥರಿರುವರು.

ಸೋಯರಾಬಾಯಿ–ಹಾಗಿದ್ದರೆ, ಈಗಲೇ ಥೈಲಿಗಳನ್ನು ಬರೆದು ಸಂಭಾಜಿಯ ಯೋಗ್ಯ ಬಂದೋಬಸ್ತುಮಾಡಿಸಿರಿ. ಅತ್ತ ಆ ಥೈಲಿಯನ್ನು ತಕ್ಕೊಂಡು ಸವಾರನು ಹೋದಕೂಡಲೆ ಇತ್ತ ರಾಜಾರಾಮನನ್ನು ಅಷ್ಟರವಟ್ಟಿಗೆ ಪಟ್ಟಕ್ಕೆ ಕುಳ್ಳಿರಿಸಿ ಮಹಾರಾಜರ ಪ್ರೇತಯಾತ್ರೆಯ ಕಾರ್ಯವನ್ನು ಕೊನೆಗಾಣಿಸಿರಿ. ಆಮೇಲೆ ರಾಜ್ಯದ ಬಂದೋಬಸ್ತಿನ ಕೆಲಸವನ್ನು ಮಾಡೋಣವಂತೆ!

ಸೋಯರಾಬಾಯಿಯ ಈ ಮಾತುಗಳನ್ನು ಕೇಳಿ ಬಾಳಾಜಿಯು ಮನಸ್ಸಿನಲ್ಲಿ–ಈಗ ಸುಮ್ಮನೆ ವಿರುದ್ಧ ಜಗ್ಗಾಡುವದರಿಂದ ಹಿತವಾಗಲಾರದು; ಆದ್ದರಿಂದ ಸದ್ಯದಮಟ್ಟಿಗೆ ಹೊತ್ತು ಬಂದಂತೆ ಕೊಡೆಹಿಡಿಯುವದೇ ಯೋಗ್ಯವು. ಮುಂದೆ ಈ ಹಾದಿಯಿಂದ ಹೋದರಾಯಿತು, ಎಂದು ಯೋಚಿಸಿ, ಅತ್ಯಂತ ಶ್ರೇಷ್ಠಮುತ್ಸದ್ದಿಗಳಿಗೆ ಒಪ್ಪಬಹುದಾದ ಒಂದು ಯುಕ್ತಿಯನ್ನು ಎಲ್ಲರಮುಂದೆ ಹೇಳಿದನು. ಆತನು ವಿನಯದಿಂದ ಎಲ್ಲ ಮುತ್ಸದ್ದಿಗಳನ್ನು ಕುರಿತು–

ಬಾಳಾಜಿ(ವಿನಯದಿಂದ)– ಸನ್ಮಾನ್ಯರೇ, ಹೇಳಿ ಕೇಳಿ ನಾನು ಮಹಾರಾಜರು ಹೇಳಿದ ಪತ್ರಗಳನ್ನು ಬರೆಯುವವನು. ಪ್ರದಾನಮಂಡಲದ ರಾಜಕಾರಣಪಟುತ್ವವು ನನಗೆ ಬರುವ ಸಂಭವವೇ ಇಲ್ಲ; ಆದರೂ ಮಹಾರಾಷ್ಟ್ರ ರಾಜ್ಯದ ಸಂರಕ್ಷಣವೂ, ಅಭಿವೃದ್ಧಿಯೂ ಆಗ ಬೇಕೆಂದು ನಾನು ಮನಃಪೂರ್ವಕವಾಗಿ ಇಚ್ಛಿಸುವೆನು; ಆದ್ದರಿಂದ ನೀವೆಲ್ಲರೂ ವಿಚಾರ ಪೂರ್ವಕವಾಗಿ ಗೊತ್ತುಪಡಿಸಿದ ಮಾರ್ಗವನ್ನು ಅನುಸರಿಸಿ ನಡೆಯಲಿಕ್ಕೆ ನಾನು ಸಿದ್ಧನಿರುವೆನು; ಆದರೆ ಪ್ರತಿಜ್ಞಾಭಂಗಮಾಡಿಕೊಳ್ಳುವದು ಮಾತ್ರ ನನ್ನಿಂದಾಗದು; ಆದ್ದರಿಂದ ಅದಕ್ಕೊಂದು ಹಂಚಿಕೆಯನ್ನು ಹೇಳುತ್ತೇನೆ. ಈಗ ಹಂಬೀರರಾವ ಸೇನಾಪತಿಗಳ ಕಡೆಗೂ, ಜನಾರ್ದನಪಂತ ಸುಮಂತರ ಕಡೆಗೂ ಕಳಿಸುವ ಪತ್ರಗಳಿಗೆ ನನ್ನ ಮಗನ ಸಹಿಗಳನ್ನು ಮಾಡಿಸಿರಿ. ಇದಕ್ಕೆ ಕಾರಣವು ನನ್ನ ಅತ್ಯಾವಸ್ಥೆಯ ಬೇನೆಯೆಂದು ಹೇಳಿದರಾಯಿತು. ಹೀಗೆ ಮಾಡಿದರೆ ನನ್ನ ಪ್ರತಿಜ್ಞಾ ಭಂಗವಾದಂತೂ ಆಗುವದಿಲ್ಲ; ಸ್ವರಾಜ್ಯರಕ್ಷಣದ ಕಾರ್ಯಕ್ಕೆ ನನ್ನಿಂದ ವಿಘ್ನವಾದಂತೂ ಆಗುವದಿಲ್ಲ. ನನ್ನ ಅಲ್ಪಮತಿಗೆ ತೋಚಿದ್ದನ್ನು ಮುಂದಿರಿಸಿದ್ದೇನೆ. ಎಲ್ಲರ ಮನಸ್ಸಿಗೆ ಬಂದಂತೆ ಮಾಡಬಹುದು.

ಈ ಮೇರೆಗೆ ನುಡಿದು ಬಾಳಾಜಿಯು ಸುಮ್ಮನಾಗಲು, ಎಲ್ಲರು ಒಬ್ಬರ ಮೋರೆಯನ್ನೊಬ್ಬರು ನೋಡಹತ್ತಿದರು. ಬಾಳಾಜಿಯೊಡನೆ ಮಹಾರಾಜರ ಗರಡಿಯ ಮನೆಯಲ್ಲಾಡಿದ ಅಣ್ಣಾಜಿದತ್ತೊ, ಮೋರೋಪಂತಪೇಶವೆ ಇವರು ತಮ್ಮೊಳಗೆ ಗುಜುಗುಟ್ಟಿ, ಬಾಳಾಜಿಯ ಮಾತಿಗೆ ಒಪ್ಪಿಕೊಂಡರು. ಎಲ್ಲರಿಗೂ ಬಾಳಾಜಿಯ ಹಂಚಿಕೆಯು ಸಮರ್ಪಕವಾಗಿ ತೋರಿತು. ಆಗ ಸೋಯರಾಬಾಯಿಯು ಬಾಳಾಜಿಯನ್ನು ಕುರಿತು– ಚೀಟಣೀಸ, ಏನೂ ಚಿಂತೆಯಿಲ್ಲ, ನೀವು ಹೇಳಿದಂತೆ ಮಾಡುವೆವು; ಆದರೆ ಇಲ್ಲಿಯ ವ್ಯವಸ್ಥೆಯಾಗಿ ಪಲ್ಲಾಳಗಡದ ಬಂದೋಬಸ್ತು ಆಗುವವರೆಗೆ ನೀವು ಯಾವ ಸಣ್ಣಪುಟ್ಟ ರಾಜಕಾರಣಗಳಲ್ಲಿಯೂ ಕೈಹಾಕಲಿಕ್ಕಿಲ್ಲೆಂಬ ಬಗ್ಗೆ ನಮಗೆ ನಂಬಿಗೆ ಮಾಡಿಕೊಡತಕ್ಕದ್ದು, ಎಂದು ಹೇಳಲು, ಬಾಳಾಜಿಯು– ಮಾಸಾಹೇಬ, ಬೇರೆ ನಂಬಿಗೆಯೇಕೆ, ನನ್ನ ಮಗ ಆವಜಿಯನ್ನೇ ನಂಬಿಗೆಗಾಗಿ ನಿಮ್ಮ ಬಳಿಯಲ್ಲಿ ಇಟ್ಟುಕೊಂಡು ಬಿಡಿರೆಂದರಾಯಿತು! ಎಂದು ತಟ್ಟನೆ ಹೇಳಿದನು. ಆತನ ಮಾತು ಎಲ್ಲರಿಗೂ ಒಪ್ಪಿಗೆಯಾಗಲು, ಸೋಯರಾಬಾಯಿಯ ಅಪ್ಪಣೆಪಡೆದು ಮುಂದಿನ ಕಾರ್ಯಕ್ಕಾಗಿ ಬಾಳಾಜಿಯು ಹೊರಟು ಹೋದನು. ಇತ್ತ ಸೋಯರಾಬಾಯಿಯು ದುರ್ಗದ ಭದ್ರತೆಯ ಸಂಬಂಧದಿಂದಲೂ, ರಾಜ್ಯದ ವ್ಯವಸ್ಥೆಯ ಸಂಬಂಧದಿಂದಲೂ ಉಳಿದ ಮುತ್ಸದ್ದಿಗಳೊಡನೆ ಆಲೋಚಿಸ ತೊಡಗಿದಳು.

## ಸಹಗಮನ!

ಸೋಯರಾಬಾಯಿಯ ಮಂದಿರದಿಂದ ಹೊರಟ ಬಾಳಾಜಿಯು ಪುತಳಾಬಾಯಿಯ ಮನೆಗೆ ಪುನಃ ಬಂದನು. ಆಗ ಆ ಸಾಧ್ವಿಯು ಸಹಗಮನಕ್ಕೆ ಸಿದ್ಧಳಾಗಿ ಕುಳಿತಿದ್ದಳು. ಆಕೆಯು ಬಿಳಿಯ ಬಣ್ಣದ ಜರತಾರಿಯ ಬಹುಬೆಲೆಯುಳ್ಳ ಪತ್ತಲವನ್ನು ಉಟ್ಟುಕೊಂಡಿದ್ದಳು. ತನ್ನ ಕೇಶಕಲಾಪಗಳನ್ನು ಬಿಚ್ಚಿಬಿಟ್ಟಿರಲು, ಅವು ಬೆನ್ನತುಂಬ ಹರವಿದ್ದವು. ಆಕೆಯು ಪಟ್ಟ ಕುಂಕುಮವನ್ನು ಹಚ್ಚಿಕೊಂಡು ಸರ್ವಾಲಂಕಾರಗಳಿಂದ ವಿಭೂಷಿತಳಾಗಿದ್ದಳು. ಆಕೆಯ ಮುಂದುಗಡೆಯಲ್ಲಿ ಕರ್ಪೂರದಿಂದ ತುಂಬಿದ ಎರಡು ಬಂಗಾರದ ತಾಟುಗಳಿದ್ದು, ಅರಿಸಿಣ ಕುಂಕುಮ ತುಂಬಿದ ಎರಡು ಬಂಗಾರದ ತಾಟುಗಳೂ ಬಳಿಯಲ್ಲಿಟ್ಟಿದ್ದವು. ಆ ಸತ್ವಶಾಲಿನಿಯು ಬಾಳಾಜಿಯು ಬಂದದ್ದನ್ನು ನೋಡಿ, ಊರಿಗೆ ಹೊರಟು ನಿಂತವಳಂತೆ ಆತನನ್ನು ಕುರಿತು– ''ಚೀಟಣೀಸ, ಇನ್ನು ಎಷ್ಟು ಅವಕಾಶವಿರುವದು'' ಎಂದು ಕೇಳಲು, ಚೀಟಣೀಸನು– ಸರಕಾರ, ಎಲ್ಲ ಸಿದ್ಧವಾಗಿದೆ. ಇನ್ನು ಅರಸುಮನೆತನದ ಪದ್ಧತಿಯಂತೆ ಯುವರಾಜ ರಾಜಾರಾಮರನ್ನು ಗಾದಿಯಮೇಲೆ ಕುಳ್ಳಿರಿಸಿ ತಾಂಬೂಲಸಮಾರಂಭವು ಜರುಗಿದ ಬಳಿಕ ಸರಕಾರದ ದೇಹವು ವಿಮಾನದಲ್ಲಿ ಇಡಲ್ಪಡುವದು. ಆ ಕೂಡಲೆ ತಮ್ಮನ್ನು ಕರೆಯ ಕಳಿಸುವದು. ಅಲ್ಲಿಯವರೆಗೆ ಸುವಾಸಿನಿಯರಿಗೆ ಉಡಿ ತುಂಬವದೇ ಮೊದಲಾದ ಕೆಲಸ

ಗಳನ್ನು ತೀರಿಸಿಕೊಳ್ಳೋಣವಾಗಬೇಕು. ಈಗ ನಾನು ದರ್ಬಾರಮಹಾಲಿನ ಕಡೆಗೆ ಹೋಗುವೆನು, ಎಂದು ಹೇಳಿ, ಆತನು ಮಹಾರಾಜರ ಶವವಿರುವಲ್ಲಿಗೆ ಬಂದನು. ಅಲ್ಲಿ ರಾಜಾರಾಮ ಮಹಾರಾಜರು ಕುಳಿತುಕೊಂಡಿದ್ದು, ಅರಸುಮನೆತನದ ಪ್ರೇತಕರ್ಮ ಮಾಡ ತಕ್ಕವರೆಂದು ಮೊದಲೇ ಗೊತ್ತುಮಾಡಿದ್ದ ಸಿಂಗಾಣಪುರದ ಭೋಸಲೆಮನೆತನದ ಸಾಬಾಜಿ ಭೋಸಲೆ ಎಂಬವರೂ ಅಲ್ಲಿ ಇದ್ದರು. ಅರಸರಲ್ಲಿ ಹೀಗೆ ಉತ್ತರಕ್ರಿಯೆ ಶ್ರಾದ್ಧಾದಿಗಳನ್ನು ಮಾಡುವವರೆಂದು ತಮ್ಮ ಅಣ್ಣ ತಮ್ಮಂದಿರಲ್ಲಿಯ ಒಂದು ಮನೆತನವನ್ನು ನಿಯಮಿಸುವ ಪ್ರಚಾರವಿರುವದು. ಅವರಿಗೆ ಮಂತ್ರಿಗಳನ್ನೆವರು. ಈಗಲೂ ಈ ಪದ್ಧತಿಯು ಹಿಂದುಸ್ಥಾನದ ಅರಸುಮನೆತನದಲ್ಲಿ ಇರುವದಂತೆ. ಈ ಸಮಯದಲ್ಲಿ ಸಾಬಾಜಿರಾಯನು ಸಿದ್ಧನಾಗಿ ಬಂದದ್ದೊಂದು ಸೋಯರಾಬಾಯಿಯ ಒಳಸಂಚಿನ ಸಾಕ್ಷಿಯೇ ಆಗಿರುವದು; ಇಲ್ಲದಿದ್ದರೆ ಆಯತಸಮಯಕ್ಕೆ ಆತನು ಬರುವ ಸಂಭವವೆಲ್ಲಿ? ಇರಲಿ, ಅಲ್ಲಿ ಬಾಗಿಲಲ್ಲಿ ಮಹಾರಾಜರ ಶವವನ್ನು ಕೂಡಿಸುವ ಪಲ್ಲಕ್ಕಿಯು ಶೃಂಗರಿಸಿ ಸಿದ್ಧವಾಗಿತ್ತು ಅದೇ ವಿಮಾನವು ಕೆಲಕಡೆಯಲ್ಲಿ ಸಿದಿಗೆಗೂ ವಿಮಾನ ಸಂಜ್ಞೆಯನ್ನು ಕೊಟ್ಟಿರುವರಂತೆ.

ಬಾಳಾಜಿಯು ಸೋಯರಾಬಾಯಿಯ ಮನೆಯಿಂದ ಇತ್ತ ಹೊರಟುಬಂದ ಕೂಡಲೆ, ಅತ್ತ ಸೋಯರಾಬಾಯಿಯು ಅಲ್ಲಿ ನೆರೆದಿದ್ದ ತನ್ನ ಒಳಸಂಚಿನೊಳಗಿನವರೇ ಆದ ಮುತ್ಸದ್ದಿಗಳ ಮುಂದೆ ತನ್ನ ಮನಸ್ಸಿನೊಳಗಿದ್ದದ್ದನ್ನೆಲ್ಲ ಸ್ಪಷ್ಟವಾಗಿ ಹೇಳಿದಳು. ಬಳಿಕ ಆ ಮುತ್ಸದ್ದಿಗಳಲ್ಲಿ ಅರೆದಾಟವಾಗಿ, ಮಹಾರಾಜರ ತರುವಾಯ ರಾಜಾರಾಮರವರು ರಾಜ್ಯಾಧಿಕಾರಿಗಳಾಗ ತಕ್ಕದ್ದೆಂತಲೂ, ಸಂಭಾಜಿಯವರನ್ನು ಪಲ್ಹಾಳಗಡದಲ್ಲಿ ಕಠಿಣ ಕಾರಾಗೃಹದಲ್ಲಿಡಬೇಕೆಂತಲೂ ಗೊತ್ತಾಗಿ, ಬೇರೆ ಬೇರೆ ಜನರು ಬೇರೆ ಬೇರೆ ಕೆಲಸಗಳನ್ನು ವಹಿಸಿಕೊಂಡರು. ಅಣ್ಣಾಜಿದತ್ತೋನು ರಾಯಗಡದ ಬಂದೋಬಸ್ತು ಮಾಡಬೇಕೆಂದು ಗೊತ್ತಾಯಿತು. ಸೈನ್ಯದ ವ್ಯವಸ್ಥೆಯು ಮೋರೋಪಂತನನ್ನು ಕೂಡಿತು. ಮಾಲಸಾವಂತನು ಸಂಭಾಜಿಯ ಬಂದೋಬಸ್ತು ಮಾಡ ಬೇಕೆಂದು ಗೊತ್ತಾಗಿ ಆತನು ಪಾಚಾಡದ ಮುಕ್ಕಾಮಿಗೆ ಆಗಲೇ ತನ್ನ ಸೈನ್ಯದೊಡನೆ ದುರ್ಗವಿಳಿದು ಹೊರಟು ಹೋದನು. ದಾದಾಜಿ ರಘುನಾಥನು ಸೋಯರಾಬಾಯಿಯ ಚೀಟಣೀಸನಾದನು. ಈ ಮೇರೆಗೆ ಎಲ್ಲರೂ ತಮ್ಮ ತಮ್ಮ ಕೆಲಸಗಳನ್ನು ಕೊನೆಗಾಣಿಸುವದಕ್ಕಾಗಿ ಹೋಗಲು, ಸೋಯರಾಬಾಯಿಯು ಮುಂದಾಗಬಹುದಾದ ಪರಿಣಾಮವನ್ನು ಕುರಿತು ಚಿಂತಿಸುತ್ತ ಕುಳಿತುಕೊಂಡಳು. ಒಟ್ಟಿಗೆ ಆಕೆಯು ದುಃಖದ ಸಮುದ್ರ ದಲ್ಲಿ ಇಂದಿನಿಂದಲೇ ಬರಿಗೈಯಿಂದ ಈಸುಬಿದ್ದು, ಕಡೆಗೆ ಮುಣುಗಿಹೋಗುವ ಮಾರ್ಗವನ್ನು ಸಿದ್ಧಮಾಡಿಟ್ಟುಕೊಳ್ಳಹತ್ತಿದಳೆಂದು ಹೇಳಬಹುದು. ಇತ್ತ ಮೋರೋಪಂತನೇ ಮೊದಲಾದವರು ಮಹಾರಾಜರ ಶವದ ಬಳಿಗೆ ಬರುವದಕ್ಕಾಗಿ ಹೊರಟರು. ಆಗ ಬಾಲಾಜಿಯು ರಾಜಾರಾಮನ ಮನಸ್ಸನ್ನು ಸದ್ಯದ ಮಟ್ಟಿಗೆ ಸಿಂಹಾಸನವೇರಲು ಒಡಂಬಡಿಸುತ್ತಿದ್ದನು. ಅದಕ್ಕೆ ರಾಜಾರಾಮನ ಒಪ್ಪಿಗೆಯಿದ್ದಿಲ್ಲ, ಆತನು ಬಾಲಾಜಿಗೆ–ಚೀಟಣೀಸ, ಈ ವಿಚಾರವು ಸರ್ವಥಾ ಅನ್ಯಾಯ ವಾದದ್ದು, ಮಹಾರಾಜರ ತರುವಾಯ ಸಂಭಾಜಿರಾಯಜರೇ ರಾಜ್ಯಾಧಿಕಾರಿಗಳಾಗುವದು

ನ್ಯಾಯವು! ಹೀಗೆ ನಾವು ದಾದಾಸಾಹೇಬರನ್ನು ಮೋಸಗೊಳಿಸುವದರಿಂದ, ನಮ್ಮೆಲ್ಲರ ಮೇಲಿನ ಅವರ ನಂಬಿಗೆಯು ಹಾರಿಹೋಗಿ ಅನರ್ಥಪರಂಪರೆಗಳು ಉಂಟಾದಾವು; ಆದ್ದರಿಂದ ಈ ವಿಚಾರವೇ ಬೇಡ. ನನ್ನ ಹಾಗೂ ನಿಮ್ಮ ವಿಚಾರಗಳು ಒಂದಾಗಿರುವವು; ಅದಕ್ಕೆ ಮೋರೋಪಂತರ ಸಮ್ಮತಿಯೂ ಅಂತರಂಗದಲ್ಲಿದೆ. ಅಂದಬಳಿಕ ನಾವು ನಮ್ಮ ಮಾತೃಶ್ರೀಯವರ ಒಳಸಂಚನ್ನು ಬದಿಗೊತ್ತಿ ದಾದಾಸಾಹೇಬರನ್ನು ಕರೆಸಿ ಅವರನ್ನು ಪಟ್ಟಕ್ಕೆ ಕುಳ್ಳಿರಿಸಿ, ಆಮೇಲೆ ಪ್ರೇತಸಂಸ್ಕಾರವನ್ನು ಯಾಕೆ ಮಾಡಬಾರದು? ಎಂದು ಕೇಳಲು, ಬಾಳಾಜಿಯು– ಮಹಾರಾಜ, ನಿಮ್ಮ ಈ ವಿಚಾರದಿಂದ ಮುಂದೆ ಒದಗಬಹುದಾದ ಅರಿಷ್ಟವು ಈಗೇ ರಾಜ್ಯಕ್ಕೆ ಬಡಿದುಕೊಂಡೀತು. ನಮ್ಮಲ್ಲಿ ಇತ್ತಂಡಗಳಾಗಿ ಕಲಹ ಉತ್ಪನ್ನವಾದರೆ ಅನಾಯಾಸವೇ ಮೊಗಲರಿಗೆ ಆಸ್ಪದ ದೊರೆತೀತು. ಆದ್ದರಿಂದ ನಮ್ಮಲ್ಲಿ ಒಡಕು ಹುಟ್ಟಬಾರದೆಂದು ಈಗ ನಾವೇ ಸೋತು ಹೋಗೋಣ. ನಮ್ಮ ನಿಮ್ಮ ಮನಸ್ಸಿನಲ್ಲಿ ಏನಿರುತ್ತದೆಂಬದನ್ನು ಈಗ ಸ್ಪಷ್ಟವಾಗಿ ಹೇಳಿದರೆ ಅನರ್ಥವಾದೀತು. ಇದೇ ಉದ್ದೇಶದಿಂದಲೇ ಮೋರೋಪಂತರೂ ಅವರಿಗೆ ಅನೂಕೂಲರಾಗಿರುವಂತೆ ನಟಿಸುತ್ತಿರುವರು; ನಾವಾದರೂ ಈಗ ಅವರ ಮಾತಿನಂತೆಯೇ ಹೋಗಿ, ಮುಂದೆ ಮಾಡತಕ್ಕದ್ದನ್ನು ವಿಚಾರದಿಂದ ಮಾಡೋಣ. ಮುಖ್ಯ ಮಾತು ಸಾಮ್ರಾಜ್ಯಕ್ಕೆ ಕೇಡು ಉಂಟಾಗಬಾರದು, ಎಂದು ಹೇಳಲು, ರಾಜಾರಾಮನು ಅದಕ್ಕೆ ಒಪ್ಪಿಕೊಂಡನು. ಅಷ್ಟರಲ್ಲಿ ಅಣ್ಣಾಜಿದತ್ತೊ, ಮೋರೋಪಂತಪೇಶವೆ ಮೊದಲಾದವರು ಕುಲಗುರುವಿನೊಡನೆ ಮೃತ ದೇಹದಬಳಿಗೆ ಬಂದರು!

ಸದ್ಯಕ್ಕೆ ಸೋಯರಾಬಾಯಿಯ ಅಪ್ಪಣೆಯಂತೆ ಎಲ್ಲ ಕಾರ್ಯಗಳು ಜರಗಬೇಕಾಗಿದ್ದವು. ನಿಜವಾಗಿಯೆಂದರೆ, ಮೃತರಾಜನ ದೇಹವನ್ನು ಸ್ಮಶಾನಯಾತ್ರೆಗೆ ಹೊರಡಿಸುವ ಮೊದಲು ರಾಜ್ಯದೊಳಗಿನ ಎಲ್ಲ ಸರದಾರರ ಹಾಗು ಮಾನಕರಿ ಮೊದಲಾದವರ ದರ್ಬಾರು ನೆರೆಸಿ, ಸಿಂಹಾಸನದಲ್ಲಿ ಯೋಗ್ಯಪುರುಷನ ಪ್ರತಿಷ್ಠಾಪನೆಯಾಗತಕ್ಕದ್ದು; ಆದರೆ ಆಗಿನ ಅವಸರದಲ್ಲಿ ಆ ಮಾತು ಅಶಕ್ಯವಾದದ್ದರಿಂದ ದುರ್ಗದಮಟ್ಟಿಗಿದ್ದವರ ದರ್ಬಾರವನ್ನೇ ನೆರೆಸಿ ಕುಲಗುರುಗಳಿಂದ ರಾಜಾರಾಮನಿಗೆ ಪಟ್ಟಾಭಿಷೇಕ ಮಾಡಿಸಬೇಕಾಯಿತು. ದರ್ಬಾರದ ಕಾರ್ಯವು ಮುಗಿದು ತಾಂಬೂಲಸಮಾರಂಭವಾಯಿತು. ದರ್ಬಾರದ ಜನರು ಸುಂಗಧದ್ರವ್ಯಾದಿಗಳಿಂದ ಸಂಭಾವಿಸಲ್ಪಟ್ಟರು. ಆಮೇಲೆ ರಾಜರಪದ್ಧತಿಯಂತೆ ಎಲ್ಲ ಸರದಾರರೂ, ದರಕದಾರರೂ, ಮಾನಕರಿಗಳೂ ಕೂಡಿ ರಾಜಾರಾಮನನ್ನು ಕುರಿತು–''ದಸರೆಯ ಮೆರವಣಿಗೆಯ ಸಮಾರಂಭವನ್ನು ಹೊರಡಿಸಲು ಒಪ್ಪಿಗೆ ಇರಬೇಕು'' ಎಂದು ಪ್ರಾರ್ಥಿಸಲು, ಅದಕ್ಕೆ ರಾಜಾರಾಮನು– ''ದಸರೆಯ ಸಮಾರಂಭವನ್ನು ವಿಜೃಂಭಣೆಯಿಂದ ಮಾಡಿರಿ'' ಎಂದು ಆಜ್ಞಾಪಿಸಿದನು. ಕೂಡಲೆ ದರ್ಬಾರದ ಕೆಲಸವು ಮುಗಿದು ಮಹಾರಾಜರ ಶವವನ್ನು ಪಲ್ಲಕ್ಕಿಯಲ್ಲಿ ಕಾಲು ಚಾಚಿಸಿ, ಲೋಡಿಗೆ ಆನಿಸಿ ಕುಳ್ಳಿರಿಸಿದರು. ಈ ಕಾಲದಲ್ಲಿ ೧೦೧ ತೋಫುಗಳು ಮುಜುರೆಯಾಗತಕ್ಕದ್ದು; ಆದರೆ ಹಾಗೆ ತೋಫುಹಾರಿಸಿದರೆ ಸುತ್ತುಮುತ್ತಲಿನ ಪ್ರದೇಶದಲ್ಲಿಯೂ,

ದುರ್ಗಗಳಲ್ಲಿಯೂ ಗದ್ದಲವಾಗಿ ಅನರ್ಥಕ್ಕೆ ಕಾರಣವಾದೀತೆಂದು ತಿಳಿದು ಬರಿಯ ೧೦೧ ತುಬಾಕಿಗಳನ್ನು ಹಾರಿಸಿಯೇ ಕೆಲಸ ಸಾಗಿಸಿರೆಂದು ಸೋಯರಾಬಾಯಿಯು ಆಜ್ಞಾಪಿಸಿದ್ದಳು. ಅದರಂತೆ ೧೦೧ ತುಬಾಕಿಗಳನ್ನು ಹಾರಿಸಿದರು. ಸಾಬಾಜಿಯು ಮುಂದೆ ಸಾಗಿದ್ದನು. ಆತನ ಹಿಂದೆ ಉತ್ತಮ ರೀತಿಯಿಂದ ಶೃಂಗರಿಸಿದ ಮಹಾರಾಜರ ದೇಹವನ್ನು ಕುಳ್ಳಿರಿಸಿದ್ದ ಪಲ್ಲಕ್ಕಿಯು ಬರುತ್ತಲಿತ್ತು. ಸಾಬಾಜಿ ಭೋಸಲೆಯ ಮುಂದುಗಡೆಯಲ್ಲಿ ಸಿಬ್ಬಂದಿಯೂ, ರಾವುತರೂ, ಶೃಂಗರಿಸಿದ ಆನೆಗಳೂ ಸಾಗಿದ್ದು ಪಲ್ಲಕ್ಕಿಯ ಹಿಂದುಗಡೆಯಲ್ಲಿ ಪಟ್ಟ ಕುಂಕುಮ ಹಚ್ಚಿದ ಪುತಳಾಬಾಯಿಸಾಹೇಬರು ಹರಿದ್ರಾ–ಕುಂಕುಮಗಳನ್ನು ಸೂರೆಮಾಡುತ್ತ ತಮ್ಮ ಮೈಮೇಲಿನ ಅಲಂಕಾರಗಳನ್ನು ಸುವಾಸಿನಿಯರಿಗೆ ದಾನಕೊಡುತ್ತ ನಡೆದಿದ್ದರು. ಅವರ ಹಿಂದಿನಿಂದ ಕಾಲಾಳ ಸೈನ್ಯವೂ, ಅದರ ಹಿಂದೆ ದುರ್ಗದ ಮೇಲಿನ ಮಾನಕರಿಗಳೂ ಸಾಗಿದ್ದರು. ಪಲ್ಲಕ್ಕಿಯ ಜೋಲಿಯನ್ನು ಹಿಡಿಯುತ್ತ ನಾಲ್ವರು ಮುತ್ಸದ್ದಿಗಳು ಅಂದರೆ ಅಣ್ಣಾಜಿದತ್ತೋ, ಮೋರೋ ಪಂತಪೇಶವೆ, ರಾಮಚಂದ್ರಪಂತ ಅಮಾತ್ಯ, ಚೀಟಣೀಸ ಇವರು ಬರುತ್ತಲಿದ್ದರು. ಸ್ಮಶಾನದಲ್ಲಿ ಗೊತ್ತುಮಾಡಿದ ಸ್ಥಳಕ್ಕೆ ಹೋದಕೂಡಲೆ ಪಲ್ಲಕ್ಕಿಯನ್ನು ಇಳಿಸುವಾಗ ಮತ್ತೆ ೧೦೧ ತುಬಾಕಿಗಳ ಮುಜುರೆಯಾಯಿತು.

ಅಲ್ಲಿ ನಾನಾತರದ ಸುಗಂಧದ ಕಟ್ಟಿಗೆಗಳನ್ನು ಮೊದಲೇ ತಂದು ಇಟ್ಟಿದ್ದರು. ಚಂದನ, ಅಗರು, ತುಲಸಿಕಾಷ್ಟ, ಕಪ್ಪುರ, ಕೇಶರ, ಕಸ್ತೂರಿ ಮೊದಲಾದ ಪರಿಮಳ ದ್ರವ್ಯಗಳ ರಾಶಿಗೆ ರಾಶಿಗಳು ಅಲ್ಲಿ ಕಣ್ಣಿಗೆ ಬೀಳುತ್ತಿದ್ದವು. ಆಗಿನ ಕಾಲದ ಬ್ರಾಹ್ಮಣರಿಂದ ಮಹಾರಾಜರು ನಿಜವಾದ ಕ್ಷತ್ರಿಯರೆಂದು ಸಿದ್ಧಮಾಡಿಸಿಕೊಂಡದ್ದರಿಂದ ಅವರ ಸಂಬಂಧದ ಕರ್ಮಗಳೆಲ್ಲ ವೇದೋಕ್ತವಾಗಿಯೇ ನಡೆದವು. ಚಿತೆಯನ್ನು ರಚಿಸುವ ಸ್ಥಳವನ್ನು ಮಂತ್ರದಿಂದ ಶುದ್ಧಮಾಡಿದ ಬಳಿಕ ಚಿತೆಯನ್ನು ಒಟ್ಟಲಿಕ್ಕೆ ಆರಂಭವಾಯಿತು. ಬೇರೆ ಸಾಮಾನ್ಯಜನರ ಸಲುವಾಗಿ ಒಟ್ಟತಕ್ಕ ಚಿತೆಯಂತೆ ಈಗ ಒಟ್ಟತಕ್ಕದ್ದಿದ್ದಿಲ್ಲ; ಅದನ್ನು ಸಮ್ಮೇಲನ ಸಹಗಮನಕ್ಕೆ ಅನುಕೂಲವಾಗುವಂತೆ ಒಟ್ಟಬೇಕಾಗಿತ್ತು; ಆದ್ದರಿಂದ ಬಲ್ಲವರು ಆ ಕಾರ್ಯವನ್ನು ಮಾಡಹತ್ತಿದರು. ಅವರು ಮೊದಲು ಚೌಕಾಗಿ ಗಂಧದ ಕಟ್ಟಿಗೆಗಳನ್ನು ಒಟ್ಟಿ, ಅದರ ಮೇಲೆ ಅಗರುವಿನ ಕಟ್ಟಿಗೆಗಳನ್ನು ಒಟ್ಟಿದರು. ಅದರ ಮೇಲೆ ಶಾಸ್ತ್ರೋಕ್ತವಾಗಿ ಶಿವರಾಯನ ದೇಹವು ಮಲಗಿಸಲ್ಪಟ್ಟಿತು. ಕುಲಗುರುಗಳು ಹೇಳಿದಂತೆ ಕಣಕದ ಪಿಂಡಗಳನ್ನು ಆಯಾಸ್ಥಾನದಲ್ಲಿ ಸಾಬಾಜಿರಾಯನು ಇಟ್ಟನು. ಆಮೇಲೆ ಶವದ ಮೇಲೆ ಒಂದು ಗುಡಿಸಲು ಹಾಕುವಂತೆ ಚಂದನದ ಕಟ್ಟಿಗೆಗಳನ್ನು ನಿಲ್ಲಿಸಿದರು! ಮೇಲೆ ಚಪ್ಪರದ ಬದಲು ತುಲಸಿಯ ಕಾಷ್ಠಗಳನ್ನು ಹಾಕಿದರು. ಪ್ರವೇಶ ದ್ವಾರವನ್ನು ಬಿಟ್ಟು ನಾಲ್ಕೂಮಗ್ಗಲು ಕಪ್ಪುರದ ಹಲಿಗೆಗಳ ಗೋಡೆ ಮಾಡಿದರು. ಆಗ ಸಾಧ್ವಿ ಸಿರೋಮಣಿಯಾದ ಪುತಳಾಬಾಯಿಯವರು ಉಟ್ಟ ಪತ್ತಲದ ಹೊರತು ಎಲ್ಲ ವಸ್ತ್ರ ಪ್ರಾವರಣಗಳನ್ನೂ, ಮಂಗಲಸೂತ್ರದ ಹೊರಗೆ ಎಲ್ಲ ಅಲಂಕಾರಗಳನ್ನು ಅರಿಸಿನ ಕುಂಕುಮದೊಡನೆ ಮುತ್ತೈದೆಯರಿಗೆ ದಾನಮಾಡಿ ಅವರ ಆಶೀರ್ವಾದ ಪಡೆದು ಪ್ರವೇಶದ್ವಾರದಿಂದ ಚಿತೆಯನ್ನು ಹತ್ತಿಹೋಗಿ ಎಡಗಡೆಯ ತೊಡೆಯ ಮೇಲೆ ಮಹಾರಾಜರ ತಲೆಯನ್ನಿಟ್ಟು

ಕೊಂಡು ಕುಳಿತರು. ಆಗ ಆ ಪತಿವ್ರತೆಯ ಮುಖಮಂಡಲವು ಪೂರ್ಣಿಮೆಯ ಚಂದ್ರನಂತೆ ಷೋಡಶಕಲಾ ಯುಕ್ತವಾಗಿದ್ದು, ತನ್ನ ಪಾತಿವ್ರತ್ಯದ ದಿವ್ಯವನ್ನು ಮಾಡಿತೋರಿಸುವ ಶ್ರೀ ಸೀತಾದೇವಿಯಂತೆ ಆಕೆಯು ತೋರುತ್ತಿದ್ದಳು! ಈ ಸಮಾರಂಭವನ್ನು ನೋಡುವದಕ್ಕಾಗಿ ದುರ್ಗದ ಮೇಲಿನ ನರನಾರೀಜನರೆಲ್ಲ ಚಿತೆಯ ಸುತ್ತಲು ನೆರೆದಿದ್ದರು. ವಿವಿಧವಾದ್ಯಗಳು ಬಾರಿಸುತ್ತಲಿದ್ದವು. ರಾಜಲಕ್ಷ್ಮಿಯ ನಿಶಾನೆಯು ಆನೆಯ ಮೇಲೆ ಶೋಭಿಸುತ್ತಲಿತ್ತು. ಮೇಲೆ ಹೇಳಿದಂತೆ ಪುತಳಾಬಾಯಿಯು ಆನಂದದಿಂದ ಪತಿಯ ಶಿರಸ್ಸನ್ನು ತೊಡೆಯಮೇಲೆ ಇಟ್ಟು ಕೊಂಡು ಕುಳಿತಕೂಡಲೆ ಪ್ರವೇಶದ್ವಾರವನ್ನು ಕಪ್ಪುರದ ಹಲಿಗೆಗಳಿಂದ ಮುಚ್ಚಿಬಿಟ್ಟರು! ಆಗ ನೆರೆದವರ ಹೃದಯಗಳು ಪಾತಿವ್ರತ್ಯದ ಉಜ್ವಲಪ್ರತಾಪದಿಂದ ಕಂಪಿಸಿದವು. ನೇತ್ರಗಳು ಅಶ್ರುಪೂರ್ಣವಾದವು. ಪುತಳಾಬಾಯಿಯ ಗುಣಾನುವಾದಗಳು ಎಲ್ಲರ ಮುಖದಿಂದ ಹೊರಡ ಹತ್ತಿದವು. ಅಷ್ಟರಲ್ಲಿ ಕುಲಗುರುಗಳು ಹೇಳಿದಂತೆ ಸಾಬಾಜಿರಾಯನು ಮಂತ್ರಾಗ್ನಿಯನ್ನು ಚಿತೆಗೆ ಹಚ್ಚಿದ ಕೂಡಲೆ ಭಯಂಕರ ಜ್ವಾಲೆಯು ಎದ್ದು ಜನರ ಹಾಹಾ ಕಾರ–ಜಯ ಘೋಷದೊಡನೆ ದಗದಗಿಸಿ ಚಿತೆಯು ಉರಿಯಹತ್ತಿತು! ಕೂಡಲೆ ತುಬಾಕಿಗಳು ಹಾರಿದವು. ವಿವಿಧಧ್ವನಿಗಳ ಸಮುಚ್ಚಯದ ಘೋರನಾದದಿಂದ ದಶ ದಿಕ್ಕುಗಳು ತುಂಬಿ ಹೋದವು!

ಈ ಲೋಕದಲ್ಲಿ ಹುಟ್ಟಿದ್ದು ಯಾವದಿದ್ದರೂ ಲಯವಾಗತಕ್ಕದ್ದೇ ಎಂಬ ಸಿದ್ಧಾಂತವನ್ನು ಗಟ್ಟಿಯಾಗಿ ಕೂಗಿ ಹೇಳುವಂತೆ, ಸಾಕ್ಷಾತ್ ಅಗ್ನಿನಾರಾಯಣನು ಸಾಧ್ವೀ ಪುತಳಾಬಾಯಿ ಯೊಡನೆ ಮಹಾರಾಜರ ಶರೀರವನ್ನು ಸುಟ್ಟು, ನೆಲಕ್ಕೆ ಕುಕ್ಕುರುಬಡಿಯತೊಡಗಿದನು. ಯಾವನು ಚಿಕ್ಕಂದಿನಿಂದಲೇ ಸ್ವಧರ್ಮೋದ್ಧಾರ, ಸ್ವರಾಜ್ಯಸ್ಥಾಪನೆಗಳ ಸಲುವಾಗಿ ಪರಿಪರಿ ಯಾಗಿ ಕಷ್ಟ ಪಟ್ಟನೋ, ಯಾವನ ಪ್ರತಾಪಕ್ಕಾಗಿ ವೈರಿಗಳು ತತ್ತರಿಸುತ್ತಿದ್ದರೋ, ಯಾವನ ರಾಜತಂತ್ರಗಳ ಹಿಡತ–ಒಗತಗಳಿಗಾಗಿ ಯವನರಾಜರು ಕೂಡ ತಲೆದೂಗಿದರೋ, ಯಾವನು ತನ್ನ ಅತುಲ ಪರಾಕ್ರಮದಿಂದ ನಿಜವಾದ ಕ್ಷಾತ್ರತೇಜಸ್ಸನ್ನು ಪ್ರಕಟಿಸಿದನೋ, ಯಾವನ ಮಹಾಬಲಕ್ಕಾಗಿ ಮದ್ದಾನೆಯೂ ಕೂಡ ಮೊಣಕಾಲು ಊರುತ್ತಿತ್ತೋ, ಯಾವನು ದೀನಾನಾಥರ ರಕ್ಷಣವೆ ತನ್ನ ಕುಲಧರ್ಮವೆಂದು ತಿಳಿದುನಡೆದು ಶ್ರೀ ಸಮರ್ಥರ ಅನುಗ್ರಹಕ್ಕೆ ಪಾತ್ರ ನಾದನೋ, ಯಾವನು ಜನ್ಮವಿರುತನಕ ನಿಷ್ಕಲಂಕಕೀರ್ತಿಯನ್ನು ಕಾಯ್ದುಕೊಂಡನೋ, ಯಾವನ ಪರಿಶುದ್ಧಾಚರಣೆಗಾಗಿ ಶತ್ರುಗಳೂ ಪ್ರಸಂಗವಶಾತ್ ಮಿತ್ರರಾದರೋ, ಹೀಗೆ ಒಂದಲ್ಲ ಎರಡಲ್ಲ ಹಲವು ಸದ್ಗುಣಗಳಿಂದ ಶೋಭಿಸುತ್ತಿದ್ದ ಆ ಮಹಾರಾಷ್ಟ್ರ ರಾಜ್ಯ ಸ್ಥಾಪಕನಾದ ಶಿವರಾಯನು ಹೀಗೆ ಸುಟ್ಟು ಬೂದಿಯಾಗುವದನ್ನು ನೋಡಿ ಆಗಿನ ಯಾವ ನಿಜ ವಾದ ಮರಾಟನ ಹೃದಯವು ಬೆಂದುಬಸವಳಿದಿರಲಿಕ್ಕಿಲ್ಲ. ಇಂಥ ಘನವಂತನು ಗೃಹ ಕಲಹಕ್ಕೆ ಗುರಿಯಾಗಿ ವಿಷಪ್ರಯೋಗದಿಂದ ಅಸುವಳಿಯಬೇಕೆ? ರಾಜ್ಯಲೋಭದಿಂದ ಪತಿಯ ಮೇಲೆ ವಿಷಪ್ರಯೋಗಮಾಡಿ ತಾನುವೈಧವ್ಯದ ಪಂಕದಲ್ಲಿ ಸಿಕ್ಕುಬಿದ್ದ ಸೋಯರಾಬಾಯಿ ಯನ್ನೂ, ನಿಜವಾದ ಪಾತಿವ್ರತ್ಯದ ಪ್ರಭಾವದಿಂದ ಪತಿಯ ಮುಂದೆ ತನ್ನ ಪ್ರತ್ಯಕ್ಷ ದೇಹ

ವನ್ನು ತುಚ್ಛೀಕರಿಸಿ ಸಹಗಮನದ ಯೋಗದಿಂದ ಪತಿಗೆ ಆತ್ಮವನ್ನರ್ಪಿಸಿದ ಪುತಳಾಬಾಯಿ ಯನ್ನೂ ಒತ್ತಟ್ಟಿಗಿಟ್ಟು ನೋಡಿದರೆ, ದೇವದೈತ್ಯರಲ್ಲಿರು ವ ಅಂತರವು ಒಡೆದು ಕಾಣುವ ದಲ್ಲವೆ? ಜನರ ಮನಸ್ಸಿನಲ್ಲಿ ಈ ಬಗೆಯ ಬೋಧಪ್ರದವಾದ ಹಲವು ವಿಚಾರಗಳು ಹೊಳೆ ಯುತ್ತಿರಲು, ಮಹಾರಾಜರ ತಲೆಯ ಪರಟಿಯೊಡೆದ ಸಪ್ಪಳವಾಯಿತು. ಕೂಡಲೆ ವಾದ್ಯ ಘೋಷಗಳಿಂದ ಜನರ ಕಿವಿಗಳು ಗಡಚಿಕ್ಕಲು, ತುಬಾಕಿಗಳು ಹಾರಿದವು. ಬಳಿಕ ಜನರು ಮಹಾರಾಜರ ಗುಣಗಳನ್ನು ವರ್ಣಿಸುತ್ತ, ಪುತಳಾಬಾಯಿಯ ಪಾತಿವ್ರತ್ಯದ ಧೈರ್ಯಕ್ಕಾಗಿ ತಲೆದೂಗುತ್ತ, ಕಣ್ಣೀರುಸುರಿಸುತ್ತ ''ಎಂದಿಲ್ಲೊಂದು ದಿನ ನಾವಾದರೂ ಹೋಗುವವರೇ'' ಎಂಬ ಶ್ಮಶಾನವೈರಾಗ್ಯದ ಮಾತುಗಳನ್ನು ಆಡುತ್ತ ಜನರು ತಮ್ಮ ತಮ್ಮ ಮನೆಗಳಿಗೆ ಹೊರಟು ಹೋಗಹತ್ತಿದರು! ಮುತ್ಸದ್ದಿಗಳು ಶೋಕಾತಿಶಯದಿಂದ ಜಡಹೃದಯರಾಗಿದ್ದರೂ, ಪದ್ಧತಿಯಂತೆ ಎಲ್ಲರೂ ರಾಜಾರಾಮ ಮಹಾರಾಜರ ಬಳಿಯಲ್ಲಿ ಒಟ್ಟುಗೂಡಿ ಸದ್ಗದಿತ ಕಂಠರಾಗಿ ಏಕವಾಕ್ಯದಿಂದ ''ದಸರೆಯ ಉತ್ಸವವನ್ನು ಉತ್ತಮರೀತಿಯಿಂದ ಮಾಡಿದೆವು'' ಎಂದು ಕಷ್ಟದಿಂದ ಹೇಳಿದರು. ಆಗ ರಾಜಾರಾಮ ಮಹಾರಾಜರ ದುಃಖವು ಒತ್ತರಿಸಿ ಕುತ್ತಿಗೆಯ ಶಿರಗಳು ಬಿಗಿದು ಮಾತುಗಳು ಹೊರಡದಾದವು; ಅವರ ಕಣ್ಣುಗಳೊಳಗಿಂದ ಒಂದೇಸವನೆ ನೀರುಗಳು ಸುರಿಯಹತ್ತಿದವು; ಆದರೂ ಅವರು ಬಹು ಕಷ್ಟದಿಂದ ''ಒಳ್ಳೇದು'' ಎಂಬ ಶಬ್ದವನ್ನಷ್ಟು ಉಚ್ಚರಿಸಿದರು.

ಮುಂದಿನ ಕರ್ಮಗಳನ್ನೆಲ್ಲ ರಾಜಾರಾಮ ಮಹಾರಾಜರು ಸಾಬಾಜಿರಾವ ಬೋಸಲೆ ಯವರ ಕೈಯಿಂದ ತಾವು ನಿಂತು ಯಥಾಸ್ಥಿತವಾಗಿ ಮಾಡಿಸಿದರೂ, ಅವರ ಮನಸ್ಸಿಗೆ ಸಮಾಧಾನವಿದ್ದಿಲ್ಲ. ಚೀಟಣೀಸನ ಹಾಗು ಅವರ ಏಕಾಂತಗಳು ದಿನಾಲು ಆಗಹತ್ತಿದವು. ಅತ್ತ ಮೋರೋಪಂತ ಪೇಶವೆ, ಅಣ್ಣಾಜಿದತ್ತೋ, ರಾಮಚಂದ್ರಪಂತ ಅಮಾತ್ಯ, ಸೋಯರಾ ಬಾಯಿ ಇವರ ಗುಪ್ತಾಲೋಚನೆಗಳು ನಡೆದವು. ಹೀಗೆ ಮಹಾರಾಷ್ಟ್ರ ಸಿಂಹಾಸನದ ಪ್ರಾಪ್ತಿಗಾಗಿ ಎರಡು ಹಾನಿಕಾರಕವಾದ ಪಂಗಡಗಳಾಗಿ, ಆ ರಾಜ್ಯದ ಸಾಮರ್ಥ್ಯವು ಕುಗ್ಗಹತ್ತಿತು. ಬಾಳಾಜಿ ಚೀಟಣೀಸನ ಮಗನಾದ ಆವಜಿಯು ಸೋಯರಾಬಾಯಿಯ ಪಂಗಡದಲ್ಲಿ ಸೇರಿ ಕೆಲಸಮಾಡ ಹತ್ತಿದನು. ಹೀಗಾಗಿ ಮಹಾರಾಷ್ಟ್ರದ ಮುತ್ಸದ್ದಿ ಮಂಡಲದಲ್ಲಾಗಲಿ, ಸರದಾರ ಮಂಡಲ ದಲ್ಲಾಗಲಿ ಒಕ್ಕಟ್ಟಿನ ರಾಷ್ಟ್ರಕಾರ್ಯನಿರ್ವಾಹೋತ್ಸಾಹವು ತೋರುವದರ ಬದಲು, ಮಾತ್ಸರ್ಯಮೂಲವಾದ ಅಂತಃಕಲಹದ ಸಂತಾಪದಿಂದ ಸತ್ವಹಾನಿಯಾಗುವದು ಕಣ್ಣಿಗೆ ಬೀಳಹತ್ತಿತು! ಸೂರ್ಯನು ಅಸ್ತಂಗತನಾಗತೊಡಗಿದ ಕೂಡಲೆ ಕತ್ತಲೆಯು ಹಣಿಕಿಹಾಕಹತ್ತಿ, ಸೂರ್ಯನು ಪೂರಾ ಅಸ್ತಂಗತನಾಗುತ್ತಲೇ ಆ ಕತ್ತಲೆಯು ಜಗತ್ತನ್ನು ಮುಸುಕುವಂತೆ, ನಿಸ್ವಾರ್ಥದ ಬೆಳಕಿನಿಂದ ಬೆಳಗುತ್ತಿದ್ದ ಶಿವರಾಯನು ಪರಲೋಕಕ್ಕೆ ತೆರಳಲುದ್ಯುಕ್ತನಾದಂತೆ ಮಹಾರಾಷ್ಟ್ರಮಂಡಲದ ಸ್ವಾರ್ಥಾಭಿಲಾಷಾರೂಪವಾದ ಕತ್ತಲೆಯು ಹಣಿಕಿಹಾಕಹತ್ತಿ ಶಿವರಾಯನು ದೇಹವಿಟ್ಟ ಕೂಡಲೆ ಆ ಸ್ವಾರ್ಥಾಭಿಲಾಷಾರೂಪವಾದ ಕತ್ತಲೆಯು ಮಹಾರಾಷ್ಟ್ರ

ಮಂಡಲವನ್ನು ಮುಸುಕಿತು. ಅದಕ್ಕೆ ಸಾಕ್ಷಿಭೂತವಾಗಿಯೇ ಮಹಾರಾಷ್ಟ್ರದಲ್ಲಿ ಎರಡು ಪಂಗಡಗಳಾದವು. ಸ್ವಾರ್ಥವು ಹೆಚ್ಚಿದಂತೆ ಒಕ್ಕಟ್ಟು ಕಡಿಮೆಯಾಗುವದೆಂತಲೂ ನಿಸ್ಸಂಶಯ ವಾಗಿ ಹೇಳಬಹುದು. ಈ ಸಿದ್ಧಾಂತದಂತೆ ಶಿವಛತ್ರಪತಿಯ ತರುವಾಯದಲ್ಲಿ ಮಹಾರಾಷ್ಟ್ರ ಮಂಡಲ ದೊಳಗೆ ಸ್ವಾರ್ಥದ ಕಸುವು ಹೆಚ್ಚುತ್ತ ಹೋದಂತೆ ಪಂಗಡಗಳು ಹೆಚ್ಚುತ್ತ ಹ್ಯಾಗೆ ಹೋದವೆಂಬದನ್ನು ಇತಿಹಾಸ ಹೇಳುತ್ತಿರುವದು. ಸಂಭಾಜಿಯ ಮಕ್ಕಳಾದ ಶಾಹೂರಾಜರ ಕಾಲದಲ್ಲಿ ಸಾತಾರೆ ಮತ್ತು ಕೊಲ್ಲಾಪುರ ಎಂಬ ಎರಡೇ ಪಂಗಡಗಳಾದವು. ಮುಂದೆ ಪೇಶ್ವೆಯರ ಅಮಲಿನ ಮಧ್ಯದಲ್ಲಿ ಸಿಂಧೆ, ಹೋಳಕರ, ಭೋಸಲೆ, ಗಾಯಕವಾಡ, ಪೇಶ್ವೆ ಎಂಬ ಐದು ಪಂಗಡಗಳಾಗಿದ್ದದ್ದು ಇತಿಹಾಸ ಪ್ರಸಿದ್ಧವಾಗಿರುವದು. ಸದ್ಯಕ್ಕೆ ಬಾಳಾಜಿ ಚೀಟಣೀಸನು ಒಳ್ಳೇ ಮುತ್ಸದ್ದಿತನದಿಂದ ತನ್ನ ಮಗನಾದ ಆವಜಿಯನ್ನು ಸೋಯರಾಬಾಯಿಯ ರಾಜಕಾರಣದಲ್ಲಿ ಸೇರಿಸಿ ಆತನ ಸಹಾಯದಿಂದ ಸಂಭಾಜಿಯನ್ನು ಪಟ್ಟಕ್ಕೆ ಕೂಡಿಸುವ ತನ್ನ ಕಾರ್ಯವನ್ನು ಯುಕ್ತಿಪ್ರಯುಕ್ತಿಯಿಂದ ಹ್ಯಾಗೆ ಸಾಧಿಸಿದನೆಂಬದು ಮುಂದಿನ ಪ್ರಕರಣಗಳಿಂದ ಗೊತ್ತಾಗಬಹುದು.

## ಮಾವಳ್ಯಾ ಪ್ರವಾಸಿಯು !

ಸೂರ್ಯೋದಯದ ಸಮಯವು. ಪಲ್ಹಾಳಗಡದಲ್ಲಿ ಸಂಭಾಜಿಮಹಾರಾಜರು ಹಾಸಿಗೆಯ ಮೇಲೆ ಘೋರ ಚಿಂತೆಯಲ್ಲಿ ಮಗ್ನರಾಗಿ ಕುಳಿತುಕೊಂಡಿದ್ದರು. ಬೆಳಗು ಮುಂಜಾವಿನಲ್ಲಿ ಬಿದ್ದಿದ್ದ ದುಷ್ಟ ಸ್ವಪ್ನದಿಂದ ಅವರ ಚಿತ್ತವೃತ್ತಿಯು ಬಹಳ ಅಸ್ವಸ್ಥವಾಗಿತ್ತು. ಅವರ ಸ್ವಪ್ನದಲ್ಲಿ ಒಂದು ತೇಜಃಪುಂಜವಾದ ನಕ್ಷತ್ರವು ಅವಿಚ್ಛಿನ್ನವಾದ ಪ್ರಕಾಶರೇಖೆಯಿಂದ ಭೂಮಿಯ ಮೇಲೆ ಬಿದ್ದು ಬೆಳಗತೊಡಗಿತು. ಅದನ್ನು ಹಿಡಿಯುವದಕ್ಕಾಗಿ ಅವರು ಹೋಗಲು, ಕೂಡಲೆ ಅದು ಅದೃಶ್ಯವಾಗಿ ಅದರ ಸ್ಥಳದಲ್ಲಿ ಶಿವಾಜಿಮಹಾರಾಜರ ಭಯಂಕರ ರೂಪವು ಕಣ್ಣಿಗೆ ಕಾಣಿಸಿತು. ಈ ಸ್ವಪ್ನದಮೇಲಿಂದ ರಾಯಗಡದಲ್ಲಿ ಏನೋ ಅನರ್ಥವು ಒದಗಿರಬೇಕೆಂದು ಅವರು ತರ್ಕಿಸಹತ್ತಿದರು. ಸಾಧಾರಣವಾಗಿ ಅಂದಿನ ದಿನವೆಲ್ಲ ಅವರಿಗೆ ಸಮಾಧಾನವಿದ್ದಿಲ್ಲ ವೆಂದು ಹೇಳಬಹುದು. ಸ್ವಲ್ಪ ದಿನಗಳ ಹಿಂದೆ ಬಾಳಾಜಿ ಆವಜಿ ಚೀಟಣೀಸನಿಂದ ಅವರಿಗೆ– ''ನೀವು ಎಲ್ಲ ರೀತಿಯಿಂದಲೂ ಜಾಗರೂಕರಾಗಿರಬೇಕೆಂ''ದು ಪತ್ರ ಬಂದಿತ್ತು. ಈ ಎಲ್ಲವು ಗಳಿಂದ ಅವರ ಮನಸ್ಸಿನಲ್ಲಿ ಒಂದರಹಿಂದೊಂದು ಕೆಟ್ಟ ಕಲ್ಪನೆಗಳು ಬರತೊಡಗಿದವು. ಮಹಾರಾಜರ ಜೀವಕ್ಕೆ ಏನೋ ಅಪಾಯವಾಗಿರಬಹುದೆಂದು ಅವರಿಗೆ ಸಂಶಯ ಬರ ತೊಡಗಿತು. ಅಂದಿಗೆ ಮಹಾರಾಜರು ದೇಹವಿಟ್ಟು, ಒಂದು ತಿಂಗಳಮೇಲೆ ನಾಲ್ಕು ದಿನ ಗಳಾಗಿದ್ದವು. ದೇಹಬಿಟ್ಟ ದಿವಸವು ಸಂಭಾಜಿ ಮಹಾರಾಜರಿಗೆ ಸಮಾಧಾನವಿದ್ದಿಲ್ಲ. ಅಂದಿ

ನಿಂದ ಅವರ ಜೀವಕ್ಕೆ ಸಾಧಾರಣವಾಗಿ ಸೊಗಸೇ ಇದ್ದಿಲ್ಲವೆಂದು ಹೇಳಬಹುದು. ಒಂದಿ ಲ್ಲೊಂದು ದುಷ್ಟ ಸ್ವಪ್ನಗಳೇ ಅವರಿಗೆ ಬೀಳುತ್ತಲಿದ್ದವು. ಆದರೆ ಮಾಡುವದೇನು? ರಾಯಗಡದ ಸುದ್ದಿಯನ್ನು ತಿಳಕೊಂಡೇ ನೆಂದರೆ ಅವರಿಗೆ ಸ್ವಾತಂತ್ರ್ಯವಿದ್ದಿಲ್ಲ. ಸೋಯರಾಬಾಯಿಯ ಶಾಸನದಿಂದ ಒಬ್ಬರೂ ರಾಯಗಡದ ಸುದ್ದಿಯನ್ನು ಅವರಿಗೆ ತಿಳಿಸುವಹಾಗಿದ್ದಿಲ್ಲ. ತಮ್ಮ ಕಾವಲೂ ಮೊದಲಿಗಿಂತ ಹೆಚ್ಚುಬಂದೋಬಸ್ತಿನದಾದಂತೆ ಅವರಿಗೆ ತೋರಿತು. ಈ ಎಲ್ಲದರ ಕಾರಣದಬಗ್ಗೆ ಬಲವಾದ ಶಂಕೆಯು ಅವರಿಗೆ ಉತ್ಪನ್ನವಾಯಿತು. ಕೂಡಲೆ ಅವರು ಕಬಜಿ ಯನ್ನು ಕರಕೊಂಡು ಬರಲು ಸೇವಕನಿಗೆ ಆಜ್ಞಾಪಿಸಿದರು.

ಹೀಗೆ ಸಂಭಾಜಿರಾಜರು ಚಿಂತಾಮಗ್ನರಾಗಿ ಕಬಜಿಯನ್ನು ಕರೆಸುತ್ತಿರಲು, ಒಬ್ಬ ಮಾವಳೇಜನರ ಪ್ರವಾಸಿಯು ಪಲ್ಹಾಳಗಡದ ಬಾಗಿಲಿಗೆ ಬಂದನು. ಆತನು ಅಂದಿನ ಸಾಂಕೇತಿಕ ಶಬ್ದವನ್ನು ಉಚ್ಚರಿಸಿದ ಕೂಡಲೆ ದುರ್ಗದಲ್ಲಿ ಆತನ ಪ್ರವೇಶವಾಯಿತು. ಆತನ ಕೈಯಲ್ಲಿ ಗಟ್ಟಿ ಬಿದಿರಿನದೊಂದು ಬಡಿಗೆಯಿದ್ದು, ಮುಂಡಾಸದ ಮೇಲಿನಿಂದ ಆತನು ಕರಿಯ ಕಂಬಳಿಯ ಕೊಪ್ಪಿಯನ್ನು ಹೊತ್ತಿದ್ದನು. ಇವಲ್ಲದೆ ಮೈಯಲ್ಲಿ ಮಾವಳೇಜನರ ಪದ್ಧತಿಯ ದೊಂದು ಬಗಲಕಸಿಯ ಅಂಗಿ, ಮರ್ಯಾದೆ ಮುಚ್ಚುವದಕ್ಕೊಂದು ಲಂಗೋಟಿ ಇವಿಷ್ಟು ಆತನ ಮೈಮೇಲೆ ಇದ್ದವು. ಆತನ ಮೈಬಣ್ಣ ಸಾದಗಪ್ಪಿನದಿದ್ದು, ಕಣ್ಣುಗಳು ತೇಜಃಪುಂಜ ವಾಗಿದ್ದವು. ಹೀಗೆ ಆತನ ವೇಷವು ಮಾವಳೆಯರದಾಗಿದ್ದರೂ, ಆತನ ಮುಖದ ವರ್ಚಸ್ಸು, ನೋಡುವವರ ಮನಸ್ಸನ್ನು ಎಳೆದುಕೊಳ್ಳುತ್ತಿತ್ತು. ಆತನು ದುರ್ಗದಲ್ಲಿ ಪ್ರವೇಶಮಾಡಿದ ಕೂಡಲೆ, ಆ ದುರ್ಗದಲ್ಲಿಯವನಂತೆ ಸರಸರ ಸಂಭಾಜಿಮಹಾರಾಜರ ಮಂದಿರದ ಬಾಗಿಲ ವರೆಗೆ ಹೋದನು. ಕೂಡಲೆ ಆತನು ಕಾವಲುಗಾರನ ಕಿವಿಯಲ್ಲಿ ಏನೋ ಹೇಳಲು, ದಿನದ ಆಳುಹೋಳಿನ ಪ್ರವೇಶವಾಗುವಂತೆ ಒಳಗೆ ಆತನ ಪ್ರವೇಶವಾಯಿತು. ಆ ಮಂದಿರದ ಬಾಗಿಲಿನಿಂದ ಹೊರಟ ಆತನು, ಮಹಾರಾಜರ ಖಾಸ ಮಂದಿರದ ಬಾಗಿಲಿಗೆ ನೆಟ್ಟಗೆ ಹೋದನು. ಪುನಃ ಆತನು ಅಲ್ಲಿಯ ದ್ವಾರರಕ್ಷಕನ ಕಿವಿಯಲ್ಲಿ ಮಂತ್ರವನ್ನು ಊದಲು, ದ್ವಾರದ ಪರದೆಯನ್ನು ಓರೆಮಾಡಿ ಕಾವಲುಗಾರನು ಪ್ರವಾಸಿಯನ್ನು ಒಳಗೆಬಿಟ್ಟನು. ಪ್ರವಾಸಿಯು ಒಳಗೆ ಹೋದಕೂಡಲೆ ಪರದೆಯು ಮೊದಲಿನಂತೆ ಆಯಿತು. ಪ್ರವಾಸಿಯ ಒಳಗೆ ಹೋಗಿ ಸಂಭಾಜಿಮಹಾರಾಜರಿಗೆ ಬಗ್ಗಿ ಮುಜುರೆ ಮಾಡಿದನು; ಆದರೆ ಚಿಂತಾ ಮಗ್ನರಾದ ಮಹಾರಾಜರಿಗೆ ಅದು ಗೊತ್ತೇ ಆಗಲಿಲ್ಲ. ಆಗ ಪ್ರವಾಸಿಯು– "ಮಹಾರಾಜರು ಜಯಶೀಲರಾಗಲಿ" ಎಂದು ಉಚ್ಚರಿಸಿದ ಕೂಡಲೆ ಮಹಾರಾಜರು ಒಮ್ಮೆಲೆ ಎಚ್ಚತ್ತು ಪ್ರವಾಸಿಯನ್ನು ತೀಕ್ಷ್ಣದೃಷ್ಟಿಯಿಂದ ನೋಡಹತ್ತಿದರು; ಆದರೆ ಗುರುತು ಹತ್ತಿದ ಹಾಗೆ ಆಗುತ್ತಿದ್ದರೂ ಯಾರೆಂಬದು ಬೇಗನೇ ಗೊತ್ತಾಗಲೊಲ್ಲದು. ಆಗ ಪ್ರವಾಸಿಯು ಮಹಾರಾಜ ರನ್ನು ದಿಟ್ಟಿಸಿನೋಡಿ– "ಮಹಾರಾಜ, ಈ ಸೇವಕನ ಪರಿಚಯ ಹತ್ತಲೊಲ್ಲದೋ" ಎಂದು ಮುಗುಳು ನಗೆಯಿಂದ ಕೇಳುತ್ತಿರಲು, ಸಂಭಾಜಿಯು ಚಟ್ಟನೆ ಎದ್ದು ಬಂದು ಪ್ರವಾಸಿ

ಯನ್ನು ಗಟ್ಟಿಯಾಗಿ ಅಪ್ಪಿಕೊಂಡನು. ಆಗಿನ ಅವರ ದೃಢಾಲಿಂಗನದ ರೀತಿಯನ್ನು ನೋಡಿದವರು, ಯಾವನೋ ಒಬ್ಬ ಜೀವದ ಗೆಳೆಯನು ಬಹು ದಿನಗಳಮೇಲೆ ಬಂದು, ಸಂಭಾಜಿರಾಜನಿಗೆ ಅಕಸ್ಮಾತ್ ದರ್ಶನ ಕೊಟ್ಟಿರಬಹುದೆನ್ನುವಂತೆ ಭಾಸವಾಗಬಹುದಾಗಿತ್ತು

ಹೀಗೆ ಅವರಿಬ್ಬರು ಪರಸ್ಪರರನ್ನು ಆಲಂಗಿಸಿದ ಬಳಿಕ ಅವರು ಮಂಚದ ಮುಂದು ಗಡೆಯಲ್ಲಿ ಹಾಸಿದ ರತ್ನಗಂಬಳಿಯಮೇಲೆ ಒಬ್ಬರಮುಂದೊಬ್ಬರು ಕುಳಿತುಕೊಂಡರು. ಆಗ ಸಂಭಾಜಿ ಮಹಾರಾಜರ ಕಣ್ಣುಗಳು ಅಶ್ರುಪೂರ್ಣವಾದದ್ದನ್ನು ನೋಡಿ ಆ ವೇಷಧಾರಿ ಪ್ರವಾಸಿಯು– ''ಮಹಾರಾಜ, ಇದೇನು? ತಮ್ಮ ನೇತ್ರಗಳು ಅಶ್ರುಪೂರ್ಣವಾಗಿ ಅಶ್ರು ಬಿಂದುಗಳು ಭೂಮಿಯಮೇಲೆ ಬೀಳುವಹಾಗೆ ತೋರುತ್ತದೆ! ಆದರೆ ಈ ಸಮಯವು ಕಣ್ಣೀರು ಸುರಿಸುತ್ತ ಕುಳಿತುಕೊಳ್ಳತಕ್ಕದ್ದಲ್ಲ, ಕೈಯಲ್ಲಿ ಶಸ್ತ್ರಧರಿಸತಕ್ಕದ್ದಾಗಿದೆ..........

ಸಂಭಾಜಿ–ಏನಂದಿರಿ? ಈ ಪ್ರಸಂಗವು ಶಸ್ತ್ರಧರಿಸತಕ್ಕದ್ದಾಗಿರುವದೆಯೇ? ಸನ್ಮಾನ ನೀಯರಾದ ಪ್ರಿಯಮಿತ್ರರೇ, ಹೇಳಿರಿ, ಸುದ್ದಿಯೇನಿರುವದೆಂಬದನ್ನು ಬೇಗನೆ ಹೇಳಿರಿ.

ಸಂಭಾಜಿ ಮಹಾರಾಜರು ಹೀಗೆ ಪ್ರಶ್ನೆ ಮಾಡಿದ ಕೂಡಲೆ ಆ ಪ್ರವಾಸಿಯು ರಾಯ ಗಡದಮೇಲೆ ನಡೆದ ವೃತ್ತಾಂತದಲ್ಲಿ ಹೇಳತಕ್ಕದ್ದನ್ನಷ್ಟೇ ಸ್ವಲ್ಪದರಲ್ಲಿ ಹೇಳಿ, ಕೂಡಲೆ ತನ್ನ ಗೊಂಗಡಿಯೊಳಗಿಂದೊಂದು ಪತ್ರವನ್ನು ತೆಗೆದು ಅವರ ಕೈಯಲ್ಲಿ ಕೊಟ್ಟನು. ಅದನ್ನು ಓದಿ ಮಹಾರಾಜರು ಸ್ವದಸ್ತೂರಿನ ಸಹಿ ಮಾಡಲು, ಆ ಪ್ರವಾಸಿಯು ಅದನ್ನು ಮೋಹರ ಬಂದ ಮಾಡಿ ಮಹಾರಾಜರ ಕೈಯಲ್ಲಿ ಕೊಟ್ಟು, ಕೂಡಲೆ ಎದ್ದು ನಿಂತು ರಾಯಗಡಕ್ಕೆ ತಿರುಗಿ ಹೋಗುವದಕ್ಕಾಗಿ ಮಹಾರಾಜರ ಅಪ್ಪಣೆಯನ್ನು ಕೇಳಿದನು. ಈ ಪ್ರಸಂಗದಲ್ಲಿ ಮಹಾರಾಜರ ಹೃದಯವು ಕೃತಜ್ಞತೆಯಿಂದ ಕರಗಿ ಕಣ್ಣೊಳಗಿಂದ ನೀರುಗಳು ಸುರಿಯ ಹತ್ತಿದವು. ಅವರು ಗದ್ಗದ ಸ್ವರದಿಂದ ಆ ಪ್ರವಾಸಿಯನ್ನು ಕುರಿತು– ''ಬಾಳಾಜೀ, ನಿಮ್ಮ ಈ ಉಪಕೃತಿಯನ್ನು ನಾನು ಜನ್ಮ ಜನ್ಮಾಂತರದಲ್ಲಿ ಮರೆಯಲಿಕ್ಕಿಲ್ಲ! ನನ್ನಂಥ ಹತಭಾಗ್ಯನ ಸಲುವಾಗಿ ನೀವು ಇಂಥ ನೀಚ ವೇಷವನ್ನು ಧರಿಸಿದಿರಾ? ನೀವು ಪ್ರತ್ಯಕ್ಷ ಆಬಾಸಾಹೇಬರ ಆಶತ್ಮಸ್ವರೂಪರಾದ ಬಾಳಾಜಿ ಆವಜಿ ಚೀಟಣೀಸರಲ್ಲವೆ? ನಮ್ಮ ಪೂರ್ವ ಪುಣ್ಯವು ನಿಶ್ಚಯವಾಗಿ ಫಲಿಸಿತು.''

ಈ ಮೇರೆಗೆ ನುಡಿದ ಸಂಭಾಜಿಮಹಾರಾಜರ ಮಾತುಗಳನ್ನು ಕೇಳಿದ ವಾಚಕರಿಗೆ, ನಾವು ಪ್ರವಾಸಿಯು ಯಾರೆಂಬದನ್ನು ಪುನಃ ಹೇಳುವ ಕಾರಣವಿಲ್ಲ. ಬಾಳಾಜಿಯ ಒಲವು ನಿಜವಾಗಿ ಸಂಭಾಜಿಮಹಾರಾಜರ ಕಡೆಗೆ ಇತ್ತು. ಆತನು ತೋರಿಕೆಗೆ ಸೋಯರಾಬಾಯಿಯ ಒಳಸಂಚಿನಲ್ಲಿಸೇರಿದ್ದರೂ, ಅಂತರಂಗದಿಂದ ಆತನು ಸಂಭಾಜಿಮಹಾರಾಜರ ಹಿತ ಮಾಡುವ ವನಾಗಿದ್ದನು. ಆತನು ಅದೇ ಉದ್ದೇಶದಿಂದಲೇ ತನ್ನ ಮಗನಾದ ಆವಜಿಯನ್ನು ಸೋಯರಾ ಬಾಯಿಗೆ ಒತ್ತಿ ಇಟ್ಟಂತೆ ಒಪ್ಪಿಸಿಬಿಟ್ಟಿದ್ದನು. ಇದರಿಂದ ಬಾಳಾಜಿಯು ಮನೆಯಲ್ಲಿ ಕುಳಿತಿದ್ದರೂ ಅನಾಯಾಸವಾಗಿ ಒಳಸಂಚಿನ ಸಂಗತಿಗಳು ಮಗನ ಮುಖಾಂತರವಾಗಿ ದಿನದಿನಕ್ಕೆ ತಿಳಿದು, ಅದಕ್ಕೆ ತಕ್ಕ ಪ್ರತೀಕಾರಮಾಡಲಿಕ್ಕೆ ಆತನಿಗೆ ಅನುಕೂಲವಾಗುತ್ತಿತ್ತು,

ದೈವಾನುಕೂಲತೆಯಿಂದ ಒಮ್ಮೊಮ್ಮೆಪ್ರತಿ ಕೂಲಸಂಗತಿಗಳೂ ಅನುಕೂಲವಾಗುತ್ತವೆಂಬ ಮಾತು ಸುಳ್ಳಲ್ಲ. ಆ ಕಾಲಕ್ಕೆ ಬಾಳಾಜಿಯ ಸ್ಥಿತಿಯು, ಇತ್ತಬಿದ್ದರೆ ಕೆರೆ, ಇತ್ತಬಿದ್ದರೆ ಬಾವಿ ಯೆನ್ನುವ ಹಾಗೆ ಆಗಿತ್ತು. ಆತನು ತನಗೆ ಎಷ್ಟು ಶ್ರಮವಾದರೂ, ತನ್ನ ಸ್ವಾಮಿಯ ಕಾರ್ಯ ಸಾಧನದ ವಿಷಯವಾಗಿ ಹಿಂದೆಮುಂದೆ ನೋಡುವಹಾಗಿದ್ದಿಲ್ಲ. ಸ್ವೀಕೃತ ಕಾರ್ಯದಲ್ಲಿ ಎಷ್ಟು ವಿಘ್ನಗಳೊದಗಿದರೂ, ಅದನ್ನು ಯುಕ್ತಿ–ಪ್ರಯುಕ್ತಿಯಿಂದ ನೀಗಿ ಕಾರ್ಯಸಾಧಿಸುವ ಕ್ರಮವನ್ನು ಆತನು ಶಿವಾಜಿ ಮಹಾರಾಜರ ಬಳಿಯಲ್ಲಿ ಕಲಿತಿದ್ದನು; ಆದ್ದರಿಂದಲೇ ಈಗ ಮಾವಳೆಯ ವೇಷದಿಂದ ಗುಪ್ತರೀತಿಯಿಂದ ಬಂದು ಮಹಾರಾಜರನ್ನು ಕಂಡು ಕಾರ್ಯ ಸಾಧಿಸಿಕೊಂಡನು. ಆತನು ಸಂಭಾಜಿ ಮಹಾರಾಜರ ಅಪ್ಪಣೆಪಡೆಯುವಾಗ ಮತ್ತೆ ಅವರನ್ನು ಕುರಿತು–''ಮಹಾರಾಜ, ಬಹು ಜಾಗರೂಕರಾಗಿರ ಬೇಕೆಂದು ನಾನು ಹೇಳುವ ಅವಶ್ಯ ವಿಲ್ಲದಿದ್ದರೂ, ನಾನು ಬೇಡಿಕೊಳ್ಳುವದೇನೆಂದರೆ, ಈ ಕಾಲದಲ್ಲಿ ಹಿಂದು ಮುಂದಿನ ವಿಚಾರ ವಿಲ್ಲದೆ ಒಮ್ಮೆಲೆ ದುಮುಕುವದನ್ನು ಬಿಟ್ಟು, ಧೈರ್ಯದಿಂದಲೂ, ದೂರದರ್ಶಿತ್ವದಿಂದಲೂ ನಡೆದುಕೊಳ್ಳಬೇಕು. ನಾನು ಸೂಚಿಸಿದ ಕೂಡಲೆ ಮುಂದಿನ ಕಾರ್ಯಮಾಡುವದಕ್ಕಾಗಿ ಪಲ್ಹಾಳಗಡದಿಂದ ಹೊರಡಬೇಕು. ಸೋಯರಾಬಾಯಿ ಸಾಹೇಬರವರು ಜನಾರ್ದನಪಂತ ಸುಮಂತರವರನ್ನು ತೀರ ಸ್ವಾಧೀನಪಡಿಸಿಕೊಂಡುಬಿಟ್ಟಿ ರುವದರಿಂದ ಅವರು ನಿಮ್ಮನ್ನು ಕೂಡಿಕೊಳ್ಳುವ ಸಂಭವವಿಲ್ಲ. ಆದ್ದರಿಂದ ನೀವು ಅವರನ್ನು ವಶಮಾಡಿಕೊಳ್ಳುವ ಉಸಾಬರಿಗೆ ಹೋಗಬೇಡಿರಿ; ಆದರೆ, ಯುಕ್ತಿ–ಪ್ರಯುಕ್ತಿಯಿಂದ ಅವರ ಸೈನ್ಯದಲ್ಲಿ ಫಿತೂರಿಯನ್ನುಂಟು ಮಾಡಿ ಅವರನ್ನು ಸೆರೆಹಿಡಿದು ದುರ್ಗದಲ್ಲಿಟ್ಟು, ದುರ್ಗದ ಆಧಿಪತ್ಯವನ್ನು ನಿಮ್ಮ ಕೈಯಲ್ಲಿ ತಕ್ಕೊಳ್ಳಿರಿ; ಆಮೇಲೆ ಹಂಬೀರರಾಯರ ಕಡೆಗೆ ನಾನು ಈಗ ಕೊಟ್ಟಿರುವ ಪತ್ರವನ್ನು ಕಳಿಸಿದರೆ, ಅವರು ಕೂಡಲೆ ನಿಮ್ಮ ಸಹಾಯಕ್ಕೆ ಬರುವರು. ಹಂಬೀರರಾಯರು ಬರಿಯ ರಣಬಹಾದ್ದರರಾದದ್ದರಿಂದ, ಅವರಿಗೆ ಒಡೆಯನ ಅಪ್ಪಣೆಯ ಹೊರತು ರಾಜ್ಯಕಾರ ಭಾರದೊಳಗಿನ ಹಿಡತಗಳು ತಿಳಿಯವು; ಆದ್ದರಿಂದ ಅವರು ನನ್ನ ಮಗನ ಪತ್ರದಮೇಲೆ ವಿಶ್ವಾಸವಿಡದೆ ನನ್ನ ಪತ್ರದ ಮೇಲೆಯೇ ವಿಶ್ವಾಸವಿಟ್ಟು, ನಿಮ್ಮ ಸಹಾಯಕ್ಕಾಗಿ ಓಡಿಬರ ಬಹುದು. ನನ್ನ ಕಡೆಯಿಂದ ಮುಂಗಡ ಸೂಚನೆ ಬಂದಬಳಿಕ ನೀವು ಇಲ್ಲಿಂದ ಹೊರಡಬೇಕು. ರಾಯಗಡದಲ್ಲಿಯ ವ್ಯವಸ್ಥೆಯನ್ನು ಅತ್ಯುತ್ತಮ ರೀತಿಯಿಂದ ಮಾಡಿದ್ದರೂ, ನಿಮ್ಮ ಪ್ರವೇಶವು ದುರ್ಗದಲ್ಲಿ ಸಹಜವಾಗಿ ಆಗುವಂತೆ ನಾನು ವ್ಯವಸ್ಥೆಮಾಡಿ ಇಟ್ಟಿರುವೆನು'' ಎಂದು ಹೇಳಿ ಮಹಾರಾಜರ ಅಪ್ಪಣೆಯನ್ನು ಪಡೆದು ರಾಯಗಡಕ್ಕೆ ಹೊರಟನು.

ಬಾಲಾಜಿಯು ಗುಪ್ತರೀತಿಯಿಂದ ಪಲ್ಹಾಳಗಡಕ್ಕೆ ಬರುವಾಗ ಯೋಚಿಸಿದ ಯುಕ್ತಿ ಯನ್ನೇ ಈಗ ಪಲ್ಹಾಳಗಡದಿಂದ ರಾಯಗಡಕ್ಕೆ ಹೋಗುವಾಗಲೂ ಯೋಚಿಸಿದನು; ಅಂದರೆ ಅಡವಿಯಲ್ಲಿ ಆಡಬಿಟ್ಟಿದ್ದ ಕುದುರೆಯ ಸಹಾಯದಿಂದ ಈ ಆರುದಿವಸದ ಪ್ರವಾಸವನ್ನು ಆತನು ಮಾಡಿದನು. ರಾಯಗಡಕ್ಕೆ ಹೋದಕೂಡಲೆ ಹುಲ್ಲಹೊರೆ ಮಾರುವವನಂತೆ, ಹೊರೆ ಹೊತ್ತುಕೊಂಡು ದುರ್ಗವನ್ನು ಪ್ರವೇಶಿಸಿದನು. ತನ್ನ ಮನೆಯ ಬಾಗಿಲಿಗೆ ಹೋಗುವವರೆಗೆ

ನಡುವೆ ನಿಂತುಕೊಳ್ಳಲಿಲ್ಲ. ತನ್ನ ಮನೆಯಮುಂದೆ ಹುಲ್ಲುಮಾರುವವನಂತೆ ಸ್ವಲ್ಪಹೊತ್ತು ನಿಂತುಕೊಂಡು ಸುತ್ತುಮುತ್ತ ಯಾರೂ ಇಲ್ಲದ್ದನ್ನು ನೋಡಿ ತನ್ನ ಮನೆಯನ್ನು ಹೊಕ್ಕನು. ತನಗೆ ಜಡ್ಡು ಬಹಳವಾದ ಸುದ್ದಿಯನ್ನು ಹರವಿದ್ದರಿಂದ, ಆತನ ಈ ಆರುದಿನದ ಪ್ರವಾಸವು ಯಾರಿಗೂ ತಿಳಿಯದಂತೆ ಆಯಿತು. ರಾಜವೈದ್ಯನು ಬಾಳಾಜಿಗೆ ಅನುಕೂಲವಿದ್ದದ್ದರಿಂದ ಈ ಯುಕ್ತಿಯು ಸಾಧಿಸಲಿಕ್ಕೆ ಮತ್ತಿಷ್ಟು ಸಹಾಯವಾಯಿತು. ಮುಂದೆ ನಾಲ್ಕಾರು ದಿನಗಳಲ್ಲಿ ಬೇನೆಯಿಂದ ಎದ್ದವನಂತೆ ಬಾಳಾಜಿಯು ಓಡಾಡಹತ್ತಿದನು. ಆತನು ಆ ಆರುದಿನಗಳ ಪ್ರವಾಸದಲ್ಲಿ ನಡೆದ ಸಂಗತಿಗಳನ್ನೆಲ್ಲ ತನ್ನ ಮಗನಾದ ಆವಜಿಯಿಂದ ಕೇಳಿಕೊಂಡು, ಅದಕ್ಕೆ ತಕ್ಕಂತೆ ತನ್ನ ಕಾರ್ಯವನ್ನು ನಡಿಸಿದನು. ತಾನು ಇಷ್ಟು ಕಷ್ಟಬಟ್ಟು ಮಾಡಿದ ಕಾರ್ಯವನ್ನು ಗುಪ್ತಪತ್ರದ್ವಾರದಿಂದ ಬಾಳಾಜಿಗೆ ಮಾಡಲಿಕ್ಕೆ ಬರುತ್ತಿದ್ದಿಲ್ಲವೆಂತಲ್ಲ; ಆದರೆ ಅದು ಸಮಕ್ಷ ಮಾಡಿದ ಕೆಲಸದಹಾಗೆ ಹ್ಯಾಗಾದೀತು? ಇದಲ್ಲದೆ ಅಪ್ಪಿತಪ್ಪಿ ತನ್ನ ಪತ್ರವು ತನ್ನ ಪ್ರತಿಕಕ್ಷಿಗಳ ಕೈಸೇರಿದರೆ ಅನರ್ಥವಾಗುವ ಸಂಭವವಿತ್ತು. ಬಾಳಾಜಿಯು ತಾನು ಸ್ವತಃ ಹೋದದ್ದರಿಂದ ಕಾರ್ಯವು ಸರಿಯಾಗಿ ಶೀಘ್ರಆದದ್ದಲ್ಲದೆ, ಮಾಡತಕ್ಕ ಕಾರ್ಯವನ್ನು ಶ್ರಮನೋಡದೆ ಯಥಾಸ್ಥಿತ ಮಾಡಿದ ಸಮಾಧಾನಕ್ಕೆ ಆತನು ಪಾತ್ರನಾಗಿ, ತನ್ನ ಅಂತಃಕರಣಪೂರ್ವಕ ವಾದ ಅಕೃತ್ರಿಮ ರಾಜನಿಷ್ಠೆಯನ್ನು ತನ್ನ ಸ್ವಾಮಿಗೆ ಪ್ರತ್ಯಕ್ಷತೋರಿಸಿ, ಆತನ ಆದರಕ್ಕೆ ಪಾತ್ರವಾದಂತಾಯಿತು! ಸಂಭಾಜಿರಾಜನ ಪಕ್ಷವು ಅನ್ಯಾಯದ್ದಿದ್ದರೆ ಅದನ್ನು ಬಾಳಾಜಿಯು ವಹಿಸುವ ಸಂಭವವಿದ್ದಿಲ್ಲ; ಸಂಭಾಜಿಯ ಪಕ್ಷವು ಸತ್ಪಕ್ಷವಿದ್ದು, ಸೋಯರಾಬಾಯಿಯ ಪಕ್ಷವು ಕಡೆಪೂರಯಿಸದೆಂಬ ನಂಬಿಗೆಯು ಬಾಳಾಜಿಗೆ ಸಂಪೂರ್ಣವಾಗಿ ಇತ್ತು; ಆದ್ದರಿಂದಲೇ ಆತನು ಇಷ್ಟು ಮನಃಪೂರ್ವಕವಾಗಿ ಸಂಭಾಜಿಗೆ ಸಹಾಯ ಮಾಡಿದನು.

ಬಾಳಾಜಿಯು ಸಂಭಾಜಿಮಹಾರಾಜರನ್ನು ಕಂಡು ತಿರುಗಿ ಹೊರಟುಹೋಗಲಿಕ್ಕೆ ವಿಲಂಬವಾಗಲಿಲ್ಲ. ಒಂದು ತಾಸಿನಲ್ಲಿ ಆತನು ತನ್ನ ಕೆಲಸವನ್ನು ತೀರಿಸಿಕೊಂಡು ಹೊರಟು ಹೋಗಿಬಿಟ್ಟಿದ್ದನು. ಈ ಮೊದಲೆ ಕರೆಕಳಿಹಿದಂತೆ ಕಬಜಿಯು ಸಂಭಾಜಿಯ ಬಳಿಗೆ ಬರುವ ದರೊಳಗಾಗಿ ಬಾಳಾಜಿಯು ಅಲ್ಲಿ ಇದ್ದಿಲ್ಲ; ಇತ್ತ ಬಾಳಾಜಿಯು ಹೋಗಲು ಅತ್ತ ಕಬಜಿಯು ಸಂಭಾಜಿಯ ಬಳಿಗೆ ಬಂದು ಮುಜುರೆಮಾಡಿ ನಿಂತುಕೊಂಡನು; ಆದರೆ ವಿಚಾರಮಗ್ನನಾದ ಸಂಭಾಜಿಯ ಲಕ್ಷವು ಆತನ ಕಡೆಗೆ ಹೋಗಲಿಲ್ಲ. ಚೀಟಣೀಸನು ಹೇಳಿದ ಸುದ್ದಿಗಳಿಂದ ಸಂಭಾಜಿಯ ವೃತ್ತಿಯು ಬಹಳ ಅಸ್ವಸ್ಥವಾಗಿತ್ತು. ಚೀಟಣೀಸನು ಶಿವಾಜಿಮಹಾರಾಜರ ಮರಣ, ರಾಜಾರಾಮನು ಸಿಂಹಾಸನವೇರಿದ್ದು, ಈ ಎರಡು ಮುಖ್ಯ ಮಾತುಗಳ ಗಂಧವನ್ನು ಕೂಡ ಸಂಬಾಜಿಗೆ ಹತ್ತಗೊಟ್ಟಿದ್ದಿಲ್ಲ. ಶಿವರಾಯನು ತೀರಿ ತಿಂಗಳ ಮೇಲೆ ಆಗಿತ್ತು. ರಾಜಾರಾಮನನ್ನು ಯಾವತ್ತು ಮುತ್ಸದ್ದಿಗಳು ಕೂಡಿ ಆತನ ಒಪ್ಪಿಗೆ ಇಲ್ಲದಿದ್ದರೂ ಸೋಯರಾಬಾಯಿಯ ಆಗ್ರಹದಿಂದ ಪಟ್ಟಕ್ಕೆ ಕುಳ್ಳಿರಿಸಿ ಕೆಲವು ದಿನಗಳು ಆಗಿದ್ದವು. ಹೀಗಿದ್ದು ಬಾಳಾಜಿಯು ತಾನು ಸಮಕ್ಷ ಹೋಗಿರಲು, ಈ ಮುಖ್ಯ ಸುದ್ದಿಗಳು ಹೇಳದೆ ಇದ್ದದ್ದನ್ನು ನೋಡಿ ವಾಚಕರಿಗೆ ಬಹಳ ಆಶ್ಚರ್ಯವಾಗಬಹುದು; ಆದರೆ ಹಾಗೆ

ಆಶ್ಚರ್ಯಪಡುವ ಕಾರಣವಿಲ್ಲ. ಆಗ ಆ ಸುದ್ದಿಗಳನ್ನು ಹೇಳಿಬಿಟ್ಟಿದರೆ ಸಂಭಾಜಿಗೆ ಸಹನ ವಾಗದೆ ಹೋಗಿ ಅನರ್ಥವಾಗುವ ಸಂಭವವಿತ್ತು; ಯಾಕಂದರೆ ಸಂಭಾಜಿಯು ಜಾತ್ಯಾ ಶೂರನೂ, ಗೌರವಶಾಲಿಯೂ, ಉದಾರನೂ ಇದ್ದು ಔರಂಗಜೇಬನಂತೆ ವಿಶ್ವಾಸಘಾತಕಿಯು ಅಲ್ಲದಿದ್ದರೂ, ಆತನು ಪ್ರತ್ಯಕ್ಷ ಅಗ್ನಿಯ ಅವತಾರವಾಗಿದ್ದನು. ಆಗ್ಗೆ ಬಾಳಾಜಿಯು ಆ ಸುದ್ದಿಯನ್ನು ಹೇಳಿದ್ದರೆ ಅಗ್ನಿಯಲ್ಲಿ ಎಣ್ಣೆ ಸುರುವಿದಹಾಗಾಗಿ ಸಂಭಾಜಿಯು ಒಮ್ಮೆಲೆ ಮುಗಿಬಿದ್ದು ನಾಶಹೊಂದುವ ಸಂಭವವಿತ್ತು. ಮುತ್ಸದ್ದಿಗಳಲ್ಲಿರಬೇಕಾಗಿದ್ದ ಸಮಾಧಾನ ಗುಣವು ಸಂಭಾಜಿಯಲ್ಲಿ ಸರ್ವಥಾ ಇದ್ದಿಲ್ಲ. ಈ ಮಾತನ್ನು ಸಂಪೂರ್ಣವಾಗಿ ಅರಿತಿದ್ದ ಜಾಣ ಮುತ್ಸದ್ದಿಯಾದ ಬಾಳಾಜಿಯು ಆ ಸುದ್ದಿಗಳನ್ನು ಬುದ್ಧಿಪೂರ್ವಕವಾಗಿಯೇ ಮುಚ್ಚಿದ್ದನು. ಬಾಳಾಜಿಯು ಹವಣಿಯಾಗಿ ಹೇಳಿದ ಸುದ್ದಿಗಳನ್ನು ಕೇಳಿಯೇ ಸಂಭಾಜಿಯ ಬಾಹುಗಳು ಸ್ಫುರಿಸಿ, ಆತನಿಗೆ ಈಗಲೇ ರಾಯಗಡವನ್ನು ಮುತ್ತಿ ಪ್ರತಿಕಕ್ಷಿಗಳನ್ನು ತುಂಡರಿಸಲಾ ಅನ್ನುವ ಹಾಗಾಗಿತ್ತು; ಆದರೆ ಬಾಳಾಜಿಯು ಸಮಾಧಾನದಿಂದ ಕೆಲಸ ಮಾಡಬೇಕೆಂತಲೂ, ನನ್ನ ಸೂಚನೆಯಾಗದೆ ಯಾವದಕ್ಕೂ ಧುಮುಕಬಾರದೆಂತಲೂ ನಿರ್ಧಾರದಿಂದ ಹೇಳಿದ್ದರಿಂದ ಸಂಭಾಜಿಯು ಸುಮ್ಮನಿರಬೇಕಾಗಿತ್ತು. ಹೀಗೆ ತನ್ನ ವೃತ್ತಿಯ ವಿರುದ್ಧವಾಗಿ ಸುಮ್ಮನಿರ ಬೇಕಾದ ಪ್ರಸಂಗದಲ್ಲಿ ಅವನು ವಿಚಾರಮಗ್ನನಾಗಿ ಹೋದದ್ದು ಆಶ್ಚರ್ಯವಲ್ಲ.

ತಾನು ಬಂದು ನಿಂತು ಬಹಳ ಹೊತ್ತಾದರೂ ಸಂಭಾಜಿಯು ತನ್ನ ಕಡೆಗೆ ನೋಡದ್ದನ್ನು ನೋಡಿ ಕಬಜಿಯು ಕೈಜೋಡಿಸಿ–ಸರಕಾರ, ಕ್ಷಮಿಸಬೇಕು! ನಾನು ಬರಲು ಸ್ವಲ್ಪ ವಿಲಂಬ ವಾದದ್ದಕ್ಕಾಗಿ ಮಹಾರಾಜರ ಮನಸ್ಸು ಅಸ್ವಸ್ಥವಾಗಿರುವದಿಲ್ಲವಷ್ಟೆ?

ಸಂಬಾಜಿ (ಚಿಂತೆಯಿಂದ ವ್ಯಗ್ರಚಿತ್ತನಾಗಿ)– ಕಬಜಿ, ಇಂದು ನಮಗೆ ಭಯಂಕರ ಸ್ವಪ್ನವು ಬೀಳಲಿಕ್ಕೂ, ಅದರ ಅನುಭವವು ಪ್ರತ್ಯಕ್ಷ ಬರಲಿಕ್ಕೂ ಗಂಟುಬಿದ್ದದ್ದರಿಂದ ಬಹಳ ಆಶ್ಚರ್ಯವಾಗಿರುತ್ತದೆ; ಮತ್ತು ರಾಜಕಾರಣದ ಒಳಸಂಚು ನಡೆದಿರುವದನ್ನು ನೋಡಿ ಮನಸ್ಸು ಸಂತಪ್ತವಾಗುತ್ತದೆ.

ಈ ಮಾತುಗಳ ಅರ್ಥವು ಕಬಜಿಗೆ ಏನೂ ತಿಳಿಯಲಿಲ್ಲ; ಯಾಕಂದರೆ ಅವನು ಸಂಭಾಜಿಗೆ ಬಿದ್ದ ಸ್ವಪ್ನದ ಸುದ್ದಿಯನ್ನೂ, ಬಾಳಾಜಿಯು ಬಂದ ಸುದ್ದಿಯನ್ನೂ ಅರಿಯೇ ಅರಿಯನು; ಅಂದಬಳಿಕ ಅವನಿಗೆ ಅದರ ಅರ್ಥವೇನು ಮಣ್ಣು ತಿಳಿಯಬೇಕು? ಅವನು ಮುಂದುಗಾಣದೆ ಸ್ವಲ್ಪ ಗಾಬರಿಯಾದನು; ಆದರೂ ಆ ಧೂರ್ತನಾದ ಕಬಜಿಯು ತನ್ನ ಪಟ ಸ್ವಭಾವಕ್ಕನುಸರಿಸಿ ಅದನ್ನಾವದನ್ನೂ ಹೊರಗೆ ತೋರಗೊಡದೆ ತನ್ನ ನಿತ್ಯದ ಸವಿಯಾದ ಸ್ವರದಿಂದ–

ಕಬಜಿ–ಸರಕಾರದ ಮಾತಿನ ಅರ್ಥವು ನನಗೆ ಏನೂ ತಿಳಿಯಲಿಲ್ಲ.

ಸಂಭಾಜಿ– ಅವುಗಳ ಅರ್ಥವು ಹಿಂದಿನಿಂದ ನಿಮಗೆ ತಾನೇ ತಿಳಿಯುವದು. ಸದ್ಯಕ್ಕೆ ಈ ಪತ್ರವನ್ನು ಹಂಬೀರರಾವಮೋಹಿತೆ ಇವರ ಕಡೆಗೆ ಒಳ್ಳೇ ಬಂದೋಬಸ್ತಿನಿಂದ ಕಳಿಸುವ ವ್ಯವಸ್ಥೆ ಮಾಡಿರಿ, ಮತ್ತು ದುರ್ಗದ ಕೆಳಗೆ ಸೈನ್ಯದೊಡನೆ ಇರುವ ಜನಾರ್ದನಪಂತ ಸುಮಂತನ ಸೈನ್ಯದಲ್ಲಿ ಫಿತೂರಿಯನ್ನುಂಟುಮಾಡುವ ಉಪಾಯವನ್ನು ಹೇಳಿರಿ.

ಕಬಜಿ–ಇದೇನು ಗೌಡಬಂಗಾಲವಿರುವದೆಂಬದನ್ನು ಈ ಪತ್ರವು ತಿಳಿಸಬಹುದು; ಆದ್ದರಿಂದ ಪತ್ರ ಓದಲು ಅಪ್ಪಣೆಯಾದರೆ ಪತ್ರಓದಿ ನೋಡುವೆನು.

ಸಂಭಾಜಿ–ಏನು? ಮೇಲಿನ ಮೊಹರು ಯಾರದದೆಯೆಂಬದು ನಿಮ್ಮ ಲಕ್ಷದಲ್ಲಿ ಬರಲಿಲ್ಲವೇನು? ಈ ಬಗೆಯ ಮೊಹರಿನ ಪತ್ರಗಳನ್ನು ಒಡೆದು ಓದಿ ನೋಡುತ್ತ ಇಚ್ಛೆಯನ್ನು ನಿಮ್ಮಂಥವರು ವ್ಯಕ್ತಮಾಡುವದು ಬಹು ಚಮತ್ಕಾರದ ಸಂಗತಿಯಾಗಿರುತ್ತದೆ. ಮುಂದೆ ಇದೇ ಬಗೆಯಿಂದ ನೀವು ರಾಜ್ಯಕಾರಭಾರದಲ್ಲಿನಮಗೆ ಸಹಾಯ ಮಾಡತಕ್ಕವರೇನು?

ನಾಚಿಕೆ ಹುಟ್ಟಿಸತಕ್ಕಂಥ ಸಂಬಾಜಿಯ ಈ ಉದ್ವೇಗಜನಕ ಭಾಷಣಗಳನ್ನು ಕೇಳಿ ಕಬಜಿಯ ಅಂತಃಕರುಣವು ಬಹಳ ವ್ಯಥಿತವಾಯಿತು. ಆತನು ಮೋರೆಯನ್ನು ತಗ್ಗಿಸಿದನು! ಆದರೂ ಆತನು ಧೈರ್ಯದಿಂದ ಸಂಭಾಜಿಯನ್ನು ಕುರಿತು–ಹಾಗಾದರೆ ಮೊದಲು ಈ ಪತ್ರವನ್ನು ಕಳಿಸುವ ವ್ಯವಸ್ಥೆಯನ್ನು ಉತ್ತಮ ರೀತಿಯಿಂದ ಮಾಡಿ, ಆಮೇಲೆ ಜನಾರ್ದನ ಪಂತ ಸುಮಂತನ ಸೈನ್ಯದಲ್ಲಿ ಭೇದೋಪಾಯವನ್ನು ಹ್ಯಾಗೆ ಮಾಡಬೇಕೆಂಬದರ ಚರ್ಚೆ ಮಾಡುವದಕ್ಕಾಗಿ ಬರುವೆನು, ಎಂದು ಹೇಳಿ ಹೋಗುತ್ತಿರಲು, ಸಂಭಾಜಿಯು–ಕಬಜೀ, ಬಲುಜೋಕೆ! ಪತ್ರವು ನೆಟ್ಟಗೆ ಹಂಬೀರರಾಯರ ಕೈಗೇ ಮುಟ್ಟಲಿಕ್ಕೆಬೇಕು. ಹಾಗಾದರೆ ಮತ್ತೆ ಯಾರಾದರೂ ಕೈಗೆ ಪತ್ರವು ಬಿದ್ದರೆ ನಮ್ಮ ಸರ್ವಸ್ವದ ಘಾತವಾಗುವದಲ್ಲದೆ, ಆಬಾಸಾಹೇಬರ ಜೀವಂತ ಇತಿಹಾಸವು ನಾಮಶೇಷವಾಗುವ ಸಂಭವವಿದೆ! ಹೋಗಿರಿ, ಬೇಗನೆ ಒಳ್ಳೇ ಬಂದೋಬಸ್ತಿನಿಂದ ಪತ್ರದ ರವಾನೆಮಾಡಿರಿ.

ಮಹಾರಾಜರ ಈ ಮಾತಿನ ಸ್ಪಷ್ಟೀಕರಣವು ಕಬಜಿಗೆ ಆಗಲಿಲ್ಲ, ಆದರೂ ಆತನು ತಿರುಗಿಕೇಳಲು ಧೈರ್ಯಸಾಲದೆ ಸುಮ್ಮನೆ ಪತ್ರತಕ್ಕೊಂಡು ಹೊರಟುಹೋದನು; ಆದರೆ ಆತನ ಮನಸ್ಸಿಗೆ ಸಮಾಧಾನವಾಗಲಿಲ್ಲ, ಈವರೆಗೆ ಯಾವಮಾತನ್ನಾದರೂ ಮಹಾರಾಜರು ನನ್ನ ಮುಂದೆ ಹೇಳದೆ ಇರುತ್ತಿದ್ದಿಲ್ಲ. ಹೀಗಿದ್ದು, ಬಾಳಾಜಿಯು ಬರೆದಿರುವ ಹಾಗು ರಾಜ್ಯದ ಮೊಹರಿರುವ ಈ ಪತ್ರದೊಳಗಿನ ಸಂಗತಿಯನ್ನು ಹೇಳದೆ ಅದನ್ನು ಹಂಬೀರರಾಯಕಡೆಗೆ ಕಳಿಸೆಂದು ಯಾಕೆ ಆಜ್ಞಾಪಿಸಿರಬಹುದು? ಇನ್ನು ಇದನ್ನು ಯಾರಸಂಗಡ ಕಳಿಸಿದರೆ ಯೋಗ್ಯವಾಗಬಹುದು ಎಂದು ಯೋಚಿಸುತ್ತ ತನ್ನ ವಾಸಸ್ಥಳಕ್ಕೆ ಹೋಗಿ ಲೋಡಿಗೆ ಆತುಕುಳಿತು ಯೋಗ್ಯಮನುಷ್ಯನ ನೆನಪುಮಾಡಿಕೊಳ್ಳಹತ್ತಿದನು. ಇತ್ತ ಸಂಭಾಜಿರಾಜನು ತನಗೊದಗಿದ ಪ್ರಸಂಗವನ್ನು ಕುರಿತು ಬಗೆಬಗೆಯಾಗಿ ಆಲೋಚಿಸಹತ್ತಿದನು. ಚೀಟಣೀಸನು ತನಗೆ ಬಹು ಜಾಗರೂಕತೆಯಿಂದಿರಲು ಮೇಲೆ ಮೇಲೆ ಹೇಳಿದ್ದರ ಸ್ಮರಣವಾಗಲು, ಆತನ ಮನಸ್ಸಿನಲ್ಲಿ ಒಂದು ವಿಚಾರವು ಉತ್ಪನ್ನವಾಯಿತು. ಕೂಡಲೆ ಆತನು ಒಬ್ಬ ಸೇವಕನನ್ನು ಕರೆದು– ''ಹಿರೋಜಿಫರ್ಜಂದನನ್ನು ಕರತಾರೆ''ಂದು ಆಜ್ಞಾಪಿಸಿದನು. ಅತ್ತ ಸೇವಕನು ಹೋಗಲು, ಸಂಭಾಜಿರಾಜನು–''ಹೀಗೆಯೇ ಮಾಡತಕ್ಕದ್ದು'' ಎಂದು ಮನಸ್ಸಿನಲ್ಲಿ ಅಂದುಕೊಂಡು, ರಾಣೀವಾಸಕ್ಕೆ ಹೋಗಿ ಒಂದು ಪತ್ರವನ್ನು ಬರೆದುಕೊಂಡು ಬಂದನು. ಅಷ್ಟರಲ್ಲಿ ಹಿರೋಜಿ ಫರ್ಜಂದನು ಬಂದಿದ್ದನು. ಸಂಭಾಜಿಯು ಬಂದಕೂಡಲೆ ಹಿರೋಜಿಯು ಬಹು ವಿನಯದಿಂದ ಮುಜುರೆಮಾಡಲು, ಸಂಭಾಜಿಯು ಆತನನ್ನು ಕುರಿತು–

ಸಂಭಾಜಿ–ಹಿರೋಜಿ, ನೀವು ಯಾರಿರುತ್ತೀರಿ?

ಹಿರೋಜಿ–ನಾನು ಪಲ್ಹಾಳಗಡದ ಅಧಿಪತಿಯಿದ್ದು, ಸರಕಾರದ ಸೇವಕನಿರುತ್ತೇನೆ.

ಸಂಭಾಜಿ–ಈ ಮಾತು ಸತ್ಯವೋ?

ಹಿರೋಜಿ–ಎಳ್ಳಷ್ಟು ಸಂಶಯವಿಲ್ಲ!

ಸಂಭಾಜಿ—ನೀವು ಒಂದು ಕಡೆಯಿಂದ ನಮ್ಮ ಆಪ್ತರಾಗಿದ್ದು, ಮತ್ತೊಂದು ಕಡೆಯಿಂದ ಮಹಾರಾಷ್ಟ್ರ ಸಿಂಹಾಸನದ ಏಕನಿಷ್ಠ ಸೇವಕರಿರುವಿರಿ.

ಹಿರೋಜಿ—ಇದರಲ್ಲಿ ಸಂಶಯವೇನು?

ಸಂಭಾಜಿ—ಹಿಂದಕ್ಕೆ ನಾವು ತಂದೆಮಕ್ಕಳು ಆ ಗ್ರಾಮದಲ್ಲಿ ಔರಂಗಜೇಬನ ಸೆರೆಯಾಳಾಗಿರುವಾಗ ನೀವು ನಿಮ್ಮನ್ನು ಪ್ರಾಣಸಂಕಟದಲ್ಲಿ ಕೆಡವಿಕೊಂಡು ನಮ್ಮಿಬ್ಬರನ್ನು ಕಾರಾಗ್ರಹದಿಂದ ಮುಕ್ತಮಾಡಿದಿರಿ!

ಹಿರೋಜಿ—ಅದರ ಸ್ಮರಣವು ಹುಜೂರಿಗೆ ಇದ್ದೇ ಇರುತ್ತದೆ.

ಸಂಭಾಜಿ—ಅದರ ಪುನರಾವೃತ್ತಿಯ ಪ್ರಸಂಗವೇ ಈಗ ಒದಗಿದಂತೆ ತೋರುತ್ತದೆ!

ಹಿರೋಜಿ—ಸಹಾಯ ಮಾಡಲು ದಾಸನು ಸಿದ್ಧನಿರುವನು.

ಸಂಭಾಜಿ—ಎಂಥ ಸಹಾಯವನ್ನು?

ಹಿರೋಜಿ—ಹುಜೂರ ಆಪೇಕ್ಷಿಸಿದ ಸಹಾಯವನ್ನು!

ಸಂಭಾಜಿ—ಈ ಹುಕುಮನ್ನು ನೋಡಿರಿ. ಸೋಯರಾಬಾಯಿಸಾಹೇಬರಿಂದ ನಿಮಗೆ ಬಂದಿರುತ್ತದೆ. ಪ್ರಾರಬ್ಧವಶಾತ್ ಅದು ನಮ್ಮ ಕೈಗೆ ಹತ್ತಿರುವದು!

ಸಂಭಾಜಿ ರಾಜನು ರಾಣೀವಾಸಕ್ಕೆ ಹೋಗಿ ತನ್ನ ಹೆಂಡತಿಯಾದ ಏಸುಬಾಯಿಯವರ ಆಲೋಚನೆಯಿಂದ ಬರೆದುಕೊಂಡು ಬಂದಿದ್ದ ಪತ್ರವು ಇದೇ. ಹಿರೋಜಿಯ ರಾಜನಿಷ್ಠೆಯನ್ನು ಪರೀಕ್ಷಿಸಬೇಕೆಂತಲೇ ಬುದ್ಧಿಪೂರ್ವಕವಾಗಿ ಆತನು ಈ ಪತ್ರವನ್ನು ಬರೆದುಕೊಂಡು ಬಂದಿದ್ದನು. ಆ ಪತ್ರವನ್ನು ಹಿರೋಜಿಯು ಓದುತ್ತಿರಲು, ಆತನ ಮುಖಚರ್ಯದಲ್ಲಿ ಏನು ಹೆಚ್ಚು ಕಡಿಮೆಯಾಗುತ್ತಿರುವದೆಂಬದನ್ನು ಸಂಭಾಜಿ ರಾಜನು ತೀಕ್ಷ್ಣದೃಷ್ಟಿಯಿಂದ ನೋಡುತ್ತಿದ್ದನು. ಹಿರೋಜಿಯು ಪತ್ರವನ್ನು ಓದಿ ಆಶ್ಚರ್ಯೋದ್ಗಾರವನ್ನು ಹೊರಡಿಸಿ–ಸರಕಾರ, ಈ ಪತ್ರದೊಳಗಿನ ಸಂಗತಿಯನ್ನು ಓದಿದ ಕೂಡಲೆ ಸರ್ವಾಂಗವು ತಪ್ತವಾಗಿರುವದು; ಆದರೆ ಸ್ವತಃಸರಕಾರವೇ ಈ ಪತ್ರವು ರಾಣೀ ಸರಕಾರದ ಕಡಿಯಿಂದ ಬಂದದ್ದೆಂದು ಹೇಳುತ್ತಿರುವದರಿಂದ ಸುಳ್ಳೆಂದು ಹೇಳುವದು ಸಾಹಸವಾಗುವದು. ಹ್ಯಾಗೆ ಇರಲಿ, ಉಮಾಜಿಯನ್ನು ಸೆರೆಹಿಡಿದು ಕರ್ನಾಟಕಕ್ಕೆ ಕಳಿಸುವಾಗ ನಾನು ಸರಕಾರಕ್ಕೆ ಸಹಾಯ ಮಾಡಲಿಲ್ಲವೆ? ಹಾಗೆಯೇ ಏನಾದರೂ ಇದೊಂದು ಪ್ರಸಂಗವಿರಬಹುದು, ನಾನಂತು ಸರಕಾರದ ಏಕನಿಷ್ಠಸೇವಕನಿರುವೆನು, ಎಂದೂ ಎರಡು ಬಗೆಯತಕ್ಕವನಲ್ಲ. ಈ ಮಾತನ್ನು ನಿಸ್ಸಂಶಯದಿಂದ ನಂಬತಕ್ಕದ್ದು.

ಸಂಭಾಜಿ—ಇದಕ್ಕೆ ಪ್ರಮಾಣವೇನು?

ಹಿರೋಜಿ—ತಾವು ಹೇಳಿದ ಆಣೆ-ಪ್ರಮಾಣಗಳನ್ನು ಮಾಡುವೆನು.

ಸಂಭಾಜಿ—ಹಿಡಿಯಿರಿ, ಬೇಲಭಂಡಾರವನ್ನು.

ಹಿರೋಜಿ—ಇಗೊಳ್ಳಿರಿ, ಈ ಬೇಲ ಭಂಡಾರವನ್ನು ಹಿಡಿದು ಆಣೆಮಾಡಿ ಹೇಳುತ್ತೇನೆ, ಎಲ್ಲಿ ಸರಕಾರದ ಕಾಲೊಳಗಿನ ಜೋಡೋ, ಅಲ್ಲಿ ನನ್ನ ತಲೆಯು!

ಸಂಭಾಜಿ—ಆಯಿತು, ವಿಶ್ವಾಸವಾಯಿತು! ಉಮಾಜಿಯ ವಿಷಪ್ರಯೋಗದ ಒಳಸಂಚಿನಲ್ಲಿ ನೀವು ಸೋನಾಜಿನಾಯಿಕ ಬಂಕಿ, ಸೂರ್ಯಾಜಿ ಈ ಇಬ್ಬರೂ ಇದ್ದಿರೆಂಬ ಸಂಶಯವು ನಮಗೆ ಬಂದಿತ್ತು; ಆದರೆ ಸಾಕ್ಷಿಗಳೇನು ಇಲ್ಲದ್ದರಿಂದ ನಮಗೆ ಆಗ ಏನು ಮಾಡಲಿಕ್ಕೂ ಬರಲಿಲ್ಲ, ಆ ಕಾಲವು ಈಗ ಕ್ರಮಿಸಿಹೋಗಿರುವದು; ಆ ಪ್ರಸಂಗವು ನನ್ನ ಒಬ್ಬನ ಮೇಲೆಯೇ ಬಂದಿತ್ತು; ಆದರೆ ಸದ್ಯಕ್ಕೆ ರಾಷ್ಟ್ರವು ಆಪತ್ತಿಗೊಳಗಾಗಿರುವದು! ಈಗಿನ ಪ್ರಸಂಗದಲ್ಲಿ ನೀವೆಲ್ಲರೂ ಸಹಾಯಮಾಡಿ ನಮ್ಮಿಂದ ಸಹಿತವಾಗಿ ರಾಷ್ಟ್ರದ ಸಂರಕ್ಷಣ ಮಾಡಬೇಕು.

ಹಿರೋಜಿ—ಪ್ರತಿಜ್ಞೆಯಾದ ಬಳಿಕ ತೀರಿತು; ಪೂರ್ವದ ಸೂರ್ಯನು ಪಶ್ಚಿಮಕ್ಕೆ ಮೂಡಬಹುದು; ಆದರೆ ಹಿರೋಜಿಯ ಪ್ರತಿಜ್ಞಾಭಂಗವಾಗಲಾರದು.

ಸಂಭಾಜಿ—ಹೋಗಿರಿ ಹಾಗಾದರೆ ದುರ್ಗದ ಸಿಬ್ಬಂದಿಯ ವ್ಯವಸ್ಥೆಯನ್ನು ಉತ್ತಮ ರೀತಿಯಿಂದ ಇಡಿ ಸದ್ಯಕ್ಕೆ ಶತ್ರುಗಳೊಡನೆ ಕಾದತೊಡಗಿರುವೆವೆಂದು ತಿಳಿದು ದುರ್ಗದ ವ್ಯವಸ್ಥೆಯನ್ನು ಮಾಡಿರಿ. ಸೋನಾಜಿಗೂ, ಸೂರ್ಯಾಜಿಗೂ ಜೋಕೆಯೆಂದು ನೆಟ್ಟಗೆ ತಿಳಿಸಿ ಹೇಳಿರಿ. ಸೇವೆಯಲ್ಲಿ ರತಿಮಾತ್ರ ಅಂತರವಾದರೆ ಹರಿದು ತಿಂದೇನೆಂಬದರ ಎಚ್ಚರವು ಪೂರಾ ಇರಲಿ. ಸದ್ಯಕ್ಕೆ ನೀವು ದುರ್ಗಾಧಿಪತಿಗಳೂ, ನಾವೂ ಪ್ರತಿಬಂಧದಲ್ಲಿರುವವರೂ ಆಗಿದ್ದರೂ, ಈ ಕ್ಷಣದಲ್ಲಿ ನಾವು ದುರ್ಗಾಧಿಪತ್ಯವನ್ನು ಕೈಕೊಂಡಿರುವದರಿಂದ ನೀವು ಸಂಪೂರ್ಣವಾಗಿ ನಮ್ಮ ಆಜ್ಞಾಧಾರ ಕರಾಗಿರತಕ್ಕದ್ದು. ಇಂದಿನಿಂದ ಯಾರಾದರೂ ನಮ್ಮ ಒಪ್ಪಿಗೆಯ ಹೊರತು ದುರ್ಗದಿಂದ ಹೊರಗೆ ಹೋದರೆ, ಅಥವಾ ಹೊರಗಿನಿಂದ ದುರ್ಗದೊಳಗೆ ಬಂದರೆ ಅದಕ್ಕೆ ನೀವು ಜವಾಬದಾರ ಶಿಕ್ಷೆಗೆ ಪಾತ್ರರಾದೀರಿ. ಇನ್ನು ಮುಂದೆ ಕಣ್ಣಿಗೆ ಬೀಳಬೇಕಾಗಿರುವ ವಿವಿಧ ಚಮತ್ಕಾರಗಳು ಒದಗುವ ಕಾಲದ ಗಳಿಗೆ-ಪಳಗಳು ತುಂಬುತ್ತ ಬಂದಿರುವವು! ಹೋಗಿರಿ, ಸಂಪೂರ್ಣವಿಚಾರದಿಂದ ನಡೆದುಕೊಳ್ಳಿರಿ!

ಈ ಮೇರೆಗೆ ಆಜ್ಞಾಪಿಸಲು, ಹಿರೋಜಿಯು ಮುಜುರೆಮಾಡಿ ಹೊರಟುಹೋದನು. ಅಷ್ಟರಲ್ಲಿ ಸೇವಕನು ಗುಡುಗುಡಿಯನ್ನು ತಂದು ಇಡಲು, ಸಂಭಾಜಿಯು ಗುಡುಗುಡಿಯನ್ನು ಸೇದುತ್ತವಿಚಾರಮಾಡಹತ್ತಿದನು. ಕೇವಲ ಅಸಹಾಯನಾಗಿ ಕಾರಾಗೃಹದಲ್ಲಿರುತ್ತಿದ್ದ ಆ ವೀರನ ಮನಸ್ಸಿನಲ್ಲಿ ಆಗ ಎಷ್ಟು ವಿಚಾರಗಳು ಬಂದಿರಬಹುದೆಂಬದನ್ನು ನಾವೇನು ಹೇಳೋಣ? ಬಳಿಯಲ್ಲಿ ಸೈನ್ಯವಿಲ್ಲ; ಬಾಳಾಜಿಯ ಗುಪ್ತಸಹಾಯದ ಹೊರತು ಅನ್ಯರ ಸಹಾಯವಿಲ್ಲ; ರಾಜಾರಾಮನು ಮನಃಪೂರ್ವಕವಾಗಿ ಸಿಂಹಾಸನವನ್ನು ಇಚ್ಛಿಸದಿದ್ದರೂ, ಅದೊಂದು ದೊಡ್ಡ ಪ್ರತಿಬಂಧರೂಪವಾಗಿ ಕಣ್ಣಿಗೆ ಕಾಣುತ್ತಲಿರುವದು; ಮೋರೋಪಂತರ ಅರ್ಧಮನಸ್ಸು ಇತ್ತ ಕಡೆಗೆ, ಅರ್ಧಮನಸ್ಸು ಅತ್ತಕಡೆಗೆ ಆಗಿರುವದರಿಂದ ಕೆಸರಿನ ಕಂಬದ ನಿಯಮವನ್ನು

ಹಿಡಿಯುವಂತೆ ಇಲ್ಲ; ಜನಾರ್ದನಪಂತ ಸುಮಂತನು ಅನುಕೂಲವಾಗುವಂತೆಯಿಲ್ಲ; ಹಂಬೀರರಾವ ಸೇನಾಪತಿಯು ಪ್ರತಿಕೂಲವಾದರೆ ಮುಂದೆ ಗತಿಯಿಲ್ಲ. ಹೀಗೆ ಒಂದಲ್ಲ-ಎರಡಲ್ಲ ಹಲವು ವಿಚಾರಗಳ ಗಲಿಬಿಲಿಯಿಂದ ಸಂಭಾಜಿರಾಜನ ಅಂತಃಕರಣವು ತಳಮಳಿ ಸುತ್ತಲಿತ್ತು. ಹೀಗೆ ವಿಚಾರ ಮಗ್ನನಾಗಿರುವ ಆ ಶೂರ ಸಂಭಾಜಿರಾಜನಿಗೆ ಹೊತ್ತು ಎಷ್ಟು ಆಯಿತೆಂಬದು ಗೊತ್ತೇ ಆಗಲಿಲ್ಲ. ಅಷ್ಟರಲ್ಲಿ ಕಬಜಿಯು ಬದ್ಧಾಂಜಲಿಯಾಗಿ ಎದುರಿಗೆ ನಿಂತಿರುವದು ಆತನ ಕಣ್ಣಿಗೆ ಬಿದ್ದಿತು. ಕೂಡಲೆ ಆತನು ಕಬಜಿಗೆ-''ಪತ್ರದ ವ್ಯವಸ್ಥೆಯನ್ನು ಏನು ಮಾಡಿದಿರಿ?'' ಎಂದು ಕೇಳಿದನು. ಅದಕ್ಕೆ ಕಬಜಿಯು-ಸರಕಾರದ ಇಚ್ಛೆಯಂತೆ ಪತ್ರವನ್ನು ಉತ್ತಮ ವ್ಯವಸ್ಥೆಯಿಂದ ಕಳಿಸಿದ್ದೇನೆ, ಹಲವುಸಾರೆ ಕಠಿಣತರ ಸೇವೆಯನ್ನು ಉತ್ತಮರೀತಿಯಿಂದ ಮಾಡಿದ ಆ ತರುಣ ಸಾವಳ್ಯಾನನ್ನೇ ಈ ಕೆಲಸಕ್ಕೆ ನಿಯಮಿಸಿರುವೆನು. ಆತನಿಗೆ ಒಂದು ಉತ್ತಮವಾದ ಕುದುರೆಯನ್ನು ಕೊಟ್ಟು, ಆ ಕುದುರೆಯ ಜೀನಿನೊಳಗೆ ಪತ್ರವನ್ನಿಟ್ಟು ಕಳಿಸಿರುವೆನು ಎಂದು ಹೇಳಲು, ಸಂಭಾಜಿರಾಜನ ಮನಸ್ಸಿಗೂ ಆ ಮಾತು ಒಪ್ಪಿಗೆಯಾದಂತೆ ತೋರಿತು; ಆದ್ದರಿಂದ ಆತನು ಆ ಸಂಬಂಧದಿಂದ ಯಾವ ಮಾತನ್ನೂ ಆಡದೆ ಕಬಜಿಯನ್ನು ಕುರಿತು- ಒಟ್ಟಿಗೆ ಪ್ರಸಂಗವು ಬಹಳ ಕಠಿಣವಿರುವದು. ಆಬಾಸಾಹೇಬರ ಪುಣ್ಯವು ಹ್ಯಾಗಿರುತ್ತದೋ ನೋಡಬೇಕು. ಅಸಹಾಯಶೂರರಾಗಿ ಮಾರ್ಗವನ್ನು ಕ್ರಮಿಸ ಬೇಕಾಗಿದೆ. ಧೈರ್ಯದಿಂದ ಯತ್ನಮಾಡುವದು ಶೂರರ ಕೆಲಸವು; ಸಹಾಯಕನು ದೇವರಿರುವನು!

## ಅತುಲ ಪ್ರತಾಪ!

ಶಿವರಾಯನ ಔರ್ಧ್ವದೇಹಿಕ ಕರ್ಮಗಳೆಲ್ಲ ತೀರಿದಬಳಿಕ ಒಂದು ಶುಭ ಮುಹೂರ್ತ ದಲ್ಲಿ ರಾಜಾರಾಮ ಮಹಾರಾಜರನ್ನು ಪಟ್ಟಕ್ಕೆ ಕುಳ್ಳಿರಿಸಿ, ಅವರ ಮುದ್ರೆಗಳ ಆಜ್ಞಾಪತ್ರ ಗಳನ್ನು ಬಾಳಾಜಿ ಚೀಟಣೇಸನ ಮಗನಾದ ಆವಜಿಯ ಸಹಿಯಿಂದ ಅಣ್ಣಾಜಿದತ್ತೋನು ಎಲ್ಲ ಕಡೆಗೆ ಕಳಿಸಿ ರಾಜ್ಯಸೂತ್ರಗಳನ್ನು ನಡಿಸಹತ್ತಿದನು. ಶಿವರಾಯನ ಮರಣವನ್ನೂ, ಅವರ ತರುವಾಯ ರಾಜಾರಾಮ ಮಹಾರಾಜರು ಅರಸರಾದದ್ದನ್ನೂ ಆ ನೂತನ ಅಧಿಕಾರಿಗಳು ನಾಲ್ಕೂ ಕಡೆಗೆ ಪ್ರಸಿದ್ಧಮಾಡಿದರು; ಆದರೆ ಅವರ ಸೂತ್ರಚಾಲನವು ರಾಯಗಡದಲ್ಲಿ ಕುಳಿತುಕೊಂಡೇ ಆಯಿತಲ್ಲದೆ, ಅವರು ಸ್ವತಃ ರಾಜ್ಯದಲ್ಲಿ ನಾಲ್ಕೂ ಕಡೆಗೆ ಸಂಚರಿಸಿ, ದಕ್ಷತೆಯಿಂದ ತಮ್ಮ ಅಧಿಕಾರವನ್ನು ಪ್ರಸ್ಥಾಪಿಸಲಿಲ್ಲ. ಸಂಭಾಜಿರಾಜರು ಪ್ರತಿಬಂಧದಲ್ಲಿದ್ದು ಅವರಿಗೆ ಸಹಾಯಕರು ಯಾರೂ ಇಲ್ಲವಾದ್ದರಿಂದವರು ಮಾಡುವದೇನೆಂಬ ಅಹಂಕಾರದಲ್ಲಿ ಆ ಅಧಿಕಾರಿಗಳು ಕರ್ತವ್ಯವನ್ನು ಸರಿಯಾಗಿಮಾಡದಾದರು; ಆದ್ದರಿಂದಲೇ ಅವರಪಕ್ಷವು ನಾಶಹೊಂದಿ ಸಂಭಾಜಿರಾಜರು ಜಯಶಾಲಿಗಳಾದರು. ರಾಯಗಡದಿಂದ ಬೇರೆ ಬೇರೆ

ದುರ್ಗಾಧಿಪತಿಗಳಿಗೂ, ಅಧಿಕಾರಸ್ಥರಿಗೂ ಪತ್ರಗಳು ಹೋದಂತೆ, ಪಲ್ಹಾಳಗಡದ ಕೆಳಗಿದ್ದ ಜನಾರ್ದನಪಂತ ಸುಮಂತನಿಗೂ, ಕರ್ಹಾಡದ ಕಡೆಗಿರುತ್ತಿದ್ದ ಹಂಬೀರರಾವ ಮೋಹಿತೆ ಸೇನಾಪತಿಗೂ ಪತ್ರಗಳು ಹೋದವು. ಅವರಿಬ್ಬರ ಪತ್ರಗಳಲ್ಲಿಯೂ—''ಪಲ್ಹಾಳಗಡದೊಳಗೆ ಉತ್ತಮ ಬಂದೋಬಸ್ತು ಇಡಬೇಕೆಂತಲೂ, ಅಂಥ ಪ್ರಸಂಗ ಬಂದರೆ ಕೂಡಲೆ ಸಂಭಾಜಿ ರಾಯರನ್ನು ಸೆರೆ ಹಿಡಿದು ಕಠಿಣ ಪ್ರತಿಬಂಧದಲ್ಲಿರಿಸಬೇಕೆಂತಲೂ ಬರೆದಿತ್ತು. ಜನಾರ್ದನ ಪಂತ ಸುಮಂತನು ಆ ಪತ್ರದಂತೆ ಅಂದೇ ರಾತ್ರಿ ಸಂಭಾಜಿರಾಜರನ್ನು, ಅವರು ಸೆರೆಯ ಗುಂಗಿನಲ್ಲಿರುವಾಗ ಅನಾಯಾಸವಾಗಿ ಪ್ರತಿಬಂಧಿಸಿ ಕಾಲೊಳಗೆ ಬೇಡಿಗಳನ್ನು ಹಾಕ ಬೇಕೆಂದು ನಿಶ್ಚಯಿಸಿದನು. ಇತ್ತ ಹಂಬೀರರರಾವ ಸೇನಾಪತಿಗೆ ರಾಯಗಡದ ಪತ್ರವೂ, ಪಲ್ಹಾಳಗಡದಿಂದ ಗುಪ್ತವಾಗಿ ಸಂಭಾಜಿರಾಜರುಕಳಿಸಿದ್ದ ಪತ್ರವೂ ಕೂಡಿಯೇ ಮುಟ್ಟಿದವು. ರಾಜಗಡದ ಪತ್ರಕ್ಕೆ ರಾಜಾರಾಮ ಮಹಾರಾಜರ ಮುದ್ರೆಯಿದ್ದು, ಆವಜಿ ಚಿಟಣೀಸನ ಸಹಿಯಾಗಿತ್ತು; ಪಲ್ಹಾಳಗಡದಿಂದ ಬಂದ ಪತ್ರಕ್ಕೆ ಸಂಭಾಜಿರಾಜರ ಸಹಿಯಿದ್ದು, ಬಾಳಾಜಿ ಆವಜಿಯ ಸಹಿಯಾಗಿತ್ತು; ಮೊದಲನೆಯ ಪತ್ರದಲ್ಲಿ ಜನಾರ್ದನಪಂತ ಸುಮಂತನಿಗೆ ಸಹಾಯ ಮಾಡಿ ಸಂಭಾಜಿರಾಜರನ್ನು ಸೆರೆಯಲ್ಲಿರಿಸಬೇಕೆಂದಲೂ, ಎರಡನೆಯ ಪತ್ರದೊಳಗೆ ನಮ್ಮ ಈಗಿನ ಕಠಿಣ ಪ್ರಸಂಗದಲ್ಲಿ ನೀವು ನಮಗೆ ಸಹಾಯಕರಾಗಿ ಸೈನ್ಯದೊಡನೆ ಬಂದು ಜನಾರ್ದನಪಂತ ಸುಮಂತನನ್ನು ಸೆರೆ ಹಿಡಕೊಂಡು ಬರಬೇಕೆಂತಲೂ ಬರೆದಿತ್ತು. ಈ ಎರಡು ಪತ್ರಗಳನ್ನುನೋಡಿ ಹಂಬೀರರಾಯನು ವಿಚಾರಮಗ್ನನಾದನು; ಆದರೆ ಗಾದಿಯ ಸರಳವಾರಸದಾರರಾದ ಸಂಭಾಜಿರಾಜರಿಗೆ ಬಾಳಾಜಿ ಆವಜಿಯಂಥ ಸ್ವಾಮಿಭಕ್ತನ ಸಹಾಯವಿರುವದರಿಂದ, ತಾನು ಸಂಭಾಜಿರಾಜರ ಸಹಾಯಕ್ಕೆ ಹೋಗುವದೇ ನ್ಯಾಯ ವೆಂದು ತಿಳಿದು, ಆ ಸೇನಾಪತಿಯು ಅಪ್ಪಣೆಯಂತೆ ಜನಾರ್ದನಪಂತನನ್ನು ಸೆರೆಹಿಡಕೊಂಡು ಹೋಗುವದಕ್ಕಾಗಿ ಐದುನೂರುಜನ ರಾವುತರೊಡನೆ ಹೊರಟನು. ದೈವಗತಿಯು ವಿಲಕ್ಷಣ ವಾದದ್ದು; ಅಂದು ಮಧ್ಯರಾತ್ರಿಯಲ್ಲಿಸಂಭಾಜಿರಾಜರನ್ನು ಸೆರೆಹಿಡಿಯಬೇಕೆಂದು ಜನಾರ್ದನ ಪಂತನು ಯೋಚಿಸಿದ್ದನು; ಇತ್ತ ಹಂಬೀರರಾಯನು ಅಂದೇರಾತ್ರಿ ಜನಾರ್ದನಪಂತನನ್ನು ಸೆರೆಹಿಡಿಯಬೇಕೆಂದು ಐದುನೂರುಜನ ಸವಾರರೊಡನೆ ಹೊರಟನು!

ಇವರಿಬ್ಬರ ಯೋಚನೆಗಳು ಹೀಗೆ ನಡೆದಿರುವಾಗ, ಪಲ್ಹಾಳಗಡದ ಅಧಿಪತಿಯಾದ ಹಿರೋಜಿಫರ್ಜಂದನು, ಸೋನಾಜಿನಾಯಿಕಬಂಕಿ, ಹಾಗು ಸೂರ್ಯಾಜಿ ಇವರೊಡನೆ ಏಕಾಂತದಲ್ಲಿ ಆಲೋಚಿಸುತ್ತ ಕುಳಿತಿದ್ದನು. ಹಿರೋಜಿಯ ಸಹಾಯದಿಂದ ಸಂಭಾಜಿಯನ್ನು ಸೆರೆಹಿಡಿಯಬೇಕೆಂದು ಸೋನಾಜಿಗೂ, ಸೂರ್ಯಾಜಿಗೂ ರಾಯಗಡದಿಂದ ಪತ್ರಗಳು ಬಂದಿದ್ದವು. ಅದರಂತೆ ಅವರಿಬ್ಬರು ಐವತ್ತು ಜನರೊಂದಿಗೆ ಸಂಭಾಜಿರಾಜರನ್ನು ಸೆರೆ ಹಿಡಿಯುವದಕ್ಕಾಗಿ ಅವರಿದ್ದಲ್ಲಿಗೆ ಹೋದರು. ಆಗ ಸಂಭಾಜಿರಾಜರು ಸ್ವಾಭಾವಿಕವಾಗಿ ಮನೆಯಲ್ಲಿ ಕುಳಿತುಕೊಳ್ಳುವ ಪದ್ಧತಿಯಂತೆ ಒಂದು ಅಂಗಿಯ ಹಾಕಿಕೊಂಡು ಬಕ್ಕತಲೆಯಿಂದ ಕುಳಿತಿದ್ದರು. ಅವರ ನಾಲ್ಕುಜನ ಅಂಗರಕ್ಷಕರಲ್ಲಿ ರಾಯಾಜಿಯೆಂಬವನು ರಾಯಗಡದಿಂದ

ಅಂದು ಪತ್ರವನ್ನು ತಂದಿದ್ದ ಇಬ್ಬರನ್ನು ಕರಕೊಂಡು ಬರುವದಕ್ಕಾಗಿ ಹೋಗಿದ್ದನು. ಆದ್ದರಿಂದ ಮೂವರು ಅಂಗರಕ್ಷಕರು, ಸಂಭಾಜಿಮಹಾರಾಜರು, ಕಬಜಿಯು ಹೀಗೆ ಐದು ಜನರು ಮಾತ್ರ ಮಾತಾಡುತ್ತ ಅಲ್ಲಿ ಕುಳಿತಿದ್ದರು. ಈ ಸ್ಥಿತಿಯಲ್ಲಿ ಐವತ್ತು ಜನರೊಡನೆ ಸೋನಾಜಿಯೂ, ಸೂರ್ಯಾಜಿಯೂ ಕೈಯಲ್ಲಿ ಬೇಡಿಗಳನ್ನು ಹಿಡಕೊಂಡು ಅಲ್ಲಿಗೆ ಬಂದರು. ಆಗ ಸೋನಾಜಿಯು ರಾಯಗಡದಿಂದ ಬಂದ ಆಜ್ಞಾಪತ್ರವನ್ನು ಸಂಭಾಜಿರಾಜರ ಕೈಯಲ್ಲಿ ಕೊಡಲು, ಅವರು ಓದಿ ತುಚ್ಛತಾದರ್ಶಕಹಾಸ್ಯದಿಂದ—''ಒಟ್ಟಿಗೆ ನೀವಿಬ್ಬರು ಈ ಐವತ್ತು ಜನರ ಸಹಾಯದಿಂದ ನಮ್ಮಕಾಲಿಗೆ ಬೇಡಿಗಳನ್ನು ಜಡಿಯತಕ್ಕವರು'' ಎಂದು ಕೇಳುವಾಗ, ಅವರು ಕಣ್ಣುಗ್ಗಳು ಕೆಂಡದಂತಾದವು. ಪ್ರತ್ಯಕ್ಷ ಹುಲಿಯೊಡನೆ ನಿಶ್ಯಸ್ತ್ರವಾಗಿ ಕಾದಿದ ಆ ವೀರನ ಮುಂದೆ ನಿಲ್ಲುವ ಧೈರ್ಯವು ಯಾರಿಗಾಗುವದು? ಬಾಳಾಜಿಯ ಪತ್ರವೂ ಅಂದೇ ಸಂಭಾಜಿರಾಜರ ಕೈಯಲ್ಲಿ ಬಂದದ್ದರಿಂದ ಅವರು ಈ ಪ್ರಸಂಗವು ಬರುವದೆಂದು ಮೊದಲೇ ತರ್ಕಿಸಿ, ಆ ಇಬ್ಬರು ಪತ್ರತಂದವರನ್ನು ಹಿಡಕೊಂಡು ಬರಲು ತಮ್ಮ ಅಂಗರಕ್ಷಕನಾದ ರಾಯಾಜಿಯನ್ನು ಕಳಿಸಿದ್ದರು. ಸಂಭಾಜಿರಾಜರ ಈ ಉಗ್ರಮೂರ್ತಿಯನ್ನು ನೋಡಿ ಆ ಐವತ್ತೆರಡು ಜನರ ಹೃದಯಗಳೂ ಕಂಪಿಸತೊಡಗಿದವು; ಆದರೂ ಆ ಇಬ್ಬರು ಮುಖ್ಯರು ಡೌಲಿನಿಂದ ಸಂಭಾಜಿರಾಜರನ್ನು ಕುರಿತು—''ರಾಜಾಜ್ಞೆಯನ್ನು ತಲೆಯಲ್ಲಿ ಹೊತ್ತು ಮನ್ನಿಸುವದು ನಮ್ಮ ಕೆಲಸವಾಗಿರುವದು'' ಎಂದು ನುಡಿದರು. ಕೂಡಲೆ ಸಂಭಾಜಿರಾಜರ ಮುಖಮಂಡಲವು ಕೆಂಪೇರಿ ಅವರ ಸರ್ವಾಂಗವು ಕ್ರೋಧಾವೇಶದಿಂದ ಕಂಪಿಸಕೊಡಗಿತು. ಅವರು ಹಿಂದಕ್ಕೆ ತಿರುಗಿ ತಮ್ಮ ಅಂಗರಕ್ಷಕರನ್ನು ಕುರಿತು—''ಕುಯಾಜಿ, ತಾನ್ಹಾಜಿ, ಸಾಬಾಜೀ, ಈ ಐವತ್ತೆರಡು ಜನರು ನಮ್ಮನ್ನು ಸೆರೆಹಿಡಿಯಬಂದಿರುವದರಿಂದ ನಾವು ರಾಜಾಜ್ಞೆಗೆ ಶರಣುಹೋಗಬೇಕಲ್ಲವೆ?'' ಎಂದು ಕೇಳಲು, ಆ ಮೂವರೂ ಒಂದೇ ಧ್ವನಿಯಿಂದ—''ಸರಕಾರದ ಅಪ್ಪಣೆಯಾಗಬೇಕು'' ಎಂದು ಕೇಳಿಕೊಳ್ಳಲು, ಸಂಭಾಜಿಯು—''ಎಲೇ, ಅಪ್ಪಣೆಯಾತರದು? ರಣಚಂಡಿಯ ನರ್ತನವನ್ನು ಆರಂಭಿಸಿರಿ'' 'ಎಂದು ಹೇಳಿದ್ದೊಂದೇ ತಡ, ಆ ಮೂವರು ಕೆರಳಿದ ಕೇಸರಿಗಳಂತೆ ಆ ಐವತ್ತೆರಡು ಜನರ ಮೇಲೆ ದುಮುಕಿ ಒಂದು ಗಳಿಗೆಯೊಳಗೆ ಆ ಐವತ್ತೆರಡು ಜನರನ್ನೂ ತುಂಡಿರಿಸಿ ಅವರ ರಕ್ತದ ಕಾವಲಿಯನ್ನು ತಮ್ಮ ಒಡೆಯನ ಮುಂದೆ ಹರಿಸಿದರು!

ಇಷ್ಟಾಗುವದರೊಳಗೆ ರಾಯಾಜಿಯು ಆ ಇಬ್ಬರು ಪತ್ರತಂದವರನ್ನು ಹೆಡಮುರಿಗೆ ಕಟ್ಟಿ ಹಿಡಕೊಂಡುಬಂದನು. ಇಲ್ಲಿಯ ಭಯಂಕರ ಸ್ಥಿತಿಯನ್ನು ನೋಡಿ ಅವರಿಬ್ಬರ ಕೈ ಕಾಲುಗಳು ತಣ್ಣಗಾದವು. ಮಹಾರಾಜರು ರಾಯಾಜಿಗೆ—''ರಾಯಾಜೀ, ಹೋಗು, ಹಿರೋಜಿಫರ್ಜಂದ ನನ್ನೂ ಹಿಡಕೊಂಡುಬಾ'' ಎಂದು ಹೇಳಲು, ಆ ರಾಜಭಕ್ತನು ತತ್‌ಕ್ಷಣ ಹಿರೋಜಿಯ ಮನೆಗೆಹೋದನು; ಆದರೆ ತನ್ನ ಕಡೆಯ ಐವತ್ತೆರಡು ಜನರ ಹೆಣಗಳು ಬಿದ್ದದ್ದನ್ನು ಕೇಳಿದ ಕೂಡಲೆ ಆತನು ಕುಟುಂಬಸಹಿತವಾಗಿ ದುರ್ಗದೊಳಗಿನ ಗುಪ್ತದ್ವಾರದಿಂದ ಹೊರಟು ಹೋಗಿದ್ದನು. ಇತ್ತ ಸಂಭಾಜಿಮಹಾರಾಜರು ಪತ್ರತಂದ ಆ ಇಬ್ಬರಲ್ಲಿ ಒಬ್ಬನನ್ನು ಕುರಿತು–

ಸಂಭಾಜಿ–ಖಂಡೋಜಿ, ನೀವು ಗುಪ್ತಚಾರರ ನಾಯಕರಿರುವಿರಲ್ಲವೆ?

ಖಂಡೋಜಿ–ಜಿ ಸರಕಾರ!

ಸಂಭಾಜಿ–ಇವನು ಯಾರು? ಇವನ ಹೆಸರೇನು?

ಖಂಡೋಜಿ–ಗುಪ್ತಪತ್ರಗಳನ್ನು ಮುಟ್ಟಿಸುವದಕ್ಕಾಗಿ ಸರಕಾರದಿಂದ ಇವರು ನಿಯಮಿಸಲ್ಪಟ್ಟಿರುವರು. ಇವರ ಹೆಸರು ಗಣೇಜಿಯು.

ಸಂಭಾಜಿ–ಸರಕಾರವು ಯಾರು?

ಖಂಡೋಜಿ–ರಾಜಾರಾಮ ಮಹಾರಾಜರು.

ಸಂಭಾಜಿ–ಅವರು ಗಾದಿಯಮೇಲೆ ಕುಳಿತರೇನು?

ಖಂಡೋಜಿ–ಜಿ ಸರಕಾರ!

ಸಂಭಾಜಿ–ಇನ್ನು ನಾವೆಲ್ಲಿಯ ಸರಕಾರವು?

ಖಂಡೋಜಿ–ಸುಳ್ಳುಹೇಳುವದಿಲ್ಲ, ಸರಕಾರದ ಮುಂದೆ ಯಾವದನ್ನೂ ಮುಚ್ಚಿ ಇಡುವ ಧೈರ್ಯವಾಗಲೊಲ್ಲದು.

ಸಂಭಾಜಿ–ಹಾಗಾದರೆ, ರಾಯಗಡದಲ್ಲಿಯ ಯಾವತ್ತುಸುದ್ದಿಯನ್ನು ಹೇಳು.

ಖಂಡೋಜಿ–ಮಹಾರಾಜ, ಪ್ರತಿಜ್ಞೆಯಿಂದ.......

ಸಂಭಾಜಿ—''ಪ್ರತಿಜ್ಞೆಯಿಂದೇನು?'' ನೀನು ಪ್ರತಿಜ್ಞೆಯಿಂದ ಕಟ್ಟಲ್ಪಟ್ಟಿರುವೆಯೋ?

ಖಂಡೋಜಿ–ಆದರೆ ಖಾವಿಂದರ ಮುಂದೆ ನನ್ನ ಪ್ರತಿಜ್ಞೆಯು ತತ್ತರಿಸಹತ್ತಿದೆ; ಅದು ತಡೆಯುವ ಹಾಗೆ ಕಾಣುವದಿಲ್ಲ!

ಸಂಭಾಜಿ–ಹಾಗಾದರೆ, ಹೇಳು, ನಿಜವಾದ ಸಂಗತಿಯನ್ನು ಬೇಗನೆ ಹೇಳು.

ಖಂಡೋಜಿ–ದೊಡ್ಡ ಮಹಾರಾಜರು ಮರಣಹೊಂದಿದ ಬಳಿ.....

ಸಂಭಾಜಿ (ಸಂತಾಪದಿಂದ ಕಾಲು ಅಪ್ಪಳಿಸಿ)–ಏನಂದಿ? ಆಬಾಸಾಹೇಬರು ಮರಣ ಹೊಂದಿದರೋ?

ಈ ಮೇರೆಗೆ ಸಂತಾಪಗೊಂಡ ಸಂಭಾಜಿಯು ಖಂಡೋಜಿಯಿಂದ ರಾಯಗಡದ ಮೇಲಿನ ಎಲ್ಲ ಸುದ್ದಿಯನ್ನು ಕೇಳಿಕೊಂಡನು. ಒಬ್ಬ ಬಾಳಾಜಿಯ ಹೊರತು ಉಳಿದವರೆಲ್ಲ ಒಂದಿಲ್ಲೊಂದು ಬಗೆಯಿಂದ ಸೋಯರಾರಾಣೀಸಾಹೇಬರ ಬಲೆಯಲ್ಲಿ ಸಿಕ್ಕಿರುವರೆಂತಲೂ, ಅಣ್ಣಾಜಿದತ್ತೋ ಈ ಒಳಸಂಚಿನ ಮುಖ್ಯ ಚಾಲಕನೆಂತಲೂ ಖಂಡೋಜಿಯು ಹೇಳಿದನು. ಬಳಿಕ ಸಂಭಾಜಿರಾಯನು ಖಂಡೋಜಿಯನ್ನು ಕೆಕ್ಕರಿಸಿ ನೋಡುತ್ತ–ಖಂಡೋಜೀ, ನೀನು ಮಹಾನೀಚನು; ಮೊದಲು ನಮ್ಮ ವಿರುದ್ಧವಾದ ಒಳಸಂಚಿನಲ್ಲಿ ಸೇರಿ ನಮ್ಮ ದ್ರೋಹವನ್ನು ಸಂಪಾದಿಸಿದೆ; ಈಗ ಒಳಸಂಚಿನ ಎಲ್ಲ ಸಂಗತಿಯನ್ನು ನಮ್ಮ ಮುಂದೆಹೇಳಿ ಮತ್ತೊಬ್ಬರ ದ್ರೋಹವನ್ನು ಸಂಪಾದಿಸಿರುವೆ; ನಿನ್ನಂಥ ದ್ರೋಹಿಗಳು ರಾಜ್ಯಘಾತಕರಾದದ್ದರಿಂದ ಈಗ ನಿಮ್ಮಿಬ್ಬರ ಸಂಹಾರವನ್ನು ನಾವು ಮಾಡಿಸುವೆವು. ಇತ್ತ ಈ ದ್ರೋಹಿಗಳ ಗತಿಯು ಏನಾಗಿರುವದೆಂಬದನ್ನು ನೋಡಿರಿ, ಎಂದು ಹೇಳಿ, ಎಡಬಲಕ್ಕೆ ನೋಡುತ್ತಿರಲು, ಅಷ್ಟರಲ್ಲಿ ರಾಯಾಜಿಯು

ಬಂದು, ಹಿರೋಜಿಫರ್ಜಂದನು ಸಕುಟುಂಬವಾಗಿ ಎತ್ತೋ ಓಡಿ ಹೋಗಿರುವನೆಂದು ಹೇಳಿದನು. ಆಗ ಸಂಭಾಜಿಯು ಆತನಿಗೆ-ಆ ನೀಚನು ಎಲ್ಲಿ ಓಡಿ ಹೋಗುವನು? ಪಾತಾಳದಲ್ಲಿ ಅಡಗಿಕೊಂಡಿದ್ದರೂ ಅವನನ್ನು ಹಿಡಿದು ತಂದು ಶಾಸನ ಮಾಡುವೆನು. ಸದ್ಯಕ್ಕೆ ಈ ಇಬ್ಬರು ದ್ರೋಹಿಗಳನ್ನು ದುರ್ಗದ ಹುಡೆಯಮೇಲೆ ನಿಲ್ಲಿಸಿ, ಕೆಳಗೆ ಕೊಳ್ಳದಲ್ಲಿ ದೂಡಿಬಿಡಿರಿ, ಎಂದು ಆಜ್ಞಾಪಿಸಲು, ರಾಯಾಜಿಯು ತತ್‌ಕ್ಷಣ ಅಪ್ಪಣೆಯಂತೆ ನಡೆದನು. ಅಲ್ಲಿ ಬಿದ್ದಿದ್ದ ಐವತ್ತೆರಡು ಜನರ ಶವಗಳನ್ನೂ ದುರ್ಗದ ಮೇಲಿಂದ ಕೆಳಗೆ ಚಲ್ಲಿಸಿಬಿಟ್ಟರು. ಇದರಿಂದ ದುರ್ಗದ ಮೇಲಿನ ಸೈನಿಕರು ಅಂಜಿ ಸಂಭಾಜಿ ರಾಜನಿಗೆ ಅಂಕಿತರಾದರು. ಆಗ ಸಂಭಾಜಿಯು ದುರ್ಗವನ್ನು ಸ್ವಾಧೀನಪಸಿಡಿಕೊಂಡು ಅದರ ಅಧಿಪತ್ಯವನ್ನು ರಾಯಾಜಿಗೆ ಕೊಟ್ಟನು.

ಇಷ್ಟೆಲ್ಲ ಆಗುವದರೊಳಗಾಗಿ ಮಧ್ಯರಾತ್ರಿಯಾಯಿತು. ಸಂಭಾಜಿಯೂ ಆತನ ಅಂಗರಕ್ಷಕರೂ, ಕಬಜಿಯೂ ಸ್ವಲ್ಪ ವಿಶ್ರಮಿಸಬೇಕೆನ್ನುತ್ತಿರುವಷ್ಟರಲ್ಲಿ, ದುರ್ಗದ ಕಳಗೆ ಗದ್ದಲವಾಗತೊಡಗಿತು. ದುರ್ಗದ ಕೆಳಗಿರುತ್ತಿದ್ದ ಜನಾರ್ದನಪಂತ ಸುಮಂತನ ಭಯವು ಸಂಭಾಜಿರಾಜನಿಗೆ ವಿಶೇಷವಾಗಿತ್ತು, ಸಂಭಾಜಿರಾಜನು ಸದ್ಯಕ್ಕೆ ಪಲ್ಹಾಳಗಡವನ್ನು ಸ್ವಾಧೀನಪಡಿಸಿಕೊಂಡಿದ್ದರೂ, ಅದನ್ನು ಕಾಯ್ದುಕೊಳ್ಳುವಷ್ಟು ಬಲವು ಆತನಿಗಿದ್ದಿಲ್ಲ. ಜನಾರ್ದನಪಂತನು ದುರ್ಗವೇರಿಬಂದರೆ ಪರಿಣಾಮವಾಗದೆಂಬ ಅಂಜಿಕೆಯು ಆತನಿಗೆ ಪೂರಾ ಇತ್ತು; ಆದ್ದರಿಂದ ದುರ್ಗದ ಕೆಳಗೆ ಗದ್ದಲವೇನಿರಬಹುದೆಂಬದನ್ನು ಕುರಿತು ತರ್ಕ ವಿತರ್ಕಗಳನ್ನು ಮಾಡುತ್ತ, ಗದ್ದಲದ ಕಾರಣವು ದುರ್ಬಿಣಿಯ ಸಹಾಯದಿಂದ ಗೊತ್ತಾದರೆ ನೋಡೆಂದು ಕಬಜಿಯನ್ನು ಆಜ್ಞಾಪಿಸಿದನು. ಅದರಂತೆ ಕಬಜಿಯು ದುರ್ಬೀನು ಹಚ್ಚಿ ನೋಡಹತ್ತಿದನು. ಇತ್ತ ಜನಾರ್ದನಪಂತನು ಮಧ್ಯರಾತ್ರಿಯಾಗಲು, ತಾನು ಮೊದಲೇ ಯೋಚಿಸಿದಂತೆ ತನ್ನ ಸಾವಿರ ಜನರೊಡನೆ ದುರ್ಗವನ್ನೇರಿ ಸಂಭಾಜಿರಾಜನನ್ನು ರಾಜಾಜ್ಞೆಯಂತೆ ಸೆರೆಹಿಡಿದು ಕಠಿಣ ಕಾರಾಗೃಹದಲ್ಲಿರಿಸಬೇಕೆಂದು ಸೈನ್ಯದೊಡನೆ ಹೊರಡಲು ಸಿದ್ಧನಾಗಿ, ಇನ್ನು ಕುದುರೆಯನ್ನು ಹತ್ತಲಿಕ್ಕೆ ಏಳಬೇಕೆನ್ನುತ್ತಿದ್ದನು. ಅಷ್ಟರಲ್ಲಿ ಯಾರದೋ ಕುದುರೆಯ ಸವಾರರ ಸೈನ್ಯವು ತನ್ನ ಸೈನ್ಯವನ್ನು ಮುತ್ತಲು, ಇದೇನು ಗದ್ದಲವೆಂದು ಆತನು ತನ್ನ ಡೇರೆಯ ಹೊರಗೆ ಬಂದು ನೋಡಹತ್ತಿದನು. ಅಷ್ಟರಲ್ಲಿಹಂಬೀರರಾವ ಸೇನಾಪತಿಯು ಬಂದು—"ಜನಾರ್ದನಪಂತ, ಈಗ ನೀವು ಶಸ್ತ್ರಗಳನ್ನು ಕೆಳಗಿಟ್ಟು ಶರಣು ಬರತಕ್ಕದ್ದು; ಇಲ್ಲದಿದ್ದರೆ ನಾವು ಬಲಾತ್ಕಾರದಿಂದ ನಿಮ್ಮ ಶಸ್ತ್ರಗಳನ್ನು ಕಸಿದುಕೊಂಡು ಬೇಡಿಗಳನ್ನು ಹಾಕುವೆವು." ಎಂದು ಹೇಳಿದನು! ಹಂಬೀರಾಯನ ಈ ಮಾತುಗಳನ್ನು ಕೇಳಿ ಜನಾರ್ದನಪಂತನು ಚಕಿತನಾದನು. ಸೇನಾಪತಿಯು ತಮ್ಮ ಒಳಸಂಚಿನೊಳಗಿನವನಿದ್ದು, ಈಗ ಹೀಗೆ ಯಾಕೆ ಮಾತಾಡುವನೆಂಬದು ಆತನಿಗೆ ತಿಳಿಯದಾಯಿತು; ಆತನು ದಿಟ್ಟತನದಿಂದ ಹಂಬೀರರಾಯನಿಗೆ-

ಜನಾರ್ದನಪಂತ-ಸೇನಾಪತೇ, ರಾಯಗಡದ ಆಜ್ಞಾಪತ್ರವು ತಮಗೆ ಇನ್ನೂ ಬಂದಿಲ್ಲವೋ?

ಹಂಬೀರರಾವ–ರಾಜಾರಾಮಮಹಾರಾಜರ ಮುದ್ರೆಯು, ಹಾಗು ಆವಜಿಯ ಸಹಿಯ ಆಜ್ಞಾಪತ್ರವು ರಾಯಗಡದಿಂದ ನಮಗೆ ಬಂದಿದ್ದರೂ, ಬಾಳಾಜಿಪ್ರಭುವು ಜೀವದಿಂದ ಇದ್ದು, ಗಾದಿಯ ಸರಳ ವಾರಸದಾರರಾದ ಸಂಭಾಜಿ ಮಹಾರಾಜರು ಆತನ ಸಹಿಯಿಂದ ಆಜ್ಞಾಪತ್ರವನ್ನು ಕಳಿಸಿರುವಾಗ, ನಾವುರಾಯಗಡದ ಮೇಲಿನ ಸದ್ಯದ ರಾಜ್ಯದಾಡಳಿತ ವನ್ನು ಕೃತ್ರಿಮವೆಂದು ತಿಳಿಯುವದು ನಿಜವಾದ ರಾಜನಿಷ್ಠೆಯ ಲಕ್ಷಣವಾಗಿರುವದು. ಅದ ರಂತೆ ನಾನು ನಿಮಗೆ ಇನ್ನೊಮ್ಮೆ ಸ್ಪಷ್ಟವಾಗಿ ಹೇಳುವೆನು, ಶಸ್ತ್ರಗಳನ್ನು ಕೆಳಗಿಟ್ಟು, ನೀವು ನಮಗೆ ಶರಣು ಬರತಕ್ಕದ್ದು, ಇಲ್ಲದಿದ್ದರೆ, ನಮ್ಮ ಸೈನ್ಯಕ್ಕೆ ಯುದ್ಧಕ್ಕಾಗಿ ಅಪ್ಪಣೆ ಕೊಡುವೆನು.

ಹಂಬೀರರಾಯನ ಈ ಮಾತುಗಳನ್ನು ಕೇಳಿ ಜನಾರ್ದನಪಂತನು ಸ್ವಲ್ಪ ಬೆದರಿದನು; ಆದರೂ ಆತನು ಸೋಯರಾಬಾಯಿಯ ಅತ್ಯಂತ ಅಭಿಮಾನಿಯಾದದ್ದರಿಂದ ಶಸ್ತ್ರವನ್ನು ಕೆಳಗಿಡದೆ ಮತ್ತೆಹಂಬೀರರಾಯನನ್ನು ಕುರಿತು–

ಜನಾರ್ದನಪಂತ–ಹಂಬೀರರಾವ, ನಿಮ್ಮ ಮಾತು ಒಪ್ಪಿಕೊಳ್ಳತಕ್ಕದ್ದಿದ್ದರೂ, ಅಬಾಸಾಹೇಬರ ಮನಸ್ಸಿನಲ್ಲಿ ಸಂಭಾಜಿಮಹಾರಾಜರಿಗೆ ಪಟ್ಟವನ್ನು ಕೊಡಬೇಕೆಂದು ಇದ್ದಿಲ್ಲ; ಇದಲ್ಲದೆ ಸಂಭಾಜಿಮಹಾರಾಜರ ಸ್ಥಿತಿಯನ್ನು ನೋಡಿದರೆ ಅವರಿಗೆ ಪಟ್ಟಕಟ್ಟು ವದರಿಂದ ಹಿತವಾಗಲಿಕ್ಕಿಲ್ಲ............

ಹಂಬೀರರಾವ – ರಾಜಾರಾಮ ಮಹಾರಾಜರಿಗೆ ಪಟ್ಟಗಟ್ಟಬೇಕೆಂದಾದರೂ ಅಬಾಸಾಹೇಬರು ಎಂದು ಯಾರಮುಂದೆ ಆಡಿರುವರು? ರಾಜಪುತ್ರರ ಸ್ಥಿತಿಗತಿಗಳನ್ನು ವಿಚಾರಿಸುವ ಕೆಲಸವು ನಮ್ಮದಲ್ಲ, ಆ ಕೆಲಸವು ಯಾರದೋ ಅವರು ಅದನ್ನು ನೋಡಿಕೊಳ್ಳ ಬಹುದು. ಯಾವತ್ತು ರಾಷ್ಟ್ರದ ಸಮ್ಮತಿಯಿಂದ, ಅಥವಾ ಸ್ವಂತದ ಕರ್ತೃತ್ವ ಶಕ್ತಿಯಿಂದ ಯಾವಪುರುಷನು ರಾಜಸಿಂಹಾಸನಾರೂಢನಾಗುವನೋ, ಆತನಮುಂದೆ ರಾಜನಿಷ್ಠೆಯ ಪ್ರತಿಜ್ಞೆ ಮಾಡಿ ಮರಣಪರ್ಯಂತ ನಿರ್ಮಲಮನಸ್ಸಿನಿಂದ ಸಿಂಹಾಸನದ ಚಾಕರಿ ಮಾಡುವದು ನಮ್ಮ ನಿಮ್ಮಂಥ ಸಿಪಾಯಿಗಳ ಶೀಲವಾಗಿರುವದು. ಹೀಗಿದ್ದು, ಒಬ್ಬ ಸ್ವಾರ್ಥ ಪರಾಯಣ ಸ್ತ್ರೀಯ ವಾಗ್ಜಾಲದಲ್ಲಿ ಸಿಕ್ಕು ನಿಜವಾದ ರಾಜನ ಕಾಲಲ್ಲಿ ಬೇಡಿಗಳನ್ನು ಹಾಕಲಿಕ್ಕೆ ನಿಮಗೆ ನಾಚಿಕೆ ಬರುವದಿಲ್ಲವೆ? ಹೇಳಿರಿ, ಶಸ್ತ್ರಗಳನ್ನು ಕೆಳಗಿಟ್ಟು ಶರಣುಬಂದು ರಕ್ತಪಾತವನ್ನು ನಿಲ್ಲಿಸುವಿರೋ, ಅಥವಾ ಯುದ್ಧವನ್ನಾರಂಭಿಸಲು ಕೊಂಬು ಊದಲೋ?

ಹಂಬೀರರಾಯನ ಈ ದರ್ಪೋಕ್ತಿಗಳಿಗೆ ಜನಾರ್ದನಪಂತನು ಸೊಪ್ಪುಹಾಕಲಿಲ್ಲ; ಯಾಕಂದರೆ ಆಗಿನ ಎಲ್ಲ ವೀರರೂ ಸ್ವಾಭಿಮಾನಿಯಾದ ಶಿವಪ್ರಭುವಿನ ಸಹವಾಸದಿಂದ ತಾವೂ ಸ್ವಾಬಿಮಾನಿಗಳೇ ಆಗಿದ್ದರು; ಜನಾರ್ದನಪಂತನು ಕೂಡಲೆ ಅಶ್ವಾರೂಢನಾಗಿ ಯುದ್ಧಕ್ಕೆ ಸಿದ್ಧವಾಗುವದಕ್ಕಾಗಿ ತನ್ನ ಸೈನಿಕರನ್ನು ಆಜ್ಞಾಪಿಸುವದಕ್ಕೋಸ್ಕರ ಕೊಂಬು ಊದಿದನು. ಇತ್ತ ಹಂಬೀರ ರಾಯನೂ ಕೊಂಬು ಊದಲು, ತಿರಸ್ಕರಣೀಯವಾದ ಯಾದವಿಗೆ ಆರಂಭವಾಯಿತು. ಆಗ ರಣವಾದ್ಯಧ್ವನಿಗಳೂ, ವೀರರ ಸಿಂಹನಾದಗಳೂ ದಶದಿಕ್ಕುಗಳನ್ನು ತುಂಬಿದವು. ಈ ಗದ್ದಲವೇ ಸಂಭಾಜಿರಾಜನ ಕಿವಿಗೆ ಕೇಳಿದ್ದು; ಈ ಗದ್ದಲವನ್ನು ಕೇಳಿಯೇ ಆತನು ''ಇದೇತರ ಗದ್ದಲವು ದುರ್ಬಿನಿಯಿಂದ ನೋಡಿಬಾರೆಂದು''

ಕಬಜಿಯನ್ನು ಕಳಿಸಿದ್ದು, ಕಬಜಿಯು ಇದೆಲ್ಲ ಹಂಬೀರ ರಾವಸೇನಾಪತಿಯ ಪ್ರತಾಪವಿರ ಬಹುದೆಂದು ತರ್ಕಿಸಿ, ಅದರಂತೆ ಸಂಭಾಜಿಗೆ ತಿಳಿಸಿದನು. ಅದನ್ನು ಕೇಳಿ ಸಂಭಾಜಿರಾಜನಿಗೆ ಸಮಾಧಾನವಾದರೂ ಸಂಶಯತಪ್ಪಲಿಲ್ಲ. ಇತ್ತ ಯಾದವೀ ಯುದ್ಧವು ಒಂದು ಒಂದೂವರೆ ಗಳಿಗೆಯವರೆಗೆ ಬಹು ಭಯಂಕರವಾಯಿತು. ಅಷ್ಟರಲ್ಲಿ ಜನಾರ್ದನಪಂತನು ಗಾಯಹೊಂದಿ ಬಿದ್ದದ್ದರಿಂದ, ಆತನು ಕೂಡಲೆ ಕೊಂಬು ಊದಿ ಯುದ್ಧ ನಿಲ್ಲಿಸಲು ತನ್ನ ಸೈನಿಗರಿಗೆ ಆಜ್ಞಾಪಿಸಲು, ಯುದ್ಧವು ನಿಂತಿತು. ಆಗ ಜನಾರ್ದನಪಂತನ ಸೈನಿಕರ ಶಸ್ತ್ರಗಳನ್ನು ಕಸಿದು ಕೊಳ್ಳುವದಕ್ಕಾಗಿ ಹಂಬೀರರಾಯನು ತನ್ನ ಸೈನಿಕರನ್ನು ಆಜ್ಞಾಪಿಸಿದಕೂಡಲೆ, ಅವರು ಅಪ್ಪಣೆಯಂತೆ ಕಾರ್ಯಮಾಡಿಬಿಟ್ಟರು. ಇತ್ತ ಜನಾರ್ದನಪಂತನು ಸೆರೆಯಾಳಾಗಿ ಆತನ ಕಾಲಿಗೆ ಬೇಡಿಗಳು ಬಿದ್ದವು. ಆಮೇಲೆ ಆತನ ಗಾಯಗಳನ್ನು ಕಟ್ಟಿ ಆತನನ್ನು ಒಂದು ಡೋಲಿ ಯಲ್ಲಿ ಮಲಗಿಸಿಕೊಂಡು ಹಂಬೀರರಾಯನು ಸಕಲ ಪರಿವಾರದೊಡನೆ ದುರ್ಗವನ್ನು ಏರ ತೊಡಗಿದನು. ಆಗ ''ಸಂಭಾಜಿ ಮಹಾರಾಜಕಿ ಜಯ'' ಎಂಬ ಜಯನಾದವು ದಿಕ್ಕು ದಿಕ್ಕಿಗೆ ಹಬ್ಬಿತು; ಬರಬರುತ್ತ ಆ ಜಯಘೋಷವು ಸಂಭಾಜಿರಾಜರ ಕಿವಿಗೆ ಮುಟ್ಟಿ ಅವರ ಆನಂದವು ಉಕ್ಕೇರುತ್ತಿರಲು, ಹಂಬೀರರಾಯನ ಒಬ್ಬ ಸೇವಕನು ಅವರ ಬಳಿಗೆ ಬಂದು ಅವರ ವಿಜಯದ ವಾರ್ತೆಯನ್ನು ಮಕಮುಟ್ಟಿ ತಿಳಿಸಿದನು. ಆಗ ಬಾಳಾಜಿ ಆವಜಿಯ, ಹಾಗು ಹಂಬೀರರಾಯನ ಸ್ವಾಮಿಭಕ್ತಿಯ ಸ್ಮರಣದಿಂದ ಸಂಭಾಜಿರಾಜರ ಕಣ್ಣೊಳಗಿಂದ ಬಳಬಳ ಆನಂದಬಾಷ್ಪಗಳು ಉದುರಿದವು! ಸ್ವಚ್ಛವಾದ ಬೆಳದಿಂಗಳಲ್ಲಿ ಸರ್ವ ಸೇನಾಭಾರವು ಶಾಂತ ತೆಯ ಶುಭ್ರ ನಿಶಾನೆಹಿಡಿದು ಸಾಗಿಬಂದು ದುರ್ಗದ ಮಹಾದ್ವಾರವನ್ನು ಮುಟ್ಟಲು ಬಾಗಿಲು ಸಂಪೂರ್ಣವಾಗಿ ತೆರೆದು ಬಿಟ್ಟಿತು. ಮಹಾರಾಜರು ಮಹಾದ್ವಾರದಲ್ಲಿಯೇ ಹಂಬೀರ 'ರಾಯನ ಕೈಹಿಡಿದು ಆದರದಿಂದ ಅರಮನೆಗೆ ಕರಕೊಂಡು ಹೋದರು. ಜನಾರ್ದನಪಂತನ ಡೋಲಿಯನ್ನು ಅರಮನೆಯ ಮುಂದಿನ ಬೈಲಿನಲ್ಲಿ ಇಳಿಸಿದರು. ಮಹಾರಾಜರು ಡೋಲಿಯ ಬಳಿಗೆ ಬರಲು, ಅದರ ಮೇಲಿನ ಬುರುಕೆಯನ್ನು ತೆಗೆದರು. ಆಗ ಜನಾರ್ದನಪಂತನ ಮೋರೆಯು ಕಪ್ಪಿಟ್ಟಿತ್ತು; ಆತನು ಮೋರೆತಗ್ಗಿಸಿ ಮೌನವ್ರತವನ್ನು ಸ್ವೀಕರಿಸಿದ್ದನು. ಆತನನ್ನು ನೋಡಿ ಸಂಭಾಜಿರಾಜರು– ಸುಮಂತ, ನಾಚಿಕೆಯಿಂದ ತಲೆತಗ್ಗಿಸುವ ಕಾರಣವಿಲ್ಲ, ನೀವು ನಮ್ಮನ್ನು ಮದ್ಯದ ಅಮಲಿನಲ್ಲಿರುವಾಗ ಸೆರೆಹಿಡಿಯಬೇಕೆಂದು ಮಾಡಿದ್ದಿರಿ; ಆದರೆ ದೇವರ ಆಟದಿಂದ ನೀವೇ ನಮ್ಮ ಸೆರೆಯಾಳಾಗಬೇಕಾಯಿತು! ಹೋಗಲಿ, ಇನ್ನು ಆದಮಾತು ತಿರುಗಿ ಬರುವ ಹಾಗಿಲ್ಲ! ನೀವು ಇಲ್ಲಿಯವರೆಗೆ ನಮ್ಮ ಬಂದೋಬಸ್ತು ಮಾಡುವದಕ್ಕಾಗಿ ಬಹಳ ಶ್ರಮಪಟ್ಟಿರುವದರಿಂದ ನಿಮಗೆ ಇನ್ನು ನಾವು ಆಜನ್ಮಸ್ಥಿರವಾದ ವಿಶ್ರಾಂತಿಯನ್ನು ಕೊಡುವೆವು. ಕಬಜೀ ಇವರನ್ನು ರಾಜಕೈದಿ ಯೆಂದು ತಿಳಿದು ಕಾರಾಗೃಹದಲ್ಲಿರಿಸಿರಿ. ಇವರಿಗೆ ಯಾವಮಾತಿನ ಕೊರತೆಯೂ ಆಗದಂತೆ ವ್ಯವಸ್ಥೆಯಿಡುವದಕ್ಕಾಗಿ ಕಾರಾಗೃಹದ ಅಧಿಕಾರಿ ಗಳಿಗೆ ತಿಳಿಸಿರಿ. ಸೆರೆಮನೆಗೆ ಹೋದಕೂಡಲೆ ಇವರ ಬೇಡಿಗಳನ್ನು ತೆಗೆದುಬಿಡತಕ್ಕದ್ದು, ಎಂದು ಹೇಳಿದರು. ಇತ್ತ ಸುಮಂತನ ಸೈನಿಕರಿಂದ ರಾಜನಿಷ್ಠೆಯ ಪ್ರತಿಜ್ಞೆಯನ್ನು ಮಾಡಿಸಿ, ಸೇನಾಪತಿಯು ಮಹಾರಾಜರ ಸೈನ್ಯದಲ್ಲಿ ಅವರನ್ನು ಸೇರಿಸಿಕೊಂಡನು!

# .ಸಮರ್ಥರ ದರ್ಶನ!

ಇಷ್ಟೆಲ್ಲ ಆಗಿ ನಾಲ್ಕು ಯೋಗಕ್ಷೇಮದ ಮಾತುಗಳಾಡುವದರೊಳಗೆ ಬೆಳಗು ಬಂದಿತು. ಬ್ರಾಹ್ಮ ಮುಹೂರ್ತದಲ್ಲಿ ದುರ್ಗವಿಳಿದು ಹೋಗತಕ್ಕದ್ದೆಂದು ಸಂಭಾಜಿರಾಜನು ಹಂಬೀರರಾಯನ ಆಲೋಚನೆಯಿಂದ ನಿರ್ಧರಿಸಿದನು. ಆಗ ಆತನ ಬಳಿಯಲ್ಲಿ ರಾವುತರು, ಕಾಲಾಳುಕೂಡಿ ಹದಿನೈದು ನೂರು ಜನ ಶೂರ ಸೈನಿಕರಿದ್ದರು. ಎಲ್ಲರೂ ಮುಖಪ್ರಕ್ಷಾಲನಾ ನಂತರ ಸ್ನಾನ ಮಾಡಿದರು. ಆ ಮೇಲೆ ಜಗದಂಬೆಯ ಪೂಜೆಯಾಗಿ ನಿಯಮಿತ ವೇಳೆಯಲ್ಲಿ ಎಲ್ಲರೂ ದುರ್ಗವನ್ನು ಇಳಿಯಹತ್ತಿದರು. ಪಲ್ಹಾಳಗಡದ ರಕ್ಷಣಕ್ಕಾಗಿ ರಾಯಾಜಿಗೆ ಜಾಗರೂಕ ನಾಗಿರಲು ಮಹಾರಾಜರ ಕಟ್ಟಪ್ಪಣೆಯಾಗಿತ್ತು; ಯಾಕಂದರೆ, ಆ ದುರ್ಗದಲ್ಲಿ ಏಸೂಬಾಯಿ ಯವರು ಬಾಲರಾಜನಾದ ಶಹಾಜಿಯೊಡನೆ ಇರುತ್ತಿದ್ದರು. ಮಾರ್ಗಸ್ಥವಾದ ಆ ಸೈನ್ಯದ ಅಧಿಪತಿಯು ಹಂಬೀರರಾಯನಿದ್ದು, ಸಂಭಾಜಿರಾಜರು ತಮ್ಮ ಮೂವರು ಅಂಗರಕ್ಷಕರೊಡನೆ ಸೈನ್ಯದ ಮಧ್ಯದಲ್ಲಿ ಸಾಗಿದ್ದರು. ಸಜ್ಜನಗಡಕ್ಕೆ ಹೋಗಿ ಶ್ರೀ ಸಮರ್ಥರ ದರ್ಶನಮಾಡಿಕೊಂಡ ಬಳಿಕ ರಾಯಗಡಕ್ಕೆ ಹೋಗಬೇಕೆಂದು ಗೊತ್ತಾದ್ದರಿಂದ, ಸಾತಾರೆಯ ಮಾರ್ಗವನ್ನು ಹಿಡಿಯಲು ಸೈನ್ಯಕ್ಕೆ ಅಪ್ಪಣೆಯಾಗಿತ್ತು, ತಮ್ಮ ಬಂದೋಬಸ್ತಿಗಾಗಿ ಮೋರೋಪಂತ ಪೇಶವೆಯು ಬರುವನೆಂಬ ಸುದ್ದಿಯು ಮೊದಲೇ ಹತ್ತಿದ್ದರಿಂದ ಅದೊಂದು ವಿಘ್ನವು ತಮಗೆ ಬರತಕ್ಕದ್ದೆಂದು ಸಂಭಾಜಿರಾಜರು ತಿಳಿದಿದ್ದರು. ಅವರ ಸೈನ್ಯವು ಕೆಲವು ಮಾರ್ಗವನ್ನು ಕ್ರಮಿಸಿಹೋಗುತ್ತಿರಲು, ದೂರದಲ್ಲಿ ಧೂಲಿಯು ಕಾಣಿಸಹತ್ತಿತು. ಕೂಡಲೆ ಸೈನ್ಯಕ್ಕೆ ನಿಲ್ಲಲು ಅಪ್ಪಣೆಕೊಟ್ಟು, ಹಂಬೀರ ರಾಯನೂ, ಮಹಾರಾಜರೂ ದುರ್ಬೀನಿಯಿಂದ ನೋಡಿ ಪೇಶವೆಯ ಸೈನ್ಯೇ ಸಾಗಿಬರುತ್ತಿರುವ ದೆಂದು ತಿಳಿದುಕೊಂಡರು. ಮುಂದೆ ಎರಡು ಗಳಿಗೆಗಳಲ್ಲಿಯೇ ಆ ಸೈನ್ಯವು ಒಂದುಕೂಗಳತೆಯಲ್ಲಿ ಬರಲು, ಅದಕ್ಕೆ ಅಲ್ಲಿಯೇ ನಿಂತುಕೊಳ್ಳಲು ಹಂಬೀರರಾಯನು ಕೊಂಬು ಊದಿ ಆಜ್ಞಾಪಿಸಿದನು. ಅಪ್ಪಣೆಯಂತೆ ಸೈನ್ಯವು ನಿಂತುಕೊಂಡದ್ದನ್ನು ನೋಡಿ ಹಂಬೀರರಾಯನಿಗೂ, ಸಂಭಾಜಿರಾಜನಿಗೂ ಸ್ವಲ್ಪ ಧೈರ್ಯಬಂದಿತು. ಬಳಿಕ ಹಂಬೀರರಾಯನು ಶಾಂತತೆಯ ನಿಶಾನೆಯನ್ನು ಹಿಡಿದುಕೊಂಡು ಆ ಸೈನ್ಯದ ಬಳಿಗೆ ಹೋಗಲು, ಅದು ಮೋರೊಪಂತನ ಸೈನ್ಯವೆಂದು ಗೊತ್ತಾಯಿತು. ಕೂಡಲೆ ಸಂಭಾಜಿರಾಜನು ತನ್ನ ಕುದುರೆಯನ್ನು ಮುಂದಕ್ಕೆ ನೂಕಿದನು. ಹೀಗೆ ಕೆರಳಿದ ಕೇಸರಿಯಂತೆ ಶೂರ ಶಂಭುವು ತನ್ನಮೇಲೆ ಸಾಗಿಬರುವದನ್ನು ನೋಡಿ ಪೇಶ್ವೆಯ ಸೋಯರಾಬಾಯಿಯ ಅಪ್ಪಣೆಯನ್ನು ಬದಿಗಿಟ್ಟು, ತಟ್ಟನೆ ಕುದುರೆಯಿಂದ ಹಾರಿದನು; ಬಳಿಕ ಆ ಧೂರ್ತನು ಸಂಭಾಜಿರಾಜನ ಮುಂದೆ ಮೊಣಕಾಲೂರಿ ಕುಳಿತು, ತನ್ನ ಖಡ್ಗವನ್ನು ಆತನ ಮುಂದಿಟ್ಟು, ಹಣೆಯನ್ನು ನೆಲಕ್ಕೆ ಹಚ್ಚಲು, ಇದನ್ನು ನೋಡಿದ ಕೂಡಲೆ ಸಂಭಾಜಿರಾಜರ ಸಿಟ್ಟು ಇಳಿದು ಹೋಗಿ ಅವರು ತಾವೂ ಕುದುರೆಯಿಂದ ಇಳಿದು ಮೋರೋಪಂತ ಪೇಶವೆಯನ್ನು ಎಬ್ಬಿಸಿ ಆತನ ಖಡ್ಗವನ್ನು ಆತನ ಟೊಂಕಕ್ಕೆ ಕಟ್ಟಿದರು, ಬಳಿಕ ಅವರು ಸಂತುಷ್ಟಮನಸ್ಕರಾಗಿ–ಪೇಶ್ವೇ, ನೀವು ಆಬಾಸಾಹೇಬರ ಕೈಕೆಳಗೆ ನುರಿತವ

ರಾದ್ದರಿಂದ ಯಾರಿಗೆ ಸೋತೀರಿ? ಸಮಯನೋಡಿ ವರ್ತಿಸುವಲ್ಲಿ ನೀವು ಒಳ್ಳೇ ಚತುರರು. ನೀವು ಯಾವ ಉದ್ದೇಶದಿಂದ ಸೈನ್ಯದೊಡನೆ ಇತ್ತ ಕಡೆಗೆ ಬರುತ್ತಿದ್ದರೆಂಬದು ನಮಗೆ ಮೊದಲೇ ಗೊತ್ತಾಗಿತ್ತು......

ಮೋರೋಪಂತ (ವಿನಯದಿಂದ) – ಬಾಳಾಜಿಗೆ ಈ ಮಾತನ್ನು ನಾನು ಮೊದಲೇ ತಿಳಿಸಿದ್ದೆನು.

ಸಂಭಾಜಿ–ಇದೇ ನಿಜವಾದ ಮುತ್ಸದ್ದಿತನವು. ನಾವಾದರೂ ಒಂದು ಕೈ ನೋಡ ಬೇಕೆಂತಲೇ ಸಿಟ್ಟಿನಿಂದ ನಿಮ್ಮ ಮೇಲೆ ಸಾಗಿಬಂದಿದ್ದೆವು; ಆದರೆ ಈಗ ನಿಮ್ಮ ನಡತೆಯಿಂದ ನಮ್ಮ ಸಿಟ್ಟು ಇಳಿದು ಹೋಗಿ ''ಶರಣಾಗತರನ್ನು ರಕ್ಷಿಸಬೇಕೆ''ಂಬ ಆಬಾಸಾಹೇಬರ ವ್ರತ ದಂತೆ ನಾವು ನಿಮ್ಮ ಅಪರಾಧಗಳನ್ನೆಲ್ಲ ಕ್ಷಮಿಸಿರುವೆವು; ಆದರೂ ಮಹಾರಾಜರ ಮರಣ ವಾರ್ತೆಯನ್ನು ತಿಳಿಸದಿರುವ ನಿಮ್ಮ ಮೇಲಿನ ನಮ್ಮ ಸಿಟ್ಟು ಮಾತ್ರ ಎಂದೂ ಹೋಗಲಾರದು.

ಮೋರೋಪಂತ–ಮಹಾರಾಜ, ಕ್ಷಮಿಸಬೇಕು. ದುರ್ಗದಮೇಲಿನ ಸ್ಥಿತಿಯು ಬಹಳವಾಗಿ ಕೆಟ್ಟು ಹೋಗಿರಲು, ನಿಮ್ಮ ಬಂದೋ ಬಸ್ತು ಮಾಡುವ ನೆವದಿಂದ ಒಂದು ಸಾವಿರ ಸೈನ್ಯ ದೊಂದಿಗೆ ಹೊರಬಿದ್ದು ಬರಬೇಕಾದರೆ ನನಗೆ ಸಾಕುಬೇಕಾಯಿತು. ಅಣ್ಣಾಜಿದತ್ತೋನಂಥ ಮುತ್ಸದ್ದಿಯ ವ್ಯವಸ್ಥೆಯಲ್ಲಿ ಒಂದು ಇರುವೆ ನುಸಿದು ಹೋಗಲಿಕ್ಕೂ ಆಸ್ಪದವಿಲ್ಲದಿರುವಾಗ, ಯುಕ್ತಿಯಿಂದ ಹೊರಬಿದ್ದು ಬರಲಿಕ್ಕೆ ನಾನು ಎರಡುತಿಂಗಳು ಪೇಚಾಡಿದ್ದು ಆಶ್ಚರ್ಯ ವಲ್ಲ.......

ಸಂಭಾಜಿ–ಇರಲಿ, ಇನ್ನು ಆ ಕರ್ಮಕಥೆಯನ್ನು ಕೇಳಿ ಮಾಡುವದೇನು? ಇನ್ನುಮೇಲೆ ಬೇಗನೇ ಸಜ್ಜನಗಡಕ್ಕೆ ಹೋಗಿ ಶ್ರೀಸಮರ್ಥರ ದರ್ಶನ ಮಾಡಿಕೊಂಡು ಮುಂದಿನ ಕಾರ್ಯಕ್ಕೆ ಕೈ ಹಾಕೋಣವೆಂದರಾಯಿತು.

ಈ ಮೇರೆಗೆ ನುಡಿಯುತ್ತಿರಲು, ಹಂಬೀರರಾಯನ ಹಾಗು ಮೋರೋಪಂತನ ಆಧಿಪತ್ಯದ ಕೆಳಗೆ ಆ ಎರಡುವರೆ ಸಾವಿರ ಸೈನ್ಯವು ಸಂಭಾಜಿರಾಜರನ್ನು ರಕ್ಷಿಸುತ್ತ ಸಜ್ಜನ ಗಡದ ಹಾದಿಯ ಹಿಡಿಯಿತು. ಜ್ಯೇಷ್ಠಮಾಸವು ಹೋಗಿ ಅದೇ ಆಷಾಢಮಾಸಕ್ಕೆ ಆರಂಭ ವಾಗಿತ್ತು. ಸಜ್ಜನಗಡದ ಕೆಳಗಿನ ಉರಮೋಡಿ ನದಿಯು ಅರ್ಭಟಿಸುತ್ತ ಒಳ್ಳೇ ವೇಗದಿಂದ ಹರಿಯುತ್ತಲಿತ್ತು. ಆ ವರ್ಷ ಮಳೆಗಾಲವು ಆರಂಭದಿಂದಲೇ ಒಳ್ಳೇ ಅನುಗ್ರಹ ಮಾಡಿದ್ದರಿಂದ ಭೂಪ್ರದೇಶವು ತೃಣ ಸಸ್ಯಾದಿಗಳಿಂದ ಹಸುರು ಮುರಿಯುತ್ತಿತ್ತು. ಆ ಜಡಿಮಳೆಯ ಕಾಲದಲ್ಲಿ ಸಜ್ಜನಗಡದ ಕೋಟೆಯ ಗೋಡೆಗಳೂ, ಸಾತಾರೆಯ ಕೋಟೆಯ ಗೋಡೆಗಳೂ ಹಚ್ಚನ್ನ ಹಾವಸೆಯಿಂದ ಹಸರು ಮುರಿಯುತ್ತ ಮನೋಹರವಾಗಿ ಒಪ್ಪುತ್ತಲಿದ್ದವು. ಗುಡ್ಡದೊಳಗಿಂದ ಸ್ಫಟಿಕದಂತೆ ಶುಭ್ರವಾದ ಜಲಪ್ರವಾಹಗಳು ವೇಗದಿಂದ ಹರಿದು ಭೂಭಾರಕ್ಕೆ ಬರುತ್ತ ಲಿದ್ದವು. ಗುಡ್ಡದೊಳಗಿನ ಬಗೆಬಗೆಯ ಸುಗಂಧ ಪುಷ್ಪಗಳ ಸುವಾಸನೆಯನ್ನು ಹೊತ್ತುಕೊಂಡ ಸುಳಿಗಾಳಿಯು ಬೀಸುತ್ತಿರಲು, ಹಾದಿಕಾರರ ಮನಸ್ಸು ರಮಿಸಿ ಆರೋಗ್ಯ ವೃದ್ಧಿಯಾಗುತ್ತಲಿತ್ತು. ದನಗಳ ಹಿಂಡು ಅಲ್ಲಲ್ಲಿ ಆನಂದದಿಂದ ಮೇಯುತ್ತಿದ್ದವು. ಇಂಥ ಮನೋಹರ ಸಮಯದಲ್ಲಿ

ಸಂಭಾಜಿರಾಜರ ಸೈನ್ಯವು ಸಾತಾರೆಗೆಬಂದು, ಹಂಬೀರರಾಯನ ಅಪ್ಪಣೆಯಿಂದ ತಳ ಊರಿತು. ಅಲ್ಲಿಂದ ಹಾಗೇ ಸೈನ್ಯ ಸಹಿತವಾಗಿ ಆ ಮಹಾರಾಷ್ಟ್ರ ರಾಜನಿಗೆ ಸಜ್ಜನಗಡದ ಮೇಲೆ ಹೋಗಲಿಕ್ಕೆ ಬರುತ್ತಿದ್ದಿಲ್ಲವೆಂತಲ್ಲ; ಆದರೆ ಶ್ರೀಸಮರ್ಥರ ಅಪ್ಪಣೆಯಹೊರತು ಅವರ ದರ್ಶನಕ್ಕೆ ಹೋಗುವ ಧೈರ್ಯವು ಯಾರಿಗೂ ಆಗುತ್ತಿದ್ದಿಲ್ಲ. ಶಿವರಾಯನಾಗಲಿ, ಆತನ ಸರದಾರರಾಗಲಿ ಅಪ್ಪಣೆ ಕೇಳಿಕೊಳ್ಳದೆ ದರ್ಶನಕ್ಕೆಹೋಗುತ್ತಿದ್ದಿಲ್ಲ. ಅದರಲ್ಲಿ ಸಂಭಾಜಿ ರಾಜನಂತು ಸಮರ್ಥರಿಗೆ ಬಹಳವಾಗಿ ಅಂಜುತ್ತಿದ್ದನು. ಆತನಿಗೆ ತನ್ನ ತಂದೆಗಿಂತ ಹೆಚ್ಚಿನ ಅಂಜಿಕೆಯು ಸಮರ್ಥರದಿತ್ತು; ಆದ್ದರಿಂದ ಸಂಭಾಜಿರಾಜನು ಅಪ್ಪಣೆಕೇಳಿಕೊಳ್ಳುವದಕ್ಕಾಗಿ ಒಬ್ಬ ಸೇವಕನನ್ನು ಸಜ್ಜನಗಡಕ್ಕೆ ಕಳಿಸಿದನು. ದೈವೀಶಕ್ತಿಯ ಪ್ರಭಾವವೇ ದೊಡ್ಡದು. ನೋಡಿದರೆ ಸಮರ್ಥರ ಬಳಿಯಲ್ಲಿ ಜೋಳಿಗೆ– ಯೋಗದಂಡದ ಹೊರತುಬೇರೆ ಏನೂ ಇದ್ದಿಲ್ಲ; ಆದರೂ, ಅವರಲ್ಲಿದ್ದ ಪ್ರತ್ಯಕ್ಷ ಪರಮೇಶ್ವರನ ಅಧಿಷ್ಠಾನದ ಮೂಲಕ ಅವರ ದಿವ್ಯ ತೇಜಕ್ಕಾಗಿಯೂ, ಅಲೌಕಿಕ ಸಾಮರ್ಥ್ಯದ ದೃಷ್ಟಿಪಾತಕ್ಕಾ ಗಿಯೂ ಎಲ್ಲರೂ ಅಂಜಿ ನಡುಗುತ್ತಿದ್ದರು.

ಸೇವಕನು ಸಜ್ಜನಗಡದ ಮಠದಬಾಗಿಲಿಗೆ ಹೋದಾಗ ಸಮರ್ಥರು ಶ್ರೀ ರಘುಪತಿಯ ಪಾದ್ಯಪೂಜೆಮಾಡುತ್ತಿದ್ದರು. ಸಮಯ ನೋಡಿ ಉದ್ಧವಸ್ವಾಮಿಗಳು ಸಂಭಾಜಿ ರಾಜರ ಸೇವಕನು ಬಂದ ಉದ್ದೇಶವನ್ನು ತಿಳಿಸಲು, ಸಮರ್ಥರು ಆಲೋಚಿಸಿ, ಸೈನ್ಯಸಹಿತವಾಗಿ ಅವರು ಬೇಗನೆ ಬರಲೆಂದು ಆಜ್ಞಾಪಿಸಿದರು. ಕೂಡಲೆ ಸೇವಕನು ಎಲ್ಲಿಯೂ ನಿಲ್ಲದೆ ವೇಗದಿಂದ ಹೋಗಿ ಮಹಾರಾಜರಿಗೆ ಸಮರ್ಥರ ಅಪ್ಪಣೆಯನ್ನು ನಿವೇದಿಸಿದನು; ಅದನ್ನು ಕೇಳಿ ಸಂಭಾಜಿ ರಾಜರಿಗೆ ಪರಮಾನಂದವಾಯಿತು. ಅವರು ಸೈನ್ಯಸಹಿತವಾಗಿ ದುರ್ಗವನ್ನು ಏರಿ ಮಹಾದ್ವಾರವನ್ನು ದಾಟಿ ಹೋಗಿ ಪಟಾಂಗಣಕ್ಕೆ ಮುಟ್ಟಿದರು. ಆಗ ಸಮರ್ಥರ ಪೂಜೆಯಾಗಿ ಮಂತ್ರಪುಷ್ಪಕ್ಕೆ ಆರಂಭವಾಗಿತ್ತು. ಸಂಭಾಜಿಮಹಾರಾಜರು ಬಂದಸುದ್ದಿಯನ್ನು ಸಮರ್ಥರಿಗೆ ಹೇಳಲು, ಅವರ ಸಂಗಡ ಯಾರು ಯಾರು ಬಂದಿರುವರೆಂದು ಕೇಳಲಾಗಿ, ಮೋರೋ ಪಂತ, ಹಂಬೀರರಾವ, ಕಬಜಿ ಈ ಮೂವರು ಬಂದಿರುವರೆಂದು ಹೇಳಿದರು. ಆಗ ಕಬಜಿಯ ಹೊರತು ಉಳಿದ ಇಬ್ಬರೊಡನೆ ದರ್ಶನಕ್ಕೆ ಬರಲು ಸಂಭಾಜಿರಾಜರಿಗೆ ಅಪ್ಪಣೆಯಾಯಿತು. ಇದರಿಂದ ಕಬಜಿಗೆ ಬಹಳ ಅಸಮಾಧಾನವಾಯಿತೆಂದು ಬೇರೆ ಹೇಳುವ ಕಾರಣವಿಲ್ಲ. ಆ ಮೂವರು ಸಮರ್ಥರ ಬಳಿಗೆಬಂದು ಸಾಷ್ಟಾಂಗವಾಗಿ ವಂದಿಸಿ ಎದ್ದು ಕೈಜೋಡಿಸಿ ನಿಂತು ಕೊಳ್ಳಲು, ಸಮರ್ಥರು ಅವರನ್ನು ನೋಡಿ ಅವರಿಗಾಗಿ ಹಾಕಿದ ಆಸನಗಳ ಮೇಲೆ ಕುಳಿತುಕೊಳ್ಳಲು ಸೂಚಿಸಿದರು. ಆಗ ಮೂವರು ವೀರಾಸನ ಹಾಕಿ ವಿನಯದಿಂದ ಕುಳಿತು ಕೊಳ್ಳುತ್ತಿರುವಾಗ ಸಮರ್ಥರು–

ಸಮರ್ಥರು–(ಮುಗುಳು ನಗೆಯಿಂದ) ಸಂಭಾಜಿರಾಜರೇ, ಈದಿನ ಯಾವ ಉದ್ದೇಶದಿಂದ ಈ ಇಬ್ಬರು ಸರದಾರರೊಡನೆ ಶ್ರೀಗಳ ದರ್ಶನಕ್ಕೆ ಬರುವ ಮನಸ್ಸು ಮಾಡಿದಿರಿ?

ಸಂಭಾಜಿ – (ಮೋರೆತಗ್ಗಿಸಿ ಅತ್ಯಂತ ವಿನಯದಿಂದ) ಆಬಾಸಾಹೇಬರ ತರುವಾಯ

ದಲ್ಲಿ ರಾಜ್ಯಭಾರವು ಮೈಮೇಲೆ ಬೀಳತಕ್ಕದ್ದಿರುವದು; ಆದ್ದರಿಂದ ಸಮರ್ಥರ ಉಪದೇಶ ದಿಂದ ಆ ಬಾರವು ಹಗುರಾಗುವದೆಂಬ ಆಶೆಯಿಂದ ಈ ಇಬ್ಬರು ಸರದಾರರೊಡನೆ ಸನ್ನಿಧಿಗೆ ಬಂದೆನು.

ಈ ಉತ್ತರದಿಂದ ಸಮರ್ಥರ ಮನಸ್ಸು ಸುಪ್ರಸನ್ನವಾಯಿತು. ಅವರು ಉದ್ಧವಗೊಸಾವಿಯನ್ನು ಕುರಿತು– ಈ ಮೂವರು, ಶ್ರೀಗಳಿಂದ ಅನುಗ್ರಹ ಪಡೆದವರೇ ಇರುವರು, ಪುನಃ ಇವರಿಗೆ ಅನುಗ್ರಹಮಾಡಲವಸ್ಯವಿಲ್ಲ; ಆದ್ದರಿಂದ ಇವರಿಗೆ ತೀರ್ಥಪ್ರಸಾದ ಕೊಡಿರಿ, ಎಂದು ಹೇಳಲು, ಅಪ್ಪಣೆಯಂತೆ ಉದ್ಧವಸ್ವಾಮಿಗಳು ಆ ಮೂವರಿಗೆ ತೀರ್ಥಪ್ರಸಾದಗಳನ್ನು ತಂದು ಕೊಟ್ಟರು. ಆಗ ಸಮರ್ಥರು ಆ ಮೂವರನ್ನು ಕುರಿತು–ಹಂಬೀರರಾವ, ಮೋರೋಪಂತ, ನಿಮ್ಮ ಸೇವಾಧರ್ಮದ ಸಂಬಂಧದಿಂದ ಈ ಮೊದಲೆ ಉಪದೇಶಮಾಡಿಯೇ ಇರುತ್ತದೆ; ಈ ವರೆಗೆ ನಡೆದುಕೊಳ್ಳುತ್ತ ಬಂದಂತೆ ಮುಂದೆಯಾದರೂ ನೀವು ನಡಕೊಂಡು ನಿಮ್ಮ ಹೊಸ ಒಡೆಯನ ಸಂರಕ್ಷಣಮಾಡತಕ್ಕದ್ದು. ಸಂಭಾಜಿ ರಾಜರೆ, ಇನ್ನು ನೀವು ಶಿವಬಾನ ತರುವಾಯದಲ್ಲಿ ಮಹಾರಾಷ್ಟ್ರ ಸಿಂಹಾಸನವನ್ನೇರತಕ್ಕವರು. ಸೋಯರಾಬಾಯಿಯು ಮಾಡಿರುವ ಮೂರ್ಖತನದ ಫಲವನ್ನು ಆಕೆಯು ಉಂಡೇ ಉಣ್ಣುವಳು. ರಾಜ್ಯಲೋಭದಿಂದ ಇಂಥ ಸಂಗತಿಗಳು ಒದಗತಕ್ಕವೇ ಎಂದು ಅನ್ನುವದಕ್ಕಿಂತ, ಪ್ರಾರಬ್ಧಭೋಗವು ಬಿಡುವದಿಲ್ಲವೆಂದು ಹೇಳುವದು ಸಯುಕ್ತಿಕವಾಗಿರುವದು. ನಮ್ಮ ಶಿವಬಾನಿಗೆ—''ಶ್ರೀಗಳ ಹೆಸರಿನ ಉತ್ಪನ್ನದ ಸನದನ್ನು ಕೊಡಲಿಕ್ಕೆ ಅವಸರಮಾಡಬಾರದೆ''ಂದು ಹೇಳುವದರಲ್ಲಿ ಗೂಢವು ವಿಶೇಷವಾಗಿ ಇತ್ತು; ಆದರೆ ಉಪಾಯವಿಲ್ಲ. ಇನ್ನು ಆದಮಾತು ಬರುವ ಹಾಗಿಲ್ಲ. ನೀವು ಬಹಳ ಎಚ್ಚರದಿಂದ ನಡೆಯಬೇಕು. ನಿಮಗೆ ಶತ್ರುಗಳು ಬಹಳ. ಚಿಕ್ಕಂದಿನಿಂದ ನಿಮ್ಮನ್ನು ಕಬಜಿಯ ಸಂಗತಿಯಲ್ಲಿಟ್ಟದ್ದೊಂದು ಶಿವಬಾನ ದೊಡ್ಡ ಅಪರಾಧವಾಗಿರುತ್ತದೆ. ಕಬಜಿಯು ಪರ ದೇಶದವನಾದ್ದರಿಂದ ಆತನ ಒಲವು ನಿಮಗಿಂತ ತನ್ನ ದೇಶದವರಕಡೆಗೆ, ಹಾಗು ಸ್ವಾರ್ಥದ ಕಡೆಗೆ ವಿಶೇಷವಾಗಿರುವದು ಸ್ವಾಭಾವಿಕವು. ಸ್ವಾರ್ಥಕ್ಕೋಸ್ಕರ ಆತನು ಕದಾಚಿತ್ ನಿಮ್ಮ ಜೀವಹಿಂಡಲಿಕ್ಕೂ ಹಿಂದೆಮುಂದೆ ನೋಡಲಿಕ್ಕಿಲ್ಲ. ಇಂಥ ಮನುಷ್ಯರು ದ್ರವ್ಯಲೋಭದಿಂದ ಬಹುಬೇಗನೆ ಶತ್ರುಗಳಿಗೆ ಫಿತೂರಿ ಆಗುವರು; ಆದ್ದರಿಂದ ಇಂಥವರ ಮೇಲೆ, ಹಲ್ಲು ಮುರಿಯದಿದ್ದ ಹಾವಿನ ಮೇಲ ಇಡುವಷ್ಟು ವಿಶ್ವಾಸವನ್ನು ಇಡಬೇಕು. ರಾಜಧರ್ಮದ ಸಂಬಂಧದಿಂದ ನಾವು ಶಿವಬಾನಿಗೆ ಪ್ರಸಂಗವಶಾತ್ ಮೂರು ಪತ್ರಗಳನ್ನು ಬರೆದಿರುವೆವು. ಅವನ್ನು ಓದಿ ಅದರಂತೆ ನೀವುನಡೆದುಕೊಂಡರೆ, ನಿಮ್ಮ ತೀರ್ಥರೂಪರಂತೆಯೇ ನಿಮ್ಮ ಕೀರ್ತಿಯು ಆಗುವದು; ಆದ್ದರಿಂದ ಆ ಮೂರು ಪತ್ರಗಳನ್ನು ಮನಃ ಪೂರ್ವಕವಾಗಿ ಓದಿರಿ. ಆ ಪತ್ರಗಳ ಸಾರಾಂಶವನ್ನು ಇಲ್ಲಿ ಸ್ವಲ್ಪದರಲ್ಲಿ ಹೇಳುತ್ತೇವೆ ಕೇಳಿರಿ! ಎಚ್ಚರಿಂದ ಪ್ರಪಂಚಮಾಡಿದರೆ ಸುಖವಾಗುತ್ತದೆ. ದೀರ್ಘ ಪ್ರಯತ್ನದಿಂದ ರಾಜ್ಯಪ್ರಪಂಚದ ಕಾರ್ಯಭಾಗವು ಸಾಧಿಸುತ್ತದೆ. ಯಾವದೊಂದು ಕಾರ್ಯದ ಸ್ವರೂಪವನ್ನು ವಿಚಾರದಿಂದ ತಿಳಿದು ನೋಡಿ ತಿಳುವಳಿಕೆಯಿಂದ ಮಾಡಿದರೆ,

ಅದರಲ್ಲಿ ಕೊರತೆಯು ಎಂದೂ ಉಂಟಾಗುವದಿಲ್ಲ. ಕಾರ್ಯಕರ್ತೃವಿನ ಗುಣಗಳಂತೆ ಕಾರ್ಯ ಭಾಗವು ಸಿದ್ಧಿಸುತ್ತದೆ. ಉಪಾಧಿಗೆ ಬೇಸರಿಯುವವನು ಭಾಗ್ಯವಿನ್ಮುಖನಾಗುವನು. ಎಂದೂ ಧೈರ್ಯಗೆಡಬಾರದು. ಆಯತಹೊತ್ತಿನಲ್ಲಿ ಧೈರ್ಯ ಬಿಡುವವನ ಭಾರ್ಗವು ಅವನನ್ನು ತೊಲಗಿ ಹೋಗುತ್ತದೆ. ಸಂಕಟಗಳ ಪರಂಪರೆಗೆ ಬೇಸರಿಯಬಾರದು. ಅವುಗಳೊಳಗಿಂದ ಪಾರಾಗು ವದಕ್ಕಾಗಿ ವಿಶ್ವಪ್ರಯತ್ನ ಮಾಡಬೇಕು. ಹೀಗೆ ನಡೆಯುವವನ ಭಾಗ್ಯಶ್ರೀಯು ಅವನ ಸನ್ನಿಧಿ ಯಲ್ಲಿ ಇರುತ್ತದೆಂತಲೇ ತಿಳಿಯಬೇಕು. ಯಾವದೊಂದು ಮಾತಿನ ವಿಚಾರವನ್ನು ಏಕಾಂತದಲ್ಲಿ ಮಾಡಬೇಕು. ದಾರಣಾಶಕ್ತಿಯು ಅಖಂಡವಾಗಿ ಇರಬೇಕು. ಶತ್ರು-ಮಿತ್ರರ ಸಂಬಂಧವಾಗಿ ಹಲವು ರೀತಿಯಿಂದ ವಿಚಾರವಮಾಡಬೇಕು. ಧುರೀಣತೆಯಿಂದ ಧೈರ್ಯಬಿಡಬಾರದು; ಮತ್ತು ಮುಖ್ಯಪ್ರಸಂಗದಿಂದ ಓರೆಯಾಗಬಾರದು. ಪಶುವಿನಂತೆ ನಿರುದ್ಯೋಗದಿಂದ ಸರ್ವಥಾ ಇರಬಾರದು. ಎಲ್ಲಿ ಉದಾತ್ತವೂ-ಅಖಂಡವೂ ಆದವಿಚಾರ ವಿರುವದೋ ಅಲ್ಲಿಯೇ ಈಶ್ವರೀ ಅವತಾರವಿರುವದೆಂದು ತಿಳಿಯಬೇಕು. ಪೆಟ್ಟುತಿಂದಹೊರತು ಈವರೆಗೆ ಯಾರೂ ದೊಡ್ಡವರಾಗಿರುವದಿಲ್ಲವೆಂಬದನ್ನು ತಿಳಿದು ನೋಡಬೇಕು. ತನ್ನ ಮನಸ್ಸನ್ನು ಬಿಗಿಹಿಡಿದು ಮಂದಿಯ ಮನಸ್ಸನ್ನು ಶೋಧಿಸಬೇಕು; ಮತ್ತು ಆ ಮನಸ್ಸು ಯಾವಾಗ ತಿರುಗೀತೆಂಬ ಭಯದಿಂದ ಕ್ಷಣಶಃ ಜಾಗರೂಕನಾಗಿರತಕ್ಕದ್ದು. ಈ ಎಲ್ಲ ಉಪದೇಶಗಳ ಸಾರವೇನಂದರೆ, ಎಚ್ಚರಗೊಳಿಸತಕ್ಕದ್ದನ್ನು ಬಾಯಿಂದ ಹೇಳದೆ ಎಚ್ಚರಗೊಳಿಸಿಯೇ ಬಿಡಬೇಕು; ಬಾಯಿಂದ ಹೇಳತಕ್ಕದ್ದನ್ನು ಬರೆಯಬಾರದು; ಬರೆಯತಕ್ಕದ್ದನ್ನು ಬಾಯಿಂದ ಜಬಾ ನಿರೂಪವಾಗಿ ಹೇಳಬಾರದು.

ಈ ಮೇರೆಗೆ ಉಪದೇಶಿಸಿ ''ಉದ್ಧವಸ್ವಾಮಿ, ಮಹಾನೈವೇದ್ಯದ ವ್ಯವಸ್ಥೆಮಾಡಿರಿ. ಈ ಸೈನಿಕರ ಭೋಜನ ವ್ಯವಸ್ಥೆಯನ್ನೂ ಮಾಡಿಸಿರಬಹುದು. ಮಾಡಿಸಿರದಿದ್ದರೆ ಈಗ ಮಾಡ ಹೇಳಿರಿ'' ಎಂದು ಹೇಳಿದರು. ಸಮರ್ಥರ ಅಪ್ಪಣೆಯಂತೆ ಉದ್ಧವಸ್ವಾಮಿಗಳು ಹೋಗಲು, ಇತ್ತ ಸಂಭಾಜಿಮಹಾರಾಜರು ತಮ್ಮ ಪಟ್ಟಾಭಿಷೇಕದ ಮುಹೂರ್ತದ ಸಲುವಾಗಿ ಸಮರ್ಥ ರನ್ನು ಪ್ರಾರ್ಥಿಸಿದರು; ಅದಕ್ಕೆ ಸಮರ್ಥರು—''ಸದ್ಯದ ಸಮೀಪದ ಉತ್ತಮ ಮುಹೂರ್ತ ವೆಂದರೆ, ನಾಳಿನ ನಾಗಪಂಚಮಿಯ ಮೂಹೂರ್ತದ ಹೊರತು ಬೇರೆ ಮೂಹೂರ್ತ ವಿಲ್ಲ. ಆದಿವಸ ರಾಜ್ಯಾಭಿಷೇಕವನ್ನು ಮಾಡಿಸಿಕೊಂಡು, ನಿಮ್ಮ ಹೆಸರಿನ ರಾಜಮುದ್ರೆ ಯನ್ನು ನಡಿಸಬೇಕು. ರಾಜಾರಾಮನ ಹೆಸರಿನ ರಾಜಮುದ್ರೆಯನ್ನು ಸದ್ಯಕ್ಕೆ ಸೋಯರಾ ಬಾಯಿಯು ವ್ಯವಹರಿಸುತ್ತಲಿದ್ದರೂ, ಅದನ್ನು ಬಹುತರಯಾರೂ ಮನ್ನಿಸುವಂತೆ ತೋರು ವದಿಲ್ಲ; ಎಂದು ಹೇಳಲು, ಸಂಭಾಜಿರಾಜನು ತನ್ನ ಹೆಸರಿನ ಮುದ್ರೆಯನ್ನು ಸಮರ್ಥರ ಮುಂದಿರಿಸಿ, ಇದನ್ನು ಕೈಮುಟ್ಟಿ ಅನುಗ್ರಹಿಸಿಕೊಟ್ಟು, ನನಗೆ ವ್ಯವಹರಿಸಲು ಅಪ್ಪಣೆಯಾಗ ಬೇಕು, ಎಂದು ಪ್ರಾರ್ಥಿಸಿದನು. ಅದನ್ನು ಸಮರ್ಥರು ಕೈಯಲ್ಲಿತಕ್ಕೊಂಡು—''ಶ್ರೀಶಂಭೋಃ ಶಿವಜಾತಸ್ಯ ಮುದ್ರಾ ದ್ಯೌರಿವರಾಜತೇ ಯದಂಕ ಸೇವಿನೋ ಲೇಖಾವರ್ತಂತೇ ಕಸ್ಯ ನೋಪರಿ''ಎಂದು ಓದಿ—''ಈ ನಿಮ್ಮ ಮುದ್ರೆಯನ್ನು ನೀವೇ ಸಿದ್ಧಮಾಡಿಸಿರುವಿರಿ,

ಒಳ್ಳೇದಾಯಿತು. ನೀವು ಶೂರರೂ, ಸರಳಹೃದಯರೂ, ಉದಾರರೂ, ದೊಡ್ಡಮನಸ್ಸಿನವರೂ ಇರುವಿರಿ; ಆದರೆ ಉಡಾಳರೂ, ಹಟಮಾರಿಗಳೂ, ಹುಂಬರೂ, ತಾಮಸಸ್ವಭಾವದವರೂ ಇರುವದರಿಂದ, ಇಂಥ ಈ ಅಹಂಭಾವದ ಹಾಗು ಅವಿವೇಕದ ಉಕ್ತಿಯನ್ನು ನಿಮ್ಮ ಮುದ್ರೆಯಲ್ಲಿ ಹಾಕಿಸಿರುವದು ಆಶ್ಚರ್ಯವಲ್ಲ! ಅದು ನಿಮ್ಮ ಸ್ವಭಾವವನ್ನು ಚನ್ನಾಗಿ ವ್ಯಕ್ತಗೊಳಿಸುವದು! ಇರಲಿ, ಇದರಂತೆ ನಡೆದು ನಿಮ್ಮ ಶೀರ್ಘ ರೂಪರಂತೆ ನೀವು ಕೀರ್ತಿ ರೂಪದಿಂದ ಉಳಿಯುವ ಈಚ್ಛೆಯನ್ನು ಬಿಡಬೇಡಿರಿ! ಇಗೋ, ನಿಮ್ಮ ಈ ಮುದ್ರೆಯನ್ನು ಹಿಡಿಯಿರಿ, ರಾಜ್ಯಾಭಿಷೇಕದ ದಿವಸದಿಂದ ಇದನ್ನು ಬಳಿಕೆಯಲ್ಲಿ ತರತಕ್ಕದ್ದು.'' ಎಂದು ಹೇಳಿ ಮುದ್ರೆಯನ್ನು ಕೊಡುತ್ತಿರಲು, ಉದ್ಧವಸ್ವಾಮಿಗಳು ಮಹಾನೈವೇದ್ಯವನ್ನು ತಕ್ಕೊಂಡು ಬಂದರು. ಸಮರ್ಥರು ಶ್ರೀ ರಘುವೀರನಿಗೆ ನೈವೇದ್ಯಸಮರ್ಪಣಮಾಡಿ, ಆ ಪ್ರಸಾದವನ್ನು ಮೂವರಿಗೂ ಭೋಜನಕ್ಕಾಗಿ ಹಾಕಬೇಕೆಂದು ಹೇಳಿ ತಾವು ತಮ್ಮ ನಿತ್ಯದ ಕಾರ್ಯ ಕ್ರಮಕ್ಕೋಸ್ಕರ ಹೊರಟುಹೋದರು. ಅವರ ನಿತ್ಯದ ಕಾರ್ಯಕ್ರಮವೆಂದರೆ, ಮಧ್ಯಾಹ್ನಕ್ಕೆ ದುರ್ಗವಿಲಿದುಹೋಗಿ ದಿನಾಲು ಐದುಮನೆಗಳ ಮಧುಕರಿಮಾಡಿಕೊಂಡುಬಂದು, ಅದರ ನಾಲ್ಕರಲ್ಲಿ ಒಂದು ಭಾಗವನ್ನು ಗೋಗ್ರಾಸವಾಗಿ ವಿನಿಯೋಗಿಸಿ, ಮೂರು ಭಾಗವನ್ನು ಶ್ರೀ ರಘುವೀರನಿಗೆ ನೈವೇದ್ಯಮಾಡಿ ತಾವು ಪ್ರಸಾದವೆಂದು ಸ್ವೀಕರಿಸುವದು! ಅವರು ಈ ನಿಯಮವು ಶಕೆ ೧೬೦೩ ಮಾಘವದ್ಯ ನವಮಿಯ ದಿವಸ ಅವರು ರಾಮರೂಪವನ್ನು ಹೊಂದುವವರೆಗೆ ಅವಿಚ್ಛಿನ್ನವಾಗಿ ಸಾಗಿತು.

ಸಮರ್ಥರ ಅಪ್ಪಣೆಯಂತೆ ಶ್ರೀರಘುವೀರನ ಮಹಾ ನೈವೇದ್ಯವನ್ನು ಆ ಮೂವರಿಗೂ ಹಂಚಿ ಭೋಜನ ಮಾಡಿಸಿದರು. ಸೈನಿಕರ ಭೋಜನವೂ ಆಯಿತು. ಎಲ್ಲರ ಊಟವಾಗಿ ತಾಂಬೂಲಸೇವನ ಮಾಡುತ್ತ ಕುಳಿತಿರಲು, ''ಜಯಜಯ ರಘುವೀರಸಮರ್ಥ'' ಎಂಬ ಗಂಭೀರಧ್ವನಿಯು ಎಲ್ಲರ ಕಿವಿಗೆಕೇಳಿಸಲು, ಸಮರ್ಥರು ಭಿಕ್ಷಾಗ್ರಹಣಮಾಡಿ ಬಂದ ರೆಂಬದು ಎಲ್ಲರೂ ತಿಳಿದರು. ಸಮರ್ಥರು ನಿತ್ಯನಿಯಮದಂತೆ ಭಿಕ್ಷೆಯ ಚತುರ್ಥಾಂಶವನ್ನು ಗೋಗ್ರಾಸವಾಗಿ ಕೊಟ್ಟೇ ಬಂದಿದ್ದರು. ಅವರು ಮೌನದಿಂದ ಶ್ರೀ ರಘುವೀರನ ಸನ್ನಿಧಿಗೆ ಹೋಗಿ ಜೋಳಿಗೆಯನ್ನು ಉಚ್ಚಿ ಕುಳಿತುಕೊಂಡರು. ಶ್ರೀ ರಘುವೀರನಿಗೆ ನೈವೇದ್ಯ ಸಮರ್ಪಣವಾಯಿತು. ಬಳಿಕ ಸಮರ್ಥರು ಶ್ರೀಮಾರುತಿಯ ಧ್ಯಾನಮಾಡಲು, ಮಾರುತಿಯು ಪ್ರತ್ಯಕ್ಷವಾಗಿ ಬಂದನು! ಬಳಿಕ ಇಬ್ಬರ ಭೋಜನವೂ ಆಯಿತು. ಭೋಜನಾನಂತರ ಮಾರುತಿರಾಯನು ಹೊರಟು ಹೋಗಲು, ಸಮರ್ಥರು ಸಂಭಾಜಿರಾಜರೇ ಮೊದಲಾದವರು ಕುಳಿತಲ್ಲಿಗೆ ಬಂದರು. ಕೂಡಲೆ ಎಲ್ಲರು ಎದ್ದುನಿಂತು ಸಮರ್ಥರನ್ನು ನಮಸ್ಕರಿಸಿ ಕೈ ಜೋಡಿಸಿ ನಿಂತುಕೊಂಡರು. ಆಗ ಸಮರ್ಥರು ಸಂಭಾಜಿರಾಜರನ್ನು ಕುರಿತು—''ಸಂಭಾಜಿರಾಜರೇ, ಇನ್ನು ನೀವು ದೊಡ್ಡ ದೊಡ್ಡ ಕೆಲಸಗಳನ್ನು ಮಾಡಬೇಕಾಗಿರುವದು. ನಿಮ್ಮ ಮೇಲೆ ನಾಲ್ಕೂ ಕಡೆಯಿಂದ ಶತ್ರುಗಳು ಬರತಕ್ಕವರಿದ್ದಾರೆ. ನಿಮ್ಮ ರಾಜ್ಯದಲ್ಲಿ ಫಿತೂರಿಯಾಗಿ ಕಡೆಗೆ ನೀವು ಪ್ರಾಣಸಂಕಟಕ್ಕೆ ಒಳಗಾಗುವಿರಿ! ಅಂಥ ಪ್ರಸಂಗದಲ್ಲಿ ಶ್ರೀ ರಘುವೀರನ ಹೊರತು ಬೇರೆ ರಕ್ಷಕರು ನಿಮ್ಮ ಬಳಿಯಲ್ಲಿ ಯಾರೂ ಇರಲಾರರು. ನಾವು ಬಂದ ಕೆಲಸವು ಆಯಿತು; ನಾವು

ಯಾರಸಲುವಾಗಿ ಬಂದಿದ್ದೆವೋ ಅವರೂ ನಿಜಧಾಮಕ್ಕೆ ಹೊರಟು ಹೋಗಿರುವರು; ಆದ್ದರಿಂದ ನಾವು ಇನ್ನು ರಾಮರೂಪರಾಗಲೇಬೇಕು. ಇನ್ನು ಸ್ವಲ್ಪ ದಿವಸ ನಾವು ಇರುತ್ತಿದ್ದರೂ ನಮ್ಮ ನಿಮ್ಮ ಭೆಟ್ಟಿಯು ಇದೇ ಕಡೆಯದು. ಪುನಃ ನಮ್ಮ ದರ್ಶನವು ನಿಮಗೆ ಆಗಲಾರದು; ಈಗ ನೀವು ಇಲ್ಲಿಗೆ ಬಂದ ಕೆಲಸವು ತೀರಿದ್ದರಿಂದ ಇನ್ನು ಇಲ್ಲಿ ಒಂದುಕ್ಷಣ ವಾದರೂ ನಿಲ್ಲದೆ ಸೈನ್ಯದೊಡನೆ ದುರ್ಗವನ್ನು ಇಳಿದು ಮುಂದಿನ ಕಾರ್ಯಕ್ಕಾಗಿ ಹೊರಟು ಹೋಗಿರಿ. ಉದ್ಧವಾ, ಶ್ರೀ ಚರಣದ ಮೇಲಿನ ಹೂ ತುಲಸಿಗಳನ್ನು ತಕ್ಕೊಂಡು ಬಾ'' ಎಂದು ಹೇಳಲು, ಉದ್ಧವಗೋಸಾವಿಗಳು ಅಪ್ಪಣೆಯಂತೆ ಶ್ರೀಚರಣ ಪ್ರಸಾದವನ್ನು ತಂದು ಕೊಟ್ಟರು. ಆ ಮೇಲೆ ಸಮರ್ಥರು ಅದನ್ನು ಸಂಭಾಜಿರಾಜರ ಬೊಗಸೆಯಲ್ಲಿ ಹಾಕಿ – ಶ್ರೀ ರಘುವೀರನ ಈ ಪ್ರಸಾದವನ್ನು ಯಾವಸ್ಥಿತಿಯಲ್ಲಿಯೂ ನೀವು ನಿಮ್ಮ ದೇಹದಿಂದ ಅಗಲಿಸಬೇಡಿರಿ. ಈ ಪ್ರಸಾದವು ನಿಮ್ಮ ಮೈಮೇಲೆ ಇರುವತನಕ ಯಾವ ಬಾಧೆಯೂ ನಿಮಗೆ ತಟ್ಟಲಾರದು; ಯಾವ ಶತ್ರುವಿನ ಕಾಟವೂ ನಿಮ್ಮ ಮೇಲೆ ನಾಟದು! ಇದು ನಿಮ್ಮ ದೇಹದಿಂದ ಅಗಲಿದ ಕ್ಷಣದಲ್ಲಿ ಶತ್ರುಗಳಿಂದ ನಿಮಗೆವಿಪತ್ತು ಒದಗಿ ನಿಮ್ಮ ನಾಶವಾಗುವ ದೆಂಬದನ್ನು ಚನ್ನಾಗಿ ಲಕ್ಷದಲ್ಲಿಡಿರಿ. ಏಳಿರಿ, ಇನ್ನು ಕ್ಷಣವಾದರೂ ಇಲ್ಲಿ ನಿಲ್ಲಬೇಡಿರಿ. ಪ್ರಯಾಣಕ್ಕೆ ಈಗಿನಂಥ ಸುಮುಹೂರ್ತವು ನಿಮಗೆ ಸಿಗಲಿಕ್ಕಿಲ್ಲ'' ಎಂದು ಹೇಳಿ, ಕೂಡಲೆ ಸಮರ್ಥರು ರಾಮಘಳಿಗೆ ಹೊರಟುಹೋದರು! ಇತ್ತ ಸಮರ್ಥರ ಅಪ್ಪಣೆಯಂತೆ ಸಂಭಾಜಿರಾಜರು, ಪೇಶವೆ, ಸೇನಾಪತಿಗಳೊಡನೆ ಸೈನ್ಯಸಹಿತವಾಗಿ ತತ್‌ಕ್ಷಣ ಹೊರಟು ದುರ್ಗವನ್ನು ಇಳಿದರು. ಸಮರ್ಥರ ಅಪ್ಪಣೆಯಂತೆ ಸಂಭಾಜಿರಾಜರು ಬಂಗಾರದ ರತ್ನಖಚಿತ ವಾದ ಒಂದು ಪೆಟ್ಟಿಗೆ ಮಾಡಿಸಿ ಅದರಲ್ಲಿ ಆ ಪ್ರಸಾದವನ್ನು ಹಾಕಿ ಅದನ್ನು ತಮ್ಮ ಕೊರಳೊಳಗೆ ಧರಿಸಿದರು! ದುರ್ಗದ ಮೇಲಿನ ಈ ಎಲ್ಲ ಪ್ರಕಾರವನ್ನು ನೋಡಿ ಕಬಜಿಗೆ ಸಂತಾಪವಾಯಿತು; ಆದರೆ ಮಾಡುತ್ತಾನೇನು? ಸಮರ್ಥರ ವರ್ಚಸ್ಸನ್ನು ಕಡಿಮೆ ಮಾಡಲು ಅವನೆಷ್ಟರವನು? ಅವನೇ ಇನ್ನೂ ಸಂಭಾಜಿರಾಜರ ಬಳಿಯಲ್ಲಿ ನೆಟ್ಟಿಗೆಕಾಲು ಊರಿ ನಿಂತಂತಾಗಿದ್ದಿಲ್ಲ; ಆದ್ದರಿಂದ ಮೊದಲು ಸಂಭಾಜಿಯ ಒಲವಿನಂತೆ ನಡೆದು ಆತನನ್ನು ಒಲಿಸಿಕೊಳ್ಳುವದು ಅವನ ಮುಖ್ಯ ಕೆಲಸವಾಗಿತ್ತು; ಅದರಂತೆ ಆ ದೂರ್ತನು ನಿಶ್ಚಯಿಸಿ, ತನ್ನ ಮಾನಾಪಮಾನಗಳನ್ನು ಬದಿಗಿಟ್ಟನು.

## ಪಟ್ಟಾಭಿಷೇಕ!

ರಾಯಗಡದ ಸಮೀಪದಲ್ಲಿರುವ ಪಾಂಚಾಡ ಊರಬಳಿಯಲ್ಲಿ ಮಾಲಸಾವಂತನ ಸೈನ್ಯವು ಸಂಭಾಜಿರಾಜರ ಬಂದೋಬಸ್ತಿಗಾಗಿ ಬೀಡುಬಿಟ್ಟಿತ್ತೆಂಬದನ್ನು ವಾಚಕರು ಮರೆತಿ ರಲಿಕ್ಕಿಲ್ಲ. ಈ ಸೈನ್ಯವು ಸಂಭಾಜಿರಾಜನ ಪ್ರಯಾಣಕ್ಕೆ ದೊಡ್ಡ ವಿಘ್ನಕಾರಿಯಾಗಿತ್ತು;

ಮಾಲಸಾವಂತನು ತನ್ನ ಸೈನ್ಯದ ಸುತ್ತಮುತ್ತ ಕಟ್ಟಿಗೆಯ ಗೋಡೆಯನ್ನು ಕಟ್ಟಿಕೊಂಡು ಭದ್ರವಾಗಿ ಕುಳಿತಿದ್ದನು. ಈ ವಿಘ್ನದ ನಿವಾರಣವನ್ನು ಯುಕ್ತಿಯಿಂದ ಮಾಡಬೇಕೆಂದು ಸಂಭಾಜಿರಾಜನು ತನ್ನ ಪೇಶವೆ-ಸೇನಾಪತಿಗಳೊಡನೆ ಆಲೋಚಿಸಿ ಒಂದು ಯುಕ್ತಿಯನ್ನು ಹುಡುಕಿದನು. ಮೋರೋ ಪಂತನೂ- ಹಂಬೀರರಾಯನೂ ಸೋಯರಾಬಾಯಿಯ ಪಕ್ಷದವರೆಂಬದು ಮಾಲಸಾವಂತನಿಗೆ ಸ್ಪಷ್ಟವಾಗಿ ಗೊತ್ತಿತ್ತಷ್ಟೇ? ಇದರ ಉಪಯೋಗವನ್ನು ಸಂಭಾಜಿರಾಜನು ಈಗ ಮಾಡಿಕೊಂಡನು. ಆತನು ಮೋರೋಪಂತನ ಕೈಯಿಂದ ಮಾಲಾಸಾವಂತನಿಗೆ—''ನಾವು ಸಂಭಾಜಿರಾಜರನ್ನು ಸೆರೆಹಿಡಿಕೊಂಡು ರಾಯಗಡಕ್ಕೆ ಹೋಗುತ್ತಿರುವೆವು. ನೀವು ನಮ್ಮ ಛಾವಣಿಗೆ ಬಂದು ಎಲ್ಲ ಸಂಗತಿಯನ್ನು ಸಮಕ್ಷಮ ತಿಳಕೊಂಡು ಹೋಗಬೇಕು'' ಎಂಬರ್ಥದ ಪತ್ರವನ್ನು ಬರೆಸಿದನು. ಅನುಕೂಲಕಾಲವಿದ್ದರೆ ಎಲ್ಲ ಕಡೆಯಿಂದಲೂ ಅನುಕೂಲ ಸಂಗತಿಗಳೇ ಒದಗುತ್ತವೆಂಬ ಮಾತು ಸುಳ್ಳಲ್ಲ. ಈ ಪತ್ರದ ಪರಿಣಾಮವು ಸಂಭಾಜಿರಾಜರಿಗೆ ಅನುಕೂಲವಾಗಿಯೇ ಪರಿಣಮಿಸಿತು. ಮಾಲಸಾವಂತನು ಇಂಥ ಪತ್ರಗಳ ಮೇಲೆ ವಿಶ್ವಾಸವಿಟ್ಟು ನಡೆಯುವ ಪ್ರಸಂಗವು ಆಗಿನದಿದ್ದಿಲ್ಲ; ಆದರೂ ಸಂಭಾಜಿರಾಜನ ಸುದೈವದಿಂದ ಆ ಮಾವಳೀ ಸರದಾರನು ಪತ್ರದ ಸಂಗತಿಯು ನಿಜವೆಂದು ನಂಬಿ, ಇಪ್ಪತ್ತು ಜನ ಶೂರ ಅಂಗರಕ್ಷಕರೊಡನೆ ಮೋರೋಪಂತನ ಸೈನ್ಯದ ಛಾವಣಿಗೆ ಬಂದನು; ಆದರೆ ಆತನು ಛಾವಣಿಯನ್ನು ಪ್ರವೇಶಿಸಿ ಸಂಭಾಜಿರಾಜರನ್ನು ಕಂಡಕೂಡಲೆ ಸೆರೆಯಾಳಾಗಬೇಕಾಯಿತು. ಆಗ ಮಾಲಸಾವಂತನು ಸಂತಾಪದಿಂದ ಮೋರೋಪಂತನಿಗೆ—''ನಿಮ್ಮ ಪತ್ರದಮೇಲೆ ವಿಶ್ವಾಸವಿಟ್ಟು ಬಂದದ್ದರ ಫಲವು ಬಹಳ ಒಳ್ಳೆಯದಾಯಿತು. ಇದು ವಿಶ್ವಾಸಘಾತಕತನವಲ್ಲವೋ?'' ಎಂದು ಕೇಳಲು, ಮೋರೋಪಂತನು-ಮಾಲಸಾವಂತ, ನೀವೆಲ್ಲರು ಒಳಸಂಚುಮಾಡಿ ಸಂಭಾಜಿರಾಜರ ಪಟ್ಟದ ಬಾಧ್ಯತೆಯನ್ನು ಮುಣುಗಿಸುವ ವಿಷಯದಲ್ಲಿ ವಿಶ್ವಾಸಘಾತ ಮಾಡಿದ್ದರ ಪರಿಣಾಮವು ಇದು! ನಿಮ್ಮ ಕರ್ಮದ ಫಲವನ್ನು ನೀವೇ ಭೋಗಿಸಬೇಕಲ್ಲವೆ? ಎಂದು ಕೇಳುತ್ತಿರಲು, ಇತ್ತ ಹಂಬೀರರಾಯನು ಮಾಲಸಾವಂತನ ಛಾವಣಿಯ ಮೇಲೆ ಅಕಸ್ಮಾತ ಏರಿಹೋಗಿ, ಕಟ್ಟಿಗೆಯ ಗೋಡೆಗಳಿಗೆ ಬೆಂಕಿಹಚ್ಚಿ ಸಾವಂತನ ಸೈನ್ಯವನ್ನು ಹಣ್ಣಿಗೆ ತಂದು ಅದು ಶರಣ ಬರುವಂತೆ ಮಾಡಿದನು. ಹಂಬೀರರಾಯನ ಹೇಳಿಕೆಯಂತೆ ಸಾವಂತನ ಆ ಸೈನಿಕರೆಲ್ಲರೂ ರಾಜನಿಷ್ಠೆಯ ಪ್ರತಿಜ್ಞೆಯನ್ನು ಮಾಡಿ ಸಂಭಾಜಿರಾಜರನ್ನು ಕೂಡಿಕೊಂಡರು; ಅದರಿಂದ ರಾಯಗಡದ ಮಾರ್ಗದೊಳಗಿನ ವಿಘ್ನಗಳೆಲ್ಲ ದೂರ ವಾದಂತಾದವು. ಸಂಭಾಜಿರಾಜನು ಬಾಳಾಜಿ ಆವಜಿಯ ಸಂಕೇತದಂತೆ, ಮರುದಿನ ಬೆಳಗಾಗುವದರೊಳಗಾಗಿಯೇ ರಾಯಗಡವನ್ನು ಏರಿಹೋಗುವದಕ್ಕಾಗಿ ಸೈನ್ಯದ ತಳಕಿತ್ತಿದನು.

ಅಣ್ಣಾಜಿದತ್ತೋನಂಥ ಶ್ರೇಷ್ಠ ಮುತ್ಸದ್ದಿಯೂ ಮಬ್ಬಿಗೆ ಬಿದ್ದದ್ದು ದುರ್ದೈವವೇ ಸರಿ. ಬಾಳಾಜಿಆವಜಿಯ ಹೊರತು ಉಳಿದ ಎಲ್ಲಮುತ್ಸದ್ದಿಗಳೂ ಸರದಾರರೂ ತನಗೆ ಮನಃಪೂರ್ವವಾಗಿ ಅನುಕೂಲರಾಗಿರುವರೆಂತಲೂ, ಸಂಭಾಜಿರಾಜರು ಕಠಿಣ ಪ್ರತಿಬಂಧದಲ್ಲಿರುವದರಿಂದ

ಅವರಿಂದ ಏನೂ ಆಗುವಹಾಗಿಲ್ಲವೆಂತಲೂ, ಆತನು ಭಾವಿಸಿ, ರಾಯಗಡವನ್ನು ಬಿಟ್ಟು ಹೊರಗೆಹೋಗಿ ಸ್ವತಃ ವ್ಯವಸ್ಥೆ ಮಾಡದೆ, ರಾಯಗಡವನ್ನಷ್ಟು ಭದ್ರಪಡಿಸಿಕೊಂಡು ದುರ್ಗಹಿಡಿದು ಸ್ವಸ್ಥವಾಗಿ ಕುಳಿತುಕೊಂಡನು. ಇದೇ ಆತನ ತಲೆತಿಂದಿತೆಂದು ಹೇಳಬಹುದು. ಇತ್ತಸಂಭಾಜಿರಾಜನು ಸೈನ್ಯದೊಡನೆ ರಾಯಗಡವನ್ನು ಗದ್ದಲವಿಲ್ಲದೆ ಏರಹತ್ತಿದನು. ಅಲ್ಪ ಸ್ವಲ್ಪ ಗದ್ದಲವಾದರೂ ಬಾಳಾಜಿಯ ತಂತ್ರದ ಮೂಲಕ ದುರ್ಗದ ಕಾವಲುಗಾರರು ಅದನ್ನು ಕಿವಿಯ ಮೇಲೆ ಹಾಕಿಕೊಳ್ಳಲೇ ಇಲ್ಲ, ಬೆಳಗಾಗುವದರೊಳಗೆ ಸಂಭಾಜಿರಾಜರು ಸೈನ್ಯದೊಡನೆ ರಾಯಗಡದ ಮಹಾದ್ವಾರಕ್ಕೆ ಮುಟ್ಟಿದರು. ಬಾಳಾಜಿಯ ಸಂಕೇತದಂತೆ, ದಿಂಡಿಯು ತೆರೆದೇ ಇತ್ತು, ಆಗ ಸಂಭಾಜಿರಾಜರು ಶಸ್ತ್ರಪಾಣಿಗಳಾಗಿ ದಿಂಡಿಯಿಂದ ಒಳಗೆ ಪ್ರವೇಶಿಸಿದರು. ಹಂಬೀರರಾಯನೂ, ಮೋರೋಪಂತನೂ ಖಡ್ಗಪಾಣಿಗಳಾಗಿ ಅವರನ್ನು ಹಿಂಬಾಲಿಸಿದರು. ಈ ಮೂವರು ವೀರರು ಅಡ್ಡಬಂದವರನ್ನು ತುಂಡರಿಸಿ ಚಲ್ಲುತ್ತ ಮಹಾದ್ವಾರವನ್ನು ತೆರೆದುಬಿಟ್ಟರು. ಕೂಡಲೆ ಸೈನ್ಯವು ದುರ್ಗವನ್ನು ಪ್ರವೇಶಿಸಿ ಬರಲು ಆಗ ದುರ್ಗದಲ್ಲಿ ಘೋರಸಂಗ್ರಾಮವೆಸಗಿತು. ರಕ್ತದ ಕಾವಲಿಗಳು ಹರಿದವು. ಸೋಯರಾ ಬಾಯಿಯ ಮನೋರಾಜ್ಯದೊಳಗಿನ ಆನಂದದ ಸುಂದರಮಂದಿರವು ಒಮ್ಮೆಲೆ ನೆಲಕ್ಕೆ ಕುಸಿ ಬಿದ್ದಂತಾಯಿತು. ಭೃತ್ಯಹತ್ಯ-ಬ್ರಹ್ಮಹತ್ಯ-ಸ್ತ್ರೀಹತ್ಯ- ಭ್ರಾತೃಹತ್ಯ ಮೊದಲಾದ ಕ್ರೂರಕರ್ಮಗಳ ಅಸ್ತಿವಾರದಿಂದ ಕಟ್ಟಿದ ಆಕೆಯ ರಾಜ್ಯಮಂದಿರವು ಹ್ಯಾಗೆ ಸ್ಥಿರವಾಗ ಬೇಕು? ಶಿವರಾಯನ ಸಿಂಹಾಸನದ ಯೋಗ್ಯಹಕ್ಕುದಾರನಾದ ಸಂಭಾಜಿರಾಜನ ವಿಜಯ ವಾಯಿತು! ಅಕಸ್ಮಾತ್ತಾಗಿ ಒದಗಿದ ಈ ಘಾತದ ಪ್ರಸಂಗವನ್ನು ನೋಡಿ ಅಣ್ಣಾಜಿ ದತ್ತೋ ನಿಂದ ಸಹಿತರಾದ ಹದಿನೈದು ಜನ ಒಳಸಂಚುಗಾರರು ಭಯದಿಂದ ಅಡಗಿಕೊಂಡು ಕುಳಿತರು. ಸಂಭಾಜಿರಾಜನು ಮೊದಲೇ ತಾಮಸಿಯು, ಆತನ ಆ ತಾಮಸ ಸ್ವಭಾವಕ್ಕೆ ಆತನ ಆನೆಯಂಥ ಬಲವೂ, ಸಿಂಹದಂಥ ಪ್ರತಾಪವೂ, ವ್ಯಾಘ್ರದಂಥ ಕ್ರೂರತನವೂ ಜೋಡಾ ಗುತ್ತಿರಲು, ಅನ್ಯಾಯದಿಂದ ತನ್ನ ದ್ರೋಹಚಿಂತನ ಮಾಡಿದರೆಂಬ ರೊಚ್ಚು ಹೆಚ್ಚಾಗಲು ಕೇಳುವದೇನು? ಸಂತಾಪದಿಂದ ಆತನ ಮೈಮೇಲಿನ ಎಚ್ಚರವು ತಪ್ಪಿತು. ಹದಿನೈದು ಜನ ಸಂಗಡಿಗರೊಡನೆ ಅಣ್ಣಾಜಿದತ್ತೋನನ್ನು ಆ ಸಂತಾಪಿಯಾದ ಶಂಭವು ಹಿಡಿದು ತರಿಸಿ ಅವರನ್ನು ಸಾಲಾಗಿ ನಿಲ್ಲಿಸಿದನು. ಅಷ್ಟರಲ್ಲಿ ಜನಾರ್ದನಪಂತನನ್ನು ಹಿಡಿದು ತಂದ ಸುದ್ದಿಯು ಹತ್ತಲು, ಆತನನ್ನೂ ತರಿಸಿ ಆ ಸಾಲಿನಲ್ಲಿ ನಿಲ್ಲಿಸಿದನು. ಆಗ ಸಂಭಾಜಿಯು ಅವರೆಲ್ಲರನ್ನು ನೋಡಿ—''ಪರಿಪರಿಯ ಕಷ್ಟಗಳನ್ನು ಅನುಭವಿಸಿ, ಸ್ವರಾಜ್ಯಸೇವೆ, ಸ್ವದೇಶಸೇವೆ, ಸ್ವಗೋತ್ರ ಸೇವೆಗಳನ್ನು ಮನಃಪೂರ್ವಕವಾಗಿ ಮಾಡಿದ ನೀವು ಯಃಕಶ್ಚಿತ ಒಬ್ಬ ಪತಿದ್ರೋಹಿಯಾದ ಸ್ತ್ರೀಯಜಾಲಕ್ಕೆ ಸಿಕ್ಕು ನಿಮ್ಮ ನಿಷ್ಕಲಂಕ ಕೀರ್ತಿಗೆ ಕಲಂಕ ಹಚ್ಚಿಕೊಂಡದ್ದೂ, ಸತ್ಯವನ್ನು ಅಸತ್ಯವಾಗಿ ಮಾಡಹೋದದ್ದೂ ತೀರ ನಾಚಿಕೆಯ ಮಾತಾಗಿರುವದು! ಮೂರು ತಿಂಗಳ ವರೆಗೆ ಆಬಾಸಾಹೇಬರ ಮರಣವಾರ್ತೆಯನ್ನು ಬಚ್ಚಿಟ್ಟು ನಮ್ಮನ್ನು ಸೆರೆಯಲ್ಲಿರಿಸಿ, ರಾಜಾರಾಮನನ್ನು ಪಟ್ಟಕ್ಕೆ ಕುಳ್ಳಿರಿಸಿ ಆವಜಿಯ ಸಹಿಯಿಂದ ಆಜ್ಞಾಪತ್ರಗಳನ್ನು ಕಲಿಸಿ

ಮುತ್ಸದ್ದಿಗಳ ಮುತ್ಸದ್ದಿ ತನಕ್ಕೆ ಬೆಂಕೆಹಚ್ಚಿದರೆ ಸುಡಲಿಕ್ಕಿಲ್ಲ. ನಮ್ಮ ಸಲುವಾಗಿ ನೀವು ತೋಡಿ ಇಟ್ಟಿದ್ದ ತಗ್ಗು, ಈಶ್ವರೀ ಸಂಕೇತದಿಂದ ನಿಮ್ಮ ಸಲುವಾಗಿ ಬಾಯಿತೆರೆದು ಕುಳಿತಿರುತ್ತದೆ. ರಾಜದ್ರೋಹಿಗಳೇ, ರಾಜಾರಾಮನನ್ನು ಪಟ್ಟಕ್ಕೆ ಕುಳ್ಳಿರಿಸಿ ನಮ್ಮನ್ನು ಸೆರೆಯಲ್ಲಿರಿಸಬೇಕೆಂದು ನಿಮಗೆ ಆಬಾಸಾಹೇಬರ ಅಪ್ಪಣೆಯಾಗಿತ್ತೋ? ಒಬ್ಬ ದುಷ್ಟ ಸ್ತ್ರೀ ಪಕ್ಷಗಟ್ಟಿ ಉಂಡಮನೆಗೆ ಎರಡು ಬಗೆಯಲಿಕ್ಕೆ ನಿಮಗೆ ನಾಚಿಕೆ ಬರಲಿಲ್ಲವೆ? ಸಾಕು, ಇನ್ನು ಹೆಚ್ಚಿಗೆ ಮಾತುಬೇಡ, ಈ ವಿಶ್ವಾಸಘಾತದ ಕೃತಘ್ನತೆಯ ರೋಗವು ಇನ್ನು ಮಹಾರಾಷ್ಟ್ರಕ್ಕೆ ಹತ್ತುವದು ಯೋಗ್ಯವಲ್ಲ; ಆದ್ದರಿಂದ ನಿಮ್ಮೆಲ್ಲರ ರುಂಡಗಳನ್ನು ಒಮ್ಮೆಲೆ ಭೂಮಿಗಿಳಿಸುವೆನು. ಎಂದು ನುಡಿದು, ಅಂಗರಕ್ಷಕರಿಗೆ ಸನ್ನೆಮಾಡಲು, ಕ್ಷಣದಲ್ಲಿ ಆ ದ್ರೋಹಿಗಳ ಶಿರಸ್ಸುಗಳು ಭೂಮಿಗಿಳಿದವು!

ಇಷ್ಟಾದಮೇಲೆ ಸಂಭಾಜಿಯ ರಾಜಾರಾಮನನ್ನು ಪ್ರತಿಬಂಧದಲ್ಲಿರಿಸಿ, ರೊಚ್ಚಿಗೆದ್ದ ಹುಲಿಯಂತೆ ಸೋಯರಾಬಾಯಿಯ ಸಮಾಚಾರಕ್ಕೆ ಹೊರಟನು. ಸೋಯರಾಬಾಯಿಯು ಅಂಜಿಕೆಯಿಂದ ನಡುಗುತ್ತ ತನ್ನ ಪಲ್ಲಂಗದ ಬುಡದಲ್ಲಿಯ ನೆಲಮನೆಯಲ್ಲಿ ಅಡಗಿ ಕೊಂಡಳು. ಸಂಭಾಜಿರಾಜನು ಕ್ಷುದ್ರಮುದ್ರೆಯಿಂದ ದಾಸಿಯನ್ನು ಕುರಿತು—''ಸೋಯರಾ ಬಾಯಿಯು ಎಲ್ಲಿ'' ಎಂದು ಕೇಳಲು, ಆಕೆಯು ಪ್ರಾಣಭಯದಿಂದ ಪಲ್ಲಂಗದ ಕೆಳಗಿನ ನೆಲಮನೆಯ ಕಡೆಗೆ ಬೆರಳು ಮಾಡಿದಳು. ಕೂಡಲೆ ಸಂಭಾಜಿರಾಜನು ತನ್ನ ಜನರ ಕಡೆಯಿಂದ ಆ ಪಲ್ಲಂಗವನ್ನು ಕಿತ್ತಿಚಲ್ಲಿಸಿ, ನೆಲಮನೆಯ ಇಕ್ಕಿದ ಬಾಗಿಲವನ್ನು ಸ್ವತಃ ಬಲಗಾಲಿನಿಂದ ಒದೆಯಲು, ಅದು ಎರಡು ಭಾಗವಾಗಿ ಮುರಿದು ಬಿದ್ದಿತು. ಹೀಗೆಬಾಗಿಲು ಚೂರುಚೂರಾಗಿ ಬಿದ್ದದ್ದನ್ನು ನೋಡಿ, ಸೋಯರಾಬಾಯಿಯು ಸ್ವಸಂರಕ್ಷಣಾರ್ಥವಾಗಿ ರೋದನಮಾಡ ಹತ್ತಿದಳು! ಅದನ್ನು ಕೇಳಿ ಸಂಭಾಜಿರಾಜನು—''ಇನ್ನು ಮೇಲೆ ಈ ಸ್ತ್ರೀಚೇಷ್ಟೆಯಿಂದ ಏನು ಪ್ರಯೋಜನವಾಗುವದು? ಒಳ್ಳೆಯ ಮಾತಿನಿಂದ ಹೊರಗೆ ಬರ್ರಿ; ಇಲ್ಲದಿದ್ದರೆ ಸಂತಾಪ ದಿಂದ ಮೈಮರೆತಿದ್ದ ಈ ಕ್ರೂರಶಂಭುವು ತರುಬುಹಿಡಿದು ದರದರ ಎಳೆದುತಂದಾನು!

ಪತಿಘಾತಕಿಯಾದ ದುಷ್ಟಳೇ, ಹೆಗ್ಗಣದಂತೆ ಹೀಗೆ ಅಡಗಿಕೊಂಡು ಯಾಕೆ ಕುಳಿತಿರುವೆ, ಬೈಲಿಗೆ ಬಾ ಅನ್ನಲು, ಆ ಅಪಮಾನಕಾರಕವಾದ ಮಾತುಗಳನ್ನು ಸಹಿಸಲಾರದೆ ಸೋಯರಾಬಾಯಿಯು ಉಗ್ರರೂಪದಿಂದ ಹೊರಬಿದ್ದು ಸಂತಾಪದಿಂದ ಲಟಕು ಮುರಿಯುತ್ತ ಕರಕರ ಹಲ್ಲುಕಡಿದು—''ದುಷ್ಟಾ, ಏನು ಬೊಗಳುತ್ತೀ? ನೀನು ಹಾಳಾಗಿ ಹೋಗುವೆ'' ಎಂದು ಶಾಪವಿತ್ತು ಮತ್ತೆ ಲಟಲಟ ಬೆರಳು ಮುರಿದಳು. ಬಳಿಕ ಆಕೆಯು ಕರಕರ ಹಲ್ಲುಕಡಿಯುತ್ತ—''ಏನು? ನೀನು ನನ್ನನ್ನು ಕೊಲ್ಲುವೆಯಾ? ಕೊಲ್ಲು, ಸಿದ್ಧಳಾಗಿದ್ದೇನೆ ನೋಡು.''

ಈ ಮೇರೆಗೆ ನುಡಿದು ಸೋಯರಾಬಾಯಿಯ ಶಾಪದ ನುಡಿಗಳನ್ನು ಕೇಳಿ ಸಂಭಾಜಿ ರಾಜರು ಗಹಗಹಿಸಿ ನಕ್ಕು–ರಾಕ್ಷಸಿಯೇ, ನಿನ್ನ ದುಷ್ಟತನಕ್ಕಾಗಿ ತಟ್ಟನೆ ನಿನ್ನನ್ನು ತುಂಡರಿಸಿ ಚಲ್ಲಿದರೆ ನ್ಯಾಯದೇವತೆಯು ಒಪ್ಪಲಿಕ್ಕಿಲ್ಲ, ರಾಜ್ಯಲೋಭದಿಂದ ವಿಷಪ್ರಯೋಗಮಾಡಿ ಪತಿಯನ್ನು ಕೊಂದ ನೀಚಳಿಗೆ ಅನ್ನ–ನೀರು ಹಾಕದೆ ಕೊರಲಿಸಿ ಕೊಲ್ಲುವದೇ ನ್ಯಾಯವು!

ನಿನ್ನ ಜನ್ಮಸ್ಥಾನವಾದ ಶೀರ್ಕೆಕುಲವನ್ನೇ ಸಮೂಲ ನಷ್ಟಮಾಡಿದ ಹೊರತು ನನಗೆ ಸಮಾಧಾನ ವಾಗದು! ಎಲೇ, ಏನು ನೋಡುವಿರಿ, ಈ ದುಷ್ಟಳನ್ನು ಈ ಮಾಡದಲ್ಲಿ ತುರುಕಿ ಈಕೆಯು ಕುತ್ತಿಗೆಯವರೆಗೆ ಗಚ್ಚು-ಕಲ್ಲಿನ ಗೆಡೆ ಏರಿಸಿ ಬಿಡಿರಿ, ಎಂದಕೂಡಲೆ ಸೇವಕರು ಸೋಯರಾ ಬಾಯಿಯನ್ನು ಹಿಡಿದೆತ್ತಿ ಮಾಡದಲ್ಲಿ ತುರುಕಹತ್ತಿದರು. ಆಗ ಆಕೆಯು ಭಯಂಕರವಾಗಿ ಚೀರಲು, ಕೇಳುವವರ ಕಿವಿಗಳು ಗಡಚಿಕ್ಕಿದವು. ಅಪ್ಪಣೆಯಂತೆ ಅಂಗರಕ್ಷಕರು ಸೋಯರಾ ಬಾಯಿಯ ಕೈಕಾಲು ಕಟ್ಟಿ, ಆಕೆಯ ಮಂದಿರದೊಳಗಿನದೊಂದು ಮಾಡದಲ್ಲಿ ಆಕೆಯನ್ನು ತುರುಕಿ ಕುತ್ತಿಗೆಯವರೆಗೆ ಉಪ್ಪಾರರಿಂದ ಗೋಡೆ ಏರಿಸಿಬಿಟ್ಟರು! ಆಗ ಕ್ರೂರ ಶಂಬುವು ಪ್ರಾಣಹೋಗುವವರೆಗೆ ಆಕೆಗೆ ಅನ್ನ-ನೀರು ಕೊಡದಂತೆ ಆಜ್ಞಾಪಿಸಿ, ಮೋರೋಪಂತನಿಗೆ ದುರ್ಗವ್ಯವಸ್ಥೆ ಮಾಡಹೇಳಿತಾನು ಶೀರ್ಕೆ ಮನೆತನವನ್ನು ನಿರ್ಮೂಲಮಾಡುವದಕ್ಕಾಗಿ ಹಂಬೀರರಾಯನೊಡನೆ ಹೊರಟನು. ತಾನು ಬರುವದರೊಳಗಾಗಿ ಸೋಯರಾಬಾಯಿಯ ಅಂತವಾದರೆ ರಾಜಾರಾಮನಿಂದ ಆಕೆಯ ಉತ್ತರಕ್ರಿಯೆಗಳನ್ನು ಮಾಡಿಸಬೇಕೆಂದು ಹೇಳಿದನು. ಸಂಭಾಜಿರಾಜನ ತಾಮಸ ಸ್ವಭಾವವನ್ನು ವರ್ಣಿಸುವದು ಅಸಾಧ್ಯವೇ ಸರಿ. ಆತನು ಶಿರ್ಕೆಕುಲವನ್ನೇ ಸಂಹರಿಸಿ ಬಿಟ್ಟನೆಂದು ಹೇಳಬಹುದು; ಆದರೆ ಜನಮೇಜಯನು ತನ್ನ ತಂದೆಯನ್ನು ಸರ್ಪವು ಕೊಂದ ತಪ್ಪಿಗಾಗಿ ಸರ್ಪಯಾಗದಿಂದ ಸರ್ಪಕುಲವನ್ನೇ ನಾಶ ಮಾಡತೊಡಗಿದಾಗ ಆಸ್ತಿಕನ ಯೋಗದಿಂದ ತಕ್ಷಕ ಸರ್ಪದ ಜಾತಿಯು ಉಳಿದಂತೆ, ಶಿರ್ಕೆ ಮನೆತನದಲ್ಲಿ ಗಣೋಜಿಶಿರ್ಕೆ ಎಂಬವನೊಬ್ಬನು ಮಾತ್ರ ಹ್ಯಾಗೆ ಹ್ಯಾಗೋ ಉಳಿದು, ಔರಂಗಜೇಬನ ಆಶ್ರಯ ಮಾಡಿದನು. ಮುಂದೆ ಇವನೇ ಸಂಭಾಜಿಯ ನಾಶಕ್ಕೆ ಕಾರಣ ನಾದನು! ಗಣೋಜಿರಾಯನಿಗೆ ಶಿವರಾಯನ ಮಗಳಾದ ರಾಜಕುವರ ಎಂಬವಳನ್ನು ಕೊಟ್ಟಿತ್ತು, ಗಣೋಜಿಯು ಓಡಿಹೋಗಲು, ಸಂಭಾಜಿಯು ತನ್ನ ತಂಗಿಯನ್ನು ಬಹುಮಾನದಿಂದ ಏಸೂಬಾಯಿಯ ಕಡೆಗೆ ಕಳಿಸಿದನು.

ಹೇಗೆ ಶಿರ್ಕೆಕುಲದ ಸಂಹಾರಮಾಡಿ ಬರುವಾಗ ಹಾದಿಯಲ್ಲಿ ಚಿಪಳೂಣದ ಸಮಿಪದಲ್ಲಿ ಹಿರೋಜಿ ಫರ್ಜಂದನು ಇರುವನೆಂಬದು ಗೊತ್ತಾಗಲು, ಸಂಭಾಜಿರಾಜನು ಅವನನ್ನು ಹಿಡಿದು ಆನೆಯ ಕಾಲಿಗೆ ಕಟ್ಟಿಸಿ ಕೊಲ್ಲಿಸಿದನು. ಆಮೇಲೆ ಸಂಭಾಜಿರಾಜನು ಸೈನ್ಯದೊಡನೆ ಶ್ರಾವಣಶುದ್ಧ ದ್ವಿತೀಯೆಯ ದಿವಸ ರಾಯಗಡಕ್ಕೆ ಬಂದನು. ಸಮರ್ಥರ ಅಪ್ಪಣೆಯಂತೆ ಶ್ರಾವಣಶುದ್ಧ ಪಂಚಮಿಯ ದಿವಸ ಅಷ್ಟರಮಟ್ಟಿಗೆ ಸಿಂಹಾಸನವೇರ ಬೇಕಾಗಿತ್ತಷ್ಟೇ? ಯಥಾವಿಧಿ ರಾಜ್ಯಾಭಿಷೇಕವಾಗುವ ಮುಹೂರ್ತವನ್ನು ಮಾಘಶುದ್ಧ ದಶಮಿಯೆಂದು ಗೊತ್ತುಮಾಡಿದ್ದರು. ನಾಗಪಂಚಮಿಯು ಎರಡೇ ದಿವಸವಿದ್ದದ್ದರಿಂದ ಯಾವತ್ತು ಸಿದ್ಧತೆಯನ್ನು ಒತ್ತರದಿಂದ ಮಾಡಿದರು ರಾಯಗಡವು ಗುಡಿ ತೋರಣ ಪತಾಕೆ ಗಳಿಂದ ಶೃಂಗರಿಸಲ್ಪಟ್ಟಿತು. ಶಿವರಾಯನ ಸಿಂಹಾಸನವಿರುತ್ತಿದ್ದ ರಾಜದರ್ಬಾರವು ಮೊದಲೇ ಅತ್ಯುತ್ತಮ ರೀತಿಯಿಂದ ಶೃಂಗರಿಸಲ್ಪಟ್ಟದ್ದಿದ್ದು, ಈಗ ಮತ್ತೆ ಅದನ್ನು ಶೃಂಗರಿಸಿ ಅದಕ್ಕೆ ಬಾದಶಾಹೀ ಪಡಿಕಟ್ಟಿನ ಶೋಭೆಯನ್ನುಂಟುಮಾಡಿದರು. ಮಾವುತರು ತಮ್ಮ ಆನೆಗಳ

ಸೊಂಡಿಲೆಗಳನ್ನು ಚಿತ್ರಗಳಿಂದ ಶೃಂಗರಿಸಿದ್ದರು. ಅವುಗಳ ಮೈಮೇಲಿನ ಜರದ ಜೂಲಗಳೂ, ಅಲಂಕಾರಗಳೂ ಸೌಭಾಗ್ಯವನ್ನು ಸೂರೆ ಮಾಡುತ್ತಿರಲು, ಆ ಶೃಂಗರಿಸಿದ ಆನೆಗಳನ್ನು ದರ್ಬಾರದ ಹೊರಗೆ ನಿಲ್ಲಿಸಿದರು. ರಾವುತರು ಕುದುರೆಗಳನ್ನು ವಸ್ತ್ರಾಲಂಕಾರಗಳಿಂದ ಶೃಂಗರಿಸಿ ದರ್ಬಾರದ ಮುಂದೆ ನಿಲ್ಲಿಸಿರಲು, ಅವು ತಕತಕ ಕುಣಿಯುತ್ತ, ಹೇಷಾರವದಿಂದ ಜನರ ಉತ್ಸಾಹವನ್ನು ಹೆಚ್ಚಿಸುತ್ತಿದ್ದವು. ಪದಾತಿಸೇನೆಯು ಶೃಂಗಾರಾಗಿ ನಿಂತಿದ್ದು, ಮರಾಟರ ದರ್ಪವನ್ನು ಪ್ರಕಟಿಸುತ್ತಿತ್ತು! ಎಲ್ಲ ವಾದ್ಯಗಳು ಸನ್ನಾಹಗೊಂಡು ಧ್ವನಿಮಾಡುತ್ತಿದ್ದವು. ಅಷ್ಟ ಪ್ರಧಾನರ ತವಕವು ಮರಾಟರ ಜಾಗ್ರತ ವೃಷವವನ್ನು ವ್ಯಕ್ತಗೊಳಿಸುತ್ತಿತ್ತು, ಪ್ರಿಯವಾಚಕರೇ, ಅದು ಸ್ವರಾಜ್ಯದ ಸಂಪತ್ತು! ಅದನ್ನು ಸ್ವರಾಜ್ಯದ ಅನುಭವವಿಲ್ಲದ ಹೀನರು ನಾವು ಹೆಚ್ಚಿಗೆ ಏನು ವರ್ಣಿಸೋಣ? ಅಂದಿನ ರಾಜ್ಯರೋಹಣವು ಅಷ್ಟುರವಟ್ಟಿಗೆ ಇದ್ದದ್ದರಿಂದ ದುರ್ಗ ದೊಳಗಿನ ಮಟ್ಟಿಗೆ ಸರದಾರರೂ, ಮಾನಕರಿಗಳೂ, ದರಕದಾರರೂ, ಬಾರಗಿರುಗಳೂ ದರ್ಬಾರದಲ್ಲಿಯೋಗ್ಯ ಸ್ಥಾನದಲ್ಲಿವಿರಾಜಮಾನವಾಗಿದ್ದರು. ಮಾಘಶುದ್ಧದಶಮಿಯ ದಿವಸ ಮುಖ್ಯ ಸಮಾರಂಭವಿದ್ದು, ಅಂದು ರಾಜ್ಯದೊಳಗಿನ ಯಾವತ್ತುಸರದಾರರೇ ಮೊದಲಾದವರಿಗೆ ನಿಮಂತ್ರಣ ಕೊಡುವದು ಗೊತ್ತಾಗಿತ್ತು.

ಸಿಂಹಾಸನಾರೋಹಣದ ಮುಹೂರ್ತಕ್ಕೆ ಎರಡು ಗಳಿಗೆ ಅವಕಾಶವಿರುವಾಗ ಸಂಭಾಜಿ ಮಹಾರಾಜರು ತಮ್ಮ ಮಹಲಿನಲ್ಲಿ ವಿರೋಚಿತವಾದ ವಸ್ತ್ರಾಲಂಕಾರಗಳನ್ನು ಧರಿಸಿ ಸಿದ್ಧವಾಗುತ್ತಲಿದ್ದರು. ಮುಹೂರ್ತವು ಸಮೀಪಿಸಿದ್ದನ್ನು ಭಾಲದಾರನು ಉದ್ಘೋಷಿಸಲು ಅವರು ತಮ್ಮ ಮಾತೃಶ್ರೀ ಸಯಿಬಾಯಿಯವರನ್ನೂ, ಶಿವರಾಯನನ್ನೂ ಮನಸಾ ವಂದಿಸಿ, ಶ್ರೀ ಸಮರ್ಥರ ಚರಣವನ್ನು ಸ್ಮರಿಸಿ ಅಶ್ವಾರೂಢವಾಗಿ ದರ್ಬಾರದ ಬಾಗಿಲಿಗೆ ಬಂದು ಕುದುರೆ ಯನ್ನು ಇಳಿದರು. ಕೂಡಲೆ ರಾಜಪದ್ಧತಿಯಂತೆ ನಿವಾಳಿಯ ಕಾರ್ಯವಾದ ಬಳಿಕ, ಸುವಾಸಿನಿಯರು ಆರುತಿಯನ್ನು ಮಾಡಿದರು. ಮಹಾರಾಜರು ದರ್ಬಾರದ ಮಹಾಲನ್ನು ಪ್ರವೇಶಿಸಿದ ಕೂಡಲೆ, ಅವರ ಮಹೇಶದಾಸನೆಂಬ ಭಾಟನು ಉಚ್ಚಸ್ವರದಿಂದ ಅವರ ಯಶಸ್ಸಿನ ಗಾಯನ ಮಾಡಹತ್ತಿದನು. ಆ ಗಾಯನದ ಧ್ವನಿಯಲ್ಲಿಯೇ ಮಹಾರಾಜರು ದರ್ಬಾರದ ಜನರ ಮುಜುರೆಯನ್ನು ಸ್ವೀಕರಿಸುತ್ತ ಸಿಂಹಾಸನದ ಮೊದಲನೆಯ ಪಾವಟಿಗೆ ಯನ್ನು ಮುಟ್ಟಿದರು. ಕೂಡಲೆ ವಾದ್ಯಬಾರಿಸುವದನ್ನು ನಿಲ್ಲಿಸಿದರು. ತೋಫು–ತುಬಾಕಿಗಳ ಧ್ವನಿಗಳೂ ನಿಂತವು. ಯಾವತ್ತು ಸಭೆಯು ಸ್ತಬ್ಧವಾಯಿತು. ಅಷ್ಟಪ್ರಧಾನರು ತಮ್ಮ ತಮ್ಮ ಸ್ಥಳಗಳಲ್ಲಿ ಕೈಜೋಡಿಸಿ ನಿಂತುಕೊಂಡಿದ್ದು, ಬಲಗಡೆಗೆ ಬಾಳಾಜಿ ಆವಜಿ ಚೀಟಣೀಸನು ಕೈಯಲ್ಲಿ ಕಾಗದ ಹಿಡಕೊಂಡು ನಿಂತುಕೊಂಡಿದ್ದನು. ಆತನ ಎದುರಿನ ಮಗ್ಗಲಿಗೆ ಕಬಜಿಯು ನಿಂತುಕೊಂಡಿದ್ದನು. ಆಗ ಮಹಾರಾಜರು ಎಲ್ಲರನ್ನು ಉದ್ದೇಶಿಸಿ—''ಇಲ್ಲಿ ಕೂಡಿರುವ ನೀವೆಲ್ಲರೂ ನಮ್ಮ ಮಿತ್ರರೆಂದು ನಾವು ತಿಳಿಯುತ್ತೇವೆ. ನೀವು ಕೈಲಾಸವಾಸಿ ಆಬಾ ಸಾಹೇಬರಿಗೆ ಸಹಾಯಮಾಡಿ ಅವರ ಕೈಯಿಂದ ರಾಜ್ಯ ಶಕಟವನ್ನು ಸರಿಯಾಗಿ ಸಾಗಿಸಿ ದಂತೆ, ಈ ನಮಗಾದರೂ ಸಹಾಯಮಾಡಿ ನಮ್ಮ ಕೈಯಿಂದಲೂ ಆ ರಾಜಶಕಟವನ್ನು

ಅವ್ಯಾಹತವಾಗಿ ಸುರಕ್ಷಿತ ಸಾಗಿಸುವಿರೆಂದು ನಾನು ನಂಬಿರುತ್ತೇನೆ. ನೀವು ಶೂರರಿರುವಿರಿ, ವೀರರಿರುವಿರಿ, ಆಬಾಸಾಹೇಬರ ಕೈಯಲ್ಲಿ ನುರಿತವರಿರುವಿರಿ. ನಾವು ದುರ್ವೃತ್ತರೂ, ದುರ್ವ್ಯಸನಿಗಳೂ, ದುರಾಚಾರಿಗಳೂ ಇದ್ದು, ರಾಜ್ಯಸಿಂಹಾಸನವೇರಲು ಅವಶ್ಯವಾದಿ ಮುತ್ಸದ್ದಿತನವು ನಮ್ಮಲ್ಲಿರುವದಿಲ್ಲೆಂಬ ದುರ್ಲೌಕಿಕಕ್ಕೆ ಗುರಿಯಾಗಿರುವೆವು! ಈ ಸ್ಥಿತಿಯು ನಮ್ಮ ಮುಂದಿನ ಮಾರ್ಗಕ್ರಮಣಕ್ಕೆ ಬಹಳ ಸಹಾಯಕಾರಿಯಾಗುವದೆಂದು ನಾನು ತಿಳಿಯುತ್ತೇನೆ. ನಮ್ಮ ಅಷ್ಟಪ್ರಧಾನರೊಳಗಿನ ಯಾರಾದರೊಬ್ಬರ ಸ್ಥಳವು ತಮಗೆ ಪ್ರಾಪ್ತವಾಗಬೇಕೆಂದು ನಮ್ಮ ಕಬಜಿಯವರು ಬಹು ದಿವಸಗಳಿಂದ ಇಚ್ಛಿಸುತ್ತಿರುವರು; ಆದರೆ ನಮ್ಮಿಂದ ಅವರ ಆ ಇಚ್ಛೆಯನ್ನು ಪೂರ್ಣಮಾಡುವದಾಗದೆಂದು ಹೇಳಲಿಕ್ಕೆ ನಮಗೆ ಬಹಳ ಅಸಮಾಧಾನ ವಾಗುತ್ತದೆ! ಅವರು ಜಾಣರಿರುವರು, ಕವಿಗಳಿರುವರು; ಆದರೂ ನಮ್ಮ ಆಬಾಸಾಹೇಬರ ಕೈಕೆಳಗೆ ನುರಿತಿರುವ ಹಳೆಯ ಅಷ್ಟಪ್ರಧಾನರಲ್ಲಿಯ ಒಬ್ಬರ ಅನುಭವದ ಗಂಧವು ಕೂಡ ಅವರಿಗಿಲ್ಲ. ಆದರೂ ಅವರು ನಮ್ಮ ಸೇವೆಯನ್ನು ಮನಃಪೂರ್ವಕವಾಗಿ ಮಾಡಿರುವದ ರಿಂದ, ಅವರು ಈಗಿನ ಯೋಗ್ಯತೆಗೆ ತಕ್ಕಂತೆ ಅವರಿಗೆ "ಛಾಂದೋಗಾಮತ್ಯ" ಎಂಬ ಪದವಿ ಯನ್ನು ಕೊಟ್ಟು, ಅವರಿಗೆ ನಾವು ದರ್ಬಾರದಲ್ಲಿ ಕುಳಿತುಕೊಳ್ಳುವ ಅಧಿಕಾರ ಕೊಡುವೆವು. ಸದ್ಯಕ್ಕೆ ಅವರು ಇಷ್ಟರಿಂದಲೇ ಸಂತುಷ್ಟರಾಗಿ, ಮುಂದೆ ಕರ್ತೃತ್ವಶಕ್ತಿಯಿಂದ ತಮ್ಮ ಯೋಗ್ಯತೆ ಯನ್ನು ಹೆಚ್ಚಿಸಿಕೊಳ್ಳತಕ್ಕದ್ದು. ನಾವು ಮಹಾರಾಷ್ಟ್ರ ಸಿಂಹಾಸನವೇರಬಾರದೆಂತಲೂ, ಕಡೆತನಕ ಸೆರೆಮನೆಯಲ್ಲಿಯೇ ಬಿದ್ದು ಕೊಳೆಯಬೇಕೆಂತಲೂ ಕೆಲವರು ಒಳಸಂಚುಮಾಡಿದ್ದರು; ಆದರೆ ಅವರ ಪಾರುಪತ್ಯವನ್ನು ಪರಮೇಶ್ವರನು ನಮ್ಮ ಕೈಯಿಂದ ಮಾಡಿಸಿರುವನು. ಅವರಲ್ಲಿಯ ಕೆಲವರು ಎರಡೂ ದಂಡೆಯಮೇಲೆ ಕೈಯಿಟ್ಟಂತೆ ಆಚರಿಸಿ ಆತ್ಮರಕ್ಷಣಮಾಡಿಕೊಂಡವರಿರ ಬಹುದು. ಆದರೆ ಅವರ ಒರೆಯು ಇನ್ನು ಮುಂದೆ ಹತ್ತಬೇಕಾಗಿದೆ! ಆಬಾಸಾಹೇಬರು ನಿಯಮಿಸಿರುವ ಅಷ್ಟ ಪ್ರಧಾನರೆಲ್ಲರೂ ಅನುಭವಿಕರೂ, ಯೋಗ್ಯ ಮುತ್ಸದ್ದಿಗಳೂ ಇರುವದರಿಂದ, ಅವರವರನ್ನು ಅವರವರ ಸ್ಥಳದಲ್ಲಿ ಸ್ಥಿರಪಡಿಸುವದಲ್ಲದೆ, ಚೀಟಣೀಸರ ಯೋಗ್ಯತೆಯನ್ನು ತಿಳಿದು ಅವರ ಸ್ಥಳವನ್ನು ಅವರಿಗೆ ವಂಶಪರಂಪರೆಯಾಗಿ ಕೊಡುವೆವು. ಅಣ್ಣಾಜಿದತ್ತೋನಂಥ ಮುತ್ಸದ್ದಿಗಳು ಆಬಾಸಾಹೇಬರಿಗೆ ಹೆಜ್ಜೆ ಹೆಜ್ಜೆಗೆ ಸಹಾಯಕರಾಗಿ ಅವರ ಹಿತವನ್ನು ಸಾಧಿಸಿದಂತೆ, ನಮ್ಮ ಹಿತವನ್ನೂ ಸಾಧಿಸಿಯಾರೆಂದು ನಾವು ತಿಳಿಸಿದ್ದೆವು; ಆದರೆ ಪ್ರಾರಬ್ಧ ಕರ್ಮಕ್ಕನುಸರಿಸಿ ಅವರಿಗೆ ದುರ್ಬುದ್ಧಿಯು ಉತ್ಪನ್ನವಾಗಲು ನಮ್ಮ ಕೈ ಯಿಂದ ಅವರ ನಾಶವಾದದ್ದಕ್ಕಾಗಿ ನಮಗೆ ಬಹಳ ವಿಷಾದವಾಗುತ್ತದೆ. ನಮ್ಮ ಸಾಪತ್ನ ಮಾತೃ ಶ್ರೀಯವರಾದ ಸೋಯರಾಬಾಯಿಸಾಹೇಬರು ರಾಜ್ಯಲೋಭದಿಂದ ಪತಿಹತ್ಯೆಯಂಥ ಘೋರಪಾತಕ ಕಟ್ಟಿಕೊಳ್ಳಲಿಕ್ಕೂ ಹಿಂದೆಮುಂದೆ ನೋಡಲಿಲ್ಲ; ತಮ್ಮ ಆ ಮಹಾಪರಾಧಕ್ಕಾಗಿ ಅವರು ತಕ್ಕಶಾಸನವನ್ನು ಹೊಂದಿದ್ದರೂ, ಮಹಾರಾಷ್ಟ್ರರಾಜ್ಯಕ್ಕೆ ಅವರಿಂದಾದ ಹಾನಿಯು ತುಂಬಿಬರುವಹಾಗಿಲ್ಲ. ಮರ್ಯಾದೆಯನ್ನು ದಾಟಿಹೋಗಿ ಪ್ರಸಿದ್ಧ ರೀತಿಯಿಂದ ಔರಂಗಜೇಬ

ನೊಡನೆ ಸಂಗ್ರಾಮ ನಡೆಸುವ ಆಬಾ ಸಾಹೇಬರ ಇಚ್ಛೆಯು ಕೊನೆಗಾಣದೆ ಹೋದದ್ದ ರಿಂದ ಮಹಾರಾಷ್ಟ್ರಕ್ಕೆ ದೊಡ್ಡ ಹಾನಿಯಾಯಿತು. ಹಿರಿಯರ ಆ ಕಠಿಣಕಾರ್ಯದ ಭಾರವು ಈಗ ನಮ್ಮ ತಲೆಯ ಮೇಲೆ ಬಿದ್ದಿದೆ. ಅದನ್ನು ನಿಮ್ಮೆಲ್ಲರ ಸಹಾಯದಿಂದ ವಹಿಸುವ ಧೈರ್ಯವೂ, ಉತ್ಸಾಹವೂ ನಮಗೆ ಸಂಪೂರ್ಣವಾಗಿ ಇರುವದು! ಮಹಾರಾಷ್ಟ್ರ ಸಿಂಹಾಸನ ವನ್ನು, ಒಬ್ಬ ದುರ್ವೃತ್ತನೂ-ದುರ್ವ್ಯಸನಿಯೂ ಏರಿರುವದರಿಂದ ಇನ್ನು ಅದನ್ನು ಸಹಜವಾಗಿ ಶಿಕ್ಕಿ ಮುಕ್ಕಬಹುದೆಂದು ಹಿಗ್ಗಿ ಔರಂಗಜೇಬನು ಏನಾದರೂ ನೆವಮಾಡಿ ದೊಡ್ಡ ಸೈನ್ಯ ದೊಡನೆ ನಮ್ಮ ಮೇಲೆ ಸಾಗಿಬರಬಹುದೆಂಬದನ್ನು ನಾವು ತಿಳಿದಿರುವೆವು; ಆದರೆ ನಾವು ಪೂರಾ ಜಾಗರೂಕರಾಗಿರುತ್ತೇವೆ. ಶಿವಶಿಂಹನಮರಿಯು ಗಂಟುಬಿದ್ದಿರುವದೆಂಬದನ್ನು ಆತನು ಚನ್ನಾಗಿ ಲಕ್ಷದಲ್ಲಿಡಬೇಕು! ಹೀಗೆ ಉತ್ತರ-ಪೂರ್ವದಿಕ್ಕುಗಳಲ್ಲಿ ಔರಂಗಜೇಬನಿಗೆ ನಾವು ಕೈಕೊಡಬೇಕಾಗದ್ದು, ಪಶ್ಚಿಮ-ದಕ್ಷಿಣ ದಿಕ್ಕುಗಳಲ್ಲಿ ಸಿದ್ದಿ-ಪೋರ್ತುಗೀಜ-ಆಂಗ್ರೇಜ (ಇಂಗ್ರಜ) ಕೈಕೊಡಬೇಕಾಗಿದೆ! ಒಟ್ಟಿಗೆ ನಾವು ನಿಮ್ಮ ಬಲದ ಹಾಗು ಮುತ್ಸದ್ದಿತನದ ಸಹಾಯದಿಂದ ನಾಲ್ಕೂ ಕಡೆಯ ಶತ್ರುಗಳಿಗೂ ಕೈಕೊಟ್ಟು ಅಹೋರಾತ್ರಿ ಒಂದೇಸವನೆ ಕಾದಬೇಕಾಗಿದೆ! ಈ ಕಠಿಣಕಾರ್ಯವನ್ನು ಮಾಡಲಿಕ್ಕೆ ನಾವು ಆಮರಣ ಸಿದ್ಧ ರಾಗಿರುವೆವು...........

ಈ ಮೇರೆ ಗೆ ಮಾತಾಡುತ್ತಿರಲು, ಶ್ರೀ ಸಮರ್ಥರ ಶಿಷ್ಯರಾದ ಉದ್ಧವ ಗೋಸಾವಿಗಳು ಗಂಭೀರ ಧ್ವನಿಯಿಂದ-

> ಸಮರ್ಥಾಚಿಯಾ ಸೇವಕಾ ವಕ್ರಪಾಹೆ।
> ಅಸಾಸರ್ವ ಭೂಮಂಡಲೀ ಕೋಣ ಆಹೇ॥
> ಜಯಾಚೀ ಲಿಲಾವರ್ಣಿತೀ ಲೋಕತೀಹ್ನೀ।
> ನುಪೇಕ್ಷೀಕದಾ ರಾಮದಾಸಾಭಿಮಾನಿ।೦
> ''ಜಯ ಜಯ ರಘುವೀರಸಮರ್ಥ''

ಎಂಬ ಶ್ರೀಸಮರ್ಥರ ದಿವ್ಯವಾಣಿಯನ್ನು ಉದ್ಘೋಷಿಸುತ್ತ ದರ್ಬಾರದಲ್ಲಿ ಪ್ರವೇಶಿ ದರು. ಕೂಡಲೆ ದರ್ಬಾರದ ಜನರು ಎದ್ದು ನಿಲ್ಲಲು, ಸಂಭಾಜಿ ಮಹಾರಾಜರು ಆ ಸಮರ್ಥ -ಶಿಷ್ಯರ ಚರಣಕ್ಕೆರಗಿದರು. ಆಗ ಸ್ವಾಮಿಗಳು—''ಚಿರಾಯುರ್ವಿರೋಭವ'' ಎಂದು ಆಶೀರ್ವದಿಸಿ ರಾಜನನ್ನು ಎಬ್ಬಿಸಿ—''ರಾಜಾ, ಸಮರ್ಥರ ಅಪ್ಪಣೆಯಂತೆ ನಾವು ಇಲ್ಲಿಗೆ ಬಂದಿರುವೆವು. ಸಮರ್ಥರು ದಯಪಾಲಿಸಿರುವ ಆಶೀರ್ವಾದ ಯುಕ್ತವಾದ ಈ ಉಪದೇಶ ಪತ್ರಿಕೆಯನ್ನು ಸ್ವೀಕರಿಸು'' ಎಂದು ಹೇಳಿ ಸಮರ್ಥರ ಪತ್ರವನ್ನು ಸಂಭಾಜಿ ಮಹಾರಾಜರ ಕೈಯಲ್ಲಿ ಕೊಟ್ಟರು. ಮಹಾರಾಜರು ಆ ಪತ್ರವನ್ನು ಅತ್ಯಾದರದಿಂದ ಸ್ವೀಕರಿಸಿ ಭಕ್ತಿಯಿಂದ ಶಿರಸ್ಸಿನಲ್ಲಿ ಧರಿಸಿ ಆಮೇಲೆ ''ಜಯಜಯರಘುವೀರ ಸಮರ್ಥ'' ಎಂದು ರಾಮನಾಮ ಘೋಷ ಮಾಡಿ ಪತ್ರವನ್ನು ಗಟ್ಟಿಯಾಗಿ ಓದಲಾರಂಭಿಸಿದರು. -

# ಸಮರ್ಥರ ಪತ್ರವು

ಸಂಭಾಜಿರಾಜರೇ, ಇನ್ನು ನೀವು ಸಿಂಹಾಸನವೇರತಕ್ಕವರು! ಕೃತತ್ರೇತಾ– ದ್ವಾಪರ ಯುಗಗಳಲ್ಲಿ ಧರ್ಮಪರಾಯಣರಾದ ಪುಣ್ಯಶ್ಲೋಕಸೋಮ ಸೂರ್ಯವಂಶದರಾಜರು ಹ್ಯಾಗೆ ರಾಜ್ಯವಾಳಿದರೋ, ಹಾಗೆ ನೀವು ಕಲಿಯುಗದಲ್ಲಿ ರಾಜ್ಯವಾಳತಕ್ಕದ್ದು. ಅನಾಚಾರವು ವಂಶಕ್ಷಯಕ್ಕೆ ಕಾರಣವು; ಆದ್ದರಿಂದ ಬಹು ಎಚ್ಚರದಿಂದ ನಡೆದು ದಿಗಂತದಲ್ಲಿ ಅಪಾರವಾದ ಕೀರ್ತಿಯನ್ನು ಸಂಪಾದಿಸತಕ್ಕದ್ದು. ರಾಜನೀತಿಯನ್ನು ತಪ್ಪಿದರೆ ರಾಜ್ಯಭ್ರಷ್ಟತೆಯು ಪ್ರಾಪ್ತ ವಾಗುವದು. ಸಿಂಹಾಸನವೆಂದರೆ ಸಾಮಾನ್ಯವಲ್ಲ; ಈಶ್ವರೀ ಆಸನವು. ಆ ಈಶ್ವರನ ಆಸನವನ್ನು ಈಶ್ವರೀ ಪುರುಷನಿದ್ದವನೇ ಆರೋಹಿಸುವನು. ಇತರರಿಗೆ ಅದು ಅಲಭ್ಯವಾದದ್ದು. ಎಂದೂ ದೊರೆಯದು! ಸಮರ್ಥರ ರಾಜನೀತಿಯನ್ನು ಸರ್ವಥಾ ತಪ್ಪತಕ್ಕದ್ದಲ್ಲ. ಇಂದು ''ಸಮರ್ಥರ ಬೋಧ''ವು ಕಳಿಸಲ್ಪಟ್ಟಿರುವದು. ಅದರಂತೆ ನಡೆದು ಪೃಥ್ವೀತಲದಲ್ಲಿ ರಾಜ್ಯಭಾರ ಮಾಡತಕ್ಕದ್ದು.

ಈ ಮೇರೆಗೆ ಬರೆದಿದ್ದ ಪತ್ರವನ್ನು ಸಂಪೂರ್ಣವಾಗಿ ಓದಿದ ಬಳಿಕ ಪುನಃ ಅದನ್ನು ಭಕ್ತಿಯಿಂದ ಶಿರಸ್ಸಿನಲ್ಲಿ ಧರಿಸಿ, ಸಿಂಹಾಸನದ ಕಡೆಗೆ ನೋಡಲು, ಶಿವರಾಜನ ರೋಗ ಪೀಡಿತ ಕೃಶವಾದ ಉಗ್ರಮೂರ್ತಿಯು ಸಿಂಹಾಸನದ ಮೇಲೆ ಕುಳಿತಂತೆ ಸಂಭಾಜಿರಾಜನಿಗೆ ತೋರಿತು! ಅದನ್ನು ನೋಡಿದ ಕೂಡಲೆ ಭಯದಿಂದ ಸಂಭಾಜಿರಾಜನು ನಡುಗಹತ್ತಿದನು. ಅಂದು ಸಿಂಹಾಸನವೇರುವ ಧೈರ್ಯವು ಆತನಿಗೆ ಆಗಲಿಲ್ಲ. ಇಂದು ಪೂಜ್ಯ ಆಬಾ ಸಾಹೇಬರು ಅಮಂಗಲ ರೂಪದಿಂದ ಸಿಂಹಾಸನವೇರಿರುವದರಿಂದ, ಅದನ್ನು ತಾವು ಇಂದು ಏರದಿರವದೇ ಯೋಗ್ಯವೆಂದು ತಿಳಿದು, ಆತನು ಮುಂದೆ ಮಾಘಶುದ್ಧ ದಶಮಿಯಲ್ಲಿ ಸಿಂಹಾಸನವೇರತಕ್ಕದ್ದೆಂದು ನಿಶ್ಚಯಿಸಿ, ಸಮರ್ಥರ ಪತ್ರವನ್ನು ಸಿಂಹಾಸನದ ಮೇಲಿಟ್ಟು ಪೂಜಿಸಿದನು. ಬಳಿಕ ಉದ್ಧವಗೋಸಾವಿಗಳನ್ನು ಒಂದು ಉಚ್ಚಾಸನದಲ್ಲಿ ಕುಳ್ಳಿರಿಸಿ ತಾನು ಸಿಂಹಾಸನದ ಬಳಿಯಲ್ಲಿ ಒಂದು ಆಸನದ ಮೇಲೆ ಕುಳಿತುಕೊಂಡನು. ಸಮರ್ಥರು **ನಿಯಮಿಸಿದ ಮುಹೂರ್ತದಲ್ಲಿ ಸಿಂಹಾಸನವೇರದಿರುವದೊಂದು ಅಪಶಕುನವೆಂದು ದರ್ಬಾರದ ಜನರ ಭಾವನೆಯಾಯಿತು. ಮಹಾರಾಜರು ಆಸನದಲ್ಲಿ ಕುಳಿತ ಬಳಿಕ** ಎಲ್ಲರಿಗೂ ಕುಳಿತುಕೊಳ್ಳಲು ಅಪ್ಪಣೆಯಾಯಿತು. ಅದರಂತೆ ಎಲ್ಲರೂ ಕುಳಿತರು. ಬಳಿಕ ತಾಂಬೂಲಾದಿಗಳಿಂದ ದರ್ಬಾರದ ಜನರ ಸತ್ಕಾರವಾಯಿತು. ಆಗ ಮಹಾರಾಜರ ಹೆಸರಿನಿಂದ ತ್ರಿವಾರ ಜಯಘೋಷವಾಗುತ್ತಿರಲು, ಉದ್ಧವಸ್ವಾಮಿಗಳು –

## ಶ್ಲೋಕ

ಭಳಾರೇ ಭಲಾ ಬೋಲತೀ ತೇಕರಾವೇ
ಸಮಸ್ತಾಜನಾಚೇ ಮುಖೇಯೇಶಘ್ಯಾವೇ
ಪರೀಶೇಪಟೇ ಸರ್ವ ಸೋಡೋನಿದ್ಯಾವೇ।
ಮರಾವೇ ಪರೀಕೀರ್ತಿ ರೂಪೇ ಉರಾವೇ॥
''ಜಯ ಜಯ ರಘುವೀರ ಸಮರ್ಥ''

ಎಂದು ಶ್ಲೋಕವನ್ನು ಅಂದರು. ಬಳಿಕ ''ಸಭಾ ಬರಖಾಸ್ತ'' ಎಂದು ಭಾಲದಾರನು ಉದ್ಘೋಷಿಸಲು, ದರ್ಬಾರದ ಜನರು ಮಹಾರಾಜರ ಸಿಂಹಾಸನಾರೋಹಣವಾಗದ್ದಕ್ಕಾಗಿ ಹಲವು ತರ್ಕವಿತರ್ಕಗಳನ್ನು ಮಾಡುತ್ತ ತಮ್ಮ ತಮ್ಮ ಮನೆಗಳಿಗೆ ಹೋದರು! ಅಂದಿನ ಸಮಾರಂಭವು ಯಾರಿಗೂ ಉತ್ಸಾಹಜನಕವಾಗಲಿಲ್ಲ!

## ಉಪಸಂಹಾರ

ಪ್ರಿಯವಾಚಕರೇ, ಈ ಅನರ್ಥಕಾರಕ ಕಾದಂಬರಿಯನ್ನು ಓದಿ ನಿಮ್ಮ ಮನಸ್ಸಿಗೆ ಅಸಮಾಧಾನವಾಗಿರಬಹುದಲ್ಲವೆ? ಶಿವಪ್ರಭುವಿನಂಥ ಅವತಾರಿಕನಿಗೆ ಹೆಂಡತಿಯಿಂದ ವಿಷಪ್ರಯೋಗವಾಗಬೇಕೆಂದರೇನು? ನೀಚಸ್ವಾರ್ಥದ ಹೊಲಸುತನಕ್ಕೆ ಇದಕ್ಕೂ ಹೆಚ್ಚಿನ ಉದಾಹರಣವೇನು ಬೇಕು? ಈ ಕಾದಂಬರಿಯಲ್ಲಿ ವರ್ಣಿಸಿದ ಅನರ್ಥಕ್ಕೆ ನೀಚಸ್ವಾರ್ಥ ಮೂಲವಾದ ಗೃಹಕಲಹವು ಕಾರಣವೆಂಬದನ್ನು ಮತ್ತೆ ಇಲ್ಲಿ ಬರೆಯಲವಶ್ಯವಿಲ್ಲ. ಈ ಕಾದಂಬರಿಯನ್ನು ಓದಿದವರು ಅನರ್ಥಕಾರಕ ಗೃಹಕಲಹವನ್ನು ನಿಲ್ಲಿಸಲಿಕ್ಕೆ ಯಾಕೆ ಪ್ರಯತ್ನ ಮಾಡಬಾರದು? ಕಲಹವಿದ್ದ ಗೃಹಕ್ಕೆ ಸೌಖ್ಯವು ಸರ್ವಥಾ ಲಭಿಸದು; ಅಲ್ಲಿ ತೃಷ್ಟಿ-ಪುಷ್ಟಿಗಳು ತೋರವು; ಐಶ್ವರ್ಯವು ನೆಲಿಸದು; ಸರ್ವಸುಖಗಳ ಮೂಲವಾದ ಸ್ವಾತಂತ್ರ್ಯದ ಗಂಧವು ಕೂಡ ಅದಕ್ಕೆ ತಗಲುವದಿಲ್ಲ!

ನಮ್ಮ ಬರಹದಿಂದ ಎಲ್ಲ ಗೃಹಗಳಲ್ಲಿ ಕಲಹವಿರುವದೆಂಬ ಭಾವವು ವ್ಯಕ್ತವಾಗುವದರಿಂದ ಕಲಹವಿಲ್ಲದ ಗೃಹಸ್ಥರು ನಮ್ಮ ಈ ಲೇಖಕ್ಕಾಗಿ ಆಕ್ಷೇಪಿಸಬಹುದು! ಮತ್ತು ನಮ್ಮಲ್ಲಿ ಗೃಹಕಲಹವೆಲ್ಲಿದೆ? ನಾವು ಬಂಧು-ಬಳಗದವರು ಪರಸ್ಪರ ಪ್ರೇಮದಿಂದಿರುವೆವಲ್ಲ? ನಮ್ಮ ಹಿತವೇ ಅವರಹಿತವು, ಅವರ ಹಿತವೇ ನಮ್ಮ ಹಿತವು ಎಂದು ತಿಳಿದು ಒಬ್ಬರ ಹಿತಕ್ಕಾಗಿ ಒಬ್ಬರು ಹೆಣಗಿ ಸ್ವಹಿತದಚಿಂತೆಯನ್ನೇ ನಾವು ಮಾಡುವದಿಲ್ಲವಲ್ಲ? ನಮ್ಮ ಬಂಧು-ಬಳಗದವರಲ್ಲಿ ತಿಳುವಳಿಕೆಯಿಲ್ಲದವರು ನಮ್ಮೊಡನೆ ಕಲಹ ಬೆಳಿಸಬಂದರೂ, ಅವರು ನಮ್ಮ ಅಹಿತವನ್ನು ಚಿಂತಿಸತೊಡಗಿದರೂ ನಾವು ಅವನ್ನೆಲ್ಲ ತಾಳಿಕೊಂಡು ತಿರುಗಿ ಅವರ ಹಿತವನ್ನೇ ಚಿಂತಿಸುವೆವಲ್ಲವೆ? ಎಂದು ಪ್ರಶ್ನಮಾಡಬಹುದು; ಆದರೆ ಇಂಥಭಾಗ್ಯಶಾಲಿಗಳನ್ನು ನಾವು ಭಕ್ತಿಯಿಂದ ಅಭಿನಂದಿಸುವೆವು. ಅಂಥವರು ಈ ಕಾದಂಬರಿಯನ್ನು ಓದಿ ತಮ್ಮ ಧನ್ಯತೆಗಾಗಿ ಸಮಾಧಾನಪಡತಕ್ಕದ್ದು. ನಮ್ಮ ಬೋಧವು ಕಲಹಬೆಳಿಸುವವರಿಗೆ ಮಾತ್ರ ಇರುವದು; ಆದರೆ ತಾವು ವಾಸಿಸುತ್ತಿರುವ ಗೋಡೆಮಾಳಿಗೆಗಳಿಂದ ಮರ್ಯಾದಿತವಾದ ಪ್ರದೇಶವನ್ನಷ್ಟೇ ಗೃಹವೆಂದು ತಿಳಿಯಬಾರದು. ಈ ಕ್ಷುದ್ರ ಗೃಹಕ್ಕೆ ವಾಸಗೃಹವೆಂಬ ಸಂಜ್ಞೆಯು; ಇದಲ್ಲದೆ ಪೌರುಷಗೃಹ, ಶಾಂತಿಗೃಹ ಎಂಬ ಬೇರೆ ಎರಡು ಉತ್ತರೋತ್ತರ ಗೌರವಶಾಲಿಗಳಾದ ಗೃಹಗಳಿರುವವು.

ಕೇವಲ ವಾಸಗೃಹವನ್ನೇ ಗೃಹವೆಂದು ಭಾವಿಸಿ ಅಲ್ಲಿ ಹ್ಯಾಗಾದರೂತಿಂದುಂಡು ಒಂದುದಿನ ಬಿದ್ದು ಹೋಗುವವರು ಪಶುತ್ವದಿಂದ ಮುಕ್ತರಾದರೆಂದು ಹೇಳಲಾಗುವದಿಲ್ಲ. ಅಂಥವರನ್ನು ದ್ವಿಪಾದಪಶುಗಳೆಂತಲೇ ಕರೆಯತಕ್ಕದ್ದು. ಈ ಪಶುತ್ವದಿಂದ ಮುಕ್ತರಾಗಬೇಕಾದರೆ ಸ್ವದೇಶವನ್ನು ಗೃಹವೆಂದು ತಿಳಿದು ಅಲ್ಲಿಸ್ವದೇಶ ಬಾಂಧವ್ಯ ಕಾಯ್ದುಕೊಳ್ಳುವ ಪೌರುಷ ಮಾಡಿ ಮನುಷ್ಯರೆನಿಸಿಕೊಳ್ಳಬೇಕಾಗುವದು. ಹೀಗೆ ಪೌರುಷದಿಂದ ಮನುಷ್ಯರಾದವರೇ ಮುಂದೆ ವಿಶ್ವವೆಂಬ ಶಾಂತಿಗೃಹದಲ್ಲಿ ವಿಶ್ವಬಾಂಧವ್ಯವನ್ನು ಕಾಯ್ದುಕೊಂಡು ಸುಖ ದುಃಖದ ಬಲೆಯಿಂದ ಮುಕ್ತರಾಗಿ ಅಖಂಡ ಶಾಂತಿಯನ್ನು ಪಡೆಯಲು ತಕ್ಕವರಾಗುವರು. ಒಟ್ಟಿಗೆ ವಾಸಗೃಹದಲ್ಲಿ ದಾಯಾದ್ಯ ಬಾಂಧವ್ಯವೂ, ಪೌರುಷಗೃಹದಲ್ಲಿ ದೇಶಬಾಂಧವ್ಯವೂ, ಶಾಂತಿಗೃಹದಲ್ಲಿ ವಿಶ್ವಬಾಂಧವ್ಯವೂ ಕಾಯಲ್ಪಡಬೇಕಾಗುವದು.

ಬಾಂಧವ್ಯವೆಂದರೆ ಪ್ರೇಮಬಂಧನವು. ವಾಸಗೃಹದಲ್ಲಿಯ ದಾಯಾದ್ಯಬಂಧುಗಳು ಪರಸ್ಪರ ಪ್ರೇಮವುಳ್ಳವರಾಗಿ ಒಬ್ಬರ ಹಿತವನ್ನು ಒಬ್ಬರು ಸಾಧಿಸುವದರಿಂದ ಅವರ ಜೀವನವು ಸುಖಮಯವಾಗುವದು. ವಾಸಗೃಹದ ಈ ಸುಖಮಯಜೀವನವು ಶಾಶ್ವತವಾಗಬೇಕಾದರೆ ಸ್ವದೇಶಬಾಂಧವರು ಪರಸ್ಪರಪ್ರೇಮವುಳ್ಳವರಾಗಿ ಒಬ್ಬರ ಹಿತವನ್ನೊಬ್ಬರು ಸಾಧಿಸುವದರಿಂದ ಅವರ ಜೀವನವು ಸುಖಮಯವಾಗುವದು. ವಾಸಗೃಹದ ಈ ಸುಖಮಯಜೀವನವು ಶಾಶ್ವತವಾಗಬೇಕಾದರೆ ಸ್ವದೇಶಬಾಂಧವರು ಪರಸ್ಪರಪ್ರೇಮವುಳ್ಳವರಾಗಿ ಒಬ್ಬರ ಹಿತವನ್ನೊಬ್ಬರು ಸಾಧಿಸಬೇಕಾಗುವದು. ಹೀಗೆಮಾಡದೆ ಅವರು ಜಾತಿ–ಧರ್ಮ–ಪಂಥ ಮೊದಲಾದವುಗಳ ಭಿನ್ನತ್ವದಿಂದ ತಿಳಿಗೇಡಿಗಳಾಗಿ ಕಲಹಬೆಳಿಸಿದರೆ ಅವರ ಸುಖಮಯಜೀವನವು ಮಣ್ಣುಗೂಡಿತೆಂದು ತಿಳಿಯಬೇಕು. ದೇಶದ ಸ್ವಾತಂತ್ರ್ಯವಿಲ್ಲದವರಿಗೆ ಸುಖವೇ ಇಲ್ಲದಿರಲು, ಸುಖದ ಶಾಶ್ವತತೆಯ ವಿಚಾರವೇಕೆ? ದೇಶದಲ್ಲಿ ಜನ್ಮತಾಳಿದ ಮಾತ್ರದಿಂದ ಬಾಂಧವ್ಯ ಉಂಟಾಗಿರುವ ದೇಶಬಾಂಧವರ ಬಾಂಧವ್ಯಕ್ಕೆ ಜಾತಿ–ಧರ್ಮ ಮೊದಲಾದವುಗಳು ಕಾರಣಗಳಲ್ಲವೇ ಅಲ್ಲವು! ಈ ಜಾತಿ–ಧರ್ಮ–ಪಂಥಾದಿಗಳ ಕಟ್ಟುಗಳ ನಿಜವಾದ ಸಂಗೋಪನವು, ಪೌರುಷಗೃಹವೆನಿಸುವ ದೇಶದ ಸ್ವಾತಂತ್ರ್ಯವನ್ನವಲಂಬಿಸಿರುವದು.

ಹೀಗೆ ದೇಶಬಾಂಧವ್ಯವು ಸಾಧಿಸಿದಬಳಿಕ ಅಂದರೆ ದೇಶಬಾಂಧವರೆಲ್ಲರು ಪರಸ್ಪರ ಪ್ರೇಮವುಳ್ಳವರಾಗಿ ಒಬ್ಬರ ಹಿತವನ್ನೊಬ್ಬರು ಸಾಧಿಸುತ್ತ ಒಬ್ಬರಸಲುವಾಗಿಯೊಬ್ಬರು ಪ್ರಾಣಕೊಡುತ್ತ ಸ್ವಾತಂತ್ರ್ಯವನ್ನು ಸಂಪಾದಿಸಿ ಮನುಷ್ಯರ ಬಟ್ಟೆಯನ್ನು ಕೂಡಿದ ಬಳಿಕ ವಿಶ್ವಬಾಂಧವ್ಯದ ಮಾತು. ವಿಶ್ವ ಬಾಂಧವ್ಯವೆಂದರೆ ''ವಸುಧೈವ ಕುಟುಂಬಕಂ'' ಎಂಬ ಭಾವನೆಯಿಂದ ಮನುಷ್ಯಮಾತ್ರರು ಬಂಧುಗಳೆಂದು ತಿಳಿದು ಅವರೆಲ್ಲರ ಹಿತಕ್ಕಾಗಿ ತನ್ನನ್ನು ತಾನು ಮರೆತುಬಿಡುವದು! ಇದಕ್ಕೆ ಮೋಕ್ಷವೆನ್ನಬೇಕು ! ಈ ಶ್ರೇಷ್ಠಪದವನ್ನು ಹೊಂದಲಿಕ್ಕೆ ಕೆಳಗಿನ ಎರಡುಗೃಹಗಳಲ್ಲಿ ಸದ್ಗೃಹಸ್ಥರಾಗಿ ಸ್ವಾತಂತ್ರ್ಯದಿಂದ ಬಾಳಿವೆ ಮಾಡಿರ

ಬೇಕಾಗುವದು. ಈ ಮೂರು ಗೃಹಗಳಲ್ಲಿಯೂ ಪೌರುಷ ಗೃಹವು, ಅಂದರೆ ಸ್ವದೇಶವು ಬಹು ಮಹತ್ವದ್ದಾಗಿರುವದು; ಯಾಕಂದರೆ ಹುಟ್ಟಿದ ಮನುಷ್ಯಪ್ರಾಣಿಯು ಪೌರುಷಮಾಡದಿದ್ದರೆ, ಅಂದರೆ, ಜಾತಿ ಧರ್ಮ-ಪಂಥ ಮೊದಲಾದವುಗಳ ಬಾಧೆಗೆ ಒಳಗಾಗದೆ ದೇಶಬಾಂಧ್ವವನ್ನು ಕಾಯ್ದುಕೊಳ್ಳದಿದ್ದರೆ ಆ ಪ್ರಾಣಿಯು ಹುಟ್ಟಿಯೂ ವ್ಯರ್ಥವೆ! ಅಂಥ ಅಧನ್ಯನಿಗೆ ಮೋಕ್ಷವೆಂಬ ಪುರುಷಾರ್ಥವು ಸಾಧಿಸುವ ಬಗೆಹೇಗೆ?

ಗೃಹಕಲಹವನ್ನು ಹುಟ್ಟಿಸುವವರು, ಅಂದರೆ ಒಂದು ಮನೆಯಲ್ಲಿ ಅನ್ಯಾಯದಿಂದ ಎರಡು ಮಾಡುವವರು ನಮ್ಮ ಶತ್ರುಗಳೆಂದು ದಾಯಾದ್ಯ ಬಂಧುಗಳೂ- ದೇಶಬಂಧುಗಳೂ-ವಿಶ್ವಬಂಧುಗಳೂ ಸರಿಯಾಗಿಯೇ ತಿಳಿದುಕೊಳ್ಳಬೇಕು. ಯಾರು ಬಂಧುಗಳಲ್ಲಿಯ ಮನಸ್ಸಿನ ಕೊಂಕು ಕೊರತೆಗಳನ್ನು ತಿದ್ದಿ ಪರಸ್ಪರ ಪ್ರೇಮವನ್ನುಂಟು ಮಾಡಿ ಐಕ್ಯ ಬೆಳೆಸುವರೋ ಅವರೇ ಮಿತ್ರರು. ಯಾರು ಇಲ್ಲದ ಇಪ್ಪಿ ಹಚ್ಚಿ, ಉರಿಯಲ್ಲಿ ಹುಲ್ಲು ಹಾಕಿದಂತೆ ಮಾಡಿ, ಅಸತ್ಯದಂಥ ಘೋರ ಪಾತಕಕ್ಕೂ ಅಂಜದೆ ಬಾಂಧವರಲ್ಲಿ ಬಗೆಬಗೆಯ ನೀಚೋಪಾಯಗಳಿಂದ ಒಡಕು ಹುಟ್ಟಿಸುವರೋ ಅವರೇ ಮನೆಮುರುಕರು, ಅರ್ಥಾತ್ ನಮ್ಮ ಶತ್ರುಗಳು! ಇಂಥ ದುರಾತ್ಮರ ಕುಟಿಲ ನೀತಿಯನ್ನು ವಿವೇಕಿಗಳಾದವರು ಅವಿವೇಕಿಗಳಾದವರಿಗೆ ತಿಳಿಸಿ ಎಚ್ಚರಗೊಳಿಸತಕ್ಕದ್ದು. ಭಾರತೀಯರಾದ ನಮ್ಮ ಹಿತವು ನಮ್ಮೆಲ್ಲರ ಐಕ್ಯವಾದ ಹೊರತು, ಬರಿಯ ನಮ್ಮ ವಾಸಗೃಹಸೌಖ್ಯವನ್ನು ಹೆಚ್ಚಿಸಿಕೊಳ್ಳಹೋಗುವದರಿಂದ, ಅಥವಾ ಧರ್ಮದ, ಇಲ್ಲವೆ ಜಾತಿಯ ದುರಭಿಮಾನದಿಂದ ಪರಸ್ಪರ ಈರ್ಷೆಗೊಂಡು ಬಡಿದಾಡುವದರಿಂದ ಸರ್ವಥಾ ಸಾಧಿಸುವದಿಲ್ಲ. ನೂರುಜನ ಬಾಂಧವರ ಐಕ್ಯವಾಗಿ ಒಬ್ಬ ಬಂಧುವಿನ ಮೋರೆ ಸೊಟ್ಟಾದರೂ ಸ್ವಾತಂತ್ರ್ಯದಲ್ಲಿ ಅಷ್ಟರಮಟ್ಟಿಗೆ ಡೊಗರುಬತ್ತೆಂಬುದನ್ನು ಸೆರಗಿಗೆ ಗಂಡುಹೊಡೆದು ನೆನಪಿನಲ್ಲಿಡಬೇಕು. ಭಾರತೀಯರಾದ ನಮ್ಮ ದೇಶಬಾಂಧವ್ಯದಲ್ಲಿ, ಅಂದರೆ ಪರಸ್ಪರರ ಪ್ರೇಮಬಂಧನದ ರಜ್ಜುವಿನಲ್ಲಿ ಕತ್ತರಿಯಾಡಿಸಬರುವ ನೀಚರು ಎಂಥ ಹಿತಕರ್ತೃಗಳಂತೆ ನಟಿಸಿದರೂ, ಎಷ್ಟು ಆಪ್ತರಿದ್ದರೂ, ಎಷ್ಟು ಜಾಣರಿದ್ದರೂ, ಎಷ್ಟು ಮತ್ತೇನಾದರೂ ಇದ್ದರೂ ಅವರನ್ನು ಶತ್ರುಗಳೆಂತಲೇ ತಿಳಿಯಬೇಕೆಂದು ನಾವು ಸಾರಿ ಸಾರಿ ಹೇಳುವೆವು. ಎರಡಿದ್ದದ್ದನ್ನು ಹೊಂದಿಸಿ ಒಂದು ಮಾಡುವವರು ನಮಗೆ ತಾರಕರು-ವಂದ್ಯರು-ಸಂಗ್ರಾಹ್ಯರು; ಒಂದಿದ್ದದ್ದನ್ನು ಎರಡು ಮಾಡುವವರು ಮಾರಕರು-ತಿರಸ್ಕರಣೀಯರು-ತ್ಯಾಜ್ಯರು ಎಂಬುದನ್ನು ಪೂರಾ ಲಕ್ಷದಲ್ಲಿಡಬೇಕು.

ಒಟ್ಟಿಗೆ ಬಂಧುಗಳ ಒಕ್ಕಟ್ಟಿನ ಹೊರತು ಯಾವ ಗೃಹದಲ್ಲಿಯೂ ಸುಖವಾಗುವದಿಲ್ಲ; ಆದ್ದರಿಂದ ಕ್ಷುದ್ರಕಾರಣಗಳಿಗಾಗಿ ಕಲಹಬೆಳಿಸಿ ನಮ್ಮ ಕಾಲ ಮೇಲೆ ನಾವು ಕಲ್ಲು ಹಾಕಿಕೊಳ್ಳುವದು ಯೋಗ್ಯವಲ್ಲ. ದೇಶೋದ್ಧಾರದ ಸಾಧನವೆಂದು ಅತ್ತಿತ್ತ ಉಂಟಾಗಿರುವ ಭಾರತದಲ್ಲಿ ಬ್ರಾಹ್ಮಣ-ಬ್ರಾಹ್ಮಣೇತರವೆಂಬ ಪಂಗಡಗಳನ್ನು ಬೇಕಾದರೆ ಇಟ್ಟುಕೊಳ್ಳೋಣ; ಆದರೆ ಆ ಪಂಗಡಗಳನ್ನು ಜಗಳದ ಪಂಗಡಗಳಾಗಿ ಇಟ್ಟುಕೊಳ್ಳದೆ, ಒಬ್ಬರು ಹೇಳುವವರು, ಒಬ್ಬರು ಹೇಳಿದಂತೆ ಕೇಳುವವರು ಎಂಬ ವಿಧದಿಂದ ಆ ಪಂಗಡ ಕಾಯ್ದು

ಕೊಳ್ಳೋಣ. ಪ್ರಸಂಗ ವಶಾತ್ ಬ್ರಾಹ್ಮಣೇತರರು ಹೇಳಿದ್ದನ್ನು ಬ್ರಾಹ್ಮಣರು ಕೇಳಬೇಕು! ಬ್ರಾಹ್ಮಣರು ಹೇಳಿದ್ದನ್ನು ಬ್ರಾಹ್ಮಣೇತರರು ಕೇಳಬೇಕು! ಈ ಜಗತ್ತಿನಲ್ಲಿ ಹೇಳುವದು –ಹೇಳಿದಂತೆ ಮಾಡುವದು ಇವರಡೇ ಮುಖ್ಯ ವ್ಯವಹಾರಗಳಿರುವವು. ಹೇಳುವದು ಸುಲಭ; ಹೇಳಿದಂತೆ ಮಾಡವದು ಕಷ್ಟ; ಯಾಕಂದರೆ ಹೇಳುವದು ಒಂದು ಮಾತಿನಲ್ಲಿ ಆಗ ಬಹುದು; ಆದರೆ ಹೇಳಿದಂತೆ ಮಾಡಲಿಕ್ಕೆ ಭಗೀರಥನಂತೆ ಬಹುಕಾಲ ಘೋರ ತಪಶ್ಚರ್ಯ ಮಾಡಬೇಕಾಗಿದೀತು! ಈ ಹೇಳಕೇಳುವ ವ್ಯವಹಾರಗಳು ಬ್ರಾಹ್ಮಣರಿಗೂ ಬರುವವು. ಬ್ರಾಹ್ಮಣೇತರರಿಗೂ ಬರುವವು. ಹೇಳುವವರಿಗೆ ಹಿರಿಯತನ ಕಾಯ್ದುಕೊಂಡು ದುಡಿಯುವದು ಕಷ್ಟವಾಗಿರುತ್ತದೆ. ಪ್ರಸಂಗವಶಾತ್ ಬ್ರಾಹ್ಮಣರು ; ಹಿರಿಯರಾಗಬೇಕು; ಬ್ರಾಹ್ಮಣೇತರರು ಕಿರಿಯರಾಗಬೇಕು; ಪ್ರಸಂಗವಶಾತ್ ಬ್ರಾಹ್ಮಣೇತರರು ಹಿರಿಯರಾಗ ಬೇಕು; ಬ್ರಾಹ್ಮಣರು ಕಿರಿಯರಾಗಬೇಕು. ಹಿರಿಯರಾದರೇನು ಕಿರಿಯರಾದರೇನು? ಎಲ್ಲರೂ ನಾವು ಭಾರತಭೂಮಾತೆಯ ಮಕ್ಕಳಲ್ಲವೆ? ಪರಮೇಶ್ವರನೇ ನಮ್ಮ ತಂದೆಯು. ಹಿರಿಯಮಗನಮೇಲೆ ತಂದೆಯ ಪ್ರೇಮವು ಹೆಚ್ಚಿದ್ದರೆ, ಕಿರಿಯಮಗನಮೇಲೆ ತಾಯಿಯ ಪ್ರೇಮವು ಹೆಚ್ಚಿರುವದು; ಆದ್ದರಿಂದ ಬ್ರಾಹ್ಮಣ–ಬ್ರಾಹ್ಮಣೇತರರೆಂಬ ಭಾರತಭೂಮಾತೆಯ ಮಕ್ಕಳು ನಾವು, ಒಮ್ಮೆ ಹಿರಿಯಮಕ್ಕಳಾಗಿ ತಂದೆಯ ಪ್ರೇಮಕ್ಕೂ, ಒಮ್ಮೆ ಕಿರಿಯಮಕ್ಕಳಾಗಿ ತಾಯಿಯ ಪ್ರೇಮಕ್ಕೂ ಪಾತ್ರರಾಗಿ ನಾವಿಬ್ಬರೂ ಮಾತಾ–ಪಿತೃಗಳ ಅನುಗ್ರಹದಿಂದ ಉತ್ಕರ್ಷಹೊಂದಿ ಧನ್ಯರಾಗೋಣ!

**ಸಂಪೂರ್ಣ**

# ಪ್ರಸ್ತಾವನೆ

ನಮ್ಮ "ಶ್ರೀ ಶೇಷಾಚಲ ವೇದ ಮತ್ತು ಸಂಸ್ಕೃತ ಪಾಠಶಾಲೆ"ಯ ಸ್ಥಳಾಂತರದ ಭವಿಷ್ಯವನ್ನು ವರ್ಣಿಸುವದಕ್ಕಾಗಿಯೋ ಅನ್ನುವಂತೆ, ಶ್ರೀ ಗುರುವು ಈ "ಶಿವಪ್ರಭುವಿನ ಪುಣ್ಯ"ವೆಂಬ ಕಾದಂಬರಿಯನ್ನು ನಮ್ಮ ಕೈಯಿಂದ ಬರೆಸಿದನೆಂಬದರಲ್ಲಿ ಸಂಶಯವಿಲ್ಲ. ಪಾಠಶಾಲೆಯು ಅಗಡಿಯ ಆನಂದವನದಿಂದ ಹಾವೇರಿಯ ಶ್ರೀರಾಮ ಮಂದಿರಕ್ಕೆ ಬಂದು ಎಂಟುತಿಂಗಳಾಗುತ್ತ ಬಂದಿತು; ಕಾದಂಬರಿಯು ಈಗ ಮುಗಿಯಿತು!

ಬಲಿಷ್ಠನಾದ ಔರಂಗಜೇಬ ಬಾದಶಹನ ಸ್ವಾರ್ಥಪರಾಯಣತೆಯ ಉಪಟಲದ ತಾಪದಿಂದ ಸಾತ್ವಿಕನಾದ ರಾಜಾರಾಮನು ಪರಿತಪ್ತನಾದಂತೆ, ಧೂರ್ತರ ನೀಚವಾದ ಸ್ವಾರ್ಥಪರಾಯಣತೆಯ ಕುಟಿಲತಂತ್ರದ ಉಪಟಲದ ತಾಪದಿಂದ ಸತ್ವಹೀನರಾದ ನಾವು ಅತ್ಯಂತವಾಗಿ ಪರಿತಪ್ತರಾದೆವೆಂದು ಹೇಳದೆ ಇರಲಾರೆವು. ಛತ್ರಪತಿ ರಾಜಾರಾಮನು ತನ್ನ ಗುರುವಿನ ಪ್ರಸಾದ ರೂಪವಾದ ಮಹಾರಾಷ್ಟ್ರ ರಾಜ್ಯದ ಅಭಿಮಾನವನ್ನು ವಹಿಸಿದ್ದನು, ನಾವು ನಮ್ಮ ಶ್ರೀ ಗುರುವಿನ ಪ್ರಸಾದರೂಪವಾದ ಪಾಠಶಾಲೆಯ ಅಭಿಮಾನವನ್ನು ವಹಿಸಿರುವೆವು. ಪಾಠಶಾಲಾರೂಪವಾದ ವೃಕ್ಷದ ೧೧ ವರ್ಷದ ಸಸಿಯನ್ನು ಆನಂದವನದ ದೂಷಿತ ಪರಿಸ್ಥಿತಿಯಿಂದ ಕಿತ್ತುಕೊಂಡು ಹೋಗಿ, ಹಾವೇರಿಯ ರಾಮಮಂದಿರದಲ್ಲಿ ಊರುವಾಗ ನಮಗೆ ಎಷ್ಟು ತ್ರಾಸವಾಗಿರ ಬಹುದೆಂಬದನ್ನು, ನಮ್ಮ ಈ ಕಾದಂಬರಿಯನ್ನು ಓದಿದ ವಾಚಕರು ತರ್ಕಿಸಬಹುದು.

ಬಾದಶಹನು ಕಿತ್ತಿ ಹಚ್ಚಿದ್ದರಿಂದ ಶಿವಪ್ರಭುವಿನ ಪುಣ್ಯವೃಕ್ಷವು ಫಲಿಸಿದ್ದು ಇಲ್ಲಿಂದ ಮುಂದೆಯೇನೆಂಬದನ್ನು ಇತಿಹಾಸಜ್ಞರು ಹೇಳಿರುವದರಿಂದ ನಾವು ಹೇಳುವ ಕಾರಣವಿಲ್ಲ; ಆದರಂತೆ, ಸ್ವಾರ್ಥಪರಾಯಣರಾದ ವಿಘ್ನ ಸಂತೋಷಿಗಳು ಶ್ರೀ ಗುರುವಿನ ಪಾಠಶಾಲಾ ವೃಕ್ಷವನ್ನು ಕಿತ್ತಿಸಿ ಹಾವೇರಿಯಲ್ಲಿ ಹಚ್ಚಿಸಿರುವದರಿಂದ, ಅದು ಫಲಿಸುವದು ಮುಂದೆಯೇ ಯೆಂದು ನಾವು ಭಾವಿಸಿರುವೆವು. ಶ್ರೀ ಗುರುವು ಭವಿಷ್ಯ ರೂಪವಾಗಿಯೇ ಈ ಕಾದಂಬರಿಯನ್ನು ಬರೆಸಿರುವದರಿಂದ, ನಮ್ಮ ಭಾವನೆಯು ನಿರರ್ಥಕವಾದದ್ದೆಂದು ಯಾರೂ ಭಾವಿಸಲಾಗದು.

ಸುರಸಗ್ರಂಥಮಾಲಾ ಆಫೀಸ
ಹಾವೇರಿ
ತಾ. ೨೨-೯-೧೯೧೮

ಕನ್ನಡಿಗರ ಸೇವಕ
ವೆ. ತಿ. ಗಳಗನಾಥ

# ಶ್ರೀ ಸಮರ್ಥರ ಬೋಧ

ಭಗವಾನ್ ಸೂರ್ಯನಾರಾಯಣನು ಅದೇ ಉದಯಹೊಂದಿ ಮೇಲಕ್ಕೇರಹತ್ತಿದ್ದ ರಿಂದ, ಬಿಸಿಲ ತಾಪವು ಹೆಚ್ಚತೊಡಗಿದೆ. ಆತನ ತೀಕ್ಷ್ಣಕಿರಣಗಳು ಸಹ್ಯಾದ್ರಿಯ ನಿಬಿಡವಾದ ಅರಣ್ಯ ಪ್ರದೇಶವನ್ನು ಭೇದಿಸಿ ಅಲ್ಲಲ್ಲಿ ಪಸರಿಸಹತ್ತಿವೆ. ಆ ಪರ್ವತದ ''ಥಾನೇಯಿ'' ಎಂಬ ಶಿಖರದ ಮೇಲೆ ಕಟ್ಟಲ್ಪಟ್ಟಿದ್ದ ''ವಿಝುಯಿ'' ಎಂಬ ಕೋಟೆಯು, ತಾನು ಶಿವಪ್ರಭುವಿನ ರಾಜಧಾನಿ ಯಾದ ''ರಾಯಗಡದ'' ಪ್ರವೇಶದ್ವಾರವೆಂಬ ಗೌರವವನ್ನು ಪಡೆದು ಗಾಂಭೀರ್ಯ ದಿಂದ ಒಪ್ಪುತ್ತಲಿದೆ. ''ಶಿವಪ್ರಭುವು ಸನಾತನ ಧರ್ಮರಕ್ಷಣಕ್ಕಾಗಿ ತನ್ನ ಮಾವಳರೊಡನೆ ಘೋರ ತಪಸ್ಸನ್ನಾಚರಿಸಿದ್ದು ಇದೇ ಪುಣ್ಯಭೂಮಿಯಲ್ಲಿ'' ಎಂಬ ಗೌರವದ ಸಂಗತಿಯನ್ನು ಕೂಗಿ ಕೂಗಿ ಜಗತ್ತಿಗೆ ತಿಳಿಸುವವೋ ಅನ್ನುವಂತೆ, ವಿವಿಧ ಪಕ್ಷಿಗಳು ತಮ್ಮ ಸ್ವಾಭಾವಿಕ ಧ್ವನಿಗಳಿಂದ ಅರಣ್ಯ ಪ್ರದೇಶದಲ್ಲಿ ಪ್ರತಿಧ್ವನಿಯನ್ನುಂಟುಮಾಡುತ್ತಿರಲು, ಸಹೃದಯರ ಹೃದಯಗಳು ಸ್ವದೇಶಾಭಿ ಮಾನದಿಂದ ಉಕ್ಕೇರುತ್ತಲಿವೆ. ಇಂಥ ಪ್ರಸಂಗದಲ್ಲಿ ಒಬ್ಬ ತರುಣ ರಾವುತನು ತನ್ನ ಕುದುರೆಯನ್ನು ವೇಗದಿಂದ ನಡೆಸುತ್ತ ಕೋಟೆಯ ಕಡೆಗೆ ಬರುತ್ತಿರು ವದನ್ನು ''ವಿಝುಯಿ'' ಕೋಟೆಯ ಕಾವಲುಗಾರನು ನೋಡಿದನು. ರಾವುತನು ಒಮ್ಮೆ ಗಿಡಗಳ ಗುಂಪಿನಲ್ಲಿ ಮರೆಯಾಗು ವನು, ಒಮ್ಮೆ ಕಾಣುವನು. ನೋಡನೋಡುತ್ತಿರು ವಷ್ಟರಲ್ಲಿ ಆತನು ಕೋಟೆಯ ಕೆಳಗಿದ್ದ ಶ್ರೀಭವಾನೀ ಶಂಕರನ ಗುಡಿಯ ಸನಿಯಕ್ಕೆ ಬಂದು, ಕುದುರೆಯನ್ನು ಗಿಡದ ಬೇರಿಗೆ ಕಟ್ಟಿ ಭಕ್ತಿಯಿಂದ ಗುಡಿಯನ್ನು ಹೊಕ್ಕನು.

ಹೀಗೆ ಶಿವಾಲಯವನ್ನು ಪ್ರವೇಶಿಸಿದ ರಾವುತನು ಸದಾಶಿವನ ಸಂದರ್ಶನದಿಂದ ಸಂತೋಷಪಟ್ಟವನಾಗಿ ಹೊರಗೆ ಬರುವಾಗ, ತಾನು ತೊಟ್ಟುಕೊಂಡಿದ್ದ ದೊಡ್ಡ ನಿಲುವಂಗಿ ಯನ್ನು ಕೈಯಲ್ಲಿ ಹಿಡಕೊಂಡಿದ್ದನು. ಅದನ್ನು ನೋಡಿದ ಕೂಡಲೆ ಕಾವಲುಗಾರನ ಹೃದಯವು ಸ್ವಾಮಿಭಕ್ತಿಯಿಂದ ಕಂಪಿಸಿತು! ಆತನು ಕೂಡಲೆ ಬೇರೊಬ್ಬ ಕಾವಲುಗಾರನನ್ನು ಕರೆದು— ''ಹಹ! ಅದು ನೋಡು! ಇಂದು ನಮ್ಮ ಸ್ವಾಮಿನಿಯ ಪುಣ್ಯಕರವಾದ ಚರಣಗಳ ದರ್ಶನ ಯೋಗವು ಒದಗಿರುವದು. ಆ ಮಹಾತ್ಮಳನ್ನು ನಾನು ಮೊದಲು ಯೊವನೋ ಒಬ್ಬ ರಾವುತ ನೆಂದು ತಿಳಿದಿದ್ದೆನು; ಆದರೆ ತನ್ನ ಮೈಮೇಲಿನ ನಿಲುವಂಗಿಯನ್ನು ತೆಗೆದದ್ದರಿಂದ ನನ್ನ ಒಡೆಯಳ ಗುರುತು ಹತ್ತಿತು. ಈ ಲೋಕಮಾತೆಯು ನಮ್ಮ ಸಂಬಾಜಿಮಹಾರಾಜರ ಪಟ್ಟದ ರಾಣಿಯು. ಶ್ರೀ ಶಿವಪ್ರಭುವಿನ ಹಿರೆಯ ಸೊಸೆಯು. ಈ ನಮ್ಮ ಹಡೆದವ್ವನ ಹೆಸರು ಏಸೂ

ಬಾಯಿಯವರು; ಆದರೆ ಇವರು ಒಬ್ಬರೇ ಏಕೆ ಬರುತ್ತಿರಬಹುದು'' ಎಂದು ನುಡಿಯುತ್ತ ಕೂಡಲೆ ಕೋಟೆಯವರೆಲ್ಲ ಜಾಗರೂಕರಾಗಿರುವಂತೆ ಕೊಂಬನ್ನು ಊದಿದನು. ಅದರ ನಾದದಿಂದ ಕೋಟೆಯವರೆಲ್ಲ ಜಾಗರೂಕರಾಗಿರಲು, ಇತ್ತ ಏಸೂಬಾಯಿಯ ಕುದುರೆಯು ತನ್ನ ಕಿವಿಗಳನ್ನು ನಿಗರಿಸಿ, ಕಣ್ಣು ಕೆಕ್ಕರಿಸಿ ನೋಡಹತ್ತಿತು. ಹೋಗಹೋಗುತ್ತ ಆ ಮೂಕ ಪ್ರಾಣಿಯು, ಆನಂದದ ತೆರೆಗಳು ಉಕ್ಕೇರಿದಂತೆ ಆಗಾಗ್ಗೆ ಉಲ್ಲಾಸದಿಂದ ಭುರುಗುಟ್ಟುವದು, ಹೇಕರಿಸುವದು, ಕುಣಿಯಹತ್ತುವದು. ವೀರಪತ್ನಿಯಾದ ಏಸೂಬಾಯಿಯು ಬಿಸಿಲಿನಿಂದ ಅಷ್ಟು ಕಳವಳಪಡದಿದ್ದರೂ, ಕೋಟೆಯ ಏರುವ ಶ್ರಮದಿಂದ ಆಕೆಯ ವಿಶಾಲವಾದ ಹಣೆಯಲ್ಲಿ ಬೆವರ ಹನಿಗಳು ಮುತ್ತಿನಂತೆ ಹೊಳೆಯುತ್ತಿದ್ದು, ಆಕೆಯ ಸೌಭಾಗ್ಯ ತಿಲಕವು ಮಸಮಸಕಾಗಿ ಒಪ್ಪುತ್ತಿತ್ತು, ಆಕೆಯ ಗಲ್ಲಗಳು ಕೆಂಪಾಗಿದ್ದವು. ಈ ಸ್ಥಿತಿಯಲ್ಲಿ ಆ ವೀರಪತ್ನಿಯು ಸುಮಾರು ಒಂದೂವರೆ ಮೈಲು ಪರ್ವತವನ್ನು ಏರಿಬಂದಬಳಿಕ ಹಾದಿಯಲ್ಲಿ ಆಕೆಗೆ ''ವಿಝಯಿ ದೇವಿಯ'' ಸಣ್ಣದೇವಾಲಯವು ಹತ್ತಿತು. ಆಕೆಯು ಗುಡಿಯನ್ನು ಹೊಕ್ಕು ಮುಖ ಪ್ರಕ್ಷಾಲನಾದಿಗಳನ್ನು ತೀರಿಸಿ ಕೊಂಡು ದೇವಿಯನ್ನು ಭಕ್ತಿಯಿಂದ ನಮಸ್ಕರಿಸಿ ತನ್ನ ಪ್ರೀತಿಯ ಕುದುರೆಯನ್ನು ರಮಿಸಿದಳು. ಕುದುರೆಯ ಮೈಮೇಲೆ ಕೈಯಾಡಿಸಿ ಪ್ರೀತಿಯಿಂದ ಅದನ್ನು ಚಪ್ಪರಿಸಲು, ಆ ದಿವ್ಯಾಶ್ವವು ಹುರುಪುಗೊಂಡು ಗಟ್ಟಿಯಾಗಿ ಬುರುಗುಟ್ಟುತ್ತ ಒಮ್ಮೆ ಉಚ್ಚಸ್ವರದಿಂದ ಹೇಕರಿಸಿತು. ಇಷ್ಟರಲ್ಲಿಯೇ ಏಸೂಬಾಯಿಯು ಮತ್ತೆ ಮಾರ್ಗವನ್ನು ಕ್ರಮಿಸಹತ್ತಿದಳು. ಆ ವೀರಸ್ನುಷೆಯು ದುರ್ಗದ ಮಹಾದ್ವಾರಕ್ಕೆ ಬಂದಕೂಡಲೆ ಕೋಟೆಯ ಅಧಿಕಾರಿಗಳಾದ ಸರನೌಬತ್- ಲಲೆಯೆಂಬವನೂ, ಹವಾಲದಾರ-ಮೋರೆ ಎಂಬವನೂ ಕಾರಖಾನ ವೀಸನೂ, ಆಕೆಯನ್ನು ಬಹುಮಾನ ಪೂರ್ವಕವಾಗಿ ಎದುರ್ಗೊಂಡರು.

ಹೀಗೆ ಮಹಾರಾಷ್ಟ್ರ ದೇಶದ ಸ್ವಾಮಿನಿಯು, ತನ್ನ ಸ್ವಾಮಿನಿಷ್ಠ ಸೇವಕರು ಮಾಡಿದ ಸ್ವಾಗತ ಸತ್ಕಾರವನ್ನು ನಗೆಮೊಗದಿಂದ ಆದರಪೂರ್ವಕವಾಗಿ ಸ್ವೀಕರಿಸಿ, ಕೋಟೆಯನ್ನು ಪ್ರವೇಶಿಸದೆ, ಕೊತ್ತಳವನ್ನು ಏರುವದಕ್ಕಾಗಿ ಅತ್ತಕಡೆಗೆ ತಿರುಗಿದಳು. ಹೋಗಹೋಗುತ್ತ ಆಕೆಯು ಸರನೌಬತ್-ಲಲೆ ಎಂಬವನನ್ನು ಕುರಿತು—ಸರನೌಬತ್, ಈ ದುರ್ಗವು ರಾಯಗಡದ ಮುಖ್ಯಪ್ರವೇಶದ್ವಾರವಲ್ಲವೆ? ಹಬಸೀ ಜನರ ಸುಳಿದಾಟವನ್ನು ತಡೆಯಲಿಕ್ಕೆ ಇದೊಂದು ದಂಡಿನ ಆಯಕಟ್ಟಿನ ಸ್ಥಳವಾಗಿರುವದೆಂದು ನಾನೇಕೆ ಹೇಳಬೇಕು. ಈ ಕೊತ್ತಳದ ಮೇಲಿನ ತೋಫುಗಳು ಸರಿಯಾಗಿರುವದಷ್ಟೆ? ಯಾವ ದಿಕ್ಕಿನಲ್ಲಿಯೇ ಆಗಲಿ, ಶತ್ರುಗಳ ಸುಳಿದಾಟವು ಕಂಡಕೂಡಲೆ ನೀವು ತೋಫುಗಳನ್ನು ಹಾರಿಸಿ ಆ ಸುದ್ದಿಯನ್ನು ರಾಯಗಡಕ್ಕೆ ತಿಳಿಸುವದಲ್ಲದೆ, ಆಕಾಶಬುಟ್ಟೆಗಳನ್ನು ತಪ್ಪದೆ ಏರಿಸಿ ನಮ್ಮನ್ನು ಎಚ್ಚರಗೊಳಿಸತಕ್ಕದ್ದು. ದುಷ್ಟನಾದ ಅಲಮಗೀರನು (ಔರಂಗಜೇಬ ಬಾದಶಹನು) ಮರಾಟರ ರಾಜ್ಯವನ್ನು ಮಣ್ಣು ಗೂಡಿಸಲು ಹೊಂಚುಹಾಕಿ ಕುಳಿತಿರುವನು. ಆಬಾಸಾಹೇಬರು (ಶಿವಾಜಿ ಮಹಾರಾಜರು) ಸ್ವರ್ಗವಾಸಿಗಳಾದ ಬಳಿಕ ನಮ್ಮ ರಾಜ್ಯದಲ್ಲಿ ಅವ್ಯವಸ್ಥೆಯು ಹೆಚ್ಚುತ್ತಲಿದೆ. ರಾಜ್ಯ ವಿಘಾತಕ ನಾದ ''ಕಲುಷ''ಎಂಬ ಅಮಾತ್ಯನು ಮಹಾರಾಜರ(ಗಂಡನಾದ ಸಂಬಾಜಿಯ) ಚಿತ್ತವೃತ್ತಿ

ಯನ್ನು ದಿನದಿನಕ್ಕೆ ಕೆಡಿಸಹತ್ತಿರುತ್ತಾನೆ. ಯಾವ ಕಾಲಕ್ಕೆ ಎಂಥ ಸಂಕಟಗಳು ಒದಗುವು ವೆಂಬುದನ್ನು ಹೇಳಲಾಗುವದಿಲ್ಲ. ನಿಮ್ಮ ಸೈನಿಕರು ದಿನಾಲು ಕವಾಯಿತು ಮಾಡುವರಷ್ಟೇ? ಅವರ ದಾಂಡಪಟ್ಟೆ, ಕುಸ್ತಿಗಳು ನಡೆದಿರುವವಲ್ಲವೇ? ಕೋಟೆಯಲ್ಲಿ ಕಾಳಿನ ಸಂಗ್ರಹಕ್ಕೆ ಕೊರತೆಯಿಲ್ಲವಷ್ಟೆ? ಸ್ವಲ್ಪ ಹೊತ್ತಾದರೂ ವೈರಿಗಳನ್ನು ತಡೆಯುವ ಸಾಮರ್ಥ್ಯವು ನಿಮ್ಮಲ್ಲಿ ಇರಬೇಕಾಗುವದು. ಯಾರಿಗೆ ಗೊತ್ತು, ರಾಯಗಡದಲ್ಲಿಯ ಸಿದ್ಧತೆಗೆ ಅವಕಾಶ ಬೇಕಾಗಿದ್ದರೆ ಪ್ರಸಂಗದಲ್ಲಿ ಘಾತವಾದೀತು. ಕಾಲವು ಕಠಿಣವಿರುತ್ತದೆ. ಮಹಾರಾಷ್ಟ್ರದೊಳಗಿನ ಪ್ರತಿಯೊಬ್ಬ ವೀರನಿಗಷ್ಟೇ ಅಲ್ಲ, ಪ್ರತಿ ಒಬ್ಬ ವೀರ ಕನ್ನೆಗೆ ಸಹ ಕೈಯಲ್ಲಿ ಶಸ್ತ್ರ ಹಿಡಿಯುವ ಪ್ರಸಗಂವು ಒದಗೀತು, ಯಾರು ಯಾವ ಕಾಲದಲ್ಲಿ ಏನು ಸಹಾಯ ಮಾಡಬೇಕಾದೀ ತೆಂಬುದನ್ನು ಈಗ ಹೇಳಲಾಗುವದಿಲ್ಲ. ಹಿಂದಕ್ಕೆ ಚಿತ್ತೂರ್‌ನಲ್ಲಿ ವೀರ ರಜಪೂತರು ಮಾಡಿದ ಆತ್ಮಯಜ್ಞಗಳನ್ನು ಈಗ ರಾಯಗಡದಲ್ಲಿರುವ ನಾವು ಮೇಲೆ ಮೇಲೆ ನೆನಪಿಗೆ ತಂದು ಕೊಳ್ಳಬೇಕಾಗಿದೆ!

ಯೇಸೂಬಾಯಿಯ ಈ ಪೌರುಷೋಕ್ತಿಗಳನ್ನು ಕೇಳಿ ಸರನೌಬತ್–ಲಲೆಯು ತನ್ನ ಆ ಒಡೆಯಳನ್ನು ಕುರಿತು ವಿನಯದಿಂದ—''ಅವ್ವನವರು ನಮಗೆ ಈ ಎಲ್ಲ ಮಾತುಗಳನ್ನು ಬಾಯಿಬಿಚ್ಚಿ ಹೇಳಬೇಕೆ? ದೊಡ್ಡ ಮಹಾರಾಜರ ಸ್ಥಳದಲ್ಲಿ ನಾವು ತಮ್ಮನ್ನು ಎಣಿಸುವೆವು. ತಮ್ಮ ಮಾತು ನಮಗೆ ಶಿರಸಾವಂದ್ಯವಾಗಿರುವದು. ತಮ್ಮ ಮಾತು ನಡೆಸುವಾಗ ಈ ದೇಹ ಪಾತವಾದರೂ ನಮಗ ಸಂತೋಷವಿರುವದು. ಶತ್ರುವಿನ ಸಾವಿರಾರು ಜನರನ್ನು ನೆಲಕ್ಕು ರುಳಿಸಿದ ಹೊರತು ನಾವು ಶತ್ರುವನ್ನು ರಾಯಗಡದ ಕಡೆಗೆ ಹೋಗಗೊಡಲಾರೆವು. ಮಾವಳರ ದಂಡು ಯುದ್ಧಕ್ಕೆ ಸಜ್ಜಾಗಿರುವದು. ಕೋಟೆಯಲ್ಲಿ ಧಾನ್ಯ ಸಂಗ್ರಹವು ಪರಿಪೂರ್ಣ ವಾಗಿರುತ್ತದೆ. ರಾಜಧಾನಿ ಮಹಾದ್ವಾರವೆನಿಸುವ ಈ ಕೋಟೆಯ ಭದ್ರತೆಯ ವಿಷಯವಾಗಿ ತಾವು ನಿಶ್ಚಿಂತರಾಗಿರಬೇಕು. ತಾವು ಆಜ್ಞಾಪಿಸಿದಂತೆ ಕಾಲವು ಕಠಿಣವಿರುವದೇನೋ ನಿಜ; ಆದರೂ ದೊಡ್ಡ ಮಹಾರಾಜರ ಪುಣ್ಯವು ಬಲವತ್ತರವಾಗಿರುವದರಿಂದ, ಅವ್ವನವರು ಚಿಂತೆಗೆ ಆಸ್ಪದ ಕೊಡಬಾರದು. ರಾಮಚಂದ್ರಪಂತನಂಥ ಮುತ್ಸದ್ದಿಯೂ, ಧನಾಜಿ ಜಾಧವ–ಸಂತಾಜಿ ಘೋರಪಡೆಯಂಥ ವೀರರೂ, ಶ್ರೀ ಶಿವಪ್ರಭುವಿನ ಕೀರ್ತಿಧ್ವಜದಂತೆ ಜಗತ್ತಿನಲ್ಲಿ ಮೆರೆಯ ಹತ್ತಿದ್ದಾರೆ. ಸರಳ ಸ್ವಭಾವದ ನಮ್ಮ ಸದ್ಯದ ಮಹಾರಾಜರ(ಸಂಭಾಜಿಯ) ಅಮೋಘ ಬಲದರ್ಪವು ಲೋಕವಿಶ್ರುತವಾಗಿರುತ್ತದೆ. ಅಂದ ಬಳಿಕ ಬಾಯಿಸಾಹೇಬ, ನಾವು ಅಂಜುವದೇಕೆ?

ಸರನೌಬತ್–ಲಲೆಯ ಈ ಉತ್ತೇಜಕ ಭಾಷಣವನ್ನು ಕೇಳಿ ಯೇಸೂ ಬಾಯಿಯು ನಿಟ್ಟಿಸಿರು ಬಿಟ್ಟು, ಔದಾಸೀನ್ಯದಿಂದ–ಸರನೌಬತ್, ನಿಮ್ಮ ಮಾತು ಒಪ್ಪತಕ್ಕದ್ದೇ ಸರಿ; ಆದರೆ ಕಲುಷ ಮಂತ್ರಿಯ ದುಷ್ಟ ಸಹವಾಸದಿಂದ ಅತ್ತಕಡೆಯ ಚಿತ್ತವೃತ್ತಿಯು ದಿನ ದಿನಕ್ಕೆ ಅವ್ಯವಸ್ಥಿತ ವಾಗುತ್ತ ನಡೆದಿರುವಾಗ, ಮಹಾರಾಷ್ಟ್ರ ರಾಜ್ಯ ರೂಪವಾದ ಭವ್ಯ ಮಂದಿರವು ಕುಸಿದು ಬೀಳುವ ಸಂಭವವು ವಿಶೇಷವಾಗಿರುತ್ತದೆ! ಆದರೂ ನಿಮ್ಮ ಮಾತನ್ನು ನಾನು ಸಂಪೂರ್ಣ

ವಾಗಿ ಅಲ್ಲಗಳೆಯುವದಿಲ್ಲ. ನನ್ನ ಆಶಾತಂತುವು ಬಲವತ್ತರವಾಗಿರುವದು. ಅಂತೇ ದುರ್ಗದ ವ್ಯವಸ್ಥೆಯನ್ನು ನೋಡಿ ಹೋಗಲಿಕ್ಕೆ ಬುದ್ಧಿಪೂರ್ವಕವಾಗಿ ನಾನು ಇಲ್ಲಿಗೆ ಬಂದಿರುತ್ತೇನೆ. ಇರಲಿ, ಸರನೌಬತ್ ಇನ್ನು ನಾನು ಬರುತ್ತೇನೆ. ಕೆಲಸಗಳು ಬಹಳ ಅವೆ. ಅನ್ನಲು, ಆ ಸ್ವಾಮಿನಿಷ್ಠನು ವಿನಯದಿಂದ ಸೆರೆಗೊಡ್ಡಿ— ''ಸರಕಾರವು ಬಡವನ ನುಚ್ಚು ಮಜ್ಜಿಗೆ ಯನ್ನು...........'' ಎಂದು ಬೇಡಿಕೊಳ್ಳುತ್ತಿರಲು, ಏಸೂಬಾಯಿಯು—''ಸರನೌಬತ್, ನಾನು ಸ್ವಾಮಿಗಳವರ ತೀರ್ಥ– ಪ್ರಸಾದವಿಲ್ಲದೆ ಅನ್ನಗ್ರಹಣ ಮಾಡುವದಿಲ್ಲೆಂಬ ಮಾತು ನಿಮಗೆ ಗೊತ್ತಿರುವದಷ್ಟೆ? ರಾಜ್ಯವು ದೇವ ಬ್ರಾಹ್ಮಣರದಿರುವದಲ್ಲವೆ? ಅವರ ಅಪ್ಪಣೆಯ ಹೊರತು ನಾನು ಈಗ ಊಟಮಾಡಲಾ? ಮಾವಳರಾದ ನೀವು ನಮ್ಮ ಪಂಚಪ್ರಾಣವಾಗಿರುವ ದರಿಂದ, ನಮ್ಮ ನೇಮ–ಧರ್ಮಗಳಲ್ಲಿ ನಿಮ್ಮಿಂದ ವ್ಯತ್ಯಯವಾಗಲಾರದೆಂದು ನಾನು ನಂಬಿರುತ್ತೇನೆ. ದುರ್ಗದ ವಿಷಯದ ನಿಮ್ಮ ಸುವ್ಯವಸ್ಥೆಯನ್ನು ನೋಡಿ ನನಗೆ ಉಂಡಕ್ಕಿಂತ ಹೆಚ್ಚು ಸಂತೋಷವಾಯಿತು. ಎಂದು ಹೇಳಿ, ಆ ವೀರವನಿತೆಯು ತನ್ನ ಆ ಸ್ವಾಮಿನಿಷ್ಠ ಸೇವಕನ ಒಪ್ಪಿಗೆಯನ್ನು ಪಡೆದು ದುರ್ಗದಿಂದ ಹೊರಡಲನುವಾದಳು.

ಏಸೂಬಾಯಿಯಂಥ ವೀರಪತ್ನಿಯರು ಮಹಾರಾಷ್ಟ್ರ ದೇಶಕ್ಕೆ ಅಲಂಕಾರವೇ ಸರಿ. ಏಸೂಬಾಯಿಯ ಪತಿಯು ಶಿವಪ್ರಭುವಿನ ಹಿರಿಯ ಮಗನಾದ ಸಂಬಾಜಿಯೆಂದು ವಾಚಕರಿಗೆ ಇಲ್ಲಿ ಮತ್ತೆ ಬೇರೆ ಹೇಳುವ ಕಾರಣವಿಲ್ಲ. ಸಂಬಾಜಿಯು ತನ್ನ ತಂದೆಯಂತೆ ಪರಾಕ್ರಮಿಯೂ, ಬಲಿಷ್ಠನೂ ಆಗಿದ್ದರೂ ತಂದೆಯ ರಾಜಕಾರ್ಯ ಧುರಂಧರತೆಯು ಆತನಲ್ಲಿದ್ದಿಲ್ಲ. ಆತನು ಕಲುಷ ಎಂಬ ಕನೋಜ ಬ್ರಾಹ್ಮಣನನ್ನು ಅಮಾತ್ಯನನ್ನಾಗಿ ಮಾಡಿಕೊಂಡು ಆತನ ದುರ್ಬೋಧದಿಂದ ತಂದೆಯ ಕಾಲದ ಸ್ವಾಮಿನಿಷ್ಠ ವೀರರನ್ನೂ ಮುತ್ಸದ್ದಿಗಳನ್ನೂ ಹಿಂಸೆ ಪಡಿಸಿ ರಾಜ್ಯಕ್ಕೆ ಅಪಾಯ ವನ್ನುಂಟುಮಾಡಿಕೊಂಡನು. ಇಂಥ ಪ್ರಸಂಗದಲ್ಲಿ ಔರಂಗಜೇಬ ನಂಥ ಬಲಾಢ್ಯ ಬಾದಶಹನು ಕೈತೊಳೆದುಕೊಂಡು ಮಹಾರಾಷ್ಟ್ರ ಬೆನ್ನು ಹತ್ತಿದ್ದರಿಂದ, ಶಿವಪ್ರಭುವು ಬಹು ಪ್ರಯಾಸದಿಂದ ಸ್ಥಾಪಿಸಿದ ಮಹಾರಾಷ್ಟ್ರ ರಾಜ್ಯವು ನಾಶವಾಗುವ ಪ್ರಸಂಗವು ಒದಗಿತು. ಇಂಥ ಕಠಿಣಕಾಲದಲ್ಲಿ ಎಷ್ಟೋ ದೇಶಾಭಿಮಾನಿಗಳು ಸ್ವಾಮಿನಿಷ್ಠೆ ಯಿಂದ ಸಂಭಾಜಿಯ ತಮ್ಮನಾದ ರಾಜಾರಾಮನನ್ನು ಮುಂದೆ ಮಾಡಿಕೊಂಡು, ಮಹಾರಾಷ್ಟ್ರ ರಾಜ್ಯವನ್ನು ಉಳಿಸಿಕೊಳ್ಳಲಿಕ್ಕೆ ಯತ್ನ ಮಾಡತೊಡಗಿದರು. ಈ ಪ್ರಸಂಗದಲ್ಲಿ ವೀರಸ್ನುಷೆಯೆನಿಸುವ ಯೋಸೂಬಾಯಿಯು ದೇಶಾಭಿಮಾನ ಪ್ರೇರಿತಳಾಗಿ, ತನ್ನ ಮಗನಾದ ಬಾಲಶಿವಾಜಿಯನ್ನು ಕಟ್ಟಿಕೊಂಡು ತನ್ನ ಮೈದುನನ ಪಕ್ಷವನ್ನು ವಹಿಸಿದ್ದಳು! ತನ್ನ ಪ್ರಿಯ ಪತಿಯನ್ನು ಅಗಲಿ ಇರುವದು ಆಕೆಗೆ ದುಸ್ಸಹವಾಗಿತ್ತು, ಈ ಪತಿವಿಯೋಗ ದುಃಖವೂ, ಮಹಾರಾಷ್ಟ್ರ ರಾಜ್ಯವು ದುರ್ಬಲವಾಗುತ್ತ ನಡೆದ ದುಃಖವೂ ಆ ಸ್ವಾಭಿಮಾನಿಯಾದ ಸ್ತ್ರೀಯನ್ನು ಬಹಳವಾಗಿ ಬಾಧಿಸುತ್ತಿದ್ದವು. ಆದರೂ ಆ ಧೀರಳು ಎಲ್ಲ ಸಂಕಟಗಳನ್ನು ನುಂಗಿಕೊಂಡು, ಶೂರ ಮಾವಳರನ್ನೂ, ಸ್ವಾಮಿನಿಷ್ಠರಾದ ದೇಶಸ್ಥ ಬ್ರಾಹ್ಮಣ ಮುತ್ಸದ್ದಿ ಗಳನ್ನೂ ಕೌಶಲ್ಯದಿಂದ ಮುಂದೆ ಮಾಡಿಕೊಂಡು ಔರಂಗಜೇಬನ ಈರಾಟಕ್ಕೆ ಎದುರಾಗಲು

ಸಿದ್ಧಳಾಗಿದ್ದಳು. ಸ್ವಾರ್ಥತ್ಯಾಗಿಯಾದ ಇಂಥ ಮಹಾತ್ಮಳಿಗೆ ದುಃಖ ಪರಂಪರೆಗಳು ಒದಗುತ್ತ ಬಂದದ್ದೇನಾಶ್ಚರ್ಯವು!

ಹೀಗೆ ಏಸೂಬಾಯಿಯು ಯಾವಾಗಲೂ ಹಲವು ಬಗೆಯ ಚಿಂತೆಗಳಿಂದ ಪೀಡಿತಳಾಗಿ ರುತ್ತಿದ್ದಳು. ಆಕೆಯು ಈಗ ದುರ್ಗವನ್ನು ಇಳಿದು ಸಹ್ಯಾದ್ರಿಯ ಅರಣ್ಯದಲ್ಲಿ ಸಾಗುತ್ತಿರಲು. ಮಹಾರಾಷ್ಟ್ರ ರಾಜ್ಯದ ಹಾಗು ತನ್ನ ಪತಿಯ ದುರವಸ್ಥೆಗಳ ಇತ್ತಡಕಿನ ಚಿಂತೆಯಿಂದ ಪೀಡಿತ ಳಾಗಿದ್ದಳು. ಆಕೆಯ ಕುದುರೆಯು ವೇಗದಿಂದ ಮಾರ್ಗವನ್ನು ಕ್ರಮಿಸುತ್ತಿದ್ದರೂ, ಆ ವೀರವನಿತೆಗೆ ಅದರ ಪರಿವೆಯಿದ್ದಿಲ್ಲ. ಪರಾಧೀನಳಂತೆ ಆಕೆಯು ಕುದುರೆ ಒಯ್ದತ್ತ ಸಾಗಿದ್ದಳು. ಹೀಗಿರುವಾಗ ಒಂದು ಜಲಪ್ರವಾಹದ ದಂಡೆಯಲ್ಲಿ ಲಂಗೋಟಿಯ ಬ್ರಾಹ್ಮಣರದೊಂದು ಗುಂಪು ಆಕೆಯ ಕಣ್ಣಿಗೆ ಬೀಳಲು, ಕೂಡಲೆ ಆಕೆಯು ಗಡಬಡಿಸಿ ಎಚ್ಚತ್ತಳು! ಬ್ರಾಹ್ಮಣರು ಲಂಗೋಟಿಯವರಾಗಿದ್ದರೂ ಅವರು ಶರೀರದಿಂದ ಧಷ್ಟಪುಷ್ಟರಾಗಿದ್ದರು. ಅವರು ತಮ್ಮ ಶಸ್ತ್ರಾಸ್ತ್ರಗಳನ್ನು ಜಲಾಶಯದ ದಂಡೆಯಲ್ಲಿಟ್ಟು ತಮ್ಮ ಕುದುರೆಗಳನ್ನು ಮೇಯಬಿಟ್ಟು ಮಧ್ಯಾಹ್ನದ ಸಂಧ್ಯಾವಂದನೆಯನ್ನು ಮಾಡುತ್ತಲಿದ್ದರು. ದೇವ–ಬ್ರಾಹ್ಮಣರಲ್ಲಿ ಸಂಪೂರ್ಣ ವಿಶ್ವಾಸವುಳ್ಳ ಏಸೂಬಾಯಿಯು ಈ ಬ್ರಹ್ಮವೃಂದವನ್ನು ನೋಡಿದ ಕೂಡಲೆ ಕುದುರೆಯನ್ನು ಇಳಿದು ಕಾಲನಡಿಗೆಯಿಂದ ಬ್ರಹ್ಮವೃಂದದ ಕಡೆಗೆ ಸಾಗಿದಳು. ಅಷ್ಟರಲ್ಲಿ ಆ ಬ್ರಾಹ್ಮಣರ ಮುಖ್ಯಸ್ಥನು ಸಂಧ್ಯಾವಂದನೆಯನ್ನು ಮಾಡಿ ಜಲಾಶಯದ ಕಡಿಯಿಂದ ಬರತೊಡಗಿದ್ದನು. ಆತನ ದರ್ಶನವಾದ ಕೂಡಲೆ ಏಸೂಬಾಯಿಯು ದಂಡವತ್ ನಮಸ್ಕಾರಮಾಡಿ ಕೈಜೋಡಿಸಿ ನಿಂತುಕೊಂಡಳು. ಆಕೆಯನ್ನು ನೋಡಿ ಆ ಬ್ರಾಹ್ಮಣಶ್ರೇಷ್ಠನು ಬೆರಗಾಗಿ—ಇದೇನು? ಮಹಾರಾಷ್ಟ್ರ ದೇಶದ ಸ್ವಾತಂತ್ರ್ಯ ದೇವತೆಯ ದರ್ಶನವು ಇಂದು ಅನಾಯಾಸವಾಗಿ ನಮಗೆ ಆಯಿತಲ್ಲ! ನಾವು ಧನ್ಯರು? ಶಿವಪ್ರಭುವಿನ ಮೂರ್ತಿಮಂತ ಪುಣ್ಯವಾದ ಏಸೂಮಾತೆಯೇ ಸ್ವದೇಶದ ಸ್ವಾತಂತ್ರ್ಯ ರಕ್ಷಣದಲ್ಲಿ ದಕ್ಷಳಾಗಿರುವ ತೇಜೋನಿಧಿಯಾದ ನಿನ್ನನ್ನು ಈ ರಂಗನಾಥಸ್ವಾಮಿಯು ಅಖಂಡವಾಗಿ ಆಶೀರ್ವದಿಸುವನು. ಈಗಿನ ಕಠಿಣ **ಕಾಲದಲ್ಲಿ ಜರುಗಿಸ ಬೇಕಾಗಿರುವ ದೇಶಕಾರ್ಯ ರೂಪವಾದ ಘೋರ ತಪಸ್ಸನ್ನಾಚರಿಸುವ ನಿನ್ನನ್ನು ಶ್ರೀಸಮರ್ಥರ ಬೋಧದಿಂದ ಉತ್ತೇಜನಗೊಳಿಸುವದಕ್ಕಾಗಿ ರಾಯಗಡಕ್ಕೆ ನಾನು** ಹೊರಟಿದ್ದೆನು. ಹಾದಿಯಲ್ಲಿಯೇ ನಿನ್ನ ಭೆಟ್ಟಿಯಾದದ್ದು ಅಪೂರ್ವ ಯೋಗವೇ ಸರಿ! ಬಹಳ ನೆಟ್ಟಗಾಯಿತು. ಮಧ್ಯಾಹ್ನವು ಮೀರಿರುವದರಿಂದ ಈ ಜಲಪ್ರವಾಹದಲ್ಲಿ ನೀನು ಪಾದ ಪ್ರಕ್ಷಾಲನಾದಿಗಳನ್ನು ತೀರಿಸಿಕೊಂಡು ನಮ್ಮೊಡನೆ ಉಪಹಾರಮಾಡು. ಸಮರ್ಥರ ಬೋಧ ಶ್ರವಣಕ್ಕೆ, ಈ ಶಾಂತವಾದ ವನಪ್ರದೇಶವು ಬಹು ಯೋಗ್ಯವಾಗಿರುವದು ಎಂದು ನುಡಿಯುತ್ತಿರಲು, ಶಿಷ್ಯರಲ್ಲೊಬ್ಬನು ಯೇಸೂಬಾಯಿಯ ಕುದುರೆಯನ್ನು ಹಿಡಿಕೊಂಡನು; ಬೇರೊಬ್ಬನು ಅದರ ಜೀನು ಇಳಿಸಿದನು; ನೀರಡಿಸಿದ್ದ ಕುದುರೆಯನ್ನು ಮತ್ತೊಬ್ಬ ಶಿಷ್ಯನು ಜಲಾಶಯದ ಕಡೆಗೆ ಸಾಗಿಸಿಕೊಂಡು ಹೋದನು. ಇತ್ತ ಏಸೂಬಾಯಿಯು ಶ್ರೀರಂಗನಾಥ ಸ್ವಾಮಿಯ ಆಜ್ಞೆಯನ್ನು ಶಿರಸಾವಹಿಸಿ, ಬೇರೆ ಶಿಷ್ಯರು ಮಾರ್ಗವನ್ನು ತೋರಿಸುತ್ತಿರಲು, ಜಲಾಶಯದ ಕಡೆಗೆ ನಡೆದಳು.

ಶ್ರೀಸಮರ್ಥ ರಾಮದಾಸ ಸ್ವಾಮಿಗಳ ಕಾಲದಲ್ಲಾದ ಎಪ್ಪತ್ತೆರಡು ಜನ ಮಹಾಂತರಲ್ಲಿ ಶ್ರೀಸಮರ್ಥ ರಂಗನಾಥ ಸ್ವಾಮಿಗಳೊಬ್ಬರು ಸುಪ್ರಸಿದ್ಧರೆಂಬದನ್ನು ಬಹುಜನ ವಾಚಕರು ಅರಿತಿರಬಹುದು. ವಿಸೂಬಾಯಿಗೆ ಈಗ ದರ್ಶನಕೊಟ್ಟವರು ಅದೇ ರಂಗನಾಥ ಸ್ವಾಮಿಗಳು. ರಂಗನಾಥ ಸ್ವಾಮಿಗಳು ಪುಂಡರಂತೆ ತೋರುವ ಲಂಗೋಟಿಯ ಶಿಷ್ಯರ ತಂಡವನ್ನು ಕೂಡಿ ಕೊಂಡು ವೈಭವದ ಉಡಿಗೆ-ತೊಡಿಗೆಗಳಿಂದ ದಿವ್ಯಾಶ್ವವನ್ನೇರಿ ಸ್ವಚ್ಛಂದದಿಂದ ಸಂಚರಿ ಸುತ್ತಿದ್ದ ರೆಂಬುದು ಬಹುಜನರ ಕೇಳಿಕೆಯ ಮಾತಾಗಿರುವದು. ಅವರಲ್ಲಿ ಸಾಧುತ್ವದೊಡನೆ ಶೌರ್ಯವೂ ವಾಸಿಸುತ್ತಿತ್ತು, ಸದ್ಯಕ್ಕೆ ಸ್ವಾಮಿಗಳು ಇಳಿಕೆಯ ವಯಸ್ಸಿನವರಾಗಿದ್ದರೂ, ಅವರ ಮೈಬಣ್ಣವು ಕಾದ ಬಂಗಾರದಂತೆ ತೇಜಃಪುಂಜವಾಗಿತ್ತು, ಅವರು ಒಮ್ಮೊಮ್ಮೆ ಭರಜರಿಯ ಪೋಷಾಕನ್ನು ಹಾಕಿ ಕೊಂಡು, ಕತ್ತಿ ಢಾಲು, ಬರ್ಚಿ ಮೊದಲಾದವುಗಳನ್ನು ಧರಿಸಿ, ವೀರಾ ಗ್ರೇಸರರಾಗಿ ಶೋಭಿ ಸುತ್ತಿದ್ದರು. ಮತ್ತೊಮ್ಮೆ ಕೇವಿಯ ಲಂಗೋಟಿಯನ್ನು, ಭಿಕ್ಷೆಯ ಜೋಳಿಗೆಯನ್ನೂ ಹಾಕಿಕೊಂಡು, ಸಾಧುವರ್ಯರಾಗಿ ಒಪ್ಪುತ್ತಲಿದ್ದರು ಯಾವ ವೇಷ ದಿಂದಿದ್ದರೂ ಅವರ ತೇಜಸ್ವಿತೆಯಲ್ಲಿ ಕೊರತೆಯಿರುತ್ತಿದ್ದಿಲ್ಲ, ಸಂಭಾಜಿಯ ದುರ್ವರ್ತನವನ್ನು ನೋಡಲಾರದೆಯೋ ಅನ್ನುವಂತೆ ಶ್ರೀಸಮರ್ಥರಾಮದಾಸ ಸ್ವಾಮಿಗಳು ತಮ್ಮ ಅವತಾರ ಸಮಾಪ್ತಿಯನ್ನು ಮಾಡಿದ ಬಳಿಕ, ಅವರ ಪ್ರಸಿದ್ಧ ಶಿಷ್ಯರಾದ ಕಲ್ಯಾಣ, ಉದ್ಧವ ಗೋಸಾವಿ, ರಂಗನಾಥಸ್ವಾಮಿ ಮೊದಲಾದವರು ತಮ್ಮ ಗುರುಗಳು ಆರಂಭಿಸಿದ್ದ ಸ್ವಧರ್ಮ ಸ್ಥಾಪನೆಯ, ಹಾಗೂ ಸ್ವದೇಶೋದ್ಧಾರದ ಕಾರ್ಯವನ್ನು ಸಾಗಿಸಲು ಬದ್ಧಕಂಕಣರಾಗಿದ್ದರು. ಮಹಾತ್ಮರಾದ ಸಮರ್ಥರ ಇಂಥ ಶಿಷ್ಯವೃಂದವು ಮಹಾರಾಷ್ಟ್ರ ವನ್ನೆಲ್ಲ ಸಂಚರಿಸಿ, ಜನರ ತೇಜಸ್ವಿತೆಯನ್ನೂ, ಕಾರ್ಯತತ್ಪರತೆಯನ್ನೂ ಹೆಚ್ಚಿಸದಿದ್ದರೆ, ಮಹಾರಾಷ್ಟ್ರ ದೇಶದ ಸ್ವಾತಂತ್ರ್ಯವು ನಿಶ್ಚಯವಾಗಿ ಮಣ್ಣುಗೂಡಬಹುದಾಗಿತ್ತು!

ತನ್ನ ಸದ್ಗುರುವು ಈ ಪರಿಯಾಗಿ ತನ್ನನ್ನು ಆದರಿಸಿ ಸದ್ಬೋಧ ಮಾಡಲು ಸಿದ್ಧನಾಗಿ ರುವದನ್ನು ನೋಡಿ, ಭಾವಿಕಳಾದ ವಿಸೂಬಾಯಿಯು ತನ್ನನ್ನು ಧನ್ಯಳೆಂದು ತಿಳಿದಳು ಶ್ರೀಗುರುಚರಣದರ್ಶನದಿಂದ ಆಕೆಯ ತಾಪತ್ರಯಗಳೆಲ್ಲ ಅಳಿದುಹೋದವು. ಆಕೆಯು ಸದ್ಗದಿತ ಕಂಠದಿಂದ ತನ್ನ ಗುರುವರ್ಯನ್ನು ಕುರಿತು ಭಕ್ತಿಯ ಸಲಿಗೆಯಿಂದ— "ಶ್ರೀ ಗುರು ದೇವನೇ, ಯಾವ ಪುಣ್ಯಬಲದಿಂದ ಇಂದಿನ ಅಲಭ್ಯವಾದ ದರ್ಶನಲಾಭವು ದೊರಕಿರ ಬಹುದು? ಅತ್ತ ಕಡೆಯ ದೌರ್ಭಾಗ್ಯದಿಂದ ಶ್ರೀ ಸಮರ್ಥರು ಅವತಾರ ಸಮಾಪ್ತಿಯನ್ನು ಮಾಡಿದರು! ಸಮರ್ಥನಾದ ರಂಗನಾಥ ಸ್ವಾಮಿಯೇ, ಇನ್ನು ಈ ಅನಾಥಳನ್ನು ನಿರಾಕರಿಸ ಬೇಡ. ನನ್ನಂಥ ಅಬಲೆಯಿಂದ ಯಾವ ಮಹತ್ಕಾರ್ಯವಾದೀತು? ಆದ್ದರಿಂದ, ಇನ್ನು ಈ ಚರಣವನ್ನು ಸೇವಿಸಿ ದೇಹ ಸಾರ್ಥಕ ಮಾಡಿಕೊಂಡು ಕೃತಾರ್ಥಳಾಗುವೆನು." ಎಂದು ಪ್ರಾರ್ಥಿ ಸುತ್ತಿರಲು, ರಂಗನಾಥ ಸ್ವಾಮಿಯು ವಾತ್ಸಲ್ಯದಿಂದ—"ತಂಗೀ, ವಿಸೂಬಾಯಿ, ಜಾಗರೂ ಕಳಾಗು! ಅವಮ್ಮಾ ನಿನ್ನಿಂದ ಮಹತ್ಕಾರ್ಯವು ಸಾಧಿಸಬೇಕಾಗಿದೆ! ಹಿಂದಕ್ಕೊಮ್ಮೆ ನಿಮ್ಮ ಮಾವನು ಹೀಗೆಯೇ ವೈರಾಗ್ಯವನ್ನು ತಾಳಿ ಶ್ರೀಸಮರ್ಥರ ಚರಣಕ್ಕೆ ತನ್ನ ರಾಜ್ಯವನ್ನು

ಒಪ್ಪಿಸಿ, ಉದಾಶೀನನಾಗಿ ಜಪಮಾಲೆಯನ್ನು ಹಿಡಿದು ಮೋಕ್ಷವನ್ನು ಅಪೇಕ್ಷಿಸಿದ್ದನು; ಆದರೆ ಸಮರ್ಥರು ಅವನನ್ನು ದೇಶೋದ್ಧಾರದ ಕಾರ್ಯದಲ್ಲಿ ಹೇಗೆ ತೊಡಗಿಸಿದರೆಂಬದನ್ನು ನೀನು ಕೇಳಿ ಅರಿಯೆಯಾ? ರಾಜಭಾರ್ಯೆಯೇ, ನಿನ್ನ ಮಾವನಂತೆ ನೀನೊಬ್ಬಳೇ ಮೋಕ್ಷವನ್ನು ಪಡೆಯ ಲಿಚ್ಛಿಸುವೆಯೋ ಏನು? ನೀನು ಹಾಗೆ ಇಚ್ಛಿಸಿದರೆ, ಧರ್ಮಸ್ಥಾಪನೆಯ ಕೀರ್ತಿಯನ್ನು ಯಾರು ಕಾಯ್ದುಕೊಳ್ಳಬೇಕು? ಈ ಪ್ರಸಂಗದಲ್ಲಿ ನೀನು ವಿವೇಕಿಯಾಗತಕ್ಕದ್ದು. ಸಮರ್ಥರು ಶಿವಾಜಿಗೆ ರಾಜ್ಯಕಾರಭಾರದಲ್ಲಿ ತೊಡಗಿಸಿ ಮೋಕ್ಷವನ್ನು ಸಂಪಾದಿಸಿ ಕೊಡಲಿಲ್ಲವೆ? ಗುರ್ವಾಜ್ಞೆಯಂತೆ ನಿನ್ನ ಮಾವನು ಧರ್ಮಸ್ಥಾಪನೆಯ ಹಾಗೂ ರಾಜ್ಯಸ್ಥಾಪನೆಯ ಕಾರ್ಯವನ್ನು ಮಾಡಿ, ಕೀರ್ತಿ–ಮೋಕ್ಷಗಳೆರಡನ್ನೂ ಸಂಪಾದಿಸಲಿಲ್ಲವೇ? ಬ್ರಾಹ್ಮಣರಾದ ನಾವು ಅಸಂಖ್ಯ ದೀನಾನಾಥರ ಸಲುವಾಗಿ ಭಗವತ್ಕೃಪಾರೂಪವಾದ ಸಂಪತ್ತಿನ ಭಾಂಡಾರವನ್ನು ತುಂಬಿ ಇಡುವೆವು. ಕ್ಷತ್ರಿಯರಾದ ನೀವು ದಾವಾಜಿಯಂತೆ ದೀನರಿಂದ ಆ ಭಾಂಡಾರದ ಲೂಟಿಮಾಡಿಸಿ ಜನರ ಉದ್ಧಾರಮಾಡಿರಿ. ಸಮರ್ಥ ರಾಮದಾಸರವರು ಈ ಮಹಾತ್ಕಾರ್ಯವನ್ನು ಆರಂಭಿಸಿ ರುವರು. ನೀವು ಆ ಮಹತ್ಕಾರ್ಯದಲ್ಲಿ ತತ್ಪರರಾಗಿರತಕ್ಕದ್ದು. ಇದೇ ನಿಮ್ಮ ತಪಶ್ಚರ್ಯೆಯು, ಇದೇ ನಿಮ್ಮ ಧರ್ಮವು, ಇಡೀ ನಿಮ್ಮ ಮೋಕ್ಷವು. ತಂಗೀ, ಮೊದಲು ಧರ್ಮವೃದ್ಧಿಯು, ಅದರ ಸಂಗಡಲೇ ರಾಜ್ಯಾಭಿವೃದ್ಧಿಯು. ನಿಷ್ಕಾಮವಂತರಾದ ನಿಮ್ಮ ಕಾರ್ಯವೇ ಇದು. ದೇಶೋದ್ಧಾರದ ಕಾರ್ಯದಲ್ಲಿ ಕುಲ–ಗೋತ್ರಗಳ, ಮಡಿ–ಮೈಲಿಗೆಯ, ಬಂಧುತ್ವ–ಆಪತ್ವದ, ಪ್ರಶ್ನೆಗೆ ಆಸ್ಪದವು ದೊರೆಯ ಲಾರದು. ಈಗ ನಾನು ನಿನ್ನನ್ನು ಆಜ್ಞಾಪಿಸುವದೇ ನಂದರೆ, ಸಮರ್ಥರ ಧರ್ಮೋದ್ಧಾರ– ದೇಶೋದ್ಧಾರಗಳ ಕಾರ್ಯದ ಭಾರವನ್ನು ನೀನು ವಹಿಸು; ರಾಷ್ಟ್ರದ ಸಂಸಾರಕ್ಕೆ ಸನ್ಮುಖಳಾಗು. ಸಮರ್ಥರು ನಿನ್ನ ಪತಿಯಾದ ಶಂಭುವಿಗೆ ಉದಾತ್ತವಾದ ಈ ಕ್ಷಾತ್ರ ಧರ್ಮವನ್ನೇ ಉಪದೇಶಿಸಿದರು; ಆದರೆ ಆತನು ಕೇಳಲಿಲ್ಲ! ಈಗ ಸಂಗಮೇಶ್ವರದಲ್ಲಿರುವ ನಿನ್ನ ಪತಿಯನ್ನು ಹಾದಿಗೆ ಹಚ್ಚುವದಕ್ಕಾಗಿ ರಂಗನಾಥ ಅಡಸುಳೆ ಎಂಬವನು ವಿಶ್ವಪ್ರಯತ್ನ ಮಾಡುತ್ತಿರುವನು. ಸದ್ಬುದ್ಧಿಯನ್ನು ಕೊಡಲು ಶ್ರೀರಾಮನು ಸಮರ್ಥನಿರುವನು. ಪುಣ್ಯವಂತಳೇ, ಧೈರ್ಯಗೆಡ ಬೇಡ. ರಾಜ್ಯ ಸಂರಕ್ಷಣದ ದೃಷ್ಟಿಯಿಂದ ಸಂಭಾಜಿಯು ನನ್ನವನಲ್ಲೆಂದು ನೀನು ತಿಳಿ. ರಾಜ್ಯವು ನಿನ್ನದಿರುತ್ತದೆ, ಮೊದಲು ರಾಜ್ಯದ ಕಲ್ಯಾಣವು, ಆಮೇಲೆ ದೇಹದ ಕಲ್ಯಾಣವು. ಕಾರ್ಯಕರ್ತೃ ವಿನಲ್ಲಿ ಅಲ್ಪಸ್ವಲ್ಪ ಸ್ವಾರ್ಥವು ಇರಲೇಬೇಕಾಗುವದು. ಸ್ವಾರ್ಥವಿಲ್ಲದಿದ್ದರೆ ಪರಮಾರ್ಥವು ಕೈಮಿಾರಿ ಹೋದೀತು; ಆದರೆ ಪರಮಾರ್ಥಕ್ಕಾಗಿ ಸ್ವಾರ್ಥವುಬೇಕು, ಸ್ವಾರ್ಥಕ್ಕಾಗಿ ಪರಮಾರ್ಥವು ಸರ್ವಥಾ ಇರಲಾಗದು. ನನ್ನ ಕಟ್ಟಕಡೆಯ ಹೇಳೋಣವೇನಂದರೆ, ಆಗುವದಾಗಲಿ ನೀನು ಧೈರ್ಯಗೆಡಬೇಡ, ಸಂಕಟಕಾಲದಲ್ಲಿ ಕರ್ತವ್ಯ ಭ್ರಷ್ಟಳಾಗಬೇಡ. ತಾಳಿಕೋಟೆಯ ಯುದ್ಧ ದಲ್ಲಿ ರಾಮರಾಜನು ಮಡಿಯಲು, ಆತನ ಸೈನಿಕರು ಹತವೀರ್ಯರಾಗಿ, ತಮ್ಮ ರಾಜ್ಯ (ವಿಜಯನಗರ) ವನ್ನು ಮುಣುಗಿಸಿಬಿಟ್ಟರು. ಅದೇ ನಿಮ್ಮ ಮಾವನಾದ ಶಿವಾಜಿಯು ಔರಂಗಜೇಬನ ಸೆರೆಯಲ್ಲಿಸಿಕ್ಕಾಗ, ಆತನ ದಂಡಾಳುಗಳಾದ ಮಾವಳರು ಸ್ವಾಮಿ ಭಕ್ತಿಯಿಂದ

ತನ್ನ ಒಡೆಯನ ರಾಜ್ಯವನು ಸಂರಕ್ಷಿಸಿಕೊಂಡರು. ನಿನ್ನ ಪ್ರಜೆಗಳ ಹೃದಯದಲ್ಲಿ ಹೊಸದಾಗಿ ಹುಟ್ಟಿರುವ ಈ ದಿವ್ಯ ಜ್ಯೋತಿಯು ನಿನ್ನ ಹೇತುವನ್ನು ಪೂರ್ಣಮಾಡುವದು. ಈ ಮಹತ್ಕಾರ್ಯದಲ್ಲಿ ನೀನು ಎಂಥ ಅಪಘಾತಕ್ಕೆ ಗುರಿಯಾದರೂ ಹೆದರತಕ್ಕದ್ದಲ್ಲ. ನಿನ್ನ ಕೃತಿಯಿಂದ ನಿನ್ನ ಜನರಿಗೆ ಮಾರ್ಗವನ್ನು ತೋರಿಸು. ಒಮ್ಮೆ ಸಂಗಮೇಶ್ವರಕ್ಕೆ ಹೋಗಿ ನಿನ್ನ ಪ್ರಾಣೇಶ್ವರನಾದ ಶಂಭುವಿನ ಮನಸ್ಸನ್ನು ತಿರುಗಿಸುವ ಪ್ರಯತ್ನಮಾಡಿ ನೋಡು. ದೈವವು ಹೆಳವವು, ಪ್ರಯತ್ನವು ಈಶ್ವರೀ ಸಾಮರ್ಥ್ಯವಿರುತ್ತದೆ! ಶ್ರೀರಾಮನು ನಿನಗೆ ಯಶಸ್ಸನ್ನು ದಯಪಾಲಿಸುವನು! ಸಮರ್ಥರ ವರದ ಹಸ್ತವು ನಿನ್ನ ತಲೆಯ ಮೇಲಿರುತ್ತದೆ. ನೀನು ಶಿವಾಜಿಯ ಜಾತಿವಂತಳಾದ ಸೊಸೆಯಾಗಿರುತ್ತೀ! ಲೋಕವಿಶ್ರುತ ಕಾರ್ಯಕ್ಕಾಗಿ ನೀನು ಟೊಂಕವನ್ನು ಕಟ್ಟು!! ಜಯಜಯ ರಘುವೀರ ಸಮರ್ಥ!!!

## ವಿಲಕ್ಷಣ ಸಾಹಸ

ಈ ಮೇರೆಗೆ ಶ್ರೀಸಮರ್ಥ ರಾಮದಾಸ ಸ್ವಾಮಿಗಳ ಶಿಷ್ಯರು, ಮಹಾರಾಷ್ಟ್ರದ ತುಂಬ ಹರಿಬಿದ್ದು ಅಲ್ಲಲ್ಲಿ ಅವರವರ ಅಧಿಕಾರದಂತೆ ಸದ್ಬೋಧ ಮಾಡುತ್ತಿರುವಾಗ, ಆ ಬೋಧ ದಂತೆ ಭಕ್ತಿಪೂರ್ವಕವಾಗಿ ಜನರು ಆಚರಿಸಿದ ಕಾಲವನ್ನು ಪರಮ ಪವಿತ್ರ ಕಾಲವೆಂದು ನಾವು ಯಾಕೆ ಕರೆಯಬಾರದು? ಆ ಕಾಲದಲ್ಲಿ ಗೋ-ಬ್ರಾಹ್ಮಣರಲ್ಲಿ ಸಂಪೂರ್ಣ ಆದರವಿತ್ತು. ಜಾತಿ ಮತ್ಸರವಿದ್ದಿಲ್ಲ. ಆಗ ಮಹಾತ್ಮನಾದ ಶಿವಪ್ರಭುವು ದೇಹವಿಟ್ಟು ಇನ್ನೂ ಹತ್ತುವರ್ಷ ಪೂರ್ಣ ವಾಗಿದ್ದಿಲ್ಲ. ಸೂರ್ಯನು ಅಸ್ತಂಗತನಾದರೂ, ಆತನ ತೇಜಸ್ಸು ಸಂಧಿಪ್ರಕಾಶದ ರೂಪದಿಂದ ಕೆಲಕಾಲ ಭೂಮಿಯಲ್ಲಿ ಪ್ರಕಾಶಿಸುವದಷ್ಟೇ? ಅದರಂತೆ ಶಿವಾಜಿಯು ಮರಣಹೊಂದಿ ದ್ದರೂ, ಆತನ ದಿವ್ಯವಾದ ಸಹವಾಸದಿಂದ ಧನ್ಯರಾಗಿದ್ದಂಥ ಹಲವು ಕೆಚ್ಚೆದೆಯ ಮರಾಟ ವೀರರ ತೇಜಸ್ಸಿನ ಮಹಾರಾಷ್ಟ್ರವು ಪ್ರಕಾಶಿಸುತ್ತಲಿತ್ತು! ಧನಾಜಿಜಾಧವ, ಸಂತಾಜಿಘೋರ ಪಡೆ, ಪ್ರಲ್ಹಾದರಾವ, ರಾಮಚಂದ್ರಪಂತ ಮೊದಲಾದ ಪುರುಷರತ್ನಗಳ ದಿವ್ಯಜ್ಯೋತಿಯನ್ನು ಪರೀಕ್ಷಿಸುವ ಯೋಗವಿದ್ದರಿಂದಲೇ, ಸಂಭಾಜಿ ಮಹಾರಾಜನಂಥ ವೀರಾಗ್ರೇಸರನು ಅಡ್ಡ ಹಾದಿಯ ಹಿಡಿದನೆಂತಲೂ, ಔರಂಗಜೇಬನಂಥ ಬಲಾಢ್ಯ ಬಾದಶಹನು ಅವಿವೇಕಿಯಾಗಿ ಮರಾಟರ ಸ್ವಾತಂತ್ರ್ಯ ದೇವತೆಯನ್ನು ಹಿಚಿಕಿ ಕೊಲ್ಲಲು ಹಾತೊರೆದನೆಂತಲೂ ಹೇಳ ಬಹುದು. ಮನುಷ್ಯರ ಪರೀಕ್ಷೆಯ ಪ್ರಸಂಗದ ಮೇಲಿಂದಲೇ ಆಗುವದಲ್ಲವೆ?

ಮಹಾರಾಷ್ಟ್ರದ ಸುದೈವದಿಂದಲೋ ದುರ್ದೈವದಿಂದಲೋ ಸಂಭಾಜಿಯು ಸೆರೆಮನೆ ಯಿಂದ ಬಿಡುಗಡೆ ಹೊಂದಿ ತನ್ನ ತಂದೆಯ ಸಿಂಹಾಸನವನ್ನು ಏರಿದನು. ಈ ಕಾಲದಲ್ಲಿ ಸಂಭಾಜಿಯು ಕ್ರೋಧಪರವಶನಾಗಿ ಅವಿಚಾರದಿಂದ ತೋರಿಸಿದ ಕ್ರೂರತನವನ್ನು ವರ್ಣಿಸಲು ಶಕ್ಯವಲ್ಲ. ವರ್ಣಿಸಲಿಕ್ಕೆ ಇದು ತಕ್ಕ ಸ್ಥಳವೂ ಅಲ್ಲ, ಬಹಳ ಹೇಳುವದೇನು?

ಆಗಿನ ಮಹಾರಾಷ್ಟ್ರ ಸರದಾರ ಮಂಡಲದಲ್ಲಿ ಪ್ರಖ್ಯಾತ ವೀರನೆನಿಸಿಕೊಂಡಿದ್ದ. ಹಾಗು ತನ್ನ ಪಟ್ಟಮಹಿಷಿಯಾದ ಏಸೂಬಾಯಿಯು ತವರು ಮನೆಯಾಗಿದ್ದ, ಅದರಂತೆ ಪ್ರತ್ಯಕ್ಷ ಶಿವಾಜಿಯ ಪ್ರಿಯ ಪುತ್ರಿಯಾದ, ಅರ್ಥಾತ್ ತನಗೆ ತಂಗಿಯಾಗಿರುವ ''ರಾಜಕುವರಿ''ಳೆಂಬ ವಳನ್ನು ಕೊಟ್ಟಿದ್ದ ''ಶಿರ್ಕೆ'' ಮನೆತನವನ್ನು ಮಣ್ಣುಗೂಡಿಸಿ ಆ ಮನೆತನದ ಮೇಲೆ ಆ ಕ್ರೂರ ಸಂಭಾಜಿಯು ರಂಟೆಯನ್ನು ಹೊಡೆಸಿದನು! ಶಿರ್ಕೆ ಮನೆತನದ ಈ ಕ್ರೂರ ಕೊಲೆಯು 'ಶಿರ್ಕಾಣ'ವೆಂಬ ಹೆಸರಿನಿಂದ ಇತಿಹಾಸ ಪ್ರಸಿದ್ಧವಾಗಿರುವದು. ರಾಜಕುವರಳ ಸೌಭಾಗ್ಯವು ಬಲವತ್ತವಾದದದ್ದರಿಂದಲೇ, ಆಕೆಯ ಗಂಡನಾದ ಗಣೋಜಿರಾವ ಶಿರ್ಕೆ ಎಂಬವನು ಜೀವದಿಂದ ಬದುಕಿದನು. ಸಂಭಾಜಿಯ ಈ ಕ್ರೂರತನದಿಂದ ದುಃಖಿತನೂ, ಅವಮಾನಿತನೂ ಆದ ಗಣೋಜಿರಾಯನು ಸಂಭಾಜಿಯ ವಂಶವನ್ನು ನಿರ್ವಂಶಮಾಡಿ, ಅಂದರೆ ಭೋಸಲೆ ಮನೆಯನ್ನು ಮಣ್ಣುಗೂಡಿಸಿ ಅದರ ಮೇಲೆ ರಂಟೆಯ ಹೊಡೆದು ಸೇಡು ತೀರಿಸಿಕೊಳ್ಳ ಬೇಕೆಂದು ನಿಶ್ಚಯಿಸಿದನು. ಈ ಘೋರಕಾರ್ಯವನ್ನು ನೆರವೇರಿಸುವದಕ್ಕಾಗಿ ವೀರಾಗ್ರೇಸರನಾದ ಆ ಶಿರ್ಕೆ ಗಣೋಜಿರಾಯನು ದೇಶದ್ರೋಹದ ಪಾಪಕ್ಕೆ ಹೇಸದೆ ಔರಂಗಜೇಬ ಬಾದಶಹನನ್ನು ಕೂಡಿಕೊಂಡನು. ಇದರಂತೆ, ಶಿವಪ್ರಭುವಿನ ರಾಜ್ಯರೂಪವಾದ ಭವ್ಯ ಮಂದಿರಕ್ಕೆ ಆಧಾರವಾದಂಥ ಮಹಾರಾಷ್ಟ್ರ ವೀರರೂಪ ಹಲವು ಸ್ತಂಭಗಳು ಸರಿದುಹೋಗಿ ಆ ಮಂದಿರವು ಶಿಥಲವಾದರೂ, ಅದರ ಎಚ್ಚರವು ಸಂಭಾಜಿಗೆ ಇದ್ದಿಲ್ಲವೆಂದು ಹೇಳ ಬಹುದು. ಆತನ ಈ ಎಚ್ಚರಗೇಡಿತನಕ್ಕೆ ಕಲುಷನ ದುರ್ಬೋಧವೂ, ಮದ್ಯಪಾನದ ಕೆಟ್ಟ ಚಟವೂ, ತುಳಸಿ ಎಂಬ ಸುಂದರಿಯ ನಾಶಕರ ಸಹವಾಸವೂ ತ್ರಿದೋಷದಂತೆ ನಾಶಕಾರಣ ವಾಗಿದ್ದವು. ಇಂಥ ಪ್ರಸಂಗದಲ್ಲಿ ಔರಂಗಜೇಬನಂಥವನಿಗೆ ಸೊಪ್ಪುಹಾಕದೆ, ಮಹಾರಾಷ್ಟ್ರದ ಸ್ವಾತಂತ್ರ್ಯವನ್ನು ಕಾಯ್ದುಕೊಂಡ ಮಹಾರಾಷ್ಟ್ರ ಪುರುಷ ಪುಂಗವರ, ವಿಶೇಷವಾಗಿ ಸ್ತ್ರೀರತ್ನಗಳ ಕೆಚ್ಚೆದೆಯನ್ನು ವರ್ಣಿಸಲಿಕ್ಕೆ ನಮ್ಮ ಬಲಹೀನ ಲೇಖನಿಯು ಸರ್ವಥಾ ಸಮರ್ಥವಾಗಲಾರದು!

ಒಂದುದಿನ ಅರುಣೋದಯದ ಕಾಲವು ಸಮಿಪಿಸಿದೆ ''ಅಲಕಂದಾ'' ''ವಮಣಾ'' ಎಂಬ ಪವಿತ್ರ ನದಿಗಳ ಸಂಗಮದ ಪ್ರವಾಹವು ಗಾಂಭೀರ್ಯದಿಂದ ಹರಿಯುತ್ತಲಿದೆ; ನಾಲ್ಕೂಕಡೆಗೆ ಶಾಂತತೆಯ ಸಾಮ್ರಾಜ್ಯವು ನೆಲೆಗೊಂಡಿದ್ದು, ಸುಗಂಧಯುಕ್ತವಾದ ತಂಗಾಳಿಯ ಸುಳಿದಾಟದಿಂದ ಮನಸ್ಸು ರಮಿಸುತ್ತಲಿದೆ. ಇಂಥ ಮಂಗಲಕರವಾದ ಕಾಲದಲ್ಲಿ ಒಬ್ಬ ಯುವತಿಯು ಸಂಗಮದ ದಂಡೆಯಲ್ಲಿ ಕುಳಿತು, ನದಿಯ ವಿಸ್ತಾರವಾದ ಪಾತ್ರವನ್ನು ಶೂನ್ಯದೃಷ್ಟಿಯಿಂದ ನೋಡುತ್ತಲಿದ್ದಳು. ಆಕೆಯಮನಸ್ಸು ವ್ಯಗ್ರವಾದಂತೆ ಆಕೆಯ ಮುಖ ಲಕ್ಷಣದಿಂದ ತೋರುತ್ತಿತ್ತು, ನದಿಯ ಗಂಭೀರ ಪ್ರವಾಹವಾಗಲಿ, ಅಲ್ಲಿ ಸುಳಿದಾಡುವ ಸುಗಂಧ ಶೀತಲ ವಾಯುವಾಗಲಿ, ನಾಲ್ಕೂಕಡೆಗೆ ಹಿಟ್ಟುಚಲ್ಲಿದ ಹಾಗೆಬಿದ್ದಿದ್ದ ಬೆಳದಿಂಗ ಳಾಗಲಿ, ಸುತ್ತಲಿನ ವನಪ್ರದೇಶವಾಗಲಿ ಆ ಸುಂದರಿಯ ಮನಸ್ಸನ್ನು ರಮಿಸಲಿಕ್ಕೆ ಸಮರ್ಥ ವಾಗಲಿಲ್ಲ. ಬರಬರುತ್ತ ಆಕೆಯ ಮನಸ್ಸು ಹೆಚ್ಚು ಹೆಚ್ಚು ಅಸ್ವಸ್ಥವಾಗುತ್ತ ಹೋಗಿ,

ಕೆಲಹೊತ್ತಿನ ಮೇಲೆ ಆಕೆಯ ಕಣ್ಣೀರ ಎರಡು ಹನಿಗಳು ಆಕೆಯು ಗಲ್ಲಗಳ ಮೇಲೆ ಬಿದ್ದವು. ಬರಬರುತ್ತ ಆ ಕಣ್ಣೀರ ಹನಿಗಳುದುರುವದು ಒತ್ತರವಾಯಿತು. ಮುಂದೆಯಂತು ಆ ಸುಂದರಿಯ ಕಣ್ಣುಗ್ಗಳಿಂದ ನೀರುಗಳು ಧಾರೆಗಟ್ಟಿ ಸುರಿಯುಹತ್ತಿದವು. ಹೀಗೆ ಆ ತರುಣಿಯು ಕೆಲಕಾಲ ಮನದಣಿಯಾಗಿ ಅತ್ತು ಕಡೆಗೆ ಒಂದು ನಿಟ್ಟಿಸಿರುಬಿಡಲು, ಅದು ಹವೆಯಲ್ಲಿ ಭರದಿಂದ ಕೂಡಿಹೋಯಿತು. ಆದರೆ ಹೀಗಾದದ್ದು ಒಂದು ಬಗೆಯಿಂದ ಇದ್ದದ್ದರಲ್ಲಿ ನೆಟ್ಟಗಾಯಿತೆಂತಲೇ ಹೇಳಬೇಕಾಗುವದು. ಯಾಕಂದರೆ, ಉಸುರ್ಗಳೆದ ಬಳಿಕ ಆ ಸುಂದರಿಯು ತನ್ನ ಶೋಕವನ್ನು ನುಂಗಿ ಕೊಂಡು ಕಣ್ಣೀರು ಒರೆಸಿಕೊಳ್ಳುತ್ತ ಎದ್ದುನಿಂತು ರತ್ನಗಳ ಕಂಕಣಗಳಿಂದ ಅಲಂಕೃತವಾದ ಕೈಗಳಿಂದ ತನ್ನ ಮುಡಿಯನ್ನು ಉಚ್ಚುತ್ತ ನದಿಯ ಪ್ರವಾಹದಲ್ಲಿ ಕಾಲಿಟ್ಟಳು!

ಅರುಣೋದಯ ಕಾಲವು, ಪಕ್ಷಿಗಳ ಕಿಲಿಬಿಲಿ ಧ್ವನಿಯು ಕಿವಿಗೆ ಇಂಪಾಗಿ ಕೇಳಹತ್ತಿದೆ; ನಸುಗಾಳಿಯಿಂದ ಉದುರುವ ಪುಷ್ಪರಾಗದಿಂದ ನದಿಯ ನೀರಿನಲ್ಲಿ ಸಣ್ಣ ಸಣ್ಣ ವರ್ತುಳಗಳು ಉಂಟಾಗಹತ್ತಿವೆ; ಇಂಥ ಮನೋಹರ ಕಾಲದಲ್ಲಿ ಸುಂದರಿಯು ಸ್ನಾನಮಾಡಿ, ಸೂರ್ಯ ನಾರಾಯಣನಿಗೆ ಪುಷ್ಪಾಂಜಲಿಯನ್ನಿತ್ತು ದಂಡೆಗೆ ಬಂದು ಶುಭ್ರವಸ್ತ್ರವನ್ನುಟ್ಟು ಕೊಂಡಳು. ಆಕೆಯ ಮಾನಸಿಕ ತಾಪದಲ್ಲಿ ದೈವೀಭಕ್ತಿಯು ಮಿಶ್ರಣವಾಗಿ, ಆಕೆಯ ಮುಖಮುದ್ರೆಯು ಗಂಭೀರವಾಯಿತು. ಆಕೆಯು ನದಿಯ ದಂಡೆಯ ಮೇಲಿರುವ ಸಂಗಮೇಶ್ವರ ದೇವಾಲಯ ವನ್ನು ಬಹು ಭಕ್ತಿಯಿಂದ ಹೊಕ್ಕು "ಶಿವ ಶಂಭೋ, ಹರಹರ" ಎಂದು ಗಂಭೀರವಾಗಿ ನಾಮ ಘೋಷಮಾಡಿ ಭಕ್ತಿಯಿಂದ ಸಂಗಮೇಶ್ವರನನ್ನು ಪೂಜಿಸಿದಳು. ತರುವಾಯ ಆಕೆಯು ಸದ್ಗದಿತ ಕಂಠದಿಂದ ಮತ್ತೆ ಶಿವನಾಮಘೋಷ ಮಾಡಿದಳು. ಆ ಮಂಜುಲ ಘೋಷದ ನಿನಾದವು ಶಿವಾಲಯವನ್ನು ತುಂಬಿ ಹೊರಸೂಸಿ ಗುಡಿಯ ಹೊರಗೆ ಮಂಜುಳವಾಗಿ ಕೇಳತೊಡಗಿತು. ಸ್ವಲ್ಪಹೊತ್ತಿನ ಮೇಲೆ ಆ ಸುಂದರಿಯು ಮೇಲಕ್ಕೆದ್ದು ಕೈಜೋಡಿಸಿ ನಿಂತು ಕೊಂಡು—ಶಂಭೋ, ಉಮಾಪತೇ, ಕರುಣಾಘನಾ! ನಿನ್ನ ಮಾಯಾ ಮಹಿಮೆಯನ್ನು ಯಾರು ಅರಿಯುವರು! ಶಿವ ಪ್ರಭುವಿನ ಕಾಲದಲ್ಲಿ ಅತ್ಯಂತ ತೇಜಸ್ವಿತೆಯಿಂದ ಮಿಂಚಿದ ಮಹಾರಾಷ್ಟ್ರ ರಾಜ್ಯವು ಆತನ ಮಗನಾದ ಸಂಭಾಜಿಯ ಕಾಲದಲ್ಲಿ ತೇಜೋಹೀನವಾಗಿ ನಾಶದ ಪಂಥವನ್ನು ಹಿಡಿಯಬೇಕೆ? ಕಂಗಾಲ ಸ್ಥಿತಿಯನ್ನು ಹೊಂದಿದ ಮಹಾರಾಷ್ಟ್ರ ದೇಶವನ್ನು ಉದ್ಧರಿಸಿದ ಪುಣ್ಯವಂತನ ವಂಶವನ್ನು ನಿರ್ಮೂಲ ಮಾಡಬೇಕೆಂದು ಭೀಮ ಪರಾಕ್ರಮಿಗಳಾದ ಗಣೋಜಿರಾವ ಶಿರ್ಕೆ ಇವರು ಪ್ರತಿಜ್ಞೆ ಮಾಡಿ ಔರಂಗಜೇಬನನ್ನು ಕೂಡಿಕೊಳ್ಳಬೇಕೆ? ಇಂಥ ಅಭದ್ರವಾಣಿಯನ್ನು ಕೇಳುವದಕ್ಕಿಂತ ಕಿವುಡಾಗಿರುವದು ನೆಟ್ಟಗೆ! ಕೃಪಾಘನಾ, ಅಣ್ಣನಾದ ಸಂಭಾಜಿಗೆ ದುರ್ಬುದ್ಧಿಯನ್ನು ಯಾಕೆ ಕೊಟ್ಟೆ? ಆತನು ಶಿರ್ಕೆ ಮನೆತನವನ್ನು ಯಾಕೆ ನಾಶಮಾಡಿದನು? ಗಣೋಜಿರಾಯರು ಸಂಭಾಜಿಯ ವಂಶವನ್ನು ನಾಶಮಾಡಲು ಯಾಕೆ ಪ್ರತಿಜ್ಞೆಯನ್ನು ಮಾಡಿದರು? ಠಾಕುರನ ವೇಷದಿಂದ ನನ್ನ ಪ್ರಾಣ ಪ್ರಿಯನಾದ ಗಣೋಜಿರಾವ ಶಿರ್ಕೆ ಇವರು ಸಂಭಾಜಿಯ ವಾಸಸ್ಥಳವನ್ನು ಗೊತ್ತುಹಚ್ಚು

ವದಕ್ಕಾಗಿ ಇತ್ತ ಕಡೆಗೆ ಬಂದಿದ್ದು, ವೇತಾಳನ ಮಂದಿರದಲ್ಲಿ ಇರುತ್ತಾರೆಂದು ಕೇಳಿದ್ದೇನೆ. ನನ್ನ ಪ್ರಿಯ ಬಂಧುವಾದ ಸಂಭಾಜಿಮಹಾರಾಜ ರವರ ಸಂಬಂಧದಿಂದ ಶ್ರೀಸಮರ್ಥ ರಾಮದಾಸ ಸ್ವಾಮಿಗಳು ಒಮ್ಮೆ ''ಧರ್ಮಭ್ರಷ್ಟನ ನಾಶ ವಾಗುವದು'' ಎಂಬರ್ಥದ ಭವಿಷ್ಯವನ್ನು ಹೇಳಿರುವರು. ''ಹಾಯ್ ಹಾಯ್'' ಬ್ರಹ್ಮನಿಷ್ಠರಾದ ಮಹಾತ್ಮರ ವಾಣಿಯು ಸುಳ್ಳಾಗಬಹುದೇ? ಮೊಗಲರು ಕೊಲ್ಲಾಪುರಕ್ಕೆ ಬಂದಿರುವರು. ಸಂಭಾಜಿ ಮಹಾರಾಜರಂತು ತುಳಸಿಯ ಬಲೆಯಲ್ಲಿಸಿಕ್ಕು ಹುಚ್ಚರಾಗಿ ಹೋಗಿರುವರು. ಅವರನ್ನು ಎಚ್ಚರ ಗೊಳಿಸುವದಕ್ಕಾಗಿ ನಾನು ಮಾಡಿದ ಪ್ರಯತ್ನಗಳೆಲ್ಲ ವ್ಯರ್ಥವಾದವು. ರಂಗನಾಥ ಸ್ವಾಮಿಗಳು ಈಗಲೂ ಅಣ್ಣನಿಗೆ ಪರಿಪರಿಯಾಗಿ ಹೇಳುತ್ತಿದ್ದರೂ ಪರಿಣಾಮವಾಗಲೊಲ್ಲದು. ನನ್ನ ಜೀವವು ನಿಲ್ಲದ್ದರಿಂದ, ಠಾಕುರ ವೇಷಧಾರಿಯಾದ ನನ್ನ ಪತ್ನಿಯನ್ನು ಕಂಡು ಅವರಿಗೆ ನಾಲ್ಕು ಬುದ್ಧಿಯ ಮಾತು ಹೇಳುವ ಸಾಹಸ ಮಾಡತೊಡಗಿರುತ್ತೇನೆ. ಎಲೈ ಅಂಬಿ ಕಾಧವನೇ, ಈ ಕಠಿಣ ಕಾರ್ಯದಲ್ಲಿ ನೀನೇ ಯಶಸ್ಸನ್ನು ಕೊಡಬೇಕು! ನನ್ನ ಸಾಹಸವು ಬೈಲಿಗೆ ಬಿದ್ದರೆ ಪರಿಣಾಮವಾಗಲಿಕ್ಕಿಲ್ಲ, ಕರುಣಾನಿಧೇ, ಲೋಕೇಶ್ವರನಾದ ನಿನ್ನ ಸನ್ನಿಧಿ ಯಲ್ಲಿಯೂ ಭಯದಿಂದ ನನ್ನ ಎದೆಯು ಹಾರುಹತ್ತಿತಲ್ಲ! ದೀನರಕ್ಷಕನೆಂಬ ನಿನ್ನ ಬಿರುದು ವ್ಯರ್ಥವಾಗಬಹುದೇ? ಆಬಾಸಾಹೇಬರ ಪುಣ್ಯವು ಇಷ್ಟರಲ್ಲಿ ಕ್ಷೀಣವಾಗಿರಬಹುದೇ? ನನ್ನನು ಆಬಾಸಾಹೇಬರ ಪ್ರಿಯಪುತ್ರಿಯೆಂದು ಕರೆಯುವ ಜನರ ಅಭಿಮಾನವು ವ್ಯರ್ಥವಾಗ ಬಹುದೇ? ಈ ಮೂವರಲ್ಲಿ ಯಾವದೂ ಶಕ್ಯವಿಲ್ಲದ್ದರಿಂದ ನಾನು ಈಗ ಹೆದರುವದೇಕೆ? ಶಂಭೋ, ಈ ಪಾಮರಳು ನಿನ್ನನ್ನೇ ಮರೆ ಹೊಕ್ಕಿರುವಳು. ಎಂದು ನುಡಿದು ಆ ವೀರಪತ್ನಿಯು ಗರ್ಭಾಲಯದಿಂದ ಹೊರಹೊರಟು ಮಧ್ಯಾಲಯಕ್ಕೆ ಬಂದು ಪುರುಷವೇಶವನ್ನು ಧರಿಸಿದಳು.

ಹೀಗೆ ಧೈರ್ಯಾತಿಶಯದಿಂದ ಪುರುಷವೇಷವನ್ನು ಧರಿಸಿದ ತರುಣಿಯು ಶಿವ ಪ್ರಭುವಿನ ಪ್ರಿಯ ಪುತ್ರಿಯಾದ ರಾಜಕುವರಳೆಂಬದನ್ನು ವಾಚಕರು ಮೇಲಿನ ವಿವರಣದಿಂದ ಸಾಧಾರಣ ವಾಗಿ ತಿಳಿಕೊಂಡಿರಬಹುದು. ರಾಜಕುವರಳ ನಿಲುವಿಕೆ ಸ್ವಲ್ಪ ಎತ್ತರ, ಮೈಕಟ್ಟು ತೆಳ್ಳಗೆ, ಮೈಬಣ್ಣವು ಸುವರ್ಣ ಕೇತಕಿಯಂತೆ ಮನೋಹರವಾದದ್ದು! ಆಕೆಯ ವಿಶಾಲವಾದ ಹರಿಣಾಕ್ಷಿಗಳು ತೇಜಃಪುಂಜವಾಗಿದ್ದವು. ತೊಂಡೆಯ ಹಣ್ಣಿನಂತೆ ಕೆಂಪಾದ ಆಕೆಯ ತುಟಿಗಳೂ, ಆಕೆಯ ಮುಖದಲ್ಲಿ ವ್ಯಕ್ತವಾಗುವ ಕುಲೀನತೆಯ ದಿವ್ಯ ತೇಜಸ್ಸೂ ಮನೋಹರವಾಗಿ ಒಪ್ಪುತ್ತಿದ್ದವು. ಇಂಥ ಲೋಕೋತ್ತರ ಸೌಂದರ್ಯದ ಮೂರ್ತಿಯು ಪುರುಷವೇಷದಿಂದ ಮತ್ತಿಷ್ಟು ಸುಂದರವಾಗಿ ತೋರಹತ್ತಿತು. ಹೀಗೆ ಜಾತಿಯಿಂದ ಅಬಲೆಯೂ, ಕೃತಿಯಿಂದ ಸಬಲೆಯೂರು ಆದ ರಾಜಕುವರಳು ಗುಡಿಯಿಂದ ಹೊರ ಹೊರಟು ''ಹಸ್ತ'' ಪರ್ವತದ ಬುಡಕ್ಕೆ ಬಂದಳು. ಆಗ ಬಾಲ ಸೂರ್ಯನು ಅದೇ ಉದಯ ಹೊಂದಿ ಮೇಲಕ್ಕೇರುತ್ತಲಿದ್ದನು. ರಾಜಕುವರಳು ಬಹು ಕಡಿದಾದ ಆ ಪರ್ವತವನ್ನು ಅಲ್ಲಿ ಹಬ್ಬಿದ ಬಳ್ಳಿಗಳ ಸಹಾಯದಿಂದ ಸರಸರ ಏರಹತ್ತಿದಳು! ಆ ಧೀರಳು ಹೀಗೆ ಪರ್ವತವನ್ನು ಏರಿಹೋಗುವಾಗ ಸುತ್ತುಮುತ್ತು ನೋಡಲು, ಎದುರಿಗೆ ಮಹಾರಾಷ್ಟ್ರರ ವೈಭವದ ಸಾಕ್ಷಿ

ಯಾಗಿ ''ರೇಡಿ'' ಎಂಬ ದುರ್ಗವು ಕಣ್ಣಿಗೆ ಬಿದ್ದಿತು. ಎಡಗಡೆಗೆ ದೂರದಲ್ಲಿ ಸದ್ಯಕ್ಕೆ ಸಂಭಾಜಿಯು ಗುಪ್ತವಾಗಿ ವಾಸಿಸುತ್ತಿದ್ದ, ಸಂಗಮೇಶ್ವರವೆಂಬಲ್ಲಿದ್ದ ಕಣಕೇಶ್ವರ ದೇವಸ್ಥಾನದ ಭವ್ಯ ಮಂದಿರದ ಕಳಸವು ಬಾಲಸೂರ್ಯನ ಕಿರಣಗಳ ಪ್ರಕಾಶದಲ್ಲಿ ಹೊಳೆಯುತ್ತಿತ್ತು. ಇದನ್ನೆಲ್ಲ ನೋಡುತ್ತ ರಾಜಕುವರಳು ಮುಂದಕ್ಕೆ ಸಾಗಿರಲು, ಒಂದು ಭಯಂಕರ ಪಾದ ಗುಹೆಯ ಮುಖವು ಆಕೆಗೆ ತೋರಿತು.

ಗವಿಯು ದೊಡ್ಡದಿದ್ದರೂ, ಅದು ಬಳ್ಳಿಗಳಿಂದ ಮುಚ್ಚಿದ್ದರಿಂದ ಸಣ್ಣದಾಗಿ ಒಂದು ಹೋರಿನಂತೆ ತೋರುತ್ತಿತ್ತು. ಇದಕ್ಕೆ ವೇತಾನಳ ಮಂದಿರವೆನ್ನುತ್ತಿದ್ದರು. ಗುಹೆಯಲ್ಲಿ ಯಾರೂ ಕಾಣಿಸಲಿಲ್ಲ. ರಾಜಕುವರಳು ಮೊದಲು ಗುಹೆಯಲ್ಲಿ ಹಣಿಕಿ ನೋಡಿದಳು. ಆಮೇಲೆ ಒಳಗೆ ಇಳಿದು ಮೆಲ್ಲನೆ ಮುಂದಕ್ಕೆ ಗವಿಯಲ್ಲಿ ಸಾಗಿದಳು. ಆದರೂ ಅಲ್ಲಿ ಆಕೆಗೆ ಜನರ ಸುಳುವು ಕಾಣಿಸಲಿಲ್ಲ. ಗವಿಯಲ್ಲಿ ಕತ್ತಲು ಮುಸುಕಿತ್ತು. ರಾಜಕುವರಳು ಮೆಲ್ಲನೆ ಕೈಕಾಲು ಆಡಿಸುತ್ತ ಮುಂದಕ್ಕೆ ಹೋದಳು. ಅಷ್ಟರಲ್ಲಿ ಜನರು ಸುಳಿದಾಡಿದಂತೆ ಆಕೆಗೆ ಭಾಸವಾಯಿತು. ಆಕೆಯು ನಿಂತುಕೊಂಡು ಸಪ್ಪಳವನ್ನು ಕಿವಿಗೊಟ್ಟು ಕೇಳಲು, ಮತ್ತೆ ಸದ್ದು ಅಡಗಿತು. ಮುಂದಕ್ಕೆ ಹೋಗಲಿಕ್ಕೆ ಹಾದಿಯು ಗೊತ್ತಾಗಲಿಲ್ಲ. ಆಗ ಆಕೆಯು ಇದರಲ್ಲಿ ದರೋಡೇ ಖೋರರೇ ಮೊದಲಾದ ಯಾರಾದರೂ ದುಷ್ಟರು ಇರಬಹುದೆಂದು ತಿಳಿದು ಅಂಜಿ ಹಿಂದಕ್ಕೆ ತಿರುಗಿದಳು. ಆಕೆಯು ಗವಿಯ ಮುಖದಲ್ಲಿ ಬೆಳಕಿನಲ್ಲಿ ಬರಲು ಹಿಂದಿನಿಂದ ಯಾರೋ ಆಕೆಯ ಬೆನ್ನು ಚಪ್ಪರಿಸಿ—''ಯಾಕೆ ತಮ್ಮಾ ತಿರುಗಿ ಹೊರಟೆ?'' ಎಂದು ಪ್ರೇಮದಿಂದ ಪ್ರಶ್ನೆ ಮಾಡಿದನು. ಆಗ ಪುರುಷ ವೇಷಧಾರಿಯಾದ ರಾಜಕುವರಳು ಬೆಚ್ಚಿಬಿದ್ದು ಹಿಂದಕ್ಕೆ ತಿರುಗಿ ನೋಡಲು, ಬೆಳ್ಳಗಿನ ಜಡೆ–ಗಡ್ಡ–ಮೀಸೆಗಳುಳ್ಳ ಒಬ್ಬ ಬೈರಾಗಿಯು ಆಕೆಯ ಕಣ್ಣಿಗೆ ಬಿದ್ದನು. ಆತನ ಭವ್ಯ ರೂಪವನ್ನೂ, ಮುಗುಳುನಗೆಯನ್ನೂ ನೋಡಿ ರಾಜಕುವರಳಿಗೆ ಕೌತುಕವಾಯಿತು. ಆಗ ಆಕೆಯು ಬೈರಾಗಿಯನ್ನು ಕುರಿತು—

ರಾಜಕುವರ—ನಾನು ಠಾಕುರನ ದರ್ಶನಕ್ಕಾಗಿ ಬಂದಿದ್ದೆನು. ಇದೇ ಗುಡ್ಡದಲ್ಲಿ ಅವರು ಇರುವರಲ್ಲವೇ?

ಬೈರಾಗಿ—ಅದೇಕೆ? ಠಾಕುರರ ದರ್ಶನದಿಂದ ನಿನಗಾಗುವ ಪ್ರಯೋಜನವೇನು? ಅವರಲ್ಲಿ ನಿನ್ನ ಕೆಲಸವೇನಿದೆ?

ರಾಜಕುವರ—ಬೇರೆ ಕೆಲಸವೇನು ಇರುವದಿಲ್ಲ. ಪ್ರಪಂಚದ ಎರಡು ಸುಖದುಃಖದ ಮಾತುಗಳನ್ನು ಕೇಳಬೇಕೆಂದು ಮಾಡಿದ್ದೆನು. ಅವರು ಹಿಂದೆ ಆದದ್ದನ್ನೂ, ಮುಂದೆ ಆಗುವದನ್ನೂ ಹೇಳುವರಂತೆ.

ಬೈರಾಗಿ—ತಮ್ಮಾ, ನೀನು ಎಲ್ಲಿಂದ ಬಂದೆ? ನಿನ್ನ ತಾಯಿ–ತಂದೆಗಳು ನೆಟ್ಟಗಿರುವರೆಯೇ?

ರಾಜಕುವರ—ನಾನು ಎಲ್ಲಿಂದ ಬಂದೆನೆಂದು ಕೇಳುವಿರಾ? ನಾನು ಸಂಭಾಜಿ ಮಹಾರಾಜರ ದರ್ಬಾರದೊಳಗಿಂದ ಬಂದೆನು.

ಬೈರಾಗಿ—ಏನಂದಿ? ಸಂಭಾಜಿ ಮಹಾರಾಜರ ದರ್ಬಾರದೊಳಗಿಂದ ಬಂದೆಯಾ? ಬಾ, ಒಳಗೆ ಬಾ. ನಾನೇ ಆ ಠಾಕುರನು. ನಿನ್ನ ಆಯುಷ್ಯದೊಳಗಿನ ಆಗುಹೋಗುಗಳನ್ನೆಲ್ಲ ನಿನಗೆ ಬಿಚ್ಚಿ ಹೇಳುತ್ತೇನೆ ಬಾ.

''ಸಂಭಾಜಿಯ ದರ್ಬಾರದೊಳಗಿಂದ'' ಎಂಬ ಶಬ್ದವನ್ನು ಕೇಳಿದ ಕೂಡಲೆ ಠಾಕುರನಿಗೂ, ಅಲ್ಲಿದ್ದ ಅವನ ಅನುಯಾಯಿಗಳಿಗೂ ಆಶ್ಚರ್ಯವಾಯಿತು. ಅವರು ರಾಜುಕುವರಳನ್ನು ಕರಕೊಂಡು ಗುಹೆಯೊಳಗೆ ಹೋದರು. ಠಾಕುರನು ತನ್ನನ್ನು ಅನುಯಾಯಿಗಳ ಕೈಯಿಂದ ಆ ಪುರುಷವೇಷಧಾರಿಯಾದ ರಾಜಕುವರಳಿಗೆ ತೀರ್ಥ–ಪ್ರಸಾದವನ್ನು ಕೊಡಿಸಿದನು. ಅವನು ಮತ್ತೆ ಆಕೆಯನ್ನು ಕುರಿತು—

ಠಾಕೂರ—ನೀನು ಸಂಭಾಜಿಮಹಾರಾಜರ ದರ್ಬಾರದಿಂದ ಬಂದೆಯಾ? ಮಹಾರಾಜರು ಈಗ ಎಲ್ಲಿ ಇರುವರೆಂಬದು ನಿನಗೆ ಗೊತ್ತದೆಯೆ?

ರಾಜಕುವರ—ಗೊತ್ತಿರದೇನು ಮಾಡೀತು? ಮಹಾರಾಜರ ವಿಷಯವಾಗಿ ಪ್ರಶ್ನೆ ಕೇಳುವದಕ್ಕಾಗಿಯೇ ನಾನು ಬಂದಿದ್ದೇನೆ. ಮಹಾರಾಜರು ಮಹಾಸಂಕಟಕ್ಕೆ ಗುರಿಯಾಗಿರುತ್ತಾರೆ. ತಮ್ಮಂಥ ತ್ರಿಕಾಲ ಜ್ಞಾನಿಗಳು ಅವರ ಸಂಕಟ ನಿವಾರಣ ಮಾಡೀರೆಂದು ತಿಳಿದು ನಾನು ಬಂದಿರುತ್ತೇನೆ.

ಠಾಕೂರ—ಬಂದದ್ದು ಬಹಳ ನೆಟ್ಟಗಾಯಿತು. ಈಗ ನಾನು ನನ್ನ ದೇವತೆಯನ್ನು ಕರೆದು ಮಹಾರಾಜರ ಅರಿಷ್ಟವನ್ನೆಲ್ಲ ಓಡಿಸುತ್ತೇನೆ, ಆದರೆ ಮಹಾರಾಜರು ಇದೇ ಊರ ಹತ್ತರ ಎಲ್ಲಿಯಾದರೂ ಸಮೀಪದಲ್ಲಿ ಇರುವರಲ್ಲವೆ? ಏನು ಮಾಡಲಿ! ಮಹಾರಾಜರ ದುಷ್ಟ ಗ್ರಹಗಳು ನನ್ನನ್ನು ಅವರ ಬಳಿಗೆ ಹೋಗಗೊಡಲೊಲ್ಲವು. ಅವರನ್ನು ನನಗೆ ಮರೆ ಮಾಡಿ ಬಿಟ್ಟವೆ. ಪಾಪ! ಪುಣ್ಯಶಾಲಿಯಾದ ಶಿವಛತ್ರಪತಿಯ ಆ ಭಾಗ್ಯಶಾಲಿ ಪುತ್ರನಿಗೆ ಎಂಥ ಭಯಂಕರ ಸ್ಥಿತಿಯು ಒದಗಿರುವದಲ್ಲ! ವಿಧಿಲಕ್ಷ್ಮಿಯು ಭಯಂಕರ ಅಪಘಾತವನ್ನು ಆತನ ಹಣೆಯಲ್ಲಿ ಬರೆದಿರುವಳು. ಅಕ್ಷರಗಳು ಸ್ಪಷ್ಟವಾಗಿ ನನಗೆ ಕಾಣಸುತ್ತವೆ; ಆದರೆ ಸಂಭಾಜಿಯು ಯಾವ ಚತುಸ್ಸೀಮೆಯಲ್ಲಿರಬಹುದಪ್ಪಾ! ಆತನ ದುಷ್ಟಗ್ರಹಗಳು ಕಗ್ಗತ್ತಲೆಯನ್ನುಂಟುಮಾಡಿ ನನಗೆ ಏನೂ ಕಾಣಗೊಡಲೊಲ್ಲವು! ತಮ್ಮಾ, ನಿನಗೆ ಸಂಭಾಜಿ ಮಹಾರಾಜರು ಇರುವ ಸ್ಥಳವು ಗೊತ್ತಿದ್ದರೆ ಈಗ ಹೇಳಬಾರದೆ?

ರಾಜಕುವರ–ಮಹಾರಾಜ, ನನಗೆ ಗೊತ್ತಿರದೇನು ಮಾಡೀತು? ಮಹಾರಾಜರ ಸಂರಕ್ಷಣಕ್ಕಾಗಿ ನಾವು ಮರಾಟರು ವಿಶ್ವಪ್ರಯತ್ನ ಮಾಡುತ್ತಿರುವೆವು. ನಮ್ಮ ದುಷ್ಟ ವೈರಿಯಾದ ಔರಂಗಜೇಬನು ಮಹಾರಾಜರನ್ನು ಹಿಡಿಯುವದಕ್ಕಾಗಿ ತಕತಕ ಕುಣಿಯುತ್ತಾ ಬರುತ್ತಿರುವನು. ಆತನು ಕೊಲ್ಲಾಪುರದ ತನಕ ಬಂದಿರುವನೆಂದು ಕೇಳುತ್ತೇನೆ. ಠಾಕುರರೇ, ಈ ಮಾತು ನಿಜವೋ ಹೇಗೆಂಬದನ್ನು ನಿಮ್ಮ ಜ್ಞಾನದೃಷ್ಟಿಯಿಂದ ನೋಡಿ ಹೇಳಬಾರದಿರಾ! ಅದರಂತೆ ಗಣೋಜಿರಾವ ಶಿರ್ಕೆ ಎಂಬವರು ಸಂಭಾಜಿ ಇರುವ ಸ್ಥಳವನ್ನು ಗೊತ್ತುಹಚ್ಚುವದಕ್ಕಾಗಿ ಗುಪ್ತವೇಷದಿಂದ ತಿರುಗುವರಂತೆ. ಅವರು ಎಲ್ಲಿ ಇರುತ್ತಾರೆಂಬದನ್ನು ದಯಮಾಡಿ ತಿಳಿದು ಹೇಳಿರಿ. ಹೀಗೆ ಬಾದಶಹನೂ, ಗಣೋಜಿ ಶಿರ್ಕೆಯೂ ಸಂಭಾಜಿಯನ್ನು

ಹುಡುಕುತ್ತಿರುವಾಗ, ಇಷ್ಟು ಜನರ ಸಮಕ್ಷ ಮಹಾರಾಜರಿರುವ ಸ್ಥಳವನ್ನು ನಿಮ್ಮ ಮುಂದೆ ಹ್ಯಾಗೆ ಹೇಳಲಿ? ಛತ್ರಪತಿ ಸಂಭಾಜಿ ಮಹಾರಾಜರು ನನಗೆ ಸಮೀಪದ ಆಪ್ತರಾಗಿರುವರು.

ವೇಷಧಾರಿ ರಾಜಕುವರಳ ಈ ಮಾತುಗಳನ್ನು ಕೇಳಿ ಠಾಕೂರನು ಬೆಪ್ಪಾಗಿ ಆಕೆಯನ್ನು ನೋಡಹತ್ತಿದನು. ಆತನು ಹೀಗೆ ಗಾಬರಿಯಾದದ್ದನ್ನು ನೋಡಿ ರಾಜಕುವರಳ ಸಂಶಯವು ದೃಢವಾಯಿತು. ಇಲ್ಲಿಏನೋ ಮೋಸವಿರುವದರಿಂದ ಕಡೆತನಕ ಪರೀಕ್ಷಿಸಬೇಕೆಂದು ಆಕೆಯು ನಿಶ್ಚಯಿಸಿದಳು. ಸಂಭಾಜಿಯ ಆಪ್ತನಾದ ಈ ತರುಣನಿಂದ ಸಂಭಾಜಿ ಇರುವ ಸ್ಥಳವನ್ನು ಹ್ಯಾಗಾದರೂ ಮಾಡಿ ತಿಳಿದುಕೊಳ್ಳಬೇಕೆಂದು ಠಾಕೂರನು ಹವಣಿಸಿದನು. ಆತನು ತನ್ನ ಶಿಷ್ಯರನ್ನು ಸನ್ನೆಯಿಂದ ಹೊರಗೆ ಕಳಿಸಿ, ರಾಜಕುವರಳನ್ನು ಗುಡ್ಡದ ತುದಿಯ ಮೇಲೆ, ತೀರ ವೇತಾಳನ ಮೂರ್ತಿಯ ಹತ್ತರ ಕರಕೊಂಡು ಹೋಗಿ ಆಕೆಯನ್ನು ಕುರಿತು ಸ್ವಲ್ಪ ಸಂತಾಪ ದಿಂದ—

ಠಾಕುರ—ಎಲಾ ದಿಟ್ಟಹುಡುಗಾ! ನೀನು ಮನುಷ್ಯನೋ ದೆವ್ವವೋ? ಯಾರೆಂಬ ದನ್ನು ಹೇಳು.

ರಾಜಕುವರ—ನಾನು ದೆವ್ವನೇಕೆ ಆಗಲಿ? ಸಂಭಾಜಿಯ ಆಪ್ತನಾದ ಶಿರ್ಕೆ ಇರುತ್ತೇನೆ!

ಠಾಕುರ—ಏನು? ನೀನು ಶಿರ್ಕೆ ಮನೆತನದವನೆ? ಶಿರ್ಕೆ ಮನೆತನದವರಿಗೂ, ಸಂಭಾಜಿಗೂ ಆಪ್ತತ್ವವೇ? ನೀನು ಶಿರ್ಕೆಯು ಸುಳ್ಳು!

ರಾಜಕುವರ—ಅದೇಕೆ ಸುಳ್ಳು? ನಾನು ಗಣೋಜಿರಾವ ಶಿರ್ಕೆಯ ಬಂಧುವು. ಈ ಮಾತು ನಿಶ್ಚಯವು. ಬೇಕಾದರೆ ಗಣೋಜಿಯವರನ್ನು ನನ್ನ ಮುಂದೆ ಕರದುಕೊಂಡು ಬರ್ರಿ, ಅಂದರೆ ನನ್ನ ಗುರುತು ಕೊಡುವೆನು. ಆಣೆಮಾಡಿ ಹೇಳುತ್ತೇನೆ, ನಾನು ಶಿರ್ಕೆ ಮನೆತನ ದವನು ಶಿರ್ಕಾಣ ದೊಳಗಿಂದ ಪಾರಾಗಿ ಉಳಿದವನು!

ಈ ಮಾತುಗಳನ್ನು ಕೇಳಿ ಠಾಕುರನು ಆವೇಶದಿಂದ ರಾಜಕುವರಳನ್ನು ಕುರಿತು— ''ಇಕೋ ನೋಡು. ನನ್ನ ಈ ಗಡ್ಡ-ಮೀಸೆ-ಜಡೆಗಳನ್ನು ಈ ಕಂದರದಲ್ಲಿ ಬಿಸಾಡಿದೆನು. ನೋಡು, ನಾನೇ ಗಣೋಜಿರಾವ ಶಿರ್ಕೆಯು. ಎಲಾ ಅಧಮಾ, ಸಂಭಾಜಿಯ ಆಪ್ತನೆನಿಸುವ ಶಿರ್ಕೆಯು ನೀನಾರು ಹೇಳು? ಶಿರ್ಕೆಕುಲದವನು ಸಂಭಾಜಿಯನ್ನು ದ್ವೇಷಿಸದೆ ಆತನು ಸ್ನೇಹ ವನ್ನು ಬೆಳಸಬಹುದೆ? ಇನ್ನುಮೇಲೆ ನೀನು ಸಂಭಾಜಿಯ ಆಪ್ತತ್ವವನ್ನು ಬಿಟ್ಟೆನೆಂದು ಈ ಖಡ್ಗಮುಟ್ಟಿ ಆಣೆ ಮಾಡು. ಇಲ್ಲದಿದ್ದರೆ ನಿನ್ನ ಹೃದಯವನ್ನು ಈ ಖಡ್ಗವು ಭೇದಿಸಿತೆಂದು ತಿಳಿ. ಅನ್ನಲು, ವೇಷಧಾರಿ ರಾಜಕುವರಳು—ಹಾ! ಇರಿಯಿರಿ ನಿಮ್ಮ ಖಡ್ಗದಿಂದ ಈ ಪಾಪಿಯ ಹೃದಯವನ್ನು ಬೇಗನೇ ಇರಿಯಿರಿ! ಹೀಗೇಕೆ ಗಾಬರಿಯಾಗುವಿರಿ? ಪ್ರಾಣನಾಥ ಈ ಅಭಾಗಿನಿಯನ್ನು ಅದರಂತೆ, ಛತ್ರಪತಿಯ ವಂಶದ ಅಭಿಮಾನವನ್ನು ತಾಳಿರುವ ಈ ವೀರಪತ್ನಿಯನ್ನು ನಿಮ್ಮ ಕೈಮುಟ್ಟಿ ಪರಲೋಕಕ್ಕೆ ಕಳಿಸಿರಿ. ಸಂಭಾಜಿಯು ಶಿರ್ಕಾಣವನ್ನು, ಅಂದರೆ ಶಿರ್ಕೆ ಕುಲದ ಕೊಲೆಯನ್ನು ಪೂರ್ಣಮಾಡಿರುವದಿಲ್ಲ, ಅದನ್ನು ನೀವು ಪೂರ್ಣ ಮಾಡಿರಿ. ಭೋಸಲೆ ಕುಲದ, ಅಥವಾ ಆಬಾಸಾಹೇಬರ ವಂಶದ ಉಚ್ಛೇದವನ್ನು ಔರಂಗಜೇಬ ಬಾದಶಹನು ಮಾಡುವದಕ್ಕಿಂತ ನೀವು ಮಾಡುವದು ನನಗೆ ನೆಟ್ಟಗೆ

ಕಾಣಿಸುತ್ತದೆ! ಹಾ, ಕಥೆ ಮುಗಿಸಿಬಿಡಿರಿ. ಹೀಗೇಕೆ ನಿಮ್ಮ ಮೋರೆಯು ಕಪ್ಪಿಟ್ಟಿತು? ಇದೇನು, ನಿಮ್ಮ ಕೈಯೊಳಗಿದ್ದ ಖಡ್ಗವು ಜಾರಿ ಬಿದ್ದಿತಲ್ಲ! ಹಾಯ್ ಹಾಯ್! ಪ್ರಾಣನಾಥ ಅಂಜರುಕತನವನ್ನು ನೀವೇ ತಿರಸ್ಕರಿಸುತ್ತಿದ್ದಿರಲ್ಲವೆ? ಈಗ ನೀವೇ ಅಂಜು ಬುರುಕರಂತೆ ಏಕೆ ಖಡ್ಗವನ್ನು ಚಲ್ಲಿಕೊಟ್ಟು ನಿಂತುಕೊಂಡಿರಿ? ಮಹಾರಾಷ್ಟ್ರದ ಮೇಲೆ ಸಂಕಟವು ಒದಗಿರುವ ಪ್ರಸಂಗದಲ್ಲಿ ಸಂಭಾಜಿಯ ಮೇಲಿನ ದ್ವೇಷವನ್ನು ನೀವು ಮರೆಯುವ ದಿಲ್ಲವೇ? ಸಂಭಾಜಿಯು ಅವಿಚಾರದಿಂದ ಮಾಡಿದ ನಿಮ್ಮ ವಂಶಜರ ಖೂನಿನ ಸೇಡನ್ನು ಈಗ ಭೋಸಲೆ ಮನೆತನದ ಖೂನಿನಿಂದಲೇ ನೀವು ತೀರಿಸಿಕೊಳ್ಳುವಿರಾ? ಹೀಗೆ ಮಾಡಿದ್ದರೆ ಆತ್ಮದ್ರೋಹದ ಪಾಪಕ್ಕಿಷ್ಟೇ ಅಲ್ಲ, ರಾಜದ್ರೋಹ, ದೇಶದ್ರೋಹಗಳಿಗೂ, ಗುರಿಯಾಗ ಬೇಕಾದೀತು! ತಾವು ನನ್ನ ಪೂಜ್ಯ ದೈವತವು; ನನ್ನ ಪಂಚಪ್ರಾಣವು. ಬಹಳವೇನು? ಇಹಜನ್ಮದ ಸರ್ವಸ್ವವೂ ನೀವೇ; ಆದರೆ ನೀವು ಕರ್ತವ್ಯಭ್ರಷ್ಟರಾಗಿರುತ್ತೀರಿ; ಭಯಂಕರವಾದ ಪಾಪರೂಪ ಕೆಂಡವನ್ನು ತಲೆಯ ಮೇಲೆ ಇಟ್ಟುಕೊಳ್ಳಲಿಕ್ಕೆ ಸಿದ್ಧರಾಗಿರುತ್ತೀರಿ. ಇಂಥ ನಿಮ್ಮನ್ನು ಎಚ್ಚರಗೊಳಿಸುವದು ನನ್ನ ಪತಿವ್ರತಾ ಧರ್ಮವಾಗಿರುವದು; ಇದೇ ನನ್ನ ಪವಿತ್ರವಾದ ಪತಿಸೇವೆ ಯಾಗಿರುವದು. ಪತಿದೇವನೇ, ಇಂಥ ಪ್ರಸಂಗದಲ್ಲಿ ನಿಮ್ಮ ಹಸ್ತಸ್ಪರ್ಶ ಮಾಡದರೆ, ನನ್ನ ನಾಲ್ವತ್ತೆರಡು ಕುಲಗಳು ನರಕಕ್ಕೆ ಇಳಿಯಬಹುದು! ಆದ್ದರಿಂದ, ದೂರ ಸರಿಯಿರಿ. ನನ್ನ ಅಣ್ಣನಾದ ಶಂಭುವನ್ನು ಎಚ್ಚರಗೊಳಿಸುವದಕ್ಕಾಗಿ ನಾನು ಹೋಗುತ್ತೇನೆ. ದುಷ್ಟ ಸಹವಾಸ ದಿಂದ ಸಂಭಾಜಿಯು ಈಗ ವಿವೇಕಭ್ರಷ್ಟನಾಗಿದ್ದರೂ, ಮಹಾರಾಷ್ಟ್ರದ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುವ ಇಚ್ಛೆಯು ಆತನಲ್ಲಿ ಸಂಪೂರ್ಣವಾಗಿರುತ್ತದೆ. ಸರಿಯಿರಿ, ದೂರ ಸರಿಯಿರಿ! ನನ್ನ ಕರ್ತವ್ಯವನ್ನು ನಾನು ಮಾಡಿಬಿಟ್ಟೆನು. ಇನ್ನು ನನಗೆ ಹಾದಿಯನ್ನು ಬಿಡಿರಿ.

ಈ ಮೇರೆಗೆ ನುಡಿದು ಹಿಂದಿರುಗತೊಡಗಿದ್ದ ರಾಜಕುವರಳನ್ನು ಕುರಿತು ಗಣೋಜಿ ಶಿರ್ಕೆಯು—ಯಾರು? ನನ್ನ ಪ್ರಾಣೇಶ್ವರಿಯಾದ ರಾಜಕುವರಳೇನು. ನೀನು! ನಿಲ್ಲು ಹೊರಟೆ ಯೆತ್ತ? ಏನು? ಈ ಕಡಿವಾಡಿಯಿಂದ ಕೆಳಗೆ ದುಮುಕುವಿಯೋ ಏನು? ಛೇ ಛೇ! ರಾಜಕುವರ! ಹಾಗೆ ಮಾಡಬೇಡ. ಬಂದ ಹಾದಿಯಿಂದ ಸುಖವಾಗಿ ಹೋಗು, ನಿನ್ನ ಪತಿಯ ಮಾರ್ಗದಲ್ಲಿ ಮುಳ್ಳುಗಳನ್ನು ಹರಡಿಬಿಡು ಹೋಗು. ಎಂದು ನುಡಿದನು. ಅಷ್ಟರಲ್ಲಿ ರಾಜಕುವರಳು ಎತ್ತೋ ಹೋಗಿಬಿಟ್ಟಳು.

## ಪವಿತ್ರ ಸ್ವಾಮಿನಿಷ್ಠೆ!

ರಾಜಾಪುರದ ಗಂಗಾಕುಂಡದ ದಂಡೆಯಲ್ಲಿ ಇಬ್ಬರು ರಾವುತರು ಸುತ್ತುಮುತ್ತಲಿನ ಶೋಭೆಯನ್ನು ನೋಡುತ್ತ ಕುಳಿತುಕೊಂಡಿದ್ದರು. ಅವರಲ್ಲಿ ಒಬ್ಬನು ರಾಜಕುಲೋತ್ಪನ್ನನಿದ್ದು, ಭರ ಯೌವನದಿಂದ ಒಪ್ಪುತ್ತಲಿದ್ದನು. ಆತನ ನಿಲುವಿಕೆ ಎತ್ತರ, ಮೈಕಟ್ಟು ಧಷ್ಟ–ಪುಷ್ಟ, ಮತ್ತು ಅತ್ಯಂತ ಬಲಯುಕ್ತ; ರೂಪದಿಂದ ಆತನು ಬಹು ಸುಂದರನಾಗಿದ್ದನು. ಆತನ ಮೂಗು

ಸರಳ ಹುಬ್ಬುಗಳು ಧನುಷ್ಯಾಕೃತಿಯವಿದ್ದು, ಸಂದಟತವಾಗಿದ್ದವು. ಆತನು ತೇಜಃಪುಂಜವಾದ ಕೆಂಗಣ್ಣುಗಳಿಂದ ಒಪ್ಪುತ್ತಿದ್ದನು. ಆತನ ಹಣೆಯು ವಿಶಾಲವಿದ್ದು, ಮುಖವು ಪ್ರಫುಲ್ಲಿತವಾಗಿತ್ತು. ಇಂಥ ಆ ತರುಣನು ತಲೆಗೆ ಜರತಾರಿಯ ಹಸರು ಮುಂಡಾಸವನ್ನು ಸುತ್ತಿಕೊಂಡು, ಕೊರಳಲ್ಲಿ ರತ್ನಖಚಿತವಾದ ಒಂಬತ್ತು ಎಳೆಯ ಬಂಗಾರದ ಗೋಪನ್ನು ಹಾಕಿಕೊಂಡಿದ್ದನು. ಆತನು ಶಿಲೇದಾರಿ ಶಿಶ್ತಿನ ಬಿಳಿಯ ಕಿನಿಕಾಪಿನ ಅಂಗಿಯನ್ನು ತೊಟ್ಟುಕೊಂಡು, ಅದೇ ಅರಿವೆಯ ಇಜಾರವನ್ನು ಹಾಕಿಕೊಂಡಿದ್ದನು. ಆತನ ಟೊಂಕಕ್ಕೆ ಬನಾರಸದ ಚಿತ್ರ ವಿಚಿತ್ರವಾದ ಜರತಾರಿಯ ಶಾಲು ಸುತ್ತಿತ್ತು. ರತ್ನ-ಪಚ್ಚ-ಮುತ್ತುಗಳದೊಂದು ಬಹು ಬೆಲೆಯುಳ್ಳ ಕಂಠಿ ಯಿಂದ ಆತನ ವಕ್ಷಸ್ಥಳವು ಮನೋಹರವಾಗಿ ಒಪ್ಪುತ್ತಿತ್ತು. ಆತನ ಎಡಗೈಯಲ್ಲಿ ರತ್ನಖಚಿತ ಗಳಾದ ಸಲಖಡೆಗಳೂ (ಕೈಗಡಗಗಳೂ) ನವರತ್ನಖಚಿತವಾದ ಪೋಚೆಯೂ ಒಪ್ಪುತ್ತಲಿದ್ದವು. ಬೆರಳುಗಳಲ್ಲಿ ಆತನು ವಜ್ರದುಂಗುರಗಳನ್ನು ಇಟ್ಟುಕೊಂಡಿದ್ದನು. ಆತನ ಟೊಂಕದಲ್ಲಿ ರತ್ನಕೆಚ್ಚಿದ ಹಿಡಿಕೆಯದೊಂದು ತೀಕ್ಷ್ಣವಾದ ಜುಹಾಜಿ ಖಡ್ಗವು ಒಪ್ಪುತ್ತಿತ್ತು.

ಈ ರಾಜಕುಲೋತ್ಪನ್ನ ತರುಣನ ಬಳಿಯಲ್ಲಿ ಕುಳಿತುಕೊಂಡಿದ್ದ ಇನ್ನೊಬ್ಬ ಗೃಹಸ್ಥನು ಇಳಿಕೆಯ ವಯಸ್ಸಿನವನಿದ್ದನು. ಆತನ ಉಡಿಗೆ-ತೊಡಿಗೆಗಳು ದರ್ಬಾರಸ್ಥ ಬ್ರಾಹ್ಮಣರ ಉಡಿಗೆ-ತೊಡಿಗೆಗಳಂತೆ ಇದ್ದವು. ಆತನು ಹಸರು ಬಣ್ಣದ ದೊಡ್ಡದೊಂದು ಮುಂಡಾಸ ವನ್ನು ತಲೆಗೆ ಸುತ್ತಿಕೊಂಡು, ಕಂಠೀಕಮಾನಿನ ಉದ್ದನ್ನ ನಿಲುವಂಗಿಯನ್ನು ತೊಟ್ಟು ಕೊಂಡಿದ್ದನು. ಆತನ ಮುಖಮುದ್ರೆಯು ಸ್ವಲ್ಪ ಉಗ್ರವಾದದ್ದು. ಕಣ್ಣುಗಳು ಗಾಂಜಿ ಬಡಕರ ಕಣ್ಣುಗಳಂತೆ ಕೆಂಪಾಗಿದ್ದವು. ಆತನ ಗಡುತರವಾದ ದಟ್ಟಗೂದಲು ಹುಬ್ಬುಗಳ ನಡುವೆ ಒಪ್ಪುವ ತ್ರಿಕೋಣಾಕೃತಿಯಾದ ಸಿಂಧೂರದ ತಿಲಕವು, ಆತನು ಶಕ್ತಿಯ ಉಪಾಸಕ ನೆಂಬುದನ್ನು ವ್ಯಕ್ತಮಾಡುತ್ತಿತ್ತು.

ಇಬ್ಬರೂ ಬಹಳಹೊತ್ತು ಸುಮ್ಮನೆ ಕುಳಿತುಕೊಂಡಿದ್ದರು. ಆ ರಾಜಕುಲೋತ್ಪನ್ನ ತರುಣನ ವೃತ್ತಿಯು ಸ್ವಲ್ಪ ಚಿಂತಾಕ್ರಾಂತವಿದ್ದಂತೆ ತೋರುತ್ತಿತ್ತು. ಆತನು ಒಮ್ಮಿಂದೊಮ್ಮೆ ಆ ಎರಡನೆಯ ಗೃಹಸ್ಥನನ್ನು ಕುರಿತು— ''ಅಮಾತ್ಯಶ್ರೇಷ್ಠನೇ, ಮೊಗಲರು-ಸ್ವತಃ ಔರಂಗಜೇಬ- ಬಾದಶಹನು- ಪ್ರಚಂಡವಾದ ಸೈನ್ಯದೊಡನೆ ನನ್ನನ್ನು ಹಿಡಿಯುವದಕ್ಕಾಗಿ ವಿಜಾಪುರದವರೆಗೆ ಬಂದಿರುವನೆ? ವೈರಿಯು ದಕ್ಷಿಣೋತ್ತರ ಚತುಸ್ಸೀಮೆಯಲ್ಲಿ ತನ್ನ ದಂಡನ್ನು ಪಸರಿಸಿ, ನನ್ನನ್ನು ಬಲಿಯಲ್ಲಿ ಹಿಡಿದಂತೆ ಮಾಡಿರುವನೆ? ಪಸರಿಸು, ದುಷ್ಟ ಬಾದಶಹನೇ, ಯಥೇಚ್ಛವಾಗಿ ನಿನ್ನ ಬಲೆಯನ್ನು ಪಸರಿಸೆಂದು ಆತನಿಗೆ ಹೇಳಬೇಕು. ಆತನು ಕಾಬೂಲದಿಂದ ಕನ್ಯಾಕುಮಾರಿ ಯವರೆಗೆ ತನ್ನ ಹಸರು ನಿಶಾನೆಯನ್ನು ಮೆರಿಸಬೇಕೆಂದು ಮಾಡಿರುವನಂತೆ! ಎಲೈ ಅಲಮಗೀರ ಬಾದಶಹನೇ, ನಿನ್ನ ರಣಮಸ್ತಖಾನನ ಸೊಕ್ಕನ್ನು ಈ ಸಂಭಾಜಿಯು ಮುರಿದದ್ದನ್ನು ಮರೆತೆಯಾ? ನಿನ್ನ ಶೀರಖಾನನ ಮದವನ್ನು ಇಳಿಸಿದವರು ಯಾರು? ಇಷ್ಟರಿಂದ ಈ ಸಂಭಾಜಿಯು ಸುಮ್ಮನಿರುವನೆಂದು ತಿಳಿಯಬೇಡ. ಪ್ರತ್ಯಕ್ಷ ನಿನ್ನ ಮಗನಾದ ಶಹಾಜಾದಾ ಮಹಮ್ಮದ ಅಕಬರನ ಬೆನ್ನುಕಟ್ಟಿ, ದಿಲ್ಲಿಯ ಸಿಂಹಾಸನವನ್ನು

ಹರಣಮಾಡುವೆನು! ಛಾಂದೋಗಾಮಾತ್ಯ, ಅಸೇತು ಹಿಮಾಚಲ, ತನ್ನ ಹಸರು ನಿಶಾನೆ ಯನ್ನು ನಿಷ್ಕಂಟಕವಾಗಿ ಕುಣಿಸಬೇಕೆಂತಲೇ ಅಲಮಗೀರನು ವಿಜಾಪುರ—ಗೋವಳ ಕೊಂಡಗಳ ಬಾದಶಾಹಿಗಳನ್ನು ಮುಣಗಿಸಲು ಟೊಂಕಕಟ್ಟಿರುವನೇನು? ಬಹಳ ನೆಟ್ಟ ಗಾಯಿತು. ಹಾಗೆ ಮಾಡುವದರಿಂದ ಅನಾಯಾಸವಾಗಿ ನನ್ನ ಮಾರ್ಗದೊಳಗಿನ ದೊಡ್ಡ ಎರಡು ಮುಳ್ಳುಗಳನ್ನು ತೆಗೆದು ಚಲ್ಲಿದಂತಾಗುವದು. ಸುರತ, ಗೋವೆ, ಜಿಂಜಿರೆಗಳ ಸಂಸ್ಥಾನ ಗಳನ್ನು ಹೀಗೆಯೇ ಬಾದಶಹನು ಪರಭಾರೆ ಗೊತ್ತಿಗೆ ಹಚ್ಚಿದರೆ ಅವರ ಪಾರಪತ್ಯ ಮಾಡುವ ಶ್ರಮವಾದರೂ ನನಗೆ ಉಳಿಯುವದು. ಜಿಂಜಿರೆಯ ಹಬಸಿಯ ಬೆನ್ನುಕಟ್ಟಿ ಆತನನ್ನು ನನ್ನ ದವಡೆಯೊಳಗಿಂದ ಬಿಡಿಸಬೇಕೆಂದು ಮಾಡಿರುವನೇ? ಮರೆಮೋಸಗಳನ್ನೂ, ಕುಹಕ ತಂತ್ರ ಗಳನ್ನೂ ಸಂಭಾಜಿಯು ಅರಿಯನು. ಮೈಮೇಲೆ ಏರಿಬರುವ ಸಿಂಹದ ಬಾಯಲ್ಲಿ ಕೈ ಕೊಟ್ಟು ಅದನ್ನು ಗುದ್ದಿ ಹಣ್ಣಿಗೆ ತರುವಂತೆ, ಎದುರಾದ ವೈರಿಯನ್ನು ಯುದ್ಧದಲ್ಲಿ ಹಣಿದು ಹಣ್ಣು ಮಾಡುವ ದೊಂದೇ ಸಂಭಾಜಿಗೆ ಗೊತ್ತು! ನನ್ನ ಪರಾಕ್ರಮವು ಜಿಂಜಿರೆಯ ಸಿದ್ದಿಗೂ, ಗೋವೆಯ ಪೋರ್ತುಗೀಜರಿಗೂ ಚನ್ನಾಗಿ ಅನುಭವಕ್ಕೆ ಬಂದಿರುತ್ತದಲ್ಲವೇ? ಚೌಲದ ಮುತ್ತಿಗೆಯ ಅನುಭವವನ್ನು ಗೋವೆಯ ಪೋರ್ತುಗೀಜರು ಇನ್ನು ಮರೆತಿರಲಿಕ್ಕಿಲ್ಲವಲ್ಲವೆ?

ಈ ಮೇರೆಗೆ ನುಡಿದು ಸಂಭಾಜಿಯು ಸ್ವಲ್ಪ ಹೊತ್ತು ಸುಮ್ಮನೆ ಕುಳಿತು, ಮತ್ತೆ ಕಲುಷನನ್ನು ಕುರಿತು—ಅಮಾತ್ಯಶ್ರೇಷ್ಠನೇ, ಏನು ಮಾಡಬೇಕು! ನಮ್ಮ ಮನೆತನದಲ್ಲಿಯೇ ತಾಳಿಲ್ಲವು. ಬಹುಜನ ಮಹಾರಾಷ್ಟ್ರ ವೀರರೂ, ಮುತ್ಸದ್ದಿಗಳೂ ನನ್ನ ಮೇಲೆ ಮನಸ್ಸು ತೆಗೆದು ಬೇರೆ ಮಸಲತ್ತುಗಳನ್ನು ಮಾಡುತ್ತಿರುವರು. ಪ್ರತ್ಯಕ್ಷ ನನ್ನ ಹೆಂಡತಿಯು ನನ್ನ ವಿರುದ್ಧ ಗುಪ್ತಾಲೋಚನೆ ಗಳನ್ನು ಮಾಡುತ್ತಿರುವಳು! ನೀವಿರುವದರಿಂದಲೇ ನಾನು ಈವರೆಗೆ ಬದುಕಿ ರುವೆನು! ಈಗ ನನಗೆ ಯಾವದೂ ಬೇಡಾಗಿದೆ. ನನ್ನ ಜೀವವು ನನಗೆ ಭಾರವಾಗಿ ರುವದು. ಈ ತಾಪವನ್ನು ಸಹಿಸಲಾರೆನು. ಇನ್ನು ಮೇಲೆ ವಿಷಯೋಪ ಭೋಗದಲ್ಲಿ ಕಾಲಹರಣ ಮಾಡುವೆನು. ಈ ಸಂಗಮೇಶ್ವರ ಸ್ಥಾನವು ಗೂಢ ನಿವಾಸವಾಗಿರುವದರಿಂದ, ಇಲ್ಲಿ ವಾಸಮಾಡಿ ಮನಸ್ಸಿಗೆ ಬಂದಂತೆ ವಿಷಯಗಳನ್ನು ಭೋಗಿಸುವೆನು. ನಾನು ಈ ಗುಪ್ತಸ್ಥಾನದಲ್ಲಿದ್ದದ್ದು, ಔರಂಗಜೇಬ ಬಾದಶಹನ ಅಪ್ಪನಿಗೆ ಗೊತ್ತಾಗುವ ಹಾಗಿಲ್ಲ, ತಿರುಗಲಿ, ನನ್ನನ್ನು ಹುಡುಕುತ್ತ ಆತನು ಅಡವಡವಿ ತಿರುಗಲಿ! ಆದರೆ ಪಂಡಿತಶ್ರೇಷ್ಠರೇ, ಭಾಂಡಾರದಲ್ಲಿ ಒಂದು ಕಾಸುಸಹ ಇರುವದಿಲ್ಲವಲ್ಲ! ನಿಮ್ಮ ಬಾಯಿ ಸಾಹೇಬರು (ಏಸೂಬಾಯಿಯವರು) ಸಾಲವಾಯಿತು-ಸಾಲವಾಯಿತು, ಎಂದು ಒದರಿ ಕೊಳ್ಳುತ್ತಿರುವರು. ಪಂಡಿತರೇ, ನಾನು ದಾರಿದ್ರ್ಯಪೀಡಿತನಾದನೇನು? ಯಾವತ್ತೂ ತಾಲೂಕು ಗಳನ್ನು ಗುತ್ತಿಗೆಯಿಂದ ಕೊಟ್ಟು ಹಣವನ್ನು ಕೂಡಿಸಿರಿ? ಆದರೆ ಇದೇ ಹೊತ್ತಿನಲ್ಲಿ ಕೇಸೋಪಂತರಿಗೂ, ಮಹಾಡದ ರಾಜರಿಗೂ ಕಲಹವು ಯಾಕೆ ಉತ್ಪನ್ನವಾಯಿತು? ಈ ಅಂತಃಕಲಹದಿಂದ ಶತೃವಾದ ಬಾದಶಹನಿಗೆ ಲಾಭವಾಗಲಿಕ್ಕಿಲ್ಲವೇ? ಬಾದಶಹನು, ಬಾಟೋರೆಯಿಂದ ಪಲ್ಹಾಳದವರೆಗೆ ಗಿರಿ-ದುರ್ಗಗಳನ್ನು ಸ್ವಾಧೀನಪಡಿಸಿಕೊಂಡಿರುವನೆಂದು ಚಿಟಣೀಸನು ಪತ್ರ ಬರೆದಿರುವನು.

ಕಲುಷನ ಮೇಲೆ ಸಂಭಾಜಿಯ ಸಂಪೂರ್ಣ ವಿಶ್ವಾಸವಿತ್ತೆಂಬದನ್ನು ಮೇಲಿನ ಸಂಭಾಜಿಯ ಮಾತುಗಳಿಂದ ವಾಚಕರ ಮನಸ್ಸಿಗೆ ಹೊಳದಿರಬಹುದು. ಕಲುಷನ ಮಾತಿನಂತೆ ಕುಣಿದು ಸಂಭಾಜಿಯು ತನ್ನ ತಂದೆಯ ಕಾಲದ ಎಷ್ಟೋ ಶ್ರೇಷ್ಠ ಪುರುಷರನ್ನು ಗೊತ್ತಿಗೆ ಹಚ್ಚಿದ್ದನು. ಕೆಲವರು ಕಲುಷನ ಕಾಟವನ್ನು ತಾಳಲಾರದೆ ಸಂಭಾಜಿಯನ್ನು ತೊಲಗಿ ಹೋಗಿದ್ದರು; ಆದರೆ ಸಂಭಾಜಿಯ ವಿಷಯವಾಗಿ ಕಲುಷನ ಮನಸ್ಸು ಶುದ್ಧವಾಗಿದ್ದಿಲ್ಲ. ಆತನು ತನ್ನ ಸೂತ್ರದಂತೆ ಸಂಭಾಜಿಯನ್ನು ಕುಣಿಸುತ್ತ ಆತನನ್ನು ಅಡ್ಡಹಾದಿಗೆ ಹಚ್ಚಿದ್ದನು. ಆತನು ಈಗ ಸಂಭಾಜಿಯನ್ನು ಕುರಿತು—ಮಹಾರಾಜ, ಇಷ್ಟು ಸಂತಾಪಪಡುವದೇಕೆ? ಅಷ್ಟಮ ಸಿದ್ಧಿಯ ಯಕ್ಷಿಣಿಯ ಪ್ರಯೋಗವು ನನಗೆ ಸಾಧ್ಯವಿರುವದಷ್ಟೇ? ಅಣ್ಣಾಜಿ ದತ್ತೋನ ಒಳಸಂಚನ್ನು ಮಂತ್ರಸಿದ್ಧಿಯಿಂದ ನಾನು ಹ್ಯಾಗೆ ದೂರ ಮಾಡಿದೆನೆಂಬದು ನಿಮಗೆ ಗೊತ್ತಿಲ್ಲವೆ? ನಾನು ಇಂದು ಹನ್ನೆರಡು ಕೋಣಗಳನ್ನು ಕಡಿಸಿರುವೆನು. ಅವುಗಳ ಹಸಿ ಚರ್ಮಗಳ ಮೇಲೆ ಕುಳಿತು ನಾನು ಅನುಷ್ಠಾನ ಮಾಡುವೆನು. ದುಡ್ಡಿನ ಸಲುವಾಗಿ ಮಹಾರಾಜರು ಇಷ್ಟು ಚಿಂತೆ ಮಾಡುವದೇಕೆ? ದೊಡ್ಡ ಮಹಾರಾಜರು ಅಮೋಘ ದ್ರವ್ಯ ಸಂಚಯ ಮಾಡಿರುವರು. ಇದಲ್ಲದೆ, ಎಲ್ಲ ಮಾಮಲೇದಾರರ ಬೆನ್ನುಗಳು ಹುಳಿಯುವಂತೆ ಹುಣಸಿಯ ಬರಲುಗಳಿಂದ ಹೊಡಿಸಿ ದುಡ್ಡು ಉಚ್ಚಿಸುವೆನು. ಹವಾಲದಾರ, ಮುದ್ರಾಧಾರಿ, ದೇಶಾಧಿಕಾರಿ ಇವರಿಗೆ ದುಡ್ಡಿನ ತಗಾದಿ ಹಚ್ಚುವೆನು. ಊರಿಗೆ ಊರೇ, ಗುತ್ತಿಗೆಯಿಂದ ಕೊಡುವೆನು. ಆ ಅಣ್ಣಾಜಿ ದತ್ತೋನ ವಸೂಲಿಯ ಕೆಟ್ಟ ಪದ್ಧತಿಯು ನನ್ನ ಮನಸ್ಸಿಗೆ ಬರುವದಿಲ್ಲ. ಕ್ಷಣಮಾತ್ರದಲ್ಲಿ ನಿಮ್ಮ ದುಡ್ಡಿನ ಚಿಂತೆಯನ್ನು ದೂರ ಮಾಡುವೆನು. ಇದಲ್ಲದೆ, ಋಣಾಪನ್ನೋದನಾನುಷ್ಠಾನವು ನನ್ನ ಕೈಯೊಳಗಿನದಿರುತ್ತದೆ.

ತನ್ನ ದುಷ್ಟ ಮಂತ್ರಿಯ ಮಾತಿನೊಳಗಿನ ಘಾತಕತನವನ್ನು ಮನಸ್ಸಿನಲ್ಲಿ ತಾರದೆ, ಸರಳಮನಸ್ಸಿನ ಸಂಭಾಜಿಯು ಆತನನ್ನು ಕುರಿತು—ಪಂಡಿತರಾವ, ಏನು ಮಾಡಬೇಕು? ಬಾದಶಹನು ಸಿಂಹಗಡ, ಪುರಂದರ ಕೋಟೆಗಳ ನಿರುತುಗಟ್ಟಿ ಹೊರಟಿರುವನಂತೆ! ಅಕಲೂಜದವರೆಗೆ ಅವನು ಬಂದಿರುವನೆಂಬ ಸುದ್ದಿಯು ನನಗೆ ಬಂದಿರುತ್ತದೆ. ನನ್ನನ್ನು ಬಂದು ಕೂಡಿದ್ದ ಸುಲತಾನ ಅಕಬರನು ಕೂಡ ಪ್ರಾಣಭಯದಿಂದ ಇಸ್ಪಹಾನಕ್ಕೆ ಹೊರಟು ಹೋದನಲ್ಲವೆ? ವಿಜಾಪುರ–ಗೋವಳಕೊಂಡಗಳ ರಾಜ್ಯಗಳು ಬಾದಶಹನ ಕೈಸೇರಿದವೇನು? ಸುಲ್ತಾನ ಮೋಅಝೀಮನು ನಮ್ಮೊಡನೆ ಕಾದುವದಕ್ಕಾಗಿ ನಾಶಿಕಕ್ಕೆ ಹೋದನೋ? ಯಾತಿಕದ ಖಾನನು ನಮ್ಮ ಕೊಂಕಣದ ಮೇಲೆ ಸಾಗಿಹೋಗಿರುವನೇ? ನನ್ನ ಮೇಲೆ ಹೊಂಚುಹಾಕಿ, ಮುಕರ್ಬಖಾನನು ಅಡಗಿಕೊಂಡು ಕುಳಿತಿರುವನೇನು! ಆಗಲಿ ಎಲ್ಲರಿಗೂ ಒಮ್ಮೆಲೆ ನನ್ನ ಮೇಲೆ ಸಾಗಿಬರಹೇಳಿರಿ. ಈ ಸಂಭಾಜಿಯು ಇನ್ನು ಮುಗಿಲು ಹರಿದುಬಿದ್ದರೂ ಹೆದರುವಹಾಗಿಲ್ಲ. ಕವಿಕುಲಕಲಶ ಪಂಡಿತರಾವ! ನನ್ನ ಅಮೃತವನ್ನು, ನನ್ನ ಚಿಂತೆಯನ್ನು ದೂರಮಾಡುವ ದೈವತವನ್ನು ಸಂಗಡ ತಂದಿರುವಿರಷ್ಟೇ? ಎಂದು ಕೇಳಿದನು. ಅದಕ್ಕೆ ಕಲುಷನು—ಮಹಾರಾಜ, ಅದನ್ನು ನಾನು ಹೇಗೆ ಬಿಟ್ಟುಬಂದೇನು? ಚಂಡ–ಮುಂಡ–ಮಹಿಷಾಸುರರಂತಿರುವ

ವೈರಿಗಳನ್ನು ಸಂಹರಿಸುವದಕ್ಕೆ ಶಕ್ತಿಯ ಪ್ರಸಾದರೂಪವಾದ ಆ ಮದ್ಯವು (ಸರಾಯಿಯು) ಬೇಕೇ ಬೇಕು. ಸಾಲದ, ಹಾಗೂ ಔರಂಗಜೇಬನ ಭಯವು ನಿಮ್ಮನ್ನು ಇಷ್ಟು ಯಾಕೆ ಬಾಧಿಸುತ್ತಿರುವದೋ ತಿಳಿಯದು. ನಿಮಗೆ ಅಸಮಾಧಾನವಾಗುವ ಇಂಥ ಪತ್ರಗಳನ್ನು ಯಾರು ಕಳಿಸುವರೋ ಏನೋ? ಆ ಗುಲಾಮರ ಕೈಗಳನ್ನು ತುಂಡರಿಸಿಬಿಡಬೇಕು. ನನ್ನ ಮಂತ್ರಸಿದ್ಧಿಯ ಮುಂದೆ ಯಾವ ಸಾಲವು ಉಳಿದೀತು? ಯಾವ ವೈರಿಯ ಆಟವು ನಡೆದೀತು? ನೀವು ಈಗ ಈ ಔಷಧೀಜಲದಿಂದ ಮುಖಪ್ರಕ್ಷಾಲನ ಮಾಡಿಕೊಳ್ಳಿರಿ. ಇದರಿಂದ ಶ್ರಮ ಪರಿಹಾರವಾಗುವದು. ಆಮೇಲೆ ಈ ಅಮೃತಪ್ರಾಶನ ಮಾಡಿರಿ.

ಈ ಮೇರೆಗೆ ಇವರ ಸಂಭಾಷಣವು ನಡೆದಿರುವಷ್ಟರಲ್ಲಿ ತುಳಸಿಯು, ಸಂಭಾಜಿಯ ಬಳಿಗೆ ಬರಹತ್ತಿದಳು. ಕಮಲತಾರೂಪಳಾದ ಆ ಪ್ರಮದೆಯು ಅಲೌಕಿಕ ಸೌಂದರ್ಯ ಸಂಪನ್ನಳಾಗಿದ್ದಳು. ಆಕೆಯನ್ನು ಅಪ್ಸರೆಗೆ ಹೋಲಿಸಬಹುದು. ಆಕೆಯನ್ನು ನೋಡಿದ ಕೂಡಲೆ ಸಂಭಾಜಿಯ ಮನಸ್ಸು ಅಸ್ಥಿರವಾಗುತ್ತಿತ್ತು. ಆತನು ತನು-ಮನ-ಧನಗಳಿಂದ ತುಳಸಿಯ ವಶವಾಗಿದ್ದನೆಂದು ಹೇಳಬಹುದು. ಆದರೆ ತುಳಸಿಯು ಮಾತ್ರ ಸಂಭಾಜಿಯ ವಿಷಯವಾಗಿ ಕಪಟಭಾವವನ್ನು ತಾಳಿದ್ದಳು. ಆಕೆಯ ಗಂಡನನ್ನು ಸಂಭಾಜಿಯು ಕೊಂದದ್ದರಿಂದ, ನಾನು ಸಂಭಾಜಿಯನ್ನು ಕೊಲ್ಲಿಸಿ ಸೇಡು ತೀರಿಸಿಕೊಳ್ಳಬೇಕೆಂದು ತುಳಸಿಯು ಅಂತರಂಗದಲ್ಲಿ ಯೋಚಿಸಿದ್ದಳು. ಆ ಘಾತಕಳ ಬಹಿರಂಗದ ಕಪಟ ಪ್ರೇಮಕ್ಕೆ ಸಂಭಾಜಿಯು ಮರುಳಾಗಿ ಹೋಗಿದ್ದನು. ಈಗ ಎದುರಿಗೆ ಬರುವ ತುಳಸಿಯನ್ನು ನೋಡಿ ಆತನ ಮೈಮೇಲಿನ ಎಚ್ಚರವು ತಪ್ಪಿತು. ಆತನು ಕಲುಷನನ್ನು ಕುರಿತು—ಪಂಡಿತಜಿ, ತುಳಸಿಯರ ಕೋಮಲವಾದ ತೊಡೆಯನ್ನು ತಲೆಗಿಂಬು ಮಾಡಿಕೊಂಡ ಹೊರತು ನನಗೆ ಸಮಾಧಾನವಾಗದು ಎಂದನು. ತನ್ನ ಮಂತ್ರವು ದಿನದಿನಕ್ಕೆ ಚನ್ನಾಗಿ ನಾಟುತ್ತ ಬಂದದ್ದನ್ನು ನೋಡಿ, ಕಲುಷನಿಗೆ ಸಮಾಧಾನ ವಾಯಿತು. ಆತನು ಮನಸ್ಸಿನಲ್ಲಿ—ಈತನು ಮದ್ಯ, ಹಾಗೂ ಸ್ತ್ರೀ ವ್ಯಸನದಲ್ಲಿ ಆಸಕ್ತನಾಗುತ್ತ ನಡೆದಿರುವದರಿಂದ, ಬೇಕಾದಾಗ ಈತನ ಮೈಮೇಲಿನ ಎಚ್ಚರತಪ್ಪಿಸಬಹುದು. ಇಂಥ ಹೊತ್ತಿನಲ್ಲಿ ಅಲಮಗೀರನ ಸೈನ್ಯವು ಎಲ್ಲಿ ಹಾಳಾಗಿ ಹೋಗಿರುವದೋ ಯಾರಿಗೆ ಗೊತ್ತು! ಸೆರೆಕುಡಿದು ತುಳಿಸಿಯ ಸಹವಾಸದಲ್ಲಿ ಎಚ್ಚರದಪ್ಪಿ ಬಿದ್ದಿರುವಾಗ ಮುಕರ್ಬಖಾನನು ಅಕಸ್ಮಾತ್ತಾಗಿ ಬಂದರೆ, ಎಷ್ಟು ನೆಟ್ಟಗಾದೀತು! ಓಹೋ, ಇವನಾರು? ಮಹಾರಾಜರ ಎಷ್ಟು ಸನಿಯಕ್ಕೆ ಬಂದನಲ್ಲ! ಮಹಾ ರಾಜರನ್ನು ಆತನ ಹಿತೈಷಿಗಳು ಭೆಟ್ಟಿಯಾಗಿ, ಹಿತೋಪದೇಶ ಮಾಡದಂತೆ ನಾನು ವ್ಯವಸ್ಥೆ ಮಾಡಿರಲು, ಈ ತರುಣ ಮರಾಟನನ್ನು ನನ್ನ ಸೇವಕರು ಯಾಕೆ ಬಿಟ್ಟಿರಬಹುದು? ಈಗ ಈತನನ್ನು ಹೊರಗಿನಿಂದ ಹೊರಗೇ ದೂಡಿಸಿಬಿಡುವೆನು.

ಈ ಮೇರೆಗ ನುಡಿದು ಕಲುಷನು ಆ ತರುಣ ಮಹಾರಾಷ್ಟ್ರ ವೀರನ ಕಡೆಗೆ ಬಂದನು. ಆ ಮಹಾರಾಷ್ಟ್ರ ವೀರನು ಬೇರೆ ಯಾವನೂ ಆಗಿರದೆ, ಸಂಭಾಜಿಯ ತಂಗಿಯೂ, ಗಣೋಜಿ ರಾವ ಶಿರ್ಕೆಯ ಹೆಂಡತಿಯೂ, ಶಿವಪ್ರಭುವಿನ ಪ್ರಿಯಪುತ್ರಿಯೂ ಆದ ರಾಜಕುವರ

ಳಾಗಿದ್ದಳು. ಆಕೆಯು ಹಿಂದೆ ಹೇಳಿದಂತೆ ತನ್ನ ಪತಿಯಾದ ಗಣೋಜಿರಾವ ಶಿರ್ಕೆಯನ್ನು ವೇತಾಳನ ಮಂದಿರದಲ್ಲಿ ಕಠೋರತನದಿಂದ ಬೋಧಿಸಿ ಆತನ ಕೈಗೆ ಸಿಗದೆ, ಮಂಕು ಬೂದಿಯನ್ನು ಹಚ್ಚಿ ಹೊರಟವಳು, ತನ್ನ ಅಣ್ಣನನ್ನು ಎಚ್ಚರಗೊಳಿಸಬೇಕೆಂದು ಇಲ್ಲಿಗೆ ಬಂದಿದ್ದಳು. ಸಂಭಾಜಿಯ ಬಳಿಯಲ್ಲಿ ಆತನಿಗೆ ಹಿತೋಪದೇಶ ಮಾಡುವದಕ್ಕಾಗಿ ರಂಗನಾಥ ಸ್ವಾಮಿಯಂಥ ಸತ್ಪುರುಷರೂ ಪ್ರಸಂಗ ಬಂದಲ್ಲಿ ಜೀವಕ್ಕೆ ಜೀವಕೊಟ್ಟು ತಮ್ಮ ಸ್ವಾಮಿಯ ಪ್ರಾಣವನ್ನು ರಕ್ಷಿಸುವದಕ್ಕಾಗಿ ಖಂಡೋಜಿಯೇ ಮೊದಲಾದ ಶೂರ ಮರಾಟರೂ ಇರುತ್ತಿದ್ದರು. ಅವರಲ್ಲಿ ಖಂಡೋಜಿಯ ಸಹಾಯದಿಂದ ರಾಜಕುವರಳು ಪುರುಷವೇಷಧಾರಿಯಾಗಿ ತನ್ನ ಅಣ್ಣನ ತೀರ ಸಮೀಪಕ್ಕೆ ಬಂದಿದ್ದಳು. ಆದರೆ, ತುಳಸಿಯ ಹೆಗಲಮೇಲೆ ಕೈಹಾಕಿಕೊಂಡು ವಿಲಾಸಮಗ್ನನಾಗಿದ್ದ ಅಣ್ಣನನ್ನು ಕಾಣಲಿಕ್ಕೆ ಧೈರ್ಯವಾಗಲೊಲ್ಲದು. ಇದಲ್ಲದೆ ಅಣ್ಣನನ್ನು ಒಂದು ಪಕ್ಷದಲ್ಲಿ ಕಂಡರೂ ಆ ಎಚ್ಚರ ಗೇಡಿಯು ತನ್ನ ಗುರುತು ಹಿಡಿದು ತನ್ನ ಮಾತು ಕೇಳಿಕೊಳ್ಳುವನೋ ಇಲ್ಲವೋ ಎಂಬ ಸಂಶಯವು ಆಕೆಗೆ ಉತ್ಪನ್ನವಾಯಿತು ಹೀಗೆ ರಾಜಕುವರಳು ಸಂಶಯಗ್ರಸವಾಗಿರುವಷ್ಟರಲ್ಲಿ ಮೇಲೆ ಹೇಳಿದಂತೆ ಕಲುಷನು ಆಕೆಯ ಬಳಿಗೆ ಬಂದು–ಎಲಾ ಯಾವನೋ ನೀನು? ಎತ್ತ ಹೊರಟೆ? ಇದು ಮಹಾರಾಜರ ವಿಲಾಸ ಸ್ಥಾನವೆಂಬದರ ಅರವು ನಿನಗಿಲ್ಲವೆ? ತಿರುಗು ಹಿಂದಕ್ಕೆ, ಇಲ್ಲದಿದ್ದರೆ ಇಲ್ಲಿಯೇ ನಿನ್ನನ್ನು ತುಂಡರಿಸಿ ಚಲ್ಲೇನು?

ಕಲುಷನ ಈ ದರ್ಪೋಕ್ತಿಗಳನ್ನು ಕೇಳಿ ರಾಜಕುವರಳು—''ಮಹಾರಾಜ, ನಾನು ಹೊಸಬನು. ಗೊತ್ತಿಲ್ಲದೆ ಬಂದಿರುತ್ತೇನೆ. ತಿರುಗಿ ಹೋಗುವೆನು'' ಎಂದು ನುಡಿದು, ಮನಸ್ಸಿನಲ್ಲಿ— ಈ ದುಷ್ಟನಿಗೆ ನಾನು ಇಷ್ಟೇಕೆ ಹೆದರಬೇಕು? ಇನ್ನು ದಿಟ್ಟತನದಿಂದ ನಾನು ಅಣ್ಣನ ಬಳಿಗೆ ಹೋಗುವದಾದರೂ ಹ್ಯಾಗೆ? ಅಣ್ಣನು ಎಚ್ಚರದಿಂದಿದ್ದರೂ ಆತನ ಎದುರಿಗೆ ನನ್ನಿಂದ ನಿಲ್ಲೋಣವಾಗದು. ಈಗಂತು ಆತನು ಎರಡು ಅಮಲುಗಳಿಂದ ಎಚ್ಚರದಪ್ಪಿರುವನು. ಆದರೂ ನಾನು ಯಾಕೆ ಹೆದರಬೇಕು? ಅಣ್ಣನು ನನ್ನನ್ನು ಕಡಿದು ಚೂರು ಚೂರು ಮಾಡುವನೋ? ಮಾಡಿದರೆ ಕೆಡುವದೇನು? ಮೊಗಲರು ತೀರ ಸನಿಯಕ್ಕೆ ಬಂದಿರುತ್ತಾರೆಂದು ಅಣ್ಣನ ಮುಂದೆ ಹೇಳಿಬಿಡಲಾ? ಆದರೆ ನನ್ನ ಮಾತುಗಳನ್ನು ಕೇಳಿಕೊಳ್ಳಲಿಕ್ಕೆ ಅಣ್ಣನ ಮನಸ್ಸು ಮಾಡಬಹುದೋ? ಎಲಾ ದೈವವೇ, ಇನ್ನು ನಾನು ಇವರ ಶೃಂಗಾರ ಚೇಷ್ಟೆಗಳನ್ನು ನೋಡಲಾರೆನು! ಎಲ ಎಲಾ, ಪ್ರಾಣನಾಥರು ಇಲ್ಲಿಗೆ ಯಾಕೆ ಬಂದಿರುವರು? ಮಹಾರಾಜರೇ, ಶಿರ್ಕೆ ಕುಲಕ್ಕೆ ಭೂಷಣರಾದವರೇ, ಬೇಡಿರಿ. ಈ ಘೋರ ಪಾಪದ ಸಂಗ್ರಹ ಮಾಡಬೇಡಿರಿ! ಮಹಾರಾಜ, ರಾಜಪುರದ ಶಿರ್ಕೆಯವರಿಗೆ ''ಕುಲಗೇಡಿ''ಗಳೆಂಬ ಕಲಂಕವೊಂದು ಬಂದದ್ದು ಸಾಲದಾಗಿರುವದೋ? ಅಹಾ! ಹೋದರು, ನನ್ನನ್ನು ನೋಡಿ ಅವರು ಎತ್ತೋ ಹೋದರು. ಅಣ್ಣನು ಇರುವ ಸ್ಥಳವು ಇವರಿಗೆ ಗೊತ್ತಾದದ್ದರಿಂದ ಇನ್ನು ಘಾತವಾಯಿತೆಂದು ತಿಳಿಯತಕ್ಕದ್ದು, ಇವರಿಗೆ ದುಷ್ಟ ಕಲುಷನ ಸಹಾಯವಿದ್ದಂತೆ ತೋರುತ್ತದೆ. ದೇವೀ, ಭವಾನೀ, ಈ ಪ್ರಸಂಗದಲ್ಲಿ ಅಣ್ಣನನ್ನು ಎಚ್ಚರಗೊಳಿಸಲಿಕ್ಕೆ ಹೋಗಿಬಿಡುತ್ತೇನೆ.

ಎಂದು ಅಂದುಕೊಳ್ಳುತ್ತಿರಲು ಕಲುಷನು—ಹ! ಜೋಕೆ, ಮತ್ತೆ ಇತ್ತಕಡೆಗೆ ಬರುವೆಯಾ? ಒಂದು ಹೆಜ್ಜೆಯನ್ನು ಮುಂದಕ್ಕೆ ಇಟ್ಟೆಯೆಂದರೆ ಈ ನಾಗಫಣಿಯ ಮೇಲಿಂದ ನಿನ್ನನ್ನು ಕೆಳಗೆ ದೂಡಿಸಿಬಿಟ್ಟೇನು. ನಿಲ್ಲು, ನನ್ನ ಸೇವಕರು ಬರುವವರೆಗೆ ಅಲ್ಲಿಯೇ ನಿಲ್ಲು, ಅನ್ನಲು, ರಾಜಕುವರಳು ಮತ್ತೆ ಮನಸ್ಸಿನಲ್ಲಿ—ಈ ಚಾಂಡಾಲನ ಗುಪ್ತಚಾರರು ನನ್ನನ್ನು ಸೆರೆಯಲ್ಲಿ ಹಾಕಿದರೆ, ಇಲ್ಲಿಯ ಸುದ್ದಿಯನ್ನು ಅತ್ತಿಗೆಯಾದ ಏಸೂಬಾಯಿಗೆ ಹೇಳುವವರು ಯಾರು? ಸುದ್ದಿಯನ್ನು ಹೇಳದಿದ್ದರೆ, ಅಣ್ಣನನ್ನು ಉಳಿಸಿಕೊಳ್ಳಲಿಕ್ಕೆ ಮಹಾರಾಷ್ಟ್ರ ವೀರರು ಇಲ್ಲಿಗೆ ಬರುವ ಬಗೆಯೇನು? ಎಲ! ನನ್ನನ್ನು ತರುಬಲಿಕ್ಕೆ ಕಲುಷನು ತೀರ ಹತ್ತರ ಬಂದನಲ್ಲ? ಎಲಾ ದುಷ್ಟಾ, ನನ್ನನ್ನು ಹಿಡಿಯುವದೆಂದರೆ, ಗಾಳಿಯ ಮೊಟ್ಟೆ ಕಟ್ಟಿದಂತೆಯೇ ಸರಿ? ನೋಡು, ಹೀಗೆಯೇ ಹೋಗುತ್ತೇನೆ. ಸಂತಾಜಿ ಘೋರಪಡೆಯ ಖಡ್ಗಕ್ಕೆ ನಿನ್ನ ಕಂಠದಲ್ಲಿಯ ರಕ್ತದಿಂದ ಅಭಿಷೇಕ ಮಾಡಿಸುವೆನು. ಎಂದು ಅಂದುಕೊಂಡು ರಾಜಕುವರಳು ತಟ್ಟನೆ ಜಾರಿಹೋಗಲು, ಕಲುಷನು ಆಶ್ಚರ್ಯಚಕಿತನಾದನು.

ಸಂಭಾಜಿಯು ದುಷ್ಟ ಸಹವಾಸದಿಂದ ಎಂಥ ಕ್ರೂರತನದಿಂದ ನಡೆದುಕೊಂಡರೂ ಆತನ ಮೇಲಿನ ಮರಾಟರ ಪ್ರೇಮವು ಕಡಿಮೆಯಾಗಲಿಲ್ಲ. ಇದಕ್ಕೆ ಎರಡು ಕಾರಣಗಳುಂಟು. ಸಂಭಾಜಿಯು ತಮ್ಮ ಪರಮ ಪೂಜ್ಯನಾದ ಶಿವಪ್ರಭುವಿನ ಮಗನೆಂಬದು ಒಂದನೆಯ ಕಾರಣವು! ಆ ತಮ್ಮ ಪ್ರಭುಪುತ್ರನು ಸರಳ ಮಾರ್ಗದ ಭೀಮಪರಾಕ್ರಮಿಯಿರುವ ನೆಂಬದು ಎರಡನೆಯ ಕಾರಣವು. ಇವುಗಳಲ್ಲಿ ಮೊದಲನೆಯ ಕಾರಣವು ಮುಖ್ಯವಾದದ್ದು. ಹಿಂದುಗಳಾದ ನಮ್ಮ ಶ್ರದ್ಧಾಲುತ್ವವು ಜಗತ್ಪ್ರಸಿದ್ಧವಾಗಿರುವದು. ದೇವರ ಹೆಸರಿನಿಂದ ಒಂದು ಅಂಕುಡೊಂಕು ಕಲ್ಲನ್ನಿಟ್ಟರೂ ಅದನ್ನು ನಾವು ಭಕ್ತಿಯಿಂದ ಪೂಜಿಸುವೆವು. ಕಲ್ಲಿನ ಸೌಂದರ್ಯ ವಾಗಲಿ, ಅಸೌಂದರ್ಯವಾಗಲಿ, ಗೌರವವಾಗಲಿ, ಅಗೌರವವಾಗಲಿ ನಮ್ಮ ಭಕ್ತಿಗೆ ಕಾರಣ ವಾಗಿರದೆ, ಆ ಕಲ್ಲು ದೇವರೆಂಬ ಆರೋಪವು ನಮ್ಮ ಭಕ್ತಿಗೆ ಕಾರಣವಾಗಿರುವದು. ಅದರಿಂದಲೇ ಶ್ರದ್ಧಾಲುಗಳಾದ ಹಿಂದುಗಳು ದೇವರೆಂದು ತಿಳಿದುಕೊಂಡಿದ್ದ ಸುಂದರ ಮೂರ್ತಿ ಯನ್ನೂ, ಅಂಕಡೊಂಕ ಕಲ್ಲನ್ನೂ ಸರಿಯಾಗಿಯೇ ಭಕ್ತಿಯಿಂದ ಪೂಜಿಸುವರು! ಅವರ ಬಲಾಢ್ಯವಾದ ಈ ಕಲ್ಯಾಣಕರ ಪವಿತ್ರ ಶ್ರದ್ಧಾಲುತ್ವದ ಮಹತ್ವವು ಶ್ರದ್ಧಾಹೀನರ ಮನಸ್ಸಿಗೆ ಹೊಳೆಯಲಾರದು. ಇದೇ ಮಾತು ಸಂಭಾಜಿಯ ಮೇಲಿನ ಸ್ವಾಮಿಭಕ್ತಿಗೆ ಸಂಬಂಧಿಸಿರುತ್ತದೆ! ಸಂಭಾಜಿಯು ತನ್ನ ಪೂಜ್ಯ ಶಿವಪ್ರಭುವಿನ ಮಗನೆಂಬುದೊಂದೇ ಕಾರಣವು ಮಹಾರಾಷ್ಟ್ರ ವೀರರ ಸ್ವಾಮಿಭಕ್ತಿಗೆ ಕಾರಣವಾಯಿತು. ಅವರು ಸಂಭಾಜಿಯ ಕ್ರೂರತನವನ್ನೂ, ಅವನ ದುರ್ವ್ಯಸನ–ದುರಾಚಾರ ಗಳನ್ನೂ ನೋಡದೆ, ಬಹುತರ ಆತನ ಹಿತವನ್ನೇ ಚಿಂತಿಸಿದರು! ಕೇವಲ ಸೇವ್ಯ–ಸೇವಕ ಸಂಬಂಧವುಳ್ಳ ಮಹಾರಾಷ್ಟ್ರ ವೀರರೇ ಸಂಭಾಜಿಯ ವಿಷಯವಾಗಿ ಇಷ್ಟು ಶ್ರದ್ಧೆಯುಳ್ಳವ ರಾಗಿರುವಾಗ, ಸಂಭಾಜಿಯ ಅರ್ಧಾಂಗವೆನಿಸುವ ಏಸೂಬಾಯಿಯು ತನ್ನ ಪತಿಯ ವಿಷಯವಾಗಿ ಎಷ್ಟು ಶ್ರದ್ಧೆಯುಳ್ಳವಳಾಗಿದ್ದಳೆಂಬದನ್ನು ಬರೆಯುವ ಯೋಗ್ಯತೆಯು ನಮ್ಮದಲ್ಲ. ಏಸೂಬಾಯಿಯು ಪತಿಯ ಹಿತಚಿಂತನದಲ್ಲಿ ಕ್ಷೀಣಳಾಗಿದ್ದಳು!

ಆಕೆಯು ಪತಿಗೆ ಸದ್ಬುದ್ಧಿ ಹುಟ್ಟುವದಕ್ಕಾಗಿಯೂ, ಆತನಿಗೊದಗಿದ್ದ ಅರಿಷ್ಟ ನಿವಾರಣವಾಗುವದಕ್ಕಾಗಿಯೂ ಬ್ರಾಹ್ಮಣರಿಂದ ಅನುಷ್ಠಾನಗಳನ್ನು ಮಾಡಿಸಹತ್ತಿದ್ದಳು; ಆದರೆ, ಮಹಾರಾಷ್ಟ್ರದ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುವ ಪವಿತ್ರ ಕಾರ್ಯಕ್ಕಾಗಿ ಆಕೆಯು ಕೆಲ ಬಾಬುಗಳಲ್ಲಿ ಪತಿಯ ಮತಕ್ಕೆ ವಿರುದ್ಧವಾಗಿ ಆಚರಿಸಬೇಕಾಗುತ್ತಿತ್ತು. ಇದು ಪಟ್ಟಮಹಿಷಿ ಯೆಂಬ ಆಕೆಯ ಗೌರವದ ಪದಕ್ಕೆ ಭೂಷಣವೇ ಆಗಿರುವದು. ತನ್ನ ಹೆಂಡತಿಯು ತನ್ನ ವಿರುದ್ಧ ನಡೆಯುವಳೆಂಬದು ಸಂಭಾಜಿಗೆ ಗೊತ್ತಿದ್ದರೂ, ಸದ್ಗುಣ ಮಂಡಿತಳಾದ ತನ್ನ ಆ ಹೆಂಡತಿಯ ಮಾತನ್ನು ಆಗಾಗ್ಗೆ ನಡೆಸುವಾಗ ಆ ಶಿವಪುತ್ರನ ಸರಳ ಹೃದಯವೂ, ಪತ್ನಿಪ್ರೇಮವೂ ಚನ್ನಾಗಿ ವ್ಯಕ್ತವಾಗುತ್ತಿದ್ದವು.

ಔರಂಗಜೇಬನು ತೀರ ಸನಿಯಕ್ಕೆ ಬಂದನೆಂಬ ಸುದ್ದಿಯನ್ನು ಕೇಳಿ ಏಸೂಬಾಯಿಯು ಚಿಂತೆಗೊಳಗಾದಳು. ಪತಿಯ ಪ್ರಾಣರಕ್ಷಣದ ಉಪಾಯಗಳನ್ನು ಚಿಂತಿಸುವಾಗ, ಆಕೆಯು ಹಸಿವೆ ನೀರಡಿಕೆಗಳನ್ನು ಮರೆತಳು. ಈ ಪ್ರಸಂಗದಲ್ಲಿ ತಾನು ಪ್ರತ್ಯಕ್ಷ ಪತಿಯನ್ನು ಕಂಡು ಆತನನ್ನು ಎಚ್ಚರಿಸಲೇಬೇಕೆಂದು ನಿಶ್ಚಯಿಸಿ, ಆಕೆಯು ಪ್ರಲ್ಹಾದಪಂತನನ್ನು ಕರೆಕಳುಹಿದಳು. ಸ್ವಾಮಿನಿಷ್ಠನಾದ ಪ್ರಲ್ಹಾದಪಂತನು ಬರುವವರೆಗೆ ಸ್ವಸ್ಥವಾಗಿ ಕುಳಿತುಕೊಳ್ಳುವದು, ಏಸೂ ಬಾಯಿಯಿಂದ ಆಗಲಿಲ್ಲ. ಆಕೆಯು ಮನಸ್ಸಿನಲ್ಲಿ— ''ಅಹಾ! ಈ ಪ್ರಸಂಗದಲ್ಲಿ ನಮ್ಮ ಮಹಾರಾಷ್ಟ್ರ ಪ್ರಜಾಜನವು ಯಾರಿಗೆ ಶರಣು ಹೋಗಬೇಕು. ಬೇರೆಯವರಿಗೆ ಶರಣು ಹೋದರೆ ಆಗುವದೇನು? ಆ ಪರಮೇಶ್ವರನಿಗೆ! ಭಗವಾನ್ ಏಕಲಿಂಗಜಿ ಶಂಭು ಮಹಾ ದೇವನಿಗೆ! ಆ ರಾಜರ ರಾಜನಿಗೆ ಶರಣು ಹೋಗತಕ್ಕದ್ದು; ಏನು ಮಾಡಲಿ, ನಮ್ಮ ರಾಜ್ಯಕ್ಕೆ ಒದಗಿದ ವಿಪತ್ತನ್ನು ದೂರಮಾಡೇನೆಂದರೆ, ಹತ್ತರ ದ್ರವ್ಯವಿಲ್ಲ! ನನ್ನ ಮನಸ್ಸಿನಲ್ಲಿ ಮೊಗಲರನ್ನು ಹಿಂದಕ್ಕೆ ಸರಿಸಬೇಕು, ಸಂಗಮೇಶ್ವರದಮೇಲೆ ಸಾಗಿಹೋಗಿ, ಪತಿಯ ಗಂಡಾಂತರವನ್ನು ದೂರಮಾಡಬೇಕು, ಎಂಬದು ಕುದಿಯುತ್ತದೆ! ಆದರೆ ಭಂಡಾರದಲ್ಲಿ ಧನವೆಲ್ಲಿದೆ? ಎಂದು ಆಲೋಚಿಸುತ್ತಿರಲು, ಪ್ರಲ್ಹಾದಪಂತನು ಬಂದು ತನ್ನ ಸ್ವಾಮಿನಿ ಯನ್ನು ನಮಸ್ಕರಿಸಿದನು. ಆಗ ಏಸೂಬಾಯಿಯು ಆತನನ್ನು ಕುರಿತು—ಪಂತ ಏನು ಮಾಡಲಿ! ಮೊಗಲರನ್ನು ತರಬುವದಕ್ಕಾಗಿ ಸೈನ್ಯವನ್ನು ಹೊರಡಿಸಬೇಕೆಂದರೆ, ಹತ್ತರ ಧನವಿಲ್ಲ, ಅತ್ತಕಡೆ ಸಂಗಮೇಶ್ವರದಲ್ಲಿ ವಿಷಯಾಸಕ್ತಿಯಲ್ಲಿ ನಿಶ್ಚಿಂತೆಯಿಂದ ಮಹಾರಾಜರ ಕಾಲ ಹರಣವಾಗಹತ್ತಿದೆಯಂತೆ! ಇಂಥ ಕಠಿಣ ಪ್ರಸಂಗದಲ್ಲಿ ಹ್ಯಾಗೆ ನಡೆದುಕೊಳ್ಳಬೇಕೆಂಬದು ನನಗೆ ತಿಳಿಯದಾಗಿದೆ. ನಾನು ಸಂಗಮೇಶ್ವರಕ್ಕೆ ಹೋಗಿಬರಲಾ? ಅವರು ನನ್ನ ಮಾತನ್ನು ಕೇಳಬಹುದೇ? ಮೊನ್ನೆ ಆ ದುಷ್ಟ ಕಲುಷನು ಸಂಗಮೇಶ್ವರದ ಮೊಚ್ಚೆಗಾರ ರಿಂದ ಜುಲುಮೆಯಿಂದ ಹಣ ವಸೂಲಿ ಮಾಡಲಾಗಿ, ಆ ಮೊಚ್ಚೆಗಾರರು ನನ್ನ ಬಳಿಯಲ್ಲಿ ದೂರಿಕೊಂಡರು. ಆಗ ನಾನು ಬಡವರ ಮೇಲೆ ಹೀಗೆ ಒತ್ತಾಯ ಮಾಡುವದು ಸರಿಯಲ್ಲ, ಮೊಚ್ಚೆಗಾರರಿಂದ ರೋಖ ಹಣ ವಸೂಲಮಾಡದೆ, ಅವರಿಲ್ಲಿ ತಯಾರಾಗುವ ಮಾಲಿನ ರೂಪದಿಂದ ವಸೂಲ ಮಾಡಬೇಕೆ''ಂದು ಹುಕುಮು ಮಾಡಿದೆನು. ಆಗ ಮಹಾರಾಜ

ರಿಂದ ನನ್ನ ಹುಕುಮನ್ನೇ ಕಾಯಂ ಮಾಡೋಣವಾಯಿತು! ಅದರಂತೆ ಈಗಾದರೂ ನನ್ನ ಮಾತನ್ನು ಯಾಕೆ ನಡಿಸಲಿಕ್ಕಿಲ್ಲ?

ತನ್ನ ಸ್ವಾಮಿನಿಯ ಈ ಮಾತುಗಳನ್ನು ಕೇಳಿ ಪ್ರಲ್ಹಾದಪಂತನು—ಮಾತೃಶ್ರೀ, ಕಾಲವು ಕಠಿಣವಿರುತ್ತದೇನೋ ನಿಜ. ಆದರೆ, ಸರಕಾರವು ಅಷ್ಟು ಹೆದರುವ ಕಾರಣವಿಲ್ಲ. ಯುದ್ಧದ ಸಿದ್ಧತೆ ಗಾಗಿ ಅಪ್ಪಣೆ ಕೊಡಿಸಬೇಕು. ರಾಮಚಂದ್ರಪಂತನಿಗೆ ಹೇಳಿ ನಾನು ಧನಸಂಗ್ರಹ ಮಾಡಿಸುವೆನು. ಚಿಂತೆಮಾಡಬಾರದು. ಈಗ ಸನ್ನಿಧಿಯಲ್ಲಿ ಬೇಡಿಕೊಳ್ಳುವದೇನೆಂದರೆ,—ಮೊಗಲರು ನಾಲ್ಕೂಕಡೆಯಲ್ಲಿ ಹೊಂಚುಹಾಕಿಕೊಂಡು ಕುಳಿತಿರುವಾಗ, ತಾವು ಸಂಗಮೇಶ್ವರಕ್ಕೆ ಒಬ್ಬರೇ ದಯಮಾಡಿಸುವದು ಹಿತಕರವಲ್ಲ. ಇದರಿಂದ ಮಹಾರಾಷ್ಟ್ರ ರಾಜ್ಯರೂಪವಾದ ರಥವು ಕೆಸರಿನಲ್ಲಿ ಸಿಕ್ಕಹಾಗಾಗಲಿಕ್ಕಿಲ್ಲವೆ ಅನ್ನಲು, ಏಸೂಬಾಯಿಯ—''ಪಂತ, ನಿಮ್ಮ ಮಾತನ್ನು ನಾನು ಅಲ್ಲಗಳೆಯುವದಿಲ್ಲ. ಆದರೆ ಮಹಾರಾಜರು ನನ್ನ ಮಾತನ್ನು ಕೇಳಿ ರಾಯಗಡಕ್ಕೆ ಬಂದರೆ, ಎಂಥ ಅರಿಷ್ಟನಿವಾರಣವಾಗುವದಲ್ಲ? ರಾಯಗಡ ದಿಂದ ಸಂಗಮೇಶ್ವರವಾದರೂ ಎಷ್ಟು ದೂರವಿರುತ್ತದೆ? ಶೀರ ಗುಪ್ತವೇಷದಿಂದ ಅಡ್ಡ ಹಾದಿ ಹಿಡಿದು ಹೋಗಿ ಮಹಾರಾಜರನ್ನು ಕರಕೊಂಡು ಬರುತ್ತೇನೆ. ಪ್ರಲ್ಹಾದಪಂತ, ನನ್ನ ಈ ಕಾರ್ಯಕ್ಕೆ ವಿಘ್ನವನ್ನುಂಟುಮಾಡಬೇಡಿರೆಂದು ಕೈಮುಗಿದು ಬೇಡಿಕೊಳ್ಳುತ್ತೇನೆ. ನೀವು ಶ್ರೇಷ್ಠ ಮುತ್ಸದ್ದಿಗಳಿರುವಿರಲ್ಲವೆ? ರಾಜ್ಯವನ್ನು ಸಂಪಾದಿಸುವದು ನನ್ನೊಬ್ಬಳಿಂದಾಗು ವದಿಲ್ಲವಷ್ಟೆ? ರಾಜ್ಯದ ಬಂದೋಬಸ್ತಿನ ಕೆಲಸವು ಒಬ್ಬಿಬ್ಬರನ್ನು ಅವಲಂಬಿಸಿ ಆಗ ಬಹುದೆ? ನಮ್ಮ ಮಹಾರಾಷ್ಟ್ರದೊಳಗಿನ ಪ್ರತಿಯೊಬ್ಬ ಪುರುಷನೂ, ಸ್ತ್ರೀಯೂ ತಾವು ಅನಭಿಷಿಕ್ತ ರಾಜ–ರಾಣಿಯರೆಂದು ಈಗ ತಿಳಿಯ ಬೇಕಾಗಿರುವದು. ಅಂದಬಳಿಕ ನನ್ನ ಒಬ್ಬಳ ಹಂಗೇನು? ಈ ಹೊತ್ತಿನರವೆಗೆ ಎಷ್ಟೋ ಜನ ರಾಜರು–ಮಹಾರಾಜರು ಆಗಿ ಹೋದರು. ಊರ ಗೌಡ–ಕುಲಕರಣಿಯವರೂ, ದೇಸಾಯಿ– ದೇಶಮುಖ ದೇಶಪಾಂಡೆ ಯವರೂ ಬದಲಾಗಿರುವದಿಲ್ಲ, ಅವರು ಇದ್ದ ಹಾಗೆಯೇ ಇರುವರು. ಇಂಥ ಅತ್ಯುತ್ತಮ ರಾಜ್ಯ ಪದ್ಧತಿಯನ್ನು ನೆಲೆಗೊಳಿಸಿದ ಮುತ್ಸದ್ದಿಗಳಿಗೆ, ಒಬ್ಬ ಏಸೂ ಬಾಯಿಯು ಇಲ್ಲದ ಹಾಗಾದರೆ, ಅಥವಾ ಹಾದಿಯಲ್ಲಿ ಆಕೆಯನ್ನು ಯಾರಾದರೂ ಹಿಡಿದು ಒಯ್ದರೆ, ಸ್ವರಾಜ್ಯ ಸ್ಥಾಪನೆಯ ಕಾರ್ಯವು ನಿಲ್ಲುವದೋ? ಅದರಲ್ಲಿ ನಿಮ್ಮ ಕತೃತ್ವಶಕ್ತಿಯ ಮೇಲೆ ನನ್ನ ಸಂಪೂರ್ಣ ವಿಶ್ವಾಸವಿರುವದು. ಮಾವಂದಿರು ಮರಣೋನ್ಮುಖರಾಗಿರುವಾಗ– ''ಮುರಿದು ಹೋಗುವ ರಾಜ್ಯವನ್ನು ನೀವು ಮೂವರು ಬ್ರಾಹ್ಮಣರು, ಮೂವರು ಮರಾಟರು ಕೂಡಿ ಉಳಿಸಿ ಕೊಳ್ಳುವಿರಿ.'' ಎಂದು ಭವಿಷ್ಯ ಹೇಳಿರುವರಲ್ಲವೆ? ಜಗದಂಬೆ! ಭವಾನೀ, ನನ್ನ ಪ್ರಾಣೇಶ್ವರನ ಸಲುವಾಗಿ ಮಾವನವರು ಹೇಳಿದ ಭವಿಷ್ಯವು ಎಷ್ಟು ಕರ್ಣಕಠೋರ ವಾಗಿರುವದಲ್ಲ! ಆ ಮಹಾತ್ಮನ ವಾಣಿಯು ಅಸತ್ಯವಾದೀತೆಂದು ಯಾವ ಮಹಾರಾಷ್ಟ್ರನು ಭಾವಿಸಬಹುದು? ಕೈಲಾಸವಾಸಿ ಆಬಾಸಾಹೇಬರ ವಾಣಿಗೆ ಅಸತ್ಯದ ಕಲಂಕವು ತಗಲ ಬೇಕೆಂದು ಯಾರು ಇಚ್ಛಿಸಬಹುದು? ಭವಾನೀಮಾತೇ! ಎಂಥ ಪ್ರಸಂಗವಿದು? ನೀನು

ಹೀಗೇ ನನ್ನನ್ನು ಅಳಿಸುವೆಯೋ? ಗಂಗೇ! ಎಲೆ ಪವಿತ್ರಳಾದ ಗಂಗೇ! ನೀನು ನಿಜವಾಗಿ ಪಾವನಳಾಗಿದ್ದರೆ, ಹೀಗೆಯೇ ನನ್ನ ಕಣ್ಣುಗಳಲ್ಲಿ ಸ್ಥಿರವಾಗಿ ವಾಸಿಸಿಬಿಡು. ಅಂದರೆ, ನಾನು ಸಂಗಮೇಶ್ವರಕ್ಕೆ ಹೋಗಿ, ಅವರ ವಕ್ಷಸ್ಥಳದ ಮೇಲೆ ನಿನ್ನ ಪವಿತ್ರ ಜಲದ ಸೇಚನ ಮಾಡುವೆನು. ಅಂದರೆ ನಿನ್ನ ಪವಿತ್ರ ಜಲದ ಸ್ಪರ್ಶದಿಂದ ಅವರ ಬುದ್ಧಿಯು ನಿರ್ಮಲ ವಾದೀತು. ದೇವೀ! ಭಾಗೀರಥೀ! ನಿನ್ನ ಮಗಳ ಈ ಮಾತನ್ನಿಷ್ಟು ನಡೆಸುವೆಯೇನು?

ಏಸೂಬಾಯಿಯ ಈ ಹೃದಯಭೇದಕ ಮಾತುಗಳನ್ನು ಕೇಳಿ ಕಣ್ಣೀರು ಸುರಿಸುತ್ತಿದ್ದ ಸ್ವಾಮಿನಿಷ್ಠ ಪ್ರಲ್ಹಾದಪಂತನು ಕಣ್ಣು ಒರಿಸಿಕೊಳ್ಳುತ್ತ ಸದ್ಗದಿತ ಕಂಠದಿಂದ—ಆಯಿಾ ಸಾಹೇಬ, ಶಾಂತರಾಗಿರಿ! ಶಾಂತರಾಗಿರಿ, ಹೀಗೆ ಧೈರ್ಯಗೆಡಬಾರದು. ತಾವು ಸಂಗಮೇಶ್ವರಕ್ಕೆ ಹೊರಡಲು ಸಿದ್ಧರಾಗಬೇಕು. ನಾನು ಪ್ರತಿಜ್ಞಾಪೂರ್ವಕವಾಗಿ ಹೇಳುತ್ತೇನೆ, ನಿಮ್ಮ ಪಶ್ಚಾತ್ ನಾನು ರಾಜ್ಯವನ್ನು ರಕ್ಷಿಸುವೆನು. ಅಗೋ ನೋಡಿರಿ! ಥೋಟೆ ಸರಕಾರವು ಇತ್ತಕಡೆಗೆ ಬರುತ್ತದೆ. ಬಾಲರವಿಯಂತೆ ಇದ್ದ ಈ ಶಿವಾಜಿಯನ್ನು ನಮ್ಮ ಬಳಿಯಲ್ಲಿ ಬಿಟ್ಟುಹೋಗಿರಿ. ಆತನೇ ನಮ್ಮ ಸ್ವಾಮಿಯು, ಆತನ ಸೇವೆಯನ್ನು ನಾವು ಏಕನಿಷ್ಠೆಯಿಂದ ಮಾಡುವೆವು. ಎಂದು ನುಡಿಯಲು, ಏಸೂಬಾಯಿಯು ತನ್ನ ಮಗನನ್ನು ನೋಡಿ, ಪ್ರಲ್ಹಾದಪಂತನ ವ್ಯರ್ಥವಲ್ಲದ ಉದ್ಗಾರವನ್ನು ಕೇಳಿ ತನ್ನ ದುಃಖಾಶ್ರುಗಳು ಆನಂದಾಶ್ರುಗಳಲ್ಲಿ ರೂಪಾಂತರಿಸುತ್ತಿರಲು ಸದ್ಗದಿತ ಕಂಠದಿಂದ ಆಕೆಯು ಪ್ರಲ್ಹಾದ ಪಂತ ನನ್ನು ಕುರಿತು—''ಅಹಾ! ಇಂಥ ಸ್ವಾಮಿನಿಷ್ಠ ಮರಾಠೆಶಾಹಿಯ ಸೇವಕರಿದ್ದ ಬಳಿಕ ಇತ್ತಕಡೆಗಿದ್ದ ದ್ರೋಣಗಿರಿಯನ್ನು ಅತ್ತಕಡೆಗೆ ಬೇರು ಸಹಿತ ಕಿತ್ತು ಒಗೆಯುವುದರಲ್ಲಿ ಸಂಶಯವೇನು? ಎಂದು ನುಡಿದು, ಹತ್ತರ ಬಂದ ಮಗನನ್ನು ಕುರಿತು—ಬಾಳಾ ಬಾಳಾ! ಬಂದೆಯಾ ಬಾ ಬಾ. ಹೀಗೆ! ಇತ್ತಕಡೆಗೆ ಬಾ! ಹೂ? ಅನ್ನು ನೋಡೋಣ ''ಬರೇಸತ್ಯ ಬೋಲಾಯ ಥಾತಥ್ಯಚಾಲಾ'' ದಿನಾಲು ಸಂಜೆ ಮುಂಜಾವುಗಳಲ್ಲಿ ಈ ಶ್ಲೋಕವನ್ನು ಅಂದು ತೋರಿಸಬೇಕು. ಆದರೆ ಪಂತ, ಈತನಿಗೆ ಕುದುರೆಯ ಮೇಲಿಂದ ಭಾಲೆಯನ್ನು ಒಗೆಯುವದಕ್ಕೆ ಕಲಿಸಿದಿರೇನು? ಬಾಳಾ ಇಂದು ಗೋಡೆಗೆ ಗೂಟವನ್ನು ಬಡಿದುಕೊಂಡು, ಅದನ್ನು ಗುರಿಯಿಟ್ಟು ಗುರಿಹೊಡಿಯುವ ರೂಢಿಯನ್ನು ಮಾಡಿದೆಯಾ?

ತಾಯಿಯ ಈ ಮಾತುಗಳನ್ನು ಕೇಳಿ ಬಾಲಶಿವಾಜಿಯು ತೊದಲು ನುಡಿಗಳಿಂದ—ಅವ್ವಾ ಈಗ ನೋಡು, ಗುರಿಹೊಡೆದು ಒಂದು ಕಬ್ಬಿಣಂಚನ್ನು ಒಡೆದೆನು. ನಾಳೆ ನೋಡು ಪಂತರು ನನ್ನ ಕಣ್ಣು ಕಟ್ಟುತ್ತಾರಂತೆ. ಆಗ ನಾನು ಗುರಿ ಹೊಡೆಯುವೆನು! ಅನ್ನಲು, ವಾತ್ಸಲ್ಯ ದಿಂದ ಏಸೂಬಾಯಿಯು—ಶಾಬಾಸ್ ಬಾಳಾ, ನೀನು ಸಾಮಾನ್ಯಳಲ್ಲ, ಪ್ರತ್ಯಕ್ಷ ದಿಲ್ಲಿಯ ಸಿಂಹಾಸನಕ್ಕೆ ಕೈ ಹಾಕಬಹುದು! ಪಂತರೇ, ಆಗಲಿ ಹಾಗಾದರೆ, ಸಂಗಮೇಶ್ವರಕ್ಕೆ ರಂಗನಾಥ ಸ್ವಾಮಿ ಅಡಸೂಳೆ ಇವರಿಗೂ, ಖಂಡೋಜಿ ಚಿಟನೀಸನಿಗೂ ನಾನು ಮಹಾರಾಜರ ದರ್ಶನ ಕ್ಕಾಗಿ ಬರುತ್ತೇನೆಂದು ತಿಳಿಸಿರಿ. ನನ್ನ ಮೇಣೆಯನ್ನು ಸಿದ್ಧಗೊಳಿಸಿರಿ. ಚಿಂತಿಸುವದೇಕೆ? ನಮ್ಮೆಲ್ಲರನ್ನು ರಕ್ಷಿಸಲು ಆಬಾಸಾಹೇಬರ ಪುಣ್ಯವೂ, ಶ್ರೀ ಅಂಬಾಬಾಯಿಯ ಕೃಪೆಯೂ ಸಮರ್ಥವಾಗಿರುವವು.

# ವಜ್ರಾಘಾತ

ದೈವವು ಪ್ರತಿಕೂಲವಾಗಿರುವ ಕಾಲದಲ್ಲಿ ಅಮೃತವು ಕೂಡ ವಿಷವಾಗುತ್ತದೆಂಬ ಮಾತು ಸುಳ್ಳಲ್ಲ. ಪ್ರತ್ಯಕ್ಷ ತಂಗಿಯಾದ ರಾಜಕುವರಳು ಸಂಭಾಜಿಗೆ ಬುದ್ಧಿ ಹೇಳಹೋಗಿ ನಿರಾಶೆಪಟ್ಟಳು. ಅತ್ತ ರಂಗನಾಥಸ್ವಾಮಿಯೂ ಕೈ ಊರಿದನು. ಈಗ ಪ್ರತ್ಯಕ್ಷ ಪಟ್ಟ ಮಹಿಷೆಯು ಅತ್ಯಂತ ಸಾಹಸಮಾಡಿ ಬುದ್ಧಿಯ ಹೇಳಹೋದದ್ದು ಕೂಡ ವ್ಯರ್ಥವಾಗುವ ಪ್ರಸಂಗ ಬಂದಿತು. ಅಂದಬಳಿಕ ಸಂಭಾಜಿಯ ದುರ್ದೈವವನ್ನು ಎಷ್ಟೆಂದು ವರ್ಣಿಸಬೇಕು? ಔರಂಗಜೇಬನ ಗುಪ್ತಚಾರರು ಅಲ್ಲಲ್ಲಿ ಪಸರಿಸಿದ್ದರು. ವಿಶೇಷವಾಗಿ ರಾಯಗಡದಲ್ಲಿ ನಡೆದ ಸಂಗತಿಗಳನ್ನು ಆಗಾಗ್ಗೆ ತಿಳಿಸುವಂತೆ ಆತನ ಕಟ್ಟಪ್ಪಣೆಯಾಗಿತ್ತು. ಆತನ ಚಾರರು ಏಸೂಬಾಯಿಯು ಸಂಗಮೇಶ್ವರಕ್ಕೆ ಹೊರಟದ್ದನ್ನು ಯಾವ ಮಾಯದಿಂದ ಗೊತ್ತುಹಚ್ಚಿದ್ದರೋ ಯಾರಿಗೆ ಗೊತ್ತು! ಆ ಸುದ್ದಿಯು ಕೂಡಲೆ ಔರಂಗಜೇಬನ ಕಿವಿಗೆ ಮುಟ್ಟಿತು. ತಂತ್ರಗಾರನಾದ ಆ ಬಾದಶಹನು ಕೂಡಲೆ ಹಾದಿಯಲ್ಲಿ ಅಲ್ಲಲ್ಲಿ ಕಾದಿರುವಂತೆ ತನ್ನ ದಂಡಿನ ಗುಂಪುಗಳಿಗೆ ಅಪ್ಪಣೆ ಮಾಡಿದನು. ಭೊಸಲೆ ಮನೆತನವನ್ನು ಮಣ್ಣುಗೂಡಿಸಲು ಪ್ರತಿಜ್ಞೆ ಮಾಡಿರುವ ಗಣೋಜಿರಾವ ಶಿರ್ಕೆಯು ಈ ಕಾರ್ಯದಲ್ಲಿ ಮುಖಂಡನಾಗಿದ್ದನು. ಹೀಗೆ ಬಾದಶಹನು ಬಲೆಯೊಡ್ಡಿ, ಬೇಟೆಯು ಯಾವಾಗ ಬಿದ್ದೀತೆಂದು ಹಾದಿಯನ್ನು ನೋಡುತ್ತಿರಲು, ಇತ್ತ ಸ್ವಾಮಿಭಕ್ತರಾದ ಮರಾಟವೀರರು ಅದಕ್ಕೆ ಪ್ರತೀಕಾರವನ್ನುಂಟು ಮಾಡಿ, ತಮ್ಮ ಸ್ವಾಮಿನಿಯನ್ನು ಬದುಕಿಸಿಕೊಂಡರು. ಬಾದಶಹನು ಒಡ್ಡಿದ ಈ ಬಲೆಯ ಸುದ್ದಿಯು ಸಂಗಮೇಶ್ವರದಲ್ಲಿ ಖಂಡೋಜಿ ಚಿಟಣೀಸನಿಗೆ ಗೊತ್ತಾಯಿತು. ಆ ಸ್ವಾಮಿನಿಷ್ಠನು ಬಹಳ ಅಸಮಾಧಾನಪಟ್ಟು ಚಿಂತಾಮಗ್ನನಾದನು. ತನ್ನ ಸ್ವಾಮಿನಿಯನ್ನು ಈ ಕುತ್ತಿನೊಳಗಿಂದ ಪಾರುಮಾಡುವದಕ್ಕಾಗಿ ಅವನು ಬಗೆಬಗೆಯ ಆಲೋಚನೆಗಳನ್ನು ಹಾಕಹತ್ತಿದನು! ಆದರೆ ಒಂದೂ ಬಗೆಹರಿಯಲೊಲ್ಲದು. ಆತನು ಮನಸ್ಸಿನಲ್ಲಿ ತನ್ನನ್ನು ಕುರಿತು—ಎಲೆ, ಖಂಡೋಜೀ, ನಿನ್ನ ಸ್ವಾಮಿನಿಯು ಸಂಕಟಕ್ಕೆ ಗುರಿಯಾಗಿರಲು, ನೀನು ಎಣಿಕೆ ಹಾಕುತ್ತ ಸುಮ್ಮನೆ ಕುಳಿತುಕೊಳ್ಳಬಹುದೆ? ಏಳು, ನಿನ್ನ ಪೂರ್ವಜರ ಕೀರ್ತಿಗೆ ಒಪ್ಪುವಂತೆ ನಿನ್ನ ಸ್ವಾಮಿನಿಯ ಸಲುವಾಗಿ ಆತ್ಮಯಜ್ಞ ಮಾಡಲು ಸಿದ್ಧನಾಗು. ಆಬಾಸಾಹೇಬರ–ಮಹಾರಾಷ್ಟ್ರ ರಾಜ್ಯ ಸ್ಥಾಪಕರ–ಶಿವಪ್ರಭುವಿನ ಸೊಸೆಯನ್ನು—ನಿನ್ನ ತಾಯಿಯನ್ನು ಸಂಕಟದ ಪರ್ವತದಿಂದ ಇಳಿಸುವದಕ್ಕಾಗಿ ನಿನ್ನ ಮೈದೊಗಲ ಏಣಿಯನ್ನು ಸಿದ್ಧಮಾಡು. ಏಳು, ಖಂಡೋಬಾ, ನಡೆ ಏಳು, ಎಂದು ಏನೇನೋ ಒಟಗುಟ್ಟುತ್ತ, ಒಮ್ಮೆಲೆ ಸಂತೋಷದಿಂದ ಚಪ್ಪಾಳೆ ಬಾರಿಸಿ, ತನ್ನ ಮನೆಗೆ ಹೋಗಿ ತನ್ನ ಅಬಚಿಯ ಮಗಳಾದ ಸಂತೂಬಾಯಿಯನ್ನು ಕರೆದನು. ಕೂಡಲೆ ಸಂತೂ ಬಾಯಿಯು ಬರಲು, ಖಂಡೋಬನು ಆಕೆಯನ್ನು ಕುರಿತು—

ಖಂಡೋಬ—ತಂಗೀ, ನಿನ್ನ ಅಬಚಿಯ ಮಗನ ಮೇಲೆ ನೀನು ಒಂದು ಉಪಕಾರ ಮಾಡುವೆಯಾ?

ಸಂತೂಬಾಯಿ—ಅಣ್ಣಾ, ಈ ಸಂಶಯವು ನಿನಗೆ ಯಾಕೆ ಹುಟ್ಟಿತು? ನಿನ್ನ ತಂಗಿಯೆನಿಸಿಕೊಂಡು, ನಾನು ನಿನ್ನ ಮಾತನ್ನು ಮೀರಬಹುದೆ?

ಖಂಡೋಬ—ತಂಗೀ, ಅಂಥ ಇಂಥ ಕೆಲಸವಲ್ಲ; ನಿನ್ನ ಅಣ್ಣನ ಮಾತಿನ ಮೇಲಿಂದ ನೀನು ಪ್ರಾಣಕ್ಕೆ ಎರವಾಗಬೇಕಾಗಿರುವದು!

ಸಂತು—ಅಣ್ಣಾ, ಅದಾವ ದೊಡ್ಡ ಮಾತೆಂದು ಇಷ್ಟು ಸಂಕೋಚಪಡುತ್ತಿ? ಹೇಳಬಾರದೇ? ನಿನ್ನ ಅಪ್ಪಣೆಗಿಂತ ನನ್ನ ಜೀವವೇನು ನನಗೆ ಪ್ರಿಯವಾದದ್ದಲ್ಲ!

ಖಂಡೋಬ—ಪ್ರಾಣಕೊಡುತ್ತೇನೆಂದು ಬಾಯಿಂದ ಸ್ಪಷ್ಟವಾಗಿ ಹೇಳಬಾರದೆ?

ಸಂತು—ಹೂ! ಕೊಡುತ್ತೇನೆ, ಅಣ್ಣಾ ನಿನ್ನ ಸಲುವಾಗಿ ನನ್ನ ಪ್ರಾಣವನ್ನು ಕೊಡುತ್ತೇನೆ. ಹೇಳು, ಇನ್ನುಮೇಲೆ ಹೇಳಲಿಕ್ಕೆ ಅಡ್ಡಿಯೇನಿದೆ?

ಖಂಡೋಬ—ಶಾಬಾಸ್! ತಂಗೀ, ನೀನು ಪ್ರಾಣಾಹುತಿಯನ್ನು ನಿನ್ನ ಅಣ್ಣನ ಸಲುವಾಗಿ ಕೊಡಬೇಡ. ನಿನ್ನ ಪ್ರೀತ್ಯಾಸ್ಪದವಾದ ಮಹಾರಾಷ್ಟ್ರ ದೇಶದ ಸಲುವಾಗಿ ಕೊಡು. ಶಿವಪ್ರಭುವು ಮಹಾರಾಷ್ಟ್ರ ರಾಜ್ಯ ಸ್ಥಾಪಕನಲ್ಲವೆ? ಆತನ ಸಲುವಾಗಿ ಈಗ ನೀನು ಪ್ರಾಣವನ್ನು ಕೊಡಬೇಕಾಗಿರುವದು. ತಂಗೀ, ನಿನ್ನ ಉಪಕಾರವನ್ನು ನಾನು ಎಷ್ಟು ಹೊಗಳಲಿ? ಬಹು ಶ್ರಮಪಟ್ಟರೂ ನಿಮ್ಮ ಅಣ್ಣನಿಂದ ಆಗದ ಸ್ವಾಮಿಕಾರ್ಯವನ್ನು ನೀನು ಸಹಜವಾಗಿ ಮಾಡಿ ಬಿಡುವಿಯಲ್ಲ! ನನ್ನ ತಂದೆಯಾದ ಬಾಳಾಜಿ ಆವಜಿಯ ಹೊಟ್ಟೆಯಲ್ಲಿ ನಾನು ಒಬ್ಬನೇ ಮಗನಲ್ಲವೇ? ಸಯಿಬಾಯಿಯೂ, (ಶಿವಾಜಿಯ ಹೆಂಡತಿ) ಏಸೂಬಾಯಿಯೂ ಬಾಲ್ಯದಿಂದ ನನ್ನ ಸಂರಕ್ಷಣೆ ಮಾಡದಿದ್ದರೆ, ಬಾಳಾಜಿಯ ವಂಶವು ಎಲ್ಲಿ ಉಳಿಯುತ್ತಿತ್ತು? ಅವ್ವಾ ಏಸೂಬಾಯಿ, ಈ ಖಂಡೋಜಿಯು ನಿಮ್ಮ ಸಾಕುಮಗನಲ್ಲವೆ? ಕಲುಷನು ನನಗೆ ದರ್ಬಾರಕ್ಕೆ ಬರಲಿಕ್ಕೆ ಪ್ರತಿಬಂಧಮಾಡಿ ಅವಮಾನಗೊಳಿಸಿದಾಗ, ಪೋರನಾದ ನನ್ನನ್ನು ನೀವು ಬಗಲಲ್ಲಿ ಎತ್ತಿಕೊಂಡು ರಮಿಸಲಿಲ್ಲವೆ? ಅವ್ವಾ! ಅವ್ವಾ! ಅವ್ವಾ!!! ನಿನಗೆ ಇಂಥ ಪ್ರಸಂಗವು ಬರಬೇಕೆ?

ಸಂತು—ಅಣ್ಣಾ, ಏನಂದಿ? ಏಸೂಬಾಯಿಯವರಮೇಲೆ ಕಠಿಣ ಪ್ರಸಂಗ ಒದಗಿರುವದೆಯೇ! ಈ ಪ್ರಸಂಗದಲ್ಲಿ ಅವರಿಗೆ ಸಹಾಯ ಮಾಡದೆಯಿದ್ದ ನಾವು ಬದುಕಿ ಫಲವೇನು! ಹೇಳು, ಅವರಿಗೇನು ಪ್ರಸಂಗ ಬಂದಿದೆ! ಅವರ ಸಲುವಾಗಿ ನಾನು ಏನು ಮಾಡಲಿ!

ಖಂಡೋಬ—ತಂಗೀ, ಅದನ್ನೇ ಹೇಳುವೆನು ಕೇಳು. ಪುಣ್ಯವತಿಯಾದ ನೀನು ಸ್ವಾಮಿಕಾರ್ಯವನ್ನು ಸಾಧಿಸುವದರಿಂದ ಪರಮಧನ್ಯಳಾಗುವೆ ಕಂಡೆಯಾ? ಏಸೂಬಾಯಿಯವರು ಸಂಗಮೇಶ್ವರಕ್ಕೆ ಮಹಾರಾಜರ ದರ್ಶನಕ್ಕೆ ಬರುವದಕ್ಕಾಗಿ ಹೊರಟಿರುವರು. ಮಧ್ಯ ಮಾರ್ಗದಲ್ಲಿ ಅವರನ್ನು ಹಿಡಿಯುವದಕ್ಕಾಗಿ ಮೊಗಲ ಸೈನ್ಯವು ಹೊಂಚುಹಾಕಿಕೊಂಡು ಕುಳಿತಿರುತ್ತದೆ. ನನ್ನ ಬಳಿಯಲ್ಲಿ ಸೈನ್ಯವಿಲ್ಲದ್ದರಿಂದ ನನ್ನೊಬ್ಬನಿಂದ ಏನಾದೀತು? ಆದರೆ ನಿನ್ನಿಂದ ಅವ್ವನವರ ಸಂಕಟ ನಿವಾರಣೆಯಾಗುವ ಹಾಗಿದೆ. ನಿನ್ನ ಕೈಯಲ್ಲಿ ಅವ್ವನವರದೊಂದು ಶಾಲು

ಕೊಡುವೆನು. ಅದನ್ನು ತಕ್ಕೊಂಡು ಅವರ ಬಳಿಗೆ ಹೋಗು. ಹಾದಿಯಲ್ಲಿ ಯಾರಾದರೂ ಕೇಳಿದರೆ, ''ನಾನು ಅವ್ವನವರ ದಾಸಿಯು, ಅವರ ಶಾಲನ್ನು ಕೊಡಲಿಕ್ಕೆ ಹೋಗುತ್ತೇನೆ''ಂದು ಹೇಳು. ಅಂದರೆ ಅವ್ವನವರ ಸನ್ನಿಧಿಯತನಕ ನಿನ್ನ ಪ್ರವೇಶವಾಗುವದು. ನೀನು ಏಸೂಬಾಯಿಯ ಸಾಹೇಬರನ್ನು ಕಂಡು ಅವರಿಗೆ—''ಖಂಡೋಬನು ನಿಮಗೆ ಹಿಂದಿರುಗಿ ಹೋಗಹೇಳಿರುತ್ತಾನೆ. ಮಹಾರಾಜರ ಚಿಂತೆಯನ್ನು ತಾವು ಮಾಡಬಾರದು, ಖಂಡೋಬನು ಜೀವದ ಹಂಗುದೊರೆದು ಅವರ ಸಂರಕ್ಷಣ ಮಾಡವನಂತೆ! ನೀವು ದಾಸಿಯ ವೇಷದಿಂದ ಪಾರಾಗಿ ಹೋಗಬೇಕು. ನಿಮ್ಮನ್ನು ಈ ಜೋತಾಜಿಯು ವೇಷಾಂತರದಿಂದ ರಾಯಗಡಕ್ಕೆ ಕರಕೊಂಡು ಹೋಗುವನು'' ಎಂದು ಹೇಳು. ತಂಗೀ, ಕ್ಷತ್ರಿಯ ಕನ್ಯೇ, ನೀನು ತಡಮಾಡಬೇಡ. ಇನ್ನು ನೀನು ಬೇಗನೆ ಹೋಗಿ ಅವ್ವನವರ ಪಲ್ಲಕ್ಕಿಯಲ್ಲಿ ಕುಳಿತುಕೊಂಡು ಅವರನ್ನು ಹೊರಡಿಸಿ ಜೋತಾಜಿಯೊಡನೆ ದಾಟಿಹಾಕು.

ಅಣ್ಣನ ಈ ಮಾತುಗಳನ್ನು ಕೇಳಿ ಸಂತೂಬಾಯಿಯು ಅತಿ ವೇಗದಿಂದ ಸಾಗಿ ಹೋಗಿ ಮಧ್ಯಮಾರ್ಗದಲ್ಲಿತನ್ನ ಸ್ವಾಮಿನಿಯನ್ನು ಕೂಡಿದಳು. ಆಗ ಏಸೂಬಾಯಿಯು, ಖಂಡೋಬನ ಸೂಚನೆಯಂತೆ ಪಲ್ಲಕ್ಕಿಯಿಂದ ಇಳಿದ ದಾಸಿಯ ವೇಷದಿಂದ ಪಲ್ಲಕ್ಕಿಯ ಸಂಗಡ ಹಾದಿಯ ನಡೆಯಹತ್ತಿದಳು. ಖಂಡೋಬನು ನನ್ನ ಸಂರಕ್ಷಣಕ್ಕಾಗಿ ಬರುವದು ನಿಶ್ಚಯವೆಂದು ಸಂತು ಬಾಯಿಯು ನಂಬಿಗೆಯಾಗುವಂತೆ ಹೇಳಲು, ಏಸೂಬಾಯಿಯು ಜೋತಾಜಿಯನ್ನು ಹಿಂಬಾಲಿಸಿ ಪಾರಾಗಿ ರಾಜಕುವರಳೊಡನೆ ಅಡ್ಡಹಾದಿಯಿಂದ ರಾಯಗಡದ ಕಡೆಗೆ ಹೊರಟಳು. ಸಂಗಮೇಶ್ವರದಿಂದ ರಾಜಕುವರಳು ಇಷ್ಟರಲ್ಲಿಯೇ ಏಸೂಬಾಯಿಯನ್ನು ಬಂದುಕೂಡಿ ಸಂಗಮೇಶ್ವರದಿಂದ ಸುದ್ದಿಯನ್ನು ಹೇಳಿದ್ದಳು. ಇತ್ತ ಸಂತೂಬಾಯಿಯು ಕುಳಿತುಕೊಂಡಿದ್ದ ಮೇಣೆಯು ''ಭರೋತ'' ಎಂದು ಊರಬಳಿಗೆ ಬಂದಿತು. ಕೂಡಲೆ ಮೊಗಲ ಸೈನಿಕರು ಅದನ್ನು ಮುತ್ತಿ ಸ್ವಾಧೀನಪಡಿಸಿಕೊಂಡರು. ಆಗ ಗಣೋಜಿರಾಯನು ಬೇರೆ ಸರದಾರರನ್ನು ಕುರಿತು—ಮೇಣೆಯನ್ನು ಚನ್ನಾಗಿ ಸಂರಕ್ಷಿಸಿರಿ, ಒಳಗಿನವರಿಬ್ಬರೂ ಈ ಗಣೋಜಿ ಶಿರ್ಕೆಯ ಆಪ್ತರಿರುತ್ತಾರೆ, ಎಂದು ಹೇಳಿದನು. ಮೇಣೆಯು ಮುಂದಕ್ಕೆ ಸಾಗಿ, ಅವರು ಒಂದು ಮುಕ್ಕಾಮಿಗೆ ಬಂದು ಅಲ್ಲಿ ಇಳಿದುಕೊಂಡರು. ಆಗ ಗಣೋಜಿಯು ಮೇಣೆಯಬಳಿಗೆ ಬಂದು—ಪ್ರಿಯೆ, ರಾಜಕುವರ ನಡೆ, ಹೊರಗೆ ಬಾ. ತಂಗೀ ಯೇಸೂ, ನಾಚಬೇಡ. ನಾನು ನಿನ್ನಣ್ಣ. ನಾನು ನಿನ್ನನ್ನು ಆ ಭೋಸಲೆಯ ಅನ್ನದಿಂದ ಮುಕ್ತಳಾಗ ಮಾಡುವೆನು, ನಿನ್ನ ತವರಮನೆಯ ಅಭಿಮಾನ ಬಿಡಬೇಡ. ಎಂದು ನುಡಿದು ತಾನು ಸ್ವತಃ ಮೇಣೆಯ ಬುರುಕೆಯನ್ನು ತೆಗೆದು ನೋಡುತ್ತಾನೆ. ಅಲ್ಲಿಯೇನಿದೆ? ಎರಡು ಹೆಣಗಳು ಬಿದ್ದಿದ್ದು, ಮೇಣೆಯಲ್ಲ ರಕ್ತಮುಣುಗಿಹೋಗಿತ್ತು! ಸಂತೂಬಾಯಿಯೂ ಇನ್ನೊಬ್ಬ ದಾಸಿಯೂ ಕಠಾರಿಯಿಂದ ಇರಿದುಕೊಂಡು ಪ್ರಾಣಕೊಟ್ಟಿದ್ದರು. ಅದನ್ನು ನೋಡಿ ಗಣೋಜಿಯು ಹಿಂದಕ್ಕೆ ಸರಿದನು. ಹೆಣಗಳ ಮೋರೆಯ ಮೇಲಿನ ಬುರುಕೆಯನ್ನು ತೆಗೆದು ಆತನು ನೋಡಲಿಲ್ಲ, ಏಸೂಬಾಯಿಯೂ, ರಾಜಕುವರಳೂ ಆತ್ಮಘಾತ ಮಾಡಿಕೊಂಡರೆಂದು

ಆತನು ನಂಬಿದನು. ಇದೇ ಸುದ್ದಿಯು ಎಲ್ಲಕಡೆಗೆ ಹಬ್ಬಿತು! ಖಂಡೋಜಿಯು ಈ ಸುದ್ದಿಯನ್ನು ಕೇಳಿ ವಿಷಾದಪಟ್ಟು, ತನ್ನ ಒಡೆಯಳಾದ ಏಸೂಬಾಯಿಯನ್ನು ಹೋಗಿ ಕೂಡಿದನು.

ಬಳಿಕ ಖಂಡೋಜಿಯೂ, ಜೋತಾಜಿಯೂ ಏಸೂಬಾಯಿಯನ್ನೂ ರಾಜಕುವರಳನ್ನೂ ರಾಯಗಡದ ಹಾದಿಗೆ ಹಚ್ಚಿ, ಅದೇ ಕಾಲಲ್ಲಿ ಸಂಗಮೇಶ್ವರದಕಡೆಗೆ ಹಿಂದಿರುಗಿದರು. ಯಾಕಂದರೆ, ಸಂಭಾಜಿಯನ್ನು ಹಿಡಿಯುವದಕ್ಕಾಗಿ ಮುಕರ್ಬಖಾನನು ತನ್ನ ಸೈನ್ಯದಲ್ಲಿ ಎರಡು ಭಾಗಗಳನ್ನು ಮಾಡಿ ಒತ್ತರದಿಂದ ಸಾಗಿ ಬರುತ್ತಿರುವೆನೆಂಬ ಸುದ್ದಿಯು ಅವರಿಗೆ ಹತ್ತಿತು; ಆದ್ದರಿಂದ ಅವರು ನಡುವೆ ಎಲ್ಲಿಯೂ ನಿಲ್ಲದೆ ಬೆಲ್ಲತಿಂದು ನೀರು ಕುಡಿದು ಸಂಗಮೇಶ್ವರಕ್ಕೆ ಬಂದು ಮುಟ್ಟಿದರು. ಈ ಕಾಲದಲ್ಲಿ ಪ್ರೌಢ ಪ್ರತಾಪಿಯಾದ ಔರಂಗಜೇಬನು ದಕ್ಷಿಣ ಹಿಂದು ಸ್ಥಾನವನ್ನು ಗೆಲ್ಲುವದಕ್ಕಾಗಿ ತನ್ನ ಪ್ರಚಂಡ ಸೈನ್ಯದ ಜಾಲವನ್ನು ನಾಲ್ಕೂ ಕಡೆಗೆ ಒಡ್ಡಿದ್ದನು. ಆತನ ಬಲೆಯನ್ನು ದಾಟಿ ಒಂದು ನರಪ್ರಾಣಿಯು ಪಾರಾಗಿ ಹೋಗುವ ಹಾಗಿದ್ದಿಲ್ಲನೆಂದು ಹೇಳಬಹುದು. ಒಂದು ತುದಿಯಲ್ಲಿ ಕಾಬೂಲ ಕಂದಹಾರವು, ಮತ್ತೊಂದು ತುದಿಯಲ್ಲಿ ಬಂಗಾಲವು ಇವುಗಳ ನಡುವಿನ ವಿಸ್ತಾರವಾದ ಪ್ರದೇಶ ದೊಳಗಿನ ಪ್ರಚಂಡವಾದ ಯುದ್ಧದ ಸಾಮುಗ್ರಿಯನ್ನೂ, ಅಗಾಧ ಸೇನಾಸಾಗರವನ್ನೂ, ಅಗಣಿತ ದ್ರವ್ಯವನ್ನೂ, ಹೆಸರಾದ ಸೇನಾನಾಯಕರನ್ನೂ ಒಟ್ಟುಗೂಡಿಸಿಕೊಂಡು, ಮಹಾರಾಷ್ಟ್ರ ಪ್ರಭುವಿನ ಕೊರಳಿಗೆ ಹಾಕಿದ ಉರಲ ಬಲೆಯನ್ನು ಮೆಲ್ಲಮೆಲ್ಲನೆ ಬಿಗಿಯುತ್ತ ಬಾದಶಹನು ಬರುತ್ತಲಿದ್ದನು. ಹಿಂದೆ ಹೇಳಿದಂತೆ ಗಣೋಜಿರಾವ ಶಿರ್ಕೆಯೂ, ಆತನ ತಮ್ಮನಾದ ರಾಣೋಜಿರಾವ ಶಿರ್ಕೆಯೂ ಸಂಭಾಜಿಯ ಮೇಲಿನ ದ್ವೇಷದಿಂದ ಆ ತಮ್ಮ ಬೀಗನನ್ನು ಜೀವದಿಂದ ಸೆರೆಹಿಡಿದುಕೊಂಡು ಬರುವೆವೆಂದು ಔರಂಗಜೇಬನ ದರ್ಬಾರದಲ್ಲಿ ಪ್ರತಿಜ್ಞೆಮಾಡಿದ್ದರು. ಔರಂಗಜೇಬನ ಬೇರೆ ಬೇರೆ ಸರದಾರರು ಬೇರೆ ಬೇರೆ ಕಡೆಯಲ್ಲಿ ಮಹಾರಾಷ್ಟ್ರರನ್ನು ಹಣ್ಣು ಮಾಡತೊಡಗಿದ್ದು, ಮುಕರ್ಬಖಾನನು ಶಿರ್ಕೆ ಬಂಧು ಗಳನ್ನು ಕೂಡಿಕೊಂಡು, ಸಂಭಾಜಿಯನ್ನು ಸೆರೆಹಿಡಿಯುವದಕ್ಕಾಗಿ ಸಂಗಮೇಶ್ವರದ ಕಡೆಗೆ ಬರುತ್ತಿದ್ದನು.

ಶೂರನಾದ ಮುಕರ್ಬಖಾನನು ತನ್ನ ಸೈನಯ್ದಲ್ಲಿ ಎರಡು ಭಾಗಗಳನ್ನು ಮಾಡಿದ್ದನೆಂದು ಮೇಲೆ ಹೇಳಿದೆ. ಒಂದನೆಯ ಭಾಗಕ್ಕೆ ಆತನ ಮಗನಾದ ತರುಣ ವೀರ ಇಖಲಾಸ ಖಾನನು ಮುಖ್ಯನಿದ್ದು, ಆತನ ಕೈಯಲ್ಲಿ ಹತ್ತು ಹನ್ನೆರಡು ಜನ ಖಾಸ ನೌಕರರು ಮಾತ್ರ ಇದ್ದರು. ಎರಡನೆಯ ಭಾಗದಲ್ಲಿ ಸ್ವತಃ– ಮುಕರ್ಬಖಾನನು ಇನ್ನೂರು ಮೂನ್ನೂರ ಖಾಸ ಹಜರಾತಿಯ ಸವಾರರೊಡನೆ ಹೊರಟಿದ್ದನು. ಈ ಎರಡು ಸೈನ್ಯ ಭಾಗಗಳು ಜನರ ಮುಂದೆ ಸುಳ್ಳೊಂದು ಸೊಟ್ಟೊಂದು ಹೇಳುತ್ತ ಬಹುಜಾಗರೂಕತೆಯಿಂದ ಸಂಗಮೇಶ್ವರದ ಗಡಿಯುವರೆಗೆ ಬಂದವು. ಸಂಗಮೇಶ್ವರದಲ್ಲಿ ತಕ್ಕಷ್ಟು ಬಂದೋಬಸ್ತು ಇರುವದಿಲ್ಲೆಂಬದನ್ನೂ, ಸಂಭಾಜಿಯು ಯಾವಾಗಲೂ ಸೆರೆ ಕುಡಿದು ಅಮಲಿನಲ್ಲಿರುನೆಂಬದನ್ನೂ ''ಕಲುಷನ'' ಮುಖಾಂತರ ಖಾನನು ತಿಳಿಕೊಂಡಿದ್ದನು. ಖಂಡೋಜಿಯೂ ಜೋತಾಜಿಯೂ ಸಂಗಮೇಶ್ವರಕ್ಕೆ ಬಂದಾಗ ಖಾನನು ತೀರ ಸನಿಯಕ್ಕೆ ಬಂದನೆಂಬ ಸುದ್ದಿಯು ಹತ್ತಿತು.

ಪ್ರಸಂಗಾವಧಾನವುಳ್ಳ ಖಂಡೋಜಿಯು ಜೋತಾಜಿಯನ್ನು ಅಗಸಿಯಲ್ಲಿ ಪಾಳತಿಗಾಗಿ ಇಟ್ಟು ತಾನು ಈ ಸುದ್ದಿಯನ್ನು ಹೇಳಲಿಕ್ಕೆ ನೆಟ್ಟಗೆ ಸಂಭಾಜಿಯ ಬಳಿಗೆ ಹೊರಟನು. ತನ್ನ ಸ್ವಾಮಿಯು ನಿಶ್ಚಿಂತೆಯಿಂದ ಅರಮನೆಯಲ್ಲಿ ಬಿದ್ದು ಕೊಂಡಿರಲು ಖಂಡೋಬನು ಭಯಂಕರ ವಾದ ಈ ಸುದ್ದಿಯನ್ನು ಆತನಿಗೆ ಹೇಳಿದನು. ಆದರೆ ಸರಾಯಿಯ ಅಮಲಿನಲ್ಲಿದ್ದ ಸಂಭಾಜಿಯು ಖಂಡೋಜಿಯ ಮಾತಿಗೆ ದಾದು ಕೊಡಲೊಲ್ಲನು! ಆಗ ಖಂಡೋಜಿಯ ಪಂಚಪ್ರಾಣಗಳು ತಳಮಳಿಸ ಹತ್ತಿದವು. ಮಹಾರಾಜರನ್ನು ಹೆಗಲಮೇಲೆ ಹಾಕಿಕೊಂಡಾದರೂ ಪಾರುಮಾಡಬೇಕೆಂದು ಆ ಸ್ವಾಮಿಭಕ್ತನು ಹೆಣಗಿದನು. ಆತನು ಮಹಾರಾಜರನ್ನು ಎತ್ತಿ ಕೊಳ್ಳಹೋಗಲು ಅವರು ಅರವಿಲ್ಲದೆ ಖಂಡೋಜಿಯ ಮೈಮೇಲೆ ಹೋಗಿ ಗರ್ಜಿಸಿ — ''ಕತ್ತಿಯೇ, ಲುಚ್ಚಾ ಸುಳ್ಳು ಸುದ್ದಿಯನ್ನು ಹೇಳುತ್ತೀಯಾ? ಇಲ್ಲಿಗೆ ಮೊಗಲರು ಯಾವ **ಕಡೆಯಿಂದ ಬರುವರು? ಗುಲಾಮರಿರಾ, ಇನ್ನೊಮ್ಮೆ ಇಂಥ ಸುಳ್ಳು ಸುದ್ದಿಗಳನ್ನು ಹೇಳಿದರೆ ನಿಮ್ಮ ನಾಲಿಗೆಗಳನ್ನೇ ಕೊಯಿಸೇನು?''**

ಮಹಾರಾಜರಿಂದ ಈ ಬಗೆಯ ಸಂಭಾವನೆಯಾದದ್ದನ್ನು ನೋಡಿ ಖಂಡೋಜಿಯು ಮುಂದುಗಾಣದೆ ನಿಂತುಕೊಂಡನು. ಇಷ್ಟರಲ್ಲಿ ಮೊಗಲರು ಭರದಿಂದ ಸಾಗಿಬರುವ ಸುದ್ದಿ ಯನ್ನು ಚಾರರು ಬಂದು ಹೇಳಿದರು. ಇಕಲಾಸಖಾನನು ಸಂಗಮೇಶ್ವರದ ಗಡಿಯಲ್ಲಿ ಕಾಲಿಟ್ಟ ಕೂಡಲೆ, ತನ್ನ ಕುದುರೆಯನ್ನು ಓಡಿಸುತ್ತ ತನ್ನ ಪರಿವಾರದೊಡನೆ ಸಂಗಮೇಶ್ವರಕ್ಕೆ ಬರತೊಡಗಿದ್ದನು.ಇದನ್ನು ಕೇಳಿ ಖಂಡೋಜಿಯ ಮೈಮೇಲಿನ ಎಚ್ಚರವು ತಪ್ಪಿತು. ಆತನು ನಿರಾಶೆಪಟ್ಟು ಕಲುಷಾಮಾತ್ಯನ ಬಳಿಗೆ ಓಡುತ್ತ ಹೋಗಿ ಆತನ ಮುಂದೆ ದೈನ್ಯದಿಂದ— ''ಮಂತ್ರಿಶ್ರೇಷ್ಠನೇ, ಈಗ ಈ ಸಂಕಟ ದೊಳಗಿಂದ ಹ್ಯಾಗಾದರೂ ಮಾಡಿ ಮಹಾರಾಜರನ್ನು ಉಳಿಸಿರಿ. ಏನಾದರೂ ಎರಡು ಬುದ್ಧಿ ವಾದದ ಮಾತುಗಳನ್ನು ಹೇಳಿ ಅವರನ್ನು ಅರಮನೆ ಯಿಂದ ಹೊರಹೊರಡಿಸಿರಿ, ಎಂದು ಭಿಕ್ಷೆಬೇಡಿದನು. ಅದಕ್ಕೆ ಕಲುಷನು— ಹೀಗೆ ಬಿಕ್ಷೆ ಯನ್ನೇಕೆ ಬೇಡುವಿರಿ? ಜಾರಣ–ಮಾರಣ ವಿದ್ಯೆಯಿಂದ ಕ್ಷಣದಲ್ಲಿ ವೈರಿಗಳನ್ನು ಓಡಿಸುವೆನು; ಅಂದಬಳಿಕ ಮೊಗಲರ ಭಯವನ್ನು ನನಗೆ ಯಾಕೆ ತೋರಿಸುತ್ತೀರಿ? ಒಮ್ಮೆ ಮಂತ್ರಿಸಿ ಗುದ್ದಿ ದೆನೆಂದರೆ ಮೊಗಲರು ದಿಕ್ಕಾಪಾಲಾಗಿ ಓಡಿಹೋದಾರು! ಅನ್ನಲು, ಕಲುಷನ ಈ ವ್ಯರ್ಥ ವಾದ ರಗಳೆಯನ್ನು ಕೇಳಿ ಖಂಡೋಜಿಯು ಸಂತಾಪಗೊಂಡನು. ಆತನು ಹತ್ತರದಲ್ಲಿದ್ದ ಎಲ್ಲ ಸರದಾರರನ್ನೂ, ಕಾರಕೂನರನ್ನೂ ಒಟ್ಟುಗೂಡಿಸಿದನು. ಇಷ್ಟರಲ್ಲಿ ವೈರಿಯು ಅರ ಮನೆಗೆ ಒಂದು ಕೂಗಿನ ಅಳತೆಯಲ್ಲಿ ಬಂದನೆಂಬ ಸುದ್ದಿಯು ಬಂದಿತು. ಖಂಡೋಜಿಯು ತಳಮಳಿಸುತ್ತ ಪುನಃ ಮಹಾರಾಜರ ಬಳಿಗೆ ಬಂದು— ಮಹಾರಾಜರೇ, ವೈರಿಗಳು ಅರಮನೆಯನ್ನು ಮುತ್ತಿದರು! ನಾವು ಆಬಾಸಾಹೇಬರ ಕೈಕೆಳಗಿನ ಮನುಷ್ಯರಿರುವೆವು. ಜೀವದ ಹಂಗುದೊರೆದು ನಿಮ್ಮನ್ನು ಸಂರಕ್ಷಿಸಿಯೇ ಸಂರಕ್ಷಿಸುವೆವು. ಈ ಪ್ರಸಂಗದಲ್ಲಿ ನಿಮ್ಮಸಲುವಾಗಿ ನಮ್ಮದಿಂಡುಗಳನ್ನು ನಾವು ರಣದಲ್ಲಿ ಕುಣಿಸುವೆವು. ಪ್ರಭುಗಳ ಕೂದಲು ಕೊಂಕಲಿಕ್ಕೆ ಮೊಗಲ ತಾಯಿಯೇನು ಹಡೆದಿರುವಳು! ಸ್ವಲ್ಪ ಜನರಿದ್ದರೂ ಮಾವಳರು

ಶತ್ರುಗಳನ್ನು ತುಂಡರಿಸುವದರಲ್ಲಿ ಎಷ್ಟು ನಿಷ್ಣಾತರೆಂಬದನ್ನು ಮೊಗಲರು ಇಂದು ನೋಡಲಿ! ಇನ್ನು ಶತ್ರುಗಳು ಯಾವತ್ತು ಮಾರ್ಗಗಳನ್ನು ಪ್ರತಿಬಂಧಿಸಿದವರಲ್ಲ, ಅಷ್ಟರಲ್ಲಿ ನೀವು ಅರಮನೆಯನ್ನು ಬಿಟ್ಟು ಪಾರಾಗಿರಿ. ನಿಮ್ಮ ದಂಡು ನಿಮ್ಮ ಸಂರಕ್ಷಣಕ್ಕಾಗಿ ಬರಲಿಕ್ಕೆ ಮಾರ್ಗವಿಲ್ಲ. ಯಾಕಂದರೆ, ಶತ್ರುಗಳು ದಂಡು ಬರುವ ಎಲ್ಲ ಮಾರ್ಗಗಳನ್ನು ಪ್ರತಿ ಬಂಧಿಸಿರುತ್ತಾರೆ. ಶತ್ರುಗಳು ಇಷ್ಟು ಪ್ರತಿಬಂಧಿಸುವವರೆಗೆ ನಿಮಗೆ ಸುದ್ದಿಯು ಹ್ಯಾಗೆ ಗೊತ್ತಾಗಲಿಲ್ಲ? ಆದರೂ ಇನ್ನೂ ಮಾರ್ಗವಿರುತ್ತದೆ. ನೀವು ರಾಯಗಡಕ್ಕೆ ಮುಟ್ಟುವವರೆಗೆ ನಾವು ಮೊಗಲರೊಡನೆ ಕಾದುತ್ತ ಅವರನ್ನು ನಿರ್ಬಂಧಿಸುತ್ತೇವೆ. ನಮ್ಮ ದೊಡ್ಡ ಮಹಾರಾಜರ ಕಾಲದ, ಬಾಜಿ ದೇಶಪಾಂಡೆ, ತಾನಾಜಿ ಮಾಲಸೂರೆ, ಜಿವುಬಾ ಮಹಾಡಿಕ ಮೊದಲಾದ ಮಾವಳ ವೀರರ ಪರಾಕ್ರಮವನ್ನು ಮೊಗಲರು ಕೇಳಿರುತ್ತಾರೆ. ಅದನ್ನು ಈ ದಿನ ಅವರಿಗೆ ಪ್ರತ್ಯಕ್ಷ ತೋರಿಸುವೆನು. ಹ! ಏಳಿರಿ, ತಡಮಾಡಬೇಡಿರಿ. ಮಹಾರಾಜ, ಅಮಲೇರಿ ಬಿದ್ದು ಕೊಳ್ಳುವ ಹೊತ್ತೇ ಇದು? ಇನ್ನೂ ಕಣ್ಣುಗಳನ್ನು ತಿರುಗಿಸುತ್ತಲೇ ಇರುವಿರಲ್ಲ! ಮಹಾರಾಜ,ನಮ್ಮ ಮಾತನ್ನು ಕೇಳುವದಿಲ್ಲವೇ?

ಖಂಡೋಜಿಯ ಈ ಮಾತುಗಳನ್ನು ಕೇಳಿ ಅಮಲಿನಲ್ಲಿರುವ ಸಂಭಾಜಿಯು— ''ಇನ್ನೇನು ನಿಮ್ಮ ಮಾತನ್ನು ಕೇಳಲಿ? ಹುಲಿಯು ಬಲೆಯಲ್ಲಿ ಸಿಕ್ಕ ಬಳಿಕ ಯಾರ ಮಾತನ್ನು ಕೇಳುವದರಿಂದ ಏನು ಪ್ರಯೋಜನವಾಗುವದು? ಇನ್ನು ಶತ್ರುವಿನೊಡನೆ ಹೋರಾಡಿ ದೇಹಬಿಡುವದೊಂದೇ ಮಾರ್ಗವು ಉಳಿದಿರುವದು. ಖಂಡೋಜಿ, ನೀನು ಶತೃಗಳಿಗೆ ಬೆನ್ನು ತೋರಿಸಲು ನನಗೆ ಬೋಧ ಮಾಡುವಿಯಾ? ಛೀ! ಅಂಜುಬುರುಕಾ! ಎಲೇ, ಯಾರಾದರೂ ರಣಶೂರರು ಇದ್ದರೆ ಏಳಿರಿ, ಯುದ್ಧಕ್ಕೆ ಸಿದ್ಧರಾಗಿರಿ! ಎಲೈ ''ಯಾರಾದರೂ ಆಬಾಸಾಹೇಬರ ಉಪ್ಪುಂಡವರು ಇದ್ದರೆ ನನ್ನನ್ನು ಹಿಂಬಾಲಿಸಿರಿ! ಹೊಡಿಯೋಣ, ಇಲ್ಲವೆ ಮಡಿಯೋಣ'' ಎಂದು ನುಡಿಯಲು, ಖಂಡೋಜಿಯು—''ಮಹಾರಾಜ, ಏನು ಅನರ್ಥವಿದು! ನಿಮ್ಮ ಹಟಮಾರಿತನವನ್ನು ನೋಡಿ ರೇಗಿಗೆದ್ದು ಎಷ್ಟೋ ಮಹಾರಾಷ್ಟ್ರ ವೀರರು ನಿಮ್ಮನ್ನು ತೊಲಗಿ ಹೋಗುತ್ತಿರುವರು. ನೋಡಿದಿರಾ! ನಿಮಗಿಂತಲೂ ಮಹಾರಾಷ್ಟ್ರ ರಾಜ್ಯದ ಯೋಗ್ಯತೆಯು ಹೆಚ್ಚಾದ್ದರಿಂದ, ಅದನ್ನು ರಕ್ಷಿಸುವದಕ್ಕಾಗಿ ತಮ್ಮ ಜೀವಗಳನ್ನು ಉಳಿಸಿ ಕೊಳ್ಳುವವೆಂದು ಅವರು ಹೇಳುವರು. ಅವರ ಮಾತನ್ನು ಮಹಾರಾಜರು ನಿರಾಕರಿಸ ತಕ್ಕದ್ದಲ್ಲ. ಆಬಾಸಾಹೇಬರು ಬಹು ಕಷ್ಟಪಟ್ಟು, ಸ್ಥಾಪಿಸಿರುವ ಮಹಾರಾಷ್ಟ್ರ ರಾಜ್ಯವನ್ನು ಕಾಯ್ದುಕೊಳ್ಳುವದಕ್ಕಾಗಿ ನೀವು ಸದ್ಯಕ್ಕೆ ಶತ್ರುಗಳಿಗೆ ಬೆನ್ನು ತೋರಿಸಿದರೆ ತಪ್ಪಲ್ಲ, ರಾಜ್ಯ ರಕ್ಷಣವು ನಿಮ್ಮ ಮುಖ್ಯ ಕರ್ತವ್ಯವಾಗಿರುವದು. ನೀವು ನೆಟ್ಟಗಿದ್ದರೆ ನಮ್ಮಂಥ ಹಲವು ಜನಸೇವಕರು ಸಿಗಬಹುದಾದ್ದರಿಂದ, ನಿಮ್ಮ ಸಂರಕ್ಷಣಕ್ಕಾಗಿ ನಾವು ಪ್ರಾಣ ಕೊಡುವೆವು. ನೀವು ಇಲ್ಲಿಂದ ಏಳಿರಿ, ತಡಮಾಡಬೇಡಿರಿ. ಏ ಮಾಲೋಜೀ, ಯಾರಾದರೂ ಒಳಗಿನ ಬಾಗಿಲವನ್ನಾದರೂ ಇಕ್ಕಿರೋ! ಜೋತ್ಯಾ, ಏನು ನೋಡುತ್ತೀ? ಮಹಾರಾಜರಿಗೆ ಈ ಕ್ಯಾವಿಯ ಕಫನಿಯನ್ನು ಹಾಕು! ಹಾಕು ಜುಲುಮೆಯಿಂದ ಹಾಕು! ಅವರ ಮಾತು ಕೇಳ ಬೇಡ!

ಇಷ್ಟಾದರೂ ಸಂಭಾಜಿಗೆ ಬುದ್ಧಿ ಬರಲಿಲ್ಲ. ''ವಿನಾಶಕಾಲೇ ವಿಪರೀತ ಬುದ್ಧಿಃ ಎಂಬ ಮಾತು ಸುಳ್ಳಲ್ಲ. ಆತನು ತನ್ನವರನ್ನು ಕುರಿತು—ಎಲೇ, ಹರಾಮಖೋರರಿರಾ? ಕಫನಿಯಾತಕ್ಕೆ! ವೈರಿಯು ಒಳಗೆ ಬಂದನೋ? ಹಿರಿಯಿರಿ ಕತ್ತಿಯನ್ನು! ಗರ್ಜಿಸಿರಿ ''ಹರಹರ ಮಹದೇವ'' ಎಂದು ಎಲ್ಲೈ ಇಕಲಾಸಖಾನಾ, ಮುಕರ್ಬಖಾನಾ ಬರ್ರಿ, ನಿಮ್ಮ ಕಂಠನಾಳವನ್ನು ಈ ಭವಾನೀ ಖಡ್ಗದಿಂದ ಚರಚರ ಕೊಯ್ಯುವೆನು ಬರ್ರಿ. ಶಾಬಾಶ್ ಕಲುಷಾ! ಭಲೆ ಬಾಹದ್ದೂರ? ಹೀಗೆಯೇ ಶತ್ರುಗಳ ಮೇಲೆ ಬೀಳತಕ್ಕದ್ದು.'' ಎಂದು ನುಡಿಯುತ್ತಿರಲು, ಕಲುಷನು ಫಿತೂರಿಯಿಂದ ಮೊಗಲರ ವಶನಾದನು. ಅವನ ಅಂತರಂಗದ ಫಿತೂರಿ ಯಿಂದಲೇ ಇಷ್ಟು ಅನರ್ಥವಾಯಿತೆಂದು ಹೇಳಬಹುದು. ಇದನ್ನು ನೋಡಿ ಖಂಡೋಜಿಯು —ಹಾಯ್ ಹಾಯ್! ಎಲ್ಲರೂ ಫಿತೂರರಾಗಿರುವರು! ಜೋತ್ಯಾ, ಏಳೆ ಮಹಾರಾಜರನ್ನು! ಅವರಿಗೆ ಕಫನಿಯನ್ನು ಹಾಕಿ ಈ ಗವಿಯೊಳಗಿಂದ ಹಾದು ಗುಡಿಗೆ ಕರಕೊಂಡು ಹೋಗು. ಜೋತ್ಯಾ, ತಡಮಾಡಬೇಡ. ನಾನು ನಿನ್ನ ಬೆನ್ನ ಹಿಂದೆಯೇ ಬಂದೆನು! ''ಶಿವ ಶಿವ'' ಎಂದ ನುಡಿದು ಮೊಗಲರನ್ನು ಹಣೆಯಹತ್ತಿದನು. ಜೋತ್ಯಾನು ಸಂಭಾಜಿಯನ್ನು ಜುಲುಮೆ ಯಿಂದ ಕರಕೊಂಡು ಗವಿಯೊಳಗೆ ಹಾದು ಗುಡಿಗೆ ಹೋದನು. ಇತ್ತ ಸ್ವಾಮಿಭಕ್ತ ಮಹಾರಾಷ್ಟ್ರ ವೀರರನ್ನೆಲ್ಲ ಮೊಗಲರು ತುಂಡರಿಸಿ ಚಲ್ಲಿದರು. ಉಳಿದವರು ಸಂಭಾಜಿಯ ಜೀವವನ್ನು ರಕ್ಷಿಸುವದಕ್ಕಾಗಿ ವೇಷಾಂತರದಿಂದ ಅವನನ್ನು ಹಿಂಬಾಲಿಸಿ ಹೋದರು. ಇಕಲಾಸಖಾನನು ತನ್ನ ಬಿಚ್ಚುಗತ್ತಿಗೆ ಎದುರಾದವರನ್ನು ತುಂಡರಿಸುತ್ತಾ, ಅರಮನೆಯಲ್ಲಿ ಹುಡುಕಿದನು. ಆದರೆ ಸಂಭಾಜಿಯು ಸಿಗಲಿಲ್ಲ, ಆಗ ಅವನು ಸಂತಾಪದಿಂದ ಗುಡಿಯಲ್ಲಿ ಬಂದನು. ಕ್ರೋಧ ಪರವಶನಾದ ಆತನ ಮುಖದಲ್ಲಿ ಬುರುಗು ಬರುತ್ತಿತ್ತು! ಕಣ್ಣುಗಳಲ್ಲಿ ಕಿಡಿಗಳು ಉದುರುವಂತೆ ಭಾಸವಾಗುತ್ತಿತ್ತು! ಗುಡಿಯಲ್ಲಿಯೂ ಯಾರೂ ಸಿಗದ್ದರಿಂದ ಖಾನನು ಮೂರ್ತಿಯನ್ನು ಒಡೆಯುವದಕ್ಕಾಗಿ ಮುಂದಕ್ಕೆ ಬರಲು, ಅಲ್ಲಿ ಒಬ್ಬ ಗೋಸಾವಿಯು ಹತಾಶನಾಗಿ ನಿಂತುಕೊಂಡಿರುವದನ್ನು ನೋಡಿದನು. ಮೊದಲು ಆತನು ವೇಷಾಂತರಿಸಿದ ಸಂಭಾಜಿ ಎಂಬದು ಖಾನನಿಗೆ ಗೊತ್ತಾಗಲಿಲ್ಲ, ಆಗ ಆತನು ಗೋಸಾವಿ ಯನ್ನು ಕುರಿತು— ''ಎಲಾ, ನೀನು ಯಾರು? ಬದಮಾಷ! ನಿನ್ನ ಮೈಮೇಲೆ ಮುತ್ತುರತ್ನ ಗಳ ಅಲಂಕಾರಗಳೇಕೆ? ತೋಬಾ! ಹಿಡಿಯಿರಿ ಹಿಡಿಯಿರಿ! ಇವನೇ ಆ ಸೈತಾನನು? ಮರಾಟರ ರಾಜನು ಇವನೇ?''

ಈ ಮೇರೆಗೆ ಇಕಲಾಸಖಾನನೇ, ಸಂಭಾಜಿಯ ಗುರುತು ಹಿಡಿದನು. ಆತನನ್ನೂ ಆತನ ಇಪ್ಪತ್ತು ಇಪ್ಪತ್ತೈದು ಜನ ಅನುಯಾಯಿಗಳನ್ನೂ ಮೊಗಲರು ಸೆರೆಹಿಡಿದರು. ಘಾತ ವಾಯಿತು. ಮಹಾರಾಷ್ಟ್ರದ ಮೇಲೆ ವಜ್ರಾಘಾತವಾಯಿತು! ಶ್ರೀಸಮರ್ಥ ರಾಮದಾಸರು ಹೇಳಿದಂತೆ ''ಮೂರ್ಖಾಚೆ ರಾಜ್ಯರಾಹೇನಾ! ಕೋಣಾಚೇ ಕೋಣ ಐಕತೋ!''ಎಂಬ ಮಾತಿನ ಸತ್ಯತೆಯ ಅನುಭವವು ಪಡೆಯುವ ಪ್ರಸಂಗವು ದುರ್ದೈವಿಗಳಾದ ಮರಾಟರಿಗೆ ಒದಗಿತು.!

# ಬಾದಶಹನ ದರ್ಬಾರ

ಪುಣೆಯಿಂದ ಹದಿನೈದು ಇಪ್ಪತ್ತು ಮೈಲುಗಳ ಮೇಲೆ ಇಂದ್ರಾಯಣೆಯ ಸಂಗಮದ ಸ್ಥಳದಲ್ಲಿ ತುಳಾಪುರುವೆಂಬ ಊರು ಇರುವದು. ಈ ಪ್ರಸಿದ್ಧ ಗ್ರಾಮದಲ್ಲಿ ಪರಮ ವೈಭವ ಶಾಲಿಯಾದ ಔರಂಗಜೇಬ ಬಾದಶಹನು ತಳ ಊರಿದ್ದನು. ಭವ್ಯವಾದ ಬಯಲಲ್ಲಿ ಬಾದಶಹನಿರುವ ಪ್ರಚಂಡ ಡೇರೆಯ ಬಂಗಾರದ ಮುಲಾಮಿನ ಗುಮಟ-ಕಳಸಗಳು ಸೂರ್ಯಪ್ರಕಾಶದಲ್ಲಿ ಲಕಲಕನೆ ಹೊಳೆಯುತ್ತ ಸುತ್ತುಮುತ್ತಲಿನ ಪರ್ವತ ಶಿಖರಗಳನ್ನು ಹೀಯಾಳಿಸುತ್ತಿದ್ದವು. ಡೇರೆಯ ಪಟಾಂಗಣವನ್ನು ಪ್ರವೇಶಿಸಲಿಕ್ಕೆ ಒಂದು ದೊಡ್ಡ ಬಾಗಿಲು ಇದ್ದು, ಆ ಬಾಗಿಲ ಒಳಗೆ ಎರಡೂ ಮಗ್ಗಲು ಎರಡು ಡೇರೆಗಳನ್ನು ಹೊಡೆದಿದ್ದರು. ಆ ಡೇರೆಗಳ ನಿರತಿನಿಂದ ಸರಳವಾದ ಮಾರ್ಗದ ಮಗ್ಗಲುಗಳನ್ನು ಹಿಡಿದು ದೊಡ್ಡದೊಡ್ಡ ತೋಫುಗಳ ಎರಡು ಸಾಲುಗಳಿದ್ದವು. ಈ ತೋಫುಗಳ ಸಾಲುಗಳ ಕೊನೆಯಲ್ಲಿ ದೊಡ್ಡ ದೊಂದು ಡೇರೆಯನ್ನು ಹೊಡೆದಿದ್ದು ಅದರಲ್ಲಿ ರಣಕರ್ಕಶವಾದ ದುಂದುಭಿ, ತಾಸೆ, ಮರ್ಫೆ ಮೊದಲಾದ ರಣವಾದ್ಯಗಳ ಮೇಳಗಳಿದ್ದವು. ಈ ಡೇರೆಯಿಂದ ಸ್ವಲ್ಪದೂರಲ್ಲಿ ಬಾದಶಹನ ದೊಡ್ಡ ಚೌಕಿಯಿದ್ದು, ಸಶಸ್ತ್ರ ಸೈನಿಕರು ಒಂದೇಸವನೆ ಎದ್ದುನಿಂತು ಅಲ್ಲಿ ಪಹರೆ ಮಾಡುತ್ತಿದ್ದರು. ಈ ಸೈನಿಕರ ಮೇಲೆ ಒಬ್ಬ ಸ್ವತಂತ್ರ ಸರದಾರನಿದ್ದನು. ಪಾಟಂಗಣದ ಎರಡನೆಯ ಮಗ್ಗಲಲ್ಲಿ ಎಷ್ಟೋ ಡೇರೆಗಳನ್ನು ಬೇರೆಬೇರೆಯಾಗಿ ಹೊಡೆದಿದ್ದರು. ಅವುಗಳಲ್ಲೊಂದರಲ್ಲಿ ಬಾದಶಹನ ಶಸ್ತ್ರಗಳಿರುತ್ತಿದ್ದವು; ಮತ್ತೊಂದರಲ್ಲಿ ಕುದುರೆಯ ಸಾಮಾನುಗಳಿರುತ್ತಿದ್ದವು. ಇನ್ನೊಂದರಲ್ಲಿ ತಂಪಾದ ನೀರುಗಳು, ಬೇರೊಂದರಲ್ಲಿ ಹಣ್ಣು ಹಂಪಲಗಳು ಇರುತ್ತಿದ್ದವು.

ಈ ಅವಾಢವ್ಯ ಡೇರೆಯ ಸುತ್ತುಮುತ್ತು ಎಂಟು ದಿಕ್ಕುಗಳಲ್ಲಿ ಚತುರಂಗ ಸೈನ್ಯವು ಹಬ್ಬಿ ಹರಬಿದ್ದಿತ್ತು. ಈ ಪ್ರಚಂಡವಾದ ಸೈನ್ಯದಲ್ಲಿ ಕಂದಹಾರ, ರಜಪೂತಸ್ಥಾನ ಮೊದಲಾದ ದೂರದೂರದ ಪ್ರಾಂತಗಳಿಂದ ಕರೆಕಳಿಸಿಕೊಂಡಿದ್ದ ರಾವುತರು ಎರಡುಸಾಲಾಗಿ ಪಸರಿಸಿದ್ದರು. ಅವರು ನಿಲುವಿಕೆಯಿಂದ ಸಂಪೂರ್ಣ ಎತ್ತರವಾಗಿದ್ದು, ಅಜಸ್ರವಾದ ಶಸ್ತ್ರಗಳನ್ನು ಧರಿಸಿ ದವರೂ, ಪ್ರಚಂಡವಾದ ಕುದುರೆಗಳನ್ನು ಹತ್ತಿದವರೂ ಆಗಿದ್ದರು. ಈ ರಾವುತರ ಮುಂದೆ ಕಾಲಾಳುಗಳ ಸಾಲುಗಳು ಪಸರಿಸಿದ್ದವು. ಕಾಲಾಳುಗಳು ತುಬಾಕಿ,ಬಿಲ್ಲು-ಬಾಣಗಳು, ಖಡ್ಗ ಗಳು ಮೊದಲಾದ ಎಲ್ಲ ಬಗೆಯ ಶಸ್ತ್ರಾಸ್ತ್ರಗಳನ್ನು ಧರಿಸುವವರು ಇದ್ದರು. ಇವರಲ್ಲಿ ಬುಂದೇಲಿ, ಮೇವಾಡಿ ಮೊದಲಾದ ಗುಡ್ಡಗಾಡಿನ ಶೂರ ಜನರು ಇದ್ದರು. ಕರ್ನಾಟಕದ ಧಷ್ಟಪುಷ್ಟರಾದ ಭವ್ಯಜನರ ಸಮಾವೇಶವೂ ಆ ದಂಡಿನಲ್ಲಿ ಆಗಿತ್ತು. ಬಾದಶಹನ ಈ ಸೈನ್ಯದ ಸುತ್ತುಮುತ್ತು ಅಜ್ಜ ಗಾವಲಾಗಿದ್ದ ಆತನ ಪ್ರಚಂಡವಾದ ಜಾಗ್ರತ ತೋಫಖಾನೆಯ ಮೇಲೆ ಯುರೋಪಿಯನ್ ಗೋಲಂದಾಜರಿದ್ದರು. ಆ ತೋಫಖಾನೆಗೆ ಹೊಂದಿಯೇ ಸುರಂಗ ಹಾರಿಸುವವರ ದೊಡ್ಡ ಕಾರಖಾನೆಯಿತ್ತು. ಖುದ್ದ ಬಾದಶಹನ ಡೇರೆಯ ಸುತ್ತು

ಮುತ್ತು ಕಾದುವ ಪ್ರಚಂಡ ಆನೆಗಳ ದೊಡ್ಡಸಾಲು ಭಯಂಕರವಾಗಿ ತೋರುತ್ತಿತ್ತು, ಇವಲ್ಲದೆ ಜನಾನಖಾನೆಗಳು, ಯುದ್ಧದ ಸಾಮಾನುಗಳನ್ನು ಒಯ್ಯುವ ಆನೆ ಒಂಟೆ ಮೊದಲಾದವುಗಳ ಹಲವು ಸಾಲುಗಳು ಯೋಗ್ಯಸ್ಥಾನದಲ್ಲಿ ಇದ್ದವು. ಎರಡನೆಯ ಮಗ್ಗಲಿಗೆ ಬಾದಶಹನ ಮೃಗಯಾ ಗೃಹವು (ಶಿಕಾರ ಖಾನೆಯು) ಇತ್ತು, ಅದರಲ್ಲಿ ಸಿಂಹ, ಹುಲಿ, ಚಿರ್ಚು, ಬೇಟೆಯ ನಾಯಿಗಳು, ಸಿಂಗಳೀಕಗಳು, ಗಿಡಗಳು ಮೊದಲಾದ ಹಿಂಸ್ರ ಪಶು–ಪಕ್ಷಿಗಳು ಇದ್ದವು. ಇವುಗಳ ಪ್ರದರ್ಶನವು ಇಂದಿನ ದರ್ಬಾರದಲ್ಲಿ ಆಗತಕ್ಕದ್ದಿತ್ತು.

ಇಂದು ಬಾದಶಹನು ಮುಕರ್ಬಖಾನರ ಸತ್ಕಾರಕ್ಕಾಗಿ ದೊಡ್ಡ ದರ್ಬಾರು ನೆರವೇರಿಸ ತಕ್ಕವನಿದ್ದನು. ಖಾನನು ಮರಾಟರ ರಾಜನಾದ ಸಂಭಾಜಿಯನ್ನು ಸೆರೆಹಿಡಕೊಂಡು ಬಂದಿದ್ದು, ಆತನನ್ನು ಕೊಲ್ಲಬೇಕೋ, ಆಜನ್ಮ ಸೆರೆಯಲ್ಲಿಡಬೇಕೋ ಎಂಬದರ ವಿಚಾರವು ದರ್ಬಾರದಲ್ಲಿ ಆಗತಕ್ಕದ್ದಿತ್ತು. ಇಂದಿನ ದರ್ಬಾರ ಗೃಹವು ಬಹು ಭವ್ಯವೂ, ವಿಸ್ತೃತವೂ, ಮನೋಹರವೂ, ಅತ್ಯಂತ ವೈಭವ ಸಂಪನ್ನವೂ ಆಗಿತ್ತು. ಅದರಲ್ಲಿ ಇರಾಣದ ರತ್ನ ಗಂಬಳಿಗಳು, ದಮಶ್ಕಸದ ರೇಶಿಮೆಯ ಪಡದೆಗಳು, ಯುರೋಪದೊಳಗಿನ ಮಖಮಲು–ಸಾಟಿನಿ ವಸ್ತ್ರಗಳು, ಚೀನದ ರೇಶಿಮೆಯ ವಸ್ತ್ರಗಳು, ಡಾಕಾ ಪಟ್ಟಣದ ಮಲಮಲುಗಳು, ಎಲ್ಲ ಕಡೆಯಲ್ಲಿ ಕಣ್ಣಿಗೆ ಬೀಳುತ್ತಿದ್ದವು. ದರ್ಬಾರದ ಅಲಂಕಾರಕ್ಕಾಗಿ ಬಂಗಾರ, ಮುತ್ತು, ರತ್ನಗಳನ್ನು ನೆಲೆಯಿಲ್ಲದೆ ಉಪಯೋಗಿಸಿದ್ದರು. ಇಂಥ ಅಪೂರ್ವ ದರ್ಬಾರದಲ್ಲಿ ಆಲಮಗೀರನಿಂದ ಬಹುಮಾನ ಪಡೆಯುವ ಭಾಗ್ಯಶಾಲಿಯಾದ ಮುಕರ್ಬಖಾನನು, ತನ್ನ ದುರ್ದೈವಿಯಾದ ಸಂಭಾಜಿಯೇ ಮೊದಲಾದ ಸೆರೆಯಾಳುಗಳನ್ನು ಹಿಂದೆ ಹಾಕಿಕೊಂಡ ಉಲ್ಲಾಸದಿಂದ ಬರುತ್ತಲಿದ್ದನು. ಆ ಐಶ್ವರ್ಯವಂತನಾದ ಸರದಾರನು, ಸರ್ವಾಂಗಗಳಲ್ಲಿ ಶಸ್ತ್ರಗಳನ್ನು ಧರಿಸಿದವನಾಗಿ ಶೃಂಗರಿಸಿದ ತನ್ನ ಬೂದಿಬಣ್ಣದ ಪಂಚಾಳಿ ಜಾತೆಯ ಕುದುರೆಯನ್ನು ಹತ್ತಿದ್ದನು. ಆತನನ್ನು ಅನುಸರಿಸಿ ರಾವುತರೂ ಕಾಲಾಳುಗಳೂ ಸೆರೆಯಾಳುಗಳನ್ನು ರಕ್ಷಿಸುತ್ತ ಬರುತ್ತಿದ್ದರು. ಆ ಕಾಲದಲ್ಲಿ ಲಕ್ಷಾವಧಿ ಜನ ಮೋಜುಗಾರರು ನೆರೆದು ಸಂಭಾಜಿಯ ಈ ಮೆರವಣಿಗೆಯನ್ನು ನೋಡುತ್ತಲಿದ್ದರು.

ಸೆರೆಯಾಳುಗಳ ಮೆರವಣಿಗೆಯು ಬಾದಶಹನ ಡೇರೆಯ ಸನಿಯಕ್ಕೆ ಬರಹತ್ತಿದಂತೆ, ಕರ್ಣ–ಕಠೋರವಾದ ರಣವಾದ್ಯಗಳು ಬಾರಿಸಹತ್ತಿದವು. ಬಾದಶಹನ ಸೈನ್ಯವು ತಳಊರಿದ ಯಾಪತ್ತು ಪ್ರದೇಶದ ವಿಸ್ತಾರವು ಆರು ಮೈಲು ಇತ್ತು. ಈ ಮೆರವಣಿಗೆಯು ಮುಂದಕ್ಕೆ ಸಾಗುತ್ತ ಸಾಗುತ್ತ ಆರು ಮೈಲಿನ ಪ್ರದೇಶವನ್ನು ದಾಟಿ ಬಾದಶಹನ ಡೇರೆಯ ಸುತ್ತಲಿನ ಕಂದಕವನ್ನೂ ದಾಟಿ. ದೊಡ್ಡ ದೊಡ್ಡ ಕಮಾನುಗಳಿಂದ ವಿಭೂಷಿತವಾದ ಪ್ರವೇಶದ್ವಾರವನ್ನು ದಾಟಿಹೋದ ಕೂಡಲೆ, ಹುಜರಾತಿಯ ರಾವುತರು ಎರಡೂ ಮಗ್ಗಲು ಸಾಲಾಗಿ ನಿಂತುಕೊಂಡು ಅದಕ್ಕೆ ಹಾದಿಯನ್ನು ಕೊಟ್ಟರು. ಬಳಿಕ ಆ ಮೆರವಣಿಗೆಯು ಮಾರ್ಗವನ್ನು ಕ್ರಮಿಸುತ್ತ ಬಾದಶಹನಿರುವ ಕೆಂಪು ಡೇರೆಯ ಸುತ್ತು ಮುತ್ತಲಿನ ಬಾದಶಾಹೀ ಬಾಜಾರದ ಭವ್ಯವಾದ ಮಾರ್ಗದಿಂದ ಪಟಾಂಗಣದೊಳಗಿನ ''ಗುಲಾಬ'' ಎಂಬ ತೋಟವನ್ನು

ಹೊಕ್ಕಿತು. ಆ ಮೆರವಣಿಗೆಯು ವಿಶ್ರಾಂತಿಗಾಗಲಿ, ಬಾದಶಹನು ದರ್ಬಾರಕ್ಕೆ ಇನ್ನೂ ಬಂದಿಲ್ಲೆಂಬ ಕಾರಣದಿಂದಾಗಲಿ ಈ ತೋಟದೊಳಗಿನದೊಂದು ದೊಡ್ಡ ಡೇರೆಯಲ್ಲಿ ಕುಳಿತುಕೊಂಡಿತು; ಆದರೆ ದುರ್ದೈವಿಯೂ, ಕೃತಕರ್ಮದ ಪ್ರಾಯಶ್ಚಿತ್ತವನ್ನು ಭೋಗಿಸಲು ಆದ ಪಾತ್ರನೂ ಸಂಭಾಜಿಗೆ ವಿಶ್ರಾಂತಿಯು ಹ್ಯಾಗೆ ದೊರೆಯಬೇಕು? ಆ ಮೆರವಣಿಗೆಯವರು ಸ್ವಲ್ಪ ವಿಶ್ರಮಿಸಿದರೋ ಇಲ್ಲವೋ, ಅಷ್ಟರಲ್ಲಿ ಬಾದಶಹನ ಆಗಮನ ಸೂಚಕ ಚೌಘಡೆಯು ಬಾರಿಸಹತ್ತಿತು; ನೌಬತ್ತಿನ ಧ್ವನಿಯು ದಿಕ್ತಟವನ್ನು ತುಂಬಹತ್ತಿತು; ಆನೆಗಳ ಸಾಲುಗಳ ಮೇಲಿನ ಹುಜರಾತಿಯ ನಿಶಾನೆಗಳು ಹವೆಯಲ್ಲಿ ಪಟಪಟಿಸುತ್ತಿರುವದು ಕಣ್ಣಿಗೆ ಬೀಳಹತ್ತಿತು. ಮದೋನ್ಮತ್ತವಾದ ಆನೆಗಳ ಮುಖಮಲೆಯ, ಹಾಗು ಭರಜರಿಯ ರತ್ನ ಖಚಿತವಾದ ಜೂಲಗಳಮೇಲೆ, ಹಾಗು ಬೆಳ್ಳಿ–ಬಂಗಾರದ ಅಲಂಕಾರಗಳ ಮೇಲೆ, ಸೂರ್ಯಕಿರಣಗಳು ಬಿದ್ದದ್ದರಿಂದ ಜನರ ಕಣ್ಣುಗಳು ಕುಕ್ಕಹತ್ತಿದ್ದವು. ಎಲ್ಲಕ್ಕೂ ಮುಂದೆ ಈ ಶೃಂಗರಿಸಿದ ಆನೆಗಳ ಸಾಲುಗಳು ಹೋಗುತ್ತಿರಲು, ಅವುಗಳ ಹಿಂದೆ ನಾನಾ ರತ್ನ–ವಿಭೂಷಿತಗಳಾದ, ಹಾಗು ಮಲಮಲಿನ ಭರಜರಿಯ ಜೂಲಗಳಿಂದ ಅಲಂಕರಿಸಲ್ಪಟ್ಟಿದ್ದ ಅರೇಬಿಯ ಹಾಗು ಪರ್ಶಿಯನ್ ಕುದುರೆಗಳ ಸಾಲುಗಳು ಡೌಲಿನಿಂದ ಸಾಗಿದ್ದವು. ಅವುಗಳ ಹಿಂದೆ ಸೊಕ್ಕಿದ ಹೆಣ್ಣಾನೆಗಳದೊಂದು ಗುಂಪು ಸಾಗಿತ್ತು, ಅವುಗಳ ಹಿಂದೆ ತುಂಬಿದ ತುಬಾಕಿ ಗಳನ್ನು ಹಿಡಿದುಕೊಂಡಿದ್ದ ಸೈನಿಕರ ಸಾಲುಗಳು ಹೊರಟಿದ್ದವು. ಇವರ ತುಬಾಕಿಗಳ ಮೇಲೆ ಸುತೀಕ್ಷ್ಣವಾದ ಸಂಗೀನುಗಳನ್ನು ಕೂಡಿಸಿದ್ದರು. ಈ ದಂಡುಗಳ ಸಾಲುಗಳ ಹಿಂದುಗಡೆಯಲ್ಲಿ ದೊಡ್ಡ ದೊಡ್ಡ ಸರದಾರರು, ದರಕದಾರರು, ದರಬಾರಿಗಳು, ಮಾನಕರಿಗಳು, ಮುತ್ಸದ್ದಿಗಳು ಇವರ ಸಾಲುಗಳು ಬರುತ್ತಿದ್ದವು. ಇವುಗಳ ಹಿಂದೆ ಖುದ್ದ ಬಾದಶಹಾ ಔರಂಗಜೇಬ ಅಲಮ ಗೀರಗಾಝೀ ಈತನ ಉತ್ತಮವಾದ ಐರಾವತವು ರತ್ನಾಲಂಕಾರ ಗಳಿಂದ ಪ್ರಕಾಶಮಾನವಾಗಿ ಗಾಂಭೀರ್ಯದಿಂದ ಸಾಗಿತ್ತು, ಆ ಆನೆಯ ಮೇಲೆ ರತ್ನಖಚಿತ ವಾದ ಅಂಬಾರಿಯಲ್ಲಿ ಬಾದಶಹನು ವಿರಾಜಮಾನನಾಗಿದ್ದನು. ಆತನ ಎಡಬಲಗಳಲ್ಲಿ ಸರದಾರರು ತಮ್ಮ ತಮ್ಮ ಸೈನ್ಯಗಳೊಡನೆ ಬಾದಶಹನನ್ನು ರಕ್ಷಿಸಹತ್ತಿದ್ದರು.

ಈ ಚಂದದಿಂದ ಬಾದಶಹನು ದರ್ಬಾರದಲ್ಲಿ ಬಂದು, ದರ್ಬಾರದ್ದೊಂದು ಭಾಗವಾದ ''ದಿವಾಣ ಈ ಖಾಸ'' ಎಂಬಲ್ಲಿ ವಿಶ್ರಾಂತಿಗಾಗಿ ಹೋದನು. ಈ ಅವಕಾಶದಲ್ಲಿ ದರ್ಬಾರದ ಮುಖ್ಯ ಭಾಗವಾದ ''ದಿವಾಣ ಇ ಆಮ'' ಎಂಬಲ್ಲಿ ಯಾವತ್ತು ರಾಜರು, ಮಹಾರಾಜರು, ಸರದಾರರು, ಸೇನಾಪತಿಗಳು, ಅಮೀರರು, ಉಮರಾವರು, ಸುಬೇದಾರರು, ಮನಸಬ ದಾರರು ಮೊದಲಾದವರು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಂಡರು. ಇದೇ ಸಮಯ ದಲ್ಲಿ ಜಯಶಾಲಿ ಯಾದ ಮುಕರ್ಬಖಾನನು ತನ್ನ ಸೆರೆಯಾಳುಗಳೊಡನೆ ಒಂದು ಭರಜರಿಯ ಪಡೆದೆಯ ಹಿಂದೆ ಬಂದು ಕುಳಿತುಕೊಂಡನು. ಅಷ್ಟರಲ್ಲಿ ಬಜಂತ್ರಿಯ ಮಂಗಲ ಧ್ವನಿಯು ಆಗಹತ್ತಿತು. ಜ್ಯೋತಿಷಿಗಳು ಬಾದಶಹನಿಗೆ ದರ್ಬಾರವನ್ನು ಪ್ರವೇಶಿಸು ವದಕ್ಕಾಗಿ ಮುಹೂರ್ತದ ಗಳಿಗೆಗಳನ್ನು ಉದ್ಘೋಷಿಸಹತ್ತಿದರು. ಚೌಘಡದ ಕಡಕಡಾಟದಲಿ, ವಾದ್ಯಗಳ ಗಂಭೀರ ಘೋಷದಲ್ಲಿ ಗಂಧರ್ವರ ತಾಲಸ್ವರದಲ್ಲಿ, ಅಪ್ಸರೆಯರ

ನೃತ್ಯಾಂದೋಲನದಲ್ಲಿ ಶಹಾನಶಹಾ ಬಾದಶಹನು ಸಿಂಹಾಸನವನ್ನೇರಿದ ಕೂಡಲೆ, ಮುಕರ್ಬಖಾನನು ಕುಳಿತುಕೊಂಡಿದ್ದ ಸ್ಥಳದ ಮುಂದಿನ ಜರತಾರಿಯ ಪರದೆಯನ್ನು ದೂರ ಮಾಡಿದರು. ಆಗ ಮುಕರ್ಬಖಾನನು ಬಾದಶಹನಿಗೆ ಬಗ್ಗಿ ಬಹು ವಿನಯದಿಂದ ಮುಜುರೆ ಮಾಡಿ, ಸೆರೆಯಾಳಾದ ಸಂಭಾಜಿಯನ್ನು ಅವನ ಪರಿವಾರ ದೊಡನೆ ಬಾದಶಹನಿಗೆ ಕಾಣಿಕೆಯಾಗಿ ಒಪ್ಪಿಸಿದನು. ಸ್ತುತಿಪಾಠಕರು ಬಾದಶಹನ ಬಿರುದಾವಳಿಯನ್ನು ಹೊಗಳ ಹತ್ತಿದ್ದರು. ''ಅಬುಲ್ ಮುಜಫರಮುಹಿ ಉದ್ದೀನ ಮುಹಮ್ಮದ ಔರಂಗಜೇಬ ಬಹಾದ್ದೂರ ಅಲಮುಗೀರ ಬಾದಶಾಹಿ ಗಾಝೀ'' ಎಂದು ಹೊಗಳುವ ಮೊಗಲ ಚಕ್ರವರ್ತಿಯ ಬಿರುದಾವಳಿಯನ್ನು ಕೇಳಿ, ಸಂಭಾಜಿಯ ಕಣ್ಣುಗಳು ಕೆಂಡದಂತಾದವು. ಇತ್ತ ಬಾದಶಹನು ಸ್ತುತಿಪಾಠಕರ ಜಯಘೋಷದೊಡನೆ ದರ್ಬಾರದ ಜನರಿಗೆ ಉಡುಗರೆಗಳನ್ನು ಕೊಟ್ಟನು. ಕಟ್ಟಕಡೆಯಲ್ಲಿ ಒಂದು ಭರಜರಿಯ ಉಡುಗರೆಯು ಮುಕರ್ಬಖಾನನಿಗೆ ಬಾದಶಹನಿಂದ ಅರ್ಪಿಸಲ್ಪಟ್ಟಿತು. ಮುಂದೆ ಮತ್ತೆ ಬಾದಶಹನ ಹೆಸರಿನ ಜಯಘೋಷವಾಗ ಹತ್ತಲು, ಬೆಳ್ಳಿ–ಬಂಗಾರದ ತಬಕದೊಳಗಿಂದ ಬೆಳ್ಳಿ–ಬಂಗಾರದ ನಾಣ್ಯಗಳನ್ನೂ ಮುತ್ತು ರತ್ನಗಳನ್ನೂ ದರ್ಬಾರದಲ್ಲಿ ಸೂರೆಮಾಡಿದ. ಆಮೇಲೆ ಸಾಮಂತರಾಜರು ''ಉಮರ್ದರಾಜ ಖಲಿಫೌಜ ಮಾನ'' ಎಂಬ ಘೋಷದಲ್ಲಿ ಬಾದಶಹನ ಚರಣಗಳನ್ನು ವಂದಿಸಿದರು. ಆಗ ಸಾಮಂತ ಚಕ್ರದಮೇಲೆ ರತ್ನಖಚಿತವಾದ ತಬಕದೊಳಗಿಂದ ಸುಗಂಧೋದಕಗಳ (ಅತ್ತರ– ಗುಲಾಬು ಗಳ) ಸೇಚನ ಮಾಡಿದರು. ಕಸ್ತೂರಿ ಅಂಬರ ಇವುಗಳ ಸುಗಂಧವು ಎಲ್ಲ ವಾತಾವರಣ ದಲ್ಲಿ ಸಮರಸವಾಗಿ ಕೂಡಿಕೊಂಡು ಹೋಯಿತು. ಮೈಲಗಿರಿ ಚಂದನದ ಧೂಪದಿಂದ ಸಭಾ ಮಂಟಪವು ಕ್ಷಣಹೊತ್ತು ಮೇಘಾಚ್ಛಾದಿತವಾದಂತೆ ತೋರಿತು. ಪದ್ಧತಿಯಂತೆ ಬಾದಶಹನು ಪ್ರಕೃತದಲ್ಲಿ ನಡೆದಿರುವ ಯುದ್ಧದ ವರ್ತಮಾನವನ್ನು ವಿಚಾರಿಸಲು, ಮುಕರ್ಬ ಖಾನನು ತನ್ನ ದಂಡಯಾತ್ರೆಯನ್ನು ಸ್ವಲ್ಪದರಲ್ಲಿ ವರ್ಣಿಸಿ, ಸಂಭಾಜಿಯೇ ಮೊದಲಾದ ತನ್ನ ಸೆರೆಯಾಳುಗಳ ಪರಿಚಯವನ್ನು ಬಾದಶಹನಿಗೆ ಮಾಡಿಕೊಟ್ಟನು.

ಆ ಪ್ರಸಂಗದಲ್ಲಿ ಔರಂಗಜೇಬನಿಗೆ ಬಹಳ ಸಂತೋಷವಾಯಿತು. ಹಿಂದಕ್ಕೆ ಆತನು ಶಿವಾಜಿಯನ್ನು ಸೆರೆಯಲ್ಲಿ ಹಾಕಿರಲು, ಆ ಪುಂಡ ಶಿವಾಜಿಯು ಮಂಕುಬೂದಿ ಹಚ್ಚಿ ದಿಲ್ಲಿಯಿಂದ ತನ್ನ ರಾಜ್ಯಕ್ಕೆ ಬಂದು ರಾಯಗಡದಲ್ಲಿ ಸಿಂಹಾಸನವೇರಿ ಪುನಃ ಬಾದಶಹನಿಗೆ ಹಲವು ವಿಧದಿಂದ ತೊಂದರೆಕೊಡುತ್ತಿದ್ದನು. ದಿನದಿನಕ್ಕೆ ಮಹಾರಾಷ್ಟ್ರರು ಬಲಿಷ್ಠರಾಗುತ್ತ ಹೋಗಿ, ತನಗೆ ಅವರ ಬಾಧೆಯು ವಿಶೇಷವಾಗಿ ತಟ್ಟಹತ್ತಿದ್ದರಿಂದ, ಒಮ್ಮೆ ದಕ್ಷಿಣದೊಳಗಿನ ರಾಜ್ಯ ಗಳನ್ನೆಲ್ಲ, ಅವು ಹಿಂದುಗಳವಿರಲಿ–ಮುಸಲ್ಮಾನರವಿರಲಿ ಮುರಿದುಬಿಟ್ಟು, ತಾನು ಹಿಮಾಲಯ ದಿಂದ ರಾಮೇಶ್ವರದವರೆಗೆ ಬಾದಶಹನಾಗಿ ಆಳಬೇಕೆಂಬ ಮಹತ್ವಾಕಾಂಕ್ಷೆಯಿಂದ ಆತನು ಪ್ರಕೃತದ ದಂಡಯಾತ್ರೆಯನ್ನು ಹೂಡಿದ್ದನು. ಹೀಗಿರುವಾಗ ತಾನು ವಿಜಾಪುರ– ಗೊವಳಕೊಂಡ ರಾಜ್ಯಗಳನ್ನು ಮುಣುಗಿಸಿದ ಸ್ವಲ್ಪ ವರ್ಷಗಳಲ್ಲಿಯೇ ಮರಾಟರ ರಾಜನು ತನ್ನ ಸೆರೆಯಲ್ಲಿ ಸಿಕ್ಕದ್ದರಿಂದ ಬಾದಶಹನಿಗೆ ಸಂತೋಷ ವಾದದ್ದೇ

ನಾಶ್ಚರ್ಯವು! ಸಂತೋಷದ ಭರದಲ್ಲಿ ಆತನು ಅಂದು ದರ್ಬಾರದಲ್ಲಿ ಹೆಚ್ಚಿನ ಕೆಲಸಗಳನ್ನೇನು ನಡಿಸದೆ ದರ್ಬಾರು ಮುಗಿಸಿದನು. ಆದ್ದರಿಂದ ಸಂಭಾಜಿಯು ತನ್ನ ಭವಿಷ್ಯವನ್ನು ಚಿಂತಿಸುತ್ತ ತನ್ನ ಅನುಯಾಯಿಗಳೊಡನೆ ಮುಕರ್ಬಖಾನನ ಸೆರೆಯಲ್ಲಿ ಅಂದಿನ ದಿನವನ್ನು ಕಳೆಯಬೇಕಾಯಿತು. ಮರುದಿನದ ದರ್ಬಾರದಲ್ಲಿ ಆತನ ವಿಚಾರಣೆಯಾಗತಕ್ಕದ್ದಿತ್ತು.

ಸುಮಾರು ಎರಡುತಾಸು ಹೊತ್ತು ಏರಿರಬಹುದು. ಮುಕರ್ಬಖಾನನ ಸೆರೆಮನೆಯಲ್ಲಿ ಸಂಭಾಜಿಯು ಕೇವಿಯದೊಂದು ಕಪನಿಯನ್ನು ತೊಟ್ಟುಕೊಂಡು, ತಲೆಗೆ ಬಿಳಿಯ ಪಟಕವನ್ನು ಸುತ್ತಿಕೊಂಡು, ತಾನು ಮಾಡಿದ ಅನಂತ ದುಷ್ಕೃತ್ಯಗಳಿಗಾಗಿ ಪಶ್ಚಾತ್ತಾಪಪಟ್ಟು ಎರಡೂ ಮೊಣಕಾಲುಗಳ ಮೇಲೆ ತಲೆಯಿಟ್ಟು ಕೊಂಡು ಕಣ್ಣೀರು ಸುರಿಸುತ್ತಲಿದ್ದನು. ಆತನು ಹಾಕಿಕೊಂಡಿದ್ದ ಸುವರ್ಣಾಲಂಕಾರಗಳು ಆತನ ಮೈಮೇಲೆ ಹಾಗೆಯೇ ಇದ್ದವು. ಹೀಗೆ ಕೆಲಕಾಲವನ್ನು ಸಂಭಾಜಿಯು ದುಃಖದಿಂದ ಕಳೆಯುತ್ತಿರಲು, ಸ್ವತಃ ಮುಕರ್ಬಖಾನನು ಒಬ್ಬ ವೃದ್ಧ ಫಕೀರನೊಡನೆ ಅಲ್ಲಿಗೆ ಬಂದನು. ದುಃಖದ ಭರದಲ್ಲಿ ಸಂಭಾಜಿಯು ಅವರನ್ನು ನೋಡಿದ್ದೇ ಇಲ್ಲ, ಆಗ ಫಕೀರನು ಸಂಭಾಜಿಯನ್ನು ಕುರಿತು— "ತಮ್ಮಾ, ನಿನಗೆ ನನ್ನ ಗುರುತು ಹತ್ತುವದೋ, ಎಂದು ಪ್ರಶ್ನೆಮಾಡಲು, ಸಂಭಾಜಿಯು ಗಡಬಡಿಸಿ ಎಚ್ಚತ್ತಂತೆ ಮುಖವನ್ನು ಮೇಲಕ್ಕೆತ್ತಿ ಫಕೀರನನ್ನು ನೋಡಿದನು. ಆಗ ಫಕೀರನು ಪುನಃ ಸಂಭಾಜಿಯನ್ನು ಕುರಿತು—ಮೇಲಿನಂತೆಯೇ ಪ್ರಶ್ನೆ ಮಾಡಲು, ಅದಕ್ಕೆ ಸಂಭಾಜಿಯು—

ಸಂಭಾಜಿ—ಹೌದು, ನಿಮ್ಮ ಮೋರೆಯ ಗುರುತು ನನಗೆ ಹತ್ತಿದಹಾಗೆ ಆಗುತ್ತದೆ.

ಫಕೀರ—ಶಹಾಜಾದಾ–ಅಕಬರನು ತನ್ನ ತಂದೆಯ ಮೇಲೆ (ಔರಂಗಜೇಬನ ಮೇಲೆ) ತಿರುಗಿಬಿದ್ದು ನಿನ್ನನ್ನು ಕೂಡಿದಾಗ, ನಾನು ಆತನಿಗೆ ನಾಲ್ಕು ಉಪದೇಶದ ಮಾತುಗಳನ್ನು ಹೇಳಲಿಕ್ಕೆ ನಿನ್ನ ಛಾವಣಿಗೆ ಬಂದಿದ್ದೆನಲ್ಲವೇ?

ಸಂಭಾಜಿ–ಹೌದು, ಶಹಾಜಾದಾನನ್ನು ಮರುಳು ಮಾಡಿ ಆತನನ್ನು ಬಾದಶಹನ ಸೆರೆಮನೆಗೆ ಕರಕೊಂಡು ಹೋಗಲಿಕ್ಕೆ ನೀವು ಬಂದದ್ದು ನಿಜವು.

ಫಕೀರ–ತಮ್ಮಾ, ನಿನ್ನ ತಿಳುವಳಿಕೆಯಲ್ಲಿ ತಪ್ಪು ಇರುತ್ತದೆ. ನಾನು ಶಹಾಜಾದಾನನ್ನು ಮೋಸಗೊಳಿಸಿಲಿಕ್ಕೆ ಬಂದಿದ್ದಿಲ್ಲ. ಶಹಾಜಾದಿಯ (ಔರಂಗಜೇಬನ ಮಗಳ) ಅಪ್ಪಣೆಯಂತೆ ಆ ಶಹಾಜಾದಾ ಅಕಬರನ ಜೀವವನ್ನು ಉಳಿಸಲಿಕ್ಕೆ ಬಂದಿದ್ದೆನು.

ಸಂಭಾಜಿ—ಹಾಗೂ ಆಗಿರಬಹುದು; ಆದರೆ ಈಗ ನಾನು ಅದನ್ನು ತಕ್ಕೊಂಡು ಮಾಡುವದೇನು!

ಫಕೀರ—ಹೀಗೇಕೆ ಉದಾಸೀನನಾಗುತ್ತೀ? ಈಗ ನಾನು ನಿನ್ನ ಪ್ರಾಣವನ್ನು ಉಳಿಸಲಿಕ್ಕೆ ಬಂದಿದ್ದೇನೆ. ನಿನ್ನ ಕಲ್ಯಾಣವಾಗಬೇಕೆಂಬ ಇಚ್ಛೆಯು ನನಗೆ ಸಂಪೂರ್ಣವಾಗಿ ಇರುತ್ತದೆ. ನಿನ್ನ ಪ್ರಾಣವನ್ನು ಉಳಿಸುವದಕ್ಕಾಗಿ ಶಹಾಜಾದಿಯೂ (ಬಾದಶಹನ ಮಗಳೂ) ಈ ಖಾನರೂ ಬಾದಶಹನ ಬಳಿಯಲ್ಲಿ ಸಂಧಾನ ನಡೆಸಿರುವರು. ಸದ್ಯಕ್ಕೆ ನೀನು ನಿನ್ನ ಅನುಯಾಯಿಗಳಲ್ಲಿ ಯಾವನಾದರೊಬ್ಬನನ್ನು ಆರಿಸಿ ಹೇಳು. ಆತನನ್ನು ಖಾನಸಾಹೇಬರು ಬಂಧಮುಕ್ತ ಮಾಡಿ

ಬಿಡುವರು. ಅವನ ಸಂಗಡ ನೀನು ನಿನ್ನ ಹೆಂಡಿರು ಮಕ್ಕಳಿಗೆ ನಿನ್ನ ಯೋಗಕ್ಷೇಮವನ್ನು ತಿಳಿಸು.

ಸಂಭಾಜಿ—ಏನು! ನೀವು ನನ್ನ ಪ್ರಾಣವನ್ನು ಉಳಿಸುವಿರಾ? ಅಂದಬಳಿಕ ನಾನು ಸಾಯುವವರೆಗೆ ಸೆರೆಮನೆಯಲ್ಲಿ ಕೊಳೆಯಬೇಕಾಗುವದಲ್ಲವೆ? ಬೇಡ! ಸರ್ವಥಾ ಬೇಡ!! ಸೆರೆ ಮನೆಯಲ್ಲಿ ನನ್ನನ್ನು ಕೊಳಿಸುವದಕ್ಕಿಂತ ಬಾದಶಹನು ಒಮ್ಮೆಲೆ ನನ್ನನ್ನು ತೋಫಿನ ಬಾಯಿಗೆ ಕೊಟ್ಟುಬಿಟ್ಟರೆ ನೆಟ್ಟಿಗಾಗುವದು.

ಫಕೀರ—ತಪ್ಪಾ, ನಿನಗೆ ತಿಳಿಯುವದಿಲ್ಲ, ಶಹಾಜಾದಿಯು ಹೇಳಿದಂತೆ ಸದ್ಯಕ್ಕೆ ನೀನು ನಿನ್ನ ಹೆಂಡಿರು ಮಕ್ಕಳಿಗೆ ಸುದ್ದಿಯನ್ನು ಹೇಳಿಯೊಂದು ಕಳಿಸಿಕೊಡು. ಉಳಿದವಾತು ಹಿಂದುಗಡೆ.

ಸಂಭಾಜಿ—ಹೇಳಿಕಳಿಸಲಾ? ಏನು ಹೇಳಿ ಕಳಿಸಲಿ? ಆದರೆ ಸಾಯಜೀ, ಶಹಾಜಾದಿಯ ಉಪಕಾರವು ನನ್ನ ಮೇಲೆ ಬಹಳವಾಗಿರುತ್ತದೆ. ''ಜೋತಾಜಿ'' ಎಂಬ ಹೆಸರಿನ ನನ್ನ ಸೇವಕನನ್ನು ಬಂಧಮುಕ್ತಮಾಡಿ ನನ್ನ ಬಳಿಗೆ ಕಳಿಸಿಕೊಡಬೇಕು.

ಈ ಮೇರೆಗೆ ಸಂಭಾಷಣವಾದ ಬಳಿಕ ಫಕೀರನು ಸಂಭಾಜಿಗೆ ನಾಲ್ಕು ಹಿತದ ಮಾತುಗಳನ್ನು ಉಪದೇಶಿಸಿದನು. ಅವನ್ನು ಸಂಭಾಜಿಯು ಸಚಿಂತ ವೃತ್ತಿಯಿಂದ ಗಟ್ಟಿಮನಸ್ಸು ಮಾಡಿ ಸುಮ್ಮನೆ ಕೇಳಿಕೊಂಡನು. ಆಮೇಲೆ ಫಕೀರನೂ, ಖಾನನೂ ದರ್ಬಾರದ ಹೊತ್ತು ಆಯಿತೆಂದು ಅವಸರದಿಂದ ಹೊರಟುಹೋದರು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ಸ್ವಾಮಿ ನಿಷ್ಠ ಸೇವಕನಾದ ಜೋತಾಜಿಯು ಬಂಧಮುಕ್ತನಾಗಿ ತನ್ನ ಒಡೆಯನ ಬಳಿಗೆ ಬಂದನು.

ಒಡೆಯನ ಈ ದುಃಸ್ಥಿತಿಯನ್ನು ನೋಡಿ ಜೋತಾಜಿಯ ದುಃಖವು ಒತ್ತರಿಸಿತು. ಆತನು ಬಿಕ್ಕಿ ಬಿಕ್ಕಿ ಅಳುತ್ತ ತನ್ನ ಒಡೆಯನನ್ನು ಕುರಿತು— ''ಮಹಾರಾಜ, ಇಂಥ ದುಃಸ್ಥಿತಿಯು ತಮಗೆ ಹ್ಯಾಗೆ ಒದಗಿತು? ತಮಗೆ ಯಾವ ದುಷ್ಟನ ದೃಷ್ಟಿಯು ಆಯಿತು! ಆಬಾಸಾಹೇಬರ ಪುಣ್ಯವು ಇವತ್ತಿಗೆ ತೀರಿತೇನು! ಮಾತೃಶ್ರೀ ಜೀಜಾಬಾಯಿಯವರ ಆಶೀರ್ವಾದದ ಸೆಲೆಯು ಈವೊತ್ತಿಗೇ ಅಟ್ಟಿಸಿತೋ? ಇಂಥ ಕಾಲದಲ್ಲಿ ನನ್ನ ಬಂಧವಿಮೋಚನೆಯನ್ನು ನೀವು ಯಾಕೆ ಮಾಡಿಸಿರುವಿರಿ? ಏಸೂಬಾಯಿಸಾಹೇಬರವರಿಗೆ ಈ ಸೊಟ್ಟ ಮೋರೆಯನ್ನು ಹ್ಯಾಗೆ ತೋರಿಸಲಿ? ರಾಜಾರಾಮ ಮಹಾರಾಜರಿಗೆ ಏನು ಹೇಳಲಿ? ರಾಜಕುವರಳ ಮುಂದೆ ಹ್ಯಾಗೆ ನಿಂತುಕೊಳ್ಳಲಿ! ಎಂದು ಶೋಕ ಮಾಡುತ್ತಿರಲು, ಸಂಭಾಜಿಯು—

ಸಂಭಾಜಿ–ಸುಮ್ಮನಾಗು, ಜೋತ್ಯಾ ಸುಮ್ಮನಾಗು. ಇದು ಅಳುವ ಹೊತ್ತಲ್ಲ, ನನ್ನ ಪಾಪದ ಮಾಪು ತುಂಬಿದ್ದರಿಂದ ಪ್ರಾಯಶ್ಚಿತ್ತವನ್ನು ಭೋಗಿಸುವದಕ್ಕಾಗಿ ನಾನು ಕಾಳು ಪುರುಷನ ವಶವಾಗಿದ್ದೇನೆ. ಜೋತ್ಯಾ, ಆಬಾಸಾಹೇಬರ ಹೊಟ್ಟೆಯಲ್ಲಿನಾನು ಹುಟ್ಟಿ ಅವರ ಕುಲಕ್ಕೆ ಕಲಂಕವನ್ನುಂಟು ಮಾಡಿದೆನು. ನನ್ನಂಥ ದುಷ್ಟನನ್ನು ಆಶ್ರಯಿಸಿ ಸ್ವಾಮಿಭಕ್ತರಾದ ನೀವು ಕೆಟ್ಟಿರಿ. ಜೋತ್ಯಾ, ಹಿಂದಕ್ಕೆ ನಾನು ಆಬಾಸಾಹೇಬರ ಮೇಲೆ ತಿರುಗಿಬಿದ್ದು ಭೋಪಾಳ ಗಡವನ್ನು ದಿಲೇರಖಾನನಿಗೆ ಒಪ್ಪಿಸಿದಾಗ ಅದೇ ಕಾಲಕ್ಕೆ ಆಬಾಸಾಹೇಬರು ನನ್ನ ಮೋಕ್ಷ ವನ್ನು ಯಾಕೆ ಮಾಡಿರಲಿಕ್ಕಿಲ್ಲ? ಚಿಕ್ಕಂದಿನಲ್ಲಿ ನಾನು ತಂದೆಯೊಡನೆ ಔರಂಗಜೇಬನ ಸೆರೆ

ಯಲ್ಲಿ ಸಿಕ್ಕಿದ್ದೆನು. ಆಗ ನನ್ನ ಬಿಡುಗಡೆ ಯಾಕಾಗಿದ್ದೀತು? ನಾನು ಅಯೋಗ್ಯನೆಂದು ತಿಳಿದು ಆಬಾಸಾಹೇಬರು ನನ್ನನ್ನು ಪಲ್ಹಾಳಗಡದ ಮೇಲೆ ಸೆರೆಯಲ್ಲಿಟ್ಟು, ರಾಜಾರಾಮನನ್ನು ಪಟ್ಟಕ್ಕೆ ಕೂಡ್ರಿಸಿದರು! ಆದರೆ ಬಾಳಾಜಿಯಂಥ ಮುತ್ಸದ್ದಿಯು ಕೂಡ ನನ್ನನ್ನು ಉಪೇಕ್ಷಿಸಿ ಘಾತ ಮಾಡಿದನು! ನಾನು ಪುಂಡನೂ, ಪಿತೃದ್ರೋಹಿಯೂ, ವಿಷಯಾಸಕ್ತನೂ ಆದ್ದರಿಂದ ನನ್ನಿಂದ ಪರಾಕ್ರಮವೇನಾದೀ ತೆಂದು ಈ ಶ್ರೇಷ್ಠ ಮುತ್ಸದ್ದಿಯು ತಿಳಕೊಂಡಿರಬಹುದು! ಆದರೆ ಆತನು ತಪ್ಪಿದನು. ಆತನ ಆ ತಪ್ಪಿದ ಪ್ರಾಯಶ್ಚಿತ್ತಕ್ಕಾಗಿ ನಾನು ಚಾಂಡಾಲನು ಆ ಸ್ವಾಮಿನಿಷ್ಠನ ತಲೆಯನ್ನು ರಾಜಮಾರ್ಗದಲ್ಲಿ ಹಾರಿಸಿದೆನು! ಆಜನ್ಮ ಸ್ವಾಮಿಸೇವೆಯನ್ನು ಮಾಡಿದ್ದ ಆ ಪುಣ್ಯಾತ್ಮನ ಶರೀರವನ್ನು ಸೊಕ್ಕಿದ ಆನೆಯಿಂದ ತುಳಿಸಿ ಅರಿಸಿದೆನು! ಶಿವ ಶಿವ! ಸಂತಾಪದ ಭರದಲ್ಲಿ ನಾನು ಇನ್ನೂರು ಜನ ಮಹಾರಾಷ್ಟ್ರ ಸರದಾರರ ರುಂಡಗಳನ್ನು ಚಂಡಾಡಿದೆನು! ಜೋತ್ಯಾ, ಇಷ್ಟರಿಂದ ನನ್ನ ದುಷ್ಕೃತ್ಯಗಳ ಚರಿತ್ರವು ಮುಗಿಯಲಿಲ್ಲ. ರಾಜಾರಾಮನ, ಅರ್ಥಾತ್ ನನ್ನ ತಾಯಿಯಾದ ಸೋಯರಾಬಾಯಿಯನ್ನು ಗೋಡೆಯಲ್ಲಿ ಸೇರಿಸಿ ಮುಚ್ಚಿಸಿದೆನು. ಪತಿವ್ರತೆಯರ ಪಾತಿವ್ರತ್ಯದ ಭಂಗ ಮಾಡಿದೆನು. ಜೋತ್ಯಾ, ಇಂಥ ಮಹಾಪರಾಧಿಯಾದ ಚಾಂಡಾಲನಿಗೆ ಪ್ರಾಯಶ್ಚಿತ್ತವು ಬೇಡವೆ?

ಜೋತ್ಯಾ—ಮಹಾರಾಜ ಹೀಗೆ ಎಷ್ಟು ಶೋಕ ಮಾಡುವಿರಿ? ಸಂತಾಪದ ಭರದಲ್ಲಿ ಯಾರಿಂದಾದರೂ ತಪ್ಪುಗಳಾಗುವದುಂಟು; ದೊಡ್ಡ ಮಹಾರಾಜರು ಜಾವಳಿಯ ಮೋರೆ ಇವರ ಅವಸ್ಥೆಯನ್ನು ಏನು ಮಾಡಿದರೆಂಬದನ್ನು ತಾವು ಕೇಳಿಲ್ಲವೆ? ತಾವು ಮೊದಲೇ ಭಯಂಕರವಾದ ಸಂಕಟಕ್ಕೆ ಗುರಿಯಾಗಿರುವಾಗ, ಹಿಂದಿನದನ್ನೆಲ್ಲ ನೆನಸಿ ಮತ್ತಿಷ್ಟು ವ್ಯಥೆ ಯನ್ನುಂಟು ಮಾಡಿಕೊಳ್ಳಬಾರದು.

ಸಂಭಾಜಿ—ಜೋತ್ಯಾ, ಈ ನೀಚನಿಗೆ ಸಮಾಧಾನ ಹೇಳಬೇಡ. ಈ ನೀಚನ ಮುಖಸ್ತುತಿಯನ್ನು ಮಾಡಬೇಡ. ಆಬಾಸಾಹೇಬರನ್ನು ನನಗೆ ಹೋಲಿಸುವೆಯಾ? ಶಿವ ಶಿವ! ಇಂಥ ಮಾತನ್ನು ಇನ್ನೊಮ್ಮೆ ಆಡಬೇಡ. ಆಬಾಸಾಹೇಬರ ಅತ್ಯಂತ ಪ್ರೀತಿಗೆ ಪಾತ್ರನಾದ ಹಾಗು ಸುಗುಣಪೂರ್ಣನಾದ ನನ್ನ ಪ್ರಿಯಬಂಧು ರಾಜಾರಾಮನನ್ನು ದುಷ್ಟನಾದ ನಾನು ಸೆರೆಯಲ್ಲಿಡಲಿಲ್ಲವೆ? ನಾನು ಸಿಂಹಾಸನವನ್ನೇರಿ ಯಾವ ಮಹಾಕಾರ್ಯವನ್ನು ಮಾಡಿದೆನು? ನನ್ನನ್ನು ನಂಬಿ, ತನ್ನ ತಂದೆಯ ಮೇಲೆ ತಿರುಗಿಬಿದ್ದು ನನ್ನನ್ನು ಕೂಡಿಕೊಂಡಿದ್ದ ಶಹಾಜಾದ- ಅಕಬರನನ್ನು ನಾನು ನಿರಾಶಗೊಳಿಸಲಿಲ್ಲವೆ? ಹರ ಹರ! ಜಿಂಜಿರೆಯ ಹಬಸಿಯು ಬಹು ದಿವಸದಿಂದ ಆಬಾಸಾಹೇಬರ ಕಣ್ಣಲ್ಲಿ ಒತ್ತುತ್ತಿದ್ದನು. ಆದರೆ ಅದನ್ನು ನಿವಾರಣ ಮಾಡಲಿಕ್ಕೆ ನಾನೇನು ಮಾಡಿದೆನು?

ಜೋತ್ಯಾ—ಮಹಾರಾಜ, ತಮ್ಮನ್ನು ಈ ಪರಿ ಹಳಿದುಕೊಳ್ಳಬಾರದು? ತಮ್ಮ ಭೀಮ ಪರಾಕ್ರಮವನ್ನೂ, ಸರಳತನವನ್ನೂ ವೈರಿಗಳು ಕೂಡ ಒಪ್ಪಿಕೊಳ್ಳಬೇಕಾಗಿರುವದು? ಇರಲಿ, ಖಾನನು ಬರುವ ಹೊತ್ತಾಯಿತು. ರಾಯಗಡಕ್ಕೆ ಹೋಗಿ ನಾನು ಏನು ಹೇಳಲಿ? ಅಪ್ಪಣೆ ಕೊಡಿಸಬೇಕು.

ಸಂಭಾಜಿ—ಜೋತ್ಯಾ, ನನ್ನ ಬಂಧುವಾದ ರಾಜಾರಾಮನಿಗೆ ನೀನು ಹೇಳತಕ್ಕದ್ದೇ ನಂದರೆ—ರಾಜಾರಾಮಾ, ಈ ದುರ್ದೈವಿಯಾದ ಸಂಭಾಜಿಯ ಆಶೆಯನ್ನು ಬಿಡತಕ್ಕದ್ದು. ನಾನು ನಿನ್ನನ್ನು ಸೆರೆಯಲ್ಲಿ ಹಾಕಿದ್ದನ್ನು ನನ್ನ ಮೋರೆಯ ನೋಡಿಯಲ್ಲ, ಆಬಾ ಸಾಹೇಬರ ಮೋರೆಯನ್ನು ನೋಡಿ ಮರೆ. ಅಥವಾ, ಆಬಾಸಾಹೇಬರ ಹಿರಿಯ ಮಗನ– ಮಹಾರಾಷ್ಟ್ರ ರಾಜ್ಯಸ್ಥಾಪಕನ ಮಗನ ಕೈ–ಕಾಲುಗಳಲ್ಲಿರುವ ಬೇಡಿಗಳನ್ನಾದರೂ ನೋಡಿ ಮರೆ; ಆಬಾಸಾಹೇಬರು ಸಂಪಾದಿಸಿದ್ದನ್ನು ನಾನು ಕಳೆದೆನು. ಇನ್ನು ಮೇಲೆ ಅದರ ಅಭಿಮಾನವು ನಿನಗಿರಬೇಕು. ಹತಭಾಗ್ಯನಾದ ನನ್ನನ್ನು ನೀನು ಸಂಪೂರ್ಣವಾಗಿ ಕ್ಷಮಿಸಬೇಕು. ಪ್ರಿಯ ಬಂಧೂ, ರಾಜಾರಾಮಾ, ನಾನು ಮಾಡಿರುವ ಸೋಯಿರಾಬಾಯಿಯ ಖೂನಿನ ಸೇಡನ್ನು ನಿನ್ನ ಅತ್ತಿಗೆಯ ಮೇಲೆ ತೀರಿಸಿಕೊಳ್ಳಬೇಡ. ಜೋತ್ಯಾ, ಮಹಾರಾಷ್ಟ್ರದ ಎಲ್ಲ ವೀರರಿಗೂ, ಪ್ರಜಾಜನಕ್ಕೂ ನನ್ನನ್ನು ಕ್ಷಮಿಸಬೇಕೆಂದು ಹೇಳಿಕೋ? ಹಾಯ್ ಹಾಯ್! ಬಾಳಾ, ಶಿವಾಜೀ! ಪ್ರಿಯೇ, ಎಲಎಲಾ! ನೀವು ನನ್ನ ಸಲುವಾಗಿ ಎಷ್ಟು ಕಷ್ಟಪಡಬೇಕಾಯಿತಲ್ಲ, ಎಷ್ಟು ಅಪಮಾನವನ್ನು ಸಹಿಸಬೇಕಾಯಿತು! ಇನ್ನು ಮೇಲೆ ನಿಮ್ಮ ಸಂರಕ್ಷಣದ ಭಾರವು ಪರಮೇಶ್ವರನ ಮೇಲೆ! ಇನ್ನು ನಿಮ್ಮ ಬೆನ್ನು ಕಾಯುವವನು ದೇವರು!

ಈ ಮೇರೆಗೆ ಸಂಭಾಜಿಯು ನುಡಿಯುತ್ತಿರಲು, ಜೋತಾಜಿಯು—ಮಹಾರಾಜ, ಇನ್ನು ದುಃಖವನ್ನು ಸಾಕುಮಾಡಿರಿ. ಇನ್ನು ಈ ಮೂಢತನವನ್ನು ಬಿಡಿರಿ. ಅಗೋ ಮುಕರ್ಬಖಾನನು ಬಂದುಬಿಟ್ಟನು. ತಮ್ಮ ದಿವ್ಯವಾದ ಸಂದೇಶವನ್ನು ಯಾವತ್ತು ಮಹಾರಾಷ್ಟ್ರ ವೀರರಿಗೆ ತಿಳಿಸುತ್ತೇನೆ. ಮಹಾರಾಜ, ಸಿದ್ಧರಾಗಿರಿ. ವೀರರಿಗೆ ತಕ್ಕ ಮುದ್ರೆಯನ್ನು ಧಾರಣಮಾಡಿರಿ. ಇಂದು ಬಾದಶಹನ ದರ್ಬಾರದಲ್ಲಿ ಮಹಾರಾಷ್ಟ್ರದ ದೈವದ ಆಟವಿರುತ್ತದೆ. ಮಹಾರಾಜ ಸಿದ್ಧರಾಗಿರಿ. ಶೂರರಿಗೆ ತಕ್ಕ ಭಾವವನ್ನು ಪ್ರಕಟಮಾಡಿರಿ. ಇಂದಿನ ದರ್ಬಾರದಲ್ಲಿ ನಾನು ವೇಷಾಂತರದಿಂದ ಇದ್ದು, ಮಹಾರಾಷ್ಟ್ರದ ಭವಿಷ್ಯದ ಲೇಖನವನ್ನು ಓದುವೆನು! ಇಂದಿನ ಪ್ರಸಂಗದಿಂದಲೇ ಮಹಾರಾಷ್ಟ್ರದ ಭವಿಷ್ಯ ಕಾಲದ ನಿರ್ಣಯವಾಗತಕ್ಕದ್ದಿದೆ; ಮಹಾರಾಜ, ಹೋಗಿ ಬರುತ್ತೇನೆ, ಎಂದು ನುಡಿದು, ತನ್ನ ಪ್ರಭುವಿಗೆ ಸಾಷ್ಟಾಂಗವಾಗಿ ವಂದಿಸುವಾಗ, ಆ ಸ್ವಾಮಿಭಕ್ತನ ಕಣ್ಣುತುಂಬ ನೀರುಗಳು ಬಂದು ಆತನ ಕಂಠಬಿಗಿದು ಮಾತುಗಳು ಹೊರಡದಾದವು. ಕಣ್ಣೀರುಗಳು ದುರುತ್ತಿರಲು ಆತನು ತನ್ನ ಪ್ರಭುವನ್ನು ಬಾರಿಬಾರಿಗೆ ನೋಡುತ್ತ ಹೋಗಲಾರದೆ ಹೊರಟುಹೋದನು. ಇತ್ತ ಸಂಭಾಜಿಯು ಮತ್ತೆ ಹತಬುದ್ಧನಾಗಿ ಕುಳಿತುಕೊಂಡನು.

# ಪುನರುತ್ಥಾಪನ

ಜೋತಾಜಿಯು ಹೋದಬಳಿಕ ಸ್ವಲ್ಪ ಹೊತ್ತಿನಲ್ಲಿಯೇ ಒಬ್ಬ ಮುಸಲ್ಮಾನ ಸರದಾರನು ಸಂಭಾಜಿಯ ಬಳಿಗೆ ಬಂದು ಸಂಭಾಜಿಯ ಅನುಯಾಯಿಗಳಲ್ಲಿ ಒಬ್ಬೊಬ್ಬರನ್ನೇ ಅವರ ಮೈಮೇಲಿನ ಅರಿವೆ-ಅಂಚಡಿಗಳನ್ನು ತೆಗೆದು ಬರಿಮೈ ಬಕ್ಕ ನೆತ್ತಿಯವರನ್ನಾಗಿ ಮಾಡಿದನು. ಅದನ್ನೆಲ್ಲ ಸಂಭಾಜಿಯು ಸಂತಾಪದಿಂದ ಕೆಂಪಡರಿದ ಕಣ್ಣುಗಳಿಂದ ನೋಡುತ್ತಲಿದ್ದನು; ಆದರೆ ಆತನು ಅತ್ತಿತ್ತ ಮಿಸಿಕಾಡುವ ಹಾಗಿದ್ದಿಲ್ಲ. ಹಾಗು ಪಿಟ್ಟೆಂದು ಮಾತಾಡುವ ಹಾಗಿದ್ದಿಲ್ಲ. ಹಾಗೆ ಮಾಡಿದ್ದರೆ ಕಾವಲುಗಾರರ ತೀಕ್ಷ್ಣ ಖಡ್ಗಗಳ ಇರತಕ್ಕೆ ಆತನು ಈಡಾಗ ಬೇಕಾಗುತ್ತಿತ್ತು; ಆದ್ದರಿಂದ ಸಂಭಾಜಿಯು ತನ್ನ ಜನರ ವಿಟಂಬನೆಯನ್ನು ನೋಡುತ್ತ ಸುಮ್ಮನೇ ನಿಂತುಕೊಂಡನು. ತನ್ನವರೆಲ್ಲ ಬರಿಮೈಯವರಾಗಲು ಸಂಭಾಜಿಯು ತಾನೂ ತನ್ನ ವಸ್ತ್ರಾಲಂಕಾರಗಳನ್ನೆಲ್ಲ ತನ್ನ ಕೈಮುಟ್ಟಿ ಸಮಾಧಾನದಿಂದ ತೆಗೆದಿಟ್ಟು, ಬರಿಮೈಯವ ನಾದನು. ಆಮೇಲೆ ಆ ಸರದಾರರು ಸಂಭಾಜಿಗೆ ಒಂದು ವಿಚಿತ್ರವಾದ ಪೋಷಾಕನ್ನು ಧರಿಸುವದಕ್ಕಾಗಿ ಕೊಟ್ಟರು. ಬಳಿಕ ಆತನ ತಲೆಯಮೇಲೆ ಕಟ್ಟಿಗೆಯದೊಂದು ಕಿರೀಟವನ್ನು ಹಾಕಿ, ಕೊರಳಲ್ಲಿ ವಿಚಿತ್ರ ಬಣ್ಣದ ಪುಷ್ಪಗಳ ಮಾಲೆಯನ್ನು ಹಾಕಿದನು. ಈ ವಿಧವಾಗಿ ಮಹಾರಾಷ್ಟ್ರ ರಾಜನನ್ನು ಅವಮಾನಗೊಳಿಸಿದ್ದು ಸಾಲದ್ದರಿಂದ, ಆ ಸರದಾರನು ಸಂಭಾಜಿ ಯನ್ನು ಒಂಟೆಯ ಮೇಲೆ ಹಿಂಬರಿಕೆಯಾಗಿ ಕುಳ್ಳಿರಿಸಿ, ನಾಲ್ಕು ಮಗ್ಗಲು ಆತನನ್ನು ಕಾಡಣೆಯ ಹಗ್ಗಗಳಿಂದ ಬಿಗಿದು ಕಟ್ಟಿದನು. ಮುಂಬದಿಯಲ್ಲಿ ತಾಸೆ, ಮರ್ಪೆ, ತುತೂರಿ, ಕರ್ಣೆ, ಕೊಂಬು ಮೊದಲಾದ ಕರ್ಕಶ ವಾದ್ಯಗಳು ಬಾರಿಸುತ್ತಿರಲು, ಪರಿವಾರದೊಡನೆ ಸಂಭಾಜಿಯ ಮೆರವಣಿಗೆಯು ಹೊರಟಿತು!

ಈ ಚಂದದಿಂದ ಶಿವಪ್ರಭುವಿನ ಹತಭಾಗ್ಯ ಪುತ್ರನ ಮೆರವಣಿಗೆಯು ಹೊರಟು, ಬೀದಿ ಬೀದಿಗಳಲ್ಲಿ ಮೆರೆಯುತ್ತ ದರ್ಬಾರದ ಕಡೆಗೆ ಸಾಗಿತ್ತು ಆಗ ಪ್ರೇಕ್ಷಕರ ಸಮೂಹವು ನೆರೆಯಿತು. ಪ್ರತ್ಯಕ್ಷ ಶಿವಾವತಾರವೆನಿಸುವ ಶಿವಪ್ರಭುವಿನ ಮಗನ ಈ ದುರವಸ್ಥೆಯನ್ನು ನೋಡಿ, ಬರಿಯ ಹಿಂದೂ ಜನರಷ್ಟೇ ಅಲ್ಲ, ಬಹುಜನ ಮುಸಲ್ಮಾನರೂ ಮರುಗಿದರು. ಸ್ವಾಭಿಮಾನಿಗಳಾದ ಮರಾಟರಂತು ಔರಂಗಜೇಬನ ಮೇಲೆ ಹಲ್ಲು ಕಡೆಯುತ್ತ, ಸಂತಾಪ ದಿಂದ ಕೈ ಉಜ್ಜಿದರು. ಹೀಗಿರುವಾಗ ಸಂಭಾಜಿಯು ದರ್ಬಾರಕ್ಕೆ ಬಂದು ಬಾದಶಹನ ಎದುರಿಗೆ ನಿಂತುಕೊಂಡನು. ಆಗ ಸಿಂಹಾಸನದ ಸುತ್ತು ಮುತ್ತು ಸುವರ್ಣದ ಕಟಾಂಜನದೊಳಗೆ ನಿಂತುಕೊಂಡಿದ್ದ ಎಲ್ಲ ಅಂಗ ರಕ್ಷಕರು, ತಮ್ಮ ಖಡ್ಗಗಳನ್ನು ಒರೆಗಳಿಂದ ಹಿರಿದು ಸಜ್ಜಾಗಿ ನಿಂತಕೊಂಡರು. ಆಗ ಸಂಭಾಜಿಯು— ''ಹಾಯ್ ಹಾಯ್, ದುರ್ದೈವವೇ! ಮಾಡು, ಕುರ್ನಿಸ ಮಾಡು! ಹಿಂದಕ್ಕೆ ಆಬಾಸಾಹೇಬರು ಮುಸಲ್ಮಾನ ಬಾದಶಹರಿಗೆ ಕುರ್ನಿಸಾತವನ್ನು ಮಾಡಲಿಲ್ಲ. ಈ ವಿಟಂಬನೆಯ ಶೂಲವು ಅವರ ಕಣ್ಣೆದುರಿಗೆ ಲಕಲಕಿಸುತ್ತಿದ್ದಿಲ್ಲೆಂಬಂತೆ ತೋರುತ್ತದೆ'' ಎಂದು ತುಟಿಯಲ್ಲಿ ಒಟಗುಟ್ಟುತ್ತ, ಧೀರನಾದ ಸಂಭಾಜಿಯು ಬಾದಶಹನಿಗೆ

ಕುರ್ನಿಸಾತ ಮಾಡದೆ (ವಂದನ ವಿಧಿಯನ್ನು ಮಾಡದೆ) ಸ್ವಸ್ತಿಕಾಕಾರವಾಗಿ ಎದೆಯ ಮೇಲೆ ತನ್ನ ಬಾಹುಗಳ ಮಡಿಕೆಯನ್ನು ಹಾಕಿಕೊಂಡು ಔರಂಗಜೇಬನ ದೃಷ್ಟಿಗೆ ತನ್ನ ಕ್ರುದ್ಧ ದಷ್ಟಿಗಳನ್ನು ಎದುರುಮಾಡಿ ನಿಶ್ಚಲವಾಗಿ ನಿಂತುಕೊಂಡನು!

ಔರಂಗಜೇಬನ ಲಕ್ಷವು ಈ ಕಾಲದಲ್ಲಿ ಸಂಭಾಜಿಯ ಕಡೆಗೆ ಇತ್ತೋ ಇಲ್ಲವೋ ಯಾರಿಗೆ ಗೊತ್ತು? ಈತನಿಗೆ ಏನು ಮಾಡಬೇಕೆಂಬ ಬಗೆ ಬಾದಶಹನು ತನ್ನ ಮುತ್ಸದ್ದಿ ಗಳೊಡನೆ ಆಲೋಚಿಸುತ್ತಲಿದ್ದನು. ಸಂಭಾಜಿಯನ್ನು ಕೊಲ್ಲಬಾರದೆಂದು ಸರ್ವಾನುಮತ ದಿಂದ ಗೊತ್ತಾಯಿತು. ಅಸದಖಾನನೆಂಬ ವಿಶ್ವಾಸದ ಸರದಾರನು ಈ ಸಂಬಂಧದಿಂದ ಬಾದಶಹನನ್ನು ಕುರಿತು— ಖಾವಿಂದ, ಈತನು ಮಹಾರಾಷ್ಟ್ರದ ರಾಜನಿರುತ್ತಾನೆ. ಈತನ ಬಂಧುಗಳ ಕೈಯಲ್ಲಿ ಇನ್ನೂ ಹಲವು ದುರ್ಗಗಳೂ, ಕೋಟೆಗಳೂ ಇರುತ್ತವೆ. ಅವನ್ನೆಲ್ಲ ಯುದ್ಧ ಮಾಡಿ ತಕ್ಕೊಳ್ಳುವಾಗ ಸುಮ್ಮನೆ ಮನುಷ್ಯಹಾನಿ, ದ್ರವ್ಯಹಾನಿಗಳನ್ನು ಸೋಸಬೇಕಾಗುವದಲ್ಲದೆ, ಬಿಸಿಲು-ಚಳಿ- ಮಳೆಗಳ ಕಷ್ಟವನ್ನು ಭೋಗಿಸಬೇಕಾಗುವದು. ಇದಲ್ಲದೆ ಉತ್ತರದ ಕಡೆ ಶೀಖರು, ಜಾಟರು, ರಜಪೂತರು ಇವರ ಉಪದ್ರವು ಹೆಚ್ಚುತ್ತಲಿದೆ. ಮತ್ತು ವಿಜಾಪುರ-ಗೋವಳಕೊಂಡಗಳ ಬಾದ ಶಾಹಿಗಳನ್ನು ನಾವು ಇದೇ ಈಗ ಸ್ವಾಧೀನಪಡಿಸಿ ಕೊಂಡಿರುವದರಿಂದ, ಅವುಗಳಲ್ಲಿ ಸುವ್ಯವಸ್ಥೆಯನ್ನು ನೆಲೆಗೊಳಿಸಲಿಕ್ಕೆ ಶಾಂತತೆಯು ಬೇಕಾಗಿರುತ್ತದೆ. ಇವೆಲ್ಲವನ್ನು ಕುರಿತು ಆಲೋಚಿಸಿದರೆ, ಸಂಭಾಜಿಯನ್ನು ಕೊಲ್ಲಿಸದಿರುವದೇ ಹಿತಕರವಾಗಿ ನನಗೆ ತೋರುವದು. ಪಶುವಿನ ಬೇಟೆಯಾಡುವಾಗ ಪಶುವನ್ನು ಪಂಜರದಲ್ಲಿ ಹಿಡಿದು ಇಡಬೇಕಾಗುವಂತೆ, ಮರಾಟರನ್ನು ಹಣ್ಣಿಗೆ ತರುವ ಪ್ರಸಂಗದಲ್ಲಿ ಮರಾಟರ ಈ ರಾಜನನ್ನು ಸೆರೆಯಲ್ಲಿಡುವದು ಅವಶ್ಯವಾಗಿರುತ್ತದೆ. ಹಾಗೆ ಮಾಡಿದರೆ, ಸಂಭಾಜಿಯು ಜೀವದಿಂದ ಉಳಿದು ತಮ್ಮ ಬಳಿಗೆ ಬರಬೇಕೆಂಬ ಆಶೆಯಿಂದ ಆತನ ಬಂಧು- ಬಾಂಧವರು ನಮಗೆ ಶರಣು ಬರಬಹುದು, ಎಂದು ಹೇಳಿದನು. ಖಾನನ ಈ ಆಲೋಚನೆಯು ಬಾದಶಹನಿಗೆ ಒಪ್ಪಿಗೆಯಾಯಿತು. ಇದಲ್ಲದೆ, ತನ್ನ ಪ್ರೀತಿಯವಳಾದ ರೋಷನಾರ ಬೇಗಮೆಗೆ, ಬಾದಶಹನು ಸಂಭಾಜಿಯನ್ನು ಕೊಲ್ಲುವದಿಲ್ಲೆಂಬ ಬಗ್ಗೆ ವಚನ ಕೊಟ್ಟು ಬಂದಿದ್ದನು. ಬೇಗಮೆಯು ಸಂಭಾಜಿಯನ್ನು ಬಹಳವಾಗಿ ಪ್ರೀತಿಸುತ್ತಿದ್ದಳು.

ಇಲ್ಲಿಯವರೆಗೆ ಆದದ್ದೆಲ್ಲ ನೆಟ್ಟಗೇ ಆಯಿತೆಂದು ಹೇಳಬಹುದು; ಆದರೆ ಬಾದಶಹನ ಧರ್ಮದ ದುರಭಿಮಾನವು ಎಲ್ಲಿ ಅಳಿದು ಹೋಗಬೇಕು? ಆತನು ನಗುತ್ತ ನಗುತ್ತ ಸಹಜ ವಾಗಿ ಸಂಭಾಜಿಯನ್ನು ಕುರಿತು-ಸಂಭಾಜೀ, ಇಂದು ನೀನು ಜಗತ್ತಿನೊಳಗಿನ ನಿರಂಕುಶ ಸತ್ತಾಧಾರಿಯಾದ ಒಬ್ಬ ಬಾದಶಹನ ಮುಂದೆ ನಿಂತಿರುವೆಯೆಂಬದು ನಿನಗೆ ಗೊತ್ತಿರುವದಷ್ಟೆ? ನಿನ್ನನ್ನು ಕೊಲ್ಲುವದು ಬಿಡುವದು ಇಂದು ಸಂಪೂರ್ಣವಾಗಿ ಔರಂಗಜೇಬನ ಇಚ್ಛೆಯನ್ನು ಅವಲಂಬಿಸಿರುತ್ತದೆ. ಗುಡ್ಡಗಳ ತೋಡಿ ಇಲ್ಲಿಯವರೆಗೆ ನೀವು ಮಹಾರಾಷ್ಟ್ರರು ಹಲವು ಹೋರುಗಳನ್ನು ಮಾಡಿದಿರಿ! ಇಂದು ನಿಮ್ಮನ್ನು ನಾನು ಬಲೆಯಲ್ಲಿ ಹಿಡಿದು ತಂದಿರುತ್ತೇನೆ; ಆದರೆ ನಾನು ಪೈಗಂಬರನ ಸೇವಕನಿರುವೆನು. ದಯೆಯು ನನ್ನ ಶೀಲವಾಗಿರುತ್ತದೆ. ನನ್ನ ವೈರಿಯು ಪೈಗಂಬರನ ಚರಣಕ್ಕೆ ಶರಣು ಬಂದರೆ, ನಾನು ಆತನಿಗೆ ಜೀವದಾನ ಕೊಟ್ಟೇನು;

ಮಾತಾಡು, ಹಾಗಾದರೆ ನೀನು ಮುಸಲ್ಮಾನನಾಗುವಿಯಾ? ನೀನು ಮುಸಲ್ಮಾನನಾದರೆ ನಾನು ನಿನಗೆ ಜೀವದಾನ ಕೊಡುವೆನು.

ಬಾದಶಹನ ಈ ಮಾತುಗಳನ್ನು ಕೇಳಿ ಸಂಭಾಜಿಯು ಸಂತಾಪಗೊಂಡನು. ಆತನು ಅಲಮಗೀರನನ್ನು ಕುರಿತು— ಏನಂದಿ? ಮುಸಲ್ಮಾನನಾಗಬೇಕೆ? ಯಾರು? ನಾನು ಮುಸಲ್ಮಾನನಾಗಲಾ? ಆಬಾಸಾಹೇಬರು, ಮುಸಲ್ಮಾನನಾಗಿದ್ದ ನಿಂಬಾಳಕರನನ್ನು ಶುದ್ಧಮಾಡಿಸಿ ಮರಾಟನನ್ನಾಗಿ ಮಾಡಿದರು. ಈಗ ಆ ಆಬಾಸಾಹೇಬರ ಮಗನು ಮುಸಲ್ಮಾನ ನಾಗಬೇಕೆ? ಎಲ್ಲರಿಗೂ ಜೀವವು ಬೆಲ್ಲಕ್ಕಿಂತ ಸವಿ! ಆಗು, ಸಂಭಾಜೀ ಮುಸಲ್ಮಾನನಾಗು! ಹ್ಯಾಗೂ ನೀನು ಅತ್ಯಂತ ವಿಷಯಾಸಕ್ತನು, ಬಾದಶಹನ ಕೃಪೆಯಿಂದ ಬದುಕಿ ಇನ್ನಿಷ್ಟು ವಿಷಯಗಳನ್ನು ಭೋಗಿಸ ಬಾರದೆ? ಬಾದಶಹನು ಬಹು ಚಲುವೆಯಾದ ತನ್ನ ಮಗಳನ್ನು ನಿನಗೆ ನಿಕಾ ಮಾಡಿಕೊಟ್ಟರೆ, ನೀನು ವಿಲಾಸಭೋಗಕ್ಕಾಗಿ ಮುಸಲ್ಮಾನನು ಯಾಕಾಗ ಬಾರದು? ಒಂದು ಆಕಳ ಜೀವವನ್ನು ಬದುಕಿಸುವದಕ್ಕಾಗಿ ನಮ್ಮ ಹಿರಿಯರು ತಮ್ಮ ಜೀವವನ್ನು ಗಂಡಾಂತರಕ್ಕೆ ಗುರಿಮಾಡಿಕೊಂಡರು; ಆದರೆ ಅವರ ಜ್ಯೇಷ್ಠ ಪುತ್ರನೆನಿಸುವ ನಾನು ಗೋವಧೆಗೆ ಮುಕ್ತದ್ವಾರದಿಂದ ಮುಸಲ್ಮಾನ ಧರ್ಮವನ್ನು ಯಾಕೆ ಸ್ವೀಕರಿಸ ಬಾರದು ಹೇಳು? ಬಾದಶಹನೇ, ಶಹಾಜಾದಿ ಯನ್ನು ನನಗೆ ಲಗ್ನಮಾಡಿಕೊಡುವಿಯಾ? ಕೊಟ್ಟರೆ ನಾನು ಮುಸಲ್ಮಾನನಾಗುವೆನು ನೋಡು! ಆದರೆ ಬಾದಶಹಾ, ನಾನು ಮುಸಲ್ಮಾನ ನಾಗಲಿಯಾ? ಶಾಮಲರು ಬಲಾತ್ಕಾರದಿಂದ ಗಂಗಾಧರ ರಂಗನಾಥ ಕುಲಕರಣಿ ಈತನನ್ನು ಮುಸಲ್ಮಾನನ್ನಾಗಿ ಮಾಡಿ, ಆತನಿಗೆ ಬಹು ದೊಡ ಸ್ವಾಸ್ಥ್ಯವನ್ನು ಇನಾಮಾಗಿ ಹಾಕಿಕೊಟ್ಟು ತಮ್ಮ ಚಾಕರನನ್ನಾಗಿ ಮಾಡಿಕೊಂಡರು; ಆದರೆ ಧರ್ಮಾತ್ಮನಾದ ಆ ಕುಲಕರ್ಣಿಯು ತನ್ನ ಲಾಭಕ್ಕೆ ಆಶೆಮಾಡದೆ. ತನ್ನ ಭಾಗ್ಯವನ್ನು ಕಾಲಿನಿಂದೊದೆದು, ಪಶ್ಚಾತ್ತಾಪ ದಿಂದ ರಾಯ ಗಡಕ್ಕೆ ಬಂದು ನನ್ನನ್ನು ಮೊರೆಹೊಕ್ಕನು. ಆಗ ಆತನ ರಾಜನೆನಿಸುವ ನಾನು ಆತನನ್ನು ಶುದ್ಧ ಮಾಡಿಸಿದೆನು! ಹೀಗಿದ್ದು, ನಾನೇ ಈಗ ಮುಸಲ್ಮಾನನಾಗಲಾ? ಎಲಾ ಎಲಾ! ಧರ್ಮ ಪ್ರೇಮಕ್ಕಿಂತ, ಆತ್ಮಪ್ರೇಮವು ಹೆಚ್ಚಿನದೇನು? ಆಬಾಸಾಹೇಬರ ಸಲುವಾಗಿ ಏಕನಿಷ್ಠೆ ಯಿಂದ ಆತ್ಮಾರ್ಪಣವನ್ನು ಮಾಡಿದ ಬಾಜಿ ದೇಶಪಾಂಡೆ, ತಾನಾಜಿ ಮಾಲಸುರೆ ಮೊದಲಾದವರೆಲ್ಲ ಮೂರ್ಖರೇನು? ಆದರೂ ಚಿಂತೆಯಿಲ್ಲ, ಬಾದಶಹನೇ, ಮಾತಾಡು, ನಿನ್ನ ಮಗಳನ್ನು ಕೊಡುವೆಯಾ? ಕೃತಾರ್ಥನಾಗುವೆಯಾ? ಹಾಗಾದರೆ ಮಾತ್ರ ನಾನು ಮುಸಲ್ಮಾನ ನಾಗುತ್ತೇನೆ ನೋಡು!

ಸಂಭಾಜಿಯ ಈ ಮಾತುಗಳಿಂದ ಅವಮಾನಿತನಾದ ಬಾದಶಹನು ಸಂತಾಪದಿಂದ ನಖಶಿಖಾಂತವಾಗಿ ಉರಿಯಹತ್ತಿದನು. ಕ್ರೋಧಾವೇಶದಲ್ಲಿ ಅವನ ವಿವೇಕವು ನಷ್ಟವಾಯಿತು. ಆತನು ಸಂಭಾಜಿಯನ್ನು ಕುರಿತು— ಎಲಾ ಅಧಮಾ, ಕಾಫರನಾದ ನೀನು ನನ್ನ ಮಗಳನ್ನು ಕೇಳುವಿಯಾ? ಮುಕರ್ಬಖಾನ, ಏನು ಮಾಡುತ್ತೀರಿ? ಈ ನೀಚನ ಕೆಟ್ಟ ನಾಲಿಗೆಯನ್ನು ಚೂರು ಚೂರು ಆಗುವ ಹಾಗೆ ಕೊಯ್ಯಿರಿ. ನನ್ನನ್ನು ಕೆಟ್ಟಕಣ್ಣಿನಿಂದ ನೋಡುವ ಈ

ಉದ್ಧಟನ ಕಣ್ಣುಗಳಲ್ಲಿ ಕಾದ ಸಲಾಖೆಗಳನ್ನು ಇರಿಯಿರಿ! ಸಾವಿರಾರು ಜನರು ಮೋಜಿನಿಂದ ನೋಡುತ್ತಿರಲು, ಇವನ ಮೈಗೂದಲನ್ನು ಸುಲಿಯಿರಿ! ನಡೆಯಿರಿ! ಏಳಿರಿ!! ಹಿಡಿಯಿರಿ ಹಾದಿಯನ್ನು !!! ಅನ್ನಲು, ಅದಕ್ಕೆ ಸಂಭಾಜಿಯು—ಬಾದಶಹಾ ಅಲಮಗೀರ, ನೀನು ನಾಲಿಗೆಯನ್ನು ಕೊಯ್ಯು, ಕಣ್ಣನ್ನು ಕಿತ್ತಿಸು, ಮೈದೊಗಲು ಸುಲಿಸು, ಇನ್ನು ಬೇಕಾದದ್ದು ಮಾಡು! ಬ್ರಹ್ಮಹತ್ಯೆಯಿಂದ ದೂಷಿತನಾದ ಈ ಅಧಮನಿಗೆ, ಪಾತಿವ್ರತ್ಯ ಭಂಗಮಾಡಿದ ಈ ಚಂಡಾಲನಿಗೆ ಮ್ಲೇಂಛ ಧರ್ಮದ ಮೈಲಿಗೆಯಾದರೂ ಆಗಬೇಡ. ನಡೆಯಿರಿ, ಮುಕರ್ಬ ಖಾನ, ನಡೆಯಿರಿ! ನಾಯಿಯೂ ಕೂಡ ಆಬಾಸಾಹೇಬರ ಚಿತೆಯಲ್ಲಿ ಹಾರಿಕೊಂಡಿತು! ಆ ಪಶುವು ಕೂಡ ತನ್ನ ಕೃತಜ್ಞತೆಯನ್ನು ತೋರಿಸಿತು! ಆದರೆ, ಆಬಾಸಾಹೇಬರ ಜೇಷ್ಠಪುತ್ರ ನೆನಿಸುವ ನಾನು, ಆಬಾಸಾಹೇಬರು ಜೀವದಿಂದರುಪಾಗಲೇ ಅವರ ಮೇಲೆ ತಿರುಗಿ ಬಿದ್ದು, ಅವರ ಸತ್ತಮೇಲೆ ಮನಸ್ಸಿಗೆ ಬಂದಂತೆ ಕುಣಿದು, ಅವರ ಹೆಸರಿಗೆ ಕುಂದನ್ನುಂಟು ಮಾಡಿದೆನು! ಧಿಕ್ಕಾರವು! ನನ್ನ ಜನ್ಮಕ್ಕೆ ಧಿಕ್ಕಾರವು!!

ಈ ಮೇರೆಗೆ ತನ್ನನ್ನು ತಿರಸ್ಕರಿಸಿಕೊಳ್ಳುತ್ತ ಸಂಭಾಜಿಯು ಮುಕರ್ಬಖಾನನನ್ನು ಕುರಿತು—ಖಾನಸಾಹೇಬ, ನೀವೇ ನನಗೆ ಮಹೋಪಕಾರಿಗಳು, ನೀವೇ ನನಗೆ ಮೋಕ್ಷ ವನ್ನು ಒದಗಿಸಿ ಕೊಡುವವರು! ಇಗೋ, ಹಾಕಿರಿ ಕಣ್ಣುಗಳಲ್ಲಿ ಸಲಾಕೆಯನ್ನು, ಎಂದು ಕಣ್ಣು ಕೆಕ್ಕರಿಸಿ ಕುಳಿತುಕೊಂಡನು. ಆಗ ಮುಕರ್ಬಖಾನನು ಕಾದ ಕಬ್ಬಿಣದ ಸಲಾಕೆಯನ್ನು ಎಡ ಗಣ್ಣಲ್ಲಿ ಇರಿಯಲು, ಸಂಭಾಜಿಯು—ಹಾ! ನನ್ನ ಒಂದು ಕಣ್ಣು ಹೋಯಿತು, ಇನ್ನೊಂದು ಕಣ್ಣು ಹೋಗಿಬಿಟ್ಟರೆ, ಪರಸ್ತ್ರೀಯರನ್ನು ಪಾಪದೃಷ್ಟಿಯಿಂದ ನೋಡಿದ ನನ್ನ ಕೆಟ್ಟ ಕಣ್ಣು ಗಳಿಗೆ ಪ್ರಾಯಶ್ಚಿತ್ತವು ದೊರೆತಂತಾಗುವದು! ಜೋತ್ಯಾ, ಜೋತ್ಯಾ! ಮಹಾರಾಷ್ಟ್ರದೊಳಗಿನ ಕತೃತ್ವಶಾಲಿಗಳಾದ ಪುರುಷರಿಗೆ ನನ್ನ ಸಂದೇಶವನ್ನು ಹೇಳು ಹೋಗು. ಮಹಾರಾಜರು ನಿಮ್ಮೆಲ್ಲರಿಗೆ ರಾಜ್ಯವನ್ನು ಅರ್ಪಿಸಿರುವರೆಂದು ಹೇಳು ನಡೆ! ನೀವೆಲ್ಲರೂ ಸಾಮೋಹಿಕವಾಗಿ ಕಷ್ಟಪಟ್ಟು, ಆ ರಾಜ್ಯವನ್ನು ಸಂಪಾದಿಸಿರುವಿರಿ! ಆದರೆ ಅಹಂಭಾವದ ಸಂಭಾಜಿಯು ದೈವರೂಪ ದೇವರಾದ ನಿಮ್ಮಿಂದ ಆ ರಾಜ್ಯವನ್ನು ಕಸಿದುಕೊಂಡು, ಸ್ವಂತದ ವಿಷಯೋಪ ಭೋಗ ಕ್ಕಾಗಿ ಅದನ್ನು ಉಪಯೋಗಿಸಿ, ಈಗ ಪ್ರಾಯಶ್ಚಿತ್ತವನ್ನು ಭೋಗಿಸುವೆನು! ಆತನ ಅವತಾರ ಸಮಾಪ್ತಿಯು ಆಯಿತೆಂದು ಆಬಾಸಾಹೇಬರ ಅಭಿಮಾನಿಗಳಿಗೆ ನೀನು ಮರೆಯದೇ ಹೇಳು ಹೋಗು! ನನ್ನ ಅವತಾರ ಸಮಾಪ್ತಿಯ ಸಂಗಡ ನನ್ನ ಲೋಭ–ಕ್ರೋಧ ಗಳ ಪರಿಸಮಾಪ್ತಿಯೂ ಆಯಿತು! ಜೋತ್ಯಾ, ನಿಮ್ಮ ಸ್ವಾಮಿಯ, ನಿಮ್ಮ ಮಹಾರಾಷ್ಟ್ರ ಪ್ರಭುವಿನ, ನಿಮ್ಮ ಆರಾಧ್ಯ ದೈವತವಾದ ಶಿವಪ್ರಭುವಿನ ಜೇಷ್ಠಪುತ್ರನ, ಈ ಅಪಮಾನ ಕಾರಕವಾದ ಮರಣದ ಘೋರ ಯಾತನೆಯನ್ನು ಮರಾಟರ ರೊಚ್ಚು ಹೆಚ್ಚಾಗುವಂತೆ ಒಂದೂಬಿಡದೆ ಹೇಳು ಹೋಗು! ಇನ್ನು ಮೇಲೆ ನೀವೆಲ್ಲರೂ ನಿಮ್ಮ ಅವತಾರ ಕೃತ್ಯವನ್ನು ಆರಂಭಿಸಿ, ಶಿವಪ್ರಭುವಿನ ಪುಣ್ಯದ ಅಥವಾ ಕೆಚ್ಚೆದೆಯ ಮರಾಟರ ಪ್ರಭಾವವನ್ನು

ಆಲಮಗೀರನಿಗೆ ಚನ್ನಾಗಿ ತೋರಿಸಿರಿ. ನಾನು ಯಾವತ್ತೂ ಕರ್ತೃತ್ವ ಶಾಲಿಗಳನ್ನು ಸಂಹರಿಸಿರುವದಿಲ್ಲ! ಈಗ ಉಳಿದಿರುವವರೇ ಔರಂಗಜೇಬನ ಅಬ್ಬರಕ್ಕೆ ಸಾಕಾಗಿ ಉಳಿಯಬಹುದು!

ಈ ಮೇರೆಗೆ ಸಂಭಾಜಿಯು ನುಡಿಯುತ್ತಿರಲು,ಆತನ ಬೀಗನಾದ ಗಣೋಜಿರಾವ ಶಿರ್ಕೆಯು ಆತನ ಬಳಿಗೆ ಬಂದು ಸಂತಾಪದಿಂದ–ದುಷ್ಟನೇ, ಕರ್ತೃತ್ವಶಾಲಿಗಳನ್ನೆಲ್ಲ ನಷ್ಟಪಡಿಸಿರುವದಿಲ್ಲೆಂದು ನೀನು ಈಗ ಬೊಗಳಿದೆಯಲ್ಲ, ನೋಡು, ಸದ್ಯಕ್ಕಂತು ಒಬ್ಬ ಕರ್ತೃತ್ವಶಾಲಿಯು ನಿನ್ನ ಮುಂದೆ ಬಂದು ನಿಂತಿರುತ್ತಾನೆ. ನೋಡು, ನಿನ್ನ ವಂಶಕ್ಕೆ ಮೃತ್ಯು ಸ್ವರೂಪನಾಗಿ ಉಳಿದಿರುವ ಈ ಗಣೋಜಿರಾವ ಶಿರ್ಕೆಯನ್ನು ನೋಡು; ಇನ್ನೂ ನಿನ್ನದೊಂದು ಕಣ್ಣು ಹೋಗದಿರುವದರೊಳಗೆ ಚನ್ನಾಗಿ ನೋಡು! ಅಧಮಾಧಮನೇ, ಕೃತಕರ್ಮದ ಪ್ರಾಯಶ್ಚಿತ್ತವನ್ನು ಈಗ ನೀನು ಸಂಪೂರ್ಣವಾಗಿ ಭೋಗಿಸು. ನಮ್ಮ ಶೂರ ಶಿರ್ಕೆ ಮನೆತನವನ್ನು ಮಣ್ಣುಗೂಡಿಸುವಾಗ ಈ ಪಶ್ಚಾತ್ತಾಪವು ನಿನಗೆ ಹುಟ್ಟಿದ್ದರೆ, ನೆಟ್ಟಗಾಗುತ್ತಿದ್ದಿಲ್ಲವೆ? ಬೀಳಲಿ! ಭೋಸಲೆ ವಂಶವನ್ನು ನಷ್ಟಪಡಿಸಲು ಪ್ರತಿಜ್ಞೆ ಮಾಡಿರುವ ನನ್ನ ಕಣ್ಣಿಗೆ ನನ್ನ ವೈರಿಯ ಸಂಹಾರವು ಸ್ಪಷ್ಟವಾಗಿ ಬೀಳಲಿ! ಇದು ಶಿರ್ಕಾಣದ ಸೇಡು! ಸೇಡು! ಸೇಡು!

ಗಣೋಜಿರಾವ ಶಿರ್ಕೆಯ ಈ ಮಾತುಗಳನ್ನು ಕೇಳಿ ಸಂಭಾಜಿಯು—ಯಾರು? ಗಣೋಜಿಯೇ! ಹಾ! ಹೋಯಿತು, ನನ್ನ ಬಲಗಡೆಯ ಕಣ್ಣು ಹೋಯಿತು! ಮುಗಿಯಿತು, ಇನ್ನು ನನ್ನ ಪಾಪ–ಪುಣ್ಯದ ಕೃತಿಗಳ ನೋಟವು ಮುಗಿಯಿತು! ಎಲಾ, ಯಾರಾದರೂ ಇನ್ನು ನನ್ನ ಕಿವಿಯಲ್ಲಿ ಗೂಟವನ್ನು ಬಡಿಯಿರೋ! ಹ! ಗಣೋಜಿ, ನೀವೇ ಬಡಿಯಿರಿ ನೋಡೋಣ ಶಿರ್ಕಾಣದ ಸೇಡನ್ನು ತೀರಿಸಿಕೊಳ್ಳಿರಿ! ಬರುತ್ತೇನೋ ಜೋತ್ಯಾ, ಬರುತ್ತೇನೆ! ರಾಜಾರಾಮಾ, ಬರುತ್ತೇನೆ! ಬಾಳಾ! ಶಿವಾಜಿ ಬರುತ್ತೇನೆ! ಪ್ರಿಯೇ ಬರುತ್ತೇನೆ! ಮಹಾರಾಷ್ಟ್ರ ವೀರರೇ ಬರುತ್ತೇನೆ! ಹೋಗಿ ಬರುತ್ತೇನೆ!! ಜಯ ಭವಾನೀ ಮಾತೇ! **ರಾಮ, ಶ್ರೀರಾಮ ರಾಮ,ರಾಮ!**

ಮುಗಿಯಿತು, ಸಂಭಾಜಿಯ ಜೀವನ ಚರಿತ್ರದ ಸೀಮೆಯು ಇಲ್ಲಿಗೆ ಮುಗಿಯಿತು. ಬಾದಶಹನು ಮುಕರ್ಬಖಾನನ್ನು ಸನ್ಮಾನಿಸಿದನು. ಆತನಿಗೆ ''ಖಾನಜಹಾನ ಫತ್ತೇಹಜಂಗ'' ಎಂಬ ಬಿರುದನ್ನು ಕೊಟ್ಟನು. ಗಣೋಜಿರಾವ ಶಿರ್ಕೆಗೆ ಒಂದು ಮುಸಲ್ಮಾನೀ ಪದ್ಧತಿಯ ಪೋಷಾಕೂ, ಐದುಸಾವಿರದ ಸರದಾರಿಕೆಯೂ ದೊರೆತವು. ಈ ಮಾನವನ್ನು ಬಾದಶಹನು ಕೈಮುಟ್ಟಿ ಗಣೋಜಿ ಶಿರ್ಕೆಗೆ ಒಪ್ಪಿಸುವಾಗ, ಒಂದು ಮೂಲೆಯಲ್ಲಿ ಒಂದು ವ್ಯಕ್ತಿಯು ಕೆಂಪಡರಿದ ಕಣ್ಣುಗಳಿಂದ ಆತನನ್ನು ನೋಡುತ್ತಿತ್ತು! ಗಣೋಜಿರಾಯನು ಉಬ್ಬಿ ಸುತ್ತುಮುತ್ತು ನೋಡುತ್ತಿರಲು, ಆ ಮೂಲೆಯೊಳಗಿನ ವ್ಯಕ್ತಿಯು ಕಣ್ಣಿಗೆ ಬಿದ್ದಕೂಡಲೆ ಆತನು ಬಹಳ ಹಣ್ಣಾದನು! ಆದರೆ ಆತನಿಗೆ ಆ ವ್ಯಕ್ತಿಯ ದರ್ಶನವು ಪುನಃ ಅಲ್ಲಿ ಎಲ್ಲಿಯೂ ಆಗಲಿಲ್ಲ! ಆದರೂ ಗಣೋಜಿಯು ಅಳ್ಳೆದೆಯ ವೀರನಿದ್ದಿಲ್ಲ. ಆತನು ಉಳಿದ ಭೋಸಲೆಯ ಮನೆತನದವರನ್ನು ನಾಶ ಮಾಡುವದಕ್ಕಾಗಿ ಪ್ರತಿಜ್ಞೆಮಾಡಿ, ಬಾದಶಹನ ಸಮ್ಮುಖದಲ್ಲಿ

ತಾಂಬೂಲ ಗ್ರಹಣಮಾಡಿದನು! ಅಷ್ಟರಲ್ಲಿ ಯಾರೋ ಒಬ್ಬರು ಅವನ ಕಿವಿಯಲ್ಲಿ ''ಶಿರ್ಕಾಣದ ಸೇಡು''ಎಂದು ನುಡಿದರು! ಆದರೆ ಗಣೋಜಿಯು ಅತ್ತಿತ್ತ ನೋಡಿದಾಗ ಯಾರೂ ಕಣ್ಣಿಗೆ ಬೀಳಲಿಲ್ಲ. ಮೂಲೆಯಲ್ಲಿ ಕಣ್ಣಿಗೆ ಬಿದ್ದ ವ್ಯಕ್ತಿಯು ಮೋತಿಯ ಗುರುತಿನಿಂದಲೂ, ಈಗ ಕಿವಿಗೆ ಕೇಳಿದ ದನಿಯ ಗುರುತಿನ ಮೇಲಿಂದಲೂ ಆತನಿಗೆ ಖಂಡೋಜಿಯ ನೆನಪು ಆಗಿ, ಆತನ ಗುರುತು ಹತ್ತಿದಂತೆ ಆಯಿತು!

ಸಂಭಾಜಿಯ ಮರಣದಿಂದುಂಟಾದ ಆನಂದದ ಸಲುವಾಗಿ ಛಾವಣಿಯಲ್ಲಿ ಉತ್ಸವಗಳು ನಡೆಯುವಂತೆಯೂ, ಸಂಭಾಜಿಯ ದೇಹದ ತುಂಡುಗಳನ್ನು ನರಿ-ನಾಯಿಗಳಿಂದ ತಿನಿಸುವಂತೆಯೂ, ಬಾದಶಹನು ಅಪ್ಪಣೆ ಮಾಡಿದನು. ಇಂದ್ರಾಯಣಿಯ ನದಿಯ ತೀರದಲ್ಲಿ ಸಂಭಾಜಿಯ ಶವದ ತುಂಡುಗಳನ್ನು ತಕ್ಕೊಂಡು, ಸೈನಿಕರದೊಂದು ಗುಂಪು ಹೊರಟಿತು. ಆ ಸೈನಿಕರು ನದಿಯ ತೀರದಲ್ಲಿ ಶವದ ತುಂಡುಗಳನ್ನು ನರಿ-ನಾಯಿಗಳಿಂದ ತಿನಿಸುತ್ತಿದ್ದರು. ಅಷ್ಟರಲ್ಲಿ ಇಬ್ಬರು ಹೊಸಬರು ಮೋಜು ನೋಡುವವರಂತೆ ದಂಡಾಳುಗಳಲ್ಲಿ ಸೇರಿಕೊಂಡು, ತಾವೂ ವಿನೋದ ಮಾಡುತ್ತಲಿದ್ದರು. ಸಂಭಾಜಿಯ ರುಂಡವನ್ನು ಒಬ್ಬ ದಂಡಾಳುವು ತನ್ನ ಖಡ್ಗದ ತುದಿಗೆ ಚುಚ್ಚಿ ಮೇಲಕ್ಕೆ ಎತ್ತಿಹಿಡಿದು— ''ಕ್ಯಾಬೇ, ಸಂಭಾಜೀ, ಔರಲ ಡೆಗಾಕ್ಯಾ'' ಎಂದು ನುಡಿದು, ರುಂಡವನ್ನು ಕುಣಿಸುತ್ತ ಅತ್ತಿತ್ತ ಓಡಾಡಹತ್ತಿದನು. ಆ ಮೋಜು ನೋಡಬಂದ ಇಬ್ಬರು, ತಾವೂ ಆ ತಲೆಯನ್ನು ಕುಣಿಸಿ ಮೋಜು ಮಾಡಿ ಮಂದಿಯನ್ನು ನಗಿಸಹತ್ತಿದರು. ಅಷ್ಟರಲ್ಲಿ ಬೇರೆ ಕಡೆಯಿಂದ ನಾಲ್ಕು ಜನ ಸವಾರರು ಕುದುರೆ ಓಡಿಸುತ್ತ ಬಂದು— ''ಓಹೋ, ಸಂಭಾಜೀ, ಮಗರಗಟ್ಟಿಕಾ ರಾಜಾ'' ಎಂದು ಅಟ್ಟಹಾಸದಿಂದ ಕೂಗುತ್ತ ಶಿರಸ್ಸನ್ನು ನೋಡುವದಕ್ಕಾಗಿ ಇಸಕೊಳ್ಳುವಂತೆ, ಆ ಇಬ್ಬರು ಮೋಜುಗಾರರ ಕೈಯಿಂದ ಅದನ್ನು ಇಸಕೊಂಡು ತಮ್ಮ ಕುದುರೆಗಳನ್ನು ಓಡಿಸಹತ್ತಿದರು. ಅವರನ್ನು ಆ ಇಬ್ಬರು ಮೋಜುಗಾರರು ಬೆನ್ನಟ್ಟಿ—ಏ, ಆ ರುಂಡವನ್ನು ಇತ್ತಕಡೆಗೆ ತಕ್ಕೊಂಡು ಬರ್ರಿ. ಇಲ್ಲಿ ಮೋಜು ಮಾಡೋಣ'' ಎಂದು ಕೂಗುತ್ತ ಆ ಸವಾರರ ಬೆನ್ನು ಹತ್ತಿ ಓಡಹತ್ತಿದರು. ಉಳಿದ ದಂಡಾಳುಗಳಿಗೆ ಇದೊಂದು ವಿನೋದವಾಗಿ ತೋರಿತು. ಮುಂದೆ ಆ ಇಬ್ಬರು ಮೋಜುಗಾರರು, ಕೆಲವು ದೂರ ಓಡಿಹೋದ ಬಳಿಕ, ತಮ್ಮ ಸಲುವಾಗಿ ನಿಲ್ಲಿಸಿದ್ದ ಕುದುರೆಗಳನ್ನು ಹತ್ತಿಕೊಂಡು, ರುಂಡವನ್ನು ತಕ್ಕೊಂಡು ಓಡಿ ಹೋಗುತ್ತಿರುವ ರಾವುತರ ಬೆನ್ನುಹತ್ತಿ ಓಡಹತ್ತಿದರು. ಇತ್ತ ಔರಂಗಜೇಬನ ದಂಡಾಳುಗಳು— ''ರುಂಡವನ್ನು ಈಗ ತಂದಾರು, ಇನ್ನೊಂದು ಗಳಿಗೆಗೆ ತಂದಾರು'' ಎಂದು ಹಾದಿಯ ನೋಡುತ್ತಿರಲು, ರುಂಡವು ರಾಯಗಡದ ಹಾದಿಯನ್ನು ಹಿಡಿದು ವೇಗದಿಂದ ಸಾಗಿತು.

ಸ್ವಾಮಿಭಕ್ತನಾದ ಖಂಡೋಜಿ, ಜೋತಾಜಿ ಇವರಿಬ್ಬರು ತಮ್ಮ ಸ್ವಾಮಿಯ ಕೊಲೆಯನ್ನು ನೋಡಿ ಪರಮ ದುಃಖಿತರಾದಾಗ್ಯೂ,ಹೇಡಿಗಳಂತೆ ಕೈಕಾಲುಗೆಡಲಿಲ್ಲ. ಜನ್ಮವಿರುವ ತನಕ ಔರಂಗಜೇಬನ ಸೇಡು ತೀರಿಸಿಕೊಳ್ಳುವದನ್ನು ನಿಶ್ಚಯಿಸಿ,ತಮ್ಮ ಒಡೆಯನ ರುಂಡವನ್ನು ಹ್ಯಾಗಾದರೂ ಮಾಡಿ ಸಂಪಾದಿಸಿ ರಾಯಗಡಕ್ಕೆ ಒಯ್ಯಬೇಕೆಂದು ಎಣಿಕೆ ಹಾಕ

ಹತ್ತಿದರು. ಆಗ ಅವರಿಬ್ಬರು ಮೇಲೆ ಹೇಳಿದಂತೆ ಮುಸಲ್ಮಾನರ ಸೋಗಿನಿಂದ ಮೋಜು ಗಾರರಾಗಿ ಔರಂಗಜೇಬನ ದಂಡಿನಲ್ಲಿ ಸೇರಿ ಯುಕ್ತಿಯಿಂದ ರುಂಡವನ್ನು ಸಂಪಾದಿಸಿದರು. ಮೊದಲೇ ಆಲೋಚಿಸಿದಂತೆ ಬೇರೆ ನಾಲ್ವರು ಮಹಾರಾಷ್ಟ್ರ ರಾವುತರು ಖಂಡೋಜಿ–ಜೋತಾಜಿಯ ಸಲುವಾಗಿ ಸಂಕೇತದ ಸ್ಥಳದಲ್ಲಿ ಎರಡು ಕುದುರೆಗಳನ್ನು ನಿಲ್ಲಿಸಿ ತಾವು ಮೋಜು ಮಾಡುವವರಂತೆ ರುಂಡವನ್ನು ಸಂಪಾದಿಸಿ ಕುದುರೆಯನ್ನು ಬಿಟ್ಟರು. ಮುಂದೆ ಆ ಆರುಜನರೂ ಕೂಡಿ ಮುಕ್ಕಾಮಿನ ಮೇಲೆ ಮುಕ್ಕಾಮು ಮಾಡುತ್ತ ರಾಯಗಡದ ಸಮೀಪಕ್ಕೆ ಬಂದರು. ಆಗ ಖಂಡೋಜಿಯೂ ಜೋತಾಜಿಯೂ ತಿರಸ್ಕಾರದಿಂದ ತಮ್ಮ ಗಡ್ಡಗಳನ್ನು ಕಿತ್ತು ಒಗೆದು, ತಮ್ಮ ಸ್ವಾಮಿಯ ರುಂಡವನ್ನು ರೇಶಿಮೆಯ ವಸ್ತ್ರದಲ್ಲಿ ಸುತ್ತಿಕೊಂಡು ಕಣ್ಣೀರು ಸುರಿಸುತ್ತ ರಾಯಗಡವನ್ನು ಏರಹತ್ತಿದರು!

ಇತ್ತ ರಾಯಗಡದಲ್ಲಿ ಸಂಭಾಜಿಯ ಸಂಬಂಧದಿಂದ ಎಲ್ಲರೂ ಚಿಂತಾಗ್ರಸ್ತರಾಗಿದ್ದರು. ಬಾದಶಹನು ಸಂಭಾಜಿಯನ್ನು ಕೊಲ್ಲಿಸಿದ ದಿವಸ, ರಾಯಗಡದಲ್ಲಿ ಹಲವು ದುರ್ಲಕ್ಷಣ ಗಳೂ, ಉತ್ಪಾತಗಳೂ ತೋರಿದ್ದರಿಂದಂತೂ ಅವರ ಚಿಂತೆಯು ಮತ್ತಿಷ್ಟು ಹೆಚ್ಚಿತು. ಸಂಭಾಜಿಯು ರಾಜಾರಾಮನನ್ನು ರಾಯಗಡದಲ್ಲಿ ಸೆರೆಯಲ್ಲಿಟ್ಟಿದ್ದರಿಂದಲೂ, ಆತನ ತಾಯಿ ಯಾದ ಸೋಯಿ ರಾಬಾಯಿಯನ್ನು ಕ್ರೂರತನದಿಂದ ಕೊಲ್ಲಿಸಿದ್ದರಿಂದಲೂ ರಾಜಾರಾಮನ ಸಿಟ್ಟು ಸಂಭಾಜಿಯ ಮೇಲೆ ವಿಶೇಷವಾಗಿ ಇತ್ತು; ಒಮ್ಮೊಮ್ಮೆ ಸಂತಾಪದಿಂದ ಅಣ್ಣನ ಸೇಡು ತೀರಿಸಿಕೊಳ್ಳುವ ಇಚ್ಛೆಯೂ ಆತನಲ್ಲಿ ಉತ್ಪನ್ನವಾಗುತ್ತಿತ್ತು; ಆದರೆ, ಸಾತ್ವಿಕನಾದ ಆ ರಾಜಾರಾಮನು ಕೂಡಲೇ ಪಶ್ಚಾತ್ತಾಪಪಟ್ಟು ತನ್ನನ್ನು ಹಳಿದುಕೊಳ್ಳುತ್ತಿದ್ದನು. ಅತ್ತಿಗೆಯಾದ ಏಸೂಬಾಯಿಯ ಮೇಲೆ ಆತನ ವಿಶ್ವಾಸ ಬಹಳ, ಅಣ್ಣನ ಮಗನಾದ ಶಿವಾಜಿಯ ಮೇಲೆ ಆತನ ವಾತ್ಸಲ್ಯವು ಹೆಚ್ಚು; ಏಸೂಬಾಯಿ ಯಾದರೂ ಮೈದುನನಲ್ಲಿ ಸಂಪೂರ್ಣ ವಿಶ್ವಾಸ ವಿಟ್ಟು ಆತನ ಸಂಗಡ ದೊಡ್ಡಮನಸ್ಸಿ ನಿಂದ ನಡೆದುಕೊಳ್ಳುತ್ತಿದ್ದಳು. ತನ್ನ ಪತಿಯ ನಡತೆಯು ಆಕೆಯ ಮನಸ್ಸಿಗೆ ಎಳ್ಳಷ್ಟೂ ಬರುತ್ತಿದ್ದಿಲ್ಲ. ಪತಿಯನ್ನು ಹಾದಿಗೆ ತರುವ ದಕ್ಕಾಗಿಯೂ, ಮಹಾರಾಷ್ಟ್ರ ರಾಜ್ಯಕ್ಕೆ ಆತನಿಂದಾಗ ಬಹುದಾಗಿದ್ದ ಉಪಹತಿಯು ತಪ್ಪುವ ದಕ್ಕಾಗಿಯೂ, ಆ ವೀರ ಸ್ನುಷೆಯು ತನ್ನಿಂದಾದಷ್ಟು ಯತ್ನಿಸಿದಳು. ಒಮ್ಮೊಮ್ಮೆ ತನ್ನ ಪತಿಯ ಸಂಬಂಧದಿಂದ ಅತ್ಯಂತ ನಿಷ್ಠುರತೆಯಿಂದ ನಡೆದುಕೊಳ್ಳುವ ಪ್ರಸಂಗವು ಆಕೆಗೆ ಬರುತ್ತಿತ್ತು, ಆದರೂ ಸಂಭಾಜಿಯು ಮರಣಹೊಂದಿದ ದಿವಸ ಎಲ್ಲರಿಗೂ ಅಸಮಾಧಾನವಾಗಿ, ಅವರೆಲ್ಲರ ಮನಸ್ಸು ಉದಾಸೀನವಾಗಿತ್ತು, ಇಲ್ಲದ ಕಲ್ಪನೆಗಳು ಅವರ ಮನಸ್ಸಿನಲ್ಲಿ ಬರ ತೊಡಗಿದವು. ಹೀಗಿರುವಾಗ ಖಂಡೋಜಿಯು ಸಂಭಾಜಿಯ ತಲೆಯನ್ನು ಪ್ರಲ್ಹಾದಪಂತನ ಕಡೆಗೆ ಕಳಿಸಿಕೊಟ್ಟು, ತಾನು ರಾಜಕುವರಳಿಗೆ ಸಂಭಾಜಿಯ ಸುದ್ದಿಯನ್ನು ತಿಳಿಸಲಿಕ್ಕೂ, ಸಂಭಾಜಿಯ ಕ್ರಿಯಾಕರ್ಮದ ವ್ಯವಸ್ಥೆಯನ್ನು ಮಾಡಲಿಕ್ಕೂ ಹೊರಟುಹೋದನು. ಜೋತಾಜಿಯು ರಾಜಾರಾಮ ಮಹಾರಾಜರಿಗೆ ಸಂಭಾಜಿಯ ಮರಣದ ಸುದ್ದಿಯನ್ನು ಹೇಳಲಿಕ್ಕೆ ಹೋದನು. ಹಾಹಾ ಅನ್ನುವದರೊಳಗಾಗಿ ಸಂಭಾಜಿಯ ಮರಣದ

ವಾರ್ತೆಯು ರಾಯಗಡದ ತುಂಬ ಹಬ್ಬಿ, ಎಲ್ಲರೂ ಶೋಕಗ್ರಸ್ತರಾದರು. ಬಾದಶಹನ ಕ್ರೂರತನವನ್ನು ಕೇಳಿ ಎಲ್ಲರ ಮನಸ್ಸಿನಲ್ಲಿ, ದುಃಖಕ್ಕಿಂತ ಸಂತಾಪವು ಹೆಚ್ಚಿತು. ಬಾದಶಹನ ಮೇಲಿನ ಸಿಟ್ಟಿನ ಭರದಲ್ಲಿ ಸಂಭಾಜಿಯ ಕ್ರೂರತನವನ್ನೂ, ದುರ್ಗುಣಗಳನ್ನೂ ಮರೆತು ಬಿಟ್ಟು, ಆತನು ತಮ್ಮ ಶಿವಪ್ರಭುವಿನ ಪುತ್ರನೆಂಬುವದೆನ್ನೊಂದು ತಮ್ಮ ಮನಸ್ಸಿನಲ್ಲಿ ತಂದು ಬಾದಶಹನ ವಿಷಯವಾಗಿ ಎಲ್ಲರೂ ಸಂತಾಪದಿಂದ ಉರಿಯಹತ್ತಿದರು. ಧೀರಳಾದ ಏಸೂ ಬಾಯಿಯು ತನ್ನ ಅಪಾರವಾದ ದುಃಖವನ್ನು ಆತ್ಮಸಂಯಮನದಿಂದ ನುಂಗಿಕೊಂಡು, ತನ್ನ ಮೈದುನನಿಗೆ ಸಮಾಧಾನ ಹೇಳಹತ್ತಿದಳು; ಆದರೆ, ಕೋಮಲಾಂತಃಕರಣದ ರಾಜಾರಾಮನಿಗೆ ಅಣ್ಣನ ಮರಣದಿಂದ, ವಿಶೇಷವಾಗಿ, ಆತನ ದುರ್ಮರಣದಿಂದ ಬಹಳ ವ್ಯಥೆ ಯಾಯಿತು. ಯಾರು ಸಮಾಧಾನ ಹೇಳಿದರೂ ಆತನಿಗೆ ಸಮಾಧಾನವಾಗಲೊಲ್ಲದು!

ಹೀಗಿರುವಾಗ ಪ್ರಲ್ಹಾದಪಂತನು ಮಹಾರಾಜರ ಬಳಿಗೆ ಬಂದನು. ಆಗ ಏಸೂ ಬಾಯಿಯೂ, ರಾಜಾರಾಮನೂ, ಬೇರೆ ಪರಿವಾರವೂ ಶೋಕಗ್ರಸ್ತವಾಯಿತು. ತನ್ನ ಸ್ವಾಮಿಯ ಪರಿವಾರಕ್ಕೆ ಒದಗಿದ ವಿಪತ್ತಿನಿಂದ ಉಂಟಾಗಿರುವ ದುಃಖವನ್ನು ಪ್ರಲ್ಹಾದ ಪಂತನು ಇಲ್ಲಿಯವರೆಗೆ ನುಂಗಿಕೊಂಡಿದ್ದನು; ಆದರೆ, ಈಗ ಒಟ್ಟುಗೂಡಿದ್ದ ರಾಜಪರಿವಾರ ವೆಲ್ಲ ದುಃಖ ಪೀಡಿತ ವಾದದ್ದನ್ನು, ವಿಶೇಷವಾಗಿ ಬಾಲಶಿವಾಜಿಯು ಗಾಬರಿಯಾಗಿ ಏನೂ ತಿಳಿಯದೆ ಅಳುವವರನ್ನು ನೋಡಿ ಅಳುವದನ್ನು ಕಂಡು ಪ್ರಲ್ಹಾದಪಂತನ ಅಂತಃಕರಣವು ಕರಗಿ ದುಃಖವು ಹೊರಬಿದ್ದಿತು. ಎಲ್ಲರ ಸಂಗಡ ಆತನೂ ಕೆಲಹೊತ್ತು ಅತ್ತು ಶೋಕ ಗ್ರಸ್ತನಾದನು; ಆದರೆ ಆತನು ಬೇಗನೆ ವಿವೇಕ ದಿಂದ ಶೋಕವನ್ನು ನುಂಗಿಕೊಂಡು ರಾಜಪರಿವಾರವನ್ನು ಕುರಿತು ಸದ್ಗದಿತ ಕಂಠದಿಂದ—ಮಹಾರಾಜ, ಮಾತೃಶ್ರೀ, ರಾಜ ಕುವರ ಸಾಹೇಬ, ಏನಿದು? ಹೀಗೆ ಅಳುತ್ತ ಕುಳಿತುಕೊಳ್ಳುವ ಹೊತ್ತೇ ಇದು! ದುಷ್ಟ ಅಲಮಗೀರನು ನಮಗೆ ಯಥೇಚ್ಛವಾಗಿ ಅತ್ತು ಸಮಾಧಾನ ಮಾಡಿ ಕೊಳ್ಳಲಿಕ್ಕೂ ಮಾರ್ಗ ವಿಲ್ಲದ ಹಾಗೆ ಮಾಡಿರುತ್ತಾನೆ. ಶಿವಪ್ರಭುವಿನ ಪರಿವಾರದ ಸಂಬಂಧವು ಮಹಾರಾಷ್ಟ್ರದ ರಾಜ್ಯಕ್ಕೆ ಇರತ್ತದೆಂಬದನ್ನು ನಾವು ಮರೆಯತಕ್ಕದ್ದಲ್ಲ, ನಾವೇ ಶೋಕಗ್ರಸ್ತರಾಗಿ ಕಣ್ಣೀರು ಸುರಿಸುತ್ತ ಕುಳಿತುಕೊಂಡುಬಿಟ್ಟರೆ, ನಮ್ಮಿಂದ ಸಹಿತವಾದ ಮಹಾರಾಷ್ಟ್ರ ದೇಶವೇ ಔರಂಗಜೇಬನಿಗೆ ತುತ್ತಾದೀತಲ್ಲ! ಬಿಡಿರಿ; ಪೌರುಷಗೇಡಿಯಾದ ಈ ಕೆಟ್ಟ ಶೋಕವನ್ನು ತಟ್ಟನೆ ನಿಲ್ಲಿಸಿ ಬಿಡಿರಿ. ಹೀಗೆ ಶೋಕಗ್ರಸ್ತರಾಗಿ ಕರ್ತವ್ಯಭ್ರಷ್ಟರಾಗುವದು ಶಿವಪ್ರಭುವಿಗೆ ಸರ್ವಥಾ ಸಮ್ಮತವಾದದ್ದಲ್ಲ. ಶತ್ರುವು ನಮ್ಮ ಕಡೆಯ ಆಶಾಂಕುರುವನ್ನು ಕೂಡ ಕಿತ್ತು ಒಗೆಯಲಿಕ್ಕೆ ಬಂದಗಿಂದಾನು ಬೇಗನೆ ಏಳಿರಿ. ಅಚ್ಚ ಮರಾಟರು ಸಂಕಟಕಾಲದಲ್ಲಿ ನಿರಾಶ ಪಡುವದಿಲ್ಲ, ಅವರು ಶಾಂತರೂ, ಗಂಭೀರರೂ ಆಗಿರುವರೆಂಬದನ್ನು ಜಗತ್ತಿಗೆ ತೋರಿಸು ವದಕ್ಕಾಗಿ ಏಳಿರಿ. ಹೀಗೆ ಅಳುತ್ತ ಕುಳಿತುಕೊಂಡರೆ ಆಗುವದೇನು? ಸದ್ಯಕ್ಕೆ ದಾದಾಸಾಹೇಬರ ಕ್ರಿಯಾ ಕರ್ಮಗಳು ನಡೆಯಬೇಕಾಗಿರುವವಲ್ಲವೆ?

ಪ್ರಲ್ಹಾದಪಂತನ ಈ ಮಾತುಗಳನ್ನು ಕೇಳಿ ರಾಜಾರಾಮನು ಕಣ್ಣೀರು ಸುರಿಸುತ್ತ ''ಏನು? ದಾದಾಸಾಹೇಬರ ಕ್ರಿಯಾಕರ್ಮಗಳನ್ನು ನಾನು ಮಡಾಲಾ? ಆಬಾಸಾಹೇಬರ ಕರ್ಮವನ್ನು ನಾನು ಮಾಡಿದೆನು. ಅಪ್ಪನ ಕರ್ಮವೂ ನನ್ನ ಕೈಯಿಂದಲೇ ಆಯಿತು. ಈಗ ಅಣ್ಣನ ಕರ್ಮವನ್ನು ನಾನು ಮಾಡಬೇಕೆ? ಇವರೆಲ್ಲರ ಆತ್ಮಗಳಿಂದ ನನ್ನ ಕಪಾಳಮೋಕ್ಷವು ಯಾಕಾಗಬಾರದು? ಪ್ರಲ್ಹಾದಪಂತ, ನನ್ನ ಕಾಲುಬುಡದ ಹರಿಯು ಮುರಿದು ಬಿದ್ದಂತಾಯಿತು. ಇನ್ನು ನನ್ನ ಪರಾಕ್ರಮವು ಮುಗಿಯಿತು. ಅನ್ನಲು, ಪ್ರಲ್ಹಾದಪಂತನು—ಎಂಥ ಹೀನ ನುಡಿಗಳನ್ನು ನುಡಿಯುವಿರಿ ಮಹಾರಾಜ! ಶಹಾಜಿರಾಜರು ಬಂದೀವಾಸವನ್ನು ಹೊಂದಿ ದರೆಂದು ಆಬಾಸಾಹೇಬರು ಕೈ-ಕಾಲುಗೆಟ್ಟರೋ? ಶಹಾಜಿರಾಜರು ಕೈಲಾಸವಾಸಿಗಳಾದ ರೆಂದೇನು ಆಬಾಸಾಹೇಬರು ಮೈಮರೆತು ಕುಳಿತುಕೊಂಡರೋ? ಬಹಳ ಹೇಳುವದೇನು? ಸ್ವತಃ ಆಬಾಸಾಹೇಬರಂಥ ದೇದೀಪ್ಯಮಾನ ರತ್ನವು ಆಗ್ರಾದಲ್ಲಿ ಔರಂಗಜೇಬನ ಸೆರೆಯಲ್ಲಿ ಸಿಕ್ಕಾಗ ಮರಾಟರ ಕಾರ್ಯವು ತಡೆದು ನಿಂತಿತೇನು? ನಾವೆಲ್ಲರೂ ಆಬಾಸಾಹೇಬರ ಪಟ್ಟ ಶಿಷ್ಯರಿರುವೆವಲ್ಲವೇ? ಆಬಾಸಾಹೇಬರು ಕಷ್ಟಪಟ್ಟು ತೋಡಿ ಹೊರಡಿಸಿರುವ ಶೆಲೆಯನ್ನು ನಾವು ಶತಮುಖಗಳಿಂದ ಹರಿಸೋಣ! ಅಂದರೇನೇ ಛತ್ರಪತಿಯ ಗರಡಿಯ ಮನೆಯನ್ನು ಆಡಿದ್ದರ ಸಾರ್ಥಕವಾಗುವದು! ಏಳಿರಿ! ಈ ಜೋತಾಜಿಯಂಥ ಬಹಾದ್ದರನು ಆ ಚಾಂಡಾಲರ ಕೈಯೊಳಗಿಂದ ಮಹಾರಾಜರ ಶಿರಸ್ಸನ್ನು ಕಸಿದುಕೊಂಡು ಬಂದಿರುವನು! ಇದೇ ಶುಭಶಕುನವು! ಇದೇ ಈಶ್ವರೀ ಪ್ರಸಾದದ ಮೊದಲನೆಯ ಕುರುಹು! ಇದೇ ಪರಾಕ್ರಮದ ಪರಮಾವಧಿಯು!! ನಾವೆಲ್ಲರೂ ಮಾತೃಶ್ರೀಯವರ ಸಮಾಧಾನ ಮಾಡೋಣ? ಅವರು ವೀರಪತ್ನಿಯರಿರುವರು! ಅವರನ್ನು ಕರೆದುಕೊಂಡು ನಾವು ಮುಂದಿನ ಮಾರ್ಗ ವನ್ನು ಗೊತ್ತುಮಾಡಿಕೊಳ್ಳೋಣ. ಸಾವಿರಾರು ಸಂಕಟಗಳೊದಗಿದರೂ, ಸುತ್ತುಮುತ್ತು ಗಾಢಾಂಧಕಾರವು ಪಸರಿಸಿದರೂ ಕೆಚ್ಚೆದೆಯ ಅಚ್ಚ ಮರಾಟರು ಅರವುಗೆಡದೆ, ಉತ್ಸಾಹ ದಿಂದ ಮುಂದಕ್ಕೆ ಹೆಜ್ಜೆಗಳನ್ನಿಕ್ಕುವರೆಂಬದನ್ನು ತಪ್ಪದೆ ಜಗತ್ತಿಗೆ ತೋರಿಸೋಣ! ಸದ್ಯಕ್ಕೆ ಮಹಾರಾಜರ ಶಿರಸ್ಸಿನ ಪೂಜೆಯೇ ಮನೆಯಲ್ಲಾಗುವ ದೀಪೋತ್ಸವವು! ಇದೇ ಶಂಭು ಮಹಾದೇವನ ಯಜನವು, ಭಜನವು! ಏಳಿರಿ,ಏಳಿರಿ, ರಾಜಾರಾಮ ಪ್ರಭುಗಳೇ ಏಳಿರಿ! ಆಲಮಗೀರನ ಬಗ್ಗುಬಡಿತವ ಲೆಕ್ಕಿಸದೆ ಮರಾಟರ ಪುನರುತ್ಥಾಪನವಾಗಲಿ, ಏಳಿರಿ!!

## ನಿಷ್ಠೆಯಂತೆ ಸಾಹಸವು!

ರಾಯಗಡದ ಬುಡದಲ್ಲಿಯ ಘೋರವಾದ ಅರಣ್ಯವು. ನಿರ್ಜನವಾದ ಆ ನಿಬಿಡಾ ರಣ್ಯ ದಲ್ಲಿ ಗಿಡಗಳು ಬಹು ದಟ್ಟವಾಗಿ ಬೆಳದಿದ್ದರಿಂದ, ಮಧ್ಯಾನ್ಹದಲ್ಲಿಯೂ ಹೊತ್ತು ಮುಣುಗಿದಂತೆ ಭಾಸವಾಗುತ್ತಿತ್ತು, ಅಲ್ಲಿ ಹಿಂಸ್ರಪಶುಗಳ ವಾಸ್ತವ್ಯವಿದ್ದದ್ದರಿಂದ, ಮಹಾ

ಮಹಾ ವೀರರು ಕೂಡ ಆ ಅರಣ್ಯವನ್ನು ಪ್ರವೇಶಿಸಲಿಕ್ಕೆ ಅಂಜುತ್ತಲಿದ್ದರು. ಈ ಘೋರಾರಣ್ಯ ವನ್ನು ಕುರಿತು ಅಂಜಿಕೆ ಬರುವಂಥ ಹಲವು ಸುದ್ದಿಗಳು ಜನರಲ್ಲಿ ಪಸರಿಸಿದ್ದವು. ಕೆಲವರು ಆ ಅರಣ್ಯದಲ್ಲಿ ಒಂದು ಉತ್ತಮ ಅರಮನೆಯಿದ್ದು, ಅಲ್ಲಿ ಹಿಂದಕ್ಕೆ ಯಾದವ ವಂಶದ ರಾಜರು ವಾಸಿಸುತ್ತಿದ್ದರೆಂತಲೂ, ಅವರನ್ನು ಮುಸಲ್ಮಾನರು ಸಂಹರಿಸಿದ್ದರಿಂದ ಅವರೆಲ್ಲರು ಪಿಶಾಚರೂಪದಿಂದ ಸದ್ಯಕ್ಕೆ ಅಲ್ಲಿ ವಾಸಿಸುವರೆಂತಲೂ ಹೇಳುತ್ತಿದ್ದರು! ಈ ನಿಬಿಡಾರಣ್ಯದಲ್ಲಿ ಹನ್ನೆರಡು ತಿಂಗಳು ಹರಿಯುವಂಥ ಒಂದು ಸರವು ಇದ್ದು, ಒಂದು ಶಿವಾಲಯದ ಶಿಖರವು ಗಿಡಗಳ ಗುಂಪಿನಲ್ಲಿ ಗಾಂಭೀರ್ಯದಿಂದ ಶೋಭಿಸುತ್ತಲಿತ್ತು. ಕ್ವಚಿತ್ ಪ್ರಸಂಗದಲ್ಲಿ ಸಾಹಸಿಗ ರಾದ ಶೂರ ಮಹಾರಾಷ್ಟ್ರ ಸರದಾರರು ಆ ಶಿವಾಲಯಕ್ಕೆ ಹೋಗಿ, ಮಹಾದೇವನ ದರ್ಶನ ಮಾಡಿಕೊಂಡು ಬರುತ್ತಲಿದ್ದರು; ಆದರೆ ಅವರು ದರ್ಶನಮಾಡಿಕೊಂಡು ಬಂದು ಹೇಳುತ್ತಿದ್ದ ಸುದ್ದಿಗಳು ಬಹು ವಿಲಕ್ಷಣವಾಗಿರುತ್ತಿದ್ದವು. ಅವರು ಹೇಳುವದೇನೆಂದರೆ— ''ದೇವಾಲಯ ದಲ್ಲಿ ಸ್ವಯಂಭೂ ಜ್ಯೋತಿರ್ಲಿಂಗವಿರುವದು, ಮಧ್ಯ ರಾತ್ರಿಯಲ್ಲಿ ಎಷ್ಟೋ ಬ್ರಹ್ಮರಾಕ್ಷಸ ಗಳು ಬಂದು ಮಹಾದೇವನನ್ನು ಷೋಡಶೋಪಚಾರ ಗಳಿಂದ ಪೂಜಿಸುವವು. ಆ ಕಾಲದಲ್ಲಿ ಭಯಂಕರ ವ್ಯಾಘ್ರಾದಿ ಹಿಂಸ್ರಪಶುಗಳು ಕೂಡ ಈಶ್ವರನ ದರ್ಶನಕ್ಕೆ ಬರುತ್ತವೆ. ಆ ದೇವಾಲಯದಲ್ಲಿ ಒಮ್ಮೆಲೆ ಲಕ್ಷಾವಧಿ ದೀವಟಿಗೆಗಳು ಹತ್ತುವವು. ಇಷ್ಟಾದ ಬಳಿಕ ಗುಡಿ ಯಲ್ಲಿ ಭಯಂಕರವಾದ ಸಿಂಹನಾದವಾಗುವದು.'' ಕೆಲವರು ಮತ್ತೆ ಹೇಳುವದೇನಂದರೆ– ಪೂಜಿಸುವ ಆ ಬ್ರಹ್ಮರಾಕ್ಷಸವು ಮುಸಲ್ಮಾನರಿಂದ ಹೊಡಿಯಲ್ಪಟ್ಟಿದ್ದ ಆ ಯಾದವ ರಾಜನ ಬ್ರಾಹ್ಮಣ ಪ್ರಧಾನಿಯು. ಆ ರಾಜನು ತನ್ನ ಹೆಂಡಿರು–ಮಕ್ಕಳಿಂದ ಕೂಡಿ ಕೊಂಡು ಪೂಜೆಯ ಕಾಲಕ್ಕೆ ಬರುವನು!

ರಾಯಗಡದ ಕಿಲ್ಲೇದಾರರಿಗೆ ಮಾತ್ರ ಆ ಗುಡಿಯ ಸಂಪೂರ್ಣ ವೃತ್ತಾಂತವು ಗೊತ್ತಿರುತ್ತಿತ್ತು. ಅವರು ಆನಂದದಿಂದ ಹರಟೆಕೊಚ್ಚುತ್ತಿರುವಾಗ ಗುಡಿಯ ವೃತ್ತಾಂತವನ್ನು ಬಣ್ಣಿಸುತ್ತಿದ್ದರು. ಅವರು ಹೇಳುವದೇನೆಂದರೆ— ಆ ಯಾದವರಾಜನು ನಮ್ಮ ಮೂಲ ಪುರುಷನು. ವರ್ಷಕ್ಕೊಂದು ಸಾರೆ ನಾವು ಆತನ ಹೆಸರಿನಿಂದ ಅನ್ನ ನೀರು ಕೊಡುವದಕ್ಕೆ ಜೀವದ ಹಂಗುದೊರೆದು ಆ ಗುಡಿಗೆ ಹೋಗಬೇಕಾಗುವದು. ಆಗ ನಮ್ಮ ಜೀವಕ್ಕೆ ಅಪಾಯ ಮಾತ್ರ ಎಷ್ಟು ಮಾತ್ರವೂ ಆಗುವದಿಲ್ಲ! ಅಲ್ಲಿ ಹೋದಬಳಿಕ ಶಿವಾಲಯದ ಮುಂದಿನ ಕುಂಡದಮೇಲೆ ಅರ್ಘ್ಯಬಿಡುವೆವು. ಅಲ್ಲಿಯ ಜ್ಯೋತಿರ್ಲಿಂಗದಿಂದ ಒಸರುವ ಗಂಗಾ ಪ್ರವಾಹವನ್ನು ತರುಬಿ ಕುಂಡವನ್ನು ಮಾಡಿರುತ್ತಾರೆ. ಕುಂಡವು ಯಾವಾಗಲೂ ನೀರಿನಿಂದ ಸಂಪೂರ್ಣವಾಗಿ ತುಂಬಿರುತ್ತದೆ. ಅದೇ ಕುಂಡದಿಂದ ಮೇಲೆ ಹೇಳಿರುವ ಸರವು ಹುಟ್ಟಿ ಹರಿಯುತ್ತದೆ. ಅರ್ಘ್ಯವನ್ನು ಕೊಟ್ಟ ಬಳಿಕ ದೇವರ ಮುಂದೆ ನೈವೇದ್ಯವಿಡುವೆವು. ಮತ್ತೊಂದು ನೈವೇದ್ಯವನ್ನು ಆ ಮೂಲ ಪುರುಷನ ಸಲುವಾಗಿ ಇಡುವೆವು. ಈ ದಿವಸ ಮೂಲಪುರುಷನ ಅಭ್ಯಂಗಸ್ನಾನದ ಸಲುವಾಗಿ ಒಂದು ಬೆಳ್ಳಿಯ ಚೌರಂಗದ ಮೇಲೆ ಅಷ್ಟಗಂಧವೇ ಮೊದಲಾದ ಸುಗಂಧ ದ್ರವ್ಯಗಳನ್ನು ಸಿದ್ಧಮಾಡಿ ಇಡಬೇಕಾಗುವದು;

ಮತ್ತು ಬೆಳ್ಳಿಯ ಗಂಗಾಳದಲ್ಲಿ ನೀರು ತೋಡಿ ಇಡಬೇಕಾಗುವದು! ಅದರಂತೆ ಉಡಲಿಕ್ಕೆ ಹೊಸ ಧೋತರ ಜೋಡನ್ನು ಇಡಬೇಕಾಗುವದು. ಮುಖ ಶುದ್ಧಿಯ ಸಲುವಾಗಿ ತಾಂಬೂಲ ವನ್ನು ಸಹ ಇಡಬೇಕಾಗುವುದು!

ಒಟ್ಟಿಗೆ ಹೇಳತಕ್ಕದ್ದೇನಂದರೆ, ಇಂಥ ದಂತಕಥೆಗಳು ಜನರಲ್ಲಿ ರೂಢವಾಗಿದ್ದದ್ದರಿಂದ, ಆ ಗುಡಿಯ ಸುತ್ತುಮುತ್ತು ನಾಲ್ಕಾರು ಮೈಲು ಅಂತರದಲ್ಲಿ ಯಾರೂ ಸುಳಿಯುತ್ತಿದ್ದಿಲ್ಲ! ಆದರೆ ಆ ಅರಣ್ಯದಲ್ಲಿಯ ಸರವು ಪ್ರತ್ಯಕ್ಷ ಶಿವಲಿಂಗದ ಸನ್ನಿಧಿಯಿಂದ ಹೊರಟು ಬರುವದ ರಿಂದ,ಅದನ್ನು ಪವಿತ್ರ ಗಂಗೆಯೆಂದು ತಿಳಿದು, ಸದ್ಭಾವನೆಯಿಂದ ಮರಾಟರು ಸಂಭಾಜಿಯ ದಶಾಹಾಂತದ ಕರ್ಮವನ್ನು ಮಾಡುವದಕ್ಕಾಗಿ, ರಾಜಾರಾಮ ಮಹಾರಾಜರನ್ನು ಕೂಡಿಕೊಂಡು ಬಂದಿದ್ದರು. ಈ ಕರ್ಮವನ್ನು ಸಾಂಗಮಾಡಿಸುವದಕ್ಕಾಗಿ ಶ್ರೀಸಮರ್ಥರ ಶಿಷ್ಯರಾದ ದಿವಾಕರ ಭಟ್ಟ, ರಂಗನಾಥಸ್ವಾಮಿ ಅಡಸೂಳೆ, ಬೇರೆ ಮರಾಟ ಸರದಾರರು ಬಂದಿದ್ದರು. ಸುಪ್ರಸಿದ್ಧ ಗಾಗಾಭಟ್ಟರ ಚಿರಂಜೀವಿಯವರು ಕರ್ಮವನ್ನು ನಡೆಸಿದರು. ಯಥಾಸಾಂಗವಾಗಿ ಕರ್ಮವು ಬಹು ಗಾಂಭೀರ್ಯದಿಂದ ಪೂರ್ಣವಾಯಿತು. ಮುಂದಿನ ಮಾರ್ಗವನ್ನು ಕಂಡುಕೊಳ್ಳುವ ದಕ್ಕಾಗಿ ಮಹಾರಾಷ್ಟ್ರ ಮಂಡಲವು ರಾಜಾರಾಮ ಮಹಾರಾಜರನ್ನು ಕರಕೊಂಡು ರಾಯ ಗಡದ ಮೇಲೆ ಸಾಗಿತು. ಆದರೆ ವಾಚಕರ ಪರಿಚಯದವನಾದ ಖಂಡೋಬಾ ಚೀಟನೀಸ ನೊಬ್ಬನು ಮಾತ್ರ ರಾಯಗಡಕ್ಕೆ ಹೋಗದೆ, ಹಿಂದೆ ಉಳಿದನು. ಸಂಭಾಜಿಯ ಮೇಲೆ ಖಂಡೋಬನ ಭಕ್ತಿಯು ವಿಶೇಷವಾಗಿ ಇದ್ದದ್ದರಿಂದ, ತನ್ನ ಸ್ವಾಮಿಯ ಮರಣದಿಂದ ಆತನಿಗೆ ಬಹಳ ದುಃಖವಾಗಿತ್ತು. ಅದರಂತೆ ತನ್ನ ಸ್ವಾಮಿಯ ವಂಶಜರು ಮಹಾರಾಷ್ಟ್ರ ರಾಜ್ಯ ವನ್ನು ಚಿರಕಾಲ ಆಳಬೇಕೆಂತಲೂ ಆತನು ಚಿಂತಿಸುತ್ತಿದ್ದನು. ಹೀಗೆ ತನ್ನ ಒಡೆಯನ ಮರಣದ ದುಃಖದಿಂದಲೋ, ಅಥವಾ ಆತನ ರಾಜ್ಯವು ಬಾದಶಹನ ಉಪದ್ರವದಿಂದ ಹ್ಯಾಗೆ ರಕ್ಷಣ ವಾದೀತೆಂಬ ಚಿಂತಿಯಿಂದಲೋ, ಖಂಡೋಬನು ರಾಯಗಡಕ್ಕೆ ಹೋಗದೆ, ಮಧ್ಯಾರಣ್ಯದ ಹಾದಿಯನ್ನು ಹಿಡಿದು ಹೊರಟನು! ಸರಳವಾದ ದಾರಿಯು ಸರ್ವಥಾ ಇದ್ದಿಲ್ಲ. ಮಸಮಸಕಾದ ಸೀಳದಾರಿಯಿಂದ ಕಲ್ಲು–ಮುಳ್ಳುಗಳನ್ನು ತುಳಿಯುತ್ತ, ಎಡ–ಬಲಗಳಲ್ಲಿ ಮೈಮೇಲಿನ ಅರಿವೆಯನ್ನು ಹಿಡಿದುಕೊಳ್ಳುವ ಕಾಡು ಮುಳ್ಳು ಗಿಡಗಳನ್ನು ಬಿಡಿಸಿಕೊಳ್ಳುತ್ತ ಆತನು ಮುಂದಕ್ಕೆ ಸಾಗಿದ್ದನು. ವಿಚಾರಮಗ್ನನಾಗಿರುವ ಆತನಿಗೆ ತಾನು ಎಲ್ಲಿಗೆ ಹೋಗುತ್ತಿರು ವೆನೆಂಬದರ ಅರಿವು ಸಹ ಪೂರ್ಣವಾಗಿ ಇದ್ದಂತೆ ತೋರಲಿಲ್ಲ. ಏನೋ ಒಂದು ತರದ ಔದಾಶೀನ್ಯವನ್ನು ತಾಳಿದವನಂತೆ ಮುಂದಕ್ಕೆ ಸಾಗಿದ್ದನು.

ಹೀಗೆ ಖಂಡೋಬನು ಬಹು ಕಷ್ಟಪಡುತ್ತ ಮಾರ್ಗವನ್ನು ಕ್ರಮಿಸುತ್ತ, ಮೈಲೆರಡು ಮೈಲುಗಳನ್ನು ಕ್ರಮಿಸಿ ಹೋಗಲು, ರಾಯಗಡದ ಕಡೆಯಿಂದ ದೇವಸ್ಥಾನದ ಕಡೆಗೆ ಹೋದ ದ್ದೊಂದು ಸ್ಪಷ್ಟವಾದ ಕಾಲ ಹಾದಿಯು ಆತನ ಕಣ್ಣಿಗೆ ಬಿದ್ದಿತು. ಅದನ್ನು ನೋಡಿ ಆತನು, ಇಂಥ ಕಟ್ಟಡವಿಯಲ್ಲಿ ಇಂಥ ಸ್ವಚ್ಛವಾದ ಹಾದಿಯನ್ನು ಯಾರು ಮಾಡಿಸಿರಬಹುದೆಂದು, ಆಶ್ಚರ್ಯಪಟ್ಟನು. ಆ ಹಾದಿಯನ್ನು ಮುಟ್ಟಲಿಕ್ಕೆ ಆತನು ಎಷ್ಟೋ ಮುಳ್ಳು–ಕಂಟೆಗಳನ್ನು

ದಾಟಿ, ದೊಡ್ಡ ದೊಡ್ಡ ವೃಕ್ಷಗಳನ್ನು ಅತಿಕ್ರಮಿಸಿ ಕಲ್ಲು–ಮುಳ್ಳುಗಳನ್ನು ತುಳಿಯುತ್ತ ಪ್ರಯಾಸ ದಿಂದ ಮಾರ್ಗವನ್ನು ಕ್ರಮಿಸಿ ಹೋಗಬೇಕಾಗಿತ್ತು; ಆದರೂ ಆತನು ಹಿಂಜರಿಯಲಿಲ್ಲ! ಈವರೆಗೆ ಆದ ತನ್ನ ಕಷ್ಟವನ್ನು ಲೆಕ್ಕಿಸಲಿಲ್ಲ, ಗುಡಿಯಲ್ಲಿ ಏನಿರುವದೆಂಬದನ್ನು ನೋಡಿಯೇ ತೀರಬೇಕೆಂದು ನಿಶ್ಚಯಿಸಿ, ಆತನು ಮಾರ್ಗವನ್ನು ಕ್ರಮಿಸಲಿಕ್ಕೆ ಟೊಂಕಕಟ್ಟಿದನು. ಒಮ್ಮೊಮ್ಮೆ ತನಗೆ ಹಾದಿಯಲ್ಲಿ ಅಡ್ಡಾದ ಗಿಡಗಳ ಟೊಂಗೆಗಳನ್ನು ಮುರಿದು ಚಲ್ಲಿ ಆತನು ಮಾರ್ಗ ಮಾಡಿಕೊಳ್ಳ ಬೇಕಾಗುತ್ತಿತ್ತು. ಹೀಗೆ ಬಹು ಪ್ರಯಾಸದಿಂದ ಆತನು ಆ ಕಾಲುದಾರಿಯನ್ನು ಮುಟ್ಟಿದನು. ಆಮೇಲೆ ಆತನು ತನ್ನ ಕಾಲುಗಳಲ್ಲಿ ನೆಟ್ಟಿದ್ದ ಮುಳ್ಳು ಗಳನ್ನು ತಕ್ಕೊಂಡು, ಮೈಗೆ ಚಿವುರಿ ಕೊಂಡದ್ದನ್ನೂ ಮೈಯನ್ನು ಹರಿದುಕೊಂಡದ್ದನ್ನೂ ಒರಿಸಿ ಕೊಂಡನು. ಆ ಹೊಸ ಹಾದಿಯಲ್ಲಿ ಇಂಥ ತೊಂದರೆಗಳೇನೂ ಇದ್ದಿಲ್ಲ. ಹಾದಿಯು ಸ್ವಚ್ಛವಾಗಿ ಇತ್ತು. ಆದರೆ, ಅದು ಸರಳವಾಗಿ ಇರದೆ, ನಾಗಮೋಡಿಯಂತೆ ಅತ್ತಿತ್ತ ಸುತ್ತಿ ಕೊಂಡು ಹೋಗಿತ್ತು. ಕ್ರೂರ ಶ್ವಾಪದಗಳಿರುವ ಸ್ಥಾನದಲ್ಲಿ ಇಷ್ಟು ಸ್ವಚ್ಛವಾದ ಮಾರ್ಗ ವಿರುವ ಬಗೆ ಹ್ಯಾಗೆ? ಕದಾಚಿತ್ ಆ ದೇವಸ್ಥಾನಕ್ಕೆ ನೇವೇದ್ಯವನ್ನು ಒಯ್ಯುವದಕ್ಕಾಗಿ ಈ ಮಾರ್ಗವನ್ನು ಮಾಡಿದ್ದರೂ ಮಾಡಿರಬಹುದು. ಈ ದಿನ ಹ್ಯಾಗೂ ನಾನು ಇಲ್ಲಿಯವರೆಗೆ ಬಂದಿದ್ದೇನೆ. ಶಂಕರನ ದರ್ಶನವನ್ನು ಮಾಡಿಕೊಂಡೇ ಹೋಗೋಣ. ಒಳ್ಳೆಯ ಜಾಗ್ರತ ಸ್ಥಾನ ವೆಂದು ಹೇಳುತ್ತಾರೆ; ಆದರೆ ಆ ಬ್ರಹ್ಮರಾಕ್ಷಸವು ಭೆಟ್ಟಿಯಾದರೆ ಆಗಲೆಲ್ಲದೇಕೆ? ಅದಾದರೂ ಹಿಂದಕ್ಕೊಮ್ಮೆ ನನ್ನ ದೇಶಬಂಧುವೇಆಗಿತ್ತಲ್ಲವೇ? ಮುಸಲ್ಮಾನರ ಮರೆಮೋಸ ದಿಂದ ಅದು ಇಹಲೋಕದ ಸುಖಕ್ಕೆ ಎರವಾಗಿರುವದಲ್ಲವೆ? ಅಂದ ಬಳಿಕ ಆ ಬ್ರಹ್ಮರಾಕ್ಷಸನ ಮನಸ್ಸಿನಲ್ಲಿಯೂ ಮುಸಲ್ಮಾನರ ಸೇಡು ತೀರಿಸಿಕೊಳ್ಳುವ ಬುದ್ಧಿಯು ಜಾಗ್ರತವಾಗಿರ ಬಹುದು. ನಮ್ಮ ಮಹಾರಾಷ್ಟ್ರದ ಪ್ರತಿರೋಮರಂಧ್ರದಲ್ಲಿ ಕೂಡ ಸೇಡಿನ ಆವೇಶವು ತುಂಬಿಕೊಂಡಿರುತ್ತದೆ! ಅಂದ ಬಳಿಕ ನಾವಿಬ್ಬರೂ ಸುಮದುಃಖಿಗಳಾಗಿರುವದಿಂದ ಬೇಗನೇ ಏಕಜೀವರಾಗುವೆವು!

ಈ ಮೇರೆಗೆ ವಿಚಾರಮಾಡುತ್ತ ಮಾರ್ಗವನ್ನು ಕ್ರಮಿಸಹತ್ತಿದ ಖಂಡೋಬನು ದೇವ ಸ್ಥಾನದ ಬಳಿಗಂತೂ ಬಂದನು. ದೇವಸ್ಥಾನವೇನು ಸಣ್ಣದೇ! ಅದೊಂದು ಪ್ರಚಂಡವಾದ ಕೋಟೆಯಂತೆ ಇತ್ತು. ಅದರ ಸುತ್ತು ಮುತ್ತು ದಟ್ಟ ಗಿಡಗಳು ಹಬ್ಬಿದ್ದು, ಗಿಡಗಳ ಆಚೆಯಲ್ಲಿ ದೇವಸ್ಥಾನದ ಸುತ್ತು ಮುತ್ತು ಪ್ರಚಂಡವಾದ ಗೋಡೆಯು ಇತ್ತು. ಆತನು ದೇವಸ್ಥಾನವನ್ನು ಪ್ರವೇಶಿಸುವದಕ್ಕಾಗಿ ಹಾಗೆಯೇ ಮುಂದಕ್ಕೆ ಸಾಗಿದನು. ಆ ದೇವಸ್ಥಾನದ ಪ್ರಚಂಡವಾದ ಮಹಾದ್ವಾರವು ಅಂಬಾರೆ ಹಾಕಿದ ಎರಡು ಆನೆಗಳು ಜೋಡಾಗಿ ಹೋಗುವಷ್ಟು ಪ್ರಶಸ್ತ ವಾಗಿತ್ತು. ಒಬ್ಬ ಮನುಷ್ಯನು ನಿಂತು ಒಳಗೆ ಹೋಗುವಷ್ಟು ದಿಡ್ಡಿಯ ಬಾಗಿಲು ಪ್ರಶಸ್ತ ವಾಗಿತ್ತು. ಖಂಡೋಬನೆಯು ಹಾಗೆಯೇ ಮುಂದಕ್ಕೆ ಹೋಗಲು, ದಿಡ್ಡಿಯ ಬಾಗಿಲಿಗೆ ಹಾಕುವ ದೊಡ್ಡ ಕೀಲಿಯು ಬಾಗಿಲ ಮುಂದೆ ಬಿದ್ದಿತ್ತು. ಅದನ್ನು ಇಬ್ಬರು ಪ್ರಯಾಸದಿಂದ ಎತ್ತ ಬಹುದು! ಕೀಲಿಯು ಬಾಗಿಲ ಮುಂದೆ ಬಿದ್ದದ್ದನ್ನು ನೋಡಿ ಒಳಗೆ ಯಾರಾದರೂ ಹೋಗಿರ

ಬಹುದೆಂಬ ಸಂಶಯವು ಖಂಡೋಜಿಯ ಮನಸ್ಸಿನಲ್ಲಿ ಉತ್ಪನ್ನವಾಯಿತು. ಆದರೆ ಅದಕ್ಕೆ ಆತನು ಹೆದರಲಿಲ್ಲ; ಯಾರು ಹೋಗಿರಲೊಲ್ಲರೇಕೆ ಬಿಡಲೊಲ್ಲರೇಕೆ, ತಾನೊಂದು ಒಳಗೆ ಹೋಗೇ ದೇವರ ದರ್ಶನ ತಕ್ಕೊಂಡು ಬಂದರಾಯಿತೆಂದು ಆತನು ಗುಡಿಯನ್ನು ಹೊಕ್ಕನು. ಗುಡಿಯ ಸುತ್ತಲಿನ ಆ ಪ್ರಚಂಡವಾದ ಆವಾರವನ್ನು ನೋಡಿ, ಖಂಡೋಬನು ಬೆರಗಾದನು. ಗರ್ಭಗುಡಿಯ ಎದುರಿಗೆ ಒಂದು ವಿಸ್ತಾರವಾದ ಕುಂಡವು ಇತ್ತು; ಅದನ್ನು ನಾಲ್ಕೂ ಕಡೆಯಲ್ಲಿ ಹೊಡೆದ ಕಲ್ಲುಗಳಿಂದ ಸುಂದರವಾಗಿ ಕಟ್ಟಿದ್ದು, ಕುಂಡವು ಜಲದಿಂದ ಪರಿಪೂರ್ಣವಾಗಿತ್ತು. ಅದರಲ್ಲಿ ನಾನಾಪ್ರಕಾರದ ಪಕ್ಷಿಗಳು ಜಲಕ್ರೀಡೆಯನ್ನು ಮಾಡುತ್ತಿದ್ದವು. ಖಂಡೋಬನು ಅತ್ತಿತ್ತ ನೋಡದೆ ನೆಟ್ಟಗೇ ಗರ್ಭಗುಡಿಯನ್ನು ಹೊಕ್ಕನು; ಅಲ್ಲಿ ಕಗ್ಗತ್ತಲೆಯು ಮುಸುಕಿತ್ತು, ಒಂದು ಆಳು ಎತ್ತರದ ಎರಡು ಸಮೆಗಳಲ್ಲಿ ದೀಪಗಳು ಉರಿಯುತ್ತಿದ್ದವು. ಸ್ವಯಂಭು ಲಿಂಗವು ಸಣ್ಣದಿದ್ದು ಅದರ ಅರ್ಧಭಾಗವು ನೀರಿನಲ್ಲಿ ಮುಣುಗಿದ್ದರಿಂದ ಖಂಡೋಬನು ಕುಳಿತುಕೊಂಡು ದೇವರ ದರ್ಶನ ಮಾಡಿಕೊಳ್ಳಬೇಕಾಯಿತು. ಆತನು ಭಕ್ತಿಯಿಂದ— ''ಶಂಭೋ ಹರ ಹರ, ಮಹಾದೇವ'' ಎಂದು ನಾಮಘೋಷ ಮಾಡಿದನು. ಗರ್ಭಗುಡಿಯಲ್ಲಿ ಸಿಂಹನಾದದಂತೆ ಧ್ವನಿಯು ತುಂಬಿಕೊಂಡಿತು. ಕಣ್ಣು– ಕಪ್ಪಡಿಗಳು ಪರಪರ ಸಪ್ಪಳ ಮಾಡುತ್ತ ಹಾರಾಡುತ್ತಲಿದ್ದವು. ಖಂಡೋಬನು ಲಿಂಗದಿಂದ ಸ್ರವಿಸುತ್ತಿರುವ ಗಂಗಾಜಲವನ್ನು ಪ್ರೋಕ್ಷಿಸಿಕೊಂಡು ಕ್ಷಣಹೊತ್ತು ದೇವರ ಸ್ತೋತ್ರ ಮಾಡಿದನು.

ಖಂಡೋಬನು ಇನ್ನು ಹೊರಬೀಳಬೇಕೆಂದು ಗರ್ಭಗುಡಿಯ ಹೊಸತಿಲವನ್ನು ದಾಟುತ್ತಿರಲು, ಹೊರಗೆ ಯಾರೋ ಘಂಟಾನಾದ ಮಾಡಿದ್ದನ್ನು ಕೇಳಿ ಆತನು ಮೆಟ್ಟಿಬಿದ್ದನು. ನನ್ನಂತೆಯೇ ಯಾರಾದರೂ ದೇವರ ದರ್ಶನಕ್ಕೆ ಬಂದಿರಬಹುದೋ, ಎಂಬ ವಿಚಾರವು ಆತನ ಮನಸ್ಸಿನಲ್ಲಿ ಉತ್ಪನ್ನವಾಗುತ್ತಿರಲು, ಹೊರಗಿನವರು— ''ಶಿವ ಶಂಭೋ ಹರಹರ'' ಎಂದು ನಾಮಘೋಷ ಮಾಡಿದರು. ಅವರ ನಾಮಘೋಷ ಧ್ವನಿಯು ಪ್ರತಿಧ್ವನೀರೂಪದಿಂದ ಗುಡಿಯನ್ನೆಲ್ಲ ತುಂಬಿಕೊಂಡಂತೆ ಭಾಸವಾಯಿತು. ಅದನ್ನು ಕೇಳಿ ಖಂಡೋಬನು ಭಯಗ್ರಸ್ತನಾದನು. ಬ್ರಹ್ಮರಾಕ್ಷಸಗಳೇ ಶಿವಪೂಜೆಗಾಗಿ ಬಂದಿರಬಹುದೆಂದು ಪುನಃ ಆತನು ಗರ್ಭಗುಡಿಯಲ್ಲಿ ಹೊಕ್ಕು ಮೂಲೆಯಲ್ಲಿ ನಿಂತುಕೊಂಡನು. ಬ್ರಹ್ಮರಾಕ್ಷಸಗಳು ಶಿವಪೂಜೆ ಮಾಡುವಾಗ ನನ್ನನ್ನು ನೋಡಿ ಸಿಟ್ಟಿಗೆದ್ದರೆ ಏನು ಮಾಡಬೇಕು? ಅಥವಾ ಭಿಲ್ಲರೇ ಮೊದಲಾದ ಕಾಡು ಜನರ ಗುಡಿಯಲ್ಲಿ ಬಂದಿದ್ದು, ಅವರ ಕೈಯಲ್ಲಿ ನಾನು ಸಿಕ್ಕರೆ ಏನು ಮಾಡಬೇಕು? ಎಂಬಿವೇ ಮೊದಲಾದ ಭಯಸೂಚಕ ವಿಚಾರಗಳನ್ನು ಮಾಡುತ್ತ ಖಂಡೋಬನು ಮೂಲೆಯಲ್ಲಿ ಸುಮ್ಮನೆ ನಿಂತುಕೊಂಡುಬಿಟ್ಟನು!

ಅಷ್ಟರಲ್ಲಿ ಹೊರಗೆ ಘಂಟಾನಾದ ಮಾಡಿದವರು ಒಬ್ಬೊಬ್ಬರೇ ಒಳಗೆ ಗರ್ಭಗುಡಿಯಲ್ಲಿ ಬಂದರು. ಆದರೆ ಕತ್ತಲೆಯಲ್ಲಿ ಅವರ ಗುರುತು ಖಂಡೋಬನಿಗೆ ಹತ್ತಲಿಲ್ಲ. ಅವರು ಒಳಗೆ ಬಂದು ಮತ್ತೆ ಶಿವನಾಮ ಘೋಷಮಾಡಲು,ಈ ವ್ಯಕ್ತಿಗಳು ಬ್ರಹ್ಮರಾಕ್ಷಸಗಳಾಗಲಿ, ಭಿಲ್ಲರೇ ಮೊದಲಾದ ಕಾಡುಜನರಾಗಲಿ ಅಲ್ಲವೆಂದು ಅವರ ದನಿಯ ಮೇಲಿಂದ ಖಂಡೋಜಿಯು ತಿಳಿದುಕೊಂಡನು. ಅಷ್ಟರಲ್ಲಿ ಗರ್ಭಗುಡಿಯೊಳಗಿನ ಆ

ನಾಲ್ಕಾರು ಜನರಲ್ಲಿ ಒಬ್ಬನು ದೇವರ ಮುಂದಿನ ದೀಪಗಳನ್ನು ಸ್ಪಷ್ಟವಾಗಿ ಚಾಚಿ, ಒಂದು ಅರಿವೆಯ ಕಕ್ಕಡವನ್ನು ಪಣತಿಯಲ್ಲಿ ಎದ್ದಿ, ಕಕ್ಕಡವನ್ನು ಹಚ್ಚಿದನು! ಅದರಿಂದ ಗರ್ಭಗುಡಿ ಯಲ್ಲಿ ದೀಪದ ಪ್ರಕಾಶವು ಸ್ವಚ್ಛವಾಗಿ ಬಿದ್ದು, ಆ ವ್ಯಕ್ತಿಗಳ ಮೋರೆಗಳು ಖಂಡೋಬನಿಗೆ ಚನ್ನಾಗಿ ಕಂಡವು. ಆಗ ಖಂಡೋಬನಿಗಾದ ಆಶ್ಚರ್ಯವನ್ನು ವರ್ಣಿಸಲಾಗಿಲ್ಲ! ಗಣೋಜಿ ಶಿರ್ಕೆ, ರಾಣೋಜಿ ಶಿರ್ಕೆ ಎಂಬ ಇಬ್ಬರು ಬಂಧೂ ಗಳೂ, ಔರಂಗಜೇಬನ ಪ್ರಸಿದ್ಧ ಗುಪ್ತಚಾರನಾದ ಭೋಲಾನಾಥನೂ ಬಂದಿರುವದನ್ನು ನೋಡಿ ಆತನು ದಂಗುಬಡಿದು ನಿಂತುಕೊಂಡನು. ಮರಾಟರ ಪ್ರಸಿದ್ಧ ವೈರಿಗಳಾದ ಈ ಮೂವರು ಇಲ್ಲಿ ಒಟ್ಟುಗೂಡಿ ಇರುವದರಿಂದ, ರಾಯಗಡದ ಸಂಬಂಧದಿಂದ ಏನಾದರೂ ಗುಪ್ತಾಲೋಚನೆ ಗಳು ನಡೆದಿರ ಬಹುದೆಂದು ಆತನು ತರ್ಕಿಸಿ, ತನ್ನನ್ನು ನೋಡಬಾರೆಂದು ಆತನು ಮೂಲೆಗೆ ಹೆಚ್ಚು ಹೆಚ್ಚು ರಾವಿಕೊಂಡು ನಿಲ್ಲಹತ್ತಿದನು. ಅಷ್ಟರಲ್ಲಿ ಗಣೋಜಿ ಶಿರ್ಕೆಯು ಗರ್ಭಗುಡಿಯ ಮೂಲೆ ಯಲ್ಲಿ ಹೋಗಿ, ಒಂದು ಗೋಡೆಯ ಕಲ್ಲನ್ನು ಸಹಜವಾಗಿ ಸರಿಸಿದನು. ಆಗ ಒಬ್ಬ ಮನುಷ್ಯನು ಒಳಗೆ ಹೋಗುವಷ್ಟು ಪ್ರಶಸ್ತವಾದ ಬಾಗಿಲು ಖಂಡೋಬನ ಕಣ್ಣಿಗೆ ಬಿದ್ದಿತು. ಆಮೇಲೆ ಆ ಬಂದವರು ಒಬೊಬ್ಬರೇ ಆ ಬಾಗಿಲೊಳಗಿಂದ ಇಳಿದು ಎಲ್ಲಿಗೋ ಸಾಗಿದರು. ಅವರ ಕೈಯಲ್ಲಿ ಕಕ್ಕಡವು ಇದ್ದೇ ಇತ್ತು, ಎಲ್ಲರೂ ಒಂದೊಂದು ಕಕ್ಕಡ ಮಾಡಿಕೊಳ್ಳ ಬೇಕೆಂದು ಮಾತಾಡಿ, ಅವರು ಅದರಂತೆ ಕಕ್ಕಡ ಮಾಡಿ ದೇವರ ಪಣತಿಯಲ್ಲಿ ಎದ್ದಿ ಕೈ ಯಲ್ಲಿ ಹಿಡಕೊಂಡಿದ್ದರು.

ಹೀಗೆ ಎಲ್ಲರೂ ಒಳಗೆ ಹೋದದ್ದನ್ನು ನೋಡಿ ಖಂಡೋಬನು ಆಲೋಚನೆಗೊಳ ಗಾದನು. ಈ ಜನರು ಹೋದದ್ದೊಂದು ಗುಹೆಯಿರಬಹುದೆಂತಲೂ, ಆ ಗುಹೆಯ ಸಂಬಂಧವು ರಾಯಗಡಕ್ಕೆ ಇರಬಹುದೆಂತಲೂ, ರಾಯಗಡದ ಮುಖ್ಯಾಧಿಕಾರಿಯಾದ ಸೂರ್ಯಾಜಿ ಪಿಸಾಳನು ಬಾದಶಹನಿಗೆ ಫಿತೂರಿಯಾಗಿರಬಹುದಾದ್ದರಿಂದಲೇ ಈ ಹೊಸಬರು ನಿರಾಲೋಚಿತರಾಗಿ ನಿರ್ಭಯದಿಂದ ಗುಹೆಯನ್ನು ಪ್ರವೇಶಿಸಿರುವರೆಂತಲೂ ಆತನು ಅನುಮಾನಿಸಿದನು. ತಾನು ಸಹಜವಾಗಿ ದೇವರ ದರ್ಶನಕ್ಕೆ ಬಂದಿರಲು, ಮಹತ್ವದ ಸ್ವಾಮಿ ಕಾರ್ಯಕ್ಕೆ ಕೈಹಾಕುವ ಪ್ರಸಂಗ ಬಂತೆಂದು ಆತನು ಸಮಾಧಾನಪಟ್ಟನು. ಹೀಗೆಯೇ ತಿರುಗಿ ಹೋಗಿ ಈ ವರ್ತಮಾನವನ್ನು ಪ್ರಲ್ಹಾದ ಪಂತರಿಗೆ ತಿಳಿಸಬೇಕೆಂದು ಮಾಡಿದನು; ಹಾಗೆ ಮಾಡಿದ್ದರೆ ಒಂದು ಬಗೆಯಿಂದ ನೆಟ್ಟಗೂ ಆಗುತ್ತಿತ್ತೆಂದು ಹೇಳಬಹುದು; ಆದರೆ ಪ್ರತ್ಯಕ್ಷ ವಾದರೂ ಪ್ರಮಾಣಿಸಿ ನೋಡಬೇಕೆಂಬ ಬುದ್ಧಿಯು ಉತ್ಪನ್ನವಾಗಿ ಆತನು ಸತ್ಯಶೋಧಕ್ಕಾಗಿ ಮುಂದುವರಿದನು. ಆಗ ಹಲವು ವಿಘ್ನಕಾರಿಗಳಾದ ವಿಚಾರಗಳು ಆತನಲ್ಲಿ ಹೊಳೆದರೂ ಅವಕ್ಕೆ ಆತನು ಸೊಪ್ಪು ಹಾಕಲಿಲ್ಲ, ಆತನು ತನ್ನ ತಲೆಗೆ ಸುತ್ತಿದ್ದ ಮುಂಡಾಸವನ್ನು ಹರಿದು ಎರಡು ಮೂರು ಕಕ್ಕಡಗಳನ್ನು ಮಾಡಿಕೊಂಡು ಪಣತಿಯಲ್ಲಿ ಎದ್ದಿ ಇಟ್ಟುಕೊಂಡನು. ಆ ಗಣೋಜಿಯೇ ಮೊದಲಾದವರು ಹೋಗಿ ಸ್ವಲ್ಪಹೊತ್ತು ಆದಮೇಲೆ ಆತನು ಗುಹೆಯ ಬಾಗಿಲಿಗೆ ಹೋಗಿ ಮೊದಲು ಒಳಗೆ ಹಣಕಿ ನೋಡಿ, ಜನರ ಸುಳುವಿನ ಸಪ್ಪಳವನ್ನು ಕಿವಿಗೊಟ್ಟು ಕೇಳಿದನು. ಗವಿಯಲ್ಲಿ ಕತ್ತಲು ಮುಸುಕಿತ್ತು, ಜನರ ಸದ್ದು ಕೇಳಲಿಲ್ಲ, ಆಗ ಮಹಾ

ಧೈರ್ಯಶಾಲಿಯೂ, ಸ್ವಾಮಿಕಾರ್ಯ ತತ್ಪರನೂ ಆದ ಖಂಡೋಬನು ಕಕ್ಕಡವನ್ನು ಹಚ್ಚಿಕೊಂಡು ಮೆಲ್ಲಗೆ ಗವಿಯಲ್ಲಿ ಇಳಿದನು. ದೀಪದ ಪ್ರಕಾಶದಲ್ಲಿ ಆತನಿಗೆ ಗುಹೆಯ ಮಾರ್ಗವು ಸ್ಪಷ್ಟವಾಗಿ ಕಾಣಿಸಹತ್ತಿತು. ಗುಹೆಯಲ್ಲಿ ಹೋದವರ ದೀಪವು ತನ್ನೆದುರಿಗೆ ಕಂಡ ಕೂಡಲೆ, ತನ್ನ ದೀಪವನ್ನು ನಂದಿಸಿ ಹಿಂದಿರುಗುವ ಸಂಕಲ್ಪವನ್ನು ಮಾಡಿದ್ದ ಆತನು ಬಹು ಜಾಗರೂಕತೆಯಿಂದ ಮಾರ್ಗವನ್ನು ಕ್ರಮಿಸಹತ್ತಿದ್ದನು.

ಹೀಗೆ ಅತ್ಯಂತ ಕುತೂಹಲ ಪ್ರೇರಿತವಾದ ಖಂಡೋಜಿಯು ಬೇಗನೆ ನಡೆದು ಹೋದನು. ತಕ್ಕಮಟ್ಟಿಗೆ ದೂರಹೋದ ಬಳಿಕ, ಆತನಿಗೆ ಬಹುದೂರದಲ್ಲಿ ದೀಪದ ಪ್ರಕಾಶವು ಕಾಣಹತ್ತಿತು. ಕೂಡಲೆ ಆತನು ತನ್ನ ಕೈಯಲ್ಲಿಯ ದೀಪವನ್ನು ನಂದಿಸಿ, ಆ ಬೆಳಕಿನ ನಿರತಿನಿಂದ ಕತ್ತಲಲ್ಲಿಯೇ ಮಾರ್ಗವನ್ನು ಕ್ರಮಿಸಹತ್ತಿದನು. ಹೋಗಹೋಗುತ್ತ ಆತನಿಗೆ ಕೆಲವು ಪಾವಟಿಗೆಗಳು ಹತ್ತಿದವು. ಗಣೋಜಿಯೇ ಮೊದಲಾದವರು ತಾವು ಒಯ್ದಿದ್ದ ಕಕ್ಕಡವನ್ನು ಆ ಪಾವಟಿಗೆಗಳ ಹತ್ತರ ಚಲ್ಲಿಕೊಟ್ಟು ಹೋಗಿದ್ದರು. ಅವುಗಳಲ್ಲಿ ಒಂದೆರಡು ನಂದಿದ್ದವು ಒಂದೆರಡು ಅರ್ಧಮರ್ಧ ಉರಿಯುತ್ತಿದ್ದವು. ದೀಪದ ಅವಶ್ಯಕತೆಯು ಇಲ್ಲದ್ದರಿಂದ ಅವನ್ನು ಇಲ್ಲಿ ಚಲ್ಲಿಕೊಟ್ಟು ಹೋಗಿರುವರೆಂದು ಖಂಡೋಜಿಯು ತರ್ಕಿಸಿದನು. ಆತನು ಪಾವಟಿಗೆಗಳನ್ನು ಹತ್ತಿ ಮೇಲಕ್ಕೆ ಹೋಗಲು, ಜನರ ಮಾತುಗಳು ಕೇಳಹತ್ತಿದವು. ಬರಬರುತ್ತ ಆ ಮಾತುಗಳಲ್ಲಿ ನಗೆಯ ಮಿಶ್ರಣವಾಗಿ ಗದ್ದಲವು ಸ್ಪಷ್ಟವಾಗಿ ಕೇಳಹತ್ತಿತು. ಖಂಡೋಜಿಯು ಮೆಲ್ಲಗೆ ಮೇಲಕ್ಕೆ ಹೋದನು. ಆತನಿಗೆ ಒಂದು ಬಾಗಿಲು ಹತ್ತಿತು. ಒಳಗೆ ಒಂದು ಪ್ರಶಸ್ತವಾದ ದಿವಾಣಖಾನೆ ಇದ್ದು, ಮಖಮಲಿಯಿಂದ ಭೂಷಿಸಲ್ಪಟ್ಟ ಕುರ್ಚಿಗಳನ್ನೂ ಬೇರೆ ಆಸನಗಳನ್ನೂ ಅಲ್ಲಿ ಇಟ್ಟಿದ್ದರು. ಅವುಗಳ ಮೇಲೆ ಗಣೋಜಿ, ರಾಣೋಜಿ ಮೊದಲಾದವರು ಕುಳಿತು ಕೊಂಡಿದ್ದರು. ಅವರನ್ನು ನೋಡಿ ಖಂಡೋಜಿಯ ಮನಸ್ಸಿನಲ್ಲಿ ಹಲವು ವಿಚಾರ ತರಂಗಗಳು ಉತ್ಪನ್ನವಾದವು. ಇವರು ಇಲ್ಲಿ ಯಾಕೆ ಬಂದಿರಬಹುದು? ಈ ನೆಲಮನೆಯು ಯಾರದಾದರೂ ವಾಡೆಯ ಬುಡದಲ್ಲಿ ಇರಬಹುದೇ ಹೇಗೆ? ಇಲ್ಲಿಂದ ರಾಯಗಡವು ಎಷ್ಟು ದೂರದಲ್ಲಿ ಇರಬಹುದು? ಇಲ್ಲಿಂದ ಪಾರಾಗಿ ಹೋಗಲಿಕ್ಕೆ ನನಗೆ ಮಾರ್ಗವು ಸಿಗಬಹುದೋ? ಎಂಬಿವೇ ಮೊದಲಾದ ವಿಚಾರಗಳಲ್ಲಿ ಮಗ್ನನಾಗಿರಲು, ಆ ದಿವಾಣಖಾನೆಯದೊಂದ ಬಾಗಿಲು ಧಡಕ್ಕನೆ ತೆಗೆದು, ಅದರೊಳಗಿಂದ ರಾಯಗಡದ ಮುಖ್ಯಾಧಿಕಾರಿಯಾದ ಸುರ್ಯಾಜಿ ಪಿಸಾಳನು ಬಂದನು. ಅವನನ್ನು ನೋಡಿದ ಕೂಡಲೆ ಖಂಡೋಜಿಯ ಕಣ್ಣುಗಳು ಕೆಂಪಾಗಿ ಆತನು ಸಂತಾಪದಿಂದ ಉರಿಯಹತ್ತಿದನು. ಆತನ ಮುಖದಿಂದ—''ಎಲಾ ನೀಚಾ, ಉಂಡಮನೆಗಳ ಎಣಿಸುವ ಅಧಮಾ'' ಎಂಬ ಉದ್ಗಾರವು ಹೊರಡತಕ್ಕದ್ದು! ಆದರೆ ಆತನು ಬಹು ಪ್ರಯಾಸ ದಿಂದ ನುಂಗಿಕೊಂಡನು.

ಹೀಗಿರುವಾಗ ಸೂರ್ಯಾಜಿಯ ಸಂಗಡ ಗಣೋಜಿ ಶಿರ್ಕೆ, ಹಾಗು ಭೋಲಾನಾಥ ಇವರ ಆಲೋಚನೆಗಳು ನಡೆದವು. ಭೋಲಾನಾಥನು ಸೂರ್ಯಾಜಿಗೆ ಕೆಲವು ಪ್ರಶ್ನೆಗಳನ್ನು ಮಾಡಿದನು. ಕೂಡಲೆ ಆ ಚಾಂಡಾಲ ಚೌಕಳಿಯ ಸಂಕೇತಗಳು ಗೊತ್ತಾದವು. ಅವು ಕಿವಿಗೆ ಬಿದ್ದ

ಕೂಡಲೇ ಖಂಡೋಜಿಯ ಮೈಮೇಲಿನ ಎಚ್ಚರವು ತಪ್ಪಿತು. ಸಂತಾಪಾತಿಶಯದಿಂದ ಅವನ ತುಟಿಗಳು ನಡುಗಹತ್ತಿದವು. ಆತನು ತಿರುಗಿ ಹೋಗುವದಕ್ಕಾಗಿ, ಕಕ್ಕಾಬಿಕ್ಕಿಯಾಗಿ ನಾಲ್ಕೂ ಕಡೆಗೆ ನೋಡಹತ್ತಿದನು. ಅವನ ಮೈಮೇಲೆ ಪೂರಾ ಎಚ್ಚರವಿದ್ದಿಲ್ಲ, ಅಷ್ಟರಲ್ಲಿ ಗಣೋಜಿಯೇ ಮೊದಲಾದವರು ಹೊರಡಲು ಸಿದ್ಧರಾಗಿ, ಗಣೋಜಿಯೊಬ್ಬನೇ ಒಂದು ದೀವಟಿಗೆಯನ್ನು ತಕ್ಕೊಂಡು ಹೊರಗೆ ಬರಹತ್ತಿದನು. ಆತನ ದೀವಟಯಿಗೆಯ ಬೆಳಕು ಬಿದ್ದಕೂಡಲೇ, ಖಂಡೋಜಿಯು ಎಚ್ಚತ್ತು ಲಗಬಗೆಯಿಂದ ಪಾವಟಿಗೆಗಳನ್ನು ಇಳಿಯಹತ್ತಿದನು. ಆಗ ಗಣೋಜಿಯು ಹೊರಗೆ ಬರಲು, ಪಿಶಾಚದಂತೆ ಯಾರೋ ಓಡಿಹೋಗುತ್ತಿರುವದು ಅವನ ಕಣ್ಣಿಗೆ ಬಿದ್ದಿತು. ಕೂಡಲೆ ಆತನು ಬೆದರಿ ಬಿದ್ದು— ''ಘಾತವಾಯಿತು! ಘಾತವಾಯಿತು! ಯಾವನೋ ನಮ್ಮ ಒಳಸಂಚುಗಳನ್ನು ಕೇಳಿಕೊಂಡನು'' ಎಂದು ಒದರಿದನು. ಕೂಡಲೇ ಒಳಗಿನವರೂ ಹೊರಗೆ ಬಂದು, ಗಣೋಜಿಯನ್ನು ಹಿಂಬಾಲಿಸಿದರು. ಗಣೋಜಿಯು ಎಡಗೈಯಲ್ಲಿ ದೀವಟಿಗೆಯನ್ನು ಹಿಡಕೊಂಡು, ಬಲಗೈಯಲ್ಲಿ ತನ್ನ ಖಡ್ಗವನ್ನು ಹಿಡಿದು ಖಂಡೋಜಿಯ ಬೆನ್ನು ಹತ್ತಿದನು. ಆಗ ಸೂರ್ಯಾಜಿಯು ಆತನನ್ನು ಕುರಿತು— ''ಗಣೋಜಿ ರಾವ, ನೀವು ಘಾತಕ ಮನುಷ್ಯನ ಬೆನ್ನು ಬಿಡಬೇಡಿರಿ. ಕದಾಚಿತ್ ಆತನು ಹಿಂದಕ್ಕೆ ತಿರುಗಿ ನಿಲ್ಲಬಹುದು. ಕೂಡಲೇ ಆತನನ್ನು ತುಂಡರಿಸಿ ಚಲ್ಲಿರಿ. ನಿಮ್ಮ ಬೆನ್ನಮೇಲೆ ರಾಣೋಜಿಯೂ ಇದ್ದೇ ಇರುವನು. ನಾನು ಈ ಎರಡನೆಯ ಬಾಗಲಿನಿಂದ ಹೋಗಿ ಗುಡಿಯ ಮಹಾದ್ವಾರದ ದಿಡ್ಡಿಯ ಬಾಗಿಲಿಗೆ ಕೀಲಿಯನ್ನು ಹಾಕುತ್ತೇನೆ. ರಾಯಗಡಕ್ಕೆ ಹೋಗುವ ಬಾಗಿಲು ಬಂದು ಇರುತ್ತದೆ. ಇವರ ಅಪ್ಪನಿಗೆ ಅದು ಸಿಗುವ ಹಾಗಿಲ್ಲ, ಅಂದಬಳಿಕ ಈತನು ಅನಾಯಾಸವಾಗಿ ನಮ್ಮ ಬಲೆಯಲ್ಲಿ ಸಿಗುವನು. ಎಂದು ಹೇಳಿ, ಆತನು ತನ್ನ ಕೆಲಸಕ್ಕಾಗಿ ಹೊರಟುಹೋದನು.

ಇತ್ತ ನಾಯಿ–ತೋಲಗಳ ಬೇಟೆಯಂತೆ, ಖಂಡೋಜಿ–ಗಣೋಜಿ ಇಬ್ಬರೂ ಗವಿಯಲ್ಲಿ ಸಾಗಿರಲು, ಖಂಡೋಜಿಯು ಗುಹೆಯ ಬಾಗಿಲಲೊಳಗಿಂದ ಗರ್ಭಗುಡಿಯಲ್ಲಿ ಇಳಿದನು. ಆಗ ಗಣೋಜಿಗೆ ಒಮ್ಮೆಲೇ ಗುಡಿಯಲ್ಲಿ ಇಳಿಯಲಿಕ್ಕೆ ಧೈರ್ಯವಾಗಲಿಲ್ಲ, ಯಾಕಂದರೆ, ಖಂಡೋಜಿಯು ಗರ್ಭಗುಡಿಯಲ್ಲಿ ಹೊಂಚುಹಾಕಿ ತನ್ನನ್ನು ಹೊಡೆಯಬಹುದೆಂದು ಆತನು ಶಂಕಿಸಿದನು. ಈ ಶಂಕೆಯಿಂದಲೇ ಆತನು ತನ್ನ ತಮ್ಮನಾದ ರಾಣೋಜಿಯನ್ನು ಮುಂದಕ್ಕೆ ಹೋಗಗೊಡಲಿಲ್ಲ, ಆದರೆ ಖಂಡೋಜಿಯು ಗಣೋಜಿಯನ್ನು ಹೊಡೆಯುವ ಉಸಾಬರಿಗೆ ಹೋಗದೆ, ತಾನು ಮೊದಲು ಗುಡಿಯ ಮಹಾದ್ವಾರದಿಂದ ಪಾರಾಗಿ ರಾಯಗಡಕ್ಕೆ ಹೋಗಿ, ಈ ಒಳಸಂಚನ್ನು ತಮ್ಮವರಿಗೆ ತಿಳಿಸಬೇಕೆಂದು ಆತುರಪಟ್ಟನು. ಆದರೆ ಪಾಪ! ಆತನಿಗೆ ಕೃತಘ್ನ ಸೂರ್ಯಾಜಿಯು ಬೇರೆಕಡೆಯಿಂದ ಬಂದು ದಿಡ್ಡಿಯ ಬಾಗಿಲಿಗೆ ಕೀಲಿಯ ಜಡದದ್ದೇನು ಗೊತ್ತು? ಆತನು ಧಾವಿಸಿ ಬಾಗಿಲಿಗೆ ಹೋಗಿ ನೋಡುತ್ತಾನೆ, ದಿಡ್ಡಿಗೆ ಕೀಲಿ! ಸ್ವಾಮಿದ್ರೋಹಿಯಾದ ಸೂರ್ಯಾಜಿಯು ಬಾಗಲಿಗೆ ಕೀಲಿಯ ಹಾಕಿ ತನಗೆ ನಾಚಿ ಮರೆಯಾಗಿ ಗುಡಿಯೊಳಗೆ ಹೋಗುವದನ್ನು ಖಂಡೋಜಿಯು, ನೋಡಿದನು. ಹೀಗೆ ಬಾಗಿಲು ಬಂದಾದುದ್ದನ್ನು ನೋಡಿ ಖಂಡೋಜಿಯು, ಗುಡಿಯ

ಆವಾರದಲ್ಲಿ ಎಲ್ಲಿಯಾದರೂ ಮಾರ್ಗ ಸಿಗ ಬಹುದೋ? ಎಂದು ಎಡತಾಕಿದನು; ಆದರೆ ವ್ಯರ್ಥವು. ಎಲ್ಲಿಯೂ ಆತನಿಗೆ ಮಾರ್ಗವು ಸಿಗಲಿಲ್ಲ. ಸೂರ್ಯಾಜಿಯು ಗರ್ಭಗುಡಿಯಲ್ಲಿ ಹೋಗಿ ಗಣೋಜಿಯನ್ನೂ, ರಾಣೋಜಿಯನ್ನೂ ಬರಮಾಡಿಕೊಂಡನು. ಸಿಕ್ಕ ಬೇಟೆಯು ಎತ್ತ ಕಡೆಯಿಂದಲೂ ಪಾರಾಗಿ ಹೋಗುವ ಸಂಭವ ವಿಲ್ಲೆಂದು ತಿಳಿದದ್ದರಿಂದ, ಅವರು ಸಾವಕಾಶವಾಗಿ ಖಂಡೋಜಿಯ ಬಳಿಗೆ ಬಂದರು. ಆಗ ಖಂಡೋಜಿಯು, ಮಾರ್ಗವನ್ನು ಹುಡುಕುತ್ತ ಅಲೆದಾಡುತ್ತಿದ್ದನು. ಶಸ್ತ್ರಧಾರಿಗಳಾದ ಆ ನಾಲ್ವರು ಬಂದು ಖಂಡೋಜಿಯನ್ನು ನಿರ್ಬಂಧಿಸಿದರು. ಪರಸ್ಪರರನ್ನು ನೋಡಿದ ಖಂಡೋಜಿ– ಗಣೋಜಿಯರಿಬ್ಬರ ಕಣ್ಣುಗಳೂ ಕೆಂಪಾದವು! ಇಬ್ಬರೂ ಒಬ್ಬರನ್ನೊಬ್ಬರು ನೋಡುತ್ತ ಸುಮ್ಮನೆ ನಿಂತುಕೊಂಡರು; ಆದರೆ ಸೂರ್ಯಾಜಿ ಪಿಸಾಳನ ಮನಸ್ಸಿನ ಸ್ಥಿತಿಯು ಮಾತ್ರ ವಿಲಕ್ಷಣವಾಯಿತು. ಖಂಡೋಜಿಯನ್ನು ನೋಡಿದ ಕೂಡಲೇ ಆತನ ಮೋರೆಯು ಕಪ್ಪಿಟ್ಟಿತು. ಆಗ ಗಣೋಜಿಯು ಖಂಡೋಜಿ ಯನ್ನು ಕುರಿತು—

ಗಣೋಜಿ—ಎಲಾ ನೀಚಾ, ಖಂಡ್ಯಾ, ಈಗ ಕೈಯಲ್ಲಿ ಚನ್ನಾಗಿ ಸಿಕ್ಕೆ! ಹೇಳು, ಏನು ಮಾಡಲಿ? ನಿನ್ನನ್ನು ನುಚ್ಚು ನುಚ್ಚಾಗಿ ಕಡಿಯಲಾ! ಅಥವಾ ಗಿಡಕ್ಕೆ ಉರಲು ಹಾಕಲಾ? ಇಲ್ಲವೆ ಬಾದಶಹರ ಬಳಿಗೆ ಸರೆ ಹಿಡಿದೊಯ್ಯಲಾ? ಹೇಳು, ಏನು ಮಾಡಲಿ?

ಖಂಡೋಜಿ—ಗಣೋಜಿರಾವ, ನಾನು ನಿಃಶಸ್ತ್ರನಾಗಿರುವೆನು. ಧರ್ಮಯುದ್ಧದ ರೀತಿ ಯೆಂದರೆ, ಈಗ ನನ್ನ ಸಂಗಡ ಮಲ್ಲಯುದ್ಧಕ್ಕೆ ಬರತಕ್ಕದ್ದು. ನೀವು ಒಬ್ಬರೇ ಬರ್ರಿ, ಬೇಕಾದರೆ ನೀವು ಎಲರೂ ಕೂಡಿ ಬರ್ರಿ!

ಗಣೋಜಿ—ನಿನ್ನಂಥ ನೀಚನ ಸಂಗಡ ಧರ್ಮಯುದವೇತಕ್ಕೆ? ದುಷ್ಟಾ, ಮರಣಕ್ಕೆ ಸಿದ್ಧನಾಗು. ನಿನ್ನ ರಕ್ತದಿಂದ ಸ್ನಾನಮಾಡುವ ಹಕ್ಕು ನನಗೇ ವಿಶೇಷವಾಗಿ ಇರುತ್ತದೆ. ಅದರಲ್ಲಿ ಇಂದು, ನೀನು ಮಾಡಿರುವ ಗುಪ್ತಚಾರನ ಕೆಲಸಕ್ಕೆ ದೇಹಾಂತ ಪ್ರಾಯಶ್ಚಿತ್ತದ ಹೊರತು ಎರಡನೆಯ ಯೋಗ್ಯವಾದ ಶಿಕ್ಷೆಯು ಇಲ್ಲವೇ ಇಲ್ಲ.

ಖಂಡೋಜಿ–ಗಣೋಜಿರಾವ, ನಿಮ್ಮ ಮಾತಿಗೆ ನಾನು ಒಪ್ಪಿಕೊಳ್ಳುತ್ತೇನೆ; ಆದರೆ ಈ ಕೃತಘ್ನನಾದ ನರಾಧಮ ಸೂರ್ಯಾಜಿ ಪಿಸಾಳನ ಗೋಣು ಮುರಿದು ಚಲ್ಲಲಿಕ್ಕೆ ಮೊದಲು ನನಗೆ ಅಸ್ಪದಕೊಟ್ಟು, ಆಮೇಲೆ ನೀವು ನನಗೆ ಬೇಕಾದ ಶಿಕ್ಷೆಯನ್ನು ಮಾಡಿರಿ. ಈ ನೀಚನು ಮರಾಟರ ಅನ್ನವನ್ನು ಉಂಡು ಔರಂಗಜೇಬನಿಗೆ ಗುಪ್ತರೀತಿಯಿಂದ ಸಹಾಯ ಮಾಡುತ್ತಿರುವನು!

ಈ ಮಾತುಗಳನ್ನು ಕೇಳಿ ಗಣೋಜಿಯು ಸ್ವಲ್ಪ ವಿಚಾರಮಗ್ನನಾದನು. ತನ್ನ ಹೆಂಡತಿಯಾದ ರಾಜಕುವರಳು ಖಂಡೋಜಿಯ ಸಹವಾಸದಲ್ಲಿರುವಳೆಂಬ ಕೆಟ್ಟ ಕಲ್ಪನೆಯು ಗಣೋಜಿಯ ಮನಸ್ಸಿನಲ್ಲಿ ಉತ್ಪನ್ನವಾಗಿತ್ತು. ಆದ್ದರಿಂದ, ಆತನು ಖಂಡೋಜಿಯನ್ನು ಕುರಿತು— ದುಷ್ಟಾ, ನಿನ್ನನ್ನು ಇಂದು ಕೊಲ್ಲುವದು ಯೋಗ್ಯವಲ್ಲ. ಆ ಜಾರಿಣಿಯನ್ನೂ, ನಿನ್ನನ್ನೂ ಒಂದೇ ಚಿತೆಯಲ್ಲಿ ಮಲಗಿಸುವೆನು. ರಾಯಗಡವು ನಮ್ಮ ಕೈವಶವಾಗುವವರೆಗೆ

ನೀನು ಇಲ್ಲಿಯೇ ಇರು. ನೀನು ಇಲ್ಲಿಂದ ಪಾರಾಗಿ ಹೋದರೆ ಸೂರ್ಯಾಜಿಯ ನಾಶವು ಸಮೂಲವಾಗಿ ಆಗುವದೆಂಬದರಲ್ಲಿ ಸಂಶಯವಿಲ್ಲ! ಆದರೆ ನೀನು ಇಲ್ಲಿಂದ ಪಾರಾಗಿ ಹೋಗುವ ಸಂಭವವೇ ಇಲ್ಲ, ನಾವಾಗಿ ಅನ್ನವನ್ನು ಕೊಟ್ಟರೆ, ನೀನು ಬದುಕಿರುತ್ತೀ, ಇಲ್ಲದಿದ್ದರೆ ಇಲಿಯು ಹಾಗೆ ಬೆಳ್ಳಗಾಗಿ ಸತ್ತು ಒಣಗಿ ಹೋಗುತ್ತೀ. ಹೋಗಿರಿ, ಸೂರ್ಯಾಜೀ, ನೀವು ರಾಯಗಡದ ಬಾಗಿಲನ್ನು ಬಂದುಮಾಡಿಕೊಂಡು ಒಳಗಿನಿಂದಲೇ ರಾಯಗಡಕ್ಕೆ ಹೋಗಿರಿ. ರಾಣೋಜಿ. ನೀನು ಭೋಲಾನಾಥನನ್ನು ಕರಕೊಂಡು ಮಹಾದ್ವಾರದ ದಿಡ್ಡಿಯೊಳಗಿಂದ ಹಾದು ಹೊರಗೆ ನಡೆ. ನಾನು ಅಲ್ಲಿಯವರೆಗೆ ಈತನ ಬೆನ್ನಮೇಲಿರುತ್ತೇನೆ. ನೀವೆಲ್ಲರೂ ಹಾದಿ ಹತ್ತಿದ ಬಳಿಕ ನಾನು ಬಾಗಿಲು ಬಂದುಮಾಡಿ ಕೊಂಡು, ಕೀಲಿ ಹಾಕಿಕೊಂಡು ಬರುವೆನು. ಏ, ನರಪಶುವೇ, ನನ್ನ ಮಾತನ್ನು ಚನ್ನಾಗಿ ಕೇಳು. ಆಗೋ, ಅತ್ತಕಡೆಯ ಆ ಕೋಣೆಯಲ್ಲಿ ಎಥೇಚ್ಛ ಧಾನ್ಯ ಸಂಗ್ರಹವಿರುತ್ತದೆ. ಈ ಕುಂಡದಲ್ಲಿ ಸ್ನಾನಮಾಡಿ ಶಂಕರನನ್ನು ಪೂಜಿಸಿ ಯಥೇಚ್ಛ ಭೋಜನಮಾಡುತ್ತ ಕಾಲಹರಣಮಾಡು. ನಿನ್ನ ಪೂರ್ವ ಪುಣ್ಯವಿರುವದರಿಂದಲೇ ಶ್ರೀಶಂಕರ ಪೂಜೆಯ ಯೋಗವು ಒದಗಿರುತ್ತದೆಂದು ತಿಳಿ. ನನ್ನ ಮನಸ್ಸಿಗೆ ಬರುವವರೆಗೆ ನೀನು ಬದುಕಿರಲೇಬೇಕಾಗಿರುವದು. ನೀನು ಶೂರನೆನಿಸಿ ಕೊಳ್ಳುವದರಿಂದ ಆತ್ಮಹತ್ಯವು ನಿನಗೆ ಸಮ್ಮತವಾಗಲಿಕ್ಕಿಲ್ಲ. ಇನ್ನು ನಾನು ತರ್ಕಿಸಿರುವಂತೆ ವ್ಯಭಿಚಾರದ ಮಹಾಪಾತಕಕ್ಕೆ ನೀನು ಗುರಿಯಾಗಿದ್ದ ಪಕ್ಷದಲ್ಲಿ ಆತ್ಮಹತ್ಯೆ ಮಾಡಿಕೊಳ್ಳ ಬಹುದಾಗಿದೆ; ಆದರೆ, ಇದು ನಿನಗೆ ಭೂಷಣವಲ್ಲೆಂಬದನ್ನು ಚನ್ನಾಗಿ ನೆನಪಿನಲ್ಲಿಡು. ಎಂದು ಹೇಳಿ, ಗಣೋಜಿಯು ತನ್ನವರನ್ನು ಹಿಂಬಾಲಿಸಿ ತಾನೂ ಗುಡಿಯಿಂದ ಹೊರಟು ಹೋದನು.

## ಮರಾಟರ ದರ್ಬಾರವು

ಸಂಭಾಜಿಯ ಉತರಕ್ರಿಯೆಯ ಸಲುವಾಗಿ ಮುಖ್ಯ ಮುಖ್ಯ ಮಹಾರಾಷ್ಟ್ರ ಸರದಾರರೆಲ್ಲ ರಾಯಗಡಕ್ಕೆ ಬಂದಿದ್ದರು. ಅತ್ಯಂತ ಬಲಾಢ್ಯನಾದ ಔರಂಗಜೇಬನ ಸಂಗಡ ಇನ್ನು ಹ್ಯಾಗೆ ನಡೆದುಕೊಳ್ಳಬೇಕು, ಆತನಿಂದ ಮರಾಟರ ರಾಜ್ಯವನ್ನು ಯಾವ ಮಾರ್ಗ ದಿಂದ ಉಳಿಸಿಕೊಳ್ಳಬೇಕು. ಸಂಭಾಜಿ ಮಹಾರಾಜರ ಕೊಲೆಯ ಸೇಡನ್ನು ಹ್ಯಾಗೆ ತೀರಿಸಿ ಕೊಳ್ಳಬೇಕು, ಇವೇ ಮೊದಲಾದ ಮಹತ್ವದ ಸಂಗತಿಗಳ ವಿಚಾರಕ್ಕಾಗಿ ದರ್ಬಾರವು ಕೂಡ ಬೇಕಾಗಿತ್ತು. ಒಂದು ದಿನ ಜಕ್ಷಿಯು ಯಾವತ್ತು ದುರ್ಗಾಧಿಪತಿಗಳಿಗೂ, ಮುತ್ಸದ್ದಿಗಳಿಗೂ, ಸರದಾರರಿಗೂ, ಕಾರಕೂನರಿಗೂ ದರ್ಬಾರಕ್ಕೆ ನಿಯಂತ್ರಣ ಮಾಡಿದನು. ಎಲ್ಲರು ದುಃಖಿತ ವಾದ ಅಂತಃಕರಣದಿಂದ ದರ್ಬಾರಕ್ಕೆ ಹೊರಟಿದ್ದರು. ಎಲ್ಲರು ತೀರ ಸಾಧಾರಣ ಉಡಿಗೆ- ತೊಡಿಗೆಗಳನ್ನು ಧರಿಸಿದ್ದರು. ಸಭಾಸ್ಥಾನದ ಬಾಗಿಲುಗಳೆಲ್ಲ ತೆರದಿದ್ದವು. ಸಭಾಸ್ಥಾನದ ನೆಲವು

ಚಿತ್ರವಿಚಿತ್ರವಾದ ಸಂಗಮರವರಿ ಕಲ್ಲುಗಳಿಂದಲೂ, ಸ್ಪಟಿಕಗಳಿಂದಲೂ ಅಲಂಕೃತವಾಗಿತ್ತು. ಮನುಷ್ಯನ ನಿಲುವಿಕೆಯಷ್ಟು ಎತ್ತರವಾದ ನಿಲವು ಗನ್ನಡಿಗಳನ್ನು ಅಲ್ಲಲ್ಲಿ ಇಟ್ಟಿದ್ದರು. ಸುವರ್ಣದ ನಾಲ್ಕು ಸ್ತಂಭಗಳಿಂದ ಅಲಂಕೃತವಾದ ಸಿಂಹಾಸನವು, ಮುತ್ತು–ರತ್ನಗಳ ದೇದೀಪ್ತಿಯಿಂದ ಮನೋಹರವಾಗಿ ಒಪ್ಪುತ್ತಿತ್ತು. ಇದೇ ಸಿಂಹಾಸವನ್ನು ಶಿವಛತ್ರ ಪತಿಯೂ, ಆತನ ಹಿರಿಯ ಮಗನಾದ ಸಂಭಾಜಿಯೂ ಅಲಂಕರಿಸಿದ್ದರು. ಈಗ ಮೂರನೆಯ ಛತ್ರಪತಿಯು ಆರೋಹಿಸುವದರ ಮಾರ್ಗವನ್ನು ಆ ಗೌರವದ ಸಿಂಹಾಸನವು ಗಾಂಭೀರ್ಯ ದಿಂದ ನಿರೀಕ್ಷಿಸುತ್ತಿರುವಂತೆ ಸ್ವಾಭಿಮಾನಿಗಳಾದ ಮಹಾರಾಷ್ಟ್ರ ವೀರರ ಕಣ್ಣಿಗೆ ಕಾಣುತ್ತಿತ್ತು. ಸಿಂಹಾಸನದ ಮೇಲೆ ವ್ಯಾಘ್ರಾಸನವನ್ನು ಹಾಸಿದ್ದು, ಅದರ ಮೇಲೆ ಸುವರ್ಣಾಲಂಕೃತವಾದ ಪ್ರಾವರ್ಣವು ಶೋಭಿಸುತ್ತಿತ್ತು. ಅದರ ಮೇಲೆ ಮೃದುವಾದ ಉಪಧಾನಗಳನ್ನು, ಅಂದರೆ ಲೋಡು ತೆಕ್ಕೆಗಳನ್ನು ಹಾಕಿದ್ದರು. ಪ್ರತ್ಯಕ್ಷ ಸಿಂಹಾಸನದ ಮೇಲೆ ಧನುಷ್ಯ, ಬಾಣ, ಖಡ್ಗ ಢಾಲು ಇವು ಒಪ್ಪುತ್ತಿದ್ದವು.

ಮಹಾರಾಷ್ಟ್ರ ರಾಜ್ಯದ ಅಭಿಮಾನಿಗಳಿಂದ ಸಭಾಸ್ಥಾನವು ತುಂಬಿಹೋಗಿರಲು, ಸ್ತುತಿ ಪಾಠಕರ ಧ್ವನಿಯು ಸಭಾಸ್ಥಾನವನ್ನು ಪ್ರವೇಶಿಸಹತ್ತಿತು. ಆಗ ಅಷ್ಟಪ್ರಧಾನರು, ವೇದ ಮೂರ್ತಿ ಉಪಾಧ್ಯಾಯ ಪುರೋಹಿತರು ಇವರನ್ನು ಅನುಸರಿಸಿ ರಾಜಮಾತೆಯಾದ ಏಸೂಬಾಯಿಯವರ ಸವಾರಿಯು ಸಭಾಸ್ಥಾನಕ್ಕೆ ದಯಮಾಡಿಸುತ್ತಲಿತ್ತು. ಪತಿಯ ಮರಣ ದಿಂದ ಅವರು ತೀರ ಖಿನ್ನರಾಗಿದ್ದರೂ, ಸ್ವರಾಜ್ಯ ಸಂರಕ್ಷಣದ ಉತ್ಸಾಹದಿಂದ ಕೂಡಿದ ಕೆಚ್ಚೆದೆಯ ಮರಾಟರ ಆ ಒಟ್ಟುಗೂಡಿದ್ದ ತಂಡವನ್ನು ನೋಡಿ ಅವರ ಚಿತ್ತವು ಸುಪ್ರಸನ್ನವೂ ಆಗಿತ್ತು. ಮೇಲಾಗಿ ಬ್ರಾಹ್ಮಣರ ಆಶೀರ್ವಾದದಿಂದ ಅವರ ಚಿತ್ತವೃತ್ತಿಯು ಸಮಾಧಾನಪಟ್ಟಿತ್ತು. ಇವೆಲ್ಲವುಗಳ ಯೋಗದಿಂದ ಅವರ ಮುಖಮುದ್ರೆಯು ಬಹು ಗಾಂಭೀರ್ಯವುಳ್ಳದ್ದಾಗಿರಲು, ನೋಡುವವರಲ್ಲಿ ಅವರ ವಿಷಯವಾಗಿ ಪೂಜ್ಯಬುದ್ಧಿಯು ಉತ್ಪನ್ನವಾಗುತ್ತಿತ್ತು. ರಾಜಮಾತೆ ಯವರ ಮುಂದುಗಡೆಯಲ್ಲಿ ಪ್ರಲ್ಹಾದಪಂತನು ಮಾರ್ಗ ದರ್ಶಕನಾಗಿದ್ದನು. ಅವರ ಬಲಗಡೆಯಲ್ಲಿ ರಾಜರಾಮ ಮಹಾರಾಜರು ಉದಾಸೀನ ವೃತ್ತಿ ಯಿಂದ ಸಾಗಿದ್ದರು. ಮಹಾರಾಜರ ಹಿಂದೆ ಅವರ ಅಂಗರಕ್ಷಕನಾದ ಬಂಕೀಗಾಯಕ ವಾಡನೂ, ರಾಜಮಾತೆಯವರ ಹಿಂದೆ ಭಕ್ತಾಜಿ ಹಾಗೂ ಖಂಡೋಜಿ ಗುಜರ ಎಂಬವರೂ ಶಸ್ತ್ರಧಾರಿಗಳಾಗಿ ಸಾಗಿದ್ದರು. ರಾಜಮಾತೆಯ ಎಡಗಡೆಯಲ್ಲಿ ವೀರಕನ್ಯೆಯಾದ ರಾಜ ಕುವರಳೂ ರಾಜಾ ರಾಮ ಮಹಾರಾಜರ ಹೆಂಡಿರಾದ ಜಾನಕೀಬಾಯಿ, ತಾರಾಬಾಯಿ, ಅಹಲ್ಯಾಬಾಯಿ, ರಾಜಸಬಾಯಿ ಎಂಬವರೂ ಬರುತ್ತಲಿದ್ದರು. ರಾಜಮಾತೆಯು ರಾಜ ಕುವರಳ ಗಂಡುಮಗುವನ್ನು ಎತ್ತಿಕೊಂಡಿದ್ದಳು. ಸಂಭಾಜಿ ಮಹಾರಾಜರ ಪುತ್ರನಾದ ಬಾಲ ಶಿವಾಜಿಯು ತನ್ನ ಕಕ್ಕನಾದ ರಾಜಾರಾಮ ಮಹಾರಾಜರ ಕೈಯನ್ನು ಹಿಡಕೊಂಡು ದರ್ಪ ದಿಂದ ಸಾಗಿದ್ದನು. ಇದಲ್ಲದೆ, ಚಾಮರಧಾರಿಗಳೂ, ತಾಂಬೂಲಧಾರಿಗಳೂ, ಬೇರೆ ದಾಸ–ದಾಸಿಯರೂ, ಹಿಂದಿನಿಂದ ಬರುತ್ತಲಿದ್ದರು.

ಹೀಗೆ ರಾಜಪರಿವಾರವು ಔದಾಸೀನ್ಯದ ಗಾಂಭೀರ್ಯದಿಂದ ಮಾರ್ಗವನ್ನು ಕ್ರಮಿಸುತ್ತ ಸಭಾಸ್ಥಾನದ ಬಾಗಲಿಗೆ ಬರಲು, ಸ್ತುತಿಪಾಠಕರು ತಮ್ಮ ಗಂಭೀರಧ್ವನಿಯಿಂದ ಸಭಿಕರನ್ನು ಎಚ್ಚರಗೊಳಿಸಿದರು. ಕೂಡಲೆ ಯಾವತ್ತು ಸರದಾರರೂ, ದೌಲತದಾರರೂ, ಮುತ್ಸದ್ದಿಗಳೂ ಮೊದಲಾದ ಎಲ್ಲ ಸಭಿಕರು ಎದ್ದುನಿಂತರು. ಈವೊತ್ತಿನ ಪ್ರಸಂಗಕ್ಕಾಗಿ ದೇಶದೊಳಗಿನ ಯಾವತ್ತುಮಹಾಲದಾರರೂ, ಕಾರಖಾನದಾರರೂ, ಕೋಶಾಧಿಕಾರರೂ, ದೇಶಗ್ರಾಮಾಧಿ ಕಾರಿಗಳೂ ಬುದ್ಧಿಪೂರ್ವಕವಾಗಿ ಬಂದಿದ್ದರು; ಆದರೆ ಇಂದು ಸ್ತುತಿಪಾಠಕರ ಸ್ತೋತ್ರಧ್ವನಿ ಗಳು ಮಾತ್ರ ಎಲ್ಲಿಯೂ ಕೇಳಬರುತ್ತಿದ್ದಿಲ್ಲ. ಇಂದಿನ ಪ್ರಸಂಗವೇ ಅಂತಹದಾಗಿತ್ತು! ಹೀಗೆ ನೋಡಿದತ್ತೆಲ್ಲ ನಿರುತ್ಸಾಹಜನಕವಾದ ಶೋಕವು ವ್ಯಾಪಿಸಿರುವಾಗ, ರಾಜಮಾತೆಯಾದ ಏಸೂಬಾಯಿಯವರು ಸಿಂಹಾಸನದ ಎದುರಿಗೆ ಬಂದ ಕೂಡಲೆ ಸುಮ್ಮನೆ ನಿಂತರು. ಕ್ಷಣಹೊತ್ತು ಅವರು ಹಾಗೆಯೇ ನಿಂತಬಳಿಕ, ಸಿಂಹಾಸನವನ್ನು ನಮಸ್ಕರಿಸಿ ಅದರ ಮಗ್ಗಲಿಗೆ ಕೆಳಗೆ ಕುಳಿತುಕೊಂಡರು. ಅದನ್ನು ನೋಡಿ ರಾಜಕುವರಳೂ, ತಾರಾಬಾಯಿಯ ಹೊರತು ಉಳಿದ ರಾಜಾರಾಮ ಮಹಾರಾಜರ ಮೂವರೂ ಹೆಂಡಿರೂ ಏಸೂಬಾಯಿ ಯವರ ಹಿಂದುಗಡೆಯಲ್ಲಿ ಕುಳಿತುಕೊಂಡರು. ಒಬ್ಬ ತಾರಾಬಾಯಿಯು ಮಾತ್ರ ಬಾಲ ಶಿವಾಜಿಯೊಡನೆ ವಿನೋದಿಸುತ್ತನಿಂತುಕೊಂಡಿದ್ದಳು. ಇತ್ತಸಿಂಹಾಸನದಲ್ಲಿ ನಟ್ಟು ಹೋಗಿದ್ದ ರಾಜಾರಾಮ ಮಹಾರಾಜರ ಕಣ್ಣುಗಳು ಮಾತ್ರ ಕಿತ್ತಲೊಲ್ಲವು! ಪೂಜ್ಯನಾದ ತಂದೆಯ, ಹಾಗು ಅಣ್ಣನ ಸ್ಮರಣವಾಗಿ ಅವರ ಅಂತಃಕರಣವು ಕರಗಿತು. ಕಂಠವು ಸದ್ಗದಿತವಾಯಿತು. ಕಣ್ಣುಗಳು ನೀರಿನಿಂದ ತುಂಬಿದವು! ಆಗ ಅವರ ಮನಸ್ಸಿನಲ್ಲಿ ಏನು ಹೊಳೆಯಿತೋ ಏನೋ, ಅವರು ಬಾಲಶಿವಾಜಿಯನ್ನು ಎತ್ತಿ ಸಿಂಹಾಸನದ ಮೇಲೆ ಕುಳ್ಳಿರಿಸಿ, ತಾವು ಆತನ ಎಡಗಡೆಗೆ ಸಿಂಹಾನದ ಮೇಲೆ ವೀರಾಸನ ಹಾಕಿಕೊಂಡು ಕುಳಿತರು. ಆಗ ತಾರಾಬಾಯಿಯು ತಿರಸ್ಕಾರದಿಂದ ತನ್ನ ಪತಿಯ ಮೋರೆಯನ್ನು ನೋಡಿದಳು; ಆದರೆ ಆ ಧೂರ್ತಳು ಕೂಡಲೆ ಪ್ರಸಂಗಾವಧಾನದಿಂದ ಏಸೂಬಾಯಿಯವರ ಹಿಂದೆ ಹೋಗಿ ಕುಳಿತು ಕೊಂಡಳು.

ಈ ಮೇರೆಗೆ ರಾಜಮಂಡಲವು ಸಭಾಸ್ಥಾನದಲ್ಲಿ ಬಂದು ಕುಳಿತುಬಳಿಕ, ಅದರ ಹಿಮ್ಮಗ್ಗಲು ಹದಿನಾರು ಜನ ಪರಿಚಾರಕರು, ಯಾರು ಛತ್ರವನ್ನು—ಯಾರು ಚಾಮರವನ್ನು —ಯಾರು ಬೀಸಣಿಕೆಯನ್ನು ತಕ್ಕೊಂಡು ಬಾಲ ಛತ್ರಪತಿಯನ್ನು ಸೇವಿಸುತ್ತ ನಿಂತು ಕೊಂಡರು. ಭಿಕ್ಕಾಜಿಯೂ, ಬಂಕಿ ಗಾಯಕವಾಡನು ಬಿಚ್ಚುಗತ್ತಿಯನ್ನು ಹಿಡಿದು ಬಾಲ ರಾಜನ ಹಿಂದುಗಡೆಯಲ್ಲಿ ನಿಂತುಕೊಂಡರು. ಇಂದು ಇವರಲ್ಲಿ ಜೋತಾಜಿಯು ಎಲ್ಲಿಯೂ ಕಣ್ಣಿಗೆ ಬೀಳಲಿಲ್ಲ, ರಾಜರಾಮ ಮಹಾರಾಜರ ಬಲಗಡೆಯಲ್ಲಿ ಪುರೋಹಿತರೇ ಮೊದಲಾ ದವರು ಕುಳಿತುಕೊಂಡರು; ಎಡಗಡೆಯಲ್ಲಿ ಧನಾಜಿ ಜಾಧವ, ಜೇಧೆ ದೇಶಮುಖ ಮೊದಲಾದ ಜೀವಕ್ಕೆ ಜೀವ ಕೊಡುವ ಆಪ್ತೇಷ್ಟ ಮಂಡಲವು ಶಸ್ತ್ರಗಳನ್ನು ಧರಿಸಿ ಕುಳಿತು ಕೊಂಡಿತು. ಪ್ರಲ್ಹಾದಪಂತನೇ ಮೊದಲಾದ ಎಲ್ಲ ಅಷ್ಟಪ್ರಧಾನರು ತಮ್ಮ ತಮ್ಮ

ಸ್ಥಳಗಳಲ್ಲಿ ಕುಳಿತುಕೊಂಡರು. ಲೇಖಕರಿಬ್ಬರಲ್ಲಿ ಖಂಡೋಜಿ ಚಿಟನೀಸನು ಎಲ್ಲಿಯೂ ಕಾಣಲಿಲ್ಲ. ಏಸೂಬಾಯಿಯವರು ನಾಲ್ಕೂಕಡೆಗೆ ನೋಡಿ, ಖಂಡೋಜಿ–ಜೋತಾಜಿ ಯಬ್ಬರನ್ನೂ ಕಾಣದೆ, ಈ ಸ್ವಾಮಿಭಕ್ತರಿಬ್ಬರು ಯಾವದೊಂದು ಸ್ವಾಮಿಕಾರ್ಯಕ್ಕಾಗಿ ಹೋಗಿರಬಹುದೆಂದು ಭಾವಿಸಿದರು. ಅಷ್ಟರಲ್ಲಿ ಪ್ರತಿಹಾರಿಯ ಮುಜುರೆಗಳನ್ನು ನಿವೇದಿಸ ಹತ್ತಿದಳು. ಪ್ರತಿ ಒಬ್ಬ ಸರದಾರನು ರಾಜಮಂಡಲವನ್ನು ವಂದಿಸಿ, ತನ್ನ ಸ್ಥಾನವಲ್ಲಿ ವೀರಾಸನದಿಂದ ಕುಳಿತುಕೊಳ್ಳಹತ್ತಿದರು. ಹೀಗೆ ಸಾಲಾಗಿ ಕುಳಿತುಕೊಂಡಿರುವ ಅತಿರಥಿ ಮಹಾರಥಿಗಳ ಮುಖಮುದ್ರೆಗಳು ಸಂತಪ್ತವಾಗಿದ್ದವು. ಸಂತಾಪದ ಭರದಲ್ಲಿ ಒಬ್ಬರ ಮುಂಡಾಸವು ಬಿಚ್ಚಿತ್ತು ಒಬ್ಬರ ಅಂಗಿಯ ಕಸಿಗಳು ಬಿಚ್ಚಿದ್ದವು. ಅವರಲ್ಲಿ ಪ್ರತಿಯೊಬ್ಬನು ತನ್ನ ಅಂಗಿಯ ತೋಳನ್ನು ಮೇಲಕ್ಕೆ ಸರಿಸಿಕೊಂಡು, ಇನ್ನು ಏನು ಅಪ್ಪಣೆಯಾಗುವದೆಂಬ ದನ್ನರಿಯುವ ಕುತೂಹಲದಿಂದ ರಾಜಪರಿವಾರದ ಕಡೆಗೆ ನೋಡುತ್ತಲಿದ್ದರು. ಹೀಗೆ ಶಸ್ತ್ರಧಾರಿ ಗಳಾಗಿ ತಮ್ಮ ಅಪ್ಪಣೆಯನ್ನು ಎದುರು ನೋಡುತ್ತ ಕುಳಿತಿರುವ ಭಾರತೀಯ ವೀರರನ್ನು ನೋಡಿ, ಏಸೂಬಾಯಿಯ ಅಂತಃಕರಣವು ಸ್ಥಿರವಾಗಹತ್ತಿತು.

ಇಷ್ಟರಲ್ಲಿ ಪ್ರಲ್ಹಾದಪಂತನು ಸಿಂಹಾಸನದ ಬಳಿಯಲ್ಲಿ ಬಂದು ರಾಜಮಂಡಲ ವನ್ನು ವಂದಿಸಿ ಗಂಭೀರ ಸ್ವರದಿಂದ—ಅವ್ವನವರೇ, ಹಾಗು ಛತ್ರಪತಿ ರಾಜಾರಾಮ ಮಹಾರಾಜರೇ, ಅದರಂತೆ ಶೂರ ಸರದಾರರೇ, ನಾವೆಲ್ಲರೂ ಇಂದು ಇಲ್ಲಿಗೆ ಯಾಕೆ ಕೂಡಿರುವೆವು? ನಾವು ಮಹಾರಾಜರದಶಾಹಾಂತ ಕರ್ಮವನ್ನು ತೀರಿಸಿಕೊಂಡು ಬಂದದ್ದು ಆಬಾಸಾಹೇಬರು ಪುಣ್ಯವಲ್ಲದೆ ಮತ್ತೇನು! ಬಲಿಷ್ಠ ಬಾದಶಹನ ಕೈಯ್ಯೊಳಗಿಂದ ನಾವು ಮಹಾರಾಜರ ರುಂಡವನ್ನು ಅಪಹರಿಸಿಕೊಂಡು ಬಂದದ್ದು ಸಾಮಾನ್ಯ ಮಾತಲ್ಲ. ಮಾತೃಶ್ರೀ, ತಾವು ಹೀಗೆ ಸಣ್ಣ ಮೋರೆ ಮಾಡುವ ಕಾರಣವೇನು? ತಮ್ಮೊಬ್ಬರ ಮೇಲೆಯೇ ಈ ಕಠಿಣ ಪ್ರಸಂಗವು ಒದಗಿರುವದೋ? ಅವ್ವನವರೇ, ನಾವೆಲ್ಲರೂ ನಿಮ್ಮ ಮಕ್ಕಳಲ್ಲವೇ! ನಮ್ಮ ಮೇಲಿನ ಕೃಪಾಛತ್ರವೂ ಹೋಗಿರುವದಷ್ಟೆ? ಅಂದಬಳಿಕ ಇನ್ನು ತಾವು ಶೋಕಮಾಡುತ್ತ ಕುಳಿತುಕೊಂಡರೆ ಹ್ಯಾಗಾಗಬೇಕು? ದಶಾಹಾಂತದ ಕರ್ಮಗಳು ನಿರ್ವಿಘ್ನವಾಗಿ ಸಾಗಿ ದ್ದೊಂದು ನಮಗೆ ಶುಭ ಶಕುನವೇ ಆಗಿರುವದು. ಇದನ್ನು ನಾವು ದುಃಖದಲ್ಲಿ ಸುಖವೆಂದು ತಿಳಿಯುತಕ್ಕದ್ದು. ಅವ್ವನವರೇ, ಹಾಗು ಛತ್ರಪತಿ ಮಹಾರಾಜರೇ, ಇಂದು ಈ ಸರದಾರ ಮಂಡಲವು ತಮ್ಮ ದರ್ಶನಕ್ಕಾಗಿ ಬಂದಿರುವದು. ಇವರು ಶೋಕದಿಂದ ಅಂಧರಾಗಿ ರುವರು; ಮತ್ತು ಸಂತಾಪದಿಂದ ಕುದಿಯುತ್ತಿರುವರು. ಈಗ ಇವರ ಸಮಾಧಾನವನ್ನು ತಾವು ಮಾಡಿ, ಇವರಿಗೆ ಯೋಗ್ಯ ಮಾರ್ಗವನ್ನು ತೋರಿಸಬೇಕು. ಅವ್ವನವರೇ, ಸಣ್ಣ ಸರಕಾರವು ಹುಡುಗರಾದರು, ರಾಜ ಕುಮರರವರು ಅಭಾಗಿಗಳಾದರು, ರಾಜ್ಯಕ್ಕೆ ರಕ್ಷಕರು ಇಲ್ಲ ದಾಯಿತು, ಇದೆಲ್ಲ ನಿಜವು; ಆದರೆ ತಾವು ಈ ವೀರರನ್ನು ತಮ್ಮ ಕೃಪಾಛತ್ರದ ನೆರಳಿನಲ್ಲಿ ನಿಲ್ಲಿಸಿಕೊಂಡು, ಮಾರ್ಗದರ್ಶಕರೂ, ಸೂತ್ರಚಾಲಕರೂ ಆಗಿ ಇವರನ್ನು ಪರಿಪೋಷಿಸಿದರೆ, ಈ ಮೋಹಿತೆ, ಈ ಘೋರಪಡೆ, ಈ ಹಣಮಂತೆ, ಈ ನಾಯಕ, ಈ ಚಿಟನೀಸ, ಈ

ಮೋರೆ, ಈ ದಾಬಡೆ, ಈ ಪೇಶವೆ, ಈ ಅಮಾತ್ಯ, ಈ ಸಚಿವ, ಈ ಪ್ರತಿನಿಧಿ, ಈ ಬಾವಡೇಕರ, ಈ ಜಾಧವ ಮೊದಲಾದ ತಮ್ಮ ಮಕ್ಕಳು ಸ್ವಾಮಿಕಾರ್ಯಕ್ಕಾಗಿ ದೇಹವನ್ನು ಅರ್ಪಿಸಲಿಕ್ಕೆ ಹಿಂದೆ ಮುಂದೆ ನೋಡರು! ಸ್ವಾಮಿಯ ವಿಯೋಗದಿಂದ ದುಃಖಿತರಾಗಿ ಕಣ್ಣೀರು ಸುರಿಸುವ ಇವರ ಕಣ್ಣುಗಳನ್ನು ನಿಮ್ಮ ಮಮತೆಯ ಕೈಗಳಿಂದ ಒರಿಸಿರಿ. ನೀವು ಇವರ ತಾಯಿಯಾಗಿರಿ!

ಪ್ರಲ್ಹಾದಪಂತನ ಈ ಮಾತುಗಳನ್ನು ಕೇಳಿ ಏಸೂಬಾಯಿಯವರು–ಪ್ರಲ್ಹಾದಪಂತ, ನನ್ನ ಸೌಭಾಗ್ಯವು ನಷ್ಟವಾಯಿತೆಂದು ಈಗ ವ್ಯಸನಪಡುವ ಹೊತ್ತಲ್ಲೆಂಬದು ನಿಜವು; ಅದರಂತೆ ನಾನು ಈ ವ್ಯಸನಪಡುವದೂ ಇಲ್ಲ, ನಿಮ್ಮಂಥ ಸ್ವಾಮಿಭಕ್ತರು ನನ್ನ ದುಃಖಕ್ಕೆ ಪಾಲುಗಾರ ರಾಗಿರುವಾಗ, ನನ್ನ ಪಾಲಿಗೆ ದುಃಖವಾದರೂ ಎಷ್ಟು ಉಳಿಯಬೇಕು? ಮಾವನವರು ನಮ್ಮ ನಿಮ್ಮ ಹಣೆಗೆ ಹಚ್ಚಿಹೋಗಿದ್ದ ಸೌಭಾಗ್ಯ ತಿಲಕವು ಅಳಿಸಿಹೋಗುವ ಪ್ರಸಂಗವು ಈಗ ಬಂದಿರುವದಷ್ಟೇ? ಅಂದಬಳಿಕ ನಾವೆಲ್ಲರೂ ನಮ್ಮ ಸುಖ–ದುಃಖಗಳೆರಡನ್ನೂ ಲೆಕ್ಕಿಸದೆ ಸ್ವರಾಜ್ಯ ರಕ್ಷಣದಲ್ಲಿ ದೇಹವನ್ನು ಸವಿಸಬೇಕಾಗಿರುವದು. ಪಂತ, ನಿಜವಾಗಿ ನೋಡಿದರೆ, ಈ ಮಹಾಕಾರ್ಯದಲ್ಲಿ ಆಬಾಸಾಹೇಬರ ಪುಣ್ಯದ ಮೂರ್ತಿಗಳೇ ಆಗಿ, ಈ ಸಭಾಸ್ಥಾನ ದಲ್ಲಿ ಕುಳಿತಿರುವ ನಿಮ್ಮಂಥ ಪುಣ್ಯಾತ್ಮರು ದೇಹಾಭಿಮಾನವನ್ನು ತೊರೆದು ಹೆಣ ಗುತ್ತಿರುವಾಗ, ನನ್ನಂಥ ಅಬಲೆಯು ವೈಧವ್ಯವನ್ನು ಭೋಗಿಸುತ್ತ ಯಾಕೆ ಇರಬೇಕು? ಸಹಗಮನದಿಂದ, ಅಥವಾ ವಿಷಪಾನದಿಂದ ದೇಹತ್ಯಾಗ ಮಾಡುವದೇ ಯೋಗ್ಯವು; ಆದರೆ ನಿಮ್ಮಂಥ ರಾಷ್ಟ್ರ ಕಾರ್ಯ ಧುರಂಧರರ ವಿನಂತಿಯನ್ನು, ನಾನು ಅಬಾಸಾಹೇಬರ ಆಜ್ಞೆ ಯೆಂದು ಪಾಲಿಸದಿದ್ದರೆ, ಆಬಾಸಾಹೇಬರು ತಮ್ಮ ಈ ಹಿರಿಯ ಸೊಸೆಯನ್ನು ನಿಶ್ಚಯವಾಗಿ ನಿರಾಕರಿಸಬಹುದು; ಆದ್ದರಿಂದ ಪ್ರಲ್ಹಾದಪಂತ, ಈ ಯಾವತ್ತು ಮಹಾರಾಷ್ಟ್ರ ಮಂಡಲದ ಸಮಕ್ಷ ತಮ್ಮ ಮುಂದೆ ಹೇಳುವದೇನಂದರೆ–ನಾನು ರಾಷ್ಟ್ರ ಕಾರ್ಯಕ್ಕಾಗಿ ನನ್ನ ಸುಖ–ದುಃಖಗಳನ್ನು ಮರೆತು ನಿಮ್ಮೊಡನೆ ಹೆಣಗಲಿಕ್ಕೆ ಸಿದ್ಧನು. ಇದೇ ನನ್ನ ಪತಿ ಸೇವೆಯು,ಇದೇ ನನ್ನ ಕುಲವ್ರತವು; ಆದ್ದರಿಂದ ಪಂತ, ಇನ್ನು ಮೇಲೆ ನಾನು ಸ್ವಾರ್ಥಕ್ಕಾಗಿ ಕಣ್ಣೀರು ಹಾಕಲಿಕ್ಕಿಲ್ಲ, ಉಸುರುಗಳೆಯಲಿಕ್ಕಿಲ್ಲ! ಇನ್ನು ರಾಷ್ಟ್ರಕಾರ್ಯದಲ್ಲಿ ಪ್ರಸಂಗವಶಾತ್ ನನ್ನ ಕಣ್ಣೀರು ಉದರಬಹುದು, ನಾನು ಉರುಗಳೆಯಲೂಬಹುದು. ಸಂತೋಷದಿಂದ ಉಬ್ಬಲೂಬಹುದು, ಅದಕ್ಕೆ ನನ್ನ ಯತ್ನವಿಲ್ಲ!

ಏಸೂಬಾಯಿಯವರ ಈ ದೊಡ್ಡಿಸ್ತನದ, ಹಾಗು ಜಾಣತನದ ಮಾತುಗಳನ್ನು ಕೇಳಿ ಯಾವತ್ತು ಸಭಿಕರಲ್ಲಿ ಸ್ವಾಭಿಮಾನವು ಜಾಗ್ರುತವಾಗಿ ಸ್ವಾಮಿ ಭಕ್ತಿ ಪ್ರೇರಿತವಾದ ಅವರ ಆವೇಶವು ಹೆಚ್ಚಿತು. ಆಗ ಧನಾಜಿ ಜಾಧವನು ಎದ್ದು ನಿಂತು–ಅವ್ವನವರೇ, ತಾವು ನಿಜವಾಗಿಯೇ ನಮ್ಮೆಲ್ಲರ ಹೆಡದ ತಾಯಿಯು! ಇಷ್ಟುಜನ ಮಕ್ಕಳು ತಮ್ಮ ಸೇವಾತತ್ಪ ರರಾಗಿರುವಾಗ ತಮಗೆ ಯಾತರ ಚಿಂತೆಯಿರಬೇಕು? ಗಾಳಿಯ ದಿಕ್ಕನ್ನು ನೋಡಿ ಪಟ ವನ್ನೆಂತು ಏರಿಸಿಯೇ ಏರಿಸುವೆವು. ಲೋಕದ ಹರ್ಷ–ಕ್ಷೋಭಗಳಿಗೂ, ಸ್ತುತಿ–ನಿಂದೆಗಳಿಗೂ

ಲಕ್ಷಗೊಡದೆ, ನಮ್ಮ ಸರಳ ಮಾರ್ಗದಂತೆ ನಾವು ಹೋಗಬೇಕಾಗಿರುವದಷ್ಟೇ? ಎಂದು ನುಡಿಯಲು, ಆತನ ಮಾತುಗಳು ''ಒಂದು ಕಡತ ಎರಡು ತುಂಡು'' ಎಂಬ ಮಾರ್ಗದವನಾದ ಸಂತಾಜಿ ಘೋರಪಡೆಯಂಥ ಮಹಾ ತೇಜಸ್ವಿಗೆ ಸಹನವಾಗಲಿಲ್ಲ, ಆತನು ಎದ್ದು ನಿಂತು ಸ್ವಲ್ಪ ಸಂತಾಪದಿಂದ– ಮಣಕಾಲಮಟ ಗಾದಿಯಮೇಲೆ, ಕಿನಕಾಪಿನ ಲೋಡಿಗೆ ಆತುಕುಳಿತು ಆಲೋಚಿಸುತ್ತ ಧೊರಣೆನೋಡಿ ತೋರಣ ಕಟ್ಟಲಿಕ್ಕೆ ಇದು ಸಮಯವೇ? ಅಪ್ಪನವರೇ, ಕೂಡಲೆ ಮೊಗಲರಿಗೆ ಕೈ ತೋರಿಸುವದಕ್ಕಾಗಿ ನಮ್ಮನ್ನು ಆಜ್ಞಾಪಿಸಬೇಕು. ತಾವು ಕೆಚ್ಚುಗಟ್ಟಿದ ಎದೆಯವರೇ ಇರುತ್ತೀರಿ. ಅಂತೇ ಮಹಾ ಧೈರ್ಯದಿಂದ ಪ್ರತ್ಯಕ್ಷ ಪತಿಯನ್ನು ಹಾದಿಗೆ ತರುವದಕ್ಕಾಗಿ ಬಂಧುಗಳ ಸಹಾಯದಿಂದ ಪತಿಗೆ ಪೆಟ್ಟು ಹಾಕಿದಿರಿ! ಇದರಿಂದಲೇ ಶಿರ್ಕೆ ಕುಲದ ವಿಧ್ವಂಸವಾಗಿ, ನಿಮ್ಮ ತವರು ಮನೆಯಲ್ಲಿ ನಾಲ್ವರು ಐವರಿಗೆ ರಂಡೆತನವು ಬಂದಿತು! ಆಗ ಅಂತಃಕರಣವು ಸುಟ್ಟು ಕರಕಾದರೂ ಮಹಾಧೈರ್ಯದಿಂದ ವಿಧವೆಯರಿಗೆ— ''ಅಪ್ಪಗಳಿರಾ, ಮಹಾರಾಷ್ಟ್ರದ ಸಂಸಾರವನ್ನು ಉಳಿಸುವದಕ್ಕಾಗಿ ನಿಮ್ಮ ಸಂಸಾರಗೇಡಾಯಿತು.'' ಎಂದು ಸಮಾಧಾನ ಹೇಳಿದ ಧೀರ ಏಸೂಬಾಯಿಯವರು ನೀವೇ ಅಲ್ಲವೆ? ಅಪ್ಪನವರೇ, ನಮ್ಮ ಈ ಸಿಂಹಾಸನದ ಬಾದಶಹನೂ, ಮಹಾರಾಷ್ಟ್ರದ ಅಭಿಮಾನ ಜ್ಯೋತಿಯೂ ಆದ ಸಂಭಾಜಿ ಮಹಾರಾಜರನ್ನು ದುಷ್ಟ ಅಲಮಗೀರನು ಅಪಮಾನಗೊಳಿಸಿ, ಕ್ರೂರತನದಿಂದ ಕೊಲ್ಲಿಸಿದನಲ್ಲವೇ? ಇದನ್ನು ನೆನಿಸಿ ನಮ್ಮ ಅಂತಃಕರಣ ಗಳು ದಗ್ಧವಾಗದೆ ಯಾಕೆ ಬಿಟ್ಟಾವು? ಮಿತ್ರರೇ, ಏಳಿರಿ, ''ಹರ ಹರ ಮಹಾದೇವ'' ಎಂದು ಗರ್ಜಿಸೋಣ ಏಳಿರಿ! ಅಪ್ಪನವರೇ ಹುಕುಮು! ಸರಕಾರದ ಹುಕುಮು ಏನಾಗುವದು!

ಹೀಗೆ ಸಂತಾಜಿ ಘೋರಪಡೆಯು ಸಭೆಯಲ್ಲಿ ಗರ್ಜಿಸಿ ಮಾತಾಡಿದ್ದು, ಕೆಲವರ ಮನಸ್ಸಿಗ್ಗೆ ಬಂದಿತು. ಕೆಲವರ ಮನಸ್ಸಿಗೆ ಬರಲಿಲ್ಲ, ಮನುಷ್ಯ ಸ್ವಭಾವದಂತೆ ಆಗಿನ ಮಹಾರಾಷ್ಟ್ರ ಸರದಾರರಲ್ಲಿಯೂ ಪಕ್ಷ ಭೇದಗಳಿದ್ದವು. ಕೆಲವರು ಧನಾಜಿ ಜಾಧವನ ಪಕ್ಷದವರಿದ್ದರು; ಕೆಲವರು ಸಂತಾಜಿ ಘೋರಪಡೆಯ ಪಕ್ಷದವರಿದ್ದರು. ಘೋರಪಡೆಯ ಮಾತುಗಳನ್ನು ನಿಷೇಧಿಸುವದಕ್ಕಾಗಿ ಮೋನೆಯು ಎದ್ದುನಿಂತು—ಸಂತಾಜಿರಾವ, ಹೀಗೆ ಆತುರಪಡಬಾರದು. ಇಲ್ಲಿ ಉಳಿದವರೇನು ಬಳೆ ಇಟ್ಟಿರುವದಿಲ್ಲ, ಆದರೆ ಶಕ್ಯಾಶಕ್ಯಗಳನ್ನು ಕುರಿತು ವಿಚಾರಿಸಿ ಕಾರ್ಯಮಾಡಬೇಕಾಗಿದೆ. ವೈರಿಯು ಬಲಿಷನಾಗಿರಲು, ಹಾಗೆ ವಿಚಾರ ಮಾಡಲಿಕ್ಕೆ ಇದು ತಕ್ಕ ಸಮಯವಾಗಿರುವದು. ನಿಮ್ಮಂಥ ತರುಣರ ಏರಿಕೆಯ ರಕ್ತವು ವಿಶೇಷ ವೇಗದಿಂದ ಹರಿಯುತ್ತಿದ್ದರೂ, ಹೊತ್ತು ನೋಡಿ ಕೊಡೆ ಹಿಡಿಯಬೇಕಾಗುತ್ತದೆ. ವಿಚಾರ ಮಾಡಿರಿ, ಪ್ರಸಂಗಕ್ಕನುಸರಿಸಿ ನಡೆಯುವುದು ಜಾಣತನವೋ? ಒಮ್ಮೆಲೆ ಧಡಮ್ಮನೆ ದುಮುಕಿ ಬಿಡುವದು ಜಾಣತನವೋ? ಎಂದು ನುಡಿಯಲು, ಸಂತಾಜಿಯು ಸಂತಾಪದಿಂದ— ''ಸರಿ ಸರಿ? ಸದ್ಯಕ್ಕೆ ಪರಾಕ್ರಮದ ಕಾಲವು ಹೋಗಿ ಜಾಣತನದ ಕಾಲವು ಒದಗಿರುವದು! ಅಂಜುಬುರಕರಿರಾ! ಪ್ರತ್ಯಕ್ಷ ಹುಲಿಯ ಬಾಯಲ್ಲಿ ಕೈ ಹಾಕುವ ನಮ್ಮ ಶೂರ ಛತ್ರಪತಿಯನ್ನು ಹಿಂದು ಮುಂದಿನ ವಿಚಾರವಿಲ್ಲದೆ ಔರಂಗಜೇಬನು ಕೊಲ್ಲಿಸಿರುವಾಗ, ನಾವು ವಿಚಾರ

ಮಾಡುತ್ತ ಕುಳಿತುಕೊಳ್ಳುವದು ನ್ಯಾಯವೆ? ನಮ್ಮ ಜೀವಗಳ್ಳ ತನವನ್ನು ತೋರಿಸಲಿಕ್ಕೆ ಇದು ಪ್ರಸಂಗವೇ? ''ನಿರ್ವಿರ ಮುರ್ಮಿತಲಂ'' ಎಂಬಂತೆ ನಮ್ಮ ಮರಾಟರ ಗತಿಯಾಗಿರುವಾಗ, ನಿಮ್ಮಿ ಜಾಣತನದ ಪ್ರಸ್ಥವು ಬೆಳೆದರೆ ಆಶ್ಚರ್ಯವೇನು?

ಹೀಗೆ ತಮ್ಮ ಶೂರ ಸರದಾರರು ಅಭಿಮಾನದಿಂದ ವಾದ–ವಿವಾದಕ್ಕೆ ನಿಂತದ್ದನ್ನು ನೋಡಿ, ಪ್ರಲ್ಹಾದಪಂತನು ಗಾಂಭೀರ್ಯದಿಂದ—ಸಂತಾಜಿರಾವ, ಸಮಾಧಾನ ತಾಳಿರಿ, ಶಾಂತರಾಗಿರಿ! ಧನಾಜಿರಾವ, ಹಾಗು ನಮ್ಮ ಯಾವತ್ತು ಶೂರ ಸರದಾರರೇ, ಕಾಲವು ಬಹು ಕಠಿಣವಿರುತ್ತದೆ. ಪ್ರಸಂಗವು ಅಕಸ್ಮಾತ್ ಮೈಮೇಲೆ ಬಂತೆಂಬದೇನೋ ನಿಜ, ಆದರೆ ನಮ್ಮ ಆಲಸ್ಯದಿಂದ ವೈರಿಯು ನಮ್ಮನ್ನು ನುಂಗಿ ನೀರು ಹಿಡಿಯಬಹುದೆಂಬದರಲ್ಲಿ ಸಂಶಯವಿಲ್ಲ. ತನಗೆ ಒಂದರ ಹಿಂದೊಂದು ಜಯವು ಪ್ರಾಪ್ತವಾಗುತ್ತ ಬಂದಿರುವದರಿಂದಲೂ, ತನ್ನ ಕೋರಿಕೆಗಳಲ್ಲಿ ಕೈಗೂಡುತ್ತ ಬಂದಿರುವದರಿಂದಲೂ ಬಲಾಢ್ಯನಾದ ಬಾದಶಹನು ಭರದಿಂದ ನಮ್ಮ ಮೇಲೆ ಸಾಗಿ ಬರುತ್ತಿರುವನು. ಈ ಪ್ರಸಂಗದಲ್ಲಿ ನಾವು ಅತ್ಯಂತ ಜಾಗರೂಕರಾಗಿ, ಚಟಪಟಿಕೆಯಿಂದ ಕಾರ್ಯಮಾಡದಿದ್ದರೆ, ಆತನ ಅಬ್ಬರದ ತುಳಿತಕ್ಕೆ ನಾವು ನುಚ್ಚು–ನುರಿಯಾಗಿ ಹೋಗ ಬಹುದು! ಧನಾಜಿರಾವ, ಹಾಗೆ ಮೈಮರೆತು ಇರಲಿಕ್ಕೆ ನಾವೇನು ಕುರಿಗಳೇ? ಸಂತಾಜಿರಾವ, ಒಂದು ದಿವಸ ಮೈ ಮರೆತದ್ದರಿಂದ ಪಾಂಡವರು ಹದಿನಾಲ್ಕು ವರ್ಷ ಕಷ್ಟಪಡಬೇಕಾಯಿತು; ಆದರೂ ಮುಖ್ಯವಾಗಿ ನಾವು ಬಾದಶಹನನ್ನು ಹಣ್ಣುಮಾಡಿ ನಮ್ಮ ಸ್ವರಾಜ್ಯ ಸತ್ತೆಯನ್ನು ಕಾಯ್ದುಕೊಳ್ಳಬೇಕಾಗಿದೆ. ಇದನ್ನು ಸಾಧಿಸುವದಕ್ಕಾಗಿ, ನಾವು ವಿಚಾರ ಮಾಡುವ ಪ್ರಸಂಗ ಬಂದರೆ ವಿಚಾರಮಾಡಬೇಕು; ಧುಡಂ ಪ್ರವೇಶ ಮಾಡುವ ಪ್ರಸಂಗ ಬಂದರೆ, ಧುಡುಂ ಪ್ರವೇಶ ಮಾಡಬೇಕು. ಸದುದ್ದೇಶ ಪ್ರೇರಿತವಾದ ಅತ್ಯುತ್ಕಟ ಕಾರ್ಯಾಸಕ್ತಿಗೆ ಮಹತ್ವವಿರುವದಲ್ಲದೆ, ಚಟುವಟಿಕೆಗಾಗಲಿ, ಮಂದತನಕ್ಕಾಗಲಿ ಮಹತ್ವವಿರುವದಿಲ್ಲ! ಪ್ರಸಂಗ ಬಂದಂತೆ ನಾವು ಈ ಸಾಧನಗಳನ್ನು ಉಪಯೋಗಿಸಿ ಕಾರ್ಯವನ್ನು ಸಾಧಿಸಿದರಾಯಿತು! ಶೂರ ಸರದಾರರೇ, ಇಂಥ ಕಠಿಣ ಕಾಲದಲ್ಲಿಯಾದರೂ ನಾವು ಅಂಜತಕ್ಕದ್ದಲ್ಲ; ಯಾಕಂದರೆ, ಸ್ವಾಮಿನಿಷ್ಠರನ್ನು ರಕ್ಷಿಸಲಿಕ್ಕೆ ಭಗವತ್ಕೃಪಾಛತ್ರವು ಇದ್ದೇ ಇರುತ್ತದೆ. ನಮ್ಮೆಲ್ಲರ ನಿಜವಾದ ಸ್ವಾಮಿನಿಷ್ಠೆಯನ್ನೂ, ಸ್ವದೇಶ ಪ್ರೀತಿಯನ್ನೂ ಸ್ವಧರ್ಮಾಭಿಮಾನವನ್ನೂ ಪರೀಕ್ಷಿಸುವದಕ್ಕಾಗಿಯೇ ಈ ಬಂಗಾರದಂಥ ಹೊತ್ತು ಬಂದಿರುತ್ತದೆಂದು ತಿಳಿದು, ಎಲ್ಲರೂ ಮಹಾರಾಷ್ಟ್ರದ ಉದ್ಧಾರಕ್ಕಾಗಿ ಟೊಂಕಕಟ್ಟಿರಿ. ಅಪ್ಪನವರೇ, ಆಕಾಶದೊಳಗಿನ ನಕ್ಷತ್ರಗಳು ಸೂರ್ಯನಿಲ್ಲದಿರುವಾಗ ಅಂದರೆ ರಾತ್ರಿಯಲ್ಲಿ ಮಾತ್ರ ಮಿನುಗುತ್ತವೆ; ಆದರೆ ನಮ್ಮ ಮಹಾರಾಷ್ಟ್ರದೊಳಗಿನ ನಕ್ಷತ್ರಗಳು ಬಾದಶಹನ ಕಾಟವಿದ್ದಾಗೂ, ಇಲ್ಲದಾಗೂ ಕೂಡಿಯೇ ಅಂದರೆ ಹಗಲು ರಾತ್ರಿಗಳಲ್ಲಿ ಕೂಡಿಯೇ ಮಿನುಗುತ್ತವೆ! ಅದರಂತೆ, ಆಕಾಶಕ್ಕೆ ಅಲಂಕಾರಭೂತರಾದ ಸೂರ್ಯ–ಚಂದ್ರರು ಮುಣುಗಿದ ಕೂಡಲೆ ಜಗತ್ತು ಕಾಂತಿಹೀನವಾಗುತ್ತದೆ; ಆದರೆ ಮಹಾರಾಷ್ಟ್ರದ ಪ್ರಭುಗಳು ಅಸ್ತಂಗತವಾಗದಾಗೂ, ಆದ ಬಳಿಕೂ ಅವರ ಪ್ರಕಾಶವು ಜಗತ್ತಿನಲ್ಲಿ ಸೂಸಿ ಹೊರಚಲ್ಲುತ್ತದೆ!

ಪ್ರಲ್ಹಾದಪಂತನ ಈ ಮಾತುಗಳನ್ನು ಕೇಳಿ ಜಾಣೆಯಾದ ಏಸೂಬಾಯಿಯು ಸಮಾಧಾನಪಟ್ಟು ಆತನನ್ನು ಕುರಿತು—ಪ್ರಲ್ಹಾದಪಂತ, ತಾವು ವರ್ಣದಿಂದ ಬ್ರಾಹ್ಮಣರೂ, ಆಶ್ರಮದಿಂದ ಗೃಹಸ್ಥರೂ ಆಗಿರುತ್ತೀರಿ. ವ್ರತವೈಖಲ್ಯೆಗಳನ್ನೂ ನೀವು ಪಾಲಿಸುವಿರಿ. ಆಬಾಸಾಹೇಬರು ನಿಮ್ಮಿಂದದಿಡಿಸಿರುವ ಅಗ್ನಿಹೋತ್ರವನ್ನು ನಡೆಸುವದಕ್ಕೆ ನೀವು ಅಂತರ್ಯವಾದ ಕರ್ತವ್ಯಾಗ್ನಿಯನ್ನು ಜಾಗ್ರತವಾಗಿಡಬೇಕಾಗುವದಲ್ಲವೆ? ಪಂತ, ನಾವು ಹೆಂಗಸರು, ಮಹಾರಾಜರು ಶೋಕಪೀಡಿತರಾಗಿರುವರು; ಶಿವಾಜಿಯು ಹುಡುಗನಾಗಿರುವನು; ಆದ್ದರಿಂದ ಮಾರ್ಗತೋರಿಸುವ ಭಾರವು ನಿಮ್ಮ ಮೇಲೆಯೇ ಇರುತ್ತದೆ. ನೀವು ಮಸಲತ್ತು ಹೇಳಬೇಕು. ಅನ್ನಲು, ಪ್ರಲ್ಹಾದಪಂತನು—ಮಾತೃಶ್ರೀ, ಹ್ಯಾಗಿದ್ದರೂ ಸ್ವಾಮಿಸೇವೆಯು ನಮ್ಮ ಕರ್ತವ್ಯವಲ್ಲವೆ? ಶಿವಪ್ರಭುವಿನ ಪುಣ್ಯ ಪ್ರತಾಪವು ಪ್ರೇರೇಪಿಸಿದಂತೆ ನಾವು ಸ್ವಾಮಿಸೇವೆಯನ್ನು ಏಕನಿಷ್ಠೆಯಿಂದ ಮಾಡಬೇಕಲ್ಲವೆ? ಬಾಳಾಸಾಹೇಬರ ವಯಸ್ಸು ಚಿಕ್ಕದಾದ್ದರಿಂದ ರಾಜಾರಾಮ ಮಹಾರಾಜರು ರಾಜಪ್ರತಿನಿಧಿಗಳಾಗಿ ಪೋಷಾಕು ಧರಿಸಿ ರಾಜ್ಯವನ್ನು ಪಲ್ಹಾಳಗಡದಲ್ಲಿದ್ದು ನಡಿಸಬೇಕು. ಒಟ್ಟುಗೂಡಿದ ಔರಂಗಜೇಬನ ಬಲಾಢ್ಯವಾದ ಪ್ರಚಂಡ ಸೈನ್ಯಕ್ಕೆ ನಮ್ಮ ಸೈನ್ಯವು ಈಡಾಗದಾದ್ದರಿಂದ, ನಮ್ಮ ಸೈನ್ಯವನ್ನು ವಿಭಾಗಿಸಿ, ನಾಲ್ಕೂ ಕಡೆಯಿಂದ ಔರಂಗಜೇಬನಿಗೆ ತೊಂದರೆ ಕೊಡಬೇಕಾಗುವದು. ನಾವೆಲ್ಲರೂ ರಾಯಗಡದಲ್ಲಿ ಕುಳಿತುಕೊಂಡರೆ, ಔರಂಗಜೇಬನು ತನ್ನ ಒಟ್ಟುಗೂಡಿದ ಸೈನ್ಯವನ್ನು ರಾಯಗಡದ ಮೇಲೆ ಹೊರಳಿಸಿ, ನಮ್ಮನ್ನು ಮಣ್ಣುಗೂಡಿಸಬಹುದು; ಆದ್ದರಿಂದ, ನೀವು; ಬಾಳಾಸಾಹೇಬರು, ಬೇರೆಯ ರಾಜಪರಿವಾರವು ರಾಯಗಡದಲ್ಲಿ ಇರಬೇಕು. ರಾಜಪ್ರತಿನಿಧಿಗಳಾದ ರಾಜರಾಮ ಮಹಾರಾಜರವರು ತಮ್ಮ ಪರಿವಾರದೊಡನೆ ಪಲ್ಹಾಳಗಡಕ್ಕೆ ಹೋಗಿ, ಅದನ್ನು ಭದ್ರಪಡಿಸಿ ಅಲ್ಲಿಂದ ರಾಜ್ಯಸೂತ್ರಗಳನ್ನು ಅಲ್ಲಾಡಿಸಬೇಕು. ರಾಯಗಡವು ಬಹು ಭದ್ರವಾಗಿರುವದು. ಧಾನ್ಯಸಂಗ್ರಹವನ್ನೂ, ಮದ್ದು-ಗುಂಡು ಮೊದಲಾದ ಯುದ್ಧೋಪಯುಕ್ತ ಸಾಮಾನುಗಳ ಸಂಗ್ರಹವನ್ನೂ ನಾನು ಇಲ್ಲಿ ವಿಪುಲವಾಗಿ ಮಾಡಿರುವೆನು. ಔರಂಗಜೇಬನ ಲಕ್ಷವು ಈಗ ಒಂದು ರಾಯಗಡದ ಮೇಲೆ ಇರುವದನ್ನು, ಇನ್ನುಮೇಲೆ ರಾಯಗಡ ಪಲ್ಹಾಳಗಡ ಈ ಎರಡರ ಮೇಲೆ ವಿಭಾಗಿಸೋಣ! ರಾಯಗಡವು ಹ್ಯಾಗೂ ಆತನಿಗೆ ಹಣಿಯುವ ಹಾಗಿಲ್ಲ, ಪಲ್ಹಾಳಗಡಕ್ಕೆ ಆತನ ಸೈನ್ಯವು ಬಂದಕೂಡಲೆ ಮಹಾರಾಜರು ಪಲ್ಹಾಳಗಡದಿಂದ ಎರಡನೆಯ ಕಡೆಗೆ ಹೋಗಬೇಕು. ಆಮೇಲೆ ಆ ಎರಡನೆಯ ಕಡಿಯಿಂದ ಮೂರನೆಯ ಕಡೆಗೆ, ಮೂರನೆಯ ಕಡೆಯಿಂದ ನಾಲ್ಕನೆಯ ಕಡೆಗೆ ಹೀಗೆ, ಔರಂಗ ಜೇಬನ ಸೈನ್ಯವನ್ನು ಬೇರೆಬೇರೆ ಕಡೆಗೆ ಎಳೆದೊಯ್ಯುತ ಕಡೆಗೆ ದಕ್ಷಿಣದ ಜಿಂಜಿ ಕೋಟೆಗೆ ಮಹಾರಾಜರು ದಯಮಾಡಿಸಬೇಕು. ವೀರಶ್ರೇಷ್ಠನಾದ ನೀಳೋಪಂತ, ನೀವು ಈಗ ಮುಂಗಡ ಜಿಂಜಿಕೋಟೆಗೆ ಹೋಗಿ, ಮುಂದೆ ಅಲ್ಲಿ ನಡೆಯ ಬೇಕಾಗಿರುವ ಘೋರ ರಣಯಜ್ಞಕ್ಕೆ ಸ್ಥಾನವಾಗಬೇಕಾಗಿರುವ ಆ ಕಾವೇರಿ ತೀರದ ಕೋಟೆಯನ್ನು ಚನ್ನಾಗಿ ಭದ್ರಪಡಿಸಿ, ಅದನ್ನು ಸರ್ವಸನ್ನಾಹಯುಕ್ತವಾಗಿ ಮಾಡಿರಿ. ರಣಶೂರ ಸಂತಾಜಿರಾವ, ನೀವು ನಿಮ್ಮ

ಸೈನ್ಯವನ್ನು ಕಟ್ಟಿಕೊಂಡು ನಿಮ್ಮ ದುಸ್ಸಹವಾದ ಪರಾಕ್ರಮದ ತೇಜಸ್ಸಿನಿಂದ ಬಾದಶಹನ ಹೃದಯದಲ್ಲಿ ಕಂಪನ್ನುಂಟುಮಾಡಿರಿ. ರಣಧುರಂಧರ ಧನಾಜಿರಾವ, ನಿಮ್ಮ ಹೆಸರನ್ನು ಉಚ್ಚರಿಸಿದ ಕೂಡಲೇ ಮೊಗಲ ಸೇನಾಸಮೂಹವು ಕಂಪಿಸುವಂತೆ ನಿಮ್ಮ ಪರಾಕ್ರಮವನ್ನು ತೋರಿಸಿರಿ. ಇನ್ನುಳಿದ ವೀರಾಗ್ರೇಸರರಾದ ಸಮಸ್ತ ವೀರರೇ, ನೀವೆಲ್ಲರೂ ರಾಜನಿಷ್ಠಾ ಪ್ರೇರಿತರಾಗಿ ಬೇರೆ ಬೇರೆ ಕಡೆಯಲ್ಲೇ ನಿಮ್ಮ ದುಸ್ಸಹವಾದ ಪರಾಕ್ರಮದಿಂದ ಔರಂಗಜೇಬನ ಸೈನ್ಯವನ್ನು ಹಸಿದ ತೋಳಗಳಂತೆ ಹರಿದು ಹಣ್ಣು ಮಾಡಿರಿ! ನಾವೆಲ್ಲರೂ ಕೂಡಿ ಶಿವಪ್ರಭುವಿನ ಪುಣ್ಯದ ಪ್ರತಾಪವನ್ನು, ಅಥವಾ ಮರಾಟರ ಕೆಚ್ಚುಗಟ್ಟಿದ ಎದೆಯ ವೈಭವವನ್ನು ಔರಂಗಜೇಬನಿಗೆ ಚನ್ನಾಗಿ ತೋರಿಸೋಣ!

ಯುದ್ಧ ಮಂತ್ರಿಯಾದ ಪ್ರಲ್ಹಾದಪಂತನ ಈ ಸ್ಫೂರ್ತಿದಾಕವಾದ ಮಾತುಗಳನ್ನು ಕೇಳಿ, ದರ್ಬಾರದೊಳಗಿನ ಮಹಾರಾಷ್ಟ್ರ ವೀರರ ಖಡ್ಗಗಳು ಸರಸರನೆ ಒರೆಗಳಿಂದ ಹೊರ ಬೀಳಲು, ಅವುಗಳ ಕಾಂತಿಯಿಂದ ಮರಾಟರ ಬಲ–ಗರ್ವಗಳು ವೃದ್ಧಿಂಗತವಾದವು! ವೀರರು ತಮ್ಮ ಖಡ್ಗಗಳನ್ನು ಸಾವರಿಸುತ್ತ ತಾವು ಕುಳಿತ ಸ್ಥಳಗಳಲ್ಲಿಯೇ ಮೊಣಕಾಲ ಮೇಲೆ ವೀರಾಸನದಿಂದ ಎದ್ದು ನಿಂತರು. ಪ್ರತಿ ಒಬ್ಬನ ಹಣೆಯ ನರಗಳು ಉಬ್ಬಿದ್ದವು. ಕಣ್ಣು ಗಳು ಗುಲಗಂಜಿಯಂತೆ ಕೆಂಪಾಗಿದ್ದವು. ಮೈ ಉಬ್ಬಿ, ಅಂಗಿಯ ಕಸಿಗಳು ಚಟಚಟನೆ ಹರಿದವು. ಮೊಗಲರ ಮೇಲಿನ ಸಂತಾಪದಿಂದ ಔಡುಗಚ್ಚುವಾಗ, ತುಟಿಗಳಿಂದ ರಕ್ತವು ಹೊರಬೀಳುವಂತೆ ತೋರಿತು. ವೀರರ ಈ ವೈಭವವನ್ನು ನೋಡಿ ಏಸೂಬಾಯಿಯವರು—

ವೀರ ಸರದಾರರೇ, ಶಾಂತರಾಗಿರಿ! ಇನ್ನು ಮೇಲೆ ಯಾವತ್ತು ಸಂಕಟಗಳನ್ನೂ, ಯಾವತ್ತು ಅಪಮಾನವನ್ನೂ, ಎಲ್ಲ ತಪ್ಪುಗಳನ್ನೂ, ಈ ಅಭಾಗಿನಿಯಾದ ನನ್ನ ತಲೆಯ ಮೇಲೆ ಹಾಕಿರಿ. ರಾಜಪರಿವಾರದಿಂದಾದ ಎಲ್ಲ ಅಪರಾಧಗಳನ್ನು ಕ್ಷಮಿಸಿ ಆಬಾಸಾಹೇಬರ ಮೇಲೆ ಲಕ್ಷಗೊಟ್ಟು, ಪ್ರಲ್ಹಾದಪಂತರು ಒಡ್ಡಿದ ಮಹಾಕಾರ್ಯಕ್ಕೆ ನೀವೆಲ್ಲರೂ ಕೈಹಾಕಿರಿ. ಈ ಕಾಲದಲ್ಲಿ ನೀವು ಮಾನಾಪಮಾನಗಳನ್ನೂ ಈರ್ಷಾಸೂಯಗಳನ್ನೂ ತ್ಯಜಿಸಬೇಕು. ಆ ಮಹಾಕಾರ್ಯದ ಮೇಲೆ ಲಕ್ಷವಿಟ್ಟು ನಿಮ್ಮ ಅಂತಃಕರಣಗಳನ್ನು ಕಾರ್ಯಸಾಧನದ ಒಂದು ಉದ್ದೇಶದಿಂದ ಒಟ್ಟು ಗೂಡಿಸತಕ್ಕದ್ದು. ಯಾರಿಗೆ ಯಾವ ಮಾರ್ಗವು ಯೋಗ್ಯವಾಗಿ ತೋರುವದೋ, ಆ ಮಾರ್ಗವನ್ನು ಅವರು ಹಿಡಿದು ಹೋಗಲಿ! ಅದರಂತೆ ಯಾರಿಗೆ ಯಾವ ಧೋರಣವು ಯೋಗ್ಯವಾಗಿ ತೋರುವದೋ, ಅವರು ಆ ಧೋರಣವನ್ನು ಅನುಸರಿಸಲಿ! ಆದರೆ, ಉದ್ದೇಶವು ಮಾತ್ರ ಎಲ್ಲರದೂ ಒಂದೇ ಇರಬೇಕು. ಪ್ರಲ್ಹಾದಪಂತ, ನಾನು ಹೇಳುವ ಈ ಸಂಗತಿಯ ಆಜ್ಞಾಪತ್ರವನ್ನು ಮಹಾರಾಷ್ಟ್ರದೊಳಗಿನ ಯಾವತ್ತು ಸಣ್ಣದೊಡ್ಡ ರಾಜಕಾರ್ಯ ಧುರಂಧರ ವೀರ ಮುತ್ಸದ್ದಿಗಳಿಗೆ ಬರೆದು ತಿಳಿಸಬೇಕೆಂದು ಲೇಖಕರಿಗೆ ಹೇಳಿರಿ. ರಾಜ್ಯದ ಮೇಲೆ ಈಗ ಕಠಿಣ ಪ್ರಸಂಗವು ಒದಗಿರುವದರಿಂದ, ಪ್ರಜೆಗಳೆಲ್ಲರು ಮುಂದುಗಾಣದೆ ಕುಳಿತರುವರು. ಎಷ್ಟೋ ಜನ ಸ್ವಾಮಿನಿಷ್ಠರು ಕೂಡ, ಅನ್ಯ ಮಾರ್ಗವನ್ನು ಕಾಣದೆ ವೈರಿಗಳನ್ನು ಕೂಡಿಕೊಳ್ಳಬಹುದು. ಈ ಕಾಲದಲ್ಲಿ ಬುದ್ಧಿವಂತರೂ,

ವೀರ್ಯವಂತರೂ, ಕರ್ತೃತ್ವಶಾಲಿಗಳೂ ಆದವರು, ಪೌರುಷದಿಂದಲೂ, ಹಿತೋಪದೇಶ ದಿಂದಲೂ ಜನರ ಮನಸ್ಸನ್ನು ತಮ್ಮ ಕಡೆಗೆ ತಿರಿಗಿಸಿ ಕೊಳ್ಳತಕ್ಕದ್ದು. ಔರಂಗಜೇಬ ನೆಂದರೆ, ಐವತ್ತು ನಾಲ್ಕು ಬಾದಶಾಹಿಗಳ ಒಡೆಯನು. ಅವನ ಸಾಮರ್ಥ್ಯವು ಅಂಜಿಕ್ಯ ವಾದದ್ದು; ಆದರೂ ನಾವು ನಿರಾಶೆಪಡುವ ಕಾರಣವಿಲ್ಲ, ನಮ್ಮ ಕೈಲಾಸವಾಸಿ ಆಬಾಸಾಹೇಬರ ಚರಿತ್ರ ವನ್ನು ಈಗಿನ ಕಾಲದಲ್ಲಿ ನಾವೆಲ್ಲರು ನೆನಪಿಗೆ ತಂದುಕೊಳ್ಳುವದು ಹಿತಕರವು. ಆಬಾ ಸಾಹೇಬರು ಹದಿನೈದು ವರ್ಷದವರಿರುವಾಗ ಅಸಹಾಯ ಶೂರರಾಗಿ ಸ್ವರಾಜ್ಯ ಸ್ಥಾಪನೆಯ ಕಾರ್ಯವನ್ನು ಆರಂಭಿಸಿದರು. ಆ ಕಾಲದಲ್ಲಿ ಅವರ ಸುತ್ತು ಆದಲಶಾಹಿ, ಕುತುಬಶಾಹಿ, ನಿಜಾಮಶಾಹಿ, ಎಂಬ ಮೂರು ಬಲಾಢ್ಯ ಮುಸಲ್ಮಾನ ಬಾದಶಾಹಿಗಳು ಕೈ ತೊಳಕೊಂಡು ಬೆನ್ನು ಹತ್ತಿದ್ದವಲ್ಲದೆ, ಉತ್ತರದಲ್ಲಿದ್ದ ಅತ್ಯಂತ ಬಲಾಢ್ಯನಾದ ಔರಂಗಜೇಬ ಬಾದಶಹನು ಕಣ್ಣು ಕೆಕ್ಕರಿಸಿ ಆಬಾಸಾಹೇಬರನ್ನು ನೋಡತ್ತಿದ್ದನು! ಇದಲ್ಲದೆ ಶ್ಯಾಮಲ, ಫಿರಂಗಿ, ಇಂಗ್ರೇಜಿ, ರಾಮನಗರದವರು, ಪಾಳೇಗಾರರು, ಬಿದನೂರವರು, ಮೈಸೂರವರು, ತ್ರಿಚನಾ ಪಲ್ಲಿಯವರು ಮೊದಲಾದ ಗಟ್ಟಿಗರು ಆಬಾಸಾಹೇಬರ ಕಾರ್ಯಕ್ಕೆ ವಿಘ್ನಕಾರಿಗಳಾಗಿದ್ದರು. ಇಷ್ಟಕ್ಕೇ ತೀರಲಿಲ್ಲ, ಸ್ವಜನರೊಳಗಿನ ಚಂದ್ರರಾವ ಶಿರ್ಕೆ, ಸಾವಂತ, ದಳವಿ, ನಿಂಬಾಳಕರ, ಘಾಟಕೆ ಮೊದಲಾದ ಪ್ರೋಕ್ತ ಸರಂಜಾಮಿನ ದೇಶಮುಖರು ಮಹಾರಾಜರ ಕಾರ್ಯಕ್ಕೆ ಅಡ್ಡ ಬರುತ್ತಲಿದ್ದರು; ಆದರೆ ಬುದ್ಧಿಶಾಲಿಗಳು, ಪರಾಕ್ರಮಿಗಳು ಆದ ಮಹಾರಾಜರು ಇವರೆಲ್ಲರಿಗೂ ಸೊಪ್ಪುಹಾಕದೆ, ತಮ್ಮ ರಾಜ್ಯಸ್ಥಾಪನೆಯ ಕಾರ್ಯವನ್ನು ಸಾಗಿಸಿ, ಅಹಿವಂತ ದಿಂದ ಕಾವೇರಿ ತೀರದ ಜಿಂಜಿಯವರೆಗೆ ನಿಷ್ಕಂಟಕ ರಾಜ್ಯವನ್ನು ಸಂಪಾದಿಸಿ, ಸಿಂಹಾಸನ ವೇರಿ ಛತ್ರಪತಿಯೆಂದು ಔರಂಗಜೇಬನಿಂದ ಹೊಗಳಿಸಿಕೊಂಡರು. ನೂರಾರು ದುರ್ಗ ಗಳನ್ನೂ, ಕೋಟೆಗಳನ್ನೂ, ಜಲದುರ್ಗಗಳನ್ನೂ ನಿರ್ಮಿಸಿದರು; ಎಷ್ಟೋ ವಿಶಾಲ ಸ್ಥಳಗಳನ್ನು ತಮ್ಮವಾಗಿ ಮಾಡಿಕೊಂಡರು; ನಾಲ್ವತ್ತುಸಾವಿರ ರಾವುತರನ್ನೂ, ಅರವತ್ತು-ಎಪ್ಪತ್ತು ಸಾವಿರ ಶಿಲೇದಾರರರನ್ನೂ, ಎರಡು ಲಕ್ಷ ಕಾಲಾಳುಗಳನ್ನೂ, ಕೋಟ್ಯಾವಧಿ ವರಹಗಳ ಭಾಂಡಾರ ವನ್ನೂ , ಬಹು ಬೆಲೆಯುಳ್ಳ ವಸ್ತ್ರಾಲಂಕಾರಗಳನ್ನೂ, ಆ ಮಹಾತ್ಮನು ಸಂಪಾದಿಸಿದನು. ಆ ಪುಣ್ಯವಂತನು ತೊಂಬತ್ತಾರು ಕುಲದ ಮರಾಟರನ್ನು ಉದ್ಧರಿಸಿದನು. ಸಂಸ್ಥಾನದಲ್ಲಿ ದೇವ-ಬ್ರಾಹ್ಮಣರನ್ನು ಸ್ಥಾಪಿಸಿ, ಯಜನ-ಯಜನಾದಿ ಷಟ್ಕರ್ಮಗಳನ್ನು ವರ್ಣವಿಭಾಗದಂತೆ ನಡಿಸಿದನು. ರಾಜ್ಯದಲ್ಲಿ ಅನ್ಯಾಯದ ಹೆಸರು ಉಳಿಯದಂತೆ ಮಾಡಿದನು. ಬಹಳ ಹೇಳುವ ದೇನು? ನಮ್ಮ ಪೂಜ್ಯ ಆಬಾಸಾಹೇಬರು ಸೃಷ್ಟಿಯನ್ನೇ ಮಾಡಿದರು! ಆ ಪ್ರತಾಪನಿಧಿಗಳು, ಔರಂಗಜೇಬನಂಥ ಬಲಾಢ್ಯ ಶತೃವಿನ ಪುಂಗಿಯನ್ನು ಬಂದುಮಾಡಿ, ದಿಗಂತ ಕೀರ್ತಿಯನ್ನು ಸಂಪಾದಿಸಿದರು. ಇಂಥ ಅವತಾರಿಕ ಕೃತ್ಯಗಳನ್ನು ಮಾಡುವಾಗ ನಮ್ಮ ಶಕಕರ್ತರಾದ ಆಬಾಸಾಹೇಬರು ಕೆಲವರ ಮೇಲೆ ದಂಡೆತ್ತಿ ಹೋಗಿ ಖಾಡಾ-ಖಾಡಿ ಯುದ್ಧ ಮಾಡಿದರು. ಕೆಲವರನ್ನು ಮರೆ ಮೋಸದಿಂದ ಮುತ್ತಿ ಬಗ್ಗು ಬಡಿದರು, ಕೆಲವರಲ್ಲಿ ಪರಸ್ಪರ ಕಲಹವನ್ನು ಹಚ್ಚಿದರು, ಕೆಲವರಲ್ಲಿ ಮಿತ್ರಭೇದವನ್ನುಂಟು ಮಾಡಿದರು, ಕೆಲವರೊಡನೆ ಸ್ನೇಹವನ್ನು ಬಳಿಸಿದರು, ಕೆಲವರೊಡನೆ ಶರೀರ ಸಂಬಂಧವನ್ನು ಮಾಡಿದರು, ಕೆಲವರನ್ನು ತಾವಾಗಿ

ದರ್ಶನಕ್ಕೆ ಹೋಗಿ ಒಲಿಸಿಕೊಂಡರು, ಕೆಲವರನ್ನು ಪರಸ್ಪರ ಘಾತಗೊಳಿಸಿದರು, ಕೆಲವರ ಜಲ–ದುರ್ಗಗಳಿಗೆ ಪ್ರತಿ ಜಲ–ದುರ್ಗಗಳನ್ನು ನಿರ್ಮಿಸಿದರು. ಹೀಗೆ ಒಂದಲ್ಲ, ಎರಡಲ್ಲ, ನಮ್ಮಂಥ ಪಾಮರರಿಗೆ ಹೇಳಲಶಕ್ಯವಾದ ಉಪಾಯಗಳನ್ನು ನಮ್ಮ ಪೂಜ್ಯ ಮಾವಂದಿರಾದ ಆಬಾಸಾಹೇಬರು ಕೈಕೊಂಡಿರುವರಲ್ಲವೇ? ಅವನ್ನೆಲ್ಲ ನಾವು ಈಗ ಯಾಕೆ ಪರ್ಯಾಲೋಚಿಸ ಬಾರದು?

ಈ ಮೇರೆಗೆ ಮಹಾ ತೇಜಸ್ವಿನಿಯಾದ ಏಸೂಬಾಯಿಯು ನುಡಿದನಂತರ ತನ್ನ ಮೈದುನನಾದ ರಾಜಾರಾಮ ಮಹಾರಾಜರನ್ನು ಕುರಿತು—ಪೂಜ್ಯರಾದ ಮೈದುನರೇ, ರಾಜಾರಾಮ ಮಹಾರಾಜ, ತೆರವಾಗಿದ್ದ ಈ ಸಿಂಹಾಸನದ ಮೇಲೆ ನೀವು ಬಾಲಶಿವಾಜಿ ಯನ್ನು ಕುಳ್ಳಿರಿಸಿದಿರಿ, ನಾನು ಅದನ್ನು ನೋಡಿದೆನು. ಮೈದುನರೇ, ನನ್ನಿಂದ ತಮ್ಮ ವಿಷಯದ ಅನಂತ ಅಪರಾಧಗಳು ಘಟಿಸಿರಬಹುದು! ಅವನ್ನು ತಾವು ಕ್ಷಮಿಸಬೇಕು! ಲಕ್ಷ್ಮಣನು ಸೀತಾದೇವಿಯ ಅಪರಾಧಗಳನ್ನು ಕ್ಷಮಿಸಿ, ತನ್ನ ಅತ್ತಿಗೆಯ ಬೆನ್ನು ಕಾಯ ಲಿಲ್ಲವೇ? ಮಹಾರಾಜ, ಅತ್ತೆಯವರ ಭಯಂಕರವಾದ ಕೊಲೆಯನ್ನು ತಾವು ಮರೆಯ ಬೇಕೆಂದು ಬೇಡಿಕೊಳ್ಳುವ ಧೈರ್ಯವು ನನಗೆ ಸಾಲದು. ತಾವು ಅದನ್ನೂ ಮರೆಯದಿದ್ದರೆ, ಹಾಗು ಮಹಾರಾಷ್ಟ್ರದ ಅಭಿಮಾನವನ್ನು ತಾವು ಮರೆಯುವ ಹಾಗಿದ್ದರೆ ಈ ಪಾಪಿಷ್ಠಳ ಸಹಗಮನಕ್ಕೆ ಒಪ್ಪಿಗೆಯನ್ನು ಕೊಡಿರಿ, ಈ ನನ್ನ ಕೂಸನ್ನು ನಿಮ್ಮ ಉಡಿಯಲ್ಲಿ ಹಾಕಿಕೊಳ್ಳಿರಿ. ಹ್ಯಾಗಾದರೂ, ಮಾವಂದಿರ ಉದ್ದೇಶವು ಸಫಲವಾದ ರಾಯಿತು. ಮಹಾರಾಜ, ಧರ್ಮ ರಕ್ಷಣಕ್ಕಾಗಿ ಮಹಾರಾಜರು ತಮ್ಮ ಪ್ರಾಣವನ್ನು ನಿವಾಳಿಸಿ ಒಗೆಯಲಿಲ್ಲವೆ? ಅಂದ ಬಳಿಕ ಸ್ವಾರ್ಥಾಭಿಲಾಷೆಯಿಂದ ನಾನು ಸಹಗಮನ ಮಾಡಿದರೆ, ಮಾವಂದಿರಿಗಂತು ಇರಲಿ, ಮರಣಕಾಲದಲ್ಲಿ ಜೋತಾಜಿಯ ಮುಖಾಂತರ ಮರಾಟರಿಗೆ ತಮ್ಮ ದಿವ್ಯ ಸಂದೇಶವನ್ನು ಕಳಿಸಿದ ಮಹಾರಾಜರಿಗಾದರೂ ಸಮಾಧಾನವಾಗಬಹುದೋ? ಮೈದುನರೇ, ಏಳಿರಿ, ಪ್ರಲ್ಹಾದ ಪಂತರ ಸೂಚನೆಯಂತೆ ನೀವು ಪಲ್ಲಾಳಗಡಕ್ಕೆ ರಾಜಪ್ರತಿನಿಧಿಗಳಾಗಿ ಶಿವ ಪ್ರಭುವಿನ ಸಿಂಹಾಸನವನ್ನು ತಕ್ಕೊಂಡು ಹೋಗಿರಿ. ರಾಯಗಡದ ಮೇಲೆ ಔರಂಗಜೇಬನ ಮೇಲೆ ದೃಷ್ಟಿಯು ಬೀಳಲಿ. ನಮ್ಮ ಸೇನಾಧುರಂಧರ ಧನಾಜಿ, ತೀವ್ರ ಪ್ರತಾಪಿಯಾದ ಸಂತಾಜೀ, ಮೋಹಿತೇ, ದಾಬಡೆ, ನಮ್ಮ ಶೂರ ಸರದಾರರೇ, ಇನ್ನು ನೀವು ಪಲ್ಲಾಳಗಡಕ್ಕೆ ತೆರಳಿರಿ. ನಮ್ಮ ಯುದ್ಧಮಂತ್ರಿಗಳಾದ ಪ್ರಲ್ಹಾದಪಂತ, ನೀವು ನಮ್ಮ ಅನಭಿಷಿಕ್ತ ರಾಜನ ದರ್ಬಾರದ ಮುಖಾಂತರವಾಗಿ ನಿಮ್ಮ ''ಗನೀವಿ ಕಾವಾ(ಹೊಂಚುಹಾಕಿ ಹೊಡೆಯುವ)'' ಯುದ್ಧದ ಆಟವನ್ನು ಆಡಿಸಿರಿ. ನಮ್ಮ ಬ್ರಾಹ್ಮಣ ಮುತ್ಸದ್ದಿಗಳಾದ ರಾಮಚಂದ್ರಪಂತ, ಇಂಥ ಕಠಿಣ ಕಾಲದಲ್ಲಿ ಮಹಾರಾಷ್ಟ್ರ ರಾಜ್ಯವನ್ನು ಜಾಗರೂಕತೆಯಿಂದ ಸಾಗಿಸಿರಿ. ಭಾಂಡಾರ ಶಿಲಕನ್ನು ಕಾಯಿರಿ.

ಪಾಂಡವರ ಲಜ್ಜೆಯನ್ನು ಕಾಯ್ದ ಶ್ರೀಕೃಷ್ಣಪರಮಾತ್ಮಾ ನಿನ್ನನ್ನು ನಾನು ಕಟ್ಟಕಡೆಯಲ್ಲಿ ಪ್ರಾರ್ಥಿಸುವೆನು. ಈಗ ನೀನು ಮಹಾರಾಷ್ಟ್ರದ ಲಜ್ಜಾರಕ್ಷಣ ಮಾಡಬೇಕು. ಈಗ ಧರ್ಮ

ಯುದ್ಧಕ್ಕಾಗಿ ಸಿದ್ಧವಾಗಿರುವ ನಮ್ಮ ಈ ಮಹಾರಾಷ್ಟ್ರ ವೀರರ ಅಭಿಮಾನವು ನಿನಗಿರಲಿ! ದಯಾನಿಧೇ, ನೀನು ಪತಿತೋದ್ಧರಣ ಶೀಲನಾದದ್ದರಿಂದ, ಪತಿತರಾಗಿರುವ ನಮ್ಮನ್ನು ನೀನು ರಕ್ಷಿಸಬೇಕು. ಭೀಷ್ಮರು ನಿಷ್ಪಾಂಡವೀ ಪೃಥ್ವಿಯನ್ನು ಮಾಡುವದಕ್ಕಾಗಿಯೂ, ಜಯದ್ರಥನು ಪಾರ್ಥನನ್ನು ಯಮಸದನಕ್ಕೆ ಅಟ್ಟುವದಕ್ಕಾಗಿಯೂ, ಅಶ್ವತ್ಥಾಮನು ಪಾಂಡವರ ನಿರ್ವಂಶ ಮಾಡುವದಕ್ಕಾಗಿಯೂ ಪ್ರತಿಜ್ಞೆ ಮಾಡಿದಾಗ, ಭಗವನ್, ಭಕ್ತವತ್ಸಲಾ, ಪ್ರೇಮಳ ಮೂರ್ತಿಯೇ, ಪುರುಷೋತ್ತಮಾ, ನೀನು ಗರುಡನಿಗಿಂತ ಮೊದಲೇ ಓಡಿಹೋಗಿ ದ್ರೌಪದಿಯ ಮಾನವನ್ನು ಕಾಯಲಿಲ್ಲವೆ? ಅದರಂತೆ, ಈಗ ನೀನು ನನ್ನ ಮಾನವನ್ನು ಕಾಯಬೇಕು. ಈ ಪ್ರಸಂಗದಲ್ಲಿ ನನ್ನಂಥ ಕ್ಷುದ್ರಳ ಕ್ಷುದ್ರತನವನ್ನು ಹೋಲಿಸದಷ್ಟು ದೊಡ್ಡ ಮನಸ್ಸು ಮಾಡು; ಇದೇ ನನ್ನ ಪ್ರಣಾಮಪೂರ್ವಕವಾದ ಪ್ರಾರ್ಥನೆಯು!!

ಏಸೂಬಾಯಿಯ ಮೇಲೆ ಸಂತಾಜಿಯ ಅನಿರ್ವಾಚ್ಯವಾದ ಭಕ್ತಿಯು ಇತ್ತು. ಆತನು ತನ್ನ ಸ್ವಾಮಿನಿಯ ಈ ಹೃದಯಂಗಮವಾದ ಭಾಷಣವನ್ನು ಕೇಳಿ, ಉಕ್ಕೇರಿದ ಸ್ವಾಮಿಭಕ್ತಿಯಿಂದ–ಮಾತೃಶ್ರೀ, ಪ್ರಭು ರಾಜಾರಾಮ ಸಾಹೇಬ, ಸನ್ಮಾನನೀಯ ರಾಜಕುವರ, ಹಾಗು ಯಾವತ್ತು ಮುತ್ಸದ್ದಿಗಳೇ, ಶೂರ ಬಂಧುಗಳೇ, ಮಹಾರಾಷ್ಟ್ರರ ಈ ಪೂಜ್ಯ ಸಿಂಹಾಸನದ ಅಪಮಾನವನ್ನು ಆಲಮಗೀರನು ಮಿರುವನಷ್ಟೇ? ಅದರ ಸೇಡು ತೀರಿಸಿಕೊಂಡು, ಮಹಾರಾಷ್ಟ್ರ ರಾಜ್ಯವನ್ನು ಸ್ಥಿರಗೊಳಿಸಿದ ಹೊರತು ಮಹಾರಾಷ್ಟ್ರ ವೀರರೂ,ಮುತ್ಸದ್ದಿಗಳೂ ಶಾಂತ ರಾಗತಕ್ಕದ್ದಲ್ಲ. ಅಲ್ಲಿಯವರೆಗೆ ತಮ್ಮ ಮನೆ–ಮಾರುಗಳ, ಹೆಂಡಿರು–ಮಕ್ಕಳ, ಬಹಳವೇಕೆ ತಮ್ಮ ಜೀವದಹಂಗನ್ನು ಸಹ ಯಾರೂ ಇಡತಕ್ಕದ್ದಲ್ಲ. ನಾನು ಈಗ ಮಾತೃಶ್ರೀಯವರ ಪಾದವನ್ನೂ, ಶ್ರೀ ಶಿವಪ್ರಭುವಿನ ಚರಣ ಸ್ಪರ್ಶದಿಂದ ಪವಿತ್ರವಾಗಿರುವ ಈ ಪೂಜ್ಯ ಸಿಂಹಾಸನವನ್ನೂ, ಸಾಕ್ಷಿಯಾಗಿಟ್ಟು, ಜಗದೀಶ್ವರನನ್ನು ಸ್ಮರಿಸಿ ನನ್ನ ಈ ಖಡ್ಗವನ್ನು ಮುಟ್ಟಿ ಪ್ರತಿಜ್ಞೆಮಾಡುವೆನೇ ನೆಂದರೆ—ಈ ಮೊದಲೇ ನಾನು ಹೇಳಿದ ಸ್ವಾಮಿಕಾರ್ಯವು ಪೂರ್ಣವಾಗುವವರೆಗೆ ನಾನು ಸರ್ವಥಾ ವಿಷಯೋಪಭೋಗಕ್ಕೆ ಮನಸ್ಸು ಮಾಡಲಿಕ್ಕಿಲ್ಲ. ಶೂರ ವೀರರಾದ ಬಂಧುಗಳೇ ಏಳಿರಿ. ಇನ್ನು ತಡವೇಕೆ? 'ಹರಹರ ಮಹಾದೇವ'' ಎಂದು ಗರ್ಜಿಸುತ್ತ ವೈರಿಗಳಿಗೆ ನಮ್ಮ ಕೈಯನ್ನು ತೋರಿಸೋಣ; ಎಂದು ಸಂತಾಪದಿಂದ ನುಡಿಯಲು, ಎಲ್ಲರು ಒರೆಗಳಿಂದ ತಮ್ಮ ಖಡ್ಗಗಳನ್ನು ಹಿರಿದು ತಮ್ಮ ಸಮ್ಮತಿಯನ್ನು ಪ್ರಕಟಿಸಿದರು. ಆಗ ಏಸೂಬಾಯಿಯವರು— ''ವೀರರೇ ನಿಲ್ಲಿರಿ, ಇಂದು ನಿಮಗೆ ನಾನು ಕೈಮುಟ್ಟ ತಾಂಬೂಲವನ್ನು ಕೊಡುತ್ತೇನೆ ನಿಲ್ಲಿರಿ! ಇನ್ನು ಶಿವಪ್ರಭುವಿನ ಚರಣಗಳು ನಿಮ್ಮನ್ನು ರಕ್ಷಿಸಲಿ! ಶ್ರೀ ಸಮರ್ಥರ ಆಶೀರ್ವಾದವು ನಿಮ್ಮನ್ನು ರಕ್ಷಿಸಲಿ! ಪೂಜ್ಯ ಜೀಜಾಬಾಯಿಯವರ ಆಶೀರ್ವಾದವು ನಿಮ್ಮನ್ನು ರಕ್ಷಿಸಲಿ! ಎಂದು ನುಡಿದು, ತನ್ನ ವೀರಶ್ರೀಯುಕ್ತವಾದ ದಿವ್ಯ ಮುಖಕಾಂತಿಯು ಪಸರಿಸಿರಲು, ಎಲ್ಲರನ್ನೂ ವಾತ್ಸಲ್ಯ ಪೂರ್ಣವಾದ ದೃಷ್ಟಿಯಿಂದ ನೋಡುತ್ತ ಎಲ್ಲರಿಗೂ ತಾಂಬೂಲವನ್ನು ಕೊಟ್ಟು ಪ್ರೋತ್ಸಾಹಿಸಿದಳು!

ಈ ಎಲ್ಲ ಪ್ರಸಂಗಗಳನ್ನು ನೋಡಿ ಹೃದಯ ಕರಗಿ ನೀರಾಗಿದ್ದ ರಾಜಾರಾಮ ಮಹಾರಾಜರು ಅತ್ಯಂತವಾದ ನಿಷ್ಠೆಯಿಂದ ತನ್ನ ಅತ್ತಿಗೆಯನ್ನು ಕುರಿತು—ಮಾತೃಶ್ರೀ,ಮೋಹ

ದಿಂದ ನಾವು ಒತ್ತಟ್ಟಿಗೆ ರಾಯಗಡವನ್ನು ಹಿಡಿದು ಕುಳಿತುಕೊಂಡರೆ, ಘಾತವಾಗದೆ ಇರದು; ಆದ್ದರಿಂದ ಈಗ ನಾನು ಮನಸ್ಸು ಕಲ್ಲುಮಾಡಿ ನಿಮ್ಮ ಅಪ್ಪಣೆಯಂತೆ, ನಿಮ್ಮನ್ನೂ, ಬಾಳಾ ಸಾಹೇಬನನ್ನೂ ಬಿಟ್ಟು ಹೋಗುವೆನು. ಆದರೆ ನಮ್ಮ ಈ ಬಾಲ ಶಿವರಾಯನಿಗೆ ಪಟ್ಟಾಭಿಷೇಕವಾಗಿದ್ದರೆ ನನಗೆ ಸಮಾಧಾನವಾಗುತ್ತಿತ್ತು. ಉಪಾಯವಿಲ್ಲ, ಸದ್ಯಕ್ಕೆ ಯಾವದನ್ನೂ ಮನಸ್ಸಿನಲ್ಲಿ ಹಿಡಿಯುವ ಹಾಗಿಲ್ಲ. ನಾನು ಬಾಳಾಸಾಹೇಬನ ನೌಕರನು; ಏಕನಿಷ್ಠೆಯಿಂದ ಆತನ ಸಿಂಹಾಸನದ ಚಾಕರಿಯನ್ನು ಮಾಡುವದು ನನ್ನ ಕರ್ತವ್ಯವು! ಆದ್ದರಿಂದ ನಾನು ಪಲ್ಹಾಳಗಡಕ್ಕೆ ಹೋಗುತ್ತೇನೆ. ಉದ್ಧವಯೋಗದೇವಾ, ನೀನು ರಾಯಗಡದ ಕಾರಭಾರವನ್ನು ನೋಡು. ಎಲ್ಲರನ್ನೂ ಆಬಾಸಹೇಬರು ಬೆಳಿಸಿದರೆಂಬದನ್ನು ಲಕ್ಷದಲ್ಲಿಟ್ಟು, ನಡುವಿನ ರಾಜ್ಯಕಾರಭಾರ ದಲ್ಲಾದ ಅಪರಾಧಗಳನ್ನು ಕ್ಷಮಿಸಿರಿ. ರಾಜ್ಯದ ಅಧಿಕಾರಿಯು ಮೊದಲಿನ ಈ ಶಿವಪ್ರಭುವೇ ಇರುತ್ತಾನೆಂದು ತಿಳಿದು, ನಮ್ಮನ್ನು ಆತನ ಕಾರಭಾರಿಯಾಗಿ ಭಾವಿಸಿ ಎಲ್ಲರೂ ರಾಜ್ಯವನ್ನು ನಡಿಸತಕ್ಕದ್ದು. ವೀರ ಸರದಾರರೇ, ಮೊದಲಿಗಿಂತ ಹೆಚ್ಚು ಪರಾಕ್ರಮವನ್ನು ಪ್ರಕಟಿಸಿ ನೀವು ದೌಲತ್ತನ್ನು ರಕ್ಷಿಸತಕ್ಕದ್ದು. ಶ್ರೀಶೈಲ ಮಲ್ಲಿಕಾರ್ಜುನದಲ್ಲಿ ಕೈಲಾಸವಾಸಿ ತೀರ್ಥರೂಪರಿಗೆ ಶ್ರೀ ಭವಾನೀ ಮಾತೆಯು— ''ಮುಂದೆ ಹುಟ್ಟುವ ಶಿವಾಜಿಯು ಹಿಂದು ಸ್ಥಾನವನ್ನು ಸಾಧಿಸುವನು'' ಎಂದು ಕುರುಹು ಕೊಟ್ಟಿರುವಳು. ಆದ್ದರಿಂದ ಎಲ್ಲರೂ ಮನಸ್ಸಿನ ಕಲ್ಮಷ ಗಳನ್ನು ಬಿಟ್ಟು, ದೌರ್ಬಲ್ಯವನ್ನು ಚಲ್ಲಿಕೊಟ್ಟು ಪ್ರತಿಜ್ಞೆ ಮಾಡಿರಿ. ಮಾತಶ್ರೀ, ಹಾಗಾದರೆ ನಾವು ಬರುತ್ತೇವೆ. ಎಂದು ಅತ್ತಿಗೆಯನ್ನು ನಮಸ್ಕರಿಸಲು, ಏಸೂಬಾಯಿಯು ಕಣ್ಣುತುಂಬ ನೀರು ತಂದು ಗದ್ಗದ ಕಂಠದಿಂದ—ಸನ್ಮಾನನೀಯರಾದ ಮೈದುನರೇ ಹೋಗಿ ಬರ್ರಿ. ನನ್ನ ಹಸ್ತವು ನಿಮ್ಮ ತಲೆಯಮೇಲೆ ಇರುತ್ತದೆ! ಹೋಗಿರಿ, ಯಶಸ್ವಿಗಳಾಗಿರಿ, ಕಳೆದುಹೋದ ಸಾಮ್ರಾಜ್ಯವನ್ನು ತಿರುಗಿ ಸಂಪಾದಿಸಿರಿ, ಬಾಳಾ ಶಿವಾಜೀ, ನಿನ್ನ ಕಕ್ಕನನ್ನು ನಮಸ್ಕರಿಸು. ಆತನು ಉದಾರಾಂತಃಕರಣದ ಶ್ರೀರಾಮನು! ಎಲೈ ಮಾತಾ–ಪಿತೃಭಕ್ತರಾಮಾ, ಹೋಗು! ದೂರ ವನಾಂತರಕ್ಕೆ ಹೋಗು! ಹೋಗು, ಮನೋಭಿರಾಮಾ, ಹೋಗು!! ಈ ಕೌಶಲ್ಯೆಗೆ ರಾಮನ ವನವಾಸವು ಪ್ರಿಯವಾಗಿರುತ್ತದೆ, ಹೋಗು!!!

## ಸಮರ್ಥರ ಸದ್ಬೋಧಸ್ಮೃತಿ

ಈ ಮೇರೆಗೆ ರಾಜರಾಮ ಮಹಾರಾಜರು ತಮ್ಮ ಅತ್ತಿಗೆಯ ಆಶೀರ್ವಾದವನ್ನು ಪಡೆದು, ಶ್ರೀರಾಮನು ವನಾಂತರಕ್ಕೆ ಹೊರಟಂತೆ ಪಲ್ಹಾಳಗಡಕ್ಕೆ ಹೊರಡಲು, ಎಲ್ಲರಿಗೂ ರಾಮರಾಜ್ಯ ವಿಯೋಗದ ಸ್ಮರಣವಾಗಿ ಬಹಳ ವ್ಯಸನವಾಯಿತು. ಆ ಭ್ರಾತೃವತ್ಸಲನಾದ ಶಿವಪುತ್ರ ನನ್ನು ಹಿಂಬಾಲಿಸಿ ಧನಾಜಿ–ಸಂತಾಜಿ ಮೊದಲಾದ ಶೂರ ಸರದಾರರೂ, ರಾಮಚಂದ್ರ ಪಂತ— ಪ್ರಲ್ಹಾದಪಂತ ಮೊದಲಾದ ಮುತ್ಸದ್ದಿಗಳೂ ಹೊರಟರು. ಹೀಗೆ ರಾಜಾರಾಮ

ಮಹಾರಾಜರು ತಮ್ಮ ಪರಿವಾರದೊಡನೆ ರಾಯಗಡದಿಂದ ಹೊರಟು ಮಹಾಡ ಘೋರಗಳ ಮೇಲೆ ಹಾದು, ಹಾದಿಯಲ್ಲಿಯ ಮಾವಳರ ಕೋಟೆಗಳ ಭದ್ರತೆಯನ್ನು ಪರೀಕ್ಷಿಸುತ್ತ-ಪರೀಕ್ಷಿಸುತ್ತ ಪ್ರತಾಪಗಡಕ್ಕೆ ಬಂದರು. ಮೊದಲು ಅವರು ಕೇದಾರೇಶ್ವರ ದೇವಾಲಯಕ್ಕೆ ಹೋದರು. ಕೇದಾರೇಶ್ವರವು ಬಹು ಪ್ರಾಚೀನವಾದ ಸ್ವಯಂಭೂ ಲಿಂಗವಿದ್ದು, ಶಿವಪ್ರಭುವಿನ ಯೋಗದಿಂದ ಅದು ಅತಿ ವಿಖ್ಯಾತವಾಗಿತ್ತು, ರಾಜಪರಿವಾರವು ಭಕ್ತಿಯಿಂದ ಕೇದಾರೇಶ್ವನ ದರ್ಶನಮಾಡಿಕೊಂಡು, ದುರ್ಗವನ್ನು ಏರಿಹೋಗಿ, ಕುಲಸ್ವಾಮಿನಿಯಾದ ಭವಾನಿಯ ದರ್ಶನ ವನ್ನು ತಕ್ಕೊಂಡಿತು. ''ನಾನು ತುಳಜಾಭವಾನಿಯು, ನನ್ನನ್ನು ಇಲ್ಲಿ ಸ್ಥಾಪಿಸಿದರೆ, ನೀನು ಉತ್ತರೋತ್ತರ ಜಯಶೀನಾಗುವೆ.'' ಎಂದು ತನಗೆ ಸ್ವಪ್ನ ದೃಷ್ಟಾಂತ ವಾದ್ದರಿಂದ, ಶಿವ ಪ್ರಭುವು ಈ ಭವಾನಿಯನ್ನು ಇಲ್ಲಿ ಸ್ಥಾಪಿಸಿದನು. ರಾಜಾರಾಮನು ದೇವಿಯ ದರ್ಶನವನ್ನು ತೆಕ್ಕೊಂಡು ಅವ್ಯಾಹತವಾದ ಭಕ್ತಿಯಿಂದ ಆ ಲೋಕಮಾತೆಯನ್ನು ಕುರಿತು— ''ಮಾತೇ, ನೀನು ಆಬಾಸಾಹೇಬರಿಗೆ ನಿನ್ನ ಮನೆತನವು ಇಪ್ಪತ್ತೇಳು ತಲೆಗಳವರಗೆ ನಡೆಯುವದೆಂ''ದು ವರಪ್ರದಾನ ಮಾಡಿದ್ದು ಇಷ್ಟರಲ್ಲಿಯೇ ಸುಳ್ಳು ಆಗುವದೇನು? ನನ್ನ ಕುಲಸ್ವಾಮಿನೀ, ಇನ್ನು ನಮ್ಮೆಲ್ಲರ ಚಿಂತೆಯು ನಿನಗಿರಬೇಕು. ಮಾತೇ, ಇಂದು ನಮ್ಮ ಭಾವವು ದೃಢವಾಗಿದ್ದರೆ, ಮಹಾರಾಷ್ಟ್ರ ಧರ್ಮಕ್ಕಾಗಿ ನಾವು ನಮ್ಮ ಶಿರಸ್ಸುಗಳನ್ನು ಕೈಗಳಲ್ಲಿ ತೆಕ್ಕೊಂಡು ಹೊರಟದ್ದು ನಿಜವಿದ್ದರೆ, ಏನಾದರೂ ಪ್ರಸಾದ ಕೊಟ್ಟು ನೀನು ನಮ್ಮ ಧೈರ್ಯ-ಬಲ- ಸಾಹಸಗಳನ್ನು ಹೆಚ್ಚಿಸು! ಆಬಾಸಾಹೇಬರು ನಿನ್ನ ವರಪ್ರದಾನದಿಂದಲೇ ಪ್ರೋತ್ಸಾಹಿತರಾಗಿ ಸ್ವರಾಜ್ಯವನ್ನು ಸ್ಥಾಪಿಸಲಿಲ್ಲವೇ? ಅಂಥ ನಮ್ಮ ಕುಲಸ್ವಾಮಿನಿಯಾದ ನೀನು ಈಗ ನಮ್ಮನ್ನು ಮರೆಯುವೆಯಾ?'' ಎಂದು ನುಡಿಯುತ್ತಿರಲು ದೇವಿಯ ಕಿರೀಟದ ಮೇಲಿನ ಗುಲಾಬಿಯ ಹೂವು ಪಟ್ಟನೆ ಕೆಳಗೆ ಬಿದ್ದಿತು! ಆಗ ರಾಜಾರಾಮ ಮಹಾರಾಜರ ಹೃದಯವು ಭಕ್ತಿಯ ಹೆಚ್ಚಳದಿಂದ ಕಂಪಿಸುತ್ತಿರಲು, ಅವರ ಮೈಜುಮ್ಮೆಂದು ಕೂದಲುಗಳು ನೆಟ್ಟಗಾಗುತ್ತಿರಲು, ಅವರು ಅತ್ಯಂತವಾದ ನಯ-ಭಯ-ಭಕ್ತಿಯಿಂದ ತಟ್ಟನೆ ಎದ್ದು ಆ ಪ್ರಸಾದವನ್ನು ಸ್ವೀಕರಿಸಿ, ಅದನ್ನು ತಲೆಯ ಮೇಲಿಟ್ಟುಕೊಂಡು, ಕಣ್ಣು-ಮೂಗುಗಳಿಗೆ ಹಚ್ಚಿಕೊಂಡು, ಅದರ ಒಂದೊಂದು ಪಕಳಿಗಳನ್ನು ಧನಾಜಿ ಸಂತಾಜಿ ಮೊದಲಾದ ತಮ್ಮ ಬೆನ್ನು ಹಿಂದನ ಸರದಾರರಿಗೆ ಕೊಟ್ಟರು. ಆಮೇಲೆ ಎಲ್ಲರೂ ದೇವಿಯನ್ನು ಸಾಷ್ಟಾಂಗವಾಗಿ ವಂದಿಸಿ, ಕೋಟೆಯ ವ್ಯವಸ್ಥೆಯನ್ನು ನೋಡಿದಬಳಿಕ ತಡಮಾಡದೆ ಸಾತಾರೆಯ ಕಡೆಗೆ ಸಾಗಿದರು.

ಹೀಗೆ, ಮಹಾರಾಷ್ಟ್ರ ವೀರಮಂಡಲವು ಸ್ವಾತಂತ್ರ್ಯ ದೇವತೆಯ ತವರಮನೆಯಾದ ವಿಂಧ್ಯ ಪರ್ವತದೊಳಗಿನ ಪ್ರತಾಪಗಡ, ಮಕರಂದಗಡ, ಜಂಗಲೀಗಡ, ಭೈರವಗಡ ಮೊದಲಾದ ಲಷ್ಕರಿಯ ಆಯಕಟ್ಟಿನ ಸ್ಥಳಗಳನ್ನು ನೋಡುತ್ತ ಮಾರ್ಗವನ್ನು ಕ್ರಮಿಸುತ್ತಲಿತ್ತು, ಆಗ ರಾಮಚಂದ್ರಪಂತ ಬಾವಡೇಕರನಂತೂ ಸೈಹ್ಯಾದ್ರಿಯೊಳಗಿನ ಪ್ರತಿಯೊಂದು ಉನ್ನತ ಶಿಖರವನ್ನು ಅವುಗಳ ಅಳವಿನೊಳಗೆ ಬರುವ ಹೊಡತದ ಸ್ಥಳಗಳನ್ನೂ ತೊಡಕಿನ ಹಾದಿಗಳನ್ನೂ ತನ್ನ ಬಳಿಯ ಧನಾಜಿ, ಸಂತಾಜಿಯೇ ಮೊದಲಾದ ಶೂರರಿಗೆ ಅತ್ಯಾಸಕ್ತಿ

ಯಿಂದ ತೋರಿಸುತ್ತಲಿದ್ದರು. ಅವರಲ್ಲಿ ಸಂತಾಜಿಯು ಅತ್ಯುತ್ಸುಕತೆಯಿಂದ ಎಲ್ಲವನ್ನು ಮನಸ್ಸಿನಲ್ಲಿಟ್ಟು ಕೊಳ್ಳುತ್ತಿದ್ದನು. ಹೀಗಿರುವಾಗ ರಾಜಾರಾಮಾ ಮಹಾರಾಜರು ಸಂತಾಜಿಯನ್ನು ಕರೆಯಲು, ಆ ಸ್ವಾಮಿ ಕಾರ್ಯನಿಷ್ಠನು ಅತ್ತ ಕಡೆಗೆ ಲಕ್ಷ್ಯಗೊಡಲಿಲ್ಲ; ಮತ್ತೊಮ್ಮೆ ಕರೆಯಲು, ಆಗೂ ಲಕ್ಷ್ಯಕೊಡಲಿಲ್ಲ. ಕಡೆಗೆ ಮೂರನೆಯ ಸಾರೆ ಕರೆಯಲು, ಆ ಜಾಜ್ವಲ್ಯ ಸ್ವಭಾವದ ಸಂತಾಜಿಯು ಕವಕ್ಕನೆ ಮಹಾರಾಜರ ಮೈಮೇಲೆ ಹೋದನು. ಅದನ್ನು ನೋಡಿ ರಾಮು ಚಂದ್ರಪಂತನು ಗಾಬರಿಯಾದನು. ಆಗ ಸಂತಾಜಿಯು ಮಹಾರಾಜರನ್ನು ಕುರಿತು— ಮಹಾರಾಜ, ಏನಿದು? ದೊಡ್ಡ ಮಹಾರಾಜರು ಹೀಗೆ ಕಾರ್ಯಸಕ್ತರ ಅವಧಾನವನ್ನು ಕೆಡಿಸುತ್ತಿದ್ದಿಲ್ಲ. ಒಮ್ಮೆ ತಾನಾಜಿಯು ಅವರಿಗೆ — "ಮಹಾರಾಜ, ದುರ್ಗವನ್ನು ಕೈವಶಮಾಡಿ ಕೊಳ್ಳುವವನು ನಾನು, ತಾವು ಇಲ್ಲಿಂದ ಉಲುಕಲಾಗದು," ಎಂದು ಹೇಳಲು, ಮಹಾರಾಜರು ಹಾಗೆಯೇ ಮಾಡಿದರು. ನಾನು ಇತ್ತ ಪಂತರ ಬಳಿಯಲ್ಲಿ ಮುಂದಿನ ಪಾಠವನ್ನು ಕಲಿಯತೊಡಗಿರುವಾಗ, ನೀವು ನನ್ನನ್ನು ಒಂದೇಸವನೆ ಕರೆಯತೊಡಗುತ್ತೀರಿ. ಬೇರೆ ಯಾರಾದರೂ ಹೀಗೆ ಮಾಡಿದ್ದರೆ ದೊಡ್ಡ ಮಹಾರಾಜರು ತಡೆಯುತ್ತಿದ್ದರೆ?

ಸಂತಾಜಿಯ ಈ ಮಾತಿಗೆ ಮಹಾರಾಜರು ನಕ್ಕು ಮನಸ್ಸಿನಲ್ಲಿ ಸಮಾಧಾನಪಡುತ್ತ ಪರಿವಾರದೊಡನೆ ಮಾರ್ಗವನ್ನು ಕ್ರಮಿಸುತ್ತಲಿದ್ದರು. ಅವರು ಈ ಬಗೆಯ ಹಲವು ಸ್ವಾಭಿಮಾನದ ಸಂಭಾಷಣಗಳಿಂದ ಸಂತೋಷಪಡುತ್ತ ಕೃಷ್ಣಾ, ವೇಣ್ಯಾ, ಕೋಯನಾ ನದಿಗಳ ನೀರಿನಿಂದ ತೋಯುತ್ತಿರುವ ಸೃಷ್ಟಿ ಸುಂದರ ಪ್ರದೇಶದೊಳಗಿಂದ ಸಾಗುತ್ತ ಸಾಗುತ್ತ ಕೇಲವಲಿ, ಸೋನಾಪುರಗಳ ಮಗ್ಗಲಿನಿಂದ, ಸಜ್ಜನಗಡದ ಕಡೆಗೆ ಹೊರಟರು. ಸಜ್ಜನಗಡವು ಶ್ರೀ ಸಮರ್ಥ ರಾಮದಾಸ ಸ್ವಾಮಿಗಳ ನಿವಾಸಸ್ಥಾನವೂ, ಸಮಾಧಿಸ್ಥಾನವೂ ಆಗಿರುವದೆಂಬದನ್ನು ವಾಚಕರು ಅರಿತಿರಬಹುದು. ಸಮರ್ಥರು ಅಲ್ಲಿ ಇದ್ದುಕೊಂಡು ಶಿವಪ್ರಭುವಿನ ಕೈಯಿಂದ ಧರ್ಮಸ್ಥಾಪನ– ರಾಜ್ಯಸ್ಥಾಪನಗಳೆರಡನ್ನೂ ಮಾಡಿಸಿದ್ದರಿಂದ, ಆ ಸಜ್ಜನಗಡದ ಪರಮ ಪಾವಿತ್ರ್ಯವನ್ನೂ ಪರಮೋದಾತ್ತತೆಯನ್ನೂ, ಪರಮ ವೈಭವಶಾಲಿತ್ವವನ್ನೂ ಪಾಮರರಾದ ನಾವು ಏನೆಂದು ವರ್ಣಿಸೋಣ? ಇದೇ ಗಡದಿಂದ ಸಮರ್ಥರು ತಮ್ಮ ಸುಂದರವಾದ ಉಪದೇಶರೂಪ ಕೊಳಲನ್ನು ಊದಿ, ಅನೇಕ ಕ್ಷತ್ರಿಯ ವೀರರನ್ನು ತಮ್ಮ ಸುತ್ತು ಮುತ್ತು ನೆರೆಸಿಕೊಂಡರು; ಇದೇ ಗಡದಿಂದಲೇ ಸಮರ್ಥರು ಬಾಗವತ ಧರ್ಮದ ಕಾಳಿಯನ್ನು ಹಿಡಿದರು; ಇದೇ ಗಡದ ಮೇಲಿಂದಲೇ ಸಮರ್ಥರು ಸ್ವಾತಂತ್ರ್ಯ ಪ್ರೀತಿಯೆಂಬ ಅಮೃತವನ್ನು ಮಹಾರಾಷ್ಟ್ರದ ಮನೆಮನೆಯಲ್ಲಿ ಸುರಿಸಿದರು; ಹೀಗೆ ಅತ್ಯಂತ ಮಹತ್ವದ ಕಾರ್ಯಗಳ ಉಗಮ ಸ್ಥಾನವೆನಿಸಿ, ಸೃಷ್ಟಿ ಸೌಂದರ್ಯದಿಂದ ನೋಡುವವರ ಮನಸ್ಸನ್ನು ಹರಣಮಾಡುವ ಊರ್ವಶೀ (ಉರ್ಮೋಡಿ) ನದಿಯ ದಂಡೆಯಲ್ಲಿರುವ ಆ ಸಜ್ಜನ ಗಡದ ಮಹತ್ತ್ವವನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ ಇರುವದು. ಇಂಥ ಪವಿತ್ರ ದುರ್ಗವಿರುವ ಪರ್ವತವನ್ನು ಸಮರ್ಥ ಭಕ್ತರಾದ ನಮ್ಮ ರಾಜಾರಾಮ ಮಹಾರಾಜರು, ರಾಮಚಂದ್ರಪಂತ, ಪ್ರಲ್ಹಾದಪಂತ, ಧನಾಜಿ, ಸಂತಾಜಿ ಮೊದಲಾದವರು ಭಕ್ತಿಯಿಂದ ಏರುತ್ತಿರುವಾಗ, ಅವರ ವೃತ್ತಿಯು ಆನಂದದಿಂದ

ಪ್ರಫುಲ್ಲಿತ ವಾಯಿತೆಂದು ನಾವು ಬರೆಯುವ ಕಾರಣವಿಲ್ಲ. ಅವರು ದುರ್ಗದ ಪ್ರವೇಶದ್ವಾರವನ್ನು ದಾಟಿ ಉತ್ಸಾಹದಿಂದ ಒಳಗೆ ಬಂದರು.

ದುರ್ಗವನ್ನು ಪ್ರವೇಶಿಸಿದ ಕೂಡಲೆ ಅವರಲ್ಲಿ ಆನಂದದ ಹೊಸ ತೆರೆಗಳು ಉತ್ಪನ್ನವಾಗ ಹತ್ತಿದವು. ರಾಮನಾಮ ಘೋಷವು ಅವರ ಕಿವಿಗೆ ಬೀಳಹತ್ತಿತು. ಗಾಯನದ ಮಂಜುಲ ಧ್ವನಿಯಿಂದ ಅವರ ಮನಸ್ಸು ರಮಿಸಹತ್ತಿತು. ಕೆಲವರು ಕ್ಯಾವಿಯ ವಸ್ತ್ರಗಳನ್ನು ಧರಿಸಿದವರು, ಕೆಲವರು ತಲೆಗೆ ಜರತಾರಿಯ ಪಟಕವನ್ನು ಸುತ್ತಿದವರು ಹೀಗೆ ರಾಮದಾಸಿಯ ಸಂಪ್ರದಾಯದ ಜನರು ಭೆಟ್ಟಿಯಾಗಹತ್ತಿದರು. ಧೂಪದ ಸುಗಂಧವು ಮನಸ್ಸಿಗೆ ಅಲ್ಹಾದವನ್ನುಂಟುಮಾಡಹತ್ತಿತು. ಇಷ್ಟರಲ್ಲಿ ಭರಜರಿಯ ಪೋಷಾಕಿನಿಂದಲೂ, ಸುವರ್ಣಾಲಂಕಾರಗಳಿಂದಲೂ, ಹೆಗಲಿಗೇರಿಸಿದ ಧನುಷ್ಯ-ಬಾಣಗಳಿಂದಲೂ ಮಹಾ ಪ್ರತಾಪವನ್ನು ವ್ಯಕ್ತಗೊಳಿಸುವ ಶ್ರೀ ಸಮರ್ಥ ರಂಗನಾಥ ಸ್ವಾಮಿಗಳ ದೇದೀಪ್ಯಮಾನವಾದ ಮೂರ್ತಿಯು, ಬೆಟ್ಟದಂಥ ಕುದುರೆಯನ್ನೇರಿ ಎದುರಿಗೆ ಬಂದಿತು. ಕೆಲವರು ಅವರಿಗೆ ಚಾಮರಗಳನ್ನು ಬೀಸುತ್ತಿದ್ದರು. ಕೆಲವರು ಛತ್ರಗಳನ್ನು ಹಿಡಿದಿದ್ದರು. ಅವರನ್ನು ನೋಡಿದಕೂಡಲೆ ಪ್ರಲ್ಹಾದಪಂತರು ಕುದುರೆಯ ಮುಂದೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಕೂಡಲೆ ರಾಜಾರಾಮ ಮಹಾರಾಜರೇ ಮೊದಲಾದ ಯಾವತ್ತು ರಾಜಪರಿವಾರವು ಸಮರ್ಥರಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿತು. ಆಗ ರಂಗನಾಥ ಸ್ವಾಮಿಗಳು ಕುದುರೆಯಿಂದ ಇಳಿದು, ರಾಜಾರಾಮ ಮಹಾರಾಜರೇ ಮೊದಲಾದವರನ್ನು ಹಿಡಿದೆತ್ತಿ ಸಂತಯಿಸಿ, ಎಲ್ಲರ ಯೋಗಕ್ಷೇಮವನ್ನು ವಿಚಾರಿಸಿದರು. ಯಾವತ್ತು ಜನರು ಪಾದಪ್ರಕ್ಷಾಲನ ವನ್ನು ಮಾಡುವದಕ್ಕಾಗಿ ರಾಮ ಸರೋವರಕ್ಕೆ ಹೋದರು. ಅಲ್ಲಲ್ಲಿ ಸಂಪಗೆಯ ಗಿಡಗಳು ಹೂಗಳಿಂದ ತುಂಬಿ, ಸುಗಂಧವನ್ನು ಬೀರುತ್ತಿದ್ದವು. ಪಾದಪ್ರಕ್ಷಾಲನವಾದ ನಂತರ ಎಲ್ಲರೂ ಮಾರುತಿಯ ದರ್ಶನ ಮಾಡಿಕೊಂಡು, ಆಮೇಲ ತೋರಣದಿಂದ ವಿಭೂಷಿತವಾದ ಮಹಾದ್ವಾರದಿಂದ ಮಠದ ಆವಾರದೊಳಗೆ ಬಂದರು.

ಆ ಪವಿತ್ರ ಸ್ಥಳವನ್ನು ಗೋಮಯದಿಂದ ಸಾರಿಸಿ,ರಂಗವಲ್ಲಿಗಳಿಂದ ಅಲಂಕರಿಸಿದ್ದರು. ಕಾರ್ಯನಿಷ್ಠರು ತಮ್ಮ ತಮ್ಮ ಕಾರ್ಯಗಳಿಗಾಗಿಯೂ, ಸೇವಾತತ್ಪರರು ತಮ್ಮ ತಮ್ಮ ಸೇವಾ ಕಾರ್ಯಗಳ ಸಲುವಾಗಿಯೂ ಚಟವಟಿಕೆಯಿಂದ ಒಡಾಡುತ್ತಲಿದ್ದರು. ವಾದ್ಯಗಳ ಮಂಗಳ ಧ್ವನಿಯೂ, ನಾಮಘೋಷದ ಗಂಭೀರ ಧ್ವನಿಯೂ, ಕರತಲಗಳ ಕರ್ಕಶ ಧ್ವನಿಯೂ, ಪ್ರಭಾತ ಸ್ತೋತ್ರಗಳ ಇಂಪಾದ ಧ್ವನಿಯೂ ಕರ್ಣರಂಧ್ರವನ್ನು ಪ್ರವೇಶಿಸಿ, ಸಂಸಾರ-ಶ್ರಾಂತರ ಮನಸ್ಸನ್ನು ವಿಲಕ್ಷಣ ರೀತಿಯಿಂದ ಉತ್ಸಾಹಗೊಳಿಸುತ್ತಿದ್ದವು. ಸೂರ್ಯೋದಯ ಸಮಯವು ತೀರ ಸಮೀಪಿಸಿದ್ದು, ದಿವಾಕರ ಗೋಸಾವಿಯ ಕೀರ್ತನವು ಅದೇ ಮುಗಿದು, ಕಕ್ಕಡದ ಆರುತಿಯು ಅದೇ ಆಗಿ ಸ್ವಲ್ಪ ಹೊತ್ತು ಆಗಿತ್ತು. ಕಲ್ಯಾಣ ಸ್ವಾಮಿಗಳು ಸಮರ್ಥರ ಸಮಾಧಿಯ ಕಡೆಗೆ ಅದೇ ಹೊರಟಿದ್ದರು. ಅವರ ಸುತ್ತುಮುತ್ತು ಮಹಾಂತರ ದಟ್ಟಣೆಯು ವಿಶೇಷ ವಾಗಿತ್ತು; ಆದರೂ ರಂಗನಾಥ ಸ್ವಾಮಿಗಳು ಕಣ್ಣಿಗೆ ಬಿದ್ದ ಕೂಡಲೆ ಕಲ್ಯಾಣ ಸ್ವಾಮಿಗಳು

ಅವರಿಗೆ ದೀರ್ಘದಂಡವತ್ ನಮಸ್ಕಾರ ಮಾಡಿದರು. ಆಮೇಲೆ ಸಮರ್ಥರು ಹೊಸದಾಗಿ ಬಂದಿರುವ ಆ ರಾಜಪರಿವಾರ ವನ್ನು ಕಲ್ಯಾಣ ಸ್ವಾಮಿಗಳ ಚರಣಗಳಿಗೆ ಕೆಡವಿದರು. ಕಲ್ಯಾಣ ಸ್ವಾಮಿಗಳು ಎಲ್ಲರ ಪರಾವರ್ಶವನ್ನು ಉತ್ತಮರೀತಿಯಿಂದ ಮಾಡಿ, ಅವರ ಬಳಿಗೆ ಎಷ್ಟೋ ಪಾರಪತ್ಯಗಾರರನ್ನು ಕಳಿಸಿದರು. ಎಲ್ಲರೂ ತಮ್ಮ ತಮ್ಮ ಸ್ಥಳಗಳಲ್ಲಿ ಎಲ್ಲ ಅನುಕೂಲತೆ ಮಾಡಿಕೊಂಡು ಕುಳಿತುಕೊಳ್ಳುತ್ತಿರಲು, ಸ್ನಾನಮಾಡುವದಕ್ಕಾಗಿ ಸೂಚನೆಯು ಮಾಡ ಲ್ಪಟ್ಟಿತು. ಸಮರ್ಥರ ಸಂಗಡ ಎಲ್ಲರ ಸ್ನಾನವಾಗಬೇಕಾಗಿತ್ತು, ಸಮರ್ಥರು ಸ್ನಾನಮಾಡುವ ಸ್ಥಳದಲ್ಲಿ ಜನರ ದಟ್ಟಣೆಯು ವಿಶೇಷವಾಗಿ, ಜನರ ಸಂದಣಿಯಲ್ಲಿಯೇ ಎಲ್ಲರ ಸ್ನಾನ ವಾಯಿತು. ಇಂದು ಕಲ್ಯಾಣ ಸ್ವಾಮಿಗಳು ಸಮರ್ಥರಂಗನಾಥ ಸ್ವಾಮಿಗಳ ಪಾದಪೂಜೆ ಮಾಡುವವರಿದ್ದರು. ಸಮರ್ಥರ ಆ ಪಾದಪೂಜೆಯ ಸಮಾರಂಭವನ್ನು ಎಲ್ಲ ಜನರು ಭಕ್ತಿ ಪರವಶರಾಗಿ ನೋಡುತ್ತಲಿದ್ದರು. ಶ್ರೀಗಳ ಆರತಿಯಾಗು ವಾಗ ನಗಾರಿ, ಶಂಖ, ಕರ್ಣೆ, ತುತೂರಿ, ಕಹಳೆ, ತಾಳ, ಮೃದಂಗ ಮೊದಲಾದವುಗಳ ಧ್ವನಿಗಳಿಂದ ಕಿವಿಗಳು ಗಡಚಿಕ್ಕಿದವು. ಆಮೇಲೆ ದೇವರಿಗೆ ನೈವೇದ್ಯ ಸಮರ್ಪಣವಾಯಿತು; ಫಲಗಳನ್ನು ವಿಪುಲವಾಗಿ ಸಮರ್ಪಿಸಿದರು; ಎಲ್ಲರೂ ದೇವರಿಗೆ ನಮಸ್ಕಾರ ಮಾಡಿದರು.

ತರುವಾಯ ಕಲ್ಯಾಣ ಸ್ವಾಮಿಗಳು ಪುರಾಣದ ಒಂದು ಅಧ್ಯಾಯವನ್ನು ಹೇಳಿದರು. ಕಥಾಶ್ರವಣದಲ್ಲಿ ಜನರ ಮನಸ್ಸುಗಳು ತಲ್ಲೀನವಾದವು. ಪುರಾಣವು ಮುಗಿದ ಕೂಡಲೆ ಅಡಿಗೆಯು ಸಿದ್ಧವಾಗಿರುವ ವರ್ತಮಾನವು ಬಂದಿತು. ಕೂಡಲೆ ಎಲ್ಲರೂ ಶ್ರೀಸಮರ್ಥ ರಾಮ ದಾಸ ಸ್ವಾಮಿಗಳ ಸಮಾಧಿಯ ಪೂಜೆಗಾಗಿ ಹೋದರು. ಅಲ್ಲಿ ಯಥಾಸಾಂಗ ಪೂಜೆಯಾದ ಬಳಿಕ ಹಲವು ಮಾನಕರಿಗಳು ಸಮಾಧಿಗೆ ಗಂಧವನ್ನು ಲೇಪಿಸಿದರು. ಕೆಲವರು ಪುಷ್ಪಮಾಲೆ ಗಳನ್ನು ಹಾಕಿದರು, ಕೆಲವರು ಸಹಸ್ರ ತುಲಸೀದಳಗಳನ್ನು ಏರಿಸಿದರು. ಈ ಕಾಲದಲ್ಲಿ ರಾಜಾರಾಮ ಮಹಾರಾಜರು ಕೇವಲ ಭಕ್ತಿಪರವಶರಾಗಿದ್ದರು. ಶ್ರೀಸಮರ್ಥರ ಸಮಾಧಿಯು, ಸಂಪೂರ್ಣ ವಾಗಿ ಮಹಾರಾಜರ ಚಿತ್ತಹರಣ ಮಾಡಿದಂತೆ ತೋರಿತು. ಮಹಾರಾಜರು ಲಜ್ಜೆ ದೊರೆದು ಆನಂದದಿಂದ ತಲೆದೂಗತ್ತ ಕುಳಿತುಕೊಂಡಿದ್ದರು; ಅವರ ಕಣ್ಣುಗಳೊಳಗಿಂದ ಘಳ ಘಳನೆ ನೀರುಗಳು ಸುರಿಯುತ್ತಲಿದ್ದವು. ಛತ್ರಪತಿಯ ಈ ತಲ್ಲೀನ ಸ್ಥಿತಿಯು ರಂಗನಾಥ ಸ್ವಾಮಿಗಳ ದೃಷ್ಟಿಗೆ ಬೀಳದೆ ಹೋಗಲಿಲ್ಲ. ಆಗ ಅವರು ಕಲ್ಯಾಣಸ್ವಾಮಿಗಳನ್ನು ಕುರಿತು ಆಜ್ಞಾಪಿಸಿದರೇ ನಂದರೆ—ಕಲ್ಯಾಣ ಕಲ್ಯಾಣ, ಸಮರ್ಥರ ಮನೋದಯವನ್ನು ಛತ್ರಪತಿಗೆ ತಿಳಿಸುವ ಸಮಯ ವಾಯಿತು. ಕರೆ ಉದ್ಧವನು ಎಲ್ಲಿ ಇದ್ದಾನೆ? ಸಮರ್ಥರು ಸಮಾಧಿಸ್ಥರಾದ ರೆಂದು ಈ ವೀರರು, ಮುಗಿಬಿದ್ದು ಯುದ್ಧಮಾಡುವ ಈಗಿನ ಪ್ರಸಂಗದಲ್ಲಿ ಕೈಕಾಲುಗೆಟ್ಟು ಕುಳಿತುಕೊಂಡಿರುತ್ತಾರೆ; ಇವರಲ್ಲಿ ವೈರಾಗ್ಯವು ಉತ್ಪನ್ನವಾಗಿರುತ್ತದೆ; ಇವರು ತಮ್ಮ ಜೀವಕ್ಕೆ ಬೇಸತ್ತಿರುತ್ತಾರೆ. ಆದ್ದರಿಂದ ಉದ್ಧವ ಸ್ವಾಮೀ, ಇನ್ನು ನೀವು ಇವರಿಗೆ ಸಮರ್ಥರ ಸಂದೇಶ ವನ್ನು ಹೇಳಿರಿ.

ಶ್ರೀ ರಂಗನಾಥ ಸ್ವಾಮಿಗಳು ಹೀಗೆ ಆಜ್ಞಾಪಿಸಿದ ಕೂಡಲೆ—ಇಂದು ಊಟಕ್ಕೆ ಸ್ವಲ್ಪ ತಡವಾಗುವದೆಂದು ಹೇಳಿಕಳಿಸಿ, ಉದ್ಧವಸ್ವಾಮಿಗಳು ರಾಜಾರಾಮ ಮಹಾರಾಜರ ಬಳಿಗೆ ಬಂದು ವಾತ್ಸಲ್ಯದಿಂದ ಅವರ ಕಣ್ಣೀರು ಒರಿಸಿದರು. ಸತ್ಪುರುಷರು ಮಾಡಿದ ಈ ಪರಿಯ ಪ್ರೇಮ ದಿಂದಂತು ಮಹಾರಾಜರ ದುಃಖವು ಒತ್ತರಿಸಿತ್ತು ಅತ್ತ ರಾಮಚಂದ್ರಪಂತ, ಪ್ರಲ್ಹಾದ ಪಂತ, ಸಂತಾಜಿ, ಧನಾಜಿ, ಮೊದಲಾದವರು ತಮ್ಮ ಗಾಂಭೀರ್ಯವನ್ನು ತೊರೆದು ಮೋರೆಗೆ ಶರಗುಹಾಕಿ ದುಃಖಿಸಹತ್ತಿದ್ದರು; ಪ್ರಿಯ ವಾಚಕರೇ, ಮೋಕ್ಷದಾತೃವಾದ ಸದ್ಗುರುವು ಹಡೆದ ತಾಯಿಗಿಂತ ಅಧಿಕನಲ್ಲವೆ? ಅಂದಬಳಿಕ ಆತನ ಸನ್ನಿಧಿಯಲ್ಲಿ ಶಿಷ್ಯರ ಹೊಟ್ಟೆಯೊಳಗಿನ ದುಃಖವು ಹೊರಬೀಳದೆ ಹ್ಯಾಗೆ ಉಳಿಯಬೇಕು? ರಾಜಾರಾಮ ಮಹಾರಾಜರು ಸದ್ಗದಿತ ಕಂಠದಿಂದ ಎದ್ದುನಿಂತು ಉದ್ಧವ ಗೋಸಾವಿಯ ಚರಣಧೂಲಿಯನ್ನು ಮಸ್ತಕದಲ್ಲಿ ಧರಿಸಿ ಕೊಂಡರು. ಒತ್ತರಿಸಿದ್ದ ದುಃಖದಲ್ಲಿ ಅವರ ಮುಖದಿಂದ ಮಾತುಗಳು ಹೊರಡಲೊಲ್ಲವು; ಆದರೆ ಅವರು ಬಹು ಕಷ್ಟದಿಂದ ನುಡಿದರೇನಂದರೆ— ''ಸಮರ್ಥಾ, ಸಜ್ಜನಾ, ಘರ್ಜಂದಾ, ಆಬಾಸಾಹೇಬರ ಮಸ್ತಕದ ಮೇಲೆ ನಿನ್ನ ವರದ ಹಸ್ತವಿರುತ್ತಿರಲು, ಇಂದು ನಮ್ಮ ಗತಿಯು ಹೀಗೆ ಯಾಕಾಯಿತು? ಕೀರ್ತಿವಂತಾ, ಜಿಂದಾ, ನಿನ್ನ ಹಾಗು ದೇವಿಯ ಕೃಪಾಪ್ರಸಾದದಿಂದ ರಾಜ್ಯವು ಪ್ರಾಪ್ತವಾಯಿತು. ಯಾವ ದೇಶದಲ್ಲಿ ಆಬಾಸಾಹೇಬರ ಹಕ್ಕು ಇರಲಿಕ್ಕಿಲ್ಲವೋ,ಆ ದೇಶ ದೊಳಗಿನದೊಂದು ಊರನ್ನು ನೀನು ಭಿಕ್ಷೆಯ ಬೇಡಬೇಕು, ಆಬಾಸಾಹೇಬರು ನಿಶ್ಶಂಕೆ ಯಿಂದ ಆ ಊರ ದಾನಪತ್ರದ ಸನದನ್ನು ಮಾಡಿ ನಿನ್ನ ಜೋಳಿಗೆಯಲ್ಲಿ ಹಾಕಬೇಕು. ಆಮೇಲೆ ಆ ಊರತನಕ ಮಹಾರಾಜರ ರಾಜ್ಯವು ಹಬ್ಬಬೇಕು! ಇಂಥ ಲೀಲೆಯನ್ನು ಶ್ರೀ ಸದ್ಗುರುನಾಥನು ನೀನು ಆಡಲಿಲ್ಲವೆ? ಉದ್ಧವದೇವಾ, ಸಮರ್ಥಾ, ಆಬಾಸಾಹೇಬರ ಅವತಾರ ಸಮಾಪ್ತಿಯ ಕಾಲವು ಒದಗಿರುವಾಗ, ನೀವು ಚಿಂತಾಕ್ರಾಂತರಾಗಿ ''ಇನ್ನು ಮುಂದೆ ಹ್ಯಾಗಾಗುವ ದೆಂದು'' ಕೇಳಲು, ಶ್ರೀ ಸಮರ್ಥರು ನಿಮ್ಮ ಸಮಾಧಾನ ಮಾಡಿದರು; ಆದರೆ ಈಗ ನಾನು ಯಾರ ಮೋರೆಯ ಕಡೆಗೆ ನೋಡಲಿ? ಈ ದೀನಮುಖವನ್ನು ಯಾರ ಮುಂದೆ ತರೆಯಲಿ? ಇನ್ನು ನಾನು ಯಾರಿಗೆ ಶರಣು ಹೋಗಲಿ?ಶ್ರೀಸಮರ್ಥದೇವಾ, ''ಮಾಝೀಕಾಯಾ ಗೇಲಿ ಖರಿ। ಮಿ ಆಹೆ ಜಗನ್ತರಿ'' ಅಂದರೆ— ''ನನ್ನ ದೇಹವು ಹೋದದ್ದೇನೋ ನಿಜ; ಆದರೆ ನಾನು ಜಗದಂತರದಲ್ಲಿ ಇದ್ದೇ ಇರುವೆನು'' ಎಂದು ಹೇಳಿ, ವಚನಕೊಟ್ಟು ನೀನು ನಮ್ಮನ್ನು ಬಿಟ್ಟು ಹೋಗಲಿಲ್ಲವೆ? ಅಂದಬಳಿಕ ಈಗ ನಾನು ನಿನ್ನನ್ನು ಎಲ್ಲಿ ಕಾಣಬಹುದು? ನಿನ್ನ ವಾಣಿಗೆ ಅಸತ್ಯದ ಕಲೆಯನ್ನು ಕೆಡವುವೆಯೋ ಏನು? ವಿಜಯವಂತನೇ, ಸಮರ್ಥನೇ, ಮಹಾ ಬಲಿಷ್ಠನಾದ ಶತೃವು ನಮ್ಮನ್ನು ಅಡವಿಗಟ್ಟಿ ದ್ದಾನಲ್ಲವೇ? ಅಂದಬಳಿಕ ನಮ್ಮ ಬಾಲ ಶಿವಾಜಿಯ ಹಾಗು ನನ್ನ, ಅದರಂತೆ ನನ್ನ ರಾಜ್ಯದ ರಕ್ಷಣವನ್ನು ಯಾರು ಮಾಡುವರು? ಇನ್ನು ಮೇಲೆ ನಮ್ಮೆಲ್ಲರ ಲಜ್ಜೆಯು ನಿನ್ನದೇ ಸರಿ!

ರಾಜರಾಮ ಮಹಾರಾಜರ ಭಕ್ತಿರಸಪ್ರೇರಿತವಾದ ಈ ಮಾತುಗಳನ್ನು ಕೇಳಿ ಉದ್ಧವ ಸ್ವಾಮಿಯು ಅತ್ಯಂತ ವಾತ್ಸಲ್ಯದಿಂದ—ರಾಜಾರಾಮನೇ, ಒರೆಗೆ ಹತ್ತುವ ಪ್ರಸಂಗದಲ್ಲಿ

ನಿನ್ನ ಚಿತ್ತವು ಹೀಗೆ ಚಂಚಲವು ಯಾಕಾಯಿತು? ರಾಜ್ಯದ ಪ್ರಾಣಪ್ರತಿಷ್ಠಾಪನೆಯನ್ನು ಮಾಡಿದವನಿಗೆ ಅದರ ಯೋಗಕ್ಷೇಮದ ಚಿಂತೆಯು ಇದ್ದೇ ಇರುತ್ತದೆ. ಸಮರ್ಥರು ತಾವು ಕೈಮುಟ್ಟಿ ಅಸ್ತಿವಾರ ಹಾಕಿಸಿದ ರಾಜ್ಯರೂಪವಾದ ಮಂದಿರವನ್ನು ಪೂರ್ಣಮಾಡಿಸದೆ ಅರ್ಧಕ್ಕೆ ಬಿಟ್ಟು ಹೋಗಬಹುದೇ? ನನ್ನ ಗುರು ಬಂಧುವಾದ ಶಿವಬಾನು ತನ್ನ ಅವತಾರ ಸಮಾಪ್ತಿಯ ಚಿನ್ಹಗಳನ್ನು ಪ್ರಕಟಮಾಡಿದಾಗ, ನಿನ್ನ ಹಾಗೆ ನಾನೂ ಚಿಂತೆಯೊಳಗಾಗಿ ಶ್ರೀ ಗುರುವನ್ನು ಕೇಳಿಕೊಂಡೆನು. ಅದಕ್ಕೆ ಸದ್ಗುರುನಾಥನು ಶಾಂತವಾದ ಗಂಭೀರಸ್ವರದಿಂದ— ''ಉದ್ಧವ, ಧರ್ಮಸ್ಥಾಪನೆಯ ಕಾರ್ಯವು ನಿಲ್ಲುವದೆಂದು ತಿಳಿಯಬೇಡ. ವ್ಯಕ್ತಿಯ ಸಲುವಾಗಿ ಯಾವ ಕಾರ್ಯಗಳೂ ತಡೆದು ನಿಲ್ಲುವದಿಲ್ಲ. ಶಿವಾಜಿಯಾದರೂ ಈಗಲೇ ತನ್ನ ಪೂರ್ವಸ್ಥಳಕ್ಕೆ ಹೋಗುವದಿಲ್ಲ, ಪುನಃ ಆತನು ಇದೇ ಭೋಸಲೆ ಕುಲದಲ್ಲಿ ಹುಟ್ಟಿ, ಮ್ಲೇಂಛರ ಉಪದ್ರವದ ನಿವಾರಣ ಮಾಡುವನು. ಬಳಿಕ ನಿಷ್ಕಂಟಕ ರಾಜ್ಯವನ್ನು ಕೆಲವು ದಿವಸ ಆಳಿ, ಐಶ್ವರ್ಯವನ್ನು ಭೋಗಿಸಿ ತಿರುಗಿ ಬ್ರಾಹ್ಮಣ ಜನ್ಮವನ್ನು ಸ್ವೀಕರಿಸುವನು. ಆಮೇಲೆ ಆತನು ಬದರೀ ಕೇದಾರಾಶ್ರಮಕ್ಕೆ ಹೋಗಿ ಯೋಗ ಸಾಧನವನ್ನು ಮಾಡಿದ ನಂತರ ತನ್ನ ಪೂರ್ವಸ್ಥಳಕ್ಕೆ ಹೋಗುವನು,'' ಎಂದು ಹೇಳಿದರು. ಅದರಂತೆ ರಾಜಾರಾಮಾ, ಶ್ರೀಗಳವರು ತಾವು ಸ್ವತಃನಾಶಿಕದಿಂದ ಕರವೀರ ಕ್ಷೇತ್ರದವರೆಗಿನ ಪ್ರದೇಶದಲ್ಲಿ ಇರುತ್ತೇವೆಂದು ಹೇಳಿರುತ್ತಾರೆ. ಅದರಿಂದಲೇ ಆ ಪ್ರದೇಶಕ್ಕೆ ''ಆನಂದಭವನ'' ಎಂಬ ಹೆಸರನ್ನು ಕೊಟ್ಟಿರುತ್ತದೆ. ಸದ್ಯಕ್ಕೆ ಶ್ರೀಗಳು ಪಂಚವಟಿಯಲ್ಲಿ ವಾಸವಾಗಿರುವರು. ಆದ್ದರಿಂದ ಛತ್ರಪತಿಯೇ, ನೀನು ಧೈರ್ಯಗೆಡಬೇಡ. ಧನಾಜಿ, ಸಂತಾಜಿಯಂಥ ಶಕ್ತಿಯ, ಹಾಗು ಪ್ರಲ್ಹಾದಪಂತ–ರಾಮಚಂದ್ರಪಂತರಂಥ ಯುಕ್ತಿಯ ಜೋಡು ನಿನ್ನ ಬಳಿಯಲ್ಲಿರುತ್ತಿರಲಿಕ್ಕೆ ನೀನು ಇಷ್ಟು ನಿರಾಶಪಡುವದೇಕೆ? ರಾಜಾರಾಮಾ, ಪ್ರಸಂಗದಲ್ಲಿ ಕೈಕಾಲುಗೆಡುವವನನ್ನು ಆತ್ಮಘಾತಕಿಯೆಂದು ತಿಳಿಯತಕ್ಕದ್ದು. ''ನೀವು ಜಗತ್ತನ್ನು ಉದ್ಧರಿಸುವ ಕಾರ್ಯವನ್ನು ಮಾಡುತ್ತೀರಿ. ನಿಮ್ಮ ಶರೀರಗಳು ನಮ್ಮ ಶರೀರಗಳಾಗಿರುವವು.'' ಎಂದು ಸಮರ್ಥರು ಆಡಿದ ಮಾತಿನ ರಹಸ್ಯವನ್ನು ತಿಳಿದು,ಈಗ ಲೋಕಸಂಗ್ರಹ ಮಾಡುವದು ನಿನಗೆ ಅವಶ್ಯವಾಗಿರುತ್ತದೆ. ಅವರವರ ಗುಣಪರೀಕ್ಷೆ ಯನ್ನು ಮಾಡಿ, ಹತ್ತರ ಇಟ್ಟು ಕೊಳ್ಳುವವರನ್ನು ಹತ್ತರ ಇಟ್ಟುಕೋ, ದೂರ ಇಡುವವರನ್ನು ದೂರ ಇಡು.

ಇಂಥ ಕಠಿಣ ಪ್ರಸಂಗದಲ್ಲಿ ಲೋಕಾರಾಧನೆಯನ್ನು ಮಾಡುವಾಗ ನೀನು ಕಷ್ಟವನ್ನೂ, ಅಪಮಾನವನ್ನೂ ಸಹಿಸಬೇಕಾಗುವದು. ಮಾನಾಪಮಾನಗಳು ಅವರವರ ಒಳ್ಳೆಯ ಕೆಡಕು ಕೃತಿಗಳಿಂದ ಆಗುತ್ತವಲ್ಲದೆ, ಸ್ವೀಕೃತ ಕಾರ್ಯವನ್ನು ಸಾಧಿಸುವಾಗ ಮಾಡುವ ಪ್ರಯತ್ನಗಳಿಂದ ಆಗುವದಿಲ್ಲ, ಪ್ರಜೆಗಳಿಂದ ಪ್ರಾಪ್ತವಾಗುವ ಐಶ್ವರ್ಯವನ್ನೂ,ಅಧಿಕಾರವನ್ನೂ ಭೋಗಿಸುವ ಅರಸನು, ಪ್ರಜೆಗಳೊಡನೆ ಕೂಡಿ ನಡೆಯಬೇಕು; ಅವರ ಅಭಿಪ್ರಾಯವನ್ನು ಕೇಳಿಕೊಳ್ಳಬೇಕು; ಯೋಗ್ಯಮಾತಿನಲ್ಲಿ ಅವರನ್ನು ತಾನು ಅನುಸರಿಸಲಿಯೂ ಬೇಕು. ಸದ್ಯಕ್ಕೆ ನೀನು ಕೈಕೊಂಡಿರುವ ಮಹಾಕಾರ್ಯಕ್ಕೆ ತಿಳುವಳಿಕೆಯ ಜನರ ಸಹಾಯವು ಅವಶ್ಯವಾಗಿ

ಬೇಕಾಗಿರುತ್ತದೆ; ಅಂಥವರ ಸಂಗ್ರಹವನ್ನು ನೀನು ಮಾಡು. ಮಹಾಕಾರ್ಯವನ್ನು ಸಾಧಿಸುವ ನೀನು ಜಾತಿಗಳ ನೀಚತ್ವ ವನ್ನೂ, ಉಚ್ಚತ್ವವನ್ನೂ ಮನಸ್ಸಿನಲ್ಲಿ ತರಲಾಗದು. ಇವರು ಹೊಲಿಯರು, ಇವರು ಮಾದಿಗರು, ಇವರು ಕಟುಕರು ಎಂದು ಯಾರನ್ನೂ ತಿರಸ್ಕರಿಸ ತಕ್ಕದ್ದಲ್ಲ. ಕಾರ್ಯಸಾಧಕನಾದ ನಿನ್ನನ್ನು ಜನರು ಒಮ್ಮೊಮ್ಮೆ ತಿರಸ್ಕರಿಸಬಹುದು. ಒಮ್ಮೊಮ್ಮೆ ಅವಮಾನಗೊಳಿಸಬಹುದು; ಒಮ್ಮೊಮ್ಮೆ ಪೀಡಿಸಲೂಬಹುದು; ಆದರೆ ನೀನು ಅವನ್ನು ಪ್ರಸಂಗನೋಡಿ ಸಹಿಸ ಬೇಕಾಗುವದು; ಪ್ರಸಂಗನೋಡಿ ಅವುಗಳ ಪ್ರತೀಕಾರವನ್ನು ಮಾಡ ಬೇಕಾಗಬಹುದು; ನಾನಾಜಾತಿಯ, ನಾನಾಮತದ, ನಾನಾ ಅಂತಃಕರಣದ ಲೋಕ ಸಮುದಾಯವನ್ನು, ತನ್ನದನ್ನಾಗಿ ಮಾಡಿಕೊಳ್ಳಲಿಕ್ಕೆ ಸವಿ ಮಾತಿನ ಅವಶ್ಯಕತೆಯು ವಿಶೇಷ ವಾಗಿರುವದು.

ರಾಜಾರಾಮಾ, ಇಂಥ ವಿಪತ್ಕಾಲದಲ್ಲಿ ನನಗೆ ಯಾರು ಸಹಾಯಮಾಡುವರೆಂದು ನೀನು ನಿರಾಶಪಡಬೇಡ. ಪರಿಸ್ಥಿತಿಯಿಂದ ತೇಜೋಹೀನನಾಗುವ ದುರ್ಬಲ ಲೋಕ ನಾಯಕನ ಮಾತನ್ನು ಯಾರು ಮನ್ನಿಸುವರು? ಛೇ, ರಾಜಾರಾಮಾ, ಲೋಕನಾಯಕನ ಅಧಿಕಾರವು ಎಂಥ ಕಠಿಣ ಪ್ರಸಂಗದಲ್ಲಿಯೂ ಕುಗ್ಗಲಾಗದು. ಅದು ಸಂಪೂರ್ಣವಾದ ನೈತಿಕ ಬಲದಿಂದ ಅತ್ಯಂತ ಬಲಿಷ್ಠವಾಗಿರಬೇಕು. ಸಮರ್ಥರು ಅವತರಿಸಿ ಲೋಕವನ್ನು ಉದ್ಧರಿಸಲಿಕ್ಕೆ, ದೇಶದಲ್ಲಿ ಸಂಚರಿಸಿದಾಗ ಅವರ ಕಣ್ಣಿಗೆ–ದರಿದ್ರರು, ಕುರೂಪಿಗಳು, ವಿಕಾರಿಗಳೇ ಮೊದಲಾದವರು ಒಂದೇಸವನೆ ಕಣ್ಣಿಗೆ ಬೀಳಲು, ಅವರು ಆಶ್ಚರ್ಯಪಟ್ಟರು. ಆದರೆ ಅವರು ಹತಾಶರಾಗಿ ತಮ್ಮ ಲೋಕೋದ್ಧಾರದ ಕಾರ್ಯವನ್ನು ನಿಲ್ಲಿಸಿ ಬಿಡಲಿಲ್ಲ. ಅವರು ಪ್ರತ್ಯಕ್ಷ ಈಶ್ವರನ ಮೇಲೆ ಎಲ್ಲ ಭಾರವನ್ನು ಹಾಕಿ, ಅರವುಗೆಟ್ಟಿದ್ದ ಜನರನ್ನು ಅಲ್ಲಾಡಿಸಿ ಎಬ್ಬಿಸುವದಕ್ಕಾಗಿ ತಮ್ಮ ಶಿಷ್ಯರನ್ನು ನಾಲ್ಕೂ ಕಡೆಗೆ ಹರವಿದರು. ಅವರು ಎಪ್ಪತ್ತೆರಡು ಜನ ಬ್ರಹ್ಮಚಾರಿಗಳಾದ ಮಹಾಂತರನ್ನು ನಿರ್ಮಾಣ ಮಾಡಿ, ಈ ಆನಂದ ಭವನದಲ್ಲಿ (ಮಹಾರಾಷ್ಟ್ರದಲ್ಲಿ) ಅಲ್ಲಲ್ಲಿ ಹರಡಿರುವರು. ಸಮರ್ಥರ ಈ ಸಚ್ಛಿಷ್ಯರು ಜನರಲ್ಲಿ ಭಗವದ್ಭಕ್ತಿಯನ್ನು ಹೆಚ್ಚಿಸಿದರು. ಹರಿಕಥಾಶ್ರವಣದಲ್ಲಿ ಅವರಿಗೆ ಲೌಕಿಕ ಪರಿಸ್ಥಿತಿಯು ಗೊತ್ತಾಗುವಂತೆ ಮಾಡಿದರು. ಅಲ್ಲಲ್ಲಿ ದೇವರ ಮೂರ್ತಿಗಳನ್ನು ಸ್ಥಾಪಿಸಿ, ಉತ್ಸವಗಳನ್ನು ಮಾಡಹತ್ತಿದರು. ಈ ಬಗೆಯಾಗಿ ಜನರ ಗುರುತು ಮಾಡಿಕೊಂಡು, ಜನರಲ್ಲಿ ಜಾಗ್ರತೆಯನ್ನುಂಟುಮಾಡಿ, ಅವರಿಗೆ ಸ್ವಹಿತದ ಜ್ಞಾನವನ್ನು ಮಾಡಿಕೊಟ್ಟರು. ಅಲ್ಲಲ್ಲಿ ಮಾರುತಿಯ ದೇವಾಲಯಗಳನ್ನು ಸ್ಥಾಪಿಸಿ, ಜನರ ಶಕ್ತಿಯನ್ನು ಬೆಳೆಸುವದಕ್ಕಾಗಿ ಅಲ್ಲಲ್ಲಿ ಗರಡಿಯ ಮನೆಗಳನ್ನು ಮಾಡಿದರು. ಈ ಮೇರೆಗೆ ಸಮರ್ಥರು ಎಲ್ಲರ ಚಿಂತೆಯನ್ನು ವಹಿಸಿ, ಎಲ್ಲರನ್ನು ಬುದ್ಧಿವಂತರಾಗಮಾಡುವ ಆಪಾಢ್ಯವು ಪ್ರಯತ್ನವನ್ನು ಮಾಡಿದರು. ರಾಜಾರಾಮಾ ಸಮರ್ಥರು ಮಾಡಿರುವ ಈ ಘನತರವಾದ ಉದ್ಯೋಗದ ಫಲವು ನಿನಗೆ ಸಿಗಲಿಕ್ಕಿಲ್ಲೆಂದು ತಿಳಿಯಬೇಡ. ನೀನು ಮುಂದಕ್ಕೆ ಸಾಗಿ ವಿಜಾಪುರ, ನಾಶಿಕ, ಕೊಲ್ಲಾಪುರ, ಸೊಲ್ಲಾಪುರ, ಖಾನದೇಶ, ತಂಜಾವರ ಮೊದಲಾದ ಬೇಕಾದ ಸ್ಥಳಗಳಿಗೆ ಹೋಗು; ಅಲ್ಲಿ

ರಾಮದಾಸರ ಮಹಾಂತರು ನಿನ್ನನ್ನು ಕಾಣಬಹುದು. ನಿನ್ನ ಸಲುವಾಗಿ ಅವರು ಭೂಮಿಯನ್ನು ಗೇದು ಹದಮಾಡಿ ಇಟ್ಟಿರುವರು. ಉತ್ತರದಲ್ಲಿ ಬದರೀ ಕೇದಾರ-ಬದರೀ ನಾರಾಯಣ, ದಕ್ಷಿಣದಲ್ಲಿ ರಾಮೇಶ್ವರ, ಪೂರ್ವದಲ್ಲಿ ಜಗನ್ನಾಥ ಪಶ್ಚಿಮದಲ್ಲಿ ದ್ವಾರಕಾ ಹೀಗೆ ವಿಸ್ತಾರವಾದ ಚತುಸ್ಸೀಮೆಯಲ್ಲಿ ಸಮರ್ಥರು ತಮ್ಮ ಕಾರ್ಯಕಾರಿ ಮಂಡಲಿಯನ್ನು ವಿಸ್ತರಿಸಿರುವರು. ಬಹಳ ಹೇಳುವದೇನು? ನಿನ್ನ ಶತ್ರುವಾದ ಔರಂಗಜೇಬನ ಮರ್ಮ ಸ್ಥಾನಕ್ಕೂ ಮಹಾಂತರು ಕೈ ಹಾಕಿರುವರು. ಔರಂಗಬಾದಾ, ವರಹಾಡ, ಬೀದರ, ವಿಜಾಪೂರ, ಹೈದರಾಬಾದ, ಅಹಮ್ಮದನಗರ ಮೊದಲಾದ ಮುಸಲ್ಮಾನರ ಸ್ತೋಮವು ಹೆಚ್ಚಾಗಿರುವಲ್ಲಿ ಸಹ ಮಹಾಂತರು ನಿಮ್ಮ ಸಲುವಾಗಿ ಭೂಮಿಯನ್ನು ಸಿದ್ಧಮಾಡಿ ಇಟ್ಟಿರುವರು. ಒಟ್ಟಿಗೆ ಕ್ಷತ್ರಿಯರಾದ ನೀವು ಅಟಕದಿಂದ ರಾಮೇಶ್ವರದವರೆಗೆ ಬೇಕಾದಲ್ಲಿ ಹೋದರೂ ನಾವು ನಿಮ್ಮ ಕಾರ್ಯಕ್ಕೆ ಅನುಕೂಲ ಮಾಡಿ ಇಟ್ಟಿರುವೆವು!

ರಾಜಾರಾಮಾ,ಇಂಥ ಮಹಾತ್ಮರಾದ ಮಹಾಂತರ ಗುರುತು ನನಗೆ ಹ್ಯಾಗೆ ಆಗ ಬೇಕೆಂದು ನೀನು ಕೇಳುವಿಯೇನು? ಅವರೇನು ಮಹೇಂದ್ರನ ಐರಾವತವನ್ನೇರಿ ಮೆರೆಯ ತಕ್ಕವರಲ್ಲ. ಸಾಮರ್ಥ್ಯವಂತರೂ, ಬುದ್ಧಿವಂತರೂ, ದಯವಂತರೂ ಆದ ಈ ಮಹಾಂತರು ಸ್ವಾರ್ಥ ರಹಿತರೂ, ವಿರಾಗಿಗಳೂ, ನಿಸ್ಪೃಹರೂ ಆದ ಕಾರ್ಯಕರ್ತೃಗಳಿರುವರು. ಇವರ ವೇಷವು ಅತ್ಯಂತ ಹೀನವಾಗಿದ್ದರೂ, ಇವರಲ್ಲಿ ಘನತರವಾದ ಅನಂತ ಗುಣಗಳು ವಾಸಿಸುವವು. ಹಸಿವೆಯ ಮಟ್ಟಿಗೆ ಇವರು ಮನೆಮನೆಗೆ ಹೋಗುವರು. ಭಿಕ್ಷೆ ಸಿಗದಿದ್ದರೂ ಇವರಿಗೆ ಅದರ ಲಕ್ಷವಿಲ್ಲ. ಇಂದು ಇವರು ಇಲ್ಲಿ ಕಂಡರೆ, ನಾಳೆ ಇವರು ದೂರದಲ್ಲಿರುವ ಅನಪೇಕ್ಷಿತ ಸ್ಥಳದಲ್ಲಿ ಕಣ್ಣಿಗೆ ಬೀಳಬಹುದು; ಆದರೂ ಇವರು ಜಗದುದ್ಧಾರದ, ಹಾಗು ಸ್ವಧರ್ಮರಕ್ಷಣದ, ಅದರಂತೆ ಸ್ವರಾಜ್ಯ ಪ್ರತಿಷ್ಠಾಪನೆಯ ಕಾರ್ಯದ ಸಂಬಂಧದಿಂದ ಜನರ ಮನಸ್ಸನ್ನು ಪರಿಶುದ್ಧಗೊಳಿಸುವ ಕಾರ್ಯದಲ್ಲಿ ಯಾವಾಗಲೂ ತತ್ಪರರಾಗಿರುವರು. ರಾಜಾರಾಮಾ, ನಿನ್ನ ರಾಜ್ಯವನ್ನು ವಿಸ್ತರಿಸುವದಕ್ಕಾಗಿಯೂ, ಸಮರ್ಥರ ಅವತಾರ ಕೃತ್ಯವನ್ನು ಪೂರ್ತಿಗೊಳಿಸುವದಕ್ಕಾಗಿಯೂ, ಗೋ-ಬ್ರಾಹ್ಮಣರ ರಕ್ಷಣಕ್ಕಾಗಿಯೂ ಸಮರ್ಥ-ಸಂಪ್ರದಾಯವು ದೇಶದಲ್ಲಿ ಹಬ್ಬಿರುತ್ತದೆ; ಆದ್ದರಿಂದ ಛತ್ರಪತೀ, ನೀನು ಹೋದಲ್ಲಿ ನಿನಗೆ ಜನಸಹಾಯವು ದೊರೆಯುವದು, ಚಿಂತೆ ಮಾಡಬೇಡ. ನಿನ್ನ ವೈರಿಯಾದ ಔರಂಗಜೇಬನ ಬೆನ್ನಿಗೆ ತ್ರಿಖಂಡ ಸಾಮ್ರಾಜ್ಯದ ವೈಭವವಿದ್ದರೆ ರಾಜಾರಾಮಾ, ನಿನಗೆ ಬೆಂಬಲವಾಗಿ ಬಡಬಗ್ಗರದೇ ಆಗಲೊಲ್ಲದೇಕೆ, ಜನಸಮೂಹದ ನಿಜವಾದ ಅಂತಃಕರುಣವಿರುತ್ತದೆ!

ಇನ್ನು ಸಂತಾಜಿ, ಧನಾಜಿ, ನೀವು ಹೋದಲ್ಲಿ ಊರೂರಿಗೆ ಶೋಧಮಾಡಿರಿ. ತೀರ ಕುಗ್ರಾಮ ಕೊಂಪೆಯನ್ನೂ, ದೊಡ್ಡ ಪಟ್ಟಣವನ್ನೂ ಸರಿಯಾಗಿಯೇ ಶೋಧಿಸಿರಿ. ಅಲ್ಲಿಯ ಜನರ ಸಂಗಡ ಪ್ರೇಮಪೂರ್ವಕವಾಗಿ ಸಂಭಾಷಣ ಮಾಡಿ, ಸಹಾಯವನ್ನು ಬೇಡಿಕೊಂಡು ಲೋಕ ಸಂಗ್ರಹಮಾಡಿರಿ. ಪ್ರಹ್ಲಾದಪಂತ, ನೀವು ಮುತ್ಸದ್ದಿಗಳಿರುತ್ತೀರಿ. ರಾಮಚಂದ್ರ ಪಂತ, ನೀವಂತೂ ಸಮರ್ಥರ ಶಿಷ್ಯರೇ ಇರುವಿರಿ. ನೀವು ದೇಶದೇಶಗಳನ್ನು ಸಂಚರಿಸುವಾಗ ನಿಮ್ಮ ಚಾತುರ್ಯದಿಂದ ಆದಷ್ಟು ಲೋಕಸಂಗ್ರಹ ಮಾಡಿರಿ. ಅಂದರೆ ಪ್ರಯತ್ನಾಂತರದಲ್ಲಿ ನಿಮಗೆ

ಯಶಸ್ಸು ದೊರೆಯುವದು. ಪರಮೇಶ್ವರನ ಕೃಪೆಯು ನಿಮ ಪಾಲಿಗೆ ಇರುವದು. ಸಮರ್ಥರ ಲೋಕ ಸಂಗ್ರಹದ ಯಶಸ್ಸು ಕ್ಷತ್ರಿಯರಾದ ನಿಮ್ಮ ಕೈಯೊಳಗಿರುತ್ತದೆ. ಸಮರ್ಥರು ಮುಂದಾಗುವದನ್ನು ನನ್ನ ಮುಂದೆ ಹೇಳಿರುತ್ತಾರೆ. ಅದನ್ನು ನಾನು ಕಡೆಯ ಯಶಃಪ್ರಾಪ್ತಿಯ ದಿವಸ ನಿಮ್ಮೆಲ್ಲರ ಮುಂದೆ ಹೇಳಿ ನಿಮ್ಮನ್ನು ಪವಿತ್ರರನ್ನಾಗಿ ಮಾಡುವೆನು. ಏಳು, ರಾಜಾರಾಮಾ, ಸ್ವರಾಜ್ಯ ಸಂರಕ್ಷಣದ ಕಾರ್ಯವನ್ನು ಸಮರ್ಥರ ಸನ್ನಿಧಿಯಲ್ಲಿ ಕೈಕೊಳ್ಳು ಏಳು!

ಉದ್ಧವ ಸ್ವಾಮಿಯ ಈ ಶೃತಿತುಲ್ಯವಾದ ಅಮೃತವಾಣಿಯನ್ನು ಕೇಳಿ, ಎಲ್ಲ ರಾಜ ಪರಿವಾರದ ಉತ್ಸಾಹವು ಹೆಚ್ಚಿತು. ರಾಜಾರಾಮ ಮಹಾರಾಜರಂತೂ ಆನಂದಾಶ್ರುಗಳನ್ನು ಧರಿಸುತ್ತ ಎದ್ದು ನಿಂತು ಸಮರ್ಥರನ್ನು ಪ್ರಾರ್ಥಿಸಿದರು. ಆಗ ಸಮರ್ಥರು ಪಾದುಕದ ಮೇಲಿದ್ದ ಹೂವಿನ ಪ್ರಸಾದವು ಕೆಳಗೆ ಬಿದ್ದಿತು. ಅಕ್ಕನು (ಒಬ್ಬ ಸಂತಳು) ಕೂಡಲೆ ಅದನ್ನು ತಕ್ಕೊಂಡು ಫಲ–ಮಂತ್ರಾಕ್ಷತೆಯೊಡನೆ ಅದನ್ನು ರಾಜಾರಾಮ ಮಹಾರಾಜರ ಉಡಿಯಲ್ಲಿ ಹಾಕಿದಳು. ಅದನ್ನು ಮಹಾರಾಜರು ಭಕ್ತಿಯಿಂದ ಸ್ವೀಕರಿಸಿ, ಭೋಜನಾ ನಂತರ ಎಲ್ಲ ಸಂತಮಂಡಳಿಯು ಆಜ್ಞೆಯನ್ನು ಪಡೆದು ಪಲ್ಹಾಳಗಡದ ಕಡೆಗೆ ಸಾಗಿದರು.

## ವೀರಸ್ನುಷೆಯು!

ಈ ಮೇರೆಗೆ ರಾಜಾರಾಮ ಮಹಾರಾಜರು ತಮ್ಮ ಪರಿವಾರದೊಡನೆ ಪಲ್ಹಾಳಗಡಕ್ಕೆ ಸಾಗಿರಲು, ಇತ್ತ ರಾಯಗಡದಲ್ಲಿ ವೀರಸ್ನುಷೆಯಾದ ಏಸೂಬಾಯಿಯು ತನ್ನ ದುರ್ಗದ ಸಂರಕ್ಷಣದ ವಿಷಯವಾಗಿ ಅತ್ಯಂತ ಜಾಗರೂಕಳಾಗಿ ತನ್ನ ದುರ್ಗದ ಎಲ್ಲ ವ್ಯವಸ್ಥೆಯನ್ನು ತಾನು ಮೊದಲು ಒಮ್ಮೆ ಕಣ್ಣುಮುಟ್ಟಿ ನೋಡಬೇಕೆಂದು ಮಾಡಿದಳು. ಸಂಭಾಜಿಯ ಯೋಗ ದಿಂದ ಮಹಾರಾಷ್ಟ್ರ ರಾಜ್ಯಕ್ಕೆ ಒದಗಿದ ಮಹಾ ವಿಪತ್ತಿನಲ್ಲಿ, ಅದನ್ನು ರಕ್ಷಿಸುವದಕ್ಕಾಗಿ ದೇವರ ಕೃಪೆಯಿಂದ ಧನಾಜಿ ಜಾಧವ, ಸಂತಾಜಿ ಘೋರಪಡೆಯಂಥ ಮಹಾವೀರರೂ, ಪ್ರಲ್ಹಾದ ಪಂತ– ರಾಮಚಂದ್ರಪಂತರಂಥ ಶ್ರೇಷ್ಠ ಮುತ್ಸದ್ದಿಗಳು ಉದಯ ಹೊಂದಿರುವಂತೆ, ಏಸೂಬಾಯಿ ಯಂಥ ಕೆಚ್ಚದೆಯ ಸ್ತ್ರೀರತ್ನಗಳೂ ಮಹಾರಾಷ್ಟ್ರ ರಾಜ್ಯ ರಕ್ಷಣಕ್ಕಾಗಿ ಟೊಂಕ ಕಟ್ಟಿದ್ದು ಬಹುಮಹತ್ವದ ಸಂಗತಿಯಾಗಿದೆ. ಏಸೂಬಾಯಿಯು ಮಹಾಧೈರ್ಯಶಾಲಿಯೂ, ವಿವೇಕಿಯೂ, ಜಾಣಳೂ ಇದ್ದಳು. ಸ್ವರಾಜ್ಯ ಸಂರಕ್ಷಣದ ಚಿಂತೆಯಲ್ಲಿ ಆಕೆಯು ಸ್ವಸುಖವನ್ನು, ಪತಿ ಮರಣದ ದುಃಖವನ್ನು, ಮರೆತಳೆಂದು ಹೇಳಬಹುದು. ಮೈದುನನೂ, ಮಹಾರಾಷ್ಟ್ರ ವೀರರೂ, ಮುತ್ಸದ್ದಿಗಳೂ ತನ್ನನ್ನು ಬಿಟ್ಟು ಹೋದದ್ದರಿಂದ ಆಕೆಯು ಕೈಕಾಲುಗೆಡಲಿಲ್ಲ. ತನ್ನ ಪಾಲಿಗೆ ಬಂದಿರುವ ರಾಯಗಡದ ಸಂರಕ್ಷಣದ ಕಾರ್ಯವನ್ನು ತಾನು ಅತ್ಯುತ್ತಮ ರೀತಿಯಿಂದ ಮಾಡಿದರೆ, ರಾಜ್ಯ ಸಂರಕ್ಷಣದ ದೃಷ್ಟಿಯಿಂದ ತಾನು ದೊಡ್ಡ ಕೆಲಸ ಮಾಡಿದ ಹಾಗಾಗುವ ದೆಂದು ಆಕೆಯು ತಿಳಿದಿದ್ದಳು. ಒಂದು ದಿನ ಮಧ್ಯರಾತ್ರಿಯಲ್ಲಿ ಆಕೆಯು ದುರ್ಗದ

ವ್ಯವಸ್ಥೆಯು ಹ್ಯಾಗಿರುತ್ತದೆಂಬದನ್ನು ನೋಡುವದಕ್ಕಾಗಿಯೂ, ಆಯಾಜನರಲ್ಲಿ ಕರ್ತವ್ಯ ತತ್ಪರತೆಯು ಎಷ್ಟರವಟ್ಟಿಗೆ ಇರುತ್ತದೆಂಬದನ್ನು ಪರೀಕ್ಷಿಸುವದಕ್ಕಾಗಿಯೂ ಒಬ್ಬಳೇ ಹೊರಟಳು! ಆಗ ಆಕೆಯು ಬಿಳಿಯ ಪತ್ತಲವನ್ನುಟ್ಟುಕೊಂಡು ಜಿರೆಟೋಪಿನ ಮೇಲೆ ತಲೆಗೊಂದು ಶಲ್ಲೆಯನ್ನು ಸುತ್ತಿದ್ದಳು. ಆಕೆಯು ಟೊಂಕಕ್ಕೆ ಸುತ್ತಿದ್ದ ಶಲ್ಲೆಯ ಕೆಳಮಗ್ಗಲಿಗೆ ಒಂದು ಮಗ್ಗಲಿಗೆ ಪಿಸ್ತೂಲವೂ, ಮತ್ತೊಂದು ಮಗ್ಗಲು ಬಿಚ್ಚುಗತ್ತಿಯೂ ಒಪ್ಪುತ್ತಿದ್ದವು. ಆಕೆಯು ರಾಯಗಡದ ಶ್ರೀಗೋದಾ ಶಿಖರದಿಂದ ಭವಾನಿ ಶಿಖರದ ಕಡೆಗೆ, ಭವಾನಿ ಶಿಖರದಿಂದ ಟಕಮಕ ಶಿಖರದ ಕಡೆಗೆ, ಅದರಂತೆ ಟಕಮಕ ಶಿಖರದಿಂದ ಹಿರಿಕಣಿ ಶಿಖರದ ಕಡೆಗೆ ವೇಗದಿಂದ ಸಾಗಿಹೋಗಿ, ಗಡದ ಸುತ್ತಮುತ್ತು ಬಹುದೂರವರೆಗೆ ನೋಡಹತ್ತಿದಳು.

ಹೀಗೆ ನೋಡುತ್ತ ನೋಡುತ್ತ ಆ ದುರ್ಗದ ಸ್ವಾಮಿನಿಯು ನಗಾರ ಖಾನೆಯನ್ನು ಹತ್ತಿದಳು. ಅಲ್ಲಿಂದ ಆಕೆಯು ಸುತ್ತಲಿನ ೧೦-೧೨ ಮೈಲಿನೊಳಗಿನ ಪ್ರದೇಶವನ್ನು ಮೊದಲು ನೋಡಿದಳು. ಕೋಟೆಯ ಎದುರಿನಿಂದ ಹಾಗು ಸುತ್ತಮುತ್ತಲಿಂದ ಅನೇಕ ಹಾದಿಗಳು ಗುಡ್ಡ ದೊಳಗಿಂದ ಕೋಟೆಯವರೆಗೆ ಬಂದಿರುತ್ತವೆ. ಆ ಹಾದಿಗಳಿಗೆ ಸಂಬಂಧಿಸಿ ಆ ಪರ್ವತದ ಮೇಲೆ ರಾತ್ರಿ ಗುರುತಿನ ಹಲವು ದೀಪಗಳನ್ನು ಹಚ್ಚುವ ಪದ್ಧತಿಯಿತ್ತು, ಆ ರಣ ದೇವತೆಯು ಅಲ್ಲಿಯದೊಂದು ದೀಪವನ್ನು ಎತ್ತಿ ಕೈಯಲ್ಲಿ ಹಿಡಕೊಂಡು, ಅದನ್ನು ಕೆಲ ವೊಂದು ಸಂಜ್ಞೆಯಿಂದ ಅಲ್ಲಾಡಿಸಿದಳು. ಕೂಡಲೆ ಎದುರಿನ ಶಿಖರದ ಮೇಲೆ ಒಂದು ದೀಪವು ಹತ್ತಿತು; ಆಮೇಲೆ ಎರಡನೆಯ ದೀಪವು ಹತ್ತಿತು; ತರುವಾಯ ಮೂರನೆಯ ದೀಪವು ಹತ್ತಿತು. ಅಷ್ಟರಲ್ಲಿ ಮಗ್ಗಲಿನ ಶಿಖರಗಳಲ್ಲಿ ಒಂದರಹಿಂದೊಂದು ದೀಪಗಳು ಹತ್ತಿದವು. ಬರಬರುತ್ತ ನಾಲ್ಕೂ ಕಡೆಗೆ ದೀಪಗಳುಹತ್ತಿದವು. ಹೀಗೆ ಸುತ್ತುಮುತ್ತು ಸಹಸ್ರಾವಧಿ ದೀಪಗಳಿಂದ ಆ ಪರ್ವತ ಶಿಖರಗಳು ಪ್ರಕಾಶಿಸತೊಡಗಿದವು. ಈ ಮೋಜನ್ನು ನೋಡುವಾಗ ಆ ರಣದೇವತೆಯ ಗಂಭೀರವಾದ ಮುಖಶ್ರೀಯಲ್ಲಿ ಮುಗುಳು ನಗೆಯ ಝುಳಕು ತೋರಿತು! ಅಷ್ಟರಲ್ಲಿ ಆಕೆಯು ಪಿಸ್ತೂಲಿನ ಒಂದು ಬಾರು ಮಾಡಿದಳು. ಕೂಡಲೆ ಧಡಲ್ ಧಡಲ್ ಎಂದು ಪ್ರತಿಯೊಂದು ಸಂದಿ-ಗೊಂದುಯೊಳಗಿಂದ ಸಪ್ಪಳಗಳು ಆಗಹತ್ತಿ ಅವುಗಳಿಂದ ಪರ್ವತವು ಗದಗದಸಿ ಹೋಯಿತು. ಇದನ್ನೆಲ್ಲನೋಡಿ ಏಸೂಬಾಯಿಯು ''ಈ ಕಡೆಯ ವ್ಯವಸ್ಥೆಯು ನೆಟ್ಟಗಿರುತ್ತದೆ,'' ಎಂದು ತನ್ನೊಳಗೆ ನುಡಿಯುತ್ತ, ಎರಡನೆಯ ಮಗ್ಗಲಿಗೆ ಹೊರಟಳು. ಆಕೆಯು ಕಾಶಾರ್ಮದ ಕೆರೆಯ ಕಡೆಗೆ ಹೋಗಿ, ಆ ಕೆರೆಯಲ್ಲಿ ಕೈ-ಕಾಲು-ಮೋರೆಗಳನ್ನು ತೊಳೆದುಕೊಂಡಳು. ಆಮೇಲೆ ಗೋದಾಶಿಖರದ ಮೇಲಿರುವ ಮಹಾದೇವನ ದರ್ಶನ ಮಾಡಿಕೊಂಡಳು. ಆಗ ಆಕೆಯು ಕೈ ಜೋಡಿಸಿ ಶಂಕರನನ್ನು ಕುರಿತು— ''ಶಂಭೋ, ಕರುಣಾನಿಧೇ, ನನ್ನ ಮೈದುನನ ಪ್ರವಾಸವು ಸುಖಕರವಾಗುವಂತೆ ಅನುಗ್ರಹಿಸು,'' ಎಂದು ಬೇಡಿಕೊಂಡಳು.

ಬಳಿಕ ಏಸೂಬಾಯಿಯು ಅಷ್ಟಪ್ರಧಾನರ ಮಂದಿರಗಳ ಕಡೆಗೆ ನಡೆದಳು. ಇಲ್ಲಿ ಆಕೆಯು ಕಾವಲುಗಾರರ ಜಾಗರೂಕತೆಯನ್ನು ಬಡಬಡ ಪರೀಕ್ಷಿಸಿ, ಆಮೇಲೆ ಪೇಟೆ

ಯೊಳಗೆ ಹಾದು ಗಜಶಾಲೆಯ ಕಡೆಗೆ ತಿರುಗಿದಳು. ಗಜಶಾಲೆಯೊಳಗಿನ ಪ್ರತಿಯೊಂದು ರಣಮತ್ತ ಗಜವನ್ನು ಆಕೆಯು ಪರೀಕ್ಷಿಸುತ್ತ, ಅವುಗಳ ಯೋಗಕ್ಷೇಮವನ್ನು ವಿಚಾರಿಸಿದಳು. ತನ್ನ ಒಡೆಯಳು ಹತ್ತರ ಬರಲು, ಪ್ರತಿಯೊಂದು ಆನೆಯು ಸೊಂಡಿಲಿನಿಂದ ಹುಲ್ಲನ್ನು ತಕ್ಕೊಂಡು ಮೆಲ್ಲನೆ ತನ್ನ ಒಡೆಯಳ ಮೇಲೆ ಎರಚುತ್ತಿದ್ದವು. ಮೇಲೆ ಮೇಲೆ ಅವು ಬೃಂಹಿತ ಧ್ವನಿಯಿಂದ ತಮ್ಮ ಒಡೆಯಳನ್ನು ಅಭಿನಂದಿಸಿ, ಫೂತ್ಕಾರದಿಂದುಟಾದ ತುಂತುರ ಹನಿಗಳಿಂದ ತಮ್ಮ ಒಡೆಯಳಿಗೆ ನೀರ್ಮಂಜಿನ ಅಭಿಷೇಕ ಮಾಡುತ್ತಿದ್ದವು. ಹೀಗೆ ಆ ಬುದ್ಧಿಸಂಪನ್ನ ಪ್ರಾಣಿಗಳು ತನ್ನನ್ನು ಈ ಬಗೆಯಾಗಿ ಪ್ರೀತಿಸಿದ್ದನ್ನು ನೋಡಿ ನಮ್ಮ ವೀರ ಸ್ನುಷೆಯು ಸಂತೋಷಪಟ್ಟು, ಅಲ್ಲಿಂದ ಉಷ್ಟ್ರಶಾಲೆಗೆ (ಒಂಟೆಗಳ ಮನೆಗೆ) ಹೋದಳು. ಅಲ್ಲಿಯ ಸರಂಜಾಮುದಲ್ಲಿ ಏನಾದರೂ ಎಚ್ಚರಗೇಡಿತನವು ಇರುವದೇನೆಂಬದನ್ನು ಪರೀಕ್ಷಿಸಿ, ಭವಾನೀ ಶಿಖರದ ಮಗ್ಗಲಿನಿಂದ ಆಕೆಯು ಶಿಬ್ಬಂದಿಯ ಜನರಿರುವ ಕೋಣೆಗಳಕಡೆಗೆ ತಿರುಗಿದಳು. ಈ ಕೋಣೆಗಳ ಆಚೆಯಲ್ಲಿಯೇ ಸರನೌಬತ್, ಹವಾಲಾದಾರ, ತಟಸರ ನೌಬತ್, ಸದರ ನೌಬತ್, ಬಾರಗೀರ, ರಜಪೂತ ಮೊದಲಾದ ಮರ್ದಾನ ಕವಿಲೇದಾರರ ಮನೆಗಳಿದ್ದವು. ಅಲ್ಲಿಯ ರಕ್ಷಕರು, ತಮ್ಮನ್ನು ರಾಣೀಸಾಹೇಬರು ಅಕಸ್ಮಾತ್ತಾಗಿ ಪರೀಕ್ಷಿಸುವರೆಂಬದನ್ನು ಅರಿತದ್ದರಿಂದ, ಅವರು ಯಾವಾಗಲೂ ಜಾಗರೂಕ ರಾಗಿರುತ್ತಿದ್ದರು. ಅದರಲ್ಲಿ ಈಗಂತೂ ಯುದ್ಧದ ಕಾಲವಿದ್ದದ್ದರಿಂದ, ರಾಣೀ ಸಾಹೇಬರು ಆಗಾಗ್ಗೆ ಬರಬಹುದೆಂದು ತಿಳಿದು ಅವರು ತಮ್ಮ ಕೆಲಸದಲ್ಲಿ ಸರ್ವಥಾ ದುರ್ಲಕ್ಷ್ಯಮಾಡುತ್ತಿದ್ದಿಲ್ಲ; ಆದ್ದರಿಂದ ರಾಣಿಯವರ ಬಂದಾಗೆಲ್ಲ ಆ ಸ್ವಾಮಿನಿಷ್ಠ ಸೇವಕರು ಉಲ್ಲಾಸದಿಂದ ಅವರನ್ನು ಕಾಣುತ್ತಿದ್ದರು. ಇಂದು ಯಾವತ್ತೂ ಮಾವಳೆ ಶಿಪಾಯಿಗಳ ಸಾಲನು ಪರೀಕ್ಷಿಸಿ ನೋಡಿ, ಯಾವಾಗಲೂ ಹೀಗೆಯೇ ಜಾಗರೂಕ ರಾಗಿರುವಂತ ಆ ರಣದೇವತೆಯು ಆಜ್ಞಾಪಿಸಿದಳು. ಮತ್ತು ಶಸ್ತ್ರಗಳನ್ನು ಸರಿಯಾಗಿ ಇಟ್ಟು, ಕೊಳ್ಳುವಂತೆ ನಿರ್ಧಾರದಿಂದ ಅವರಿಗೆ ಹೇಳಿದಳು. ಆಮೇಲೆ ಆಕೆಯು ಅಶ್ವಶಾಲೆಯ ಕಡೆಗೆ ಹೊರಳಿದಳು. ಅಲ್ಲಿಗೆ ಹೋದ ಕೂಡಲೆ ಆಕೆಯು, ಕುದುರೆಗಳ ಚಾಕರಿಯು ಹೊತ್ತು ಹೊತ್ತಿಗೆ ಆಗುತ್ತದೇನೆಂಬದನ್ನೂ, ಅವುಗಳ ಮೇವು–ದಾಣಿಗಳ ವ್ಯವಸ್ಥೆಯು ಸರಿಯಾಗಿರುವೇದ ನೆಂಬದನ್ನೂ, ವಿಚಾರಿಸಿ ಮನಗಂಡಳು. ಈ ಧೀರಳು ಅಶ್ವಶಾಲೆಯನ್ನು ಹೊಕ್ಕಕೂಡಲೇ, ಕುದುರೆಗಳ ಹಲವು ಸಾಲುಗಳೊಳಗೆ ಕಟ್ಟಿದ್ದ ಆಕೆಯ ಪ್ರೀತಿಯ ಕುದುರೆಯು ತನ್ನ ಬಾಯೊಳಗಿನ ಹುಲ್ಲನ್ನು ಬಾಯಲ್ಲಿಯೇ ಹಿಡಿದು ಮಂಜುಲ ಶಬ್ದದಿಂದ ಹೇಕರಿಸಹತಿತು. ಆಮೇಲೆ ದೇವತೆಯು ಎಷ್ಟೋ ಕುದುರೆಗಳನ್ನು ಚಪ್ಪರಿಸಿದಳು. ಕೆಲವುಗಳ ಮೈಮೇಲೆ ಕೈಯಾಡಿಸಿದಳು. ಕೆಲವುಗಳ ಆಯಾಲದ ಕೂದಲುಗಳ ತೊಡಕು ಬಿಡಿಸಿದಳು. ತರುವಾಯ ಆಕೆಯು ಕುದುರೆಗಳ ಸಾಮಾನುಗಳನ್ನು ಪರೀಕ್ಷಿಸಿ, ಆ ಅಶ್ವಶಾಲೆಯ ಅಧ್ಯಕ್ಷನಿಗೆ ಹೇಳ ತಕ್ಕದ್ದನ್ನು ಹೇಳಿ, ಮುಂದಕ್ಕೆ ಸಾಗಿದಳು. ಆಕೆಯು ಅಲ್ಲಿಂದ ತೋಫಖಾನೆಯನ್ನು ನೋಡಿ ಕೊಂಡು ಕಾಲಕುಂಡಕ್ಕೆ ಬಂದು ಅಲ್ಲಿ ಪಾದಪ್ರಕ್ಷಾಲನ ಮಾಡಿಕೊಂಡು ಜಗದೀಶ್ವರನ ದರ್ಶನಮಾಡಿಕೊಂಡಳು.

ಇದರಂತೆಯೇ ಏಸೂಬಾಯಿಯು ಧಾನ್ಯದ ಕಣಜಗಳನ್ನೂ, ಜಲಾಶಯಗಳನ್ನೂ, ಔಷಧ ಶಾಲೆಗಳನ್ನೂ ನೋಡಿಕೊಂಡು, ಮಹಾದ್ವಾರಕ್ಕೆ ಬಂದು ಅಲ್ಲಿಯ ಎಲ್ಲ ಚೌಕಿಗಳನ್ನೂ ನೋಡಿದಳು. ತರುವಾಯ ಆಕೆಯು ಮಹಾರಾಜರ ದಿವ್ಯವಾದ ಉಪವನಕ್ಕೆ ಬಂದು, ಅಲ್ಲಿ ಸ್ವಲ್ಪ ವಿಶ್ರಮಿಸಿ, ಹಾಗೇ ಪರ್ವತವನ್ನು ಇಳಿಯುತ್ತ ಅಲ್ಲಲ್ಲಿಯ ಕಾವಲುಗಾರರನ್ನು ಜಾಗರೂಕ ರಾಗಿರುವಂತೆ ಪ್ರೋತ್ಸಾಹಿಸುತ್ತ ಗುಡ್ಡದ ಬುಡಕ್ಕೆ ಬಂದಳು. ಅಷ್ಟರಲ್ಲಿ ಮತ್ತೊಬ್ಬವೀರಾಂಗನೆಯು ಮಹಾಡದ ಮಾರ್ಗದಿಂದ ತನ್ನ ಕುದುರೆಯನ್ನು ಓಡಿಸುತ್ತ ಆಕೆಯ ಎದುರಿಗೆ ಬರುತ್ತಲಿದ್ದಳು. ಆಕೆಯನ್ನು ನೋಡಿ ಏಸೂಬಾಯಿಯು ತನ್ನೊಳಗೆ —ಈ ರಾಜಕುವರಳು ಇಂಥ ಕಠಿಣ ಕಾಲದಲ್ಲಿ ಎಷ್ಟು ಉತ್ಸಾಹದಿಂದ ರಣರಕಸಿಯಂತೆ ಆಚರಿಸುತ್ತಿರುವಳಲ್ಲ? ಈಕೆಯು ಎಷ್ಟು ತೇಜಸ್ವಿಯಾಗಿ ತೋರುವಳು! ಪತಿಯ ಸಹವಾಸದಲ್ಲಿರುವಾಗ ಈಕೆಗೆ ಆಗುತ್ತಿದ್ದ ಆನಂದವು, ಈಗ ಯುದ್ಧವು ಸಮಿಾಪಿಸಿದಂತೆ ಈಕೆಗೆ ಆಗುತ್ತಿರುವದಲ್ಲ! ನಿನ್ನ ಅಣ್ಣನ ಸಂಗಡ ಹೋಗಹೋಗೆಂದು ನಾನು ಎಷ್ಟು ಆಗ್ರಹ ಮಾಡಿದರೂ,ನಮ್ಮ ಈ ಕಂದಮ್ಮನು ಹೋಗಲಿಲ್ಲ, ನನ್ನ ಬಳಿಯಲ್ಲಿಯೇ ಉಳಿದುಕೊಂಡಳು. ಈಕೆಯನ್ನು ಜಾಗ್ರತೆಯಿಂದ ರಕ್ಷಿಸಬೇಕು. ಇಲ್ಲದಿದ್ದರೆ ಈಕೆಯ ಸೌಂದರ್ಯವೇ ಈಕೆಗೆ ಮುಳುವ ಆದೀತು; ಎಂದು ಅಂದುಕೊಳ್ಳುತ್ತ ಆ ವೀರ ಸ್ನುಷೆಯು ರಾಜಕುವರಳ ಬಳಿಗೆ ಹೋದಳು. ಆಗ ರಾಜಕುವರಳು—ಅತ್ತಿಗೆಯವರೇ, ದುರ್ಗಕ್ಕೆ ಬರುವ ಎಲ್ಲಮಾರ್ಗಗಳ ಬಂದೋಬಸ್ತುಮಾಡಿ ಬಂದೆನು. ಒಂದು ಎಲೆ ಅಲ್ಲಾಡಿದರೆ ಸಾಕು, ಜಾಗ್ರತವಾಗುವಂತೆ ವ್ಯವಸ್ಥೆಮಾಡಿ ಬಂದಿದ್ದೇನೆ. ಔರಂಗಜೇಬನು ಎಷ್ಟು ಕಸರತ್ತು ಮಾಡಿದರೂ ಕೋಟೆಯು ಆತನ ಕೈಸೇರಲಾರದು. ಇದರ ಮೇಲೆಯು ದುರ್ದೈವದಿಂದ ಆತನ ಕೈಸೇರಿದರೆ ನಮ್ಮ ಜೀವವು ನಮ್ಮ ಕೈಯಲ್ಲಿಯೇ ಇರುತ್ತದಲ್ಲವೇ? ಅನ್ನಲು, ಏಸೂಬಾಯಿಯು–ತಂಗೀ ಆತ್ಮಹತ್ಯೆ ಮಾಡಿಕೊಳ್ಳುವದೇನು ತಡವಿಲ್ಲ, ಅಂಥ ಪ್ರಸಂಗವೇ ಬಂದರೆ ನೋಡೋಣವಂತೆ ಆದರೆ ಅಂಥ ಪ್ರಸಂಗವು ಬರುವವರೆಗೆ ನಮ್ಮ ಜನರಿಗೆ ಧೈರ್ಯ ಹೇಳಿಲಿಕ್ಕೆ ಕತ್ತಲಲ್ಲಿ ಅವರಿಗೆ ಮಾರ್ಗವ ತೋರಿಸಲಿಕ್ಕೂ ಯಾರಾದರೂ ಬೇಕಲ್ಲವೇ ರಾಜಕುವರ! ಅವ್ವಾ, ನಮ್ಮ ಮೇಲೆ ದೊಡ್ಡ ಜವಾಬುದಾರಿಯು ಇರುವದು. ನಮ್ಮಷ್ಟಕ್ಕೆ ನಾವು ನೋಡಿಕೊಳ್ಳುವ ಹಾಗಿಲ್ಲ! ಮರಣದಿಂದ ನಮ್ಮ ಸಂಕಟಗಳು ದೂರವಾಗುವವೆಂದು ನೀನು ನೆನೆಸಬಹುದು; ಆದರೆ ನಾವು ಹಾಗೆ ಮಾಡಿದರೆ, ಕಷ್ಟಪಡಲಾರದೆ ನಾವು ಮೈ ಉಳಿಸಿಕೊಂಡಂತಾಗುವದು.

ಈ ಮೇರೆಗೆ ಮಾತಾಡುತ್ತ ಮಾತಾಡುತ್ತ ಅವರು ಹಿಂದಕ್ಕೆ ತಿರುಗಿ ದುರ್ಗದ ಒಂದು ಅತ್ಯುನ್ನತವಾದ ಶಿಖರವನ್ನು ಹತ್ತಿದರು. ಆಗ ಅದೇ ಅರುಣೋದಯವಾಗುತ್ತಿತ್ತು. ರಾಜಕುವರಳು ಆಜ್ಞಾಪಿಸಿದ ಕೂಡಲೆ ದಾಸಿಯು ಕೊಂಬು ಊದಿದಳು. ಕೂಡಲೇ ಎಡ–ಬಲದ ದರಿ–ಕಂದರಗಳೊಳಗಿಂದ ಕೊಂಬುಗಳ ಧ್ವನಿಯು ಹೊರಟು ದಿಕ್ತಟವನ್ನು ತುಂಬಿತು! ಅದನ್ನು ಕೇಳಿ ಗಿರಿ–ಶಿಖರಗಳ ಮೇಲಿದ್ದವರು ಕೊಂಬುಗಳನ್ನು ಊದಿದರು. ಇವುಗಳ ಧ್ವನಿಯಲ್ಲಿಯೇ ಊರಜನರ ಕೊಂಬುಗಳ ಧ್ವನಿಯು ಕೂಡಿ, ಆ ಸಂಯುಕ್ತ ಧ್ವನಿಯು ಪರ್ವತದ ಪ್ರತಿಧ್ವನಿಯೊಡನೆ ಗಂಭೀರವಾಯಿತು. ಇದಲ್ಲದೆ, ರಾಯಗಡದ

ಎದುರಿನ ತೋರಣಗಡ, ಲಿಂಗಣಾದುರ್ಗಗಳಲ್ಲಿ ಇದೇ ಧ್ವನಿಯು ಉತ್ಪನ್ನವಾಯಿತು. ಈ ಮೇರೆಗೆ ಕೊಂಬುಗಳ ಅಪಾರವಾದ ಧ್ವನಿಯು ಗರ್ಜಿಸುತ್ತಿರಲು, ಅವುಗಳಲ್ಲಿಯೇ ಮುಂಜಾವಿನ ಚೌಘಡದ ಘನ ಗರ್ಜನೆಯು ಮಿಶ್ರಣವಾಯಿತು. ಆಗ ಏಸೂಬಾಯಿಯು ರಾಜಕುವರಳನ್ನು ಕುರಿತು— ರಾಜಕುವರ, ನೀನು ಹೇಳಿದಂತೆ, ಮಾವಂದಿರ ಪುಣ್ಯದಿಂದ ರಾಯಗಡವು ಶತ್ರುಗಳಿಗೆ ದುರ್ಭೇದ್ಯವಾಗಿರುವದೇನೋ ನಿಜ; ಆದರೆ ಸದ್ಯಕ್ಕೆ ಅದನ್ನು ರಕ್ಷಿಸುವ ಭಾರವು ದುರ್ದೈವದಿಂದ ಅಬಲೆಯರಾದ ನಮ್ಮ ಪಾಲಿಗೆ ಬಂದಿರುವದಲ್ಲವೆ? ಆಗಲಿ, ಪಾಲಿಗೆ ಬಂದದ್ದು ಪಂಚಾಮೃತವೆಂದು ತಿಳಿದು, ನಾವು ಮನಃಪೂರ್ವಕವಾಗಿ ದುರ್ಗ ರಕ್ಷಣವನ್ನು ಮಾಡೋಣ; ಎಂದು ನುಡಿದು ಆಕೆಯು ತನ್ನ ನಿತ್ಯಕ್ರಮವನ್ನು ಜರುಗಿಸಲು ಹೊರಟಳು.

ಏಸೂಬಾಯಿಯವರ ನಿತ್ಯಕ್ರಮವೆಂದರೆ, ದೊಡ್ಡ ಹೊತ್ತಿನಲ್ಲಿ ಎದ್ದು, ನೈಸರ್ಗಿಕ ಕೃತ್ಯ ಗಳನ್ನು ತೀರಿಸಿಕೊಂಡು ಗಂಗಾಸಾಗರ ಸರೋವರದಲ್ಲಿ ಸ್ನಾನಮಾಡುತ್ತಿದ್ದಳು. ಆಮೇಲೆ ಸ್ವಚ್ಛ ವಾದ ಚಾಂದೇರಿ ಪತ್ತಲವನ್ನು ಉಟ್ಟುಕೊಂಡು ಪತಿಸ್ಮರಣೆಯನ್ನು ಮಾಡುತ್ತಿದ್ದಳು. ಬಳಿಕ ಪತಿಯ ಪಾದುಕೆಗಳನ್ನು ಪೂಜಿಸಿ, ಪರಿಚಾರಕನು ಸಿದ್ಧಮಾಡಿಟ್ಟಿದ್ದ ಪೂಜಾ ಸಾಮಗ್ರಿಗಳನ್ನು ತಕ್ಕೊಂಡು ಜಗದೀಶ್ವರನ ಗುಡಿಯ ಕಡೆಗೆ ಹೋಗುತ್ತಿದ್ದಳು. ಮೊದಲು ಅವಳು ಗುಡಿಯ ಮಹಾದ್ವಾರದ ಹೊರಗಿರುವ ಶಿವಪ್ರಭುವಿನ ಸಮಾಧಿಯನ್ನು ಪೂಜಿಸುವದಕ್ಕಾಗಿ ಕುಳಿತು ಕೊಳ್ಳುತ್ತಿದ್ದಳು. ಅಲ್ಲಿಯೇ ಒಂದು ಬೆಳ್ಳಿಯ ವೃಂದಾವನವಿತ್ತು, ಅಲ್ಲಿ ಪೂಜೆಗೆ ಆರಂಭವಾದ ಕೂಡಲೆ ಗವಾಯಿಗಳು ಗಾಯನ ಮಾಡುತ್ತಿದ್ದರು. ಪೌರಾಣಿಕರು ಪುರಾಣ ಹೇಳುತ್ತಿದ್ದರು. ಈ ನಿತ್ರಕ್ರಮದಂತೆ ಇಂದು ಮಹಾರಾಣಿಯವರು ದುರ್ಗದ ನಿರೀಕ್ಷಣ ಮಾಡಿ ಸಮಾಧಿಯ ಪೂಜೆಗೆ ಕುಳಿತುಕೊಂಡಿದ್ದಳು. ಸಮಾಧಿಯನ್ನು ಪೂಜಿಸುತ್ತಿರುವಾಗ ಇಂದು ಅವರ ಕುತ್ತಿಗೆಯ ಶಿರಗಳು ಬಿಗಿದವು. ಬೆಳ್ಳಿಯ ಬಿಂದಿಗೆಯಲ್ಲಿ ಗಂಗಾಸಾಗರ ಸರೋವರದಿಂದ ತಂದ ನೀರಿನಿಂದ ಮಾವಂದಿರ ಸಮಾಧಿಗೆ ಅಭಿಷೇಕ ಮಾಡಿಸುವದರ ಬದಲು, ಅವಳು ಇಂದು ತಮ್ಮ ಕಣ್ಣೀರುಗಳಿಂದಲೇ ಅಭಿಷೇಕ ಮಾಡಿಸತೊಡಗಿದ್ದಳು. ಅವಳು ನಡುಗುವ ದನಿಯಿಂದ ಸಮಾಧಿಯನ್ನುದ್ದೇಶಿಸಿ ನುಡಿದಳೇನಂದರೆ—ತೀರ್ಥರೂಪ ಮಾವನವರೇ, ಶಿವಪ್ರಭು ಗಳವರೇ, ಇಂದು ನಿಮ್ಮ ಹತಭಾಗ್ಯಳಾದ ಸೊಸೆಗೆ ಎಂಥ ಕಠಿಣ ಪ್ರಸಂಗ ಒದಗಿರುವದಲ್ಲ! ಗೋ–ಬ್ರಾಹ್ಮಣರ ಪ್ರತಿಪಾಲಕರೆ ನಿಮ್ಮ ಪಶ್ಚಾತ್ ನಡೆದ ಹಲವು ಅನರ್ಥಗಳನ್ನು ನೋಡಲಾರದೆ ನೀವು ಕಣ್ಣು ಮುಚ್ಚಿಕೊಂಡು ಕುಳಿತರೇನು? ಕರುಣಾಘನಾ! ಶ್ರೀ ಅಂಬಾ ಬಾಯಿಯು ನಿಮ್ಮನ್ನು ಅನುಗ್ರಹಿಸಿದಂತೆ, ಮಾತುಶ್ರೀ ಜೀಜಾಬಾಯಿ ಯವರು ನಿಮ್ಮನ್ನು ಪ್ರೋತ್ಸಾಹಿಸಿದಂತೆ, ಗೋ–ಬ್ರಾಹ್ಮಣರು ನಿಮ್ಮ ಮಸ್ತಕದಲ್ಲಿ ವರದ ಹಸ್ತವನ್ನಿಟ್ಟಂತೆ, ಈಗ ನನ್ನನ್ನು ಯಾರು ಅನುಗ್ರಹಿಸುವರು; ಯಾರು ಪ್ರೋತ್ಸಾಹಿ ಸುವರು; ಯಾರು ಆಶೀರ್ವದಿಸುವರು? ದೀನಳಾದ ಈ ಅಬಲೆಯ ಮೇಲೆ ಮೂರು ಲೋಕಗಳು ಕಡಕೊಂಡು ಬಿದ್ದಿರುವವಲ್ಲವೆ? ಇಂಥ ಪ್ರಸಂಗದಲ್ಲಿ ಪಾಪಿಷ್ಠಳಾದ ನಾನು ಯಾರಿಗೆ ಶರಣು ಹೋಗಲಿ? ನನ್ನನ್ನು ಯಾರು ಎತ್ತಿಕೊಂಡು ರಕ್ಷಿಸುವರು? ಅಥವಾ, ಪರಮ

ಪ್ರತಾಪಿಯಾದ ಸಮರ್ಥ ಶಿಷ್ಯನೇ, ಶಿವರಾಯಾ, ನಿನ್ನಂಥ ಪೌರುಷಿಯ ಮುಂದೆ ನಾನು ಈಗ ಅಳುತ್ತ ಕುಳಿತುಕೊಳ್ಳುವದಾದರೂ ಯಾತಕ್ಕೆ? ನಾನು ಹ್ಯಾಗೂ ರಣದೀಕ್ಷೆ ಯನ್ನು ಹೊಂದಿರುವೆನು. ಈ ಪ್ರಸಂಗದಲ್ಲಿ ಪರಮೋದಾರ ನಾದ ನೀನುನನಗೆ ಮಾಡತಕ್ಕ ಸಹಾಯವೇನೆಂದರೆ, ನೀನು ಷಾಯಿಸ್ತೇಖಾನನ್ನು ಹೊಡೆ ದೋಡಿಸುವಾಗ ನಿನ್ನ ಬಾಹುಗಳಲ್ಲಿ ಸಂಚರಿಸುತ್ತಿದ್ದ ಬಲವನ್ನು ಈಗ ನೀನು ನನ್ನ ಬಾಹುಗಳಲ್ಲಿ ತುಂಬು; ಅದರಂತೆ ಅಫಜುಲಖಾನನನ್ನು ಕೊಲ್ಲುವಾಗ ನೀವು ವಹಿಸಿದ ಪ್ರಸಂಗಾವಧಾನ ವನ್ನು ಈ ನಿನ್ನ ಪ್ರೀತಿಯ ಸೊಸೆಗೆ ಈಗ ಕೈಗಡವಾಗಿ ಕೊಡು; ಹಾಗೆಯೇ ದಿಲೇರ ಖಾನ, ಜಯಸಿಂಗ ಇವರು ಒಡ್ಡಿದ ಬಲೆಯೊಳಗಿಂದ ಪಾರಾಗುವಾಗ ನೀನು ಪ್ರಕಟಿಸಿದ ಯುಕ್ತಿ ಕೌಶಲ್ಯವನ್ನಷ್ಟು ಅನಕಾ ನನಗೆ ಕೊಡು; ಹಾಗೆಯೇ ತಾನಾಜಿ, ಬಾಜಿ ದೇಶಪಾಂಡೆ ಯಂಥ ನಂಬಿಗೆಯ ಜನರನ್ನು ಸಂಗ್ರಹಿಸುವಾಗ ತೋರಿಬಂದ ನಿನ್ನ ಲೋಕ ಸಂಗ್ರಹ ಚಾತುರ್ಯ ವನ್ನು ದಯಮಾಡಿ ಸದ್ಯಕ್ಕೆ ನನಗೆ ಕೊಡು. ದೀನರಕ್ಷಕಾ, ನಾನು ಎಷ್ಟು ಹೇಳಿಕೊಂಡರೂ ಅಷ್ಟೇ. ನನ್ನ ಮೇಲೆ ನಿನ್ನ ಪೂರ್ಣ ಆಶೀರ್ವಾದ ವಿರಲೆಂದರಾಯಿತು.

ಈ ಮೇರೆಗೆ ಏಸೂಬಾಯಿಯು ಭಕ್ತಿಪರವಶಳಾಗಿ ಅತ್ಯಂತವಾದ ಸಥಿಯಿಂದ ತನ್ನ ಮಾವನನ್ನು ಪ್ರಾರ್ಥಿಸಿದ ಬಳಿಕ, ಸಮರ್ಥ ರಾಮದಾಸ ಸ್ವಾಮಿಗಳನ್ನು ಕುರಿತು— "ಶ್ರೀ ಸಮರ್ಥಾ, ಗುರುದೇವಾ, ನೀನು ನಮ್ಮ ಕುಲಸ್ವಾಮಿಯಲ್ಲವೆ? ಪರಂಪರೆಯಿಂದ ನಮ್ಮ ಭೋಸಲೇ ಮನೆತನದವರು ನಿನ್ನ ಶಿಷ್ಯರಲ್ಲವೇ? ಆದಿ ಶಿಷ್ಯನಾದ ಶಿವಪ್ರಭುವಿನಿಂದ ನೀನು ಸ್ಥಾಪಿಸಿರುವ ಸಾಮ್ರಾಜ್ಯವನ್ನು ರಕ್ಷಿಸುವ ಕಠಿಣ ಪ್ರಸಂಗವು ನನ್ನಂಥ ಅಬಲೆಗೆ ಒದಗಿರಲು, ಕರುಣಾಳುವಾದ ನೀನು ನನಗೆ ಸಹಾಯ ಮಾಡಬಾರದೇನು? ದಯಾವಂತಾ, ಮಾವಂದಿರು—ನಮ್ಮ ಪೂಜ್ಯ ಆಬಾಸಾಹೇಬರು ಪುರುಷರಿದ್ದರು; ಅವರ ಪೌರುಷಕ್ಕೆ ಮೆಚ್ಚಿ ನೀನು ಅವರಿಗೆ ಸಹಾಯ ಮಾಡಿದ್ದರೂ ಮಾಡಿರಬಹುದು; ಅಂದಬಳಿಕ ಅದರಿಂದ ನಿನ್ನ ಪರಮ ಕಾರುಣಿಕತೆಯು ಹ್ಯಾಗೆ ಪ್ರಕಟವಾಗುವದು? ಆದ್ದರಿಂದ ಕರುಣಾನಿಧೇ, ಈಗ ಅನಾಥಳಾದ ನನ್ನಂಥ ಅಬಲೆಗೆ ಸಹಾಯಮಾಡಿ, ರಾಜ್ಯ ರಕ್ಷಣದ ಮಹಾಕಾರ್ಯ ವನ್ನು ನನ್ನಿಂದ ಮಾಡಿಸಿದರೆ, ಪತಿತೋದ್ಧಾರಕ ನೆಂಬ ನಿನ್ನ ಬಿರುದು ಸಾರ್ಥಕ ವಾಗುವದು," ಎಂದು ಪ್ರಾರ್ಥಿಸಿ, ತನ್ನ ಪೂಜ್ಯ ಅಜ್ಜಿಯಾದ ಜೀಜಾಬಾಯಿಯವರನ್ನು ಕುರಿತು—"ಮಾತುಶ್ರೀ, ಅಜ್ಜಿಯವರೇ, ಈ ಹತಭಾಗ್ಯಳಾದ ನಿಮ್ಮ ಮೊಮ್ಮಗಳನ್ನು ಮರತಿರೇನು? ನೀವು ನನ್ನ ಲಜ್ಜೆಯನ್ನು ಕಾಯಲೇಬೇಕು?" ಎಂದು ಬೇಡಿಕೊಂಡಳು.

ಹೀಗೆ ಅತ್ಯಂತ ಉಚ್ಚವಾದ ಭಾವನೆಯ ತರಂಗದಲ್ಲಿ ತೇಲಾಡುತ್ತಿರುವಾಗ ಶ್ರೀ ಏಸೂಬಾಯಿಯವರ ಮುಖಶ್ರೀಯ ಮೇಲೆ ಪ್ರೇಮಯುಕ್ತಸ್ವಾಭಿಮಾನದ ದಿವ್ಯ ದೀಪ್ತಿಯು ಶೋಭಿಸಹತ್ತಿತು. ಅವರು ತಮ್ಮ ಶಿರಃಕಮಲವನ್ನು ಮಹಾರಾಜರ ಸಮಾಧಿಯ ಮೇಲೆ ಇಟ್ಟು ಮೇಲಕ್ಕೆದ್ದ ಕೂಡಲೆ, ಮಹಾರಾಜರ ಉಜ್ವಲ ತೇಜಸ್ಸು ಆ ಮಹಾತ್ಮಳಾದ ಸೊಸೆಯ ಮುಖದಲ್ಲಿ ಪ್ರಕಟವಾದಂತೆ ತೋರಿತು! ಇದೇ ಕಾಲದಲ್ಲಿ ದುರ್ಗದ ಅಧಿಕಾರಿಗಳೂ,

ಸರದಾರರೂ, ಸೈನಿಕರೂ, ಮುತ್ಸದ್ದಿಗಳೂ ರಾಣಿಗೆ ಮುಜುರೆ ಮಾಡುವದಕ್ಕಾಗಿ ಬಂದರು. ಅವರ ಮುಜುರೆಗಳನ್ನು ಸ್ವೀಕರಿಸುವಾಗ ಏಸೂಬಾಯಿಯವರ ಕಣ್ಣುಗಳು ಪ್ರೇಮಾಶ್ರುಗಳಿಂದ ಆಗಾಗ್ಗೆ ತುಂಬುತ್ತಲಿದ್ದವು. ದುರ್ಗದಲ್ಲಿಯ ಚೌಘತವೆಂಬ ವಾದ್ಯವು ಈ ಕಾಲದಲ್ಲಿ ಬಾರಿಸುತ್ತಲಿತ್ತು, ಜಗದೀಶ್ವರನ ದೇವಾಲಯದೊಳಗಿಂದ ಪ್ರಾತಃಕಾಲದ ಗಾಯಕರ ಮಂಜುಲ ಧ್ವನಿಯು ಕಿವಿಗೆ ಬೀಳುತ್ತಲಿತ್ತು, ಕಾವಲುಗಾರರ ಕಾವಲಿನ ಸರತಿಗಳನ್ನು ಬದಲಿಸುವ ಕೊಂಬುಗಳ ಕರ್ಕಶ ಧ್ವನಿಯು ಎಲ್ಲ ಕಡೆಯಲ್ಲಿ ಪಸರಿಸಿತ್ತು, ಇವೆಲ್ಲವುಗಳ ಯೋಗದಿಂದ ಏಸೂಬಾಯಿಯ ಉತ್ಸಾಹವು ಹೆಚ್ಚಿತು. ಆಕೆಯ ಆಶಾಂಕುರವು ಫಲಿಸಿತು. ಶತ್ರುವಾದ ಔರಂಗಜೇಬನು ಆಕೆಗೆ ಕಃಪದಾರ್ಥವಾಗಿ ತೋರಿದನು! ಇಂಥ ಪ್ರಸಂಗದಲ್ಲಿ ಅತ್ತಿಗೆಯ ಸಂಗಡ ಸಮಾಧಿಯ ಪೂಜೆಗೆ ಬಂದಿದ್ದ ರಾಜಕುವರಳ ವೃತ್ತಿಯು ಎಷ್ಟು ಉಜ್ವಲವಾಗಿರುವದೆಂಬದನ್ನು ವಾಚಕರೇ ತರ್ಕಿಸತಕ್ಕದ್ದು!

## ಘಾಸ–ದಾಣಾ

ಮಹಾರಾಷ್ಟ್ರದ ಇತಿಹಾಸದಲ್ಲಿ ರಾಜಾರಾಮನ ಈ ಕಾಲವು ಪರಮಾವಧಿ ಸತ್ವ ಪರೀಕ್ಷೆಯದೆಂದು ಹೇಳಬಹುದು. ಸತ್ವಶಾಲಿಗಳ ಸತ್ವದ ಪರೀಕ್ಷೆಯು ಇಂಥ ಕಠಿಣ ಕಾಲದಲ್ಲಿಯೇ ಆಗುತ್ತದೆ. ಯಾವದೊಂದು ಕಾರ್ಯವು ಭರದಿಂದ ನಡೆದಿರುವಾಗ ಅದರಲ್ಲಿ ವ್ಯವಹರಿಸುವ ಪ್ರತಿಯೊಬ್ಬ ಮನುಷ್ಯನ, ಈ ಕಾರ್ಯವು ನನ್ನಿಂದ ಆಗುತ್ತದೆಂದು ಸಾಧಾರಣವಾಗಿ ತಿಳಿದುಕೊಳ್ಳುತ್ತಿರುತ್ತಾನೆ; ಒಂದೊಂದು ಪ್ರಸಂಗದಲ್ಲಿ ಮೂರ್ಖರಾದ ದುರಭಿಮಾನಿಗಳು ತಮ್ಮ ಯೋಗ್ಯತೆಯನ್ನು, ಕಾರ್ಯಕ್ಕಿರುವ ತಮ್ಮ ಸಂಬಂಧದ ಮಟ್ಟನ್ನು ತಿಳಿದುಕೊಳ್ಳದೆ, ಅಹಂಭಾವದಿಂದಲೂ ಕುತ್ಸಿತತನದಿಂದಲೂ ''ನಾವಿಲ್ಲದಿದ್ದರೆ ಈ ಕಾರ್ಯವು ಹ್ಯಾಗೆ ನಡೆದೀತೆಂ''ದು ಆಕ್ಷೇಪಿಸಿ, ಕಾರ್ಯಹಾನಿಗಾಗಿ ತಮ್ಮಿಂದಾದಷ್ಟು ಯತ್ನಿಸುತ್ತಾರೆ. ಇಂಥವರು ಕಾರ್ಯದ ಸ್ವರೂಪವಿದ್ದಂತೆ ತಮ್ಮ ಪಾಲಿಗೆ ಧರ್ಮದ್ರೋಹವನ್ನಾಗಲಿ, ರಾಜದ್ರೋಹವನ್ನಾಗಲಿ, ದೇಶದ್ರೋಹವನ್ನಾಗಲಿ, ಆತ್ಮದ್ರೋಹವನ್ನಾಗಲಿ ಕಟ್ಟಿಕೊಳ್ಳುವರು. ಗಾಳಿಗೆ ಜೊಳ್ಳು ಹಾರಿ ಗಟ್ಟಿಯು ಉಳಿಯುವಂತೆ, ಕಾರ್ಯಸಾಧನಕ್ಕೆ ಅವಶ್ಯವಾಗಿದ್ದ ತಪೋರೂಪವಾದ ಬಿರುಗಾಳಿಯು ಬೀಸಿದ ಕೂಡಲೇ ಸ್ವಾರ್ಥಪರಾಯಣರಾದ ಈ ಪೊಳ್ಳು ಮನಸ್ಸಿನ ಜನರು ಹಾರಿಹೋಗಿ ತಮ್ಮ ಜೊಳ್ಳುತನವನ್ನೂ, ಯೋಗ್ಯತೆಯ ಹೀನತ್ವವನ್ನೂ ತೋರಿಸುವರು. ಈ ಸ್ಥಿತಿಯು ಅಕ್ಷರಶಃ ರಾಜಾರಾಮನ ಕಾಲಕಿರ್ದಿಗೆ ಹತ್ತುತ್ತದೆ. ಶಿವಪ್ರಭುವಿನಂಥ ಮಹಾ ತೇಜಸ್ವಿಯಾದ ಪ್ರಭುವು ದೇಹವಿಟ್ಟದ್ದರಿಂದ ಮಹಾರಾಷ್ಟ್ರವು ತಾಪಕ್ಕೊಳಗಾಯಿತು; ಆತನ ತರುವಾಯ ಪಟ್ಟವೇರಿದ ಸಂಭಾಜಿಯಂಥ ಕ್ರೂರನೂ, ದುರ್ವ್ಯಸನಿಯೂ, ವಿವೇಕಭ್ರಷ್ಟನೂ ಆದ ಪ್ರಭುವಿನ ತಾಪವನ್ನು ಸಹಿಸುವ

ಪ್ರಸಂಗವು ಮಹಾರಾಷ್ಟ್ರಕ್ಕೆ ಒದಗಿತು; ಅಷ್ಟರಲ್ಲಿ ಅತ್ಯಂತ ಬಲಾಢ್ಯನಾದ ಔರಂಗಜೇಬ ಬಾದಶಹನು ಮರಾಟರನ್ನು ಹುರಿದು ಅರಳುಮಾಡಬೇಕೆಂದು ದಗ ದಗ ಉರಿಯುತ್ತ ಬಂದನು. ಇಂಥ ದುಸ್ಸಹವಾದ ತಾಪತ್ರಯದಲ್ಲಿ ಕೆಚ್ಚೆದೆಯ ನಿಜವಾದ ಸ್ವಾಮಿಭಕ್ತರಲ್ಲದೆ ಸ್ವಾರ್ಥಪ ರಾಯಣರಾದ ಅಳ್ಳೆದೆಯ ದುರಭಿಮಾನಿಗಳು ಮಹಾರಾಷ್ಟ್ರ ರಾಜ್ಯ ರಕ್ಷಣದಂಥ ಕಠಿಣ ಕಾರ್ಯಕ್ಕೆ ಹೇಗೆ ಟೊಂಕಕಟ್ಟಬೇಕು? ಹೇಡಿಗಳಾದ ಅಧಮರು, ದೇಶಕಾರ್ಯಕ್ಕಾಗಿ ಟೊಂಕಕಟ್ಟುವದಂತೂ ಇರಲಿ, ಅವರು ದೇಶದ್ರೋಹವನ್ನು ಚಿಂತಿಸಿದರೆಂದಬಳಿಕ ಅವರ ಅಧಮತನವನ್ನು ಯಾರು ವರ್ಣಿಸಬಹುದು?

ಶ್ರೀ ಶಿವಪ್ರಭುವು ದೇಹವಿಡುವಾಗ—''ನೀವು ಮೂವರು ಬ್ರಾಹ್ಮಣರು, ಮೂವರು ಮರಾಟರು ಕೂಡಿ ಮುಣಗಿ ಹೋಗುವ ರಾಜ್ಯವನ್ನು ಉಳಿಸಿ ಕೊಳ್ಳುವಿರಿ.'' ಎಂದು ಭವಿಷ್ಯ ಹೇಳಿದನೆಂದು ಹಿಂದೆ ಹೇಳಿದೆಷ್ಟೇ? ಅಸಂಖ್ಯ ಜನ ಮರಾಟರಲ್ಲಿ ಆರೇ ಜನರನ್ನು ನಮ್ಮ ಶಿವಪ್ರಭುವು ಆರಿಸಿ ಹೇಳಿರುವದನ್ನು ನೋಡಿದರೆ, ಎಲ್ಲಿಯಾದರೂ, ಯಾವಾಗಾದರೂ ನಿಸ್ಪೃಹರಾದ ಕರ್ತವ್ಯನಿಷ್ಠರ ಸಂಖ್ಯೆಯು ಅಲ್ಪವಿರುತ್ತದೆಂಬ ಮಾತಿನ ಅನುಭವಕ್ಕೆ ಬಲವಾದ ಸಾಕ್ಷಿಯು ದೊರೆತಂತಾಗುವುದು! ಇರಲಿ. ಈ ಆರುಜನರಲ್ಲಿ ಸಂತಾಜಿ ಘೋರಪಡೆಯೆಂಬ ಮಹಾಪ್ರತಾಪಿಯಾದ ಮರಾಟ ಸರದಾರನು ಒಬ್ಬನಾಗಿದ್ದನು. ಈ ಪುಣ್ಯವಂತನ ಸ್ವಾಮಿ ನಿಷ್ಠೆಯು ಬಹು ಉಜ್ವಲವಾದದ್ದೆಂಬದನ್ನು, ಏಸೂಬಾಯಿಯವರ ಬಳಿಯಲ್ಲಿ ಆತನು ಮಾಡಿದ ಪ್ರತಿಜ್ಞೆಯಿಂದ ವಾಚಕರಿಗೆ ಗೊತ್ತಾಗಿರಬಹುದು. ಸ್ವಾಮಿಕಾರ್ಯವೇ ಈ ವೀರನ ಕಾರ್ಯವಾಗಿ ಹೋದದ್ದರಿಂದ, ತನ್ನದೆಂದು ಅಭಿಮಾನಪಡಲಿಕ್ಕೆ ಈತನಿಗೆ ಬೇರೆ ಕಾರ್ಯವೇ ಇದ್ದಿಲ್ಲ! ಈತನು ಉಣ್ಣುವದು ಸ್ವಾಮಿಕಾರ್ಯಕ್ಕಾಗಿ, ತಿನ್ನುವದು ಸ್ವಾಮಿಕಾರ್ಯಕ್ಕಾಗಿ, ಗಳಿಸುವದು ಸ್ವಾಮಿಕಾರ್ಯಕ್ಕಾಗಿ, ವೆಚ್ಚ ಮಾಡುವದು ಸ್ವಾಮಿಕಾರ್ಯಕ್ಕಾಗಿ ಆಗಿದ್ದು, ಸ್ವಾಮಿ ಕಾರ್ಯವನ್ನು ಮಿತಿಮೀರಿದ ಆಸಕ್ತಿಯಿಂದ ಮಾಡುತ್ತಿದ್ದರಿಂದ ಆಗಿನ ಕಾಲದ ಎಷ್ಟೋ ಜನರು ಈತನನ್ನು ಅಹಂಕಾರಿಯೆಂತಲೂ, ದುರಭಿಮಾನಿಯೆಂತಲೂ, ಶೀಘ್ರಕೋಪಿ ಯೆಂತಲೂ, ಜಾಜ್ವಲ್ಯ ಸ್ವಭಾವದವನೆಂತಲೂ, ನಿಷ್ಠುರನೆಂತಲೂ ಹಳಿದಿರಬಹುದು; ಆದರೆ ಕಾರ್ಯನಿಷ್ಠರು ಜನರ ಸ್ತುತಿ-ನಿಂದ್ಯೆಗಳನ್ನೆಲ್ಲಿ ಲೆಕ್ಕಿಸುವರು? ಅದರಂತೆ, ಸಂತಾಜಿಯು— ಸ್ವಾಮಿಕಾರ್ಯದಲ್ಲಿ ದೇಹವು ಉಳಿಯಲಿ—ಅಳಿಯಲಿ, ಶುದ್ಧಾಂತಃಕರುಣದಿಂದ ಸ್ವಾಮಿ ಸೇವೆಯಲ್ಲಿ ದೇಹವನ್ನು ಸವಿಸಿ, ಕೈಗೆ ಬಾರದಹಾಗಾದ ಬಳಿಕ ಅದನ್ನು ಚಲ್ಲಿಕೊಡುವ ದೊಂದೇ ತನ್ನ ಕೆಲಸವೆಂದು ತಿಳಿದು, ಆತನು ಕಡೆತನಕ ಕ್ರಿಯಾವಂತನಾಗಿ ನಡೆದನು. ಆದ್ದ ರಿಂದಲೇ ಇತಿಹಾಸದಲ್ಲಿ ಈ ವೀರಾಗ್ರಣಿಯು, ಸ್ವಾಮಿಕಾರ್ಯ ಸಾಧಕ—ವೀರಮಂಡಲದಲ್ಲಿ ಪ್ರಾಮುಖ್ಯವಾಗಿ ಎಣಿಸಲ್ಪಟ್ಟಿರುತ್ತಾನೆ!

ಸಂತಾಜಿಗೆ ಸ್ವಾಮಿಕಾರ್ಯದ ಎಲ್ಲ ಭಾರವು ತನ್ನ ಮೇಲೆಯೇ ಬಿದ್ದಂತೆ ಆಗಿತ್ತು. ತನ್ನಿಂದ ಸ್ವಾಮಿಗೆ ಯಾವಾಗಲೂ ಸಹಾಯವಾಗುತ್ತ ಹೋಗಬೇಕಲ್ಲದೆ, ತನ್ನ ಸಲುವಾಗಿ ತನ್ನ

ಸ್ವಾಮಿಯು ಪೇಚಾಡಬಾರದೆಂದು ಆತನು ಹೆಣಗುತ್ತಲಿದ್ದನು. ತನ್ನ ಸ್ವಾಮಿಗೆ ಈಗ ದ್ರವ್ಯದ ಕೊರತೆಯಿರುವದರಿಂದ, ತನ್ನ—ಹಾಗು ತನ್ನ ದಂಡಿನ ವೆಚ್ಚಕ್ಕಾಗಿ ಸ್ವಾಮಿಯ ಮೇಲೆ ದ್ರವ್ಯದ ಭಾರ ಹಾಕದೆ, ತಿರುಗಿ ತಾನೇ ಸ್ವಾಮಿಗೆ ದ್ರವ್ಯದ ಸಹಾಯ ಮಾಡಿ ಆತನನ್ನು ಸಂತೋಷ ಗೊಳಿಸಬೇಕೆಂದು ಆತನು ಯೋಚಿಸಿ, ಅದಕ್ಕಾಗಿ ಉಪಾಯವನ್ನು ಚಿಂತಿಸ ತೊಡಗಿದನು. ತನ್ನ ಸ್ವಾಮಿಯಾದ ಸಂಭಾಜಿಯನ್ನು ಬಾದಶಹನು ಕ್ರೂರತನದಿಂದ ಕೊಲ್ಲಿಸಿ ದ್ದೊಂದು ರೊಚ್ಚು ಆತನ ಹೊಟ್ಟೆಯಲ್ಲಿ ಇದ್ದೇ ಇತ್ತು. ತನಗೆ ದ್ರವ್ಯಪ್ರಾಪ್ತಿಯಾಗಿ, ಔರಂಗಜೇಬನ ಸೇಡು ತೀರಿಸಿದ ಸಮಾಧಾನವೂ ತನಗೆ ಆಗಬೇಕಾದರೆ, ತಾನು ಅಲ್ಲಲ್ಲಿ ಹೊಂಚು ಹಾಕಿ, ಮುಸಲ್ಮಾನ ಸರದಾರರನ್ನು ಹಣಿದು, ಅವರ ಬಳಿಯಲ್ಲಿದ್ದ ಧನ–ಧಾನ್ಯಗಳನ್ನು ಸುಲಿದುಕೊಳ್ಳುವದೊಂದೇ ಉಪಾಯವು ಇರುವದೆಂದು ಆತನು ತಿಳಿದು ಕೊಂಡನು. ಆಗ ಶೂರ ಸಂತಾಜಿಯು ತನ್ನ ಮನಸ್ಸಿನಲ್ಲಿ—''ಮಹಾರಾಜರನ್ನು ಕೊಲ್ಲಿಸಿದ್ದ ರಿಂದ ಬಾದಶಹನಿಗೆ ಆಕಾಶವು ಮೂರೇಗೇಣು ಉಳಿದಂಗಾಗಿರುತ್ತದೆ. ಅತ್ಯಂತವಾಗಿ ಕ್ಷೋಭಿಸಿರುವ ಆತನ ಸೈನ್ಯರೂಪವಾದ ಮಹಾಸಾಗರ ದಲ್ಲಿ, ಮರಾಟರ ರಾಜ್ಯನೌಕೆಗೆ ಎಷ್ಟು ಮಾತ್ರವೂ ಆಧಾರವಿಲ್ಲ. ಇಂಥ ಪ್ರಸಂಗದಲ್ಲಿ ಬಾದಶಹನ ''ಕರ್ತುಮನ್ಯತಾ ಕರ್ತಂ'' ಶಕ್ತಿಯ ಮುಂದೆ ಮರಾಟರ ಕೈಯನ್ನು ಚನ್ನಾಗಿ ತೋರಿಸಬೇಕು.

ಹೀಗೆ ಅಭಿಮಾನದಿಂದ ಪ್ರದೀಪ್ತನಾದ ಸಂತಾಜಿಯು ಶಂಭೂ ಮಹಾದೇವನ ಗುಡ್ಡದ ಕಡೆಗೆ ಹೋಗುವದಕ್ಕಾಗಿ ತನ್ನ ಸೈನ್ಯಕ್ಕೆ ಅಪ್ಪಣೆಮಾಡಿದನು. ಆತನು ಆ ಗುಡ್ಡದ ದರಿ–ಕಂದರಗಳಲ್ಲಿಯೂ, ಕಟ್ಟಡವಿಯಲ್ಲಿಯೂ ತನ್ನ ಜನರ ಗುಂಪುಗಳನ್ನು ಅಲ್ಲಲ್ಲಿ ಅಡಗಿಸಿ ಇಟ್ಟು, ಯಾವದಾದರೂ ಊರ ಮುಸಲ್ಮಾನ ಗವಡನು, ಅಥವಾ ಯಾವನೊಬ್ಬ ಅಧಿಕಾರಿಯು ಸಿಕ್ಕರೆ ತೀರಿತು, ಹದ್ದಿನ ಹಾಗೆ ಅವರ ಮೇಲೆ ಎರಗಿ ಅವರನ್ನು ಸುಲಿದು, ಮುಖ್ಯನನ್ನು ಮತ್ತೊಂದು ಊರ ಸಂತೆಯಲ್ಲಿ ಲಿಲಾವಿಗೆ ಹಚ್ಚುತ್ತಿದ್ದನು! ಆಗ ಆ ಮುಖ್ಯಸ್ಥನ ಆಪ್ತೇಷ್ಟರಾಗಲಿ, ಅಭಿಮಾನಿಗಳಾಗಲಿ ಸಂತಾಜಿಯು ಹೇಳಿದಷ್ಟು ದುಡ್ಡು ಕೊಟ್ಟು ಆತನ ಸೆರೆ ಬಿಡಿಸಿಕೊಂಡು ಹೋಗುತ್ತಿದ್ದರು! ಔರಂಗಜೇಬನ ಸೈನ್ಯವು ಅಮರ್ಯಾದಿತ ವಿದ್ದದ್ದೇನೋ ನಿಜ; ಆದರೆ ಮರಾಟರೆಂಬ ಹಸಿದ ತೋಳಗಳು ಮುಸಲ್ಮಾನರೆಂಬ ಕುರಿಗಳು ದಡ್ಡಿ ಬಿಟ್ಟು ತಪ್ಪಿಸಿಕೊಂಡು ಬಂದಕೂಡಲೆ, ಅವನ್ನು ಹರಿದು ತಿನ್ನದೇ ಬಿಡುತ್ತಿದ್ದಿಲ್ಲ!

ಹೀಗೆ ಸಂತಾಜಿಯು ತನ್ನ ಕಾರ್ಯವನ್ನು ಎಡಬಿಡದೆ ನಡಿಸುತ್ತಿರಲು, ಬಾದಶಹನ ಕಿವಿಗೆ—''ಇಂದು ಇಂಥ ಸರದಾರರನ್ನು ಮರಾಟರು ಸುಲಿದರು, ಇಂದು ಇಂಥ ಸರದಾರನ ಗೊತ್ತು ಹತ್ತಲೊಲ್ಲದು, ಇಂದು ಇಂಥ ಮನಸಬದಾರರನ್ನು ಕತ್ತೆಯ ಮೇಲೆ ಮೆರೆಸಿದರು.'' ಎಂಬಿವೇ ಮೊದಲಾದ ಸಣ್ಣ ಪುಟ್ಟ ಸುದ್ದಿಗಳು ಮುಟ್ಟಲು, ಆತನು ಸಂತಪ್ತನಾಗುತ್ತಿದ್ದನು. ಅಷ್ಟರಲ್ಲಿ ಸಂತಾಜಿಯ ದೂತರು ಬಂದು ತನ್ನ ಒಡೆಯನ ಮುಂದೆ—''ಸರದಾರ, ಮೊಗಲರು ನಮ್ಮ ಮೇಲೆ ಸಾಗಿ ಬರಹತ್ತಿದ್ದಾರೆ. ತನಗೆ ಚಿಮಟಿದಂತೆ ಮಾಡಿ ತ್ರಾಸ

ಕೊಡುವ ನಮ್ಮ ಶಾಸನ ಮಾಡುವದಕ್ಕಾಗಿ ಬಾದಶಹನು ಇಸ್ಮಾಯಿಲಖಾನನೆಂಬ ಒಬ್ಬ ಶೂರ ಸರದಾರನನ್ನು ದೊಡ್ಡ ಸೈನ್ಯದೊಡನೆ ಕಳಿಸಿರುವನು. ಸೈನ್ಯವು ಬೈಲಸೀಮೆಯಲ್ಲಿ ಬರಹತ್ತಿದೆ.'' ಎಂಬ ಸುದ್ದಿಯನ್ನು ಹೇಳಿದನು. ಅದನ್ನು ಕೇಳಿ ಸಂತಾಜಿಗೆ ಬಹಳ ಸಂತೋಷ ವಾಯಿತು. ಆತನು ತನಗೆ ಸುದ್ದಿಯನ್ನು ಹೇಳಿದವನ ಹಾದಿಯನ್ನು ಸಹ ನೋಡದೆ, ತಟ್ಟನೆ ತನ್ನ ಕುದುರೆಯನ್ನು ಹತ್ತಿಕೊಂಡವನು ಸಹ್ಯಾದ್ರಿಯದೊಂದು ಭಯಂಕರವಾದ ಪ್ರದೇಶದಲ್ಲಿ ಬಂದು ಇಳಿದನು. ಅದರ ಸುತ್ತುಮುತ್ತು ಉನ್ನತ ಪರ್ವತಗಳಿದ್ದವು. ಎಡಬಲದಲ್ಲಿ ಭಯಂಕರ ಅರಣ್ಯಗಳಿದ್ದವು. ಅಲ್ಲಿ ಮನುಷ್ಯರ ಸುಳುವಿನ ಸುದ್ದಿಯಿದ್ದಿಲ್ಲ. ನಡುನಡುವೆ ಯಾವನಾದರೊಬ್ಬ ಚಪಲ ಮರಾಟನು ತನ್ನ ಕುದುರೆಯನ್ನು ಹತ್ತಿಕೊಂಡು ಮೇಲಕ್ಕೆ ಹತ್ತಿ ಹೋಗುತ್ತಿರುವದು ಕಣ್ಣಿಗೆ ಬೀಳುತ್ತಿತ್ತು; ಆದರೆ ಅಷ್ಟರಲ್ಲಿ ನಡುವೇ ಆತನು ಕಣ್ಣಿಗೆ ಕಾಣದ ಹಾಗಾಗುತ್ತಿದ್ದನು. ಈ ಸ್ಥಳದಲ್ಲಿ ಸಂತಾಜಿಯ ಸೈನಿಕರು ಅಲ್ಲಲ್ಲಿ ಗುಂಪು ಗುಂಪಾಗಿ ಅಡಗಿಕೊಂಡು ಕುಳಿತಿದ್ದರು. ಅವರ ಸಂಸಾರವೆಲ್ಲ ಅವರ ಬೆನ್ನ ಮೇಲೆಯೇ ಇರುತ್ತಿತ್ತು, ರೊಟ್ಟಿ, ಹಿಂಡಿ, ಉರಳೇಗಡ್ಡಿ ಇವೇ ಮೊದಲಾದವುಗಳನ್ನು ತಿಂದು ಅವರು ಸಂತುಷ್ಟರಾಗುತ್ತಿದ್ದರು. ಕಂಬಳಿಯ ಮೇಲೆ ಅವರಿಗೆ ಸುಖದಿಂದ ನಿದ್ರೆ ಬರುತ್ತಿತ್ತು, ಅವರ ಉಡಿಗೆ–ತೊಡಿಗೆಗಳು ತೀರ ಬಡತನ ಸ್ಥಿತಿಯವಿದ್ದು, ಬರ್ಚಿ, ಕತ್ತಿ ಢಾಲು ಇವು ಅವರ ಮುಖ್ಯ ಆಯುಧಗಳಾಗಿದ್ದವು. ಚಪಲತನದಲ್ಲಿಯೂ, ಕಷ್ಟ ಸಹಿಸುವ ದರಲ್ಲಿಯೂ, ಉಪವಾಸವನವಾಸ ಬಿದ್ದು ಯುದ್ಧ ಮಾಡುವದರಲ್ಲಿಯೂ ಅವರನ್ನು ಯಾರೂ ಸರಿಗಟ್ಟುವ ಹಾಗಿದ್ದಿಲ್ಲ. ಇಂಥ ತನ್ನ ಸೈನಿಕರು ಅಲ್ಲಲ್ಲಿ ಅಡಗಿರುವಾಗ ಸಂತಾಜಿಯು ಮೇಲೆ ಹೇಳಿದಂತೆ ಕುದುರೆಯನ್ನು ಹತ್ತಿಕೊಂಡು ಬಂದು, ಒಂದು ಸಿಳ್ಳು ಹೊಡೆದನು. ಕೂಡಲೆ ಅಲ್ಲಲ್ಲಿ ಪಸರಿಸಿದ್ದ ಆತನ ಜನರೆಲ್ಲ ತಮ್ಮ ಒಡೆಯನ ಬಳಿಯಲ್ಲಿ ಒಟ್ಟು ಗೂಡುವದಕ್ಕಾಗಿ ಲಗುಬಗೆಯಿಂದ ಓಡಾಡಹತ್ತಿದರು. ನೂರಿನ್ನೂರು ಜನ ರಾವುತರು ಗಿಡ–ಗಂಟೆಗಳೊಳಗಿಂದಲೂ, ದರಿ–ಕಂದರಗಳೊಳಗಿಂದಲೂ ಕತ್ತಿಯನ್ನು ಹಿಡಿದುಕೊಂಡು ಹೊರಬಿದ್ದು ಬಂದರು!

ಈ ಮೇರೆಗೆ ಬಂದು ಒಟ್ಟುಗೂಡಿದ ತನ್ನ ಜನರನ್ನು ಕುರಿತು ಸಂತಾಜಿಯು ಗರ್ಜಿಸಿ ನುಡಿದನೇನಂದರೆ–ನನ್ನ ಶೂರ ರಾವುತರೇ, ಈವರೆಗೆ ನಾವು ಶ್ರೀ ಅಂಬಾಭವಾನಿಯನ್ನು ಪ್ರಾರ್ಥಿಸಿದ್ದರ ಫಲವು ಇಂದು ನಮಗೆ ಸಿಗುವ ಹಾಗೆ ತೋರುತ್ತದೆ. ವೈರಿಯು ನಮ್ಮ ಗವಿಯಲ್ಲಿ ಸೇರಲಿಕ್ಕೆ ಬರುತ್ತಲಿದ್ದಾನೆ. ನಡೆಯಿರಿ, ನಮ್ಮ ಶಿವಪ್ರಭುವಿನ ಕಾಯಕವನ್ನು ಮಾಡೋಣ ನಡೆಯಿರಿ. ಶಿವಪ್ರಭುವು ದಾವುದಖಾನನ ದೂಳವನ್ನು ಹ್ಯಾಗೆ ಹಾರಿಸಿದನು? ಎಕಲಾಸಖಾನ, ಬಾಕೇಖಾನ, ರಾಯಮುಕುಂದ, ಭವಾನ ಪುರೋಹಿತ ಇವರನ್ನು ಹ್ಯಾಗೆ ಗೊತ್ತಿಗೆ ಹಚ್ಚಿದನು! ಸುರತ ಪಟ್ಟಣವನ್ನು ಸುಲಿದು ಐದುಕೋಟಿ ಹೊನ್ನನ್ನೂ, ಐದುಸಾವಿರ ಕುದುರೆಗಳ ಪಾಗೆಯನ್ನೂ ರಾಯಗಡಕ್ಕೆ ತಂದುಹಾಕಿ, ಮರಾಟರ ಬರ್ಚಿಯ ಪ್ರಭಾವವನ್ನು ಹ್ಯಾಗೆ ತೋರಿಸಿದನು. ನಡೆಯಿರಿ, ಆತನು ತೋರಿಸಿರುವ ಹಾದಿಯನ್ನೇ ನಾವು ಹಿಡಿಯೋಣ!

ನಮ್ಮ ಮಹಾರಾಜರು ಸದ್ಯಕ್ಕೆ ಪಲ್ಹಾಳಗಡದಲ್ಲಿರುವರು. ದುಡ್ಡಿನ, ಹಾಗು ಜನರ, ಅದರಂತೆ ಧಾನ್ಯಾದಿಗಳ ಕೊರತೆಯು ಅವರಿಗೆ ವಿಶೇಷವಾಗಿ ಇರುತ್ತದೆ. ನಡೆಯಿರಿ, ''ಹರಹರ ಮಹಾದೇವ'' ಎಂದು ಗರ್ಜಿಸಿ, ಸ್ವರಾಜ್ಯ ಪ್ರಾಪ್ತಿಗಾಗಿ ನೂರಾರು ಒಂಟೆಗಳ ಮೇಲೆ ದುಡ್ಡನ್ನು ಹೇರಿ ಮಹಾರಾಜರ ಕಡೆಗೆ ಕಳಿಸೋಣ ನಡೆಯಿರಿ! ಇನ್ನು ಮೇಲೆ ನಮ್ಮ ಹೊಟ್ಟೆಯ ಭಾರವನ್ನು ಮಹಾರಾಜಾರ ಮೇಲೆ ಹಾಕುವದು ಸರಿಯಲ್ಲ. ಪರಮ ದಯಾಳು ವಾದ ಬಾದಶಹನು, ಕೋಟಿಗಟ್ಲೆ ದ್ರವ್ಯವನ್ನೂ ಲಕ್ಷಗಟ್ಲೆ ಕಾಲಾಳುಗಳನ್ನೂ ಸಾವಿರಗಟ್ಲೆ ಆನೆ–ಒಂಟೆ–ಕುದುರೆಗಳನ್ನೂ ನೆಲೆಯಿಲ್ಲದಷ್ಟು ಮುತ್ತು–ರತ್ನ–ಭಂಗಾರವನ್ನೂ ತನ್ನ ವೈಭವವನ್ನು ಹೆಚ್ಚಿಸುವದಕ್ಕಾಗಿ ನಮ್ಮ ಬಳಿಗೆ ತಕ್ಕೊಂಡು ಬಂದಿದ್ದಾನೆ. ಬಾದಶಹನನ್ನು ಹೇರುಹೊರುವ ಎತ್ತನ್ನು ಮಾಡಿ, ನಾವು ಆತನ ಐಶ್ವರ್ಯವನ್ನು ಭೋಗಿಸಿದರೆ ಮಾತ್ರ, ನಾವು ಶಿವಪ್ರಭುವಿನ ಹೆಸರು ಹೇಳುವದರ ಸಾರ್ಥಕವಾಗುವದು! ಬಾದಶಹನು ನಮ್ಮ ಕುದುರೆಗಳ ಡಾಣೆಯನ್ನು ತನ್ನ ಕುದುರೆಗಳ ಹೆಗಲ ಮೇಲೆ ಹೇರಿಕೊಂಡು ಬಂದಿದ್ದಾನೆ. ಆದ್ದರಿಂದ ನಾವು ಆ ''ಘಾಸ–ದಾಣೆ''ಯನ್ನು ಇಳಿಸಿಕೊಳ್ಳೋಣ ನಡೆಯಿರಿ, ನಮ್ಮ ಶೂರ ರಾವುತರೇ, ದಿವಾಕಿನಿಂದ ಬರುವ ಮೊಗಲ ಸೈನ್ಯವನ್ನು ಇಕ್ಕಟ್ಟಿನ ಸ್ಥಳದಲ್ಲಿ ಗಂಟು ಬಿದ್ದುನಾಶ ಮಾಡೋಣ ನಡೆಯಿರಿ!

ಈ ಮೇರೆಗೆ ಸಂತಾಜಿಯು ಗರ್ಜಿಸಲು, ಯಾವತ್ತುಮಹಾರಾಷ್ಟ್ರ ವೀರರು ''ಹರಹರ ಮಹಾದೇವ'' ಎಂದು ಗರ್ಜಿಸಿದರು. ಅವರ ಗಂಭೀರ ಧ್ವನಿಯು ಸುತ್ತುಮುತ್ತಲಿನ ಪರ್ವತಶ್ರೇಣಿಗಳಲ್ಲಿ ಪ್ರತಿಧ್ವನಿತವಾಗಿ, ಅದು ಮೇಘ ಗರ್ಜನೆಯನ್ನು ಅತಿಕ್ರಮಿಸಲು, ವನ ಪಶುಗಳು ದಿಕ್ಕುಗೆಟ್ಟು ಓಡಹತ್ತಿದವು. ಸಂತಾಜಿಯು ತನ್ನ ಒಟ್ಟು ಗೂಡಿದ ಸೈನ್ಯದಲ್ಲಿ ಬೇರೆ ಬೇರೆ ಭಾಗಗಳನ್ನು ಮಾಡಿದನು. ಅವರು ಬೇರೆ ಬೇರೆ ಒಳದಾರಿಗಳಿಂದ ಹೊಳೆ ಹಳ್ಳಗಳ ಆಸರ ಹಿಡಿದು ಹೋಗಿ ಖಾನನ ಸೈನ್ಯದ ಹಿಂಭಾಗವನ್ನೂ, ಮುಂಭಾಗವನ್ನೂ ಹೊಡೆಯಲಿಕ್ಕೆ ಹೊಂಚು ಹಾಕಿಕೊಂಡು ಸಾಗಿಬರಬೇಕೆಂದು ಗೊತ್ತಾಗಿತ್ತು. ಮೊದಲು ಧಾನ್ಯ ಸಾಮುಗ್ರಿಗಳನ್ನು, ಆನೆ–ಕುದುರೆ ಒಂಟೆಗಳನ್ನು ಅಪಹರಿಸಿ, ತಕ್ಕ ಸಮಯವು ಒದಗಿದ ಕೂಡಲೆ ಖಾನನ ಸೈನ್ಯದಮೇಲೆ ಬಿದ್ದು ಅದನ್ನು ತುಂಡರಿಸಬೇಕೆಂತಲೂ ಸಂಕೇತವಾಗಿತ್ತು. ಅವರ ಈ ಸಂಕೇತವು ಕೊನೆಗೊಂಡರೆ ಮಾತ್ರ ಅವರ ರಣಕೌಶಲ್ಯವು ವ್ಯಕ್ತವಾಗುತ್ತಿತ್ತು. ಈ ಮೊದಲನೆಯ ತುತ್ತು ದಕ್ಕಿ ಶುಭ ಶಕುನವಾಗಬೇಕೆಂಬ ಮಹತ್ವಾಕಾಂಕ್ಷೆಯನ್ನು ಸಂತಾಜಿಯು ತಾಳಿದ್ದನು. ಅದರಂತೆ, ಆರಂಭಕ್ಕೆ ತನ್ನ ಕೈಯ್ಯಲ್ಲಿ ಸಿಕ್ಕಿದ್ದ ಪರಾಕ್ರಮಿ ಯಾದ ಮೊಗಲ ಸರದಾರನ ತಲೆಯ ಮುಂಡಾಸವನ್ನು ತನ್ನ ಪ್ರಭುವಿನ ಚರಣದ ಮೇಲೆ ಇಡುವ ಸುಯೋಗವು ಒದಗಬೇಕೆಂದು ಆತನು ಮನಮುಟ್ಟಿ ಬಯಸುತ್ತಿದ್ದನು. ಇಂಥ ಸ್ಥಿತಿಯಲ್ಲಿ ಸಂತಾಜಿಯು ಖಾನನ ಸಾಮಾನು ಒಯ್ಯುವ ಲಮಾಣಿಗಳ ತಾಂಡೆಯನ್ನು ಸುಲಿ ಯಲು, ಅವರು ಅಳುತ್ತ ತಮ್ಮ ಖಾನನ ಬಳಿಗೆ ಬಂದು–ಹುಜುರ, ಆ ಗುಡ್ಡದ ಒಬ್ಬೆಯಲ್ಲಿ ಕಾಫರರು ನಮ್ಮನ್ನು ಪೂರ್ಣವಾಗಿ ಸುಲಿದರು. ಮೈ ಮೇಲಿನ ಒಂದೊಂದು ಅರಿವೆಯನ್ನು

ಮಾತ್ರ ಬಿಟ್ಟು ನಮ್ಮನ್ನು ದೂಡಿ ಹಾಕಿದರು. ಎಂದು ದೂರಿಕೊಳ್ಳುತ್ತಿರಲು, ''ನಮ್ಮ ಸೈನ್ಯದ್ದೊಂದು ಗುಂಪು ಎಲ್ಲಿಯೋ ಮಾಯವಾಯಿತೆಂದು, ಒಬ್ಬರು ಬಂದು ಹೇಳಿದರು. ಈ ಸುದ್ದಿಗಳನ್ನು ಕೇಳಿ ಖಾನನ ಸೈನಿಕರು ಗಾಬರಿಯಾದರು. ಅಷ್ಟರಲ್ಲಿ ''ಆಗೋ ನೋಡಿರಿ, ಅತ್ತ ನೋಡಿರಿ, ಕಾಫರರು ಆ ಗುಡ್ಡದಿಂದ ಇಳಿದು ಬರುತ್ತಾರೆ'' ಎಂದು ಖಾನನ ಬಲಗಡೆಯ ಮಗ್ಗಲಿನ ಜನರು ಒಂದೇಸವನೆ ಕೂಗಹತ್ತಿದರು. ಅದನ್ನು ನೋಡಿಯಂತು ಖಾನನ ದಂಡಾಳುಗಳ ಎದೆಯೊಡೆದು ನೀರಾಯಿತು, ಕಾಫರರ ಆ ಗುಂಪು ನೋಡ ನೋಡುತ್ತಿರುವಷ್ಟರಲ್ಲಿ ಮತ್ತೆ ಅದೃಶ್ಯವಾಯಿತು. ಆಗ ಖಾನನ ಸೈನಿಕರು, ತಮ್ಮನ್ನು ಪುಂಡ ಮರಾಟರು ಹೊಂಚುಹಾಕಿ ಯಾವಾಗ ಹಣೆಯುವರೋ ಎಂದು ದಂಗುಬಡೆದು ಆಲೋಚಿ ಸಹತ್ತಿದರು.

ಸೈನಿಕರು ಇಷ್ಟು ಗಾಬರಿಯಾದರೂ,ಧೈರ್ಯಶಾಲಿಯಾದ ಖಾನನು ಹೆದರಲಿಲ್ಲ. ಆತನು ಹಲವು ಸಂಗ್ರಾಮಗಳ ಅನುಭವವನ್ನು ಪಡೆದಿದ್ದ ಗಂಡುಗಲಿಯಾಗಿದ್ದನು. ಆತನು ತನ್ನ ಸೈನ್ಯದಲ್ಲಿ ಎರಡು ಭಾಗಗಳನ್ನು ಮಾಡಿ, ಅವುಗಳ ನಡುವೆ ಸಾಮಾನುಗಳ ಎತ್ತು ಗಳನ್ನು ಹಾಕಿ ತಾನು ಸೈನ್ಯದ ಮುಂಭಾಗದಿಂದ ಹಿಂಭಾಗಕ್ಕೆ, ಹಿಂಭಾಗದಿಂದ ಮುಂಭಾಗಕ್ಕೆ ಹೋಗುತ್ತ ಜಾಗರೂಕತೆಯಿಂದ ರಕ್ಷಿಸುತ್ತ, ಸೈನ್ಯವನ್ನು ಸಾಗಿಸಿಕೊಂಡು ನಡೆದನು. ಅಷ್ಟರಲ್ಲಿ ಒಂದು ಚಮತ್ಕಾರದ ಪ್ರಸಂಗವು ಒದಗಿತು; ಖಾನನ ಮುಂಭಾಗದ ಸೈನಿಕರು ಒಂದು ಗುಡ್ಡವನ್ನು ಇಳಿದು ಬೈಲು ಪ್ರದೇಶಕ್ಕೆ ಹೋದರು; ಹಿಂಭಾಗದ ಸೈನಿಕರು ಗುಡ್ಡವನ್ನು ಹತ್ತತೊಡಗಿದ್ದರು, ಸಾಮಾನದ ಎತ್ತುಗಳು ಮಾತ್ರ ಗುಡ್ಡದ ತಲೆಯ ಮೇಲೆ ಉಳಿದವು. ಇದೇ ಸಂಧಿಯನ್ನು ಕಾದುಕೊಂಡು ಕುಳಿತಿದ್ದ ಮರಾಟರು ಆ ಗುಡ್ಡದ ಎರಡೂ ಮಗ್ಗಲಿನ ಇಳಕಲುಗಳಿಂದ ಸರಸರ ಏರಿಬಂದು ಲಮಾಣಿಗಳಿಗೆ ಗಂಟುಬಿದ್ದರು. ಮರಾಟರನ್ನು ನೋಡಿದಕೂಡಲೇ ಅರ್ಧ ಸತ್ತುಹೋಗಿದ್ದ ಲಮಾಣಿಗಳು ಯುದ್ಧವೇನು ಮಾಡುವರು? ಆಗ ಧೀರರಾದ ಅಲ್ಪಜನ ಮರಾಟರು ಅತ್ಯಂತ ಚಾಪಲ್ಯದಿಂದ ಖಾನನ ಸಾಮಾನು ಗಳನ್ನೆಲ್ಲ ಹೊರಡಿಸಿಕೊಂಡು ಹೋಗಿ ಎಲ್ಲಿಯೋ ಕಂದರದಲ್ಲಿ ಗುಪ್ತವಾಗಿ ಬಿಟ್ಟರು. ಈ ಕಾಲದಲ್ಲಿ ಖಾನನು ಗುಡ್ಡದ ಕೆಳಗಿದ್ದನು. ಮರಾಟರು ಹೀಗೆ ತನ್ನ ಅನ್ನಸಾಮಗ್ರಿಯ ಸುಲಿಯುವದನ್ನು ನೋಡಿ, ಅತ್ಯಂತ ತ್ವೇಷದಿಂದ ಗುಡ್ಡವನ್ನು ಏರಹತ್ತಿದನು. ಆತನು ಗುಡ್ಡದ ತಲೆಯ ಮೇಲೆ ಬಂದು ನೋಡುತ್ತಾನೆ, ಬೈಲಲ್ಲಿ ಹೋಗಿರುವ ತನ್ನ ಸೈನ್ಯದ ಮೇಲೆ ಮರಾಟರ ಬೇರೊಂದು ಗುಂಪು ಬಿದ್ದು, ಅದನ್ನು ತುಂಡರಿಸುತ್ತಲಿತ್ತು, ಗುಡ್ಡದ ತಲೆಯ ಮೇಲಿನ ಮರಾಟರಂತೂ ಯಾವಾಗೋ ಸಾಮಾನುಗಳನ್ನು ಸಾಗಿಸಿ ಕೊಂಡು ವಾನರರಂತೆ ಗುಡ್ಡವಿಳಿದು ಹೋಗಿಬಿಟ್ಟಿದ್ದರು!

ಈ ಅನರ್ಥವನ್ನು ನೋಡಿ ಖಾನನು ತನ್ನ ಹಿಮ್ಮಗ್ಗಿಲಿನ ಸೈನ್ಯವನ್ನು ಕೂಡಿಕೊಂಡು ಆ ಬೈಲೊಳಗಿನ ಸೈನಿಕರಿಗೆ ಸಹಾಯಮಾಡುವದಕ್ಕಾಗಿ ವೇಗದಿಂದ ಹೊರಟನು. ಆದರೆ ಅವನು ಮಾಡುತ್ತಾನೇನು? ಈರ್ಷೆಯಿಂದ ಗುಡ್ಡವನ್ನು ಹತ್ತಿ ಇಳಿಯುವದರೊಳಗೆ ಅವರ

ಸೈನಿಕರು ಜರ್ಜರರಾಗಿ ಹೋಗಿದ್ದರು. ಮೊಗಲ ಸೈನಿಕರು ಸುಖಕ್ಕೆ ಮೆಚ್ಚಿದವರಾದ್ದರಿಂದ, ಕಾಟಕತನದ ಮರಾಟರಿಗೆ ಅವರು ಈಡಾಗುತ್ತಿದ್ದಿಲ್ಲ. ಖಾನನು ಬೈಲಲ್ಲಿ ಇಳಿದು ಹೋಗಿ ಎಲ್ಲಿಯಾದರೂ ಊರು ಕೇರಿಗಳಿದ್ದರೆ ಜನರನ್ನು ಸುಲಿದು, ಅಥವಾ ಹೊಲವನ್ನು ಹಾಳು ಮಾಡಿ ಹೊಟ್ಟೆಯ ತಾಪವನ್ನು ಶಾಂತಮಾಡಿಕೊಳ್ಳಬೇಕೆಂದು ತನ್ನ ಸೈನ್ಯದೊಡನೆ ಮೈಮೇಲೆ ಅರವಿಲ್ಲದವನಂತೆ ತಿರುಗಹತ್ತಿದನು; ಆದರೆ ಮರಾಟರು ಊರು ಹೊಲ ಗಳನ್ನು ಸುಟ್ಟುಬಿಟ್ಟದ್ದರಿಂದ ಖಾನನ ಸೈನಿಕರಿಗೆ ತುತ್ತು ಅನ್ನ ಸಿಗಲೊಲ್ಲದು, ಗುಟುಕು ನೀರು ಸಿಗಲೊಲ್ಲವು! ಮೊಗಲ ಸೈನಿಕರು ಬಲಿಷ್ಠರಿದ್ದರು; ಅವರ ಶಸ್ತ್ರಾಸ್ತ್ರಗಳು ಶ್ರೇಷ್ಠ ವಾದವುಗಳಿದ್ದವು! ಆದರೆ ಹಸಿವಿನಿಂದ ಕಂಗಾಲಾಗಿ ಅವರ ಶಸ್ತ್ರಗಳೇ ಅವರಿಗೆ ಭಾರ ವಾಗಿರುವಾಗ ಅವರೇನು ಮಾಡಬೇಕು? ಈ ಸ್ಥಿತಿಯಲ್ಲಿ ಸಂತಾಜಿಯು ತನ್ನ ಆರಿಸಿದ ನೂರಿನ್ನೂರು ಸೈನಿಕರೊಡನೆ ಖಾನನ ಸೈನ್ಯದ ಮೇಲೆ ಅಕಸ್ಮಾತ್ ಹದ್ದಿನಂತೆ ಎರಗಿದನು. ಖಾನನಾದರೂ ತನ್ನ ಸೈನ್ಯವನ್ನು ಹುರಿದುಂಬಿಸಿ ಪರಮಾವಧಿಯಾದ ಶೌರ್ಯದಿಂದ ಕಾದಿದನು; ಆದರೆ ಹಿಸಿವಿನಿಂದ ಕಂಗಾಲಾದ ಖಾನನ ಸೈನಿಕರು ಮರಾಟರ ಉಪಟಳಕ್ಕೆ ಈಡಾಗಲಿಲ್ಲ. ಸಂತಾಜಿಯ ಕೈ ಕತ್ತಿಯು ಅಳ್ಳು ಹುರಿದಂತೆ ಮುಸಲ್ಮಾನರ ರುಂಡ ಗಳನ್ನು ಹಾರಿಸುತ್ತಲಿತ್ತು. ಆತನ ಪರಾಕ್ರಮವನ್ನು ನೋಡಿ ಖಾನನೂ, ಆತನ ಸೈನಿಕರೂ ಬಟ್ಟು ಕಚ್ಚಿ, ಈತನು ಸೈತಾನನೇ ಸರಿಯೆಂದು ಅಂದುಕೊಂಡರು. ತನ್ನ ಸೈನಿಕರು ಹತವೀರ್ಯರಾಗಿ ಸುಮ್ಮನೆ ಪಟಪಟ ಸಾಯುವದನ್ನು ನೋಡಿ, ಹಾಗು ತನಗೆ ಬಲವಾದ ಗಾಯವಾದದ್ದನ್ನು ಮನಸ್ಸಿನಲ್ಲಿ ತಂದು, ಖಾನನು ಸಂತಾಜಿಗೆ ಶರಣುಹೋದನು. ಕೂಡಲೆ ಸಂತಾಜಿಯು ತನ್ನ ಸೈನಿಕರು ಮಾಡುತ್ತಿದ್ದ ಸಂಹಾರದ ಕಾರ್ಯವನ್ನು ನಿಲ್ಲಿಸಿದನು. ನಿಷ್ಕಾರಣ ರಕ್ತಪಾತವಾಗುವದು ಸಂತಾಜಿಯ ಮನಸ್ಸಿಗೆ ಎಷ್ಟು ಮಾತ್ರವೂ ಬರುತ್ತಿದ್ದಿಲ್ಲ. ಖಾನನು ಗಾಯಹೊಂದಿ ನೆಲ ಕ್ಕುರಳಿದ್ದನು. ಬಹುತರ ಖಾನನ ಸೈನಿಕರ ಗತಿಯೂ ಹೀಗೆಯೇ ಆಗಿತ್ತು. ಸಂತಾಜಿಯ ಜನರು ಸೈನಿಕರನ್ನು ಸುಲಿದು ಝಳ ಝಳ ಮಾಡಿದ್ದರು. ಸಂತಾಜಿಯು ಇಸ್ಮಾಯಿಲ ಖಾನನ್ನೂ, ಬೇರೆ ಮುಖ್ಯ ಮುಖ್ಯ ಜನರನ್ನೂ ಸೆರೆಹಿಡಿದು, ಅವರನ್ನು ಸಾಗಿಸಿಕೊಂಡು ಅರಣ್ಯವನ್ನು ಹೊಕ್ಕನು.

ಈ ಮೇರೆಗೆ ಸಂತಾಜಿಯು ಪರಾಕ್ರಮದಿಂದ ತನ್ನ ಸಂಕೇತವನ್ನು ಪೂರ್ಣಮಾಡಿ ಕೊಂಡು ಅಶ್ವಾರೂಢನಾಗಿ ವೈಭವದೊಡನೆ ಎಲ್ಲಕ್ಕೂ ಮುಂದೆಸಾಗಿದ್ದಾನೆ; ರಕ್ತದಿಂದ ಕೆಂಪಾದ ಆತನ ಖಡ್ಗವು ಟೊಂಕದಲ್ಲಿ ಹಾಗೆ ಅಲುಗಾಡುತ್ತಲಿದೆ. ಆತನ ಬಲಗೈಯಲ್ಲಿ ಭಯಂಕರವಾದ ದೊಡ್ಡೊಂದು ಬರ್ಚಿಯು ಇರುತ್ತದೆ; ಆತನ ಎಡಗೈಯಲ್ಲಿ ಕುದುರೆಯ ಲಗಾಮು ಇರುತ್ತದೆ; ಆತನ ಹಿಂದೆ ಯುದ್ಧದಲ್ಲಿ ಪರಾಜಿತರಾಗಿ ತಲೆಕೆಳಗೆ ಮಾಡಿಕೊಂಡಿದ್ದ ಖಾನನೇ ಮೊದಲಾದ ಸೆರೆಯಾಳುಗಳು ಕುದುರೆಯನ್ನು ಹತ್ತಿ ಸಾಗಿಬರುತ್ತಲಿದ್ದಾರೆ; ಅವರ ಹಿಂದೆ ಸಂತಾಜಿಯು ಸೈನ್ಯವು ಸಾಗಿಬರುತ್ತಲಿದೆ. ಈ ಚಂದದಿಂದ ಮಹಾರಾಷ್ಟ್ರವೀರನು ಸಾಗಿರುವಾಗ ಆತನ ಮನಸ್ಸಿನಲ್ಲಿ —''ನಾನು ಈಗ ಪನ್ಹಾಳಗಡಕ್ಕೆ ಮಹಾರಾಜರ ಬಳಿಗೆ ಹೋಗಬೇಕೇ, ಅಥವಾ ಶಂಭೂ ಮಹಾರದೇವನ ಗುಡ್ಡದಲ್ಲಿ ಸದ್ಯದ ಮಟ್ಟಿಗೆ ಸ್ಥಾಪಿಸಿರುವ ನಮ್ಮ ಆಶ್ರಮಕ್ಕೆ ಹೋಗಬೇಕೆ,'' ಎಂಬ ವಿಚಾರವು ಉತ್ಪನ್ನವಾಗಿ, ಆತನು ಸ್ವಲ್ಪ

ಹೊತ್ತು ಎತ್ತಕಡೆಯಿಂದ ಎತ್ತಕಡೆಗೋ ಅಲೆದಾಡುತ್ತಲಿದ್ದನು. ಇಷ್ಟರಲ್ಲಿ ಆತನ ಲಕ್ಷ್ಯವು ತನ್ನ ಬೆನ್ನಹಿಂದಿನ ಸೆರೆಯಾಳುಗಳ ಕಡೆಗೆ ಹೋಯಿತು. ಹಸಿವೆಯಿಂದಲೂ, ಆಯಾಸ ದಿಂದಲೂ ಖಾನನೇ ಮೊದಲಾದವರು ತೀರ ಹಣ್ಣಾದದ್ದನ್ನು ನೋಡಿ ಸಂತಾಜಿಯ ಮನಸ್ಸು ಕರಗಿತು. ಆತನು ತನ್ನ ಜನರಿಗೆ ಕಟ್ಟಡವಿಯಲ್ಲಿ ನೀರಿನ ಆಸರ ನೋಡಿ ತಳವೂರಲು ಆಜ್ಞಾಪಿಸಿದನು.

ಸಂತಾಜಿಯ ಈ ಅಪ್ಪಣೆಯನ್ನು ಕೇಳಿ ಖಾನನೇ ಮೊದಲಾದ ಸೆರೆಯಾಳುಗಳ ಎದೆಗಳು ದಸಕ್ಕೆಂದವು! ಅವರು ಥರ ಥರ ನಡುಗಹತ್ತಿದರು. ಇನ್ನು ಈ ಕಾಫರರು ತಮ್ಮ ತಲೆಗಳನ್ನು ಹಾರಿಸುವರೆಂಬ ಅಂಜಿಕೆಯು ಅವರಲ್ಲಿ ಉತ್ಪನ್ನವಾಯಿತು. ಸಂತಾಜಿಯು ಅದನ್ನು ಗಾಂಭೀರ್ಯದಿಂದ ನೋಡುತ್ತಲಿದ್ದನು. ಆತನು ತನ್ನ ಜನರನ್ನು ಕುರಿತು–ಖಾನನ ಹಾಗು ಆತನ ಸಂಗಡಿಗರ ಊಟ ಉಡಿಗೆಯ ವ್ಯವಸ್ಥೆಯು ಇದೇ ಮುಕ್ಕಾಮಿನಲ್ಲಿ ಆಗಬೇಕು. ಊಟವಾದ ಬಳಿಕ ಮಧ್ಯಾನ್ಹದಲ್ಲಿ ತಳ ಕಿತ್ತೋಣ; ಎಂದು ಹೇಳಿದನು. ಅದನ್ನು ಕೇಳಿ ಸಂತಾಜಿಯ ಸೈನಿಕರು ಖಾನನ ಪರಿವಾರದ ಯೋಗಕ್ಷೇಮದಲ್ಲಿ ತೊಡಗಿದರು. ತಾವೂ ಸರತಿಯಂತೆ ತಮ್ಮ ಹೊಟ್ಟೆಯ ವ್ಯವಸ್ಥೆಯನ್ನು ಮಾಡಿಕೊಳ್ಳ ಹತ್ತಿದರು. ಇತ್ತ ಸಂತಾಜಿಯೂ, ತನ್ನ ನಿತ್ಯಕರ್ಮವನ್ನು ತೀರಿಸಿಕೊಳ್ಳುವದಕ್ಕಾಗಿ ಹೊರಟು ಹೋದನು. ಇನ್ನು ಈ ಕಾಫರರು ತಮ್ಮನ್ನು ಏನು ಮಾಡುವರೋ ಎಂಬ ವಿವೇಚನೆಯಲ್ಲಿ ಆ ಸೆರೆಯಾಳುಗಳು ಮುಣುಗಿ ಹೋಗಿದ್ದರು; ಎಂಥ ಪ್ರಸಂಗದಲ್ಲಿಯಾದರೂ ಮಧ್ಯಾನ್ಹದಲ್ಲಿ ಈ ಹೊಟ್ಟೆಯ ತೆಗ್ಗನ್ನು ಮುಚ್ಚದಿದ್ದರೆ ಯಾರಿಗೂ ನಿರ್ವಾಹವಾಗದಷ್ಟೇ? ಅದರಂತೆ ಸಂತಾಜಿಯ ಜನರು ಕೊಟ್ಟಿದ್ದ ಸಾಮಗ್ರಿಯಿಂದ ಖಾನನ ಜನರು ಅಡಿಗೆಮಾಡಿ ಕೊಂಡು ಹ್ಯಾಗಾದರೂ ಉಂಡರು. ಅಷ್ಟರಲ್ಲಿ ಸಂತಾಜಿಯು ಉಂಡು ಸ್ವಲ್ಪ ವಿಶ್ರಮಿಸ ಹತ್ತಿದನು. ಮುಂದೆ ಸ್ವಲ್ಪ ಹೊತ್ತಿನ ಮೇಲೆ ಆತನು ಖಾನನನ್ನು ಕರೆಯಲು, ಭಯ ದಿಂದ ಖಾನನ ಸರ್ವಾಂಗವು ಬೆವತಿತ್ತು, ಆದರೂ, ಭಯಂಕರನಾದ ಈ ಕಾಫರನ ಮುಂದೆ ತಾನು ನಿಂತುಕೊಳ್ಳದಿದ್ದರೆ ನಿರ್ವಾಹವಿಲ್ಲೆಂದು ತಿಳಿದು, ಖಾನನು ಸಂತಾಜಿಯ ಬಳಿಗೆ ಹೋದನು. ಆಗ ಸಂತಾಜಿಯು ಖಾನನನ್ನು ನೋಡುತ್ತ ಗಾಂಭೀರ್ಯದಿಂದ ನುಡಿದನೇನಂದರೆ—''ಖಾನಸಾಹೇಬ, ಈ ನಮ್ಮ ಮರಾಟರ ಸೈನ್ಯವನ್ನು ನೋಡಿದಿರಾ? ನಾವು ಸ್ವಾತಂತ್ರ್ಯಕ್ಕೋಸ್ಕರ ಯುದ್ಧಮಾಡಲಿಕ್ಕೆ ಟೊಂಕ ಕಟ್ಟಿರುತ್ತೇವೆ. ನಮ್ಮ ಸಂಸಾರ, ನಮ್ಮ ಹೆಂಡಿರು–ಮಕ್ಕಳು ಇವರೆಲ್ಲರೂ ನಮ್ಮ ಬೆನ್ನಿಗಿರುವರು. ಅಂಥ ಪ್ರಸಂಗ ಒದಗಿದ ಕೂಡಲೆ ನಾವು ರಂಟಿಕುಂಟೆಗಳನ್ನು ಬಿಟ್ಟು, ಕೈಯಲ್ಲಿ ಪಟ್ಟಾಕತ್ತಿಯನ್ನು ಹಿಡಿದು ನಿಮ್ಮ ಸಂಗಡ ಯುದ್ಧಕ್ಕೆ ಬರುತ್ತೇವೆ. ನಮ್ಮ ಹೊಟ್ಟೆ, ನಾವು ತುಂಬಿಕೊಂಡು ನಮ್ಮ ಮಹಾ ರಾಜರಿಗೆ ಯಾವ ತೊಂದರೆಯೂ ಆಗದಂತೆ ನಾವು ಲಕ್ಷಾವಧಿ ಸೈನ್ಯವನ್ನು ಕೂಡಿಸಿ ನಿಮ್ಮನ್ನೂ, ನಿಮ್ಮ ಬಾದಶಹನನ್ನೂ ಹಣ್ಣು ಮಾಡುವೆವು. ಈಗ ನಿಮಗೆ ನಿಮ್ಮ ಜೀವವು ಬೇಕಾಗಿದ್ದರೆ ನಿಮ್ಮ ವಿಶ್ವಾಸದ ಒಬ್ಬ ಸೇವಕನನ್ನು ಕಳಿಸಿ, ನಿಮ್ಮ ದೇಹದ ದಂಡವೆಂದು

ತಿಳಿದು ನಾಲ್ಕು ಲಕ್ಷ ಹೊನ್ನನ್ನು ನಾಳಿಗೆ ಇದೇ ಹೊತ್ತಿಗೆ ಇದೇ ಸ್ಥಳಕ್ಕೆ ತರಿಸಿರಿ. ದ್ರವ್ಯವು ಸಪ್ಪಳಿಲ್ಲದೆ ಬರಬೇಕು. ನಿಮ್ಮವರು ಏನಾದರೂ ಮೋಸಮಾಡಿ, ಘಾತಮಾಡಿದ್ದು ನಮ್ಮ ಮಹಾರಾಷ್ಟ್ರ ವೀರರಿಗೆ ಗೊತ್ತಾದರೆ ಅವರು ಈ ಸ್ಥಳದಲ್ಲಿ ನಿಲ್ಲಲಾರರು. ಆಮೇಲೆ ನಿಮ್ಮ ಗತಿಯನ್ನು ನೀವು ನೋಡಿ ಕೊಳ್ಳಿರಿ. ನಮ್ಮ ಸಂಭಾಜಿ ಮಹಾರಾಜರನ್ನು ಬಾದಶಹನು ಕ್ರೂರತನದಿಂದ ಕೊಲ್ಲಿಸಿದ್ದರ ಸ್ಮರಣವು ನಿಮಗೆ ಇರುವದಷ್ಟೇ, ಅದಕ್ಕೆ ಹೆಚ್ಚಿನ ಭವಣೆಯನ್ನು ನೀವು ಅನುಭವಿಸಿ ಪ್ರಾಣ ಬಿಡಬೇಕಾದೀತೆಂಬದನ್ನು ಪೂರಾ ನೆನಪಿನಲ್ಲಿಡಿರಿ!

## ರಾಯಗಡದ ಮುತ್ತಿಗೆ

ಸಂತಾಜಿಯ ಈ ಮಾತುಗಳನ್ನು ಕೇಳಿ ಇಸ್ಮಾಯಿಲ್ ಖಾನನ ಮೋರೆಯು ಬಿಳುಪಿಟ್ಟಿತು. ಇಂಥ ಅಪಮಾನದ ಹಾನಿಯನ್ನು ಮಾಡಿಕೊಳ್ಳಲಿಕ್ಕೆ ಆತನ ಮನಸ್ಸು ಒಪ್ಪದಾಯಿತು. ಆದರೆ ಮಾಡುತ್ತಾನೇನು? ಜೀವವು ಬೆಲ್ಲಕ್ಕಿಂತ ಸವಿಯಲ್ಲವೇ? ಮೇಲಾಗಿ ಸುಖಕ್ಕೆ ಮೆಚ್ಚಿ ಸುಖದಿಂದ ಬೆಳದಿದ್ದ ಆ ಖಾನನು ತಾನು ಸಂಭಾಜಿಗಿಂತ ಕಠಿಣತರವಾದ ಯಾತನೆಯನ್ನು ಭೋಗಿಸಿ ವಿಲಿ ವಿಲಿ ಒದ್ದಾಡುತ್ತ ಪ್ರಾಣಬಿಡಬೇಕಾಗುವದೆಂಬದನ್ನು ನೆನಿಸಿ, ಗಡಗಡನೆ ನಡುಗಿದನು. ಆತನು ಎರಡನೆಯ ಮಾತು ಆಡದೆ, ನಾಲ್ಕು ಲಕ್ಷ ಹೊನ್ನು ತರುವದಕ್ಕಾಗಿ ತನ್ನ ಒಬ್ಬ ನಂಬಿಗೆಯ ಸೇವಕನನ್ನು ಕಳಿಸಿದನು. ಮರುದಿನ ಹೊತ್ತಿಗೆ ಸರಿಯಾಗಿ ಆ ದ್ರವ್ಯನಿಧಿಯು ಮರಾಟರ ಉಡಿಯಲ್ಲಿ ಸಪ್ಪಳ ವಿಲ್ಲದೆ ಬಿದ್ದು, ಖಾನನು ಪ್ರಾಣ ಸಂಕಟದಿಂದ ಮುಕ್ತನಾಗಿ ಹೋದನು. ತನ್ನ ಈ ದುರ್ದೆಸೆಯನ್ನು ಬಾದಶಹನ ಮುಂದೆ ಹೇಳಲಿಕ್ಕೆ ಹೋಗುವಾಗ ಅಭಿಮಾನಿಯಾದ ಆ ರಣಶೂರ ಖಾನನಿಗೆ ಮರಣಪ್ರಾಯ ದುಃಖವಾಯಿತು; ಆದರೆ ಮಾಡುತ್ತಾನೇನು? ಆತನು ನಿರ್ವಾಹವಿಲ್ಲದೆ ಬಾದಶಹನ ಬಳಿಗೆ ಹೋಗಿ ನಡೆದ ಸಂಗತಿಯನ್ನು ಹೇಳಿದನು. ಅದನ್ನು ಕೇಳಿ ಬಾದಶಹನು ಹಲ್ಲು ಕಡೆಯುತ್ತ—''ಇನ್ನೂ ಆ ಕಾಫರರ ಸೊಕ್ಕು ಅಡಗಿಲ್ಲವೇ? ಆ ಪುಂಡ ಶಿವಾಜಿಯ ವಂಶವನ್ನು ನಿರ್ವಂಶ ಮಾಡಿದ ಹೊರತು ಮರಾಟರ ಸದ್ದು ಅಡಗುವದಿಲ್ಲ. ಈಗ ಮೊದಲು ರಾಯಗಡವನ್ನು ಮುತ್ತಿ ಸಂಭಾಜಿಯ ಮಗನನ್ನೂ, ಹೆಂಡತಿಯನ್ನೂ, ಉಳಿದ ರಾಜ ಪರಿವಾರವನ್ನೂ ಸೆರೆ ಹಿಡಿಯಬೇಕು; ಅದರಂತೆ ಪಲ್ಹಾಳಗಡವನ್ನು ಮುತ್ತಿ ರಾಜಾರಾಮನನ್ನೂ, ಅವನ ಪರಿವಾರವನ್ನೂ ಸೆರೆ ಹಿಡಿಯಬೇಕು, ಅಂದರೆ ಮಹಾರಾಷ್ಟ್ರ ರಾಜ್ಯದ ವಿಧ್ವಂಸವಾದಂತಾಗುವದು!'' ಎಂದು ನುಡಿದು, ರಾಯಗಡವನ್ನು ಮುತ್ತುವದಕ್ಕಾಗಿ ಸೈನ್ಯವನ್ನು ಹೊರಡಿಸಿ, ಶೂರನಾದ ಅಸದಖಾನನ್ನು ಆ ಸೈನ್ಯದ ಮುಖ್ಯ ಸೇನಾಪತಿಯನ್ನಾಗಿ ನಿಯಮಿಸಿದನು.

ಈ ಸುದ್ದಿಯು ಗುಪ್ತಚಾರರ ಮುಖಾಂತರವಾಗಿ ರಾಯಗಡದ ಸ್ವಾಮಿನಿಯಾದ ಏಸೂಬಾಯಿಗೆ ಮುಟ್ಟಿತು. ಆಕೆಯು ಚಿಂತೆಗೊಳಗಾಗಿ ಮನಸ್ಸಿನಲ್ಲಿ—''ಮೊಗಲರ ಸೈನ್ಯವು ನಾಲ್ಕೂಕಡೆಗೆ ಪಸರಿಸಿತು. ಬಾದಶಹನು ಪಲ್ಹಾಳಗಡಕ್ಕೂ ಮುತ್ತಿಗೆ ಹಾಕಬಹುದು. ಈ ಪ್ರಸಂಗದಲ್ಲಿ ನಾವು ಪರಸ್ಪರರು ಹೇಗೆ ಸಹಾಯ ಮಾಡಬೇಕು? ಅಲ್ಲಿಯವರು ಅಲ್ಲಿ ಇಲ್ಲಿಯವರು ಇಲ್ಲಿ ಹೀಗೆ ಆಗಿ, ಭೋಸಲೇ ಮನೆತನವು ಕ್ರೂರನಾದ ಬಾದಶಹನ ಕ್ರೋಧಾವೇಶಕ್ಕೆ ಎಲ್ಲಿ ಗುರಿಯಾಗುವದೋ ಏನೋ? ಭಕ್ತಾಜಿಯೂ, ಬಂಕಿ ಗಾಯಕ ವಾಡನೂ ಇನ್ನೂ ಬರಲಿಲ್ಲವಲ್ಲ! ರಾಜಕುವರಳು ಇಲ್ಲಿಯೇ ಉಳಿದುಕೊಂಡಳು ಪಲ್ಹಾಳ ಗಡಕ್ಕೆ ಹೋಗಲಿಲ್ಲ, ದುರ್ಗಕ್ಕೆ ಮುತ್ತಿಗೆ ಬಿದ್ದ ಬಳಿಕ ಆಕೆಯು ಹೋಗುವ ಬಗೆಯೇನು? ಬಾಲಕನಾದ ಶಿವಾಜಿಯು ರಕ್ಷಣವು ಹ್ಯಾಗಾಗುವದೋ? ಆಗಲಿ, ಪ್ರಸಂಗವೇ ಒದಗಿದ ಬಳಿಕ ಧೈರ್ಯಗೆಟ್ಟು ಮಾಡುವದೇನು? ರಾಯಗಡವನ್ನು ಹೆಂಗಸರು ರಕ್ಷಿಸುತ್ತಿರುವದ ರಿಂದ, ಅದನ್ನು ಸುಲಭವಾಗಿ ಕೈವಶಮಾಡಿಕೊಳ್ಳಬಹುದೆಂದು ಬಾದಶಹನು ತಿಳಕೊಂಡಿರ ಬಹುದು; ಆದರೆ ಅದನ್ನು ಶಿವಪ್ರಭುವಿನ ಸೊಸೆಯು ರಕ್ಷಿಸುವಳೆಂಬದರ ಗುರುತನ್ನು ಆತನಿಗೆ ತೋರಿಸಲೇಬೇಕು. ಆಬಾಸಾಹೇಬರು ದೇಹವಿಟ್ಟು ಇನ್ನೂ ಒಂದು ಪಟ್ಟ ವಾಗಿಲ್ಲ. ಸಮರ್ಥರು ದೇಹವಿಟ್ಟು ಇನ್ನೂ ಮೂರು ವರ್ಷವಾಗಿಲ್ಲ; ಇಷ್ಟರಲ್ಲಿ ಆ ಮಹಾತ್ಮರ ಪುಣ್ಯವು ಕ್ಷೀಣವಾಗಿರುವದೇನು? ಅಂಬಾಬಾಯಿಯ ಕೃಪೆಯಿರುವ ತನಕ ನಮಗೇನು ಬಂದಿದೆ? ಆಬಾಸಾಹೇಬರು ಎಂಥ ಎಂಥ ಗಂಡಾಂತರಗಳಿಂದ ಪಾರಾ ದರಲ್ಲ! ಅದಕ್ಕೆ ಅಂಬಾಬಾಯಿಯ ಕೃಪೆಯೇ ಕಾರಣವಲ್ಲವೇ? ಅಂಥ ಕೃಪೆಯು ನಮ್ಮ ಮೇಲೆ ಇರಲಿಕ್ಕಿಲ್ಲವೇನು?'' ಎಂದು ಆಲೋಚಿಸುತ್ತಿರಲು, ರಾಜಕುವರಳು ಅಲ್ಲಿಗೆ ಬಂದಳು. ಆಕೆಯನ್ನು ನೋಡಿ ಏಸೂಬಾಯಿಯು ವಾತ್ಸಲ್ಯದಿಂದ–

ಏಸೂಬಾಯಿ—ಅಮ್ಮಾ ರಾಜಕುವರ, ಪ್ರಸಂಗವಂತು ಬಹು ಕಠಿಣವು ಒದಗಿತು. ನಿನಗೆ ಆಗ ಅಣ್ಣನ ಸಂಗಡ ಪಲ್ಹಾಳಗಡಕ್ಕೆ ಹೋಗೆಂದು ನಾನು ಹೇಳಲಿಲ್ಲವೇ? ಇಂದು ನಾಳೆ ಇಷ್ಟರಲ್ಲಿ ದುರ್ಗಕ್ಕೆ ಮುತ್ತಿಗೆಯು ಬೀಳುವದು. ಈಗ ನೀನು ಸುಮ್ಮನೆ ಸಂಕಟಕ್ಕೆ ಯಾಕೆ ಗುರಿಯಾಗುತ್ತೀ? ಹೋಗು, ಶತ್ರುಗಳು ಮುತ್ತುವದರೊಳಗೆ ಪಲ್ಹಾಳಗಡಕ್ಕೆ ಹೋಗಿಬಿಡು.

ರಾಜಕುವರ—ಸಾಕು, ಅತ್ತಿಗೆಯೇ, ನೀನು ಹೇಳುವದನ್ನು ಹೇಳಿದೆಯಲ್ಲ, ಇನ್ನು ಇಷ್ಟಕ್ಕೆ ನಿಲ್ಲಿಸು! ನಾನು ನಿನ್ನ ಆಜ್ಞೆಯಂತೆ ಇಲ್ಲಿಂದ ಹೋಗುವೆನು; ಆದರೆ ಪಲ್ಹಾಳಗಡಕ್ಕೆ ಮಾತ್ರ ಅಲ್ಲ, ರಾಯಗಡವನ್ನು ಏರಿ ಬರುವ ಮೊಗಲ ಸೈನ್ಯವನ್ನು ಹಿಂದಕ್ಕಟ್ಟುವದಕ್ಕಾಗಿ, ಅದೋ, ಆ ''ಗುರ್ಹಯೀ'' ಶಿಖರದ ಮೇಲೆ ಹೋಗುವೆನು. ನಾನು ಅಲ್ಲಿ ಹೋಗಿ ಗಟ್ಟಿ ಮುಟ್ಟಿಯಾಗಿ ಕುಳಿತುಕೊಂಡೆನೆಂದರೆ, ರಾಯಗಡವನ್ನು ಕಾಲತ್ರಯದಲ್ಲಿಯೂ ಅಲಮ ಗೀರನ ಕೈವಶವಾಗಗೊಡಲಿಕ್ಕಿಲ್ಲ! ನಾನು ಈ ಪ್ರಸಂಗದಲ್ಲಿ ನಮ್ಮ ಬಾಲಶಿವರಾಯನಿಗೆ ಯುದ್ಧದ ಪಾಠವನ್ನು ಕಲಿಸುವೆನು. ಅತ್ತಿಗೆಯೇ, ನೀನು ಹೀಗೆ ಉದಾಸೀನಳಾಗಬಾರದು, ದುರ್ಗದ ಯಾವತ್ತು ಜನರಿಗೆ ನೀನು ಧೈರ್ಯವನ್ನು ಹೇಳಬೇಕು. ದುರ್ಗದಲ್ಲಿ ಯಾರೂ

ಫಿತೂರ ಆಗದಂತೆ ಎಚ್ಚರಪಡಬೇಕು. ಫಿತೂರಿಯಾದ ಪಕ್ಷದಲ್ಲಿ ರಾಯಗಡವನ್ನು ಸ್ವಾಧೀನ ಪಡಿಸಿಕೊಳ್ಳುವದು ಹಾದಿಯಮೇಲೆ ಬಿದ್ದಿರುವದಿಲ್ಲ. ನಮಗೆ ಬಲವಿಲ್ಲದ ಈಗಿನ ಕಾಲದಲ್ಲ ಸ್ವಜನದ್ರೋಹಿಗಳೂ, ಸ್ವದೇಶದ್ರೋಹಿಗಳೂ ಮಹಾರಾಷ್ಟ್ರದಲ್ಲಿ ಹೆಚ್ಚುತ್ತಲಿದ್ದಾರೆ. ಈಗ ಎಲ್ಲವೂ ನಿನ್ನನ್ನು ಅವಲಂಬಿಸಿರುತ್ತದೆ. ದುರ್ಗದೊಳಗಿನ ನಮ್ಮೆಲ್ಲರನ್ನು ನೀನು ಆಶೀರ್ವದಿಸಿ ಪ್ರೋತ್ಸಾಹಿಸು. ಎಲ್ಲ ಕಡೆಗೂ ಜಾಗರೂಕರಾಗಿರುವಂತೆ ಅವರವರಿಗೆ ಸೂಚಿಸಿರಿ. ಈ ಪ್ರಸಂಗದಲ್ಲಿ ನಮ್ಮ ಪರಾಕ್ರಮವನ್ನು ನೋಡಿ ಸ್ವರ್ಗದಲ್ಲಿರುವ ಅಬಾಸಾಹೇಬರು ಕೌತುಕಪಡಲಿ!

ಏಸೂಬಾಯಿ—ಶಾಬಾಸ, ರಾಜಕುವರ! ನೀನು ವೀರಪುತ್ರಿಯೂ—ವೀರಪತ್ನಿಯೂ ಅನಿಸಿಕೊಳ್ಳುವದರ ಸಾರ್ಥಕವಾಯಿತು! ಶಿವಪ್ರಭುವಿನ ಮಗಳಿಗೆ ಒಪ್ಪುವಂತೆ ನೀನು ಮಾತಾಡಿದೆ! ಆದರೆ ತಂಗೀ, ಈಗ ಅಕಾಲದಲ್ಲಿ ಈ ಇಂದ್ರ ಧನುಷ್ಯವು ಮೂಡಿರುವದು ಅಪಶಕನುವಲ್ಲವೇ? ಏನೇ ಇರಲಿ ಈಗ ಅದರ ವಿಚಾರವೇತಕ್ಕೆ? ನೀನು ಆ ಶಿಖರದಮೇಲೆ ಹೋಗಿ ಮಕರಾಕೃತಿಯಾಗಿ ಸೈನ್ಯದ ವ್ಯೂಹವನ್ನು ರಚಿಸಿಕೊಂಡು ಇರುಹೋಗು. ನಾಲ್ಕೂ ಕಡೆಗೆ ಸ್ವತಃ ತಿರುಗಾಡಿ ಎಲ್ಲ ವ್ಯವಸ್ಥೆಯನ್ನು ನೋಡುತ್ತಿರು. ಸುರತದ ಕಡೆಯಿಂದ, ಹಾಗು ಮಹಾಡದ ಕಡೆಯಿಂದ, ಅದರಂತೆ ಜಿಂಜೀರೆಯ ಕಡೆಯಿಂದ ಹೀಗೆ ಅನೇಕ ಕಡೆಯಿಂದ ಶತ್ರುಗಳು ನಮ್ಮ ಮೇಲೆ ಏರಿ ಬರಬಹುದಾಗಿದೆ. ಪ್ರಸಂಗವು ಕಠಿಣವಿರುವದು. ಇನ್ನು ಎಲ್ಲ ಭಾರವನ್ನು ಅಂಬಾಭವಾನಿಯ ಮೇಲೆ ಹಾಕಿ ನಾವು ಪರಮ ಸಾಹಸ ಮಾಡೋಣ! ಯಶಸ್ಸು–ಅಪಯಶಸ್ಸು ಈಶ್ವರಾಧೀನವು. ಆಗಲಿ, ರಾಜಕುವರ, ಹೋಗು, ಯಶಸ್ವಿಯಾಗು ಹೋಗು.

ಈ ಮೇರೆಗೆ ನುಡಿಯಲು, ರಾಜಕುವರಳು ತನ್ನ ಸ್ಥಳಕ್ಕೆ ಸೈನ್ಯದೊಡನೆ ಹೋಗಿ, ಅದನ್ನು ಭದ್ರವಾಗಿ ರಕ್ಷಿಸತೊಡಗಿದಳು. ಇತ್ತ ಏಸೂಬಾಯಿಯು ದುರ್ಗದ ಎಲ್ಲ ಸ್ಥಳಗಳನ್ನು ಕಣ್ಣುಮುಟ್ಟಿ ನೋಡುವದಕ್ಕಾಗಿಯೂ, ಸೈನ್ಯವನ್ನು ವ್ಯವಸ್ಥೆಗೊಳಿಸಿ ಎಲ್ಲ ಕಡೆಗೆ ಬಂದೋಬಸ್ತು ಕಾಯುವದಕ್ಕಾಗಿಯೂ, ಶ್ರೇಷ್ಠ ಸೇನಾನಿಯನ್ನು ಹಿಂದಕ್ಕೆ ದೂಡುವ ಚಂದ ದಿಂದ ಹೊರಟಳು. ಇಷ್ಟು ವ್ಯವಸ್ಥೆಯಾಗುವದರೊಳಗೆ, ಮೊಗಲ ಸೈನ್ಯವು ದುರ್ಗ ವನ್ನು ಮುತ್ತುವದಕ್ಕಾಗಿ ನಾಲ್ಕೂ ಕಡೆಯಿಂದ ಸಮೀಪಕ್ಕೆ ಬಂತೆಂಬ ಸುದ್ದಿಯನ್ನು ಚಾರರು ಬಂದು ಹೇಳಿದರು. ರಾಜಕುವರಳು ತನ್ನ ಅತ್ಯುತ್ತಮವಾದ ಕುದುರೆಯನ್ನು ಹತ್ತಿಕೊಂಡು ತಾನಿರುವ ಸ್ಥಳದ ಸುತ್ತು ಮುತ್ತಲಿನ ಪ್ರದೇಶದ ಭದ್ರತೆಯನ್ನು ಪರೀಕ್ಷಿಸುವದಕ್ಕಾಗಿ ವಿದ್ಯುಲ್ಲತೆಯಂತೆ ನಾಲ್ಕೂ ಕಡೆಗೆ ಸಂಚರಿಸಹತ್ತಿದಳು. ಆಕೆಯು ಆವೇಶದಿಂದ ಗುಡ್ಡವನ್ನು ಇಳಿದು ಬರುತ್ತಿರಲು, ಎದುರಿಗೆ ಒಬ್ಬ ತರುಣ ರಾವುತನು ಬರತೊಡಗಿದನು. ರಾಜ ಕುವರಳು ಆತನ ಕಣ್ಣು ಮರೆಯಾಗಿ ಹೋಗಬೇಕೆಂದು ಯತ್ನಿಸಿದಳು; ಆದರೆ ಆ ರಾವುತನೂ ರಾಜಕುವರಳನ್ನು ಕಾಣುವದಕ್ಕಾಗಿ ಭರದಿಂದ ಸಾಗಿ ಬರಹತ್ತಿದನು. ಅವರಿಬ್ಬರು ಎದುರುಬದರಾಗಿ ನಿಂತುಕೊಳ್ಳಲು, ಇಬ್ಬರೂ ಸುಮ್ಮನೇ ಒಬ್ಬರನ್ನೊಬ್ಬರು

ನೋಡುತ್ತ ನಿಂತುಕೊಂಡರು. ಆಗ ಆ ತರುಣ ರಾವುತನ್ನು ಮಮತೆಯಿಂದ ರಾಜ ಕುವರಳನ್ನು ಕುರಿತು—"ರಾಜಕುವರ, ಎಂಥ ನಿನ್ನ ಸಾಹಸವಿದು? ಆಗೋ, ಹಿಂದೆ ಏಳುವ ಆ ಪ್ರಚಂಡವಾದ ಧೂಳಿಯನ್ನು ನೋಡಿದೆಯಾ? ಯಾತರದು ಅದು? ನೀಗದ ಕೆಲಸಕ್ಕೆ ಕೈ ಹಾಕಿ ಹೆಣಗುವದು ಮೂರ್ಖತನವಲ್ಲವೇ? ದುರ್ಗವನ್ನು ರಕ್ಷಿಸುವ ಸಾಹಸವು ಇನ್ನು ನಿಮಗೆ ಯಾತಕ್ಕೆ? ಬಾ, ನನ್ನನ್ನು ಹಿಂಬಾಲಿಸಿ ನಡೆ; ಅನ್ನಲು, ರಾಜಕುವರಳು ಸಂತಾಪದಿಂದ—"ಪ್ರಾಣಪ್ರಿಯಾ, ಮಹಾರಾಷ್ಟ್ರ ಭೂಮಿಯಲ್ಲಿ ಹುಟ್ಟಿ, ರಾಷ್ಟ್ರ ವಿಘಾತಕವಾದ ಇಂಥ ಮಾತುಗಳನ್ನು ತಾವು ಆಡಬಹುದೇ? ನೀವು ಶಿರ್ಕೆಯ ಕುಲ ಭೂಷಣರಾದ ಗಣೋಜಿರಾಯ ರೆಂಬದನ್ನೂ, ಬೋಸಲೇ ಮನೆತನದ ಮೇಲಿನ ಸಿಟ್ಟಿ ನಿಂದ ದೇಶದ್ರೋಹಿಗಳಾಗಿ ಬಾದಶಹನನ್ನು ಕೂಡಿ ಸದ್ಯಕ್ಕೆ ಕಾಳಪರುಷರಂತೆ ನನ್ನ ಮುಂದೆ ನಿಂತಿರುವಿರೆಂಬದನ್ನೂ, ನಿಮ್ಮ ಹಿಂದೆ ಕಾಣುವ ಪ್ರಚಂಡ ಧೂಳಿಯು ನಿಮ್ಮ ಮೊಗಲ ಸೈನ್ಯದ ತುಳಿತದಿಂದ ಎದ್ದರುವ ದೆಂಬದನ್ನೂ ನಾನು ಬಲ್ಲನು. ಪ್ರಾಣೇಶಾ, ನಿಮ್ಮ ಅಪ್ಪಣೆಯಂತೆ ನಿಮ್ಮ ಬಳಿಗೆ ನಾನು ಬರತಕ್ಕದ್ದೇ ಸರಿ. ಆದರೆ ಸ್ವಾಭಿಮಾನದ ಮೂಲಕ ಬರಲಿಕ್ಕೆ ಮನಸ್ಸಾಗಲೊಲ್ಲದು," ಎಂದು ಉತ್ತರ ಕೊಟ್ಟಳು.

ಇದನ್ನು ಕೇಳಿ ಗಣೋಜಿರಾಯನು ಸಿಟ್ಟಾದನು. ತನ್ನ ಪ್ರತ್ಯಕ್ಷ ಅರ್ಧಾಂಗಿಯು ತನ್ನ ವಿರುದ್ಧ ನಡೆಯುವದನ್ನು ನೋಡಿ ಆತನು ಸಂತಾಪಗೊಂಡನು. ಸಂತಾಪದ ಭರದಲ್ಲಿ ವಿವೇಕಹೀನನಾದ ಆತನು ತನ್ನ ಹೆಂಡತಿಯನ್ನು ಕುರಿತು—

ಗಣೋಜಿರಾವ—ರಾಜಕುವರ, ಪತಿಗೆ ವಿರುದ್ಧವಾಗಿ ನಡೆಯುವದು ಆರ್ಯಸ್ತ್ರೀಯ ಶೀಲವಲ್ಲ, ಪಾಂಡವ ಪತ್ನಿಯಾದ ದ್ರೌಪದಿಯು ತನ್ನ ಪತಿಗಳನ್ನು ಆಶ್ರಯಿಸಿ, ಅವರನ್ನು ಉತ್ತೇಜನಗೊಳಿಸಿ ಅವರಿಂದ ಕೌರವರ ವಂಶ ಕ್ಷಯ ಮಾಡಿಸಲಿಲ್ಲವೇ? ಆ ಪತಿವ್ರತೆಯ ಧರ್ಮವನ್ನು ನೀನು ಈಗ ಸ್ಮರಿಸಿ, ಆಕೆಯಂತೆ ನೀನು ನನಗೆ ಸಹಾಯ ಮಾಡಿ ಭೋಸಲೆ ಕುಲದ ನಾಶವನ್ನು ನನ್ನಿಂದ ಮಾಡಿಸುವದು ನಿನ್ನ ಪಾತಿವ್ರತ್ಯದ ದ್ಯೋತಕವಾಗಿದೆ?

ರಾಜಕುವರ–ಪ್ರಾಣಪ್ರಿಯಾ, ನಿಮ್ಮ ವಿಚಾರವು ದೋಷಯುಕ್ತವಾಗಿರುತ್ತದೆ. ಪಾಂಡವರು ತಮ್ಮ ಹೆಂಡತಿಯ ಪಾತಿವ್ರತ್ಯದ ಗೌರವವನ್ನರಿತು, ದುಷ್ಟ ದುಶ್ಯಾಸನನು ಆಕೆಯ ಹೆರಳನ್ನು ಬಿಚ್ಚಿ ಅವಮಾನಗೊಳಿಸಲು, ಆ ತಮ್ಮ ತೇಜಸ್ವಿನಿಯಾದ ಹೆಂಡತಿಯು ಕೌರವ ಕುಲಕ್ಷಯದ ಬಗ್ಗೆ ಮಾಡಿದ ಪ್ರತಿಜ್ಞೆಯನ್ನು ಅಜಾತಶತ್ರುವೆನಿಸುವ ಧರ್ಮ ರಾಜನೇ ಮೊದಲಾದ ಆಕೆಯ ಪತಿಗಳು ಪೂರ್ಣ ಮಾಡಿದರು. ಆದರೆ ಈಗ ಅಂಥ ಪ್ರಸಂಗ ವೆಲ್ಲಿದೆ? ತಿರುಗಿ ಕೇಳಿದರೆ, ನನ್ನ ಮೇಲೆ ಅನುಗ್ರಹವಿಟ್ಟು, ತಾವು ಭೋಸಲೆ ಕುಲವನ್ನು ಉಳಿಸಿ, ಮಹಾರಾಷ್ಟ್ರ ರಾಜ್ಯವನ್ನು ರಕ್ಷಿಸಿದರೆ ಮಾತ್ರ ಪಾಂಡವ ಪತ್ನಿಯಾದ ದ್ರೌಪದಿಯ ಸಾಮ್ಯವನ್ನು ಈ ಪ್ರಸಂಗದಲ್ಲಿ ತಾವು ಕೊಟ್ಟದ್ದು ಯೋಗ್ಯವಾಗುವದು!

ಹೆಂಡತಿಯ ಈ ಮಾತುಗಳನ್ನು ಕೇಳಿ ಗಣೋಜಿರಾಯನ ಸಂತಾಪವು ಹೆಚ್ಚಿತು. ಆತನು ಕ್ರೋಧಾಂಧನಾಗಿ ಹೆಂಡತಿಯನ್ನು ಕುರಿತು—"ದುಷ್ಟೇ, ಜಾರಿಣೆ, ನೀಚ ಖಂಡ್ಯಾನನ್ನು ಪ್ರೀತಿಸುವ ಅಧಮಾಧಮಳೇ, ನಿನಗೆ ದ್ರೌಪದಿಯ ಸಾದೃಶ್ಯವೇಕೆ? ನನ್ನ ಈ ಕೈಖಡ್ಗ

ದಿಂದ ನಿನ್ನನ್ನು ನುಚ್ಚುನುಚ್ಚಾಗಿ ಕಡಿದು ಹಾಕುವದು ಯೋಗ್ಯವು.,'' ಎಂದು ನುಡಿದು ಖಡ್ಗವೆತ್ತಿ ರಾಜಕುವರಳ ಮೇಲೆ ಧುಮುಕಿದನು. ಆದರೆ ಧೀರಳಾದ ರಾಜಕುವರಳು ನಿಂತಲ್ಲಿಂದ ಅತ್ತಿತ್ತ ಉಲುಕದೆ, ಅವಮಾನದ ಸಂತಾಪದಿಂದ ತನ್ನ ಅಂತಃಕರಣವು ದಗ್ಧ ವಾಗುತ್ತಿದ್ದರೂ, ಶಾಂತತೆಯ ಗಾಂಭೀರ್ಯದಿಂದ ಮುಗುಳುನಗೆ ನಗುತ್ತ–ಪ್ರಾಣಪ್ರಿಯಾ ಪತಿದೇವಾ, ಇಷ್ಟು ಕೋಪವೇಕೆ? ಶಿವರಾಯನ ಮಗಳಿಗೆ, ಗಣೋಜಿರಾವ ಶಿರ್ಕೆಯ ಹೆಂಡತಿಗೆ, ಸ್ವತಃ ರಾಜಕುವರಳಿಗೆ ಈ ಆರೋಪವು ಒಪ್ಪುವದೇ? ಹಾಯ್! ಹಾಯ್! ನನ್ನ ಪ್ರಿಯ ಬಂಧುವಾದ, ಹಾಗು ಅಬಾಸಾಹೇಬರ ಏಕನಿಷ್ಠ ಸೇವಕನಾದ, ಸ್ವಾಮಿಭಕ್ತ ಖಂಡೋಜಿಯ ಮೇಲೆ ಇಂಥ ಆರೋಪವೇ? ಏನೂ ಚಿಂತೆಯಿಲ್ಲ; ಶಿರ್ಕೆ ಕುಲಭೂಷಣಾ, ಹ್ಯಾಗಿದ್ದರೂ ಪತಿದೇವನು ನನಗೆ ಪೂಜ್ಯನೇ ಸರಿ; ಆದರೆ ಆತನು ಈ ರಾಜಕುವರಳ ಮೇಲೆ ಮಾಡಿದ ಆರೋಪದಿಂದ ಆಕೆಯು ಗಣೋಜಿರಾಯರನ್ನು ಮುಟ್ಟಲಿಕ್ಕೆ ಅನಧಿ ಕಾರಿಯಾದಳು! ಸೀತಾಮಾತೆಯು ಅಗ್ನಿಮುಖದಿಂದ ತನ್ನ ಪರಿಶುದ್ಧ ಪಾತಿವ್ರತ್ಯವನ್ನು ಶ್ರೀರಾಮನಿಗೆ ತೋರಿಸಿ ಪತಿಯ ಪರಿಗ್ರಹಕ್ಕೆ ಯೋಗ್ಯಳಾದಂತೆ, ಈಗ ನಾನು ತಮ್ಮ ಪರಿಗ್ರಹಕ್ಕೆ ಯೋಗ್ಯಳಾಗಬೇಕು, ಇಲ್ಲದಿದ್ದರೆ ನನ್ನ ಪರಿಶುದ್ಧಾಚರಣೆಯನ್ನು ನಂಬಿ, ದೇಶ ದ್ರೋಹಿಗಳ ಸಹವಾಸಕ್ಕೆ ಹೇಸಿ, ನಿಮ್ಮ ದೃಷ್ಟಿಯಿಂದ ಮಲಿನವಾಗಿರುವ ಈ ದೇಹವನ್ನು ನಿಮ್ಮೊಡನೆ ಯುದ್ಧ ಮಾಡಿ ರಣಭೂಮಿಯಲ್ಲಿ ಕೆಡವಬೇಕು. ಇವುಗಳಲ್ಲಿ ಸದ್ಯಕ್ಕೆ ಮಹಾರಾಷ್ಟ್ರದ ಮೇಲೆ ಬಂದಿರುವ ವಿಪತ್ತನ್ನು ಮನಸ್ಸಿನಲ್ಲಿ ತಂದರೆ, ರಣಾಂಗಣದಲ್ಲಿ ದೇಹವಿಡುವದೇ ಶಿವಪ್ರಭುವಿನ ಮಗಳಾದ ನನಗೆ ಶ್ರೇಯಸ್ಕರವಾಗಿ ತೋರುತ್ತದೆ; ಇದ ರಿಂದ ರಾಷ್ಟ್ರದ ಕಾರ್ಯದಲ್ಲಿ ನನ್ನ ದೇಹಪಾತವಾದಂತಾಗುವದಲ್ಲದೆ, ಸ್ತ್ರೀ ಹತ್ಯೆಯ ದೋಷಕ್ಕೆ ನಿಮ್ಮನ್ನು ಗುರಿಮಾಡದೆ, ನಿಮ್ಮ ಕೋರಿಕೆಯನ್ನು ಪೂರ್ಣಮಾಡಿಸಿದಂತಾ ಗುತ್ತದೆ. ಪತಿದೇವಾ, ಇದೇ ನನ್ನ ನಿಶ್ಚಯವು; ನೋಡಿರಿ, ಗಣೋಜಿರಾವ, ವೀರ ಪುತ್ರಿಯೂ, ವೀರಪತ್ನಿಯೂ ಆದ ಈ ರಾಜಕುವರಳು ನಿಮ್ಮನ್ನು ಲೆಕ್ಕಿಸದೆ ಇಲ್ಲಿಂದ ಉಡ್ಡಾಣಮಾಡಿ ಹೋಗುತ್ತಾಳೆ, ಸಾಧಿಸಿದರೆ ಅಡ್ಡಗಟ್ಟಿರಿ,'' ಎಂದು ನುಡಿದು ರಾಜ ಕುವರಳು ಕ್ಷಣದಲ್ಲಿ ಅದೃಶ್ಯಳಾದಳು! ಇದನ್ನು ನೋಡಿ, ರಾಷ್ಟ್ರ ವಿಘಾತಕ ವಿಚಾರದಿಂದ ತೇಜೋಹೀನನಾದ ಗಣೋಜಿರಾಯನು ದಂಗುಬಡಿದು ನಿಂತು ಕೊಂಡನು!

ಇದರ ತರುವಾಯ ಎಂಟು ದಿನಗಳಾದವು. ಒಂದು ದಿನ ಏಸೂ ಬಾಯಿಯು ಸುದರ್ಶನ ಚಕ್ರದಂತೆ ಕೋಟೆಯ ಸುತ್ತುಮುತ್ತು ತಿರುಗಿ ಎಲ್ಲವನ್ನು ಕಣ್ಣು ಮುಟ್ಟಿ ನೋಡುತ್ತಿದ್ದಳು. ತನ್ನ ಮನಸ್ಸಿನಂತೆ ಎಲ್ಲ ವ್ಯವಸ್ಥೆಯಾದ ಬಳಿಕ, ಆಕೆಯು ಸಂಜೆಯ ಮುಂದೆ ತನ್ನ ಮಗನಾದ ಬಾಲಶಿವ ರಾಯನನ್ನು ಕರಕೊಂಡು ಶಿವಪ್ರಭುವಿನ ಸಮಾಧಿಯ ಬಳಿಗೆ ಬಂದಳು. ಆ ಅಭಿಮಾನದ ಶೂರ ಸ್ತ್ರೀಯು ಮೂಕವೃತ್ತಿಯಿಂದ ಮಾವನ ಸಮಾಧಿಗೆ ನಮಸ್ಕಾರಮಾಡಿ, ತನ್ನ ಮಗನ ಕೈಯಿಂದ ನಮಸ್ಕಾರ ಮಾಡಿಸಿದಳು. ಆ ಕೂಸು ನಮಸ್ಕರಿಸುವಾಗ ಅದಕ್ಕೆ ಮುಂದೆ ಒದಗಬಹುದಾದ ಹಲವು ಸಂಕಟಗಳ

ಸ್ಮರಣವಾಗಿ ಈ ವೀರಪತ್ನಿಯ ಕುತ್ತಿಗೆಯ ಶಿರಗಳು ಬಿಗಿದವು. ಆಕೆಯು ಪ್ರೇಮಭರದಿಂದ ಬಾಲಶಿವರಾಯನನ್ನು ಎತ್ತಿಕೊಂಡು ಬಿಗಿಯಾಗಿ ಅಪ್ಪಿಕೊಂಡು ವಾತ್ಸಲ್ಯದಿಂದ ಹಲವು ಸಾರೆ ಚುಂಬಿಸಿದಳು. ಅಷ್ಟರಲ್ಲಿ ದುರ್ಗದ ಕೆಳಗಿನಿಂದ ಒಂದು ಸಾಂಕೇತಿಕ ಬಾಣವು ಸರ್ರನೆ ಮೇಲಕ್ಕೆ ಬಂದು ಒಡೆದು, ಅದರೊಳಗಿಂದ ಹಲವು ಚಿತ್ರ-ವಿಚಿತ್ರವಾದ ಬಣ್ಣದ ಗುಂಡುಗಳು ಆಕಾಶದಲ್ಲಿ ಹರಡಿದವು. ಅದನ್ನು ನೋಡಿ ಶಿವರಾಯನು-ಅವ್ವಾ, ಅತ್ತ ನೋಡು ಬಾಣವನ್ನು! ನಾನೂ ಹಾರಿಸುತ್ತೇನೆ, ನನಗೊಂದು ಬಾಣವನ್ನು ಕೊಡಬಾರದೇ? ಅವ್ವಾ, ಮೊಗಲರು ನಮ್ಮ ಈ ದುರ್ಗವನ್ನು ಮುತ್ತಿರುವರಲ್ಲ, ಅವರ ಮೇಲೆ ಅದನ್ನು ಬಿಟ್ಟು ಅವರನ್ನು ಓಡಿಸಿಬಿಡುವನೆ!

ಕೂಸಿನ ಈ ಮಾತುಗಳನ್ನು ಕೇಳಿ ಜಿಸೂಬಾಯಿಗೆ ತಟ್ಟನೆ ನಗೆ ಬಂದಿತು. ಎಂಥ ದುಃಖ-ಸಂತಾಪಗಳಲ್ಲಿಯೇ ಇರಲಿ, ಕೂಸಿನ ತಾಯಂದಿರು ತಮ್ಮ ಕೂಸಿನ ಬಾಲಲೀಲೆಯಿಂದ ಕ್ಷಣದಲ್ಲಿ ಅವನ್ನು ಮರೆತು ನಗುವರೆಂಬದು ಸುಳ್ಳಲ್ಲ! ಆಪತ್ಯವಾತ್ಸಲ್ಯವೇ ಅಂತಹದು! ಇರಲಿ, ಕೂಸಿನ ಮಾತಿನಿಂದ ಜಿಸೂಬಾಯಿಯ ಲಕ್ಷವು ಬಾಣದಕಡೆಗೆ ಹೋಗಿ, ಅದರ ಸಂಕೇತವನ್ನರಿತು ಆಕೆಯು ಮನಸ್ಸಿನಲ್ಲಿ—''ಈಗ ನಮ್ಮ ರಾಜಕುವರಳು ಶತ್ರುಗಳ ಮೇಲೆ ದುಮುಕಿ ಹೋಗಿ ಏನೋ ಮಹಾಕಾರ್ಯ ಮಾಡಿದ್ದಾಳೆ. ''ಜಯ ಅಂಬಾ ಭವಾನಿ, ನನ್ನ ಕೂಸಿಗೆ ಹೀಗೆಯೇ ಯಶಸ್ಸು ಕೊಡು ಕಂಡೆಯಾ'' ಎಂದು ಪ್ರಾರ್ಥಿಸಿ, ಕೂಡಲೆ ಶಿವರಾಯನನ್ನು ಮನೆಗೆ ಕಳಿಸಿ, ತಾನು ಅಶ್ವಾರೂಢಳಾಗಿ ರಾಜಕುವರಳ ಬಳಿಗೆ ಹೋದಳು. ಆಗ ರಾಜಕುವರಳು ಅಲ್ಲಿ ಇದ್ದಿಲ್ಲ. ಅಲ್ಲಿದ್ದ ಜೋತಾಜಿಯು ರಾಜಕುವರಳ ಪರಾಕ್ರಮದಿಂದ ಶತ್ರುಗಳು ಹಿಂದಕ್ಕೆ ಸರಿದದ್ದನ್ನು ವರ್ಣಿಸ ತೊಡಗಿದ್ದನು; ಅಷ್ಟರಲ್ಲಿ ಪಠಾಣ ವೇಷವನ್ನು ಹಾಕಿಕೊಂಡು, ಅದೇ ವೇಷದ ತನ್ನ ಪರಿವಾರವನ್ನು ಕೂಡಿಕೊಂಡು ರಾಜಕುವರಳು ಅಲ್ಲಿಗೆ ಬಂದಳು. ಆಕೆಯು ನಗುತ್ತ ಜಿಸೂಬಾಯಿಯವನ್ನು ಕುರಿತು-ಮಾತುಶ್ರೀ, ಶತ್ರುಗಳು ಏರಿಬರುವದಕ್ಕಾಗಿ ವಿಶ್ವಪ್ರಯತ್ನ ಮಾಡಿದರು; ಆದರೆ ನಮ್ಮ ಜೋತಾಜಿಯೇ ಮೊದಲಾದ ಸ್ವಾಮಿಭಕ್ತ ರಣಶೂರರ ಪರಾ ಕ್ರಮದಿದಂಲೂ, ನಿನ್ನಂಥ ಅಲೌಕಿಕ ವೀರಳ ಪೂರ್ವಸಿದ್ಧವಾದ ಪ್ರತೀಕಾರೋಪಾಯ ಗಳಿಂದಲೂ, ಶತ್ರುಗಳು ಗಡವನ್ನು ಬಿಟ್ಟು ಹಿಂದಕ್ಕೆ ಸರಿದು ಹೋಗುತ್ತಾರೆ, ನೋಡು. ನಮ್ಮ ಹೊಡೆತದ ಪ್ರದೇಶವನ್ನು ಬಿಟ್ಟು ಅವರು ದೂರ ಹೋಗಹತ್ತಿದ್ದಾರೆ. ಇನ್ನು ಮೇಲೆ ಅಸದಖಾನನು ಹೊಸ ಸೈನ್ಯವನ್ನು ತರುವತನಕ ಅವರು ನಮಗೆ ಅನ್ನ ಸಾಮುಗ್ರಿಯು ಮುಟ್ಟದಂತೆ ಬಲವಾಗಿ ಮುತ್ತಿಗೆ ಹಾಕಿಕೊಂಡು ಕುಳಿತುಕೊಳ್ಳತಕ್ಕವರು! ಆದರೆ ಮಾತೇ, ಇಷ್ಟರಿಂದ ನಾವು ಮಹತ್ಕಾರ್ಯ ಮಾಡಿದಂತಾಗಲಿಲ್ಲ, ಶತ್ರುಗಳು ದುರ್ಗವನ್ನು ಮುತ್ತಿ ಇಂದಿಗೆ ೧೫ ದಿನಗಳಾಗುತ್ತ ಬಂದವು. ಅಷ್ಟರಲ್ಲಿ ನಾವು ಅವರನ್ನು ದುರ್ಗದಿಂದ ದೂರ ಓಡಿಸಿದೆವೆಂಬದು ನಿಜವಿದ್ದರೂ, ಇಷ್ಟರಿಂದ ಕಾರ್ಯ ಮಾಡಿದಂತಾಗಲಿಲ್ಲ. ಮುಖ್ಯವಾದ ಕಠಿಣ ಕಾರ್ಯವು ಇನ್ನು

ಮುಂದೆ ಇರುತ್ತದೆ. ಅಷ್ಟರಲ್ಲಿ ನಾನು ದುರ್ಗಕ್ಕೆ ಮುತ್ತಿದ ಮೊಗಲ ಸೈನ್ಯವನ್ನು ಭೇದಿಸಿ ಪಲ್ಲಾಳಗಡಕ್ಕೆ ಹೋಗಿ, ಧನಾಜಿ, ಸಂತಾಜಿ ಮೊದಲಾದ ವೀರರನ್ನು ಕರಕೊಂಡು ಬರುತ್ತೇನೆ, ಅಪ್ಪಣೆಕೊಡು. ಅಪಜುಲ ಖಾನನನ್ನು ಸಂಹರಿಸುವದಕ್ಕಾಗಿ ಹೊರಟಿದ್ದ ಆಬಾಸಾಹೇಬರು ಯಾವ ಭಾವನೆಯಿಂದ ತಮ್ಮ ತಾಯಿಯಾದ ಜೀಜಾಬಾಯಿಯ ಚರಣದಲ್ಲಿ ಮಸ್ತಕವನ್ನಿಟ್ಟರೋ, ಅದೇ ಭಾವನೆಯಿಂದ ಈಗ ನಾನು ನಿನ್ನ ಚರಣದಲ್ಲಿ ಮಸ್ತಕವನ್ನಿಡುವೆನು, ಅತ್ತಿಗೆಯೇ ಆಶೀರ್ವದಿಸು; ನಿನ್ನ ನಾದನಿಯನ್ನು ಆಶೀರ್ವದಿಸು; ಮಹಾರಾಷ್ಟ್ರ ಸ್ವಾಮಿನಿಯೇ, ಜೀಜಾಬಾಯಿಯವರು ಮಾಡಿದ ಶುಭಾಶಿರ್ವಾದವನ್ನು ನೀನು ಈಗ ನನಗೆ ಮಾಡು!

ಹೀಗೆ ನುಡಿದು ರಾಜಕುವರಳು ತನ್ನ ಚರಣಗಳ ಮೇಲೆ ಮಸ್ತಕವಿಡಲು ಏಸೂಬಾಯಿಯು ಸದ್ಗದಿತ ಕಂಠದಿಂದ–ವತ್ಸೇ, ಅಬಾಸಾಹೇಬರ ಪುತ್ರಿಯಾದ ನಿನ್ನನ್ನು ಆಶೀರ್ವದಿಸುವ ಯೋಗ್ಯತೆಯು ನನಗಿಲ್ಲ. ನಿನ್ನಂಥ ಪ್ರತಾಪಶಾಲಿಯನ್ನು ಆಶೀರ್ವದಿಸಲಿಕ್ಕೆ ಮಹಾರಾಷ್ಟ್ರ ದೇಶವು ಸಮರ್ಥವಾದದ್ದು! ಆದರೆ, ಆ ದೇಶದ ಸ್ವಾಮಿನಿಯೆಂದು ನೀನು ಇದೇ ಈಗ ನನ್ನನ್ನು ಕರೆದಿರುವದರಿಂದ, ಆ ದೇಶದ ಪ್ರತಿನಿಧಿಯಾಗಿ ನಾನು ಈಗ ನಿನ್ನನ್ನು ಆಶೀರ್ವದಿಸುತ್ತೇನೆ. ಹೋಗು ವತ್ಸೇ, ಹೋಗು, ಯಶಸ್ವಿಯಾಗು, ಮಂಗಲದೇವತೆಗಳಿರಾ, ನೀವು ನನ್ನ ವತ್ಸೆಯ ಬೆನ್ನು ಕಾಯಿರಿ, ಎಂದು ನುಡಿದು, ರಾಜಕುವರಳನ್ನು ಕುರಿತು—''ತಂಗೀ, ನಿನ್ನ ಪೌರುಷವು ಶ್ಲಾಘನೀಯವೇ ಸರಿ. ಆದರೆ,'' ಎಂದು ನುಡಿಯುತ್ತಿರಲು, ರಾಜಕುವರಳು–ಅತ್ತಿಗೆಯೇ, ಆದರೆ ಗೀದರೆ ಈಗ ಒತ್ತಟ್ಟಿಗಿರಲಿ, ನಿನಗೆ ಚಿಂತೆಯೇಕೆ? ನಾನು ಔರಂಗಜೇಬನ ದಿವಾಣ–ಈ ಖಾಸನ್ನು ಪ್ರವೇಶಿಸಿ, ಆತನ ಕೈಯೊಳಗಿನ ಶಸ್ತ್ರವನ್ನು ತಂದು ನಿನಗೆ ಕೊಟ್ಟೇನು, ನೀನೇಕೆ ಚಿಂತೆ ಮಾಡುವೆ? ಎಂದು ನುಡಿದಳು. ಅದನ್ನು ಕೇಳಿ ಏಸೂಬಾಯಿಯ ಹೃದಯವು ಅಭಿಮಾನದಿಂದ ಕಂಪಿಸಿ ಆಕೆಯ ಕಣ್ಣುಗಳು ನೀರು ತುಂಬಲು, ಆಕೆಯು ರಾಜಕುವರಳ ಮೈಮೇಲೆ ಕೈಯಾಡಿಸಿ—''ವತ್ಸೇ, ಇದರಲ್ಲಿ ಸಂಶಯವೇನು? ತಂದೀಯಮ್ಮಾ ನೀನು ಬಾದಶಹ ಕೈಯೊಳಗಿನ ಶಸ್ತ್ರವನ್ನಾದರೂ ತಂದೀ, ಇಂದ್ರನ ಐರಾವತವನ್ನಾದರೂ ಭೂಮಿಗೆ ಇಳಿಸೀ ನೀನು ಶಿವಸಿಂಹನ ಮರಿಯಲ್ಲವೇ? ಹೋಗು, ನಿನಗೆ ಬೇಡೆನ್ನುವ ಯೋಗ್ಯತೆಯು ನನಗಿಲ್ಲ, ನಡೆ ಶಿವಪ್ರಭುವಿನ ಸಿಂಹಾಸನದ ಮುಂದೆ ಪುಣ್ಯಾಹವಾಚನೆಯನ್ನು ಮಾಡೋಣ ನಡೆ; ನಡೆ, ಬ್ರಾಹ್ಮಣರ ಆಶೀರ್ವಾದವನ್ನು ಸ್ವೀಕರಿಸೋಣ ನಡೆ. ಎಲೈ ಆಕಾಶದಲ್ಲಿ ಸಂಚರಿಸುವ ಸಾರಸ ಪಕ್ಷಿಗಳೇ, ಹಂಸಗಳೇ, ಭಾರದ್ವಾಜಗಳೇ ನಮ್ಮ ವತ್ಸೆಯು ದಂಡಯಾತ್ರೆಗೆ ಹೊರಟ ಕೂಡಲೆ ನೀವು ಮಂಗಳಗಾನ ಮಾಡಿರಿ, ಕಸ್ತೂರಿಯಮೃಗಗಳೇ ನೀವು ದಿಕ್ಕುದಿಕ್ಕಿಗೆ ಸುಗಂಧವನ್ನು ಬೀರಿರಿ, ಗಂಗಾಸಾಗರದಲ್ಲಿರುವ ಕಮಲಗಳೇ, ನೀವು ಪ್ರಫುಲ್ಲಿತವಾಗಿ ಅರಳಿರಿ! ಹೋಗಿರೋ, ಯಾರಾದರೂ ಪೂಜ್ಯ ಗಾಗಾಭಟ್ಟರ ಬಳಿಗೆ ಹೋಗಿರಿ, ನಮ್ಮ ವತ್ಸೆ ರಾಜ ಕುವರಳು

ಯುದ್ಧಕ್ಕೆ ಹೊರಡುವಾಗ ವೇದಘೋಷ ಮಾಡಿಸುವಂತೆ ಆ ಪೂಜ್ಯರನ್ನು ಪ್ರಾರ್ಥಿಸಿರಿ ಹೋಗಿರಿ. ವತ್ಸೆ, ರಾಜಕುವರ, ಹೋಗಿಬಾರವ್ಮಾ ಹೋಗಿ ಬಾ! ಯಶಸ್ವಿಯಾಗಿ ನಮ್ಮ ಬಳಿಗೆ ಬಾ. ಶಿವಪ್ರಭುವಿನ ಪುಣ್ಯ ಪ್ರತಾಪದ ಕಾಂತಿಯನ್ನು ಪಸರಿಸಿ ಬಾ ಹೋಗು!!

## ಮರಾಟರ ಗತ್ತು

ಈ ಮೇರೆಗೆ ರಾಜಕುವರಳು ಏಸೂಬಾಯಿಯ ಅನುಮತಿಯಿಂದ ಹೊರಟು ಹೋಗಲು, ಏಸೂಬಾಯಿಯು ಘೋರ ಚಿಂತೆಗೊಳಗಾದಳು. ಸುಕುಮಾರಿಯಾದ ಈ ಶಿವಕುಮಾರಿಯು ಶತ್ರು ಸೈನ್ಯದ ಮುತ್ತಿಗೆಯನ್ನು ಭೇದಿಸಿ ಹೇಗೆ ಪಾರಾಗಿ ಹೋದಾ ಳೆಂಬದನ್ನು ತಿಳಿಯಲು, ಆ ವೀರವನಿತೆಯು ಸಮರ್ಥಳಾಗಲಿಲ್ಲ. ಔರಂಗಜೇಬನ ಅಬ್ಬರದ ಅಂಜಿಕೆಯಿಂದ ಏಸೂಬಾಯಿಯೊಬ್ಬಳೇ ಏಕೆ, ಇಡಿಯ ಮಹಾರಾಷ್ಟ್ರ ಮಂಡಲವೇ ಚಿಂತಾಮಗ್ನವಾಗಿತ್ತೆಂದು ಹೇಳಬಹುದು. ಅತ್ತ ಪಲ್ಹಾಳಗಡದಲ್ಲಿದ್ದ ರಾಜ ರಾಮನೇ ಮೊದಲಾದವರು ರಾಯಗಡದ ಮುತ್ತಿಗೆಯ ಸುದ್ದಿಯನ್ನು ಕೇಳಿ ಆಲೋಚಿಸು ತ್ತಲಿದ್ದರು. ಆ ಕಾಲದ ಮರಾಟರ ಹೀನಸ್ಥಿತಿಯನ್ನು ನೋಡುವವರಿಗೆ, ಶಿವ ಪ್ರಭುವಿನ ಪುಣ್ಯವು ಇಲ್ಲಿಗೆ ತೀರಿ, ಆತನು ಸ್ಥಾಪಿಸಿದ್ದ ರಾಜ್ಯವು ಮಣ್ಣುಗೂಡಿತೆಂಬದು ಸ್ಪಷ್ಟವಾಗಿ ತೋರುತ್ತಿತ್ತು, ಆದರೆ, ಪ್ರಲ್ಹಾದಪಂತ, ರಾಮಚಂದ್ರಪಂತನೇ ಮೊದಲಾದ ಮುತ್ಸದ್ದಿಗಳ, ಹಾಗೂ ಧನಾಜಿ ಜಾಧವ, ಸಂತಾಜಿ ಘೋರಪಡೆಯೇ ಮೊದಲಾದ ವೀರಶ್ರೇಷ್ಠರ ಕೆಚ್ಚು ಗಟ್ಟಿದ ಎದೆಗಳೂ ಮಾತ್ರ ತಲ್ಲಣಿಸಿದ್ದಿಲ್ಲ. ಆ ನರಪುಂಗವರು, ಸ್ವಲ್ಪ ದಿವಸಗಳಲ್ಲಿ ಬಾದಶಹ ನನ್ನು ಬಗ್ಗು ಬಡೆದು ಮರಾಟರ ಉಬ್ಬಾಳುತನವನ್ನು ಜಗತ್ತಿಗೆ ತೋರಿಸಿ, ಶಿವಪ್ರಭುವಿನ ಪುಣ್ಯಪ್ರತಾಪದ ತೀವ್ರತೆಯನ್ನು ಪ್ರಕಟಿಸದೆ ಬಿಡಲಿಕ್ಕಿಲ್ಲವೆಂದು ನಂಬಿಕೊಂಡಿದ್ದರು. ಇವರ ಆ ನಂಬಿಗೆಯು ಎಷ್ಟು ಬಲವಾದದ್ದೋ ತಿಳಿಯದು. ಕ್ಷೋಭಿಸಿದ ಸಮುದ್ರದಂತೆ ಅರ್ಭಟಿಸಿ ತಮ್ಮ ಮೇಲೆ ಏರಿ ಬರುವ ಔರಂಗಜೇಬನ ಪ್ರಚಂಡ ಸೈನ್ಯವನ್ನು ಅವರು ಲೆಕ್ಕಿಸಲಿಲ್ಲ; ಅದರಂತೆ, ಮಹಾ ತಂತ್ರಗಾರನಾದ ಅಲಮಗೀರನ ತಂತ್ರಗಳಿಗೆ ಅವರು ಸೊಪ್ಪು ಹಾಕಲಿಲ್ಲ. ಮರಾಟರನ್ನು ತುಳಿದು ನೆಲಕ್ಕೊರಿಸಲು ಅವಡುಗಚ್ಚಿ ಬರುವ ಆ ಮೊಗಲ ಚಕ್ರವರ್ತಿಯ ಎದೆಗೆ, ಆ ಕೆಚ್ಚೆದೆಯ ಮರಾಟರು ಅಳವು ನೋಡಿ ಗುದ್ದಿ ಆಗಾಗ್ಗೆ ಆತನನ್ನು ವ್ಯಥೆಗೊಳಿಸುತ್ತಲಿದ್ದು.

ರಾಯಗಡವನ್ನು ಮುತ್ತಿದಂತೆ ಪಲ್ಹಾಳಗಡವನ್ನಾದರೂ ಮುತ್ತಬೇಕೆಂದು ಬಾದಶಹನು ಎಣಿಕೆ ಹಾಕುತ್ತಲಿದ್ದನು. ಈ ಸ್ಥಿತಿಯಲ್ಲಿ ತಾವು ಯಾವ ಮಾರ್ಗದಿಂದ ಬಾದಶಹನನ್ನು ಎದುರಿಸಬೇಕೆಂಬದನ್ನು ನಿಶ್ಚಯಿಸುವದಕ್ಕಾಗಿ ರಾಜಾರಾಮ ಮಹಾರಾಜರು ಇಂದು ಪಲ್ಹಾಳಗಡದಲ್ಲಿ ದರ್ಬಾರು ನೆರೆಸಿದ್ದರು. ಮುತ್ಸದ್ದಿಗಳೂ, ಸರದಾರರೂ ದರ್ಬಾರದಲ್ಲಿ

ನೆರೆದು ಮಹಾರಾಜರ ಮಾರ್ಗವನ್ನು ನಿರೀಕ್ಷಿಸುತ್ತಿರಲು, ರಾಜಾರಾಮ ಮಹಾರಾಜರು ದರ್ಬಾರವನ್ನು ಪ್ರವೇಶಿಸಿದರು. ಪುಣ್ಯ ಶಾಲಿಯಾದ ಆ ಶಿವಪುತ್ರನ ಸೌಜನ್ಯವನ್ನೂ, ಪಾಪಭೀರುತ್ವವನ್ನೂ ಎಷ್ಟು ವರ್ಣಿಸಿದರೂ ಸ್ವಲ್ಪವೇ ಇರುವದು. ಆ ಸುಜನನು, ತಾನು ರಾಜನೆಂಬ ಭಾವನೆಗೆ ಆಸ್ಪದ ಕೊಡದೆ, ಕೇವಲ ರಾಜಪ್ರತಿನಿಧಿಯೆಂದು ತಿಳಿದು ಸಿಂಹಾಸನವನ್ನು ವಂದಿಸಿ, ಸಿಂಹಾಸನದ ಮಧ್ಯದಲ್ಲಿ ಸ್ಥಳವನ್ನು ಬಿಟ್ಟು, ಮುಖ್ಯ ಸಚಿವನ ಸ್ಥಳದಲ್ಲಿ ತಾನು ಕುಳಿತುಕೊಂಡನು! ತನ್ನ ಅಣ್ಣನಾದ ಸಂಭಾಜಿಯ ಪುತ್ರ ಬಾಲಶಿವ ರಾಯನೇ ಮರಾಟರ ರಾಜನೆಂದು ಆತನು ದೃಢವಾಗಿ ನಂಬಿದ್ದನು. ಆತನ ಈ ನಿಸ್ಪೃಹತೆ ಗಾಗಿ ಯಾವತ್ತು ಮರಾಟರು ಆತನನ್ನು ಬಹಳವಾಗಿ ಸನ್ಮಾನಿಸುತ್ತಲಿದ್ದರು. ಹೀಗೆ ರಾಜಪ್ರತಿ ನಿಧಿಯು ಸಿಂಹಾಸನಾರೂಢನಾದ ಬಳಿಕ ಆತನು, ಶ್ರೇಷ್ಠ ಮುತ್ಸದ್ದಿಯಾದ ಪ್ರಲ್ಹಾದಪಂತ ನನ್ನು ಕುರಿತು–ಪಂತ, ಬಾದಶಹನ ಸೈನ್ಯವು ರಾಯಗಡಕ್ಕೆ ಬಿಗಿಯಾಗಿ ಮುತ್ತಿಗೆ ಹಾಕಿತು. ಅತ್ತ ಒಡೆಯನು ಸಂಕಟಕ್ಕೆ ಗುರಿಯಾಗಿರಲು, ಸೇವಕರಾದ ನಾವು ಜೀವಗಳ್ಳರಂತೆ, ಈ ಕೋಟೆಯಲ್ಲಿ ಅಡಗಿರುವದು ನ್ಯಾಯವೇ? ಎಂದು ನುಡಿಯುತ್ತಿರಲು, ಪ್ರತಿಹಾರಿಯು ಬಂದು –ರಾಜಕುವರಳೂ, ಸಂತಾಜಿ ಘೋರಪಡೆಯೂ ಬಾಗಿಲಲ್ಲಿ ನಿಂತಿರುವರೆಂದು ವಿಜ್ಞಾಪಿ ಸಿದನು. ಕೂಡಲೆ ಅವರನ್ನು ಕರತರುವದಕ್ಕಾಗಿ ರಾಜಾಜ್ಞೆಯಾಯಿತು.

ರಾಜಕುವರಳು ದರ್ಬಾರವನ್ನು ಪ್ರವೇಶಿಸಿದ ಕೂಡಲೆ ಯಾವತ್ತು ದರ್ಬಾರ ದವರು ಎದ್ದು ನಿಂತು ಆಕೆಯನ್ನು ಸನ್ಮಾನಿಸಿದರು. ರಾಜಾರಾಮ ಮಹಾರಾಜರು ಸನ್ಮಾನ ಪೂರ್ವಕವಾಗಿ ತಂಗಿಯನ್ನು ಬರಮಾಡಿಕೊಂಡು ಹತ್ತಿರ ಕುಳ್ಳಿರಿಸಿಕೊಂಡರು. ಅತ್ತ ಸಂತಾಜಿಯೂ ಸನ್ಮಾನಿತನಾಗಿ ಯೋಗ್ಯ ಸ್ಥಳದಲ್ಲಿ ಕುಳಿತುಕೊಂಡನು. ಶತ್ರುಗಳು ಬಲವಾಗಿ ಮುತ್ತಿಗೆ ಹಾಕಿರಲು, ರಾಜ ಕುವರಳು ರಾಯಗಡದಿಂದ ಹ್ಯಾಗೆ ಬಂದಿರಬಹುದೆಂದು ಎಲ್ಲರೂ ಆಲೋಚಿಸ ತೊಡಗಿದರು. ಈ ಸ್ಥಿತಿಯಲ್ಲಿ ದರ್ಬಾರವು ನಿಶ್ಶಬ್ದವಾಗಿರಲು, ಮಹಾರಾಜರು ಅಂಜುತ್ತಂಜುತ್ತ ರಾಯಗಡದ ಯೋಗಕ್ಷೇಮವನ್ನು ಕುರಿತು ತಂಗಿಯನ್ನು ವಿಚಾರಿಸಿದರು. ಆಗ ರಾಜಕುವರಳು ಸವಿಸ್ತಾರವಾಗಿ ಹೇಳಿದ ರಾಯಗಡದ ಸುದ್ದಿಯನ್ನು ಕೇಳಿ ಎಲ್ಲರೂ ಚಿಂತೆಗೊಳಗಾದರು. ಮಧ್ಯರಾತ್ರಿಯಲ್ಲಿ ಮಹಾಧೈರ್ಯದಿಂದ ಶತ್ರು ಸೈನ್ಯಕ್ಕೆ ಮಂಕುಬೂದಿಯನ್ನು ಹಚ್ಚಿ ಪಾರಾಗಿಬಂದ ರಾಜಕುವರಳ ಸಾಹಸಕ್ಕೆ ಎಲ್ಲರೂ ಬೆರಳು ಕಚ್ಚಿದರು. ಯುಕ್ತಿವಂತನಾದ ನಮ್ಮ ಶಿವರಾಯನ ಮಗಳಾದದ್ದರಿಂದಲೇ ಇಂಥ ಸಾಹಸ ಮಾಡಿದಳೆಂದು ಅವರು ತಮ್ಮೊಳಗೆ ಭಾವಿಸಿ ಕೊಳ್ಳುತ್ತಲಿದ್ದರು. ಇಂಥ ಕಠಿಣ ಪ್ರಸಂಗದಲ್ಲಿ ಏನು ಮಾಡಬೇಕೆಂಬದು ಯಾರಿಗೂ ತೋಚ ದಾಯಿತು. ಹೀಗೆ ದರ್ಬಾರದಲ್ಲಿ ಚಿಂತಾ ಮೂಲವಾದ ಸ್ತಬ್ಧತೆಯು ಒದಗಿರಲು, ರಾಜಕುವರಳು ಗಾಂಭೀರ್ಯದಿಂದ ತನ್ನ ಅಣ್ಣನನ್ನು ಕುರಿತು–ಮಹಾರಾಜ, ಚಿಂತೆಮಾಡುವದೇಕೆ? ದರ್ಬಾರದಲ್ಲಿ ನೆರೆದಿರುವ ಈ ಮುತ್ಸದ್ದಿ ಮಂಡಲವೂ, ಸರದಾರ ಮಂಡಲವೂ ಆಬಾಸಾಹೇಬರ ಸಂತತಿಯ, ಅದರಂತೆ ಮಹಾರಾಷ್ಟ್ರ ರಾಜ್ಯದ ರಕ್ಷಣಕ್ಕಾಗಿ ಪ್ರಾಣವನ್ನು ಅರ್ಪಿಸಲಿಕ್ಕೆ ಸಿದ್ಧವಾಗಿರಲು, ನಾವು ಚಿಂತೆ

ಮಾಡುವದೇಕೆ? ಇದಕ್ಕೂ ಹೆಚ್ಚಿನ ಕಠಿಣ ಪ್ರಸಂಗಗಳು ನಮ್ಮ ಆಬಾಸಾಹೇಬರಿಗೆ ಒದಗಲಿಲ್ಲವೆ? ಅಂಥ ಪ್ರಸಂಗಗಳಲ್ಲಿ ಅವರು ಧೈರ್ಯದಿಂದ ಹ್ಯಾಗೆ ಪಾರಾದರೆಂಬ ದನ್ನು ನೆನಪಿಗೆ ತಂದುಕೊಂಡು, ಬಂದ ಪ್ರಸಂಗಕ್ಕೆ ನಾವು ಈಗ ಎದೆಗೊಡಲಿಕ್ಕೇ ಬೇಕು. ನಮ್ಮ ಶೂರ ಸಂತಾಜಿರಾಯರು ಇದೇ ಈಗ ಸರ್ಜೇಖಾನನ ಮೈ ನುಗ್ಗು ಮಾಡಿ ಬಂದಿರುವರು! ಇದರಂತೆ ನಮ್ಮ ಶೂರ ಧನಾಜಿ ಜಾದವರೇ ಮೊದಲಾದ ಶೂರ ಮಾರಾಟರು ಹಸಿದ ತೋಳಗಳಂತೆ ಮೊಗಲ ಸೈನ್ಯವನ್ನು ಸಮಯನೋಡಿ ಹರಿಯಹತ್ತಿದರೆ, ಬಾದಶಹನು ಸ್ವಲ್ಪ ದಿವಸಗಳಲ್ಲಿಯೇ ಹಣ್ಣಾಗುವನು. ಪ್ರಲ್ಹಾದಪಂತರಂಥ ಮಾರ್ಗ ದರ್ಶಕರು ನಮಗೆ ಇರಲು, ನಾವು ನಿರಾಶಪಡುವದೇಕೆ? ಪ್ರಲ್ಹಾದಪಂತ, ಈಗ ಮಹಾರಾಷ್ಟ್ರ ಮಂಡಲಕ್ಕೆ ಮಾರ್ಗದರ್ಶಕರು ನೀವೇಯಲ್ಲವೇ?

ಈ ಮೇರೆಗೆ ರಾಜಕುವರರಳು ಬಹುಮಾನ ಪೂರ್ವಕವಾಗಿ ತನ್ನನ್ನು ಸಂಬೋಧಿಸಲು, ಪ್ರಲ್ಹಾದಪಂತನು ಎದ್ದು ನಿಂತು ಮಹಾರಾಜರನ್ನು ಕುರಿತು–ಪ್ರಭುಗಳೇ, ತಾವು ಆಗಲೇ ಆಜ್ಞಾಪಿಸಿದಂತೆ ಸದ್ಯಕ್ಕೆ ಕಠಿಣ ಪ್ರಸಂಗವು ಒದಗಿರುವದೆಂಬದೇನೋ ನಿಜ; ಆದರೆ ರಾಜ ಕುವರರವರು ಹೇಳಿದಂತೆ ನಾವು ಹೆದರುವ ಕಾರಣವಿಲ್ಲ. ನಾವೆಲ್ಲರೂ ಶಿವಪ್ರಭುವಿನ ಕೈಕೆಳಗೆ ನುರಿತವರಾಗಿರುತ್ತೇವೆಂಬದನ್ನು ಮರೆಯಲಾಗದು. ಜನ್ಮದಾರಭ್ಯ ಸಂಕಟಗಳನ್ನನು ಭವಿಸಿಯನುಭವಿಸಿ ನಮ್ಮ ಮೈಯುಂಡು ಹೋಗಿರುತ್ತದೆ. ಈ ಸರದಾರ ಮಂಡಲದ ತೋಳುಗಳ ಸಾಮರ್ಥ್ಯವು ಸ್ಥಿರವಾಗಿರುವವರೆಗೆ ನಾವು ಹೆದರುವದೇಕೆ? ಆಬಾಸಾಹೇಬರಿಗೆ ಸಹಾಯ ಮಾಡಿದ ಭವಾನೀ ಮಾತೆಯು ನಮಗೆ ಈಗ ಸಹಾಯ ಮಾಡಲಿಕ್ಕಿಲ್ಲವೇ? ಆಬಾ ಸಾಹೇಬರಿಗೆ ಮಾರ್ಗವನ್ನು ತೋರಿಸಿರುವ ಸಮರ್ಥ ರಾಮದಾಸ ಸ್ವಾಮಿಗಳ ಸದ್ಬೋಧವು ನಮಗೆ ಈಗ ಮಾರ್ಗವನ್ನು ತೋರಿಸಲಿಕ್ಕಿಲ್ಲವೆ? ಆಬಾಸಾಹೇಬರ ಮಸ್ತಕದ ಮೇಲಿದ್ದ ಜೀಜಾಬಾಯಿಯವರ ವರದ ಹಸ್ತವು ನಮ್ಮ ತಲೆಯಮೇಲೆ ಈಗ ಇರುವದಿಲ್ಲವೇ? ಆದರೂ, ನಾವು ಈ ಕಾಲದಲ್ಲಿ ಮೈತುಂಬ ಎಚ್ಚರವಿಟ್ಟು ನಡೆಯಬೇಕಾಗಿರುವದು. ಹುಂಬ ತನದ ಹೊಡೆದಾಟ ಈಗ ಕೆಲಸದ್ದಲ್ಲ. ನಾವು ಯುದ್ಧದ ಹೊಸಮಾರ್ಗವನ್ನು ಹಿಡಿಯ ಬೇಕಾಗಿರುವದು. ಮುತ್ಸದ್ದಿಗಳ ಹಿಡತವೂ, ಶೂರರ ಹೊಡೆತವೂ ಒಮ್ಮೆಲೇ ಬಾದಶಹನನ್ನು ಹತ್ತೆಯಾಗಿ ಹಿಚಕಬೇಕಾಗಿರುತ್ತದೆ. ಬಾದಶಹನ ಸಾಧನ ಸಾಮುಗ್ರಿಯು ವ್ಯವಸ್ಥಿತವೂ, ಬಲಿಷ್ಠವೂ ಆಗಿರುವದು; ನಮ್ಮದು ಇನ್ನೂ ಮೆಟ್ಟಿಗೆ ಕುಳಿತಿರುವದಿಲ್ಲ. ಆದರೂ, ಪ್ರತಿ ಪಕ್ಷಿಯ ಲಕ್ಷಾವಧಿ ಸೈನ್ಯವು ಕೇವಲ ಸ್ವಾರ್ಥಪರ ವಾಗಿರುವಾಗ, ನಮ್ಮ ಚಿಕ್ಕ ಸೈನ್ಯವು ಸ್ವರಾಜ್ಯ ರಕ್ಷಣಕ್ಕೋಸ್ಕರ ಸರ್ವಸ್ವವನ್ನರ್ಪಿಸಲಿಕ್ಕೆ ಸಿದ್ಧವಾಗಿರುವದು. ನಾವು ಒಬ್ಬ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದವರಂತೆ ಒಕ್ಕಟ್ಟಿನಿಂದ ನಡೆಯುವವು. ಆದರೆ ಬಾದಶಹನ ಸೈನ್ಯದಲ್ಲಿ ಈ ಒಕ್ಕಟ್ಟು ಇಲ್ಲ. ಬಾದಶಹನ ಸೈನ್ಯವಿಳಕೊಂಡ ಸ್ಥಳವು ಕಿತ್ತ ಲಾರದ ರಾಜಧಾನಿಯ ಸ್ವರೂಪವನ್ನು ಹೊಂದುವದು; ಮತ್ತು ಸೈನಿಕರ ಲಚಂಡವೂ ದಿಮಾಕೂ ಬಹಳ; ಅವರು ಯುದ್ಧಕ್ಕೆ ಹೊರಡುವದೆಂದರೆ ಗೊಡ್ಡು ಗೋಲೆಯಾಗುವದು.

ಆದರೆ ನಮ್ಮದು ಹಾಗಲ್ಲ. ನಾವು ಬೇಕಾದಾಗ ಯುದ್ಧಕ್ಕೆ ಹೊರಡಲು ಸಿದ್ಧರಾಗಿದ್ದು, ವಿದ್ಯುಲ್ಲತೆಯಂತೆ ಕ್ಷಣದಲ್ಲಿ ಬೇಕಾದಲ್ಲಿ ಮಿಂಚುವೆವು. ಹೋದಲ್ಲಿ ನಮ್ಮ ಮಹಾರಾಷ್ಟ್ರ ಬಂಧುಗಳು ನಮ್ಮನ್ನು ಸತ್ಕರಿಸಿ ನಮಗೆ ಬೇಕಾದ ಅನುಕೂಲತೆಗಳನ್ನು ಒದಗಿಸಿ ಕೊಡುವರು; ಈ ಅನುಕೂಲತೆಯು ಅಲಮಗೀರನಿಗಿರುವದಿಲ್ಲ. ಆತನ ಸೈನ್ಯವು ಬರುವದ ರೊಳಗೆ ನಮ್ಮ ಮಹಾರಾಷ್ಟ್ರ ಬಂಧುಗಳು ಗುಳೇ ಕಟ್ಟಿ ತಮ್ಮ ಊರ ಮಾರುಕಕ್ಕೆ ಒಳಗಾಗದೆ ಅವನ್ನು ಸುಟ್ಟು ಸೂರೆಮಾಡಿ, ಬೆಳೆಗಳನ್ನು ಹಾಳುಮಾಡಿ, ಕೆರೆ-ಭಾವಿಗಳಲ್ಲಿ ವಿಷಕಲಿಸಿ ಬಾದಶಹನ ಸೈನ್ಯಕ್ಕೆ ಕೂಳು-ನೀರು ಸಿಗದಂತೆ ಮಾಡುವರು. ಸ್ವತಃ ಬಾದ ಶಹನಿಗೆ ಉಪವಾಸ ಬೀಳುವ ಪ್ರಸಂಗ ಒದಗಿತು! ಇಂಥ ಕಠಿಣ ಪ್ರಸಂಗದಲ್ಲಿ ಬಾದಶಹನಿಗೆ ತನ್ನ ಆಡಂಬರದ ಸೈನ್ಯವನ್ನು ಸಾಗಿಸಿಕೊಂಡು ಬರುವಾಗ ಎಷ್ಟು ಕಷ್ಟವಾಗುತ್ತಿರಬಹುದು?

ಮಹಾರಾಜ, ಈ ಸ್ಥಿತಿಯನ್ನು ಲಕ್ಷದಲ್ಲಿಟ್ಟು ನಮ್ಮ ಕೆಚ್ಚೆದೆಯ ಮರಾಟವೀರರು, ಯುದ್ಧ ವ್ಯಾಪಾರವನ್ನು ಸಾಗಿಸಬೇಕಾಗಿರುತ್ತದೆ; ಬಾದಶಹನು ಬಹು ಕಷ್ಟದಿಂದ ತನ್ನ ಸೈನ್ಯವನ್ನು ಸಾಗಿಸಿಕೊಂಡು ಬರುತ್ತಿರುವಾಗ, ನಮ್ಮ ಒಬ್ಬ ವೀರಾಗ್ರೇಸರನು ಆತನ ಸೈನ್ಯಕ್ಕೆ ಆಯಕಟ್ಟಿನ ಸ್ಥಳವನ್ನು ನೋಡಿ ಎದುರಾಗಿ ಯುದ್ಧದ ಭಾರವನ್ನು ಹೊರಬೇಕಾಗಿರುವದು. ಈ ಭಾರವನ್ನು ಹೊರಲಿಕ್ಕೆ ನಮ್ಮ ವೀರಾಗ್ರೇಸರರಾದ ಧನಾಜಿ ಜಾಧವರು ತಕ್ಕವರೆಂದು ನಾನು ತಿಳಿಯುತ್ತೇನೆ. ಇನ್ನೊಬ್ಬ ವೀರನು ಮಿಂಚಿನಂತೆ, ಕ್ಷಣದಲ್ಲಿ ಇಲ್ಲಿ ವ್ಯೆದೋರಿದರೆ ಮತ್ತೊಂದು ಕ್ಷಣದಲ್ಲಿ ಅಲ್ಲಿ ವ್ಯೆದೋರಿ, ಬಾದಶಹನ ಅನ್ನ ಸಾಮುಗ್ರಿಯನ್ನು ಸುಲಿಯುತ್ತ ಆತನ ಸರದಾರರನ್ನು ಅಲ್ಲಲ್ಲಿ ಬಗ್ಗು ಬಡಿದು ಅವರಿಂದ ''ಘಾಸ ದಾಣೆ'' ಯನ್ನು ಎತ್ತುತ್ತ ಬಾದಶಹನಿಗೆ ಏನೂ ತೋಚದಂತೆ ಮಾಡಬೇಕಾಗಿರುತ್ತದೆ. ಈ ಕೆಲಸ ಕ್ಕೆ ನಮ್ಮ ವೀರಶಿರೋಮಣಿಯಾದ ಸಂತಾಜಿ ಘೋರಪಡೆಯ ಹೊರತು ಮತ್ತೊಬ್ಬರು ತಕ್ಕವರಲ್ಲವೆಂದು ನಾನು ತಿಳಿಯುತ್ತೇನೆ. ಒಟ್ಟಿಗೆ, ಔರಂಗಜೇಬನ ಒಟ್ಟುಗೂಡಿದ್ದ ದೊಡ್ಡ ಸೈನ್ಯವು ನಾಲ್ಕೂ ಕಡೆ ಹರಿದು ಹಂಚಿ ಹೋಗುವಂತೆ ನಾವು ಕ್ಷಣದಲ್ಲಿ ನಾಲ್ಕೂ ಕಡೆಗೆ ಗೊಂದವೆಬ್ಬಿಸಬೇಕಲ್ಲದೆ, ಉತ್ತರದಕಡೆಯ ಬಾಗಿಲುಗಳನ್ನು ಕಟ್ಟಿ, ಬಾದಶಹನನ್ನು ದಕ್ಷಿಣದಲ್ಲಿ ಪ್ರತಿಬಂಧಿಸಿದಂತೆ ಮಾಡಬೇಕಾಗಿರುತ್ತದೆ. ಈಗಿನ ಕಠಿಣ ಪ್ರಸಂಗದಲ್ಲಿ ನಾವು ಪುರುಷರಷ್ಟೇ ಅಲ್ಲ, ಸ್ತ್ರೀಯರೂ ರಾಷ್ಟ್ರಕಾರ್ಯಕ್ಕಾಗಿ ಟೊಂಕಕಟ್ಟ ಬೇಕಾಗಿರುತ್ತದೆ. ನಮ್ಮ ಮಹಾರಾಷ್ಟ್ರ ವೀರವನಿತೆಯರಿಗೆ ಮಾರ್ಗವನ್ನು ತೋರಿಸುವದಕ್ಕಾಗಿ ನಮ್ಮ ಶಿವಪ್ರಭುವಿನ ಕುವರಿಯವ ರಾದ ರಾಜಕುವರವರು ಮುಂದುವರಿದದ್ದಕ್ಕಾಗಿ ನಾವೆಲ್ಲರೂ ಕೃತಜ್ಞತೆಯ ಪೂಜ್ಯ ಭಾವ ದಿಂದ ಸಮಾಧಾನಪಡತಕ್ಕದ್ದು. ಈ ಪ್ರಸಂಗದಲ್ಲಿ ನಾವು ಎಲ್ಲ ಮಾಯಾ-ಮೋಹಗಳನ್ನು ಬದಿಗಿಟ್ಟು, ನಮ್ಮ ವೀರವನಿತಯರ ಶೌರ್ಯ-ಸಾಹಸಗಳಿಗೂ ಇಂಬುಗೊಡಬೇಕಾ ಗಿರುತ್ತದೆ. ಹೀಗೆ ಅಬಾಲ ವೃದ್ಧರಾದ ಮಹಾರಾಷ್ಟ್ರ ಸ್ತ್ರೀ-ಪುರುಷರು ತಮ್ಮಿಂದ ನೀಗ

ಬಹುದಾದ ಕಾರ್ಯದಲ್ಲಿ ಮುಂದುವರಿದು ಮುಗಿಬೀಳದಿದ್ದರೆ, ಮಹಾರಾಷ್ಟ್ರ ರಾಜ್ಯದ ಉದ್ಧಾರವಾಗದು! ಶಿವಪ್ರಭುವಿನ ಅಂಕುರವು ಸ್ತ್ರೀಯಿರಲಿ–ಪುರುಷನಿರಲಿ, ಆದರ ರಕ್ಷಣ ಕ್ಕಾಗಿ ಮಹಾರಾಷ್ಟ್ರರು ನಾವು ಮರಣಕ್ಕೆ ಅಂಜಲಾರೆವು; ಆದ್ದರಿಂದ, ನಾನು ಮಹಾರಾಷ್ಟ್ರ ವೀರರನ್ನು ಕುರಿತು ಪ್ರಾರ್ಥಿಸುವದೇನಂದರೆ– ಮರಾಟ ವೀರರೇ, ಏಳಿರಿ, ನಾವೆಲ್ಲರೂ ದೇಶೋದ್ಧಾರಕ್ಕಾಗಿ ಟೊಂಕಕಟ್ಟೋಣ! ಮರಾಟರ ಒಗರನ್ನು ಅಲಮಗೀರನಿಗೆ ಚನ್ನಾಗಿ ತೋರಿಸಿ, ಶಿವಪ್ರಭುವಿನ ಗೌರವಕ್ಕೆ ಜಗತ್ತು ತಲೆದೂಗುವಂತೆ ಮಾಡೋಣ! ಶಿವ ಪ್ರಭುವಿನ ಈ ಎರಡು ಅಂಕುರಗಳಿಗಾಗಿ ಪ್ರಾಣಕೊಡೋಣ! ನಮ್ಮ ಅತುಲವಾದ ಸ್ವಾಮಿಭಕ್ತಿಯ ಧ್ವಜವನ್ನು ಜಗತ್ತಿನಲ್ಲಿ ಮೆರಿಸೋಣ!

ಪ್ರಲ್ಹಾದಪಂತನ ಈ ಮಾತುಗಳನ್ನು ಕೇಳಿ ವೀರರ ಬಾಹುಗಳು ಸ್ಫುರಣಗೊಂಡವು. ಆಗ ಧನಾಜಿ ಜಾಧವನು ಎದ್ದು ನಿಂದು ಪ್ರಲ್ಹಾದಪಂತನನ್ನು ಕುರಿತು–ಪಂತ, ಹಿರಿಯರಾದ ನಿಮ್ಮ ಆಲೋಚನೆಯು ನಿಮ್ಮ ಹಿರಿಯತನಕ್ಕೂ, ರಾಜಕಾರಣ ಪಟುತ್ವಕ್ಕೂ, ಸ್ವಾಮಿ ಭಕ್ತಿಗೂ ನಿಶ್ಚಯವಾಗಿ ಒಪ್ಪುತ್ತದೆ. ನಾನು ನನ್ನ ಸೈನ್ಯದೊಡನೆ ಶಂಭು ಮಹಾದೇವನ ಗುಡ್ಡದ ಕಡೆಗೆ ಸಾಗಿ, ಅಲ್ಲಿ ಯುದ್ಧವನ್ನು ಹೂಡುವೆನು. ಮರಾಟರ ಸೈನ್ಯವು ನಿರ್ಜೀವ ವಾಗಿರುವದಿಲ್ಲೆಂಬದನ್ನು ಬಾದಶಹನಿಗೆ ತೋರಿಸುವೆನು. ನಿಮ್ಮ ಆಲೋಚನೆಯಂತೆ ನಾವು ನಾಲ್ಕೂ ಕಡೆಯಲ್ಲಿ ಗೊಂದಲವೆಬ್ಬಿಸಿದರೆ, ರಾಯಗಡದ ಮುತ್ತಿಗೆಯು ಸಡಿಲಾಗುವದು. ಅದರಂತೆ ನಮ್ಮ ರಾಜಕುವರರವರಂಥ ವೀರವನಿತೆಯರು, ಅದರಲ್ಲಿ ಶಿವಪ್ರಭುವಿನ ಅಂಕುರವು, ರಾಯಗಡದ ಮುತ್ತಿಗೆಯನ್ನು ಎಬ್ಬಿಸುವ ಕಾರ್ಯದಲ್ಲಿ ಮುಂದುವರಿದರೆ, ನಮ್ಮಂಥ ಮೀಸೆಹೊತ್ತ ಗಂಡಸರ ಇದ್ದಬದ್ದ ಶೌರ್ಯವೆಲ್ಲ ಹೊರಬೀಳಬೇಕಾಗುವದು!

ಈ ಮೇರೆಗೆ ನುಡಿದು ಧನಾಜಿ ಜಾಧವನು ಕುಳಿತುಕೊಳ್ಳುವದರೊಳಗೆ ಸಂತಾಜಿ ಘೋರಪಡೆಯು ಎದ್ದು ನಿಂತು–ಪಂತ, ನಿಮ್ಮಂಥ ಮಾರ್ಗದರ್ಶಕರು ಇರುವತನಕ ಮಹಾರಾಷ್ಟ್ರ ರಾಜ್ಯಕ್ಕೇನು ಬಂದಿದೆ? ರಾಜಾರಾಮ ಪ್ರಭೂ, ತಾಂಭೂಲವನ್ನು ಕೊಡಿರಿ. ನನ್ನ ತಲೆಯಮೇಲೆ ವರದ ಹಸ್ತವನ್ನು ಇಡಿರಿ. ಮೊಗಲ ಬಾದಶಹನು ಮಿಗಿ ಮೀರಿ ಬಂದನೇ? ಆತನ ಸೈನ್ಯವು ನಾಲ್ಕೂಕಡೆಗೆ ನಮ್ಮನ್ನು ಮುತ್ತಿರುವದೆ? ವೀರರೇ, ಬಾದಶಹನಿಗೆ ಮಹಾರಾಷ್ಟ್ರರ ಖ್ಯಾತಿಯನ್ನು ತೋರಿಸೋಣ ನಡೆಯಿರಿ. ನಮ್ಮ ಬೆನ್ನನ್ನು ಪ್ರತಾಪಗಡದ ಅಂಬಾಭವಾನಿಯು ಕಾಯುವಳು! ನಾವು ಶಿವಪ್ರಭುವಿನ ಶೂರ ಸರದಾರರು. ಬಾದಶಹನನ್ನು ಗುದ್ದಿ ಹಣ್ಣು ಮಾಡಿ ಆತನು ಮಹಾರಾಜರಿಗೆ ಶರಣು ಬರುವಂತೆ ಮಾಡೋಣ ನಡೆಯಿರಿ. ನಮ್ಮ ಮೊದಲನೆಯ ಸಲಾಮು ಶಿವಪ್ರಭುವಿಗೆ, ಎರಡನೆಯ ಸಲಾಮು ಅಂಬಾಭವಾನಿಗೆ, ಮೂರನೆಯ ಸಲಾಮು ಸಮರ್ಥ ರಾಮದಾಸ ಸ್ವಾಮಿಗಳಿಗೆ, ನಾಲ್ಕನೆಯ ಸಲಾಮು ಜೀಜಾಬಾಯಿಯವರಿಗೆ, ಐದನೆಯ ಸಲಾಮು ತಾನಾಜಿಗೆ, ಆರನೆಯ ಸಲಾಮು ಆ ರಾಯಗಡಕ್ಕೆ, ನನ್ನ ಕಡೆಯ ಸಲಾಮು, ರಾಜಾರಾಮಪ್ರಭೂ, ಈ ಸಿಂಹಾಸನಕ್ಕೆ! ನಡೆಯಿರಿ, ನಮ್ಮ ವೀರರೇ, ಇನ್ನು ತಡವೇಕೆ?

ಇನ್ನು ತಾನಾಜಿಯ ಕಾಯಕವನ್ನು ಮಾಡೋಣ! ಇನ್ನು ಬಾದಶಹನಿಗೂ ನಮಗೂ ಗಂಟು. ತುಳಾಪುರದಲ್ಲಿ ಮಸಲತ್ತು ಮಾಡುತ್ತ ಕುಳಿತಿರುವ ಅಲಮಗೀರನಿಗೆ ಚನ್ನಾಗಿ ನಮ್ಮ ಕೈ ತೋರಿಸೋಣ ನಡೆಯಿರಿ? ಎಂದು ನುಡಿಯುತ್ತಿರಲು, ರಾಜಕುವರಳು ತನ್ನ ಅಣ್ಣನನ್ನು ಕುರಿತು—ಅಣ್ಣಾ, ನನ್ನನ್ನು ಯುದ್ಧಕ್ಕೆ ಕಳಸಲಿಕ್ಕೆ ನಿಮ್ಮ ಜೀವದ ಸುತ್ತು ಬಂದಂತೆ ಕಾಣುತ್ತದೆ. ಯಾಕಂದರೆ, ಪ್ರಲ್ಹಾದಪಂತರು ನನ್ನನುದ್ದೇಶಿಸಿ ಮಾತಾಡುವಾಗ ನಿಮ್ಮ ಮೋರೆಯಿಳದದ್ದನ್ನು ನಾನು ನೋಡಿದೆನು. ನನ್ನ ಪತಿಯ ಶಿರ್ಕಾಣದ ಸೇಡು ತೀರಿಸಿಕೊಳ್ಳು ವದಕ್ಕಾಗಿ ಭೋಸಲೆಯ ವಂಶವನ್ನು ನಷ್ಟಪಡಿಸಲು ಪ್ರತಿಜ್ಞೆ ಮಾಡಿರುವರಷ್ಟೇ? ಆದರೆ ಈ ಪ್ರಸಂಗದಲ್ಲಿ ಅವರ ಅರ್ಧಾಂಗಿಯಾದ ನಾನು ಶಿವಪ್ರಭುವಿನ ವಂಶವನ್ನು ಉಳಿಸು ವದಕ್ಕಾಗಿ ಪ್ರಯತ್ನ ಪಟ್ಟು ಪತಿಯನ್ನು ಹಾದಿಗೆ ತರಲು ಯತ್ನಿಸುವೆನು. ಪತಿಯಿಂದ ನಿರಾಕರಿಸಲ್ಪಟ್ಟಿದ್ದ ನನಗೆ ದೇಶಸೇವೆಯು ಹೊರತು ಬೇರೆ ಪವಿತ್ರ ಕಾರ್ಯವು ಯಾವದಿರುವದು? ನನಗೆ ರಾಯಗಡದ ಗುಟ್ಟು ಚನ್ನಾಗಿ ಗೊತ್ತಿರುವದರಿಂದ, ಅದರ ಮುತ್ತಿಗೆಯನ್ನು ಎಬ್ಬಿಸಲಿಕ್ಕೆ ನನ್ನಿಂದ ಒಳಿತಾಗಿ ಸಹಾಯವಾಗುವದು. ಅಣ್ಣಾ, ಪ್ರಲ್ಹಾದ ಪಂತರು ನಮಗೆ ಹಿರಿಯರಲ್ಲವೆ? ಅವರು ನಮ್ಮ ಆಬಾಸಾಹೇಬರ ಸ್ವಾಮಿನಿಷ್ಠ ಸೇವಕ ರಲ್ಲವೆ? ನಮ್ಮ ಹಿತವು ನಮಗಿಂತಲೂ ಅವರಿಗೆ ಚನ್ನಾಗಿ ಗೊತ್ತಿರುವದಲ್ಲವೆ? ಆದ್ದ ರಿಂದ ನನ್ನ ಮನೋಭಾವಕ್ಕನುಸರಿಸಿ ಅವರು ಹೇಳಿರುವ ಮಾತಿಗಾಗಿ ನೀವು ಚಿಂತೆ ಮಾಡ ಕೂಡದು. ನನ್ನ ದಂಡೆಯಾತ್ರೆಗಾಗಿ ನೀವು ಒಪ್ಪಿಕೊಳ್ಳಲೇ ಬೇಕು. ಪತಿಯಿಂದ ತಿರಸ್ಕರಿ ಸಲ್ಪಟ್ಟಿರುವ ರಾಜಕುವರಳು ಸ್ವದೇಶ ಸೇವಾತತ್ಪರಳಾಗಿರುವಳೆಂಬದನ್ನು ಚೆನ್ನಾಗಿ ನೆನಪಿನಲ್ಲಿಡಿರಿ.

ಹೀಗೆ ರಾಜಕುವರಳು ನುಡಿಯುತ್ತಿರುವಾಗ ದರ್ಬಾರದಲ್ಲಿಯ ಯಾವತ್ತು ವೀರರ ಯುದ್ಧೋತ್ಸಾಹವು ಹೆಚ್ಚಲು, ಅವರು ತಮ್ಮ ಖಡ್ಗಗಳನ್ನು ಹಿರಿದು ತಮ್ಮ ಯುದ್ಧದ ಆತುರತೆ ಯನ್ನು ವ್ಯಕ್ತಮಾಡಿದರು. ಆಗ ರಾಜಾರಾಮನು ಉತ್ಸಾಹಪ್ರೇರಿತನಾಗಿ– ಅಹಹ! ಇಷ್ಟು ಬಂಧುಬಲವು ನನಗಿರಲು, ಇಂಥ ವೀರ–ಮಹಾವೀರರು ಸ್ವದೇಶೋದ್ಧಾರಕ್ಕಾಗಿ ದೇಹ ವನ್ನರ್ಪಿಸಲಿಕ್ಕೆ ಸಿದ್ಧವಾಗಿರಲು, ನಮ್ಮ ಮಹಾರಾಷ್ಟ್ರ ಧರ್ಮದ, ಅದರಂತೆ ಸಮರ್ಥರ ಸದ್ಬೋಧದ ವಿಜಯವು ಯಾಕಾಗಲಿಕ್ಕಿಲ್ಲ? ವೀರರೇ, ನಿಮ್ಮ ನಿಮ್ಮ ಪರಿಶುದ್ಧಗಳಾದ ಅಂತರಾತ್ಮಗಳೇ ನಿಮ್ಮನ್ನು ಪವಿತ್ರೋದ್ದೇಶದ ಯುದ್ಧ ವ್ಯಾಪಾರಕ್ಕಾಗಿ ಪ್ರೇರಿಸುತ್ತಿರುವಾಗ, ಪ್ರತಿಬಂಧಿಸಲು ನಾನೆಷ್ಟರವನು? ಪ್ರಲ್ಹಾದಪಂತ, ನಿಮ್ಮ ಯೋಚನೆಯು ನನಗೆ ಮಾನ್ಯವಿದೆ. ನಮ್ಮ ಕಂದಮ್ಮನು ಹೇಳಿದಂತೆ, ನಮ್ಮ ಹಿತದ ಮಾರ್ಗವು ನಿಮಗೆ ಚನ್ನಾಗಿ ಗೊತ್ತಿರುವದು. ನೀವೂ, ನಮ್ಮ ಸರದಾರ ಮಂಡಲವೂ ಪೂಜ್ಯನಾದ ಶಿವಪ್ರಭುವಿನ ಪುಣ್ಯವನ್ನು ಕಾಯ್ದುಕೊಳ್ಳಿರಿ, ಎಂದು ನುಡಿಯುತ್ತಿರಲು, ಪ್ರಲ್ಹಾದಪಂತನು ಎದ್ದು ನಿಂತು ವಿನಯದಿಂದ ಪ್ರಭುವನ್ನು ವಂದಿಸಿ–ಪ್ರಭೋ, ನಮ್ಮ ಶಿವಪುತ್ರನಲ್ಲಿಯಲ್ಲದೆ ಈ ಸೌಜನ್ಯವು ಅನ್ಯರಲ್ಲಿ ತೋರಬಹುದೇ? ಎಲ್ಲವೂ ಚರಣ ಕೃಪೆಯಿಂದ ಸಾಧಿಸುವಾಗ

ಈ ದಾಸನು ಮಾಡುವದೇನು? ಆದರೂ, ಪ್ರಭುವಿನ ಅಪ್ಪಣೆಯನ್ನು ನಾನು ಮನ್ನಿಸದೆ ಇರಲಾರೆನು. ಸ್ವಾಮಿಸೇವೆಗಾಗಿಯೇ, ಈ ದೇಹವು ವಿನಿಯೋಗಿಸಲ್ಪಡುವದು. ನಮ್ಮ ಮಹಾರಾಷ್ಟ್ರ ರಾಜ್ಯದ ಆಧಾರ ಸ್ತಂಭಗಳಾದ ಮಹಾ ವೀರರೇ, ನಿಮ್ಮ ಈ ಯುದ್ಧಾವೇಶವು ಯಶಸ್ಸನ್ನು ಕೊಡುವದಾಗಲಿ! ನಿಮ್ಮ ಈ ಸದ್‌ಭಾವನೆಯು ಇಹ-ಪರದಲ್ಲಿ ಕಲ್ಯಾಣ ಕರವಾಗಲಿ! ಸ್ವರ್ಗಪ್ರಾಪ್ತಿಗೆ ಅನೇಕ ಮಾರ್ಗಗಳಿರುವವೆಂಬದು ನಿಜವು ಯೋಗಾಭ್ಯಾಸದಿಂದ ಸ್ವರ್ಗವನ್ನು ಸಂಪಾದಿಸಿಬೇಕೆಂದರೆ, ಆಹಾರ, ವಿಹಾರ, ನಿದ್ರಾ, ವ್ಯಾಯಾಮ, ವಾಯು ಇವುಗಳ ವಿರೋಧ ನಿರೋಧವನ್ನು ಮಾಡಬೇಕಾಗುವದು. ಅದರಲ್ಲಿ ಏನಾದರೂ ಹೆಚ್ಚು ಕಡಿಮೆಯಾದರೆ ಸಾಧಕನ ನಾಶವಾಗುವದು. ಇನ್ನು ಜ್ಯೋತಿಷ್ಟೋಮಾದಿ ಯಜ್ಞಗಳನ್ನು ಮಾಡಬೇಕಾದರೆ ಯಜ್ಞಗಳ ಜ್ಞಾನವು ಬೇಕಾಗುವದು; ಆದರೆ ವೀರರೇ, ರಣಾಂಗಣದಲ್ಲಿ ಮರಣ ಒದಗಿದರೆ, ಈ ಯುದ್ಧ ವ್ಯಾಪಾರರೂಪ ಸೋಪಾನದಿಂದ ಸ್ವರ್ಗಕ್ಕೆ ಹೋಗುವ ಮಾರ್ಗವು ಎಲ್ಲರಿಗೂ, ಎಲ್ಲ ಜಾತಿಯವರಿಗೂ ತೆರೆದಿರುವದು! ಆದ್ದರಿಂದ ವೀರರೇ, ನಡೆಯಿರಿ, ನಿಮ್ಮ ಪರಾಕ್ರಮದಿಂದ ಬಾದಶಹನನ್ನು ಹಣ್ಣು ಮಾಡುವದಕ್ಕೆ ನಡೆಯಿರಿ. ಅಮ್ಮಾ ರಾಜಕುವರ, ನಡೆಯಮ್ಮಾ ನಡೆ. ಸಂತಾಜಿ, ಈ ರತ್ನವನ್ನು ಪುನಃ ರಾಯಗಡಕ್ಕೆ ಮುಟ್ಟಿಸುನಡೆ. ಹಾದಿಯಲ್ಲಿ ಈ ವೀರ ವನಿತೆಯು ನಿನಗೆ ಒಳಿತಾಗಿ ಸಹಾಯ ಮಾಡುವಳು ನಡೆ. ನೀವಿಬ್ಬರು ಆಕಾಶಪುಷ್ಪದ ಅರಳು ಮಗ್ಗೆಯನ್ನಾದರೂ ತರುವಿರೆಂಬ ನಂಬಿಗೆಯು ನನಗಿರುತ್ತದೆ ನಡೆಯಿರಿ!

ಪ್ರಲ್ಹಾದಪಂತನು ಹೀಗೆ ನುಡಿದುಕೊಳ್ಳುತ್ತಿರಲು, ತಾಂಬೂಲ ಸಮರ್ಪಣಾನಂತರ ಸಭಾಕಾರ್ಯವು ಮುಗಿದು, ಅವರವರು ಅವರವರ ಕಾರ್ಯಕ್ಕೆ ಹೊರಡಲು ಸಿದ್ಧರಾದರು. ಈ ಕಾಲದ ಮರಾಟಾ ವೀರರ ಸ್ವಾಭಿಮಾನವನ್ನೂ, ಸ್ವದೇಶಾಭಿಮಾನವನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ ಇರುವದು. ಶ್ರೀ ಶಿವಪ್ರಭುವು ಮಹಾರಾಷ್ಟ್ರ ರಾಜ್ಯವನ್ನು ಸ್ಥಾಪಿಸಿದ್ದು ಮಹಾಕಾರ್ಯವೆಂಬುದೇನೋ ನಿಜ; ಅದರಂತೆ ಆ ಮಹಾಕಾರ್ಯವನ್ನು ಮಾಡಿದ್ದಕ್ಕಾಗಿ ಆತನನ್ನು ನಾವು ಅಲೌಕಿಕ ಪುರುಷನೆಂತಲೂ, ಪ್ರತ್ಯಕ್ಷ ಶಿವಾವತಾರವೆಂತಲೂ ಭಾವಿಸುತ್ತಿರುವದರಲ್ಲಿಯೂ ದೋಷವಿಲ್ಲ; ಆದರೆ ಆ ಮರಾಟರ ರಾಜ್ಯವು ಮೊಗಲರ ಆಘಾತದಿಂದ ಕುಸಕ್ಕನೇ ಕುಸಿದು ಬೀಳುತ್ತಿರುವಾಗ ಎದೆಗೊಟ್ಟು ಅದನ್ನು ಎತ್ತಿ ಹಿಡಿದ ಕೆಚ್ಚೆದೆಯ ಮರಾಟರನ್ನು ಎಷ್ಟು ಗೌರವಿಸಿದರೂ ಸ್ವಲ್ಪವೇ ಇರುವದೆಂದು ತಡೆಯಿಲ್ಲದೇ ಹೇಳಬಹುದು; ಏಕೆಂದರೆ, ಸಮರ್ಥನೂ, ಸಾಹಸಿಯೂ, ಕುಶಲನೂ ಆದ ಶಿಲ್ಪಿಯು ಒಂದು ಮನೆಯನ್ನು ಕ್ರಮದಿಂದ ಬಡಬಡ ಕಟ್ಟಿ ಮುಗಿಸಬಹುದು; ಆದರೆ ಆ ಕಟ್ಟಿದ ಮನೆಯು ಅಕ್ರಮವಾಗಿ ಬಡಬಡ ಬೀಳುತ್ತಿರುವಾಗ ಅದನ್ನು ಬೀಳಗೊಡದೆ ಸ್ಥಿರಗೊಳಿಸುವದು ಸಾಮಾನ್ಯ ಸಂಗತಿಯಲ್ಲ! ಅದರಿಂದಲೇ ಹೊಸದನ್ನು ಕಟ್ಟುವವನಿಗಿಂತ ಜೀರ್ಣೋದ್ಧಾರ ಮಾಡುವವನು ಪುಣ್ಯವು ಹೆಚ್ಚೆಂದು ವರ್ಣಿಸುವದು ನಿರರ್ಥಕವಾದದ್ದಲ್ಲ. ತಮ್ಮ ಪ್ರಭುವಿನಿಂದ ಸ್ಥಾಪಿಸಲ್ಪಟ್ಟಿದ್ದ ರಾಜ್ಯವನ್ನು ಮುಣುಗಿಸುವದು ತಮ್ಮ

ಸ್ವಾಮಿಭಕ್ತಿಗೆ ಸಲ್ಲದೆಂಬದೊಂದೇ ಪ್ರಬಲವಾದ ಭಾವನೆಯಿಂದ ಆಗಿನ ಕಾಲದ ಎಷ್ಟೋ ಮಹಾರಾಷ್ಟ್ರ ಸ್ತ್ರೀ–ಪುರುಷರು ಸ್ವಾರ್ಥಕ್ಕೆ ನೀರು ಬಿಟ್ಟು ಸ್ವಾಮಿಕಾರ್ಯದಲ್ಲಿ ಸವೆದರು! ಧನಾಜಿಯೂ, ಸಂತಾಜಿಯೂ, ರಾಜಕುವರರಳೂ ದರ್ಬಾರದಿಂದ ಹೊರಟು ತಮ್ಮ ತಮ್ಮ ಸ್ಥಾನಗಳಿಗೆ ಹೋಗುವಾಗೂ, ಹೋದಬಳಿಕ ಸ್ವಾಮಿಕಾರ್ಯವ ಸಾಧಿಸುವ ಉಪಾಯಗಳನ್ನೇ ಚಿಂತಿಸುತ್ತಲಿದ್ದರು. ಪ್ರಲ್ಹಾದಪಂತನು ತಮತಮಗೆ ವಹಿಸಿದ್ದ ಕಾರ್ಯಗಳನ್ನು ತಾವು ಬೇಗ ಸಾಧಿಸಬೇಕೆಂದು ಅತ್ಯಾಸಕ್ತಿಯಿಂದ ಅವರು ಸಾಧನಗಳನ್ನು ಸಿದ್ಧಗೊಳಿಸಿಕೊಳ್ಳ ಹತ್ತಿದರು.

ಹೀಗಿರುವಾಗ ಮರಾಟರ ಈ ದರ್ಬಾರದ ಸಂಗತಿಯು ಭೋಲಾನಾಥನೆಂಬ ಪ್ರಸಿದ್ಧ ಗುಪ್ತಚಾರನ ಮುಖಾಂತರವಾಗಿ ಬಾದಶಹನ ಕಿವಿಗೆ ಮುಟ್ಟಲು, ಆತನು ಕೂಡಿದ ದರ್ಬಾರದಲ್ಲಿ ಸಂತಾಪದಿಂದ ಹಲ್ಲುಕಡಿದನು. ಆತನು ರಣಮಸ್ತಖಾನನ, ಶಾಹಸ್ತೀಖಾನ ರೆಂಬ ಬಲಾಢ್ಯ ಸರದಾರರನ್ನು ಇತಿಕದ ಖಾನನ ಸಹಾಯಕ್ಕಾಗಿ ರಾಯಗಡಕ್ಕೆ ಕಳಿಸಿದನು. ಈ ಸಂಗತಿಯು ಕೂಡಲೇ ಚಪಲ ಚಾರರ ಮುಖಾಂತರ ಸಂತಾಜಿಯ ಕಿವಿಗೆ ಮುಟ್ಟಿತು. ಆಗ ಆತನು ರಾಜಕುವರಳೊಡನೆ ಧನಾಜಿಯ ಬಳಿಗೆ ಬಂದು—''ಸೇನಾಪತಿಸಾಹೇಬ, ಬಾದಶಹನ ಹೊಸ ಸೈನ್ಯವಂತು ರಾಯಗಡದ ಮುತ್ತಿಗೆಯ ಸಹಾಯಕ್ಕಾಗಿ ಹೊರಟಿತು. ಇನ್ನೊಂದು ಸೈನ್ಯವು ಬೇಗನೆ ರಾಯಗಡದ ಕಡೆಗೇ ಸಾಗುವಂತೆ ತೋರುತ್ತದೆ. ಮತ್ತೊಂದು ಪಲ್ಹಾಳಗಡದ ಕಡೆಗೇ ಸಾಗಬಹುದು. ಈಗ ನಾನು ಸುತ್ತು ಮುತ್ತಲಿನ ಪ್ರದೇಶವನ್ನು ಸುಟ್ಟುಬಂದು ಬಾದಶಹನಿಗೆ ಅನ್ನ ಸಾಮಗ್ರಿಯು ದೊರೆಯದಂತೆ ಮಾಡುತ್ತೇನೆ. ನೀವು ಬಾದಶಹನ ಸೈನ್ಯದೊಡನೆ ಕಾದುವಂತೆ ತೋರಿಸಿ, ಶಂಭು ಮಹಾ ದೇವನ ಗುಡ್ಡದ ಕಡೆಗೆ ಸಾಗುತ್ತ ಬಾದಶಹನ ಸೈನ್ಯವನ್ನು ದೂರ ಅತ್ತ ಕಡೆಗೆ ಸಾಗಿಸಿಕೊಂಡು ಹೋಗಿರಿ. ಹೀಗೆ ಬಾದಶಹನ ಸೈನ್ಯವು ನಾಲ್ಕೂ ಕಡೆಯಲ್ಲಿ ಹಂಚಿಹೋಗುವದರಿಂದ ತುಳಾಪುರದಲ್ಲಿಯ ಆತನ ಠಾಣ್ಯದಲ್ಲಿದ್ದ ಸೈನ್ಯದ ಕಸುವು ಕಡಿಮೆಯಾಗುವದು. ಬಾದ ಶಹನು ಮರಾಟರ ಕೆಚ್ಚೆದೆಯ ಮಹಿಮೆಯನ್ನರಿಯದೆ, ನಿರ್ಭಯದಿಂದ ಅಲ್ಲಿ ವಾಸಿ ಸುತ್ತಿರುವನು. ಮರಾಟರು ತನ್ನ ಮೇಲೆ ಏರಿಬಂದರೆ, ಅವರನ್ನು ನುಚ್ಚುನುರಿಯಾಗಿ ಕಡಿಯುವನೆಂಬ ಹುಮ್ಮಸವು ಅವನಿಗೆ ವಿಶೇಷವಾಗಿರುತ್ತದೆ. ಧನಸಿಂಗರಾವ, ಇನ್ನು ಸಂತಾಜಿಯು ಪ್ರತ್ಯಕ್ಷ ಬಾದಶಹನ ಡೇರೆಯನ್ನು ಹೊಕ್ಕು ಮಾಡುವ ಕರಾಮತಿಯನ್ನು ನೋಡಿರಿ. ನಾನು ಎರಡು ಸಾವಿರ ದಂಡಿನೊಡನೆ ಬಾದಶಹನ ಠಾಣ್ಯವನ್ನು ಹೊಕ್ಕು ಮರಾಟರ ಕೆಚ್ಚೆದೆಯ ಪ್ರಭಾವವನ್ನು ತೋರಿಸಿ ಬರುವೆನು. ನಮ್ಮ ಜಗದಳ ಮನೆತನದ ಬಹಿರ್ಜಿಯೂ, ಫಿರೋಜಿಯೂ, ಮಾಲೋಜಿಯೂ ತಮ್ಮ ತಮ್ಮ ಕೆಲಸವನ್ನು ಉತ್ತಮ ರೀತಿಯಿಂದ ಮಾಡುವರು, ಎಂದು ನುಡಿಯಲು, ಧನಾಜಿಯು—''ಶಾಬಾಸ್! ಸಂತಾಜೀ, ನಿಮ್ಮ ಆಲೋಚನೆಯು ಬಹು ಯೋಗ್ಯವಾದದ್ದು. ನಮ್ಮ ಯಾದವ ಮನೆತನದ ಸ್ವರೂಪಜಿಯನ್ನೂ, ಪದಾಜಿಯನ್ನೂ ಸಂಗಡ ಕರಕೊಳ್ಳಿರಿ. ಅವರಿಂದ ನಿಮಗೆ ಬಹಳವಾಗಿ ಸಹಾಯವಾಗ ಬಹುದು'' ಎಂದು ಹೇಳಿದನು.

ಈ ಕಾಲದಲ್ಲಿಯೂ ಮರಾಟ ಸರದಾರರಲ್ಲಿ ಅಂತಃಕಲಹಗಳಿದ್ದವು. ಈವೊತ್ತಿಗೆ ಈ ಘಾತಕವಾದ ಅಂತಃಕಲಹದಿಂದ ಭರತಪುತ್ರರ ರಾಜಕಾರಣಗಳಲ್ಲಿ ಹಲವು ಅನರ್ಥಗಳು ಒದಗುತ್ತ ಬಂದಿರುತ್ತವೆ. ಮರಾಟರಲ್ಲಿಯ ಜಗದಳೆ, ಹಾಗು ಯಾದವ ಎಂಬವೆರಡು ಮನೆತನ ಗಳಲ್ಲಿ ವೈಮನಸ್ಸು ವಿಶೇಷವಾಗಿ ಇತ್ತು, ಅವೆರಡು ಮನೆತನಗಳು ವತನದ ಸಲುವಾಗಿ ಬಡೆದಾಡುತ್ತಿದ್ದವು. ಅವುಗಳಲ್ಲಿ ಯಾದವ ಮನೆತನದ ಪಕ್ಷವನ್ನು ಧನಾಜಿಯೂ ಜಗದಳೆ ಮನೆತನದ ಪಕ್ಷವನ್ನು ಸಂತಾಜಿಯೂ ವಹಿಸಿದ್ದರು. ಧನಾಜಿಯು ಮೇಲೆ ಹೇಳಿದಂತೆ ತನ್ನ ಯಾದವ ಕುಲದ ವೀರರನ್ನು ಸಹಾಯಕ್ಕೆ ಕರಕೊಳ್ಳ ಹೇಳಲು, ಅದಕ್ಕೆ ಸಂತಾಜಿಯು ಮಾತ್ಸರ್ಯದಿಂದ–ಈ ಯಾದವ ವೀರರ ಸಹಾಯವು ನನಗೆ ಬೇಡ, ನಮ್ಮ ಜಗದಳೇ ವೀರರು ಇರುತ್ತಾರೆ, ಎಂದು ಹೇಳಿದನು. ಆಗ ಶಿವಪುತ್ರಿಯಾದ ರಾಜಕುವರಳು ನಡುವೆ ಬಾಯಿಹಾಕಿ–ಸಂತಾಜೀ, ನಿಮ್ಮ ಅಂತಃಕಲಹಕ್ಕೆ ಇದು ಸಮಯವಲ್ಲ. ಹಿಂದಿನದವನ್ನು ಹಿಂದುಗಡೆ ನೋಡಿಕೊಳ್ಳೋಣ. ಸದ್ಯಕ್ಕೆ ಮಹಾರಾಷ್ಟ್ರ ಕಾರ್ಯಕ್ಕಾಗಿ ನೀವು ಮನಸ್ಸಿನೊಳಗಿನ ಅಗ್ರಹವನ್ನು ಬಿಡಿರಿ! ಅಂದರೆ ಕಾರ್ಯವಾದೀತು. ಅಸದಖಾನನು ರಾಯಗಡಕ್ಕೆ ಮುಟ್ಟುವದ ರೊಳಗಾಗಿ ನಾನು ಅತ್ತಕಡೆಯ ಸುದ್ದಿಯನ್ನು ತಿಳಕೊಂಡು ಬರುತ್ತೇನೆ. ಅಷ್ಟರಲ್ಲಿ ನೀವು ಈ ಜಗದಳೆ, ಹಾಗು ಯಾದವ ವೀರರೊಡನೆ ತುಳಾಪುರಕ್ಕೆ ಹೋಗಿ ಬಾದಶಹನ ಠಾಣ್ಯವನ್ನು ನಡುಗಿಸಿರಿ. ಸಾಧಿಸಿದರೆ ನಾನು ಏಸೂಬಾಯಿಯವರನ್ನೂ ಬಾಲ ಶಿವರಾಯನನ್ನೂ ಇತ್ತ ಕಡೆಗೆ ಸಾಗಿಸಿಕೊಂಡು ಬರುತ್ತೇನೆ. ಅದು ಸಾಧಿಸದಿದ್ದರೆ ಇತಿಕದ ಖಾನನೊಡನೆ ನಿಗ್ರಹದಿಂದ ಕಾದಿ, ಅವನನ್ನು ರಾಯಗಡದಿಂದ ದೂರ ಇತ್ತಕಡೆಗೆ ಅಟ್ಟಿಕೊಂಡಾದರೂ ಬರುತ್ತೇನೆ. ಎಂದು ನುಡಿಯಲು, ಅವರಿಬ್ಬರು ಸ್ವಾಮಿನಿಷ್ಠ ಮರಾಟವೀರರು ಅದಕ್ಕೆ ಒಪ್ಪಿಕೊಂಡು ಶಿವಪುತ್ರಿಯನ್ನು ಗೌರವಿಸಿದರು.

## ಬಂಧವಿಮೋಚನ

ಸಂತಾಜಿಯ ಸ್ವಾಮಿನಿಷ್ಠೆಯೂ, ಕಾರ್ಯತತ್ಪರತೆಯೂ, ಬಲವತ್ತರವಾದವು. ಮಂದತನವು ಆತನಿಗೆ ಸರ್ವಥಾ ಸೇರುತ್ತಿದ್ದಿಲ್ಲ. ತಾನು ಬಾದಶಹನಿಗೆ ಯಾವಾಗ ಕೈತೋರಿಸೇ ನೆಂದು ಆತನು ಆತುರ ಪಡುತ್ತಲಿದ್ದನು. ನಿಂತಲ್ಲಿ ನಿಲ್ಲದೆ ಆತನು ತುಳಾಪುರದ ಕಡೆಗೆ ಸಾಗಿರುವಾಗ, ಹಾದಿಯಲ್ಲಿ ಆತನ ಗೂಢಚಾರನೊಬ್ಬನು ಬಂದು ಒಂದು ತರಗೆಲೆಯ ತುಣಕನ್ನು ಕೊಟ್ಟನು. ಆಗ ಸಂತಾಜಿಯು ಅದನ್ನು ತಕ್ಕೊಂಡು ನೋಡಲು, ಅದರ ಮೇಲೆ "ನಾನು ರಾಯಡದ ಬಳಿಯ ಅಡವಿಯೊಳಗಿನ ಗುಡಿಯಲ್ಲಿ ಪ್ರತಿ ಬಂಧಿಸಲ್ಪಟ್ಟಿದ್ದೇನೆ, ಬಿಡಿಸಿಕೊಂಡು ಹೋಗಿರಿ" ಎಂದು ಬರೆದಿತ್ತು, ಅದನ್ನು ಓದಿ ಸಂತಾಜಿಗೆ ಏನೂ ತೋಚ ದಾಯಿತು. ಆತನು ತನ್ನ ಚಾರನನ್ನು ಕುರಿತು—ಇದನ್ನು ಎಲ್ಲಿಂದ ತಂದೆ? ನಿನಗೆ ಇದನ್ನು

ಯಾರು ಕೊಟ್ಟರು? ಎಂದು ಕೇಳಲು, ಚಾರನು—ಮಹಾರಾಜ, ನಾನು ತಮ್ಮ ಅಪ್ಪಣೆಯಂತೆ ರಾಯಗಡದ ಬಳಿಯ ಅಡವಿಯಲ್ಲಿದ್ದು, ಮೊಗಲದ ಮುತ್ತಿಗೆಯ ಕಸುವನ್ನು ಪರೀಕ್ಷಿಸುತ್ತಿರುವಾಗ, ಕೊರಳಲ್ಲಿ ಏನೋ ಕಟ್ಟಿರುವ ಕೆಲವು ಪಕ್ಷಿಗಳನ್ನು ನೋಡಿದೆನು. ಈ ಪಕ್ಷಿಗಳು ಕೆಳಗಿಳಿದು ಮೇಯುವಾಗ ಅವುಗಳಲ್ಲೊಂದನ್ನು ನಾನು ಹೊಡೆಯಲು, ಅದರ ಕೊರಳೊಳಗೆ ಈ ತರಗೆಲೆಯ ತುಣುಕು ಇತ್ತು, ಇದರಲ್ಲಿ ಗುಪ್ತ ರಾಜಕಾರಣವೇನಾದರೂ ಇರಬಹುದೆಂದು ತಿಳಿದು, ನಾನು ನಡುವೆ ವಿಶ್ರಾಂತಿಯನ್ನು ಸಹ ಹೊಂದದೆ ಸನ್ನಿಧಿಗೆ ಇದನ್ನು ತಂದಿದ್ದೇನೆ. ಇದಕ್ಕಿಂತ ಹೆಚ್ಚಿಗೆ ನನಗೇನೂ ಗೊತ್ತಿಲ್ಲ, ಎಂದು ಹೇಳಿದನು. ಅದನ್ನು ಕೇಳಿ ಸಂತಾಜಿಯ ಮನಸ್ಸು ಚಂಚಲವಾಯಿತು. ತಾನು ತುಳಾಪುರಕ್ಕೆ ಹೋಗಬೇಕೋ, ರಾಯಗಡದ ಕಡೆಗೆ ತಿರುಗಬೇಕೋ, ಎಂದು ಆತನು ಆಲೋಚಿಸತೊಡಗಿದನು. ತಾನು ತಟ್ಟನೇ ದೇವಾಲಯಕ್ಕೆ ಹೋಗಿಯೇ ಬರಬೇಕೆಂದು ಯೋಚಿಸಿ, ನಿಯಮಿತ ಸೈನಿಕರೊಡನೆ ಆತನು ರಾಯಗಡದ ಕಡೆಗೆ ಸಾಗಿದನು. ಆತನ ಉಳಿದ ಸೈನಿಕರು ಸಂಕೇತದ ಸ್ಥಳದಲ್ಲಿ ತಳಊರಿದರು. ದೇವಾಲಯದಲ್ಲಿ ಸೆರೆ ಸಿಕ್ಕವನು ತಮ್ಮವನೇ ಇರಬೇಕೆಂಬ ಶಂಕೆಯು ಸಂತಾಜಿಯನ್ನು ಬಾಧಿಸಹತ್ತಿದ್ದರಿಂದ, ಆತನು ಬಹು ವೇಗದಿಂದ ಮಾರ್ಗವನ್ನು ಕ್ರಮಿಸಿ, ಪರಮ ಪ್ರಯಾಸದಿಂದ ದೇವಾಲಯದ ಗೊತ್ತುಹಚ್ಚಿದನು.

ಸಂತಾಜಿಯು ದೇವಾಲಯದ ಬಾಗಿಲಿಗೆ ಮುಟ್ಟಿದಾಗ ಅದಕ್ಕೆ ದೊಡ್ಡ ಕೀಲಿಯನ್ನು ಹಾಕಿತ್ತು. ಗುಡಿಯ ಸುತ್ತು ಮುತ್ತಲಿನ ಗೋಡೆಯು ಬಹು ಎತ್ತರವಾಗಿದ್ದು, ದೊಡ್ಡ ದೊಡ್ಡ ಗಿಡಗಳ ಸಂದಣಿಯಲ್ಲಿ ಅದು ಮುಚ್ಚಿ ಹೋದದ್ದರಿಂದ ಅದು ಭಯಪ್ರದವಾಗಿ ತೋರುತ್ತಿತ್ತು. ಗೋಡೆ ಹತ್ತಿ ಗುಡಿಯೊಳಗೆ ಇಳಿದು ಹೋಗುವದು ಅಸಾಧ್ಯವೆಂದು ಸಂತಾಜಿಯು ತರ್ಕಿಸಿದನು. ಆತನು ತನ್ನ ಗೂಢಚಾರನನ್ನು ಕುರಿತು–

ಸಂತಾಜಿ—ಏನೋ ಏ ಸಖ್ಯಾ, ಗುಡಿಯೊಳಗೆ ಹ್ಯಾಗೆ ಹೋಗಬೇಕು? ಈ ಗುಡಿಯ ರಕ್ಷಕರು ಸಮೀಪದಲ್ಲಿ ಎಲ್ಲಿಯಾದರೂ ಇದ್ದಗಿದ್ದರೆ ಹ್ಯಾಗೆ? ಇದು ಪುಂಡರ ವಸತಿಸ್ಥಾನವೋ! ಅಥವಾ ರಾಕ್ಷಸರ ವಾಸಸ್ಥಳವೋ? ರಾಯ ಗಡದ ಅಡವಿಯೊಳಗಿನ ಭಯಂಕರವಾದ ಗುಡಿಯಲ್ಲಿ ಪಿಶಾಚಿಗಳು ವಾಸಿಸುತ್ತವೆಂದು ಕೇಳಿರುವೆವಲ್ಲ? ಅದೇ ಗುಡಿಯೇ ಇದು ಆಗಿರಬಹುದೇನು? ಅಥವಾ ಇದು ಒಬ್ಬಾನೊಬ್ಬ ರಾಕ್ಷಸನ ವಿಹಾರ ಮಂದಿರವಾಗಿರ ಬಹುದೋ?

ಸಖ್ಯಾ—ಸರಕಾರ, ಯಾರಿದ್ದು ನಮಗೇನು ಮಾಡುವರು? ನಮ್ಮ ಈ ಪರಿವಾರವು ಬಾಗಿಲಲ್ಲಿ ಕಾಯುತ್ತ ನಿಂತುಕೊಳ್ಳಲಿ, ನಾನು ತಮ್ಮೊಡನೆ ಗುಡಿಯೊಳಗೆ ಬರುತ್ತೇವೆ. ಪುಂಡರು ಒಳಗೆ ವಾಸಿಸುತ್ತಿದ್ದರೆ ನಮ್ಮ ಕತ್ತಿಗಳೇನು ಜಂಗು ಹಿಡಿದಿರುವವೇ? ಪಿಶಾಚಿಗಳಿದ್ದರೆ, ಅವು ನಮ್ಮನ್ನೊಂದು ತಡವಲಿ, ತುಂಡರಿಸಿ ಚಲ್ಲೋಣ!

ಸಂತಾಜಿ—ಶಾಬಾಸ್! ಸಖ್ಯಾ, ನೀನು ಸಂತಾಜಿಯ ಪರಿವಾರದಲ್ಲಿರಲು ತಕ್ಕವನೆಂಬದರಲ್ಲಿ ಸಂಶಯವಿಲ್ಲ. ಪುರಾಣಾಂತರಗಳಲ್ಲಿ ಮಾತ್ರ ರಾಕ್ಷಸರ ಬಲ–ಪರಾಕ್ರಮಗಳ ವರ್ಣನವನ್ನು ಕೇಳಿರುವೆನಲ್ಲದೆ, ಪ್ರತ್ಯಕ್ಷ ರಾಕ್ಷಸರ ಗಂಟು ನನಗೆ ಈ ವರೆಗೆ

ಬಿದ್ದಿರುವದಿಲ್ಲ ನೋಡೋಣ, ಒಳಗೆ ರಾಕ್ಷಸನಿರುವನೋ ಹ್ಯಾಗೆಂಬದನ್ನು ಇದ್ದರೆ ಅವನಿಗೆ ಮರಾಟರ ಕೈಯನ್ನು ತೋರಿಸೋಣ! ಹ! ಇನ್ನು ತಡವೇಕೆ? ಮುರಿ ಕೀಲಿಯನ್ನು! ಅಥವಾ ಸಪ್ಪಳಿಲ್ಲದೆ ಶಸ್ತ್ರಮೀಟಿ ತೆಗೆಯಲಿಕ್ಕೆ ಬಂದರೆ ತೆಗೆದು ನೋಡು.

ಸಂತಾಜಿಯ ಅಪ್ಪಣೆಯಂತೆ ಸಖ್ಯಾನು ಬಹು ಪ್ರಯಾಸಪಟ್ಟು, ಹೆಣಗಾಡಿದ ಬಳಿಕ ಒಮ್ಮೆ ಕೀಲಿಯು ಬಂದಿತು. ಸಂತಾಜಿಯ ಅಪ್ಪಣೆಯಂತೆ ಬಾಗಿಲಲ್ಲಿ ಕೆಲವರು ಕಾಯುತ್ತ ನಿಂತುಕೊಂಡರು. ಬಳಿಕ ಸಂತಾಜಿಯೂ, ಸಖ್ಯಾನೂ ಬಹು ಜಾಗರೂಕತೆಯಿಂದ ಗುಡಿಯಲ್ಲಿ ಹೊಕ್ಕರು. ಆಗಿನ ಕಾಲದಲ್ಲಿ ಭೂತ–ಪಿಶಾಚ–ರಾಕ್ಷಸ ಮೊದಲಾದವುಗಳ ಅಸ್ತಿತ್ವವೂ, ಅವುಗಳ ಕಾಲ್ಪನಿಕವಾದ ಭಯಪ್ರದ ಸುದ್ದಿಗಳೂ ನಿಜವೆಂದು ಜನರಿಂದ ವಿಶೇಷವಾಗಿ ತಿಳಿಯಲ್ಪಡುತ್ತಿದ್ದವು. ಅವರಿಬ್ಬರು ಮಹಾರಾಷ್ಟ್ರ ವೀರರು ಅತ್ತಿತ್ತ ನೋಡುತ್ತ ಗುಡಿಯ ಆವರಾದಲ್ಲಿ ಸಾಗಿ ಹೋಗುತ್ತಿರಲು, ಒಂದು ಜಲಕುಂಡವು ಅವರ ಕಣ್ಣಿಗೆ ಬಿದ್ದಿತು. ಸಂತಾಜಿಯು ಗುಡಿಯ ಸಭಾಮಂಟಪದಲ್ಲಿ ಹೋಗಿ ನಾಲ್ಕೂ ಕಡೆಗೆ ತಿರುಗಾಡಿ ನೋಡಿದನು; ಆದರೆ ಎಲ್ಲಿಯೂ ಜನರ ಸುದ್ದಿ ಇದ್ದಿಲ್ಲ. ಅಷ್ಟರಲ್ಲಿ ಸಖ್ಯಾನು, ಒತ್ತಟ್ಟಿಗೆ ಅಡಿಗೆ ಮಾಡಿಕೊಂಡಿದ್ದ ಒಲೆಯನ್ನು ನೋಡಿ, ಅದನ್ನು ಸಂತಾಜಿಗೆ ತೋರಿಸಿದನು. ಅದನ್ನು ನೋಡಿ ಸಂತಾಜಿಯು ಇದೊಂದು ಮನುಷ್ಯ ವಸತಿಯ ಕುರುಹೆಂದು ಭಾವಿಸಿ, ಹಾಗೆಯೇ ಗುಡಿಯ ಹಿಂದುಗಡೆಗೆ ಹೋದನು. ಅಲ್ಲಿ ನಿರ್ಮಾಲ್ಯದ ಬಿಲ್ವದಳಗಳು ಬಿದ್ದಿದ್ದವು. ಅವನ್ನು ನೋಡಿ ಸಂತಾಜಿಯು– ಯಾರೋ ಶಿವಪೂಜೆಯನ್ನು ಮಾಡಿರುವದರಿಂದ, ಇದು ನಿರ್ಮಾನುಷ ಸ್ಥಳವಲ್ಲೆಂದು ನಿಶ್ಚಯಿಸಿದನು; ಆದರೆ ಪ್ರತ್ಯಕ್ಷ ಮನುಷ್ಯರು ಮಾತ್ರ ಅವರ ಕಣ್ಣಿಗೆ ಬೀಳಲಿಲ್ಲ; ಅಷ್ಟರಲ್ಲಿ ಆ ಧರ್ಮನಿಷ್ಠ ಭಾವಿಕ ಸಂತಾಜಿಯು ಶಂಭುವಿನ ದರ್ಶನ ಮಾಡಿಕೊಳ್ಳಬೇಕೆಂದು ಭಾವಿಸಿ, ಕುಂಡದಲ್ಲಿ ಸ್ನಾನಮಾಡಿ ಬರಬೇಕೆಂದು ಹೊರಟನು.

ಸಂತಾಜಿಯು ಕುಂಡದ ಕಡೆಗೆ ಬರುತ್ತಿರುವಾಗ ದೇವಾಲಯದ ಒತ್ತಟ್ಟಿಗಿನ ಕೋಣೆಯೊಳಗಿಂದ ಕೆಲವು ಪಕ್ಷಿಗಳು ಕಿಲಿಬಿಲಿ ಶಬ್ದ ಮಾಡುತ್ತ ಒಳಗಿನಿಂದ ಹೊರಗೆ, ಹೊರಗಿನಿಂದ ಒಳಗೆ ಎಡತಾಕುತ್ತಲಿದ್ದವು. ಅದನ್ನು ನೋಡಿ ಸಂತಾಜಿಯು ಕೋಣೆಯಕಡೆಗೆ ಸಾಗಿದನು. ಪಕ್ಷಿಗಳು ಇಷ್ಟು ನಿರ್ಭಯದಿಂದ ಸಂಚರಿಸುತ್ತಿರುವದರಿಂದ ಇಲ್ಲಿ ಪ್ರಾಣ ಭಯವಿಲ್ಲೆಂದು ತಿಳಿದು ಆತನು ನಿರ್ಭಯದಿಂದ ಕೋಣೆಯನ್ನು ಹೊಕ್ಕನು. ಕೋಣೆಯಲ್ಲಿ ಕತ್ತಲೆ ಮುಸುಕಿತ್ತೆಂದು ಹೇಳಬಹುದು. ಯಾಕಂದರೆ, ಪರಾವರ್ತನ ಪ್ರಕಾಶದ ಹೊರತು ಸೂರ್ಯಕಿರಣಗಳ ಪ್ರವೇಶಕ್ಕೆ ಅಲ್ಲಿ ಎಷ್ಟು ಮಾತ್ರವೂ ಅವಕಾಶವಿದ್ದಿಲ್ಲ. ಸಂತಾಜಿಯು ಮುಂದಮುಂದಕ್ಕೆ ಹೋದಂತೆ ಒಂದು ಮನುಷ್ಯಾಕೃತಿಯು ಅವನಿಗೆ ಕಾಣಿಸಹತ್ತಿತ್ತು. ಆತನು ತನ್ನ ಖಡ್ಗವನ್ನು ಸಾವರಿಸಿಕೊಂಡು ಮುಂದಕ್ಕೆ ಸಾಗಿಹೋದರು. ಆತನು ಕೆಲಹೊತ್ತು ಕತ್ತಲೆಯಲ್ಲಿ ವ್ಯವಹರಿಸಿದ್ದರಿಂದ, ಅಲ್ಲಿಯ ಪದಾರ್ಥಗಳು ಮೊದಲಿಗಿಂತ ಸ್ಪಷ್ಟವಾಗಿ ಕಾಣಿಸಹತ್ತಿದವು. ಒಂದು ಮೂಲೆಯಲ್ಲಿ ಒಬ್ಬ ಮನುಷ್ಯನು ಸಮಾಧಿಸ್ತನಾಗಿ ಕುಳಿತಿರುವನೆಂಬದು ಸಂತಾಜಿಗೆ ಸ್ಪಷ್ಟವಾಗಿ ಕಾಣಿಸಹತ್ತಿತ್ತು. ಆ ಮನುಷ್ಯನ ಮುಖ ಮುದ್ರೆಯು ಒಬ್ಬ ತಪಸ್ವಿಯ ಮುಖಮುದ್ರೆಯಂತೆ ಶಾಂತವಾಗಿತ್ತು, ಆತನ ಗಡ್ಡ–ಮೀಸೆಗಳು ಉದ್ದವಾಗಿದ್ದಿಲ್ಲ. ಆ

ತಪಸ್ವಿಯು ಎರಡು–ಮೂರು ತಿಂಗಳು ಕ್ಷೌರವನ್ನು ಬಿಟ್ಟಿರಬಹುದಾಗಿ ಸಂತಾಜಿಗೆ ತೋರಿತು. ಆ ಮನುಷ್ಯನ ಮೈಮೇಲೆ ಕೈಪದ ಹೊರತು ಬೇರೆ ಬಟ್ಟೆ ಇದ್ದಿಲ್ಲ. ಈ ಗೋಸಾವಿಯು ಯಾರಿರಬಹುದೆಂಬ ತರ್ಕವು ಸಂತಾಜಿಗೆ ಆಗಲೊಲ್ಲದು; ಆದರೆ ಏನೋ ಮಸಮಸಕಾದ ಗುರುತು ಹತ್ತಿದಂತೆ ಮಾತ್ರ ಆತನಿಗೆ ಭಾಸವಾಗುತ್ತಿತ್ತು. ಸಂತಾಜಿಯು ಹೀಗೆ ವಿಚಾರಮಗ್ನನಾಗಿ ನಿಂತಿರುವದನ್ನು ನೋಡಿ ಸಖ್ಯಾನು–ಸರಕಾರ, ಸ್ವಲ್ಪ ನೀರು ತರಲೇನು? ನೀರೆರಚಿದರೆ ಈ ಗೋಸಾವಿಗೆ ಎಚ್ಚರವಾಗಬಹುದು, ಎಂದು ಕೇಳಲು, ಸಂತಾಜಿಯು—ಛೀ, ಹುಚ್ಚಾ! ಪರೀಕ್ಷಿತನು ಒಬ್ಬ ಋಷಿಯ ಕೊರಳಿಗೆ ಸತ್ತ ಆಹವು ಸುತ್ತಿ ಸರ್ವಸ್ವದ ನಾಶಮಾಡಿ ಕೊಂಡಂತೆಯಾದೀತು? ನೀನು ಇಲ್ಲಿಯೇ ಅಡಗಿಕೊಂಡು ನೋಡುತ್ತ ಕುಳಿತಿರು; ನಾನು ಈಗ ಕುಂಡಕ್ಕೆ ಹೋಗಿ ಸ್ನಾನ ಮಾಡಿ ಶಂಬುವಿನ ದರ್ಶನ ಮಾಡಿಕೊಂಡು ಬರುವೆನು. ಎಂದು ಹೇಳಿ ಜಲಕುಂಡಕ್ಕೆ ಹೋದನು.

ಆ ನಿರ್ಮಲ ಜಲಪೂರ್ಣ ಕುಂಡವನ್ನು ನೋಡಿ ಸಂತಾಜಿಗೆ ಮನದಣಿಯ ಈಸಾಡುವ ಮನಸ್ಸಾಯಿತು. ಆತನು ಅರಿವೆಗಳನ್ನು ಕಳೆದಿಟ್ಟು ಕುಂಡದಲ್ಲಿ ಧುಮುಕಿದನು. ಸ್ವಾಮಿ ಕಾರ್ಯಕ್ಕಾಗಿ ಬ್ರಹ್ಮಚರ್ಯ ವ್ರತವನ್ನು ಪಾಲಿಸುತ್ತಿರುವ ಆ ಬಲಶಾಲಿಯಾದ ತರುಣ ತೇಜಃಪುಂಜ ಸಂತಾಜಿಯ ಸ್ವಚ್ಛಂದದ ಜಲಕ್ರೀಡೆಯು ಪ್ರೇಕ್ಷಣೀಯವಾಗಿತ್ತು. ಆತನು ಸೀತಜಲದ ಸ್ನಾನದಿಂದ ಸಂತುಷ್ಟಚಿತ್ತನಾಗಿ ದಂಡೆಗೆ ಬಂದು ಭಕ್ತಿಯಿಂದ ಅರ್ಘ್ಯ ವನ್ನು ಕೊಡಲುದ್ಯುಕ್ತನಾದನು. ಅಷ್ಟರಲ್ಲಿ ಸಮಾಧಿಸ್ತ ಮನುಷ್ಯನು ಎಚ್ಚತ್ತು ಸುತ್ತು ಮುತ್ತು ನೋಡಿ ಗರ್ಭಗುಡಿಯನ್ನು ಹೊಕ್ಕನು. ಆತನು ಬೆನ್ನ ಹತ್ತಿ ಹಕ್ಕಿಗಳು ಕಿಲಿಬಿಲಿ ಶಬ್ದ ಮಾಡುತ್ತ ಗುಡಿಯನ್ನು ಹೊಕ್ಕವು. ಆ ಮುನಿಯು ಮಹಾದೇವನ ದರ್ಶನ ಮಾಡಿಕೊಂಡು ಪಕ್ಷಿಗಳನ್ನು ನೋಡಿ—''ಎಲ ಎಲ, ಈ ದಿನ ಬಹಳ ತಡವಾದಂತೆ ತೋರುತ್ತದೆ. ಪಾಪ! ಇಷ್ಟು ಹೊತ್ತಾದರೂ ಇವಕ್ಕೆ ಕಾಳು ಹಾಕಲಿಲ್ಲವೋ?'' ಎಂದು ನುಡಿಯುತ್ತ ಧಾನ್ಯದ ಕೋಣೆಯಲ್ಲಿ ಹೋಗಿ ಬೊಗಸೆಯಲ್ಲಿ ಕಾಳನ್ನು ತಕ್ಕೊಂಡು ಬಂದು ಗುಡಿಯ ಸಭಾಮಂಟಪದಲ್ಲಿ ನಿಂತು ಅವಕ್ಕೆ ಕಾಳು ತಿನಿಸಹತ್ತಿದನು. ಅಷ್ಟರಲ್ಲಿ ಸಂತಾಜಿಯು ಶಿವಛತ್ರಪತಿಯ ಹೆಸರಿನಿಂದ ಅರ್ಘ್ಯ ಬಿಟ್ಟಿದ್ದು ಆ ಮುನಿಯ ಕಿವಿಗೆ ಬಿದ್ದಿತು. ಆಗ ಮುನಿಯು ಚಕಿತನಾಗಿ ಕುಂಡದ ಕಡೆಗೆ ನೋಡಲು, ಜೀಜಾ ಬಾಯಿಯ ಹೆಸರಿನಿಂದ ಅರ್ಘ್ಯಬಿಡುವ ಸಂತಾಜಿಯು ಆತನ ಕಣ್ಣಿಗೆಬಿದ್ದನು. ಸಂತಾಜಿಯನ್ನು ನೋಡಿ ಮುನಿಗೆ ಪರಮಾಶ್ಚರ್ಯವಾಯಿತು. ಅರ್ಘ್ಯಪ್ರಧಾನ ಮಾಡುವ ಸಂತಾಜಿಯ ಮುಖದಲ್ಲಿ ವಿಲಕ್ಷಣ ವಾದ ತೇಜಸ್ಸು ಒಪ್ಪುತ್ತಿತ್ತು. ಆತನು ಶಹಾಜಿಯ ಹೆಸರಿನಿಂದ ಅರ್ಘ್ಯವನ್ನು ಕೊಟ್ಟು, ಕಟ್ಟ ಕಡೆಯಲ್ಲಿ ಶ್ರೀ ಸಮರ್ಥ ಸಾಮದಾಸ ಸ್ವಾಮಿಗಳ ಹೆಸರಿನಿಂದ ಅರ್ಘ್ಯವನ್ನು ಕೊಟ್ಟನು. ಬಳಿಕ ಭಕ್ತಿಪರವಶನಾದ ಆ ಶೂರ ಮರಾಟನು ಶಂಭುನನ ದರ್ಶನಕ್ಕಾಗಿ ನೆಟ್ಟಗೆ ಗರ್ಭ ಗುಡಿಯನ್ನು ಹೊಕ್ಕನು. ಈ ಸ್ಥಿತಿಯಲ್ಲಿ ಮುನಿಯು ಆತನನ್ನು ಮಾತಾಡಿಸಲಿಲ್ಲ. ಸಂತಾಜಿಯು ಶಂಭುವಿಗೆ ಸಾಷ್ಟಾಂಗವಾಗಿ ವಂದಿಸಿ, ಕೈಜೋಡಿಸಿ ನಿಂತುಕೊಂಡು– ಭವಾನೀಪತೇ, ದಯಾಸಾಗರಾ, ಈ ದೀನ ಮರಾಟನನ್ನು ಮರೆಯಬೇಡ. ಶಿವಪ್ರಭುವಿನ ಪೂಜ್ಯ

ಸಿಂಹಾಸನದ ಎದುರಿನಲ್ಲಿ ಶೂರರ ಮಧ್ಯಬಾಗದಲ್ಲಿ ನಾನು ಮಾಡಿದ ಪ್ರತಿಜ್ಞೆಯನ್ನು ಪೂರ್ಣಮಾಡು. ಎಂದು ಪ್ರಾರ್ಥಿಸಿ ಮತ್ತೊಮ್ಮೆ ಸಾಷ್ಟಾಂಗವಾಗಿ ವಂದಿಸಿ ಶಂಬೋ, ಹರ ಹರ ಮಹಾದೇವ!'' ಎಂದು ಗರ್ಜಿಸಿ ಹೊರಗೆ ಬಂದನು. ಹಕ್ಕಿಗಳಿಗೆ ಕಾಳು ಹಾಕುತ್ತ ನಿಂತಿರುವ ಮುನಿಯ ತೇಜೋಮೂರ್ತಿಯು ಕಣ್ಣಿಗೆ ಬೀಳಲು, ಆ ಭಾವಿಕ ಸಂತಾಜಿಯು ಭಕ್ತಿಯಿಂದ ನಮಸ್ಕರಿಸಿ ಚಕಿತನಾಗಿ ನೋಡುತ್ತಿರಲು, ಆ ಮುನಿಯು ಮುಗುಳುನಗೆ ನಗುತ್ತ ಸಂತಾಜಿಯನ್ನು ಕುರಿತು—''ನಿಮಗೆ ನನ್ನ ಗುರುತು ಹತ್ತಿತೋ,'' ಎಂದು ಪ್ರಶ್ನೆ ಮಾಡಿದನು. ಅದಕ್ಕೆ ಸಂತಾಜಿಯು ತಲೆ ಯಲ್ಲಾಡಿಸುತ್ತ ಕೈಜೋಡಿಸಿ ನಿಂತು ಕೊಂಡು–ಮಹಾರಾಜ, ನನಗೆ ನೆಟ್ಟಗೇ ಗುರುತು ಹತ್ತಲೊಲ್ಲದು. ಈ ಗುಡಿಯಲ್ಲಿ ಯಾರೋ ಪ್ರತಿಬಂಧಿಸಲ್ಪಟ್ಟಿರುವರೆಂಬದನ್ನು ಒಂದು ತರಗೆಲೆಯ ಸಹಾಯದಿಂದ ತಿಳಿದು ನಾನು ಇಲ್ಲಿಗೆ ಬಂದಿದ್ದೇನೆ. ಆ ಸೆರೆಯಾಳಿನ ಗೊತ್ತು ಇದ್ದರೆ ದಯಮಾಡಿ ಹೇಳುವ ಕೃಪೆ ಮಾಡಬೇಕು. ಬೆನ್ನು ಬಿದ್ದವರನ್ನು ಕಾಯುವದು ಮರಾಟರ ಶೀಲವಾಗಿರುವದು.

ಸಂತಾಜಿಯ ಈ ಮಾತುಗಳನ್ನು ಕೇಳಿ ಮುನಿಯು ಗಾಂಭೀರ್ಯದಿಂದ—''ಸಂತಾಜಿ ರಾವ, ನೀವು ನನ್ನ ಗುರುತು ಹಿಡಿಯದಿದ್ದರೂ ನಾನು ನಿಮ್ಮ ಗುರುತು ಹಿಡಿದಿದ್ದೇನೆ. ನೀವು ಕೇಳುವ ಸೆರೆಯಾಳು ನಾನೇ! ಈಗ ಎರಡು ತಿಂಗಳು ಸೆರೆಯಲ್ಲಿ ಕೊಳೆತಿರುವ ಈ ಖಂಡೋಬಾ ಚೀಟನೀಸನ ಗುರುತು ನಿಮಗೆ ಹತ್ತುವ ಸಂಭವವಿಲ್ಲ, ಯಾಕಂದರೆ, ಬ್ರಾಹ್ಮಣ ನಾದ ನಾನು ಸ್ವಾಮಿಕಾರ್ಯಕ್ಕಾಗಿ ಕ್ಷಾತ್ರಧರ್ಮವನ್ನವಲಂಬಿಸಿ ನಿಮ್ಮೊಡನೆ ವ್ಯವಹರಿಸು ತ್ತಲಿದ್ದೆನು; ಆದರೆ ಕಾರಾಗೃಹದಲ್ಲಿ ಸ್ವಾಮಿಸೇವೆಗೆ ಆಸ್ಪದವು ದೊರೆಯದಾಗಿ, ಅನಾಯಾಸ ಶಿವಸಾನ್ನಿಧ್ಯವು ಒದಗಲು, ನಾನು ತಪಸ್ವಿಯಾದೆನು. ಈ ಸ್ಥಿತಿಯಲ್ಲಿ ನನ್ನ ರೂಪದಲ್ಲಿ ಅಂತರ ವಾಗಿರಬಹುದು. ಮೇಲಾಗಿ, ಎರಡು ತಿಂಗಳು ಕ್ಷೌರವಿಲ್ಲದ್ದರಿಂದ ನನ್ನ ಗಡ್ಡ ಮೀಸೆಗಳು ಬೆಳೆದಿರುತ್ತವೆ. ಅಂದಬಳಿಕ ಗುರುತು ಹತ್ತದಿರುವದೇನಾಶ್ಚರ್ಯವು? ಅದಿರಲಿ. ಈಗ ಎರಡು ತಿಂಗಳಿಂದ ಯಾವ ಸುದ್ದಿಯೂ ನನಗೆ ಇರುವದಿಲ್ಲ, ಸಂತಾಜಿರಾವ, ರಾಯಗಡದಲ್ಲಿ ಎಲ್ಲರಿಗೂ ಕ್ಷೇಮವಷ್ಟೇ? ಸಂಬಾಜಿ ಮಹಾರಾಜರ ಔರ್ಧ್ವದೇಹಿಕ ಕರ್ಮವನ್ನು ಮಾಡುವ ದಕ್ಕಾಗಿ ಎಲ್ಲರೊಡನೆ ಅರಣ್ಯ ಮಧ್ಯದ ತೀರ್ಥಕ್ಕೆ ಬಂದ ನಾನು, ಕೇವಲ ಉದಾಸೀನನಾಗಿ ಸುಮ್ಮನೆ ಮಾರ್ಗವನ್ನು ಕ್ರಮಿಸಿ ಹೋಗಿ ಈ ಗುಡಿಯನ್ನು ಸೇರಿ ಸೆರೆಯಾಳಾದೆನು; ಎಂದು ಹೇಳಿ, ತಾನು ಗಣೋಜಿಶಿರ್ಕೆಯ ಪ್ರತಿಬಂಧದಲ್ಲಿ ಸಿಕ್ಕ ಸುದ್ದಿಯನ್ನೆಲ್ಲ ಉಸುರಿದನು. ಅದನ್ನು ಕೇಳಿ ಸಂತಾಜಿಯು–ಚೀಟನೀಸ, ನಿಮ್ಮ ಧೈರ್ಯವೂ, ಸ್ವಾಮಿಕಾರ್ಯಾಸಕ್ತಿಯೂ ಹೆಚ್ಚು. ಅನ್ನಲು, ಖಂಡೋಬನು–ವೀರ ಶಿರೋಮಣಿಯಾದ ಸಂತಾಜಿರಾವ, ಈಗ ಎರಡು ತಿಂಗಳನ್ನು ಈ ಭಯಂಕರವಾದ ಏಕಾಂತದಲ್ಲಿ ಕಳೆದು, ನಾನು ಬ್ರಹ್ಮಕರ್ಮನಿರ ತನಾಗ ಬೇಕಾಯಿತು. ಗಣೋಜಿರಾವ ಶಿರ್ಕೆಯು ನನ್ನನ್ನು ಇಲ್ಲಿ ಪ್ರತಿಬಂಧಿಸಿ ಹೋದಬಳಿಕ, ಏಕಾಂತದಲ್ಲಿ ಕಾಲ ಕಳೆಯುವದು ನನಗೆ ಬಹಳ ದುಸ್ತರವಾಯಿತು. ಮಹಾದೇವನ ಪೂಜಾ

ಯೋಗವು ಅನಾಯಾಸವಾಗಿ ಒದಗಿದ್ದರಿಂದ, ನಿತ್ಯ ರುದ್ರಾಭಿಷೇಕ ಮಾಡಿ ಸ್ವಯಂಪಾಕ ದಿಂದ ಮಹಾದೇವನಿಗೆ ನೈವೇದ್ಯವನ್ನು ಸಮರ್ಪಿಸಿ, ಜಪಧ್ಯಾನಾದಿ ಸಾಧನಗಳಿಂದ ಕಾಲ ಹರಣಮಾಡುತ್ತಿದ್ದರೂ, ಸ್ವಾಮಿಸೇವೆಯು ಅಂತರಿಸಿದ್ದಕ್ಕಾಗಿ ನನಗೆ ಬಹಳ ವಿಷಾದ ವಾಗುತ್ತಿತ್ತು. ಸಂತಾಜಿರಾವ, ಈಗಿನ ಕಾಲದಲ್ಲಿ ಬ್ರಾಹ್ಮಣರಿಗೆ ಅನುಷ್ಠಾನಕ್ಕಿಂತ ಸ್ವದೇಶೋದ್ಧಾರದ ಕಾರ್ಯದಲ್ಲಿ ದೇಹವನ್ನು ಸವಿಸುವದು ಹೆಚ್ಚು ಪುಣ್ಯಕರ ವಾಗಿರುವದು; ಆದರೆ, ಗತಿ ಗಾಣದೆ ಪೂಜೆ–ಪುನಸ್ಕಾರಗಳಲ್ಲಿ ನಾನು ಕಾಲಹರಣ ಮಾಡುತ್ತಿದ್ದೆನು. ಇಲ್ಲಿಂದ ಪಾರಾಗುವ ಆಶೆಯು ನನಗೆ ಎಳ್ಳಷ್ಟು ತೋರಿದ್ದಿಲ್ಲ. ಇಲ್ಲಿ ನನ್ನ ಸಂಗಡಿಗ ರೆಂದರೆ, ಪಕ್ಷಿಗಳು. ಅವಕ್ಕೆ ನಾನು ಕಾಳನ್ನು ಹಾಕಿ ಅವುಗಳೊಡನೆ ಆಡುತ್ತ ಕಾಲ ಹರಣೆ ಮಾಡುತ್ತಿದ್ದೆನು. ಬರಬರುತ್ತ ಪಕ್ಷಿಗಳು ನನಗೆ ಈಲಾಗಿ ನನ್ನ ಹತ್ತರ ಬಂದು ಕಾಳು ತಿನ್ನಹತ್ತಿದವು. ಹೊತ್ತಿಗೆ ಸರಿಯಾಗಿ ಅವಕ್ಕೆ ಕಾಳು ಹಾಕಲಿಕ್ಕೆ ನಾನು ಎಂದೂ ತಪ್ಪುತ್ತಿದ್ದಿಲ್ಲ. ಹೀಗೆ ಕೆಲವು ದಿನಗಳು ಕಳೆಯಲು, ಪಕ್ಷಿಗಳು ತೀರ ಈಲಾಗಿ ನನ್ನ ಕೈಯೊಳಗಿನ ಕಾಳು ತಿನ್ನಹತ್ತಿದವು; ಬರಬರುತ್ತ ಅವು ನನ್ನ ಮೈಮೇಲೆ ಕೂಡ್ರಹತ್ತಿದವು. ನಾನು ಪಕ್ಷಿಗಳನ್ನು ಹಿಡಿದು ಬಿಡಹತ್ತಿದೆನು. ಹೀಗಾಗಿ ಯಾವ ಶಂಕೆಯೂ ಇಲ್ಲದೆ, ಪಕ್ಷಿಗಳು ನಂಬಿಗೆಯಿಂದ ನನ್ನೊಡನೆ ಬಳಿಕೆ ಮಾಡಹತ್ತಿದವು.

ಹೀಗೆಯೇ ಕೆಲವು ದಿನಗಳು ಕ್ರಮಿಸಿ ಹೋಗಲು, ಒಂದು ಕಲ್ಪನೆಯು ನನ್ನ ಮನಸ್ಸಿನಲ್ಲಿ ಹೊಳೆಯಿತು. ಪಕ್ಷಿಗಳ ಕೊರಳಲ್ಲಿ ಚೀಟಿಯನ್ನು ಕಟ್ಟಿ ಬಿಟ್ಟರೆ, ಅದು ನಮ್ಮ ಪಕ್ಷದವರ ಕೈಯಲ್ಲಿ ಸಿಕ್ಕು ನನ್ನ ಬಿಡುಗಡೆಯಾದರೂ ಆಗಬಹುದೆಂದು ನಾನು ಚಿಂತಿಸಿದೆನು. ಮುಣುಗುವವನು ಕರಿಕೆಯ ಬೇರಿನ ಆಸರವನ್ನು ಸಹ ನಂಬುವಂತೆ, ನನ್ನ ಗತಿಯಾಯಿತೆಂದು ಹೇಳಬಹುದು; ಆದರೆ ಅಲ್ಲಿ ಕಾಗದ ಮಸಿಗಳೆಲ್ಲಿ ದೊರೆಯಬೇಕು? ಆದರೆ ನಾನು ಭ್ರಾಂತನಂತೆ ಒಂದು ತರದ ಎಲೆಗಳನ್ನು ತಂದು ಹೇರಿ ಇಟ್ಟು, ಒಣಗಿಸಿ ಅವುಗಳ ಮೇಲೆ ಒಂದು ಬಗೆಯ ಎಲೆಯ ರಸದಿಂದ—''ನಾನು ರಾಯಗಡದ ಬಳಿಯ ಗುಡಿಯಲ್ಲಿ ಸೆರೆಯಾಳಾಗಿದ್ದೇನೆ, ಬಿಡಿಸಿಕೊಳ್ಳಿರಿ'' ಎಂದು ಬರೆದು ಕೆಲವು ಪಕ್ಷಿಗಳ ಕೊರಳಲ್ಲಿ ಕಟ್ಟಿ ಬಿಡಹತ್ತಿದೆನು. ಮರುದಿನ ಕೆಲವು ಪಕ್ಷಿಗಳು ಚೀಟಿಯನ್ನು ಕಟ್ಟಿಕೊಂಡೇ ನನ್ನ ಬಳಿಗೆ ಬರಹತ್ತಿದವು. ಕೆಲವುಗಳ ಕೊರಳೊಳಗಿನ ಚೀಟಿಗಳು ಇರುತ್ತಿದ್ದಿಲ್ಲ. ಕೆಲವು ಪಕ್ಷಿಗಳು ನನ್ನ ಬಳಿಗೆ ಬರುತ್ತಿದ್ದೇ ಇಲ್ಲ; ಆದರೆ ಸಂತಾಜಿರಾವ, ನಿಮ್ಮ ಕೈಯಲ್ಲಿ ನನ್ನ ಚೀಟಿಯು ಸಿಕ್ಕು, ನನ್ನ ಬಂಧವಿಮೋಚನವಾದೀತೆಂಬದರ ಕಲ್ಪನೆಯು ನನಗೆ ಎಷ್ಟು ಮಾತ್ರವೂ ಇದ್ದಿಲ್ಲ. ಇದು ವಿಚಿತ್ರ ಯೋಗಾಯೋಗವೇ ಸರಿ! ನಮ್ಮ ಸ್ವಾಮಿಯ ಕಾರ್ಯ ವನ್ನು ಸಾಧಿಸುವ ಪ್ರಸಂಗದಲ್ಲಿ ಇದೊಂದು ಶುಭ ಲಕ್ಷಣವೆಂದೇ ನಾನು ಭಾವಿಸುವೆನು. ಸಂತಾಜಿರಾವ, ನಿಮ್ಮನ್ನು ದೇವರೇ ಇಲ್ಲಿಗೆ ಬರಮಾಡಿದನೆಂದು ತಿಳಿಯುವೆನು. ಶ್ರೀ ಸದಾಶಿವನ ಪೂಜಾಫಲವು ವ್ಯರ್ಥವಾಗಲಿಲ್ಲ. ಸ್ವಾಮಿಕಾರ್ಯದಲ್ಲಿ ದೇಹ ಸವಿಸುವ ಸುಪ್ರಸಂಗವು ಒದಗಿದ್ದಕ್ಕಾಗಿ ನನಗೆ ಬಹಳ ಸಂತೋಷವಾಗುತ್ತದೆ. ನನ್ನ ಮೇಲಾದ ನಿಮ್ಮ

ಉಪಕಾರವು ಅನಂತವಾದದ್ದೇ ಸರಿ! ಎಂದು ನುಡಿಯಲು, ಸಂತಾಜಿಯು— ಖಂಡೋಜಿ ಚಿಟನೀಸ, ನಿಮ್ಮ ಸ್ವಾಮಿನಿಷ್ಠೆಯು ನಿಷ್ಕಲಂಕವಾದದ್ದರಿಂದ ಶಿವಪ್ರಭುವಿನ ಪುಣ್ಯವೇ ನನ್ನನ್ನು ನಿಮ್ಮ ಬಳಿಗೆ ಎಳತಂದಿತೆಂದು ತಿಳಿಯಿರಿ. ಈಗ ನಾನು ತಡಮಾಡುವ ಹಾಗಿಲ್ಲ, ತುಳಾಪುರದಲ್ಲಿರುವ ಔರಂಗಜೇಬನ ಠಾಣ್ಯವನ್ನು ಹೊಕ್ಕು ಮಾರಾಟರ ಕೈಯನ್ನು ಅವನಿಗೆ ತೋರಿಸಬೇಕಾಗಿದೆ. ಈ ಕಾರ್ಯದಲ್ಲಿ ನಿಮ್ಮಿಂದ ಒಳಿತಾಗಿ ಸಹಾಯವಾಗುವದೆಂದು ನಾನು ತಿಳಿದಿರುವೆನು. ದೇವ–ಬ್ರಾಹ್ಮಣರ ಆಶೀರ್ವಾದವೊಂದಿದ್ದರೆ, ಬೇಕಾದ ಕಾರ್ಯ ಗಳು ಸಾಧಿಸುವವು. ನಿಮ್ಮಂಥ ಸಚ್ಛೀಲ ಸ್ವಾಮಿನಿಷ್ಟ ಬ್ರಾಹ್ಮಣರು ನನ್ನ ಬೆನ್ನು ಕಾದರೆ ಯಾವ ಕಾರ್ಯವು ತಾನೇ ಅಸಾಧ್ಯವು? ಎಂದು ನುಡಿದನು.

ಸಂತಾಜಿಯ ಈ ಸೌಜನ್ಯವನ್ನು ನೋಡಿ ಖಂಡೋಜಿಯು—ಸಂತಾಜಿರಾವ, ನಿಮ್ಮ ಸರಳ ಹೃದಯವು ಶ್ರದ್ಧಾಪೂರ್ಣವಾದದ್ದೆಂಬದರಲ್ಲಿ ಸಂಶಯವಿಲ್ಲ, ಅಂತೇ ಮಹಾರಾಷ್ಟ್ರ ರಾಜ್ಯದ ಸ್ವಾತಂತ್ರ್ಯ ರಕ್ಷಣದ ಕಾರ್ಯದಲ್ಲಿ ನೀವು ಅಗ್ರೇಸರರಾಗಿ ಎಣಿಸಲ್ಪಡುತ್ತೀರಿ! ಏನೂ ಚಿಂತೆಯಿಲ್ಲ; ಶಿವಪ್ರಭುವಿನ ಪುಣ್ಯವು ನಮ್ಮೆಲ್ಲರನ್ನು ಅನು ಗ್ರಹಿಸುತ್ತಲಿರುವದು. ರಾಯಗಡ ರಕ್ಷಕನಾದ ಸೂರ್ಯಾಜಿ ಪಿಸಾಳನು ಮೊಗಲರಿಗೆ ಫಿತೂರಾಗಿರುವನು. ಅವನು ಮೊಗಲರೊಡನೆ ಮಾಡುತ್ತಿದ್ದ ನೀಚತನದ ಒಳಸಂಚನ್ನು ಕಣ್ಣುಮುಟ್ಟ ನೋಡಿದಾಗಿನಿಂದ ನನ್ನ ಸರ್ವಾಂಗವು ತಪ್ತವಾಗಿದೆ. ಆ ಸ್ವಾಮಿದ್ರೋಹಿಯ ಶಾಸನವನ್ನು ಯಾವಾಗಮಾಡೇನೆಂದು ನನ್ನ ಮನಸ್ಸು ಆತುರಪಡುತ್ತಿರುವದು. ಆ ದೇಶದ್ರೋಹಿಯ ಶಾಸನ ಮಾಡುವದರಲ್ಲಿ ವಿಲಂಬ ವಾದರೆ ಪರಿಣಾಮವಾಗದು. ಈಗಲೇ ನಾನು ರಾಯಗಡಕ್ಕೆ ಹೋಗಿ, ಮಹಾರಾಣಿ ಏಸೂ ಬಾಯಿಯವರಿಗೆ ಸೂರ್ಯಾಜಿಯ ನೀಚತನವನ್ನು ತಿಳಿಸಿ, ಎಚ್ಚರಗೊಳಿಸಿ ಆ ನೀಚನಿಗೆ ಯೋಗ್ಯ ಶಾಸನ ಮಾಡಿಸುವೆನು. ಸಂತಾಜಿರಾವ ನೀವು ತುಳಾಪುರಕ್ಕೆ ಹೋಗಿರಿ. ನಿಮ್ಮ ಸ್ವಾಮಿ ಕಾರ್ಯ ದಲ್ಲಿ ಈ ಖಂಡೋಜಿ ಚೀಟನೀಸನ ಸಹಾಯವು ತಪ್ಪದೆ ಒದಗುವದೆಂದು ತಿಳಿಯಿರಿ. ನಿಮ್ಮಂಥ ವೀರರು ಅನ್ಯರ ಸಹಾಯವನ್ನು ಯಾಚಿಸುವದೇ ದುರ್ಲಭವಿದ್ದು, ಈ ಪ್ರಸಂಗದಲ್ಲಿ ದೊಡ್ಡಸ್ತನಕ್ಕಾಗಿ ನನ್ನನ್ನು ನೀವು ಯಾಚಿಸುವದರಿಂದ, ನಿಮ್ಮ ದೊಡ್ಡಸ್ತನವೇ ನನ್ನನ್ನು ನಿಮ್ಮ ಬಳಿಗೆ ಎಳೆದು ತರುವದೆಂದು ತಿಳಿಯಿರಿ.'' ಎಂದು ಹೇಳಿ ಸೂರ್ಯಾಜಿಯು ಗಣೋಜಿ ಶಿರ್ಕೆ, ರಾಣೋಜಿ ಶಿರ್ಕೆ, ಬೋಲಾನಾಥ ಮೊದಲಾದ ಮೊಗಲ ಪಕ್ಷಪಾತಿ ಗಳೊಡನೆ ಆ ಗುಡಿಯ ಬುಡದೊಳಗಿನ ನೆಲಮನೆಯಲ್ಲಿ ಮಾಡಿದ ದುರಾಲೋಚನೆಯ ಸಂಗತಿಯನ್ನೆಲ್ಲ ತಿಳಿಸಿದನು.

ಸೂರ್ಯಾಜಿಯ ನೀಚತನವನ್ನು ಕೇಳಿ ಸಂತಾಜಿಯು ಸಂತಾಪಗೊಂಡನು. ಆ ದುಷ್ಟನ ಶಾಸನ ಮಾಡುವದಕ್ಕಾಗಿ ನಾನು ಬರುವೆನೆಂದು ಹೇಳಿದನು. ಆದರೆ, ಗದ್ದಲವಿಲ್ಲದೆ ಈ ಕಾರ್ಯವನ್ನು ಮಾಡಿ, ಸೂರ್ಯಜಿಯನ್ನು ಸೆರೆಹಿಡಿದು ಮಹಾರಾಣಿಯವರ ಬಳಿಗೆ ಒಯ್ದು ಅವನ ಯಾವತ್ತು ನೀಚತನವನ್ನು ಹೊರಗೆಡವಬೇಕಾಗಿರುವದರಿಂದ ನಿಮ್ಮ

ಕಾರ್ಯಕ್ಕೆ ನೀವು ಹೋಗಬೇಕೆಂದು ಖಂಡೋಬನು ಆಗ್ರಹದಿಂದ ಹೇಳಿದನು. ಆ ಮಾತು ಸಂತಾಜಿಗೆ ಸಮರ್ಪಕವಾಗಿ ತೋರಿತು. ಆತನು ಖಂಡೋಜಿಯೊಡನೆ ದೇವ ಸ್ಥಾನದಿಂದ ಹೊರಟು ರಾಯಗಡದ ಕಡೆಗೆ ನಡೆದನು. ಮುಸಲ್ಮಾನ ವೇಷದಿಂದಲ್ಲದೆ ಮೊಗಲರ ಮುತ್ತಿಗೆಯಿಂದ ಪಾರಾಗಿ ರಾಯಗಡವನ್ನು ಸೇರಲಿಕ್ಕೆ ಬರುವ ಹಾಗಿದ್ದಿಲ್ಲ. ಆದ್ದರಿಂದ ಖಂಡೋಬನು ಸಂತಾಜಿಯ ಸಂಗಡಿಗರ ಬಳಿಯಲ್ಲಿ ಮುಸಲ್ಮಾನರ ವೇಷದ ಸಾಧನಗಳನ್ನೆಲ್ಲ ಇಸಕೊಂಡು, ಸಂತಾಜಿಗೆ ಆತನ ಕಾರ್ಯಕ್ಕಾಗಿ ಕೃತಜ್ಞತೆಯಿಂದ ಅಪ್ಪಣೆಕೊಟ್ಟು, ತಾನು ರಾಯಗಡದ ಹಾದಿಯನ್ನು ಹಿಡಿದನು. ರಾಜಾರಾಮ ಮಹಾರಾಜರು ಪರಿವಾರದೊಡನೆ ಪ್ರಲ್ಹಾಳಗಡಕ್ಕೆ ಹೋದ ವರ್ತಮಾನವನ್ನೂ, ರಾಯಗಡದ ಮುತ್ತಿಗೆಯ ವರ್ತಮಾನವನ್ನೂ, ಬೇರೆ ಹಲವು ಸಂಗತಿಗಳನ್ನೂ ಖಂಡೋಜಿಯು ಸಂತಾಜಿಯ ಮುಖದಿಂದ ಕೇಳಿಕೊಂಡಿದ್ದನು. ಮುಸಲ್ಮಾನ ವೇಷದಿಂದ ದುರ್ಗವನ್ನು ಪ್ರವೇಶಿಸಲಿಕ್ಕೆ ಖಂಡೋಜಿಗೆ ತೊಂದರೆಯಾಗಲಿಲ್ಲ. ಆತನು ಮೊದಲು ಸೂರ್ಯಾಜಿಯ ಮನೆಗೆ ಹೋಗಿ ಅವನನ್ನು ಹಿಡಿಯಬೇಕಾಗಿತ್ತು, ಆದ್ದರಿಂದ ಅವನು ಅತ್ತಿತ್ತ ಹೋಗದೆ ನೆಟ್ಟಗೆ ಸೂರ್ಯಾಜಿಯ ಮನೆಗೆ ಹೋಗಬೇಕೆಂದು ಮಾಡಿದನು. ದುರ್ಗದಲ್ಲಿ ಹೋದಬಳಿಕ ಆತನು ಮುಸಲ್ಮಾನ ವೇಷವನ್ನು ಕಳಚಿ, ಸಾಧುವೇಷವನ್ನು ಧರಿಸಿದನು. ಆತನ ಭವ್ಯವಾದ ಮೂರ್ತಿಯನ್ನೂ, ಬಿಳಿಯ ಗಡ್ಡಗಳನ್ನೂ, ವೈಭವಯುಕ್ತ ಜಟಾಜೂಟವನ್ನೂ ನಿಸ್ಸಂದೇಹವಾದ ನಡತೆಯನ್ನೂ ನೋಡಿ ದುರ್ಗದಲ್ಲಿ ಯಾರೂ ಆತನನ್ನು ಪ್ರತಿಬಂಧಿಸಲಿಲ್ಲ. ಆತನು ಸೂರ್ಯಾಜಿಯ ಮನೆಗೆ ಹೋಗಿ ಉಚ್ಚ ಸ್ವರದಿಂದ—''ಜಯ ಜಯ ರಘುವೀರ ಸಮರ್ಥ'' ಎಂದು ನಾಮಘೋಷ ಮಾಡಿದನು. ಆಗ ಕಿಲ್ಲೇದಾರನ ಹೆಂಡತಿಯಾದ ಪುತಳೆಯು, ಅದೇ ತೂಗ ಮಂಚದ ಮೇಲೆ ಅಡ್ಡಾಗಿದ್ದಳು. ಆ ಭಾವಿಕಳು ರಾಮದಾಸ ಸಾಂಪ್ರದಾಯದ ಈ ಗಂಭೀರ ನಾಮಘೋಷವನ್ನು ಕೇಳಿ ಮೆಟ್ಟಿಬಿದ್ದು, ಲಗಬಗೆಯಿಂದ ಬಾಗಲು ತೆರೆದಳು. ಈ ಕಾಲದಲ್ಲಿ ರಾಮದಾಸರ ಪಂಥದಲ್ಲಿ ಜನರ ವಿಶ್ವಾಸವು ಬಹಳವಾಗಿ ಇತ್ತು. ಪುತಳಾಬಾಯಿಯು ಬಾಗಿಲು ತೆರೆದು ಸಾಧುವಿನ ಭವ್ಯ ಮೂರ್ತಿಯನ್ನು ನೋಡಿ ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರ ಮಾಡಿದಳು. ಸಾಧುವು ಆಕೆಯನ್ನು ಯೋಗ್ಯವಾಗಿ ಆಶೀರ್ವದಿಸಿದ ಬಳಿಕ ರಾಮನು ನಿನ್ನ ಗಂಡನಿಗೆ ಸದ್ಬುದ್ಧಿಯನ್ನು ಕೊಡಲಿ'' ಎಂದು ನುಡಿದನು. ತನ್ನ ಗಂಡನು ಅಂತರಂಗದಲ್ಲಿ ಮೊಗಲರಿಗೆ ಅನುಕೂಲನಾಗಿ ಸ್ವಾಮಿದ್ರೋಹದ ಮಹಾಪಾತಕಕ್ಕೆ ಗುರಿಯಾಗುತ್ತಿರುವುದನ್ನು ಪುತಳೆಯು ಅರಿತಿದ್ದಳು. ತನ್ನ ಗಂಡನು ಗಣೋಜಿರಾವ ಶಿರ್ಕೆ, ಭೋಲಾನಾಥ ಮೊದಲಾದ ಮೊಗಲ ಪಕ್ಷ ಪಾತಿಗಳೊಡನೆ ಮನೆಯಲ್ಲಿ ಗುಪ್ತವಾಗಿ ನಡೆಸುತ್ತಿದ್ದ ದುರಾಲೋಚನೆಗಳನ್ನು ಪುತಳೆಯು ನೋಡಿ ನೋಡಿ ಹೇಸಿಕೊಂಡಿದ್ದಳು. ಆಕೆಯು ಅತ್ಯಂತ ಪಾಪಭೀರುವೂ, ಸ್ವಾಮಿನಿಷ್ಠಳೂ ಆಗಿದ್ದಳು. ಆಕೆಗೆ ಗಂಡನ ನಡತೆಯು ಎಳ್ಳಷ್ಟು ಮನಸ್ಸಿಗೆ ಬರುತ್ತಿದ್ದಿಲ್ಲ.

ಹೀಗಿರುವಾಗ ಸಾಧುವು ತನ್ನ ಗಂಡನ ಕೆಟ್ಟ ಮನಸ್ಸನ್ನು ಒಡನುಡಿದದ್ದನ್ನು ಕೇಳಿ, ಸರಳ ಮನಸ್ಸಿನ ಪುತಳೆಯು ಭಕ್ತಿಯ ಹೆಚ್ಚಳದಿಂದ ಸಾಧುವನ್ನು ಕುರಿತು—ಸಮರ್ಥಾ, ನನ್ನ ಮನಸ್ಸಿನೊಳಗಿನ ಮಾತು ನಿನಗೆ ಅಂತರ್ದೃಷ್ಟಿಯಿಂದ ಗೊತ್ತಾಗಿದೆ ಹಾಗಾದರೆ! ನನ್ನ ಮನಸ್ಸಿನೊಳಗಿನ ಮಾತನ್ನೇ ನೀವು ಹ್ಯಾಗೆ ಹೇಳಿರಬಹುದು! ನಮ್ಮ ಮನೆಯವರಿಗೆ ದುಡ್ಡಿನ ಆಶೆ ಬಹಳ ಅದು ಕಡಿಮೆಯಾಗಬೇಕೆಂದು ನಾನು ಎಷ್ಟು ಯತ್ನಿಸಿದರೂ ವ್ಯರ್ಥವಾಯಿತು. ಅವರ ಮನಸ್ಸು ತಿರುಗಬೇಕೆಂದು ನಾನು ಅಶ್ವತ್ಥ ಸೇವೆಯನ್ನು ಮಾಡಿದೆನು. ಪೀರನಿಗೆ ಬೇಡಿಕೊಂಡೆನು, ಮಂತ್ರ ಮಾಟಗಳನ್ನು ಮಾಡಿಸಿದೆನು, ಆದರೆ ವ್ಯರ್ಥವು, ಸದ್ಗುರು ನಾಥನೇ, ನೀನು ನನ್ನ ಮನಸ್ಸಿನೊಳಗಿನ ಮಾತನ್ನು ಹ್ಯಾಗೆ ಹೇಳಿದೆ?

ಸಾಧು—ಅಮ್ಮಾ ಅದು ಹಾಗೇ ಇರಲಿ. ಈಗ ನಿನ್ನ ಗಂಡನು ಮನೆಯಲ್ಲಿರುವನೇ? ನಾನು ಆತನನ್ನು ಕಂಡು ಎರಡು ಬುದ್ಧಿಯ ಮಾತುಗಳನ್ನು ಹೇಳಿ ನೋಡುವೆನು! ಆತನಿಗೆ ಸದ್ಬುದ್ಧಿಯನ್ನು ಕೊಡಲು ಶ್ರೀ ರಾಮನೇ ಸಮರ್ಥನು. ಮನುಷ್ಯರ ಕೈಯೊಳಗೇನಿದೆ?

ಪುತಳೆ—ಭಗವಂತಾ, ಹೀಗೆ ನಿಂತುಕೊಳ್ಳುವದೇಕೆ? ಪಾದಧೂಳಿಯು ನಮ್ಮ ಮನೆಯಲ್ಲಿಷ್ಟು ಬೀಳಲಿ. ಯಜಮಾನರು ಊರಿಗೆ ಯಾಕೆ ಹೋದರೋ ಏನೋ! ಸಾಧು–ಸತ್ಪುರುಷರ ಸೇವೆಯನ್ನು ಘಟಿಸಲಿಕ್ಕೂ ಪುಣ್ಯವು ಬೇಕಾಗುತ್ತದೆ.

ಸಾಧು—ಯಜಮಾನರು ಯಾವ ಊರಿಗೆ ಹೋಗಿರುವರು? ಪುತಳೆ—ಪಲ್ಹಾಳಗಡಕ್ಕೆ ರಾಜಾರಾಮ ಮಹಾರಾಜರ ಬಳಿಗೆ ಹೋಗಿ ಬರುವೆವೆಂದು ಹೇಳಿ ಹೋಗಿರುವರು. ಮತ್ತೆ ಎಲ್ಲಿಗೆ ಹೋಗಿರುವರೋ ಯಾರಿಗೆ ಗೊತ್ತು!

ಹಾಯ್ ಹಾಯ್! ಅಮ್ಮಾ ಅವರ ಸಂಗಡ ಮತ್ತೆ ಯಾರು ಹೋಗಿರುವರು? ಗುಪ್ತರೀತಿಯಿಂದ ನಿನ್ನ ಮನೆಗೆ ಈಗ ತಿಂಗಳೆರಡು ತಿಂಗಳಿಂದ ಯಾರು ಯಾರು ಬರುವರು?

ಪುತಳೆ—ದೇವಾ, ನಮ್ಮ ಕರ್ಮವನ್ನು ಏನು ಹೇಳಲಿ? ಶಿರ್ಕೆ, ಜಗದಳೆ, ಮಾನ ಖೋಪಟೆ ಮೊದಲಾದವರು ನಮ್ಮವರ ಬೆನ್ನು ಹತ್ತಿರುವರು. ಮೊಗಲರನ್ನು ಕೂಡುವದಕ್ಕಾಗಿ ಅವರು ನಮ್ಮವರಿಗೆ ಆಶೆ ತೋರಿಸುವರು? ಏನು ಮಾಡಲಿ? ನಾವು ಯಾವ ನರಕಕ್ಕೆ ಹೋಗುವೆವೋ! ದೇವರೆ, ನನ್ನ ಕಣ್ಣು ಯಾಕೆ ಮುಚ್ಚಲೊಲ್ಲೆ?

ಸಾಧು—ಅಮ್ಮಾ ಸಮಾಧಾನ ತಾಳು. ಕಣ್ಣೀರು ಹಾಕಬೇಡ. ನಿನ್ನ ದುಃಖವನ್ನು ಶ್ರೀರಾಮನ ಮುಂದೆ ತೋಡಿಕೋ; ಪರಿಹರಿಸಲು ಆತನೇ ಸಮರ್ಥನು, ಸೂರ್ಯಾಜಿಯು ಪಲ್ಹಾಳಗಡಕ್ಕೆ ಹೋಗಿರುವನಷ್ಟೇ? ನಾನು ಈಗ ಅಲ್ಲಿಗೆ ಹೋಗಿ ಆತನನ್ನು ಕಂಡು ನಾಲ್ಕು ಹಿತದ ಮಾತುಗಳನ್ನು ಹೇಳುವೆನು. ಶ್ರೀರಾಮನ ಇಚ್ಛೆ ಇದ್ದಂತೆ ಆಗಲಿ! ನೀನು ಸರ್ವಥಾ ದುಃಖಪಡಬೇಡ.

ಈ ಮೇರೆಗೆ ನುಡಿದು ಖಂಡೋಬನು ಒಂದು ಕ್ಷಣವಾದರೂ ಅಲ್ಲಿ ನಿಲ್ಲದೆ ಪಲ್ಹಾಳಗಡದ ಕಡೆಗೆ ಸಾಗಿದನು.

# ಉತ್ಕಟ ಕಾರ್ಯಾಸಕ್ತಿ

ಪಲ್ಹಾಳಗಡದಲ್ಲಿ ರಾಜಪರಿವಾರಕ್ಕೆ ಬಾದಶಹನ ಭಯವು ಸಂಪೂರ್ಣವಾಗಿ ಇತ್ತು. ಪ್ರಸಂಗಕ್ಕೆ ತಕ್ಕ ಸಿದ್ಧತೆಯನ್ನು ಮಾಡುವದಕ್ಕಾಗಿ ಮುತ್ಸದ್ದಿಗಳೂ, ಸರದಾರರೂ ಮನಮುಟ್ಟಿ ಯತ್ನಿಸುತ್ತಲಿದ್ದರು. ಒಬ್ಬರಿಗಾದರೂ ಒಂದು ಕ್ಷಣಸಹ ವಿಶ್ರಾಂತಿಯಿದ್ದಿಲ್ಲ. ರಾಜಾರಾಮ ಮಹಾರಾಜರು ತಮ್ಮ ಸಂರಕ್ಷಣಕ್ಕಿಂತ ರಾಯಗಡದಲ್ಲಿದ್ದ ತಮ್ಮ ಅತ್ತಿಗೆಯವರಾದ ಏಸೂ ಬಾಯಿಯವರ, ಹಾಗೂ ಮಹಾರಾಷ್ಟ್ರ ಪ್ರಭುವಾದ ಬಾಲಶಿವರಾಯನ ಸಂರಕ್ಷಣದ ಚಿಂತೆ ಯನ್ನು ವಿಶೇಷವಾಗಿ ವಹಿಸಿದ್ದರು; ಆದರೆ ಅವರ ಹಿರಿಯ ಹೆಂಡತಿ ಯಾದ ತಾರಾ ಬಾಯಿಗೆ, ತನ್ನ ಗಂಡನ ಈ ರೀತಿಯು ಸೇರುತ್ತಿದ್ದಿಲ್ಲ. ತನ್ನ ಗಂಡನು ಸಂಭಾಜಿಯ ಮಗನಾದ ಬಾಲಶಿವಾಜಿಯನ್ನು ದೂಡಿ ತಾನೇ ಸಿಂಹಾಸನವೇರಬೇಕೆಂತಲೂ, ತಾನು ತನ್ನ ಪತಿಯ ಬದಿಯಲ್ಲಿ ಕುಳಿತು ರಾಜ ವೈಭವವನ್ನು ಅನುಭೋಗಿಸಬೇಕೆಂತಲೂ ಆ ಮಹತ್ವಾ ಕಾಂಕ್ಷಿ ಯಾದ ಸ್ತ್ರೀಯು ಆಶೆಪಡುತ್ತಿದ್ದಳು; ಆದರೆ ಸದ್ಗುಣ ಸಂಪನ್ನರಾದ ರಾಜಾರಾಮ ಮಹಾರಾಜರಿಂದ ಈ ಭ್ರಾತೃದ್ರೋಹ ಕಾರ್ಯವು ಆಗುವಹಾಗಿದ್ದಿಲ್ಲ. ಪತಿಯಿಂದ ಈ ಕಾರ್ಯವಾಗದ ಪಕ್ಷದಲ್ಲಿ ತಾನು ಪ್ರಯತ್ನಪಟ್ಟು ಏಸೂಬಾಯಿಯನ್ನೂ, ಬಾಲ ಶಿವಾಜಿ ಯನ್ನೂ ಗೊತ್ತಿಗೆ ಹಚ್ಚಿ, ಪತಿಗೆ ಸಿಂಹಾಸವನ್ನು ಪ್ರಾಪ್ತವಾಗುವಂತೆ ಮಾಡಬೇಕೆಂದು ಆ ಸಾಹಸಿಯಾದ ತಾರಾಬಾಯಿಯು ಆತುರಪಡುತ್ತಿದ್ದಳು. ಆಕೆಯ ಈ ದುಷ್ಟ ಪ್ರಯತ್ನಕ್ಕೆ ದೇಶದ್ರೋಹಿಗಳಾದ ಸೂರ್ಯಾಜಿಯೇ ಮೊದಲಾದವರು ಅಂತರಂಗದಿಂದ ಸಹಾಯಕ ರಾಗಿದ್ದರು. ಮರಾಟರ ಈ ಗೃಹಕಲಹದ ಕಿಚ್ಚು, ನಿಜವಾದ ಸ್ವಾಮಿಭಕ್ತರ ದೇಶಕಾರ್ಯ ಸಾಧನದಲ್ಲಿ ಬಹಳ ತಾಪವನ್ನುಂಟು ಮಾಡುತ್ತಿತ್ತು. ಈಗಿನ ಕಠಿಣಕಾಲದಲ್ಲಿ ಕೂಡ ಮರಾಟರಲ್ಲಿ ತಾರಾಬಾಯಿಯ ಪಕ್ಷವೆಂತಲೂ, ಏಸೂಬಾಯಿಯ ಪಕ್ಷವೆಂತಲೂ ಎರಡು ಪಕ್ಷಗಳಿದ್ದವು. ಏಸೂಬಾಯಿಯ ಘನವಾದ ಯೋಗ್ಯತೆಯನ್ನು ವಾಚಕರು ಬಲ್ಲರು. ಆಕೆಯು ಕೇವಲ ಮರಾಟರ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುವದೊಂದೇ ವ್ರತವನ್ನು ಕೈಕೊಂಡು, ಕೇವಲ ನಿಸ್ವಾರ್ಥ ಬುದ್ಧಿಯಿಂದ ಅದನ್ನು ಆಚರಿಸುತ್ತಿದ್ದಳು. ಹೀಗಿರುವಾಗ ಸೂರ್ಯಾಜಿ ಪಿಸಾಳನು ತಾರಾಬಾಯಿಯೊಡನೆ ಗುಪ್ತರೀತಿಯಿಂದ ಆಲೋಚಿಸುವದಕ್ಕಾಗಿ ಪಲ್ಹಾಳಗಡಕ್ಕೆ ಬಂದಿದ್ದನು. ತಾರಾಬಾಯಿಯ ಮನಸ್ಸನ್ನು ಕೆಡಿಸಿ ಏಸೂಬಾಯಿಯ ಮೇಲಿನ ಆಕೆಯ ದ್ವೇಷ ವನ್ನು ಹೆಚ್ಚಿಸುವದು ಸೂರ್ಯಾಜಿಯ ಮುಖ್ಯ ಕೆಲಸವಾಗಿತ್ತು. ಆತನು ತಾರಾಬಾಯಿಯನ್ನು ನಮಸ್ಕರಿಸಿ ಕುಳಿತುಕೊಳ್ಳಲು, ಆಕೆಯು ಸೂರ್ಯಾಜಿಯನ್ನು ಕುರಿತು—

ತಾರಾಬಾಯಿ—ಸೂರ್ಯಾಜೀ, ಬರ್‍ರಿ, ಕುಳಿತುಕೊಳ್ಳಿರಿ, ನಿಮ್ಮ ಹಾದಿಯನ್ನೇ ನೋಡುತ್ತಿದ್ದೆನು. ರಾಯಗಡದ ಕಡೆಯ ಸುದ್ದಿಯೇನು?

ಸೂರ್ಯಾಜಿ—ಬಾಯಿಸಾಹೇಬ, ಸುದ್ದಿಯೇನಿರಬೇಕು? ಹೇಳಿಕೇಳಿ ನಾವು ಭದ್ರವಾದ ದುರ್ಗವನ್ನು ಆಶ್ರಯಿಸಿರುತ್ತೇವೆ. ಮೊಗಲರ ಅಪ್ಪನ ಅಂಜಿಕೆಯು ನಮಗಿಲ್ಲ.

ನಿಮಗೆ ನಮ್ಮ ಸಂರಕ್ಷಣದ ಚಿಂತೆಯೇಕೆ? ನಿಮ್ಮದನ್ನು ನೀವು ನೋಡಿಕೊಳ್ಳಿರಿ, ಬಾಲಶಿವರಾಯನೊಡನೆ ಏಸೂ ಬಾಯಿಯವರು ಸುರಕ್ಷಿತವಾಗಿರುವರು.

ತಾರಾಬಾಯಿ—ಸೂರ್ಯಾಜಿ., ನೀನನ್ನುವದು ನಿಜವು. ಪಲ್ಹಾಳ ಗಡವು ಅಷ್ಟು ಭದ್ರವಾದದ್ದಲ್ಲ. ಶತ್ರುವು ನಮ್ಮ ಸೂತ್ತಲೂ ಕೈತೊಳಕೊಂಡು ಬೆನ್ನು ಹತ್ತಿರುವನು. ನನಗೆ ದಿನದಲ್ಲಿ ಬಿದ್ದಿರುವದರಿಂದ ನಮಗೆ ಸುಲಭವಾಗಿ ಓಡಿಹೋಗಲಿಕ್ಕೂ ಬರುವ ಹಾಗಿಲ್ಲ.

ಸೂರ್ಯಾಜಿ—ನಿಮಗೆ ಕೇಡು ತಟ್ಟಬೇಕೆಂತಲೇ ಏಸೂಬಾಯಿಯವರು ಹೀಗೆ ಮಾಡಿದ್ದಾರೆ. ರಾಯಗಡದಲ್ಲಿ ಬರಿಯ ಹೆಂಗಸರೂ, ಹುಡುಗರೂ ಇರುವರೆಂಬ ಸುದ್ದಿಯು ಔರಂಗಜೇಬನಿಗೆ ಹತ್ತಿದರೆ, ಆತನು ರಾಜ ಪುರುಷರ ವಸತಿಸ್ಥಾನವಾದ ಈ ಪಲ್ಹಾಳಗಡದ ಕಡೆಗೇ ತಿರುಗುವದು ನಿಶ್ಚಯವು! ನಮ್ಮ ಏಸೂಬಾಯಿಯವರು ಬಹು ಹಂಚಿಕೆಗಾರರು! ಹೆಣ್ಣುಮಗಳ ಬುದ್ಧಿಯು ಬಹು ತೀಕ್ಷ್ಣವಾದದ್ದು! ಅವಳ ಗತ್ತು ಸರಳ ಸ್ವಭಾವದ ರಾಜಾರಾಮ ಮಹಾರಾಜರಿಗೆ ಹ್ಯಾಗೆ ಗೊತ್ತಾಗಬೇಕು?

ತಾರಾಬಾಯಿ—ಸೂರ್ಯಾಜೀ, ಆ ಏಸಿಯ ಹೊಯ್ಮಾಲಿತನವನ್ನು ನಾನು ಎಷ್ಟೆಂದು ಹೇಳಲಿಲ್ಲ? ಇಷ್ಟು ಘಾತಕತನ ಮಾಡಿ ಮೇಲೆ ನಮ್ಮ ಮೇಲೆಯೇ ಉಪಕಾರವು! ನಮ್ಮೆಲ್ಲರ ಸುರಕ್ಷಿತತೆಯ ಸಲುವಾಗಿ ತನ್ನ ಮಗನೊಡನೆ ತಾನು ರಾಯಗಡದಲ್ಲಿದ್ದು, ನಮ್ಮನ್ನು ದೂರ ಇಲ್ಲಿಗೆ ಸುರಕ್ಷಿತ ಸ್ಥಳಕ್ಕೆ ಕಳಿಸಿರುತ್ತಾಳಂತೆ! ರಾಜಪುರುಷರನ್ನೆಲ್ಲ ನಮ್ಮ ಸಂಗಡ ಕಳಿಸಿ, ತಾನೊಬ್ಬಳೇ ಮಹಾಧೈರ್ಯದಿಂದ ರಾಯಗಡದಲ್ಲಿರುವಳಂತೆ! ಸೂರ್ಯಾಜೀ, ರಾಜ ಪುರುಷರು ನಮ್ಮ ಬಳಿಯಲ್ಲಿದ್ದರೂ ಅವರೆಲ್ಲರೂ ಏಸಿಯ ಹಿತವನ್ನೇ ಚಿಂತಿಸುತ್ತಾರಲ್ಲ! ಅವಳೇನು ಅಂಥ ಮೋಹಿನಿಯ ಮಂತ್ರವನ್ನು ಹಾಕಿರಬಹುದು!

ಸೂರ್ಯಾಜಿ—ಬಾಯೀಸಾಹೇಬ, ಇದರಲ್ಲಿ ಮೋಹಿನೀ ಮಂತ್ರವೇನು ಹಾಕಬೇಕು? ಏಸೂಬಾಯಿಯವರು ರಾಜ್ಯಾಧಿಕಾರಿಗಳಲ್ಲವೇ? ಅವರ ಮಗ ಬಾಲಶಿವ ರಾಯನೇ ಮರಾಟರ ಪ್ರಕೃತದ ಪ್ರಭುವಲ್ಲವೇ? ರಾಜಾರಾಮ ಮಹಾರಾಜರು ಬಾಲಶಿವ ರಾಯನ ಸೇವಕರು. ಈಗ ನಾನಿಲ್ಲವೇ? ನಾನು ಕಡಿಮೆ ಯೋಗ್ಯತೆಯ ಸೇವಕನು; ಮಹಾ ರಾಜರು ದೊಡ್ಡ ಯೋಗ್ಯತೆಯ ಸೇವಕರು. ಇಷ್ಟೇ ಹೆಚ್ಚು ಕಡಿಮೆ!

ತಾರಾಬಾಯಿ—ನಿಜವು; ಸೂರ್ಯಾಜೀ, ನೀವಾಡುವ ಮಾತು ನಿಜವು. ನಮ್ಮ ದೈವವೇ ಕೆಟ್ಟದು. ನಮ್ಮವರು ತುಕಾರಾಮನಂತೆ ಸಂಸಾರದ ಮೇಲೆ ತುಲಸೀಪತ್ರ ಇಟ್ಟ ಬಳಿಕ ನಮ್ಮ ಮಕ್ಕಳು ಮರಿಗಳು ಬಿಕ್ಕೆ ಬೇಡುವದೇ ಸರಿ. ದೇವರು ಈ ಗರ್ಭಭಾರದ ಆಯಾಸವನ್ನು ನನಗೆ ಯಾಕೆ ಉಂಟುಮಾಡಿದನೋ ತಿಳಿಯದು!

ಸೂರ್ಯಾಜಿ—ಸರಕಾರ, ಹೀಗೆ ಉದಾಸೀನರಾಗಬಾರದು. ಎಲ್ಲ ರಾಜಪುರುಷರ ಒಲವು ರಾಯಗಡದ ಕಡೆಗೆ ಇದ್ದರೂ, ಅದನ್ನು ಯುಕ್ತಿಪ್ರಯುಕ್ತಿಯಿಂದ ನಿಮ್ಮ ಕಡೆಗೆ ಮಾಡಿ

ಕೊಳ್ಳುವದು ನಿಮ್ಮ ಕೈಯೊಳಗಿರುತ್ತದೆ. ಅಬಾಸಾಹೇಬರಂತೂ ರಾಜಾರಾಮ ಮಹಾರಾಜರನ್ನೇ ರಾಜ್ಯವಾಳಲಿಕ್ಕೆ ತಕ್ಕವರೆಂದು ಮುಂದೆ ಮಾಡಿದರು. ಇದಲ್ಲದೆ, ಬಾಯೀಸಾಹೇಬರ ಹೊಟ್ಟೆಯಲ್ಲಿ ಸ್ವತಃ ಅಬಾಸಾಹೇಬರೇ ಹುಟ್ಟಿ ಬರತಕ್ಕವರಿದ್ದಾರೆ. ಇಂಥ ಭಾಗ್ಯ ಶಾಲಿಗಳು ನೀವಿರುತ್ತಿರಲು, ನಿಮ್ಮ ಮಕ್ಕಳು ಮರಿಗಳು ಬಿಕ್ಕೆ ಬೇಡುವರೇ? ಈ ದಾಸನು ಹೇಳುವ ಹಂಚಿಕೆಗೆ ಕಿವಿಗೊಡಬೇಕು. ಸದ್ಯಕ್ಕೆ ಮರಾಟರಲ್ಲಿ ಧನಾಜಿ ಜಾಧವ, ಸಂತಾಜಿ ಘೋರಪಡೆ ಇವರು ಮುಖ್ಯ ವೀರರಾಗಿರುವರು. ಅವರ ಅಂತರಂಗವು ಶುದ್ಧವಿಲ್ಲೆಂಬದು ಬಾಯೀಸಾಹೇಬರಿಗೆ ಗೊತ್ತಿದ್ದ ಮಾತಾಗಿರುವದು. ಅವರಿಬ್ಬರ ಒಲವೂ ಏಸೂಬಾಯಿಯವರ ಕಡೆಗೇ ಇರುತ್ತದೆ. ಆದರೆ ತಾವು ಯುಕ್ತಿಯಿಂದ ಒಬ್ಬರ ಮನಸ್ಸನ್ನು ತಮ್ಮ ಕಡೆಗೆ ಎಳಕೊಂಡು, ಏಸೂಬಾಯಿಯವರ ಪಕ್ಷದ ಕಸುವನ್ನು ಕಡಿಮೆ ಮಾಡಬೇಕು. ನನ್ನ ಈ ಮಾತಿನಲ್ಲಿ ಬಾಯೀಸಾಹೇಬರವರ ವಿಶ್ವಾಸವು ಕೂಡ್ರಬಹುದೇನು?

ತಾರಾಬಾಯಿ—ಸೂರ್ಯಾಜೀ, ನಿನಗೆ ಸಂಶಯವೇಕೆ? ನಮ್ಮ ಹಿತಕ್ಕಾಗಿ ದೇಹವನ್ನರ್ಪಿಸಲು ಸಿದ್ಧವಾಗಿರುವ ನಿಮ್ಮಂಥವರ ಮಾತನ್ನಲ್ಲದೆ ಇನ್ನು ಬೇರೆ ಯಾರ ಮಾತನ್ನು ನಾನು ಕೇಳಲಿ? ಹೇಳು, ನಾನು ಏನು ಮಾಡಲಿ ಬೇಗನೇ ಹೇಳು.

ಸೂರ್ಯಾಜಿ—ಬಾಯೀಸಾಹೇಬ, ಪರಾಕ್ರಮದಲ್ಲಿ ಸಂತಾಜಿಯು ಧನಾಜಿಗಿಂತ ಗುಂಜಿತೂಕ ಹೆಚ್ಚೆಂದು ಹೇಳಬಹುದು; ಇದಕ್ಕಾಗಿ ಧನಾಜಿಯು ಅಂತರಂಗದಲ್ಲಿ ಹೊಟ್ಟೆ ಕಿಚ್ಚು ಪಡುತ್ತಿರುವನು. ಜಗದಳೇ ಮನೆತನದ ವತನವು ಮೂಲತಃ ನಮ್ಮ ಮನೆತನದ, ಅಂದರೆ ಯಾದವ ಮನೆತನದ ವತನವಾದ್ದರಿಂದ, ಅದು ತಮ್ಮ ಕಡೆಗೆ ಬರಬೇಕೆಂದು ಧನಾಜಿಯು ಯತ್ನಿಸುತ್ತಿರುವನು; ಆದರೆ ಆಬಾಸಾಹೇಬರ ಕಾಲದಿಂದ ವತನವು ಮಹತ್ವದ ರಾಜಕಾರಣದ ಸಲುವಾಗಿ ಸರಕಾರದ ಜಮೆಯಾಗಿರುವದು. ಇಂಥ ವತನವನ್ನು ಧನಾಜಿಯು ಇಚ್ಛಿಸುವದು ರಾಜದ್ರೋಹವೆಂದು ಸಂತಾಜಿಯು ತಿಳಿಯುವನು. ಈ ಪ್ರಸಂಗದಲ್ಲಿ ನೀವು ಆ ವತನವನ್ನು ಧನಾಜಿಯ ಕಡೆಗೆ ಕೊಟ್ಟರೆ, ಸಂತಾಜಿ ಧನಾಜಿಯರಲ್ಲಿ ಕಲಹವು ಉತ್ಪನ್ನವಾಗಿ ಬಲಿಷ್ಠವಾದ ಪಕ್ಷವನ್ನು ವಹಿಸಲಿಕ್ಕೆ ನಮಗೆ ಅನುಕೂಲವಾಗುವದು.

ತಾರಾಬಾಯಿ—ಸೂರ್ಯಾಜೀ, ನಿನ್ನ ಹಂಚಿಕೆಯು ಬಹು ಯೋಗ್ಯವಾದದ್ದು. ಇಗೋ, ಹಿಡಿ ಈ ತನ್ಮಣಿಯನ್ನು (ಅಲಂಕಾರ ವಿಶೇಷ) ಸದ್ಯಕ್ಕೆ ಇಷ್ಟು ತೆಗೆದುಕೋ, ಹೆಚ್ಚಿನದನ್ನು ಮುಂದೆ ನೋಡಿಕೊಳ್ಳೋಣ.

ಸೂರ್ಯಾಜಿ—ಬಾಯೀಸಾಹೇಬ, ಇದೇಕೆ? ನನಗೆ ಈ ಪಾರಿತೋಷಕವೇಕೆ? ನೀವು ನನಗೆ ಹಡೆದ ತಾಯಿಗಿಂತ ಹೆಚ್ಚಿನವರು. ನಿಮ್ಮ ಕೊರಳೊಳಗಿನದನ್ನು ನಾನು ಹ್ಯಾಗೆ ತಕ್ಕೊಂಡೇನು! ನನ್ನ ಸ್ವಾಮಿ ಭಕ್ತಿಯ ಬೆಲೆಯನ್ನು ಹೀಗೆ ಕಟ್ಟಬಾರದು

ತಾರಾಬಾಯಿ—ಇರಲಿ ಬಿಡೋ ಸೂರ್ಯಾಜಿ! ನಿನ್ನ ಹೆಂಡತಿಯಾದ ಪುತಳೆಯು ಹಾಕಿಕೊಳ್ಳಲಿ!

ಈ ಮೇರೆಗೆ ನುಡಿಯುತ್ತ ತಾರಾಬಾಯಿಯು ತನ್ಮಣಿಯನ್ನು ಸೂರ್ಯಾಜಿಗೆ ಕೊಡುತ್ತಿರಲು, ಸಂತಾಜಿಯ ಹೆಂಡತಿಯಾದ ಕಮಲೆ ಎಂಬ ತರುಣಿಯು ಬಂದು, ತಾರಾಬಾಯಿಯನ್ನು ಕುರಿತು—ಬಾಯೀಸಾಹೇಬ, ಬಾಯೀಸಾಹೇಬ, ಹೊರಗೆ ಉದ್ಭವ ಸ್ವಾಮಿಗಳ ಕಡೆಯಿಂದ ಯಾರೋ ಸಮರ್ಥ ಶಿಷ್ಯರು ಬಂದಿರುತ್ತಾರೆ. ಅವರು ಹೋಗುತ್ತಿರುವರು. ಆಯೀ ಸಾಹೇಬರವರು ಅವರ ದರ್ಶನ ಮಾಡಿಕೊಳ್ಳಬಹುದೆಂದು ವಿಜ್ಞಾಪಿಸಿದೆನು. ದೊಡ್ಡವರ ಆಶೀರ್ವಾದದಿಂದಲೇ ಜೀಜಾಬಾಯಿಯವರ ಹೊಟ್ಟೆಯಲ್ಲಿ ಅಬಾಸಾಹೇಬರು ಹುಟ್ಟಿ ಬಂದರು. ದೊಡ್ಡವರ ಅನುಗ್ರಹವನ್ನು ಸಂಪಾದಿಸುವದಕ್ಕೆ ಬಾಯಿ ಸಾಹೇಬರವರಿಗೆ ಇದು ತಕ್ಕ ಸುಮಯವಾಗಿ ತೋರುತ್ತದೆ, ಎಂದು ಹೇಳಿದಳು. ಅದನ್ನು ಕೇಳಿ ಸೂರ್ಯಾಜಿಯು ತಾರಾಬಾಯಿಗೆ— ಬಾಯಿಸಾಹೇಬ, ಹೋಗಿರಿ, ಹೋಗಿರಿ, ಅವಶ್ಯವಾಗಿ ಸಾಧುಗಳ ದರ್ಶನ ಮಾಡಿಕೊಂಡು ಬರಬೇಕು. ತಾವು ಬರುವವರೆಗೆ ನಾನು ಕಮಲಾಬಾಯಿ ಯವರ ಯೋಗಕ್ಷೇಮವನ್ನು ವಿಚಾರಿಸುವೆನು. ಸಂತಾಜಿಯವರು ತಮ್ಮ ಕುಟುಂಬವನ್ನು ಮಾತಾಡಿಸಿ ತಮ್ಮ ಕ್ಷೇಮವನ್ನು ತಿಳಿಸಿಬಾರೆಂದು ಹೇಳಿರುವರು, ಎಂದು ನುಡಿದನು. ತನ್ನ ಹೊಟ್ಟೆಯಲ್ಲಿ ಶಿವಪ್ರಭುವೇ ಬರಬೇಕೆಂದು ತಾರಾ ಬಾಯಿಯು ಆತುರಪಡುತ್ತಿದ್ದಳು. ಶಿವಪ್ರಭುವಿನ ಪೂಜ್ಯ ತಾಯಂದಿರಾದ ಜೀಜಾಬಾಯಿ ಯವರು ಸಜ್ಜನರ ಸೇವೆಯಿಂದ ಮಹಾಫಲವನ್ನು ಪಡೆದಂತೆ, ತಾವೂ ಪಡೆಯಬೇಕೆಂದು, ಅವರು ಜೀಜಾಬಾಯಿಯವರ ಅನುಕರಣವನ್ನು ಮಾಡತೊಡಗಿದ್ದರು. ಅವರು ವಿನಯ ದಿಂದ ಸಮರ್ಥ ಶಿಷ್ಯರಬಳಿಗೆ ಹೋಗಿ, ಅವರಿಗೆ ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರ ಮಾಡಿ ಅವರ ಆಶೀರ್ವಾದವನ್ನು ಪಡೆದರು.

ಈ ಮೇರೆಗೆ ತಾರಾಬಾಯಿಯವರು ಸತ್ಸಂಗದ ಆನಂದದಿಂದ ಸದ್ಬೋಧ ಶ್ರವಣ ಮಾಡುತ್ತಿರಲು, ಇತ್ತ ನೀಚನಾದ ಸೂರ್ಯಾಜಿಯು ಕಮಲಾ ಬಾಯಿಯ ಸೌಂದರ್ಯಕ್ಕೆ ಮೋಹಿತನಾಗಿ ಕೆಟ್ಟಮನಸ್ಸಿನಿಂದ ಆಕೆಯನ್ನು ಕುರಿತು—ಏಕೆ ಕಮಲಾಬಾಯಿಯವರೆ, ಬಹಳ ಸೊರಗಿರುತ್ತೀರಿ? ಬಹು ದಿನಗಳಿಂದ ಯಜಮಾನರ ಕಡೆಯ ವರ್ತಮಾನ ವಿಲ್ಲದ್ದರಿಂದ ಮನಸ್ಸಿಗೆ ಸಮಾಧಾನವಿರಲಿಕ್ಕಿಲ್ಲ! ಪಾಪ! ಚಿಕ್ಕಪುಟ್ಟ ಹೆಂಡಿರನ್ನು ಬಿಟ್ಟು ಹೋಗಿ ಈಗಿನ ಕೆಲವು, ಮೂರ್ಖತರುಣರು ಸ್ವದೇಶೋದ್ಧಾರಕ್ಕಾಗಿ ಹೆಣಗುತ್ತಿರುವರು! ಅದರಲ್ಲಿ ಸಂತಾಜಿಯಂತು ಸ್ವಾಮಿಕಾರ್ಯವು ಸಾಧಿಸುವವರೆಗೆ ಮನೆಯ ಕಡೆಗೆ ಹಣಿಕಿ ನೋಡಲಿಕ್ಕಿಲ್ಲೆಂದು ಪ್ರತಿಜ್ಞೆಯನ್ನು ಮಾಡಿರುವನು. ನಿಮ್ಮಂಥ ತರುಣಿಯರ ಶಾಪಕ್ಕೆ ಗುರಿಯಾಗಿ ಆತನು ಯಾವ ದೇಶದ ಕಾರ್ಯವನ್ನು ಸಾಧಿಸುವನೋ ದೇವರಿಗೇ ಗೊತ್ತು, ಎಂದು ನುಡಿಯಲು, ಮುಗ್ಧಸ್ವಭಾವದ ಕಮಲೆಯ ಕಣ್ಣೊಳಗಿಂದ ನೀರುಗಳು ಬಂದವು. ಆಕೆಯು ಮಾತಾಡದೆ ಲಜ್ಜೆಯಿಂದ ತಲೆಬಾಗಿಸಿ ಸೀರೆಯ ಸೆರಗಿನ ಅಂಚನ್ನು ತೀಡುತ್ತ ನಿಂತಿರಲು, ಆಕೆಯ ಕೈಮೇಲೆ ಎರಡು ಕಣ್ಣೀರ ಹನಿಗಳು ಬಿದ್ದವು. ಅದನ್ನು ನೋಡಿ ಸೂರ್ಯಾಜಿಯು ದುರ್ಬುದ್ಧಿಯಿಂದ ಕಮಲೆಯನ್ನು ಕುರಿತು ಸುಳ್ಳು ಸುಳ್ಳೇ—''ಕಮಲಾ

ಬಾಯಿ, ಅಳಬೇಡವ್ಮಾ! ನಿನ್ನನ್ನು ನೋಡಿ ನನ್ನ ಮನಸ್ಸುಮರುಗುತ್ತದೆ. ರಾಯಗಡದ ಮುತ್ತಿಗೆಯನ್ನು ಎಬ್ಬಿಸುವವರೆಗೆ ಸಂತಾಜಿಯು ಅನಕಾ ನಾಲ್ಕರು ತಿಂಗಳು ರಾಯಗಡದ ಬುಡದ ಅರಣ್ಯದಲ್ಲಿ ಎಲ್ಲಿಯಾದರೂ ತನ್ನ ದಂಡಿನೊಡನೆ ವಾಸಮಾಡಿಕೊಂಡಿರ ಬೇಕಾಗುವದು; ಆದ್ದರಿಂದ ನಾನು ಆತನಿಗೆ ''ಛತ್ರಿನಿಜಾಮ ಪುರದಲ್ಲಿಯಾಗಲಿ, ಮಹಾಗಡದಲ್ಲಿಯಾಗಲಿ ಮನೆಮಾಡಿ ಕಮಲಾಬಾಯಿಯನ್ನು ಕರಿಸಿಕೊಳ್ಳೆಂ''ಂದು ಹೇಳಿರುವೆನು. ಆತನು ನನ್ನ ಆಗ್ರಹಕ್ಕೆ ಒಪಿಕೊಂಡು ನನಗೆ—''ಸೂರ್ಯಾಜಿ ನೀನು ನನಗೆ ಒಡಹುಟ್ಟಿದ ಅಣ್ಣನ ಹಾಗೆ ಇರುತ್ತಿ ನೀನು ಪಲ್ಹಾಳಗಡಕ್ಕೆ ಹೋಗಿ ಬಾಯಿ ಸಾಹೇಬರಿಗೆ ಹೇಳಿಕೊಂಡು ಆಕೆಯನ್ನು ಕರಕೊಂಡು ಬಾ, ಮಹಾಡದಲ್ಲಿ ನನ್ನ ಸಲುವಾಗಿ ಒಂದು ಮನೆಯನ್ನಾದರೂ ನೀನೇ ಮಾಡಿ ಕೊ ಡು'' ಎಂದು ಹೇಳಿರುವನು. ಇಷ್ಟೆಲ್ಲ ಪೇಚಾಡಲಿಕ್ಕೆ ನನಗೆ ಅವಕಾಶವಿಲ್ಲದಿದ್ದರೂ ನಿನ್ನ ಮೇಲೆ ನನ್ನ ಅಂತಃಕರುಣವು ವಿಶೇಷ ವಿದ್ದದ್ದರಿಂದ, ನಾನು ಅದಕ್ಕೆಲ್ಲ ಒಪ್ಪಿಕೊಂಡು ನಿನ್ನನ್ನು ಕರಕೊಂಡು ಹೊಗಲಿಕ್ಕೆ ಬಂದಿದ್ದೇನೆ. ಏಕೆ? ಕಮಲೇ, ನೀನು ನನ್ನ ಸಂಗಡ ಬರುವಿಯಷ್ಟೇ? ನಿನ್ನ ಮನಸ್ಸಿಗೆ ಸಮಾಧಾನವಾಯಿತೇ? ಕೇಳಲಾ ಬಾಯಿಸಾಹೇಬರನ್ನು,'' ಎಂದು ಆತುರದಿಂದ ಪ್ರಶ್ನೆ ಮಾಡಿದನು. ಅದಕ್ಕೆ ಸರಳ ಸ್ವಭಾವದ ಕಮಲೆಯು ಮುಗುಳುನಗೆಯಿಂದ ತನ್ನ ಸಮ್ಮತಿ ಯನ್ನು ಪ್ರಕಟಿಸಿದಳು. ಅದನ್ನು ನೋಡಿ ದುರುಳನಾದ ಸೂರ್ಯಾಜಿಯು ಆನಂದಸಾಗರದಲ್ಲಿ ತೇಲಾಡುತ್ತಿರಲು, ಹೊರಗೆ ತಾರಾಬಾಯಿಯವರು—''ಎಲಾ ದುಷ್ಟಾ ಖಂಡ್ಯಾ, ಸಾಧು ವೇಷದಿಂದ ನನ್ನನ್ನು ಮೋಸಗೊಳಿಸುವಿಯಾ?'' ಎಂದು ಗರ್ಜಿಸಿದರು! ತಾವು ದೇವಾಲಯ ದಲ್ಲಿ ಪ್ರತಿಬಂಧಿಸಿಟ್ಟಿದ್ದ ಖಂಡೋಬಾ ಚೀಟನೀಸನು ಇಲ್ಲಿಗೆ ಬಂದನೆಂದು ತಿಳಿದು, ಸೂರ್ಯಾಜಿಯ ಮುಖಕ್ಕೆ ಪ್ರೇತಕಳೆಯೇರಿತು. ಪ್ರತ್ಯಕ್ಷ ಖಂಡೋಬನ ದನಿಯು ಕೇಳು ವದನ್ನು ನೋಡಿ ಅವನ ಮೈಯಲ್ಲಿನಡುಗು ಹುಟ್ಟಿತು!

ಹಿಂದಕ್ಕೆ ಖಂಡೋಬಾ ಚೀಟನೀಸನು ರಾಯಗಡದಲ್ಲಿ ಸೂರ್ಯಾಜಿಯನ್ನು ಹುಡುಕಿ, ಅಲ್ಲಿ ಆತನನ್ನು ಕಾಣದೆ, ಆತನ ಹೆಂಡತಿಯಾದ ಪುತಳಾ ಬಾಯಿಯ ಮುಖದಿಂದ ಸುದ್ದಿಯನ್ನು ಕೇಳಿ ಸೂರ್ಯಾಜಿಯನ್ನು ಹುಡುಕುತ್ತ ಆತನು ಪಲ್ಹಾಳಗಡಕ್ಕೆ ಬಂದದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ಸೂರ್ಯಾಜಿಯು ತಾರಾಬಾಯಿಯವರ ಮಹಾಲಿನಲ್ಲಿರುವ ನೆಂಬ ಸುದ್ದಿಯು ಖಂಡೋಬನಿಗೆ ಹತ್ತಲು, ಸಾಧುವೇಷದಿಂದಲೇ ಆತನು ಅಲ್ಲಿಗೆ ಬಂದಿದ್ದನು. ಆತನು ತಾರಾಬಾಯಿಯವರಿಗೆ ಕೆಲವು ಸದ್ಬೋಧಗಳನ್ನು ಮಾಡಲು, ಅವರು ಸಂತುಷ್ಟರಾಗಿ ಖಂಡೋಬನ ಚರಣಕ್ಕೆರಗಿ—ಸಮರ್ಥಾ, ನಾನು ಬರಿಯ ಬೋಧದಿಂದ ಸಂತುಷ್ಟ ಳಾಗಲಾರೆನು. ನಮ್ಮ ರಾಜ್ಯವು ನಾಶವಾಗಿರುವದು. ಅದು ನಮ್ಮ ವಂಶದಲ್ಲಿ ಸ್ಥಿರವಾಗುವಂತೆ ನನ್ನನ್ನು ಆಶೀರ್ವದಿಸಬೇಕು. ಅಲ್ಲಿಯವರೆಗೆ ಚರಣವನ್ನು ಬಿಡುವದಿಲ್ಲ ಎಂದು ನುಡಿಯಲು, ಸಾಧುವೇಷದ ಖಂಡೋಬನು—ಅವ್ಮಾ ಇಪ್ಪತ್ತೇಳು ತಲೆಗಳವರೆಗೆ ನಿಮ್ಮ ವಂಶದವರಿಗೆ ರಾಜ್ಯವು ನಡೆಯುವದೆಂದು ನಿಮಗೆ

ಆಶೀರ್ವಾದವಾಗಿರುವದಲ್ಲವೆ? ಅನ್ನಲು, ತಾರಾ ಬಾಯಿಯು ಆತುರದಿಂದ—ಅಂದರೆ, ಸಮರ್ಥಾ, ಸ್ವತಃ ನನ್ನ ವಂಶದಲ್ಲಿಯೇ ಅಷ್ಟೇ? ನನ್ನ ಹೊಟ್ಟೆಯಲ್ಲಿ ಹುಟ್ಟುವ ಹುಡುಗನೇ ಮೊದಲನೆಯ ತಲೆಯವನಾಗುವನಷ್ಟೇ? ಎಂದು ಕೇಳಿದಳು. ಅದನ್ನು ಕೇಳಿ ಖಂಡೋಬನು ಅಸಮಾಧಾನಪಟ್ಟನು. ಆತನು ಏಸೂಬಾಯಿಯ ಏಕನಿಷ್ಠ ಸೇವಕನಾದ್ದರಿಂದ ಕೂಡಲೆ ತಾರಾಬಾಯಿಯನ್ನು ಕುರಿತು—ಯಾಕೆ ಬಾಯಿ ಸಾಹೇಬ, ಸಂಭಾಜಿ ಮಹಾರಾಜರ ಮಗನು ನಿಮ್ಮ ವಂಶಜನಲ್ಲವೇನು? ಯಾರು? ತಾರಾಬಾಯಿ, ನೀವು ಅಬಾಸಾಹೇಬರ ಸೊಸೆಂದಿರೇ ಇರುವಿರೇನು, ಎಂದು ಕೇಳಿದನು. ಇದನ್ನು ಕೇಳಿ ತಾರಾಬಾಯಿಯು ಬೆಟ್ಟಿ ಬಿದ್ದು—ಅವ್ವಯ್ಯಾ! ಸಮರ್ಥ ಶಿಷ್ಯರು ''ಸಂಭಾಜಿ ಮಹಾರಾಜ'' ''ಆಬಾಸಾಹೇಬ'' ಎಂದು ಬಹುಮಾನ ಪೂರ್ವಕವಾಗಿ ಎಂದು ಕರೆಯುವದಿಲ್ಲ. ಈ ದನಿಯು ಯಾರದಿರಬಹುದು! ಎಂದು ಯೋಚಿಸುತ್ತಿರಲು, ಖಂಡೋಬನು—ಅವ್ವಾ ನಿಮ್ಮಲ್ಲಿ ಇಂಥ ದ್ವೈತಭಾವವೇಕೆ? ನಿಮ್ಮ ಹೊಟ್ಟೆಯಲ್ಲಿ ಪ್ರತ್ಯಕ್ಷ ಆಬಾಸಾಹೇಬರೇ ಮೂಡಿರಲು, ಈ ದ್ವೈತಭಾವವು ಒಪ್ಪುವದೇ? ಆ ಪುಣ್ಯಕರವಾದ ಪಿಂಡಕ್ಕೆ ನಿಮ್ಮ ಈ ದ್ವೈತಭಾವದ ಮುಳ್ಳುಗಳು ಚುಚ್ಚ ಬಹುದಲ್ಲ! ಅದಿರಲಿ, ಆ ಸೂರ್ಯಾಜಿಯು ಒಳಗೆ ಇರುವನಲ್ಲವೆ? ಎಂದು ಕೇಳಲು—''ಅವ್ವಯ್ಯಾ! ಇವನು ಖಂಡು ಚೀಟನೀಸನು! ಎಲಾ ದುಷ್ಟಾ, ಖಂಡ್ಯಾ, ಸಾಧುವೇಷದಿಂದ ನನ್ನನ್ನು ಮೋಸಗೊಳಿಸುವೆಯಾ'' ಎಂದು ಗರ್ಜಿಸಿದರು. ಅದನ್ನು ಕೇಳಿದ್ದರಿಂದಲೇ ಸೂರ್ಯಾಜಿಯು ಹಿಂದೆ ಹೇಳಿದಂತೆ ಅಂಜಿ ಗಡಗಡ ನಡುಗಹತ್ತಿದ್ದನು. ಒಡೆಯಳ ಆ ಗರ್ಜನೆಗೆ ಬೆದರದೆ ಸ್ವಾಮಿನಿಷ್ಠ ಖಂಡೋಬನು ತಾರಾಬಾಯಿಯನ್ನು ಕುರಿತು—

ಖಂಡೋಬ—ಬಾಯಿಸಾಹೇಬ ನಾನು, ನಿಮ್ಮ ಖಂಡು ಚೀಟನೀಸನಿರುವದು ನಿಜವು. ಸೂರ್ಯಾಜಿಯನ್ನು ಹುಡುಕುತ್ತ ನಾನು ಈ ವೇಷದಿಂದ ಇಲ್ಲಿಗೆ ಬಂದಿದ್ದೇನೆ. ಆ ರಾಜದ್ರೋಹಿಯು ಎಲ್ಲಿರುವನು? ನಾನು ಆ ವಿಶ್ವಾಸಘಾತಕಿಯನ್ನು ದರದರ ಎಳೆಯುತ್ತ ಮಹಾರಾಜರ ಬಳಿಗೆ ಒಯ್ಯುವೆನು. ಎಲ್ಲಿರುವನು ಅವನು ಬೇಗನೆ ತೋರಿಸಿರಿ.

ತಾರಾಬಾಯಿ—ಯಾರಂದಿ ಖಂಡೂ? ಸೂರ್ಯಾಜಿ ಪಿಸಾಳನೇ? ಅವನು ಇಲ್ಲಿಗೆ ಯಾಕೆ ಬರುವನು? ನಾನು ಈಗ ಒಳಗೆ ನೋಡಿ ಬರುತ್ತೇನೆ, ನಿಲ್ಲು, ಆಗಲೆ ನಮ್ಮ ದಾಸಿಯು ಮಾತ್ರ ''ಸೂರ್ಯಾಜಿಯು ಮಹಾರಾಜರ ಬಳಿಗೆ ಏನೋ ಸುದ್ದಿಯನ್ನು ಹೇಳುವದಕ್ಕಾಗಿ ಬಂದಿರುವನೆ''ಂದು ಅನ್ನುತ್ತಿದ್ದಳು. ನೀನು ಇಲ್ಲಿಯೇ ಸ್ವಲ್ಪ ಕುಳಿತಿರು ನಾನು ಈಗ ಬರುವೆನು.

ಖಂಡು—ಇಲ್ಲ ಬಾಯಿಸಾಹೇಬ, ಆತನು ನಿಮ್ಮ ಮಹಾಲಿನಲ್ಲಿಯೇ ಬಂದಿರುವನೆಂದು ನಾನು ಕೇಳಿದ್ದೇನೆ.

ತಾರಾಬಾಯಿ—ಇರಬಹುದು ಹಾಗಾದರೆ, ನಾನು ಈಗ ನೋಡಿಬರುತ್ತೇನೆ ನಿಲ್ಲು, ಅವನು ಎಲ್ಲಿಯಾದರೂ ಅಡಗಿಗಿಡಿಗಕೊಂಡಾನು; ಕಿಡಿಕಿಯಿಂದ ಹಾರಿಯೂ ಆತನು

ಓಡಿಹೋಗಬಹುದು. ಆ ದುಷ್ಟನು ಅಂಥ ರಾಜದ್ರೋಹವನ್ನೇನು ಮಾಡಿರುವನು? ಅವನನ್ನು ಯುಕ್ತಿಯಿಂದಲೇ ಹಿಡಿಯೋಣ.

ಹೀಗೆ ನುಡಿದು ತಾರಾಬಾಯಿಯು ಒಳಗೆ ಹೋಗಿ ನೋಡಲು, ಸೂರ್ಯಾಜಿಯ ಮೋರೆಯು ಹುಚ್ಚಿಟ್ಟಿದೆ. ಅವನು ಅರವಿಲ್ಲದೆ ಕುಳಿತುಕೊಂಡಿದ್ದಾನೆ. ಕಮಲೆಯು ಗಾಬರಿಯಾಗಿ ಅವನ ಕಡೆಗೆ ನೋಡುತ್ತ ನಿಂತು ಕೊಂಡಿದ್ದಾಳೆ! ಆಗ ಧೂರ್ತಳಾದ ತಾರಾಬಾಯಿಯು ಸೂರ್ಯಾಜಿಯನ್ನು ಕುರಿತು''ಏ ಸೂರ್ಯಾಜಿ, ಆಗಲೇ ನಾವು ಆಡಿದ ಮಾತುಗಳನ್ನೆಲ್ಲ ಖಂಡು ಚೀಟನೀಸನು ಕೇಳಿದನೆಂಬಂತೆ ಕಾಣುತ್ತದೆ ಹ! ಏಳು, ಬೇಗನೆ ಆ ಹಿಂದಿನ ಬಾಗಿಲಿನಿಂದ ಹೊರಬಿದ್ದು ರಾಯಗಡದ ಹಾದಿಯನ್ನು ಹಿಡಿ. ಏಳು ನಾನು ಇಲ್ಲಿಯೇ ಖಂಡೂನನ್ನು ತರಬಿಕೊಂಡಿರುತ್ತೇನೆ. ಏಳು ಬೇಗನೇ, ಎಂದು ಹೇಳಿದಳು. ಸೂರ್ಯಾಜಿಗೂ ಇಷ್ಟೇ ಬೇಕಾಗಿತ್ತು, ಆತನು ಕೂಡಲೆ ಮಹಲಿನಿಂದ ಹೊರಬಿದ್ದು ಹೋದನು. ತಾರಾಬಾಯಿಯು ಅತ್ತಿತ್ತ ಸೂರ್ಯಾಜಿಯನ್ನು ಹುಡುಕಿದಂತೆ ಮಾಡಿ, ಕೆಲಹೊತ್ತಿನ ಮೇಲೆ ಖಂಡೋಬನ ಬಳಿಗೆ ಬಂದು—ಖಂಡೂ, ದುಷ್ಟ ಸೂರ್ಯಾಜಿಯು ಇಲ್ಲಿಗೆ ಬಂದಿದ್ದನೆಂದು ಈ ಕಮಲೆಯು ಹೇಳುತ್ತಾಳೆ. ಆತನು ಹಾದಿಯ ನೋಡಿ ಮಹಾರಾಜರ ಬಳಿಗೆ ಹೋದನೆಂದು ಈಕೆ ಹೇಳಿದಳು. ನೀನು ಅತ್ತಕಡೆಗೆ ಹೋಗಿ ವಿಚಾರಿಸಬಾರದೇ! ಕಮಲೇ, ನೀನು ಹೋಗು. ಸೂರ್ಯಾಜಿಯು ಅಲ್ಲಿಗೆ ಹೋಗಿರುವನೋ ಹ್ಯಾಗೆ ಕೇಳಿಯಾದರೂ ಬಾ.

ಇದನ್ನು ಕೇಳಿ ಖಂಡೋಜಿಯು ಒಂದು ಕ್ಷಣವಾದರೂ, ಅಲ್ಲಿ ನಿಂತು ಕೊಳ್ಳಲಿಲ್ಲ, ಆತನು ಕೂಡಲೇ ಮಹಾರಾಜರ ವಸತಿಸ್ಥಾನದ ಕಡೆಗೆ ಹೊರಟನು. ತನ್ನ ಕಡೆ ಬೆನ್ನು ಮಾಡುತ್ತಲೆ ತಾರಾಬಾಯಿಯು ಕುಲುಕುಲು ನಗಹತ್ತಿದಳು. ಖಂಡೋಜಿಯು ಭರದಿಂದ ಸಾಗಿರಲು, ಹಾದಿಯಲ್ಲಿ ಆತನಿಗೆ ಆಕಸ್ಮಾತ್ತಾಗಿ ಜೋತಾಜಿಯು ಭೆಟ್ಟಿಯಾದನು. ಆಗ ಖಂಡೋಜಿಯು ಜೋತಾಜಿಯನ್ನು ಕುರಿತು—

ಖಂಡೋಜಿ—ಜೋತ್ಯಾ, ಏ ಜೋತ್ಯಾ, ನೀನು ಒಂದು ಕೆಲಸಮಾಡು. ಇದೇ ಕಾಲಲ್ಲಿ ನೀನು ರಾಯಗಡಕ್ಕೆ ಹೋಗಿ, ಅಲ್ಲಿ ಸೂರ್ಯಾಜಿಯು ಇರುವನೋ ಹೇಗೆಂಬದನ್ನು ನೋಡಿ ಬಾ! ಆತನು ನಿನಗೆ ಹಾದಿಯಲ್ಲಿಯೇ ಭೆಟ್ಟಿಯಾಗಬಹುದು. ಆ ದುಷ್ಟನು ಬಹಳಮಾಡಿ ಬಾದಶಹನ ಛಾವಣಿಯ ಕಡೆಗೆ ಹೋಗಿದ್ದರೂ ಹೋಗಿರಬಹುದು. ನಾನು ಅತ್ತಕಡೆಗೆ ಹೋಗಿ ಬರುತ್ತೇನೆ.

ಜೋತ್ಯಾ—ಎಲ ಇವನ! ಖಂಡೂ, ನೀನು ಇಷ್ಟುದಿವಸ ಎಲ್ಲಿ ಇದ್ದೆ? ಏಸೂ ಬಾಯಿ ಸಾಹೇಬರಿಗೆ ಒಂದು ಮಾತು ಹೇಳಿ ಹೋಗಬಾರದೇ? ಏನು? ನಿನ್ನ ತಂತ್ರವಾದರೂ ಏನು? ಸಾಧುವಿನ ವೇಷವೇಕೆ?

ಖಂಡು—ಜೋತ್ಯಾ, ಈಗ ಸುಮ್ಮನೆ ಹೊತ್ತುಗಳೆಯಬೇಡ. ನಾನು ಹಿಂದುಗಡೆ ನಿನಗೆಲ್ಲ ಹೇಳೇನಂತೆ, ಸೂರ್ಯಾಜಿಯು ನಮ್ಮ ಕೈಯಲ್ಲಿ ಸಿಗದಿದ್ದರೆ ಅನರ್ಥವಾಗುವದು. ಬೇಗನೆ ಆತನ ಗೊತ್ತು ಹಚ್ಚು; ಹು! ಹಿಡಿ ರಾಯಗಡದ ಹಾದಿಯನ್ನು.

ಹೀಗೆ ಖಂಡೋಜಿಯು ನಿರ್ಧಾರದಿಂದ ಹೇಳಲು, ಜೋತ್ಯಾನು ರಾಯಗಡದ ಹಾದಿಯನ್ನೇ ಹಿಡಿದನು. ಖಂಡೋಬನು ತುಳಾಪುರದಲ್ಲಿಯ ಬಾದಶಹನ ಛಾವಣಿಯ ಕಡೆಗೆ ಸಾಗಿದನು. ಆದರೆ ಧೂರ್ತನಾದ ಸೂರ್ಯಾಜಿಯು ರಾಯಗಡಕ್ಕೂ ಹೋಗಲಿಲ್ಲ, ತುಳಾಪುರಕ್ಕೂ ಹೋಗಲಿಲ್ಲ, ತನ್ನ ಬೆನ್ನ ಮೇಲೆಯೇ ಖಂಡೋಬನಾಗಲಿ ಆತನ ಜನರಾಗಲಿ ಬರಬಹುದೆಂದು ತಿಳಿದು ಪಲ್ಹಾಳಗಡವನ್ನು ಬಿಟ್ಟು ಆತನು ಉಳುಕಲಿಲ್ಲ; ಅಲ್ಲಿಯೇ ಅಡಗಿಕೊಂಡು ಕುಳಿತುಕೊಂಡನು. ಸ್ವಲ್ಪ ಹೊತ್ತಿನ ಮೇಲೆ ಆತನು ದುರ್ಗದ ಉನ್ನತ ಪ್ರದೇಶ ವನ್ನು ಏರಿ ರಾಯಗಡದ ಕಡೆಗೆ ನೋಡಲು, ಒಬ್ಬ ವ್ಯಕ್ತಿಯು ತ್ವರೆಯಿಂದ ದುರ್ಗವನ್ನು ಇಳಿಯುತ್ತ ಸಾಗಿದ್ದನು. ಇನ್ನೊಬ್ಬನು ಬಾದಶಹನ ಛಾವಣಿಯ ಕಡೆಗ ನಡೆದಿದ್ದನು. ಅದನ್ನು ನೋಡಿ ಸೂರ್ಯಾಜಿಯು ಗಹ ಗಹಸಿ ನಕ್ಕು—''ಸದ್ಯದ ಅರಿಷ್ಟ ವಂತೂ ಹಿಂಗಿತು. ಮುಂದಿನದನ್ನು ಮುಂದೆ ನೋಡಿಕೊಳ್ಳೋಣ'' ಎಂದು ನುಡಿದು ದುರ್ಗ ವನ್ನು ಇಳಿದು ತಾರಾಬಾಯಿಯ ಕಡೆಗೆ ಬರುತ್ತಿರಲು, ಮೋಡ ಕವಿದು ಮಳೆ ಸುರಿಯುತ್ತಿತ್ತು.

ಗುಡುಗು ಸಿಡಿಲುಗಳ ಭಯಂಕರವಾದ ಪ್ರತಿಧ್ವನಿಗಳಿಂದ ಪಲ್ಹಾಗಡವು ಕಂಪಿಸುವಂತೆ. ತೋರಿತು.

## ಗೂಢತಂತ್ರ

ವಿನಾಶಕಾಲವು ಒದಗಿರುವಾಗ ಎಲ್ಲವೂ ಪ್ರತಿಕೂಲಿಸುತ್ತದೆಂಬ ಮಾತು ಸುಳ್ಳಲ್ಲ. ಸೂರ್ಯಾಜಿಯ ರಾಜದ್ರೋಹದ ಗುಪ್ತಾಲೋಚನೆಯು ಬೈಲಿಗೆ ಬಿದ್ದು, ಮರಾಟರು ಎಚ್ಚತ್ತಿದ್ದರೆ ರಾಯಗಡವು ಮೊಗಲರ ಕೈಸೇರುವ ಸಂಭವವಿದ್ದಿಲ್ಲ; ಆದರೆ ದುರ್ದೈವ ದಿಂದ ಆ ಮಾತು ಸಾಧಿಸಲಿಲ್ಲ. ಖಂಡೋಬನು ಸೂರ್ಯಾಜಿಯನ್ನು ಹುಡುಕುತ್ತ ಬಂದಾಗ, ಸಂತಾಜಿಯು ಬಾದಶಹನ ಡೇರೆಯನ್ನು ಹೊಕ್ಕು ಆತನಿಗೆ ಮರಾಟರ ಕೈತೋರಿಸುವ ಮಹಾ ಸಾಹಸದ ಕಾರ್ಯದಲ್ಲಿ ತೊಡಗಿರುವ ಸುದ್ದಿಯು ಗೊತ್ತಾಯಿತು. ತಾನು ಮೊದಲು ಸಂತಾಜಿಗೆ ಈ ಕಠಿಣ ಕಾರ್ಯದಲ್ಲಿ ಸಹಾಯಮಾಡಿ ಆ ಮೇಲೆ ತಾನೂ, ಸಂತಾಜಿಯೂ ಕೂಡಿಯೇ, ಸೂರ್ಯಾಜಿಯ ಸಮಾಚಾರವನ್ನು ತಕ್ಕೊಳ್ಳೋಣವೆಂದು ಖಂಡೋಬನು ಆಲೋಚಿಸಿದನು. ಸಂತಾಜಿಯ ಜನರು ಬೇರೆ ಬೇರೆ ಸೋಗುಗಳನ್ನು ಹಾಕಿಕೊಂಡು ಬಾದಶಹನ ಛಾವಣಿಯನ್ನು ಹೊಕ್ಕು ತಮ್ಮ ಕಾರ್ಯಕ್ಕೆ ಅನುಕೂಲ ವಾಗುವಂತೆ ಜನರನ್ನು ತಮ್ಮ ಕಡೆಗೆ ಮಾಡಿಕೊಳ್ಳಹತ್ತಿದರು. ಮತ್ತು ಬಾದಶಹನ ಡೇರೆಗೆ ಹೋಗುವ ಹಾದಿಯನ್ನೂ ಗೊತ್ತು ಮಾಡಿಕೊಳ್ಳಹತ್ತಿದರು. ಕೆಲವರು ದುರಮುರಿಗೆಯ ಸೋಗನ್ನೂ, ಕೆಲವರು ಕವಲೆತ್ತು ಆಡಿಸುವವರ ಸೋಗನ್ನೂ, ಕೆಲವರು ಚಿತ್ರ ತೋರಿಸು ವವರ ಸೋಗನ್ನೂ, ಕೆಲವರು ಗೊಂದಲಿಗರ ಸೋಗನ್ನೂ, ಇನ್ನೂ ಕೆಲವರು ಬೇರೆ ಬೇರೆ

ಸೋಗುಗಳನ್ನೂ ಹಾಕಿಕೊಂಡು ಬಾದಶಹ ಛಾವಣಿಯನ್ನೆಲ್ಲ ಸುತ್ತಿಕೊಂಡು ಸುದ್ದಿಗಳನ್ನು ತಿಳಕೊಂಡು ಬರುತ್ತಿದ್ದರು. ಇದನ್ನೆಲ್ಲ ಖಂಡೋಬನು ತಿಳಿದು, ತನ್ನ ಜನರ ಸಹಾಯದಿಂದ ಬಾದಶಹ ಛಾವಣಿಯೊಳಗಿನ ಜೀನಗಾರರು, ಬಾಗವಾನರು, ನಾಲಗಾರರು, ಮಣಿಗಾರರು, ಸುಗಂಧಕಾರರು ಮೊದಲಾದ ಕಸಬುದಾರರ ಮನಸ್ಸನ್ನು ಮರಾಟರ ಕಡೆಗೆ ಎಳೆದುಕೊಳ್ಳಹತ್ತಿದನು. ಉತ್ತರ ಹಿಂದುಸ್ತಾನದಿಂದ ಮುಸಲ್ಮಾನ ಜಾತಿಯ ಆಯಾ ಕಸಬುದಾರರನ್ನು ಬಾದಶಹನು ಕರಕೊಂಡು ಬಂದಿದ್ದರೂ, ಡೌಲಿಗೆ ಬಿದ್ದಿದ್ದ ಆ ಕಸಬುದಾರರ ಕೈಕೆಳಗೆ ದುಡಿಯಲಿಕ್ಕೆ ಬೇರೆ ಜನರು ಬೇಕಾಗುತ್ತಿದ್ದರು. ಔರಂಗಜೇಬನು ಜುಲುಮೆಯಿಂದ ಕುಲಗೆಡಿಸಿದ ದಕ್ಷಿಣದ ಜನರೇ ಅವರ ಕೈಕೆಳಗೆ ದುಡಿಯಲಿಕ್ಕೆ ನಿಂತುಕೊಂಡಿದ್ದರು. ಹಿಂದೂ ಧರ್ಮದ ಮೇಲಿನ ಅವರ ಅಭಿಮಾನವು ಇನ್ನೂ ಅಳಿದು ಹೋಗಿದ್ದಿಲ್ಲ. ಅಂಥವರನ್ನು ಖಂಡೋಬನ ಜನರು ಬೋಧಿಸಿ ಅಂತರಂಗದಿಂದ ಅವರನ್ನು ತಮ್ಮ ಕಡೆಗೆ ಮಾಡಿಕೊಳ್ಳ ಹತ್ತಿದರು. ಎಷ್ಟೋ ಜನ ಕಾವಲುಗಾರರನ್ನು ಸಹ ಪ್ರಸಂಗವಶಾತ್ ಅಫ್ಲು, ಗಾಂಜಿ, ಕೆರೆ ಮೊದಲಾದವುಗಳ ಯೋಗದಿಂದ ಎಚ್ಚರಗೆಡಿಸುವ ವ್ಯವಸ್ಥೆಯನ್ನು ಖಂಡೋಬನು ಮಾಡಿಸಿದನು; ಆದರೂ ಔರಂಗಜೇಬನಂಥ ಬಲಾಢ್ಯ ಬಾದಶಹನ ಅಸಂಖ್ಯದಳವನ್ನು ಭೇದಿಸಿ ಹೋಗಿ ಸಂತಾಜಿಯು ತನ್ನ ಪ್ರತಿಜ್ಞೆಯನ್ನು ಪೂರ್ಣ ಮಾಡುವದು ಅಶಕ್ಯವೇ ಆಗಿತ್ತು; ಆದರೆ ಅಂಥ ಸಾಹಸ ಕಾರ್ಯದಲ್ಲಿಯೂ ಕೈಹಾಕಲಿಕ್ಕೆ ವೀರ ಸಂತಾಜಿಯು ಹಿಂದೆ ಮುಂದೆ ನೋಡಲಿಲ್ಲೆಂದ ಬಳಿಕ, ಅವನ ಕೆಚ್ಚೆದೆಯನ್ನು ಯಾರು ವರ್ಣಿಸಬೇಕು?

ಇಂದು ಆಲಮಗೀರ ಬಾದಶಹನು ತನ್ನ ಛಾವಣಿಯೊಳಗಿನದೊಂದು ಮಾವಿನ ತೋಪಿನಲ್ಲಿಯ ಕಿನಕಾಫಿನ ಡೇರೆಯಲ್ಲಿ ಕುಳಿತು ಯುದ್ಧದ ಮುಂದಿನ ಮಾರ್ಗವನ್ನು ಕುರಿತು ಆಲೋಚಿಸುತ್ತಲಿದ್ದನು. ಮಹಾರಾಷ್ಟ್ರದೊಳಗಿನ ಯಾವತ್ತೂ ದುರ್ಗಗಳ ನಕಾಶಗಳು ಆತನ ಮುಂದೆ ಬಿದ್ದಿದ್ದವು. ಅವುಗಳಲ್ಲಿ ರಾಯಗಡದ, ಹಾಗು ಪಲ್ಹಾಳಗಡದ ನಕಾಶಗಳನ್ನು ಹೊಸದಾಗಿ ಆತನು ಸಿದ್ಧಮಾಡಿಟ್ಟುಕೊಂಡಿದ್ದನು. ನಿತ್ಯದಲ್ಲಿ ಬರುವ ಸಂತಾಜಿಯ ಹಾವಳಿಯ ಭಯಂಕರ ಸುದ್ದಿಗಳನ್ನು ಕೇಳಿ ಕೇಳಿ ಬಾದಶಹನು ಬೇಸತ್ತು ಅದಷ್ಟು ಬೇಗನೆ ರಾಯಗಡವನ್ನು ವಶಮಾಡಿಕೊಳ್ಳಬೇಕೆಂದು ಅಸದಖಾನನಿಗೆ ಹುಕುಮು ಬರೆಯಬೇಕೆಂದು ನಿಶ್ಚಯಿಸಿದ್ದನು. ಔರಂಗಜೇಬ ಬಾದಶಹನು ಸುಖಕ್ಕೂ, ಆಡಂಬರಕ್ಕೂ ಮೆಚ್ಚಿದವನಿದ್ದಿಲ್ಲ. ಆತನು ಸಾಮಾನ್ಯರಂತೆ ಒಂದು ಬಿಳಿಯ ಟೊಪ್ಪಿಗೆಯನ್ನು ಹಾಕಿಕೊಂಡು, ಕಾಶ್ಮೀರಿಯದೊಂದು ಶಾಲನ್ನು ಹೊತ್ತುಕೊಂಡು ಕೆಲಸ ಮಾಡುತ್ತಲಿದ್ದನು. ಆತನು ರಾಜಭೋಗಕ್ಕೆ ತೀರ ವಿಮುಖನಾಗಿದ್ದನೆಂದು ಹೇಳಬಹುದು. ಆತನ ಬಳಿಯಲ್ಲಿ ಒಂದು ಹುಲಿಯ ತೊಗಲು ಹಾಸಿತ್ತು. ಬಾದಶಹನು ಕೆಲಸ ತೀರಿದ ಬಳಿಕ ಜಪಮಾಲೆಯನ್ನು ಹಿಡಿದು ಈಶ್ವರ ಭಜನೆ ಮಾಡುತ್ತ ಆ ವ್ಯಾಘ್ರ ಚರ್ಮದ ಮೇಲೆ ಮಲಗಿಕೊಂಡು ನಿದ್ದೆ ಮಾಡುವ ಪರಿಪಾಠವಿತ್ತು!

ಬಾದಶಹನು ಹೀಗೆ ವಿಚಾರಮಗ್ನನಾಗಿ ಕುಳಿತಿರುವಾಗ, ಆತನ ಪ್ರೀತಿಯ ಹೆಂಡತಿಯಾದ ಉದೇಪುರಿ ಬೇಗಮೆಯು ಬಳಿಯದೊಂದು ಡೇರೆಯಲ್ಲಿ ಚಿತ್ರಗಾರರು ತೋರಿಸುವ ಚಿತ್ರಗಳನ್ನು ನೋಡುತ್ತ ಕುಳಿತುಕೊಂಡಿದ್ದಳು. ಅಂದು ತುಳಾಪುರದಲ್ಲಿ ದೇವಿಯ ಜಾತ್ರೆ ಇದ್ದದ್ದರಿಂದ, ಎಷ್ಟೋ ಚಿತ್ರಗಾರರು ಅಲ್ಲಿಗೆ ಬಂದಿದ್ದರು. ಅವರಲ್ಲಿ ಇಬ್ಬರನ್ನು ರಾಣಿಯ ಮನೋರಂಜನಕ್ಕಾಗಿ ಜನಾನಖಾನೆಯ ಮುಖ್ಯಳು ಕರತಂದಿದ್ದಳು. ಚಿತ್ರಗಾರರು ಆ ಭಾಗ್ಯಶಾಲಿನಿಯಾದ ಸ್ತ್ರೀಯನ್ನು ಸಾಷ್ಟಾಂಗವಾಗಿ ವಂದಿಸಿ, ಬಬ್ರುವಾಹನನ ಆಖ್ಯಾನದ ಚಿತ್ರಗಳನ್ನು ತೆಗೆದು ಕಥೆ ಹೇಳುತ್ತ ಆಕೆಗೆ ಚಿತ್ರಗಳನ್ನು ತೋರಿಸುತ್ತಲಿದ್ದರು. ಚಿತ್ರಗಾರರ ಹಾಸ್ಯ ರಸೋಕ್ತಿಗಳನ್ನು ಕೇಳಿ ನಕ್ಕು ನಕ್ಕು ಉದೇಪುರಿಯ ಹೊಟ್ಟೆಯು ಹುಣ್ಣು ಹುಣ್ಣಾಯಿತು. ಹೀಗೆ ಆನಂದದಿಂದ ಬೇಗಮೆಯ ಕಾಲಹರಣವಾಗುತ್ತಿರಲು, ಜನಾನಖಾನೆಯ ಮುಖ್ಯಳು ಬಗ್ಗಿ ಬಗ್ಗಿ ಚಿತ್ರಗಳನ್ನು ನೋಡುತ್ತಿರಲು, ಔರಂಗಜೇಬ ಬಾದಶಹನು ತನ್ನ ರಾಜ ಕಾರ್ಯವನ್ನು ಮುಗಿಸಿಕೊಂಡು ಡೇರೆಯ ಹೊರಗೆ ಬಂದನು. ಆತನು ತನ್ನ ಪ್ರಿಯ ಬೇಗಮೆಯಾದ ಉದೇಪುರಿಯು ಇಷ್ಟು ಆತುರದಿಂದ ಏನು ನೋಡುವಳೆಂಬುದನ್ನು ತಿಳಿದುಕೊಳ್ಳುವ ಕೌತುಕದಿಂದ ಮೆಲ್ಲನೇ ಬಂದು ತನ್ನ ಪಟ್ಟರಾಣಿಯ ಹಿಂದೆ ನಿಂತುಕೊಂಡನು. ಚಿತ್ರಗಾರರ ಕೆಲಸವು ಯಥಾಪ್ರಕಾರವಾಗಿ ನಡದೇ ಇತ್ತು, ಒಬ್ಬರೂ ಬಾದಶಹನ್ನು ನೋಡಿದ್ದಿಲ್ಲ. ಚಿತ್ರಗಳನ್ನು ನೋಡುತ್ತಿದ್ದ ಬಾದಶಹನು ಒಮ್ಮೊಮ್ಮೆ ಮುಗುಳುನಗೆ ನಗುವನು, ಒಮ್ಮೊಮ್ಮೆ ತಿರಸ್ಕಾರದಿಂದ ಮೂಗು ಮುರಿಯುವನು. ಉದೇಪುರಿ ಬೇಗಮೆಯ ನಗೆಯು ಆಕೆಯ ಹೊಟ್ಟೆಯಲ್ಲಿ ಹಿಡಿಸದೇ ಹೊರಬೀಳುತ್ತಿತ್ತು, ಅಷ್ಟರಲ್ಲಿ ಬಾದಶಹನ ಮುಖದಿಂದ—"ಏನು ಮೂರ್ಖರ ಧರ್ಮದ ಮರುಳದು! ಕಾಶಿಯಿಂದ ರಾಮೇಶ್ವರದ ವರೆಗೆ ಇವರ ಎಲ್ಲ ದೇವಾಲಯಗಳನ್ನು ನೆಲಸಮ ಮಾಡಿಸಿ ಮಸೀದೆಗಳನ್ನು ಕಟ್ಟಿಸುವೆನು. ಹಿಂದು ಸ್ಥಾನದ ತುಂಬ ಸತ್ಯ ಧರ್ಮವನ್ನು ಹಬ್ಬಿಸುವೆನು" ಎಂಬ ಉದ್ಗಾರವು ಒಮ್ಮಿಂದೊಮ್ಮೆ ಹೊರಬಿದ್ದದ್ದನ್ನು ಕೇಳಿ, ಎಲ್ಲರೂ ಬೆದರಿ ಬಾದಶಹನ ಕಡೆಗೆ ನೋಡಹತ್ತಿದರು! ಉದೇಪುರಿಯ ಮುಖವು ಬಾಡಿದ ಹಾಗಾಯಿತು; ಜನಾನ ಖಾನೆಯ ಮುಖ್ಯಳು ವಿನಯದಿಂದ ಪುನಃ ಪುನಃ ಬಾದಶಹನನ್ನು ವಂದಿಸಹತ್ತಿದಳು. ಚಿತ್ರಗಾರರು ಗದಗದನೆ ನಡುಗುತ್ತ ಕೈಜೋಡಿಸಿ ಎದ್ದು ನಿಂತುಕೊಂಡರು. ಆಗ ಉದೇಪುರಿಯು ತನ್ನ ಮಂಜುಲವಾದ ಸ್ವರದಿಂದ ಬಾದಶಹನನ್ನು ಕುರಿತು—ತಕಸೀರಮಾಫ ಪರವರದಿಗಾರ! ನನಗೆ ಹೊತ್ತು ಹೋಗದ್ದರಿಂದ ಚಿತ್ರಗಾರರನ್ನು ಕರಿಸಿ ಚಿತ್ರಗಳನ್ನು ನೋಡುತ್ತಿದ್ದೆನು. ನಾನೇ ಮೋಜಿಗಾಗಿ ಈ ಕಾಫರ ಜನರನ್ನು ಕರೆಸಿದನು.

ಬಾದಶಹ—ಪ್ರಿಯೇ, ಕರೆಸಿದರೇನು ತಪ್ಪು? ಆದರೆ ಇವರು ನಿನಗೆಲ್ಲಿ ಸಿಕ್ಕರು? ಇಲ್ಲದಿದ್ದರೆ ಎಲ್ಲಿಯಾದರೂ ಪುಂಡ ಮರಾಟರ ಗೊಂದಲಗಿಂದಲ ವಿದ್ದೀತಲ್ಲ?

ಜನಾನಖಾನೆಯ ಮುಖ್ಯಳು—ಇಲ್ಲ ಸರಕಾರ, ಇವರು ಅಸದಖಾನನ ಡೇರೆಯಲ್ಲಿ ಖಾನಸಾಹೇಬರ ಮನಸ್ಸನ್ನು ರಂಜಿಸುತ್ತಲಿದ್ದರು. ಇಂದು ತುಳಾಪುರದಲ್ಲಿ ದೇವಿಯ

ಜಾತ್ರೆಯು ಇರುವದು. ಅಲ್ಲಿಗೆ ಈ ಜನರು ಬಂದಿದ್ದರು. ಖಾನನ ಜನರು ಮೋಜಿಗಾಗಿ ಇವರನ್ನು ಹಿಡಿತಂದಿದ್ದರು. ಖಾನನ ಜನಾನಖಾನೆಯವರಿಗೆ ಈ ಮೋಜಿ ಬಹಳ ಮನಸ್ಸಿಗೆ ಬಂದಿತು. ಜಹಾಪನ್ಹಾ, ಆಗ ನಾನು ಅಲ್ಲಿ ಇದ್ದೆನು. ಆಗಲೇ ಬೇಗಮ ಸಾಹೇಬರು ತಮಗೆ ಹೊತ್ತು ಹೋಗಲೊಲ್ಲದೆಂದು ಹೇಳಿದ್ದರಿಂದ ನಾನೇ ಇವರನ್ನು ಕರೆ ತಂದೆನು. ಖುದಾವಂತ!

ಬಾದಶಹ—ಹೀಗೋ? ಏನರೆಲೇ, ಏ ಕಾಫರಿರಾ, ನೀವು ಯಾವ ದಾರಿಯಿಂದ ಇಲ್ಲಿಗೆ ಬಂದಿರಿ? ದರೋಗಿಣಿಜೋಯೀ, ಇವರನ್ನು ಬೇರೆ ದಾರಿಯಿಂದ ಕರಕೊಂಡು ಹೋಗಿ ಬಿಟ್ಟು ಬಾ, ಏ ದರೋಗಿಣಿ, ಇವರ ಕಣ್ಣು ಕಟ್ಟಿ ಕರಕೊಂಡು ಬಂದಿದ್ದೆಯಷ್ಟೇ?

ದರೋಗಿಣಿ—ಹೌದು ಸರಕಾರ.

ಈ ಮೇರೆಗೆ ದರೋಗಿಣಿಯು ನುಡಿಯುತ್ತಿರಲು, ಆ ಚಿತ್ರಗಾರರು ಮತ್ತೆ ಥರ ಥರ ನಡುಗಹತ್ತಿದರು. ಆಗ ಬಾದಶಹನು—''ಒಳ್ಳೇದು, ಇವರನ್ನು ಬೇರೊಂದು ಹಾದಿಯಿಂದ ಕಣ್ಣು ಕಟ್ಟಿ ಕರೆದುಕೊಂಡು ಹೋಗು'' ಎಂದು ಹೇಳಲು, ಕೂಡಲೆ ದರೋಗಿಣಿಯು ಬಾದಶಹನ ಅಪ್ಪಣೆಯಂತೆ ನಡೆಯಲನುವಾದಳು; ಆದರೆ ಅಷ್ಟರಲ್ಲಿ ಬಾದಶಹನ ಮನಸ್ಸಿಗೆ ಏನು ಹೊಳೆಯಿತೋ ಏನೋ! ಆತನು ಮತ್ತೆ ಚಿತ್ರಗಾರರನ್ನು ಕರೆದನು. ಈಗ ಮಾತ್ರ ಚಿತ್ರಕಾರರು ಮೃತಪ್ರಾಯರಾದರು. ಇನ್ನು ಬಾದಶಹನ ಅಪ್ಪಣೆಯೇನಾಗುವದೋ, ಎಂಬ ಚಿಂತೆಯಿಂದ ಅವರ ಮೋರೆಯು ಕಪ್ಪಿಟ್ಟಿತು! ಬಾದಶಹನು ಉದೇಪುರಿಯ ಹೆಗಲಮೇಲೆ ಕೈಚಲ್ಲಿ ಚಿತ್ರಗಾರರ ಕಡೆಗೆ ನೋಡುತ್ತಿದ್ದನು. ಆತನು ನಗುತ್ತ ಚಿತ್ರ ಕಾರರನ್ನು ಕುರಿತು—

ಬಾದಶಹ—ಏನಿರೋ? ನೀವು ಎಂಥ ಚಿತ್ರಗಳನ್ನು ತೋರಿಸುತ್ತಿದ್ದಿರಿ?

ಚಿತ್ರಕಾರ—ಜೀ ಪರವರದಿಗಾರ, ನಾವು ನಮ್ಮ ಪಾಂಡವರೊಳಗಿನ ಅರ್ಜುನನ ಚಿತ್ರ ವನ್ನು ತೋರಿಸುತ್ತಿದ್ದೆವು ದೇವರೂ! ಅರ್ಜುನನು ತನ್ನ ಯಜ್ಞದ ಕುದುರೆಯನ್ನು ಬಭ್ರು ವಾಹನನ ರಾಜ್ಯದಲ್ಲಿ ಬಿಟ್ಟನು ದೇವರು, ಬಭ್ರುವಾಹನನು ಆ ಕುದುರೆಯನ್ನು ಕಟ್ಟಿದನು ದೇವರು, ಆಗ ಅರ್ಜುನನು ಬಭ್ರುವಾಹನನ ಸಂಗಡ ಯುದ್ಧ ಮಾಡುತ್ತಾನೆ ಖುದಾವಂತ!

ಔರಂಗಜೇಬ—ಹಾಗಾದರೆ ನಾನು ಈಗ ನಿಮ್ಮ ರಾಮನ (ಔರಂಗಜೇಬನು ರಾಜಾ ರಾಮನಿಗೆ ಬರೆ ರಾಮನೆಂಬ ಒಂಟಿ ಹೆಸರಿನಿಂದಲೇ ಕರೆಯುತ್ತಿದ್ದನು) ರಾಜ್ಯವನ್ನು ಗೆಲ್ಲಲಿಕ್ಕೆ ಹೊರಟಿರುವೆನಲ್ಲವೆ?

ಚಿತ್ರಗಾರ—ತಾವು ಅರ್ಜುನನ ಹಾಗೆಯೇ ಇರುತ್ತೀರಿ ಸರಕಾರ!

ಔರಂಗಜೇಬ—ಹೀಗೋ! ಒಳ್ಳೇದು, ಈಗ ನನ್ನ ಚಿತ್ರವನ್ನು ತೆಗೆಯುವಿರೇನು?

ಚಿತ್ರಗಾರ—ಅವಶ್ಯವಾಗಿ ತೆಗೆಯುವೆವು ಜಹಾಪನ್ಹಾ! ತೆಗೆಯೋಣವೆ? ರಾಣೀ ಸಾಹೇಬರೂ ಸರಕಾರವೂ ಹೀಗೆ ಕೂಡಿ ನಿಂತಿರುವಂತೆ ಚಿತ್ರ ತೆಗೆಯೋಣವೆ?

ಔರಂಗಜೇಬ—ಛೀ! ಹೀಗೆ ತೆಗೆಯಬೇಡ; ನಾನು ರಾಯಗಡವನ್ನು ಮುತ್ತಿದ್ದೇನೆ, ಪಲ್ಹಾಳಗಡಕ್ಕೆ ಕೊಳ್ಳೆಯಿಟ್ಟಿದ್ದೇನೆ, ನಿಮ್ಮ ರಾಜಾರಾಮುನನ್ನು ಸೆರೆಪಿಡಿದು ತಂದಿದ್ದೇನೆ, ಆತನನ್ನು ಮುಸಲ್ಮಾನನ್ನಾಗಿ ಮಾಡಿದ್ದೇನೆ. ಅನ್ನುವ ಹಾಗೆ ಚಿತ್ರ ತೆಗೆ! ಮತ್ತು ಹೀಗೆ ಚಿತ್ರ ಬರೆಯಬೇಕು ನೋಡು, ನಾನು ಕಾಶೀವಿಶ್ವೇಶ್ವರನ ಗುಡಿಯನ್ನು ಕೆಡವಿದ್ದೇನೆ, ಅಲ್ಲಿ ಮಸೀದೆಯನ್ನು ಕಟ್ಟಿಸಿದ್ದೇನೆ. ಹು! ತೆಗೆ, ಇದರಂತೆ ಚಿತ್ರವನ್ನು!

ಚಿತ್ರಗಾರ—ಜೀ ಹುಜೂರ!

ಔರಂಗಜೇಬ—ಮತ್ತು ಆ ಚಿತ್ರಗಳನ್ನು ನನ್ನ ಛಾವಣಿಯಲ್ಲೆಲ್ಲ ತೋರಿಸುತ್ತ ನೀವು ತಿರುಗಬೇಕು!

ಚಿತ್ರಗಾರ—ಅವಶ್ಯ ತಿರುಗುವೆವು ಸರಕಾರ!

ಔರಂಗಜೇಬ—ಏನರೆಲೆ, ನೀವು ಆ ರಾಮುನ ಪಲ್ಹಾಳಗಡದ ಮೇಲೆ, ಮತ್ತು ರಾಯಗಡದ ಮೇಲೆ ಈ ಚಿತ್ರಗಳನ್ನು ತೋರಿಸುತ್ತ ತಿರುಗುವಿರಾ?

ಚಿತ್ರಗಾರ—ಅವಶ್ಯವಾಗಿ ತಿರುಗುವೆವು ಖುದಾವಂತ!

ಔರಂಗಜೇಬ—ಅದು ಹೇಗೆ ತಿರುಗುವಿರಿ?

ಚಿತ್ರಗಾರ—ಅಪ್ಪಣೆಯಾದರೆ ಈಗಲೆ ಅಸದಖಾನ ಸಾಹೇಬರ ಸಂಗಡ ರಾಯಗಡಕ್ಕೆ ಹೋಗುವೆವು. ಖಾನಸಾಹೇಬರು ನಮ್ಮನ್ನು ದುರ್ಗದ ಮೇಲೆ ಬಿಡಬೇಕು ಮಾತ್ರ!

ಔರಂಗಜೇಬ—ಒಳ್ಳೇದು ಹೋಗಿರಿ. ದರೋಗಿಣಿಬಾಯಿ, ಇವರಿಗೆ ಒಂದು ಹಿಡಿ ಹೊನ್ನು ಇನಾಮು ಕೊಡಿರಿ. ಇವರು ಚಿತ್ರ ಬರೆದರೆಂದರೆ ಅವನ್ನು ತಂದು ನನಗೆ ತೋರಿಸಿರಿ. ಆಮೇಲೆ ಬಕ್ಷಿಯನ್ನು ಸಂಗಡ ಕರಕೊಂಡು ಯಾವತ್ತು ದಂಡಿನ ಛಾವಣಿಯಲ್ಲಿ ಚಿತ್ರಕಾರರು ಆ ಚಿತ್ರಗಳನ್ನು ತೋರಿಸುವಂತೆ ಮಾಡಿರಿ. ಏ ಕಾಫೀರ, ನಿಮ್ಮ ಈ ಪಾಂಡವ ಗೀಂಡವರ ಚಿತ್ರಗಳನ್ನು ಛಾವಣಿಯಲ್ಲಿ ತೋರಿಸಿದರೆ, ನಿಮ್ಮ ತಲೆ ಹೊಡಿಸೇನು! ಎಚ್ಚರವಿರಲಿ!

ಚಿತ್ರಗಾರ—ಬಹುತ ಅಚ್ಛಾ ಖಾವಿಂದ!

ಈ ಮೇರೆಗೆ ನುಡಿದು ಚಿತ್ರಗಾರರು ಉತ್ಸಾಹದಿಂದ ಹೊರಟರು. ಬಾದಶಹನ ಅಪ್ಪಣೆಯಂತೆ ಚಿತ್ರಗಳನ್ನು ತೆಗೆಯುವದಕ್ಕೆ ಅವರು ಆತುರ ಪಡುತ್ತಲಿದ್ದರು. ಅವರು ಹೋಗ ಹೋಗುತ್ತ ಒಬ್ಬನು ಸಾಂಕೇತಿಕವಾದ ತಮ್ಮ ರಾಮೋಶಿಯ ಗುಪ್ತ ಭಾಷೆಯಲ್ಲಿ—''ದೇವರಾವ ಖುಗಾಡಲೆ'' (ಸೂರ್ಯನು ಮುಳುಗಿದನು) ಎಂದು ಸೂಚಿಸಿದನು. ಇತ್ತ ದರೋಗಿಣಿಯು ಆ ಚಿತ್ರಗಾರರನ್ನು ಬಕ್ಷಿಗೆ ಒಪ್ಪಿಸಿಳು. ಹಾದಿಯ ಹಿಡಿದು ಹೋಗುವಾಗ ಆ ಚಿತ್ರಗಾರರು ಸುತ್ತು ಮುತ್ತು ಬಹು ಸೂಕ್ಷ್ಮ ದೃಷ್ಟಿಯಿಂದ ಅವಲೋಕಿಸುವದರ ಕಾರಣವು ದರೋಗಿಣಿಗೆ ತಿಳಿಯಲಿಲ್ಲ, ಈ ತಿರುಕರು ಹುಟ್ಟಿದಾಗಿನಿಂದ ಇಂಥ ವೈಭವವನ್ನು ನೋಡದಿರುವದರಿಂದ, ಹೀಗೆ ಕಕ್ಕಾವಿಕ್ಕಿಯಾಗಿ ನೋಡುವರೆಂದು ಆಕೆಯು

ತರ್ಕಿಸಿದಳು. ಬಕ್ಷಿಯು ಬಳಿಗೆ ಹೋದಮೇಲೆ ಚಿತ್ರಗಾರರು ಚಿತ್ರಗಳನ್ನು ಬರೆದರು. ಬಕ್ಷಿಯು ಅವನ್ನು ಬಾದಶಹನಿಗೆ ತೋರಿಸಿದನು. ಆ ಚಿತ್ರಗಳಲ್ಲಿ ಬಾದಶಹನು ಸ್ವತಃ ಒಂದೆರಡು ಚಿತ್ರಗಳನ್ನು ಬರೆದು ಪೂರ್ಣಮಾಡಿದನು. ಎಷ್ಟೋ ಚಿತ್ರಗಳ ಮೇಲೆ ಸ್ವತಃ ಬಾದಶಹನು ಕುರಾಣದ ವಾಕ್ಯಗಳನ್ನು ಬರೆದನು. ಈ ಚಿತ್ರ ಬರೆಯುವ ಕಲೆಸಕ್ಕೆ ಅಂದಿನ ರಾತ್ರಿಯು ಸಾಲದಾಯಿತು. ಈ ಪ್ರಸಂಗದಲ್ಲಿ ಬಾದಶಹನು ಚಿತ್ರಗಾರರನ್ನು ಒಂದೆರಡು ಸಾರೆ ತನ್ನ ಬಳಿಗೆ ಕರಿಸಿಕೊಂಡಿದ್ದನು. ಪ್ರತಿ ಒಂದು ಸಾರೆ ಬಾದಶಹನ ಬಳಿಗೆ ಹೋಗಿ ಬರುವಾಗ ಚಿತ್ರಗಾರರಿಗ ಹೊಸ ಹೊಸ ಆನಂದದ ತೆರೆಗಳು ಹುಟ್ಟುತ್ತಿದ್ದವು. ಬಾದ ಶಹನಿಗಂತು ಚಿತ್ರದ ಹುಚ್ಚು ಹಿಡಿದಂತಾಗಿತ್ತು. ಚಿತ್ರದ ಕೆಲಸವು ಮುಗಿಯುವದರೊಳಗೆ ಬೆಳ್ಳಗೆ ಬೆಳಗಾಯಿತು. ಮರುದಿನ ಈ ಚಿತ್ರದ ಸುದ್ದಿಯು ಛಾವಣಿಯ ತುಂಬ ಹಬ್ಬಿತು. ಬಾದಶಹನು ಚಿತ್ರಗಾರರಿಂದ ತೆಗೆಸಿದ, ಹಾಗು ಸ್ವತಃ ಕೈಮುಟ್ಟಿ ತೆಗೆದ ಈ ಚಿತ್ರಗಳನ್ನು ನೋಡಲಿಕ್ಕೆ ದರ್ಬಾರದ ಜನರು ಆತುರ ಪಡಹತ್ತಿದರು. ಬಾದಶಹನ ಅಪ್ಪಣೆಯಿಂದ ಬಕ್ಷಿಯು ಚಿತ್ರಗಾರ ರೊಡನೆ ಛಾವಣಿಯ ತುಂಬ ಚಿತ್ರಗಳನ್ನು ತೋರಿಸುತ್ತ ತಿರು ಗಾಡುತ್ತಿದ್ದನು. ಬಾದಶಹನ ಚಿತ್ರದ ಸಂಗಡ ತಮ್ಮ ಚಿತ್ರಗಳೂ ಇರಬೇಕೆಂಬ ಉಬ್ಬಿ ನಿಂದ ದೊಡ್ಡ ದೊಡ್ಡ ಜನರು ತಮ್ಮ ಚಿತ್ರಗಳನ್ನು ಪಟದಲ್ಲಿ ತೆಗಿಸಹತ್ತಿದರು. ಸಂಜೆಯ ವರೆಗೆ ಚಿತ್ರಗಾರರು ಚಿತ್ರತೆಗೆಯುವ ಇಷ್ಟು ಉತ್ಸಾಹವು ಅವರಿಗೆ ಎಲ್ಲಿಂದ ಬಂದಿರ ಬಹುದೋ ದೇವರಿಗೆ ಗೊತ್ತು! ಸಂಜೆಯವರೆಗೆ ಅವರು ಚಿತ್ರಗಳನ್ನು ತೋರಿಸಿ, ತಮ್ಮ ಸ್ಥಳದಲ್ಲಿ ತಮ್ಮವರಿಬ್ಬರನ್ನು ಇಟ್ಟು, ಈಗ ಬರುತ್ತೇವೆಂದು ಹೇಳಿ ಅವರು ಎಲ್ಲಿಯೋ ಹೊರಟು ಹೋದರು.

ಇವರೆಲ್ಲರು ಸಂತಾಜಿಯ ಗೂಢ ತಂತ್ರಜಾಲಕ್ಕೊಳಪಟ್ಟವರೆಂಬ ಮಾತು ವಾಚಕರ ಮನಸ್ಸಿಗೆ ಹೊಳೆದಿದ್ದರೂ, ನಾವು ಅದನ್ನು ದೃಢೀಕರಿಸುವದಕ್ಕಾಗಿ ಮತ್ತೆ ಹೇಳುವೆವು. ಈಗ ಸಂತಾಜಿಯು ತನ್ನ ಘೋರ ಪ್ರತಿಜ್ಞೆಯನ್ನು ನೆರವೇರಿಸುವದಕ್ಕಾಗಿ ಬಾದಶಹನ ಛಾವಣಿ ಯಿಂದ ಎರಡು ಮೂರು ಮೈಲಿನ ಅಂತರದಲ್ಲಿಯ ಒಂದು ಅರಣ್ಯದಲ್ಲಿಯ ಗಿಡದ ಬುಡ ದಲ್ಲಿ ಕುಳಿತು, ಮುಂದೆ ಏನು ಮಾಡಬೇಕೆಂದು ಆಲೋಚಿಸುತ್ತಲಿದ್ದನು. ಅಷ್ಟರಲ್ಲಿಯೇ ಖಂಡೋಬಾ ಚೀಟನೀಸನು ಆತನ ಎದುರಿಗೆ ಬರಹತ್ತಿದನು. ಆತನನ್ನು ನೋಡಿ ಸಂತಾಜಿಗೆ ಬಹಳ ಸಮಾಧಾನವಾಯಿತು. ಈತನು ಸೂರ್ಯಾಜಿಯ ಗೊತ್ತು ಹಚ್ಚಿ, ಆತನ ರಾಜದ್ರೋಹದ ನಡತೆಗಾಗಿ ಆತನಿಗೆ ರಾಜಶಾಸನ ಮಾಡಿಸಿ ಇಷ್ಟರಲ್ಲಿ ತನ್ನ ಬಳಿಗೆ ಬಂದಿರಬಹುದೆಂದು ತಿಳಿದು ಆತನು ಖಂಡೋಬನನ್ನು ಕುರಿತು— ಖಂಡೋಜಿರಾವ, ದುಷ್ಟ ಸೂರ್ಯಾಜಿಗೆ ತಕ್ಕ ಶಾಸನವಾಯಿತಷ್ಟೇ? ಎಂದು ಕೇಳಲು, ಖಂಡೋಜಿಯು—ಇಲ್ಲ ಆ ದುಷ್ಟನು ಸಿಗಲಿಲ್ಲ. ಸಂತಾಜಿರಾವ ನಮ್ಮ ಮರಾಟರಲ್ಲಿಯಾದರೂ ಐಕ್ಯವೆಲ್ಲಿರುತ್ತದೆ? ತಾರಾಬಾಯಿ ಸಾಹೇಬರು ಏಸೂಬಾಯಿ ಸಾಹೇಬರವರ ವಿಷಯವಾಗಿ ಅಸೂಯೆಪಡುತ್ತಲಿದ್ದು, ಬಾಲ ಶಿವರಾಯನಿಗೆ ಪಟ್ಟವಾಗದಂತೆ

ಅವರು ಅಂತರಗಂದಲ್ಲಿ ಯೋಚಿಸುವ ಹಾಗೆ ತೋರುತ್ತದೆ. ಸೂರ್ಯಾಜಿಯು ಈ ಗೃಹಕಲಹಾಗ್ನಿಯಲ್ಲಿ ಹುಲ್ಲು ಹಾಕಲಿಕ್ಕೆ ಹಿಂದು ಮುಂದೆ ನೋಡುವ ಹಾಗಿಲ್ಲ. ತಾರಾ ಬಾಯಿಯವರೇ ಸೂರ್ಯಾಜಿಯನ್ನು ಬಚ್ಚಿಟ್ಟು, ಆತನು ನನ್ನ ಕೈಗೆ ಹತ್ತದ ಹಾಗೆ ಮಾಡಿದರೆಂಬ ಸಂಶಯವು ನನ್ನನ್ನು ಬಾಧಿಸಹತ್ತಿದೆ. ಹೀಗೆ ಬೇಲಿಯೇ ಎದ್ದು ಹೊಲವನ್ನು ಮೇಯಹತ್ತಿದರೆ. ಪರಿಣಾಮವು ಹ್ಯಾಗಾಗಬೇಕು? ನಾನು ಕೂಡಲೇ ರಾಯಗಡದ ಹಾದಿಗೆ ಜೋತಾಜಿಯನ್ನು ಕಳಿಸಿದ್ದೇನೆ. ನಾನು ಸ್ವತಃ ಪಲ್ಹಾಳಗಡದಲ್ಲಿ ಶೋಧ ಮಾಡಿದೆನು. ಆದರೂ ಆ ನೀಚ ಸೂರ್ಯಾಜಿಯ ಗೊತ್ತು ಹತ್ತಲಿಲ್ಲ. ಹೀಗೆ ಶೋಧ ಮಾಡುತ್ತ ವ್ಯರ್ಥ ಕಾಲಹರಣ ಮಾಡುವದಕ್ಕಿಂತ, ಆ ಘಾತಕ ಸ್ವಭಾವದ ಸೂರ್ಯಾಜಿಯು ಕದಾಚಿತ್ ತುಳಾಪುರಕ್ಕೆ ಬಾದಶಹನ ಕಡೆಗೆ ಬಂದಿದ್ದರೂ ಬಂದಿರಬಹುದೆಂದು ತಿಳಿದು ಇತ್ತ ಕಡೆಗೆ ಬಂದೆನು.

ಮೇಲಾಗಿ ಸಂತಾಜಿರಾವ, ನೀವು ಕೈಕೊಂಡಿರುವ ಕಾರ್ಯವು ಸಾಮಾನ್ಯವಾದದ್ದಲ್ಲ; ನಿಮ್ಮ ಪ್ರತಿಜ್ಞೆಯು ಸೌಮ್ಯವಾದದ್ದಲ್ಲ. ಇಂಥ ಪ್ರಸಂಗದಲ್ಲಿ ಪ್ರತಿಯೊಬ್ಬ ಸ್ವಾಮಿಭಕ್ತನು ನಿಮಗೆ ಸಹಾಯ ಮಾಡಲಿಕ್ಕೆ ಮುಂದುವರಿಯುವುದು ಅವಶ್ಯವಾಗಿರುತ್ತದೆ ಇದನ್ನರಿತು ನಿಮಗೆ ಸಹಾಯ ಮಾಡಬೇಕೆಂಬ ಬುದ್ಧಿಯಿಂದಲೇ ನಾನು ಬಂದಿದ್ದೇನೆ. ನನ್ನ ಹಲವು ಜನರು ಹಲವು ನೆವಗಳಿಂದ ಬಾದಶಹನ ಛಾವಣಿಯನ್ನು ಹೊಕ್ಕಿದ್ದಾರೆ. ಬಾದಶಹನ ಛಾವಣಿಯೊಳಗಿನ ಎಷ್ಟೋ ಜನರನ್ನು ನಮ್ಮ ಜನರು ಒಡೆದುಕೊಂಡಿದ್ದಾರೆ. ಇವರಲ್ಲದೆ ಶಿರ್ಕೆ, ಮಾನೆ ಎಂಬ ಮಹಾರಾಷ್ಟ್ರ ಸರದಾರರ ದಂಡಾಳುಗಳಾದ ಮರಾಟರೂ, ರಜಪೂತರೂ ನಮ್ಮವರೇ ಇರುವರಲ್ಲವೇ? ಅವರೊಳಗಿನ ಎಷ್ಟೋ ಜನರನ್ನು ನಾನು ಒಡಕೊಂಡಿರುತ್ತೇನೆ. ಆದ್ದರಿಂದ ಸಂತಾಜೀ, ಬಾದಶಹನ ಛಾವಣಿಯಲ್ಲಿ ನಿನ್ನ ಪ್ರವೇಶಕ್ಕೆ ವಿಶೇಷ ತೊಂದರೆಯಾಗುವ ಹಾಗಿಲ್ಲ. ಇದಲ್ಲದೆ ಜಗತ್ತು ಬೆರಳು ಕಚ್ಚುವಂತೆ, ಹಾಗು ಬಾದಶಹನಿಗೆ ಕಡೆತನಕ ನೆನಪಿರುವಂತೆ ನೀನು ಯಾವದೊಂದು ಅಘಟಿತ ಕೃತ್ಯವನ್ನು ಮಾಡಿದೆಯೆಂದರೆ ಬಾದಶಹನ ಛಾವಣಿಯಿಂದ ಹೊರಗೆ ಬರುವದಕ್ಕೆ ನಿನಗೆ ಆಯಾಸವಾಗದಂತೆಯೂ ನಾನು ಉಪಾಯವನ್ನು ಯೋಚಿಸಿರುತ್ತೇನೆ. ನೀನೂ ನಿನ್ನ ಸಂಗಡಿಗರೂ ಬಾದಶಹನ ಸೈನ್ಯದೊಳಗಿನ ಮರಾಟರ ದಂಡಾಳುಗಳಂತೆ ಉಡುಪು–ತೊಡಪುಗಳನ್ನು ಧರಿಸಿರಿ. ನಿಮ್ಮ ಕಾಯಕವನ್ನು ನಡಿಸಿರುವಾಗ ಏನಾದರೂ ಗದ್ದಲವಾಗಿ ಬಾದಶಹನ ದಂಡಾಳುಗಳು ಗದ್ದಲವೆಬ್ಬಿಸಿದರೆ, ನೀವೂ ಅವರೊಡನೆ ಗದ್ದಲ ಮಾಡುತ್ತ ತುಬಾಕಿಗಳನ್ನು ಹಾರಿಸುತ್ತ ನಡೆಯಿರಿ. ಅತ್ತಕಡೆಯ ಆ ಅಡವಿಯಲ್ಲಿ ನಾನು ಕೆಲವು ಜನರನ್ನು ಇಟ್ಟಿರುತ್ತೇನೆ. ನೀವು ಅತ್ತಕಡೆಗೆ ಹೀಗೆ ಗದ್ದಲ ಮಾಡುತ್ತ ಹೋದಿರೆಂದರೆ, ಅವರು ತಮ್ಮ ಕುದುರೆಗಳನ್ನು ಹತ್ತಿಕೊಂಡು ದರೋಡೆಖೋರರಂತೆ ಓಡಹತ್ತುವರು. ಆಗ ನೀವೂ ಅವರನ್ನು ಬೆನ್ನಟ್ಟುವವರಂತೆ ಈರ್ಷೆಯಿಂದ ಕುದುರೆಗಳನ್ನು ಓಡಿಸುತ್ತ ಹೋಗಿ ರೆಂದರಾಯಿತು.

ಖಂಡೋಬನ ಈ ಯುಕ್ತಿಯನ್ನು ಕೇಳಿ ಸಂತಾಜಿಗೆ ಬಹಳ ಸಮಾಧಾನವಾಯಿತು. ಆತನು ಖಂಡೋಬನನ್ನು ಬಹಳವಾಗಿ ಹೊಗಳಿದನು. ಆ ಮೇಲೆ ಅವರಿಬ್ಬರು ಹಲವು ಸಂಗತಿಗಳನ್ನು ಕುರಿತು ಆಲೋಚಿಸುತ್ತ ಕುಳಿತುಕೊಂಡಿದ್ದರು. ಬಾದಶಹನ ಡೇರೆಯನ್ನು ಹೊಕ್ಕು ಆತನಿಗೆ ಮರಾಟರ ಕೈ ಯನ್ನು ತೋರಿಸಲಿಕ್ಕೆ ಯೋಗ್ಯದಿವಸವಾವುದೆಂಬದನ್ನು ಗೊತ್ತುಹಚ್ಚುವದರಲ್ಲಿ ಅವರು ಮಗ್ನರಾಗಿದ್ದರು. ಅಷ್ಟರಲ್ಲಿ ಆ ಇಬ್ಬರು ಚಿತ್ರಕಾರರು ಅವರ ಬಳಿಗೆ ಬಂದು, ನಡೆದ ವರ್ತಮಾನವನ್ನೆಲ್ಲ ಹೇಳಿದರು. ಆ ಚಿತ್ರಗಾರರು ಸಾಮಾನ್ಯ ಜನರಿರದೆ, ಸಂತಾಜಿಯ ಎಡ-ಬಲ ಕೈಗಳಂತೆ ಇದ್ದ, ಬಹಿರ್ಜಿ, ಪದಾಜಿಯೆಂಬ ಅತಿ ಸಾಹಸಿಗರಾದ ಮರಾಟ ವೀರರಾಗಿದ್ದರು. ತನ್ನವರು ಮಾಡಿದ ಸಾಹಸವನ್ನು ಕೇಳಿ ಸಂತಾಜಿಯು ಉತ್ಸಾಹಗೊಂಡನು. ಮತ್ತೆ ಅವರೆಲ್ಲರು ಕೂಡಿ ಇನ್ನು ಯಾವ ಯಾವ ಯುಕ್ತಿಗಳನ್ನು ಮಾಡಬೇಕೆಂದು ಆಲೋಚಿಸಿದರು. ಬಾದಶಹನ ದಂಡಿನ ಜನರು ತಮಾಷೆ ನೋಡುವ ನೆವದಿಂದ ತಮ್ಮ ತಮ್ಮ ಕಾವಲಿನ ಸ್ಥಳಗಳನ್ನು ಬಿಟ್ಟು ಹೋಗಿ, ಒತ್ತಟ್ಟಿಗೆ ಅವ್ಯವಸ್ಥಿತವಾಗಿ ನೆರೆಯುವದಕ್ಕಾಗಿ, ಪ್ರಸಿದ್ಧ ಗೊಂದಲಿಗರ ಗೊಂದಲ ಹಾಕಿಸಬೇಕೆಂದು ಯೋಚಿಸಿದರು. ಈ ಯೋಚನೆಯು ಎಲ್ಲರ ಮನಸ್ಸಿಗೆ ಬಂದದ್ದರಿಂದ, ವೇಷಧಾರಿಗಳಾದ ಗೊಂದಲಿಗರು ತಮ್ಮ ಕೆಲಸವನ್ನು ಅತ್ಯುತ್ತಮ ರೀತಿಯಿಂದ ಮಾಡುವಂತೆ ಅಜ್ಞಾಪಿಸುವದಕ್ಕಾಗಿ ಆಳುಗಳು ಹೋದೆವು. ಹೀಗೆ ಒಂದಲ್ಲ, ಎರಡಲ್ಲ, ಹಲವು ಗೂಢತಂತ್ರಗಳ ಜಾಲವನ್ನು ಪಸರಿಸುವ ಕಾರ್ಯವನ್ನು ಕೆಚ್ಚೆದೆಯ ಆ ಸ್ವಾಮಿನಿಷ್ಠ ಮರಾಟರು ನಡೆಸಿರಲು, ಮೊಗಲರದೊಂದು ಸೈನ್ಯದ ತುಂಡು ತಮ್ಮ ಕುದುರೆಗಳಿಗೆ ನೀರು ಕುಡಿಸುವಕ್ಕಾಗಿ ಅವರ ಕಡೆಗೆ ಬರತೊಡಗಿತು. ಕೂಡಲೆ ಆ ಮರಾಟ ವೀರರು ಚಪಲಗತಿಯಿಂದ ಎತ್ತೋ ಮಾಯವಾಗಿ ಹೋದರು.

## ಸಂತಾಜಿಯ ಸಾಹಸ

ಅಮಾವಾಶ್ಯೆಯ ಕಗ್ಗತ್ತಲು, ಬಾದಶಹನ ದಂಡಿನ ಛಾವಣಿಯದಲ್ಲಿಯ ದೀಪ ಜ್ಯೋತಿಗಳು ನಕ್ಷತ್ರಗಳಂತೆ ಮಿನುಗುತ್ತಿದ್ದವು. ದಂಡಾಳುಗಳ ಊಟ-ಉಡಿಗೆಗಳೂ, ಹಾಸ್ಯ ಲಹರಿಗಳೂ ಎಡಬಿಡದೆ ಚಕ್ಕಂದದಿಂದ ನಡೆದಿದ್ದವು. ರಾತ್ರಿಯಾಗುತ್ತ ಹೋದಂತೆ ಛಾವಣಿಯಲ್ಲಿ ಸ್ತಬ್ಧತೆಯುಂಟಾಗಹತ್ತಿದ್ದರೂ, ಗಾನ-ವಾದನಾದಿಗಳ ಧ್ವನಿಗಳು ಕೇಳುತ್ತಲಿದ್ದವು. ಕೆಲವೆಡೆಯಲ್ಲಿ ಲಾವಣಿಯನ್ನು ಹೇಳುವ ಜನರ ಮಂಗಲ ಧ್ವನಿಗಳು ಕೇಳಹತ್ತಿದವು. ಛಾವಣಿಯೊಳಗಿನ ಜನರು ನಿದ್ರಾವಶರಾಗುತ್ತ ಹೋದಂತೆ, ಈ ತಮಾಶೆಗಾರರ ಮಂಜುಲ ನಾದಗಳಿಗೆ ಜನರ ಗದ್ದಲದ ಪ್ರತಿಬಂಧವು ಕಡಿಮೆಯಾಗಿ, ಆ ನಾದಗಳು ದಶದಿಕ್ಕುಗಳಲ್ಲಿ ಹಬ್ಬಿ, ಮನುಷ್ಯಮಾತ್ರರ ಕುತೂಹಲವನ್ನು ಹೆಚ್ಚಿಸಹತ್ತಿದವು. ಮೊದಲೇ ಮನುಷ್ಯನು

ಉತ್ಸವಪ್ರೀಯನು; ಅದರಲ್ಲಿ ಬಾದಶಹನು ದಿಲ್ಲಿ–ಆಗ್ರಾ ಪಟ್ಟಣಗಳಿಂದ ಹೊರಟಂದಿನಿಂದ ದಂಡಿನವರು ಪ್ರವಾಸದಲ್ಲಿ, ಇಲ್ಲವೇ ಯುದ್ಧದಲ್ಲಿ ಕಾಲಹರ ಮಾಡಿ ಬೇಸತ್ತಿದ್ದರಿಂದ, ಉತ್ಸವಗಳ ವಿಷಯವಾಗಿ ಅವರು ಬರೆಗೆಟ್ಟಂತೆ ಆಗಿತ್ತು. ತುಳಾಪುರದ ಸುತ್ತುಮುತ್ತು ಬಿಗಿಯಾದ ಕಾವಲು ಇದ್ದರೂ, ತಮಾಷೆಗಳನ್ನು ನೋಡುವದಕ್ಕಾಗಿ ಮೋಹಿತೆ, ಮಾನೆ ಎಂಬ ಮೊಗಲ ಪಕ್ಷಪಾತಿಗಳಾದ ಮರಾಟವೀರರ ದಂಡಾಳುಗಳು ಬಾದಶಹನ ಛಾವಣಿಯ ಕಡೆಗೆ ಬಂದಿದ್ದರು. ಸುಮಾರು ಐದುತಾಸು ರಾತ್ರಿಯಾಗಿರಲು, ಬಾದಶಹನ ಛಾವಣಿಯ ಮಗ್ಗಲಿನಲ್ಲಿ ಗಿಡಗಳ ಗುಂಪುಗಳೊಳಗಿಂದ ಸಮ್ಮಾಳದ ಖಣಖಣಾಟದ ಧ್ವನಿಯೂ, ಚೌಟಗಿಯ ಕರ್ಕಶ ಧ್ವನಿಯೂ ಕೇಳಹತ್ತಿದವು. ಬರಬರುತ್ತ ಆ ಧ್ವನಿಯು ಬರುತ್ತಿರುವ ದಿಕ್ಕಿನ ಕಡೆಗೆ ಬಾದಶಹನ ಛಾವಣಿಯ ಕಾವಲುಗಾರರೂ, ಕಾಲಾಳುಗಳೂ, ಸವಾರರೂ ಗುಂಪುಗುಂಪಾಗಿ ಸಾಗಿದರು. ಪ್ರಸಿದ್ಧ ಗೊಂದಲಿಗನ ಕಥೆ ಕೇಳುವ ಉಬ್ಬು ಅವರಲ್ಲಿ ವಿಶೇಷ ವಾಗಿ ಇತ್ತು. ಬಾದಶಹನ ಕಟ್ಟಪ್ಪಣೆಗೆ ವಿರುದ್ಧವಾಗಿ ನಡೆಯುವ ಪ್ರಸಂಗ ಬಂದಿದ್ದರೂ, ಅವರು ಬಹು ಜಾಗರೂಕತೆಯಿಂದ ತಮ್ಮ ತಮ್ಮೊಳಗೆ ಬೊಬ್ಬಾಟವಾಗದಂತೆ ವ್ಯವಸ್ಥೆ ಮಾಡಿಕೊಂಡು, ಅಡಗುತ್ತ ಅಂಜುತ್ತ ಸದ್ದಿಲ್ಲದೆ ನೋಡಲಿಕ್ಕೆ ಸಾಗಿದ್ದರು.

ಇತ್ತ ಬಾದಶಹನ ಸ್ವಂತದ ಡೇರೆಯನ್ನು–ಕಾಯುತ್ತಿದ್ದ ಕಾವಲುಗಾರರು, ಯಾವಾಗ ನೋಡಲಿಕ್ಕೆ ಹೋದೇವೆಂದು ಆತುರಪಡುತ್ತ ತಮ್ಮ ಕಾವಲಿನ ಕೆಲಸವನ್ನು ಅನಕಾ ಮಾಡಲಿಕ್ಕೆ ಯಾರಾದರೂ ಸಿಗಬಹುದೋ ಎಂದು ಆತುರದಿಂದ ಹಾದಿಯ ನೋಡುತ್ತಿದ್ದರು. ಯಾರೂ ತಮ್ಮ ಕಡೆಗೆ ಅಡ್ಡ ಹಣಕದ್ದನ್ನು ನೋಡಿ ಅವರ ಸಂಕೋಚಗೊಂಡು, ತಮ್ಮೊಳಗೇ ಸಿಟ್ಟಿನಿಂದ ಒಟಗುಟ್ಟುತ್ತಲಿದ್ದರು. ಅಷ್ಟರಲ್ಲಿ ಐದು ಜನರು ತಮ್ಮ ಕಡೆಗೆ ಬರುವದನ್ನು ನೋಡಿ, ಅವರಿಗೆ ಬಹಳ ಸಂತೋಷವಾಯಿತು. ಆಗ ಆ ಕಾವಲುಗಾರರಲ್ಲಿ ಪ್ರತಿ ಯೊಬ್ಬನು ಅತ್ಯಾತುರದಿಂದ ತಮ್ಮ ತಮ್ಮೊಳಗೆ–''ನೀನು ಹಿಂದುಗಡೆ ನೋಡಲಿಕ್ಕೆ ಹೋಗುವಿ ಯಂತೆ, ನಾನು ಮೊದಲು ನೋಡಿ ಬರುತ್ತೇನೆ;'' ಎಂದು ಹೇಳಿಕೊಳ್ಳಹತ್ತಿದರು. ಆಗ ಆ ಹೊಸದಾಗಿ ಬಂದ ಐದು ಜನರು–''ಹೋಗಿರಿ, ಈಗೇನು ಅಂಥ ಪ್ರಸಂಗವು ಬಂದಿದೆ? ನಮ್ಮ ಬಾದಶಹನ ಡೇರೆಯ ಕಡೆಗೆ ಹಣಿಕಿ ನೋಡುವ ಸಾಮರ್ಥ್ಯವು ಕೂಡ ವೈರಿಗಳಿಗಿರುವದಿಲ್ಲ. ನೀವು ನಿಶ್ಚಿಂತೆಯಿಂದ ಹೋಗಿರಿ, ಬಂದವರನ್ನು ನಾವು ನೋಡಿ ಕೊಳ್ಳುತ್ತೇವೆ. ಹೋಗುವ ಇಚ್ಛೆ ಇದ್ದವರೆಲ್ಲರೂ ಹೋಗಿರಿ; ಆದರೆ ನೀವು ಬೇಗನೇ ಮತ್ತೆ ಬರಬೇಕು. ನಾವೂ ನೋಡಲಿಕ್ಕೆ ಹೋಗುವೆವು. ಗೊಂದಲವು ಬಹಳ ನೆಟ್ಟಗೆ ಆಗುವದೆಂದು ಕೇಳಿದ್ದೇವೆ;'' ಎಂದು ನುಡಿದು, ಇಪ್ಪತ್ತು ಇಪ್ಪತ್ತೈದು ಜನ ಕಾವಲುಗಾರರನ್ನು ನೋಡಲಿಕ್ಕೆ ಕಳಿಸಿದರು. ನೋಡಲಿಕ್ಕೆ ಹೋಗುವ ಆ ಕಾವಲುಗಾರರು ತಮ್ಮ ಉಡುಪು–ತೊಡಪುಗಳನ್ನು ಆ ಹೊಸಬರೈವರಿಗೆ ಕೊಟ್ಟು, ಸಂಶಯವು ಉತ್ಪನ್ನವಾಗದಂತೆ ಮಾಡಿ, ಹೊರಟು ಹೋದರು.

ಹೀಗೆ ಕಾವಲುಗಾರರು ಆತುರದಿಂದ ಗೊಂದಲ ನೋಡಲಿಕ್ಕೆ ಹೋದಬಳಕ, ಇತ್ತ ಆ ಹೊಸ ಕಾವಲುಗಾರರು ಬೇರೆ ಕಾವಲುಗಾರರ ಮುಂದೆ ಗೊಂದಲಿಗನ ಗುಣಗಳ ಶ್ಲಾಘನ ಮಾಡಹತ್ತಿದರು. ಹೀಗೆ ಉಪ್ಪು–ಕಾರ ಹಚ್ಚಿ ಒಗ್ಗರಣೆ ಕೊಟ್ಟು ಮಾಡಿದ ವರ್ಣನದಿಂದ ಉಳಿದ ಕಾವಲುಗಾರರ ಬಾಯಲ್ಲಿಯೂ ನೀರೊಡೆಯಲು, ಅವರು ಹಿಂದು ಮುಂದಿನ ವಿಚಾರವಿಲ್ಲದೆ ಆ ಹೊಸ ಕಾವಲುಗಾರರಿಗೆ–''ನಾವು ಈಗ ಬರುತ್ತೇವೆ. ನಮ್ಮ ಕಾವಲಿನ ಕಡೆಗಿಷ್ಟು ಲಕ್ಷ್ಯವಿರಲಿ,'' ಎಂದು ಹೇಳಿ, ಗೊಂದಲ ನೋಡಲಿಕ್ಕೆ ಹೊರಟು ಹೋದರು. ಹೀಗೆ ಒಬ್ಬರಹಿಂದೊಬ್ಬರಂತೆ ಕಾವಲುಗಾರರು ಹೊರಟು ಹೋಗಲು, ಮಧ್ಯ ರಾತ್ರಿಯಾಗುತ್ತ ಹೋದಂತೆ ಆ ಹೊಸ ಕಾವಲುಗಾರರು ಏನೋ ಕೆಲಸ ಮಾಡುವದಕ್ಕಾಗಿ ಚಡಪಡಿಸಹತ್ತಿದರು. ಈಗ ಬಾದಶಹನ ಛಾವಣಿಯಲ್ಲಿ ಸ್ತಬ್ಧತೆಯು ನೆಲೆಗೊಂಡಿತ್ತು. ಇಂಥ ವೈಭವಶಾಲಿಯಾದ ಬಾದಶಹನ ಛಾವಣಿಯ ಕಡೆಗೆ ವಕ್ರದೃಷ್ಟಿಯಿಂದ ನೋಡುವರಾರು? ಅದರಲ್ಲಿ ಈ ಕಾಲಕ್ಕೆ ಮರಾಟರು ತೀರ ಬಲಗುಂದಿದವರಾಗಿದ್ದರಲ್ಲದೆ, ಅವರ ಅರಸನಾದ ಸಂಭಾಜಿಯನ್ನು ಬಾದಶಹನು ಕೊಲ್ಲಿಸಿದ್ದರಿಂದ, ಮರಾಟರು ತೀರ ನೆಲ ಹಿಡಿದರೆನ್ನುವಹಾಗೆ ನೋಡುವವರಿಗೆ ಕಾಣುತ್ತಿತ್ತು. ಸಂಬಾಜಿಯ ಹೆಂಡತಿಯಾದ ಏಸೂಬಾಯಿಯೂ, ಮಗ ಬಾಲ ಶಿವರಾಯನೂ ಮೊಗಲರ ಬಲವಾದ ಮುತ್ತಿಗೆಯಲ್ಲಿ ಸಿಕ್ಕು ಹೋಗಿದ್ದರು. ಉಳಿದ ರಾಜ ಮಂಡಲವು ಪಲ್ಹಾಳಗಡದಲ್ಲಿ ಪ್ರತಿಬಂಧಿಸಲ್ಪಟ್ಟಿತ್ತು. ಹೀಗೆ ಎಲ್ಲ ಕಡೆಯಲ್ಲಿಯೂ ಮರಾಟರ ದುರವಸ್ಥೆಯು ಕಣ್ಣಿಗೆ ಬೀಳುತ್ತಿರುವಾಗ, ಅವರ ಭಯವು ಮೊಗಲರ ಬಲಾಢ್ಯ ಸೈನ್ಯಕ್ಕೆ ಹ್ಯಾಗೆ ಉಳಿಯಬೇಕು? ಆದ್ದರಿಂದ ಮೊಗಲ ಕಾವಲುಗಾರರು ತಮ್ಮ ಕಾವಲಿನ ಕೆಲಸವನ್ನು ಎಚ್ಚರದಿಂದ ಮಾಡುತ್ತಿದ್ದಿಲ್ಲ. ಮಧ್ಯರಾತ್ರಿಯಲ್ಲಂತೂ, ಹತ್ತಕ್ಕೊಬ್ಬನಂತೆ ಎಚ್ಚತ್ತು ಹ್ಯಾಗಾದರೂ ಕಾವಲಿನ ಕೆಲಸವನ್ನು ಮಾಡುತ್ತಿದ್ದರು. ಅವರು ಅಫು, ಗಾಂಜಿಗಳ ಅಮಲಿಗೆ ಒಳಗಾಗಿದ್ದರಂತೂ ತೀರಿಯೇ ಹೋಯಿತು. ಕಾವಲಿನ ಕೆಲಸವು ಮತ್ತಿಷ್ಟು ಶಿಥಿಲವಾಗುತ್ತಿತ್ತು.

ಹೀಗೆ ಕಾವಲುಗಾರರು ಮೈ ಮರೆತಿರುವಾಗ, ಛಾವಣಿಯಲ್ಲಿ ಎಲ್ಲರೂ ನಿದ್ರಾವಶರಾಗಿರುವಾಗ ಮಧ್ಯರಾತ್ರಿಯ ಘಂಟೆಗಳು ಬಾರಿಸಹತ್ತಿದವು. ಆಗ ಆ ಐವರು ಹೊಸ ಕಾವಲುಗಾರರಲ್ಲಿ ಒಬ್ಬನು ಮತ್ತೊಬ್ಬರನ್ನು ಕುರಿತು ರಾಮೋಸಿಯ ಭಾಷೆಯಿಂದ ''ಗುಡುಸ ಗೋಸಾಯಚೇನಾ?'' (ಇನ್ನು ಸುಲಿಗೆಯನ್ನು ಆರಂಭಿಸಬೇಕಲ್ಲವೆ?) ಎಂದು ಪ್ರಶ್ನೆ ಮಾಡಲು, ಅದಕ್ಕೆ ಉತ್ತರವೇನೂ ಕೊಡದೆ, ಆ ಮನುಷ್ಯನು ಬಾದಶಹನ ಡೇರೆಯನ್ನು ಏರುವ ಸಾಹಸ ಮಾಡಹತ್ತಿದನು. ಉಳಿದ ನಾಲ್ವರೂ ಅವನ ಅನುಕರಣ ಮಾಡಿದರು. ಮೊದಲು ಏರಹತ್ತಿದವನು ನೆಟ್ಟಗೆ ಡೇರೆಯ ಕಳಸದವರೆಗೆ ಏರಿ ಹೋದನು. ಆತನು ಮೊದಲು ಡೇರೆಯನ್ನು ಕೊಯ್ದು ದೊಡ್ಡ ತೂತು ಮಾಡಿದನು. ಆ ತೂತಿನೊಳಗಿಂದ ಡೇರೆಯೊಳಗಿದ್ದದ್ದೆಲ್ಲ ಸ್ಪಷ್ಟವಾಗಿ ಕಾಣಿಸಹತ್ತಿತ್ತು. ಆತನು ಬಗ್ಗಿ ಒಳಗಿದ್ದದ್ದನ್ನು ದಿಟ್ಟಿಸಿ ನೋಡಹತ್ತಿದನು. ಆಗ ಆತನ ಹಿಂದೆ ಇದ್ದವನು ಮೆಲ್ಲಗೆ ರಾಮೋಸಿಯ ಭಾಷೆಯಲ್ಲಿ –''ಗುಡನಾಟ ಶೇಟ ಆಹೇತಕಾ?'' (ಒಳಗೆ ದೀಪವಿರುವದೋ?) ಎಂದು ಕೇಳಲು, ಆ

ಮೊದಲಿನವನು– ''ಕಂಟಿಕಾ ವಾದಲಿ'' (ಒಳಗೆ ಅವನು ಮಲಗಿರುತ್ತಾನೆ) ಎಂದು. ಹೇಳಿದನು. ಅದನ್ನು ಕೇಳಿದ ಕೂಡಲೇ ಉಳಿದ ಮೂವರೂ, ಬೇಗ ಬೇಗನೇ ಡೇರೆಯ ಹಗ್ಗಗಳನ್ನು ಕೊಯ್ಯುಹತ್ತಿದರು. ಅಷ್ಟರಲ್ಲಿ ಮೊದಲಿನವನು ಡೇರೆಯ ಬಂಗಾರದ ಕಳಸವನ್ನು ತಕ್ಕೊಂಡು, ಅದನ್ನು ಎರಡನೆಯವನ ಕೈಯಲ್ಲಿ ಕೊಟ್ಟು ''ಪದಾಜಿ, ಬಾದಶಹನು ಎಚ್ಚತ್ತಿರುವನೆಲೇ! ಆಗೋ ನೋಡು, ಹುಲಿಯ ಚರ್ಮದ ಮೇಲೆ ಮಲಗಿದವನು ಒದರುತ್ತ ಎದ್ದನು. ಅವನು ಅಂಗಾತ ಮಲಗಿಕೊಂಡು ಏನು ವಿಚಾರ ಮಾಡುತ್ತಿದ್ದನೋ,; ಯಾರಿಗೆ ಗೊತ್ತು! ನಾನು ಹೀಗೆಯೇ ನೆಲಕ್ಕೆ ಧುಮುಕಿ ಆ ದುಷ್ಟನನ್ನು ಯಮಸದನಕ್ಕೆ ಅಟ್ಟುವೆನು! ಎಲ, ಎಲಾ! ಪದಾಜೀ ಬಾದಶಹನು ಹೊರಗೆ ಎದ್ದು ಬಂದನು. ಡೇರೆಯ ಹಗ್ಗಗಳು ಹರಿದು ಡೇರೆಯು ನೆಲಕ್ಕೆ ಬೀಳತೊಡಗಿದೆ. ಡೇರೆಗೆ ಬೆಂಕಿ ಹತ್ತಿತು! ಹಾ! ಇನ್ನು ಇಳಿ, ತಡಮಾಡಬೇಡ, ಎಂದು ಹೇಳಲು, ಆ ಚಪಲರಾದ ಮರಾಟ ವೀರರು ವಿದ್ಯುದ್ವೇಗದಿಂದ ಜಾರಿಹೋದರು.

ಹೀಗೆ ಈ ಐವರು ಜಾರಿಹೋಗುತ್ತಿರಲು, ಡೇರೆಯ ಎರಡನೆಯ ಮಗ್ಗಲಿನಿಂದ ಎರಡು ಮೂರು ಸಾವಿರ ಮರಾಟರ ರಾವುತರು—''ಜಯ ಶಿವಾಜಿ ಮಹಾರಾಜ, ಜಯ ತಾನಾಜಿ'' ಎಂದು ಗರ್ಜಿಸುತ್ತ ಬಾದಶಹನ ಡೇರೆಯನ್ನು ಹೊಕ್ಕು ಸುಲಿಯಹತ್ತಿದರು. ಮೂರನೆಯ ಕಡೆಗೆ ಗೊಂದಲಿಗರು, ಮತ್ತೊಂದು ಕಡೆಗೆ ಬೇರೆ ತಮಾಸೆಗಾರರು ತಮ್ಮ ಗುಪ್ತವಾದ ಶಸ್ತ್ರಗಳನ್ನು ಕೈಯಲ್ಲಿ ಧರಿಸಿ, ''ಹರಹರ ಮಹಾದೇವ'' ಎಂದು ಗರ್ಜಿಸುತ್ತ, ಮೊಗಲ ದಂಡಾಳುಗಳ ಮೇಲೆ ಧುಮುಕಿದರು. ಹೀಗೆ ಮೊಗಲರ ಛಾವಣಿಯಲ್ಲಿ ಮರಾಟರ ಹಾವಳಿಯಿಂದ ಹಾಹಾಕಾರ ಉಂಟಾಯಿತು. ಮೊಗಲ ದಂಡಾಳುಗಳು ಮುಂದುಗಾಣದೆ ಶಸ್ತ್ರಾಸ್ತ್ರಗಳಿಗಾಗಿ ಎಡತಾಕುತ್ತಿರಲು, ಅವರನ್ನು ಮರಾಟರು ತುಂಡರಿಸಹತ್ತಿದರು.

ಔರಂಗಜೇಬ ಬಾದಶಹನಾದರೂ ಸಾಮಾನ್ಯನಿದ್ದಿಲ್ಲ. ಅಂಗಾತ ಮಲಗಿರುವಾಗ ಆತನು ತನ್ನ ಡೇರೆಗೆ ತೂತು ಬಿದ್ದದ್ದನ್ನು ನೋಡಿ ಗಾಬರಿಯಾಗಿ ಎದ್ದು ಹೊರಗೆ ಬರುತ್ತಿರಲು, ಡೇರೆಯ ಹಗ್ಗಗಳು ಚಟ ಚಟ ಹರಿಯಹತ್ತಿ ಡೇರೆಯು ನೆಲಕ್ಕೆ ಕುಸಿಯ ಹತ್ತಿತು. ಆಗ ಆತನು ಬಕ್ಕನೆತ್ತಿ ಬರಿಮೈಯಿಂದಲೇ ಹೊರಬಿದ್ದು, ಕಾವಲುಗಾರನದೊಂದು ಕೊಂಬನ್ನು ತಕ್ಕೊಂಡು ಸ್ವತಃ ಊದಿದನು. ಆಗ ಕೇಳುವದೇನು! ಬಾದಶಹನ ಛಾವಣಿಯ ತುಂಬೆಲ್ಲ ಕೊಂಬುಗಳು ಊದಹತ್ತಿ, ಇಡಿಯ ಛಾವಣಿಗೆ ಛಾವಣಿಯೇ ಎಚ್ಚತ್ತಿತ್ತು. ಕ್ಷಣಾರ್ಧದಲ್ಲಿ ಬಾದಶಹನ ತೋಫಖಾನೆಯು ಸಜ್ಜಾಗಿ ''ಧಡಲ್ ಧಡಳ್'' ಎಂದು ತೋಪುಗಳು ಹಾರ ಹತ್ತಿದವು. ಅಷ್ಟರಲ್ಲಿ ವೇಗದಿಂದ ಸಾಗಿ ಸುಲಿಯುತ್ತ ಬರುತ್ತಿರುವ ಮರಾಟ ರಾವುತರ ಕಡೆಗೆ ಖಂಡೋಬಾ ಚೀಟನೀಸನು ಓಡುತ್ತ ಬಂದು, ಆ ರಾವುತರ ಮುಖ್ಯನಾದ ಸಂತಾಜಿಯ ಕುದುರೆಯ ಕಡಿವಾಣವನ್ನು ಹಿಡಿದನು. ಈ ಕಾಲದಲ್ಲಿ ವೀರಾವೇಶಗೊಂಡಿದ್ದ ಸಂತಾಜಿಯ ಮೈಮೇಲೆ ಎಚ್ಚರವಿದ್ದಿಲ್ಲ. ಆತನು ಅತಿ ಆವೇಶದಿಂದ ಸಾಗಿದ್ದ ತನ್ನ ಕುದುರೆಯ ಕಡಿವಾಣವ ಹಿಡಿದದ್ದವನನ್ನು ತುಂಡರಿಸಿ ಬೇಕೆನ್ನುತ್ತಿರಲು, ದನಿಯಿಂದ ಆತನಿಗೆ

ಖಂಡೋಜಿಯ ಗುರುತು ಹತ್ತಿತು. ಆಗ ಸಂತಾಜಿಯು ಪಶ್ಚಾತ್ತಾಪದಿಂದ, ಎತ್ತಿದ ತನ್ನ ಖಡ್ಗವನ್ನು ಇಳಿಸಿದನು. ವೀರಶಿರೋಮಣಿಯಾದ ಸಂತಾಜಿಯ ಕುದುರೆಯ ಕಡಿವಾಣವನ್ನು ಹೀಗೆ ಹಿಡಿಯಲು ಯಾವನಾದರೂ ಸಮರ್ಥನಾಗಬಹುದೇ? ಆದರೆ ಸಂತಾಜಿಯು ಬಾದಶಹನ ತೋಫಖಾನೆಯು ಜಾಗರೂಕವಾದದ್ದನ್ನು ನೋಡಿ, ತಾನು ಇನ್ನು ಯಾವ ಕಡೆಗೆ ಸುಲಿಗೆಯನ್ನು ಆರಂಭಿಸಬೇಕೆಂದು ಆಲೋಚಿಸುತ್ತ ಕ್ಷಣಹೊತ್ತು ಕುದುರೆಯ ಕಡಿವಾಣವನ್ನು ಜಗ್ಗಿ ಹಿಡಿದು, ತನ್ನ ಅನುಯಾಯಿಗಳಾದ ರಾವುತರಿಗೆ ಸ್ವಲ್ಪ ತಡೆಯಿರಿ, ಎಂದು ಆಜ್ಞಾಪಿಸುತ್ತಿರಲು, ಸಂತಾಜಿಯ ಗಂಭೀರವಾದ ಕುದುರೆಯು ಅಂಟರಗಾಲು ಕೊಟ್ಟು, ಭುರುಗುಟ್ಟುತ್ತ ನಿಂತುಕೊಂಡಿತ್ತು. ಹೀಗಿರುವಾಗಲೇ ಖಂಡೋಬನು ಮೇಲೆ ಹೇಳಿದಂತೆ ಆ ಕುದುರೆಯ ಕಡಿವಾಣವನ್ನು ಹಿಡಿದಿದ್ದನು.

ಹೀಗೆ ದಿಟ್ಟನಾದ ಖಂಡೋಬನು ಸಂತಾಜಿಯ ಕುದುರೆಯ ಕಡಿವಾಣವನ್ನು ಹಿಡಿದ ಕೂಡಲೇ, ಆತನನ್ನು ಕುರಿತು—''ಸಂತಾಜೀ, ಕ್ಷಣವಾದರೂ ವಿಳಂಬ ಮಾಡದೆ ನಿನ್ನ ರಾವುತರೊಡನೆ ನೀನು ಹಿಂದಕ್ಕೆ ತಿರುಗು. ನಿನ್ನ ಸಂಗಡ ಆ ಮಾನೇಸರದಾರನ ಮಾವನಾದ ಅಮೃತರಾಯನು ವೇಷಾಂತರದಿಂದ ಬಂದಿದ್ದನಲ್ಲ. ಆತನು ಫಿತೂರಾಗಿ ಬಾದಶಹನಿಗೆ ನಮ್ಮ ಮಸಲತ್ತನ್ನೆಲ್ಲ ಇದೇ ಈಗ ಹೇಳಿರುವನು. ಮೊಗಲ ಸೈನ್ಯವು ನೆಟ್ಟಗೇ ನಿನಗೆ ಎದುರಾಗಿ ಬರುತ್ತಿರುವದು. ಹು! ನಡೆ, ಬೇಗನೆ ಆ ಗಿಡಗಳ ಗುಂಪಿನೊಳಗಿಂದ ಪಾರಾಗಿ ಹೋಗು ನಡೆ. ನನ್ನ ಈ ಮಾತನ್ನು ಮಹತ್ವದ ಅಪ್ಪಣೆಯೆಂದು ತಿಳಿದು ಬೇಗನೆ ಜಾರಿಹೋಗು. ಈ ವರೆಗೆ ಸಾಧಿಸಿರುವ ಕಾರ್ಯವಷ್ಟೇ ಸಾಕು.'' ಎಂದು ಹೇಳಿದನು. ಆಗ ಸಂತಾಜಿಯು ಕ್ಷಣವಾದರೂ ವಿಲಂಬಮಾಡದೆ, ತನ್ನ ಅನುಯಾಯಿಗಳೊಡನೆ ಹಿಂದಕ್ಕೆ ಸರಿದು ವೇಗದಿಂದ ಸಾಗಿದನು. ಆತನು ಮುಂದಕ್ಕೆ ಹೋಗುವದರೊಳಗೆ ಖಂಡೋಬನು ಹೇಳಿದಂತೆ ಮೊಗಲರ ಪ್ರಚಂಡ ಸೈನ್ಯವು ಆತನನ್ನು ಅಡ್ಡಗಟ್ಟಿ ನಿಂತಿತು; ಆದರೆ ಸಂತಾಜಿಯು ಅಳ್ಳೆದೆಯ ವೀರನಿದ್ದಿಲ್ಲ. ಆತನು ಆವೇಶದಿಂದ ಗರ್ಜಿಸಿ ಮೊಗಲ ಸೈನ್ಯದ ಮೇಲೆ ಧುಮುಕಲು, ಆತನ ರಾವುತರೂ ಜೀವದ ಹಂಗು ಇಲ್ಲದೆ ಮೊಗಲರ ಮೇಲೆ ಬಿದ್ದರು. ಸ್ವಾತಂತ್ರ್ಯ ರಕ್ಷಣಕ್ಕಾಗಿ ಕೇವಲ ಸ್ವಾಮಿಭಕ್ತಿಯಿಂದ ದುಮುಕಿ ಹೋಗುವ ಮರಾಟ ವೀರರ ವೇಗವನ್ನು ತಡೆಯಲು ಯಾರು ಸಮರ್ಥರಾಗುವರು? ಮೊಗಲರ ಹೊಡತದಿಂದ ಹಲವು ಶೂರ ಮರಾಟರು ಜೀವಕ್ಕೆ ಎರವಾದರೂ, ಸಂತಾಜಿಯು ಮೊಗಲರ ಮುತ್ತಿಗೆಯನ್ನು ಭೇದಿಸಿ ಮಾರ್ಗಮಾಡಿಕೊಂಡು ತನ್ನ ಅನುಯಾಯಿಗಳೊಡನೆ ಪಾರಾಗಿ ಹೋದನು. ಮುತ್ತಿಗೆಯು ಭೇದಿಸಿದ್ದರಿಂದ ಮೊಗಲರಲ್ಲಿ ಅವ್ಯವಸ್ಥೆಯು ಹಬ್ಬಿ ಬಾದಶಹನ ಬಹುಜನ ದಂಡಾಳುಗಳು ರಣಭೂಮಿಯಲ್ಲಿ ಮಡಿದರು. ಇತ್ತ ಬಾದಶಹನು ಸ್ವತಃ ಅರಬರ ದಂಡನ್ನು ಕಟ್ಟಿಕೊಂಡು ಸಂತಾಜಿಯ ಬೆನ್ನಟ್ಟಿ ಬಂದಿದ್ದನು. ಹೀಗೆ ಒಳಗಿನ ಹಾಗು ಹೊರಗಿನ ಮೊಗಲರ ದಂಡಾಳುಗಳೆಲ್ಲ ಒಟ್ಟುಗೂಡಿ ಸಂತಾಜಿಯನ್ನು ಬೆನ್ನಟ್ಟಿದರು. ಅವರಲ್ಲಿ ಡೇರೆ ಹತ್ತಿಹೋದ ಐವರು

ಮರಾಟ ವೀರರೂ ಇದ್ದರು. ಅವರು ಮೊಗಲ ದಂಡಾಳುಗಳ ವೇಷದಿಂದ ಯಾವಾಗೋ ಮೊಗಲರ ಕುದುರೆಗಳನ್ನು ಎಬ್ಬಿಸಿ ''ಕಡಿ, ಹೊಡಿ, ಬಡಿ'' ಎಂದು ಒದರುತ್ತ ''ಅಲ್ಲಾಹೋ ಅಕಬರ'' ಎಂದು ಗರ್ಜಿಸುತ್ತ ಸಂತಾಜಿಯ ಬೆನ್ನುಹತ್ತಿ ವೇಗದಿಂದ ಸಾಗಿದ್ದರು. ಈ ಮೋಸವನ್ನರಿಯದೆ ಅವರನ್ನು ಅನುಸರಿಸಿ ಕೆಲವು ಮೊಗಲ ಸರದಾರರೂ ಸಂತಾಜಿಯನ್ನು ಹಿಡಿಯಲಿಕ್ಕೆ ವೇಗದಿಂದ ಸಾಗಿದ್ದರು.

ಸಂತಾಜಿಯು ಒಮ್ಮೆ ಕೈಮೀರಿ, ಹೋದನೆಂದರೆ ಐದು ಸಾವಿರವೇ ಏಕೆ, ಐದು ಲಕ್ಷಜನ ರಾದರೂ ಆತನನ್ನು ಬೆನ್ನಟ್ಟಿ ಮಾಡುವದೇನು? ಅದರಲ್ಲಿ ಸಂತಾಜಿಯ ದರ್ಪವು ಮೊಗಲ ಸೈನ್ಯದಲ್ಲಿ ಬಹಳ. ಹೀಗೆ ಮೊಗಲ ಸೈನ್ಯವು ಬೆನ್ನಟ್ಟಿ ಹೋಗುತ್ತಿರುವಾಗ, ಸಂತಾಜಿಯು ಅಕಸ್ಮಾತ್ತಾಗಿ ಹಿಂದಿರುಗಿ, ಕುರಿ ಹಿಂಡಿನ ಮೇಲೆ ತೋಳವು ಬೀಳುವಂತೆ ಬಿದ್ದು ತುಂಡರಿಸ ಹತ್ತಲು, ಅಷ್ಟು ದೊಡ್ಡ ಸೈನ್ಯವಾದರೂ ತತ್ತರಿಸಿ, ಅವ್ಯವಸ್ಥೆಯಿಂದ ಹಾದಿ ಸಿಕ್ಕತ್ತ ಓಡಹತ್ತಿತು. ಆಗ ಸಂತಾಜಿಯು ತನ್ನ ಕುದುರೆಯನ್ನು ಹಿಂದಕ್ಕೆ ತಿರುಗಿಸುತ್ತಿರಲು, ಮತ್ತೆ ಐವರು ಮೊಗಲ ರಾವುತರು ಬೆನ್ನಟ್ಟಿ ಬರುವದನ್ನು ಸಂತಾಜಿಯ ಒಬ್ಬ ಸಂಗಡಿಗನು ಸಂತಾಜಿಗೆ ತೋರಿಸಿದನು. ಆಗ ಸಂತಾಜಿಯು ತನ್ನ ಕುದುರೆಯನ್ನು ಮತ್ತೆ ತಿರುಗಿಸಿ ಅವರ ಹಾದಿಯನ್ನು ನೋಡುತ್ತ ಗಾಂಭೀರ್ಯದಿಂದ ನಿಂತುಕೊಂಡನು. ಇನ್ನು ಆತನು ಆ ಐವರ ಮೇಲೆ ಬೀಳುವದಕ್ಕಾಗಿ ಕುದುರೆಯನ್ನು ನೂಕುತ್ತಿರಲು, ಆ ರಾವುತರು—''ಜಯ ಸಮರ್ಥ, ಜಯ ಶಿವಪ್ರಭು, ಜಯ ತಾನಾಜಿ'' ಎಂಬ ಗುರುತಿನ ಶಬ್ದಗಳನ್ನು ಉಚ್ಚರಿಸುತ್ತ ಮುಂದಕ್ಕೆ ಸಾಗಿ ಬಂದರು. ಅವರನ್ನು ನೋಡಿ ಸಂತಾಜಿಯು ನಕ್ಕನು. ಆ ರಾವುತರು ಸನಿಯಕ್ಕೆ ಬಂದಕೂಡಲೆ ಕುದುರಗೆಳಿಂದ ಇಳಿದು ಸಂತಾಜಿಗೆ ಸಾಷ್ಟಾಂಗವಾಗಿ ಎರಗಿದರು. ಆಗ ಸಂತಾಜಿಯು ಅವರನ್ನು ಕುರಿತು—''ಏಳಿರಿ ಸ್ವರೂಪಜೀ, ಮಾಲೋಜೀ ಏಳಿರಿ, ಇಂದು ನೀವು ಬಹು ದೊಡ್ಡ ಕಾರ್ಯ ಮಾಡಿದಿರಿ; ಏಳಿರಿ, ಬಹಿರ್ಜಿ, ವಿಠೋಜಿ, ಏಳಿರಿ, ಪದಾಜಿ, ಏಳಿರಿ, ಇನ್ನಾದರೂ ವೈರಿಗಳು ಬೆನ್ನಟ್ಟಿ ಬರುವ ಸಂಭವವಿದೆ! ಆದ್ದರಿಂದ ಮುಂದಕ್ಕೆ ಸಾಗೋಣ, ಎಂದು ಆಜ್ಞಾಪಿಸುತ್ತಿರಲು, ಪದಾಜಿಯು ಲಕಲಕಿಸುವ ಬಂಗಾರದ ಕಳಸವನ್ನು ಸಂತಾಜಿಯ ಮುಂದಿಟ್ಟು—''ಇದು ನಮ್ಮ ಅಲ್ಪವಾದ ಸೇವೆಯು. ಇದು ಬಾದಶಹನ ಡೇರೆಯ ಬಂಗಾರದ ಕಳಸವು ಸರಕಾರ! ಈ ಜಯ ಚಿನ್ಹವನ್ನು ಸ್ವೀಕರಿಸ ಬೇಕು''ಎಂದು ಹೇಳಿದನು. ಅದನ್ನು ನೋಡಿ ಸಂತಾಜಿಯು—ಶಾಬಾಸ್! ನಮ್ಮ ವೀರರೇ ಶಾಬಾಸ್! ಹತ್ತಿರಿ ಇನ್ನು ಕುದುರೆಗಳನ್ನು. ಇನ್ನು ಈ ಜಯಚಿನ್ಹವನ್ನು, ಅಥವಾ ಬಾದಶಹನ ಈ ಮೂಗಿನ ತುದಿಯನ್ನು ಮಹಾರಾಜರ ಚರಣಕ್ಕೆ ಕಾಣಿಕೆಯಾಗಿ ಅರ್ಪಿಸೋಣ! ಆದರೆ ಮಾಲೋಜೀ, ಖಂಡೋಬಾ ಚೀಟನೀಸನು ಎತ್ತ ಹೋದನು ನಿನಗೆ ಗೊತ್ತಿದೆಯೇನು? ಇರಲಿ ನಡೆ ಯಾವನು ಮೊಗಲ ಸೈನ್ಯವನ್ನು ಭೇದಿಸಿ ಹೋಗಲು ಸಮರ್ಥನಾದನೋ, ಯಾವನು ಸಂತಾಜಿಯ ಕುದುರೆಯ ಕಡಿವಾಣವನ್ನು ಹಿಡಿಯಲು ಸಮರ್ಥನಾದನೋ, ಅವನು ಮೊಗಲರ ದವಡೆಯೊಳಗಿಂದ ಪಾರಾಗಿ ಬಂದೇ ಬರುವನು. ನಡೆಯಿರಿ, ಇನ್ನು ನಮ್ಮ ಹಾದಿಯನ್ನು ಹಿಡಿದು ಹೋಗೋಣ ನಡೆಯಿರಿ.

ಈ ಮೇರೆಗೆ ಸಂತಾಜಿಯು ಬಾದಶಹನಿಗೆ ಮರಾಟರ ಕೈಯನ್ನು ತೋರಿಸಿ, ಆತನಿಗೆ ಮಂಕುಬೂದಿ ಹಚ್ಚಿ ಉತ್ಸಾಹದಿಂದ ತನ್ನ ಜನರೊಡನೆ ಸಾಗಿರಲು, ಇತ್ತ ಔರಂಗಜೇಬನು ಅವಮಾನಿತನಾಗಿ ಸಂತಾಪದಿಂದ ಮರಾಟರ ಮೇಲೆ ಹಲ್ಲುಕಡಿಯಹತ್ತಿದನು. ಆತನ ಅಪ್ಪಣೆ ಯಿಂದ ಮರಾಟರನ್ನು ಹಿಡಿಯುವದಕ್ಕಾಗಿ ನಾಲ್ಕೂ ಕಡೆಗೆ ರಾವುತರು ಸಾಗಿದರು. ಬಾದಶಹನು ಎಷ್ಟು ಸಂತಾಪಗೊಂಡರೂ ಮರಾಟರ ಕರ್ತೃತ್ವ ಶಕ್ತಿಯ ವಿಷಯವಾಗಿ ಆತನಿಗೆ ಆಶ್ಚರ್ಯವಾಗದೆ ಇರಲಿಲ್ಲ. ತಾನು ಶಿವಾಜಿಯ ಕಾಲದಿಂದ ಮರಾಟರ ಹಲವು ಕುಟಿಲ ತಂತ್ರಗಳ, ಹಾಗು ಕುಯುಕ್ತಿಗಳ ಅನುಭವವನ್ನು ಪಡೆದಿದ್ದರೂ, ಈಗಲೂ ಅಂಥ ತಂತ್ರಗಳ ಬಲೆಗೆ ಸಿಗುವಂತೆ ತಾನೂ, ತನ್ನ ಪ್ರಚಂಡ ಸೈನ್ಯವೂ ಅಜಾಗರೂಕತೆಯಿಂದ ನಡೆದದ್ದಕ್ಕಾಗಿ ಆತನಿಗೆ ನಾಚಿಕೆ ಬಂದಿತು. ಇಷ್ಟಾದರೂ ಮರಾಟರ ಸೊಕ್ಕು ಇನ್ನೂ ಮುರಿದಿಲ್ಲೆಂದು ಆತನು ತನ್ನೊಳಿಗೆ ಅಂದುಕೊಂಡನು. ಇನ್ನು ಮೇಲೆ ಅದಷ್ಟು ಬೇಗನೆ ರಾಯಗಡವನ್ನು ತಕ್ಕೊಂಡು, ಅಲ್ಲಿದ್ದ ಏಸೂಬಾಯಿಯನ್ನೂ, ಆಕೆಯ ಮಗನನ್ನೂ ಸೆರೆ ಹಿಡಿಯಬೇಕೆಂತಲೂ, ಪಲ್ಹಾಳಗಡದಲ್ಲಿರುವ ಅರಸು ಮನೆತನದವರನ್ನು ಬೇಗನೆ ಗೊತ್ತಿಗೆ ಹಚ್ಚಬೇಕೆಂತಲೂ, ಹಾಗೆ ಮಾಡದಿದ್ದರೆ. ತನ್ನ ಪ್ರಚಂಡವಾದ ಬಾದಶಹಾಯಿ ಸಾಮರ್ಥ್ಯಕ್ಕೆ ಕುಂದುಬಾರದೆ ಹೋಗದೆಂತಲೂ ಭಾವಿಸಿ, ಮರಾಟರ ದುರ್ಗಗಳನ್ನು ಮುತ್ತಿದ್ದ ತನ್ನ ದಂಡುಗಳ ಸಹಾಯಕ್ಕೆ ಆತನು ಹೊಸ ದಂಡುಗಳನ್ನು ಕಳಿಸಹತ್ತಿದನು. ರಾಯಗಡದ ಮುತ್ತಿಗೆಗೆ ಸಹಾಯ ಮಾಡುವದಕ್ಕಾಗಿ ಅಸದಖಾನನೆಂಬ ಶೂರ ಸರದಾರನನ್ನು ದೊಡ್ಡ ದಂಡಿನೊಡನೆ ಈ ಮೊದಲೆ ಬಾದಶಹನು ಕಳಿಸಿದ್ದರೂ, ಆ ಖಾನನು ಅದಷ್ಟು ಬೇಗನೆ ರಾಯಗಡಕ್ಕೆ ಹೋಗಬೇಕೆಂಬ ಅರ್ಥದ ಆಜ್ಞಾಪತ್ರವನ್ನು ಒಬ್ಬ ಒಂಟೆಯ ಸವಾರದ ಕೈಯಲ್ಲಿ ಕೊಟ್ಟು ಬಾದಶಹನು ಈಗ ಮತ್ತೆ ಕಳಿಸಿದನು; ಪಲ್ಹಾಳಗಡಕ್ಕೆ ಸೈನ್ಯ ಕಳಿಸುವದನ್ನು ನಿರ್ಧರಿಸಿದನು; ತನ್ನ ಛಾವಣಿಯ ಭದ್ರತೆಯನ್ನು ಲಕ್ಷಪೂರ್ವಕವಾಗಿ ಮಾಡಿದನು. ಔರಂಗಜೇಬ ಬಾದಶಹನ ದೀರ್ಘಕಾಲದ ಮಹತ್ವಾಕಾಂಕ್ಷೆಯ ಆಳ್ವಿಕೆಯಲ್ಲಿ, ಯುದ್ಧ ಪ್ರಸಂಗಗಳು ತೆರವಿಲ್ಲದೆ ಒದಗಿ, ಹಲವು ಬಗೆಯ ಅನುಭವಗಳು ಆತನಿಗೆ ಬಂದಿದ್ದರೂ, ಅವೆಲ್ಲ ಈಗಿನ ಕಾಲದಲ್ಲಿ ಹೊಳೆಯೊಳಗೆ ಹುಣಸಿಯ ಹಣ್ಣು ತೊಳೆದಂತೆ ಆದದ್ದರಿಂದ, ಆ ತಂತ್ರಗಾರನಾದ ಬಾದಶಹನ ಕೋಪಾಗ್ನಿಯು ಉದ್ದಿಪ್ತವಾಯಿತು. ಏನೇ ಆಗಲಿ, ಮರಾಟರನ್ನು ಬಗ್ಗು ಬಡಿಯಬೇಕೆಂದು ಆತನು ನಿರ್ಧರಿಸಿದನು!!

ಈ ಕಾಲದಲ್ಲಿ ಔರಂಗಜೇಬ ಬಾದಶಹನ ಹುಚ್ಚು–ಮುಪ್ಪುಗಳು ಕೂಡಿದಂತಾಗಿದ್ದವು. ದಕ್ಷಿಣದಲ್ಲಿಯ ಬಲಾಢ್ಯವಾದ ವಿಜಾಪುರ ಗೋವಳಕೊಂಡಗಳ ಮುಸಲ್ಮಾನ ಬಾದಶಾಹಿ ಗಳನ್ನು ನಷ್ಟಪಡಿಸಿ, ತಾನಾಗಿ ಮರಾಟರ ಹಾವಳಿಗೆ ಉತ್ತೇಜನ ಕೊಟ್ಟನೆಂಬದರ ಅರಿವು ಆತನಿಗೆ ಉಳಿದಂತೆ ತೋರಲಿಲ್ಲ; ಆದರೆ ವಿನಾಶಕಾಲಕ್ಕೆ ವಿಪರೀತ ಬುದ್ಧಿಯು ಯಾರಿಗಾದರೂ ಹುಟ್ಟುವದೇ ಸರಿ! ಆದರೆ ಬಾದಶಹನಿಗೆ ಬಂದ ಪ್ರಸಂಗದ ಮುಸುಡೆ ಮೋರೆಗಳು ಕೂಡ ಗೊತ್ತಿಲ್ಲದ ಕ್ಷುದ್ರರು ನಾವು, ಚಿಕ್ಕಂದದಿಂದ ಬಾದಶಹನಿಗೆ

ಹೆಸರಿಟ್ಟರೆ ಆಗುವದೇನು? ಬಾದಶಹನೇನು ಮೂರ್ಖನೇ? ಹೇಡಿಯೇ? ಅನುದಾರವಾದ ಧರ್ಮಾಭಿಮಾನ, ಅನ್ಯಾಯದ ರಾಜತೃಷ್ಣೆ, ಭೂತದಯಾಶೂನ್ಯ ಸ್ವಾಭಿಮಾನ ಇತ್ಯಾದಿ ದುರ್ಗುಣಗಳು ಆತನಲ್ಲಿರದಿದ್ರೆ, ಅತ್ಯಂತ ಕಾರ್ಯದಕ್ಷನೂ, ಶೂರನೂ, ಸ್ವಧರ್ಮ ಪರಾಯಣನೂ, ದಂಭರಹಿತನೂ ಆದ ಆ ಔರಂಗಜೇಬ ಬಾದಶಹನನ್ನು ಹೋಲುವ ಇನ್ನೊಬ್ಬ ಬಾದಶಹನು ಮೊಗಲರಲ್ಲಿ ಆಗುತ್ತಿದ್ದಿಲ್ಲವೆಂದು ಇತಿಹಾಸಕಾರರು ಒಪ್ಪಿ ಕೊಂಡಿದ್ದಾರೆ. ಏನೇ ಇರಲಿ ಶಿವಪ್ರಭುವಿನ ಪುಣ್ಯ ರೂಪವಾಗಿದ್ದ ಕೆಚ್ಚೆದೆಯ ಮರಾಟರ ಮುಂದೆ ಮಾತ್ರ ಆತನು ಕೈಯೂರಿ ಹಣ್ಣುಹಣ್ಣಾಗಬೇಕಾಯಿತು. ಆತನ ಕಾರ್ಯ ತತ್ಪರತೆಯೇ ಒಮ್ಮೊಮ್ಮೆ ಆತನ ಘಾತಕ್ಕೆ ಕಾರಣ ವಾಗುತ್ತಿತ್ತು. ಅಸದಖಾನನು ಬೇಗನೆ ರಾಯಗಡಕ್ಕೆ ಮುಟ್ಟಬೇಕೆಂದು ಒಂಟೆಯ ಸವಾರರನ್ನು ಕಳಿಸಿದ್ದೇ ಈಗ ಮುಳುವಾಯಿತು. **ಪ್ರತ್ಯಕ್ಷ ಬಾದಶಹನ ಛಾವಣಿಯಲ್ಲಿ ಸಂತಾಜಿಯು ಮಾಡಿದ ಪುಂಡಾಟಿಕೆಯ ಸುದ್ದಿಯನ್ನು ಕೇಳಿ ಖಾನನು ಬೆದರಿದನು! ಈ ಸಂತಾಜಿಯ ಜನರು ಆಕಾಶದಿಂದ ಇಳಿಯುವರೋ,** ನೆಲಬಗಿದು ಏಳುವರೋ, ಎಂದು ಬೆದರಿ ಖಾನನು ಬಹು ಜಾಗರೂಕತೆ ಯಿಂದ ಸಾವಕಾಶವಾಗಿ ರಾಯಗಡದ ಕಡೆಗೆ ಸಾಗಿದನು. ಈ ಮೊದಲೆ ಖಾನನು ತಾನು ರಾಯಗಡಕ್ಕೆ ಸಾಗಿಬಂದಿರುವ ಸುದ್ದಿಯನ್ನೂ, ತನ್ನ ಮುಕ್ಕಾಮನ್ನೂ ತನ್ನ ಮಗನಾದ ಇತಿಕದ ಖಾನನಿಗೆ ತಿಳಿಸಿದ್ದರಿಂದ, ಗಣೋಜಿರಾವ ಶಿರ್ಕೆಯು (ರಾಜಕುವರಳ ಪತ್ನಿಯು) ಅಲ್ಪ ಪರಿವಾರದೊಡನೆ ಖಾನನ್ನು ಎದುರುಗೊಳ್ಳುವದಕ್ಕಾಗಿ ಹೊರಟಿದ್ದನು; ಆದರೆ ಖಾನನ ಗತಿಯು ಮಂದವಾದ್ದರಿಂದ, ನಿಯಮಿತ ಸ್ಥಳದಲ್ಲಿ ಖಾನನ ಭೆಟ್ಟಿಯು ಶಿರ್ಕೆಗೆ ಆಗಲಿಲ್ಲ; ಆದರೂ ಆತನು ಹಾಗೆಯೇ ಖಾನನ್ನು ಕಾಣುವದಕ್ಕಾಗಿ ತನ್ನ ಪರಿವಾರದೊಡನೆ ಮುಂದಕ್ಕೆ ಸಾಗಿದನು. ಅಷ್ಟರಲ್ಲಿ ಎತ್ತಲಿಂದಲೋ ಮರಾಟರದೊಂದು ಗುಂಪು ಬಂದು ಗಣೋಜಿಗೆ ಗಂಟು ಬೀಳಲು, ಹೊಡೆದಾಟ–ಒದರಾಟಗಳಿಗೆ ಆರಂಭವಾಯಿತು.

ಇತ್ತ ಸಂತಾಜಿಯು ತನ್ನ ಪರಿವಾರದೊಡನೆ ಜಯೋತ್ಸಾಹದಿಂದ ಸಾಗಿ ಬರುತ್ತಿರುವಾಗ ಆತನಿಗೆ ಈ ಒದರಾಟದ ಗೊಂದಲವು ದೂರದಿಂದ ಕೇಳ ಹತ್ತಿತು. ಆಗ ಆತನು ಒತ್ತರ ದಿಂದ ಸಾಗಿ ಬರಲು, ಕೆಲವರು ದಿಕ್ಕು ದಿಕ್ಕಿಗೆ ಓಡುತ್ತಿದ್ದು, ಕೆಲವರು ಅವರನ್ನು ಬೆನ್ನಟ್ಟಿದ್ದರು. ಕೆಲವರು ಗುಂಪುಕಟ್ಟಿ ಒತ್ತಟ್ಟಿಗೆ ನಿಂತುಕೊಂಡಿದ್ದರು. ಸಂತಾಜಿಯು ಸಮೀಪಕ್ಕೆ ಬಂದಂತೆ ಆತನನ್ನು ನೋಡಿ ಬೆನ್ನಟ್ಟಿ ಹೋಗುತ್ತಿದ್ದ ಜನರು ನಿಂತುಕೊಂಡು ವಿನಯದಿಂದ ವಂದಿಸಹತ್ತಿದರು. ಕೆಲವರು ಉದ್ದಕ್ಕೆ ನೆಲದಮೇಲೆ ಬಿದ್ದರು. ಹೀಗೆ ತನ್ನ ಜನರು ಜಯಶಾಲಿ ಗಳಾಗಿರುವದನ್ನುನೋಡಿ ಸಂತಾಜಿಯು ಕೌತುಕದಿಂದ ಜನರ ಗುಂಪು ನೆರೆದಲ್ಲಿಗೆ ಹೋಗಲು, ಜನರು ಲಗಬಗೆಯಿಂದ ಹಿಂದಕ್ಕೆ ಸರಿದು, ಸಂತಾಜಿಯನ್ನು ವಂದಿಸುತ್ತ ಇಬ್ಭಾಗವಾಗಿ ಹಾದಿಯನ್ನು ಬಿಟ್ಟರು. ಆಗ ಸಂತಾಜಿಯು ಜನರ ವಂದನೆಗಳನ್ನು ಸ್ವೀಕರಿಸುತ್ತ ಮುಂದಕ್ಕೆ ಸಾಗಿ ಹೋಗಲು, ರಾಜಕುವರಳು ತನ್ನ ಪತಿಯಾದ ಗಣೋಜಿರಾವ ಶಿರ್ಕೆಯನ್ನು ತೊಡೆಯಮೇಲೆ ಹಾಕಿಕೊಂಡು ಕಣ್ಣೀರು ಹಾಕುತ್ತ ಕುಳಿತು ಕೊಂಡಿದ್ದಳು.

ಇದನ್ನು ನೋಡಿ ಸಂತಾಜಿಯು ಆಶ್ಚರ್ಯಪಟ್ಟನು. ಆತನು ರಾಜಕುವರಳ ಬಳಿಗೆ ಹೋಗಿ, ಆ ಶಿವಪುತ್ರಿಗೆ ಸಾಷ್ಟಾಂಗವಾಗಿ ವಂದಿಸಲು, ರಾಜಕುವರಳು ಆತನನ್ನು ಕುರಿತು ಗಾಂಭೀರ್ಯದಿಂದ—''ಸಂತಾಜಿರಾವ ನಾನು ದುಃಖದಿಂದ ಕಣ್ಣೀರು ಸುರಿಸುವೆನೆಂದು ತಿಳಿದು ವಿಕಲ್ಪಕ್ಕೆ ಆಸ್ಪದ ಕೊಡಬೇಡಿರಿ. ಪತಿಯ ದುರವಸ್ಥೆಯನ್ನು ನೋಡಿ ನನಗೆ ದುಃಖ ವಾಗಿರುವದೇನೋ ನಿಜ; ಆದರೆ ಯಾವ ಶಿರ್ಕೆ ವೀರರು ಆಬಾಸಾಹೇಬರ ಕಾಲದಲ್ಲಿ ಸ್ವದೇಶೋದ್ಧಾರಕ್ಕಾಗಿ ಸರ್ವಸ್ವವನ್ನು ಅರ್ಪಿಸಿದ್ದರೋ, ಅದೇ ಶಿರ್ಕೆ ವೀರರು ಸ್ವದೇಶ ದ್ರೋಹಕ್ಕಾಗಿ ಪ್ರತಿಜ್ಞೆ ಮಾಡಿ, ತಮ್ಮ ದುಷ್ಕರ್ಮದ ದುಷ್ಟ ಫಲದಿಂದ ಹೀಗೆ ದುರ್ದಸೆ ಹೊಂದಿದ್ದನ್ನು ನೋಡಿ ನನ್ನ ಕಣ್ಣಲ್ಲಿ ನೀರು ಬಂದಿವೆ! ಆದರೆ ಸಂತಾಜಿರಾವ, ನಿಮ್ಮಂಥ ಸ್ವಾಮಿನಿಷ್ಠ ಸ್ವದೇಶಭಕ್ತರನ್ನು ನೋಡಿ ನನ್ನ ಹೃದಯದೌರ್ಬಲ್ಯವು ಅಳಿದು ಹೋಯಿತು. ನಿಮ್ಮ ಸಾಹಸದ ಕಾರ್ಯದ ಸುದ್ದಿಯು ದೂತಮುಖದಿಂದ ನನಗೆ ಇಂದೇ ಹತ್ತಿದೆ. ನಿಮ್ಮಂಥ ಕೆಚ್ಚೆದೆಯ ವೀರರು ಇರುವವರೆಗೆ ನಮ್ಮ ಆಬಾಸಾಹೇಬರು ದೇಹವಿಟ್ಟಿಲ್ಲೆಂತಲೇ ಭಾವಿಸುವೆನು. ನಿಮ್ಮಂಥ ವೀರರ ಸತ್ಕಾರ್ಯದ ಪುಣ್ಯ ಪ್ರತಾಪದಿಂದ ನಮ್ಮ ಶಿರ್ಕೇ ಕುಲಭೂಷಣರ ದುರ್ವಿಚಾರಗಳು ಕುಗ್ಗಬಹುದು! ಆಗಲಿ, ಅಂಬಾಬಾಯಿಯ ಇಚ್ಛೆಯಿದ್ದಂತೆ ಆಗಲಿ! ಇವರಿಗೆ ಇನ್ನೂ ಪೂರಾ ಎಚ್ಚರಿಕೆಯಾಗಿರುವುದಿಲ್ಲ. ಇವರನ್ನು ಹೀಗೆಯೇ ಕುದುರೆಯ ಮೇಲೆ ಹಾಕಿಕೊಂಡು ಪಲ್ಹಾಳಗಡಕ್ಕೆ ಹೋಗೋಣ ನಡೆಯಿರಿ, ಎಂದು ಹೇಳಲು, ಸಂತಾಜಿಯು ರಾಜಕುವರಳ ಈ ಅಪ್ಪಣೆಯನ್ನು ಶಿರಸಾವಹಿಸಿದನು. ಕೂಡಲೆ ಎಲ್ಲ ಪರಿವಾರವೂ ಪಲ್ಹಾಳಗಡದ ಕಡೆಗೆ ಸಾಗಹತ್ತಿತು. ಈ ಪರಿವಾರದ ಸಂಗಡ ಐದು ಆನೆಗಳು ಇದ್ದವು. ಅವನ್ನು ಸಂತಾಜಿಯು ಹಾದಿಯಲ್ಲಿ ಅಸದ ಖಾನನ ಸೈನ್ಯದೊಂದು ಭಾಗವನ್ನು ದಿಕ್ಕುಪಾಲಾಗಿ ಓಡಿಸಿ ಸಂಪಾದಿಸಿದ್ದನು.

## ಮರಾಟರ ಮಸಲತ್ತು

ಈ ಮೇರೆಗೆ ಕೆಚ್ಚೆದೆಯ ಮರಾಟ ವೀರರ ಜಯಶಾಲಿಗಳಾಗಿ ಪಲ್ಹಾಳಗಡಕ್ಕೆ ಬರಲು, ಅವರ ಸನ್ಮಾನಕ್ಕಾಗಿ ರಾಜಾರಾಮ ಮಹಾರಾಜರು ಅಲ್ಲಿ ದೊಡ್ಡ ದರ್ಬಾರು ನೆರಸಿದರು. ಸಂಭಾಜಿ ಮಹಾರಾಜರ ಮರಣದ ನಂತರ ಕೂಡಿದ ದರ್ಬಾರುಗಳಲ್ಲಿ ಇದೇ ಮಹತ್ವದ್ದೆಂದು ಹೇಳಬಹುದು; ಸಭಿಕರು ಆತ್ಯಾತುರದಿಂದ ಸಂತಾಜಿಯ ಹಾದಿಯನ್ನು ನೋಡುತ್ತ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತುಕೊಂಡಿದ್ದರು. ರಾಜಾರಾಮ ಮಹಾರಾಜರು ಬಾಲ ಶಿವರಾಯನ ಸಲುವಾಗಿ ಸಿಂಹಾಸನದ ಮಧ್ಯದಲ್ಲಿ ಸ್ಥಳಬಿಟ್ಟು, ತಾವು ಒತ್ತಟ್ಟಿಗೆ ಪ್ರತಿನಿಧಿಯ ಸ್ಥಳದಲ್ಲಿ ಕುಳಿತುಕೊಂಡಿದ್ದರು. ಅಷ್ಟರಲ್ಲಿ ಸಂತಾಜಿಯು ದರ್ಬಾರದಲ್ಲಿ ಬಂದದ್ದನ್ನು ಸ್ತುತಿ ಪಾಠಕರು ನಿವೇದಿಸಹತ್ತಿದರು. ಸಂತಾಜಿಯನ್ನು ನೋಡಿದಕೂಡಲೆ ಸಭಿಕರೆಲ್ಲ ಆದರದಿಂದ

ಎದ್ದು ನಿಂತುಕೊಂಡರು. ಸ್ವತಃ ರಾಜಾರಾಮ ಮಹಾರಾಜರು ಸಿಂಹಾಸನದಿಂದ ಇಳಿದು ಸಂತಾಜಿಯನ್ನು ಸತ್ಕರಿಸುವದಕ್ಕಾಗಿ ಎದುರಿಗೆ ಸಾಗಿಬಂದರು. ಸಂತಾಜಿಯು ಮಹಾರಾಜರಿಗೆ ಸಾಷ್ಟಾಂಗವಾಗಿ ಎರಗಿ, ಅವರ ಚರಣಗಳ ಮೇಲೆ ಮಸ್ತಕವಿಟ್ಟನು. ಮಹಾರಾಜರು ಆತನನ್ನು ಹಿಡಿದೆತ್ತಿ ಸನ್ಮಾನಿಸಲು, ವೀರ ಸಂತಾಜಿಯು ಬಾದಶಹನ ಡೇರೆಯ ಸುವರ್ಣ ಕಲಶವನ್ನು ಕಾಣಿಕೆಯಾಗಿ ಅರ್ಪಿಸಿ, ಮಹಾರಾಜರನ್ನು ಮತ್ತೆ ವಂದಿಸಿದನು. ಆಗ ಇಡಿಯ ದರ್ಬಾರದವರು ಈ ವಿಜಯ ಚಿನ್ಹವನ್ನು ನೋಡುವದಕ್ಕಾಗಿ ಮುಗಿಬಿದ್ದರು. ಆಮೇಲೆ ಸಂತಾಜಿಯು ಎಲ್ಲರನ್ನು ದರ್ಬಾರದ ಹೊರಗೆ ಕರಕೊಂಡು ಬಂದು, ವೀರಶ್ರೇಷ್ಠನಾದ ಅಸದಖಾನನ ಐದು ಆನೆಗಳನ್ನು ಅವರಿಗೆ ತೋರಿಸಿದನು. ಆಗ ಮಹಾರಾಜರು ಅತ್ಯಂತ ಸಂತುಷ್ಟರಾದರು. ಬಳಿಕ ಎಲ್ಲರೂ ದರ್ಬಾರದೊಳಗೆ ಬಂದು ತಮ್ಮ ತಮ್ಮ ಸ್ಥಳದಲ್ಲಿ ಕುಳಿತುಕೊಂಡರು. ಆಗ ಸಂತಾಜಿಯು ಉತ್ಸಾಹದಿಂದ ಮಹಾರಾಜರನ್ನು ಕುರಿತು ಕೈ ಜೋಡಿಸಿ ಅತ್ಯಂತ ವಿನಯದಿಂದ—

ಸಂತಾಜಿ—ಮಹಾರಾಜರ ಚರಣಕೃಪೆಯಿಂದಲೂ, ಆಬಾಸಾಹೇಬರ (ಶಿವಪ್ರಭುವಿನ) ಪುಣ್ಯದಿಂದಲೂ, ನನ್ನ ಶೂರ ಸಂಗಡಿಗರ ದಮ್ಮಿನಿಂದಲೂ ಅಲಮಗೀರನ ಡೇರೆಯಲ್ಲಿ ನಾನು ಆರಂಭದ ಮುಜುರೆ ಮಾಡಿಯಂತು ಬಂದೆನು; ಮತ್ತು ಅಸದಖಾನನ ಯೋಗಕ್ಷೇಮವನ್ನು ವಿಚಾರಿಸಿದೆನು; ಇದಲ್ಲದೆ ಎಷ್ಟೋ ಬಂದ ಹೋದವರಿಗೆ ಮರಾಟರು ಬದುಕಿರುವರೆಂಬದನ್ನು ತೋರಿಸಿದೆನು. ಇದನ್ನೆಲ್ಲ ನೆನಪುಮಾಡಿ ಮಹಾರಾಜರಿಗೆ ಒಂದು ಯಾದಿಯನ್ನೇ ಮಾಡಿಕೊಡತಕ್ಕದ್ದು. ಮಹಾರಾಜ, ಮೊದಲನೆಯ ಯುದ್ಧವಂತು ಶಿವಪ್ರಭುವಿನ ಹೆಸರಿನಿಂದ ಯಷಸ್ಕರವಾಯಿತು. ತಾನಾಜಿಯ ಕಾಯಕದ ನೆನಪು ಮತ್ತೊಮ್ಮೆ ಮೊಗಲರಿಗೆ ಆಯಿತು; ಆದರೆ ಇನ್ನು ಮುಂದೆ ಮಾಡತಕ್ಕ ಕೆಲಸದ ಬಗ್ಗೆ ಅಪ್ಪಣೆಯಾಗಬೇಕು ಸರಕಾರ! ದಿಲ್ಲಿಯನ್ನು ಸುಟ್ಟು ಬರುವೆನು. ಆಗ್ರಾ ಪಟ್ಟಣವನ್ನು ನೆಲಸಮಮಾಡಿ ಬರುವೆನು. ಆದರೆ ಸೇವಕನ ಮಸ್ತಕದ ಮೇಲೆ ವರದಹಸ್ತವಿಟ್ಟು ಮಹಾರಾಜರು ಆಶೀರ್ವದಿಸಬೇಕು ಮಾತ್ರ!

ರಾಜಾರಾಮ—ಅಹಹ! ಸಂತಾಜಿರಾವ, ನೀವು ಅಬಾಸಾಹೇಬರ ನಿಜವಾದ ಶಿಷ್ಯರಿರುವಿರಿ. ನೀವು ಅಬಾಸಾಹೇಬರ ಗರಡಿಮನೆಯಾಡಿದ ವಸ್ತಾದರಿರುವಿರಿ! ನನ್ನ ಈಗಿನ ಕಂಗಾಲ ಸ್ಥಿತಿಯಲ್ಲಿ ನಾನೇನು ನಿಮಗೆ ಇನಾಮು ಕೊಡಲಿ? ರಾಮಚಂದ್ರಪಂತ, ಘೋರ್ಪಡೆ ಸರದಾರರಿಗೆ ವಸ್ತ್ರ, ಭೂಷಣಗಳನ್ನು ಉಡುಗೊರೆಯಾಗಿ ಕೊಡಿರಿ. ಸಂತಾಜಿ ಘೋರಪಡೆ ಮಮಲಿಕತಮದಾರರವರ ಮಸ್ತಕಕ್ಕೆ ಮಂದಿಲು ಹಾಕಿರಿ. ಬಹಿರ್ಜಿ, ಮಾಲೋಜಿ, ಇಂದು ನಿಮ್ಮ ಈ ಅರ್ಜುನನ ಅಂಗರಕ್ಷಣದ ಕಾರ್ಯವನ್ನು ನೀವು ಚನ್ನಾಗಿ ಮಾಡಿದಿರಿ. ಬಹಿರ್ಜೀ, ನಿಮಗೆ ನಾನು ''ಹಿಂದುರಾವ'' ಎಂಬ ಬಿರುದು ಕೊಡುವೆನು. ಮಾಲೋಜಿ, ನಿಮ್ಮ ಹಿಮ್ಮತ ಬಾಹಾದರಿಗಾಗಿ ನಿಮಗೆ ''ಹಿಮ್ಮತಬಾಹದರ'' ಎಂಬ ಬಿರುದು ಕೊಡುವೆನು. ಅದರಂತೆ ನಮ್ಮ ಯಾದವವೀರರಾದ ರೂಪಾಜಿ, ಪದಾಜಿ,

ನಿಮ್ಮ ಕಾರ್ಯವು ಮಹತ್ತರವಾದದ್ದು, ಇಂದಿಗೆ ಕ್ಷೀಣ ವೈಭವನಾಗಿರುವ ರಾಜಾರಾಮನು ನಿಮಗೇನು ಕೊಡಲು ಸಮರ್ಥನಿರುವನು? ಆದರೂ ಮಹಾರಾಷ್ಟ್ರ ವೈಭವವು ನಿಮ್ಮಂಥ ಕರ್ತೃತ್ವಶಾಲಿಗಳ ಕರ್ತೃತ್ವದಿಂದಲೇ ಹೆಚ್ಚಬೇಕಾಗಿರುವದು. ಈ ಕಾಲದಲ್ಲಿ ನಾನು ನಿಮಗೆ ಕೊಡುವ ಬಿರುದುಗಳಿಂದಲೇ ನೀವು ಸಂತುಷ್ಟರಾಗತಕ್ಕದ್ದು.

ಈ ಮೇರೆಗೆ ನುಡಿದು ರಾಜಾರಾಮ ಮಹಾರಾಜರನು ಬೇರೆ ಬೇರೆ ಶೂರರಿಗೆ ಅವರವರ ಯೋಗ್ಯತೆಯಂತೆ ಬೇರೆ ಬೇರೆ ಬಿರುದುಗಳನ್ನು ಕೊಡುತ್ತಿರಲು, ರಾಜಕುವರ ರವರು ದರ್ಬಾರವನ್ನು ಪ್ರವೇಶಿಸಿದರು. ಆಗ ಯಾವತ್ತು ದರ್ಬಾರದವರು ಜಯಘೋಷ ಮಾಡುತ್ತ ಅತ್ಯಂತ ಪೂಜ್ಯ ಬುದ್ಧಿಯಿಂದ ವಂದಿಸುತ್ತ ಆ ಶಿವಪುತ್ರಿಯನ್ನು ಸತ್ಕರಿಸಿದರು. ರಾಜಾರಾಮ ಮಹಾರಾಜರು ತಮ್ಮ ಚರಣಕ್ಕೆರಗಿದ ತಂಗಿಯನ್ನು ಬಹುಮಾನಪೂರ್ವಕ ಸತ್ಕರಿಸಿದರು. ಆಗ ರಾಜಕುವರಳು ತನ್ನ ಶೂರ ಅನುಯಾಯಿಗಳನ್ನು ಕುರಿತು—ವೀರರೇ, ಮಹಾರಾಜರ ವೈಭವದ ಅಭಿವೃದ್ಧಿಯ ಎರಡನೆಯ ಚಿನ್ಹವಾಗಿರುವ, ಹಾಗು ಬಾದಶಹ ನಿಂದ ಮಹಿಮರಾತಬವನ್ನು ಪಡೆದಿರುವ, ಅದರಂತೆ ಇಪ್ಪತ್ತೈದುಸಾವಿರ ಕುದುರೆಗಳ ಸರದಾರಿಕೆಯಿದ್ದ ಗಣೋಜಿರಾವ ಶಿರ್ಕೆಯವರನ್ನು ಮಹಾರಾಜರ ಮುಂದೆ ತಂದು ಹಾಕಿರಿ, ಎಂದು ಆಜ್ಞಾಪಿಸಲು, ಆ ಶಿವಪುತ್ರಿಯ ಅಪ್ಪಣೆಯಂತೆ ಮರಾಟ ವೀರರು ಗಣೋಜಿ ಶಿರ್ಕೆಯನ್ನು ಮಹಾರಾಜರ ಎದುರಿಗೆ ತಂದು ನಿಲ್ಲಿಸಿದರು. ಆಗ ರಾಜಕುವರಳು, ತನ್ನ ಪತಿಯಾದ ಗಣೋಜಿರಾವ ಶಿರ್ಕೆಯನ್ನು ಕುರಿತು—ನೋಡಿದಿರೇನು? ಮಹಾರಾಷ್ಟ್ರ ಧರ್ಮಕ್ಕಾಗಿ ತಮ್ಮ ಪ್ರಾಣವನ್ನು ಅರ್ಪಿಸಲು, ಸಿದ್ಧರಾಗಿರುವ ಈ ವೀರರನ್ನು ಕಣ್ತೆರೆದು ನೋಡಿದಿರೇನು? ಇವರ ಮುಖಗಳು ಅಭಿಮಾನದ ತೇಜಸ್ಸಿನಿಂದ ಹ್ಯಾಗೆ ಲಕಲಕಿಸುವ ವೆಂಬದನ್ನು ಚೆನ್ನಾಗಿ ನೋಡಿದಿರಾ? ಶಿರ್ಕೆ ಕುಲಭೂಷಣಾ, ಇನ್ನಾದರೂ ನಿಮ್ಮ ಅಂತಃಕರಣದಲ್ಲಿ ಮಹಾರಾಷ್ಟ್ರಕಾರ್ಯದ ಅಭಿಮಾನವು ಉತ್ಪನ್ನವಾಗಲಿ. ಶಿವಪ್ರಭುವಿನ ಜ್ಯೇಷ್ಠ ಪುತ್ರರೂ, ವೀರಶಿರೋಮಣಿಗಳೂ, ನನ್ನ ಅಣ್ಣಂದಿರೂ ಆದ ಸಂಭಾಜಿ ಮಹಾರಾಜರನ್ನು ಮೋಸದಿಂದ ಅಲಮಗೀರನು ತುಳಾಪುರದಲ್ಲಿ ಕ್ರೂರತನದಿಂದ ಕೊಲ್ಲಿಸಿದರೂ, ಎದೆ ಗುಂದದೆ ಈ ದೇವಪುತ್ರರಾದ ಮಹಾರಾಷ್ಟ್ರ ವೀರರು ರಾಷ್ಟ್ರಕಾರ್ಯಕ್ಕಾಗಿ ತೋಳುತಟ್ಟಿ ಎದೆಗೊಟ್ಟು ಹ್ಯಾಗೆ ಸಿದ್ಧರಾಗಿರುವರೆಂಬದನ್ನು ವೀರ ಶಿರೋಮಣಿಗಳಾದ ನೀವು ಚನ್ನಾಗಿ ನೋಡಿರಿ. ಶಿರ್ಕೆ ಕುಲಭೂಷಣಾ, ಆಬಾಸಾಹೇಬರ ಸಲುವಾಗಿ ನಾನು ನಿಮ್ಮನ್ನು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ. ಭೋಸಲೆ ಮನೆತನದ ದ್ವೇಷವನ್ನು ಇಲ್ಲಿಗೆ ಸಾಕು ಮಾಡಿರಿ; ಶೌರ್ಯ ಸಾಗರಾ, ದೈವಹೀನನಾದ ಈ ರಾಜಾರಾಮನ ಸಲುವಾಗಿ ನಾನು ಪುನಃ ಪುನಃ ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ, ನಮ್ಮನ್ನು ನೀವು ಉಡಿಯಲ್ಲಿ ಹಾಕಿಕೊಳ್ಳಬೇಕು.

ಈ ಮೇರೆಗೆ ರಾಜಕುವರಳು ನುಡಿಯುವದನ್ನೆಲ್ಲ ಗಣೋಜಿರಾವ ಶಿರ್ಕೆಯು ಮೋರೆ ತಗ್ಗಿಸಿ ಸುಮ್ಮನೆ ಕೇಳುತ್ತಲಿದ್ದನು. ಯುದ್ಧದಲ್ಲಿ ಆತನಿಗೆ ಬಲವಾದ ಗಾಯಗಳಾದ್ದರಿಂದ, ವಿಸ್ಮೃತಿ ಹೊಂದಿದ್ದ ಆತನಿಗೆ, ತನ್ನನ್ನು ಸೆರೆಹಿಡಿದಾಕೆಯು ತನ್ನ ಹೆಂಡತಿಯಾದ ರಾಜ

ಕುವರಳೆಂಬದು ಈ ವೆರೆಗೆ ಗೊತ್ತಾಗ್ಗಿದ್ದಿಲ್ಲ; ಆದರೆ ಈಗ ಆ ಸಂಗತಿಯು ಆತನಿಗೆ ಗೊತ್ತಾದ್ದರಿಂದ, ಉದ್ವಿಗ್ನ ಚಿತ್ತದಿಂದ ಆತನು ಒಮ್ಮಿಂದೊಮ್ಮೆ ನುಡಿದನೇನಂದರೆ— ಏನು? ನನ್ನನ್ನು ನನ್ನ ವೀರ ಪತ್ನಿಯು ಸೆರೆಹಿಡಿದಳೇ? ಧನ್ಯಳು! ರಾಜಕುವರಳು ಪರಮ ಧನ್ಯಳು! ಈಗ ಸಂಬಾಜಿಯ ದುರವಸ್ಥೆಯು ನನಗೆ ಪ್ರಾಪ್ತವಾಯಿತಲ್ಲ! ಸೆರೆ ಸಿಕ್ಕ ಸಂಬಾಜಿಯನ್ನು ಔರಂಗಜೇಬನು ದರ್ಬಾರದಲ್ಲಿ ಅವಮಾನಗೊಳಿಸಿದನು. ಆದರೆ ಇಲ್ಲಿ ನನ್ನ ಪ್ರಾರ್ಥನೆಯು ನಡೆದದೆ. ಇನ್ನು ನಾನು ಭೋಸಲೆಯ ವಂಶವನ್ನು ನಿರ್ವಂಶ ವಮಾಡುವ ಪ್ರತಿಜ್ಞೆಯನ್ನು ಭ್ರಷ್ಟಗೊಳಿಸಲಾ? ಹೀಗೆ ಭ್ರಷ್ಟ ಪ್ರತಿಜ್ಞನಾಗುವ ಮೊದಲೆ ನನ್ನ ಪ್ರಾಣವು ಯಾಕೆ ಹೋಗಿರಲಿಕ್ಕಿಲ್ಲ? ಎಲ! ಈ ಖಂಡ್ಯಾಚೀಟನೀಸನು ಇಲ್ಲಿಯೇ ಇರುವನಲ್ಲ! ಈ ನೀಚನು ನನ್ನ ಹೆಂಡತಿಯ ಪಾತಿವ್ರತ್ಯೆ ಭಂಗಮಾಡಿರುವನಲ್ಲವೆ? ಇಂಥ ನೀಚನ ಮುಂದೆ ಹೀಗೆ ನನ್ನ ಅವಮಾನವಾಗಬೇಕೆ? ಇಂಥ ಪ್ರಸಂಗದಲ್ಲಿ ನಾನು ಸ್ತೋತ್ರ ಪ್ರಿಯನಾಗಿ ನನ್ನ ಪ್ರತಿಜ್ಞೆಯನ್ನು ಮರೆಯಲಾ? ನನ್ನ ಪ್ರಿಯಬಂಧುವಾದ ರಾಣೋಜಿಯು ಎಲ್ಲಿರುವನು? ಬೇಡ, ನನ್ನನ್ನು ಸೆರೆ ಹಿಡತಂದಿರುವವರ ದೆಯೆಗೆ ಪಾತ್ರ ವಾಗುವ ಹೀನ ಪ್ರಸಂಗವು ನನ್ನ ಪಾಲಿಗೆ ಬರಬೇಡ! ಅದರಲ್ಲಿ, ಈ ದುಷ್ಟ ಜಾರಣ ಯಿಂದಂತು ನನಗೆ ಜೀವದಾನವು ಸರ್ವಥಾ ಬೇಡ! ಎಂದು ನುಡಿಯುತ್ತಿರಲು, ರಾಜಾ ರಾಮು ಮಹಾರಾಜರು ಗಣೋಜಿಯನ್ನು ಕುರಿತು

''ದಾದಾಸಾಹೇಬ, ಬೇಡಿರಿ, ಶಿವಪ್ರಭುವಿನ ಪವಿತ್ರ ಪುತ್ರಿಯ ವಿಷಯವಾಗಿ ಹೀಗೆ ಅಭದ್ರ ಮಾತುಗಳನ್ನಾಬೇಡಿರಿ. ಹತಭಾಗ್ಯನಾದ ಈ ರಾಜಾರಾಮನು ನಿಮಗೆ ನಮಸ್ಕಾರ ಮಾಡುತ್ತಾನೆ, ಅವನನ್ನು ಬದುಕಿಸಿಯಾದರೂ ಬದುಕಿಸಿರಿ, ಕೊಂದಾದರೂ ಕೊಲ್ಲಿರಿ!'' ಎಂದು ಪ್ರಾರ್ಥಿಸಿ, ನಿಜವಾಗಿಯೇ ಆ ಸುಜನನು ಗಣೋಜಿಯನ್ನು ವಂದಿಸಿದನು. ಆಗ ಸಂತಾಜಿ ಘೋರಪಡೆಯು ಸಂತಾಪಗೊಂಡು—''ಇವನನ್ನು ಇಲ್ಲಿಯೇ ತುಂಡರಿಸಲಾ'' ಎಂದು ಗಣೋಜಿಯ ಮೇಲಿನ ಸಿಟ್ಟಿನಿಂದ ವಟಗುಟ್ಟುತ್ತ ಹಲ್ಲು ಕಡಿಯ ಹತ್ತಿದನು. ಆಗ ಗಣೋಜಿಯು ರಾಜಾರಾಮನನ್ನು ಕುರಿತು—

ಗಣೋಜಿ—ನಾನು ನಿನ್ನನ್ನು ಬದುಕಿಸಲೋ ಕೊಲ್ಲಲೋ? ಸೆರೆಯಾಳಾದ ನನ್ನನ್ನು ಹೀಗೆ ಪ್ರಾರ್ಥಿಸುವದರಲ್ಲಿ ಏನು ಅರ್ಥವಿದೆ? ರಾಜಾರಾಮಾ ನಾನು ನಿನ್ನನ್ನು ಬದುಕಿಸುವ ದೂಯಿಲ್ಲ, ಕೊಲ್ಲುವದೂಯಿಲ್ಲ, ಶಿವಪುತ್ರಾ, ನೀನು ಸುಖದಿಂದ ರಾಜ್ಯವಾಳು! ನನ್ನನ್ನು ಬಿಟ್ಟು ಬಿಡು. ನನ್ನ ತಮ್ಮನಾದ ರಾಣೋಜಿಯನ್ನು ಕೇಳಿದ ಹೊರತು, ನಾನು ಏನೂ ಮಾಡುವಹಾಗಿಲ್ಲ, ನನ್ನೊಬ್ಬನ ಪ್ರತಿಜ್ಞಾಭಂಗದಿಂದಾಗುವ ಪ್ರಯೋಜನವೇನು? ನನ್ನ ತಮ್ಮನ ಹಾಗು ನನ್ನ ಅನುಯಾಯಿಗಳ ಪ್ರತಿಜ್ಞಾಭಂಗವಾಗಲೇಬೇಕು. ಶಿವಪ್ರಭುವಿನ ಸ್ವರಾಜ್ಯ ಸ್ಥಾಪನೆಯಲ್ಲಿ ಪ್ರಾಣವನ್ನರ್ಪಿಸಲು ಸಿದ್ಧವಾಗಿದ್ದ ಶಿರ್ಕೇ ಮನೆತನದವರು ನಾವು, ಆ ಪುಣ್ಯ ಪ್ರತಾಪಿಯಾದ ಶಿವಪ್ರಭುವಿನ ಮೇಲಿನ ಸಿಟ್ಟಿನಿಂದ, ಅಥವಾ ಸಾತ್ವಿಕನೂ, ಪಾಪಭೀರುವೂ ಆದ ನಿನ್ನ ಮೇಲಿನ ಸಿಟ್ಟಿನಿಂದ ನಿಮ್ಮ ಭೋಸಲೆ ಕುಲಕ್ಷಯ ಮಾಡುವ

ಪ್ರತಿಜ್ಞೆಯನ್ನು ಮಾಡಿರುವದಿಲ್ಲ. ನಿಮ್ಮ ದುಷ್ಟ ಅಣ್ಣನಾದ ಸಂಭಾಜಿಯು ತನ್ನ ಧರ್ಮ ಪತ್ನಿಯಾದ ಏಸೂಬಾಯಿಯ ತವರುಮನೆಯೆಂಬ ಅಭಿಮಾನವನ್ನು ಕೂಡ ಇಡದೆ, ನಮ್ಮ ಮನೆತನವನ್ನು ಹಾಳುಮಾಡಿ, ನಮ್ಮ ಮನೆಯಿದ್ದ ಸ್ಥಳದ ಮೇಲೆ ರಂಟೇಹೊಡಿಸಿದನು. ಆಗ ಜೀವ ಉಳಿಸಿಕೊಂಡು ಓಡಿಹೋಗಿದ್ದ ನಾವಿಬ್ಬರು ಅಣ್ಣತಮ್ಮಂದಿರು, ಸಂತಾಪದಿಂದ ನಿಮ್ಮ ಮನೆದಳದ ಮೇಲೆ ರಂಟೆಹೊಡೆಯುವ ಪ್ರತಿಜ್ಞೆಮಾಡಿ ಬಾದಶಹನನ್ನು ಕೂಡಿದ್ದೇವೆ; ಆದರೆ ರಾಜಾರಾಮಾ, ಈಗ ನಾನೇನು ಮಾಡಲಿ ಹೇಳು? ನನ್ನ ಬಂಧುವು ಪ್ರತಿಜ್ಞಾಭಂಗಕ್ಕೆ ಮನಸ್ಸು ಮಾಡಬಹುದೆ?

ರಾಜಕುವರ—ಪತಿದೇವಾ, ನನ್ನ ಮೇಲಿನ ನಿಮ್ಮ ಕೆಟ್ಟ ಸಂಶಯದಿಂದ ನೀವು ಭ್ರಾಂತರಾಗಿರುವಿರಿ! ಆದರೆ ಸದ್ಯಕ್ಕೆ ಅದೊತ್ತಟ್ಟಿಗಿರಲಿ, ಈಗ ನೀವು ಹೋಗಿಬರ್ರಿ. ಮೈದುನರು ಪ್ರತಿಜ್ಞೆಯನ್ನು ಬಿಡುವಂತೆ ಯತ್ನ ಮಾಡಿರಿ. ಸ್ವಜನರ ಮೇಲೆ ತಿರುಗಿ ಬಿದ್ದಿದ್ದ ನಿಮ್ಮ ಪರಿವಾರದ ಮನಸ್ಸನ್ನು ತಿರುಗಿಸಿ, ಈ ಸ್ವಜನರ ಸಹಾಯಕ್ಕಾಗಿ ಬರುವಂತೆ ಮಾಡಿರಿ. ನಿಮ್ಮ ಮನಸ್ಸಿನ ಸಂಶಯವನ್ನು ನಾನು ದೂರ ಮಾಡುವೆನು; ಆದಾಗದಿದ್ದರೆ ಸೀತಾ ಮಾತೆಯಂತೆ ಅಗ್ನಿ ಕಾಷ್ಠಭಕ್ಷಣಮಾಡಿ ನಿಮ್ಮ ಸಂಶಯವನ್ನು ದೂರಮಾಡುವೆನು. ನೀವು ಮೊದಲು ಸ್ವದೇಶಕ್ಕೆ ಬಿದ್ದಿರುವ ಕಲೆಯನ್ನು ಇಲ್ಲದಂತೆ ಮಾಡಿ, ಆಮೇಲೆ ಸ್ವಪತ್ನಿಯ ಪಾತಿವ್ರತ್ಯಕ್ಕೆ ಬಿದ್ದಿದ್ದ ಕಲೆಯನ್ನು ಇಲ್ಲದಂತೆ ಮಾಡಿರಿ. ಮೊದಲು ದೇಶದ ಸಂಸಾರವು, ಆ ಮೇಲೆ ತನ್ನ ಸಂಸಾರವು. ಮೊದಲು ತಾಯಿಯ ವಿಚಾರಮಾಡಿರಿ. ಆ ಮೇಲೆ ಹೆಂಡತಿಯ ವಿಚಾರ ಮಾಡಿರಿ.

ಹೀಗೆ ರಾಜಕುವರಳು ನುಡಿದು ಸುಮ್ಮನಾಗಲು, ಸಭೆಯಲ್ಲಿ ಸ್ತಬ್ಧತೆಯುಂಟಾಯಿತು, ರಾಜಾರಾಮ ಮಹಾರಾಜರು ಗಣೋಜಿ ಶಿರ್ಕೆಯನ್ನು ಬಂಧಮುಕ್ತಮಾಡಿ, ಇನ್ನು ನೀವು ಬೇಕಾದಲ್ಲಿಗೆ ಹೋಗಬಹುದೆಂದು ಹೇಳಿದರು. ರಾಜಕುವರಳು ಪತಿಯನ್ನು ವಂದಿಸಿದಳು. ಈ ಪ್ರಸಂಗದಲ್ಲಿ ಗಣೋಜಿ ಶಿರ್ಕೆಯ ಹೃದಯವು ಬಹುಮಟ್ಟಿಗೆ ಮಿದುವಾಯಿತು. ಆತನು ತನ್ನ ಹೆಂಡತಿಯ ವಿಷಯವಾಗಿ ತನ್ನೊಳಗೆ—''ನಾನು ವ್ಯರ್ಥ ಸಂಶಯಕ್ಕೆ ಒಳಗಾಗಿರುವೆನೋ ಏನು? ರಾಜಕುವರಳ ಸರಳ ಹೃದಯವನ್ನೂ, ಆಕೆಯ ನಿಷ್ಕಲಂಕ ಮುಖವನ್ನೂ, ಆಕೆಯ ಸ್ವಾಭಾವಿಕ ಭಾಷಣವನ್ನೂ, ಕುರಿತು ಆಲೋಚಿಸಿದರೆ, ಆ ಪರಮ ಪೂಜ್ಯನಾದ ಶಿವಪ್ರಭುವಿನ ಹೊಟ್ಟೆಯ ಮಗಳಲ್ಲಿ ನಾನು ಹೀಗೆ ಅವಿಚಾರದಿಂದ ನೆರೆದ ಸಭೆಯಲ್ಲಿ ದೋಷವನ್ನು ಆರೋಪಿಸಹಬಹುದೆ?'' ಎಂದು ಪಶ್ಚಾತ್ತಾಪಪಡುತ್ತ, ತನ್ನ ಸಂತಾಪದ ವೃತ್ತಿಯನ್ನು ಹಳಿದು ಕೊಳ್ಳುತ್ತ ದರ್ಬಾರದಿಂದ ಹೊರಗೆ ಹೋಗದೇ ಸುಮ್ಮನೆ ನಿಂತುಕೊಂಡನು. ಇತ್ತ ರಾಮಚಂದ್ರಪಂತನು ಸಭೆಯ ಸ್ತಬ್ಧತೆಯನ್ನು ನಷ್ಟಪಡಿಸಿ ಮಹಾರಾಜರನ್ನು ಕುರಿತು—ಮಹಾರಾಜ, ನನ್ನದೊಂದು ವಿಜ್ಞಾಪನೆಯಿರುವದು. ಸಂತಾಜಿಯ ಪರಾಕ್ರಮವು ಬಹು ಶ್ಲಾಘನೀಯವಾದದ್ದು. ತಾನಾಜಿಯಂತೆ ಆತನು ವಿಲಕ್ಷಣ ಸಾಹಸ ಮಾಡಿದ್ದಾನೆ. ಈಗ

ಆತನಿಗೆ ಕೊಟ್ಟಿರುವ ಬಿರುದು ಆತನ ಯೋಗ್ಯತೆಗೆ ಸಾಲದು. ಜೇಡಹುಳದ ಬಲೆಯಂತೆ ಎರಡು ಮೂರು ಲಕ್ಷ ಸೈನ್ಯವು ಬಾದಶಹದ ಡೇರೆಯನ್ನು ದಟ್ಟವಾಗಿ ಮುತ್ತಿರಲು, ಅದನ್ನು ಭೇದಿಸಿ ಡೇರೆಯ ಸುವರ್ಣ ಕಲಶವನ್ನು ಕಿತ್ತುಕೊಂಡು ಬಂದ, ಹಾಗು ಭಾವಣಿಯನ್ನು ಸುಲಿದುಕೊಂಡು ಬಂದ ಸಂತಾಜಿಯ ಪರಾಕ್ರಮವು ಚಕ್ರವ್ಯೂಹವನ್ನು ಭೇದಿಸಿಹೋದ ಅಭಿಮನ್ಯುವಿನ ಪರಾಕ್ರಮಕ್ಕಿಂತಲೂ ಶ್ರೇಷ್ಠವಾಗಿರುವುದು ಅದರಂತೆ, ಪೂರ್ಣವಾದ ಸಿದ್ಧತೆಯಿಂದ ೨೦-೨೫ ಸಾವಿರ ಸೈನ್ಯದೊಡನೆ ಹಲ್ಲು ಕಡಿಯುತ್ತ ರಾಯಗಡದ ಮೇಲೆ ಸಾಗಿ ಹೋಗುತ್ತಿದ್ದ ಅಸಾದಖಾನನೆಂಬ ಜರಾಸಂದನನ್ನು ಸೋಲಿಸಿದ ಸಂತಾಜಿಯು ಭೀಮ. ಪರಾಕ್ರಮುವನ್ನು ಮಹಾರಾಜರು ಚಿತ್ತೈಸಬೇಕು. ಈಗಿನ ನಮ್ಮ ಸ್ಥಿತಿಯಲ್ಲಿ ಹಂಬೀರ ರಾಯನಂಥ ವೀರನು ಸಂತಾಜಿಯು ಹೊರತು ಮತ್ತೊಬ್ಬನಿಲ್ಲ. ಹಂಬೀರರಾಯನ ತರುವಾಯ ಯಾರೂ ಉಳಿದಿರುವದಿಲ್ಲ; ಆದ್ದರಿಂದ ಮಹಾರಾಜರು ಹಂಬೀರರಾಯನ ಮುಖ್ಯ ಸೇನಾಪತಿಯ ಅಧಿಕಾರವನ್ನು ಸಂತಾಜಿಗೆ ದಯಪಾಲಿಸಬೇಕು. ಅನ್ನಲು, ರಾಜಾರಾಮನು—ನಿಜವು, ರಾಮಚಂದಪಂತ, ನೀವಾಡುವದೇ ನಮಗೆ ನಿಜವಾಗಿ ತೋರುತ್ತದೆ. ನನ್ನ ಮನಸ್ಸಿನಲ್ಲಿ ಧನಾಜಿ ಜಾಧವರಿಗೆ ಸೇನಾಧಿಪತಿಯ ಅಧಿಕಾರವನ್ನು ಕೊಡಬೇಕೆಂದು ಇತ್ತು, ನಿಮ್ಮ ಮಾತಿನಂತೆ ಆ ಅಧಿಕಾರವನ್ನು ನಾನು ಸಂತಾಜಿಗೆ ಕೊಡುತ್ತೇನೆ. ಮರಾಠಾ ಶೂರ ಸರದಾರನಾದ ಸೇನಾಪತಿ ಸಂತಾಜಿ ಘೋರಪಡೆ ಮಮಲಕತಮದಾರ, ನಾನು ನಿಮಗೆ ಈ ಖಡ್ಗವನ್ನು ಕೊಡುತ್ತೇನೆ ತಕ್ಕೊಳ್ಳಿರಿ ಪ್ರಲ್ಹಾದ ಪಂತ, ಇವರಿಗೆ ವಸ್ತ್ರಗಳನ್ನೂ ಸಿಕ್ಕಾ ಕಠಾರಿಗಳನ್ನೂ ಕೊಡಿರಿ. ತಂಗೀ ರಾಜಕುವರ, ಅಬಾಸಾಹೇಬರ ಸಲುವಾಗಿ ಸೇನಾಪತಿಯ ಹಣೆಗೆ ಕುಂಕುಮವನ್ನು ಹಚ್ಚಿ ಈ ವಸ್ತ್ರವ ಕೊಡಮ್ಮಾ!

ಈ ಮೇರೆಗೆ ಉಡುಗರೆಯ ಸಮಾರಂಭವು ನಡೆದಿರಲು, ಹೊರಗೆ ವಿಜಯ ಚಿನ್ಹವಾಗಿ ಜುಲಾಯಿಸುತ್ತಿರುವ ಅಸಮದಖಾನನ ಐದು ಆನೆಗಳು ಬೃಂಹಿಸುತ್ತಿದ್ದವು. ಸಂತಾಜಿಯ ವಿಜಯಶಾಲಿಯಾದ ಕುದುರೆಯು ಉಚ್ಚಸ್ವರದಿಂದ ಹೇಕರಿಸುತ್ತಿತ್ತು, ವಿಜಯ ಸೂಚಕ ವಾದ್ಯಗಳು ಧ್ವನಿಗೈಯ್ಯುತ್ತಿದ್ದವು. ಅಷ್ಟರಲ್ಲಿ ಮತ್ತೊಬ್ಬ ಮರಾಟ ವೀರನು ವಿಜಯೋತ್ಸಾಹ ದಿಂದ ದರ್ಬಾರವನ್ನು ಪ್ರವೇಶಿಸಿದನು. ಆತನನ್ನು ನೋಡಿದ ಕೂಡಲೆ ರಾಜಾರಾಮ ಮಹಾರಾಜರೂ, ಸೇನಾಪತಿ ಸಂತಾಜಿಯೂ, ರಾಜಕುವರಳೂ, ಖಂಡೋಬಾ ಚೀಟನೀಸನೂ, ಪ್ರಲ್ಹಾದಪಂತ-ರಾಮಚಂದ್ರಪಂತರೂ ಒಮ್ಮೆಲೆ ಎದುರುಗೊಳ್ಳುವದಕ್ಕಾಗಿ ಹೋದರು. ಹೀಗೆ ದರ್ಬಾರದಲ್ಲಿ ತನಗಾದ ಬಹುಮಾನದಿಂದ ಸಂತುಷ್ಟವಾಗಿ ಧನಾಜಿ ಜಾಧವನು ದರ್ಬಾರದಲ್ಲಿ ಪ್ರವೇಶಿಸಿ ಸಿಂಹಾಸನಕ್ಕೆ ಮುಜುರೆಮಾಡಿ ದರ್ಬಾರವನ್ನುದ್ದೇಶಿಸಿ—ಮಹಾರಾಜರೇ, ಶೂರ ಸರದಾರರೇ, ಫಲಟಣದ ಬೈಲಲ್ಲಿ ಬಾದಶಹನ ಸೈನ್ಯವನ್ನು ನನ್ನ ಮೈಮೇಲೆ ಬರಮಾಡಿಕೊಂಡದ್ದು ತಮಗೆ ಗೊತ್ತೇಯಿರುವದು. ನಾನು ಅಲ್ಲಿ ಮೊಗಲರ ದಂಡಿನೊಡನೆ ನಾಲ್ಕೈದು ಕಾಳಗಗಳನ್ನು ಮಾಡಿದೆನು. ಆಗ ನಮ್ಮ ಶಿಲೇದಾರರು

ತೋರಿಸಿದ ಪರಾಕ್ರಮವನ್ನು ನಾನೇನು ವರ್ಣಿಸಲಿ? ಮೊಗಲರ ತೋಪುಗಳ ಗುಂಡುಗಳು ಸುರಿಯುತ್ತಿದ್ದರೂ, ಅವನ್ನು ಲೆಕ್ಕಿಸದೆ ನಮ್ಮ ವೀರರು ಮೊಗಲ ಸೈನ್ಯವನ್ನು ತುಂಡರಿಸ ಹತ್ತಿದರು. ಮೊಗಲ ಸೈನ್ಯವು ಹತವೀರ್ಯವಾಯಿತು. ಶಾಸ್ತೆಖಾನ, ರಣಮಸ್ತಖಾನರ ಐದು ತೋಪುಗಳು ನಮ್ಮ ಕೈಸೇರಿದವು. ಆದರೆ ಮರಾಟರ ಮರ್ಮವನ್ನರಿತ ಶಾಸ್ತೆಖಾನನು ತನ್ನ ದಂಡಿನಲ್ಲಿದ್ದ ಮರಾಟರ ದಂಡನ್ನು ನಮ್ಮೊಡನೆ ಕಾದಲಿಕ್ಕೆ ಕಳಿಸಿದನು. ಆಗ ಸ್ವಜನರ ಸಂಹಾರಕ್ಕೆ ನನ್ನ ಮನಸ್ಸು ಒಪ್ಪಲಿಲ್ಲ. ನಮ್ಮ ಮೇಲೆ ಬಿದ್ದ ಸೈನ್ಯವನ್ನು ಪ್ರತಾಪದಿಂದ ಹಿಂದಕ್ಕೆ ಸರಿಸಿ, ಗೆದ್ದ ತೋಫುಗಳನ್ನು ತಕ್ಕೊಂಡು ಮಹಾರಾಜರ ಸನ್ನಿಧಿಗೆ ಬಂದಿದ್ದೇನೆ. ಎಂದು ನುಡಿಯಲು, ಮಹಾರಾಜರು ಸಂತುಷ್ಟಚಿತ್ತರಾಗಿ—ಶಾಬಾಸ್! ಭಿಷ್ಮಾ ಚಾರ್ಯ, ಶಾಬಾಸ್! ನಿಮ್ಮ ಪರಾಕ್ರಮವು ಧನ್ಯವಾದದ್ದು. ಆದರೆ ಧನಾಜಿರಾವ, ಇಂದು ನಾನು ನಿಮಗೇನು ಕೊಡಲಿ? ಪ್ರಲ್ಹಾದಪಂತ ನಾನು ಇವರಿಗೆ ಏನು ಕೊಡಲಿ? ಎಂದು ಕೇಳಿದರು ಅದಕ್ಕೆ ಪ್ರಲ್ಹಾದಪಂತರು—ಮಹಾರಾಜ ಪ್ರತ್ಯಕ್ಷ ಜಯಸಿಂಗ ರಾಯರಿಗೆ ನಾವು ಇನ್ನ ಎರಡನೆಯ ಬಿರುದನ್ನೇನು ಕೊಡಬೇಕು? ಧನಾಜಿ, ನಾವು ಇಂದು ನಿಮಗೆ ''ಜಯಸಿಂಗ ರಾವ'' ಎಂಬ ಬಿರುದುಕೊಡುವದಕ್ಕಾಗಿ ಮಹಾರಾಜರನ್ನು ಪ್ರಾರ್ಥಿಸುತ್ತೇವೆ.

ಈ ಮೇರೆಗೆ ಕಿತಾಬು ಕೊಡುವ ಸಮಾರಂಭವು ನಡೆದಿರುವಾಗ ಯಾವತ್ತೂ ಸರದಾರರು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಂಡಿದ್ದರು. ಮಹಾರಾಜರು ಬಲಗಡೆಗೆ ರಾಜಕುವರಳನ್ನು ಕುಳ್ಳಿರಿಸಿಕೊಂಡಿದ್ದರು. ಎಡಗಡೆಗೆ ಗಣೋಜಿ ಶಿರ್ಕೆಯನ್ನು ಧನಾಜಿಯೂ, ಸ್ವತಃ ಮಹಾರಾಜರೂ ಜುಲುಮೆಯಿಂದ ಕುಳ್ಳಿರಿಸಿದ್ದರು. ಮುತ್ಸದ್ದಿಗಳೂ, ಅಧಿಕಾರಿಗಳೂ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಂಡಿದ್ದರು, ತಾಂಬೂಲ, ಸುಗಂಧದ್ರವ್ಯಗಳು, ಮಾಲೆಗಳು ಇವುಗಳ ಸಮರ್ಪಣ ಸಮಾರಂಭವು ನಡೆದಿತ್ತು, ಈ ಪ್ರಸಂಗದಲ್ಲಿ ಮಹಾ ರಾಜರಿಗೆ ರಾಜ್ಯಾರೋಹಣ ಸಮಾರಂಭವನ್ನು ಯಾವಾಗ ಮಾಡಿಸಬೇಕೆಂಬ ಮಾತು ಹೊರಟಿತು. ಆಗ ಪ್ರಲ್ಹಾದಪಂತರು ಸಭೆಯನ್ನುದ್ದೇಶಿಸಿ–ಶೂರ ಸರದಾರರೇ, ಸ್ವಲ್ಪ ಸಮಾಧಾನ ತಾಳಿರಿ. ರಾಜ್ಯಾರೋಹಣ ಸಮಾರಂಭಕ್ಕೆ ತಕ್ಕ ಸಮಯವು ಇನ್ನೂ ಒದಗಿರು ವದಿಲ್ಲ, ಮರಾಟರ ದಂಡು ನಾಶ ವಾಗಿರುವದಿಲ್ಲ, ಸ್ಥಿರವಾಗಿರುತ್ತದೆಂಬದು ಇದೇ ಈಗ ಬಾದಶಹನಿಗೆ ಗೊತ್ತಾಗಿರುತ್ತದೆ. ಆತನು ಪಲ್ಹಾಳಗಡದ ಸುತ್ತು ಮುತು ತನ್ನ ದಂಡನ್ನು ಪರಸರಿ ಹತ್ತಿರುತ್ತಾನೆ. ರಾಯಗಡದ ಮೇಲೆ ಅಸದಖಾನನ ಹೊಸ ದಂಡನ್ನು ಕಳಿಸಿರುತ್ತಾನೆ. ಇನ್ನುರಾಯಗಡದ ಸ್ಥಿತಿಯು ಕಠಿಣವಾಯಿತೆಂದು ಹೇಳಬಹುದು. ಇಂಥ ಪ್ರಸಂಗದಲ್ಲಿ ನಾವು ರಾಜ್ಯರೋಹಣ ಸಮಾರಂಭವನ್ನು ಬದಿಗಿಟ್ಟು, ನಮ್ಮ ಸಂರಕ್ಷಣದ ಮಾರ್ಗವನ್ನು ಮೊದಲು ಕಂಡುಕೊಳ್ಳತಕ್ಕದ್ದು, ಬಾದಶಹನು ಮೊದಲು ಮಹಾರಾಷ್ಟ್ರವನ್ನು ಹತವೀರ್ಯ ವಾಗಿ ಮಾಡಿ, ಆಮೇಲೆ ಕರ್ನಾಟಕದಲ್ಲಿ ಮರಾಟರು ಇದ್ದರೋ ಇಲ್ಲವೋ ಎನಿಸ ಬಿಡಬೇಕೆಂದು ಮಾಡಿದ್ದಾನೆ. ಆದ್ದರಿಂದ ನಾನು ಈಗ ಸೂಚಿಸುವದೇನೆಂದರೆ ರಾಮ ಚಂದಪಂತ, ನೀವು ಮಿರಜಿಯಿಂದ ಪಲ್ಹಾಳಗಡ, ವಿಶಾಲಗಡ, ರಾಯಗಡವೆಂಬ ಕೋಟೆಗಳ

ಸಾಲು ಹಿಡಿದು ರಾಜ್ಯದ ಒಂದು ಮಗ್ಗಲಿನ ಸಂರಕ್ಷಣ ಮಾಡಿರಿ. ಮರಾಟರ ದಂಡು ಒಂದೇ ಸವನೆ ತಿರುಗಾಡುತ್ತಿರಲಿ. ಹಲವು ಹೊಸ ಸ್ಥಳಗಳಲ್ಲಿ ಚೌಥಾಯಿ, ಸರದೇಶಮುಖಿ, ಘಾಸಾದಾಣ ಇವುಗಳ ವಸೂಲ ಮಾಡತಕ್ಕದ್ದು. ಮೊಗಲ ದಟ್ಟಣೆಯು ಹೆಚ್ಚಾಗಿದ್ದಲ್ಲಿ ಪಾಳೇಗಾರರಂತೆ ಕೋಟೆಗಳ ಆಶ್ರಯ ಮಾಡಿಕೊಂಡು ಗಿಡಗಂಟೆಗಳಲ್ಲಿ ವಾಸಿಸಬೇಕು. ಅಲ್ಲಿಂದ ಮೊಗಲರನ್ನು ಪೀಡಿಸುತ್ತ ಹೊಸ ಹೊಸ ಪ್ರದೇಶಗಳನ್ನು ಕೈವಶ ಮಾಡಿಕೊಳ್ಳಬೇಕು. ಮೊಗಲರ ಜೋರು ಹೆಚ್ಚಾದರೆ ಹಿಂದಕ್ಕೆ ಸರಿಯಬೇಕು, ಮತ್ತೆ ಪ್ರಸಂಗ ನೋಡಿ ಮುಂದಕ್ಕೆ ಬಂದು ಮತ್ತೆ ಅವನ್ನು ಸ್ವಾಧೀನಪಡಿಸಿಕೊಳ್ಳಬೇಕು. ರಾಮಚಂದ್ರಪಂತರೇ, ಈ ಬಾಜೀ ಸರ್ಜೇರಾವ, ಈಪಾಸಣಕರ, ಈ ದೇಶಪಾಂಡೆ, ಈ ಮುರೇಖೊರಕರ ಮೊದಲಾದವರು ತಮ್ಮತಮ್ಮ ಪರಿವಾರದೊಡನೆ ಶಂಕರಾಜಿ ನಾರಾಯಣ ಇವರ ಅಪ್ಪಣೆಗೊಳಗಾಗಿ ನಿಮಗೆ ಸಹಾಯ ಮಾಡುವರು. ಸಿದ್ದೋಜಿಗುಜರವರು ಪಶ್ಚಿಮದ ಸಮುದ್ರ ದಂಡೆಯಲ್ಲಿ ತಮ್ಮ ಹಡಗುಪಡೆಯನ್ನು ಸಿದ್ಧಪಡಿಸಿ ಸಿದ್ದಿಯ ಕೈ ಕಾಲು ಆಡಿದಂತೆ ಮಾಡುವರು. ಉತ್ತರದ ಕಡೆಯ ವ್ಯವಸ್ಥೆಯನ್ನು ನಾವು ಅತ್ತ ಕಡಗೆ ಹೋದಬಳಿಕ ನೋಡಿಕೊಳ್ಳುವೆವು. ವೀರರೇ, ನೀವು ಉತ್ಕಟಭಾವನೆಯನ್ನು ತಾಳಿರಿ. ಆಳಿದರೆ, ರಾಜ್ಯವಾಳೋಣ. ಇಲ್ಲವೇ ಮಡಿಯೋಣ. ತ್ರಿಶಂಕುವಿನಂತೆ ಅತಂತ್ರವಾಗಿ ಮಾತ್ರ ಉಳಿಯೋಣ ಬೇಡ. ಯಾಕೆ ಗಣೋಜಿರಾವ, ನೀವು ನಮಗೆ ಸಹಾಯ ಮಾಡುವಿರಷ್ಟೇ?

ಗಣೋಜಿರಾವ—ಯಾರನ್ನು? ನನ್ನನ್ನು ಕೇಳುವಿರಲ್ಲವೇ? ರಾಜಕುವರಳು ನನ್ನನು ಜಯಿಸಿರುವದು ನಿಜವು; ಆದರೆ ಪಂತ, ನಮ್ಮ ಬಂಧುವಾದ ರಾಣೋಜಿಯನ್ನು ಕೇಳಿದ ಹೊರತು ನಾನುಏನೂ ಹೇಳಲಾರೆನು.

ರಾಜಕುವರ—ಸರಿ ಸರಿ! ಹಾಗೆ ಮಾಡುವದೇ ಯೋಗ್ಯವು. ಮೈದುನರಾದ ರಾಣೋಜಿ ರಾಯರನ್ನೂ, ಒಂದಷ್ಟು ಮರಾಟ ವೀರರನ್ನು ಕೂಡಿಕೊಂಡು ದೇಶಬಾಂಧವರ ಸಂಕಟ ನಿವಾರಣಕ್ಕಾಗಿ ಸಹಾಯ ಮಾಡುವದು ಯೋಗ್ಯವು.

ಗಣೋಜಿರಾವ—ರಾಜಕುವರ, ಇಂದಿನ ನಿನ್ನಪೌರುಷದ ಪ್ರತಾಪದಿಂದ ನನ್ನ ಕಠಿಣ ಹೃದಯವು ಕೂಡಾ ಮೃದುವಾಗಿದೆ. ಸ್ವಾತಂತ್ರ್ಯರಕ್ಷಣಕ್ಕಾಗಿ ಇಲ್ಲಿ ನೆರೆದಿರುವ ವೀರರ ದಿವ್ಯ ತೇಜಸ್ಸನ್ನೂ, ಯುದ್ಧೋತ್ಸಾಹವನ್ನೂ ನೋಡಿ ನನ್ನ ಬಾಹುಗಳು ಸ್ಫುರಿಸ ಹತ್ತಿವೆ. ಇಂದು ನನಗೆ ಆಬಾಸಾಹೇಬರ ಹಾಗು ಅವರ ದೇದಿಪ್ಯಮಾನ ಕಾಲದ ಸ್ಮರಣವಾಗಿ ನನ್ನ ದೇಶದ್ರೋಹದ ವಿಚಾರಗಳೆಲ್ಲ ಲಯವಾಗಹತ್ತಿವೆ. ನಿನ್ನ ಅಂತಃಕರಣವು ಪರಿಶುದ್ಧ ವಿದ್ದ ಹೊರತು, ನಿನ್ನಲ್ಲಿ ಇಂಥ ಪರಾಕ್ರಮವು ಇರಲಾರದು. ಮಲಿನ ಹೃದಯರ ಮುಖದಲ್ಲಿ ಇಂಥ ದಿವ್ಯಕಾಂತಿಯು ಹ್ಯಾಗೆ ಉಂಟಾದೀತು? ರಾಜಾರಾಮ, ಪ್ರಲ್ಹಾದಪಂತ, ಸಂಭಾಜಿಯು ಮುಸಲ್ಮಾನನಾಗುವದಕ್ಕೆ ಹೇಸಿ ಬಾದಶಹನ ಕೋಪಕ್ಕೆ ಗುರಿಯಾಗಿ ದುರ್ಮರಣ ಹೊಂದಿದನು; ಆದೆ ಈಗ ನಾನು ನಿಮ್ಮಿಂದ ಸಂಭಾವಿಸಲ್ಪಟ್ಟವನಾಗಿ ನನ್ನ ಘೋರ

ಪ್ರತಿಜ್ಞೆಯ ತ್ಯಾಗಮಾಡಿ ನಿಜವಾದ ಮರಾಟ ವೀರನಾಗಲಾ? ಸಂತಾಜಿ, ಧನಾಜಿರಾವ, ಗಣೋಜಿ ಶಿರ್ಕೆಯು ಈ ಪ್ರತಿಜ್ಞಾಭಂಗವು ನಿಮಗೆ ಮಾನ್ಯವಾಗುವದೇ? ವೀರ ಪುತ್ರೀ, ರಾಜಕುವರ, ನಿನ್ನ ಪತಿಯ ಪ್ರತಿಜ್ಞಾಭಂಗವು ಆತನ ಕ್ಷಾತ್ರಧರ್ಮಕ್ಕೆ ಒಪ್ಪುವದೆ?

ರಾಜಕುವರ— ಪತಿದೇವಾ, ನಮ್ಮ ಪತಿ, ಪತ್ನಿಯರ ಮಾರ್ಗಗಳು ಭಿನ್ನವಾದದ್ದರಿಂದ ದುರ್ದೈವದಿಂದ ನಾನು ಸೌಜನ್ಯದ ಉಲ್ಲಂಘನ ಮಾಡಿದ ಆರೋಪಕ್ಕೆ ಗುರಿಯಾಗ ಬೇಕಾಗಿರುವದು. ತಾವು ಸರ್ವಾಂಶದಿಂದ ನನಗೆ ಮಾರ್ಗದರ್ಶಕರೂ, ಮೋಕ್ಷದಾತೃಗಳೂ ಆಗಿದ್ದು, ನಾನು ತಮಗೆ ಬುದ್ಧಿಹೇಳುವ ಪ್ರಸಂಗವೊದಗಿದ್ದು ದುಃಖದ ಸಂಗತಿಯೇ ಸರಿ. ರಾಜದ್ರೋಹ ದೇಶದ್ರೋಹಗಳಂಥ ಪಾತಕಗಳು ಘಟಿಸುವದರಿಂದ ಮನುಷ್ಯರ ತೇಜೋಭಂಗವಾದದ್ದರ ಪರಿಣಾಮವೇ ಇದಾಗಿರುವದು! ಶಿರ್ಕೆ ಕುಲಭೂಷಣರೇ, ಕ್ಷತ್ರಿಯ ಕುಲಗುರುಗಳಾದ ಭಿಷ್ಮಾಚಾರ್ಯರು ತಾವು ಆಶೀರ್ವದಿಸಿದಂತೆ ದ್ರೌಪದಿಯ ಸೌಭಾಗ್ಯ ವನ್ನು ಕಾಯುವದಕ್ಕಾಗಿ ಪೃಥ್ವಿಯನ್ನು ನಿಷ್ಪಾಂಡವಿಯಾಗಿ ಮಾಡುವ ತಮ್ಮ ಘೋರ ಪ್ರತಿಜ್ಞಾಭಂಗದ ಉಪಾಯವನ್ನು ಯೋಚಿಸಲಿಲ್ಲವೆ? ಅದರಂತೆ ಮಹಾರಾಷ್ಟ್ರ ಭೂಮಾತೆಯ ಮರ್ಯಾದ ರಕ್ಷಣಕ್ಕಾಗಿ ತಮ್ಮ ನಿಷ್ಠುರ ಪ್ರತಿಜ್ಞಾಭಂಗವಾದರೆ ಅನ್ಯಾಯವೇನು? ವಿಕಾರವಶರಾಗಿ ಅವಿಚಾರದಿಂದ ಮಾಡಿದ ಪ್ರತಿಜ್ಞೆಯು ದೃಢ ವಾದದ್ದೇ? ಅದನ್ನು ಪಾಲಿಸುವದರಿಂದ ಹಿತವಾಗಬಹುದೆ?

ಗಣೋಜಿರಾವ— ರಾಜಕುವರ, ನೀನು ನನ್ನನ್ನು ಸಂಪೂರ್ಣವಾಗಿ ಜಯಸಿದೆಯೆಂದು ನಾನು ಹೇಳದೆ ಇರಲಾರೆನು. ಪತಿಯು ಆರಂಭಿಸಿದ ಕಾರ್ಯಕ್ಕೆ ಪತ್ನಿಯು ಅನುಕೂಲ ವಾಗುವದು ಆರ್ಯರಲ್ಲಿಯ ವಾಡಿಕೆಯ ಧರ್ಮವಾಗಿದ್ದು, ಇಂದು ನಾನು ಪತ್ನಿಯು ಆರಂಭಿಸಿದ ಕಾರ್ಯಕ್ಕೆ ಅನುಕೂಲವಾಗುವ ಪ್ರಸಂಗವು ಒದಗಿತು. ಆದರೆ ರಾಜಕುವರ ಇದರಲ್ಲಿ ಅನ್ಯಾಯವಾದರೂ ಏನು?

ರಾಜಾರಾಮ— ಇನ್ನು ನಮ್ಮ ಅತ್ತಿಗೆಯ ಚಿಂತೆಯು ನನಗೆ ಎಳ್ಳಷ್ಟು ಉಳಿಯಲಿಲ್ಲ; ಯಾಕಂದರೆ, ರಾಯಗಡವನ್ನು ಕೈ ಸೇರಿಸಿಕೊಳ್ಳಲು ಬದ್ಧಕಂಕಣನಾದ ಆಕೆಯ ಅಣ್ಣನೇ ಈಗ ನಮಗೆ ಅನುಕೂಲನಾದನು. ಇನ್ನು ದೇಶದ್ರೋಹಿಗಳ ಘಾತಕತನದಿಂದ ಒಂದು ವೇಳೆ ಕೋಟೆಯು ಬಾದಶಹನ ಕೈ ಸೇರಿದರೂ, ನಮ್ಮ ಬಾಲಶಿವರಾಯನನ್ನೂ, ಅತ್ತಿಗೆಯನ್ನೂ ಕಾಯಲು ನಮ್ಮ ಗಣೋಜಿ ಶಿರ್ಕೆಯವರು ಸಮರ್ಥರಾಗಿರುವರು! ಆದರೆ ದಾದಾ, ಗಣಪತ ರಾವ, ಈಗ ನೀವು ಹೋಗಿರಿ; ರಾಣೋಜಿಯವರ ಮನಸ್ಸನ್ನು ತಿರುಗಿಸಿರಿ; ಈ ಹತಭಾಗ್ಯ ನಾದ ರಾಜಾರಾಮನನ್ನು ಮರೆಯಬೇಡಿರಿ!

# ಏಕಪತ್ನೀ ವ್ರತವು

ಈ ಮೇರೆಗೆ ಗಣೋಜಿಶಿರ್ಕೆಯು ರಾಜಾರಾಮನಿಂದ ಸಂಭಾವಿಸಲ್ಪಟ್ಟು, ಪಲ್ಹಾಳ ಗಡದಿಂದ ಹೊರಟನು. ಆತನ ಮನಸ್ಸು ಚಂಚಲವಾಗಿತ್ತು. ತಾನು ಇನ್ನು ತನ್ನ ಘೋರ ಪ್ರತಿಜ್ಞೆಯನ್ನು ನಡಿಸಬೇಕೋ? ಬಿಡಬೇಕೋ? ರಾಣೋಜಿಯು ತನ್ನ ಮಾತನ್ನು ಕೇಳುವನೋ ಇಲ್ಲವೋ! ಎಂಬ ವಿಚಾರಗಳ ಗಲಿಬಿಲಿಯಿಂದ ಅವನ ಮನಸ್ಸು ಅಸ್ವಸ್ಥವಾಗಿತ್ತು. ಹೀಗೆ ಆತನು ಅಸಮಾಧಾನದಿಂದ ರಾಯಗಡದ ಕಡೆಗೆ ಸಾಗಿರಲು, ಇತ್ತ ಸಂತಾಜಿಯು ಪಲ್ಹಾಳಗಡದಿಂದ ಹೊರಟನು. ಸಂತಾಜಿಯ ಮನಸ್ಸಿನ ವೃತ್ತಿಯು ಗಣೋಜಿಯ ಮನೋವೃತ್ತಿಯಿಂದ ತೀರ ಭಿನ್ನವಾಗಿತ್ತು. ಆ ಸ್ವಾಮಿನಿಷ್ಠ ಮರಾಟನ ಮನಸ್ಸಿನಲ್ಲಿ, ತನ್ನ ಸ್ವಾಮಿಯನ್ನು ಪುನಃ ಸಿಂಹಾಸನದ ಮೇಲೆ ಎಂದು ಕುಳ್ಳಿರಿ ಸೇನೆಂಬದೊಂದೇ ವಿಚಾರವು ಕಟಿಯುತ್ತಿತ್ತು. ತನ್ನ ಸ್ವಾಮಿಯು ಸಿಂಹಾಸನವೇರುವ ವರೆಗೆ ತಾನು ಯಾವ ವಿಷಯೋಪ ಭೋಗಕ್ಕೂ ಮನಸ್ಸು ಮಾಡಲಿಕ್ಕಿಲ್ಲೆಂದು ಆತನು ಪ್ರತಿಜ್ಞೆ ಮಾಡಿದ್ದನು. ಸ್ವಾಮಿಕಾರ್ಯದಲ್ಲಿ ಆತನ ಹಸಿವೆ- ನೀರಡಿಕೆಗಳು ಕೂಡ ಮರೆತು ಹೋಗಿದ್ದವೆಂದಬಳಿಕ, ತನ್ನ ಮನೆ-ಮಾರುಗಳ ಹಂಗು ಆತನಿಗಿದ್ದಿಲ್ಲವೆಂದು ನಾವು ಯಾಕೆ ಬರೆಯಬೇಕು? ಆ ತರುಣನು ತನ್ನ ಪ್ರೀತಿಯ ಹೆಂಡತಿ ಯಾದ ಕಮಲಾಬಾಯಿ ಯಂಥ ಸುಂದರ ತರುಣಿಯನ್ನೂ ಕೂಡ ವಿಷಯ ಸುಖದಿಂದ ವಿಮುಖಳಾಗ ಮಾಡಿದ್ದನು. ಯುದ್ಧದಲ್ಲಿ ತೊಡಗಿದ್ದ ತನ್ನ ಪತಿಯು ಹ್ಯಾಗೆ ಜಯಶಾಲಿ ಯಾದಾನೆಂಬದೊಂದೇ ವಿಚಾರವು ಕಮಲಾಬಾಯಿಯ ಮನಸ್ಸಿನಲ್ಲಿ ವಾಸಿಸುತ್ತಿತ್ತು. ಪತಿಯ ಸುರಕ್ಷಿತತೆಯ ಬಗ್ಗೆ ಆಕೆಯು ಯಾವಾಗಲೂ ದೇವರನ್ನು ಪ್ರಾರ್ಥಿಸುತ್ತಿದ್ದಳು. ಸಂತಾಜಿಯು ನಿಂತಲ್ಲಿ ನಿಲ್ಲದೆ ಯುದ್ಧ ಮಾಡುವವನಾದ್ದರಿಂದಲೂ, ವಿದ್ಯುದ್ವೇಗದಂತೆ ಆತನ ವೇಗವಿದ್ದದ್ದರಿಂದಲೂ, ಬೇಕಾದಷ್ಟು ದೊಡ್ಡ ಸೈನ್ಯದಮೇಲೆ ಹೊಂಚು ಹಾಕಿ ಹಾರಲಿಕ್ಕೆ ಆತನು ಹಿಂಜರಿಯುವನಲ್ಲ ದ್ದರಿಂದಲೂ ಕಮಲಾಬಾಯಿಯು ಯಾವಾಗಲೂ ಪತಿಯ ಯೋಗಕ್ಷೇಮವನ್ನು ಕುರಿತು ಚಿಂತಿಸುತ್ತಿದ್ದಳು. ಇತ್ತಿತ್ತಲಾಗಿ ಆಕೆಗೆ ಬಹುದಿವಸಗಳಿಂದ ಪತಿಯ ದರ್ಶನವಿದ್ದಿಲ್ಲ. ಹೀಗಿರುವಾಗ ಅಕಸ್ಮಾತ್ ಸಂತಾಜಿಯು ಹೆಂಡತಿಯ ಯೋಗಕ್ಷೇಮದ ವಿಚಾರಣೆಗಾಗಿ ಆಕೆಯ ಬಳಿಗೆ ಬಂದನು. ಆಗ ಕಮಲಾಬಾಯಿಗಾದ ಆನಂದವು ಆಕೆ ಹೊಟ್ಟೆಯಲ್ಲಿ ಹಿಡಿಸದಾಯಿತು. ಪತಿಸೇವೆಯಲ್ಲಿ ಆಕೆಯು ತತ್ಪರಳಾದಳು. ಸಂತಾಜಿಯು ಒಂದು ದಿವಸ ಕೂಡ ಮನೆಯಲ್ಲಿ ನಿಲ್ಲುವದು ಕಡಿಮೆ. ಕುದುರೆಯ ಮೇಲೆ ಕುಳಿತು ಹೆಂಡತಿಯ ಯೋಗಕ್ಷೇಮವನ್ನು ವಿಚಾರಿಸಿ ಹಾಗೆಯೇ ಆತನು ಯುದ್ಧಭೂಮಿಗೆ ತೆರಳಿದರೆ ತೆರಳುತ್ತಿದ್ದನು. ಆದ್ದರಿಂದ ಕಮಲಾಬಾಯಿಯು ಊಟ-ಉಡಿಗೆಗಳು ತೀರದ ಬಳಿಕ ತನ್ನ ಪತಿಯನ್ನು ಕುರಿತು—ಮಹಾರಾಜ, ಯುದ್ಧದ ನೆವದಿಂದ ತಾವು ಹೋಗುವದಾದರೂ ಎಷ್ಟು ದಿನ? ಯುದ್ಧದ ಭರದಲ್ಲಿ ನಿಮಗೆ ಹ್ಯಾಗಾದರೂ ಹೊತ್ತು ಹೋಗುತ್ತಿರಬಹುದು; ಆದರೆ ಯಾವ ಸುದ್ದಿಯೂ ತಿಳಿಯದ್ದರಿಂದ ನಾನು ಕುದಿಯುತ್ತ ಮನೆಯಲ್ಲಿ ಹ್ಯಾಗೆ ಕಾಲಹರಣ

ಮಾಡಬೇಕು? ಇನ್ನು ನಾನು ನಿಮ್ಮನ್ನು ಬಿಟ್ಟು ಇರಲಾರೆನು. ನನ್ನನ್ನೂ ಸಂಗಡ ಕರಕೊಂಡು ಹೋಗಬೇಕು. ನನ್ನಿಂದ ನಿಮಗೇನು ಭಾರವಾಗುವದು? ಹುಡುಗರಿಲ್ಲ, ಹುಪ್ಪಡಿಯಿಲ್ಲ, ಚಾಕರಿಮಾಡಿಕೊಂಡು ಇರುತ್ತೇನೆ. ಸರ್ವಥಾ ನನ್ನನ್ನು ಬಿಟ್ಟು ಹೋಗಬೇಡಿರಿ. ನೋಡಿರಿ, ನಾಗೋಜಿರಾವ ಮಾನೆ ಇವರು ತಮ್ಮ ಹೆಂಡತಿಯನ್ನು ಸಂಗಡ ಕರಕೊಂಡು ಹೊರಟಿರುವದಿಲ್ಲವೆ? ರಾಧಾಬಾಯಿಯು ಯಾವಾಗಲೂ ಪತಿಯ ಬಳಿಯಲ್ಲಿರುವದರಿಂದ ನಿಶ್ಚಿಂತೆಯಿಂದಿರುವಳು. ನಿಮಗೆ ನಾನು ಭಾರವಾಗುವನೇ ಹೇಗೆ? ನನ್ನನ್ನು ನೀವು ಕರಕೊಂಡು ಹೋಗಿಯಾದರೂ ನೋಡಿರಿ!

ಪ್ರಿಯೇ, ಕಮಲೇ, ನಾಗೋಜಿ ಮಾನೆಯ ಮಾತನ್ನು ಯಾಕೆ ತೆಗೆಯುತ್ತೀ? ಆ ನೀಚನು ಸ್ವಾರ್ಥದಿಂದ ದೇಶದ್ರೋಹಿಯಾಗಿ ಬಾದಶಹನನ್ನು ಕೂಡಿರುವನು. ಅವನು ರಾಜಾರಾಮ ಮಹಾರಾಜರ ಹಿತವನ್ನಂತು ಇರಲಿ. ಬಾದಶಹನ ಹಿತವನ್ನೂ ನೋಡುವಹಾಗಿಲ್ಲ, ಅವನಿಗೆ ಸ್ವರಾಜ್ಯವು ಮುಣುಗಿದರೇನು, ಬಾದಶಹನು ಹಾಳಾದರೇನು ತನ್ನ ಹೋಳಿಗೆಯೊಂದು ತುಪ್ಪದಲ್ಲಿ ಬಿದ್ದರಾಯಿತು. ಮುಪ್ಪಿನಲ್ಲಿ ಲಗ್ನ ಮಾಡಿಕೊಂಡದ್ದರಿಂದ ಆ ಮುದಿ ಡೋರನಿಗೆ ಹೆಂಡತಿಯು ಕಣ್ಣೆದುರಿಗಿಲ್ಲದಿದ್ದರೆ ಸಮಾಧಾನವಾಗುವದಿಲ್ಲ; ಆದರೆ, ನಮ್ಮ ಮಾತು ಹಾಗೆಲ್ಲಿರುವದು? ಸ್ವಾಮಿಕಾರ್ಯದಲ್ಲಿ ದೇಹಪಾತವಾದರೂ ನಾವು ಹಿಂದುಮುಂದೆ ನೋಡುವ ಹಾಗಿಲ್ಲ. ಯಾವ ಕಾಲಕ್ಕೆ ಎಂಥ ಪ್ರಸಂಗ ಒದಗೀತೆಂಬದನ್ನು ಹೇಳ ಲಾಗುವದಿಲ್ಲ. ನಾವು ಯಾವಾಗಲೂ ಟೊಂಕಕಟ್ಟಿ ಸ್ವಾಮಿಕಾರ್ಯಕ್ಕೆ ಸಿದ್ಧರಾಗಿರಲಿಕ್ಕೆಬೇಕು. ಇಂಥ ಪ್ರಸಂಗದಲ್ಲಿ ಹೆಂಡಿರುಮಕ್ಕಳ ತೊಡಕು ಕೆಲಸದ್ದಲ್ಲ. ಸ್ತ್ರೀಮೋಹವು ಹಿತಕರವಲ್ಲ. ನೋಡು, ಯುದ್ಧ ಪ್ರಸಂಗವು ಒದಗಿರಲು, ತನ್ನ ಹೆಂಡತಿಯಾದ ಪ್ರಭಾವತಿಯ ಮೋಹದ ಬಲೆಗೆ ಸಿಕ್ಕು, ಸುಧನ್ವನು ಪ್ರಾಣಕ್ಕೆ ಎರವಾದನು; ಅದರಂತೆ ಅಭಿಮನ್ಯುವು ಚಕ್ರವ್ಯೂಹ ಭೇದಿಸುವದಕ್ಕೆ ಹೊರಟಾಗ ಉತ್ತರೆಯ ಕ್ರೀಡೆಯಲ್ಲಿ ಆಸಕ್ತನಾಗಲು, ಮುಂದೆ ಯುದ್ಧದಲ್ಲಿ ಪ್ರಾಣಕಳ ಕೊಂಡನು. ಅದೇ ಮೇಘನಾದನು ಬ್ರಹ್ಮಚರ್ಯವ್ರತದಿಂದ ಯುದ್ಧಕ್ಕೆ ಹೋದದ್ದರಿಂದ ಆತನು ಶ್ರೀ ರಾಮಚಂದ್ರನನು ಮೀರಿನಿಂತನು. ವಿಷಯ ಭೋಗದಿಂದ ಸತ್ವದ ಹಾನಿಯಾಗುವದು. ಅದರಲ್ಲಿ ಸ್ತ್ರೀವ್ಯಾಮೋಹವಂತು ಸರ್ವನಾಶಕರವು; ಆದ್ದರಿಂದ ಸ್ವಾಮಿಕಾರ್ಯವು ಸಾಧಿಸುವವರೆಗೆ, ಅಂದರೆ ಮಹಾರಾಜರು ಪಟ್ಟಾಭಿಷಕ್ತರಾಗುವವರೆಗೆ ನಾನು ಬ್ರಹ್ಮಚರ್ಯಕ್ಕೆ ಭಂಗ ತಂದುಕೊಳ್ಳುವಹಾಗಿಲ್ಲ; ಬೇರೆ ವಿಷಯ ಸುಖಗಳನ್ನೂ ಭೋಗಿಸುವಹಾಗಿಲ್ಲ; ಆದ್ದರಿಂದ ನೀನು ನನ್ನ ಸಂಗಡ ಬಂದು ಕಾಲುತೊಡಕಾಗಬೇಡ. ಸ್ವಾಮಿಕಾರ್ಯಕ್ಕೆ ವಿಘ್ನವನ್ನುಂಟುಮಾಡುವದು ಸಂತಾಜಿಯ ಪತ್ನಿಯೆನಿಸುವ ನಿನಗೆ ಭೂಷಣವಲ್ಲ. ನೀನು ವೀರಪತ್ನಿಯೆಂಬ ಗೌರವದ ಬಿರುದಿಗೆ ಪಾತ್ರಳಾಗಬೇಕಾದರೆ, ನನ್ನಂತೆ ನೀನೂ ತಪಸ್ವಿನಿ ಯಾಗಬೇಕು. ಸದ್ಯಕ್ಕೆ ಮಹಾರಾಷ್ಟ್ರಕ್ಕೊದಗಿದ ಕಠಿಣ ಪ್ರಸಂಗದಲ್ಲಿ ನಮ್ಮಂಥ ತರುಣ ಪುರುಷರೇ ಏಕೆ, ನಿಮ್ಮಂಥ ತರುಣ ಸ್ತ್ರೀಯರೂ ಸ್ವಾರ್ಥತ್ಯಾಗ ಮಾಡಿ ಸ್ವಸುಖಕ್ಕೆ ನೀರು ಬಿಡಬೇಕಾಗುವದು. ನೋಡು, ನಮ್ಮ ಶಿವಪ್ರಭುವಿನ ಪುತ್ರಿಯಾದ

ರಾಜಕುವರಳನ್ನು ನೋಡು. ಸ್ವದೇಶೋದ್ಧಾರಕ್ಕಾಗಿ ಪತಿಯೊಡನೆಯೂ ಆಕೆಯು ದ್ವೇಷಕಟ್ಟಿ ಕೊಂಡಿರುವಳು. ಆ ಮಹಾತ್ಮಳು ಮೊನ್ನೆ ಮೊನ್ನೆ ಪತಿಯನ್ನು ಸೆರೆಹಿಡಿದು ನಾಚಿಸಿದಳು! ಆದರೆ ನೀನು ಇಂಥ ಸಾಹಸವನ್ನೇನು ಮಾಡಬೇಕಾಗಿರುವದಿಲ್ಲ. ನನ್ನ ಕಾರ್ಯಕ್ಕೆ ನೀನು ವಿಘ್ನವಾಗದಂತೆ ಮನೆಯಲ್ಲಿದ್ದರಾಯಿತು. ಪ್ರಿಯೇ, ನಮ್ಮಂಥ ಕಠಿಣಹೃದಯದ ತರುಣರ ತಪಶ್ಚರ್ಯದಿಂದ ನಿಮ್ಮಂಥ ತರುಣಿಯರಿಗೆ ತಾಪವಾಗುವದೆಂದು ನಾನು ಬಲ್ಲೆನು. ಆದರೆ ತಪಸ್ವಿಯ ಅರ್ಧಾಂಗಿಯು ತಪಸ್ವಿನಿಯೇ ಆಗಬೇಕಲ್ಲವೆ?

ಪತಿಯ ಈ ಮಾತುಗಳನ್ನು ಕೇಳಿ ಕಮಲೆಯು—ಮಹಾರಾಜ, ತಮ್ಮ ಮಾತು ಯೋಗ್ಯವಾದದ್ದೇ ಸರಿ. ಈವರೆಗೆ ನಾನು ತಮ್ಮ ಸಂಗಡ ಬರುವೆನೆಂದು ಹಟಹಿಡಿದಿದ್ದಿಲ್ಲ. ಈ ಸಾರೆ ಯಾಕೋ ಸಂಗಡ ಬರಬೇಕೆಂಬ ಇಚ್ಛೆಯಾಗಿದೆ. ನಮ್ಮ ಪೂಜ್ಯ ರಾಜಕುವರರವರು ತಮಗೆ ಪತಿಯು ವಿರೋಧಿಯಾಗಿದ್ದರೂ, ಮಹಾಧೈರ್ಯದಿಂದ ತಮ್ಮ ಸ್ವದೇಶೋದ್ಧಾರದ ಕಾರ್ಯವನ್ನು ಎಡೆಬಿಡದೆ ನಡಿಸಿರುವರಲ್ಲವೆ? ನನಗಂತು ತಮ್ಮಂಥ ವೀರಾಗ್ರಣಿಗಳಾದ ಪತಿಯ ಅನುಕೂಲವಿರುವದು. ನನ್ನನ್ನು ಒಬ್ಬ ಮರಾಟಾ ದಂಡಾಳುವೆಂದು ತಿಳಿದು ಸಂಗಡ ಕರಕೊಂಡು ಹೋಗಿರಿ. ಶಕ್ತಿಯಿದ್ದ ಮಟ್ಟಿಗಾದರೂ ನಾನು ದೇಶಕಾರ್ಯದಲ್ಲಿ ತಮಗೆ ಸಹಾಯ ಮಾಡುವೆನು. ಸುಮ್ಮನೆ ನಾನು ಮನೆಯಲ್ಲಿ ಕೈಮುಚ್ಚಿಕೊಂಡು ಕುಳಿತುಕೊಳ್ಳಲಾರೆನು. ಸೀತಾಮಾತೆಯು ಶ್ರೀರಾಮನನ್ನನುಸರಿಸಿ ಅರಣ್ಯಕ್ಕೆ ಹೋಗಲಿಲ್ಲವೆ? ದ್ರೌಪದಿಯು ಪತಿಗಳನ್ನು ಅವರ ವಿಪತ್ಕಾಲದಲ್ಲಿಯೂ ಸಂಬಾಲಿಸಿರಲಿಲ್ಲವೆ? ಈ ಕಾಲದಲ್ಲಿ ಮಹಾರಾಷ್ಟ್ರದೊಳಗಿನ ಪುರುಷರು–ಸ್ತ್ರೀಯರು, ಹರೆಯದವರು–ಮುದುಕರು, ಹುಡುಗರು–ಹುಡಿಗೆಯರು ಕೂಡ ದೇಶಕಾರ್ಯಕ್ಕಾಗಿ ಕಷ್ಟಪಡಬೇಕೆಂದು ನೀವು ಹೇಳುತ್ತಿರುವಿರಲ್ಲ, ಆದರೆ ಈಗ ನನಗೇಕೆ ಬೇಡವೆನ್ನುವಿರಿ? ನೀವು ಉಂಡರೆ ನಾನು ಉಣ್ಣುವೆನು, ನೀವು ಉಪವಾಸವಿದ್ದರೆ ನಾನು ಉಪವಾಸವಿರುವೆನು. ಕಮಲೆಯು ಸಂತಾಜಿ ಘೋರಪಡೆಯವರಿಗೆ ತಕ್ಕ ಹೆಂಡತಿಯೆಂದು ಜನರಿಂದ ಹೊಗಳಿಸಿಕೊಳ್ಳದಿದ್ದರೆ, ನಾನು ಬದುಕಿದ್ದು ಪ್ರಯೋಜನವೇನು? ಪ್ರಸಂಗ ವಿಶೇಷದಲ್ಲಿ ನನ್ನಿಂದ ತಮಗೆ ಉಪಯೋಗ ವಾದೀತಲ್ಲದೆ, ತೊಂದರೆಯಾಗಲಿಕ್ಕಿಲ್ಲ, ನಾನು ಪುರುಷವೇಷವನ್ನು ಧರಿಸಿ ಅಶ್ವಾರೂಢಳಾಗಿ ಕತ್ತಿ, ಢಾಲು, ಬರ್ಚಿಗಳೊಡನೆ ನಿಮ್ಮನ್ನನುಸರಿಸಿ ರಣಭೂಮಿಯಲ್ಲಿ ಸಂಚರಿಸುವೆನು. ಸ್ತ್ರೀಯೆಂಬ ಕಲ್ಪನೆಯು ಕೂಡ ಯಾರಿಗೂ ಆಗಲಿಕ್ಕಿಲ್ಲ. ಪ್ರಾಣಪ್ರಿಯಾ, ನಾನು ನಿಮ್ಮ ಅರ್ಧಾಂಗಿಯಲ್ಲವೆ? ನನ್ನದಿಷ್ಟು ಮಾತನ್ನೂ ತಾವು ನಡಿಸಬಾರದೆ? ತಾವು ಈ ಸಾರೆ ನನ್ನನ್ನು ಸಂಗಡ ಕರಕೊಂಡು ಹೋಗದಿದ್ದರೆ ನನ್ನ ಗತಿಯೇನಾದೀತೆಂಬದನ್ನು ನಾನು ಹೇಳಲಾರೆನು. ಅನುಭವದಿಂದ ನಾನು ತಮಗೆ ಬಾಧಕವಾಗಿ ತೋರಿಬಂದರೆ, ತಾವು ಹೇಳುವ ಮೊದಲೇ ನಾನು ಮನೆಯನ್ನು ಹಿಡಿದು ಕುಳಿತುಕೊಳ್ಳುವೆನು.

ಹೆಂಡತಿಯ ಈ ಮಾತುಗಳನ್ನು ಸಂತಾಜಿಯು ನಿರಾಕರಿಸಲಿಲ್ಲ. ಆಕೆಯ ಮಾತುಗಳು ಅವನಿಗೆ ಸಮರ್ಪಕವಾಗಿ ತೋರಿದ್ದಲ್ಲದೆ, ತನ್ನ ಹೆಂಡತಿಯು ತನ್ನ ಅಂಗರಕ್ಷಕಳಾಗಲು

ತಕ್ಕವಳೆಂದು ಆತನು ಭಾವಿಸಿದನು. ಆತನು ಕಮಲಾಬಾಯಿಗೆ ಹಾಗೇ ಆಗಲೆಂದು ಹೇಳಿ ಹೊರಡಲು ಸಿದ್ಧನಾದನು. ಕಮಲಾಬಾಯಿಯು ಪುರುಷವೇಷವನ್ನು ಧರಿಸಿದಳು. ಇಂಥ ಸ್ಥಳದಲ್ಲಿ ತಳವೂರಿ ತನ್ನ ಹಾದಿಯ ನೋಡಬೇಕೆಂದು ಹೇಳಿ ಸಂತಾಜಿಯು ಮೊದಲೇ ತನ್ನ ಜನರನ್ನು ಮುಂದೆ ಕಳಿಸಿದ್ದನು. ಎಲ್ಲ ಸಿದ್ಧತೆಯಾದ ಮೇಲೆ ಹೆಂಡತಿಯೊಡನೆ ಸಂತಾಜಿಯು ಹೊರಟನು. ಅತ್ಯಂತ ಉತ್ಸುಕತೆಯಿಂದ ಅಶ್ವಾರೂಢಳಾಗಿ ಪತಿಯನ್ನು ಹಿಂಬಾಲಿಸಿ ನಡೆದಿರುವ ಕಮಲಾಬಾಯಿಯ ಗುರುತನ್ನು ಸಂತಾಜಿಯ ಪರಿವಾರದವರಾರೂ ಹಿಡಿಯ ಲಿಲ್ಲ. ಯಾವನೋ ಒಬ್ಬ ತರುಣ ರಾವುತನು ತಮ್ಮ ಒಡೆಯನ ಆಶ್ರಯವನ್ನು ಪಡೆದು ಬಂದಿರುವನೆಂದು ಎಲ್ಲರೂ ತಿಳಿದರು. ಸಂತಾಜಿಯು ಮಾರ್ಗವನ್ನು ಕ್ರಮಿಸುತ್ತ ರಾಯಗಡದ ಅರಣ್ಯವನ್ನು ಸೇರಿದನು. ಅಸದಖಾನನು ರಾಯಗಡವನ್ನು ಮುತ್ತಿದಾಗಿನಿಂದ ಸುರಕ್ಷಿತತೆಯ ಬಗ್ಗೆ ಮರಾಟರು ಚಿಂತಿಸುತ್ತಿದ್ದರು. ಮೊಗಲರ ಮುತ್ತಿಗೆಯನ್ನು ಸಡಿಲಿಸುವದಕ್ಕಾಗಿ ಮೊಗಲ ಪಕ್ಷಪಾತಿಯಾದ ನಾಗೋಜಿ ಮಾನೆಯೆಂಬ ಪ್ರಬಲಮಾಹಾರಾಷ್ಟ್ರ ಸರದಾರನನ್ನು ಒಡೆದು ಕೊಳ್ಳಬೇಕೆಂದು ಕೆಲ ಮರಾಟರು ಯತ್ನಿಸುತ್ತಲಿದ್ದರು. ವೃದ್ಧ ನಾಗೋಜಿಯು ತನ್ನ ತರುಣ ಹೆಂಡತಿಯಾದ ರಾಧಾಬಾಯಿಯ ಅಧೀನದಲ್ಲಿದ್ದನು. ರಾಧಾಬಾಯಿಯು ತನ್ನ ಗಂಡನನ್ನು ಕಿವಿ ಹಿಡಿದು ಬೇಕಾದತ್ತ ಹೊರಳಿಸಲಿಕ್ಕೆ ಸಮರ್ಥಳಿರುವಳೆಂದು ಜನರು ತಿಳಿಯುತ್ತಿದ್ದರು. ಆದರೆ ನಾಗೋಜಿ ಮಾನೆಯನ್ನು ಒಡಕೊಳ್ಳುವದು ಸಂತಾಜಿಯ ಮನಸ್ಸಿಗೆ ಬರುತ್ತಿದ್ದಿಲ್ಲ. ದುರಭಿಮಾನಿಗಳಾದ ಈ ಅಹಂಭಾವದ ಸರದಾರರ ಅನುವರ್ತನ ಮಾಡುವದರೊಳಗಾಗಿ ಸಾಕುಬೇಕಾಗುವದರಿಂದ, ಈ ಸ್ತ್ರೈರಣ ಗೊಡವಿಗೆ ಹೋಗದೆ, ಸ್ವಂತ ಪೌರುಷದಿಂದ ಶೌರ್ಯ ಸಾಧಿಸುವದೇ ಲೇಸೆಂದು ಆತನು ತಿಳಿಯುತ್ತಿದ್ದನು. ಕರ್ತೃತ್ವಶಾಲಿಗಳಾದ ಸ್ವಾಭಿ ಮಾನದ ಸರಳಜನರ ಮಾತು ಹೀಗೆಯೇ ಸರಿ. ಅನ್ಯಾಯಕ್ಕೆ ಹೇಸದ ನೀಚರೂ, ಮಧ್ಯ ವೃತ್ತಿಯುವರಾದ ಮೆತ್ತನ್ನ ಜನರೂ, ಕೈಲಾಗದ ಹೇಡಿಗಳೂ ಇಂಥ ಘಾತಕಪಾತಕಗಳಿಗೆ ಮನಸ್ಸು ಮಾಡುವರು. ಆದರೆ ರಾಯಗಡಕ್ಕೆ ಕಠಿಣ ಪ್ರಸಂಗ ಒದಗಿದ್ದರಿಂದ ಅದನ್ನು ರಕ್ಷಿಸುವ ಆತುರದಲ್ಲಿ ಸಂತಾಜಿಯಂಥ ತೇಜಸ್ವಿಯು ತನ್ನ ಮನಸ್ಸಿಗೆ ಒಪ್ಪಿಗೆಯಾಗದ ಕೆಲಸ ಮಾಡುವದಕ್ಕೂ ಒಪ್ಪಿಕೊಂಡನು. ಈ ಸಂಧಾನದ ಕಾರ್ಯವು ನಾಗೋಜಿ ಮಾನೆಯ ಹೆಂಡತಿಯ ಮುಖಾಂತರವಾಗಿ ಆಗಬೇಕಾದ್ದಂತು ಸಂತಾಜಿಗೆ ತೀರ ಅಯೋಗ್ಯ ವಾಗಿ ತೋರುತ್ತಿತ್ತು. ಆದರೂ ಆ ಸ್ವಾಮಿನಿಷ್ಠನು ತನ್ನ ಸ್ವಾಮಿಯ ಹಿತಕ್ಕಾಗಿ ಅದಕ್ಕೂ ಒಪ್ಪಿಕೊಂಡನು.

ರಾಯಗಡದ ಅರಣ್ಯದಲ್ಲಿಯೇ ಸಂತಾಜಿಯು ರಾಧಾಬಾಯಿಯನ್ನು ಏಕಾಂತದಲ್ಲಿ ಕಾಣಬೇಕಾಗಿತ್ತು. ಆತನು, ಗೊತ್ತುಮಾಡಿದ ಸ್ಥಳದಲ್ಲಿ ರಾಧಾಬಾಯಿಯ ಹಾದಿಯನ್ನು ನೋಡುತ್ತ ಕುಳಿತುಕೊಂಡನು. ರಾಧಾಬಾಯಿಯ ತಂದೆಯಾದ ಅಮೃತರಾಯನು ಸಂತಾಜಿಯ ಮೊನ್ನಿನ ತುಳಾಪುರದ ಮುತ್ತಿಗೆಯಲ್ಲಿ ಫಿತೂರಾಗಿ, ಬಾದಶಹನಿಗೆ ಸಂತಾಜಿಯ ಗುಟ್ಟನ್ನೆಲ್ಲ ತಿಳಿಸಿದ್ದರಿಂದ ಕಾರ್ಯಘಾತವಾದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ಅಮೃತರಾಯನು ತನ್ನ ಪರಿವಾರದೊಳಗಿನ

ವನಿದ್ದು, ಹೀಗೆ ಫಿತೂರಾದದ್ದರಿಂದ ಆತನನ್ನು ಆನೆಯ ಕಾಲಿಗೆ ಕಟ್ಟಿಸಿ ಕೊಲ್ಲಿಸಬೇಕೆಂದು ಸಂತಾಜಿಯು ನಿಶ್ಚಯಿಸಿದ್ದನು. ತನ್ನ ತಂದೆಯ ಮೇಲಿನ ಸಂತಾಜಿಯ ಈ ಸಿಟ್ಟನ್ನು ಇಳಿಸಿ, ಆತನಿಂದ ಕ್ಷಮೆಯ ಬಗ್ಗೆ ಅಭಯವನ್ನು ರಾಧಾಬಾಯಿಯು ಸಂಪಾದಿಸಬೇಕಾಗಿತ್ತು; ಆದ್ದರಿಂದಲೇ ಆಕೆಯು ತನ್ನ ಗಂಡನನ್ನು ಅನುಕೂಲಮಾಡಿಕೊಡುವ ನೆವದಿಂದ ಸಂತಾಜಿಯನ್ನು ಏಕಾಂತದಲ್ಲಿ ಕಾಣಬೇಕಾಗಿತ್ತು. ಸ್ವಲ್ಪ ಹೊತ್ತಿನ ಮೇಲೆ ರಾಧಾಬಾಯಿಯು ಒಬ್ಬ ದಾಸಿಯನ್ನು ಸಂಗಡ ಕರಕೊಂಡು ಸಂತಾಜಿಯ ಬಳಿಗೆ ಬಂದಳು. ಆಕೆಯು ಅತ್ಯಂತ ಶುಭ್ರವಾದ ಮೇಲು ಮುಸುಕು ಹಾಕಿದ್ದಳು. ರಾಧಾಬಾಯಿಯ ಮೇಲು ಮುಸುಗು ನಿರ್ಮಲವಾಗಿದ್ದಂತೆ, ಆಕೆಯ ಅಂತರಂಗವು ನಿರ್ಮಲವಾಗಿದ್ದಿಲ್ಲ. ಆ ಕುಟಿಲ ಹೃದಯದ ಮರಾಠಾ ಪ್ರಮಾದೆಯು ಮೇಲು ಮುಸುಕು ತೆಗೆದು ಸಂತಾಜಿಯ ಚರಣಕ್ಕೆ ಎರಗ ಹೋದಳು. ಆಗ ಪರಸ್ತ್ರೀಯ ಸೋಂಕಿಗೆ ಅಳುಕಿ, ಸಂತಾಜಿಯು ತಟ್ಟನೆ ಹಿಂದಕ್ಕೆ ಸರಿದು— ರಾಧಾಬಾಯೀ ಇಷ್ಟು ಮರ್ಯಾದೆಯು ನನಗೆ ಬೇಕಾಗಿಲ್ಲ, ಅದಕ್ಕೆ ನಾನು ಪಾತ್ರನೂ ಅಲ್ಲ; ಆದರೆ ನೀವು ನನ್ನ ಬಳಿಗೆ ಬಂದ ಕಾರಣವೇನು? ಸ್ತ್ರೀಯರೊಡನೆ, ಅವರಲ್ಲಿ ಕುಲೀನ ಸ್ತ್ರೀಯೊಡನೆ ಏಕಾಂತದಲ್ಲಿ ಮಾತಾಡುವ ಪ್ರಸಂಗವು ಒದಗಿದ್ದರಿಂದ ನನಗೆ ಬಹಳ ಸಂಕೋಚವಾಗಿದೆ. ಆದರೂ ರಾಧಾಬಾಯಿ, ನೀವು ಬಂದ ಕಾರಣವನ್ನು ಬೇಗನೇ ಹೇಳಿರಿ. ಕೇಳಿಕೊಳ್ಳಲಿಕ್ಕೆ ನಿಮ್ಮ ಬಂಧುವಾದ ಸಂತಾಜಿಯು ಸಿದ್ಧನಾಗಿರುವನು.

ರಾಧಾಬಾಯಿ–ತಮ್ಮಂಥ ಶೂರರನ್ನು ಪ್ರಾರ್ಥಿಸುವ ಪ್ರಸಂಗವು ಒದಗಿದ್ದರಿಂದ ನನಗೆ ಸಮಾಧಾನವಾಗಿದೆ. ನನ್ನಲ್ಲಿ ಪರಕೀಯತ್ವವನ್ನು ಭಾವಿಸಿ ತಾವು ಸಂಕೋಚಪಡಬಾರದು.

ಸಂತಾಜಿ–ಆಗಲಿ, ನೀವು ಬಂದ ಕೆಲಸವನ್ನು ಬೇಗನೇ ಹೇಳಿರಿ.

ರಾಧಾಬಾಯಿ—ನನ್ನ ಮೋರೆಯನ್ನು ನೋಡಿ ನನ್ನ ತಂದೆಯ ಅಪರಾಧಗಳನ್ನು ಕ್ಷಮಿಸಿ ಆತನಿಗೆ ಜೀವದಾನ ಕೊಡಬೇಕು.

**ಸಂತಾಜಿ—ರಾಧಾಬಾಯೀ, ಈ ಮಾತನ್ನೊಂದು ಬಿಟ್ಟು ಹೇಳಿರಿ. ನಾವೂ ಮರಾಟರು, ನೀವೂ ಮರಾಟರು. ಅಂದಬಳಿಕ ನಾವೆಲ್ಲರೂ ಒಮ್ಮನಸ್ಸಿನಿಂದ ಸ್ವರಾಜ್ಯದ** ಸಂರಕ್ಷಣ ಮಾಡತಕ್ಕದ್ದು. ಹೀಗಿದ್ದು ನಿಮ್ಮ ಪತಿಯಾದ ನಾಗೋಜಿ ಮನೆಯವರು ಔರಂಗ ಜೇಬನನ್ನು ಕೂಡಿರುವರಲ್ಲ! ಅಂಥ ಬಲಿಷ್ಠ ಸರದಾರು ಅನುಕೂಲತೆಯು ನಮಗಿದ್ದರೆ, ಸ್ವದೇಶೋದ್ಧಾರದ ಕಾರ್ಯವು ಬಹಳ ಸುಲಭವಾಗುತ್ತಿತ್ತು. ಹೀಗೆ ನಿಮ್ಮ ಪತಿಯು ಸ್ವದೇಶ ದ್ರೋಹವನ್ನು ಚಿಂತಿಸುತ್ತಿರಲು, ನಿಮ್ಮ ಮೋರೆಯನ್ನು ನೋಡಿ, ಅತ್ಯಂತ ಘಾತಕನಾದ ನಿಮ್ಮ ತಂದೆಯು ಅಪರಾಧವನ್ನು ನಾನು ಹ್ಯಾಗೆ ಕ್ಷಮಿಸಲಿ? ಅಂದು ನಾನು ತುಳಜಾಪುರದಲ್ಲಿ ಬಾದಶಹನ ಡೇರೆಯನ್ನು ಮುತ್ತಿದಾಗ ನಿಮ್ಮ ತಂದೆಯು ಫಿತೂರಾಗದಿದ್ದರೆ, ನಾನು ಬಾದಶಹನ ರುಂಡವನ್ನು ಚಂಡಾಡಬಹುದಾಗಿತ್ತು!

ರಾಧಾಬಾಯಿ—ಈಗ ನಾವು ನಿಮ್ಮ ದೇಶೋದ್ಧಾರದ ಕಾರ್ಯಕ್ಕೆ ಸಹಾಯವಾದರೆ, ನಮ್ಮ ತಂದೆಯ ಅಪರಾಧವನ್ನು ನೀವು ಯಾಕೆ ಕ್ಷಮಿಸಬಾರದು?

ಸಂತಾಜಿ–ನಾಗೋಜಿರಾವ ಮಾನೆಯವರು ನಮ್ಮನ್ನು ಕೂಡಿ ನಮ್ಮ ಕಾರ್ಯಕ್ಕೆ ಸಹಾಯ ಮಾಡಿದರೆ, ನಿಮ್ಮ ಮಾತನ್ನು ನಾನು ನಡಿಸಿದರೂ ನಡಿಸಬಹುದು. ಸ್ವಾಮಿ ಕಾರ್ಯಕ್ಕೆ ದೇಹವನ್ನೇ ಅರ್ಪಿಸಲು ಸಿದ್ಧರಾಗಿದ್ದ ನಮಗೆ, ಸ್ವಾಮಿಕಾರ್ಯ ಸಾಧನದಲ್ಲಿ ಪ್ರತಿಜ್ಞಾ ಭಂಗವಾದರೂ ಆಗಲೊಲ್ಲದೇಕೆ! ರಾಧಾಬಾಯಿಯಾ, ಈಗಿನ ಪ್ರಸಂಗದಲ್ಲಿ ನಿಮ್ಮ ಪತಿಯ ಸಾಮರ್ಥ್ಯವೂ, ಐಶ್ವರ್ಯವೂ ಗೋ–ಬ್ರಾಹ್ಮಣರ ರಕ್ಷಣದ ಕಾರ್ಯಕ್ಕೆ ಅನುಕೂಲ ವಾದರೆ, ನೀವು ಹೇಳಿದ ಹಾಗೆ ನಾನು ಕೇಳುವೆನು.

ಸಂತಾಜಿಯ ಈ ಕಡೆಯ ವಾಕ್ಯವನ್ನು ಕೇಳಿ ಮಲಿನ ಹೃದಯದ ರಾಧಾಬಾಯಿಯ ಬುದ್ಧಿಭ್ರಂಶವಾಯಿತು. ಏಕಪತ್ನೀವ್ರತಸ್ಥರನೂ, ಸ್ವಾಮಿಕಾರ್ಯಕ್ಕಾಗಿ ಬ್ರಹ್ಮಚರ್ಯವ್ರತವನ್ನು ಕೈಕೊಂಡವನೂ ಆಗಿದ್ದ ಸಂತಾಜಿಯ ತೇಜಸ್ವಿಯಾದ ಸುಂದರ ರೂಪವು ರಾಧಾಬಾಯಿ ಯಲ್ಲಿ ಈ ಮೊದಲೇ ಕಾಮವಿಕಾರವನ್ನುಂಟುಮಾಡಿತ್ತು. ಆಕೆಯು ಕುಭಾವನೆಯ ಕಂಪಿತ ಸ್ವರದಿಂದ ಸಂತಾಜಿಯನ್ನು ಕುರಿತು—

ರಾಧಾಬಾಯಿ—ಸಂತಾಜಿರಾವ, ನೋಡಿರಿ, ನಾನು ಹೇಳಿದ ಹಾಗೆ ಕೇಳುತ್ತೇನೆಂದು ನೀವು ವಚನಕೊಟ್ಟಿರುತ್ತೀರಿ. ನೋಡಿರಿ! ಹಿಂದಿನಿಂದ ನನ್ನ ಮಾತನ್ನು ನಿರಾಕರಿಸಲಾಗದು. ಇಂಥ ಪಾಪಕೃತ್ಯವನ್ನು ಹೇಗೆ ಮಾಡಲಿ! ಈ ಘೋರ ಕೃತ್ಯಕ್ಕೆ ಹ್ಯಾಗೆ ಸಮ್ಮತಿಸಲಿ ಎಂದು ಗುಣಗುಟ್ಟಿರಿ. ನಾನಂತು ನನ್ನ ಪತಿಯ ಮನಸ್ಸನ್ನು ತಿರುಗಿಸಿ, ಆತನನ್ನೂ, ಆತನ ಐಶ್ವರ್ಯ–ಬಲಗಳ ಸರ್ವಸ್ವವನ್ನೂ ನಿಮ್ಮ ಕಾರ್ಯಕ್ಕೋಸ್ಕರ ಒಪ್ಪಿಸುವದು ನಿಜವು.

ಸಂತಾಜಿ—ರಾಧಾಬಾಯಿಯಾ, ದೊಡ್ಡ ಶಿವಾಜಿ ಮಹಾರಾಜರ ಚರಣವನ್ನು ಸ್ಮರಿಸಿ ಹೇಳುತ್ತೇನೆ. ಶಿವಪ್ರಭುವಿನ ಕಾರ್ಯದ ಮುಂದೆ ನನಗೆ ಯಾತರ ಮಹತ್ವವೂ ಇಲ್ಲ. ಮುಖ್ಯ ಸ್ವಾಮಿಕಾರ್ಯವು ಸಾಧಿಸಿದರಾಯಿತು. ಅದಕ್ಕಾಗಿಯೇ ಅಲ್ಲವೆ ನಮ್ಮಂಥ ಸೇವಕರ ಜೀವನವು? ನಿಮ್ಮ ಗಂಡನಂಥ ಒಬ್ಬ ವೈಭವಶಾಲಿಯಾದ ಬಲಾಢ್ಯ ಮರಾಠಾ ಸರದಾರ ನನ್ನು ಗೆಲ್ಲುವಾಗ ನಿನ್ನ ತಂದೆಯಂಥ ಒಬ್ಬ ಸಾಮಾನ್ಯ ದೇಶದ್ರೋಹಿಯನ್ನು ಕ್ಷಮಿಸಲಿಕ್ಕೆ ನಾನು ಹಿಂದೆಮುಂದೆ ನೋಡಲಾರೆನು. ಆದ್ದರಿಂದ ರಾಧಾಬಾಯಿ, ನಿಮಗೆ ಸಂಶಯವೇಕೆ? ನಾನು ನಿಮ್ಮ ಮಾತನ್ನು ತಪ್ಪದೆ ನಡೆಸುವೆನೆಂಬ ಬಗ್ಗೆ ಇಗೋ ವಚನವನ್ನು ಹಿಡಿಯಿರೀ!

ಸಂತಾಜಿಯ ಈ ಮಾತುಗಳಿಂದ ರಾಧಾಬಾಯಿಗೆ ಪೂರ್ಣ ಸಮಾಧಾನವಾಗಲಿಲ್ಲ. ಆದರೂ ಆಕೆಯು ಇದ್ದದ್ದರಲ್ಲಿ ಸಮಾಧಾನ ಮಾಡಿಕೊಂಡು ಸಂತಾಜಿಯನ್ನು ಕುರಿತು—

ರಾಧಾಬಾಯಿ—ಸಂತಾಜಿರಾವ, ನಿಮ್ಮ ಪರಾಕ್ರಮವನ್ನು ನಾನು ಎಷ್ಟೆಂದು ವರ್ಣನ ಮಾಡಲಿ? ನಿಮ್ಮಂಥ ಶೂರರಿಗೆ ನನ್ನಂಥ ಅಬಲೆಯ ವಿಷಯವಾಗಿ ದಯೆಯು ಉತ್ಪನ್ನ ವಾಗಲೇಬೇಕು?

ಸಂತಾಜಿ—ರಾಧಾಬಾಯಿ, ನಿಮಗೆ ಅಂಥ ಪ್ರಸಂಗವೇನು ಬಂದಿದೆ? ಪ್ರಬಲ ನಾದ ಔರಂಗಜೇಬ ಬಾದಶಹನು ಕೈತೊಳಕೊಂಡು ಬೆನ್ನು ಹತ್ತಿದ್ದರಿಂದ, ಒಂದು ವಿಧದಿಂದ ಮಹಾರಾಷ್ಟ್ರವು ಈಗ ಅನಾಥವಾದಂತಾಗಿದೆ. ಇಂಥ ಪ್ರಸಂಗದಲ್ಲಿ ನಿಮ್ಮ

ಪತಿಯಾದ ನಾಗೋಜಿರಾವ ಮಾನೆಯು ನಮ್ಮನ್ನು ಕೂಡಿದರೆ ನಮಗೆ ದೊಡ್ಡ ಸಹಾಯ ವಾಗುವ ಹಾಗಿದೆ.

ರಾಧಾಬಾಯಿ—ಸಂತಾಜಿ, ನನ್ನ ಪತಿಯೇ ಏಕೆ? ನಾನೂ ನಿಮ್ಮನ್ನು ಕೂಡಲಿಕ್ಕೆ ಸಿದ್ಧಳಿರುವೆನಲ್ಲ! ಮನಮೋಹನಾ! ನಿಮ್ಮ ವಿಶಾಲವಾದ ಬಾಹುಗಳಿಂದ ನನ್ನನ್ನು ಸ್ವೀಕರಿಸಿ ಧನ್ಯಳಾಗಮಾಡು!

ರಾಧಬಾಯಿಯ ಈ ಮಾತುಗಳನ್ನು ಕೇಳಿ ಶುದ್ಧಾಂತಃಕರಣದ ಸಂತಾಜಿಯು ಸಂತಾಪ ಗೊಂಡನು. ಆತನು ಕ್ರುದ್ಧ ಮುದ್ರೆಯಿಂದ ರಾಧಾಬಾಯಿಯನ್ನು ಕುರಿತು—

ಸಂತಾಜಿ—ರಾಧಾಬಾಯಿ, ಯಾರಮುಂದೆ ಮಾತಾಡುತ್ತಿರುವೆಯೆಂಬದರ ಎಚ್ಚರ ವಿರಲಿ! ಸರಿ ಹಿಂದಕ್ಕೆ. ನೀನು ನನಗೆ ಒಡಹುಟ್ಟಿದ ತಂಗಿಯಂತಿರುತ್ತೀ. ಸ್ವಾಮಿಕಾರ್ಯಕ್ಕಾಗಿ ಕಷ್ಟಪಡುತ್ತಿರುವವರಿಗೆ ಯೋಗ್ಯ ಸಹಾಯಮಾಡುವದನ್ನು ಬಿಟ್ಟು, ಹೀಗೆ ನೀನು ಸತ್ವಭಂಗಕ್ಕೆ ಮನಸ್ಸು ಮಾಡಬಹುದೆ? ನಿನ್ನಂಥ ದುಷ್ಟ ಸ್ತ್ರೀಯನ್ನು ಬೋಧಿಸುವದಕ್ಕೂ, ನಿನ್ನ ಪತಿಯಾದ ನಾಗೋಜಿಯ ಸಹಾಯವನ್ನು ಸಂಪಾದಿಸುವದಕ್ಕೂ ನನಗೆ ಹೇಸಿಗೆ ಬರುತ್ತದೆ. ಶಿವ ಪ್ರಭುವಿನ ಪುಣ್ಯವೇ ನಮ್ಮನ್ನು ಉದ್ಧರಿಸುವದಲ್ಲದೆ, ನಿಮ್ಮಂಥ ದ್ರೋಹಿಗಳಿಂದ ಆಗುವ ದೇನು? ನಿನ್ನ ಪತಿಯಂತು ದೇಶದ್ರೋಹಿಯೆಂದು ಪ್ರಸಿದ್ಧನಾಗಿರುವನು. ಈಗ ನೀನು ಪತಿ ಯನ್ನು ವಂಚಿಸಿಹೋಗಿ ಪತಿ ದ್ರೋಹಿಯೂ, ಬಂಧುವಾದ ನನ್ನನ್ನು ವಂಚಿಸಿ ಬಂಧು ದ್ರೋಹಿಯೂ, ಪಾತಿವ್ರತ್ಯ ಭಂಗ ದೋಷದಿಂದ ದೇಶನಾಶಕ್ಕೆ ಹಾದಿಮಾಡಿಕೊಡಲಿಕ್ಕೆ ನಿಂತದ್ದರಿಂದ ದೇಶದ್ರೋಹಿಯೂ ಆಗಿರುತ್ತೀ. ತಂಗೀ ರಾಧಾಬಾಯಿ, ಹೆಚ್ಚಿಗೆ ಮಾತು ಗಳೇಕೆ? ನಿನ್ನ ಮೇಲೆ ನಾನು ಸಿಟ್ಟುಮಾಡುವದಾದರೂ ಏಕೆ? ಹೋಗಮ್ಮಾ ಹೋಗು. ಸಂತಾಜಿಯು ಇಂಥ ನೀಚ ಮಾರ್ಗದಿಂದ ನಿಮ್ಮ ಸಹಾಯವನ್ನಿಚ್ಛಿಸುವದಿಲ್ಲ. ನೀನು ನನಗೆ ಪುನಃ ಮೋರೆ ತೋರಿಸಬೇಡ, ಹೊರಟುಹೋಗು.

ಈ ಮೇರೆಗೆ ಸಂತಾಜಿಯು ತನ್ನ ಅಪಮಾನ ಮಾಡಿದ್ದಕ್ಕಾಗಿ ದುಷ್ಟ ರಾಧಾ ಬಾಯಿಯು ಸಂತಾಪಗೊಂಡಳು. ಆಕೆಯು ಕಣ್ಣು ಕೆಂಪಗೆಮಾಡಿ—ಸಂತಾಜೀ, ದುಷ್ಟಾ, ಈಗ ನಾನು ಹೊರಟು ಹೋಗುತ್ತೇನೆ. ನೀನು ನನ್ನ ಮಾನಭಂಗ ಮಾಡಿರುತ್ತೀ, ಎಚ್ಚರವಿರಲಿ; ನಿನ್ನ ತಲೆ ಯನ್ನು ಬಾದಶಹನಗೆ ಒಪ್ಪಿಸದಿದ್ದರೆ ನಾನು ರಾಧಾಬಾಯಿಯೇ ಅಲ್ಲ.

## ಸ್ವಾಮಿದ್ರೋಹವು !

ಬಾದಶಹನ ಸೈನ್ಯವು ರಾಯಗಡವನ್ನು ಮುತ್ತಿ ಹತ್ತು ತಿಂಗಳಾಗಿದ್ದವು. ಆದರೂ ಏಸೂಬಾಯಿಯು ಕರ್ತೃತ್ವಶಾಲಿಯಾದ್ದರಿಂದ ಅದು ಬಾದಶಹನ ಕೈ ಸೇರಿದ್ದಿಲ್ಲ; ಬಾದಶಹನು ಅದನ್ನು ಬೇಗನೆ ಕೈವಶಮಾಡಿಕೊಳ್ಳಬೇಕೆಂದು ಆತುರಪಡುತ್ತಲಿದ್ದನು. ಯಾತಿಕದಖಾನನು ಬಲವಾದ ಮುತ್ತಿಗೆ ಹಾಕಿಕೊಂಡು ಕುಳಿತಿದ್ದನು. ಆದರೆ ಕೋಟೆಯು

ಬೇಗನೆ ಕೈಸೇರದ್ದರಿಂದ ಬಾದಶಹನು ಯಾತಿಕದಖಾನನ ತಂದೆಯಾದ ಅಸದಖಾನನೆಂಬ ಅನುಭವಿಕ ಶೂರ ಸರದಾರನನ್ನು ದೊಡ್ಡ ದಂಡಿನೊಡನೆ ಆತನ ಸಹಾಯಕ್ಕಾಗಿ ರಾಯಗಡಕ್ಕೆ ಕಳಿಸಿದನು. ಹೀಗಾಗಿ ರಾಯಗಡದ ಮುತ್ತಿಗೆಯನ್ನು ಎಬ್ಬಿಸುವದು ಮರಾಟರಿಗೆ ದುಸ್ತರವಾಗಿತ್ತು. ಇಂಥ ಪ್ರಚಂಡ ಸೈನ್ಯವು ಕೋಟೆಯನ್ನು ಮುತ್ತಿದ್ದರೂ ಏಸೂಬಾಯಿಯ ದಕ್ಷತೆಯಿಂದ ಕೋಟೆಯು ಮೊಗಲರಿಗೆ ಬೇಗನೆ ಹಣಿಯುವ ಹಾಗಿದ್ದಿಲ್ಲ. ಮಳೆಗಾಲವು ಸಮೀಪಿಸಹತ್ತಿತು. ಅಲ್ಲಿಯವರೆಗೆ ಮುತ್ತಿಗೆಯು ತಡೆದರೆ ಬಹಳ ತ್ರಾಸವಾಗುವದೆಂಬದನ್ನು ಮೊಗಲರು ಅರಿತಿದ್ದರು. ಆದ್ದರಿಂದ ಅವರು ಹ್ಯಾಗಾದರೂ ಮಾಡಿ ಕೋಟೆಯನ್ನು ಬೇಗನೆ ಕೈವಶಮಾಡಿಕೊಳ್ಳಬೇಕಾಗಿತ್ತು. ಇದಕ್ಕಾಗಿಯೇ ರಾಯಗಡದ ಕಿಲ್ಲೇದಾರನಿಗೆ ವಾಯಿಯ ದೇಶಮುಖಿಯ ಆಶೆಯನ್ನು ತೋರಿಸಿ, ಆತನನ್ನು ಫಿತೂರು ಮಾಡಿಕೊಳ್ಳಲು ಯಾತಿಕದಖಾನನು ಯತ್ನ ನಡಿಸಿದನು. ಆತನ ಯತ್ನವು ಮೂರು ಪಾಲು ಫಲಿಸದಂತಾಗಿತ್ತು. ಹತ್ತು ತಿಂಗಳಾದರೂ ಕೋಟೆಯ ಹೊರಗಿದ್ದ ರಾಜಾರಾಮ ಮಹಾರಾಜರಿಂದ ಕೋಟೆಯ ಮುತ್ತಿಗೆಯನ್ನು ಎಬ್ಬಿಸುವದು ಆಗದ್ದರಿಂದ ಕೋಟೆಯೊಳಗಿನವರೂ ಹಣ್ಣಾಗಿದ್ದರು. ಮೊಗಲರು ಕೋಟೆಯ ಮೇಲೆ ಲಗ್ಗೆ ಏರಿ ಬಂದಾಗೆಲ್ಲ ಒಳಗಿನ ಮರಾಟರು ಅವರನ್ನು ಚೆನ್ನಾಗಿ ಹಣಿದು ಹಿಂದಕ್ಕಟ್ಟಿದ್ದರು. ಹೀಗೆ ಮಾಡುವಾಗ ಮರಾಟರ ದಂಡೂ ಹಣ್ಣಾಗುತ್ತ ಬಂದಿತ್ತು. ದುರ್ಗದೊಳಗಿನ ಅನ್ನ ಸಾಮುಗ್ರಿಯೂ ತೀರುತ್ತ ಬಂದಿತ್ತು. ಒಟ್ಟಿಗೆ ಖಾನನೂ ಕೈಊರಿದ್ದನು; ಒಳಗಿನ ಮರಾಟರೂ ಹಣ್ಣಾಗಿದ್ದರು. ಈ ಸ್ಥಿತಿಯಲ್ಲಿ ಯಾತಿಕದಖಾನನಿಗೆ ಸೂರ್ಯಾಜಿಯ ಸಹಾಯವು ಅವಶ್ಯವಾಗಿ ಬೇಕಾಗಿತ್ತು. ಅತ್ತ ಏಸೂಬಾಯಿಯು ಸೂರ್ಯಾಜಿಪಿಸಾಳ, ಉದ್ಧವಯೋಗದೇವ, ಶಿವಾಜಿಯ ಕಾಲಕ್ಕಿದ್ದ ಪ್ರಸಿದ್ಧ ಪ್ರತಾಪರಾವಗುಜರನ ಮಗನಾದ ಖಂಡೇರಾವ ಗುಜರ ಎಂಬ ಮೂವರು ಸ್ವಾಮಿಭಕ್ತರ ಸತ್ವದ ಮೇಲೆ ಕೈ ಊರಿದ್ದಳು. ಇವರಲ್ಲಿ ಸೂರ್ಯಾಜಿ ಪಿಸಾಳನು ವಾಯಿಯ ದೇಶಮುಖಿಗೆ ಜೋತದ್ದರಿಂದ ಅವನ ಸತ್ವಭಂಗವಾಗಿತ್ತು. ಆತನು ಕೋಟೆಯು ಯಾವಾಗ ಮೊಗಲರ ಕೈಸೇರಿ, ತನಗೆ ವಾಯಿಯ ದೇಶಮುಖಿಯ ಯಾವಾಗ ಸಿಕ್ಕೀತೆಂದು ಚಡಪಡಿಸುತ್ತಿದ್ದನು. ಉದ್ಧವಯೋಗದೇವನೂ, ಖಂಡೇರಾಯನೂ ಮಾತ್ರ ಅಚಲವಾದ ಸ್ವಾಮಿಭಕ್ತಿಯಿಂದ ದುರ್ಗದ ರಕ್ಷಣದ ವಿಷಯವಾಗಿಯೂ, ತಮ್ಮಸ್ವಾಮಿಯು ರಕ್ಷಣದ ವಿಷಯವಾಗಿಯೂ ದೇಹದ ಹಂಗುದೊರೆದು ಸಿದ್ಧರಾಗಿದ್ದರು.

ಹೀಗಿರುವಾಗ ಸೂರ್ಯಾಜಿ ಪಿಸಾಳನು ಅಸದಖಾನನ ಬಳಿಗೆ ಹೋಗಿ– ''ಖಾನಸಾಹೇಬ, ಸಂತಾಜಿಯು ಫಕೀರನ ವೇಷದಿಂದ ರಾಯಗಡದ ನೆರೆಯ ಗುಡಿಯಲ್ಲಿರುತ್ತಾನೆ. ಆತನನ್ನು ಹಿಡಿಯಲಿಕ್ಕೆ ದೇವಸ್ಥಾನದಲ್ಲಿ ರಜಪೂತ ಸೈನ್ಯವನ್ನೂ, ಅರಣ್ಯದಲ್ಲಿ ಮೊಗಲ ಸೈನ್ಯವನ್ನೂ ಕಳಿಸಬೇಕು'' ಎಂದು ಹೇಳಿದನು. ಅಸದಖಾನನು ಸೂರ್ಯಾಜಿಯ ಈ ಮಾತನ್ನು ಕೇಳಿಕೊಂಡು ಸೈನ್ಯದ ಒಂದರೆಡು ಗುಂಪುಗಳನ್ನು ಮಾತ್ರ ಕಳಿಸಿದನು. ಅಸದ

ಖಾನನು ಅನುಭವಿಕ ಸರದಾರನಿದ್ದನು. ಆತನು ಸೂರ್ಯಾಜಿಯ ಮಾತಿನ ಮೇಲೆ ಸಂಪೂರ್ಣ ವಿಶ್ವಾಸವಿಡಲಿಲ್ಲ. ಮರಾಟರೆಲ್ಲರ ಕಾಯಕವು ಒಂದೇ ಆದದ್ದರಿಂದ, ಸೂರ್ಯಾಜಿಯು ಸುಳ್ಳೇ ನನಗೇನಾದರೂ ಹೇಳಿ, ಸಂಪೂರ್ಣ ಸೈನ್ಯದೊಡನೆ ನನ್ನನ್ನು ಅತ್ತಕಡೆಗೆ ಅಟ್ಟಿ ಏನಾದರೂ ಘಾತಮಾಡಬಹುದೆಂದು ಆತನು ತರ್ಕಿಸಿದನು. ಸಂತಾಜಿಯು ಒಬ್ಬನೇ ಅರಣ್ಯದಲ್ಲಿರುವದು ಖಾನನಿಗೆ ಶಕ್ಯವಾಗಿ ತೋರಲಿಲ್ಲ. ಅದು ಆತನಿಗೆ ಶಕ್ಯವಾಗಿ ತೋರಿದ್ದರೆ, ತನ್ನ ಸೈನ್ಯದಿಂದ ಅರಣ್ಯವನ್ನು ಮುತ್ತಿ ಸಂತಾಜಿಯನ್ನು ಹಿಡಿದು ಬಾದಶಹನ ಬಳಿಗೆ ಕಳಿಸಲಿಕ್ಕೆ ಮುಂದುವರಿಯುತ್ತಿದ್ದನು. ಇದಲ್ಲದೆ ಆತನು ಸಂತಾಜಿಯ ಕೈಯನ್ನು ಚೆನ್ನಾಗಿ ಬಲ್ಲವನಾದ್ದರಿಂದ, ಸೂರ್ಯಾಜಿಯ ಮಾತಿನಿಂದ ಈಗ ಮಬ್ಬಿಗೆ ಬೀಳಲಿಲ್ಲ; ಮತ್ತು ಜಂಜೀರೆಯ ಕಡೆಯಿಂದ ರಾಯಗಡವನ್ನು ಮುತ್ತಿದ್ದ ತನ್ನ ಮಗನಾದ ಯಾತಿಕದ ಖಾನನಿಗೆ ಎಚ್ಚರದಿಂದಿರುವ ಬಗ್ಗೆ ಸೂಚಿಸಿದನು. ಮೊಗಲರ ಅಷ್ಟು ದೊಡ್ಡ ಸೈನ್ಯವು ರಾಯಗಡವನ್ನು ಮುತ್ತಿದ್ದರೂ ಮರಾಟರು ತಮ್ಮನ್ನು ಯಾವಾಗ ಹಣಿದಾರೆಂಬ ಭಯವು ಅವರಿಗೆ ಸಂಪೂರ್ಣ ವಾಗಿ ಇತ್ತು. ಅವರು ರಾಯಗಡದ ಮುತ್ತಿಗೆಯನ್ನು ಮುಗಿಸಲು ಹವಣಿಸುತ್ತಿದ್ದರು. ಇದಕ್ಕಾಗಿ ಯಾತಿಕದಖಾನನು ಸೂರ್ಯಾಜಿಯ ಮನೋಗತವನ್ನು ಸ್ಪಷ್ಟವಾಗಿ ತಿಳಿದು ಕೊಳ್ಳಲು ಆತುರಪಡುತ್ತಿದ್ದನು. ಆತನು ಸಮಯ ನೋಡಿ ಸೂರ್ಯಾಜಿಯನ್ನು ತನ್ನ ಬಳಿಗೆ ಕರಿಸಿಕೊಂಡು ಏಕಾಂತದಲ್ಲಿ—ಸೂರ್ಯಾಜಿ, ನಮ್ಮ ಸೈನ್ಯವನ್ನು ರಾಯಗಡದ ಕೋಟೆಯ ಮೇಲೆ ಕರಕೊಳ್ಳುವ ಸಂಬಂಧದಿಂದ ಏನು ಮಾಡಿದಿರಿ? ವಾಯಿಯ ದೇಶ ಮುಖಿಯ ಸಂಬಂಧದಿಂದ ನೀವು ನಿಶ್ಚಿಂತರಾಗಿರಬೇಕು. ಕೋಟೆಯು ಕೈಸೇರಿದ ಕೂಡಲೆ ನಾನೂ ನೀವು ತುಳಜಾಪುರಕ್ಕೆ ಬಾದಶಹನ ಬಳಿಗೆ ಹೋಗೋಣ. ಸ್ವತಃ ನಾನು ಬಾದಶಹನ ಮುಂದೆ ಹೇಳಿ ನಿಮಗೆ ದೇಶಮುಖಿಯನ್ನು ಕೊಡಿಸುತ್ತೇನೆ. ಕೋಟೆಯನ್ನು ಕೈವಶ ಮಾಡಿಕೊಳ್ಳುವದು ನಮಗೆ ಅಸಾಧ್ಯವೆಂದು ನೀವು ತಿಳಿಯಬೇಡಿರಿ. ಹತ್ತು ತಿಂಗಳು ಹತ್ತು ವಲ್ಲಿ ಒಂದು ವರ್ಷ ಹತ್ತೀತು! ಆದರೆ ನಿಮಗೆ ದೇಶ ಮುಖಿಯು ಸಿಗುವದೊತ್ತಟ್ಟಿಗುಳಿದು, ಬಾದಶಹನು ನಿಮ್ಮೆಲ್ಲರ ರುಂಡಗಳನ್ನು ದುರ್ಗದ ಅಗಸೆ ಬಾಗಲಿಗೆ ಕಟ್ಟಿಸಿಯಾನೆಂಬದನ್ನು ಚೆನ್ನಾಗಿ ನೆನಪಿನಲ್ಲಿಡಿರಿ.

ಈ ಮೇರೆಗೆ ಖಾನನು ಸೂರ್ಯಾಜಿಯನ್ನು ಬೆದರಿಸಲು, ಸೂರ್ಯಾಜಿಗೆ ಆತನ ಮಾತೇ ನಿಜವಾಗಿ ತೋರಿತು; ಯಾಕಂದರೆ, ಇನ್ನು ರಾಯಗಡದ ಮುತ್ತಿಗೆಯನ್ನು ಎಬ್ಬಿಸಲಿಕ್ಕೆ ಹೊರಗಿನಿಂದ ಸಹಾಯವು ಒದಗುವ ಹಾಗಿದ್ದಿಲ್ಲ. ಪಲ್ಹಾಳಗಡದಲ್ಲಿದ್ದ ರಾಜಮಂಡಲವನ್ನು ಗೊತ್ತಿಗೆ ಹಚ್ಚುವದಕ್ಕಾಗಿ ಅಸದಖಾನನು ಹೊರಡುವದು ನಿಶ್ಚಯವಾದಂತಾಗಿತ್ತು. ಇಂಥ ಸ್ಥಿತಿಯಲ್ಲಿ ತಾನು ತನ್ನ ವಾಯಿಯ ದೇಶಮುಖಿಯನ್ನಾದರೂ ಯಾಕೆ ಕಳಕೊಳ್ಳಬೇಕೆಂದು ಸೂರ್ಯಾಜಿಯು ಯೋಚಿಸಿದನು. ಅಷ್ಟರಲ್ಲಿ ಆತನ ಮನಸ್ಸಿನಲ್ಲಿ ಮತ್ತೊಂದು ವಿಚಾರವು ಉತ್ಪನ್ನವಾಯಿತು. ಏಸೂಬಾಯಿಯಂಥ ಒಬ್ಬ ವಿಧವೆಯು ತನ್ನ ಪರಾಕ್ರಮದಿಂದ ಈವರೆಗೆ ರಾಯಗಡದ ಕೋಟೆಯನ್ನು ಕಾಯ್ದುಕೊಂಡಿದ್ದು, ತಾನು ಈಗ ಮೊಗಲರನ್ನು

ಕೂಡಿ, ಆ ಶೂರ ಸ್ತ್ರೀಯ ಸ್ವರಾಜ್ಯೋದ್ಧಾರದ ಕಾರ್ಯಕ್ಕೆ ವಿಘ್ನವನ್ನುಂಟು ಮಾಡುವದು ಅಯೋಗ್ಯವೆಂದು ಭಾವಿಸಿದನು. ಆದರೆ ಕಡೆಗೆ ಬಾದಶಹನಿಗೇ ಗೆಲವು ಬರುವದು ನಿಶ್ಚಯವೆಂಬ ವಿಚಾರವು ಆತನಲ್ಲಿ ದೃಢವಾಗಿ,ಇಡಿಯ ಮಹಾರಾಷ್ಟ್ರ ರಾಜ್ಯವು ಮುಳುಗುತ್ತಿರುವಾಗ,ತಾನು ಬಾದಶಹನಿಂದ ವಾಯಿಯ ದೇಶಮುಖಿಯನ್ನಾದರೂ ಸಂಪಾದಿಸುವದು ಅಷ್ಟರಮಟ್ಟಿಗೆ ಮಹಾರಾಷ್ಟ್ರರ ಹಿತವನ್ನೇ ಮಾಡಿದ ಹಾಗಾಗುತ್ತ ದೆಂದು ಆತನು ಸಮಾಧಾನ ಮಾಡಿಕೊಂಡನು. ಒಂದು ಪಕ್ಷದಲ್ಲಿ ಏಸೂಬಾಯಿಯು ಜಯಶಾಲಿಯಾಗಿ ಮಹಾರಾಷ್ಟ್ರರ ರಾಜ್ಯವು ಉಳಿದರೆ, ನನ್ನ ಘಾತಕತನವೆಲ್ಲ ಖಂಡೋಬನಿಗೂ, ಸಂತಾಜಿಗೂ ಗೊತ್ತಾಗಿರುವದರಿಂದ ಅವರು ನನ್ನನ್ನು ಗೊತ್ತಿಗೆ ಹಚ್ಚದೆ ಬಿಡರೆಂದು ಆತನು ನಿಶ್ಚಯಿಸಿದನು. ಒಟ್ಟಿಗೆ ಮೊಗಲರಿಗೆ ಜಯವಾಗುವ ದರಲ್ಲಿಯೇ ತನ್ನಹಿತವಿರುವದೆಂದು ತಿಳಿದು ಆ ವಿಶ್ವಾಸಘಾತಕಿಯು ಖಾನನನ್ನು ಕುರಿತು —ಖಾನಸಾಹೇಬ, ನಾನು ಇದ್ದು ಕೋಟೆಯನ್ನು ನಿಶ್ಚಯವಾಗಿ ನಿಮ್ಮ ಕೈಗೆ ಸೇರಿಸುವೆನು. ನೀವು ಸ್ವಲ್ಪವೂ ಆಯಾಸಪಡಬೇಡಿರಿ. ಕೋಟೆಯೊಳಗಿನ ಹೆಂಗಸರು, ಹುಡುಗರು ಸಹ ನಿಮ್ಮ ಕೈಸೇರಿದರೆಂದು ತಿಳಿಯಿರಿ ಆದರೆ ನೀವು ನನ್ನವರೆಡು ಬೇಡಿಕೆ ಗಳನ್ನು ಪೂರೈಸಬೇಕು. ವಾಯಿಯ ದೇಶಮುಖಿಯನ್ನು ಬಾದಶಹರಿಂದ ನನಗೆ ಕೊಡಿಸ ಬೇಕೆಂಬದು ನನ್ನ ಒಂದನೆಯ ಬೇಡಿಕೆಯು. ನಾನು ನನ್ನ ಮಾವಳೆ ಜನರ ಸಹಾಯದಿಂದ ನಿಮ್ಮ ಕೆಲಸವನ್ನು ಮಾಡಿಕೊಡುವೆನು. ಮಾತುಶ್ರೀ ಏಸೂಬಾಯಿಯವರ ಸನಿಯಕ್ಕೆ ಮೊಗಲರು ಸುಳಿಯಲಾಗದು. ನನ್ನ ಮಾವಳರು ಆ ಕೆಲಸವನ್ನು ಮಾಡುವರು. ನನ್ನ ಮಾವಳೇ ಜನರ ಆಧಿಪತ್ಯವನ್ನು ನನ್ನ ಕೈಯಲ್ಲಿಟ್ಟುಕೊಳ್ಳುವೆನಲ್ಲದೆ, ತಮ್ಮ ಕೈಯಲ್ಲಿ ಕೊಡಲಿಕ್ಕಿಲ್ಲ; ಇಷ್ಟು ಮಾತು ನಡಿಸಿಕೊಡಬೇಕೆಂಬುದು ನನ್ನ ಎರಡನೆಯ ಬೇಡಿಕೆಯು.

ಖಾನ–ನೀನು ನಿನ್ನ ಮಾವಳದ ಅಧಿಪತ್ಯವನ್ನು ಕೈಯಲ್ಲಾದರೂ ಇಟ್ಟುಕೊ, ಕಾಲಲ್ಲಾದರೂ ಇಟ್ಟುಕೋ? ನನಗೆ ಅದರ ಹಂಗು ಇಲ್ಲ, ಹ್ಯಾಗಿದ್ದರೂ ಕೋಟೆಗೆ ನಾನು ಬಲವಾದ ಮುತ್ತಿಗೆಯನ್ನು ಹಾಕಿಯೇ ಇರುತ್ತೇನೆ. ಒಳಗಿನ ಜನರು ತೀರ ಹಣ್ಣಿಗೆ ಬಂದಿರುವರೆಂಬ ಮಾತು ನನಗೆ ಗೊತ್ತಿದೆ. ಕೋಟೆಗೆ ಅನ್ನ ಸಾಮುಗ್ರಿಯು ಲೇಶ ವಾದರೂ ಮುಟ್ಟುವ ಹಾಗಿಲ್ಲ, ಈಗ ನನಗೆ ಗುಹೆಯ ಮಾರ್ಗವು ಗೊತ್ತಾಗದಿದ್ದರೂ, ಅದರ ಬಾಗಿಲವಂತು ನನಗೆ ಗೊತ್ತಾಗಿರುತ್ತದೆ. ಈ ಅರಣ್ಯವನ್ನೆಲ್ಲ ಸುಟ್ಟು ನಿಮ್ಮನ್ನು ಉಪವಾಸ ಕೆಡವಿ ಕೊಲ್ಲುವೆನು. ಎಚ್ಚರವಿರಲಿ! ಈಗ ನೀನು ಅನುಕೂಲವಾದ ಪಕ್ಷದಲ್ಲಿ ನಿನ್ನ ಮೇಲೆ ವಿಶ್ವಾಸವಿಟ್ಟು, ನಿನ್ನನ್ನು ಹಿಂಬಾಲಿಸಿ ಗುಹೆಯೊಳಗೆ ನಾನೂ ಬರುವೆನು. ಈ ಪ್ರಸಂಗದಲ್ಲಿ ನೀನು ಏನಾದರೂ ವಿಶ್ವಾಸಘಾತ ಮಾಡಿದರೆ, ನಮ್ಮ ಜನರು ನಿಮ್ಮ ದೇವಸ್ಥಾನವನ್ನು ಕೆಡವಿ ನೆಲಸಮಮಾಡಿ, ಹಸಿದ ತೋಳಗಳಂತೆ ನಿಮ್ಮನ್ನೇ ಹರಿಯುವರು. ಮತ್ತು ಬಾದಶಹನು ಗುಹೆಯನ್ನು ಅಗಿಸಿ, ಬೈಲು ಮಾಡಿಸಿ, ನಿಮ್ಮನ್ನು ನಿಲ್ಲಿಸಿ ಸುಡಿಸುವನು. ಬಹು ಜೋಕೆ!

ಖಾನನ ಈ ಬೆದರಿಕೆಯ ಮಾತುಗಳಿಂದ ಸೂರ್ಯಾಜಿಯ ಮನಸ್ಸಿನ ಚಾಂಚಲ್ಯವು ನಷ್ಟವಾಗಿ, ಆತನು ಕೋಟೆಯನ್ನು ಖಾನನಿಗೆ ಒಪ್ಪಿಸುವ ನಿಶ್ಚಯಮಾಡಿದನು. ನಾಳೆ ಬೆಳಗಾಗುತ್ತಲೆ ನಿಮ್ಮನ್ನು ಕೋಟೆಯೊಳಗೆ ಕರಕೊಂಡು ಹೋಗುವೆನೆಂದು ಖಾನನಿಗೆ ಹೇಳಿದನು. ಅದನ್ನು ಕೇಳಿ ಖಾನನು ಅಂತರಂಗದಲ್ಲಿ ಬಹು ಸಮಾಧನಪಟ್ಟು. ಏಕೆಂದರೆ ಮಳೆಗಾಲ ಬರುವದರೊಳಗೆ ಕೋಟೆಯನ್ನು ಸ್ವಾಧೀನಪಡಿಸಿಕೊಳ್ಳದಿದ್ದರೆ ಆತನ ಪರಿಣಾಮವಾಗುವ ಹಾಗಿದ್ದಿಲ್ಲ. ಖಾನನು ಸೂರ್ಯಾಜಿಯ ಮಾತಿಗೆ ಒಪ್ಪಿಕೊಂಡು, ಆತನನ್ನು ಸವಿಮಾತುಗಳಿಂದ ಪ್ರೋತ್ಸಾಹಿಸಿ, ತನ್ನ ಬಿಡಾರಕ್ಕೆ ತೆರಳಿದನು. ಇತ್ತ ಸೂರ್ಯಾಜಿಯು ಗಡವನ್ನು ಹತ್ತಿದನು. ದುರ್ಗದೊಳಗಿನ ತನ್ನ ಸೈನ್ಯವನ್ನು ಕಡಿಮೆಮಾಡಿ, ತನ್ನ ಕಾರ್ಯವು ಸುಲಭವಾಗುವಂತೆ ಮಾಡುವದು ಆ ಸ್ವಾಮಿದ್ರೋಹಿಯ ಉದ್ದೇಶ ವಾಗಿತ್ತು. ಆತನು ದುರ್ಗರಕ್ಷಕನಾದ್ದರಿಂದ ಸೈನಿಕರು ಆತನ ಅಪ್ಪಣೆಯನ್ನು ಪಾಲಿಸಲೇ ಬೇಕಾಗಿತ್ತು. ಆತನು ಮರಾಟರ ಸೈನ್ಯದ ದೊಡ್ಡ ಭಾಗವನ್ನು ಒಂದು ನೆವಹೇಳಿ ಕೋಟೆಯ ಕೆಳಗೆ ಕಳಿಸಿದನು. ತನಗೆ ಅನುಕೂಲವಾದ ಜನರನ್ನು ಕಾವಲಿನಲ್ಲಿಡುವ ಉದ್ದೇಶದಿಂದ ಆತನು ದುರ್ಗದ ಆಯಾ ನಿಟ್ಟಿನ ಕಾವಲಿನ ಜನರ ಅದಲು ಬದಲು ಮಾಡಿದನು. ಇಷ್ಟೆಲ್ಲ ಕೆಲಸಮಾಡುವಾಗ ಅವನ ಮೋರೆಯು ಕಪ್ಪಿಟ್ಟಿತ್ತು. ಆತನ ಮನಸ್ಸಿನಲ್ಲಿ ಉತ್ಸಾಹವಿದ್ದಿಲ್ಲ. ಅಂದಿನ ರಾತ್ರಿಯೆಲ್ಲ ದುರ್ಗದ ವ್ಯವಸ್ಥೆಯನ್ನು ತನಗೆ ಅನುಕೂಲ ವಾಗುವಂತೆ ಮಾಡಿ ಕೊಳ್ಳುವದರಲ್ಲಿಯೇ ಸೂರ್ಯಾಜಿಯು ಕಳೆದನು. ಏಸೂಬಾಯಿಯವರ, ಹಾಗು ಬಾಲ ಶಿವರಾಯನ ಅಂಗರಕ್ಷಕನಾದ ಜೋತಾಜಿಗೆ ಸೂರ್ಯಾಜಿಯ ಈ ಕೃತಿಯ ಸಂಶಯವು ಬಂದಿತು; ಆದರೆ ಆ ಸ್ವಾಮಿನಿಷ್ಠನು ತನ್ನ ಒಡೆಯರ ಅಂಗರಕ್ಷಣದ ಕಾರ್ಯದಲ್ಲಿ ಆಸಕ್ತನಾಗಿರಬೇಕಾದ್ದರಿಂದ, ಸೂರ್ಯಾಜಿಯ ಕೃಷ್ಣ ಕಾರಸ್ಥಾನವನ್ನು ಸಂಪೂರ್ಣವಾಗಿ ಕಂಡುಹಿಡಿಯಲಿಕ್ಕೆ ಆತನಿಗೆ ಆಸ್ಪದವು ದೊರೆಯಲಿಲ್ಲ. ಕಾಲಕ್ಕನುಸರಿಸಿ ಯಾರಿಗಾದರೂ ಬುದ್ಧಿಯು ಉತ್ಪನ್ನವಾಗುವದಷ್ಟೇ? ಇತ್ತ ಸೂರ್ಯಾಜಿಯ ಬೆಳತನಕ ಕಣ್ಣಿಗೆ ಕಣ್ಣು ಹಚ್ಚದೆ ಎಲ್ಲ ಸಿದ್ಧತೆಯನ್ನು ಮಾಡಿಕೊಳ್ಳುತ್ತಿರಲು, ಅತ್ತ ಮೊಗಲರು ಅಂದಿನ ರಾತ್ರಿ ಕಣ್ಣಿಗೆ ಕಣ್ಣು ಹಚ್ಚದೆ, ತಮ್ಮ ಎಲ್ಲ ಸಿದ್ಧತೆಯನ್ನು ಮಾಡಿಕೊಂಡರು. ಈ ಯಾವ ಸುದ್ದಿಯನ್ನೂ ಏಸೂ ಬಾಯಿಯವರು ಅರಿಯರು. ಅವರು ನಿತ್ಯ ಕ್ರಮದಂತೆ ಆ ದಿನ ರಾತ್ರಿ ಕೃಷ್ಣಾಜಿ ಪ್ರಭುವಿನ ಕೈಯಿಂದ ಮುದ್ಗಲ ಪುರಾಣದೊಳಗಿನ ಯುದ್ಧಕಾಂಡವನ್ನು ತಮ್ಮ ಪರಿವಾರಕ್ಕೋಸ್ಕರ ಹೇಳಿಸಿ, ದುರ್ಗದ ನಾಲ್ಕೂಕಡೆಯ ಭದ್ರತೆಯನ್ನು ವಿಚಾರಿಸಿ, ತಾವು ನೋಡುವದನ್ನು ಕಣ್ಣುಮುಟ್ಟಿ ನೋಡಿ, ಪ್ರತಾಪರಾವ ಗುಜರನ ಹೆಂಡತಿಯ ಸಂಗಡ ಸ್ವಲ್ಪ ವಿಶ್ರಾಂತಿ ಯನ್ನು ಹೊಂದುವದಕ್ಕಾಗಿ ಪವಡಿಸಿದರು.

ಕಾಲಚಕ್ರವನ್ನು ತಡೆಯುವವರು ಯಾರು? ಅಂದಿನ ದುಷ್ಟ ರಾತ್ರಿಯು ಕ್ರಮಿಸಿ ಹೋಗಿ ಬೆಳ್ಳಗೆ ಬೆಳಗಾಯಿತು. ಏಸೂಬಾಯಿಯವರು ಬಾಳಶಿವರಾಯನೊಡನೆ ಉಷಃ ಕಾಲದಲ್ಲಿಯೇ ಎದ್ದು, ನಿತ್ಯಕ್ರಮದಂತೆ ಶಿವಪ್ರಭುವಿನ ಸಮಾಧಿಯ ದರ್ಶನಕ್ಕಾಗಿ

ಹೊರಟುಹೋಗಿದ್ದರು. ಇತ್ತ ಗುಹೆಯ ಬಾಗಿಲಲ್ಲಿ ಸೂರ್ಯಾಜಿಯು ಸ್ವಾಮಿದ್ರೋಹ ಮಾಡಲು ಸಜ್ಜಾಗಿ ನಿಂತು ಯಾತಿಕದ ಖಾನನ ಹಾದಿಯನ್ನು ನೋಡುತ್ತಲಿದ್ದನು. ಅಷ್ಟರಲ್ಲಿ ಖಾನನು ತನ್ನ ಪರಿವಾರದೊಡನೆ ಬಂದು ಸೂರ್ಯಾಜಿಯನ್ನು ಕುರಿತು—

ಖಾನ— ಯಾಕೆ ಸೂರ್ಯಾಜೀ, ಎಲ್ಲ ಅನುಕೂಲವಷ್ಟೇ?

ಸೂರ್ಯಾಜಿ— ಏನು ಅನುಕೂಲವೋ ಪ್ರತಿಕೂಲವೋ ಯಾವದೂ ತಿಳಿಯದಾಗಿದೆ; ಖಾನಸಾಹೇಬ, ಸ್ವಾಮಿನಿಷ್ಠ ಮರಾಟರ ಅಳವು ಯಾರಿಗೂ ತಿಳಿಯದು. ಕಾರ್ಯವಾಗುವವರೆಗೆ ಹೀಗೆಯೇ ಆದೀತೆಂದು ಹೇಳುವ ಹಾಗಿಲ್ಲ; ಆದರೂ ನಾನು ಎಲ್ಲ ವ್ಯವಸ್ಥೆಯನ್ನು ಉತ್ತಮರೀತಿಯಿಂದ ಮಾಡಿ ಬಂದಿರುತ್ತೇನೆ. ನನ್ನ ಸಂಗಡ ಕರಕೊಂಡು ಬಂದಿರುವ ಈ ಮಾವಳರೇ ಎಲ್ಲ ಕಾರ್ಯವನ್ನು ಸಾಧಿಸುವರು. ನೀವು ಅವರ ಮೇಲೆ ಹುಕಮತ್ತು ನಡಿಸಬಾರದು.

ಖಾನ–ಹಾಗೇ, ಆಗಲಿ, ಸೂರ್ಯಾಜೀ, ನನಗೂ ಅದೇ ಬೇಕಾಗಿತ್ತು, ಮುಸಲ್ಮಾನರಿಗೆ ಶರಣು ಬರಲಿಕ್ಕೆ ನಿಮ್ಮ ರಾಣೀಸಾಹೇಬರಿಗೆ ಅಪಮಾನಕರವಾಗಿ ತೋರಬಹುದು; ಆದರೆ ಸ್ವಜನರಾದ ನಿಮ್ಮ ಆಧೀನರಾಗಲಿಕ್ಕೆ ಅವರಿಗೆ ಅಷ್ಟು ಕಠಿಣವಾಗಲಿಕ್ಕಿಲ್ಲ! ನಾನು ನಿಮಗೆ ಇದೇ ಮಾತನ್ನು ಸೂಚಿಸಬೇಕೆಂದು ಮಾಡಿದ್ದೆನು.

ಸೂರ್ಯಾಜಿ— ನೀವು ಯೋಚಿಸಿದ್ದು ಯಥಾರ್ಥವು. ಎಂದೂ ಬಾರದಿದ್ದ ದುರ್ಧರ ಪ್ರಸಂಗವು ಇಂದು ನಮ್ಮ ರಾಣೀಸಾಹೇಬರವರಿಗೆ ಒದಗತಕ್ಕದ್ದಿರುತ್ತದೆ. ಇಂಥ ಪ್ರಸಂಗದಲ್ಲಿ ಅವರ ಮನಸ್ಸಿಗೆ ವಿಶೇಷ ವ್ಯಥೆಯಾಗದಂತೆ ನಡೆಯುವದು ಅವಶ್ಯವಾಗಿರುತ್ತದೆ; ಆದ್ದರಿಂದಲೇ ದುರ್ಗವನ್ನು ವಶಮಾಡಿಕೊಳ್ಳುವ ಸಂಪೂರ್ಣ ಅಧಿಕಾರವು ನನ್ನ ಕಡೆಗಿರಬೇಕು, ಅದರಲ್ಲಿ ನೀವು ಕೈ ಹಾಕಬಾರದೆಂದು ನಾನು ಬೇಡಿಕೊಳ್ಳುವೆನು.

ಖಾನ— ಹಾಗೇ ಆಗಲಿ, ಇನ್ನು ತಡವೇಕೆ? ಸಾಗಿರಿ ಮುಂದಕ್ಕೆ

ಸೂರ್ಯಾಜಿ— ಖಾನಸಾಹೇಬ, ಈ ಅರಣ್ಯದಲ್ಲಿಯ ಬೇರೊಂದು ಹಾದಿಯಿಂದ ನಾವು ಗುಹೆಯನ್ನು ಪ್ರವೇಶಿಸೋಣ. ಗುಡಿಯೊಳಗಿಂದ ಹೋಗುವದರಿಂದ ಮೂರ್ತಿಯು ಭ್ರಷ್ಟಾಕಾರವಾಗವದು.

ಸೂರ್ಯಾಜಿಯ ಈ ಮಾತುಗಳನ್ನು ಕೇಳಿ ಖಾನನು ಮನಸ್ಸಿನಲ್ಲಿ ನಕ್ಕನು. ಆತನು ಕಾರ್ಯಸಾಧನದ ಕಡೆಗೆ ಲಕ್ಷ್ಯಗೊಟ್ಟು ಏನೂ ಮಾತಾಡದೆ, ಸೂರ್ಯಾಜಿಯು ತೋರಿಸಿದ ಹಾದಿಯಿಂದಲೇ ಹೋಗಿ ಗುಹೆಯನ್ನು ಪ್ರವೇಶಿಸಿದನು. ಮುಂದೆ ಸೂರ್ಯಾಜಿ, ಹಿಂದೆ ಅವನ ವಿಶ್ವಾಸದ ಮಾವಳರು ಅವರ ಹಿಂದೆ ಖಾನನ ಜನರು ಹೊರಟಿದ್ದರು. ಸೂರ್ಯಾಜಿಯನ್ನೂ ಆತನ ಮಾವಳರನ್ನೂ ದುರ್ಗದ ಕಾವಲುಗಾರರು ಸುಮ್ಮನೆ ಬಿಟ್ಟರು; ಆದರೆ ಅವರ ಹಿಂದೆ ಮುಸಲ್ಮಾನರು ಬರುವದನ್ನು ನೋಡಿ ಆ ಕಾವಲುಗಾರರು ಶಂಕಿಸಿ, ಸೂರ್ಯಾಜಿಯನ್ನು ಅದೇನೆಂದು ಕೇಳಿದರು. ತಾನು ನಿನ್ನೆ ರಾತ್ರಿ ನಿಯಮಿಸದ ಕಾವಲುಗಾರರು ಇರದೆ, ಅವರ ಸ್ಥಳದಲ್ಲಿ ಹೊಸ ಕಾವಲುಗಾರರು ಬಂದದ್ದನ್ನು ನೋಡಿ

ಸೂರ್ಯಾಜಿಯು ಗಾಬರಿಯಾದನು. ಈ ಸ್ಥಳದಲ್ಲಿ ನಿಮಗೆ ಯಾರು ಬರಹೇಳಿದರೆಂದು ಆತನು ಪ್ರಶ್ನೆ ಮಾಡಲು, ಜೋತಾಜಿಯು ನಮ್ಮನ್ನು ಇಲ್ಲಿ ಇರಿಸಿದನೆಂದು ಕಾವಲುಗಾರರು ಹೇಳಿದರು. ಅಷ್ಟರಲ್ಲಿ ಬಹುಜನ ಮುಸಲ್ಮಾನರು ದುರ್ಗದಲ್ಲಿ ಬಂದದ್ದರಿಂದ ಆ ಸ್ವಾಮಿನಿಷ್ಠ ಕಾವಲುಗಾರರು ತಮ್ಮ ಖಡ್ಗಗಳನ್ನು ಹಿರಿದು ಕಾದಲು ಸಿದ್ಧರಾಗಿ, ''ಫಿತೂರಿಯು, ಫಿತೂರಿಯು,'' ಎಂದು ಗದ್ದಲ ಮಾಡಿದರು. ಆಗ ನಾಲ್ಕೂ ಕಡೆಯಿಂದ ಮಾವಳರ ಹಿಂಡು ಶಸ್ತ್ರಾಸ್ತ್ರಗಳಿಂದ ಸಜ್ಜಾಗಿ ಗುಹೆಯ ಮುಖದ ಬಳಿಯಲ್ಲಿ ನೆರೆಯಿತು. ಸೂರ್ಯಾಜಿಯು ನಿನ್ನಿನ ರಾತ್ರಿಯಲ್ಲಿಯೇ ದಂಡಿನ ದೊಡ್ಡ ಭಾಗವನ್ನು ಬೇರೆ ಕಡೆಗೆ ಕಳಿಸಿದ್ದರಿಂದ ಸದ್ಯಕ್ಕೆ ಕಾದುವ ಮಾವಳರ ಸಂಖ್ಯೆಯು ಬಹು ಅಲ್ಪವಾದದ್ದಿತ್ತು, ಆದರೂ ಆ ಸ್ವಾಮಿನಿಷ್ಠ ಮಾವಳರು ಆವೇಶದಿಂದ ಮುಸಲ್ಮಾನರ ಮೇಲೆ ಬಿದ್ದು ಕಾದಹತ್ತಿದರು. ಮುಸಲ್ಮಾನರ ದೊಡ್ಡ ದಂಡಿನ ಮುಂದೆ ಮಾವಳರ ಸಣ್ಣ ಗುಂಪು ಹ್ಯಾಗೆ ನಿಲ್ಲಬೇಕು? ಆ ಸ್ವಾಮಿನಿಷ್ಠ ಮರಾಟರು ಸ್ವಾಮಿಕಾರ್ಯಕ್ಕಾಗಿ ಕಾದಿ ಒಬ್ಬೊಬ್ಬರೇ ರಣಭೂಮಿಯಲ್ಲಿ ಬೀಳಹತ್ತಿದರು. ಈ ಮೇರೆಗೆ ಸ್ವಜನರ ಸಂಹಾರವಾಗುವದನ್ನು ನೋಡಿ ಸೂರ್ಯಾಜಿಯ ಪಕ್ಷದ ಮರಾಟರೂ ಮುಸಲ್ಮಾನರ ಮೇಲೆ ಬಿದ್ದು ಕಾದಹತ್ತಿದರು. ಆಗ ಯಾಕಿಕದ ಖಾನನು ಸೂರ್ಯಾಜಿಯನ್ನು ಕುರಿತು— ''ಇದೇನು ಸೂರ್ಯಾಜೀ, ಫಿತೂರಿ ಏನು?'' ಎಂದು ಕೇಳಲು, ಸೂರ್ಯಾಜಿಯು— ''ಖಾನ ಸಾಹೇಬ ನಾನು ಮೊದಲೇ ಹೇಳಲಿಲ್ಲವೇ ನಿಮ್ಮ ಜನರು ಅವಸರ ಮಾಡಿ ಒಳಗೆ ಬರಬಾರದೆಂದು''ಎಂದು ಹೇಳಿದನು; ಆದರೆ ಖಾನನು ಸೂರ್ಯಾಜಿಯ ಮಾತಿಗೆ ಬೆದರಲಿಲ್ಲ, ಅವನ ಸೈನಿಕರೆಲ್ಲ ದುರ್ಗದೊಳಗೆ ಬಂದಿದ್ದು, ಮಾವಳರು ಕಾದಿ ಬಹು ಜನರು ಮಡಿದು ಸ್ವಲ್ಪ ಜನರು ಉಳಿದದ್ದರು. ಅವರನ್ನು ನೋಡಿ ಖಾನನು— ''ತಮ್ಮಗಳಿರಾ, ಸುಮ್ಮನೆ ಯಾಕೆ ಸಾಯುತ್ತೀರಿ? ನಮ್ಮ ಸೈನ್ಯವೆಲ್ಲ ಒಳಗೆ ಬಂದಿರುತ್ತದೆ; ಇನ್ನು ನಿಮಗೆ ನಾವು ಬೆದರುವ ಹಾಗಿಲ್ಲ, ದುರ್ಗವು ನಮ್ಮ ಕೈಸೇರಿತು. ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟು ಯುದ್ಧವನ್ನು ನಿಲ್ಲಿಸಿರಿ; ನಾನೂ ಯುದ್ಧವನ್ನು ನಿಲ್ಲಿಸುವೆನು,'' ಎಂದು ಹೇಳಿದನು. ಆದರೆ ಆತನ ಮಾತನ್ನು ಆ ಸ್ವಾಮಿನಿಷ್ಠ ಮರಾಟರು ಕೇಳುವರೇ? ಅವರು ಒಬ್ಬರಿಗೆ ಇಬ್ಬರಂತೆ ಮುಸಲ್ಮಾನರನ್ನು ಸಂಹರಿಸುತ್ತ ರಣಭೂಮಿಯಲ್ಲಿ ಬೀಳುತ್ತಲಿದ್ದರು. ಅಷ್ಟರಲ್ಲಿ ಈ ಸುದ್ದಿಯನ್ನು ಸಮಾಧಿಯ ದರ್ಶನಕ್ಕಾಗಿ ಹೋಗಿದ್ದ ಏಸೂಬಾಯಿಯವರಿಗೆ ಒಬ್ಬ ಸೇವಕನು ಓಡಿ ಹೋಗಿ ಹೇಳಿದನು!

ಮುಸಲ್ಮಾನರು ದುರ್ಗವನ್ನೇರಿ ಬಂದದ್ದನ್ನು ಕೇಳಿ ಏಸೂಬಾಯಿಯವರಿಗೆ ಸಿಡಿಲು ಬಡಿದಂತಾಯಿತು. ಈ ಭಯಂಕರ ಸುದ್ದಿಯನ್ನು ಕೇಳಿ ಸ್ವಾಮಿನಿಷ್ಠ ಜೋತಾಜಿಯು ಹುಲಿಯಂತೆ ಹಾರಿ ಸಂತಾಪದಿಂದ ಹೊರಟನು. ಆಗ ಕೆಚ್ಚೆದೆಯ ಏಸೂಬಾಯಿಯವರು— ''ಜೋತ್ಯಾ, ನಿಲ್ಲು'' ಎಂದು ಆತನನ್ನು ತಡೆದು, ಬೇರೆ ಅಪ್ಪಣೆ ಕೊಡುತ್ತಿರಲು, ಖಾನನ ವಕೀಲನು ತನ್ನ ಪರಿವಾರದೊಡನೆ ಅಲ್ಲಿಗೆ ಬಂದನು. ಖಾನನ ಈ ಜನರನ್ನು ನೋಡಿದ ಕೂಡಲೆ ಜೋತ್ಯಾನ ಸಂತಾಪವು ಮತ್ತಿಷ್ಟು ಹೆಚ್ಚಿತು. ಆಗ ಖಾನನ ಆ ಸರದಾರನು

ಏಸೂಬಾಯಿಯನ್ನು ಕುರಿತು— ''ಬಾಯಿಸಾಹೇಬ, ಕೋಟೆಯ ಮೇಲೆ ಬರಲಿಕ್ಕೆ ನಮಗೆ ಹಾದಿಯು ಸಿಕ್ಕಿತು. ನಮ್ಮ ಸೈನ್ಯದ ಮುಖ್ಯ ಭಾಗವು ದುರ್ಗದಲ್ಲಿ ಬಂದಿದೆ, ಖಾನ ಸಾಹೇಬರು ದುರ್ಗದಲ್ಲಿದ್ದಾರೆ. ನಿಮ್ಮವರು ಶಕ್ಯವಿದ್ದ ಮಟ್ಟಿಗೆ ಹೋರಾಡಿದರು. ಇನ್ನು ಮೇಲೆ ಸುಮ್ಮನೆ ರಕ್ತಪಾತ ಮಾಡುವಲ್ಲಿ ಅರ್ಥವಿಲ್ಲ'' ಎಂದು ಹೇಳಿದನು. ಅದನ್ನು ಕೇಳಿ ಏಸೂಬಾಯಿಯು ಪರಮಾವಧಿ ದುಃಖಿತಳಾದಳು. ಆದರೂ ಆ ಕೆಚ್ಚೆದೆಯ ಗಂಭೀರ ಸ್ತ್ರೀಯು ದುಃಖವನ್ನು ಹೊರಗೆ ತೋರಿಸದೆ, ಅಸಮಾಧಾನದಿಂದ— ''ಯಾವ ನೀಚನೋ ಫಿತೂರಾದ್ದರಿಂದ ಈ ಅನರ್ಥವು ಒದಗಿತು! ಸಮರ್ಥಾ,ಶ್ರೀರಾಮದಾಸ ಸ್ವಾಮಿಾ, ನಿಮ್ಮ ಆಶೀರ್ವಾದವು ವರದ ಹಸ್ತವೂ ಮಾವಂದಿರ ಮಟ್ಟಿಗೆ ಇದ್ದವೊ? ಮಾವಂದಿರ ಪುಣ್ಯವು ಇಲ್ಲಿಗೆ ತೀರಿತೇ? ಅವರ ವಂಶವು ನಷ್ಟವಾಗುವದು ಪರಮ ಗುರುವಾದ ನಿನಗೆ ಸಮ್ಮತವೇ? ಇನ್ನು ಮೇಲೆ ಗೋ–ಬ್ರಾಹ್ಮಣರ ರಕ್ಷಣವು ಹ್ಯಾಗಾದೀತು? ಪ್ರಜಾಜನರು ಹ್ಯಾಗೆ ಸುಖಿಗಳಾದರು? ಇನ್ನು ಜಗತ್ತಿಗೆ ಕ್ಷೇಮವು ಹ್ಯಾಗಾದೀತು? ಈ ಕುಟುಂಬವತ್ಸಲರು ಎತ್ತ ಹೋಗುವರು? ಯಾರ ಮೋರೆಯನ್ನು ನೋಡುವರು? ಪೂಜ್ಯ ಶಿವಪ್ರಭುವಿನ ವಂಶ ರಕ್ಷಣಕ್ಕಾಗಿಯೂ, ರಾಜ್ಯ ರಕ್ಷಣಕ್ಕಾಗಿಯೂ, ಪ್ರಲ್ಹಾದಪಂತ, ರಾಮಚಂದ್ರಪಂತರೇ ಮೊದಲಾದ ಮುತ್ಸದ್ದಿಗಳೂ, ಧನಾಜಿ ಜಾಧವ, ಸಂತಾಜಿ ಘೋರಪಡೆ ಮೊದಲಾದ ವೀರರೂ ಪರಿಪರಿಯ ಕಷ್ಟಗಳನ್ನು ಸೋಸುತ್ತಿರುವರಲ್ಲ, ಅದೆಲ್ಲ ನೀರೊಳಗೆ ಹೋಮ ಮಾಡಿದ ಹಾಗಾಗುವ ಪ್ರಸಂಗ ಒದಗೀತೆ? ಅಂಬಾಭವಾನೀ, ಭೋಸಲೆಯ ಮನೆತನದ ಮೇಲಿನ ನಿನ್ನ ಕೃಪೆಯು ತಪ್ಪಿತೇನು? ಪತಿರುಂಡದೊಡನೆ ಈ ಕೆಟ್ಟ ದೇಹವನ್ನು ಅಗ್ನಿಯಲ್ಲಿ ಈಡಾಡದೆ, ಈ ಕೂಸನ್ನು ಕಟ್ಟಿಕೊಂಡು ಬದುಕಿಯಿದ್ದು ನಾನು ಯಾವ ಮಹಾ ಕಾರ್ಯವನ್ನು ಸಾಧಿಸಿದ ಹಾಗಾಯಿತು?

ಈ ಮೇರೆಗೆ ನುಡಿಯುತ್ತಿರುವ ಧೀರ ಏಸೂಬಾಯಿಯ ಕಂಠವು ಸದ್ಗದಿತವಾಗಿ, ಆಕೆಯ ಮುಖದಿಂದ ಅಕ್ಷರಗಳು ಹೊರಡದಾದವು; ಕಣ್ಣುಗಳೊಳಗಿಂದ ನೀರುಗಳು ಧಾರೆಗಟ್ಟಿ ಸುರಿಯಹತ್ತಿದವು! ಅಷ್ಟರಲ್ಲಿ ಪ್ರತಾಪರಾವ ಗುಜರನೂ ಮಗನಾದ ಖಂಡೋಜಿ ಗುಜರನೂ, ಅವನ ತಾಯಿಯೂ, ಬೇರೆ ಪರಿವಾರದವರೂ ಅಲ್ಲಿಗೆ ಬಂದರು. ಅವರು ಮಾತೃಶ್ರೀಯವರಿಗೆ ಬಂದ ಪ್ರಸಂಗವನ್ನು ಪರಿಪರಿಯಾಗಿ ತಿಳಿಸಿ ಸಮಾಧಾನ ಮಾಡಿದರು. ಆಗ ಏಸೂಬಾಯಿ ಯವರು ಪ್ರತಾಪರಾವ ಗುಜನರ ಹೆಂಡತಿಯನ್ನು ಕುರಿತು — ''ಬರಬಾರದ ಪ್ರಸಂಗವು ಬಂತೆಂಬದು ನಿಜವು. ಆದರೆ ಅದರೊಳಗಿಂದ ಪಾರಾಗುವದೊಂದೇ ಉಪಾಯವಿರುತ್ತದೆ. ಜೋತ್ಯಾ ಹೀಗೆ ಬಾ. ನನ್ನ ಈ ಕೂಸನ್ನು ಖಡ್ಗದಿಂದ ಲಿಂಬಿಯ ಹಣ್ಣನ್ನು ಮಧ್ಯದಲ್ಲಿ ತುಂಡರಿಸುವಂತೆ ತುಂಡರಿಸು ನೋಡೋಣ! ನಾನು ಅಗ್ನಿ ಕಾಷ್ಠವನ್ನು ಭಕ್ಷಿಸುವೆನು. ಆಮೇಲೆ ನೀವು ಕೋಟೆಯನ್ನು ಮೊಗಲರಿಗೆ ಒಪ್ಪಿಸಿ ನಿಮ್ಮ ದಾರಿಯನ್ನು ಕಂಡುಕೊಳ್ಳಿರಿ,'' ಎನ್ನಲು ಜೋತ್ಯಾನು— ''ಅವ್ವನವರೇ, ಹೀಗೆ ತಾವು ಅವಿಚಾರಮಾಡಬಾರದು. ತಮ್ಮ ಈ ಅವಿಚಾರದಿಂದ ನಾವಾಗಿ ಔರಂಗಜೇಬನ

ಮನೋದಯವನ್ನು ಪೂರ್ಣಮಾಡಿದ ಹಾಗಾಗುತ್ತದೆ. ಮಹಾರಾಜರ ವಂಶಕ್ಷಯ ಮಾಡ ಬೇಕೆಂದು ಬಾದಶಹನು ನಿಶ್ಚಯಿಸಿರಲು, ನೀವಾಗಿ ಆತನಿಗೆ ಯಾಕೆ ಸಹಾಯ ಮಾಡುವಿರಿ? ಈಗ ಬಂದಿರುವ ಪ್ರಸಂಗಕ್ಕೆ ಎದೆಗೊಟ್ಟು ನಿಲ್ಲೋಣ. ನಾನು ತಮ್ಮ ಚರಣ ಸನ್ನಿಧಿ ಯಲ್ಲಿ ಯಾವಾಗಲೂ ಇರುವವನೇ. ಸಂಭಾಜಿ ಮಹಾರಾಜರ ಬಳಿಯಲ್ಲಿ ಅವರ ಚಿತೆಯಲ್ಲಿ ಸುಡುವವರೆಗೆ ಇದ್ದೆನು. ಅಂಥ ಪ್ರಸಂಗ ಒದಗಿದಲ್ಲಿ ಕೋಮಲ ಶರೀರದ ಈ ಬಾಳಾಸಾಹೇಬರ, ಹಾಗು ಮಾತೃಶ್ರೀ ತಮ್ಮ ರುಂಡಗಳನ್ನು ತುಂಡರಿಸಲಿಕ್ಕೆ ನಾನು ನಿಮ್ಮ ಸನ್ನಿದಿಯನ್ನೇ ಯಾವಾಗಲೂ ಆಶ್ರಯಿಸಿರುವೆನು. ನನ್ನ ಹೆಣವು ನೆಲಕ್ಕೆ ಬಿದ್ದಹೊರತು ಅವಿಂಧರ ಸ್ಪರ್ಶವು ನಿಮ್ಮ ಕೂದಲಿಗೂ ಕೂಡ ಆಗದು. ಅವ್ವನವರೇ, ಈಗ ಆಬಾ ಸಾಹೇಬರ ವಂಶದ ಈ ಮೊಗ್ಗೆಯನ್ನು ನೀವಾಗಿ ನಾಶಮಾಡುವದು ಸಲ್ಲದು. ಪ್ರಸಂಗ ಒದಗಿದಲ್ಲಿ ಮುಸಲ್ಮಾನರಾಗುವ ಪ್ರಸಂಗ ಬಂದರೂ ಆಗೋಣ; ಆದರೆ ನಮ್ಮ ಜನರ ಕಣ್ಣೆದುರಿಗೆ ಶಿವಪ್ರಭುವಿನ ವಂಶವನ್ನು ಜೀವದಿಂದ ಇಡೋಣ! ಆಬಾಸಾಹೇಬರ ವಂಶವು ಸಾಮಾನ್ಯವಾದದ್ದಲ್ಲ. ಅದು ಮರಾಟರ ಕಣ್ಣಿಗೆ ಧೈರ್ಯದ, ಕರ್ತವ್ಯ ಪ್ರೀತಿಯ, ಸ್ವಾರ್ಥ ತ್ಯಾಗದ, ವೀರ್ಯದ ನಿಧಿಯಾಗಿರುವದು. ಬಹಳವೇಕೆ, ಸ್ವದೇಶೋದ್ಧಾರಕ್ಕಾಗಿ ಭಯಂಕರ ವಾದ ಸಮರಜ್ವಾಲೆಯನ್ನು ಎಬ್ಬಿಸುವ ಕೆಂಡವಾಗಿರುವದು! ಅದರಂತೆ ಅವ್ವಾ, ಅವ್ವನವರೇ, ನೀವು ಅಗ್ನಿಪ್ರವೇಶ ಮಾಡುವ ವಿಚಾರವನ್ನು ಇನ್ನು ಸರ್ವಥಾ ಮನಸ್ಸಿನಲ್ಲಿ ತರಬೇಡಿರಿ. ನಿಮ್ಮ ದರ್ಶನದಿಂದ, ನಿಮ್ಮ ಚರಿತ್ರ ಶ್ರವಣದಿಂದ, ನಿಮ್ಮ ವಿಪತ್ತುಗಳ ಅವಲೋಕನದಿಂದ, ನಮ್ಮ ಮರಾಟರ ವೀರಾವೇಶವು ಹೆಚ್ಚುವದು; ಪರಾಕ್ರಮವು ದ್ವಿಗುಣವಾಗುವದು. ಒಂದು ಪಕ್ಷದಲ್ಲಿ ಮುಸಲ್ಮಾನನಾಗುವದರಲ್ಲಿಯೂ— ಅವ್ವನವರೇ, ಈ ದಾಸನನ್ನು ಕ್ಷಮಿಸಿರಿ— ದೇಹದ ಭ್ರಷ್ಟಾಕಾರವಾಗುವದರಲ್ಲಿಯೂ ಪಾಪವಿಲ್ಲ; ಆದರೆ ತಮ್ಮ ಅಗ್ನಿ ಪ್ರವೇಶದಲ್ಲಿ ಮಾತ್ರ ಪಾಪವಿರುತ್ತದೆ; ಯಾಕಂದರೆ **ಅದರಿಂದ ಮಹಾರಾಷ್ಟ್ರ ಮಂಡಲವೇ ಹತವೀರ್ಯವಾಗುವ ಸಂಭವವಿರುತ್ತದೆ! ಇದಲ್ಲದೆ ಆಬಾಸಾಹೇಬರ ವಂಶವನ್ನು ಕೈಮುಟ್ಟಿ ನಾಶಮಾಡುವದು ಮಹಾ ನರಕಕ್ಕೆ ನಿಶ್ಚಯವಾಗಿ** ಗುರಿಯಾಗಬೇಕಾದೀತು. ರಾಜಾರಾಮ ಮಹಾರಾಜರ ಸುತ್ತಂತು ಬಾದಶಹನು ಕೈತೊಳಕೊಂಡು ಬೆನ್ನು ಹತ್ತಿರುವನು. ಅದರಲ್ಲಿ ನೀವು ಬಾಲಶಿವರಾಯನನ್ನಷ್ಟು ಗೊತ್ತಿಗೆ ಹಚ್ಚಿಬಿಟ್ಟರೆ, ಅನಾಯಾಸವಾಗಿ ಬಾದಶಹನ ಕೋರಿಕೆಯು ಈಡೇರಿದಂತಾಗುವದು! ನಿಮ್ಮ ವಿಚಾರವು ಸರ್ವಥಾ ಯೋಗ್ಯವಾದದ್ದಲ್ಲ, ಹೋಗಿರಿ, ಖಾನಸಾಹೇಬರೇ, ನಿಮ್ಮ ದೊಡ್ಡ ಖಾನಸಾಹೇಬರನ್ನು ಕಳಿಸಿಕೊಡಿರಿ ಹೋಗಿರಿ. ನಾವು ನಿಮ್ಮ ಹಸ್ತಗತರಾಗಿರುತ್ತೇವೆಂತಲೇ ತಿಳಿಯಿರಿ.''

ಈ ಮೇರೆಗೆ ಜೋತಾಜಿಯು ಖಾನನಿಗೆ ಹೇಳುತ್ತಿರುವಷ್ಟರಲ್ಲಿ ಯಾತಿಕದ ಖಾನನು ಅಲ್ಲಿಗೆ ಬಂದನು. ಕೂಡಲೆ ಜೋತಾಜಿಯು ಆತನನ್ನು ಕುರಿತು— ಖಾನಸಾಹೇಬ, ಸಂಭಾಜಿ ಮಹಾರಾಜರ ಅಂಕುರವಾಗಿರುವ ಈ ಕೂಸು ಹತಭಾಗ್ಯವಾಗಿರುವದೆಂದು ನಾನು

ತಮಗೇಕೆ ಹೇಳಬೇಕು? ತಂದೆಯ ಗತಿಯನ್ನು ನೋಡಿದರೆ ಹಾಗಾಯಿತು, ತಾಯಿಯ ಗತಿಯನ್ನು ನೋಡಿದರೆ ಹೀಗಾಯಿತು; ಈತನ ಚಿಗಪ್ಪನೇನು ಚಿಗಪ್ಪನೇ! ಇಂಥ ಸಂಕಟದಲ್ಲಿ ಈ ತಾಯಿ-ಮಕ್ಕಳನ್ನು ತೋಫಿನ ಬಾಯಿಗೆ ಕೊಟ್ಟು ತನ್ನ ಜೀವವನ್ನು ಉಳಿಸಿ ಕೊಳ್ಳುವದಕ್ಕಾಗಿ ದುರ್ಗದಿಂದ ದುರ್ಗಕ್ಕೆ ಆತನು ಎಡತಾಕುತ್ತಿರುವನು. ಇನ್ನು ಈ ಕೂಸನ್ನು ನಿಮ್ಮ ಉಡಿಯಲ್ಲಿ ಹಾಕಿರುತ್ತೇನೆ.

ಯಾತಿಕದಖಾನ—ಹಾಯ್, ಹಾಯ್ ಪರಮೇಶ್ವರಾ! ಈ ದೊಡ್ಡ ಮನುಷ್ಯರ ಮೇಲೆ ಎಂಥ ಪ್ರಸಂಗ ತಂದೆಯಲ್ಲ! ಬಾಯಿಸಾಹೇಬ, ನೀವು ಮನಸ್ಸಿನಲ್ಲಿ ಯಾವ ಸಂಶಯವನ್ನೂ ತರಬೇಡಿರಿ. ಈ ಕುರಾಣವು ನನ್ನ ಕೈಯಲ್ಲಿರುತ್ತದೆ; ಇದರ ಸಾಕ್ಷಿಯಾಗಿ ನಾನು ನಿಮಗೆ ಹೇಳುವೆನು. ನನ್ನಿಂದ ತಮ್ಮ ಕೂದಲು ಕೂಡ ಕೊಂಕಲಿಕ್ಕಿಲ್ಲ. ಇನ್ನು ನನ್ನ ಕರ್ತವ್ಯವನ್ನು ನಾನು ಮಾಡಲೇಬೇಕಾಗಿರುವದರಿಂದ ಅದಕ್ಕೆ ಬೇರೆ ಉಪಾಯವಿಲ್ಲ.

ಏಸೂಬಾಯಿ—ಹೌದು, ಖಾನಸಾಹೇಬ, ಅಂತ ಪ್ರಸಂಗವು ಒದಗಿರುವದೇನೋ ನಿಜ. ಖಾನ, ನಾನೂ ನನ್ನ ಮಗನೂ ಇಂದು ನಿಮ್ಮ ಕೈಸೇರಿರುತ್ತೇವೆ.

ಏಸೂಬಾಯಿಯ ಈ ಮಾತು ಮುಗಿಯುವದರೊಳಗೆ ಪ್ರತಾಪರಾವ ಗುಜರನ ಹೆಂಡತಿಯೂ, ಆಕೆಯ ಮಗನೂ, ಜೋತಾಜಿಯೂ ಖಾನನನ್ನು ಕುರಿತು— ಖಾನ ಸಾಹೇಬ, ನಾವು ಬಾಯಿಸಾಹೇಬರ ತೈನಾತಿಯಲ್ಲಿರುವವರು. ನಮ್ಮನ್ನು ಅವರ ಬಳಿಯಲ್ಲಿ ಇರಿಸಬೇಕು,'' ಎಂದು ಪ್ರಾರ್ಥಿಸಿದರು. ಅದಕ್ಕೆ ಖಾನನು—

ಖಾನ—ಹಾಗೆ ಆಗಲಿ! ಬಾಯಿಸಾಹೇಬ, ಕರ್ತವ್ಯವು ಬಹು ಕಠಿಣವಾಗಿರುವದು. ತಮ್ಮ ಈಗಿನ ಮಾನ-ಮರ್ಯಾದೆ ಮೊದಲಾದವುಗಳಿಗೆ ಕೊರತೆ ಬಾರದಂತೆ ನಾನು ತಮ್ಮನ್ನು ನಡಿಸಿಕೊಳ್ಳುವೆನು. ಮೊದಲು ನಾನು ದುರ್ಗವನ್ನು ವಶಮಾಡಿಕೊಳ್ಳಬೇಕಾಗಿ ರುವದು. ಅವ್ವಾ, ದೇಶದ್ರೋಹವು ನಿಮ್ಮನ್ನು ಮಣ್ಣುಗೂಡಿಸಿತೆಂಬದು ನಿಜವು. ಹಾಗಾಗದಿದ್ದರೆ, ಮಳೆಗಾಲ ಹೋಗುವವರೆಗೆ ನಾವು ಕೋಟೆಯ ಕೆಳಗೆ ಕೊಳೆಯ ಬೇಕಾಗುತ್ತಿತ್ತು. ಹೋಗು, ಕಾಸಮಖಾನ, ದುರ್ಗವನ್ನೂ ಭಾಂಡಾರವನ್ನೂ ಸ್ವಾಧೀನ ಪಡಿಸಿಕೋ. ಆ ಸೂರ್ಯಾಜಿಯು ನಿಮಗೆಲ್ಲ ತೋರಿಸುವನು.

ಏಸೂಬಾಯಿ—ಸೂರ್ಯಾಜಿ!

ಖಾನ—ಹೌದು, ಅವ್ವನವರೇ, ಸೂರ್ಯಾಜಿಯು ನಮಗೆ ಗುಹೆಯ ಮಾರ್ಗ ವನ್ನು ತೋರಿಸಿ, ನಮ್ಮನ್ನು ಕರಕೊಂಡು ಬಾರದಿದ್ದರೆ ದುರ್ಗವು ನಮಗೆ ಇಷ್ಟು ಸುಲಭವಾಗಿ ಸಿಗುತ್ತಿದ್ದಿಲ್ಲ.

ಏಸೂಬಾಯಿ—ಹಾಯ್! ಹಾಯ್!! ಜೋತ್ಯಾ,ಯಾವ ರಾಜ್ಯದೊಳಗಿನ ಜನರಿಗೆ ತಮ್ಮ ಬೆಲೆಯು ತಮಗೆ ತಿಳಿಯುವದಿಲ್ಲವೋ,ಯಾರ ದೃಷ್ಟಿಯು ಸ್ವಾರ್ಥಕ್ಕಿಂತ ಮುಂದಕ್ಕೆ ಹೋಗುವುದಿಲ್ಲವೋ,ಯಾರಿಗೆ ನ್ಯಾಯ ನ್ಯಾಯ ಪಾಪ-ಪುಣ್ಯಗಳ ವಿಚಾರವಿರುವ ದಿಲ್ಲವೋ, ಆ ರಾಜ್ಯಕ್ಕೂ ಆ ರಾಜ್ಯದೊಳಗಿನ ಈ ಪ್ರಕಾರದ ವ್ಯವಹಾರದ ಜನರಿಗೂ ನನ್ನ ನಮಸ್ಕಾರವು! ಈ ವರೆಗೆ ನಾವು ಮಾಡಿದ ಯತ್ನವು ಅಧರ್ಮದ್ದಾಯಿತು!

ಈ ಮೇರೆಗೆ ಏಸೂಬಾಯಿಯು ಪಶ್ಚಾತ್ತಾಪಪಡುತ್ತ ಮುಂದಿನ ಮಾರ್ಗವನ್ನು ಕೃಷ್ಣಾಜಿ ಪ್ರಭುವಿಗೆ ತಿಳಿಸುತ್ತಿರಲು, ಪ್ರತಾಪರಾವ ಗುಜರನ ಹೆಂಡತಿಗೆ ತನ್ನ ಸಂಗಡ ಬರ ಬೇಡೆಂದು ಪರಿಪರಿಯಾಗಿ ಹೇಳುತ್ತಿರಲು, ಬಾಲಶಿವರಾಯನನ್ನು ಬಾರಿಬಾರಿಗೆ ತಬ್ಬಿ ಕೊಂಡು ಮುದ್ದಿಸುತ್ತಿರಲು, ಚಿತ್ತವೃತ್ತಿಯು ಅತ್ಯಂತ ಮೃದುವಾಗಿದ್ದರೂ ಗಾಂಭೀರ್ಯದಿಂದ ಅದನ್ನು ಹೊರಗೆ ತೋರಗೊಡದೆ ದುರ್ಗದ ನಾಲ್ಕೂಕಡೆಗೆ ನೋಡುತ್ತಿರಲು, ಕಾಸಿಮಖಾನನು ತನ ಗೊಪ್ಪಿಸಿದ ಕೆಲಸವನ್ನು ಪೂರ್ಣಮಾಡಿಕೊಂಡು ಯಾತಿಕದಖಾನನ ಬಳಿಗೆ ಬಂದು ಆತನನ್ನು ಕುರಿತು—ಖಾನಸಾಹೇಬ, ಯಾವತ್ತು ದುರ್ಗವನ್ನು ಸ್ವಾಧೀನಪಡಿಸಿಕೊಂಡೆನು. ಆನೆ, ಕುದರೆ, ವಸ್ತ್ರ-ವಡಿವೆಗಳು, ಭಾಂಡಾರ ಮೊದಲಾದ ಅಠರಾ ಕಾರಖಾನೆಗಳನ್ನು ಸುಲಿದೆನು. ಆ ಸಂತ್ಯಾನು ನಮ್ಮನ್ನು ಸುಲಿಯುವನಲ್ಲವೇ? ಖಾನ, ಶಿವಾಜಿಯ ಸಿಂಹಾಸವನ್ನು ಕೂಡ ನಾವು ಒಡೆದುಬಿಟ್ಟೆವು. ಮರಾಟರು ಸಿಂಹಾಸನದ ಬುಡದಲ್ಲಿ ಎಷ್ಟು ದುಡ್ಡು ಕೂಡಿಸಿಟ್ಟಿದ್ದರದು! ವಿಜಾಪುರದ ಬಾದಶಾಹಿಯನ್ನೂ, ಅಫಜುಲಖಾನನಂಥ ಸರದಾರನನ್ನೂ, ಇನ್ನೂ ಎಷ್ಟೋ ಮುಸಲ್ಮಾನರನ್ನೂ ಸುಲಿದು ಶಿವಾಜಿಯು ಕೂಡಿಸಿಟ್ಟಿದ್ದ ದುಡ್ಡನ್ನೂ ನಾವು ಇಂದು ತಿರುಗಿ ತಕ್ಕೊಂಡೆವು; ಎಂದು ಹೇಳಿದನು. ಇದನ್ನು ಕೇಳಿ ಏಸೂಬಾಯಿಯು ಮೂರ್ಛಿತಳಾದಳು. ಎಚ್ಚತ್ತ ಮೇಲೆ ಆಕೆಯು ಅತ್ಯಂತ ದುಃಖದಿಂದ—ಅಂಬಾ ಭವಾನೀ, ಕಡೆಗೆ ಮರಾಟರ ಸಿಂಹಾಸನವನ್ನು ಒಡೆದರಲ್ಲವೇ? ಭರತಖಂಡದ! ಕೀರ್ತಿ ಧ್ವಜವನ್ನ ಮುರಿದು ಚಲ್ಲಿದರಲ್ಲವೆ? ಎಲಎಲಾ! ಮರಾಟರ ಮೋರೆಗೆ ಕಪ್ಪು ಹತ್ತಿತು. ಈ ಕಪ್ಪು ಸ್ಥಿರವಾಗಿ ಉಳಿಯುವದೋ ಏನು? ಮರಾಟರು, ಬ್ರಾಹ್ಮಣರು, ಪ್ರಭುಗಳು, ಹೊಲಿಯರು ಮುಂತಾದವರಲ್ಲಿಯೂ ಯಾರಾದರೂ ಈ ಕಪ್ಪನ್ನು ಅಳಿಸಬಹುದೋ? ಇವರಲ್ಲಿ ಯಾರಾದರೂ ದಿಲ್ಲಿಯ ಸಿಂಹಾಸನವನ್ನು ಒಡೆದ ದಿವಸ ಈ ಕಪ್ಪು ಅಳಿಸುವದು! ಛೆ! ಛೆ!! ಛೆ!!! ಈ ಕಪ್ಪು ಅಳಿಸುವ ಬಗೆಯೇನು? ನಮ್ಮ ಶಿವಪ್ರಭುವಿನ ಪವಿತ್ರ ಸಿಂಹಾಸನವು ಒಡೆಯಿತೇ? ಇನ್ನು ಇದಕ್ಕೂ ಹೆಚ್ಚಿನ ಅನರ್ಥವೇನಾಗಬೇಕು? ಖಾನಸಾಹೇಬ, ನಡೆಯಿರಿ. ಇನ್ನು ನೀವು ಕರೆದುಕೊಂಡು ಹೋದತ್ತ ನಾನು ಬರುವೆನು. ನಾವು ನಿಮ್ಮ ಸೆರೆಯಾಳಾಗಿರುವೆವು. ಸೆರೆಯಾಳಾದ ನಮ್ಮನ್ನು ನೀವು ಬೇಕಾದಷ್ಟು ಜಯಘೋಷ ದಿಂದ ಕಗಕೊಂಡು ಹೋಗಿರಿ. ಸಂಕೋಚಪಡಬೇಡಿರಿ. ನಿಮ್ಮ ಪರಾಕ್ರಮದ ದೊಡ್ಡಿಸ್ತನವನ್ನು ತೋರಿಸುವಲ್ಲಿ ಕೊರೆತೆಯೇಕೆ? ಅನ್ನಲು, ಯಾತಿಕದ ಖಾನನು ಏಸೂಬಾಯಿಯನ್ನೂ, ಬಾಲಶಿವರಾಯನನ್ನೂ ಅವರ ಪರಿವಾರದೊಡನೆ ಸಾಗಿಸಿಕೊಂಡು ಹೊರಟನು.

# ಸ್ವಾಮಿನಿಷ್ಠೆ

ರಾಜಕುವರಳು ತನ್ನ ಪತಿಯಾದ ಗಣೋಜಿರಾವ ಶಿರ್ಕೆಯನ್ನು ಯುದ್ಧದಲ್ಲಿ ಸೋಲಿಸಿ, ಪಲ್ಹಾಳಗಡಕ್ಕೆ ರಾಜಾರಾಮ ಮಹಾರಾಜರ ಬಳಿಗೆ ಸೆರೆಹಿಡಿದು ಒಯ್ದುದ್ದನ್ನೂ ರಾಜಾರಾಮ ಮಹಾರಾಜರು ಉದಾರಾಂತಃಕರಣದಿಂದ ಶಿರ್ಕೆಯನ್ನು ಸನ್ಮಾನಿಸಿ, ಬಂಧಮುಕ್ತ ಮಾಡಿ ಬಿಟ್ಟದ್ದನ್ನೂ ವಾಚಕರು ಮರೆತಿರಲಿಕ್ಕಿಲ್ಲ. ಗಣೋಜಿರಾವ ಶಿರ್ಕೆಯು ತನ್ನ ತಮ್ಮನಾದ ರಾಣೋಜಿ ಶಿರ್ಕೆಗೆ ನಡೆದ ವೃತ್ತಾಂತವನ್ನು ಹೇಳಿ ರಾಜಾರಾಮನ ವಿಷಯ ವಾಗಿ ತನ್ನ ಅಂತಃಕರಣವು ಕರಗಿರುವದೆಂದು ಹೇಳಿದನು. ತನ್ನ ಅಣ್ಣನು ಪ್ರತಿಜ್ಞಾಭಂಗಮಾಡಲು ಮನಸ್ಸು ಮಾಡುತ್ತಿರುವದು ರಾಣೋಜಿಯ ಮನಸ್ಸಿಗೆ ಬರಲಿಲ್ಲ. ಆತನು ತನ್ನ ಅಣ್ಣನನ್ನು ಬಹಳವಾಗಿ ಜರಿದು ನುಡಿದನು. ಅವರಿಬ್ಬರು ಈ ಸಂಬಂಧದಿಂದ ಬಹಳವಾಗಿ ಚರ್ಚಿಸಿದರು. ಅಷ್ಟರಲ್ಲಿ ರಾಯಗಡವನ್ನು ಯಾತಿಕದ ಖಾನನು ಕೈವಶ ಮಾಡಿಕೊಂಡು ತಮ್ಮ ಒಡಹುಟ್ಟಿದ ಏಸೂಬಾಯಿಯನ್ನೂ, ಆಕೆಯ ಮಗನನ್ನೂ ಸೆರೆಹಿಡಿದು ಬಾದಶಹನ ಕಡೆಗೆ ಕರಕೊಂಡು ಹೋಗುವ ಸುದ್ದಿಯು ಗೊತ್ತಾಯಿತು. ಆಗ ಅವರಿಬ್ಬರೂ ಅಣ್ಣ ತಮ್ಮಂದಿರು ಅಸಮಾಧಾನ ಪಡುವದರ ಬದಲಾಗಿ ಸಮಾಧಾನ ಪಟ್ಟರೆಂತಲೇ, ಹೇಳಬಹುದು! ಯಾಕೆಂದರೆ ಸಂಭಾಜಿಯು ತಮ್ಮ ಶಿರ್ಕೆಮನೆತನವನ್ನು ಮಣ್ಣು ಗೂಡಿಸಿದಂತೆ, ತಾವು ಭೋಸಲೇ ಮನೆತನವನ್ನು ಮಣ್ಣುಗೂಡಿಸಬೇಕೆಂದು ಅವರು ಪ್ರತಿಜ್ಞೆಯನ್ನು ಮಾಡಿದ್ದರು; ಆದರೆ ಬಾದಶಹನಿಗೆ ಹೇಳಿ ತಮ್ಮ ಒಡಹುಟ್ಟಿದ ಏಸೂಬಾಯಿಯನ್ನು ಬಂಧಮುಕ್ತಮಾಡಿ ಆಕೆಯನ್ನು ರಾಜಾರಾಮನಿಗೆ ಒಪ್ಪಿಸಬೇಕೆಂತಲೂ,ಇದರಿಂದ ರಾಜಾರಾಮನು ತಮ್ಮ ವಿಷಯವಾಗಿ ತೋರಿಸಿದ ದಯೆಗೆ ತಾವು ಆತನಿಗೆ ಪ್ರತಿಯಾಗಿ ದಯೆ ತೋರಿಸಿದ ಹಾಗಾಗುವದೆಂತಲೂ ಆ ಶಿರ್ಕೆಬಂಧುಗಳು ಯೋಚಿಸಿದರು. ತಾವು ಏಸೂಬಾಯಿಯ ಬಂಧುಗಳಾದ್ದರಿಂದ ಆಕೆಯನ್ನೂ, ಅಳಿಯನನ್ನೂ ತಮ್ಮ ರಕ್ಷಣದ ಕೆಳಗೆ ಇಡಲಿಕ್ಕೆ ಯಾತಿಕದ ಖಾನನು ಒಪ್ಪಬಹುದೆಂದು ತಿಳಿದು, ತಾವು ಸ್ವತಃ ಈ ಸಂಬಂಧದಿಂದ ಖಾನನನ್ನು ಪ್ರಾರ್ಥಿಸಿದ್ದಲ್ಲದೆ, ನಾಗೋಜಿರಾವ ಮಾನೆಯೆಂಬ ಬಲಾಢ್ಯ ಸರದಾರನ ಮುಖಾಂತರ ಖಾನನ ಮನಸ್ಸು ಒಲಿಸಲಿಕ್ಕೆ ಪ್ರಯತ್ನ ಮಾಡಿದರು; ಆದರೆ ಖಾನನು ಯಾರ ಮಾತನ್ನೂ ಲೆಕ್ಕಿಸದೆ ವಿಜಯದ ವೈಭವದಿಂದ ಸೆರೆಯಾಳುಗಳನ್ನು ಸಾಗಿಸಿಕೊಂಡು ತುಳಾಪುರದ ಕಡೆಗೆ ಸಾಗಿದನು.

ಇತಿಕದ ಖಾನನು ತುಳಾಪುರಕ್ಕೆ ಹೋದಬಳಿಕ, ತಾನು ಏಸೂಬಾಯಿಯೇ ಮೊದಲಾದ ರಾಜಪರಿವಾರವನ್ನು ಸರೆಹಿಡಿದು ತಂದ ವರ್ತಮಾನವನ್ನು ಬಾದಶಹನಿಗೆ ತಿಳಿಸಿದನು. ಇತಿಕದ ಖಾನನ ಈ ಪರಾಕ್ರಮಕ್ಕಾಗಿ ಬಾದಶಹನು ಸಂತುಷ್ಟನಾಗಿ, ಆತನಿಗೆ ''ಜಪಲಿಕಾರಖಾನ'' ಎಂಬ ಬಹುಮಾನದ ಬಿರುದುಕೊಟ್ಟನು. ಪ್ರತ್ಯಕ್ಷ ಸಂಭಾಜಿಯ ಮಗನೂ, ಹೆಂಡತಿಯೂ ತನ್ನ ಕೈಸೇರಿದ್ದಕ್ಕಾಗಿ ಬಾದಶಹನು ಕೃತಕೃತ್ಯ

ನಾದನು. ಶಿವಾಜಿಯ ಕುಟುಂಬದ ಜನರೆಲ್ಲ ತನ್ನ ಕೈಸೇರಿರುವರೆಂಬ ಮನೋರಾಜ್ಯದಲ್ಲಿ ಆತನು ಪರಮಾನಂದಪಟ್ಟನು. ಈಗ ಪ್ರತ್ಯಕ್ಷ ಹಕ್ಕುದಾರನಾದ ಬಾಲಶಿವರಾಯನು ಕೈಸೇರಿದನು. ಆತನ ತಾಯಿಯು ಕೈಸೇರಿದಳು. ಶಿವಪ್ರಭುವಿನ ಹೆಣ್ಣುಮಕ್ಕಳು ಆರು ಮಂದಿ ಅವರಲ್ಲಿ ಹಿರಿಯಳಾದ ಸಖಾಬಾಯಿಯನ್ನೂ ಆಕೆಯ ಗಂಡನಾದ ಮಹಾದಜಿ ನಿಂಬಾಳಕರನನ್ನೂ ಬಾದಶಹನು ಸೆರೆಯಲ್ಲಿಟ್ಟಿದ್ದನು. ಎರಡನೆಯಾಕೆಯಾದ ರಾಧಾಬಾಯಿ ಯೆಂಬವಳನ್ನು ಜಾಧವನಿಗೆ ಕೊಟ್ಟಿತ್ತು, ಮೂರನೆ ಯಾಕೆಯು ಅಂಬಿಕಾಬಾಯಿಯು ಈಕೆಯನ್ನು ಹರಜಿರಾದ ಮಹಾಲಿಕನಿಗೆ ಕೊಟ್ಟಿತ್ತು, ನಾಲ್ಕನೆಯಾಕಿಯೇ ನಮ್ಮ ರಾಜಕುವರಳು. ಐದನೆಯಾಕಿಯು ಕಮಲಾಬಾಯಿಯು. ಈಕೆಯನ್ನು ನೇತಾಜಿಪಾಲಕರನಿಗೆ ಕೊಟ್ಟಿತ್ತು, ಆರನೆಯಾಕೆಯು ದಾದುಬಾಯಿಯು, ಇವರೆಲ್ಲರೂ ರಾಜಾರಾಮನ ಬಳಿಯಲ್ಲಿದ್ದರು. ಒಮ್ಮೆ ರಾಜಾರಾಮನನ್ನು ಹಿಡಿದುಬಿಟ್ಟರೆ, ಇವರೆಲ್ಲರೂ ತನ್ನ ಕೈಸೇರುವರೆಂದು ಬಾದಶಹನು ನಿಶ್ಚಯಿಸಿದ್ದನು. ತನ್ನ ಕೈಸೇರಿದವರನ್ನು ಮುಸಲ್ಮಾನರನ್ನಾಗಿ ಮಾಡಿಬಿಟ್ಟರೆ, ಅವರು ಪುನಃ ತಮ್ಮ ಜನರೊಳಗೆ ಕೂಡದಿರುವದರಿಂದ, ಅನಾಯಾಸವೇ ತನಗೆ ಮರಾಟರ ಉಪದ್ರವು ತಪ್ಪುವದೆಂದು ಆತನು ಭಾವಿಸಿದನು. ಈ ಸಂಗತಿಯನ್ನು ಝುಪಲಿಕಾರ ಖಾನನಿಗೆತಿಳಿಸಲು, ಆತನು ಅಸಮಾಧಾನಪಟ್ಟನು.! ಯಾಕಂದರೆ, ಆತನು ಕುರಾಣವನ್ನು ಹಿಡಿದು ಆಣೆ ಮಾಡಿ ನಿಮ್ಮ ಪ್ರಾಣಕ್ಕೆ ಅಪಾಯವಾಗದಂತೆ ಕಾಯುವನೆಂತಲೂ, ನಿಮ್ಮನ್ನು ಮುಸಲ್ಮಾನ ರಾಗಗೊಡುವದಿಲ್ಲೆಂತಲೂ ಏಸೂಬಾಯಿಗೆ ರಾಯಗಡದಲ್ಲಿ ವಚನಕೊಟ್ಟಿದ್ದನು. ಆದ್ದರಿಂದ ಆತನು ಬಾದಶಹನನ್ನು ಕುರಿತು— ''ಜಹಾಪನ್ಹಾ, ಸಂಭಾಜಿಯನ್ನು ಕೊಲ್ಲಿಸುವ ವಿಷಯದಲ್ಲಿ ಹೂಜೂರಿನಿಂದ ಬಹಳ ಅವಸರವಾಯಿತು! ಆದರೂ ಹುಜೂರಿನ ಪರಾಕ್ರಮದಿಂದ ಈ ಶುಭದಿವಸಗಳನ್ನು ಕಂಡಿರುವೆನು. ಈಗಾದರೂ ಖಾವಿಂದರು ಬಾಯಿಯನ್ನೂ, ಹುಡುಗನನ್ನೂ, ಕೊಲ್ಲಿಸಬಾರದು. ಹಾಗೆ ಮಾಡಿದರೆ ಮರಾಟರು ಖಂಗಿಗೆದ್ದು ಮಿಗಿಮೀರಬಹುದು. ಹಾಗೆ ಮಾಡದೆ ರಾಜಮಾತೆಯನ್ನೂ ರಾಜು ಕುಮಾರನನ್ನೂ ಜೀವದಿಂದಿಟ್ಟರೆ, ಅವರಿಗೆ ಬಾದಶಹನು ಎಲ್ಲಿ ಅಪಾಯಮಾಡುವನೋ, ಎಂಬ ಭಯದಿಂದ ಮರಾಟರು ಹೆಚ್ಚಿನ ಸಾಹಸಕಾರ್ಯಕ್ಕೆ ಹೋಗಲಿಕ್ಕಿಲ್ಲ, ತುಳಾಪುರದಲ್ಲಿ ಸಂಭಾಜಿಯನು ಕೊಲ್ಲಿಸಿದ ರೊಚ್ಚಿನಿಂದ ಸಂತ್ಯಾನು ಅದೇ ತುಳಾಪುರದಲ್ಲಿ, ಸರಕಾರಕ್ಕೆ ಪ್ರಾಣ ಸಂಕಟವನ್ನುಂಟುಮಾಡಿದ್ದು ಮರೆಯುವಹಾಗಿಲ್ಲ. ಆದ್ದರಿಂದ ಹುಜೂರಿನಲ್ಲಿ ನನ್ನ ಪ್ರಾರ್ಥನೆ ಯೇನೆಂದರೆ, ಏಸೂಬಾಯಿಯನ್ನೂ, ಬಾಲಶಿವರಾಯನನ್ನೂ ಕೊಲ್ಲಿಸದೆ, ಒತ್ತಿಗೆ ಇಟ್ಟಕೊಂಡಂತೆ, ಅವರನ್ನು ದಿಲ್ಲಿಯಲ್ಲಿ ಇಟ್ಟಕೊಳ್ಳಬೇಕು.

ಔರಂಗಜೇಬ—ಓಹೋ, ನಾನು ಹಾಗೇ ಮಾಡುವೆನಲ್ಲ! ಆದರೆ ಇವರನ್ನು ಪೈಗಂಬರನ ಸೇವಕರಾಗಿ ಮಾಡುವೆನು. ಇಂದಿಗೆ ಇಸ್ಲಾಮು ಧರ್ಮದ ವಿಜಯವಿರುತ್ತದೆ. ಮರಾಟರು ಬಹಳ ಉಪದ್ರವ ಕೊಡಹತ್ತಿದರೆ ಈ ಮರಿಯನ್ನು ನಡುವೆ ಬಿಡೋಣ. ಅಂದರೆ ತಮ್ಮ ತಮ್ಮೊಳಗೆ ಹೊಡೆದಾಡಿ ಅವರು ದುರ್ಬಲರಾಗುವದು.

ಯಾತಿಕದಖಾನ—ಖಾವಿಂದ,ಇವರ ಕುಲಗೆಡಿಸುವಲ್ಲಿ ಏನು ಅರ್ಥವಿದೆ? ವಿಜಾಪುರದ ಬಾದಶಹನು ನಿಂಬಾಳಕರನನ್ನ ಕುಲಗೆಡಿಸಿದ್ದಿಲ್ಲವೆ? ಆದರೆ ಆತನನ್ನು ಶಿವಾಜಿಯು ಶುದ್ಧಮಾಡಿಸಿ ತಮ್ಮೊಳಗೆ ಕೂಡಿಸಿಕೊಂಡನಲ್ಲದೆ, ತನ್ನ ಮಗಳನ್ನು ಆತನಿಗೆ ಲಗ್ನ ಮಾಡಿ ಕೊಟ್ಟನು.

ಇಷ್ಟು ಮಾತುಕಥೆಗಳು ನಡೆಯುವದರೊಳಗೆ ಬಾದಶಹನ ಅತ್ಯಂತ ಪ್ರೀತಿಯ ಮಗಳಾದ ಜಬುನ್ನಸೆಯು ಅಲ್ಲಿಗೆ ಬಂದಳು. ಝುವಲಿಕಾರ ಖಾನನು ಶಿವಾಜಿಯ ಸೊಸೆಯನ್ನೂ, ಮೊಮ್ಮಗನನ್ನೂ ಹಿಡಿದು ತಂದಿರುವನೆಂಬದನ್ನು ಆಕೆಯು ಕೇಳಿದ್ದಳು. ಇಂಥ ದೊಡ್ಡ ಮನುಷ್ಯನ ಸೊಸೆಯು ಹ್ಯಾಗಿರುವಳೆಂಬದನ್ನು ನೋಡುವದಕ್ಕಾಗಿ ಆಕೆಯು ಅತ್ಯಂತ ಉತ್ಸುಕಳಾಗಿದ್ದಳು. ವಿಪತ್ಕಾಲದಲ್ಲಿ ದೊಡ್ಡವರ ವಿಷಯದ ಅನುಕಂಪವು ದೊಡ್ಡವರಲ್ಲಿ ಸಹಜವಾಗಿ ಉತ್ಪನ್ನವಾಗುತ್ತದೆ. ಜಬುನ್ನಸೆಯು ಔರಂಗಜೇಬನ ಮುಪ್ಪಿನಕಾಲದಲ್ಲಿ ಹುಟ್ಟಿದವಳಾದ ಕಾರಣ ಆ ಬಾದಶಹನ ಅತ್ಯಂತವಾದ ಪ್ರೇಮಕ್ಕೆ ಪಾತ್ರಳಾಗಿದ್ದಳು. ಆತನು ಜಜುನ್ನಸೆಯ ಮಾತನ್ನು ಮೀರುತ್ತಿದ್ದಿಲ್ಲ. ಜಬುನ್ನಸೆಯು ಬಂದ ಕೂಡಲೆ ಝುಪಲಿ ಕಾರ ಖಾನನೂ ಖಡಿತಾಜಿ ಮು ಮಾಡಿದನು.ಆಮೇಲೆ ಖಾನನು ರಾಯಗಡದ ಮುತ್ತಿಗೆಯ ಎಲ್ಲ ವೃತ್ತಾಂತವನ್ನು ಹೇಳಿದನು. ಅದರಲ್ಲಿ ಏಸೂಬಾಯಿಯು ರಾಯಗಡ ವನ್ನು ದಕ್ಷತೆಯಿಂದ ರಕ್ಷಿಸದ ವೃತ್ತಾಂವನ್ನು ಯಥಾರ್ಥವಾಗಿ ವರ್ಣಿಸಿದನು. ಕಡೆಗೆ ದೇಶದ್ರೋಹಿಗಳ ಕಪಟಾಚರಣೆಯ ಮುಂದೆ ಆ ಪರಾಕ್ರಮಶಾಲಿಯಾದ ಸ್ತ್ರೀಯ ಆಟವು ನೆಡಯಲಿಲ್ಲೆಂದು ಹೇಳಿದ ಕೂಡಲೆ, ಜಬುನ್ನಸೆಯ ಹೊಟ್ಟೆಯಲ್ಲಿ ಕಸವಿಸಿ ಯಾಯಿತು. ಬಾದಶಹನು ಕೇವಲ ತನ್ನ ಪರಾಕ್ರಮದಿಂದ ರಾಯಗಡವು ಕೈಸೇರಲಿಲ್ಲೆಂದು ತಿಳಿದು ಮನಸ್ಸಿನಲ್ಲಿ ನಾಚಿದನು. ಸೂರ್ಯಾಜಿಯ ನೀಚತನದ ಕೃತಿಯನ್ನು ಕೇಳಿ ಜಬುನ್ನಸೆಯು ಸಂತಾಪಗೊಂಡು— ''ಇಂಥ ಘನವಾದ ಯೋಗ್ಯತೆಯ ಸ್ತ್ರೀಯ ಮೇಲೆ ಆ ಪಾಷಾಣಹೃದಯದ ರಾಕ್ಷಸನು ವಿಪತ್ತನ್ನು ತಂದನಲ್ಲವೆ?'' ಎಂದು ಆಕೆಯು ಒಟಗುಟ್ಟಿದಳು. ಅದನ್ನು ಕೇಳಿ ಔರಂಗಜೇಬನು— ''ಬೇಟಾ, ಆ ಪಾಷಾಣ ಹೃದಯದ ಸೂರ್ಯಾಜಿಯನ್ನು ನೋಡುವ ಇಚ್ಛೆಯು ನಿನಗೆ ಇರುವದೇನು? ಇಲ್ಲಿ ಈ ಕುತ್ತನಿಯ ಗಾದಿಯ ಮೇಲೆ ಬಂದು ಕುಳಿತುಕೋ, ಈಗ ಆ ಅಪೂರ್ವ ವಸ್ತುವನ್ನು ತರಿಸುತ್ತೇನೆ, ನೋಡು;'' ಎಂದು ಹೇಳಿದನು.

ಹೀಗೆ ದಿಲ್ಲೀಶ್ವರ ಇಚ್ಛೆಯು ಪ್ರಕಟವಾದ ಕೂಡಲೆ ಖಾನನು ಸೇವಕರಿಗೆ ಸೂರ್ಯಾಜಿ ಯನ್ನು ಕರತರುವದಕ್ಕಾಗಿ ಆಜ್ಞಾಪಿಸಿದನು. ಬಾದಶಹನು ತನ್ನನ್ನು ಕರೆಯುವನೆಂಬದನ್ನು ಕೇಳಿದ ಕೂಡಲೆ ಸೂರ್ಯಾಜಿಯ ಎದೆಯು ದಸಕ್ಕೆಂದಿತು. ನಾನು ಏನು ಮಾಡಿದೆನು. ಅದರ ಪರಿಣಾಮವು ಏನಾಗುವದೋ ಎಂದು ಆತನು ಚಿಂತಿಸತೊಡಗಿದನು. ನಾನು ಬಾದಶಹನ ದೊಡ್ಡ ಕಾರ್ಯವನ್ನು ಮಾಡಿಕೊಟ್ಟಿರುವುದರಿಂದ ಬಾದಶಹನು ನನ್ನನ್ನು ಗೌರವಿಸಬಹು ದೆಂತಲೂ, ಆತನು ಆಲೋಚಿಸಿದನು. ನಾನು ಬಾದಶಹನ ಬಳಿಗೆ ಒಳ್ಳೇ ಡೌಲಿನಿಂದ

ಹೋಗಲು, ''ವಾಯಿಯ ದೇಶಮುಖರೇ ಬರ್ರಿ'' ಎಂದು ಆತನು ನನ್ನೊಡನೆ ವಿನೋದ ಮಾಡಬಹುದೆಂತಲೂ ಆತನು ಕಲ್ಪಿಸಿದನು. ಈ ಪ್ರಕಾರದ ಆಲೋಚನೆ, ಕಲ್ಪನೆಗಳಿಂದ ಆತನು ಬಾದಶಹನ ಬಳಿಗೆ ಹೋಗುವದಕ್ಕಾಗಿ ಹೊರಡುತ್ತಿರಲು, ಆತನಿಗೆ ಏಸೂ ಬಾಯಿಯ ನೆನಪಾಯಿತು. ಆ ಶೂರ ಸ್ತ್ರೀಯ ಮುಂದೆ ನಿಲ್ಲಲಿಕ್ಕೆ ಆತನ ಜೀವದ ಸುತ್ತು ಬಂದಿತು; ಆದರೂ ಆತನು ಪ್ರಸಂಗವರಿತು ಎಲ್ಲ ವಿಚಾರಗಳನ್ನು ಬದಿಗಿಟ್ಟು, ಬಾದಶಹನ ಬಳಿಗೆ ಹೋಗುವದಕ್ಕಾಗಿ ಹೊರಟನು. ಆತನು ಬಾದಶಹನ ಬಳಿಗೆ ಬಂದಕೂಡಲೆ ಕುರ್ನಿಸಾತಮಾಡಿ, ತಲೆಯಮೇಲಿನ ಮುಂಡಾಸದಿಂದ ಕೈಗಳನ್ನು ಕಟ್ಟಿಕೊಂಡು ಬಹು ಮರ್ಯಾದೆಯಿಂದ ನಿಂತುಕೊಂಡನು. ಅವನನ್ನು ನೋಡಿದ ಕೂಡಲೆ ಜಬುನ್ನಸೆಗೆ ಸಂತಾಪವಾಯಿತು. ಆಗ ಬಾದಶಹನು ಜಬುನ್ನಸೆಯನ್ನು ಕುರಿತು ವಿನೋದದಿಂದ—

ಬಾದಶಹ—ಆ ಉದ್ಧಟ ಶಿವಾಜಿಯಂತೆ ಇವನು ದರ್ಬಾರದಲ್ಲಿ ನನ್ನೊಡನೆ ಉದ್ಧಟತನದಿಂದ ನಡೆಯುವನೋ ಏನೋ ಎಂದು ನಾನು ಮಾಡಿದ್ದೆನು. ಮೊನ್ನೆ ಒಬ್ಬ ಮರಾಟಾ ಸರದಾರನು ತನ್ನ ಯೋಗ್ಯತೆ ಮೀರಿ ತನ್ನ ದೊಡ್ಡಿಸ್ತನವನ್ನು ನನ್ನ ಮುಂದೆ ತೋರಿಸಲು, ನಾನು ಅವನ ಆಸ್ತಿಯನ್ನೆಲ್ಲ ಜಪ್ತಮಾಡಿ, ಅವನಿಗೆ ತನ್ನ ನಿಜವಾದ ಯೋಗ್ಯತೆಯ ಎಚ್ಚರಿಕೆ ಹುಟ್ಟುವಂತೆ ಮಾಡಿದೆನು.

ಜಬುನ್ನಸೆ—ಈ ನೀಚನಂಥವರ ಮನೆ-ಮಾರುಗಳನ್ನು ನೆಲಸಮಮಾಡಿಸಿ, ಅದರ ಮೇಲೆ ರಂಟೆ ಹೊಡಿಸಿ, ಇಂಥವರನ್ನು ಕತ್ತೆಯ ಮೇಲೆ ಕುಳ್ಳಿರಿಸಿ ಮೆರಿಸಬೇಕು.

ಶಹಾಜಾದಿಯ ಈ ಮಾತುಗಳನ್ನು ಕೇಳಿ ಸೂರ್ಯಾಜಿಯ ಚಿತ್ತವು ಅಸ್ಥಿರ ವಾಯಿತು. ಆತನು ಬಾದಶಹನನನ್ನು ಕುರಿತು–

ಸೂರ್ಯಾಜಿ— ಶಹಾನಶಹಾ, ಈ ತಪ್ಪುಗಾರನ ತಪ್ಪನ್ನು ಕ್ಷಮಿಸೋಣಾಗಬೇಕು. ನಾನು ಬಾದಶಹರಿಗೆ ವಿಜಯವನ್ನುಂಟು ಮಾಡಿರುತ್ತೇನೆ. ಜಹಾಪನ್ಹಾ, ನಾನು ಅನುಕೂಲ ವಾಗದಿದ್ದರೆ ಖಾನನಿಗೆ ಏಸೂಬಾಯಿಯ ನಖದ ದರ್ಶನಕೂಡ ಆಗುತ್ತಿದ್ದಿಲ್ಲ!

ಯಾತಿಕದಖಾನ(ಸಂತಾಪದಿಂದ)–ಎಲೈ ವಿಶ್ವಾಸಘಾತಕಿಯೇ, ಒಬ್ಬ ಯಜಮಾನನ ಮೇಲೆ ತಿರುಗಿಬಿದ್ದ ನೀನು, ಇನ್ನೊಬ್ಬನ ಮೇಲೆ ಯಾಕೆ ತಿರುಗಿ ಬೀಳಲಿಕ್ಕಿಲ್ಲ? ನಿನ್ನ ಯೋಗ್ಯತೆಯನ್ನು ನಾನು ಮೊದಲೇ ತಿಳಿದಿದ್ದೆನು, ಖಾವಿಂದ, ಈ ವಿಶ್ವಾಸಘಾತಕಿಯನ್ನು. ಪೈಗಂಬರನ ಭಕ್ತನನ್ನಾಗಿ ಮಾಡಿ; ಇವನನ್ನು ಹಲಾಲಕೋರ ಕೆಲಸಕ್ಕೆ ಹಚ್ಚಬೇಕು. ಇಲ್ಲದಿದ್ದರೆ ಇವನನ್ನು ಕಾದ ಉಸುಬಿನ ಮೇಲೆ ಉರುಳಾಡಿಸಬೇಕು.

ಸೂರ್ಯಾಜಿ—ಯಾಕೆ ಖಾನಸಾಹೇಬ, ಬಾಯಿ ಒಳಿತಾಗಿ ಹರಿಬಿಡುವಿರಿ? ನಾನು ಮಾನೆ, ಶಿರ್ಕೆ, ಮೋಹಿತೆ ಇವರನ್ನು ವಶಮಾಡಿಕೊಂಡು ನಿಮ್ಮ ಧೂಳ ಹಾರಿಸಲಿಲ್ಲವೆಂದು ನನ್ನನ್ನು ಕಾದ ಉಸುಬಿನ ಮೇಲೆ ಉರುಳಾಡಿಸುವಿರೇನು? ಸಂತಾಜಿಯನ್ನು ಮರೆತಂತೆ ಕಾಣುತ್ತದೆ! ಅವನು ನಿಮ್ಮ ಇಜಾರವನ್ನು ಸಹ ಕಸಿದುಕೊಳ್ಳುತ್ತಿದ್ದನಲ್ಲ!

ಬಾದಶಹ—ತೋಬಾ! ಇದು ಬಹು ಆಶ್ಚರ್ಯದ ಮಾತಾಗಿದೆ. ಬಹದೂರಪುರದಿಂದ ಖುಜಸ್ತೇಬನಿಯದವರಿಗೆ (ಖಾನದೇಶದಿಂದ ಮಧ್ಯ ಪ್ರಾಂತದವರೆಗೆ) ಆ ಸಂತ್ಯಾನ ಜನರು ಹಾದಿಯ ಬಡಿದಿರುವರೆಂಬ ಸುದ್ದಿಯು ಬಂದಿದೆ. ನಾನು ಬರ್ಹಾಣಪುರದಲ್ಲಿ ರುತ್ತಿರಲು, ಎದೆಗಾರಿಕೆಯಿಂದ ಇಂಥ ಅನರ್ಥವಾಗುವದು ನನಗೆ ಸೋಜಿಗವಾಗಿ ತೋರುವದು. ಆ ಮಾನೆ ಮೋಹಿತೆ ಮೊದಲಾದ ಮರಾಟ ಸರದಾರರು ನನ್ನ ಪಕ್ಷವನ್ನು ವಹಿಸಿದ್ದರೂ ಒಳಗಿಂದೊಳಗೆ ಆ ಸಂತ್ಯಾನನಿಗೆ ಅವರು ಅನುಕೂಲವಾಗಿರುವಂತೆ ತೋರುತ್ತದೆ. ಎಲ್ಲ ಮರಾಟರು ಕಳ್ಳರೇ!

ಯಾತಿಕದಖಾನ–ಖಾವಿಂದ, ನಾನು ಮೊದಲೇ ಹೇಳುತ್ತಿದ್ದಿಲ್ಲವೆ ಈ ವಿಶ್ವಾಸಘಾತಕಿ ಗಳಾದ ಮರಾಟರನ್ನು ಮನೆಯೊಳಗೆ ಕರಕೊಳ್ಳಬೇಡಿರೆಂದು! ಇವರು ವಿಜಾಪುರವನ್ನು ನುಂಗಿ ನೀರು ಹಿಡಿದರು. ನಿಜಾಮುಶಾಹಿಯನ್ನು ಗೊತ್ತಿಗೆ ಹೆಚ್ಚಿದರು. ಆದ್ದರಿಂದ ಈ ಮರಾಟರ ಪ್ರಸ್ತವನ್ನು ನಿಮ್ಮ ಸರದಾರರ ಮುಂದೆ ಬೆಳಿಸಬಾರದು.

ಬಾದಶಹ—ಆದ್ದರಿಂದಲೇ ನಿನ್ನ ಕೈಗೆ ಸಿಕ್ಕ ಮರಾಟರ ಕುಲಗೆಡಿಸಿ ನನ್ನ ಬಳಿ ಯಲ್ಲಿಟ್ಟು ಕೊಳ್ಳಬೇಕೆಂದು ನಿಶ್ಚಯಿಸಿರುತ್ತೇನೆ. ಇದರಿಂದ ಮರಾಟರು ಈ ಕುಲಗೇಡಿಗಳ ಮೇಲೆ ದ್ವೇಷಮಾಡುವರು. ಈ ಕುಲಗೇಡಿಗಳು ನನ್ನನ್ನು ಅವಲಂಬಿಸಿ ಇರಬೇಕಾಗುವದು! ಈ ಸೂರ್ಯಾಜಿಯನ್ನು ನಾನು ಕುಲಗೆಡಿಸಿದೆನೆಂದರೆ, ಈತನ ಮನೆತನದಲ್ಲಿ ಇತ್ತಂಡ ವಾಗುವದು. ಈತನ ದೇಶಮುಖಿಯಲ್ಲಾಗುವ ಎರಡು ಪಾಲುಗಳಲ್ಲಿ ಒಂದು ಮುಸಲ್ಮಾನರದು, ಒಂದು ಹಿಂದುಗಳದು. ಇಬ್ಬರು ಒಕ್ಕಟ್ಟಿನಿಂದ ನನ್ನನ್ನು ಎಂದೂ ಎದುರಿಸಲಾರರು. ಆದ್ದರಿಂದ ಸೂರ್ಯಾಜೀ, ನಾನು ನಿನಗೆ ಹೇಳುವದೇ ನಂದರೆ, ನೀನು ಪೈಗಂಬರನ ದಾಸ ನಾಗಲೇಬೇಕು.

ಸೂರ್ಯಾಜಿ—ಏನು? ನಾನು ಮುಸಲ್ಮಾನನಾಗಲಾ? ಅಂದಮೇಲೆ ಬಾದಶಹ, ನೀನು ನನಗೆ ಕೊಟ್ಟ ವೈಭವವನ್ನು ನಾನು ಹ್ಯಾಗೆ ಭೋಗಿಸಬೇಕು! ಹತ್ತು ಜನ ನನ್ನ ಜಾತಿಯರ ಕಣ್ಣುಗಳು ಕುಕ್ಕುವಂತಹ ವೈಭವವು ನನಗೆ ಬೇಕು. ಇಲ್ಲದಿದ್ದರೆ ಉಪಯೋಗ ವೇನು? ನನ್ನ ವೈಭವವನ್ನು ನೋಡಿ ನನ್ನ ಆಪ್ತೇಷ್ಟರು ಹೊಟ್ಟೆಕಿಚ್ಚು ಪಟ್ಟಷ್ಟು ನನಗೆ ಸಮಾಧಾನವು. ನೀನು ನನ್ನನ್ನು ಮುಸಲ್ಮಾನನನ್ನಾಗಿ ಮಾಡಿದರೆ, ನನ್ನನ್ನು ನೋಡಿ ನನ್ನ ಜನರು ದ್ವೇಷ ಮಾಡಬಹುದಲ್ಲದೆ, ಹೊಟ್ಟೆಕಿಚ್ಚು ಪಡಲಿಕ್ಕಿಲ್ಲ. ನನ್ನ ಕುಲಗೆಡಿಸದೆ ನನಗೆ ವಾಯಿಯ ದೇಶಮುಖಿಯನ್ನು ಕೊಟ್ಟರೆ, ಅಂಥ ಆಶೆಯನ್ನು ಬೇರೆ ಸ್ವಜನರಿಗೆ ತೋರಿಸಿ, ಹಲವು ಜನ ಮರಾಟರನ್ನು ನಿನ್ನ ಪಕ್ಷಕ್ಕೆ ಒಲಿಸಿ ಕೊಳ್ಳಲಿಕ್ಕೆ ನನಗೆ ಅನುಕೂಲ ವಾಗಬಹುದು.

ಖಾನ—ಇಲ್ಲಿ ನೋಡು ಸೂರ್ಯಾಜಿ, ವಿಶ್ವಾಸಘಾತಕಿಗಳು ಬಾದಶಹರಿಗೆ ವಿಶ್ವಾಸದ ಮಾತುಗಳನ್ನು ಹೇಳುವ ಗೊಡವಿಗೆ ಹೋಗಬಾರದು. ನೀನು ಮುಸಲ್ಮಾನನಾಗಲೇ ಬೇಕು. ಇಲ್ಲದಿದ್ದರೆ ದ್ರೋಹಿಯೆಂದು ತಿಳಿದು ನಿನಗೆ ದೇಹಾಂತ ಪ್ರಾಯಶ್ಚಿತ್ತದ ಶಿಕ್ಷೆ

ಯನ್ನು ವಿಧಿಸುವೆವು. ಲೋಭದಿಂದ ಒಬ್ಬ ಒಡೆಯನ ಮೇಲೆ ತಿರುಗಿಬಿದ್ದವನು ಮತ್ತೊಬ್ಬನ ಮೇಲೆ ತಿರುಗಿ ಬೀಳದೆ ಯಿರಬಹುದೆ?

ಸೂರ್ಯಾಜಿ—ಹೀಗೋ, ನಿಮ್ಮಂತೆಯೇ ಆಗಲಿ. ಉದ್ಯೋಗ ಮಾಡುವದು ಹೊಟ್ಟೆಯ ಸಲುವಾಗಿಯೇ ಅಲ್ಲವೆ? ಅಂದಬಳಿಕ ನನಗೆ ಲಾಭವಾಗುವ ಪ್ರಸಂಗದಲ್ಲಿ ಧರ್ಮದ ಪ್ರತಿಬಂಧವಾದರೂ ಯಾಕೆ? ನನಗೆ ರಾಮನೂ ಅಷ್ಟೆ, ರಹಿಮನೂ ಅಷ್ಟೆ! ಖಾನ, ನಾನು ಮುಸಲ್ಮಾನನಾಗುತ್ತೇನೆ; ಆದರೆ ವಾಯಿಯ ದೇಶಮುಖನೆಂದು ನನ್ನ ಅಣ್ಣತಮ್ಮಂದಿರ ಮುಂದೆ ನಾನು ಮೆರೆಯಲಿಕ್ಕೆ ಬೇಕು ಮಾತ್ರ.

ಬಾದಶಹ—ಎಲಾ ಈ ವಿಶ್ವಾಸಘಾತಕಿಯನ್ನು ಅತ್ತ ತಳ್ಳಿಕೊಂಡು ಹೋಗಿರೋ! ಖಾನ, ಆ ಸಂಭಾಜಿಯ ಮಗನನ್ನೂ ಹೆಂಡತಿಯನ್ನೂ ಮುಸಲ್ಮಾನರನ್ನಾಗಿ ಮಾಡಿಬಿಡಿರಿ. ಆ ಹುಡುಗನು ನನ್ನ ಮನಸ್ಸಿಗೆ ಬಂದಿರುತ್ತಾನೆ. ಆತನು ನನ್ನ ಭೋಜನ ಪಾತ್ರೆಯಲ್ಲಿ ಊಟಕ್ಕೆ ಕುಳಿತುಕೊಳ್ಳಲೇಬೇಕು.

ಖಾನ—ಖಾವಿಂದ, ಬೇಡಿರಿ, ಆ ದೊಡ್ಡ ಮನೆತನದ ಹೆಣ್ಣುಮಗಳಿಗೆ ನಾನು ವಚನ ಕೊಟ್ಟಿರುವದರಿಂದ, ಅವರನ್ನು ಮುಸಲ್ಮಾನರನ್ನಾಗಿ ಮಾಡಬೇಡಿರಿ. ನಾನು ಹಾಗೆ ವಚನ ಕೊಡದಿದ್ದರೆ ಆ ಶೂರ ಸ್ತ್ರೀಯು ತನ್ನ ಮಗನನ್ನು ತುಂಡರಿಸಿ, ತಾನು ಅಗ್ನಿಪ್ರವೇಶ ಮಾಡುತ್ತಿದ್ದಳು. ಬೇಕಾದರೆ ಆ ಡಫಳೆ, ಮಾನೆ, ನಿಂಬಾಳಕರ ಇವರನ್ನು ಉದಯಭಾನುವನ್ನು ಕುಲಗೆಡಿಸಿದಂತೆ ಕುಲಗೆಡಿಸಿ, ಬಾದಶಾಹಿಯ ಚಾಕರರನ್ನು ಮಾಡಿಕೊಳ್ಳಿರಿ. ಕಳ್ಳರು; ಬಾದಶಹನ ಚಾಕರಿಯನ್ನು ಮಾಡುವಂತೆ ಮೇಲೆ ಮೇಲೆ ತೋರಿಸಿ, ಒಳಗಿಂದೊಳಗೆ ಆ ಸಂತ್ಯಾನನಿಗೆ ಸಹಾಯಮಾಡಿ, ಬಾದಶಾಹಿಯ ರಾಜ್ಯವನ್ನು ಸುಲಿಯುವರು.

ಈ ಮೇರೆಗೆ ಖಾನನು ಮಾತಾಡುವದನ್ನು ಅಕಸ್ಮಾತ್ತಾಗಿ ಗಣೋಜಿರಾವ ಶಿರ್ಕೆಯೊಡನೆ ಅಲ್ಲಿಗೆ ಬಂದ ನಾಗೋಜಿರಾವ ಮಾನೆಯು ಕೇಳಿ ಸಿಟ್ಟಿನಿಂದ ಖಾನನ್ನು ಕುರಿತು—

ನಾಗೋಜಿರಾವ—ಯಾರು ಬಾದಶಾಹಿಯ ರಾಜ್ಯವನ್ನು ಸುಲಿಯುವರು? ಖಾನ, ಒಂದು ರಾಯಗಡವನ್ನು ಗೆದ್ದೆನೆಂದು ಇಷ್ಟು ಏರಬೇಡಿರಿ. ರಂಡಮುಂಡೆ ಹೆಂಗಸನ್ನೂ, ಅಳಬುರಕ ಹುಡುಗನನ್ನೂ ಗೆದ್ದರೆ ಮಹಾ ಪೌರುಷವಾಗಲಿಲ್ಲ, ಆ ಕೆಲಸವನ್ನು ಯಾರಾದರೂ ಮಾಡಬಹುದು; ಆದರೆ ಮರಾಟರೊಳಗಿನ ಮಹಾ ಮಹಾ ವೀರರನ್ನು ಗೆಲ್ಲ ಹೋಗಿರಿ! ನಿಮ್ಮ ಬೆಳಕು ಇನ್ನು ಮುಂದೆ ಬೀಳುವದದೆ!

ಗಣೋಜಿರಾವಶಿರ್ಕೆ—ಖಾವಿಂದ, ನನ್ನದೊಂದು ಪ್ರಾರ್ಥನೆಯಿದೆ ನನ್ನ ತಂಗಿಯನ್ನು ತಾವು ಸೆರೆಹಿಡತಂದಿರಿ; ಇದು ಸಂತೋಷದ ಮಾತೇ ಸರಿ. ಇದು ನಮ್ಮ ಪ್ರತಿಜ್ಞೆಗೆ ಅನು ಕೂಲವಾದದ್ದು; ಆದರೆ ಇನ್ನು ನಮ್ಮ ತಂಗಿಗೆ ದುಃಖವಾಗಬಾರದೆಂದು, ಆಕೆಯ ಪ್ರತ್ಯೇಕ ಅಣ್ಣನಾದ ನನ್ನ ವಶಕ್ಕೆ ಆಕೆಯನ್ನೂ ಆಕೆಯ ಮಗನನ್ನೂ ಒಪ್ಪಿಸಬೇಕು. ಅವರು ನನ್ನ ಸೆರೆಯಲ್ಲಿರುವದರಿಂದ ಕೆಲಮಟ್ಟಿಗಾದರೂ ಸಮಾಧಾನಪಟ್ಟು ತಮ್ಮ ಜೀವಕ್ಕೆ ಅಪಾಯ ಮಾಡಿಕೊಳ್ಳದಿರಬಹುದು.

ಖಾನ—ಖಾವಿಂದ, ಬೇಡ. ಈ ಮರಾಟರು ಮೆಲ್ಲನೆ ಅವರನ್ನು ಬಂಧವಿಮುಕ್ತ ಮಾಡಿಬಿಡಬಹುದು. ಅವರನ್ನು ನಂಬಲಾಗದು.

ಬಾದಶಹ—ಛೇ ಛೇ! ಅರಸು ಮನೆತನದವರಲ್ಲಿ ಈಗ ಯಾರಾದರೂ ಇಸ್ಲಾಮ ಧರ್ಮಕ್ಕೆ ಮಾನವನ್ನು ಕೊಡಲೇಬೇಕು. ಹಿಂದಕ್ಕೆ ಸಂಭಾಜಿಯು ಪೈಗಂಬರನ ಅಪಮಾನ ಮಾಡಿದ್ದು ಈಗ ತೊಳೆದು ಹೋಗಲೇಬೇಕು.

ಬಾದಶಹನು ಈ ಮೇರೆಗೆ ಮಾತಾಡುತ್ತಿರಲು, ಶಹಾಜಾದಿಯು ಏಸೂಬಾಯಿಯನ್ನೂ, ಬಾಲಶಿವರಾಯನನ್ನೂ ಕಾಣಲಿಕ್ಕೆ ಹೋಗಿ ಅವರನ್ನು ಕರಕೊಂಡು ಬಂದಳು. ಏಸೂಬಾಯಿಯನ್ನು ಬಹಾದಶಹನ ಡೇರೆಯ ಬಳಿಯಲ್ಲಿಯ ಒಂದು ಡೇರೆಯಲ್ಲಿ ಕುಳ್ಳಿರಿಸಿ, ಬಾಲಶಿವಾಜಿಯೊಡನೆ ವಿನೋದ ಮಾಡುತ್ತ ಆಕೆಯು ಬಾದಶಹನ ಬಳಿಗೆ ಬಂದಳು. ಆಗ ಬಾದಶಹನ, ಹಾಗು ಖಾನನ ಗುಪ್ತಾಲೋಚನೆಗಳು ನಡೆದಿದ್ದವು. ಗಣೋಜಿರಾವಶಿರ್ಕೆಯು ತನ್ನ ಮಾತನ್ನು ಬಾದಶಹನು ಕೇಳುವನೋ ಇಲ್ಲವೋ ಎಂದು ಮನಸ್ಸಿನಲ್ಲಿ ಎಣಿಕೆ ಹಾಕುತ್ತ ಉದಾಸೀನ ವೃತ್ತಿಯಿಂದ ನಿಂತುಕೊಂಡಿದ್ದನು. ನಾಗೋಜಿರಾವ ಮಾನೆಯು ಖಾನನ್ನು ಕೆಟ್ಟಗಣ್ಣಿನಿಂದ ನೋಡುತ್ತ ನಿಂತುಕೊಂಡಿದ್ದನು. ಇದನ್ನು ನೋಡಿ ಬಾದಶಹನು ಮನಸ್ಸಿನಲ್ಲಿ ಬಹಳ ಸಮಾಧಾನಪಟ್ಟನು. ಯಾಕಂದರೆ, ಮರಾಟರಿಗೂ ಮುಸಲ್ಮಾನರಿಗೂ, ಮುಸಲ್ಮಾನರಿಗೂ ರಜಪೂತರಿಗೂ, ರಜಪೂತರಿಗೂ ಮರಾಟರಿಗೂ, ಸ್ನೇಹಭಾವವು ಇರಬಾರದೆಂದು ಆತನು ಯಾವಾಗಲೂ ಯತ್ನಿಸುತ್ತಿದ್ದನು. ಆ ಯತ್ನವು ಈಗ ತಾನಾಗಿ ಸಫಲವಾಗುವದನ್ನು ನೋಡಿ ಆ ತಂತ್ರಗಾರನಾದ ಬಾದಶಹನು ಆನಂದಪಟ್ಟನು. ಹೀಗಿರುವಾಗ ಬಾಲಶಿವರಾಯನು ಬಿಳಿಯ ಗಡ್ಡದ ಬಾದಶಹನ ಭವ್ಯ ಮೂರ್ತಿಯನ್ನು ನೋಡಿ, ಕೌತುಕದಿಂದ ಆತನನ್ನು ಅಪ್ಪಿಕೊಂಡನು. ಆಮೇಲೆ ಆ ರಾಜಕುವರನು ಸಲಿಗೆಯಿಂದ ಜಬುನ್ನಸೆಯನ್ನು ಅಪ್ಪಿಕೊಂಡನು. ಇದನ್ನು ನೋಡಿ ಬಾದಶಹನಿಗೆ ಕೌತುಕವಾಯಿತು. ಬಾಲಶಿವಾಜಿಯು ಜಬುನ್ನಸೆಯ ಮಗನಂತೆ ಬಾದಶಹನಿಗೆ ಕಂಡನು. ಇನ್ನೂ ಜಬುನ್ನಸೆಯ ಲಗ್ನವಾಗಿದ್ದಿಲ್ಲ. ಬಾದಶಹನ ಪ್ರೀತಿಯ ಮಗಳಿಗೆ ತಕ್ಕ ವರನು ದೊರೆಯದ್ದರಿಂದ, ಆಕೆಯು ಅವಿವಾಹಿತಳಾಗಿಯೇ ಇದ್ದಳು. ಮುಪ್ಪಿನ ಬಾದಶಹನಿಗೆ ತನ್ನ ಮಗಳ ಸಂಸಾರ ಸೌಖ್ಯವನ್ನು ನೋಡುವ ಯೋಗವು ಒದಗಿದ್ದಿಲ್ಲ. ಈಗ ಆ ಬಾಲಶಿವರಾಯನು ತನ್ನ ಮೊಮ್ಮಗನಂತೆ ತೋರಿ, ಬಾದಶಹನ ಕಣ್ಣುಗಳೊಳಗಿಂದ ಆನಂದಾಶ್ರುಗಳು ಉದುರಿದವು. ತನ್ನ ಮೊಮ್ಮಗನಿಗೆ ಮಹಮ್ಮದೀ ಧರ್ಮದ ದೀಕ್ಷೆಯನ್ನು ಕೊಡಲೇಬೇಕೆಂದು ಆತನು ನಿಶ್ಚಯಿಸಲು, ಆ ವರ್ತಮಾನವನ್ನು ಕೇಳಿ ಏಸೂಬಾಯಿಯು ನೆರೆಯ ಡೇರೆಯಲ್ಲಿ ದುಃಖದಿಂದ ಆಕ್ರೋಶ ಮಾಡತೊಡಗಿದಳು.

ಏಸೂಬಾಯಿಯು ದುಃಖಿಸಹತ್ತಿದಂತೆ, ಆಕೆಯ ಅಣ್ಣನಾದ ಗಣೋಜಿರಾವ ಶಿರ್ಕೆಯು ಹೃದಯವು ಕರಗುತ್ತ ಹೋಯಿತು. ತಾನು ಬಾದಶಹನ ಹಿತವನ್ನು ಸಾಧಿಸಿದ್ದು, ಬಾದಶಹನು ಸಣ್ಣಪುಟ್ಟ ಸಂಗತಿಗಳಲ್ಲಿಯೂ ತನ್ನ ಮಾತು ನಡಿಸದಿರುವದನ್ನು ನೋಡಿ

ಗಣೋಜಿಯು ತನ್ನ ಸೇವಾವೃತ್ತಿಗಾಗಿ ತನ್ನನ್ನು ಹಳಿದುಕೊಳ್ಳಹತ್ತಿದನು. ಅತ್ತ ನಾಗೋಜಿ ಮಾನೆಯ ಮನಸ್ಸೂ ಉದ್ವಿಗ್ನವಾಗಿತ್ತು. ತಾನು ಬಾದಶಹನ ಎಷ್ಟೋ ಹಿತಗಳನ್ನು ಸಾಧಿಸಿ,ಯಾತಿಕದ ಖಾನನ ಸಮಾನಸ್ಕಂಧನೆನಿಸಿದ್ದರೂ, ಖಾನನು ತನ್ನ ಜಾತಿಯವನೆಂಬ ಕಾರಣದಿಂದ ಬಾದಶಹನು ಆತನ ಮಾತು ಕೇಳಿ ತನ್ನ ಮಾತು ಕೇಳದಿರುವದನ್ನು ನೋಡಿ ಮಾನೆಯು ಮನಸ್ಸಿನಲ್ಲಿ ಸಂತಾಪಗೊಂಡಿದ್ದನು. ಇತ್ತ ಜಬುನ್ನಸೆಯು ಬಾದಶಹನ ನಿಶ್ಚಯವನ್ನು ನೋಡಿ ಕಣ್ಣೀರು ಸುರಿಸಹತ್ತಿದಳು. ಇಂಥ ದೊಡ್ಡ ಮನೆತನದವರ ಮೇಲೆ ಇಂಥ ಕಠಿಣಪ್ರಸಂಗ ಬಂದದ್ರಿಂದ ಆಕೆಗೆ ಬಹಳ ವ್ಯಸನವಾಗಿತ್ತು. ಆಕೆಯು ಬಾದ ಶಹನನ್ನು ಕುರಿತು ವಿನಯದಿಂದ— ''ನನ್ನ ಮೋರೆ ನೋಡಿ ಈ ಕೂಸಿನ ತಾಯಿ ಯನ್ನು ದುಃಖಕ್ಕೆ ಈಡುಮಾಡಬೇಡಿರಿ. ಇವರ ಸುಖವನ್ನು ನೋಡಿ ನನಗೆ ಸುಖ ವಾಗುತ್ತದೆ. ಇವರ ಅಂತಃಕರಣಕ್ಕೆ ವ್ಯಥೆಯಾಗುವದನ್ನು ನೋಡಿ ನನ್ನ ಅಂತಃಕರಣಕ್ಕೆ ವ್ಯಥೆಯಾಗುತ್ತದೆ.'' ಎಂದು ಮೊಣಕಾಲೂರಿ ಪ್ರಾರ್ಥಿಸುತ್ತಿದ್ದಳು. ಅತ್ತ ಏಸೂ ಬಾಯಿಯು ಒಂದೇ ಸವನೆ ಕಣ್ಣೀರು ಸುರಿಸುತ್ತಿದ್ದಳು. ಬಾದಶಹನು— ''ಅದೇನು ಕೇಳುವ ಹಾಗಿಲ್ಲ, ಇಂದಿನ ಜಯದ ಪಾಲನ್ನು ಪೈಗಂಬರನಿಗೆ ಕೊಡಲೇಬೇಕೆಂ''ದು ಹಟಹಿಡಿದಿದ್ದನು. ''ಎಂಥ ಕೃತಘ್ನ ಬಾದಶಹನಿವನು!'' ಎಂದು ಖಾನನು ಸಂತಾಪಗೊಂಡಿದ್ದನು. ಅಷ್ಟರಲ್ಲಿ ಏಸೂಬಾಯಿಯ ಆಶ್ರಿತನಾದ ಖಂಡೋಜಿ ಗುಜರನು (ಖಂಡೋಬಾ ಚೀಟನೀಸನಲ್ಲ) ಬಾದಶಹನ ಬಳಿಗೆ ಸ್ಪಷ್ಟವಾಗಿ ನುಡಿದನೇನಂದರೆ— ವೈಭವಶಾಲಿಯಾದ ಆಲಮಗೀರನೇ, ನಾನು ಪ್ರತಾಪರಾವ ಗುಜರನ ಮಗನು, ಶಿವಾಜಿಯು, ಆಪ್ತನು, ಬಾದ ಶಾಹಿಯ ಕಡುತರವಾದ ವೈರಿಯು ರಾಜಾರಾಮ ಮಹಾರಾಜರ ಬೀಗನು. ಹೀಗೆ ರಾಜ ವಂಶಕ್ಕೆ ಸಂಬಂಧಿಸಿದವನೂ, ಮೊಗಲರಿಗೆ ಯಮಸ್ವರೂಪಿಯೂ ಆದ ನಾನು ನಿನ್ನ ಪೈಗಂಬರನ ಧರ್ಮವನ್ನು ಸ್ವೀಕರಿಸಲಿಕ್ಕೆ ಸಿದ್ಧನಾಗಿ ಬಂದಿದ್ದೇನೆ. ನನಗೆ ಮುಸಲ್ಮಾನ **ಧರ್ಮದ ದೀಕ್ಷೆಯನ್ನು ಕೊಟ್ಟು ನಿನ್ನ ಉದಾರ ಮನಸ್ಸಿನ ಶಹಾಜಾದಿಗೆ ಪರಧರ್ಮ ದವರ ಮೇಲೆಯೂ ಅಂತಃಕರಣ ಮಾಡಲಿಕ್ಕೆ ಬರುತ್ತದೆಂಬ ಕೀರ್ತಿಯನ್ನು ದಿಗಂತದಲ್ಲಿ** ಹಬ್ಬಿಸು; ಮತ್ತು ಜಯಶಾಲಿಯಾದ ಔರಂಗಜೇಬನು ಸೋತವರ ಮೇಲೆ ಉಪಕಾರ ಮಾಡುವನೆಂಬ ಕೀರ್ತಿಯನ್ನು ಸಂಪಾದಿಸು. ನಡೆ, ನನ್ನನ್ನು ಮುಸಲ್ಮಾನನಾಗಮಾಡು!

ಈ ಮೇರೆಗೆ ಖಂಡೋಜಿರಾವ ಗುಜರನು ಸ್ವಾಮಿಕಾರ್ಯಕ್ಕಾಗಿ ಮಾಡಿದ ಸ್ವಾರ್ಥತ್ಯಾಗಕ್ಕಾಗಿ ಎಲ್ಲರು ದಂಗು ಬಡೆದು ನಿಂತುಕೊಂಡರು; ಇದರಿಂದ ಗಣೋಜಿ, ಮಾನೋಜಿ ಇವರ ಮನಸ್ಸಿಗೆ ಬರೆಕೊಟ್ಟಂತಾಯಿತು. ಹಿಂದಕ್ಕೆ ಸಂಭಾಜಿಯು ಯಾವ ದ್ವೇಷ ದಿಂದ ತನ್ನ ದೇಹ ಯಜ್ಞವನ್ನು ಮಾಡಿದನೋ, ಅದೇ ದ್ವೇಷದಿಂದ ಖಂಡೋಜಿಯು ಇಂದು ತನ್ನ ಆತ್ಮಯಜ್ಞನ್ನು ಮಾಡಿದನು! ಇಂಥ ದೊಡ್ಡ ಯೋಗ್ಯತೆಯ ಮರಾಟರು ಪೈಗಂಬರನ ಶಿಷ್ಯನಾಗಲು ಸಿದ್ಧನಾದದ್ದನ್ನು ನೋಡಿ, ಬಾದಶಹನಿಗೆ ಸಂತೋಷವಾಯಿತು, ಶಹಾಜಾದಿಯು ಅಂತಃಕರಣ ಪೂರ್ವಕವಾಗಿ ಈಶ್ವರನನ್ನು ಪ್ರಾರ್ಥಿಸಿದಳು. ಏಸೂ

ಬಾಯಿಯ ದುಃಖಾಶ್ರುಗಳು ಅದೃಶ್ಯವಾದವು. ಈ ಮೇರೆಗೆ ಖಂಡೋಜಿರಾವ ಗುಜರನು ಬಾಲಶಿವರಾಯನ ಬದಲಾಗಿ ಮುಸಲ್ಮಾನನಾದ್ದರಿಂದ, ಶಿವಾಜಿಯ ವಂಶಕ್ಕೆ ಬಂದೊದಗಿದ್ದ ಅರಿಷ್ಟದ ನಿವಾರಣವಾಯಿತು!

## ಸತ್ವಶಾಲಿತ್ವ

ಈ ಮೇರೆಗೆ ಸೂರ್ಯಾಜಿಯ ವಿಶ್ವಾಸಘಾತದಿಂದ ರಾಯಗಡವು ಯಾತಿಕದ ಖಾನನ ವಶವಾಗಿ, ಏಸೂಬಾಯಿಯೂ, ಬಾಲಶಿವರಾಯನೂ ಬಾದಶಹನ ಕೈಸೇರಿದ ವರ್ತಮಾನವು ಖಂಡೋಬಾ ಚೀಟಿನೀಸನಿಗೆ ಗೊತ್ತಾಯಿತು. ಆತನು ರಾಜಾರಾಮಾದಿ ರಾಮಪರಿವಾರವನ್ನು ಪಲ್ಹಾಳಗಡದಿಂದ ಹೊರಹೊಡಿಸಿ, ಆ ಪರಿವಾರದ ಪ್ರಾಣಸಂಕಟವನ್ನು ತಪ್ಪಿಸುವದಕ್ಕೆ ಅದನ್ನು ಪಲ್ಹಾಳಗಡದಿಂದವಿಶಾಲಗಡಕ್ಕೂ ವಿಶಾಲಗಡದಿಂದ ಜಿಂಜಿಗೂ ಹೊರಡಿಸಿಕೊಂಡು ಹೋಗುವಂತೆ ವ್ಯವಸ್ಥೆಮಾಡಬೇಕೆಂದೂ ಯೋಚಿಸಿ, ವೇಗದಿಂದ ಪಲ್ಹಾಳಗಡಕ್ಕೆ ಸಾಗಿದನು. ಆತನು ಪಲ್ಹಾಳಗಡಕ್ಕೆ ಮುಟ್ಟುವದರೊಳಗಾಗಿ, ಇತ್ತ ಬಾದಶಹನು ರೊಚ್ಚಿಗೆದ್ದಿದ್ದ ಸರದಾರರು ಸಹ್ಯಾದ್ರಿಯ ಸಾಲಿ ದುರ್ಗಗಳನ್ನು ಭರದಿಂದ ಒಂದೊಂದಾಗಿ ವಶಮಾಡಿಕೊಳ್ಳಹತ್ತಿದರು. ಖಂಡೋಜಿಯು ರಾಯಗಡದ ವರ್ತಮಾನವನ್ನು ಮಹಾರಾಜರಿಗೆ ತಿಳಿಸಲು, ಕೆಲವರ ಅಂತಃಕರಣಗಳು ದುಃಖದಿಂದಲೂ, ಕೆಲವರು ದ್ವೇಷದಿಂದಲೂ ಸಂತಪ್ತವಾದವು. ಆದರೆ ಸಂತಪ್ತವಾಗಿ ಮೈಮರೆತು ಕುಳಿತುಕೊಳ್ಳಲಿಕ್ಕೆ ಸಮಯವಿದ್ದಿಲ್ಲ. ಬಾದಶಹನು ಮಿರಜ,ಪಲ್ಹಾಳದ ಕಡೆಗೆ ತನ್ನ ಪ್ರಚಂಡ ಸೈನ್ಯವನ್ನು ಸಾಗಿಸಿದ್ದನು. ಈ ಪರಿಸ್ಥಿತಿಯನ್ನರಿತು ಪ್ರಲ್ಹಾದಪಂತನು, ನೀಲೋಪಂತ ಪಿಂಗಳೆ, ಹರಜಿ ಮಹಾಡಿಕ ಇವರಿಗೆ ಮಹಾರಾಜರು ಬರುವರಾದ್ದರಿಂದ ಕರ್ನಾಟಕದಲ್ಲಿ ಎಲ್ಲ ವ್ಯವಸ್ಥೆಯನ್ನು ಇಡಿರೆಂದು ಪತ್ರಗಳನ್ನು ಬರೆದನು; ಮತ್ತು ತಮ್ಮ ಪರಿವಾರದೊಳಗಿನ ಕೆಲವರನ್ನು ಬೇರೆ ಬೇರೆ ವೇಷಗಳಿಂದ, ಬೇರೆ ಬೇರೆ ಮಾರ್ಗವಾಗಿ ಜಿಂಜೆಯ ಕಡೆಗೆ ಮೊದಲೇ ಸಾಗಿಸಿದನು.

ಇನ್ನು ಸ್ವತಃ ರಾಜಾರಾಮ ಮಹಾರಾಜರನ್ನು ಜಿಂಜಿಗೆ ಹ್ಯಾಗೆ ಕಳಿಸಬೇಕೆಂಬ ಆಲೋಚನೆಗೆ ಪ್ರಲ್ಹಾದಪಂತನು ಒಳಗಾದನು. ಬಾದಶಹನ ಸಂಪೂರ್ಣ ಕಣ್ಣು ರಾಜಾರಾಮ ಮಹಾರಾಜರ ಮೇಲೆ ಇತ್ತು, ಅದಿಷ್ಟು ಆಶಾಂಕುರವನ್ನು ಕಮರಿಸಿಬಿಟ್ಟರೆ, ಶಿವಾಜಿಯ ನಿರ್ವಂಶವಾಗಿ, ಬಾದಶಾಹಿಯು ನಿರಂಕುಶವೂ, ನಿರ್ವೈರವೂ ಆಗುವದೆಂದು ಬಾದಶಹನು ತಿಳಿದಿದ್ದನು; ಆದ್ದರಿಂದ ತಟ್ಟನೆ ಮಹಾರಾಜರನ್ನು ಜಿಂಜಿಗೆ ಹೊರಡಿಸುವಹಾಗಿದ್ದಿಲ್ಲ. ಈ ದುರ್ಘಟ ಪ್ರಸಂಗದಿಂದ ಪಾರಾಗುವದಕ್ಕಾಗಿ ಪ್ರಲ್ಹಾದಪಂತನೂ, ಪರಶುರಾಮಪಂತನೂ ಕೂಡಿ ಒಂದು ಹಂಚಿಕೆಯನ್ನು ಹುಡುಕಿದರು. ಮಹಾರಾಜರು ಇನ್ನೂ ದಕ್ಷಿಣದಲ್ಲಿಯೇ ಇರುತ್ತಿದ್ದು, ತಮ್ಮ ಪರಿವಾರದೊಡನೆ ದುರ್ಗದಿಂದ ದುರ್ಗಕ್ಕೆ ಅಲೆದಾಡುತ್ತ ತಮ್ಮನ್ನು ಎಡತಾಕಿಸುವರೆಂಬಂತೆ ಬಾದಶಹನ ಸೈನ್ಯಕ್ಕೆ ತೋರಿಸಿ, ಒಮ್ಮಿಂದೊಮ್ಮೆ ತಾವು

ಕರ್ನಾಟಕದ ಕಡೆಗೆ ಸಾಗಬೇಕೆಂದು ಅವರು ಯೋಚಿಸಿದ್ದರು. ಈ ಕಾಲದಲ್ಲಿ ಪ್ರಲ್ಹಾದ ಪಂತನ ಚಾತುರ್ಯವು ಒಳಿತಾಗಿ ವ್ಯಕ್ತವಾಯಿತು. ಆತನು ವಿಶಾಲಗಡವೆಂಬಲ್ಲಿಮಹಾರಾಜರ ಕುಟುಬಂದವರನ್ನು ಇಟ್ಟನು. ತಾರಾಬಾಯಿಯವರು ಪೂರ್ಣ ಗರ್ಭವತಿಯರಾಗಿರುವದ ರಿಂದ,ಅವರನ್ನು ಸ್ಥಳಬಿಟ್ಟು ಕದಲಿಸುವ ಹಾಗಿದ್ದಿಲ್ಲ. ಮಹಾರಾಜರನ್ನೂ, ಅವರ ಖಾಸ ಪರಿವಾರವನ್ನೂ ಮಾತ್ರ ಆತನು ಮೆಲ್ಲನೆ ದಕ್ಷಿಣದಿಂದ ಹೊರಡಿಸಿ, ಕರ್ನಾಟಕದ ಕಡೆಗೆ ಸಾಗಿಸಿಕೊಂಡು ನಡೆದನು.

ಶೂರ ಸರದಾರರಾದ ಶಂಕರಾಜಿ ಮಲ್ಹಾರ, ಖಂಡೇರಾವ ದಾಬಡೆ, ಧನಾಜಿ ಜಾಧವ, ಸಂತಾಜಿ ಘೋರಪಡೆಯವರೂ, ಶ್ರೇಷ್ಠ ಮುತ್ಸದ್ದಿಗಳಾದ ಆಬಾಜಿ ಸೋನದೇವ, ಪ್ರಲ್ಹಾದ ರಾವ ನಿರಾಜಿ, ಖಂಡೋ ಬಲ್ಲಾಳರವರೂ ಜಂಗಮರ ಹಾಗು ಅರಿವೆ ಮಾರುವವರ ಸೋಗು ಹಾಕಿಕೊಂಡು ವಿಶಾಲಗಡದಿಂದ ಗುಪ್ತವಾಗಿ ಹೊರಟರು. ರಾಜಪತ್ನಿಯರು ಕೊತ್ತಳಗಳ ಮೇಲೆ ನಿಂತು ಕಣ್ಣೀರು ಸುರಿಸುತ್ತಮಹಾರಾಜರ ಪ್ರವಾಸವು ಯಶಸ್ಸು ಕೊಡುವದಾಗಲೆಂದು ಅಂಬಾಭವಾನಿಯನ್ನು ಪ್ರಾರ್ಥಿಸುತ್ತಲಿದ್ದರು. ಈ ಮೇರೆಗೆ ರಾಜಪರಿ ವಾರವು ಒಂದರ ಹಿಂದೊಂದು ಘಟ್ಟಗಳನ್ನು ಇಳಿದು ರತ್ನಾಗಿರಿ ಜಿಲ್ಲೆಯೊಳಗಿನ ಆಂಗ್ರೆಯ ವಿಜಯ ದುರ್ಗ ವೆಂಬ ಹಡಗುಪಡೆಯ ರಾಜಧಾನಿಯ ಮಾರ್ಗವಾಗಿ ದೇವಗಡಕ್ಕೆ ಬಂದಿತು. ಅಲ್ಲಿಂದ ಜಲಮಾರ್ಗವಾಗಿ ಸಪ್ಪಳಿಲ್ಲದೆ ಪ್ರವಾಸಮಾಡುತ್ತ ಅವರೆಲ್ಲರು ಗೋಕರ್ಣಕ್ಷೇತ್ರಕ್ಕೆ ಬಂದರು. ಅವರು ಚಂಡಿಕೆಗಳನ್ನು ಬೋಳಿಸಿ, ಕೊರಳಲ್ಲಿ ಲಿಂಗಗಳನ್ನು ಕಟ್ಟಿಕೊಂಡಿದ್ದರು. ಕೇವಿಯ ಉಡಿಗೆ ತೊಡಿಗೆಗಳಿಂದ ಅವರು ನೋಡುವವರಿಗೆ ಅಯ್ಯನವರ ಹಿಂಡಿನಂತೆ ಕಾಣುತ್ತಿದ್ದರು; ಆದರೆ ಅಯ್ಯನವರ ವ್ಯವಹಾರಗಳನ್ನು ಮಾತ್ರ ಅವರು ಅರಿಯದ ವರಾದ್ದರಿಂದ ಜನರು ತಮ್ಮ ಗುರುತು ಎಲ್ಲಿ ಹಿಡಿಯುವರೋ ಎಂದು ಯಾವಾಗಲೂ ಅವರು ಭಯಗ್ರಸ್ತರಾಗಿರುತ್ತಿದ್ದರು.

ಈ ರಾಜಪರಿವಾರವು ವಿಶಾಲಗಡದಿಂದ ಹೊರಬಿದ್ದು ಹೋದದ್ದನ್ನು ಭೋಲಾ ನಾಥನು ಔರಂಗಜೇಬನಿಗೆ ತಿಳಿಸಿದ್ದನು. ಆಗ ಬಾದಶಹನು ಪಲ್ಹಾಳಗಡವನ್ನು ಬಿಗಿಯಾಗಿ ಮುತ್ತಿ ಪಲ್ಹಾಳಪ್ರಾಂತವನ್ನು ಗೆದ್ದಿದ್ದಾಗ್ಯೂ ರಾಜಪರಿವಾರವು ಅಲ್ಲಿ ಇಲ್ಲದ್ದರಿಂದ ಆ ದುರ್ಗವನ್ನು ವಶಮಾಡಿಕೊಳ್ಳಲಿಕ್ಕೆ ಆತನಿಗೆ ಅಷ್ಟು ಉತ್ಸಾಹವಿದ್ದಿಲ್ಲ; ಆದರೆ ದುರ್ಗ ದೊಳಗಿನ ಮರಾಟರು ಬಹಳ ಶೌರ್ಯದಿಂದ ಕಾದಿ ಸರ್ಜೇಖಾನನ ಆಟವನ್ನು ನಡೆಯ ಗೊಡದ್ದರಿಂದ,ಆ ಅಭಿಮಾನಿಯಾದ ಬಾದಶಹನು ಹಟಕ್ಕೆ ಬಿದ್ದಿದ್ದನು. ಆದರೆ ಆತನ ಲಕ್ಷ್ಯವೆಲ್ಲ ರಾಜಪರಿವಾರದ ಕಡೆಗೆ ಇತ್ತು, ಅದನ್ನು ಹಿಡಿತರುವದಕ್ಕಾಗಿ ಆತನು ಅಸದಖಾನನನ್ನು ಕಳುಹಿದ್ದನು; ಮತ್ತು ಊರೂರು ಚಾವಡಿಗಳಲ್ಲಿ ನೋಟೀಸುಗಳನ್ನು ಹಚ್ಚಿಸಿ ಜನರಿಗೆ ದೊಡ್ಡ ದೊಡ್ಡ ಉಚಿತಗಳ ಆಶೆಯನ್ನು ತೋರಿಸಿದ್ದನು. ಇದರಿಂದ ವೇಷಾಂತರಿಸಿಕೊಂಡಿದ್ದ ರಾಜಪರಿವಾರವು ಗೋಕರ್ಣದಿಂದ ಮುಂದಕ್ಕೆ ಸಾಗಲಿಕ್ಕೆ ಆತಂಕ ಪಡಹತ್ತಿತು. ಅಂದು ಅವರು ಶಿವಾಲಯದ ಚಂದ್ರಶಾಲೆಯಲ್ಲಿ ಇಳಿದುಕೊಂಡು, ಕೆಲ

ಹೊತ್ತು ವಿಶ್ರಾಂತಿಯನ್ನು ಹೊಂದಿದರು. ಬಳಿಕ ಪ್ರಲ್ಹಾದಪಂತರು ಸ್ನಾನಕ್ಕೆ ಹೋಗಲು, ಸಂತಾಜಿ ಘೋರಪಡೆ ಮೊದಲಾದವರು ಒಲೆಹೂಡಿ ಪಾತ್ರೆಗಳನ್ನೂ, ಅಡಿಗೆಯ ಸಾಹಿತ್ಯಗಳನ್ನೂ ಸಿದ್ಧಮಾಡಿ ಇಟ್ಟರು. ಪ್ರಲ್ಹಾದಪಂತರು ಎಲ್ಲರ ಸಲುವಾಗಿ ಅಡಿಗೆಯನ್ನು ಸಿದ್ಧಮಾಡಿ, ಮಹಾರಾಜರೊಡನೆ ಮಹಾಬಲೇಶ್ವರನ ದರ್ಶನಕ್ಕೆ ಹೊರಟರು. ಉಳಿದ ಪರಿವಾರವೂ ಅವರನ್ನು ಹಿಂಬಾಲಿಸಿತು.

ಪ್ರಲ್ಹಾದಪಂತರು ರುದ್ರಾಭಿಷೇಕದಿಂದ ಮಹಾಬಲೇಶ್ವರನನ್ನು ಪೂಜಿಸಿ ಉಳಿದವರ ಕೈಯಿಂದಲೂ ಆ ಕೈಲಾಸನಾಥನ ಪೂಜೆಯನ್ನು ಮಾಡಿಸಿದರು. ಗೋಕರ್ಣವು ಮಹಾ ಕ್ಷೇತ್ರವು. ಅದು ಗಯಾಪುಷ್ಕರ, ಕಾಶಿ, ತ್ರ್ಯಂಬಕ ಕ್ಷೇತ್ರಗಳಿಂದ ಪವಿತ್ರವಾದದ್ದು. ಈ ಕ್ಷೇತ್ರದಲ್ಲಿ ಮಹಾಬಲೇಶ್ವರನ ದರ್ಶನಕ್ಕಾಗಿ, ಬ್ರಹ್ಮ ವಿಷ್ಣು ರಾಮಚಂದ್ರ, ರಾವಣ, ಅಗಸ್ತ್ಯ, ಬೇರೆ ಋಷಿಗಳು, ಮುನಿಗಳು ಯಾವತ್ತೂ ದೇವತೆಗಳು ನಿತ್ಯ ಬರುತ್ತಿರುವರು. ಕೈಲಾಸನಾಥನ ಆ ಆತ್ಮಲಿಂಗದ ಪೂಜೆಯಿಂದ ರಾವಣನ ತಾಯಿಗೆ, ಕೋಟಿಲಿಂಗಾ ರ್ಚನದ ಫಲವು ಪ್ರಾಪ್ತವಾಗತಕ್ಕದ್ದಿತ್ತು. ಇಂಥ ಆ ಭೂಕೈಲಾಸವನ್ನು ಪ್ರವೇಶಿಸಿದ ಕೂಡಲೇ ಪ್ರಲ್ಹಾದಪಂತನೇ ಮೊದಲಾದವರ ಮನೋವೃತ್ತಿಗಳು ತಲ್ಲೀನವಾದದ್ದರಲ್ಲಿ ಆಶ್ಚರ್ಯ ವಿಲ್ಲ. ಅವರೆಲ್ಲರು ''ಓಂ ನಮಃಶಿವಾಯ'' ಎಂಬ ಪಂಚಾಕ್ಷರೀ ಮಂತ್ರ ಜಪ ಪೂರ್ವಕ ವಾಗಿ ಮಹಾಬಲೇಶ್ವರನನ್ನು ಪ್ರಾರ್ಥಿಸಿದರು. ಬಳಿಕ ಅವರು ತಾವು ಇಳಿದು ಕೊಂಡಲ್ಲಿಗೆ ಬಂದು ಊಟ–ಉಡಿಗೆಗಳನ್ನು ತೀರಿಸಿಕೊಂಡು ಸ್ವಲ್ಪ ವಿಶ್ರಮಿಸಿ ''ವೆಂಕಟರಮಣ ರಾಮಯ್ಯ''ಎಂದು ನಾಮಘೋಷ ಮಾಡುತ್ತ ಸೊಂಡೂರ ಹಾದಿಯನ್ನು ಹಿಡಿದರು. ಅವರು ಪುರಾಣ ಪ್ರಸಿದ್ಧವಾದ ಹಲವು ನದಿಗಳನ್ನೂ, ಕ್ಷೇತ್ರಗಳನ್ನೂ ದಾಟುತ್ತ ಶಿವಪುರಿಯೆಂಬ ಹೆಸರು ಪಡೆದಿದ್ದ ಆ ಸೊಂಡೂರಿಗೆ ಹೋದರು. ಸೊಂಡೂರ ಸಂಸ್ಥಾನದ ಒಡೆಯನು ಸಂತಾಜಿ ಘೋರಪಡೆಯು. ತನ್ನ ಸಂಸ್ಥಾನಕ್ಕೆ ತನ್ನ ಸ್ವಾಮಿಯಾದ ರಾಜಾರಾಮ ಮಹಾರಾಜರು ಪರಿವಾರಸಹಿತವಾಗಿ ಬಂದದ್ದೊಂದು ಅಪೂರ್ವಯೋಗವೆಂದು ಆ ಸ್ವಾಮಿನಿಷ್ಠ ಸಂತಾಜಿಯು ಭಾವಿಸಿದನು. ತನ್ನ ಸಂಸ್ಥಾನದಲ್ಲಿ ಬಂದಕೂಡಲೆ ಆತನು ತನ್ನ ಜಂಗಮ ವೇಷವನ್ನು ಬಿಸುಟಿ, ರಾಜಪರಿವಾರವನ್ನು ವೈಭವದಿಂದ ಕರಕೊಂಡು ಹೋಗಲು ನಿಶ್ಚಯಿಸಿದನು. ಹೀಗೆ ಮಾಡುವದು ಹಿತವಲ್ಲ, ಬಾದಶಹನ ಗೂಢಕಾರರು ನಮ್ಮ ಬೆನ್ನಮೇಲೆ ಇರಬಹುದು. ಎಂದು ಪ್ರಲ್ಹಾದಪಂತನು ಹೇಳಲು, ಸಂತಾಜಿಯು—''ನನ್ನ ಮನೆಗೆ ದೇವರು ನಡೆದು ಬಂದಿರುವಾಗ ನಾನು ದೈವೀವೈಭವದಿಂದ ಅದನ್ನು ಪೂಜಿಸದೆ ಹ್ಯಾಗಿರಲಿ?'' ಎಂದು ಸ್ಪಷ್ಟವಾಗಿ ಉತ್ತರವನ್ನು ಹೇಳಿದ್ದರಿಂದ, ಪ್ರಲ್ಹಾದಪಂತನು ಸರದಾರರಿಗೆ ಒಪ್ಪ ಬಹುದಾದ ಸಾಧಾರಣ ತರದ ಉಡಿಗೆ–ತೊಡಿಗೆಗಳನ್ನು ಎಲ್ಲರಿಗೂ ಕೊಟ್ಟನು.

ಸಂತಾಜಿಯು ರಾಜವೈಭವದಿಂದ ತನ್ನ ಸ್ವಾಮಿಯನ್ನು ರಾಜಧಾನಿಯಲ್ಲಿ ಕರೆದು ಕೊಂಡು ಹೋದನು. ಆಗ ಅನಾಯಾಸವಾಗಿ ಕೃತ್ತಿಕಾಯೋಗವು ಒದಗಿತ್ತು. ಎಲ್ಲ

ರಾಜಪರಿವಾರವು ಶ್ರೀ ಕುಮಾರಸ್ವಾಮಿಯ ದರ್ಶನಕ್ಕಾಗಿ ಪರ್ವತವನ್ನು ಏರಿಹೋಯಿತು. ಸಂತಾಜಿಯು ಮಹಾರಾಜರ ಸಲುವಾಗಿ ಸ್ವತಃ ದರ್ಭಪುಷ್ಪಗಳನ್ನು ತಕ್ಕೊಂಡು ಬಂದಿದ್ದನು. ಕುಶತೀರ್ಥದಲ್ಲಿ ಮಹಾರಾಜರೇ ಮೊದಲಾದವರ ಸ್ನಾನವು ವಿದ್ಯುಕ್ತವಾಗಿ ಆದಬಳಿಕ, ಶ್ರೀ ಕುಮಾರಸ್ವಾಮಿಯ ಪೂಜೆಗಾಗಿ ಎಲ್ಲರೂ ಹೋದರು. ಪೂಜಾಸಮಾರಂಭವು ಪ್ರೇಕ್ಷಣೀಯವೂ, ಹೃದಯಂಗಮವೂ ಆಗಿತ್ತು, ಕ್ಷತ್ರಿಯಕುಲಾವಸಂತರಾದ ರಾಜಾರಾಮ ಮಹಾರಾಜರು ಸ್ವಾಮಿಯನ್ನು ಪೂಜಿಸಹತ್ತಿದ್ದಾರೆ; ಸ್ವತಃ ಪ್ರಲ್ಹಾದಪಂತರು ಪೂಜೆಯನ್ನು ಮಾಡಿಸಹತ್ತಿದ್ದಾರೆ; ವೀರನಾದ ಸಂತಾಜಿಯು ತಾನು ಸ್ವತಃ ತಂದಿದ್ದ ಕುಶಪುಷ್ಪ, ಪಾಲಾಶ ದಂಡ, ಮೃಗಚರ್ಮ, ಕೌಪೀನಗಳನ್ನು ಮಹಾರಾಜರ ಕೈಯಿಂದ ಶ್ರೀ ಕಾರ್ತಿಕೇ ಯನಿಗೆ ಅರ್ಪಿಸಹತ್ತಿದ್ದಾನೆ; ಎಲ್ಲ ಪರಿವಾರವು ಭಕ್ತಿಪರವಶತೆಯಿಂದ ಕುಳಿತುಕೊಂಡಿದೆ; ಮಹಾರಾಜರೇ ಮೊದಲಾದ ಎಲ್ಲ ಪರಿವಾರವು ಶುಭ್ರಭಸ್ಮಲೇಪನದಿಂದ ಶೈವಸಂಪತ್ತು ಹೊರಸೂಸ ಹತ್ತಿದೆ. ಇಂಥ ಗಂಭೀರ ಪ್ರಸಂಗದಲ್ಲಿ ಮಹಾರಾಜರು ಶ್ರೀ ಕುಮಾರ ಸ್ವಾಮಿಯನ್ನು ಭಕ್ತಿಯಿಂದ ಪೂಜಿಸಿದ ಬಳಿಕ ಪ್ರಲ್ಹಾದಪಂತರು ಸ್ವಾಮಿಯ ಸಮ್ಮುಖದಲ್ಲಿ ಎಲ್ಲ ವೀರಪರಿ ವಾರವನ್ನು ಕುರಿತು—ವೀರರೇ, ಶ್ರೀಕುಮಾರಸ್ವಾಮಿಯ ಪೂಜಾಯೋಗವು ಇಂದು ನಮ್ಮೆಲ್ಲರಿಗೆ ಲಭಿಸಿದ್ದು ಸುದೈವವೆಂದು ತಿಳಿಯಿರಿ. ಶ್ರೀಕಾರ್ತಿಕೆಯನು ಕೂಸಾಗಿರು ವಾಗ ದೇವಸೇನಾಧಿಪತ್ಯವನ್ನು ಕೈಕೊಂಡು ದುಷ್ಟ ತಾರಕಾಸುರನನ್ನು ಸಂಹರಿಸಿದನು, ಇಂಥ ಮಹಾಪ್ರತಾಪಿಯ ಅನುಗ್ರಹಯೋಗವು ನಮ್ಮೆಲ್ಲರಿಗೂ ಒದಗಿರುತ್ತದೆ; ಅಂದ ಬಳಿಕ ಸ್ವಾಮಿಕಾರ್ಯಕ್ಕಾಗಿ ಟೊಂಕಕಟ್ಟಿದ ನಾವು ಅಂಜುವದೇಕೆ? ಇನ್ನು ಮೇಲೆ ಶ್ರೀಕಾರ್ತಿಕೇಯನ ಕೃಪೆಯಿಂದ ನಮ್ಮೆಲ್ಲರ ತೋಳುಗಳಲ್ಲಿ ವಿಲಕ್ಷಣವಾದ ಸಾಮರ್ಥ್ಯವೂ, ನಮ್ಮ ಖಡ್ಗಧಾರೆ ಗಳಲ್ಲಿ ಅಪೂರ್ವ ತೀವ್ರತೆಯೂ ಪ್ರಾಪ್ತವಾಗುವಲ್ಲಿ ಸಂಶಯವಿಲ್ಲ.

ಈ ಮೇರೆಗೆ ಎಲ್ಲ ಪೂಜಾವಿಧಿಗಳು ಮುಗಿದಬಳಿಕ ರಾಜಪರಿವಾರವು ಲೋಹಾದ್ರಿ ಯನ್ನು ಇಳಿಯಿತು. ಸಂತಾಜಿಯ ಅಂದಿನ ಆನಂದಕ್ಕೆ ಮೇರೆಯೇ ಇದ್ದಿಲ್ಲ. ತನ್ನ ಸ್ವಾಮಿ ಯನ್ನು, ಶಿವಪ್ರಭುವಿನ ಪುತ್ರನನ್ನು, ಗೋ-ಬ್ರಾಹ್ಮಣ ಪ್ರತಿಪಾಲಕನನ್ನು ಎಷ್ಟು ಸನ್ಮಾನಿ ಸಿದರೂ, ಎಷ್ಟು ಪೂಜಿಸಿದರೂ ಆ ಸ್ವಾಮಿನಿಷ್ಠೆಗೆ ತೃಪ್ತಿಯೇ ಆಗಲಿಲ್ಲ. ಆ ರಾಜಪರಿವಾರವು ಕೆಲವು ದಿನ ವಿಶ್ರಾಂತಿಯನ್ನು ಪಡೆದಬಳಿಕ ವೆಂಕಟಗಿರಿಯ ಮೇಲೆ ಹಾಯ್ದು ಬೆಂಗಳೂರಿಗೆ ಹೋಗುವದಕ್ಕಾಗಿ ಕರ್ನಾಟಕದ ಬೈರಾಗಿಗಳ ವೇಷವನ್ನು ಹಾಕಿಕೊಂಡಿತು. ಕೃತ್ತಿಕಾ ಯೋಗದ ಮೂಲಕ ಬಹುಜನ ಯಾತ್ರಿಕರು ಲೋಹಾದ್ರಿಯಲ್ಲಿ ಕೂಡಿದ್ದರು. ಆಗ ಈ ಮಹಾರಾಷ್ಟ್ರ ಪರಿವಾರದ ಸಂಶಯವು ಬಹುಜನರಿಗೆ ಉತ್ಪನ್ನವಾಯಿತು. ಇತ್ತ ಔರಂಗಜೇಬನು ರಾಜಾ ರಾಮಾದಿ ರಾಜ ಪರಿವಾರವನ್ನು ಹಿಡಿದುಕೊಟ್ಟವರಿಗೆ, ಅಥವಾ ಆ ಪರಿವಾರದ ಗೊತ್ತು ಹಚ್ಚಿಕೊಟ್ಟವರಿಗೆ ದೊಡ್ಡ ದೊಡ್ಡ ಇನಾಮುಗಳನ್ನು ಕೊಡುವೆನೆಂದು ಊರೂರಿಗೆ ಡಂಗುರ ಸಾರಿದ್ದನು. ದ್ರವ್ಯಲೋಭದಿಂದ ಎಷ್ಟೋ ಜನರು ತಮ್ಮ ಯಾತ್ರೆಯ ಪವಿತ್ರೋದ್ದೇಶವನ್ನು ಮರೆತು, ಈ ಹೊಸ ಜನರ ಸುತ್ತು ಕೈ ತೊಳಕೊಂಡು ಬೆನ್ನಹತ್ತಿದರು. ಕಾರಣ ವೇಷಾಂತರ

ದಿಂದ ಮಾರ್ಗವನ್ನು ಕ್ರಮಿಸುತ್ತಿದ್ದ ರಾಜಪರಿವಾರಕ್ಕೆ ಬಹಳ ತೊಂದರೆಯಾಗಹತ್ತಿತು. ತಮ್ಮನ್ನು ಹಿಡಿಯುವದಕ್ಕಾಗಿ ಬಾದಶಹನು ಕಾಸಮಖಾನನನ್ನು ಕಳುಹಿಸಿರು ವನೆಂಬ ಸುದ್ದಿಯೂ ಅವರಿಗೆ ಗೊತ್ತಾಗಿತ್ತು. ಅವರು ಬಹು ಜಾಗರೂಕತೆಯಿಂದ ಮಾರ್ಗವನ್ನು ಕ್ರಮಿಸುತ ಬೆಂಗಳೂರಿಗೆ ಬಂದು ಒಂದು ಧರ್ಮಶಾಲೆಯಲ್ಲಿ ಇಳಿದು ಕೊಂಡರು. ಇಷ್ಟು ಹೊತ್ತಿಗೆ ಎಷ್ಟೋ ಜನ ಮಹಾರಾಷ್ಟ್ರ ಸರದಾರರು ವೇಷಾಂತರದಿಂದ ಈ ರಾಜ ಪರಿವಾರವನ್ನು ಕೂಡಿಕೊಂಡದ್ದರಿಂದ, ಬೈರಾಗಿಗಳ ಸಂಘವು ದೊಡ್ಡದಾಗಿತ್ತು.

ಹೀಗೆ ಮರಾಟರು ವಿಪತ್ಕಾಲದಲ್ಲಿ ವೇಷಾಂತರದಿಂದ ಹೊರಟಿದ್ದರೂ, ಅವರಲ್ಲಿಯ ಪರಸ್ಪರ ಪೂಜ್ಯ–ಪೂಜಕ ಭಾವವು ಪ್ರಸಂಗದಲ್ಲಿ ವ್ಯಕ್ತವಾಗದೆ ಹೋಗುತ್ತಿದ್ದಿಲ್ಲ. ರಾಜಾ ರಾಮ ಮಹಾರಾಜರು ತಮ್ಮ ಸ್ವಾಮಿಯೆಂತಲೂ, ತಾವು ಅವರ ಸೇವಕರೆಂತಲೂ ತಿಳಿದು ಅವರು ನಡಕೊಳ್ಳುತ್ತಿದ್ದರು. ಒಂದು ದಿನ ರಾಜಾರಾಮ ಮಹಾರಾಜರು ಕೈಕಾಲು ತೊಳಕೊಳ್ಳುವದಕ್ಕಾಗಿ ಧರ್ಮಶಾಲೆಯ ಕಟ್ಟೆಯ ಮೇಲೆ ನಿಂತುಕೊಂಡಿದ್ದಾರೆ, ಧನಾಜಿಯು ಅವರ ಕಾಲುಗಳನ್ನು ತೊಳೆಯಹತ್ತಿದ್ದಾನೆ, ಸಂತಾಜಿಯು ನೀರು ಹಾಕುತ್ತಲಿದ್ದಾನೆ. ಖಂಡೋಜಿಯು ಕಾಲು ಒರೆಸುವದಕ್ಕಾಗಿ ವಸ್ತ್ರವನ್ನು ಹಿಡಕೊಂಡು ಆತುರದಿಂದ ನಿಂತುಕೊಂಡಿದ್ದಾನೆ. ಈ ಚಂದವನ್ನು ನೋಡಿ ಧರ್ಮಶಾಲೆಯ ಮತ್ತೊಂದು ಮೂಲೆಯಲ್ಲಿ ಇಳಿದುಕೊಂಡಿದ್ದವರಲ್ಲಿ ಒಬ್ಬನು ತನ್ನವರನ್ನು ಕುರಿತು— ''ಇವರು ಬೈರಾಗಿಗಳಂತೆ ಕಾಣುವದಿಲ್ಲ. ಯಾರೋ ವಿಪದ್ಗ್ರಸ್ತರಾದ ಘನವಂತರಿರುವರು. ಔರಂಗಜೇಬ ಬಾದಶಹನು ಡಂಗುರ ಸಾರಿರುವ ಜನರು ಇವರೇ ಇರುವಂತೆ ಕಾಣುತ್ತದೆ; ಇವರ ಬೆನ್ನು ಕಾಯತಕ್ಕದು'' ಎಂದು ನುಡಿದನು. ಕರ್ಮಧರ್ಮ ಸಂಯೋಗದಿಂದ ಖಂಡೋಜಿ ಚೀಟನೀಸನಿಗೆ ಕನ್ನಡವು ಬರುತ್ತಿತ್ತು. ಈ ಮಾತುಗಳನ್ನು ಕೇಳಿ ಖಂಡೋಬನು ಬೆದರಿದನು. ಆತನು ತನ್ನ ಪರಿವಾರಕ್ಕೆ ಏಕಾಂತದಲ್ಲಿ ಈ ಸಂಗತಿಯನ್ನು ತಿಳಿಸಿ ಮರುದಿನವೇ ಎಲ್ಲ ಪರಿವಾರವನ್ನು ಅಲ್ಲಿಂದ ಸಾಗಿಸಿ ಒಬ್ಬಿಬ್ಬರೊಡನೆ ತಾನು ಧರ್ಮಶಾಲೆ ಯಲ್ಲಿ ಉಳಿದುಕೊಳ್ಳಬೇಕೆಂದು ಮಾಡಿದನು. ಕಾಸಮ ಖಾನನು ನೆಟ್ಟಗೆ ಬೆಂಗಳೂರಿಗೆ ಸಾಗಿ ಬರುತ್ತಿರುವನೆಂಬ ಸುದ್ದಿಯು ಖಂಡೋಜಿಗೆ ಹತ್ತಿತು; ಆದರೂ ಆ ಸ್ವಾಮಿಭಕ್ತನು ತನ್ನ ರಾಜಪರಿವಾರವು ಸುರಕ್ಷಿತ ಮುಂದಕ್ಕೆ ಜಿಂಜಿಗೆ ಮುಟ್ಟುವದಕ್ಕಾಗಿ ತಾನು ಕಾಸಮಖಾನನ ಸೆರೆಯಾಳಾಗುವದು ಅವಶ್ಯವೆಂದು ನಿಶ್ಚಯಿಸಿದನು. ಖಂಡೋಜಿಯ ಈ ಭಯ ಸೂಚನೆಯಿಂದ ರಾಜಪರಿವಾರವು ಗಡಬಡಿಸಿ ಎಚ್ಚತ್ತಿತ್ತು. ಧನಾಜಿ, ಸಂತಾಜಿ, ದಾಬಡೆಯಿವರು ರಾಜಾರಾಮ ಮಹಾರಾಜರನ್ನು ರಕ್ಷಿಸುತ್ತ ಒಂದು ಹಾದಿಯನ್ನು ಹಿಡಿದು ನಡೆದರು. ಪ್ರಲ್ಹಾದಪಂತನು ಉಳಿದ ಪರಿವಾರವನ್ನು ಸಾಗಿಸಿ ಕೊಂಡು ಬೇರೊಂದು ಹಾದಿಯಿಂದ ಸಾಗಿಹೋದನು. ಖಂಡೋಬನು ಮಾತ್ರ ತಾನು ಯೋಚಿಸಿದಂತೆ ಧರ್ಮಶಾಲೆಯಲ್ಲಿ ಶಾಂತಚಿತ್ತದಿಂದ ನಿಂತು ಕೊಂಡನು.

ಸ್ವಾಮಿಭಕ್ತಿಯ ಪ್ರಭಾವವು ಎಷ್ಟು ಪ್ರಬಲವಾದದ್ದೋ ತಿಳಿಯದು. ಈವರೆಗೆ ಖಂಡೋಬನು ಅನುಭವಿಸಿದ ಪರಿಪರಿಯ ಕಷ್ಟಗಳನ್ನು ಮನಸ್ಸಿನಲ್ಲಿ ತಂದರೆ, ಆತನ ನಿಸ್ವಾರ್ಥ ಬುದ್ಧಿಯ ಪ್ರಯತ್ನಕ್ಕಾಗಿ ಯಾರಿಗಾದರೂ ಆಶ್ಚರ್ಯವಾಗಬಹುದು. ಆತನು ಬಹುದಿವಸ ರಾಯಗಡದ ಬಳಿಯ ದೇವಾಲಯದಲ್ಲಿ ಸೆರೆಯಾಳಾಗಿದ್ದನು. ಬಳಿಕ ಸಂತಾಜಿಗೆ ಸಹಾಯಕನಾಗಿ ಔರಂಗಜೇಬನ ಡೇರೆಯ ಕಳಸವನ್ನು ತರುವಾಗ ಕಷ್ಟಪಟ್ಟನು. ಇನ್ನೂ ಹಲವು ಪ್ರಸಂಗಗಳಲ್ಲಿ ಆ ಸ್ವಾಮಿನಿಷ್ಠನು ಸ್ವಾಮಿಕಾರ್ಯಕ್ಕಾಗಿ ತಾಪಪಟ್ಟಿರುವದು ವಾಚಕರಿಗೆ ಗೊತ್ತಿರಬಹುದು. ಹೀಗೆ ನಿಸ್ವಾರ್ಥಬುದ್ಧಿಯಿಂದ ಸ್ವಾಮಿಕಾರ್ಯಕ್ಕಾಗಿ ದೇಹ ವನ್ನು ಅರ್ಪಿಸುವ ಜನರು ಆಗಿನ ಕಾಲದಲ್ಲಿ ಹಲವರು ಇದ್ದದ್ದರಿಂದಲೇ, ಮರಾಟರ ರಾಜ್ಯದ ಪುನರ್ಘಟನೆಯಾಯಿತೆಂಬ ಮಾತನ್ನು ನಾವು ಹಿಂದೆ ಹೇಳಿರಬಹುದು; ಈಗಾದರೂ ಹೇಳುವೆವು. ಈ ಸ್ವಾರ್ಥರಹಿತವಾದ ಆಚರಣೆಯೇ ಎಲ್ಲ ಕಾರ್ಯಗಳ ಸಿದ್ಧಿಗೆ ಮೂಲಾಧಾರವಾದ್ದರಿಂದ, ಆ ಗುಣವನ್ನು ಬೈಲಿಗೆಳೆಯುವದಕ್ಕಾಗಿ ಅದನ್ನು ಎಷ್ಟು ಸಾರೆ ಹೇಳಿದರೂ ಲಾಭವೇ ಇರುವದು. ಇರಲಿ. ಖಂಡೋಬನು ಧರ್ಮಶಾಲೆಯಲ್ಲಿ ಉಳಿದು ಕೊಂಡು, ತನ್ನ ಸ್ವಾಮಿಯು ಇಷ್ಟು ಹೊತ್ತಿಗೆ ಎಷ್ಟು ದೂರ ಹೋಗಿರಬಹುದೆಂದು ಯೋಚಿಸುತ್ತ ಎರಡು ದಿನಗಳನ್ನು ಕಳೆಯುತ್ತಿರಲು, ಮೂರನೆಯ ದಿವಸ ಕಾಸಮಖಾನನು ಪರಿವಾರದೊಡನೆ ಬಂದು ಖಂಡೋಬನನ್ನೂ ಆತನ ಸಂಗಡಿಗರನ್ನೂ ಸೆರೆಹಿಡಿದನು. ಬಳಿಕ ಖಾನನು ಅವರನ್ನು ಗದ್ದರಿಸಿ, ಅವರಿಗೆ ಬೆದರಿಕೆ ಹಾಕಿ ಖಂಡೋಬನನ್ನೂ ಅವನ ಜನರನ್ನೂ ಕುರಿತು — ''ನಿಮ್ಮ ಅರಸನು ಯಾರು? ನೀವು ಯಾರು ಯಾರು ಇರುವಿರಿ?'' ಎಂದು ಕೇಳಲು, ಅದಕ್ಕೆ ಖಂಡೋಬನು— ''ನಾವು ಬಡ ಬೈರಾಗಿಗಳು. ತೀರ್ಥ ಯಾತ್ರೆಗಳನ್ನು ಮಾಡುತ್ತ ಸಂಚರಿಸುತ್ತಿರುವೆವು. ನಮ್ಮ ಸಂಗಡ ಇನ್ನೂ ನಾಲ್ಕಾರು ಜನರು ಇದ್ದರು. ಅವರು ಎತ್ತಕಡೆಗೋ ಹೋದರು. ನಾವು ಅಲ್ಲಲ್ಲಿಯ ಯಾತ್ರೆಗಳನ್ನು ಮಾಡುತ್ತ ರಾಮೇಶ್ವರಕ್ಕೆ ಹೋಗುವೆವು'' ಎಂದು ಪರಿಪರಿಯಾಗಿ ಹೇಳಿಕೊಂಡನು; ಆದರೆ ಕಾಸಮಖಾನನಿಗೆ ಆ ಮಾತು ಹ್ಯಾಗೆ ಒಪ್ಪಿಗೆಯಾಗಬೇಕು? ಇವರ ಸಂಗಡ ಇದ್ದ ಬೇರೆ ಹತ್ತು ಹನ್ನೆರಡು ಜನರಲ್ಲಿಯೇ ಇವರ ಅರಸನು ಇರಬಹುದೆಂದು ತಿಳಿದು, ಖಂಡೋಬನನ್ನು ಹುಣಸಿಯ ಬರಲುಗಳಿಂದ ಹೊಡಿಯಿರೆಂದು ತನ್ನ ಸೇವಕರಿಗೆ ಆಜ್ಞಾಪಿಸಿದನು.

ಖಂಡೋಬನ ಬೆನ್ನಮೇಲೆ ಹುಣಸಿಯ ಬರಲುಗಳ ಬಾಸಾಳುಗಳು ಮೂಡ ಹತ್ತಿದವು; ಆತನ ಪಂಚಪ್ರಾಣಗಳು ವ್ಯಾಕುಲವಾದವು. ಆದರೂ ಆ ಸ್ವಾಮಿನಿಷ್ಠನು ಸತ್ಯಸ್ವರೂಪ ವನ್ನು ಪ್ರಕಟಮಾಡಲಿಲ್ಲ. ''ತಾವು ಬೈರಾಗಿಗಳು; ನಮ್ಮನ್ನು ಸುಮ್ಮನೆ ಪೀಡಿಸಬಾರದು; ನಮ್ಮಂಥ ಯಾತ್ರಿಕರನ್ನು ಹೀಗೆ ಹಿಂಸೆಪಡಿಸುವದರಿಂದ ನಿಮ್ಮ ಕಲ್ಯಾಣವಾಗದು; ಅಲ್ಲಾನ ಕ್ಷೋಭಕ್ಕೆ ನೀವು ಪಾತ್ರವಾಗಬೇಕಾಗುವದು'' ಎಂದು ಹೇಳುತ್ತಲಿದ್ದನು. ಇದರಿಂದ ಖಾನನ ಮನಸ್ಸಿನ ಮೇಲೆ ಸತ್ಪರಿಣಾಮವಾಗುವದರ ಬದಲು, ಆತನು ಖಂಡೋಬನ

ತಲೆಯ ಮೇಲೆ ಮಣ ಮಣ ಭಾರದ ಕಲ್ಲುಗಳನ್ನು ಇಡಿಸಿದನು. ಆಗ ಖಂಡೋಬನ ಕಣ್ಣುಗಳಲ್ಲಿ ದೀಪ ಹಚ್ಚಿದಂತಾಯಿತು. ಆಗ ಆತನ ಮುಖದಿಂದ— ''ಪರಮೇಶ್ವರಾ, ಯಾವ ನನ್ನ ದುಷ್ಕರ್ಮದ ಪ್ರಾಯಶ್ಚಿತ್ತವೆಂದು ನನ್ನನ್ನು ಇಂಥ ಕಷ್ಟಕ್ಕೆ ಗುರಿ ಮಾಡಿದೆ?'' ಎಂಬ ಉದ್ಗಾರವು ಹೊರಟಿತು! ಆದರೂ ಆ ಸ್ವಾಮಿನಿಷ್ಠನು ಖಾನನಿಗೆ ಕೊಡುವ ಉತ್ತರದಲ್ಲಿ ಅಂತರವಾಗಲಿಲ್ಲ. ಬಳಿಕ ಖಾನನು ಖಂಡೋಬನಿಗೆ ಬೂದಿಯ ತೋಬರಿಯನ್ನು ಕಟ್ಟಿಸಿದನು; ಆದರೂ ಖಂಡೋಬನ ಉತ್ತರದಲ್ಲಿ ಅಂತರವಾಗಲಿಲ್ಲ. ಆಗ ಖಾನನು ಬೇಸತ್ತು ಖಂಡೋಬನನ್ನು ಸೆರೆಯಲ್ಲಿರಿಸುವ ಬಗ್ಗೆ ಆಜ್ಞಾಪಿಸಿದನು. ಕೂಡಲೆ ಖಂಡೋಬನ ಕಾಲಿಗೆ ಮಣ ಮಣದ ಬೇಡಿಗಳು ಬಂದವು. ಅದನ್ನು ಸಹಿಸಿಕೊಂಡು ಖಂಡೋಬನು ಮರಣದ ಹಾದಿಯನ್ನು ನೋಡುತ್ತ ತನ್ನ ಕೋಣೆ ಯಲ್ಲಿ ಹೋಗಿ ಬಿದ್ದುಕೊಂಡನು. ಮಧ್ಯರಾತ್ರಿಯಾಗಲು, ಖಾನನ ದೂತರು ರೊಟ್ಟಿ ಉರುಳು ಗಡ್ಡೆಗಳನ್ನು ಖಂಡೋಬನಿಗೆ ತಂದುಕೊಟ್ಟರು. ಆಗ ಕಂಡೋಬನು ಅವನ್ನು ತಿರಾಸ್ಕಾರದಿಂದ ನೋಡಿ— ''ಯಾತ್ರಿಕರಾದ ನಾವು ಮುಸಲ್ಮಾನರ ಕೈಯೊಳಗಿನ ಈ ಪದಾರ್ಥಗಳನ್ನು ಸರ್ವಥಾ ತಿನ್ನುವದಿಲ್ಲೆಂ''ದು ಹಟಹಿಡಿದು ಅವನನ್ನು ತಿರಸ್ಕರಿಸಿದನು. ಎರಡನೆಯ ದಿವಸವೂ ಅದೇ ಪ್ರಕಾರವಾಯಿತು. ಮೂರನೆಯ ದಿವಸವೂ ಹಾಗೆಯೇ ಆಯಿತು. ಮೂರು ದಿವಸ ನಿರಾಹಾರವಾದದ್ದರಿಂದ ಖಂಡೋಬನೂ ಅವರ ಸಂಗಡಿಗರೂ ತೀರ ಹೈರಾಣಾದರು. ಅವರು ಕಣ್ಣಲ್ಲಿ ಜೀವ ಹಿಡಿದಿದ್ದರು; ಅವರ ಮೋರೆಗಳು ಬಿಳುಪೇರಿದವು; ಶಕ್ತಿಯು ಕ್ಷೀಣವಾಯಿತು; ಸರ್ವಾಂಗವು ಥರಥರ ನಡುಗಹತ್ತಿತು. ಇಂಥ ಸ್ಥಿತಿಯನ್ನು ನೋಡಿ ಖಾನನಿಗೆ ದಯೆಯು ಉತ್ಪನ್ನವಾಯಿತು. ಇವರು ನಿಜವಾದ ಬೈರಾಗಿಗಳೆಂದು ತಿಳಿದು ಆತನು ಅವರನ್ನು ಬಂಧಮುಕ್ತಮಾಡಿ ಅವರನ್ನು ಬಿಟ್ಟು ಬಿಟ್ಟನು.

ಹೀಗೆ ಖಂಡೋಬನು ಅಪೂರ್ವ ಸ್ವಾರ್ಥತ್ಯಾಗ ಮಾಡಿ, ತನ್ನ ಸ್ವಾಮಿಯ ಸುರಕ್ಷಿತತೆಯ ಸಲುವಾಗಿ ಪರಿಪರಿಯ ಕಷ್ಟಗಳನ್ನು ಭೋಗಿಸಿದ್ದರಿಂದ ಅತ್ತ ರಾಜಾ ರಾಮನೇ ಮೊದಲಾದ ರಾಜಪರಿವಾರವು ಸುರಕ್ಷಿತವಾಗಿ ಜಿಂಜಿಗೆ ಮುಟ್ಟಿತು. ರಾಜಾ ರಾಮನು ಜಿಂಜಿಗೆ ಮುಟ್ಟಿದ ಸುದ್ದಿಯು ಹತ್ತಿದಕೂಡಲೆ ಮಹಾರಾಷ್ಟ್ರದೊಳಗಿನ ಒಬ್ಬೊಬ್ಬರೇ ಮರಾಟ ಸರಾದರರೂ ದಂಡಾಳುಗಳೂ ಯುಕ್ತಿ ಪ್ರಯುಕ್ತಿಯಿಂದ ರಾಜಾ ರಾಮನನ್ನು ಕೂಡಿಕೊಂಡರು. ಇದರಿಂದ ರಾಜಾರಾಮನ ಬಲವು ದಿನದಿನಕ್ಕೆ ಹೆಚ್ಚಹತ್ತಿ ಜಿಂಜಿಯು ಮಹಾರಾಷ್ಟ್ರರ ರಾಜಧಾನಿಯಾಯಿತು; ಆದರೆ ಖಂಡೋಬನ ಕಷ್ಟ ಪರಂಪರೆಯು ಮಾತ್ರ ಮುಗಿಯಲಿಲ್ಲ. ಆತನ ಹೆಂಡತಿಯು ತನ್ನ ಪತಿಗೊದಗಿದ ಕಷ್ಟಕ್ಕಾಗಿ ಹೊಟ್ಟೆಬೇನೆ ಹಚ್ಚಿಕೊಂಡು ದಿನದಿನಕ್ಕೆ ಕ್ಷೀಣವಾಗಹತ್ತಿದಳು. ಮಾರ್ಗಾಯಾಸದಿಂದ ಆಕೆಯ ಪ್ರಕೃತಿಯು ದಿನದಿನಕ್ಕೆ ಹೆಚ್ಚು ಹೆಚ್ಚು ಕ್ಷೀಣವಾಗಹತ್ತಿತು. ನಿಳೋಪಂತ ಮುಹಾಡಿಕ, ಹಣವಂತೆ ಇವರು ಸರ್ವಸೈನ್ಯದೊಡನೆ ಬಂದು ಮಹರಾಜರನ್ನು ಕಂಡು, ಅವರಿಗೆ ವಸ್ತ್ರಭೂಷಣಗಳನ್ನು ಅರ್ಪಿಸಿ ಅವರನ್ನು ಜಿಂಜಿಯಿಂದ ಚಂದಿ ದುರ್ಗಕ್ಕೆ

ಕರಕೊಂಡು ಹೋಗಿ ಅಲ್ಲಿ ಪಟ್ಟಾಭಿಷೇಕವನ್ನು ಮಾಡಿದರು. ಖಂಡೋಬನ ಸ್ವಾರ್ಥ ತ್ಯಾಗದಿಂದ ಇಂಥ ಸುದಿನವು ಒದಗಿರಲು, ಖಂಡೋಬನು ಜಿಂಜಿಗೆ ಮುಟ್ಟಿದಕೂಡಲೆ ಆತನ ಹೆಂಡತಿಯು ಮರಣಹೊಂದಿದಳು! ಹರ ಹರ! ಸತ್ವಶಾಲಿಗಳಿಗೆ ಸುಖವೆಲ್ಲಿಂದ ದೊರೆಯಬೇಕು?

## ಮರಾಟರ ಶೌರ್ಯ

ಈ ಮೇರೆಗೆ ರಾಜಾರಾಮ ಮಹಾರಾಜರು ಜಿಂಜಿಗೆ ಬಂದದ್ದರಿಂದ ಮರಾಟರಿಗೆ ಬಹಳ ಸಂತೋಷವಾಯಿತು. ಬಾದಶಹನನ್ನು ಹಣಿದು ಆತನಿಂದ ತಮ್ಮ ರಾಜ್ಯವನ್ನು ಮತ್ತೆ ಕಸಿದುಕೊಳ್ಳಲಿಕ್ಕೆ ಅವರಲ್ಲಿ ಹೊಸ ಉತ್ಸಾಹವು ಹುಟ್ಟಿತು. ಮೊಗಲರ ವಿಸ್ತಾರವಾದ ಸೈನ್ಯದ ಮೇಲೆ ಅಕಸ್ಮಾತ್ತಾಗಿ ತಮ್ಮ ಕುದುರೆಗಳನ್ನು ನೂಕಿ ಬರ್ಚಿಗಳಿಂದ ಆ ಸೈನ್ಯವನ್ನು ದಿಕ್ಕುಪಾಲಾಗುವಂತೆ ಓಡಿಸುವ ಸಾಹಸದ ಕಾರ್ಯಕ್ಕೆ ಭಾಲೆರಾಯಿ ಅನ್ನುವರು. ಇಂಥ ಭಾಲೆರಾಯಿಯಲ್ಲಿ ಪ್ರವೀಣರಾಗಿದ್ದ ಶೂರ ವೀರರಿಂದ ಕೂಡಿ ಸಂತಾಜಿಯು ಸ್ವರಾಜ್ಯ ವನ್ನು ತಿರುಗಿ ಸಂಪಾದಿಸುವದಕ್ಕಾಗಿ ಆತರಪಟ್ಟನು. ರಾಜಾರಾಮನನ್ನು ಜಿಂಜಿಯಲ್ಲಿ ಸುರಕ್ಷಿತವಾಗಿ ಇರಿಸಿದ ಮೇಲೆ ಧನಾಜಿ, ಸಂತಾಜಿಯೆಂಬ ವೀರರ ಜೋಡು ಹದ್ದಿನಂತೆ ಎರಗಿ ಮೊಗಲರ ದೂಳಹಾರಿಸಹತ್ತಿತು. ಅಲ್ಲಲ್ಲಿ ಶತ್ರು ಸೈನ್ಯಗಳು ಹಣ್ಣಾಗಹತ್ತಿದವು. ಸಂತಾಜಿಯು ಶೇಖ ನಿಜಾಮು, ಸರ್ಜೇಖಾನ, ರಣಮಸ್ತಖಾನ, ಜಾನಸಖಾನರಂಥ ಶೂರ ವಜೀರರನ್ನು ಮೊದಲೇ ಮಣ್ಣು ಗೂಡಿಸಿದ್ದರಿಂದ ಆತನ ಅಂಜಿಕೆಯು ಔರಂಗಜೇಬನ ಹೃದಯದಲ್ಲಿ ದಿನದಿನಕ್ಕೆ ಹೆಚ್ಚು ಬಾಧಿಸಹತ್ತಿತು. ಸಂತಾಜಿಯು ಮತ್ತೊಮ್ಮೆ ಮಿರಜಿಯ ಕಡೆಗೆ ಮುಗಿಬಿದ್ದು, ಪ್ರಬಲವಾಗಿದ್ದ ಇಪ್ಪತ್ತು ಇಪ್ಪತ್ತೈದು ಜನ ದೇಶಮುಖರನ್ನು ನಿರ್ಮೂಲ ಮಾಡಿದನು. ಸಂತಾಜಿಯ ಈ ಹಾವಳಿ ಯಿಂದ ಮೊಗಲರ ಸರದಾರರು ಬಹಳ ಹಣ್ಣಾದರು. ಸರ್ಜೇಖಾನನು ಸಿಟ್ಟಿಗೆದ್ದು ಪಲ್ಹಾಳಗಡ, ಪಾವನಗಡಗಳನ್ನು ಬಲವಾಗಿ ಮುತ್ತಿ ದುರ್ಗ ಗಳನ್ನು ಬೇಗನೆ ವಶಮಾಡಿಕೊಳ್ಳಲಿಕ್ಕೆ ಆತುರಪಟ್ಟನು. ಬಾದಶಹನು ಮೊದಲು ಸಂಪೂರ್ಣ ಮಹಾರಾಷ್ಟ್ರವನ್ನು ಗೆದ್ದು, ಆಮೇಲೆ ಕರ್ನಾಟಕದಲ್ಲಿ ಕಾಲಿಡಬೇಕೆಂದು ನಿಶ್ಚಯಿಸಿದನು.

ಈ ಕಾಲದಲ್ಲಿ ಮಹಾರಾಷ್ಟ್ರ ಸರದಾರರಲ್ಲಿ ಒಡಕು ಹುಟ್ಟದೆ ಅವರು ಒಕ್ಕಟ್ಟಿನಿಂದ ನಡೆದಿದ್ದರೆ, ಸ್ವರಾಜ್ಯ ಸಂಪಾದನದ ಕಾರ್ಯವು ಬಹು ಸುಲಭವಾಗುತ್ತಿತ್ತು; ಆದರೆ ದುರ್ದೈವ ದಿಂದ ಹಾಗಾಗಲಿಲ್ಲ. ಸಂತಾಜಿಯು ಅತ್ಯಂತ ಕಾರ್ಯಾಸಕ್ತನಾಗಿ ಏಕನಿಷ್ಠೆಯಿಂದ ಸ್ವಾಮಿಯ ಹಿತಕ್ಕಾಗಿ ದೇಹವನ್ನು ಸವಿಸಹತ್ತಿದ್ದೇ, ಪ್ರಸಂಗದಲ್ಲಿ ಆತನಿಗೆ ಮುಳುವು ಆಯಿತು. ಮೇಲೆ ಹೇಳಿದಂತೆ ಸರ್ಜೇಖಾನನು ಪಲ್ಹಾಳಗಡವನ್ನು ಎಷ್ಟು ಬಲವಾಗಿ ಮುತ್ತಿದರೂ, ದುರ್ಗದೊಳಗಿದ್ದ ಕಾವಲುಗಾರನು ಆತನಿಗೆ ಸೊಪ್ಪು ಹಾಕಲಿಲ್ಲ. ಕಾಗಲನಕರನ

ಶೌರ್ಯಕ್ಕೆ ಮೊಗಲರು ತತ್ತರಿಸಿದರು. ಕಾಗಲಕರನು ಅಕಸ್ಮಾತ್ತಾಗಿ ದುರ್ಗದಿಂದ ಹೊರ ಬಿದ್ದು ಬಂದು ಮೊಗಲರ ರುಂಡಗಳನ್ನು ಚಂಡಾಡಿ ಅವನ್ನು ರಾಸಿಯಾಗಿ ಒಟ್ಟಿ ಅದರ ಮೇಲೆ ತೋಫು ಗಳನ್ನಿಟ್ಟು ಶತ್ರುಗಳನ್ನು ಹಣಿಯಹತ್ತಿದನು. ಸರ್ಜೇಖಾನನು ಕಾಗಲ ಕರನ ಈ ಪರಾಕ್ರಮವನ್ನು ನೋಡಿ ಬೆದರಿದನು. ಆತನು ಮಹಾರಾಷ್ಟ್ರರ ಸಾಹಸ-ಪರಾ ಕ್ರಮಗಳನ್ನು ವಿವರಿಸಿ ಬಾದಶಹನಿಗೆ ಪತ್ರಬರೆದು, ತನ್ನ ಸಹಾಯಕ್ಕಾಗಿ ಹೊಸ ಸೈನ್ಯವನ್ನು ಕಳಿಸಬೇಕೆಂದು ಬೇಡಿಕೊಂಡನು. ಆಗ ಬಾದಶಹನು ಕಾಲು ಅಪ್ಪಳಿಸುತ್ತ ಸ್ವತಃ ಸೈನ್ಯ ದೊಡನೆ ಪಲ್ಹಾಳಗಡಕ್ಕೆ ಬಂದನು. ಹೀಗೆ ಮೊಗಲರು ಪಲ್ಹಾಳಗಡವನ್ನು ಬಿಗಿಯಾಗಿ ಮುತ್ತಲು, ಕಾಗಲಕರನು ತನ್ನ ಸಹಾಯಕ್ಕಾಗಿ ಹೊಸ ಸೈನ್ಯವನ್ನು ಕಳಿಸಬೇಕೆಂದು ರಾಮ ಚಂದ್ರಪಂತನಿಗೆ ಪತ್ರಬರೆದನು. ಆಗ ರಾಮಚಂದ್ರಪಂತನು, ಈ ಪ್ರಸಂಗದಲ್ಲಿ ಪಲ್ಹಾಳ ಗಡಕ್ಕೆ ಹೋಗಬೇಕೆಂದು ಸಂತಾಜಿಗೆ ಪತ್ರವನ್ನು ಬರೆದನು; ಆದರೆ ಕಾಶೀಮ ಖಾನನ ಸಮಾಚಾರವನ್ನು ತಕೊಳ್ಳುವದರಲ್ಲಿ ತೊಡಗಿದ್ದ ಸಂತಾಜಿಯು, ಪಲ್ಹಾಳಗಡಕ್ಕೆ ಹೋಗಲಿಲ್ಲ. ಮರಾಟರ ದುರ್ದೈವದಿಂದಲೇ ಈ ದುರ್ಬುದ್ಧಿಯು ಸಂತಾಜಿಗೆ ಉತ್ಪನ್ನವಾಯಿ ತೆಂದು ಹೇಳಬಹುದು. ಸಂತಾಜಿಯ ಅತ್ಯಂತವಾದ ಕಾರ್ಯಾಸಕ್ತಿಯೇ ರಾಮಚಂದ್ರಪಂತನ ವಿಕಲ್ಪಕ್ಕೆ ಕಾರಣವಾಯಿತು. ಸಂತಾಜಿಯು ಮಿಗಿಮೀರಿದನೋ, ಎಂಬ ಸಂಶಯವು ರಾಮಚಂದ್ರ ಪಂತನ ಮನಸ್ಸಿನಲ್ಲಿ ಉತ್ಪನ್ನವಾಯಿತು. ತನ್ನ ಅಪ್ಪಣೆಯಂತೆ ಸಂತಾಜಿಯು ಕಾಗಲಕರನ ಸಹಾಯಕ್ಕೆ ಹೋಗದ್ದನ್ನು ನೋಡಿ ರಾಮಚಂದ್ರಪಂತನು ಕಾಗಲಕರನಿಗೆ— ''ಸದ್ಯಕ್ಕೆ ನೀವು ದುರ್ಗವನ್ನು ಮೊಗಲರಿಗೆ ಬಿಟ್ಟುಕೊಟ್ಟು ಬಾದಶಹನೊಡನೆ ಒಡಂಬಡಿಕೆ ಮಾಡಿ ಕೊಳ್ಳಿರಿ. ಮುಂದೆ ನೋಡೋಣ'' ಎಂದು ಪತ್ರವನ್ನು ಬರೆದನು.

ಹೀಗೆ ಪಲ್ಹಾಳಗಡವು ಬಾದಶಹನ ಕೈಸೇರಿತು. ಇನ್ನು ವಿಶಾಲಗಡವನ್ನು ಮೊಗಲರು ಮುತ್ತತಕ್ಕವರು. ವಿಶಾಲಗಡದಲ್ಲಿ ತಾರಾಬಾಯಿಯೇ ಮೊದಲಾದ ರಾಜಾರಾಮನ ಹೆಂಡಿರೂ, ಬೇರೆ ರಾಜಪರಿವಾರವೂ, ರಾಮಚಂದ್ರಪಂತನೂ ಇರುತ್ತಿದ್ದರು. ತಾರಾಬಾಯಿಯು ತುಂಬಿದ ಬಸಿರು ಹೆಂಗಸಾಗಿದ್ದಳೆಂಬದನ್ನು ವಾಚಕರು ಬಲ್ಲರು. ರಾಜಪರಿವಾರವನ್ನು ಬಾದಶಹನಿಗೆ ಒಪ್ಪಿಸುವದು ಅತ್ಯಂತ ದ್ರೋಹವೆಂದು ಸ್ವಾಮಿನಿಷ್ಠ ಮರಾಟರು ತಿಳಿದು ಕೊಂಡು, ಅದರ ಸಂರಕ್ಷಣಕ್ಕಾಗಿ ತಮ್ಮ ದೇಹವನ್ನರ್ಪಿಸಲಿಕ್ಕೆ ಅವರು ಸಿದ್ಧರಾಗಿದ್ದರು; ಈ ಪ್ರಸಂಗದಲ್ಲಿ ರಾಮಚಂದ್ರಪಂತನು ಬಹು ಚಿಂತಾಕ್ರಾಂತನಾದನು. ಸಂತಾಜಿಯು ತನ್ನ ಆಜ್ಞೆಯನ್ನು ಉಲ್ಲಂಘಿಸಿದ್ದು ಸುಲಕ್ಷಣವಲ್ಲವೆಂದು ಆತನು ತಿಳಿದನು. ಈಗಿನ ಕಾಲವು ಮರಾಟರಿಗೆ ತೀರ ಪ್ರತಿಕೂಲವಾಗಿತ್ತು; ಪ್ರಬಲನೂ ವೈಭವಶಾಲಿಯೂ, ಆದ ಔರಂಗ ಜೇಬನ ವಿರುದ್ಧವಾಗಿ ಮರಾಟರಿಗೆ ಸಹಾಯ ಮಾಡುವವರು ತೀರ ವಿರಲರಾಗಿದ್ದರು. ಜಗತ್ತು ಗೆದ್ದ ಎತ್ತಿನಬಾಲ ಹಿಡಿಯುವ ಸ್ವಾರ್ಥಪರಾಯಣರಿಂದಲೇ ತುಂಬಿರುತ್ತದೆಂದು ಹೇಳಬಹುದು. ಸತ್ಯಪಕ್ಷ ಪಾತಿಗಳು ಜಗತ್ತಿನಲ್ಲಿ ಅತಿ ವಿರಲ. ರಾಜಾರಾಮನು ನಿಂತಲ್ಲಿ ನಿಲ್ಲಲಾರದೆ ದುರ್ಗದಿಂದ ದುರ್ಗಕ್ಕೆ ಓಡಿಹೋಗುತ್ತಿರುವಾಗ ಆತನ ಪಕ್ಷವನ್ನು

ಯಾರು ವಹಿಸಬೇಕು? ಆದರೆ ಕೇವಲ ಸ್ವಾಮಿನಿಷ್ಠೆಯಿಂದ ಪ್ರೇರಿತರಾದ ಕೆಲವು ಜನ ಬ್ರಾಹ್ಮಣ ಮುತ್ಸದ್ದಿಗಳೂ, ಮರಾಠಾ ಸರದಾರರೂ ನಿಸ್ಪೃಹರಾಗಿ ಜೀವದ ಹಂಗುದೊರೆದು ತಮ್ಮ ಸ್ವಾಮಿಯ ಸಹಾಯಕ್ಕಾಗಿ ನಿಂತದ್ದರಿಂದ ಶಿವಪ್ರಭುವಿನ ವಂಶದ ಹೆಸರು ಹೇಳಲಿಕ್ಕಾದರೂ ಉಳಿದಿತ್ತು. ಇಂಥ ಸ್ವಾಮಿನಿಷ್ಠರಲ್ಲಿ ಸಂತಾಜಿಯು ಅಗ್ರಗಣ್ಯನೆಂದು ಎಲ್ಲರಂತೆ ರಾಮಚಂದ್ರಪಂತನೂ ತಿಳಕೊಂಡಿದ್ದನು; ಆದರೆ ಅಂಥ ಸಂತಾಜಿಯು ಈಗ ತಲೆಭಾರವಾಗಿ ತನ್ನ ಆಜ್ಞೆಯನ್ನು ಪಾಲಿಸದೆ ಹೋದದ್ದರಿಂದ, ರಾಮಚಂದ್ರಪಂತನಿಗೆ ಎಷ್ಟು ವ್ಯಸನವಾಗಿರಬಹುದೆಂಬದನ್ನು ವಾಚಕರೇ ತರ್ಕಿಸತಕ್ಕದ್ದು. ಸಂತಾಜಿಯು ಅಂತರಂಗ ದಿಂದ ಬಾದಶಹನಿಗೆ ಅನುಕೂಲ ವಾದರೆ, ತಮ್ಮ ಸರ್ವಸ್ವದ ನಾಶವಾಗುವದೆಂದು ರಾಮಚಂದ್ರಪಂತನು ಭಾವಿಸಿದನು. ಸಂತಾಜಿಯು ತಾನು ಸಂಪಾದಿಸಿದ ಸುಲಿಗೆಯನ್ನು ತನ್ನ ಬಳಿಯಲ್ಲಿಯೇ ಸಂಗ್ರಹಿಸುತ್ತ ಬಂದದ್ದೊಂದು ರಾಮಚಂದ್ರಪಂತನ ಸಂಶಯಕ್ಕೆ ಉತ್ತೇಜಕ ವಾಯಿತು. ತಮ್ಮ ಪಕ್ಷದ ಒಬ್ಬ ಅತ್ಯಂತ ಬಲಾಢ್ಯ ಸರದಾರನು ಬಾದಶಹನನ್ನು ಕೂಡಿದರೆ, ಸ್ವಾಮಿಕಾರ್ಯಕ್ಕೆ ಎಷ್ಟು ಘಾತವಾಗುವದೋ ಎಂದು ರಾಮಚಂದ್ರಪಂತನು ಬಗೆಬಗೆಯಾಗಿ ಚಿಂತಿಸತೊಡಗಿದನು.

ಈ ಮೇರೆಗೆ ಒಬ್ಬ ಪ್ರಸಿದ್ಧ ಮಹಾರಾಷ್ಟ್ರ ಮುತ್ಸದ್ದಿಯು ಚಿಂತಾಕ್ರಾಂತನಾಗಿ ಕುಳಿತಿರುವಾಗ, ತಾರಾಬಾಯಿಗೆ ಪುತ್ರೋತ್ಸವವಾದ ವರ್ತಮಾನವು ಅಂತಃಪುರದಿಂದ ಬಂದಿತು. ಅದನ್ನು ಕೇಳಿದ ಕೂಡಲೇ ಸ್ವಾಮಿನಿಷ್ಠ ರಾಮಚಂದ್ರಪಂತನ ಚಿಂತೆಯೆಲ್ಲ ಅಳಿದು ಹೋಗಿ, ಆತನು ಆನಂದಾಬ್ಧಿಯಲ್ಲಿ ಮುಳುಗಿದನು. ಪುಣ್ಯಪ್ರತಾಪಿಯಾದ ಶಿವ ಪ್ರಭುವಿನ ವಂಶವೃದ್ಧಿಯಿಂದ ಯಾವ ಸ್ವಾಮಿನಿಷ್ಠನಿಗೆ ಆನಂದವಾಗಲಿಕ್ಕಿಲ್ಲ? ಕೆಲವು ದಿನಗಳ ಹಿಂದೆ ರಾಜಪತ್ನಿಯನ್ನು ಬೇಗನೇ ಜಿಂಜಿಗೆ ಕಳಿಸಿಕೊಡಬೇಕೆಂದು ಪ್ರಲ್ಹಾದಪಂತರಿಂದ ಬರೆದು ಬಂದಿತ್ತು; ಆದರೆ ಪ್ರಸೂತಿಯ ಕಾಲವು ಸಮೀಪಿಸಿದ್ದರಿಂದ ಹಾಗೆ ಮಾಡಲಿಕ್ಕೆ ರಾಮಚಂದ್ರಪಂತನಿಗೆ ಧೈರ್ಯವಾಗಲಿಲ್ಲ. ಅಷ್ಟರಲ್ಲಿ ತಾರಾಬಾಯಿಯವರಿಗೆ ಪುತ್ರೋತ್ಸವ ವಾಯಿತು. ಅತ್ತ ಪಲ್ಹಾಳಗಡವನ್ನು ವಶಮಾಡಿಕೊಂಡಿದ್ದ ಮೊಗಲರು ವಿಶಾಲಗಡದ ಕಡೆಗೆ ತಿರುಗಿದರು. ಆದ್ದರಿಂದ, "ಇನ್ನು ಬೇಗನೇ ವಿಶಾಲಗಡವನ್ನು ಬಿಡಬೇಕಾಗುವದೆಂ"ಬದನ್ನು ತಿಳಿಸುವದಕ್ಕಾಗಿ ರಾಮಚಂದ್ರಪಂತನು ರಾಜಪತ್ನಿಯ ಬಳಿಗೆ ಹೋದನು. ತಾರಾಬಾಯಿಯು ರಾಮಚಂದ್ರಪಂತನ ವಿಜ್ಞಾಪನೆಯನ್ನು ಕೇಳಿ ಅವರನ್ನು ಕುರಿತು—ಪಂತ, ನಿಮ್ಮ ಸೂಚನೆಯು ಯೋಗ್ಯವಾದದ್ದು. ಇನ್ನು ಯಾವತ್ತು ರಾಜಪರಿವಾರವು ಜಿಂಜಿಗೆ ಹೋಗತಕ್ಕದ್ದೇ ಯೋಗ್ಯವು. ಮೊಗಲರ ಹಾವಳಿಯು ದಿನದಿನಕ್ಕೆ ಹೆಚ್ಚುತ್ತ ನಡೆದಿರುವದರಿಂದ ಈ ಕಾರ್ಯದಲ್ಲಿ ವಿಲಂಬವು ಕೆಲಸದ್ದಲ್ಲ. ನಮ್ಮ ಸಂರಕ್ಷಣಕ್ಕಾಗಿ ಧನಾಜಿ ಯನ್ನಾಗಲಿ, ಸಂತಾಜಿಯನ್ನಾಗಲಿ ಕಳಿಸತಕ್ಕದ್ದು, ಎಂದು ಹೇಳಿದಳು. ಸಂತಾಜಿಯ ಹೆಸರನ್ನು ಕೇಳಿದ ಕೂಡಲೆ ರಾಮಚಂದ್ರಪಂತನಿಗೆ ಸಂತಾಪ ವಾಯಿತು. ಆತನು ತಾರಾಬಾಯಿಯನ್ನು

ಕುರಿತು—''ತಾವು ಸಂತಾಜಿಯ ಹೆಸರನ್ನು ನನ್ನ ಮುಂದೆ ಉಚ್ಚರಿಸಬಾರದು. ಆತನು ಒಳಗಿಂದೊಳಗೆ ಬಾದಶಹನಿಗೆ ಅನುಕೂಲವಾಗಿರುವಂತೆ ತೋರುತ್ತದೆ.'' ಎಂದು ನುಡಿದನು. ಪಂತರ ಈ ಮಾತುಗಳನ್ನು ಕೇಳಿ ತಾರಾಬಾಯಿಗೆ ಬಹಳ ಸಮಾಧಾನವಾಯಿತು; ಯಾಕಂದರೆ ಧನಾಜಿ, ಸಂತಾಜಿ ಇವರ ಅಂತರಂಗಗಳು ಮೊದಲಿನಿಂದ ನೆಟ್ಟಗಿಲ್ಲದಿರುವಾಗ, ತಾರಾಬಾಯಿಯು ಧನಾಜಿಯ ಪಕ್ಷದವಳಾಗಿದ್ದಳೆಂಬದು ವಾಚಕರ ಸ್ಮರಣದಲ್ಲಿರಬಹುದು. ಸಂತಾಜಿಯು ಏಸೂಬಾಯಿಯ ಪಕ್ಷದವನೆಂದು ತಾರಾಬಾಯಿಯು ತಿಳಿದಿದ್ದಳು. ಸೇನಾಧಿಪತ್ಯವನ್ನು ಸಂತಾಜಿಗೆ ಕೊಡದೆ ಧನಾಜಿಗೆ ಕೊಡಬೇಕೆಂದು ಆಕೆಯು ಪ್ರಯತ್ನಪಟ್ಟದ್ದನ್ನಾದರೂ ವಾಚಕರು ಮರೆತಿರಲಿಕ್ಕಿಲ್ಲ. ಹೀಗೆ ಅಂತರಂಗದಲ್ಲಿ ಸಂತಾಜಿಯನ್ನು ಕಂಡರೆ ಸೇರದೇ ಇದ್ದ ತಾರಾಬಾಯಿಗೆ, ರಾಮಚಂದ್ರಪಂತನ ಸಂತಾಪದ ಮಾತುಗಳನ್ನು ಕೇಳಿ ಸಮಾಧಾನವಾದದ್ದರಲ್ಲಿ ಆಶ್ಚರ್ಯವೇನು? ಆಕೆಯು ರಾಮಚಂದ್ರಪಂತನನ್ನು ಕುರಿತು—ಯಾಕೆ ಪಂತರೇ, ಸಂತಾಜಿಯ ಗುಣವು ಈಗಾದರೂ ನಿಮ್ಮ ಅನುಭವಕ್ಕೆ ಬಂದೀತೇ? ಸಂತಾಜಿಯು ಕೃತ್ರಿಮ ಸ್ವಭಾವದವನು; ಆತನು ಎಷ್ಟೋ ಮುಸಲ್ಮಾನ ಸರದಾರರನ್ನು ಸುಲಿದು ಲಕ್ಷಾಂತರ ರೂಪಾಯಿಗಳನ್ನು ಸಂಪಾದಿಸಿದರೂ, ಅವನ್ನು ಸರಕಾರಕ್ಕೆ ಜಮೆ ಮಾಡದೆ ತನ್ನ ಬಳಿಯಲ್ಲಿ ಇಟ್ಟುಕೊಂಡಿರುವನು. ತುಳಾಪುರದಲ್ಲಿ ಬಾದಶಹನು ಕೈಯಲ್ಲಿ ಸಿಕ್ಕಿದ್ದರೂ ಆತನನ್ನು ಕೊಲ್ಲದೆ ಬಿಟ್ಟನು. ಇದೆಲ್ಲ ನಿಮಗೆ ಗೊತ್ತಿಲ್ಲವೆ? ಧನಾಜಿಯು ಇಷ್ಟು ಕಷ್ಟಪಟ್ಟು ಸ್ವಾಮಿಕಾರ್ಯವನ್ನು ಸಾಧಿಸುತ್ತಿದ್ದರೂ, ಆತನಿಗೆ ಸೇನಾಧಿಪತ್ಯವನ್ನು ಕೊಡಿಸದೆ ಸಂತಾಜಿಗೆ ಕೊಡಿಸಿದಿರಿ. ಈಗ ಸಂತಾಜಿಯು ಘಾತಮಾಡಿದ್ದರಿಂದ ಪಲ್ಹಾಳಗಡ, ವಿಶಾಲಗಡಗಳಂಥ ಆಯಕಟ್ಟಿನ ಸ್ಥಳಗಳನ್ನು ನಾವು ಬಿಟ್ಟು ಕೊಡಬೇಕಾಯಿತು.

ತಾರಾಬಾಯಿಯ ಈ ಹಂಗಿಸುವ ಮಾತುಗಳನ್ನು ಕೇಳಿ ರಾಮಚಂದ್ರಪಂತನು ಔದಾಸೀನ್ಯದಿಂದ ಆಕೆಯನ್ನು ಕುರಿತು–ಬಾಯಿಸಾಹೇಬ, ಅದಿರಲಿ ಬಿಡಿರಿ. ಇನ್ನು ಮೇಲೆ ಸೇನಾಪತಿಯ ಅಧಿಕಾರವನ್ನು ಧನಾಜಿಗೆ ಕೊಡಿಸುವೆನು. ಈಗ ಲಿಂಗೋಶಂಕರ, ಹಾಗು ವಿಶಾಜಿಶಂಕರ ಇವರು ನಿಮ್ಮನ್ನು ಕರಕೊಂಡು ಹೋಗುವರು, ಹೊರಡುವದಕ್ಕೆ ವಿಲಂಬವಾಗಬಾರದು ಎಂದು ಹೇಳಿದನು. ಆತನು ತನ್ನ ಭಾವನೆಯಂತೆ ಸಂತಾಜಿಯ ವಿಷಯವಾಗಿ ವಿಕಲ್ಪವು ಉತ್ಪನ್ನವಾಗುವ ಹಾಗೆ ರಾಜಾರಾಮ ಮಹಾರಾಜರಿಗೆ ಪತ್ರವನ್ನು ಬರೆದನು. ಪಂತರ ಮೇಲೆ ಮಹಾರಾಜರ ವಿಶ್ವಾಸವು ಬಹಳ. ತಾರಾಬಾಯಿಯೂ ಜಿಂಜಿಗೆ ಹೋದಬಳಿಕ ಸಂತಾಜಿಯ ವಿಷಯವಾಗಿ ಪತಿಯ ಮುಂದೆ ಇಲ್ಲದ್ದೊಂದು ಹೇಳಿದಳು. ರಾಜಾರಾಮ ಮಹಾರಾಜರು ಹೇಳಿಕೆಯ ಮಾತು ಕೇಳದವರಾಗಿದ್ದರೂ, ಸಂತಾಜಿಯ ದುರ್ದೈವದಿಂದ ಅವರು ರಾಮಚಂದ್ರಪಂತನ ಪತ್ರಕ್ಕೂ, ಹೆಂಡತಿಯ ಮಾತಿಗೂ ಕಿವಿ ಜೋತರು. ಅವರು ತಮ್ಮ ಅಂಗರಕ್ಷಕರಾದ ಭಕ್ತಾಜಿ ಬಹಿರೋಜಿ, ಎಂಬವರನ್ನು ಸಂತಾಜಿಯ ಬಳಿಗೆ ಕಳಿಸಿ ಸೇನಾಪತಿ ಪದವಿಯ ಮುದ್ರೆ ಕಠಾರಿಗಳನ್ನು

ತರಿಸಿಕೊಂಡರು. ಆಗ ಸಂತಾಜಿಗೆ ಬಹಳ ಅಸಮಾಧಾನವಾಯಿತು. ಆ ಸ್ವಾಮಿನಿಷ್ಠನು, ಪುರುಷ ವೇಷಧಾರಿಯಾದ ತನ್ನ ಹೆಂಡತಿಯನ್ನು ಕುರಿತು— "ಕಮಲೇ, ನಿನ್ನ ಸಂಸಾರ ಸೌಖ್ಯದ ಪ್ರಾಪ್ತಿಯ ಕಾಲವು ಮತ್ತಿಷ್ಟು ದೂರವಾಯಿತು. ನಾನೇನು ಮಾಡಲಿ? ದೈವ ಕೊಟ್ಟಿದ್ದನ್ನು ಕರ್ಮವು ಕಚ್ಚಿಕೊಂಡು ಹೋಯಿತೆನ್ನುವಂತೆ ನನ್ನ ಸ್ಥಿತಿಯಾಯಿತು; ಆದರೂ ನೀನು ಉದಾಸೀನೆಯಾಗಬಾರದು. ನಮ್ಮ ಉದ್ಯೋಗವು ಸೇನಾಧಿ ಪತಿಯ ಅಧಿಕಾರ ಪ್ರಾಪ್ತಿಗಾಗಿ, ಅಥವಾ ರಾಜ್ಯಪ್ರಾಪ್ತಿಗ್ಾಗಿ ನಡೆದಿರದೆ, ಸ್ವಾಮಿಕಾರ್ಯ ಸಾಧನೆಗಾಗಿ ನಡೆದಿರುತ್ತದೆಂಬದನ್ನು ನೀನು ಮರೆಯಲಾಗದು. ನನ್ನ ಅತ್ಯುತ್ಕಟ ಕಾರ್ಯಾಸಕ್ತಿಯಿಂದ ಜನರಲ್ಲಿ ತಪ್ಪು ತಿಳುವಳಿಕೆಯಾಗುವ ಸಂಭವವಿರುತ್ತದೆ. ಅದರಂತೆ ಮಹಾರಾಜರ ಮನಸ್ಸಾದರೂ ತಿರುಗಿರಬಹುದು. ಆಗಲಿ, ಸ್ವಾಮಿಕಾರ್ಯವನ್ನು ಎಂದಿನಂತೆ ನಾವು ಮಾಡೋಣ; ಪರಮೇಶ್ವರನು ಸರ್ವಸಾಕ್ಷಿಯಾಗಿರುತ್ತಾನೆ; ಸ್ವರ್ಗಸ್ಥ ಶಿವ ಪ್ರಭುವು ನನ್ನ ಹೃದಯವನ್ನು ಬಗಿದು ನೋಡಲು ಸಮರ್ಥನಾಗಿರುವನು. ಕಮಲೇ, ಬಹಳ ಹೇಳುವದರಿಂದೇನು? ಇದು ನಮ್ಮ ಸತ್ವಪರೀಕ್ಷೆಯ ಕಾಲವಾಗಿರುವದು ಎಂಥ ವಿಪರೀತ ಪ್ರಸಂಗ ಒದಗಿದರೂ ನಾವು ಕರ್ತವ್ಯ ಭ್ರಷ್ಟರಾಗತಕಕ್ಕದ್ದಲ್ಲ" ಎಂದು ನುಡಿಯಲು, ಸತ್ವಸ್ಥಳಾದ ಕಮಲೆಯು— "ಮಹಾರಾಜ, ತಮ್ಮ ಹೆಜ್ಜೆಗಳ ಮೇಲೆ ಹೆಜ್ಜೆಗಳನ್ನಿಡುವದು ನನ್ನ ಕೆಲಸವು, ಹೆಚ್ಚಿನದೇನು ನನಗೆ ತಿಳಿಯುತ್ತದೆ? ಇನ್ನು ಮೇಲೆ ಸರ್ವಥಾ ನನ್ನನ್ನು ಬಿಟ್ಟು ತಾವು ಒಬ್ಬರೇ ಮಾತ್ರ ಇರಬಾರದು. ತಮ್ಮ ಸುಖ–ದುಃಖಗಳ ಪಾಲುಗಾರತಿಯಾದ ನಾನು ತಮ್ಮನ್ನು ಅನುಸರಿಸುವೆನು" ಎಂದು ಹೇಳಿದಳು. ಸಂತಾಜಿಯು ಸರಳ ಹೃದಯದವನು. ಆತನು ಸ್ವಾಮಿಕಾರ್ಯಕ್ಕಾಗಿ ಸರ್ವಸೌಖ್ಯಗಳನ್ನಷ್ಟೇ ಅಲ್ಲ, ದೇಹವನ್ನೂ ಅರ್ಪಿಸಿದ್ದನೆಂಬದನ್ನು ವಾಚಕರು ಬಲ್ಲರು. ಆತನು ಗುತ್ತಿಯ ದುರ್ಗವನ್ನು ಸ್ವಾಧೀನ ಪಡಿಸಿಕೊಳ್ಳುವ ಭರದಲ್ಲಿ ಪ್ರಮಾದದಿಂದ ರಾಮಚಂದ್ರಪಂತರ ಅಪ್ಪಣೆಯನ್ನು ಮೀರಿದ್ದನಲ್ಲದೆ ದುರ್ಭಾವನೆ ಯಿಂದಾಗಲಿ, ಮೈ ಉಳಿಸಿಕೊಳ್ಳುವ ನೆವದಿಂದಾಗಲಿ ಪಲ್ಲಾಳಗಡಕ್ಕೆ ಹೋಗುವದನ್ನು ಬಿಟ್ಟಿದ್ದಿಲ್ಲ ಆತನು ಸೊಂಡೂರ ಗುತ್ತಿಗಳ ಅರಣ್ಯದೊಳಗಿಂದ ತುಂಗಭದ್ರೆಯವರೆಗೆ ಮಹಾರಾಷ್ಟ್ರರ ದರ್ಪವನ್ನು ಚೆನ್ನಾಗಿ ಕೂಡಿಸಿ, ಮೊಗಲರನ್ನು ಮೆತ್ತಗೆ ಮಾಡಿದ್ದನು.

ಸ್ವಾಮಿನಿಷ್ಠ ಸಂತಾಜಿಯು ತನ್ನ ಮನೋವ್ಯಥೆಯನ್ನು ಸಮಾಧಾನಮಾಡಿಕೊಂಡು, ಮಹಾಕಾರ್ಯವನ್ನು ಸಾಧಿಸಿ ಸ್ವಾಮಿಯ ಮನಸ್ಸನ್ನು ಮತ್ತೆ ಸಂತೋಷಪಡಿಸಬೇಕೆಂದು ಹೊರಟನು, ಪುರುಷವೇಷದಿಂದ ಶಿಷ್ಯವೃತ್ತಿಯನ್ನು ವಹಿಸಿ ಹಿಂಬಾಲಿಸಿದ್ದ ಕಮಲೆಯೂ ಪತಿಯನ್ನು ಅನುಸರಿಸಿ ನಡೆದಳು. ಸಂತಾಜಿಯು ತನ್ನ ಶಿಷ್ಯನೊಡನೆ, ತನ್ನ ಜನರು ಬೀಡುಬಿಟ್ಟುಕೊಂಡಿರುತ್ತಿದ್ದ ಸೊಂಡೂರ ಅಡವಿಯನ್ನು ಸೇರಿದನು. ಆಗ ಕಮಲೆಯು ಅಡಿಗೆ ಊಟಗಳ ವ್ಯವಸ್ಥೆಯಲ್ಲಿ ತೊಡಗಿದಳು. ಸಂತಾಜಿಯು ಏಕಾಂತದಲ್ಲಿ ವಿಚಾರ ಮಾಡಲಿಚ್ಛಿಸಿ, ಛಾವಣಿಯಿಂದ ಸ್ವಲ್ಪ ದೂರವಾಗಿದ್ದ ಒಂದು ವಿಶಾಲವಾದ ವಟವೃಕ್ಷದ ಬುಡದಲ್ಲಿ ಕುಳಿತುಕೊಂಡನು. ಅಷ್ಟರಲ್ಲಿ ವಸ್ತ್ರಾಲಂಕಾರಗಳಿಂದ ಅಲಂಕೃತಳಾದ

ರಾಧಾಬಾಯಿಯು ಅಲ್ಲಿಗೆ ಬಂದಳು. ರಾಧಾಬಾಯಿಯು ವೃದ್ಧನಾಗೋಜಿರಾವ ಮಾನೆ ಯೆಂಬ ಪ್ರಬಲಸರದಾರನ ಪ್ರೀತಿಯ ಹೆಂಡತಿಯೆಂಬದನ್ನು ವಾಚಕರು ಬಲ್ಲರು ಆಕೆ ವನಪು ಮಾಡುತ್ತಸಂತಾಜಿಯನ್ನು ಕುರಿತು—

ರಾಧಾಬಾಯಿ—ಸಂತಾಜಿರಾವ, ನಾನು ನಿಮ್ಮ ಕೆಲಸವನ್ನು ಮಾಡಿದ್ದೇನೆ. ನನ್ನ ಪತಿಯು ಮರಾಟರ ಪಕ್ಷವನ್ನು ವಹಿಸುವನು. ಈಗ ನಿಮ್ಮ ಮನಸ್ಸಿನಂತೆ ಆಯಿತಷ್ಟೇ?

ಸಂತಾಜಿ—ರಾಧಾಬಾಯೀ, ಬಹಳ ಒಳ್ಳೆಯ ಕೆಲಸ ಮಾಡಿದೆ. ಸ್ವದೇಶದ ಸ್ವಾತಂತ್ರ್ಯ ರಕ್ಷಣದ ಶ್ರೇಯಸ್ಸಿಗೆ ನೀನೊಬ್ಬಳು ಪಾಲುಗಾರಳಾದೆ. ನೀನು ಇನ್ನು ಹೋಗಬಹುದು. ನಿನ್ನ ಕಾರ್ಯವಾದಂತಾಯಿತು.

ರಾಧಾಬಾಯಿ—ಪ್ರಿಯಕರಾ, ಹೀಗೇಕೆ ಹೊರಕೈಯಿಂದ ಹೊಡೆಯುವೆ? ನಿನ್ನ ಪ್ರತಿಜ್ಞೆಯನ್ನು ಮರೆತೆಯೋ ಏನು? ಇನ್ನು ಮೇಲೆ ಈ ದಾಸಿಯನ್ನು ಸುಖಪಡಿಸಬೇಕಲ್ಲವೆ?

ಸಂತಾಜಿ—ರಾಧಾಬಾಯೀ, ಹೋಗು, ನೀನು ಪುಣ್ಯದ ಕೆಲಸವನ್ನು ಮಾಡಿರುತ್ತೀ. ಆ ಪುಣ್ಯದ ಬೆಲೆಯೆಂದು ನನ್ನ ಶೀಲವನ್ನು ಕೆಡಿಸಹೋಗಿ ಮೋಸಗೊಳ್ಳಬೇಡ. ಸಂತಾಜಿಯ ಏಕಪತ್ನೀವ್ರತವು ಅಭಂಗವಾಗಿದ್ದೆಂಬದನ್ನು ಮರೆಯದಿರು. ಸ್ವಾಮಿಕಾರ್ಯವು ಸಾಧಿಸುವ ವರೆಗೆ ಸ್ವಪತ್ನೀಗಮನವನ್ನು ಕೂಡ ನಿಷೇಧಿಸಿ ಕೇವಲ ವ್ರತಸ್ಥನಾಗಿ ನಡೆಯುವ ಸಂತಾಜಿಯು, ಪರಸ್ತ್ರೀಯನ್ನು ದುರ್ಭಾವನೆಯಿಂದ ಕಣ್ಣೆತ್ತಿಯಾದರೂ ನೋಡ ಬಹುದೆಯೆ? ಹೋಗು, ರಾಧಾಬಾಯಿ ಹೋಗು; ನೀನು ನನ್ನ ಹಡೆದ ತಾಯಿಗೆ ಸಮಾನಳು. ಈ ಮೂರುವರೆ ಮೊಳದ ಮಣ್ಣಿನ ಶರೀರಕ್ಕೆ ಲುಬ್ಧಳಾಗುವದಕ್ಕಿಂತ, ಜಗತ್ತನ್ನೆಲ್ಲ ವ್ಯಾಪಿಸಿ ಹತ್ತುಬೆರಳು ಉಳಿದಿರುವ ಪರಮಾತ್ಮನ ಗುಣಗಳಿಗಾಗಿ ಲುಬ್ಧಳಾಗು. ಆತನಲ್ಲಿ ಭಯ–ಭಕ್ತಿಯನ್ನು ತಾಳಿ ಸದ್ಗುಣಗಳುಳ್ಳವಳಾಗು. ಪರಮಾತ್ಮನ ಮೂರ್ತಿಯನ್ನು ಹೃದಯದಲ್ಲಿ ನೆಲೆಗೊಳಿಸು. ಜಗತ್ತು ಪರಮಾತ್ಮನ ಸಂತತಿಯಾಗಿರುವದು. ಸಂತತಿಯನ್ನು ಪ್ರೀತಿಸುವದ ರಿಂದ ಅದರ ಜನಕನು ಸಂತುಷ್ಟನಾಗುವಂತೆ, ಜಗತ್ತನ್ನು ಪ್ರೀತಿಸಿ ಅದರ ಹಿತವನ್ನು ಸಾಧಿಸುವದರಿಂದ ಪರಮಾತ್ಮನ ಪ್ರೀತಿಯು ನಿನ್ನ ಮೇಲೆ ಆಗುವದು.

ರಾಧಾಬಾಯಿ—ಹೀಗೋ! ಹೀಗೆ ಧರ್ಮೋಪದೇಶದಿಂದ ನನ್ನ ಮನಸ್ಸನ್ನು ಸಮಾಧಾನಗೊಳಿಸುವಿರಾ? ಹಾಗಾದರೆ ನಾನು ಹೋಗುತ್ತೇನೆ. ಸಂತಾಜಿರಾವ, ಹೀಗೆ ನನ್ನ ಮೇಲೆ ನಿರ್ದಯರಾಗಬೇಡಿರಿ.

ಸಂತಾಜಿ—ಸಾಕುಮಾಡು! ಚಾಂಡಾಲಿನೀ, ಬಾಯಿಮುಚ್ಚು! ಯಾರಿರುವಿರಲ್ಲಿ? ಈಕೆಯ ತಂದೆಯನ್ನು ಆನೆಯ ಕಾಲಿಗೆ ಕಟ್ಟಿಸಿ ಎಳಿಸಿ ಪ್ರಾಣಹರಣ ಮಾಡಿದಂತೆ, ಈಕೆಯ ಪ್ರಾಣಹರಣ ಮಾಡಿರಿ.

ರಾಧಾಬಾಯಿ—ಎಲಾ ದುಷ್ಟಾ, ಯಾರು ಯಾರ ಪ್ರಾಣಹರಣ ಮಾಡುತ್ತಾರೆ ನೋಡೋಣ!

ಈ ಮೇರೆಗೆ ನುಡಿದು ರಾಧಾಬಾಯಿಯು ಸಿಟ್ಟಿನಿಂದ ಮುಸುಗುಟ್ಟುತ್ತ ಹೊರಟು ಹೋದಳು. ಇತ್ತ ಸಂತಾಜಿಯು ಕ್ಷಣವಾದರೂ ತಡಮಾಡದೆ ತನ್ನ ಜನರೊಡನೆ ಧನಾಜಿಯ ಬಳಿಗೆ ಹೋದನು. ಈ ಕಾಲದಲ್ಲಿ ಎಲ್ಲ ಮರಾಠಾ ವೀರರು ಮನಃಪೂರ್ವಕವಾಗಿ ತಮ್ಮ ಶಕ್ತಿಮೀರಿ ಮೊಗಲರನ್ನು ಹಣ್ಣು ಮಾಡುವದರಲ್ಲಿ ತೊಡಗಿದ್ದರು. ವಿಶಾಲಗಡವನ್ನು ವಶಮಾಡಿಕೊಳ್ಳುವಾಗ ಬಾದಶಹನಿಗೆ ಬಹಳ ಶ್ರಮವಾಯಿತು. ಒಳಗಿನ ಜನರು ಬಹು ಶೌರ್ಯದಿಂದ ಕಾದಿದರು. ದುರ್ಗವು ವಶವಾದಾಗ ೭೦೦ ಜನ ಮರಾಠಾ ಸ್ತ್ರೀಯರು ಅಗ್ನಿಪ್ರವೇಶ ಮಾಡಿದರು. ಈ ಅನರ್ಥವನ್ನು ನೋಡಿ ರಾಮಚಂದ್ರ ಪಂತನ ದ್ವೇಷವು ಬಾದಶಹನ ಮೇಲೆ ಹೆಚ್ಚಿತೋ, ಸಂತಾಜಿಯ ಮೇಲೆ ಹೆಚ್ಚಿತೋ ತಿಳಿಯದು. ಬಾದಶಹನು ರೊಚ್ಚಿಗೆದ್ದು ಮರಾಟರನ್ನು ಎಷ್ಟು ಹಣೆದರೂ ಅವರು ಮಣೆಯಲಿಲ್ಲ, ಅವರು ಹೊತ್ತು ಸಾಧಿಸಿ ಆಯಕಟ್ಟಿನ ಸ್ಥಳನೋಡಿ ಬಾದಶಹನ ಸೈನ್ಯವನ್ನು ತುಂಡರಿಸುತ್ತಿದ್ದರು. ಬಾದಶಹನಿಗೆ ಅನ್ನ ಸಾಮಗ್ರಿಯು ಸಿಗದಂತೆ ಮಾಡಿದದು. ಬಾದಶಹನು ಪ್ರವೇಶಿಸುವ ಸ್ಥಳವನ್ನು ಹಾಳುಗೆಡಹತ್ತಿದರು. ಬಾದಶಹನು ಮರಾಟರ ಒಂದೊಂದೇ ದುರ್ಗವನ್ನು ವಶಮಾಡಿಕೊಳ್ಳುತ್ತ ಮುಂದಕ್ಕೆ ಸಾಗಿದಂತೆ, ಮರಾಟರು ಹಿಂದಿನಿಂದ ಅವನ್ನು ಮತ್ತೆ ವಶಮಾಡಿಕೊಳ್ಳಹತ್ತಿದರು. ಶಂಕರಾಜಿ ನಾರಾಯಣನ ಸಾಹಸವು ಅತರ್ಕ್ಯವಾದದ್ದು. ಆತನು ರಾತ್ರಿಯಲ್ಲಿ ಉಡದ ಸಹಾಯ ದಿಂದ ರಾಯಗಡವನ್ನು ಏರಿಹೋಗಿ ಬಾದಶಹನ ನಿಶಾನೆಯನ್ನು ಕಿತ್ತಿ ಒಗೆದು, ಅಲ್ಲಿ ಮರಾಟರ ನಿಶಾನೆಯನ್ನು ಊರಿದನು. ಶಂಕರಾಜಿಯ ಈ ಪರಾಕ್ರಮವನ್ನು ನೋಡಿ ಆತನ ಮಾವಳರು ಸ್ಫೂರ್ತಿಗೊಂಡು, ಕೂಡಲೆ ತೋರಣ, ರೋಹಿಡಾ ಮೊದಲಾದ ದುರ್ಗಗಳನ್ನು ಸ್ವಾಧೀನಪಡಿಸಿಕೊಂಡರು. ಘಟ್ಟದ ಮೇಲಿನ ಪ್ರದೇಶವೆಲ್ಲ ಮರಾಟರ ವಶವಾಯಿತು. ವಿಶಾಲಗಡವು ಮೊಗಲರ ಕೈಸೇರಿದ್ದರಿಂದ ರಾಮಚಂದ್ರಪಂತನು ಸಾತಾರೆಯಲ್ಲಿ ನಿಂತು ಮಹಾರಾಷ್ಟ್ರ ರಾಜ್ಯದ ಸೂತ್ರಗಳನ್ನು ಅಲ್ಲಾಡಿಸುತ್ತಿದ್ದನು. ಇದನ್ನರಿತು ಬಾದಶಹನು ನಿಗ್ಗರದಿಂದ ಸಾತಾರೆಯನ್ನು ಮುತ್ತಿದನು. ಅಲ್ಲಿ ಪ್ರಯಾಗಜಿ ಅನಂತನೆಂಬವನು ಬಾದಶಹನ ಆಟವನ್ನು ನಡೆಯಗೊಡಲಿಲ್ಲ. ಬಾದ ಶಹನು ಪರಳಿಯನ್ನು ಮುತ್ತಿದನು. ಅಲ್ಲಿ ಪರಶುರಾಮ ತ್ರ್ಯಯಂಬಕನೆಂಬವನು ಶೌರ್ಯ ದಿಂದ ಕಾದಿ ಮರಾಟರ ಕೀರ್ತಿಯನ್ನು ಕಾಯ್ದುಕೊಂಡನು. ಶಂಕರಾಜಿ ನಾರಾಯಣನು ಸಂತಾಜಿಯ ಕಾಯಕವನ್ನು ನಡಿಸಿ ಬಾದಶಹನನ್ನು ಬಹಳ ಹಣ್ಣು ಮಾಡಿದನು. ವೃದ್ಧನಾದ ಔರಂಗಜೇಬ ಬಾದಶಹನು ಮಹಾರಾಷ್ಟ್ರದಲ್ಲಿ ಮರಾಟರ ಉಪದ್ರವವನ್ನು ತಾಳಲಾರದೆ, ತನ್ನ ಸೈನ್ಯದ ಪ್ರವಾಹವನ್ನು ಜಿಂಜಿಯ ಕಡೆಗೆ ಸಾಗಿಸಿದನು.

ಬಾದಶಹನ ಸೈನ್ಯವು ಜಿಂಜಿಯ ಕಡೆಗೆ ಹೊರಳಿದ ಕೂಡಲೆ, ಅದು ಅತ್ತ ಹೋಗ ದಂತೆ ಧನಾಜಿ ಸಂತಾಜಿ ಇವರು ಪ್ರತಿಬಂಧಿಸಹತ್ತಿದರು. ನೋಡಿದತ್ತೆಲ್ಲ ಮರಾಟಾ ಸರದಾರರು ಮೊಗಲರ ಮೇಲೆ ಮುಗಿಬಿದ್ದು ಹಣೆಯ ಹತ್ತಿದರು. ಪರಶುರಾಮ ತ್ರ್ಯಂಬಕನು

ಸಂಗಮು ನೇರದಲ್ಲಿದ್ದು ಕೊಂಕಣದಲ್ಲಿ, ಶಂಕರಾಜಿ ನಾರಾಯಣನು ಮಾಳವದಲ್ಲಿ, ರಾಮಚಂದ್ರಪಂತನು ಸಾತಾರೆಯೊಳಗಿದ್ದು ದೇಶದಲ್ಲಿ, ಪರಶೋಜಿ ಭೋಸಲೆಯು ಗೊಂಡವಣ, ವರ್ಹಾಡ, ಗುಜರಾಥ, ಗಂಗಾತೀರ, ಬಾಗಲಣ ಮೊದಲಾದ ಉತ್ತರದ ಕಡೆಯ ಪ್ರದೇಶಗಳಲ್ಲಿ ಮೊಗಲರೊಡನೆ ಕಾದಿ ಅವರನ್ನು ಹಣ್ಣು ಮಾಡಹತ್ತಿದ್ದರು. ಬಾದಶಹನ ಪ್ರಚಂಡ ಸೈನ್ಯವು ಮರಾಟರ ಸೈನ್ಯದ ಹರತದಿಂದ ತತ್ತರಿಸಹತ್ತಿತು. ಮರಾಟಾ ಸರದಾರರು ನಾಲ್ಕೂ ಕಡೆಯಲ್ಲಿ ಬಾದಶಹನ ಅಧಿಕಾರವನ್ನು ಕಿತ್ತಿ ಒಗೆದು ಮರಾಟರ ಅಧಿಕಾರವನ್ನು ಪ್ರಸ್ಥಾಪಿಸಿದನು. ದಕ್ಷಿಣದಲ್ಲಿ ಧನಾಜಿ ಸಂತಾಜಿಯವರ ಉಪಟಳವನ್ನಂತು ಬಣ್ಣಿಸಲಾಸಲ್ಲ, ಇವರ ಅಂಜಿಕೆಯು ಸರ್ವತ್ರದಲ್ಲಿ ವ್ಯಾಪಿಸಿತು. ಜಿಂಜಿಯನ್ನು ಮುತ್ತಿದ್ದ ಮೊಗಲರು ನಿದ್ದೆಹತ್ತಿ ಮಲಗಿದಾಗ ಒಮ್ಮಿಂದೊಮ್ಮೆ ''ಧನಾಜಿಆಯಾ ಸಂತಾಜಿಆಯಾ'' ಎಂದು ಕನಕರಿಸುತ್ತ ಏಳುತ್ತಿದ್ದರು. ಧನಾಜಿಯ ಹೆಸರನ್ನು ಕೇಳಿದರೆ ಮೊಗಲರ ಕುದುರೆ ಗಳು ನೀರು ಕುಡಿಯುತ್ತಿದ್ದಿಲ್ಲವಂತೆ! ತನ್ನ ಸೈನಿಕರ ಈ ದೈನ್ಯವನ್ನು ನೋಡಿ ಬಾದಶಹನು ಜಿಂಜಿಯನ್ನು ಮುತ್ತಿದ್ದ ಜಪಲ್ಪಿಕಾರಖಾನನ ಸಹಾಯಕ್ಕೆ ಬುಂದೇಲಾ ಸರದಾರನಾದಲ ಪತರಾಯನನ್ನೂ, ವಿಜಾಪುರದ ಕೊತವಾಲನಾದ ಕಾಸಮು ಖಾನನ್ನೂ ಕಳಿಸಿದನು. ಈ ಸುದ್ದಿಯು ಸಂತಾಜಿಗೆ ಹತ್ತಿದ್ದೊಂದೇ ತಡ. ಆತನು ಧನಾಜಿ ಯೊಡನೆ ಕಾಸಮುಖಾನನಿಗೆ ಗಂಟುಬಿದ್ದನು. ಅವರ ಅಬ್ಬರದ ಮುತ್ತಿಗೆಗೆ ಖಾನನ ಎದೆ ಯೊಡೆದು ನೀರಾಯಿತು. ಆತನು ಅಂಜಿ ತತ್ತರಿಸಿ ದುಂಡೇರಿಯ ಕಂದರದಲ್ಲಿ ಅಡಗಿ ಕೊಂಡನು. ಆಗ ಸಂತಾಜಿಯು ಈ ಕಂದರವನ್ನು ಮುತ್ತಿ ಎಲ್ಲ ಮೊಗಲ ಸರದಾರರನ್ನು ಸೆರೆ ಹಿಡಿದನು. ಆಗ ಯಾವತ್ತು ಸರದಾರರು ತಮ್ಮ ಸಲುವಾಗಿ ದೊಡ್ಡ ದೊಡ್ಡ ರಕಮು ಗಳನ್ನು ಸಂತಾಜಿಗೆ ಕೊಟ್ಟು, ತಮ್ಮ ಬಿಡುಗಡೆ ಮಾಡಿಸಿಕೊಂಡರು. ಈ ಪ್ರಸಂಗದಲ್ಲಿ ಸಂತಾಜಿಗೆ ೫೦–೬೦ ಲಕ್ಷ ರೂಪಾಯಿಗಳು ದೊರೆತವು.

## ಸಂತಾಜಿಯ ಮರಣ

ಈ ಮೇರೆಗೆ ಮರಾಟರ ವೈಭವವು ಪುನಃ ಜಿಂಜಿಯಲ್ಲಿ ಪ್ರಸ್ಥಾಪಿತವಾಯಿತು. ಕಸಿಮಾಡಿದ ಗಿಡವು ಅಕ್ಕಲೊಡೆದು ಪ್ರಫುಲ್ಲಿತವಾಗಿ ಬೆಳೆಯುವಂತೆ, ನಾಶವಾದ ಹಾಗೆ ತೋರುತ್ತಿದ್ದ ಮರಾಟರ ರಾಜ್ಯವು ದೇಶಾಭಿಮಾನಿಗಳಾದ ಮರಾಟರ ಸತ್ವಸಾರದಿಂದ ನಾಲ್ಕೂಕಡೆಗೆ ಹಬ್ಬಿ ಪ್ರಕಾಶಿಸಹತ್ತಿತು. ರಾಜಾರಾಮು ಮಹಾರಾಜರು ಜಿಂಜಿಯಲ್ಲಿದ್ದು ಅಷ್ಟ ಪ್ರಧಾನರನ್ನು ನಿಯಮಿಸಿ ರಾಜ್ಯಸೂತ್ರಗಳನ್ನು ನಡೆಸುತ್ತ, ಕರ್ತೃತ್ವಶಾಲಿಗಳಿಗೆ ಜಹಾಗೀರು ಗಳನ್ನೂ, ಬಿರುದುಗಳನ್ನೂ ಕೊಡಹತ್ತಿದರು. ಇದನ್ನು ಕೇಳಿ ಔರಂಗಜೇಬನ ಹೊಟ್ಟೆಯಲ್ಲಿ ಸಾಸಿವೆ ಅರಿದು ಹಾಕಿದಹಾಗಾಯಿತು. ಆತನ ಸೈನ್ಯಕ್ಕೆ ಅನ್ನ

ಸಾಮುಗ್ರಿಯು ಮುಟ್ಟದ ಹಾಗಾಗಿ, ಆತನಿಗೆ ಬೇರೆ ಕಡೆಯ ಸುದ್ದಿಗಳು ತಿಳಿಯದಾದವು. ಆದ್ದರಿಂದ ಆತನಿಗೆ ಬಹಳ ತಾಪವಾಗಿತ್ತು, ಆತನು ಜಿಂಜಿಯ ಕೋಟೆಯನ್ನು ಬಿಗಿಯಾಗಿ ಮುತ್ತುವದಕ್ಕಾಗಿ ಝುಪಲಿಕಾರಖಾನನಿಗೆ ಆಗ್ರಹದಿಂದ ಆಜ್ಞೆಯನ್ನಿತ್ತನು; ಆದರೂ ಸಂತಾಜಿಯ ಹಾವಳಿಯ ಮುಂದೆ ಖಾನನ ಆಟವು ನಡೆಯದಾಯಿತು. ಮರಾಟರು ಸ್ವಲ್ಪ ದಿವಸಗಳಲ್ಲಿ ತಮ್ಮನ್ನು ಗೊತ್ತಿಗೆ ಹಚ್ಚುವರೆಂದು ಝುಪಲಿಕಾರಖಾನನೂ,ಆತನ ಸಹಾಯಕ ಸರದಾರರೂ ತಿಳಿದುಕೊಂಡಿದ್ದರು. ಅಷ್ಟರಲ್ಲಿ ಬ್ರಹ್ಮಪುರದೊಳಗೆ ಔರಂಗಜೇಬನು ಮರಣಹೊಂದಿದನೆಂಬ ಸುದ್ದಿಯು ಹುಟ್ಟಿ ಮೊಗಲರ ಸೈನ್ಯದಲ್ಲಿ ಅವ್ಯವಸ್ಥೆಯುಂಟಾಯಿತು. ಈ ಎಲ್ಲ ಅನುಕೂಲ ಕಾರಣಗಳನ್ನು ನೋಡಿ, ಇನ್ನು ತಮ್ಮ ಅರಿಷ್ಟಕಾಲವು ಹಿಂಗಿತೆಂದು ರಾಜಾರಾಮ ಮಹಾರಾಜರು ಸಂತೋಷ ಪಡುತ್ತಿರುವಷ್ಟ ರಲ್ಲಿ, **ಪ್ರಸಿದ್ಧ ಮುತ್ಸದ್ದಿಯೂ, ಮಹಾರಾಷ್ಟ್ರ ರಾಜ್ಯದ ಪ್ರಾಣಪತಿಷ್ಠಾಪಕನೂ, ಸೂತ್ರಧಾರನೂ ಆದ ಪ್ರಲ್ಹಾದಪಂತನು ಮರಣ ಹೊಂದಿದನು.** ಆಗ ರಾಜಾರಾಮ ಮಹಾರಾಜರು ನೆಲಕ್ಕೆ ಬಿದ್ದರು. ಅವರ ದುಃಖವು ಪರಮಾವಧಿಯಾಯಿತು. ಹೀಗಿರುವಾಗ ಒಂದು ದಿನ ತಾರಾಬಾಯಿಯೂ, ಧನಾಜಿಯೂ ಮಹಾರಾಜರನ್ನು ಸಮಾಧಾನ ಗೊಳಿಸುವದಕ್ಕಾಗಿ ಬಂದರು. ಆಗ ಆ ಮಾತು ಈ ಮಾತು ಹೊರಟು ಕಡೆಗೆ ಧನಾಜಿಯು ಮಹಾರಾಜರನ್ನು ಕುರಿತು—''ಮಹಾರಾಜ, ದಂಡಿನವೆಚ್ಚಕ್ಕಾಗಿ ಹಣದ ತೊಂದರೆ ಯಾಗಿರುವದು'' ಎಂದು ವಿಜ್ಞಾಪನೆ ಮಾಡಿಕೊಂಡನು. ಆಗ ಮಹಾರಾಜರು ಪರಮಾವಧಿ ವ್ಯಸನದಿಂದ ಅಸಹ್ಯಪಟ್ಟುಕೊಂಡು ಧನಾಜಿಯನ್ನು ಕುರಿತು–ನಾನೇನು ಮಾಡಲಿ? ಪ್ರಲ್ಹಾದಪಂತನು ತೀರಿಕೊಂಡರು. ಯಾವತ್ತು ವ್ಯವಸ್ಥೆಯನ್ನು ಅವರೇ ಮಾಡುತ್ತಿದ್ದರು.

ಧನಾಜಿ–ಮಹಾರಾಜ; ಮೊನ್ನೆ ಸಂತಾಜಿಯು ದುಂಡೇರಿಯ ಕಂದರದಲ್ಲಿ ಅರವತ್ತು ಎಪ್ಪತ್ತು ಲಕ್ಷ ರೂಪಾಯಿಗಳನ್ನು ಸಂಪಾದಿಸಿರುವನಲ್ಲ, ಅದನ್ನೇನು ಅವನಿಗೆ ಉಚಿತ ವಾಗಿ ಕೊಟ್ಟಿರುವಿರೋ ಏನು? ಮಹಾರಾಷ್ಟ್ರದಲ್ಲಿ ಯಾದರೂ ಆತನು ಬಹಳ ಸಂಪತ್ತನ್ನು ಗಳಿಸಿ ಇಟ್ಟಿರುತ್ತಾನೆಂದು ಈ ಜಗದಳೆಯು ಹೇಳುತ್ತಾನೆ.

ರಾಜಾರಾಮ—ಇದ್ದೀತು! ಆತನ ಪದರಿನಲ್ಲಿ ಭಾಲೆರಾಯಿಯ ದೊಡ್ಡ ಸೈನ್ಯ ವಿರುತ್ತದೆ. ಅದರ ದಾಣೆ ಮೇವಿನ, ಹಾಗು ಸೈನಿಕರ ಹೊಟ್ಟೆಯ ವೆಚ್ಚವನ್ನು ಆತನು ನಮ್ಮಲ್ಲಿ ಬೇಡುತ್ತಿರುವದಿಲ್ಲ,

ತಾರಾಬಾಯಿ—ಸಂತಾಜಿಯ ಸೈನ್ಯದವರ ಆತನ ತ್ರಾಸಕ್ಕಾಗಿ ಬೇಸತ್ತಿರುವರು. ಆತನ ರೀತಿಯು ಸರಿಯಾದದ್ದಲ್ಲ, ಸೈನಿಕರು ಆತನ ಅಪ್ಪಣೆಯಂತೆ ನಿಂತಲ್ಲಿ ನಿಲ್ಲದೆ ತಿರುಗಿ ತಿರುಗಿ ಕಷ್ಟಪಡಬೇಕು; ಸುಲಿಗೆಯ ಹಣವನ್ನೆಲ್ಲ ಸಂತಾಜಿಯು ಅಪಹರಿಸಬೇಕು. ಆಶೆಬುರುಕನು ಕೋಟಿಗಟ್ಟಲೆ ಹೊನ್ನು ಗಳಿಸಿರುವನೆಂದು ಆತನ ಜನರೇ ಹೇಳವರು. ಸಂತಾಜಿಯು ಹೀಗೆ ಲಾಭಮಾಡಿಕೊಳ್ಳುವದನ್ನು ನೋಡಿಯೇ ಸೂರ್ಯಾಜಿಯ ಬಾಯಲ್ಲಿ ನೀರು ಒಡೆದು, ಆತನು ವಾಯಿಯ ದೇಶಮುಖಿಯ ಆಶೆಯಿಂದ ರಾಯುಗಡವನ್ನು

ಬಾದಶಹನಿಗೆ ಒಪ್ಪಿಸಿದನು. ಯಾಕೆ ಧನಾಜೀ, ನಾನಾಡುವ ಮಾತು ಸುಳ್ಳೇನು? ರಾಯಗಡವು ಮೊಗಲರ ವಶವಾಗುವಾಗ ಅದನ್ನು ಉಳಿಸಿಕೊಳ್ಳುವದನ್ನು ಬಿಟ್ಟು ಸಂತಾಜಿಯು ಕೊಲೆ-ಸುಲಿಗೆಗಳನ್ನು ಮಾಡುತ್ತ, ದುಡ್ಡಿನ ಆಶೆಯಿಂದ ಅತ್ತಿತ್ತ ಅಲೆದಾಡ ಬಹುದೋ!

ಧನಾಜಿ—ಅದೊತ್ತಟ್ಟಿಗಿರಲಿ, ಸದ್ಯಕ್ಕೆ ಸಂತಾಜಿಯು ಝುಪಲಿಕಾರಖಾನನ ಸಂಗಡ ಏನೋ ಸಂಧಾನ ನಡಿಸಿದಹಾಗೆ ತೋರುತ್ತದೆ. ಹಾಗಲ್ಲದಿದ್ದರೆ ಖಾನನು ಜಿಂಜಿಯ ಮುತ್ತಿಗೆ ಸಡಿಲುಮಾಡಿ, ವಾಂಡಿವಾಸದಲ್ಲಿ ಹೋಗಿ ಕುಳತುಕೊಳ್ಳುತ್ತಿದ್ದನೆ? ಖಾನನಿಗೆ ಕರ್ನಾಟಕದ ನಬಾಬಗಿರಿಯು ಬೇಕಾಗಿದೆ ಬಾದಶಹನು ಮುಪ್ಪಿನಿಂದ ತೀರ ಹಣ್ಣಾಗಿರುವದರಿಂದ ಬೇಗನೆ ಒಂದು ದಿನ ಆತನು ಉದುರಿ ಹೋಗತಕ್ಕವನು. ಬಾದಶಹನು ಇರುವವರೆಗೆ ಮರಾಟರ ಕಾಟವನ್ನು ತೋರಿಕೆಗಾಗಿ ಇಟ್ಟು, ಬಾದಶಹನು ಸತ್ತಮೇಲೆ ಮರಾಟರನ್ನು ನಾಶ ಗೊಳಿಸಿ, ತಾನು ಕರ್ನಾಟಕದ ಸುಬೇದಾರನಾಗಬೇಕೆಂಬದು ಖಾನನ ಹವಣಿಕೆಯು. ಅದಕ್ಕೆ ಸಂತಾಜಿಯ ಸಹಾಯವು. ಹಾಗಲ್ಲದಿದ್ದರೆ, ಮುತ್ತಿಗೆಯು ಇಷ್ಟು ಸಾವಕಾಶವಾಗಿ ನಡೆಯುಬಹುದೆ? ಹೀಗೆಯೇ ದಿನಹಾಕಿ ಸೂರ್ಯಾಜಿಯು ಬಾಲಶಿವರಾಯನನ್ನು ಬಾದಶಹನಿಗೆ ಒಪ್ಪಿಸಿದನು. ಈಗ ಸಂತಾಜಿಯ ಅದರಂತೆ ದಿನಹಾಕಿ ಈಗ ಹುಟ್ಟಿರುವ ಇನ್ನೊಬ್ಬ ಶಿವರಾಯನನ್ನು ಒಪ್ಪಿಸ ಬೇಕೆಂದು ಮಾಡಿರುತ್ತಾನೆ. ಅಂದರೆ ಆಬಾಸಾಹೇಬರ ವಂಶವು ನಷ್ಟವಾದಂತಾಗುವದು.

ರಾಜಾರಾಮ—ಏನು ಮಾಡಲಿ? ಎಂಥ ಹೊತ್ತಿನಲ್ಲಿ ಪ್ರಲ್ಹಾದಪಂತರು ತೀರಿ ಕೊಂಡರಲ್ಲ! ಇಂಥ ಅನರ್ಥವು ಯಾಕೆ ಒದಗಿರಬಹುದು? ಧನಾಜೀ, ಇದೊಂದು ಅಪ ಶಕುನವಾಗಿರಬಹುದೇನು?

ಧನಾಜಿ—ಮಹಾರಾಜರು ಹೀಗೆ ಅವಸಾನಗೆಡುವದು ಸರಿಯಲ್ಲ, ಶಿವಪ್ರಭುವಿನ ಪುಣ್ಯವು ಬಲವತ್ತರವಾಗಿರುವವರೆಗೆ ಯಾವ ಅಪಶಕುನಗಳು ಏನು ಮಾಡುವವು? ಆದರೆ ರಾಜದ್ರೋಹದ ಪ್ರಸಂಗಗಳ ಮೇಲೆ ಸೂಕ್ಷ್ಮ ದೃಷ್ಟಿಯನ್ನಿಟ್ಟು, ಅವನ್ನು ಆಗಾಗ್ಗೆ ನಿವಾರಣ ಮಾಡಲೇಬೇಕು. ಸಂತಾಜಿಯು ಈಗ ಮೊದಲಿನ ಹಾಗೆ ಇದ್ದಂತೆ ತೋರುವದಿಲ್ಲ,

ರಾಜಾರಾಮ—ರಾಮಚಂದ್ರಪಂತರಾದರೂ ಹೀಗೆಯೇ ಪತ್ರ ಬರೆದಿರುತ್ತಾರೆ. ಸಂತಾಜಿಯ ಮೇಲೆ ವಿಶ್ವಾಸವಿಟ್ಟು ಇನ್ನು ಜಿಂಜಿಕೋಟೆಯಲ್ಲಿರದೆ, ಆದಷ್ಟು ಬೇಗನೆ ಇತ್ತಕಡೆಗೆ ಹೊರಟು ಬರಬೇಕೆಂದು ಸ್ಪಷ್ಟವಾಗಿ ಅವರು ಬರೆದಿದ್ದಾರೆ. ಸಂತಾಜಿಯು ಬಾದಶಹನಿಗೆ ಅಂತರಂಗದಿಂದ ಅನುಕೂಲವಾಗಿರುವನಂತೆ, ಆತನ ಸೈನ್ಯವು ಆತನ ತ್ರಾಸಕ್ಕಾಗಿ ಬೇಸತ್ತಿರುವದಂತೆ.

ಖಂಡೋಜಿ ಚಿಟನೀಸ—ಧನಾಜಿರಾವ, ನಾವು ಜಿಂಜಿಯನ್ನು ಬಿಡಬೇಕೆಂದು ರಾಮಚಂದ್ರಪಂತರ ಆಗ್ರಹದ ಸೂಚನೆಯಿರುತ್ತದೆ. ಅದಕ್ಕೆ ಉಪಾಯವೇನು ಮಾಡಬೇಕು?

ಧನಾಜಿ—ಮುಂದೆ ಏನು ಮಾಡಬೇಕೆಂಬದನ್ನು ನೀವೇ ಆಲೋಚಿಸತಕ್ಕದ್ದು. ಉಪಾಯ ಕೋವಿದರಾದ ಪ್ರಲ್ಹಾದಪಂತರು ತೀರಿಕೊಂಡಿರುವದರಿಂದ ಅವರ ಸ್ಥಳದಲ್ಲಿ ನೀವು

ಇರುವಿರಿ. ನಾವೇನು? ಕಠಾರಿಯ ಒಕ್ಕಲು, ಅಪ್ಪಣೆಯನ್ನು ಅಮಲಿನಲ್ಲಿ ತರುವದಷ್ಟು ನಮ್ಮ ಕೆಲಸವು.

ಖಂಡೋಜಿ—ಧನಾಜೀ, ಈ ಕಾರ್ಯದಲ್ಲಿ ನಮಗೆ ಗಣೋಜಿ ಶಿರ್ಕೆಯು ಅನುಕೂಲ ವಾಗಲೇಬೇಕು. ಆತನ ಮಾರ್ಗದಿಂದ ಈ ಕಾರ್ಯವು ಸುಸೂತ್ರವಾಗಿ ಆಗುವದು. ಆತನನ್ನು ಒಲಿಸಿಕೊಳ್ಳುವ ಯತ್ನಮಾಡತಕ್ಕದ್ದು. ಅದಕ್ಕಾಗಿಯೇ ನಾನು ಹೋಗುವೆನು.

ಖಂಡೋಬನು ಹೊರಟುಹೋಗಲು, ಮಹಾರಾಜರು ಚಿಂತಾಕ್ರಾಂತರಾಗಿ ಕುಳಿತು ಕೊಂಡರು. ಅವರು ಮತ್ತೆ ಧನಾಜಿಯನ್ನು ಕುರಿತು—

ರಾಜಾರಾಮ—ರಾಮಚಂದ್ರಪಂತರಾದರೂ ಸಂತಾಜಿಯ ವಿರುದ್ಧವಾಗಿಯೇ ನನಗೆ ಪತ್ರವನ್ನು ಬರೆದಿದ್ದಾರೆ. ಸಂತಾಜಿಯು ಬಾದಶಹನ ಡೇರೆಯ ಬಂಗಾರದ ಕಳಸವನ್ನು ತಂದನೆಂಬ ಮೋಹಕ್ಕೆ ನೀವು ಬೀಳಬಾರದೆಂದು ಅವರು ನನಗೆ ತಿಳಿಸಿರುವರು. ಬಾದಶಹನು ಕೈಯಲ್ಲಿ ಸಿಕ್ಕು ಹೋಗಿದ್ದನಾದ್ದರಿಂದ ಆತನನ್ನು ಸಂತಾಜಿಯು ಕೊಲ್ಲಬಹುದಾಗಿತ್ತೆಂದು ಪಂತರು ಅಭಿಪ್ರಾಯಪಡುವರು. ಸಂತಾಜಿಯ ಮೇಲೆ ವಿಶ್ವಾಸವಿಡದೆ ಆದಷ್ಟು ಬೇಗನೆ ಮಹಾರಾಷ್ಟ್ರದಲ್ಲಿ ಹೊರಟು ಬರಬೇಕೆಂದು ಅವರು ನನಗೆ ಸ್ಪಷ್ಟವಾಗಿ ತಿಳಿಸಿರುವರು.

ಧನಾಜಿ—ನನಗಾದರೂ ಹಾಗೆಯೇ ತೋರುತ್ತದೆ. ಸಂತಾಜಿಯ ಮೇಲೆ ಸಂಪೂರ್ಣ ವಿಶ್ವಾಸವಿಡುವದು ಸರಿಯಲ್ಲ, ಮೊನ್ನೆ ನಾನು ಮಹಾರಾಜರ ಕೆಲವು ದಂಡಾಳುಗಳನ್ನು ದುಂಢೇರಿಯ ಕಂದರದ ಸುಲಿಗೆಯ ಹಣದ ವಸೂಲಿಗಾಗಿ ಸಂತಾಜಿಯ ಬಳಿಗೆ ಕಳಿಸಿದ್ದೆನು. ಆಗ ಸಂತಾಜಿಯು ಹಣವನ್ನು ಕೊಡದೆ ಜಗಳವಾಡಿದನಂತೆ! ಮಹಾರಾಜರ ದಂಡಿನಲ್ಲಿ ಶಿಸ್ತೇ ಇಲ್ಲೆಂತಲೂ, ಮಹಾರಾಜರು ನಿರ್ಧಾರದ ಸ್ವಭಾವದವರಲ್ಲವೆಂತಲೂ ನಿರಾಕರಿಸಿದ ನಂತೆ. ಸಂತಾಜಿಯ ದಂಡಾಳುಗಳು ಅವನ ತ್ರಾಸದ ಕಾಲಲ್ಲಿ ಬೇಸತ್ತು ಹೋಗಿರುವರು. ಅವರು ಈಗ ನನ್ನನ್ನು ಕೂಡುವಹಾಗಿದ್ದಾರೆ. ನಾನು ಈಗಲೇ ಸೈನ್ಯದೊಡನೆ ಸಂತಾಜಿಯ ಮೇಲೆ ಸುಳ್ಳೇ ಸಾಗಿಹೋದಂತೆ ಮಾಡಿ ಆತನ ದಂಡಾಳುಗಳನ್ನೆಲ್ಲ ನನ್ನ ಕಡೆಗೆ ತಿರಗಿಸಿ ಕೊಳ್ಳುವೆನು; ಅಂದರೆ ಸಂತಾಜಿಯ ಕಣ್ಣುಗಳು ತೆರೆಯುವವು.

ತಾರಾಬಾಯಿ—ಬೇಡಿರಿ, ಧನಾಜಿರಾವ ಹಾಗೆ ಮಾಡಬೇಡಿರಿ. ಈ ಪ್ರಸಂಗದಲ್ಲಿ ನಮ್ಮೊಳಗೆ ಒಡಕು ಹುಟ್ಟುವದು ಹಿತಕರವಲ್ಲ, ನೋಡಿರಿ, ನಮ್ಮೊಳಗೆ ವೈಮನಸ್ಸು ಹುಟ್ಟು ವದನ್ನು ನೋಡಿ ಮಹಾರಾಜರು ಎಷ್ಟು ವ್ಯಾಕುಲರಾಗಿದ್ದಾರೆ, ಅವರ ಮೋರೆಯು ಬಾಡಿ ಹೋಯಿತು!

ಧನಾಜಿ—ಅದರ ವಿಷಯವಾಗಿ ಮಹಾರಾಜರು ನಿಶ್ಚಿಂತರಾಗಿರಬೇಕು ಸಂತಾಜಿಯು ಹಣ ಕೊಡದೆ ಮಹಾರಾಜರ ದಂಡಾಳುಗಳೊಡನೆ ಜಗಳಾಡಿ ಮಹಾರಾಜರನ್ನು ನಿರಾಕರಿ ಸಿದ್ದಕ್ಕಾಗಿ, ಮಹಾರಾಜರು ದೋಷವಿಡುವರೆಂದು ನಾನು ಸಂತಾಜಿಯ ಮುಂದೆ ಹೋಗಿ ನಿಂತುಕೊಳ್ಳುವೆನು. ಅದನ್ನು ನೋಡಿ ಸಂತಾಜಿಯ ದಂಡಾಳುಗಳು ನನ್ನನ್ನು ಕೂಡಿಕೊಂಡರೆ ಸಂತಾಜಿಯ ಮೈಮೇಲೆ ಎಚ್ಚರ ಹುಟ್ಟುವದು.

ತಾರಾಬಾಯಿ—ಧನಾಜಿರಾವ, ಇದಕ್ಕೂ ಹೆಚ್ಚಿನ ಪ್ರಸಂಗವನ್ನು ತಂದುಕೊಳ್ಳ ಬಾರದು ಕಂಡಿರಾ! ಯಾಕಂದರೆ ನಮ್ಮೊಳಗಿನ ಒಡಕಿನಿಂದ ಮಹಾರಾಷ್ಟ್ರ ರಾಜ್ಯಕ್ಕೆ ಅಪಾಯ ಒದಗೀತು.

ತಾರಾಬಾಯಿಯ ಈ ಮಾತಿಗೆ ಒಪ್ಪಿಕೊಂಡು ಮಹಾರಾಜರನ್ನು ವಂದಿಸಿ ಧನಾಜಿಯು ಹೊರಟುಹೋದನು. ಮೊದಲೇ ತಂತ್ರದಿಂದ ಆತನು ಸಂತಾಜಿಯ ದಂಡಿನವರ ಮನಸ್ಸನ್ನು ಒಡಕೊಂಡಿದ್ದನು. ಆತನು ಸುಳ್ಳೇ ಸಂತಾಜಿಯ ಮೇಲೆ ಸೈನ್ಯದೊಡನೆ ಬೀಳಲು, ಸಂತಾಜಿಯ ಯಾವತ್ತು ದಂಡಿನವರು ಸಂಕೇತದಂತೆ ಧನಾಜಿಯನ್ನು ಕೂಡಿದರು. ಇದನ್ನು ನೋಡಿ ಸಂತಾಜಿಯು ಸಂತಾಪಗೊಂಡನು. ಆತನ ಮೈಮೇಲಿನ ಎಚ್ಚರವು ತಪ್ಪಿತು. ಒಂದು ಕ್ಷಣವಾದರೂ ಅಲ್ಲಿ ಇರುವದು ಆತನ ಅಭಿಮಾನದ ಸ್ವಭಾವಕ್ಕೆ ಸೇರಲಿಲ್ಲ. ಆತನು ತನ್ನ ಶಿಷ್ಯನನ್ನು (ಹೆಂಡತಿಯಾದ ಪುರುಷ ವೇಷಧಾರೀ ಕಮಲೆಯನ್ನು ) ಕುರಿತು— ಕಮಲಾಕಾಂತ, ನಡೆ, ಇನ್ನು ಕರ್ನಾಟಕವನ್ನು ಬಿಟ್ಟು ಮಹಾರಾಷ್ಟ್ರಕ್ಕೆ ತೆರಳೋಣ ನಡೆ, ಅಥವಾ ಅರಣ್ಯವನ್ನು ಸೇರೋಣ ನಡೆ! ಪ್ರಾಮಾಣಿಕತನಕ್ಕೂ, ನಿಸ್ಪೃಹತೆಯ ಸ್ವಾಮಿ ನಿಷ್ಠೆಗೂ ವ್ಯಾವಹಾರಿಕ ಜಗತ್ತಿನಲ್ಲಿ ಮಾನವಿಲ್ಲ ನಡೆ, ರಾಷ್ಟ್ರದ ಸಂಸಾರವನ್ನು ನಡೆಸುತ್ತ ಕೂಡ್ರುವ ಅಟ್ಟಹಾಸಕ್ಕಿಂತ, ಅರಣ್ಯವನ್ನು ಸೇರಿ ದೇಹ ಸಾರ್ಥಕ ಮಾಡಿಕೊಳ್ಳುವದು ನೆಟ್ಟಗೆ ನಡೆ! ಮಾತಾಡುವ ದೇವರ ಸೇವೆ ಮಾಡುವದಕ್ಕಿಂತ ಕಲ್ಲಿನ ದೇವರಿಗೆ ಮರೆ ಹೋಗೋಣ ನಡೆ!

ಸಂತಾಜಿಯು ದೇಹ ವ್ಯಾಪಾರದಲ್ಲಿ ಚಪಲನಾಗಿದ್ದಂತೆ, ಮನೋವ್ಯಾಪಾರದಲ್ಲಿಯೂ ಚಪಲನಾಗಿದ್ದನು. ಅಪಮಾನವು ಆತನಿಗೆ ಎಷ್ಟುಮಾತ್ರವೂ ಸಹನವಾಗುತ್ತಿದ್ದಿಲ್ಲ. ಆತನ ಹೃದಯವು ಬಹು ಸರಳ; ಅದರಲ್ಲಿ ಕೊಂಕು ಕೊರತೆಗಳಿದ್ದಿಲ್ಲ. ತನ್ನ ಜನರು ಧನಾಜಿಯ ಪಕ್ಷವಹಿಸಿದ್ದನ್ನು ನೋಡಿ ಆತನು ತಟ್ಟನೇ ಅಲ್ಲಿಂದ ಹೊರಟನು. ಕಮಲೆಯೂ, ಕೆಲವು ಜನ ನಂಬಿಗೆಯ ದಂಡಾಳುಗಳೂ ಆತನನ್ನು ಹಿಂಬಾಲಿಸಿದರು. ಧನಾಜಿಯು ಸಂತಾಜಿಯನ್ನು ಸೆರ ಹಿಡಿಯಲು ಯತ್ನಿಸಿದನು; ಆದರೆ ಬದುಕಿರುವವರೆ ಸಂತಾಜಿಯು ಎರಡನೆಯವರ ಕೈಯಲ್ಲಿ ಸಿಗುವದು ಅಶಕ್ಯವೆಂಬ ಮಾತು ಎಲ್ಲರಂತೆ ಧನಾಜಿಗೂ ಗೊತ್ತಿತ್ತು; ಆದ್ದರಿಂದ ಆತನು ದೀರ್ಘಪ್ರಯತ್ನಮಾಡಿ ನಿರಾಶಾಪಡುವ ಉಸಾಬರಿಗೆ ಹೋಗದೆ, ಆತನು ಯಾವತ್ತು ಸೈನ್ಯವನ್ನು ಕಟ್ಟಿಕೊಂಡು ಮಹಾರಾಜರ ಬಳಿಗೆ ಬಂದನು. ಸಂತಾಜಿಯ ಸ್ವಾಮಿನಿಷ್ಠೆಯನ್ನು ಮಹಾರಾಜರು ಪೂರಾ ಬಲ್ಲವರಾಗಿದ್ದರು. ಹೇಳಿಕೆಯ ಕೇಳಿಕೆಯ ಮಾತುಗಳಿಂದ ಸಂತಾಜಿಯ ವಿಷಯವಾಗಿ ಅಂಥ ದುರ್ಭಾವನೆಯು ಅವರಲ್ಲಿ ಉಂಟಾ ಗಿದ್ದಿಲ್ಲ. ಹೀಗಿರುವಾಗ ಸಂತಾಜಿಯು ಅಪಮಾನಿತನಾಗಿ ಸಂತಾಪದಿಂದ ಕೈಮೀರಿ ಹೋದದ್ದನ್ನು ಕೇಳಿ ಅವರಿಗೆ ಬಹಳ ವ್ಯಸನವಾಯಿತು; ಆದರೂ ಹೊರಗೆ ಆಡಿ ತೋರಿಸಿ ಅವರು ಧನಾಜಿಯ ಮನಸ್ಸನ್ನು ನೋಯಿಸಲಿಲ್ಲ. ಇತ್ತ ಸಂತಾಜಿಯು ಅಡ್ಡದಾರಿಯಿಂದ ಸ್ವಲ್ಪ ಮುಂದಕ್ಕೆ ಹೋಗುತ್ತಿರಲು, ಅಪಶಕುನರೂಪವಾಗಿ ರಾಧಾಬಾಯಿಯು ಆತನಿಗೆ ಎದುರಾದಳು. ರಾಧಾಬಾಯಿಯ ಮುಖದಲ್ಲಿ ಮುಗುಳು

ನಗೆಯು ಒಪ್ಪುತ್ತಿತ್ತು, ಆಕೆಯು ಮಂಜುಲ ಸ್ವರದಿಂದ ಸಂತಾಜಿಯನ್ನು ಕುರಿತು— ಸಂತಾಜಿರಾವ, ನಿಮ್ಮ ಎಲ್ಲ ಪರಿವಾರವನ್ನು ಸ್ವಲ್ಪ ಹೊತ್ತು ಒತ್ತಟ್ಟಿಗೆ ಕಳಿಸಿರಿ. ನಿಮ್ಮ ಸ್ವಾಮಿಯ ಮಹತ್ವದ ಕಾರ್ಯವನ್ನು ನಾನು ಸಾಧಿಸಿದ್ದೇನೆ; ಆದರೆ ಅದನ್ನು ಏಕಾಂತದಲ್ಲಿ ಹೇಳಬೇಕಾಗಿದೆ, ಎಂದು ನುಡಿಯಲು, ಅಂಥ ವಿಪನ್ನಸ್ಥಿತಿ ಯಲ್ಲಿಯೂ ಸ್ವಾಮಿಭಕ್ತನಾದ ಸಂತಾಜಿಯು ತನ್ನ ಪರಿವಾರವನ್ನೆಲ್ಲ ಒತ್ತಟ್ಟಿಗೆ ಕಳಿಸಿದನು. ಆಗ ರಾಧಾಬಾಯಿಯು—

ರಾಧಾಬಾಯಿ—ಯಾಕೆ ಸಂತಾಜಿರಾವ, ಎತ್ತ ಹೊರಟಿರಿ? ನಾನು ನಿಮ್ಮನ್ನು ಕಾಣಬೇಕೆಂದು ಬಹುದಿವಸಗಳಿಂದ ಹೊಂಚು ಹಾಕಿದ್ದೆನು; ಇಂದು ಅನಾಯಾಸಾವಾಗಿ ನಿಮ್ಮ ದರ್ಶನವಾಯಿತು. ನನ್ನ ಪತಿಯನ್ನು ನಿಮ್ಮ ಪಕ್ಷಕ್ಕೆ ಒಲಿಸಿದ್ದೇನೆ. ನೀವು ನನ್ನನ್ನು ನಿರಾಕರಿಸ ಬಾರದು.

ಸಂತಾಜಿ—ರಾಧಾಬಾಯಿ, ನೀನು ಬಹಳ ಒಳ್ಳೆಯ ಕೆಲಸ ಮಾಡಿದೆಯೆಂದು ಹಿಂದಕ್ಕೇ ನಾನು ನಿನಗೆ ಹೇಳಿರುವೆನಲ್ಲವೆ? ಈಗ ಮತ್ತೆಯಾಕೆ ನನ್ನ ಮುಂದೆ ಆ ಮಾತನ್ನು ಹೇಳಬಂದೆ? ಹೋಗು, ಇನ್ನು ಯಾವ ರಾಜಕಾರ್ಯದಲ್ಲಿಯೂ ನಾನು ಮನಸ್ಸು ಹಾಕುವ ಹಾಗಿಲ್ಲ. ಸಂತಾಜಿಯು ಈಗ ಬಡವನಾಗಿರುವನು; ಸಹಾಯಹೀನನಾಗಿರುವನು; ಇಷ್ಟೇ ಅಲ್ಲ, ಆತನು ಪರಾಕ್ರಮಹೀನನೂ, ತೇಜೋಹೀನನೂ ಆಗಿರುವನು.

ರಾಧಾಬಾಯಿ—ಅವ್ವಯ್ಯಾ! ಹೀಗೇಕೆ ಆಯಿತು? ಪ್ರಿಯಕರಾ, ಯಾಕೆ ಚಿಂತೆ ಮಾಡುವೆ? ತೇಜೋಹೀನನಾದ ದ್ವಿತಿಯೆಯ ಚಂದ್ರಮನಂತೆಯಿದ್ದ ನೀನು, ರೋಹಿಣಿ ಯಂತೆ ಇದ್ದ ನನಗೆ ಅತ್ಯಂತ ಮನೋಹರನಾಗಿ ಕಾಣುತ್ತೀ. ಪ್ರಿಯಕರಾ, ಸಂತಾಜಿರಾವ, ನಾಗೋಜಿ ಮಾನೆಯ ಸಂಪೂರ್ಣವಾದ ವೈಭವಕ್ಕೆ ನೀನು ಸ್ವಾಮಿಯಾಗು. ಆಮ್ರವೃಕ್ಷವನ್ನು ಮಲ್ಲಿಗೆಯ ಬಳ್ಳಿಯು ಆಲಿಂಗಿಸಿ ಒಪ್ಪುವಂತೆ, ನಾನು ನಿನ್ನನ್ನು ಈಗ ಬಿಗಿಯಾಗಿ ಆಲಿಂಗಿಸಿ ಒಪ್ಪುವೆನು.

ಸಂತಾಜಿ—ಥೂ ಚಾಂಡಾಲ ಸ್ತ್ರೀಯೇ, ಈಗಲೇ ನೀನು ಇಲ್ಲಿಂದ ಹೊರಟು ಹೋಗು. ನಿನ್ನ ಆ ಪಾಪಮಯವಾದ ವೈಭವಕ್ಕೆ ಬೆಂಕಿಹಚ್ಚು. ನನ್ನಂಥ ಸತ್ವಶಾಲಿಗಳು ಹೆಚ್ಚಿದ ಮಾನದಿಂದ ರಾಷ್ಟ್ರದ ಉದ್ಧಾರವಾಗುವದು; ಸತ್ವಭಂಗ ಮಾಡುವ ನಿನ್ನಂಥ ನೀಚರಿಂದ ರಾಷ್ಟ್ರವು ರಸಾತಲಕ್ಕೆ ಹೋಗುವದೇ ಸರಿ. ನೀನು ಇಲ್ಲಿಂದ ಹೊರಟು ಹೋಗುವಿಯೋ ಇಲ್ಲವೋ? ಸ್ತ್ರೀಹತ್ಯೆಯ ದೋಷವು ಬಂದರೂ ಬರಲಿ. ನಿನ್ನ ರುಂಡವನ್ನು ತುಂಡರಿಸುವೆನು.

ಹೀಗೆಂದು ಸಂತಾಜಿಯು ತನ್ನ ಖಡ್ಗವನ್ನು ಒರೆಯಿಂದ ಹಿರಿಯಲು, ರಾಧಾ ಬಾಯಿಯು—ಛೀ ದುಷ್ಟಾ, ದಯಾಶೂನ್ಯಾ, ನಿನ್ನನ್ನು ಪ್ರಾರ್ಥಿಸುವಲ್ಲಿ ನನ್ನ ಆಯುಷ್ಯವು ವ್ಯರ್ಥವಾಗಿ ಹೋಯಿತು. ನಾನು ಸ್ತ್ರೀ ಕುಲದಲ್ಲಿ ಹುಟ್ಟಿದ್ದೇ ನಿಜವಾಗಿದ್ದರೆ ಯುಕ್ತಿ-ಪ್ರಯುಕ್ತಿಯಿಂದ ಬಾದಶಹನಿಗೆ ನಿನ್ನ ರುಂಡವನ್ನು ಒಪ್ಪಿಸುವೆನು. ಎಂದು ಹೇಳಿ ಕ್ಷಣ ಮಾತ್ರದಲ್ಲಿ ಆಕೆಯು ಗಿಡಗಳ ಗುಂಪಿನಲ್ಲಿ ಮರೆಯಾದಳು. ಆ ಕರ್ಕಶ ಸ್ತ್ರೀಯು

ಸಂತಾಪದ ಮಾತುಗಳನ್ನು, ಅಲ್ಲಿಯೇ ಮರೆಗೆ ನಿಂತು ಕೇಳಿದ ಕಮಲೆಯು ಚಿಂತೆಗೊಳಗಾದಳು. ತನ್ನ ಪತಿಯ ನಿರ್ಮಲ ಚರಣೆಗಾಗಿ ಸಮಾಧಾನಪಟ್ಟಿದ್ದ ಕಮಲೆಯು, ದುಷ್ಟ ರಾಧಾಬಾಯಿಯು ಮಾತ್ಸರ್ಯದಿಂದ ತನ್ನ ಪತಿಯ ಪ್ರಾಣಹರಣಕ್ಕಾಗಿ ಏನು ಉಪಾಯವನ್ನು ಯೋಚಿಸುವಳೋ ಎಂಬು ಚಿಂತೆಗೊಳಗಾದಳು. ಸಂತಾಜಿಯು ಆ ಅರಣ್ಯದಲ್ಲಿ ಒಂದು ಕ್ಷಣವಾದರೂ ನಿಂತುಕೊಳ್ಳದೆ ಪರಿವಾರದೊಡನೆ ಅಲ್ಲಿಂದ ಹೊರಟನು. ಮನುಷ್ಯನಿಗೆ ಕಷ್ಟಗಳು ಒದಗಹತ್ತಿದರೆ ಅವು ಒಂದರ ಹಿಂದೆ ಒಂದು ಒದಗುತ್ತವೆಂಬ ಮಾತು ಸುಳ್ಳಲ್ಲ. ಸಂತಾಜಿಯು ಕರ್ನಾಟಕದಿಂದ ಹೊರಟು ವಿಜಾಪುರದ ಸನಿಯಕ್ಕೆ ಬಂದನು. ಅಲ್ಲಿ ಆತನಿಗೆ ಪುನಃ ಧನಾಜಿಯ ಭೆಟ್ಟಿ ಯಾಯಿತು. ಆಗ ಸಂತಾಜಿಯ ಉಳಿದ ಸೈನಿಕರು ಆತನ ಸಂಗಡ ತಿರುಗಲಿಕ್ಕೆ ಬೇಸತ್ತು ಧನಾಜಿಯನ್ನು ಕೂಡಿಕೊಂಡರು. ಅದರಿಂದ ಸಂತಾಜಿಯು ತೀರ ನಿರಾಶ್ರಿತನಾಗಿ ಶಂಭು ಮಹಾದೇವನ ಗುಡ್ಡದಲ್ಲಿ ಆಶ್ರಯಸ್ಥಾನವನ್ನು ಕಲ್ಪಿಸಿಕೊಳ್ಳಬೇಕೆಂದು ಹೊರಟನು. ಕಮಲೆಯೂ, ನಾಲ್ಕಾರು ಜನ ಅನುಯಾಯಿಗಳೂ ಮಾತ್ರ ಆತನನ್ನು ಹಿಂಬಾಲಿಸಿದ್ದರು.

ರಾಧಾಬಾಯಿಯು ಮಹಾ ಸಾಹಸಿಯಾದ ಸ್ತ್ರೀಯು ಸಂತಾಜಿಯು ತನ್ನನ್ನು ಹಲವು ಸಾರೆ ಅವಮಾನಗೊಳಿಸಿದ ಸೇಡನ್ನು ತೀರಿಸಿಕೊಳ್ಳುವದಕ್ಕಾಗಿ ಆತನ ಪ್ರಾಣಹರಣ ಮಾಡಲು ಆ ದುಷ್ಟಳು ಹೊಂಚುಹಾಕಿದ್ದಳು. ಆ ಸ್ವತಂತ್ರಳಾದ ಸ್ತ್ರೀಯು ಕೆಲವು ರಾವುತರೊಡನೆ ಸಂತಾಜಿಯ ಬೆನ್ನಬಿಡದೆ ಒಂದೇಸವನೆ ಸಾಗಿದ್ದಳು. ಬೇಸಿಗೆಯ ಕಾಲವು, ಮಧ್ಯಾನ್ಹದ ಬಿಸಿಲು ರಣಗುಟ್ಟಿ ಸುರಿಯಹತ್ತಿದೆ. ಮಾರ್ಗಯಾಸದಿಂದ ಸಂತಾಜಿಯೂ ಅವನ ಸಂಗಡಿಗರೂ ಬಹಳವಾಗಿ ಬಳಲಿದ್ದಾರೆ. ಅಷ್ಟರಲ್ಲಿ ಒಂದು ಪ್ರಶಸ್ತವಾದ ಬಾವಿಯು ಅವನ ಕಣ್ಣಿಗೆ ಬಿದ್ದಿತು. ಸಂತಾಜಿಯು ಆ ಬಾವಿಯ ದಂಡೆಯಲ್ಲಿ ತನ್ನ ಕುದುರೆಯನ್ನು ಇಳಿದು ವಿಸ್ರಮಿಸತೊಡಗಿದನು. ಆಗ ಆತನ ಸಂಗಡಿಗರಿಗೆ ಬಹಳ ಸಂತೋಷವಾಯಿತು. ಸ್ವಲ್ಪ ಕಾಲದ ಮೇಲೆ ಅವರೆಲ್ಲರೂ ಬಾವಿಯಲ್ಲಿ ದುಮುಕಿ ಯಥೇಚ್ಛವಾಗಿ ಈಸಾಡಹತ್ತಿದರು. ಕಮಲೆಯು ಮಾರ್ಗಾಯಾಸದಿಂದ ಸಮೀಪದ ಒಂದು ಗಿಡದ ಬುಡದಲ್ಲಿ ಒರಗಿರಲು, ಆಕೆಗೆ ನಿದ್ರೆಯು ಹತ್ತಿತು. ಸಂತಾಜಿಯು ಮನದಣಿಯಾಗಿ ಈಸಿ ಬಾವಿಯ ದಂಡೆಯ ಮೇಲೆ ಬಂದು ಮೈ ಒರಿಸಿಕೊಳ್ಳಹತ್ತಿದನು. ಆತನು ತಲೆಯಮೇಲೆ ಪಂಜೆಯನ್ನು ಹಾಕಿ ಕಣ್ಣು ಒರಿಸಿಕೊಳ್ಳುತ್ತಿರಲು, ನಾಲ್ಕಾರು ಜನ ಕೊಲೆಗಡಕರು ಶಸ್ತ್ರಪಾಣಿಗಳಾಗಿ ಒಮ್ಮೆಲೆ ಸಂತಾಜಿಯಮೇಲೆ ದುಮುಕಿ ಸಿಕ್ಕಲ್ಲಿ ಶಸ್ತ್ರಗಳಿಂದ ಸಿಕ್ಕಹಾಗೆ ಆತನನ್ನು ಇರಿಯಹತ್ತಿದರು. ಸಂತಾಜಿಯ ಸಂಗಡಿಗರು ಇನ್ನೂ ಬಾವಿಯಲ್ಲಿ ಈಸುತ್ತಲೇ ಇದ್ದರು. ಕಮಲೆಗೆ ಗಾಢವಾದ ನಿದ್ರೆಯು ಹತ್ತಿತು. ಇತ ನಿಃಶಸ್ತ್ರನಾದ ಸಂತಾಜಿಯು ಶಸ್ತ್ರಗಳ ಇರಿತ ಹೊಡೆತಗಳಿಂದ ಜರ್ಜರನಾಗಿ—''ಹಾಯ್, ಹಾಯ್, ಕಮಲೇ ಸತ್ತೆನು ಸತ್ತೆನು'' ಎಂದು ಒದರುತ್ತ ನೆಲಕ್ಕೆ ಬಿದ್ದನು. ದುಷ್ಟ ರಾಧಾಬಾಯಿಯು ಅಲ್ಲಿಯೇ ಗಿಡದ ಮರೆಯಲ್ಲಿ ನಿಂತು ಸಂತಾಜಿಯ ಈ

ಕೊಲೆಯನ್ನು ನೋಡುತ್ತಲಿದ್ದಳು. ಸಂತಾಜಿಯು ಇನ್ನು ಬದುಕಲಾರನೆಂಬ ನಂಬಿಗೆಯಾದ ಕೂಡಲೇ ಆಕೆಯು ಸನ್ನೆ ಮಾಡಲು, ಕೊಲೆಗಡಕರು ಸಂತಾಜಿಯನ್ನು ಬಿಟ್ಟು ನಡೆದರು. ಅವರೊಡನೆ ರಾಧಾಬಾಯಿಯು ಎತ್ತೋ ಅದೃಶ್ಯವಾಗಿ ಹೋದಳು.

ತನ್ನ ಪತಿಯ ಆರ್ತಸ್ವರವನ್ನು ಕೇಳಿ, ಪುರುಷವೇಷಧಾರಿಯಾದ ಕಮಲೆಯು ಗಡಬಡಿಸಿ ಎಚ್ಚತ್ತು ದುಃಖದಿಂದ ಆಕ್ರೋಶ ಮಾಡುತ್ತ ಪತಿಯ ಬಳಿಗೆ ಬಂದಳು. ಆಗ ಸಂತಾಜಿಯ ದೇಹದೊಳಗಿಂದ ರಕ್ತವು ಒಂದೇಸವನೆ ಹರಿಯುತ್ತಲಿತ್ತು, ಅದನ್ನು ನೋಡಿ ಕಮಲೆಯ ಪಂಚಪ್ರಾಣಗಳು ಹಾರಹತ್ತಿದವು. ಆಕೆಯು ಬಹು ಕಷ್ಟದಿಂದ ತನ್ನ ದುಃಖವನ್ನು ನುಂಗಿಕೊಂಡು ಪತಿಯ ಬಳಿಯಲ್ಲಿ ಕುಳಿತು ಆತನ ತಲೆಯನ್ನು ತನ್ನ ತೊಡಯ ಮೇಲೆ ಇಟ್ಟುಕೊಂಡಳು. ದುಃಖಾತಿಶಯದಿಂದ ಆಕೆಯ ಮುಖದಿಂದ ಶಬ್ದಗಳು ಹೊರಡದಾದವು. ಆಕೆಯು ಒಂದೇ ಸವನೆ ಪತಿಯ ಮುಖವನ್ನು ನೋಡುತ್ತಿದ್ದಳು. ಆಕೆಯ ಕಣ್ಣುಗಳೊಳಗಿಂದ ನೀರುಗಳು ಒಂದೇ ಸವನೆ ಸುರಿಯಹತ್ತಿದ್ದವು. ಆಗ ಸಂತಾಜಿಯು ನರಳುತ್ತ ಕ್ಷೀಣಸ್ವರದಿಂದ ಕಮಲೆಯನ್ನು ಕುರಿತು— ಯಾರು? ಕಮಲೆಯೇನು? ಪ್ರಾಣಪ್ರಿಯೆ ಕಮಲೆ, ಇನ್ನು ನಮ್ಮಿಬ್ಬರ ಭೆಟ್ಟಿಯು ಸ್ವಸ್ಥಚಿತ್ತದಿಂದ ಸ್ವರ್ಗದಲ್ಲಾಗುವದೇ ಸರಿ. ನಿಲ್ಲು ಹುಚ್ಚೀ ಅಳಬೇಡ ನಿಲ್ಲು! ನೀನು ವೀರಪತ್ನಿಯಲ್ಲವೆ? ಅಂದಬಳಿಕ ಪತಿಯ ಮರಣಕ್ಕಾಗಿ ಅಳುವದೇಕೆ? ಮರಣವು ಯಾರಿಗೆ ಬಿಟ್ಟಿದೆ? ನನ್ನ ದೈವದಲ್ಲಿದ್ದಂತೆ ಈಗ ನನಗೆ ಮರಣವು ಪ್ರಾಪ್ತವಾಗಿದೆ. ಇದಕ್ಕಾಗಿ ನೀನು ಸರ್ವಥಾ ದುಃಖಿಸಬೇಡ. ನಾನಾದರೂ ಈಗ ಮರಣಕ್ಕೆ ಹೆದರಿ ಶೋಕಿಸುವದಿಲ್ಲ, ನಾನು ಇಲ್ಲಿಯವರೆಗೆ ಸ್ವಾಮಿಕಾರ್ಯವನ್ನು ಏಕನಿಷ್ಠೆಯಿಂದಲೂ, ಶುದ್ಧಾಂತಃಕರುಣದಿಂದಲೂ ಮಾಡಿದ್ದಕ್ಕೆ ಪರಮೇಶ್ವರನು ಸಾಕ್ಷಿಯಾಗಿದ್ದಾನೆ. ಶಿವಪ್ರಭುವಿನ ಪುಣ್ಯವು ಬಲವತ್ತರ ವಾಗಿರುವದರಿಂದ ಆತನ ಕಾರ್ಯವು ಯಾವ ಮುಖದಿಂದಾದರೂ ಆಗೇ ಆಗುವದೆಂಬ ನಂಬಿಗೆಯು ನನಗಿರುವದರಿಂದ, ಆ ವಿಷಯದಲ್ಲಿಯೂ ನಾನು ನಿಶ್ಚಿಂತನಾಗಿರುವೆನು. ನೀನು ವೀರಪತ್ನಿಯಿರುವೆಯೆಂದು ನಾನು ಆಗಲೆ ಹೇಳಿರುವೆನಲ್ಲವೆ? ಅಂದಬಳಿಕ ನಿನ್ನ ಚಿಂತೆಯೂ ನನಗಿಲ್ಲ; ಆದರೆ ನೀನು ರಾಜಾರಾಮ ಮಹಾರಾಜರ ಬಳಿಗೆ ಹೋಗಿ ಅವರಿಗೆ ಹೇಳ ಬೇಕೇನೆಂದರೆ—ಸಂತಾಜಿಯು ನಿರಪರಾಧಿಯು. ದುಷ್ಟರ ತಂತ್ರದಿಂದ ಮರಣಹೊಂದಿದನು. ಆತನ ಸಂಗಡ ಮರಾಟರೊಳಗಿನ ಒಡಕಿನ ನಾಶವಾಗಿ ಹೋದರೆ; ಆತನಿಗೆ ಬಹಳ ಸಂತೋಷವಾಗುವದು. ಹೋಗು, ನೀನು ಮಹಾರಾಜರಿಗೆ ಇದರಂತೆ ಹೇಳು. ವೀರಕನ್ಯೇ, ನಿನಗೆ ಪತಿಯ ಆಜ್ಞೆಯು ಪವಿತ್ರವಾಗಿರುವದಲ್ಲವೆ? ಅದನ್ನು ನೀನು ಮನ್ನಿಸುವಿಯಲ್ಲವೆ? ಹೋಗು ಹಾಗಾದರೆ ಮಹಾರಾಜರು ನನ್ನ ಸಲುವಾಗಿ ದುಃಖಪಟ್ಟಾರು. ಅವರ ದುಃಖವನ್ನು ನೀನು ದೂರಮಾಡು ಹೋಗು.

ಕಮಲೆ—ನಿಲ್ಲು! ಪ್ರಾಣಸಖಾ ಸ್ವಲ್ಪನಿಲ್ಲು! ಕಡೆಯ ಸಾರೆ ನಿನ್ನ ಮುಖವನ್ನು ಚುಂಬಿಸುವೆನು! ನನ್ನ ಈ ತೊಡೆಗಳ ಮೇಲೆ ಕ್ಷಣಹೊತ್ತು ತಲೆಯನ್ನಿಟ್ಟು ನೀವು ಸ್ವಲ್ಪ ನಗಬಾರದಿರಾ! ಇಲ್ಲಿ ನೋಡಲಿಕ್ಕೆ ಹೊರಗಿನವರು ಯಾರಿರುವರು? ಎಲೈ ಅಣ್ಣಗಳಿರಾ, ನನ್ನ

ಸಲುವಾಗಿ ಚಿತೆಯನ್ನು ನಿರ್ಮಾಣಮಾಡಿರಿ. ಚಂದನ–ತುಲಸೀ–ಬಿಲ್ವಕಾಷ್ಠಗಳನ್ನು ಸಂಪಾದಿಸಿರಿ. ಪತಿಯ ಸಮ್ಮುಖದಲ್ಲಿ ಆ ಶಯ್ಯದ ಮೇಲೆ ನಾನು ಸುಖದಿಂದ ಶಯನ ಮಾಡುವೆನು.

ಸಂತಾಜಿ–ಕಮಲೇ, ಇದು ನಿನಗೆ ಸರ್ವಥಾ ಉಚಿತವಾದದ್ದಲ್ಲ. ಮೊದಲು ನೀನು ರಾಜಾರಾಮ ಪ್ರಭುಗಳನ್ನು ಕಾಣಬೇಕೆಂದು ನಿನ್ನ ಪತಿಯ ಅಪ್ಪಣೆಯಾಗಿ ರುವದಲ್ಲವೆ? ನೀನು ನನ್ನ ಮಣ್ಣಿನ ಮೂರುವರೆ ಮೊಳದ ದೇಹದ ನಾಶಕ್ಕಾಗಿ ಚಿಂತೆಮಾಡಬೇಡ. ನನ್ನ ಪ್ರಾಣಪ್ರಿಯ ವಾದ ದೇಶದ ನಾಶಕ್ಕಾಗಿ ಚಿಂತೆಯನ್ನು ಮಾಡು. ಹೋಗು ಹೋಗು, ಮೊದಲು ನನ್ನ ಪ್ರಭುವನ್ನು ಸಮಾಧಾನಗೊಳಿಸು ಹೋಗು. ಆತನಿಗೆ ನನ್ನ ನಮಸ್ಕಾರವನ್ನು ಹೇಳು. ಪ್ರಿಯೇ ಕಮಲೇ, ನಾನು ಹೋದೆನೆಂದು ನೀನು ಸನ್ಯಾಸಿಯಾಗಿ ವೈರಾಗ್ಯಾಚರಣೆಯನ್ನು ಅಂಗೀಕರಿಸಬೇಡ? ದೇಶಕಲ್ಯಾಣವನ್ನಿಚ್ಛಿಸುವ ನನ್ನ ಹೃದಯದ ಚಿಂತೆಯು ನಿನ್ನ ದೇಹವನ್ನು ಸುತ್ತಿ ತಿರುಗುತ್ತಿರುವದು. ಹೋಗು, ಸೌಭಾಗ್ಯವತಿಯೇ, ನನ್ನ ಇಚ್ಛೆಯನ್ನು ಅಂತರಂಗದಲ್ಲಿ ಧರಿಸಿ, ಅಖಂಡ ಸೌಭಾಗ್ಯ ವತಿಯಾಗಿ ಇರುಹೋಗು. ಕಮಲೇ, ಕಮಲೇ, ಬಾಲೇ, ಬರುತ್ತೇನೆ. ನಿನಗೆ ಸಂಸಾರಸುಖವು ಪ್ರಾಪ್ತವಾಗಲಿಲ್ಲೆಂದು ಮರುಗಬೇಡ. ಸತ್ವಶಾಲಿಯಾಗಿ ಅಖಂಡವಾದ ಶಾಂತಿಯಿಂದ ವಾಸಿಸು? ಇದೇ ನಿನಗೆ ನನ್ನ ಕಡೆಯ ಆಶೀರ್ವಾದವು. ಜಯ ಛತ್ರಪತಿ! ಜಯ ಸಮರ್ಥ! ರಾಮ! ಶ್ರೀರಾಮ! ರಾಮರಾಮ!!

ಆಯಿತು, ಜ್ಯೋತಿಯಲ್ಲಿ ಜ್ಯೋತಿಯು ಮಿಶ್ರವಾಗಿ ಹೋಯಿತು. ವಾಯು ವಿನಲ್ಲಿ ವಾಯುವು ಕೂಡಿಹೋಯಿತು. ಸಂತಾಜಿಯ ಸಂಗಡಿಗರು ಸಂತಾಜಿಯ ದೇಹ ವನ್ನು ಚಿತೆಯ ಮೇಲಿಟ್ಟರು. ಅದನ್ನೆಲ್ಲ ಕಮಲಾಬಾಯಿಯು ನೋಡುತ್ತಲಿದ್ದಳು. ಆಕೆಯ ಕಣ್ಣುಗಳಲ್ಲಿ ತಟ್ಟೆಂದು ನೀರುಹನಿಗಳು ಉದುರಲಿಲ್ಲ. ಆಕೆಯ ಮುಖದಲ್ಲಿ ದಿವ್ಯವಾದ ತೇಜಸ್ಸು ಒಪ್ಪುತ್ತಿತ್ತು. ಆಕೆಯು ಚಿತೆಯ ಮೇಲೆ ಮಲಗಿರುವ ಪತಿಯ ಕೊರಳಲ್ಲಿ ಪುಷ್ಪ ಹಾರವನ್ನು ಹಾಕಿ–ಪತಿದೇವಾ, ಪುಣ್ಯವಂತಾ, ನಿನ್ನ ಪುಣ್ಯಕರ್ಮವನ್ನು ಪೂರ್ಣ ಮಾಡುವದಕ್ಕಾಗಿ, ನಿನ್ನ ಅಪ್ಪಣೆಯಂತೆ ಮಹಾರಾಜರ ಬಳಿಗೆ ಹೋಗಿ ಬರುತ್ತೇನೆ. ಅಲ್ಲಿಯವರೆಗೆ ನೀನು ಸುಖದಿಂದ ಶಯನ ಮಾಡಿರಬೇಕು ಕಂಡೆಯಾ? ಆಮೇಲೆ ನಾನೂ ನಿನ್ನ ಬಳಿಯಲ್ಲಿ ಶಯನಮಾಡುವೆನು. ಕೃಪಾವಂತಾ, ನಿಮ್ಮ ಏಕವಚನದೊಳಗಿನ ತೇಜಸ್ಸು ನನಗೆ ಮಾರ್ಗವನ್ನು ತೋರಿಸುವದು. ಔದಾರ್ಯದ ನಿಮ್ಮ ಏಕಪತ್ನೀವ್ರತದ ತೇಜಸ್ಸು ನನ್ನ ಪಾತಿವ್ರತ್ಯವನ್ನು ರಕ್ಷಿಸುವದು. ಕರುಣಾಮೂರ್ತಿಯೇ, ನಿನ್ನ ಆಚರಣೆ ಯೊಳಗಿನ ಪಾವಿತ್ರ್ಯವು ನನ್ನ ಸಾತ್ವಿಕಭಾವವನ್ನು ಜಾಗ್ರತವಾಗಿ ಇಡುವದು. ಪತಿದೇವಾ, ಸ್ವಸ್ಥವಾಗಿ ಮಲಗಿಕೊಳ್ಳಿರಿ ಕಂಡಿರಾ!

ಈ ಮೇರೆಗೆ ನುಡಿದು ಕಮಲಾಬಾಯಿಯ ಸಂತಾಜಿಯ ತೆರವಾದ ಕುದುರೆಯನ್ನು ಹತ್ತಿಕೊಂಡು ಜಿಂಜಿಯ ಕಡೆಗೆ ನಡೆದಳು.

# ಆನಂದ

ಪ್ರಿಯವಾಚಕರೇ, ಸಂತಾಜಿಯು ಸಿಟ್ಟಿನಿಂದ ಹೊರಟುಹೋದ ಬಳಿಕ ಜಿಂಜಿಯ ಸ್ಥಿತಿಯು ಏನಾಯಿತೆಂಬದನ್ನು ಕುರಿತು ನಾವು ಈಗ ಹೇಳಬೇಕಾಗಿದೆ. ರಾಜಕಾರ್ಯ ದುರಂಧರನೂ, ಪರಮ ಧೈರ್ಯಶಾಲಿಯೂ, ಶ್ರೇಷ್ಠ ಮುತ್ಸದ್ದಿಯೂ ಆದ ಪ್ರಲ್ಹಾದ ರಾವ ನೀರಾಜಿಯು ಮರಣಹೊಂದಿದ್ದರಿಂದ, ಮಹಾರಾಷ್ಟ್ರದ್ದೊಂದು ಕಣ್ಣೇ ಹೋದಂತಾಯಿತು. ಅದರಲ್ಲಿ ರಾಮಚಂದ್ರ ಪಂತರಿಂದ ಚಿಂತಾಜನಕ ಪತ್ರಗಳು ಬರಹತ್ತಿದವು. ಸಂತಾಜಿಯು ಔರಂಗಜೇಬನ ಪಕ್ಷವನ್ನು ವಹಿಸಿರುವನೆಂಬ ಸಂಶಯವು ರಾಮಚಂದ್ರ ಪಂತರಲ್ಲಿ ದಿನದಿನಕ್ಕೆ ಹೆಚ್ಚುತ್ತ ನಡೆದಿತ್ತು, ಆ ಮಾತಿಗೆ ಧನಾಜಿಯೂ, ತಾರಾಬಾಯಿಯೂ ಪುಷ್ಟಿಯನ್ನುಂಟು ಮಾಡಿದರು. ಇದರಿಂದ ಖಂಡೋಜಿಯ ಅಂತಃಕರಣವು ಬಹು ವ್ಯಥಿತವಾಯಿತು. ಹ್ಯಾಗಾದರೂ ಮಾಡಿ ಮಹಾರಾಜರನ್ನು ಜಿಂಜಿಯಿಂದ ಹೊರಡಿಸಿ ಮಹಾರಾಷ್ಟ್ರಕ್ಕೆ ಕರಕೊಂಡು ಹೋಗಿ ಹಿಂದಿನಿಂದ ಕರ್ನಾಟಕವನ್ನು ವಶಮಾಡಿಕೊಳ್ಳ ಬೇಕೆಂದು ಆತನು ಯೋಚಿಸಿದನು. ತನ್ನ ಯೋಚನೆಯು ಸಫಲವಾಗುವದಕ್ಕಾಗಿ ಯುಕ್ತಿಯನ್ನು ಯೋಚಿಸುವಲ್ಲಿ ಆ ಸ್ವಾಮಿನಿಷ್ಠ ಖಂಡೋಬನು ಮಗ್ನನಾಗಿ ಹೋಗಿದ್ದನು; ಆತನು ಹಾದಿಯನ್ನು ಹಿಡಿದು ಹೋಗುತ್ತಿರುವಾಗ ಅಂತಃಪುರದ ಕಿಡಕಿ ಯಲ್ಲಿ ರಾಜಕುವರಳು ಚಿಂತಾಮಗ್ನಳಾಗಿ ಕುಳಿತುಕೊಂಡದ್ದು ಆತನ ಕಣ್ಣಿಗೆಬಿದ್ದಿತು. ಕೂಡಲೆ ಖಂಡೋಜಿಗೆ ಒಂದು ಯುಕ್ತಿಯು ತೋಚಿ, ಆತನು ರಾಜಕುವರಳ ಬಳಿಗೆ ಹೋದನು. ಈಗ ರಾಜಕುವರಳು ತೀರ ನಿಸ್ತೇಜಳಾಗಿದ್ದಳು. ರಾಯಗಡದ ಮುತ್ತಿಗೆಯ ಕಾಲದಲ್ಲಿ ತನ್ನ ಪತಿಯಾದ ಗಣೋಜಿರಾವ ಶಿರ್ಕೆಯನ್ನು ಸೆರೆಹಿಡಿಯುವಾಗ ಇದ್ದ ತೇಜಸ್ವಿತೆಯೂ, ಚಾಪಲ್ಯವೂ, ಉತ್ಸಾಹವೂ ಈಗ ಆಕೆಯಲ್ಲಿ ಇದ್ದಿಲ್ಲ, ಅದನ್ನು ನೋಡಿ ಖಂಡೋಬನಿಗೆ ಬಹಳ ವ್ಯಸನವಾಯಿತು. ರಾಜಕುವರಳು, ತನ್ನ ಬಂಧುವಿನಂತೆ ಇದ್ದ ಖಂಡೋಬನನ್ನು ಆದರದಿಂದ ಬರಮಾಡಿಕೊಳ್ಳುತ್ತಿರಲು, ಖಂಡೋಬನು ಉತ್ಕಂಠೆಯಿಂದ ರಾಜಕುಮಾರಳನ್ನು ಕುರಿತು—

ಖಂಡೋಜಿ—ತಾಯಿಸಾಹೇಬ, ನನ್ನ ಸಂಗಡ ನಡೆಯಬೇಕು. ಬರುತ್ತೀರೇನು? ರಾಯಗಡದ ಮುತ್ತಿಗೆಯ ಕಾಲಕ್ಕೆ ನಿಮಗೆ ಪ್ರಾಪ್ತವಾಗದೆ ಇದ್ದ ಯಶಸ್ಸನ್ನು ಈಗ ಸಂಪಾದಿಸೋಣ.

ರಾಜಕುವರ—ಅಣ್ಣಾ, ಈಗ ಎಲ್ಲಿಗೆ ಹೋಗಬೇಕು? ನನ್ನಿಂದೇನು ಉಪ ಯೋಗವಾದೀತು? ನಾನು ಜೀವನ್ಮೃತಳಂತೆ ಕೆಲಸಕ್ಕೆ ಬಾರದವಳಾಗಿ ಜೀವಿಸುತ್ತಿರುವೆನು. ನನ್ನನ್ನು ಮೃತಮನುಷ್ಯರಲ್ಲಿ ಎಣಿಸಿದರೂ ತಪ್ಪಾಗಲಿಕ್ಕಿಲ್ಲ.

ಖಂಡೋಜಿ–ತಾಯಿಸಾಹೇಬ, ನಾವು ಈಗ ನೆಟ್ಟಗೆ ಶಿರ್ಕೆಮಾನೆಯವರ ಛಾವಣಿಯನ್ನು ಸೇರಲೇಬೇಕು. ಈ ಮರಾಠಾ ಸರದಾರರನ್ನು ನಮ್ಮ ಕಡೆಗೆ ಮಾಡಿಕೊಳ್ಳದಿದ್ದರೆ

ಜಿಂಜಿಯಿಂದ ಮಹಾರಾಜರ ಬಿಡುಗಡೆಯಾಗುವಂತೆಯಿಲ್ಲ, ನಡೆಯಿರಿ, ಚಿರಂಜೀವನನ್ನು ಸಂಗಡ ಕರಕೊಳ್ಳಿರಿ. ನಾವು ಗಣೋಜಿರಾಯರ ಸಿಟ್ಟಿಗೆ ಬಲಿಯಾದರೂ ಆಗೋಣ, ಇಲ್ಲದಿದ್ದರೆ ಅವರನ್ನು ನಮ್ಮ ಪಕ್ಷಕ್ಕೆ ಒಲಿಸಿಕೊಂಡಾದರೂ ಬಿಡೋಣ. ಇದು ಕಟ್ಟಕಡೆಯ ಯತ್ನವು.

ರಾಜಕುವರ—ಅಣ್ಣಾ, ನಡೆ. ನೀನು ನನ್ನನ್ನು ನಿನ್ನ ಒಡಹುಟ್ಟಿದ ತಂಗಿಯಾದ ಸಂತೂಬಾಯಿಯಂತಲೇ ತಿಳಿದುಕೋ. ಪ್ರಸಂಗ ಒದಗಿದರೆ, ನನ್ನನ್ನೂ, ನನ್ನ ಈ ಕೂಸನ್ನೂ ತುಂಡರಿಸಿ ಚಲ್ಲಲ್ಲು ಹಿಂದೆಮುಂದೆ ನೋಡಬೇಡ! ಹೆಂಡತಿಯನ್ನು ಗಂಡನ ಮನೆಗೆ ಕಳಿಸುವ ಪ್ರಸಂಗವು ಇದೇ ಆಗಿರುವದು. ನಿನ್ನ ಹಂಚಿಕೆಯು ನನ್ನ ಮನಸ್ಸಿಗೆ ಬಂದಿತು. ನಡೆ ಶತ್ರುಗಳ ಪಾಳಯವನ್ನು ಭೇದಿಸಿ ಹೋಗೋಣ.

ಖಂಡೋಜಿ—ತಂಗೀ, ಪಾಳಯವನ್ನು ಭೇದಿಸಲು ಒಂದು ಯುಕ್ತಿಯನ್ನು ಯೋಚಿಸಿರುತ್ತೇನೆ. ವಾಯವ್ಯದಿಕ್ಕಿನ ಕಾವಲು, ಗಣೋಜಿರಾವ ಶಿರ್ಕೆಯವರದಾಗಿರುವದು. ನಾವು ಆ ಮಗ್ಗಲಿನಲ್ಲಿ ಮಧ್ಯರಾತ್ರಿಯಲ್ಲಿ ತೊಟ್ಟಿಲೊಳಗೆ ಕುಳಿತು ದುರ್ಗದ ಮೇಲಿಂದ ಕೆಳಗೆ ಇಳಿಯೋಣ. ನಮ್ಮ ಕೆಲಸವು ಏನೂ ಗದ್ದಲವಿಲ್ಲದೆ—ಸಾಧಿಸಿದರಂತೂ ಸರಿಯೆ. ಸಾಧಿಸದೆ ಏನಾದರೂ ಅನರ್ಥವು ಒದಗಿದರೆ, ನಮ್ಮ ನಾಶವಾದೀತು. ಆಗಲೊಲ್ಲದೇಕೆ? ಸ್ವಾಮಿಕಾರ್ಯದಲ್ಲಿ ಮಡಿಯುವ ನಮ್ಮ ದೇಹದ ಸಾರ್ಥಕತೆಯಾದರೂ ಆದೀತು! ಇದು ಕಡೆಯ ಯತ್ನವು. ಸುಮ್ಮನೆ ನಲವತ್ತು ಸಾವಿರ ಸೈನ್ಯದ ಸಂಗಡ ಕಾದಿ ರಾಜಾರಾಮ ಪ್ರಭುವನ್ನು ಈ ಜಿಂಜೀಕೋಟೆಯಿಂದ ಪಾರುಮಾಡಿ ಮಹಾರಾಷ್ಟ್ರಕ್ಕೆ ಕಳಿಸುವದಕ್ಕೆ ಆಯಾಸಪಡುವದು, ನಮ್ಮ ಈ ಸಾಹಸದಿಂದ ತಪ್ಪಿದರೆ ತಪ್ಪುವಹಾಗಿದೆ!

ರಾಜಕುವರ—ಸರಿ ಸರಿ! ನಿನ್ನ ಮಾತನ್ನು ನಾನು ಒಪ್ಪಿಕೊಂಡೆನು. ಇಂದು ಮಧ್ಯ ರಾತ್ರಿಯಾದ ಕೂಡಲೆ ಈ ಪಿಲಾಜಿಯನ್ನು ಕರಕೊಂಡು ನಿನ್ನ ಸಂಗಡ ಬರುತ್ತೇನೆ.

ಮಧ್ಯರಾತ್ರಿಯ ಸಮಯವು ಒದಗಿತು. ಅಲ್ಲಿಯವರೆಗೆ ರಾಜಕುವರಳು ಈಶ್ವರಾ ರಾಧನೆಯಲ್ಲಿ ತೊಡಗಿದ್ದಳು. ಅದು ಸಾಕ್ಷಾತ್ ಪರಮೇಶ್ವರನ ಪ್ರಾಪ್ತಿಗಾಗಿ ಪಾರ್ವತಿಯು ತಪಸ್ಸನ್ನಾಚರಿಸುವಂತೆಯೂ, ನವವಧುವು ಗೌರೀಹರನನ್ನು ಪೂಜಿಸುವಂತೆಯೂ ತೋರಿತು. ಖಂಡೋಬನು ತೊಟ್ಟಿಲಗಳು ಸಿದ್ಧವಾದ ಸುದ್ದಿಯನ್ನು ಹೇಳಲು, ರಾಜಕುವರಳು ಕೂಡಲೆ ಮಗನನ್ನು ಕರಕೊಂಡು ಖಂಡೋಬನನ್ನು ಹಿಂಬಾಲಿಸಿದಳು. ತೀರ ಚಿಕ್ಕವನಾದ ಪಿಲಾಜಿಯು ಕೂಡ ಸದ್ದಿಲ್ಲದೆ ಆನಂದದಿಂದ ತೊಟ್ಟಿಲೊಳಗಿಂದ ತಾಯಿಯ ಸಂಗಡ ದುರ್ಗವನ್ನು ಇಳಿಯಹತ್ತಿದನು. ಎಲ್ಲರೂ ಸುರಕ್ಷಿತವಾಗಿ ದುರ್ಗವನ್ನು ಇಳಿದರು. ಅವರೆಲ್ಲರೂ ಗಣೋಜಿ ಶಿರ್ಕೆಯ ದಂಡಿನ ಅಧಿಕಾರಿಗಳಂತೆ ಪೋಷಾಕು ಹಾಕಿಕೊಂಡಿದ್ದ ರಿಂದ, ಕಾವಲುಗಾರರಿಗೆ ಅವರ ಸಂಶಯವು ಬರಲಿಲ್ಲ. ಇವರು ದುರ್ಗದ ಬುಡವನ್ನು ನಿರೀಕ್ಷಿಸಲು ಹೋಗಿರಬಹುದೆಂದು ತಿಳಿದು ಕಾವಲುಗಾರರು ಬಾಗಿ ರಾಮು ರಾಮು ಮಾಡತೊಡಗಿದರು. ಹೀಗೆ ಯುಕ್ತಿಯಿಂದ ಖಂಡೋಬನು ರಾಜಕುವರಳೊಡನೆ ಶಿರ್ಕೆಯ

ಡೇರೆಯ ಬಾಗಿಲಿಗೆ ಬಂದನು. ಆಗ ಆತನು ತನ್ನ ಸೇವಕರಿಗೆ ಆಯುಧಗಳನ್ನು ಮುಚ್ಚಿ ಕೊಂಡು ಒತ್ತಟ್ಟಿಗೆ ಅಡಗಿಕೊಂಡಿರುವಂತೆ ಸೂಚಿಸಿ, ಡೇರೆಯ ಬಿಚ್ಚುಗತ್ತಿಯ ಕಾವಲು ಗಾರರನ್ನು ಕುರಿತು ದಿಟ್ಟತನದಿಂದ—''ಹೋಗಿರೋ ಯಾರಾದರೂ, ಒಳಗೆ ಗಣೋಜಿರಾವ ಶಿರ್ಕೆಯವರ ಬಳಿಗೆ ಹೋಗಿ ನಿಮ್ಮ ಖಂಡೋಜಿ ಚೀಟನೀಸನು ನಿಮ್ಮ ಕುಟುಂಬವನ್ನು ಕರಕೊಂಡು ಬಂದಿರುತ್ತಾನೆಂತಲೂ, ನಿಮ್ಮನ್ನು ಹೊರಗೆ ಕರೆಯುತ್ತಾನೆಂತಲೂ ಹೇಳಿರಿ.''

ಖಂಡೋಜಿ ಚಿಟನೀಸನೆಂಬ ಹೆಸರನ್ನೂ, ಆತನು ದುರ್ಗದಿಂದ ಇಳಿದು ಬಂದಿರುತ್ತಾ ನೆಂಬದನ್ನೂ ಕೇಳಿ ಕಾವಲುಗಾರರ ಎದೆಗಳು ದಸಕ್ಕೆಂದವು. ಕೆಲವರಂತು ಅವಸರದಿಂದ ಒಳಗೆ ಹೋಗಿ ಗಣೋಜಿರಾವ ಶಿರ್ಕೆಗೆ ಈ ಸುದ್ದಿಯನ್ನು ಹೇಳಿದರು. ಗಣೋಜಿರಾಯನು ಅದೇ ಬಂದು ಪಲ್ಲಂಗದ ಮೇಲೆ ಅಡ್ಡಾಗಿದ್ದನು. ಆತನು ''ಖಂಡೋಜಿಯು ಬಾಯಿಸಾಹೇಬರನ್ನು ಕರಕೊಂಡು ಬಂದಿರುತ್ತಾನೆಂ''ಬದನ್ನು ಸೇವಕರು ಹೇಳಿದ್ದನ್ನು ಕೇಳಿದ ಕೂಡಲೆ ಚಟ್ಟನೆ ಪಲ್ಲಂಗದಿಂದ ಎದ್ದು, ಹಾಗೆಯೇ ಬರಿಮೈ ಬಕ್ಕನೆತ್ತಿಯಿಂದ ಹೊರಗೆ ಬಂದನು. ಖಂಡೋಬನು ನಿರ್ಭಯದಿಂದ ನಿಂತದ್ದನ್ನು ನೋಡಿ ಗಣೋಜಿಯು ಮೆಟ್ಟಿ ಬಿದ್ದು ಅವನನ್ನು ಕುರಿತು—

ಗಣೋಜಿ—ಯಾರು ಖಂಡೋಜಿರಾವ, ದುರ್ಗವನ್ನಿಳಿದು ಬಂದಿರೋ? ಅಥವಾ ಏನಾದರೂ ಮೋಸಮಾಡಿ ನನ್ನ ಡೇರೆಯ ಬಾಗಿಲಿಗೆ ಬಂದಿರೋ?

ಖಂಡೋಜಿರಾವ—ಛೇ ಛೇ ! ಗಣೋಜಿರಾವ, ಮರೆ ಮೋಸವೇನೂ ಇಲ್ಲ, ನಾನು ದುರ್ಗವನ್ನು ಇಳಿದು ಬಂದು, ಹಿಂದಕ್ಕೆ ಆ ಅರಣ್ಯದೊಳಗಿನ ಗಾಡಿಯಲ್ಲಿ ನಿಮ್ಮ ಮುಂದೆ ನಿಶ್ಯಸ್ತ್ರನಾಗಿ ನಿಂತಂತೆ ಈಗಲಾದರೂ ನಿಂತುಕೊಂಡಿರುತ್ತೇನೆ. ಈಗ ನೀವು ನನ್ನ ಮಾತನ್ನಾದರೂ ನಡಿಸಿರಿ; ಇಲ್ಲವೆ ಒಂದೇ ಹೊಡೆತಕ್ಕೆ ನನ್ನ ರುಂಡವನ್ನು ತುಂಡರಿಸಿ, ನಿಮ್ಮ ಸಿಟ್ಟನ್ನಾದರೂ ತೀರಿಸಿಕೊಳ್ಳಿರಿ.

ಗಣೋಜಿ—ಇಂದು ಹೀಗೆ ಜೀವದ ಹಂಗು ದೊರೆಯಲಿಕ್ಕೆ ಕಾರಣವೇನು?

ಖಂಡೋಜಿ—ಅದಕ್ಕೆ ಕಾರಣಗಳು ಎರಡು ಇರುವವು. ನನ್ನ ಒಡೆಯನ ಪ್ರಾಣ ರಕ್ಷಣವಾಗ ಬೇಕೆಂಬದು ಒಂದನೆಯ ಕಾರಣವು; ಹಿಂದಕ್ಕೆ ಆ ದೇವಸ್ಥಾನದಲ್ಲಿ ನೀವು ನನ್ನನ್ನು ಕೊಲ್ಲಲು ಪ್ರತಿಜ್ಞೆ ಮಾಡಿದಂತೆ, ಆ ಪ್ರತಿಜ್ಞೆಯನ್ನು ಪೂರ್ಣ ಮಾಡಲಿಕ್ಕೆ ನಿಮಗೆ ಆಸ್ಪದವು ದೊರೆಯಬೇಕೆಂಬದು ಎರಡನೆಯ ಕಾರಣವು.

ಗಣೋಜಿ—ನನ್ನಿಂದ ನಿನ್ನ ಒಡೆಯ ಪ್ರಾಣರಕ್ಷಣವಾಗುವದಂತು ಅಸಂಭವವೇ ಸರಿ; ಆದರೆ ಎರಡನೆಯವರ ಸಂಸಾರಗೇಡು ಮಾಡುವ ನಿನ್ನಂಥ ನೀಚನಿಗೆ ದೇಹಾಂತ ಪ್ರಾಯಶ್ಚಿತ್ತವೇ ಯೋಗ್ಯವಾದದ್ದು. ಖಂಡೋಜೀ, ಸ್ವಾಮಿಭಕ್ತನೆನಿಸಿಕೊಳ್ಳುವ ನಿನಗೆ ಪ್ರತ್ಯಕ್ಷ ಶಿವಾಜಿಯ ಮಗಳನ್ನು, ಈ ದುಷ್ಟ, ರಾಜಕುವರಳನ್ನು ದುರ್ಭಾವನೆಯಿಂದ ನೋಡಿ, ಆಕೆಯ ಪತಿಯಾದ ನನ್ನನ್ನು ಸಂತಾಪಾಗ್ನಿಯಿಂದ ದಹಿಸುವದು ಯೋಗ್ಯವೇ? ನೀನು ರಾಜಕುವರಳನ್ನು ನಿಜವಾಗಿ ಒಡಹುಟ್ಟಿದವಳೆಂದು ಭಾವಿಸುವೆಯಾ? ನನ್ನ ಸಂತಾಪ

ವನ್ನು ಈಗ ಮತ್ತೆ ಯಾಕೆ ಹೆಚ್ಚಿಸುವೆ? ಯಾರಿರುವಿರಲ್ಲಿ? ನನ್ನ ಖಡ್ಗವನ್ನು ಕೊಡಿರಿ; ಈಗಲೇ ಈ ದುಷ್ಟನ ಶಿರಚ್ಛೇದವನ್ನು ಮಾಡಿಬಿಡುವೆನು!

ಖಂಡೋಜಿ (ನಿರ್ಭಯದಿಂದ)—ಗಣೋಜಿರಾವ, ನಿಮ್ಮ ಖಡ್ಗವೇತಕ್ಕೆ ಬೇಕು? ನನ್ನ ಖಡ್ಗವನ್ನು ತಕ್ಕೊಳ್ಳಿರಿ. ಇನ್ನು ಕ್ಷಣವಾದರೂ ವಿಲಂಬಮಾಡದೆ ನನ್ನ ಶಿರಸ್ಸನ್ನು ತುಂಡರಿಸಿ; ಆದರೆ ಶಿರ್ಕೆವೀರಾ, ನನ್ನನ್ನು ತುಂಡರಿಸುವ ಮೊದಲು, ನಾನು ಸ್ಪಷ್ಟವಾಗಿ ಆಡುವ ಮಾತು ಗಳನ್ನು ಕೇಳಿಕೊಳ್ಳು. ತರುಣ ತರುಣಿಯರು ಯಾವಾಗಲೂ ನಿಕಟ ಸಂಬಂಧವನ್ನು ತಾಳುವದ ರಿಂದ, ಪ್ರಸಂಗದಲ್ಲಿ ಅವರ ಮನಸ್ಸುಗಳು ಕರಗಬಹುದೆಂಬ ನಿಮ್ಮ ವ್ಯಾವಹಾರಿಕ ಸಿದ್ಧಾಂತವು ೧೦೦ರಲ್ಲಿ ೯೯ ಅಂಶ ನಿಜವಾಗಿರಬಹುದು. ಆದರೆ ಒಂದು ಅಂಶದಲ್ಲಿಯಾದರೂ, ತರುಣ ತರುಣಿಯರು ನೀಚ ವೈಷಯಿಕವಲ್ಲದ ಉದಾತ್ತ ಭಾವನೆಯಿಂದ ಪ್ರೇರಿತ ರಾಗಿ, ಶುದ್ಧಾಂತಃಕರುಣವುಳ್ಳವರಾಗಿರುವ ಸಂಭವವು ಇರುವದೆಂಬ ಕಲ್ಪನೆಯು ಕೂಡ ನಿಮ್ಮ ವಿಚಾರವನ್ನು ಸ್ಪರ್ಶಿಸದೆಯಿದ್ದದ್ದು, ನಿಮ್ಮ ಅನುಭವಕ್ಕೂ, ವಯಸ್ಸಿಗೂ, ಯೋಗ್ಯತೆಗೂ ಲಾಂಛನವೇ ಸರಿ. ಗಣೋಜಿರಾವ, ಮೂರುವರೆ ಮೊಳ ಶರೀರದ ಸೌಂದರ್ಯಕ್ಕೆ ಮರುಳಾಗುವ ಅಧಮರೇ ಜಗತ್ತಿನಲ್ಲಿ ತುಂಬಿರುತ್ತಾರೆಂಬ ದುರ್ವಿಚಾರವನ್ನು ನೀವು ಬಿಟ್ಟು ಬಿಡಿರಿ. ನಿಮ್ಮ ಸಹವಾಸದಲ್ಲಿ ಒಂದು ತಪಸ್ಸನ್ನು ಕಳೆದಿರುವ ನಮ್ಮ ಈ ಪೂಜ್ಯ ರಾಜ ಕುವರಳ ಶುದ್ಧಾಂತಃಕರಣವನ್ನು ಅರಿಯದಿರುವ ನಿಮ್ಮ ಸದಸದ್ವಿವೇಕಕ್ಕೆ ಬೆಂಕಿಯ ಹಚ್ಚಲಿ! ನಿಮ್ಮ ಧರ್ಮಪತ್ನಿಯಲ್ಲಿ ಒಂದು ಸಂತಾನವಾಗಿದ್ದು ಆಕೆಯ ನಿರ್ಮಲಾಂತಃ ಕರುಣದಿಂದ ಮೇಲೆ ನಿಮ್ಮ ಶೀಲದ, ನಿಮ್ಮ ಸದಾಚರಣೆಯ, ನಿಮ್ಮ ಪ್ರೇಮದ, ನಿಮ್ಮ ವಿಶ್ವಾಸದ ಪರಿಣಾಮವು ಏನೂ ಆಗಿರಲಿಕ್ಕಿಲ್ಲವೆ? ನಿಮ್ಮ ಧರ್ಮಪತ್ನಿಯ ಮೇಲೆಯೂ, ಶಿವಪುತ್ರಿಯ ಮೇಲೆಯೂ, ನನ್ನ ಆದರಕ್ಕೆ ಪಾತ್ರಳಾದ ಈ ರಾಜಕುವರಳ ಮೇಲೆಯೂ, ವ್ಯಭಿಚಾರದ ಆರೋಪವೇ? ಇವೇ ಕೈಗಳಿಂದ ನಾನು ರಾಜಕುವರಳನ್ನು ಎತ್ತಿ ಆಡಿಸಿದ್ದೇನೆ. ಇನ್ನು ಬಹಳ ಮಾತುಗಳೇಕೆ? ಇಗೋ ತುಂಡರಿಸಿರಿ ಈ ರುಂಡವನ್ನು! ಇಂದಿಗೆ ನನ್ನ ಸ್ವಾಮಿ ಕಾರ್ಯದ ಪರಿಸಮಾಪ್ತಿಯು ಆಗಿಹೋಗಲಿ!!

ಈ ಮೇರೆಗೆ ನುಡಿದು ಖಂಡೋಜಿಯು ಖಡ್ಗವನ್ನು ಮುಂದೆ ಮಾಡಿ ತನ್ನ ಶಿರಸ್ಸನ್ನು ಬಗ್ಗಿಸಿ ನಿಂತುಕೊಳ್ಳಲು, ಅತ್ತ ರಾಜಕುವರಳು ಗಂಭೀರ ಧ್ವನಿಯಿಂದ ತನ್ನ ಮೈದುನನಾದ ರಾಣೋಜಿ ಶಿರ್ಕೆಯನ್ನು ಕುರಿತು— "ಪೂಜ್ಯ ಮೈದುನರೇ, ನನ್ನ ಈ ಅಣ್ಣನ ದೇಹದ ಅಂತವು ನಮ್ಮ ಪೂಜ್ಯ ಶಿರ್ಕೆಕುಲಭೂಷಣರಿಂದ ಆಗುವದರೊಳಗಾಗಿ ನನ್ನ ರುಂಡವನ್ನೂ, ನನ್ನ ಕೂಸಾದ ಪಿಲಾಜಿ ಶಿರ್ಕೆಯ ರುಂಡವನ್ನೂ ನೀವು ತುಂಡರಿಸಿರಿ. ಶಿವಪ್ರಭುವಿನ ಪುಣ್ಯವು ಇಲ್ಲಿಗೆ ನಷ್ಟವಾಗಿ ಹೋದದ್ದರಿಂದ, ಆತನ ಮಕ್ಕಳು ವ್ಯಭಿಚಾರದಂಥ ನೀಚಕಾರ್ಯಕ್ಕೆ ಮನಸ್ಸು ಮಾಡಹತ್ತಿರುವರು! ಹಾಯ್! ಹಾಯ್! ಮಹಾರಾಷ್ಟ್ರದ ದುರ್ದೈವವೇ, ಇನ್ನೂ ಏನೇನು ಅನರ್ಥಗಳನ್ನುಂಟು ಮಾಡುವೆ? ಶಿವಪ್ರಭುವಿನ ಸಂತತಿಯ ದುರ್ದೆಸೆಯನ್ನೂ, ದುರ್ಲೌಕಿಕವನ್ನೂ ಎಲ್ಲಿಯುವರೆಗೆ

ಮಾಡುವೆ? ಹ! ಶಿರ್ಕೆ ಕುಲಭೂಷಣಾ, ಇನ್ನು ನನ್ನ ನೀಚಬಾಳಿನ ಪರಿಸಮಾಪ್ತಿಯನ್ನು ಇಂದು ಮಾಡಿಬಿಡಿರಿ,'' ಎಂದು ನುಡಿದು ತನ್ನ ಖಡ್ಗವನ್ನು ರಾಣೋಜಿಯ ಮುಂದೆ ಚಾಚಿ, ತನ್ನ ಮಗುವನ್ನು ಮುಂದಕ್ಕೆ ಸರಿಸಿ, ತಾನು ತಲೆಬಾಗಿಸಿಕೊಂಡಳು. ಅದನ್ನು ನೋಡಿ, ಬರಿಯ ರಾಣೋಜಿಯ ಹೃದಯವಷ್ಟೇ ಅಲ್ಲ, ಗಣೋಜಿಯ ಹೃದಯವೂ ಕರಗಿ ನೀರಾಯಿತು. ಆಗ ರಾಣೋಜಿಯು ತನ್ನ ಅಣ್ಣನನ್ನು ಕುರಿತು—ಗಣೋಜಿರಾವ, ಇಲ್ಲಿಗೆ ನಮ್ಮ ನೀಚತನದ ಇತಿಹಾಸವು ಮುಗಿಯಲಿ. ನಮ್ಮ ಶತ್ರುವಾದ ಸಂಭಾಜಿಯ ಕೊಲೆಯಾದದ್ದರಿಂದ ನಮ್ಮ ಸೇಡು ತೀರಿದಹಾಗಾಗಿರುತ್ತದೆ. ಇನ್ನು ದೀರ್ಘ ದ್ವೇಷಮಾಡಿ ಶಿವಪ್ರಭುವಿನ ಸಂತತಿಯನ್ನು ಛೇದಿಸುವದು ಯುಕ್ತವಾಗಿ ತೋರುವದಿಲ್ಲ. ನೋಡಿದಿರಾ ಅತ್ತಿಗೆಯ ಈ ದೈವೀತೇಜಸ್ಸನ್ನು! ಆಕೆಯ ನಿರ್ಮಲ ಹೃದಯವು ಅಚಲವಾದ ಧೈರ್ಯರೂಪದಿಂದ ಹ್ಯಾಗೆ ಬೆಳಗುತ್ತದೆ ನೋಡಿರಿ. ನಿಮ್ಮ ಎದುರಿಗೆ ನಿಂತಿರುವ ಶುದ್ಧಾಂತಃಕರಣದ ಖಂಡೋಜಿಯ ಅಚ್ಚಳಿಯದ ಸ್ವಾಮಿನಿಷ್ಠೆಯನ್ನು ಸ್ಮರಿಸಿ ನಮ್ಮ ಕಲುಷಿತ ಮನಸ್ಸುಗಳನ್ನು ಪವಿತ್ರಮಾಡಿ ಕೊಳ್ಳೋಣ! ಅತ್ತಿಗೆಯೇ, ನಿನಗೆ ನನ್ನ ನಮಸ್ಕಾರವು! ನನ್ನ ಅಪರಾಧಗಳನ್ನು ಕ್ಷಮಿಸಿ, ಸೀತಾಮಾತೆಯು ಲಕ್ಷ್ಮಣನನ್ನು ಅನುಗ್ರಹಿಸಿದಂತೆ ನೀನು ನನ್ನನ್ನು ಅನುಗ್ರಹಿಸು! ಪಿಲಾಜಿರಾವ, ಅಂಕುರರೂಪ ವಾಗಿರುವ ನಿಮ್ಮ ಅಭಿವೃದ್ಧಿಯಿಂದ ನಮ್ಮ ಶಿರ್ಕೆ ಕುಲವು ಪವಿತ್ರವಾಗಲಿ! ಎಂದು ನುಡಿದು ರಾಣೋಜಿಯು ರಾಜಕುವರಳನ್ನು ವಂದಿಸಿ ಪಿಲಾಜಿಯನ್ನು ಎತ್ತಿಕೊಂಡನು!

ಹೀಗೆ ತನ್ನ ತಮ್ಮನ ಕಠಿಣ ಹೃದಯವು ಕೂಡ ಕರಗಿದ್ದನ್ನು ನೋಡಿ, ಮೊದಲಿಗೇ ಹೃದಯವು ಕರಗಿ ನೀರಾಗಿ ಹೋಗಿದ್ದ ಗಣೋಜಿಯು ಖಂಡೋಜಿರಾಯನನ್ನು ಕುರಿತು — ''ಖಂಡೋಜಿರಾವ, ನನ್ನ ಅಪರಾಧಗಳನ್ನು ಕ್ಷಮಿಸಿರಿ. ನನ್ನನ್ನು ಕ್ಷಮಿಸುವಂತೆ ರಾಜ ಕುವರಳನ್ನು ನೀವು ಪ್ರಾರ್ಥಿಸಿರಿ. ಇಂದಿಗೆ ಶಿವಪ್ರಭುವಿನ ವಂಶದ ಮೇಲಿನ ನಮ್ಮ ಸಿಟ್ಟು ಇಳಿಯಿತು. ನೀವೂ ಸಂತಾಜಿ ಘೋರಪಡೆ, ಧನಾಜಿ ಜಾಧವ ಮೊದಲಾದ ಮಹಾರಾಷ್ಟ್ರ ವೀರರೂ ಸ್ವದೇಶದ ಸ್ವಾತಂತ್ರ್ಯ ರಕ್ಷಣಕ್ಕಾಗಿಯೂ, ಶಿವಪ್ರಭುವಿನ ವಂಶದ ಸಂರಕ್ಷಣ ಕ್ಕಾಗಿಯೂ ಕಷ್ಟಪಡುವದನ್ನು ನೋಡಿ ಪುರುಷರೆನಿಸುವ ನಮಗೆ ಬಹಳ ನಾಚಿಕೆ ಬಂದಿದೆ! ಗಣೋಜಿಯು ತನ್ನ ಬಂಧುವಿನೊಡನೆ ನಿಮ್ಮ ಅಜ್ಞಾಧಾರಕನಾಗಿ ನಿಂತಿರುತ್ತಾನೆಂದು ತಿಳಿಯಿರಿ! ನಿಮ್ಮ ಸ್ವಾಮಿಯ ಹಿತಕ್ಕಾಗಿ ನಾವೇನು ಮಾಡೋಣ ಹೇಳಿರಿ!'' ಎಂದು ನುಡಿಯುತ್ತಿರಲು, ಖಂಡೋಜಿಯು ಅತ್ಯಾದರದಿಂದ— ''ಗಣೋಜಿರಾವ, ಇಷ್ಟರಮಟ್ಟಿಗೆ ನಮ್ಮ ಮೇಲೆ ನಿಮ್ಮ ಅನುಗ್ರಹ ವಿದ್ದರೆ, ನಿಮ್ಮ ಘೋರ ಪ್ರತಿಜ್ಞೆಯನ್ನು—ಶಿವಪ್ರಭುವಿನ ವಂಶವನ್ನು ನಿರ್ವಂಶವಾಗ ಮಾಡುವೆವೆಂಬ ದುಷ್ಟ ಪ್ರತಿಜ್ಞೆಯನ್ನು—ಭಂಗಗೊಳಿಸಿ ಕೊಂಡು, ರಾಜಾರಾಮ ಪ್ರಭುವನ್ನು ಜಿಂಜಿ ಕೋಟೆಯಿಂದ ಮುಕ್ತಮಾಡಿ ಮಹಾರಾಷ್ಟ್ರಕ್ಕೆ ದಾಟಹಾಕಿರಿ'' ಎಂದು ಪ್ರಾರ್ಥಿಸಲು, ಗಣೋಜಿಯೂ, ರಾಣೋಜಿಯೂ, ಅದಕ್ಕೆ ಒಪ್ಪಿ ಕೊಂಡರು! ಕೂಡಲೇ ಖಂಡೋಜಿಯ ಸಂಕೇತದಿಂದ ಜಿಂಜಿ ಕೋಟೆಯ ಮೇಲಿಂದ

ತೊಟ್ಟಿಲುಗಳು ಇಳಿದು ಬರಹತ್ತಿದವು. ರಾಜಾರಾಮನೇ ಮೊದಲಾದ ಯಾವತ್ತು ರಾಜ ಪರಿವಾರವು ಶಿರ್ಕೆ ಸರದಾರನ ಡೇರೆಯ ಬಾಗಿಲ ಮುಂದೆ ಬಂದು ನಿಂತುಕೊಂಡಿತು. ಅಣ್ಣನನ್ನು ನೋಡಿ ರಾಜಕುವರಳ ಕಣ್ಣಲ್ಲಿ ಆನಂದಾಶ್ರುಗಳು ಉದರಹತ್ತಿದವು. ಶಿರ್ಕೆ ಬಂಧುಗಳು ಆ ರಾಜಪರಿವಾರವನ್ನು ಸತ್ಕರಿಸಿ, ಎರಡುದಿನ ತಮ್ಮಲ್ಲಿ ಅವರನ್ನು ಗುಪ್ತವಾಗಿ ಇಟ್ಟುಕೊಂಡು ಯೋಗ್ಯ ಸಂಧಿಯನ್ನು ಸಾಧಿಸಿ ಯಾವತ್ತು ಪರಿವಾರವನ್ನು ವೇಷಾಂತರದಿಂದ ಮಹಾರಾಷ್ಟ್ರಕ್ಕೆ ಮುಟ್ಟಿಸಿದರು. ಈ ಗುಪ್ತ ತಂತ್ರದ ಸುದ್ದಿಯು ಯಾವ ಮೊಗಲ ಸರದಾರರಿಗೂ ಹತ್ತದೇ ಇದ್ದದ್ದರಿಂದ ಕೆಲವು ದಿವಸ ಹಾಗೆಯೇ ಅವರು ಕೋಟೆಯನ್ನು ಬಲವಾಗಿ ಮುತ್ತಿಕೊಂಡಿದ್ದರು. ಇತ್ತ ರಾಜಾರಾಮನೇ ಮೊದಲಾದ ಯಾವತ್ತು ರಾಜಪರಿವಾರವು ಸುರಕ್ಷಿತವಾಗಿ ಸಾತಾರೆಯನ್ನು ಸೇರಿತು!

ಆಗ ರಾಮಚಂದ್ರಪಂತನೇ ಮೊದಲಾದ ಮಹಾರಾಷ್ಟ್ರ ವೀರರಿಗೂ, ಮುತ್ಸದ್ದಿಗಳಿಗೂ ಆದ ಆನಂದವನ್ನು ವರ್ಣಿಸಲಸಾಧ್ಯವು. ಅವರು ಬಹುದೊಡ್ಡ ಸಮಾರಂಭದಿಂದ ರಾಜಾರಾಮನೇ ಮೊದಲಾದ ರಾಜಪರಿವಾರವನ್ನು ಪಟ್ಟಣದಲ್ಲಿ ಮೆರಿಸುತ್ತ ಕರತಂದರು. ಅಂದಿನ ದರ್ಬಾರವು ಬಹು ವಿಧದಿಂದ ಅಲಂಕರಿಸಲ್ಪಟ್ಟಿತ್ತು. ರಾಜಾರಾಮ ಮಹಾರಾಜರು ಶೃಂಗರಿಸಿದ ಆನೆಯ ಮೇಲಿನ ಅಂಬಾರಿಯಲ್ಲಿ ಕುಳಿತಿದ್ದು, ಸೇನಾಪತಿಯ ಸ್ಥಳದಲ್ಲಿ ರಾಮಚಂದ್ರಪಂತನು ಆನೆಯ ಮಸ್ತಕವನ್ನು ಆರೋಹಿಸಿದ್ದನು. ಆತನು ಕೈಯಲ್ಲಿ ಚಾಮರವನ್ನು ಹಿಡಿದಿದ್ದನು; ಮಹಾರಾಜರ ಹಿಂದೆ ಮುಖ್ಯ ಪ್ರಧಾನನಾದ ನಿಲೋಪಂತನಿಂದ ಸಹಿತವಾಗಿ ಅಷ್ಟಪ್ರಧಾನರು ಚಾಮರಗಳನ್ನು ಹಿಡಕೊಂಡು ಕುಳಿತಿದ್ದರು. ಮಹಾರಾಜರ ಹಿಂಬದಿಯಲ್ಲಿ ರಾಜಪುರೋಹಿತರು ಆನೆಯನ್ನೇರಿ ಸಾಗಿ ಬರುತ್ತಲಿದ್ದರು. ಅಗ್ರಭಾಗದಲ್ಲಿ ಆನೆಯ ಮೇಲೆ ಶ್ರೀಸಮರ್ಥ ರಾಮದಾಸ ಸ್ವಾಮಿಗಳ ಕೋವಿಯ ನಿಶಾನೆಯೂ, ಜರಿಪಟಕಾ ನಿಶಾನೆಯೂ, ಗಾಂಭೀರ್ಯದಿಂದ ಮರಾಟರ ಅಭಿಮಾನದ್ಯೋತಕವಾಗಿ ಒಪ್ಪುತ್ತಿದ್ದವು. ಅದರ ಸುತ್ತುಮುತ್ತು ಅಶ್ವಾರೂಢರಾದ ಮಹಾ ಮಹಾ ವೀರರೂ ಪ್ರತಾಪಯುತರಾಗಿ ಸಾಗಿ ಬರುತ್ತಲಿದ್ದರು. ಅವರಲ್ಲಿ ಶಂಕರಾಜಿ ನಾರಾಯಣ, ಪರಶುರಾಮಪಂತ ಪ್ರತಿನಿಧಿ, ಕಾನ್ಹೋಜಿ ಆಂಗ್ರೆ, ಆಟೋಳೆ, ದಾಬಡೆ, ಭಾಂಡವಲಕರ ಪವಾರ, ಪಾಟಣಕರ ಮುಂತಾದ ಸರದಾರರು ಮುಖ್ಯ ರಾಗಿದ್ದರು. ಸಂತಾಜಿ ಘೋರಪಡೆಯಂಥ ವೀರಗ್ರಾಣಿಯು ಇಲ್ಲದ್ದರಿಂದ ಸಮಾರಂಭಕ್ಕೆ ಕೊರತೆಯುಂಟಾಗಿತ್ತು. ವೀರ ಶಿರೋಮಣಿಯಾದ ಧನಾಜಿ ಜಾಧವನು ಕರ್ನಾಟಕದಲ್ಲಿ ರಾಜಾರಾಮನನ್ನು ಮೊಗಲರು ಬೆನ್ನಟ್ಟಿ ಬಾರದಂತೆ ಅಡ್ಡ ನಿಂತು ಕಾದುತ್ತಿದ್ದರಿಂದ ಆತನು ಬಾರದ್ದರಿಂದಲೂ ಸಮಾರಂಭದಲ್ಲಿ ಕೊರತೆಯುಂಟಾಗಿತ್ತು. ದರ್ಬಾರದ ಬಾಗಿಲಿಗೆ ಬಂದ ಕೂಡಲೇ ರಾಜಕುವರಳು ಅಣ್ಣನಿಗೆ ಮಂಗಲಾರತಿಯನ್ನು ಮಾಡಿದಳು. ಆಕೆಯ ಟೊಂಕದಲ್ಲಿ ಬಿಚ್ಚುಗತ್ತಿಯು ಅಲೆದಾಡುತ್ತಿತ್ತು.

ಮಹಾರಾಜರು ಸಿಂಹಾಸನವೇರಿದ ಕೂಡಲೇ ಯಾವತ್ತೂ ಸರದಾರರೂ ಮುತ್ಸದ್ದಿಗಳೂ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಂಡರು. ಆ ಮಹಾಸಮಾರಂಭವನ್ನು ನೋಡಿ ಮಹಾರಾಷ್ಟ್ರದ ಅಭಿಮಾನಿಗಳ, ಹಾಗು ಮಹಾರಾಷ್ಟ್ರದ ಸ್ವಾತಂತ್ರ್ಯ ರಕ್ಷಣಕ್ಕಾಗಿ ಪರಿಪರಿಯಿಂದ ಕಷ್ಟಪಟ್ಟವರ ಕಣ್ಣುಗಳೊಳಗಿಂದ ಆನಂದಾಶ್ರುಗಳು ಉದುರುತ್ತಲಿದ್ದವು! ನೋಡಿದತ್ತೆಲ್ಲ ಅಂದು ಆನಂದಾಬ್ಧಿಯು ಉಕ್ಕೇರುತ್ತಲಿತ್ತು. ಆಗ ರಾಮಚಂದ್ರ ಪಂತರು ಕೈ ಜೋಡಿಸಿ ಎದ್ದುಬಂದು ಮಹಾರಾಜರನ್ನು ಕುರಿತು – ''ಪ್ರಭುವೇ, ಬಹಳ ಹೇಳುವದೇನು? ಇಂದಿನವರೆಗೆ ಛತ್ರಪತಿಯ ರಾಜ್ಯವನ್ನು ಉಳಿಸಿಕೊಳ್ಳುವದಕ್ಕಾಗಿ ಇಲ್ಲಿ ನೆರೆದಿರುವ ಮಹಾ ಮಹಾ ವೀರರ, ಹಾಗು ಮುತ್ಸದ್ದಿಗಳ ಮುಖಾಂತರವಾಗಿ ನಾವು ಪ್ರಯತ್ನವನ್ನು ಮಾಡಿದೆವು. ಈಶ್ವರ ಕೃಪೆಯಿಂದ ನಮ್ಮೆಲ್ಲರ ಶ್ರಮದ ಸಾರ್ಥಕತೆಯಾಗಿ, ಪ್ರಭುಗಳ ಸಲುವಾಗಿ ರಾಜ್ಯವು ಈ ವರೆಗೆ ನಮ್ಮಿಂದ ರಕ್ಷಿಸಲ್ಪಟ್ಟಿದೆ. ಹೀಗೆ ಬಹು ಕಷ್ಟದಿಂದ ರಕ್ಷಿಸಲ್ಪಟ್ಟಿದ್ದ ಶಿವಪ್ರಭುವಿನ ಪುಣ್ಯರೂಪವಾಗಿದ್ದ ತಮ್ಮ ರಾಜ್ಯವನ್ನು ತಾವು ದಯಮಾಡಿ ಸ್ವೀಕರಿಸಬೇಕು,'' ಎಂದು ನುಡಿಯಲು, ಮಹಾರಾಜರು ಪಂತರ ಈ ನಿಸ್ಪೃಹ ವಾಣಿಯನ್ನು ಕೇಳಿ ಸದ್ಗದಿತ ಕಂಠರಾಗಿ–''ಪಂತರೇ, ಈ ವರೆಗೆ ನೀವೇ ರಾಜ್ಯವನ್ನು ಸಂರಕ್ಷಿಸಿದಿರಿ; ಮುಂದೆಯಾದರೂ ಅದನ್ನು ನೀವೇ ಸಂರಕ್ಷಿಸತಕ್ಕದ್ದು'' ಎಂದು ಹೇಳಿದರು. ಅಷ್ಟರಲ್ಲಿ ಸಂತಾಜಿ ಘೋರಪಡೆಯ ಹೆಂಡತಿಯಾದ ಕಮಲಾಬಾಯಿಯು ಅಕಸ್ಮಾತ್ತಾಗಿ ಪುರುಷವೇಷದಿಂದ ಮುಂದಕ್ಕೆ ಬಂದು ರಾಜಾರಾಮ ಪ್ರಭುವನ್ನು ವಂದಿಸಿ, ಪತಿಯ ಆಜ್ಞೆಯಂತೆ ತನ್ನ ಪತಿಯ ಮರಣವಾರ್ತೆಯನ್ನೂ, ಆತನ ವಿಜ್ಞಾಪನೆಯನ್ನೂ ಸಾದ್ಯಂತವಾಗಿ ಹೇಳಿದಳು. ಅದನ್ನು ಕೇಳಿ ದರ್ಬಾರವು ಶೋಕಮಗ್ನವಾಯಿತು! ಮಹಾರಾಜರು ಕಣ್ಣೀರು ಸುರಿಸಿದರು; ರಾಮಚಂದ್ರಪಂತರು ಪಶ್ಚಾತ್ತಾಪಪಟ್ಟರು. ಆದರೂ ಮಹಾರಾಷ್ಟ್ರ ವೀರಮಂಡಲವು, ಸಂತಾಜಿಯ ಪರಾಕ್ರಮದ ಸ್ಮರಣದಿಂದ ಕರ್ತವ್ಯ ಜಾಗರೂಕವಾಗಿ ಸಂತಾಜಿಯ ವಿಷಯವಾಗಿ ಧನ್ಯವಾದವನ್ನು ಮಾಡಿ, ಕಮಲಾಬಾಯಿಯನ್ನು ಸಮಾಧಾನಗೊಳಿಸಿದರು. ಮಹಾರಾಷ್ಟ್ರ ರಾಜ್ಯ ರಕ್ಷಣದಲ್ಲಿ ಸ್ವಾಮಿಭಕ್ತರಾದ ಮಹಾರಾಷ್ಟ್ರ ವೀರರು ಜೀವದಿಂದ ಇದ್ದರೂ ಸತ್ತ ಹಾಗೆಯೇ ಎಂತಲೂ, ಸ್ವಾಮಿಕಾರ್ಯಕ್ಕಾಗಿ ಸಂತಾಜಿಯ ಹಾಗೆ ಸತ್ತಿದ್ದರೂ ಜೀವದಿಂದ ಇದ್ದಹಾಗೆಯೇ ಎಂತಲೂ ಎಲ್ಲರೂ ಭಾವಿಸಿ ಸಮಾಧಾನ ಮಾಡಿಕೊಂಡರು. ಆಗ ರಾಜಾರಾಮ ಮಹಾರಾಜರ ಸೂಚನೆಯಂತೆ ರಾಜಕುಮಾರಳು ತನ್ನ ಮಗನಾದ ಪಿಲಾಜಿಯನ್ನು ದರ್ಬಾರದ ಜನರ ಸಮಕ್ಷ ತನ್ನ ಪತಿಯಾದ ಗಣೋಜಿರಾವ ಶಿರ್ಕೆಯವರ ಬಗಲಲ್ಲಿ ಕೊಟ್ಟಳು! ಅದನ್ನು ನೋಡಿ ಎಲ್ಲರ ನೇತ್ರಗಳು ಪುನಃ ಆನಂದಾಶ್ರುಪೂರ್ಣವಾದವು!!

**ಸಂಪೂರ್ಣ**

# ಪ್ರಸ್ತಾವನೆ
## (ಮೊದಲನೆಯ ಆವೃತ್ತಿ)

ಶ್ರೀಶೇಷ ಸದ್ಗುರುನಾಥನ ಕೃಪೆಯಿಂದ ಈ ''ಸ್ವರಾಜ್ಯ–ಸುಗಂಧ''ವೆಂಬ ಸ್ವತಂತ್ರವಾದ ಐತಿಹಾಸಿಕ ರಹಸ್ಯಪೂರ್ಣ ಬೋಧಪ್ರದ ಕಾದಂಬರಿಯು, ಎರಡು ತಿಂಗಳಲ್ಲಿ ಬರೆದು ನಿರ್ವಿಘ್ನದಿಂದ ಮುದ್ರಿಸಿ ಪ್ರಸಿದ್ಧವಾದದ್ದಕ್ಕಾಗಿ ನಮಗೆ ಬಹಳ ಸಂತೋಷವಾಗುತ್ತದೆ. ನಮ್ಮ ಸಾಲದ ಹದಿಮೂರು ನೂರು ರೂಪಾಯಿಗಳ ವಾರ್ಷಿಕ ಕಂತವನ್ನು, ಈ ಕಠಿಣ ಕಾಲದಲ್ಲಿ ನಮ್ಮಂಥವರು ಕೂಡಿಸುವದು ಪರಮ ದುಸ್ತರವಾದದ್ದರಿಂದ, ಆದಷ್ಟು ಬೇಗನೆ ಪುಸ್ತಕವು ಹೊರಬೀಳಬೇಕೆಂಬ ಅವಸರದಲ್ಲಿ, ಹಣದ ತೊಂದರೆಯಾಗಿರಲು, ನುಣುಪು ಕಾಗದವನ್ನು ತರಿಸುವ ಗೊಡವಿಗೆ ಹೋಗದೆ, ನಮ್ಮಲ್ಲಿದ್ದ ಉರುಟು ಕಾಗದದಲ್ಲಿಯೇ ಈ ಕಾದಂಬರಿಯನ್ನು ಮುದ್ರಿಸಬೇಕಾದದ್ದು ನಮ್ಮ ಅಸಮಾಧಾನಕ್ಕೆ ಕಾರಣವಾಗಿದೆ; ಆದರೂ ನಮ್ಮವರಾದ ಕನ್ನಡಿಗರ ಮುಂದೆ ನಾವು ಇಂದಿನವರೆಗೆ ನಮ್ಮ ಎಂತಹ ಕೆಲಸವಿಟ್ಟರೂ ಆ ಕಸವನ್ನೇ ರಸಮಾಡಿಕೊಂಡು, ಅವರು ಆ ಕೆಲಸವನ್ನು ಆದರಿಸುತ್ತ ಬಂದರು. ಅದರಂತೆ ಅವರು ಈಗಾದರೂ ನಮ್ಮ ಮೇಲಿನ ಅಭಿಮಾನದಿಂದ ಆದರಿಸಿ, ತಮ್ಮ ಉದಾರಭಾವವನ್ನು ವ್ಯಕ್ತಮಾಡದೆ ಇರಲಾರರೆಂದು ನಾವು ನಂಬಿರುವೆವು; ಯಾಕಂದರೆ, ನಮ್ಮ ಆ ಪ್ರಿಯ ಕನ್ನಡಿಗರು ಈಗ ಎಂಟು–ಹತ್ತು ವರ್ಷಗಳಿಂದ ನಮ್ಮ ಹೊಸ ಕಾದಂಬರಿಗಳ ಹಾದಿಯನ್ನು ನೋಡುತ್ತಿರುವರು.

ಈ ನೂತನವಾದ ಸ್ವತಂತ್ರ ಐತಿಹಾಸಿಕ ಬೋಧಪ್ರದ ಕಾದಂಬರಿಯ ವಿಷಯದಲ್ಲಿ ಎರಡು ಮಾತು ಬರೆಯುವದು ಅವಶ್ಯವಾಗಿದ್ದರೂ, ನಮಗೆ ಬೇರೆ ಪುಸ್ತಕಗಳನ್ನು ಬೇಗನೆ ಬರೆಯುವ ಅವಸರವಿದ್ದದ್ದರಿಂದ, ಈಗ ನಾವು ಒಂದು ಮಾತನ್ನು ಕೂಡ ಬರೆಯುವದಿಲ್ಲ; ಆದರೆ ಈ ಪುಸ್ತಕ ಮೊದಲು ಮಾಡಿಕೊಂಡು, ನಾವು ಇನ್ನು ಮೇಲೆ ಬರೆಯುವ ಪುಸ್ತಕಗಳು, ಸಾಲ ತೀರಿಸುವ ಪುಸ್ತಕಗಳಾಗಿರುವವೆಂಬದನ್ನು ಮಾತ್ರ ನಮ್ಮ ಕನ್ನಡಿಗರಿಗೆ ವಿನಯದಿಂದ ಅರಿಕೆ ಮಾಡಿಕೊಳ್ಳುವೆವು. ನಮಗೆ ಹೋದ ಪುಷ್ಯಮಾಸಕ್ಕೆ ಎಪ್ಪತ್ತು ವರ್ಷಗಳು ತುಂಬಿಹೋದವು; ಆದ್ದರಿಂದ ಕನ್ನಡಿಗರು ನಮ್ಮ ಆ ಸಾಲ ತೀರಿಸುವ ಹೊಸ ಪುಸ್ತಕಗಳನ್ನು, ಹಾಗು ಸಿಲಕು ಇರುವ ನಮ್ಮ ಹಿಂದಿನ ಪುಸ್ತಕಗಳಲ್ಲಿ ತಮಗೆ ಬೇಕಾದವುಗಳನ್ನು ಕೊಂಡು ನಮ್ಮ ಸಾಲವನ್ನು ಬೇಗನೆ ತೀರಿಸಿದರೆ, ನಮ್ಮ ವೃದ್ಧಾಪ್ಯಕಾಲದ ಕಷ್ಟತರವಾದ ಸಂಚಾರದ ಕಾರ್ಯವನ್ನು ಮುಗಿಸಿಬಿಟ್ಟು, ಶೇಷಾಯುಷ್ಯವನ್ನು ಈಶ್ವರಾರಾಧನ, ಅತಿಥಿ ಸೇವೆ, ಗೋಸೇವೆ ಮುಂತಾದ ತಾರಕ ಕಾರ್ಯಗಳನ್ನು ಮಾಡುತ್ತ ಶಾಂತಿದಾಯಕ

ಗಳಾದ ಆಧ್ಯಾತ್ಮಿಕ ಗ್ರಂಥಗಳನ್ನು ಬರೆಯುತ್ತ ಕಳೆದು, ಸ್ವಸ್ಥವಾಗಿ ಮನೆಯಲ್ಲಿರಬೇಕೆಂದು ಮಾಡಿದ್ದೇವೆ. ಈ ನಮ್ಮ ಇಚ್ಛೆಯನ್ನು ಪೂರ್ಣ ಮಾಡುವದಕ್ಕಾಗಿ, ಕನ್ನಡಿಗರನ್ನು ಪ್ರೇರಿಸಲು, ನಾವು ಪರಮೇಶ್ವರನನ್ನು ಅನನ್ಯಭಾವದಿಂದ ಪ್ರಾರ್ಥಿಸುವೆವು.

ಈ ಪ್ರಸ್ತಾವನೆ ಮುಗಿಯುವ ಮೊದಲು, ಈ ಕಾದಂಬರಿ ಬರೆಯುವಾಗ ಒದಗಿದ ಒಂದು ಕೌತುಕದ ಸಂಗತಿಯನ್ನು ಮಾತ್ರ ಇಲ್ಲಿ ಹೇಳದೆ ಇರಲಾರೆವು. ನಾವು ಈಗ ಬರೆದಿರುವ, ಹಾಗೂ ಇನ್ನು ಬೇಗನೆ ಬರೆಯಬೇಕೆಂದು ನಿಶ್ಚಯಿಸಿರುವ ನಾಲ್ಕಾರು ಗ್ರಂಥ ಗಳ ಮುದ್ರಣಕ್ಕಾಗಿ ಹಣ ಕೇಳಬೇಕೆಂದು ಧಾರವಾಡದ ಪ್ರಸಿದ್ಧ ವಕೀಲರಾದ ಮ. ರಾ. ರಾ. ಬಂಡೋಪಂತ ಜೋಗರ ಬಳಿಗೆ ಹೋದೆವು; ಆದರೆ ಅವರು ಮಾಡಿದ ಸಹಾಯ ವನ್ನು ಇಲ್ಲಿ ವಿವರಿಸಿ ಹೇಳುವದಕ್ಕಿಂತ, ಬುದ್ಧಿಶಾಲಿಗಳಾದ ಆ ನಮ್ಮ ವಕೀಲರವರ ಬುದ್ಧಿ ಪ್ರಭಾವದ ಭವ್ಯ ಮಂದಿರದ ಅಂಗಳದಲ್ಲಿ ನಮಗೆ ಈ ಕಾದಂಬರಿಯ ಸಂಬಂಧದ ವಿಷಯದ ಉತ್ತಮ ಸ್ಫೂರ್ತಿಯಾದದ್ದನ್ನು ಕೃತಜ್ಞತೆಯಿಂದ ಉಲ್ಲೇಖಿಸುವದು, ಹೆಚ್ಚು ಮಹತ್ವದ ಸಂಗತಿಯೆಂದು ನಾವು ತಿಳಿಯುವೆವು. ನಮ್ಮ ಬಂಡೋಪಂತರು, ಹಾವನೂರ ಪ್ರಸಿದ್ಧವಾದ ಜೋಗ ಎಂಬ ಶ್ರೀಮಂತ ಮನೆತನದಲ್ಲಿ ಹುಟ್ಟಿದವರು; ಆ ಹಾವನೂರು ನಮ್ಮ ಮಾತಾಮಹರ ಮನೆ; ನಾವು ಮೊದಲು ಅದೇ ಊರಲ್ಲಿ ಸಾಲೆ ಕಲಿತಿದ್ದು, ಅಲ್ಲಿ ನಾವು ಸಾಲೆ ಕಲಿಯುತ್ತಿರುವಾಗ ಬಂಡೋಪಂತರು, ಮೂಗಿನಲ್ಲಿ ಮುರುವು ಚುಚ್ಚಿಕೊಂಡು, ಅಪರೂಪದ ಮುದ್ದು ಕೂಸಾಗಿ ಅದೇ ಸಾಲೆಗೆ ಬರುತ್ತಿದ್ದರು. ಆಗಿನಿಂದಲೂ ಅವರ ತೀಕ್ಷ್ಣ ಬುದ್ಧಿಯು ಜನರ ಪರಿಚಯದ್ದು; ಈಗಿನ ಅವರ ಗೌರವದ ತಾಯಬೇರೋ ಅನ್ನುವಂತೆ, ಆಗ ಬಹುತರ ಎಲ್ಲ ಬ್ರಾಹ್ಮಣರೂ ಇವರನ್ನು ''ಬಂಡುಕಾಕ'' ಎಂದು ಗೌರವಿಸಿ ಕರೆಯುತ್ತಿದ್ದದ್ದು ಕೌತುಕದ ಸಂಗತಿಯೇ ಸರಿ. ಅವರ ಆಗಿನ ಆ ತೀಕ್ಷ್ಣ ಬುದ್ಧಿಯ ಅಂಕುರವೇ, ಅವರ ಹಿರಿಯರಾದ ಅತ್ಯಂತ ಕರ್ಮನಿಷ್ಠರಾದ ನಾನಾರಾಯರೆಂಬ ಧಾರ್ಮಿಕ ಪುರುಷರ ಪುಣ್ಯ ಪ್ರಭಾವದಿಂದ ಈಗ ವೃಕ್ಷವಾಗಿ ಫಲಿಸಿ, ನಮ್ಮಂಥ ಸ್ವಜನರು ಅಭಿಮಾನದಿಂದ ಆಶ್ರಯಿಸಿ ವಿಶ್ರಮಿಸಲಿಕ್ಕೆ ಬರುವ ನೆರಳುಳ್ಳದಾಯಿತೆಂದು ಬರೆಯುವಾಗ ನಮಗೆ ಅಭಿಮಾನವೂ, ಆನಂದವೂ ಉಂಟಾಗುತ್ತಿರುವದು!

ಇಂತಹ ದೈವಶಾಲಿಗಳ ಮನೆಯಿಂದ ನಾವು ಹೊರಬೀಳುತ್ತಿರಲು, ಆಗ ನಾವು ಬರೆಯುತ್ತಿದ್ದ ಈ ಕಾದಂಬರಿಯೊಳಗಿನ 'ರಾಜನಿಷ್ಠೆಯ ವೈಭವ' ಎಂಬ ೧೪ನೇ ಪ್ರಕರಣದ ವಿಷಯದ ಉತ್ತಮ ಸ್ಫೂರ್ತಿಯಾಗಲು, ಕೂಡಲೆ ನಾವು ಅವರ ಮನೆಯ ಹೊರಗಿನ ಅಂಗಳದಲ್ಲಿ ಹಾಕಿದ್ದ ಬೆಂಚಿನ ಮೇಲೆ ಕುಳಿತು, ಬೆಳಗಿನ ಎಂಟುಗಂಟೆಯ ಎಳೆಬಿಸಿಲು, ಮೈಮೇಲೆ ಬಿದ್ದದ್ದನ್ನು ಲಕ್ಷಿಸದೆ, ಹತ್ತು–ಹನ್ನೊಂದು ಗಂಟೆಯ ವರೆಗೆ ಬರೆದು ಆ ಪ್ರಕರಣವನ್ನು ಮುಗಿಸಿಬಿಟ್ಟೆವು. ಆಗ ನಮ್ಮಲ್ಲಿ ಬಂಡೋಪಂತರ ಸ್ಥಾನಮಹಿಮೆಯ ವಿಷಯದಲ್ಲಿ ಅತ್ಯಂತ ಕೃತಜ್ಞತೆಯುಂಟಾಗಲು, ಆ ಕೃತಜ್ಞತೆಯನ್ನು ಅವರ ಸಮಕ್ಷ ವ್ಯಕ್ತಗೊಳಿಸುವದಕ್ಕಾಗಿ

ಅವರನ್ನು ಒಳಗಿನಿಂದ ಕರೆಕಳಿಸಿದೆವು. ಆಗ ನಮ್ಮಿಬ್ಬರಲ್ಲಿ ಆದ ಸಂಭಾಷಣವನ್ನು ಕೆಳಗೆ ಬರೆಯುತ್ತೇವೆ.

ಗಳಗನಾಥ–ಬಂಡೋಪಂತ, ನಿಮ್ಮ ಮನೆಯ ಅಂಗಳದಲ್ಲಿ "ರಾಜ ನಿಷ್ಠೆಯ ವೈಭವ" ವೆಂಬ ಪ್ರಕರಣದ ಉತ್ತಮ ಸ್ಫೂರ್ತಿಯಾದದ್ದಕ್ಕಾಗಿ ನಾನು ನಿಮಗೆ ಅತ್ಯಂತ ಕೃತಜ್ಞ ನಾಗಿರುವೆನು.

ಜೋಗ (ವಿನೋದದಿಂದ)—ನಮ್ಮ ಕಾಂಗ್ರೆಸ್ಸಿಗೆ ರಾಜರ ವಿಷಯದಲ್ಲಿ ಅಷ್ಟು ಆದರ ವಿಲ್ಲದಿಲು ರಾಜನಿಷ್ಠೆಯ ವೈಭವದ ಸಂಬಂಧದ ಸ್ಫೂರ್ತಿಯು ನಮ್ಮ ಅಂಗಳದಲ್ಲಿ ನಿಮಗೆ ಹೇಗೆ ಆಯಿತು?

ಗಳಗನಾಥ–ನಿಮ್ಮ ಕಾಂಗ್ರೆಸ್ಸು ಅರಾಜಕವಲ್ಲವಷ್ಟೆ?

ಜೋಗ–ನಮ್ಮ ಕಾಂಗ್ರೆಸ್ಸು ಅರಾಜಕವೇನೂ ಅಲ್ಲ; ಆದರೆ ವಂಶಪರಂಪರಾಗತ ರಾಜರನ್ನು ಕಾಂಗ್ರೆಸ್ಸು ಅಷ್ಟು ಮನ್ನಿಸುವದಿಲ್ಲ; ಪ್ರಜಾನಿಯುಕ್ತ ಮುಖ್ಯಾಧಿಕಾರಿಯನ್ನು ಕಾಂಗ್ರೆಸ್ಸು ಅಷ್ಟರಮಟ್ಟಿಗೆ ರಾಜನೆಂದು ತಿಳಿಯುತ್ತಿರುವದಷ್ಟೆ!

ಗಳಗನಾಥ–ಸನಾತನಿಗಳಾದ ನಮಗೆ, ವಂಶಂಪರಾಗತ ರಾಜರೂ ಮಾನ್ಯರೇ, ಕಾಂಗ್ರೆಸ್ಸಿನ ಅಷ್ಟರಮಟ್ಟಿಗಿನ ರಾಜರೂ ಮಾನ್ಯರೇ; ಯಾಕಂದರೆ, ಅವರಿಬ್ಬರೂ ಪ್ರಜಾ ಪಾಲಕರೇ ಆದದ್ದರಿಂದ, ಅವರಿಬ್ಬರು ಸೃಷ್ಟಿಯ ಪಾಲಕನೆನಿಸುವ ಶ್ರೀ ವಿಷ್ಣುವಿನ ಸ್ವರೂಪರೇ ಆಗಿರುವರು. ನಾವು ದೇವಾಲಯದೊಳಗಿನ ಶಾಶ್ವತವಾದ ಶ್ರೀ ವಿಷ್ಣುವಿನ ಮೂರ್ತಿಯಲ್ಲಿ ಇಡುವ ಭಕ್ತಿಗಿಂತ, ಹೆಚ್ಚು ಭಕ್ತಿಯನ್ನು, ಅಷ್ಟರಮಟ್ಟಿಗೆ ಗೋಕುಲಾಷ್ಟಮಿಯ ದಿವಸ ಪೂಜಿಸುವ ಶ್ರೀ ವಿಷ್ಣುವಿನ ಅವತಾರವಾದ ಶ್ರೀ ಕೃಷ್ಣನ ಬಾಲಮೂರ್ತಿಯಲ್ಲಿ ಇಡುವೆವು; ಆದ್ದರಿಂದ, ಸನಾತನಿಗಳಿಗೆ ನಿಮ್ಮಂಥ ಕಾಂಗ್ರೆಸ್ಸಿನವರ ಮನೆಯ ಅಂಗಳಗಳು, ರಾಜ ನಿಷ್ಠೆಯ ವಿಷಯದಲ್ಲಿ ಹೆಚ್ಚು ಸ್ಫೂರ್ತಿದಾಯಕಗಳಾಗುವದರಲ್ಲಿ ವಿಶೇಷವೇನೂ ಇಲ್ಲ!

ಹೀಗೆ ನಾನು ಹೇಳಲು, ಜೋಗರವರು ನಗುತ್ತ—"ನೀವು ಹೊರಗೆ ಕುಳಿತಿದ್ದು ನನಗೆ ಗೊತ್ತೇ ಇಲ್ಲ; ಬಹಳ ಸಂತೋಷವು" ಎಂದು ನುಡಿದು, ತಮ್ಮ ಮನೆಯೊಳಗೆ ಹೋಗಲು, ನಾನೂ ನಗುತ್ತ ನನ್ನ ಬಿಡಾರದ ಹಾದಿಯ ಹಿಡಿದೆನು.

ಇದನ್ನಿಲ್ಲಿ ಹೇಳಲು ಕಾರಣವಿಷ್ಟೆ, ನಾನು ಹೋಗುವಾಗ, ಬರುವಾಗ, ಸುಮ್ಮನೆ ಕುಳಿತಾಗ, ದೇವರ ಪೂಜೆಮಾಡುತ್ತಿರುವಾಗ, ಊಟಮಾಡುತ್ತಿರುವಾಗ, ಗೋಸೇವೆ ಮಾಡುತ್ತಿರುವಾಗ, ಬಹಿರ್ದೆಸೆಗೆ ಹೋಗಿರುವಾಗ ಈ "ಸ್ವರಾಜ್ಯ–ಸುಗಂಧ" ಎಂಬ ಕಾದಂಬರಿಯ ವಿಷಯುವೇ ನನ್ನ ಚಿಂತನದ ವಿಷಯವಾಗಿರಲು, ಅಂತರಾತ್ಮನ ಪ್ರೇರಣೆ ಯಿಂದ ಸ್ಥಳ, ಕಾಲ, ಕಾರ್ಯಗಳ ಗೌರವದರ್ಶಿಗಳಾಗಿ ಆಗಾಗ್ಗೆ ಉಂಟಾಗಿರುವ ಸ್ಫೂರ್ತಿ ಗಳ ಪೋಣಿಕೆಯಿಂದ ಈ "ಸ್ವರಾಜ್ಯ– ಸುಗಂಧ"ವೆಂಬ ಕಾದಂಬರಿಯು ಆಗಿರುವದೆಂದು ವಾಚಕರು ತಿಳಿಯಬೇಕು. ಒಟ್ಟಿಗೆ, ಈ ಕಾದಂಬರಿಯು ನಮ್ಮ ಆಶ್ರಯದಾತೃಗಳ ಪುಣ್ಯದ

ಫಲವೆಂದು ನಾವು ಭಾವಿಸುತ್ತೇವೆ. ಯಾಕಂದರೆ, ಉತ್ತಮ ಅಡಿಗೆಯಾಗಲಿಕ್ಕೆ ಉಣ್ಣುವವರ ಪುಣ್ಯವು ಕಾರಣವಾಗಿರುವಂತೆ, ಉತ್ತಮ ಕಾದಂಬರಿಯಾಗಲಿಕ್ಕೆ ನಮ್ಮ ಕನ್ನಡ ವಾಚಕರ ಪುಣ್ಯವೇ ಕಾರಣವಾಗಿರುವಲ್ಲಿ ಸಂಶಯವಿಲ್ಲ!

ಸದ್ಗುರು ಕಾರ್ಯಾಲಯ
ಹಾವೇರಿ
ತಾರೀಖು ೨೨-೭-೧೯೩೮

ಕನ್ನಡಿಗರ ಸೇವಕ
**ವೇ. ತಿ. ಕುಲಕರಣಿ**
ಗಳಗನಾಥ

# ಬೀಜದಕಾಯಿ ಹೀಚಿನಲ್ಲಿ

ಈಗ ಸುಮಾರು ಮುನ್ನೂರು ವರ್ಷಕ್ಕೆ ಹಿಂದಿನ ಮಾತು ಅದು ಮರಾಟರ ಭಾಗ್ಯೋದಯದ ಕಾಲವೆಂದು ಹೇಳಬಹುದು. ಆಗ ಇಡೀ ಮಹಾರಾಷ್ಟ್ರವು ಮುಸಲ್ಮಾನರ ಪೀಡೆಯಿಂದ ಹಣ್ಣಾಗಿ ಹೋಗಿತ್ತು. ಆದರೂ ಕತ್ತಲೆಯಲ್ಲಿ ಮಿನುಗುವ ನಕ್ಷತ್ರಗಳಂತೆ, ಅಲ್ಲಲ್ಲಿದ್ದ ಕೆಲವು ಮರಾಟಾ ವೀರರ ಕ್ಷಾತ್ರತೇಜವು, ಬಲಿಷ್ಠರಾದ ಮುಸಲ್ಮಾನರ ಕಣ್ಣುಗಳನ್ನು ಕುಕ್ಕುತ್ತಲಿತ್ತು. ''ತಾವು ಮಹಾರಾಷ್ಟ್ರದ ಗೌರವವನ್ನು ಕಾಯ್ದುಕೊಳ್ಳುವದಕ್ಕಾಗಿ ದೇಹವನ್ನರ್ಪಿಸುವದಕ್ಕಾದರೂ ಸಿದ್ಧರಾಗಬೇಕಲ್ಲದೆ, ಕೈಸೋತ ಹೇಡಿಗಳಂತೆ ಮುಸಲ್ಮಾನ ಬಾದಾಶಾಹಿಗೆ ತಲೆಬಾಗಿ ನಡೆದುಕೊಳ್ಳುವದು ಮಾತ್ರ ಸರ್ವಥಾ ಯೋಗ್ಯವಾದದ್ದಲ್ಲ'' ಎಂಬೀ ವಿಚಾರವು ಆಗಿನ ಕಾಲದ ಆಬಾಲ ವೃದ್ಧ ಮರಾಟರ ಮನಸ್ಸಿನೊಳಗೆ ಯಾವಾಗಲೂ ಒಂದೇ ಸವನೆ ಕಟಿಯುತ್ತಿತ್ತು. ಚಿಕ್ಕ ಮಕ್ಕಳ ಅಂಗಾಂಗಗಳಲ್ಲಿಯೂ ರಾಷ್ಟ್ರಪ್ರೇಮವೆಂಬ ವಿದ್ಯುಚ್ಛಕ್ತಿಯು ಹರಿದಾಡುತ್ತಿದ್ದುದರಿಂದ, ನಾಲ್ಕೆಂಟು ಹುಡುಗರು ಒಂದು ಸ್ಥಳದಲ್ಲಿ ಕೂಡಿದವೆಂದರೆ, ಮುಸಲ್ಮಾನರ ಸಂಗಡ ಯುದ್ಧವೆಂಬ ಆಟವೇ ಆರಂಭವಾಯಿತೆಂದು ತಿಳಿಯಬೇಕು. ಕೂಡಿದ ಬಾಲಕರೊಳಗೆ ಕೆಲವರು ಮುಸಲ್ಮಾನ ಸಿಪಾಯಿಗಳಾಗುವರು. ಮತ್ತೆ ಕೆಲವರು ಮರಾಟಾ ವೀರರಾಗುವರು. ಕೂಡಲೆ ಕಾಳಗವು ನಡೆಯಹತ್ತುವದು. ಬಾಲಕರ ಈ ಯುದ್ಧದ ಆಟವು ಒಮ್ಮೊಮ್ಮೆ ಒಳ್ಳೇ ಭರಕ್ಕೆ ಬಂತೆಂದರೆ, ಅವರ ಹಸ್ತಲಾಘವನ್ನೂ, ವಿಲಕ್ಷಣವಾದ ವೀರಶ್ರೀಯನ್ನೂ ನೋಡಿ ಕೈಲಾಗದ ಹೇಡಿಗಳಿಗೆ ಸಹ ಒಳ್ಳೇ ಸ್ಫೂರ್ತಿಯುಂಟಾಗುತ್ತಿತ್ತು; ಆದರೆ ಮುಸಲ್ಮಾನರ ಉಪ್ಪು ಉಂಡು ಅವರನ್ನು ತಲೆಯಮೇಲೆ ಹೊತ್ತುಕೊಂಡು ಕುಣಿಯುವಂಥ ಅಂಧಶ್ರದ್ಧಾಳುಗಳಾದ ಕೆಲವರು ಮಾತ್ರ ಮನದೊಳಗೆ ಬೆದರಿ—''ಈ ಉಡಾಳ ಹುಡುಗರು ಎಂದಾದರೊಮ್ಮೆ ನಮ್ಮ ರಾಷ್ಟ್ರದ ಮೇಲೆ ಭಯಂಕರ ಸಂಕಟದ ಪ್ರಸಂಗವನ್ನು ತಾರದೆ ಬಿಡುವದಿಲ್ಲೆಂ''ದು ಆಯಾ ಬಾಲಕರ ಮುಂದೆ ಆಡಿ ತೋರಿಸುತ್ತಿದ್ದರು. ಇಂಥ ಅಳ್ಳೆದೆಯ ಜನರ ಮಾನಖಂಡನವಾದರೂ ಆಗಿನ ಕಾಲದಲ್ಲಿ ತತ್ಕಾಲವೇ ಆಗುತ್ತಿತ್ತು. ಬಾಲಕರ ಈ ಕೃತಿಯಿಂದ ಮುಂದೆ ಒದಗಬಹುದಾದ ಕಷ್ಟವನ್ನು ಯಾರೂ ಅರಿತಿದ್ದಿಲ್ಲವೆಂತಲ್ಲ; ಆದರೇನು? ರಾಷ್ಟ್ರವು ಕಷ್ಟವನ್ನು ಭೋಗಿಸಿದ ಹೊರತು ಅದರ ಭಾಗ್ಯೋದಯವು ಎಂದಿಗೂ

ಆಗಲಾರದೆಂಬ ಸಿದ್ಧಾಂತವನ್ನು ಅವರು ಮನದಟ್ಟು ಮಾಡಿಕೊಂಡಿದ್ದರು. ಮೊದಲು ಇಂಥ ಮನೋಭೂಮಿಕೆಯು ಸಿದ್ಧವಾದುದರಿಂದಲೇ, ಕಡೆಗೆ ಅವರು ಸ್ವರಾಜ್ಯ ಸುಖವನ್ನು ಭೋಗಿಸಿದರು.

ಮೇಲೆ ಹೇಳಿದ ಬಾಲಕರೊಳಗಿನ ಕೆಲವರು ಆಟವನ್ನು ತಮ್ಮ ತಮ್ಮ ಮನೆಯ ಮುಂದೆ ಆಡಿ ಅಷ್ಟಕ್ಕೇ ಮುಗಿಸಲಿಲ್ಲ; ಹಾಗೆ ಮುಗಿಸಿದ್ದ ಪಕ್ಷದಲ್ಲಿ ನಾವು ಇಷ್ಟು ಮಟ್ಟಿಗೆ ಅವರನ್ನು ಹೊಗಳುತ್ತಿರಲೂ ಇಲ್ಲ. ಚರಿತ್ರದಲ್ಲಿ ಅವರು ಹೆಸರು ಸುವರ್ಣಾಕ್ಷರಗಳಿಂದ ಬರೆಯಲ್ಪಡುತ್ತಲೂ ಇದ್ದಿಲ್ಲ. ಅವರ ರಾಷ್ಟ್ರತೇಜವು ಎಂತಹ ಜಾಜ್ವಲ್ಯಮಾನವಾದುದೋ! ಅಂತೆಯೇ ಬಾಲಕರಾಗಿದ್ದ ಅವರ ವಂಶದವರು, ದೇವತಾ ಪ್ರಸಾದದಿಂದಲೂ, ಸ್ವಪರಾಕ್ರಮದಿಂದಲೂ ತಕ್ಕ ಸಾಮಗ್ರಿಗಳನ್ನು ಒದಗಿಸಿಕೊಳ್ಳುತ್ತ ಮುಸಲ್ಮಾನರ ಸಂಗಡ ಸತ್ಯ ಯುದ್ಧವನ್ನೇ ಮಾಡಿ ನಮ್ಮ ಭಗವೀ ನಿಶಾನೆಯನ್ನು ಇಡೀ ಭರತಖಂಡದ ತುಂಬ ಮೆರಿಸಿದರು. ಮತ್ತು ತಮ್ಮ ಕೈಯೊಳಗಿನ ಭಾಲೆಯ ತೀಕ್ಷ್ಣತೆಯನ್ನು ದಿಲ್ಲೀಶ್ವರನಿಗೆ ತೋರಿಸಿ, ತಮ್ಮ ಕುದುರೆಗಳಿಗೆ ಸಿಂಧು, ಭಾಗೀರಥೀ ನದಿಗಳ ನೀರನ್ನು ಯಥೇಚ್ಛವಾಗಿ ಕುಡಿಸಿದರು.

ಇಳಿಹೊತ್ತಿನ ಸಮಯವು. ಗಾಳಿಯು ಒತ್ತರದಿಂದ ಬೀಸುತ್ತಿತ್ತು. ಇಂಥ ಸಮಯ ದೊಳಗೆ ಕಲ್ಯಾಣ ಸುಭೆಯೊಳಗಿನ ''ಚೌಕ'' ಎಂಬ ಗ್ರಾಮದ ಮೂವರು ಸಣ್ಣ ಹುಡುಗರು ಆಟದ ಸಲುವಾಗಿ ಊರಹೊರಗೆ ಹೊರಟಿದ್ದರು. ಇವರಲ್ಲಿ ಒಬ್ಬನು ಬಾಲಕನೂ, ಇಬ್ಬರು ಬಾಲಿಕೆಯರೂ ಆಗಿದ್ದರು. ಅವರು ಹೋಗಹೋಗುತ್ತ ಊರ ಮಗ್ಗಲಿಗೆ ಹರಿಯುತ್ತಿರುವ ಧಾವರೀ ಎಂಬ ನದಿಯ ದಂಡೆಯಮೇಲಿನ ಒಂದು ಬೈಲು ಪ್ರದೇಶದಲ್ಲಿ ಆಟವನ್ನು ಹೂಡಿದರು. ಆ ಬೈಲಿನ ಎಲ್ಲ ಮಗ್ಗಲಿಗೂ ಮುಳ್ಳುಗಳ್ಳಿಯ ಪೆಳೆಯು ವಿಶೇಷವಾಗಿ ಬೆಳೆದಿತ್ತು. ಈ ಬಾಲಕರು ಆಡಾಡುತ್ತ ಹಣ್ಣುಗಳಿಂದ ಜಗ್ಗುತ್ತಿರುವ ಒಂದು ಪೆಳೆಯನ್ನು ನೋಡಿದರು. ನೋಡಿದಮೇಲೆ ಸುಮ್ಮನೆ ಕೂಡುವರೆಲ್ಲಿ? ಹೇಳಿ ಕೇಳಿ ಅವರು ಹುಡುಗರು. ಹಣುಗಳಿಗೆ ಮುಸಲ್ಮಾನ ಸಿಪಾಯಿಗಳೆಂದು ಹೆಸರಿಟ್ಟು, ಯುದ್ಧದ ಆಟವಾಡ ಬೇಕೆಂಬದೇ ಇವರ ಬಯಕೆ. ಬಳಿಕ ಕೇಳುವದೇನು? ಅವರೊಳಗಿನ ಬಾಲಕನು ಕೈಯೊಳಗೆ ಹಿಡಿದಿದ್ದ ಬಿದಿರು ಬಡಿಗೆಯಿಂದ ಆ ಹಣ್ಣುಗಳನ್ನು ಮನದಣಿಯುವಂತೆ ಬಡಿದನು. ಪೆಟ್ಟು ತಿಂದ ಹಣ್ಣುಗಳು ಒಡೆದು ಕೆಂಪು ರಸವನ್ನು ಸುರಿಸುತ್ತಲೂ, ಗಿಜಿಗಿಜಿಯಾಗಿ ನೆಲಕ್ಕೆ ಬೀಳುತ್ತಲೂ ಇದ್ದದರಿಂದ, ಅವರ ಆಟಕ್ಕೆ ಮತ್ತಿಷ್ಟು ಕಳೆಯೇರಿದಂತಾಯಿತು. ''ಹೇಗಿದೆ ಮರಾಟರ ಕೈ'' ಎಂದು ಬಡಿಗೆಯಿಂದ ಹಣ್ಣುಗಳನ್ನು ಹಣಿಯುತ್ತಿರಲು, ಸಂಗಡ ಇದ್ದ ಬಾಲಿಕೆಯರಿಬ್ಬರೂ ಅವನಿಗೆ ಇನ್ನಿಷ್ಟು ಹುರುಪು ಹುಟ್ಟುವಂತೆ ಒಳ್ಳೇ ಹರುಷ ದಿಂದ ಚಪ್ಪಾಳೆಯನ್ನು ಬಾರಿಸುತ್ತ—''ಭಲೆ! ಶಹಬಾಸ!'' ಎಂದು ಅವನನ್ನು ಉತ್ಸಾಹ ಗೊಳಿಸಹತ್ತಿದರು.

ಹೀಗೆ ಮುಳ್ಳುಗಳ್ಳಿಯನ್ನು ಆ ಬಾಲವೀರನು ಬಡಿಗೆಯಿಂದ ಹೊಡೆಯುವಾಗ, ತನ್ನ ಸಂಗಡಿಗರಾದ ಆ ಬಾಲಿಕೆಯರಿಬ್ಬರನ್ನು ಕುರಿತು—''ನಾನು ಇಷ್ಟು ರೊಚ್ಚಿನಿಂದ ಈ ಮುಳ್ಳುಗಳ್ಳಿಯನ್ನು ಯಾಕೆ ಹೊಡೆಯುತ್ತಿರುವೆನು ನಿಮಗೆ ಗೊತ್ತಿದೆಯೇನು? ಈ ಮುಳ್ಳುಗಳ್ಳಿ ಮುಸಲ್ಮಾನರಿದ್ದ ಹಾಗೆ ಎಂದು ಅಪ್ಪನು ಹೇಳಿರುವನು. ಮುಸಲ್ಮಾನರು ಬಲಾತ್ಕಾರದಿಂದ ಅನ್ಯರನ್ನು ಮುಸಲ್ಮಾನರಾಗಮಾಡಿ ತಮ್ಮ ಸಂಖ್ಯೆಯನ್ನು ಹೆಚ್ಚಿಸಿ ದೇಶದ ತುಂಬ ವ್ಯಾಪಿಸಿರುವರು; ಅದರಂತೆ ಈ ಮುಳ್ಳುಗಳ್ಳಿಯು ಬೇಡ ಬೇಡ ವೆಂದರೂ ಸಿಕ್ಕಲ್ಲಿ ಹಬ್ಬುತ್ತ ಹೋಗಿ ಭೂಮಿಯನ್ನೆಲ್ಲ ವ್ಯಾಪಿಸುವದು; ಮುಸಲ್ಮಾನರು ದೇಶ ದ್ರೋಹಿಗಳಾದ ಹಿಂದೂ ಜನರಿಗೆ ಆಶ್ರಯ ಕೊಡುವರು; ಅದರಂತೆ ಈ ಮುಳ್ಳು ಗಳ್ಳಿಯ ಪೆಳೆಯು ಕಳ್ಳರು–ಕಾಕರು, ಹಾವು, ಚೇಳು, ಹುಲಿ, ಕರಡಿ ಮೊದಲಾದ ದುಷ್ಟ ಪ್ರಾಣಿಗಳಿಗೆ ಆಶ್ರಯು ಕೊಡುವದು; ಮುಸಲ್ಮಾನರು ವಿವಿಧ ಘಾತಕ ಶಸ್ತ್ರಗಳಿಂದ ಲೋಕಕ್ಕೆ ಹಿಂಸೆಯನ್ನುಂಟುಮಾಡುವರು; ಅದರಂತೆ ಈ ಮುಳ್ಳುಗಳ್ಳಿಯ ಪೆಳೆಯು ತನ್ನ ಕೆಟ್ಟ ಮುಳ್ಳುಗಳಿಂದ ಜನರನ್ನು ಹಿಂಸೆಪಡಿಸುವದು; ಮುಸಲ್ಮಾನರು ದುಡ್ಡಿನ ಆಶೆ ತೋರಿಸಿ ಜನರನ್ನು ತಮ್ಮ ಬಲೆಗೆ ಎಳಕೊಳ್ಳುವರು; ಅದರಂತೆ ಈ ಮುಳ್ಳುಗಳ್ಳಿ ಪೆಳೆಯು ತನ್ನ ಹಣ್ಣುಗಳ ಅಸಹ್ಯವಾದ ಸವಿಯಿಂದ ಕಾಗೆಗಳಂಥ ಕ್ಷುದ್ರ ಪ್ರಾಣಿಗಳ ಮನಸ್ಸು ಎಳಕೊಳ್ಳುವದು. ಆದ್ದರಿಂದ ಮುಸಲ್ಮಾನರಂತೆ ನಮ್ಮ ದೇಶದಲ್ಲಿ ತಳ ಊರಿರುವ ಈ ಮುಳ್ಳುಗಳ್ಳಿಯನ್ನು ನಾಶ ಮಾಡಬೇಕೆಂದು ಅಪ್ಪನು ಅನ್ನುತ್ತಿರುವನು; ಆದ್ದರಿಂದ ಇತ್ತ ನೋಡಿರಿ, ಈ ಮುಳ್ಳುಗಳ್ಳಿಯೆಂಬ ಮುಸಲ್ಮಾನರನ್ನು ಈ ಕೋಲಿನಿಂದ ಹೇಗೆ ಹಣೆಯುತ್ತೇನೆ, ನೋಡಿರಿ'' ಎಂದು ಆ ಬಾಲಕನು ತನ್ನ ಕೈಯೊಳಗಿನ ಕೋಲಿನಿಂದ ಮುಳು ಗಳ್ಳಿಯ ಪೆಳೆಯನ್ನು ಒಂದೇ ಸವನೆ ಹಣೆಯಹತ್ತಿದನು.

ಮೇಲೆ ವರ್ಣಿಸಿದ ಚೌಕ ಎಂಬ ಗ್ರಾಮದವರಿಗೆ ದಿಲ್ಲೀಶ್ವರನ ದಂಡಾಳುಗಳು ಈ ಹೊತ್ತಿನ ವರೆಗೂ ಬಂದಿದ್ದಿಲ್ಲ, ವಿಜಾಪೂರ ಬಾದಶಹನ ದಂಡಾಳುಗಳು ಮಾತ್ರ ಮೇಲಿಂದ ಮೇಲೆ ಆ ಊರ ಬಳಿಯಲ್ಲಿ ಹಾದು ಹೋಗುವದನ್ನು ಬಿಟ್ಟಿದ್ದಿಲ್ಲ. ಯಾಕಂದರೆ, ಕಲ್ಯಾಣದ ಸುಭೆಯನ್ನು ಹ್ಯಾಗಾದರೂ ಮಾಡಿ ಬಡಿದು ಬಾಯಲ್ಲಿ ಹಾಕಿಕೊಳ್ಳಬೇಕೆಂದು ಆ ಬಾದಶಹನ ಮಹತ್ವಾಕಾಂಕ್ಷೆಯಾಗಿತ್ತು, ಆ ಕಾಲಕ್ಕೆ ಉತ್ತರದಲ್ಲಿ ದಿಲ್ಲೀ ಬಾದಶಹನೂ, ದಕ್ಷಿಣದಲ್ಲಿ ವಿಜಾಪುರ ಬಾದಶಹನು, ಹೀಗೆ ಇಬ್ಬರು ಬಾದಶಹರ ಪ್ರಬಲ ರಾಜ್ಯಗಳಿದ್ದವು. ಈ ಇಬ್ಬರು ಬಾದಶಹರ ಗಂಟಲದೊಳಗೂ ಇಳಿಯದಂತೆ ಕಲ್ಯಾಣ ಸುಭೆಯು ಇಲ್ಲಿಯ ವರೆಗೆ ಸ್ವತಂತ್ರವಾಗಿತ್ತು, ಅಂದ ಮೇಲೆ ಇದನ್ನು ಹೇಗಾದರೂ ಮಾಡಿ ತನ್ನ ರಾಜ್ಯಕ್ಕೆ ಜೋಡಿಸಿಕೊಳ್ಳಬೇಕೆಂದು ವಿಜಾಪುರ ಬಾದಶಹನಂಥ ಬಲಾಢ್ಯನು ಯಾಕೆ ಯೋಚಿಸ ಲಿಕ್ಕಿಲ್ಲ? ಅದಕ್ಕಾಗಿಯೇ ಅವನು ಕಲ್ಯಾಣದ ಜನರ ಮನಸ್ಸು ವ್ಯಗ್ರವಾಗುವಂತೆ ಸಶಸ್ತ್ರ ರಾದ ಸಣ್ಣ ಸಣ್ಣ ಸೈನಿಕರ ಗುಂಪುಗಳನ್ನು ಮೇಲಿಂದಮೇಲೆ ಕಳಿಸುತ್ತಿದ್ದನು. ಆ ಸೈನಿಕರು ಬಂದರೆಂದರೆ ಅವರಿಗೂ ಊರ ಜನರಿಗೂ ಕಡುತರವಾದ ಕಾಳಗ! ಘೋರವಾದ ಕೊಲೆ!

ಬಾದಶಹನು ಮತ್ತೂ ಕಳಿಸುವನು. ಮತ್ತೂ ಕಾಳಗ! ಮತ್ತೂ ಕೊಲೆ! ಈ ಪ್ರಕಾರ ಶಿಪಾಯಿಗಳ ಉದ್ದಾಮತನದಿಂದ ಸಮಗ್ರ ಸಭೆಯೂ ತ್ರಸ್ತವಾಗಿಹೋಗಿತ್ತು. ಇಂಥ ಅರಾಜಕತೆಯ ವೇಳೆಯಲ್ಲಿ ಮೇಲೆ ವರ್ಣಿಸಿದ ನಮ್ಮ ಬಾಲ ವೀರನು ಮುಳ್ಳುಗಳ್ಳಿಯ ಹಣ್ಣುಗಳಿಗೆ ಮುಸಲ್ಮಾನರೆಂದು ಹೆಸರಿಟ್ಟು, ಮರ್ದನ ಮಾಡಿದ್ದರಲ್ಲಿ ಏನಾಶ್ಚರ್ಯ! ಈ ರಾಷ್ಟ್ರ ತೇಜಸ್ಸು ಕೇವಲ ಬಾಲಕರಲ್ಲಿಯೇ ಉದಯವಾಗಿತ್ತೆಂತಲ್ಲ; ಮುದುಕರು ಹೆಂಗಸರು ಮೊದಲು ಮಾಡಿಕೊಂಡು ಎಲ್ಲರ ದೇಹದಲ್ಲಿಯೂ ಭರದಿಂದ ಒಡಮೂಡಿ ಹೋಗಿತ್ತು. ಅದು ಅಭಿವೃದ್ಧಿಯಾಗಹತ್ತಿದ ಹಾಗೆ ಇವರ ಮೇಲೆ ವಿಜಾಪುರ ಬಾದಶಹನ ಬಾಲಾತ್ಕಾರವಾದರೂ ದಿನದಿನಕ್ಕೆ ಪ್ರಬಲವಾಗಹತ್ತಿತು. ಈ ಹೊತ್ತು ಇಂಥ ಊರನ್ನು ಲೂಟಿ ಮಾಡಿದರು; ಈ ಹೊತ್ತು ಇಂಥವನ ಹೆಂಡತಿಯನ್ನು ಎಳೆದೊಯ್ದುರು; ಮೊನ್ನೆ ಇಂಥ ಪಾಟೀಲನನ್ನು ಹಣಿದರು; ಇವೇ ಮೊದಲಾದ ಹೃದಯದ್ರಾವಕ ಸಂಗತಿಗಳನ್ನು ಪ್ರತಿಕ್ಷಣದಲ್ಲೂ ಕೇಳಬೇಕಾಗುತ್ತಿತ್ತು. ಇದರಿಂದಂತೂ ಜನರು ಮತ್ತಿಷ್ಟು ಕ್ಷುಬ್ಧರಾಗಿದ್ದರು.

ಇಂಥ ವಿಪತ್ಕಾಲದಲ್ಲಿಯಾದರೂ ಅವರು ಒಂದು ಭವಿಷ್ಯವಾಣಿಯೆಂಬ ಆಶಾತಂತುವನ್ನು ಹಿಡಿದುಕೊಂಡು, ''ಸದ್ಯದ ನಮ್ಮ ದುರ್ದಿನಗಳು ತೀವ್ರವೇ ಲಯ ಹೊಂದಿ ನಾವು ಸ್ವತಂತ್ರ ರಾಗುವೆವೆಂ''ಬ ನಂಬಿಗೆಯಿಂದ ಕಾಲಹರಣ ಮಾಡುತ್ತಿದ್ದರು. ಅವರ ವಿಶ್ವಾಸಕ್ಕೆ ತಕ್ಕಂತೆ ಕೆಲವು ದೃಷ್ಟಾಂತಗಳೂ ಆಗಿದ್ದವು. ''ದೇಶದ ಮತ್ತು ಧರ್ಮದ ಸಂರಕ್ಷಣಾರ್ಥವಾಗಿ ಪ್ರತ್ಯಕ್ಷ ಶಂಕರನೇ ಮೃತ್ಯು ಲೋಕದಲ್ಲಿ ಶಿವಾಜಿ ಎಂಬ ಹೆಸರಿನಿಂದ ಅವತರಿಸಿರುವನು. ಅವನು ತೀವ್ರವೇ ಪ್ರಕಟನಾಗಿ ವಿಜಾಪುರದ ರಾಜ್ಯವನ್ನು ನಾಶಗೊಳಿಸುವನು'' ಎಂಬ ಭವಿಷ್ಯವಾಣಿಯ ನಾದವು, ಆಗಿನ ಕಾಲದ ಮಹಾರಾಷ್ಟ್ರದೊಳಗಿನ ಊರು ಕೇರಿಗಳನ್ನೂ ಯಾವತ್ತೂ ಗಿರಿಗಂಹ್ವರಗಳನ್ನೂ ಸಮಗ್ರವಾಗಿ ವ್ಯಾಪಿಸಿಕೊಂಡಿತ್ತು. ಮುಸಲ್ಮಾನ ಸತ್ತೆಯಿಂದಾಗುವ ಕಠಿಣತರವಾದ ಯಾತನೆಗಳನ್ನು ತಾಳಲಾರದೆ, ಮಹಾರಾಷ್ಟ್ರದೊಳಗಿನ ಪ್ರತಿಯೊಬ್ಬರು ಆ ಭವಿಷ್ಯದ ಸುದಿನವು ಬೇಗನೆ ಒದಗಿ ನಮಗೆ ಸ್ವರಾಜ್ಯವು ಯಾವಾಗ್ಗೆ ದೊರೆತೀತೆಂದು ಹಾತೊರೆಯುತ್ತಿದ್ದರು. ಇವರ ಸ್ವಾಭಿಮಾನ ಸ್ವರಾಷ್ಟ್ರಾಭಿಮಾನಗಳನ್ನು ಅಲ್ಲಿಂದಲ್ಲಿಯೇ ಮುರಿದು ಹತ್ತಿಕ್ಕಬೇಕೆಂದು ಮಾಡುತ್ತಿರುವ ವಿಜಾಪುರದ ಬಾದಶಹನ ಕೃತಿಗಳಿಂದಲೂ ಒಬ್ಬೊಬ್ಬ ಮರಾಟಾ ವೀರನ ಅಂಗದಲ್ಲಿಯೂ ಅದಕ್ಕೆ ಪ್ರತಿಯಾಗಿ ಸ್ವದೇಶಾಭಿಮಾನ–ಸ್ವಧರ್ಮಾಭಿಮಾನಗಳ ಗಾಳಿಯು ವಿಶೇಷವಾಗಿ ಸಂಚರಿಸ ತೊಡಗಿತ್ತು. ಹಿಂದೆ ಹೇಳಿದಂತೆ ನದಿಯ ದಂಡೆಯ ಮೇಲೆ ಆಟದ ಸಲುವಾಗಿ ಹೋದ ಹುಡುಗನಾದರೂ ಇದೇ ಗಾಳಿಯಿಂದ ತುಂಬಿ ಆವೇಶಗೊಂಡಿದ್ದನು. ಆ ಪೋರನು ಯಾವಾಗಲೂ–'ನಾನು ದೊಡ್ಡವನಾದೆನೆಂದರೆ ನನ್ನ ಶಸ್ತ್ರದ ನೀರನ್ನು ಮುಸಲ್ಮಾನರಿಗೆ ಚನ್ನಾಗಿ ಕುಡಿಸಿ ದೇಶವನ್ನು ಉದ್ಧಾರ ಮಾಡುವೆನು' ಎಂದು 'ರೂ' ಹಾಕುತ್ತಲಿದ್ದನು.

ಆ ಬಾಲ ವೀರನ ಹೆಸರು ನೇತಾಜಿಯು, ಸಂಗಡ ಇದ್ದ ಇಬ್ಬರು ಬಾಲಕಿಯರಲ್ಲಿ ಒಬ್ಬಳು ನೇತಾಜಿಯ ಒಡಹುಟ್ಟಿದ ತಂಗಿ, ಆಕೆಯ ಹೆಸರು ಗಂಗೆ. ಗಂಗೆಗೆ ಇನ್ನೂ ಒಂಬತ್ತು

ವರ್ಷ. ಇನ್ನೊಬ್ಬಳು ಈತನ ಸೋದರ ಮಾವನ ಮಗಳಾದ ಎಂಟು ವರ್ಷದ ಕನ್ನಿಕೆ. ಆಕೆಯ ಹೆಸರು ''ಕಾಶಿ.'' ನೇತಾಜಿಯು ಜೋಡು ಎಲುವಿನ ಕಸುವಿನ ಮೈಕಟ್ಟಿನವನೂ, ವಯಸ್ಸಿನ ಮಾನದಂತೆ ಸಶಕ್ತನೂ ಇದ್ದನು. ಅವನು ಒಂದು ಲಂಡ ಚಣ್ಣವನ್ನು ತೊಟ್ಟು, ಟೊಂಕಕ್ಕೆ ನಡಕಟ್ಟನ್ನು ಬಿಗಿದು, ಮೇಲೆ ಒಂದು ಸಾಧಾರಣ ನಿಲುವಂಗಿಯನ್ನು ತೊಟ್ಟು, ತಲೆಗೆ ಕೆಂಪು ಬಣ್ಣದ ಮುಂಡಾಸವನ್ನು ಅಸ್ತವ್ಯಸ್ತವಾಗಿ ಸುತ್ತಿಕೊಂಡಿದ್ದನು. ಅವನ ಉಡಿಗೆತೊಡಿಗೆಗಳು ಸಾಧಾರಣವಾಗಿದ್ದರೂ ಅವು ಅವನಿಗೆ ಚನ್ನಾಗಿ ಒಪ್ಪುತ್ತಿದ್ದವು. ಅವನ ಮುಖದ ಮೇಲೆ ಒಂದು ವಿಲಕ್ಷಣ ಪ್ರಕಾರದ ತೇಜವು ಮಿನುಗುತ್ತಿತ್ತು, ಅವನ ಕಣ್ಣುಗಳು ಹೊಳಪುಳ್ಳ ವಾಗಿದ್ದವು. ಅವನು ತನ್ನ ಕೈಯೊಳಗಿನ ಬಿದಿರು ಬಡಿಗೆಯನ್ನು ಒಳ್ಳೇ ಆವೇಶದಿಂದ ನೆಗೆವಿ 'ಹರಹರ ಮಹಾದೇವ' ಎಂದು ಗರ್ಜಿಸುತ್ತ ಆ ಮುಳ್ಳು ಗಳ್ಳಿಯ ಹಣ್ಣುಗಳನ್ನು ಒಂದೇ ಸವನೆ ನೆಲಕ್ಕೆ ಕೆಡವಹತ್ತಿದನು. ಆಗ ಹೇಡಿ ಮುಸಲ್ಮಾನರು ತನ್ನ ಹೊಡತವನ್ನು ತಾಳ ಲಾರದೆ ಕಸವಿಸಿಯಿಂದ ರಕ್ತವನ್ನೇ ಕಾರುತ್ತಿರುವರೆಂದು ಭಾವಿಸುತ್ತಿದ್ದನು. ಈ ಚಮತ್ಕಾರ ವನ್ನು ನೋಡಿ ಗಂಗೆ–ಕಾಶಿಯರಿಗಾದ ಆನಂದವನ್ನು ಬಣ್ಣಿಸಲಾಸಲ್ಲ. ಅದರೊಳಗೆ ಕಾಶಿ ಯಂತೂ ಹರುಷಾತಿಶಯದಿಂದ ಚಪ್ಪಾಳೆಯನ್ನು ಬಾರಿಸುತ್ತ ಕುಣಿದಾಡಿ ನೇತಾಜಿಗೆ— 'ಭಲೆ! ಶಹಬಾಸ!' ಎಂದು ಮೇಲೆ ಮೇಲೆ ಉತ್ತೇಜನ ಕೊಡುತ್ತಿದ್ದಳು. ನೇತಾಜಿಯೂ ಮೈಮರೆತವನಂತೆ ಆಗಿ, ಆ ಮುಸಲ್ಮಾನ ಶತ್ರುಗಳಾಗಿರುವ ಹಣ್ಣುಗಳ ಸಂಹಾರವನ್ನು ಅವ್ಯಾಹತವಾಗಿ ನಡಿಸಿದ್ದನು. ಹೀಗೆ ಆಟವನ್ನು ಆಡಿಯಾಡಿ ವಿಶೇಷ ಶ್ರಮದಿಂದ ನೇತಾಜಿಯ ಸರ್ವಾಂಗವು ಝೋರೆಂದು ಬೆವತಿತು; ತಲೆಗೆ ಸುತ್ತಿಕೊಂಡ ಆತನ ಮುಂಡಾಸವು ಸಡಿಲಾಗಿ ಅಲ್ಲಿಯೇ ನೆಲದಮೇಲೆ ಬಿದ್ದಿತು. ಆಗ ಕೋಮಲ ಸ್ವಭಾವದ ಮುಗ್ಧ ಬಾಲಿಕೆ ಯಾದ ಗಂಗೆಯು ಅಣ್ಣನ ಈ ಸ್ಥಿತಿಯನ್ನು ನೋಡಿ—'ಅಣ್ಣಾ! ಇನ್ನು ಮುಸಲ್ಮಾನರ ಸಂಹಾರವನ್ನು ಸಾಕು ಮಾಡಪ್ಪಾ! ಆಯಾಸದಿಂದ ನಿನ್ನ ಮೈಯೆಲ್ಲ ಹೇಗೆ ಬೆವತಿರುವದು ನೋಡು? ನಡೆ, ಬೇಗನೆ ಮನೆಗೆ ಹೋಗೋಣ. ಎಂದು ಕನಿಕರದಿಂದ ಹೇಳಿದಳು.

ಗಂಗೆಯ ಈ ಮಾತುಗಳನ್ನು ಕೇಳಿ ಕಾಶಿಯು ಕೈ ತಿರವುತ್ತ ಆಕೆಯನ್ನು ಹೀಯಾಳಿಸಿದಂತೆ ಮಾಡಿ ಮುಂದೆ ಬಂದು—'ನೇತಾಜಿ, ಅಂಜುಬುರುಕಿಯಾದ ಈ ಗಂಗೆಯ ಮಾತುಗಳನ್ನು ನೀನು ಕೇಳಬೇಡ. ಯವನರ ಸಂಹಾರದ ಕೆಲಸವು ಹಾಗೆಯೇ ನಡೆಯಲಿ. ಅದು ಮುಗಿಯು ವದ ರೊಳಗಾಗಿ ನಾನು ಈ ಸಂಪಗೆಯ ಹೂವಿನ ತುರಾಯಿಯನ್ನು ಸಿದ್ಧಮಾಡಿ, ಅದನ್ನು ನಿನ್ನ ಮುಂಡಾಸದಲ್ಲಿ ಮುಡಿಸುವೆನು. ಹಾಗೆ ಸಂಹಾರ ಮಾಡದೆ ನೀನು ಇಷ್ಟಕ್ಕೆ ಬಿಟ್ಟರೆ, ಆ ತುರಾಯಿಯನ್ನು ನಾನೇ ನನ್ನ ತುರುಬಿನೊಳಗೆ ಮುಡಿದುಕೊಳ್ಳುವೆನು ನೋಡು' ಎಂದು ಹೇಳಿ ಹೂಗಳನ್ನಾರಿಸುತ್ತ ತುರಾಯಿಯನ್ನು ಅವಸರದಿಂದ ಕಟ್ಟತೊಡಗಿದಳು. ಹೀಗೆ ಇವರ ಮಾತು ಗಳು ನಡೆದಿರಲು, ಅಲ್ಲಿಗೆ ಒಬ್ಬ ಪ್ರೌಢ ವಯಸ್ಸಿನ ಸ್ತ್ರೀಯು ಹಿಂದಿನಿಂದ ಬಂದವಳೇ ಕಾಶಿಯ ರಟ್ಟೆಯನ್ನು ಹಿಡಿದು—''ಏನೇ? ಇನ್ನೂ ಲಗ್ನವಾಗುವದಕ್ಕಿಂತ ಮುಂಚೆಯೇ ಗಂಡನಿಗೆ ತುರಾಯಿಯನ್ನು ಮುಡಿಸುವೆಯಾ? ಊರೊಳಗೆಲ್ಲ ನಿನ್ನನ್ನು ಹುಡುಕಿ ಹುಡುಕಿ

ಬೇಸತ್ತೆನು. ಮನೆಗಂತೂ ನಡೆ, ಅಲ್ಲಿ ನಿಮ್ಮ ತಾಯಿಯ ಕಡೆಯಿಂದ ತಕ್ಕ ಮರ್ಯಾದೆಯು ನಿನಗೆ ದೊರೆಯುವದು.' ಎಂದು ಆಕೆಯನ್ನು ಎಳೆಯಹತ್ತಿದಳು. ಆ ಬಂದಿದ್ದ ಸ್ತ್ರೀಯು ಕಾಶಿಯ ಮನೆಯ ಒಕ್ಕಲಗಿತ್ತಿಯಾಗಿದ್ದಳು. ಆಕೆಯ ರಟ್ಟೆಯನ್ನು ಹಿಡಿದಕೂಡಲೆ ಕಾಶಿಯು ಸಿಟ್ಟಿನಿಂದ—''ಬಿಡು ನನ್ನ ಕೈ! ನನ್ನನ್ನು ಮುಟ್ಟಬೇಡ. ನಾನು ಅವ್ವನನ್ನು ಕೇಳಿ ಇಲ್ಲಿಗೆ ಬಂದಿದ್ದೇನೆ. ಆಕೆ ನನ್ನನ್ನು ಯಾಕೆ ಬಯ್ಯಾಳು?'' ಎಂದು ಸಿಟ್ಟಿನಿಂದ ನುಡಿದು, ನೇತಾಜಿಯನ್ನು ನೋಡಿ—'ನೇತಾಜಿ, ನಾನು ಮನೆಗೆ ಹೋಗುವೆನು. ನಾಳಿನ ದಿವಸ ಇದೇ ಆಟವನ್ನು ಆಡೋಣವಂತೆ. ಇವತ್ತಿನ ಹಾಗೆ ನೀನು ನಾಳೆಯೂ ಜಯಶಾಲಿಯಾದರೆ ತುರಾಯಿಯನ್ನು ನಿನಗೆ ಮುಡಿಸುವೆನು, ಅಲ್ಲಿಯವರೆಗೆ ಅದು ನನ್ನ ತುರಬಿನೊಳಗೇ ಇರಲಿ.' ಎಂದು ಹೇಳಿ, ಕುಣಿದಾಡುತ್ತ ನಗುತ್ತ ಒಕ್ಕಲಗಿತ್ತಿಯ ಸಂಗಡ ಮನೆಯ ಹಾದಿಯನ್ನು ಹಿಡಿದಳು. ಇತ್ತ ನೇತಾಜಿಯಾದರೂ ನೆಲದಮೇಲೆ ಬಿದ್ದಿದ್ದ ಮುಂಡಾಸವನ್ನು ಸುತ್ತಿಕೊಂಡು ತಂಗಿಯಾದ ಗಂಗೆಯ ಕೈಯನ್ನು ಹಿಡಿದು, ಯುದ್ಧದಲ್ಲಿ ಗೆದ್ದ ಒಬ್ಬ ವೀರಾಗ್ರಣಿಯಂತೆ ತನ್ನ ಕೈಯೊಳಗಿನ ಬಿದಿರು ಬಡಿಗೆಯನ್ನು ತಿರುಗಿಸುತ್ತ ತಾನೂ ಮನೆಯ ಹಾದಿಯನ್ನು ಹಿಡಿದನು. ಈ ನೇತಾಜಿ ಎಂಬ ಹೆಸರಿನ ಹೀಚೇ ಮುಂದೆ ''ಶಿವಾಜಿಯ ಬಲಗೈ'' ಎಂದು ಎನಿಸಿಕೊಂಡು, ಬೀಜಕ್ಕೆ ಬಿಡುವ ಕಾಯಿಯಾಯಿತು!

# ಮದುವೆಯ ನಿಬ್ಬಣ

ಈ ಹುಡುಗರು ಹೀಗೆ ಆಟವಾಡುತ್ತಿರಲು ಐದಾರು ವರ್ಷಗಳು ಕಳೆದುಹೋದವು. ದಿನದಿನಕ್ಕೆ ಮುಸಲ್ಮಾನರು ಮರಾಟರನ್ನು ಹೆಚ್ಚು ಹೆಚ್ಚು ಗೋಳಾಡಿಸುತ್ತಿದ್ದರು; ಮರಾಟರು ಪಡುವ ತಾಪದಲ್ಲಿ ಮುಸಲ್ಮಾನರ ಪುಣ್ಯವು ಸುಟ್ಟು ಬೂದಿಯಾಗತೊಡಗಿ, ಅವರ ಪಾಪದ ರಾಶಿಯು ಹೆಚ್ಚಹತ್ತಿತ್ತು. ಅಂದಬಳಿಕ ಮುಸಲ್ಮಾನರ ವಿಜಾಪುರದ ಬಾದಶಾಹಿಗೆ ಪಾಪದ ಹೆಚ್ಚಳದಿಂದ ಕ್ಷಯರೋಗದ ಭಾವನೆಯಾದದ್ದರಲ್ಲಿ ಆಶ್ಚರ್ಯವೇನು! ಹೋದ ದಿನಗಳೇ ಒಳ್ಳೆಯವಾಗಿದ್ದು, ಬರುವ ದಿನಗಳು ಭಯಂಕರಗಳೆಂದು ಜನರ ಅನುಭವಕ್ಕೆ ಬರತೊಡಗಿತು. ಮರಾಟರಾದರೂ ಮುಸಲ್ಮಾನರ ತಾಪವನ್ನು ಎಷ್ಟಂತ ಸಹಿಸಬೇಕು? ಅವರು ಜೀವದಾಸೆ ಬಿಟ್ಟು ರೊಚ್ಚಿಗೆದ್ದರು. ಆಗ ಅವರ ಪುಕ್ಕತನದ ರೂಪಾಂತರವು ದಿಟ್ಟತನದಲ್ಲಿ ಆಯಿತು; ಅವರ ಹೆಂಡಿರು–ಮಕ್ಕಳ ಮೇಲಿನ ಮೋಹವು ದೇಶಪ್ರೀತಿಯಲ್ಲಿ ಪರಿಣಮಿಸಿತು; ಅವರ ಧನದಾಸೆಯು ತ್ಯಾಗರೂಪವನ್ನು ತಾಳಿತು! ಹೀಗೆ ಸದ್ಗುಣರೂಪ ಸ್ವರಾಜ್ಯ–ಸುಗಂಧವು ಅವರಲ್ಲಿ ಉತ್ಪನ್ನವಾಗಲು, ದುರ್ಗುಣಗಳ ದುರ್ಗಂಧದ ಬಾಧೆಯು ಅವರಿಗೆ ಕಡಿಮೆಯಾಗತೊಡಗಿತು. ಮರಾಟರು ಮುಸಲ್ಮಾನರ ಅಂಜಿಕೆಯಿಂದ ಮದುವೆಯ ನಿಬ್ಬಣ ಹೊರಡಿಸಲಿಕ್ಕೂ ಅಂಜುತ್ತಿದ್ದರು; ಅಂಥ ಪುಕ್ಕರು ಈಗ ದಿಟ್ಟರಾಗುತ್ತ—''ನಾವು ಮುಸಲ್ಮಾನರಿಗೆ

ಯಾಕೆ ಅಂಜುವದು? ಅವರೇನು ಸ್ವರ್ಗದಿಂದ ಇಳಿದು ಬಂದಿರುವರೋ? ಹುಟ್ಟುವ ದೊಂದು ದಿನ, ಸಾಯುವದೊಂದು ದಿನ, ಅವರ ಸೊಕ್ಕಾದರೂ ಎಷ್ಟಿದೆ ನೋಡಿಬಿಡೋಣ'' ಎಂದು ಬೈಲಿಗೆ ಬೀಳಹತ್ತಿದರು.

ಚೌಕ ಗ್ರಾಮದ ನೇತಾಜಿ ಪಾಲಕರನ ತಂಗಿ ಗಂಗೆಗೆ ಈಗ ಹದಿನೈದು ವರ್ಷ ಗಳಾಗಿದ್ದರೂ ಇನ್ನೂ ಆಕೆಯ ಲಗ್ನವಾಗಿದ್ದಿಲ್ಲ. ಮಾರಾಟರ ಆಗಿನ ಪದ್ಧತಿಯಂತೆ ಇಷ್ಟು ಹೊತ್ತಿಗೆ ಆಕೆಯ ಲಗ್ನವಾಗಿ ಹೋಗಬೇಕಾಗಿತ್ತು; ಆದರೆ ಮನೆತನದ ಬಡತನ, ಹಾಗು ಮುಸಲ್ಮಾನರ ಹಾವಳಿ ಇವು ಗಂಗೆಯ ಲಗ್ನಕ್ಕೆ ವಿಘ್ನಗಳಾಗಿದ್ದವು. ಇಷ್ಟು ದಿನ ಲಗ್ನ ಬಿಟ್ಟ ದ್ದಕ್ಕಾಗಿ ನೆರೆಹೊರೆಯ ಮರಾಟರು ಗಂಗೆಯ ತಂದೆಯನ್ನು ಆಡಿಕೊಳ್ಳಹತ್ತಿದರು. ಆಗ ತರುಣ ನೇತಾಜಿಯು ವರನಿಶ್ಚಯ ಮಾಡಿಕೊಂಡೇ ಬರಬೇಕೆಂದು ತನ್ನ ತಂದೆಯನ್ನು ಒತ್ತಾಯ ಪಡಿಸಿದನು. ನೇತಾಜಿಯ ತಂದೆಗೂ ಆ ಮಾತು ಬೇಕಾದದ್ದೇ. ಏರಿಕೆಯ ರಕ್ತದ ನೇತಾಜಿಗೆ ಮುಸಲ್ಮಾನರ ಭಯವಂತು ಸರ್ವಥಾ ಇದ್ದಿಲ್ಲ. ಈಗ ಆತನಿಗೆ ಹತ್ತೊಂಬತ್ತು ವರ್ಷಗಳು ತುಂಬುತ್ತ ಬಂದಿದ್ದವು. ಅವನು ಹವಣಿಯ ಎತ್ತರದ ಗಟ್ಟಿಮುಟ್ಟಿ ಮೈಕಟ್ಟಿನ ವೀರ ನಾಗಿದ್ದನು; ಆತನ ಮೊಗಮಿಸೆಗಳು ಅದೇ ಒಡೆಯುತ್ತಿದ್ದವು; ಅವನ ವಯಸ್ಸು ಹೆಚ್ಚುತ್ತ ಬಂದಂತೆ, ಅವನಲ್ಲಿ ಸ್ವದೇಶದ ವಿಷಯದ ಪ್ರೇಮವೂ, ಮುಸಲ್ಮಾನರ ವಿಷಯದ ತಿರಸ್ಕಾರವೂ ಹೆಚ್ಚತೊಡಗಿದ್ದವು. ಅವನು ತನ್ನ ಸಂಗಡಿಗರನ್ನು ಕೂಡಿಕೊಂಡು ಗರಡಿಯ ಮನೆಯಾಡುವದು, ದಾಂಡಪಟ್ಟೆ ತಿರುವುದು, ಗುರಿ ಹೊಡೆಯುವದು, ಖಡ್ಗ–ಭಾಲೆಗಳನ್ನು ಪ್ರಯೋಗಿಸುವದು, ದಮ್ಮು ಕಟ್ಟಿ ಓಡುವದು, ನೆಲದಮೇಲಿಂದ ಟಣ್ಣನೆ ಹಾರುವದು, ಮೇಲಿ ನಿಂದ ಕೆಳಕ್ಕೆ ಧುಮುಕುವದು ಮೊದಲಾದ ಬಗೆಬಗೆಯ ಯುದ್ಧಕಲೆಯನ್ನು ಸಂಪಾದಿಸಿದ್ದನು. ಹೀಗೆ ನೇತಾಜಿಯ ತರುಣ ವೀರರದೊಂದು ಗುಂಪೆ ಆ ಚೌಕ ಗ್ರಾಮದಲ್ಲಿ ನಿರ್ಮಾಣ ವಾಗಿತ್ತೆಂದು ಹೇಳಬಹುದು. ನೇತಾಜಿಯ ಈ ರೀತಿಯನ್ನು ನೋಡಿ ನೆರೆಹೊರೆಯ ಹಳ್ಳಿಯ ತರುಣರೂ ತಮ್ಮತಮ್ಮ ಗ್ರಾಮಗಳಲ್ಲಿ ಅಭಿಮಾನದಿಂದ ಅಂಥ ಗಟ್ಟಿಗರಾದ ತಮ್ಮ ತರುಣ ತಂಡಗಳನ್ನು ಕಟ್ಟಿಕೊಳ್ಳಹತ್ತಿದರು. ಕ್ರೂರ ಮುಸಲ್ಮಾನರ ಕಾಟವನ್ನು ತಪ್ಪಿಸಿಕೊಳ್ಳಲಿಕ್ಕೆ ''ಸೇರಿಗೆ ಸವ್ವಾಸ್ಸೇರು'' ಎಂಬಂತೆ, ಮಹಾರಾಷ್ಟ್ರದ ತುಂಬ ಇಂಥ ತರುಣ ವೀರರ ತಂಡ ಗಳು ಹಬ್ಬಿ ಹರಿಬೀಳುವದು ಅತ್ಯವಶ್ಯವೆಂದು ವೀರವೃತ್ತಿಯವರಿಗೆ ತೋರಹತ್ತಿತು. ಪ್ರತಿ ಒಂದು ಗ್ರಾಮದ ಈ ವೀರರ ತಂಡಗಳು ಮುಸಲ್ಮಾನರಿಗೆ ತಮ್ಮ ಕೈ ತೋರಿಸುವ ವಿಷಯ ದಲ್ಲಿ ಮೇಲಾಟವನ್ನು ತೋರಿಸಹತ್ತಿದ್ದರಿಂದ, ಮುಸಲ್ಮಾನರ ಚಕ್ಕಂದಕ್ಕೆ ವಿಘ್ನ ಒದಗ ತೊಡಗಲು, ಮರಾಟರನ್ನು ಬಗ್ಗು ಬಡಿಯಲಿಕ್ಕೆ ಅವರು ಹಲವು ಉಪಾಯಗಳನ್ನು ಮಾಡ ತೊಡಗಿದರು; ಆದರೆ ಇದರಿಂದ ಖಂಗಿಗೆದ್ದಿದ್ದ ತರುಣ ಮರಾಟರ ಒಗರೂ, ಸುಖ ಲೋಲುಪರಾಗಿದ್ದ ಮುಸಲ್ಮಾನ ದಂಡಾಳುಗಳ ಹೇಡಿತನವು ಪ್ರಸಂಗವಶಾತ್ ಪ್ರಕಟವಾಗ ತೊಡಗಿ, ಮುಸಲ್ಮಾನರ ಅಂಜಿಕೆಯ ಕಸುವು ದಿನದಿನಕ್ಕೆ ಕಡಿಮೆಯಾಗತೊಡಗಿತು.

ಈ ತರುಣ ತಂಡಗಳಲ್ಲಿ ನೇತಾಜಿಯ ತಂಡವು ಪ್ರಮುಖವಾದದ್ದಿತ್ತೆಂದು ಹೇಳಬಹುದು. ಆ ಕಲ್ಯಾಣದ ಸುಭೆಯ ಹಳ್ಳಿಗಳಲ್ಲಿ ತರುಣರ ನೇತಾಜಿಯು ಗೌರವವೂ ಚನ್ನಾಗಿ ಇತ್ತು; ಆದ್ದರಿಂದ ಪ್ರಸಂಗದಲ್ಲಿ ಹಳ್ಳಿಯ ಆ ತರುಣರ ಗುಂಪುಗಳು ನೇತಾಜಿಗೆ ದೇಹ ದಂಡನದಿಂದ ಬೇಕಾದ ಸಹಾಯ ಮಾಡುವಹಾಗಿದ್ದವು. ಯಾವದೊಂದು ಹಳ್ಳಿಯಲ್ಲಿ ಮುಸಲ್ಮಾನ ಸಿಪಾಯಿಗಳು ಬಂದ ಕೂಡಲೆ, ಆ ಹಳ್ಳಿಯ ತರುಣರು ನೆರೆಹಳ್ಳಿಗಳ ತರುಣ ತಂಡಗಳಿಗೆ ಕೂಡಲೆ ಸುದ್ದಿ ತಿಳಿಸಲು, ಆ ಸಂಕಟಕ್ಕೊಳಗಾದ ಹಳ್ಳಿಯವರಿಗೆ ತಪ್ಪದೆ ಸಹಾಯವು ದೊರೆಯುತ್ತಿತ್ತು; ಆದರೆ ಆ ತರುಣರ ತಂಡಗಳು ಹಿರಿಯರ ಮಾತು ಮೀರುತ್ತಿದ್ದಿಲ್ಲ; ತಮ್ಮ ಧರ್ಮ ವಿರುದ್ಧವಾದ ಆಚರಣೆಗಳನ್ನು ಆಚರಿಸುತ್ತಿದ್ದಿಲ್ಲ; ಮುಸಲ್ಮಾನರ ಗೋವಧ–ದೇವರ ಮೂರ್ತಿಗಳ ಒಡೆಯುವದು, ಸ್ತ್ರೀಯರ ಪಾತಿವ್ರತ್ಯ ಭಂಗಮಾಡುವದು ಮೊದಲಾದ ಅತ್ಯಾಚಾರಗಳಿಂದ ಆ ತರುಣರ ರಕ್ತವು ಚಿಲಿಚಿಲಿ ಉಕ್ಕುತ್ತಿತ್ತು. ದೇವರ ಕೃಪೆಯಿಂದಲೂ, ಹಿರಿಯರ ಆಶೀರ್ವಾದದಿಂದಲೂ ಬೇಕಾದದ್ದು ಆದೀತೆಂಬ ನಂಬಿಗೆಯಿದ್ದದ್ದರಿಂದ, ಅವರ ಭಕ್ತಿಭಾವವು ದೇವರಲ್ಲಿಯೂ ಗುರುಹಿರಿಯರಲ್ಲಿಯೂ ಹೆಚ್ಚುತ್ತಲಿತ್ತು. ಆಗ ನಾಲ್ಕೂ ಕಡೆಗೆ ಹಬ್ಬಿದ್ದ ಶಿವನೇರಿಯ ಶಿವಾಜಿಯ ಕೀರ್ತಿಗೆ, ಆತನ ಗೋಬ್ರಾಹ್ಮಣರ ಪ್ರತಿಪಾಲನವೂ ಭವಾನಿಯ ಕೃಪೆಯೂ ಆತನ ತಾಯಿ ಜೀಜಾಬಾಯಿಯ ಆಶೀರ್ವಾದವೂ ಕಾರಣವೆಂಬ ಸುದ್ದಿಯು ಎಲ್ಲರ ಕಿವಿಗೆ ಬಿದ್ದಿರುವದರಿಂದ, ''ಹಿರಿಯಕ್ಕನ ಚಾಳಿ ಮನೆ ಮಂದಿಗೆಲ್ಲ'' ಎಂಬ ನಿಯಮದಂತೆ, ಆಗ ಮಹಾರಾಷ್ಟ್ರದ ತರುಣರೆಲ್ಲ ರಾಷ್ಟ್ರ ಮುಖಂಡನಾದ ಆ ಶಿವಾಜಿಯಂತೆ ತಾವು ಆಗಬೇಕೆಂದು ಯತ್ನಿಸುತ್ತಿದ್ದರು. ಆದ್ದರಿಂದ ಅವರಲ್ಲಿ ಶಿವಾಜಿಯ ಮಾತೃ ಭಕ್ತಿ, ದೇವಭಕ್ತಿ, ಧರ್ಮಶ್ರದ್ಧೆ, ಸದಾಚಾರ ಪ್ರೀತಿ, ಪರನಾರೀ ಸೋದರತ್ವ, ಭೂತದಯೆ, ಪರಧರ್ಮಸಹಿಷ್ಣುತೆ, ಸ್ವಾಮಿಭಕ್ತಿ ಮೊದಲಾದ ಒಂದಲ್ಲ, ಎರಡಲ್ಲ, ಹಲವು ಸದ್ಗುಣರೂಪ ಸ್ವರಾಜ್ಯ – ಸುಗಂಧವು ಭರದಿಂದ ಉತ್ಪನ್ನವಾಗತೊಡಗಿತು ಅಂತೇ ಮರಾಟರ ಪರನಾರೀ ಸೋದರತ್ವ, ಸ್ವಧರ್ಮನಿಷ್ಠೆ, ಪರಧರ್ಮ ಸಹಿಷ್ಣುತೆ, ಮೊದಲಾದ ಸದ್ಗುಣಗಳು ಈಗಲೂ ಇತಿಹಾಸ ಪ್ರಸಿದ್ಧವಾಗಿರುವವು. ಆಗಿನ ಕಾಲದಲ್ಲಿ ಈಶ್ವರಸಂಕೇತದಂತೆ ಮಹಾರಾಷ್ಟ್ರದಲ್ಲಿ ಶ್ರೀ ಸಮರ್ಥ ರಾಮದಾಸರು, ತುಕಾರಾಮ ಸಾಧುಗಳು, ಮೋರಯಾ ಗೋಸಾವಿಯರು ಮೊದಲಾದ ಹಲವು ಮಹಾ ಮಹಾ ಭಗವದ್ಭಕ್ತರ ಪ್ರಭಾವವು ವಿಶೇಷವಾಗಿ ಇದ್ದದ್ದರಿಂದ ಅಲ್ಲಿಯ ಜನರಲ್ಲಿ ಸ್ವಚ್ಛಂದ ವೃತ್ತಿಗೂ, ಅಡ್ಡದಾರಿಗೂ, ಉದ್ಧಟತನಕ್ಕೂ, ಅಹಂಕಾರಕ್ಕೂ, ನಾಸ್ತಿಕತನಕ್ಕೂ, ಧರ್ಮಲಂಡತನಕ್ಕೂ ಆಸ್ಪದವು ಉಂಟಾಗುತ್ತಿದ್ದಿಲ್ಲ ಕಾರಣ ಆಗಿನ ಮಹಾರಾಷ್ಟ್ರವು ಅಸುರೀಭಾವದ್ದಾಗಿರದೆ, ದೈವೀಭಾವದ್ದಾಗಿತ್ತು; ಅಂದರೆ ಮರಾಟರು ದೇವರಲ್ಲಿಯೂ ಧರ್ಮದಲ್ಲಿಯೂ ವಿಶೇಷ ನಂಬಿಗೆಯಿಟ್ಟು ನಡೆಯುತ್ತಿದ್ದರು. ಇರಲಿ.

''ಮಗಳು ಹದಿನೈದು ವರ್ಷದವಳಾದರೂ ಇನ್ನೂ ಲಗ್ನವಾಗಲೊಲ್ಲದು, ಜನರು ತನ್ನನ್ನು ಆಡಿಕೊಳ್ಳುವರು; ಆದ್ದರಿಂದ ದೇವರಮೇಲೆ ಭಾರ ಹಾಕಿ ಗಂಗೆಯ ಲಗ್ನವನ್ನು ಬೇಗನೆ ಮಾಡಿಬಿಡಬೇಕು'' ಎಂದು ನೇತಾಜಿಯ ತಂದೆಯು ನಿಶ್ಚಯಿಸಿ, ಉತ್ತಮ ವರನನ್ನು ನೋಡಬೇಕೆಂದು,

ತನ್ನ ಚೌಕ ಗ್ರಾಮಕ್ಕೆ ವಿಶೇಷ ಸಂಬಂಧವಿದ್ದ ವಡಗಾವ ಎಂಬ ಊರಿಗೆ ಹೋದನು. ಗಂಗೆಯ ತಂದೆಯು ಬಡವನು, ಆದರೆ ಗಂಗೆಯ ಸೌಂದರ್ಯ–ಸದ್ಗುಣಗಳು ರಾಜಕುವರಿಯ ರಲ್ಲಿಯೂ ಇರುವದು ಅಪರೂಪವೆಂದು ಹೇಳುವ ಹಾಗಿತ್ತು. ಗಂಗೆಯ ಈ ಸಲಕ್ಷಣತೆಯು ಈ ಮೊದಲೇ ವಡಗಾವದ ಜನರಿಗೆಲ್ಲ ಗೊತ್ತಾಗಿದ್ದದ್ದರಿಂದ, ಒಬ್ಬ ಶ್ರೀಮಂತ ತರುಣನು ಗಂಗೆಗೆ ವರನಾಗಿ ದೊರೆತನು. ಮುಖ್ಯವಾಗಿ ಕನ್ಯೆಯಲ್ಲಿ ಲಕ್ಷವಿಟ್ಟು ಈ ಸುಯೋಗವು ಒದಗಿತು. ಹುಡುಗೆಯು ದೊಡ್ಡವಾಗಿ ಬಿಟ್ಟದ್ದರಿಂದ, ಇನ್ನು ಲಗ್ನಕ್ಕೆ ವಿಳಂಬ ಮಾಡುವದು ಯೋಗ್ಯ ವಲ್ಲವೆಂದು ಉಭಯ ಪಕ್ಷದವರೂ ತಿಳಿದು, ಎಂಟೇ ದಿನದ ಅವಧಿಯಿಂದ ಲಗ್ನ ಮುಹೂರ್ತವು ನಿಶ್ಚಯವಾಯಿತು; ಆದರೆ, ವರ ಮನೆತನದವರು ಶ್ರೀಮಂತರಾದದ್ದರಿಂದ, ತಮ್ಮಲ್ಲಿಯೇ ಲಗ್ನವಾಗಬೇಕೆಂದು ಹಟಹಿಡಿದರು. ಹೆಣ್ಣು ಕಟ್ಟಿಕೊಂಡು ಹೋಗುವದು ಸಂಪ್ರದಾಯಕ್ಕೆ ವಿರುದ್ಧವಾದರೂ, ವರ ಮನೆತನದ ಕಡೆಗೂ, ತನ್ನ ಬಡತನದ ಕಡೆಗೂ ಲಕ್ಷ ಗೊಟ್ಟು ನೇತಾಜಿಯ ತಂದೆಯು ಅದಕ್ಕೆ ಒಪ್ಪಿಕೊಂಡು, ತಡಮಾಡದೆ ಲಗ್ನದ ಸೌರಣೆಗಾಗಿ ತನ್ನ ಚೌಕ ಗ್ರಾಮಕ್ಕೆ ಧಾವಿಸಿ ಬಂದನು.

ನೇತಾಜಿಯ ತಂದೆಯು ಬಡವನಾದರೂ ಕಷ್ಟಪಟ್ಟು ದೊಡ್ಡ ಮನಸ್ಸಿನಿಂದ ಲಗ್ನದ ಸೌರಣೆಯನ್ನು ಮಾಡಿದನು; ಆದರೆ ಆಗಿನ ಮುಸಲ್ಮಾನರ ಕ್ರೂರತನದ ಕಾಲದಲ್ಲಿ ವಡಗಾವ ದವರೆಗೆ, ಅಂದರೆ ಎಂಟು–ಹತ್ತು ಹರದಾರಿಯ ತನಕ ನಿಬ್ಬಣವನ್ನು ಹೊರಡಿಸಿಕೊಂಡು ಹೋಗುವದು ಕಠಿಣವೆಂದು ಆತನು ಚಿಂತಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಆಗಿನ ಕಾಲದಲ್ಲಿ ಎಲ್ಲ ಕಡೆಗೂ ಮುಸಲ್ಮಾನ ಸಿಪಾಯಿಗಳ ಅಸಹ್ಯ ಕೃತಿಗಳು ತೆರಪಿಲ್ಲದೆ ನಡೆಯುತ್ತಿದ್ದವು; ಆದ್ದರಿಂದ ಯಾವ ಕಾಲಕ್ಕೆ ಎಂಥ ಪ್ರಸಂಗ ಒದಗೀತೆಂಬದರ ನಿಯಮವಿದ್ದಿಲ್ಲ. ಸಂಗಡ ಗಟ್ಟಿಗರಿಲ್ಲದೆ ನಿಬ್ಬಣ ಹೊರಡಿಸಿಕೊಂಡು ಹೋಗುವದು ನೇತಾಜಿಯ ತಂದೆಗೆ ಸುರಕ್ಷಿತವಾಗಿ ತೋರಲಿಲ್ಲ. ಆಗ ಆ ಮುದುಕನು ಈ ವಿಷಯದಲ್ಲಿ ಏನು ಮಾಡಬೇಕೆಂದು ತನ್ನ ಮಗನಾದ ನೇತಾಜಿ ಯನ್ನು ಕೇಳಲು, ಆ ತರುಣ ವೀರನು ತನ್ನ ತಂದೆಗೆ—"ಅಪ್ಪಾ, ಅದರ ಚಿಂತೆ ನಿನಗೇಕೆ? ಶ್ರೀ ಬಲಭೀಮ ಮಾರುತಿರಾಯನು ನಮ್ಮ ಬೆನ್ನ ಮೇಲಿದ್ದಾನೆ, ಆತನು ನಮ್ಮನ್ನು ಕಾಯಲಿಕ್ಕೆ ಸಮರ್ಥನಿರುವನು. ಸಮೀಪದ ನಾಲ್ಕು ಹಳ್ಳಿಗಳ ತರುಣ ತಂಡಗಳಿಗೆ ಲಗ್ನಕ್ಕೆ ಬರಲು ಹೇಳಿ ಕಳಿಸಿದ್ದೇನೆ. ನಾವು ಹೊರಡುವದರೊಳಗೆ ಹಿಂದು ಮುಂದೆಯಾಗಿ ಅವರು ಬರುವರು. ಅಂಥ ಪ್ರಸಂಗ ಬಂದರೆ, ಈ ಕಲ್ಯಾಣ ಸುಭೆಯ ಬೇಕಾದ ಹಳ್ಳಿಯಲ್ಲಿ ತರುಣರ ಹೊಸ ಸಹಾಯ ವನ್ನು ನಾವು ಸಂಪಾದಿಸೋಣವಂತೆ. ಆ ಸಹಾಯಕ ಜನರ ಹೊಟ್ಟೆಯ ಚಿಂತೆಯನ್ನೂ ನೀನು ವಿಶೇಷವಾಗಿ ಮಾಡಬೇಡ, ಅವರು ತಮ್ಮ ತಮ್ಮ ರೊಟ್ಟಿ ಬುತ್ತಿಗಳನ್ನು ಕಟ್ಟಿಕೊಂಡು, ಕತ್ತಿ ಢಾಲು, ಭಾಲೆ ಮೊದಲಾದ ಸಾಧನಗಳಿಂದ ಸಜ್ಜಾಗಿ ನಮ್ಮ ಸಹಾಯಕ್ಕೆ ಬರುವರು.

ಮಗನ ಈ ಮಾತುಗಳನ್ನು ಕೇಳಿ ಆ ಮುದುಕನಿಗೆ ಸಮಾಧಾನವಾಯಿತು. ವಾಸ್ತವವಾಗಿ ತರುಣರ ಈ ರಾಜಸ ವೃತ್ತಿಯ ತಂಡಗಳು ಸಾತ್ವಿಕ ಸ್ವಭಾವದ ಆಗಿನ ಆ ಮುದುಕರ ಮನಸ್ಸಿಗೆ ವಿಲಕ್ಷಣವಾಗಿ ತೋರುತ್ತಿದ್ದವು; ಈ ಮಂಡ ಹುಡುಗರ ತಂಡಗಳಿಂದ ಮುಸಲ್ಮಾನರು ಸಿಟ್ಟಿಗೆದ್ದು

ಏನು ಅನರ್ಥ ಮಾಡುವರೋ ಎಂದು ಅವರು ಅಂಜುತ್ತಿದ್ದರು; ಆದರೆ ಆ ತರುಣರ ತಂಡಗಳ ಆಜ್ಞಾಧಾರಕತೆ, ವಿನಯಭಾವ, ಗುರುಹಿಯರ ಮೇಲಿನ ಭಕ್ತಿ, ಸ್ವಧರ್ಮಾಭಿಮಾನ, ಸದ್ಗುಣ ಪ್ರೀತಿ, ದೀನವಾತ್ಸಲ್ಯ, ಸ್ವಾರ್ಥರಾಹಿತ್ಯ ಇವನ್ನು ನೋಡಿ ಅವರ ವಿಷಯದ ಒಂದು ಬಗೆಯ ಆದರ ಭಾವವೂ ಆ ಮುದುಕರಲ್ಲಿ ಆಗಾಗ್ಗೆ ಉತ್ಪನ್ನವಾಗುತ್ತಲಿತ್ತು; ಮತ್ತು ಈ ವರೆಗೆ ಆ ತರುಣ ತಂಡಗಳು ಮುಸಲ್ಮಾನರ ಹಾವಳಿಯನ್ನು ತರುಬಿ ನಿಲ್ಲಿಸಿದ್ದು ಎಷ್ಟೋ ಸಾರೆ ಅವರ ಅನುಭವಕ್ಕೂ ಬಂದಿತ್ತು; ಸದ್ಯಕ್ಕಂತು ಗಟ್ಟಿಗರಾದ ತರುಣರ ಸಹಾಯವು ಬೇಕೇ ಬೇಕಾಗಿದ್ದದ್ದರಿಂದ ಆ ದೊಡ್ಡ ಮನಸ್ಸಿನ ಮುದುಕನು ಆವೇಶದಿಂದ ತನ್ನ ಮಗನಿಗೆ—''ನೇತ್ಯಾ, ಅವರು ರೊಟ್ಟಿ ಬುತ್ತಿ ಕಟ್ಟಿಕೊಂಡೇಕೆ ಬರುವರೆಲೆ? ನಮಗೇನು ಅಂಥ ಬಡತನ ಬಂದಿದೆ? ನಮ್ಮ ಗಂಗೆಯ ಲಗ್ನಕ್ಕೆ ಬಂದು, ಅವರು ತಮ್ಮ ರೊಟ್ಟಿ ಬುತ್ತಿ ತಿನ್ನಬೇಕೆ? ಬೇಕಾದಷ್ಟು ಖರ್ಚಾಗಲಿ, ಹಾದಿಗೆ ಗಡದ್ದು ಪಾಲದಿ ಉಂಡಿಗಳನ್ನು ಮಾಡಿಸಿದ್ದೇನೆ; ಹೊರಿಗಟ್ಟಲೆ ಗೋದಿರೊಟ್ಟಿ ಕಟ್ಟಿಸಿದ್ದೇನೆ; ಬೇಕಾದಷ್ಟು ಬುತ್ತಿಯಿದೆ, ನೂರು ಮಂದಿ ಬರಲಿ, ನೀನು ಚಿಂತೆ ಮಾಡಬೇಡ; ಸಾಲವಾದರೆ ದುಡಿದು ತೀರಿಸೋಣವಂತೆ! ಸದ್ಯಕ್ಕೆ ಹೊಲ ಒತ್ತಿ ಹಾಕಿದರಾಯಿತು, ಅದಕ್ಕೇಕೆ ಚಿಂತೆ?

ತಂದೆ ಮಕ್ಕಳು ಇಷ್ಟು ಮಾತಾಡುವದರೊಳಗೆ ನೆರೆಹಳ್ಳಿಯ ಇಪ್ಪತ್ತೈದು ಜನ ತರುಣರದೊಂದು ತಂಡವು ಅಲ್ಲಿಗೆ ಬಂದಿತು. ಅವರನ್ನು ನೋಡಿ ಮುದುಕನು ಉಲ್ಲಾಸದಿಂದ —''ಬರ್ರಿ ಮಕ್ಕಳಿರಾ, ಹೊತ್ತಿಗೆ ಬಂದಿರಿ ಬರ್ರಿ! ಏಳಿರಿ, ಮಕ ತೊಳೆಯಿರಿ, ಬೇಗನೆ ಊಟ ಮಾಡಿರಿ, ನಿಬ್ಬಣ ಹೊರಡಲಿಕ್ಕೆ ತಡವಾಗುವದು'' ಅನ್ನಲು ಆ ತಂಡದ ಮುಖ್ಯನು—''ಅಜ್ಜಾ, ನಮ್ಮ ಊಟದ ಚಿಂತೆ ಮಾಡಬೇಡ; ಇದೇ ಈಗ ಊಟಮಾಡಿ ಬಂದಿದ್ದೇವೆ; ಸಂಜೆಯ ತನಕ ಮಿಸುಕುವಹಾಗಿಲ್ಲ, ಬಂಡೀಕಟ್ಟು, ಹೊತ್ತಾಗುವದು, ಹಾದಿ ಸುಮಾರು, ಕಣ್ಣು ಬೆಳಕಿಲೆ ಮಜಲು ಮುಟ್ಟುವದು ನೆಟ್ಟಗೆ'' ಅನ್ನಲು, ಆ ಮುದುಕನು—''ಹೌದೆಲೇ, ಆ ಕೆಟ್ಟ ಮುಸಲರ ಅಂಜಿಕೆ ಬಹಳ'' ಎಂದು ನುಡಿಯುತ್ತಿರುವದರೊಳಗೆ ಆ ತಂಡ ಮುಖ್ಯನಾದ ಏಸ್ಯಾನು ತಿರಸ್ಕಾರದಿಂದ ನಕ್ಕು ಹಲ್ಲು ಕಡಿದು—''ಯಜ್ಜಾ, ಆ ಕೆಟ್ಟ ಮುಸಲರ ಹೆಸರು ತೆಗೆಯಬೇಡ ನೋಡು, ಅವರೊಂದು ನಮ್ಮ ಕಣ್ಣಿಗೆ ಬೀಳಲಿ, ನಮ್ಮ ಗರಡಿಯ ವಸ್ತಾದಿಯಾದ ಬಾಜಿ ಪ್ರಭುವಿನ ಕೈ ಅವರಿಗೆ ಗೊತ್ತಾಗುವದು. ಇಗೋ, ಈ ಕತ್ತಿ–ಢಾಲು–ಬರ್ಚಿಗಳನ್ನು ನೋಡಲಿಲ್ಲೇನು ನೀನು? ಬೇಗನೆ ಹೊರಡೆಂದು ನಾನು ಹೇಳಿದ್ದು ಮುಸಲರ ಅಂಜಿಕೆಗಲ್ಲ; ಆದರೆ ಒಗ್ಗಾಲಿಗಿಗ್ಗಾಲಿ, ಹುಡುಗರು ಹುಪ್ಪಡಿ, ಹೆಣ್ಣುಮಕ್ಕಳ ಕೆಲಸ, ಕಣ್ಣು ಬೆಳಕಿಲೆ ಹೋಗುವದು ನೆಟ್ಟಗೆಂದು ಹೇಳಿದೆನು. ಮುಸಲರ ಅಂಜಿಕೆ ನಿನಗೇಕೆ?

ಆ ಏಸ್ಯಾನ ಹುರುಪಿನ ಮಾತು ಕೇಳಿ ಆ ಮುದುಕನು ಹುರುಪುಗೊಂಡು—''ಹು! ಕಟ್ಟಿರೆಲೆ ಬಂಡಿಯ ಕೊರಳು'' ಅನ್ನಲು, ನಿಬ್ಬಣದ ಬಂಡಿಗಳು ಕೊರಳು ಕಟ್ಟಿ, ಮುಂದಕ್ಕೆ ಸಾಗಿದವು. ಆ ಮುದುಕನ ಲಗ್ನದ ಪರಿವಾರವೆಂದರೆ, ಎತ್ತು ಹೂಡಿದ ನಾಲ್ಕು ಬಂಡಿಗಳು, ಸಾಮಾನು ಹೊರುವ ಹದಿನೈದು ಇಪ್ಪತ್ತು ಕುದುರೆಗಳು, ಹೊಸದಾಗಿ ಸಹಾಯ ಮಾಡುವ

ದಕ್ಕಾಗಿ ಇದೇ ಈಗ ಬಂದಿದ್ದ ಇಪ್ಪತ್ತೈದು ಮಂದಿ ತರುಣರು, ಖುದ್ದ ಚೌಕ ಗ್ರಾಮದ ಮೂವತ್ತು ಜನ ತರುಣರು ಹೀಗೆ ಒಟ್ಟು ನೂರು ನೂರಾಹತ್ತು ಜನರು ಇದ್ದರು. ನಿಬ್ಬಣವು ಸಡಗರದಿಂದ ಚೌಕ ಗ್ರಾಮದಿಂದ ಹೊರಟಿತು. ನಿಬ್ಬಣವು ಸಾಗಿರುವಾಗ ಮುಂದೆ ಓಲಗ ಬಜಂತ್ರಿಗಳು ಬಾರಿಸುತ್ತಿದ್ದವು; ಎತ್ತುಗಳ ಕೊರಳೊಳಗಿನ ಗಂಟೆ–ಹುರಿಗೆಜ್ಜೆಗಳು ''ಗಣ ಗಣ'' ''ಗಿಲ್ ಗಿಲ್'' ಎಂಬ ಶಬ್ದ ಮಾಡುತ್ತಿದ್ದವು; ಹುಡುಗರು ಬಂಡಿಗಳಲ್ಲಿ ಕುಳಿತು — ''ಹೂ! ಗೂಳಿ ಗೂಳಿ,'' ''ಖಂಡ್ಯಾ ಖಂಡ್ಯಾ'' ಎಂದು ಎತ್ತುಗಳನ್ನು ಕೂತಲ್ಲೆ ಎದ್ದು ನಿಲ್ಲುತ್ತ ಬೆದರಿಸುತ್ತಿದ್ದರು. ತರುಣ ತಂಡದವರು ನಗುತ್ತ, ಕೆಲೆಯುತ್ತ, ವಿನೋದ ಮಾಡುತ್ತ ನಿಬ್ಬಣದ ಹಿಂದಿನಿಂದ ಸಾಗಿದ್ದರು; ಉತ್ಸವ ಪ್ರಿಯರಾದ ಹೆಣ್ಣುಮಕ್ಕಳು, ತಾವು ಈ ಮೊದಲೆ ಹೋಗಿದ್ದ ನಿಬ್ಬಣಗಳ ಸುದ್ದಿಯನ್ನು ಆನಂದದಿಂದ ಒಬ್ಬರ ಮುಂದೊಬ್ಬರು ಹೇಳುತ್ತಲಿದ್ದರು; ಮದಿಮಗಳಾದ ಗಂಗೆಯು—''ಅಹ! ನನ್ನ ಲಗ್ನಕ್ಕೆ ಎಷ್ಟು ಜನರು! ವಡಗಾವವು ಯಾವಾಗ ಬಂದೀತು'' ಎಂದು ಮನಸ್ಸಿನಲ್ಲಿ ಹಿರಿ ಹಿರಿ ಹಿಗ್ಗತೊಡಗಿದ್ದಳು; ಶೋಭೆಗಾಗಿ ಇಸಕೊಂಡು ಬಂದಿದ್ದ ನಾಲ್ಕು ದೊಡ್ಡ ಕುದುರೆಗಳು, ಹಾಗು ಎರಡು ತಂಡಗಳ ಇಬ್ಬರು ಮುಖ್ಯಸ್ಥರ ಎರಡು ಸಣ್ಣ ಕುದುರೆಗಳು ಇವು ಓಲಗದ ತಾಳದ ಗತ್ತಿನಲ್ಲಿ ಲಗಾಮು ಕಡಿಯುತ್ತ ಒನಪಿನಿಂದ ಸಾಗಿದ್ದವು.

ಈ ಚಂದದ ನಿಬ್ಬಣವು ಊರು ದಾಟಿ ಸ್ವಲ್ಪ ದೂರ ಹೋಗಲು, ಓಲಗ ಬಜಂತ್ರಿಗಳು ನಿಂತು, ಆ ಬಜಂತ್ರಿಯವರು ನಿಬ್ಬಣದ ಹಿಂದಿನಿಂದ ಬರತೊಡಗಿದರು; ಹುರಿಗೆಜ್ಜಿಯಗತ್ತಿನ ಮೇಲೆ ಎತ್ತುಗಳು ಬಡ ಬಡ ಹೆಜ್ಜೆ ಹಾಕಹತ್ತಿದವು. ಆ ಎರಡು ತಂಡಗಳ ತರುಣ ವೀರರು ನಿಬ್ಬಣದ ಸುತ್ತುವರಿದು ಅದನ್ನು ರಕ್ಷಿಸತೊಡಗಿದರು. ಆಗ ನಿಬ್ಬಣದವರಿಗೆ ಮುಸಲ್ಮಾನರು ಕಃಪದಾರ್ಥವಾಗಿ ತೋರಿದ್ದರೆ ಆಶ್ಚರ್ಯವಲ್ಲ. ನಿಬ್ಬಣದವರೆಲ್ಲ ತರುಣರ ತಂಡದವರನ್ನೆ ಕೌತುಕದಿಂದ ನೋಡುತ್ತಲಿದ್ದರು. ಆ ತಂಡಗಳ ಪ್ರತಿ ಒಬ್ಬ ತರುಣನು ಒಂದು ಗುಡಗೀ ಚಣ್ಣ ಹಾಕಿಕೊಂಡು, ಮೈಯಲ್ಲಿ ಕಂಠಿಯ ಕಮಾನಿನ ಅಂಗಿಯನ್ನು ತೊಟ್ಟುಕೊಂಡು, ತಲೆಗೆ ಮುಂಡಾಸವಿಟ್ಟು, ಬೆನ್ನಿಗೆ ಒಂದು ಕಂಬಳಿ, ಒಂದು ತಂಬಿಗೆ, ಒಂದು ರೊಟ್ಟಿಯ ಗಂಟು ಇಷ್ಟು ಕಟ್ಟಿದ್ದನು. ಪ್ರತಿ ಒಬ್ಬರ ಟೊಂಕದಲ್ಲಿ ಖಡ್ಗವು ಅಲೆದಾಡುತ್ತಿದ್ದು, ಟೊಂಕದಲ್ಲಿ ಕಠಾರಿ ಸಿಗಿಸಿ, ಬೆನ್ನಿಗೆ ಢಾಲು ಕಟ್ಟಿ, ಹೆಗಲಮೇಲೆ ಅವರು ಭಾಲೆಗಣೆ ಇಟ್ಟು ಕೊಂಡಿದ್ದರು. ಆ ತಂಡಗಳ ಪ್ರತಿಒಬ್ಬ ತರುಣನು ಗರಡಿಯ ಮನೆಯಾಡಿದವನೂ, ಹುರಿಕಟ್ಟಿನ ಮೈಯವನೂ, ಮುಸುಗುಟ್ಟುವ ಹರೆಯದವನೂ, ಮೊಗಮೊಸೆ ಮೂಡಿದವನೂ ಆಗಿದ್ದನು. ಆ ಒಂದೇ ಶಿಸ್ತಿನ ತರುಣರ ಹಿಂಡನ್ನು ನೋಡುವವರ ಮುಖದಿಂದ ಸಹಜವಾಗಿ—''ಹೌದಪ್ಪಾ! ಇದ್ದರೆ ಹುಡುಗರು ಹೀಗಿರಬೇಕು'' ಎಂಬ ಉದ್ಗಾರವು ಹೊರಡುತ್ತಿತ್ತು!

# ಸೊಕ್ಕಿನ ಸೊಗಡು

ಹೀಗೆ ನಿಬ್ಬಣವು ಸಡಗರದಿಂದ ಸಾಗಿ ಒಂದು ಹರದಾರಿ ಹೋಗಲು, ಧಾವರೀ–ಪಂಚಗಂಗಾ ನದಿಗಳ ಸಂಗಮ ಸ್ಥಳವು ಬಂದಿತು. ಆಗ ಹಗಲು ಒಂಬತ್ತು ತಾಸು ಹೊತ್ತು ಆಗಿರಬಹುದು. ವೈಶಾಖಮಾಸವಾದ್ದರಿಂದ, ಬಿಸಿಲು ಇನ್ನೂ ಅಷ್ಟು ತಗ್ಗಿದ್ದಿಲ್ಲ. ಹೊಳೆ ನೋಡಿದ ಕೂಡಲೆ ಹೆಂಗಸರೂ, ಹುಡುಗರೂ ನೀರು ಕುಡಿಯಲಿಕ್ಕೆಂದು ಬಂಡಿಯಿಂದ ಬಡಬಡ ಇಳಿಯ ಹತ್ತಿದರು. "ಹೊತ್ತಾಗುವದು, ಬೇಗನೆ ನೀರು ಕುಡಿದು ಬರಬೇಕು ನೋಡಿರಿ, ಕೊರಳು ಹರಿಯುವದಿಲ್ಲ" ಎಂದು ಬಂಡಿಯವರೂ, ಅನುಭವಿಕ ಜನರು ಕೂಗಿಕೂಗಿ ಹೇಳಹತ್ತಿದರು; ಆದರೆ ಕೇಳುವವರಾರು? ನಿಬ್ಬಣದ ಕೆಲಸ ಕೂಡಿದ ಮಂದಿ, ಹಾದಿಗೊಬ್ಬರು ಬೀದಿಗೊಬ್ಬರು ಬಂದವರು, ಆದ್ದರಿಂದ ಅವರ ಚಕ್ಕಂದಕ್ಕೆ ಆರಂಭವಾಯಿತು. ಯಾರು ಹೊಟ್ಟೆ ಹಸಿಯಿತೆಂದರು, ಯಾರು ತಂಬಿಗೆ ತಕ್ಕೊಂಡು ಹೊರಟರು, ಯಾರು "ಏನು ಬಿಸಲಪ್ಪಾ, ಉಶ್' ಎಂದು ಗಿಡದ ಬುಡದಲ್ಲಿ ಅಡ್ಡಾದರು, ಯಾರು ನೀರು ಕುಡಿಯುತ್ತ ಕಾಲ ಹೊಳೆಯ ನೀರಿನಲ್ಲಿ ಚಲ್ಲಾಟ ಮಾಡಹತ್ತಿದರು. ಅಂದಿನ ವಸತಿಯ ಊರು ಇನ್ನೂ ಎರಡು ಹರದಾರಿ ದೂರವಿತ್ತು, ಶಾಂತತೆಯ ಕಾಲವಾಗಿದ್ದರೆ, ತಾಸು ರಾತ್ರಿಯಾದರೂ ಅವರು ಆನಂದದಿಂದ ಊರು ಮುಟ್ಟಬಹುದಾಗಿತ್ತು; ಆದರೆ ಅದು ಮುಸಲ್ಮಾನರ ಅಬ್ಬರದ ತುಳಿತದ ಕಾಲವು. ವಿಜಾಪುರದ ಬಾದಶಹನು ಕಲ್ಯಾಣದ ಕೋಟೆಯನ್ನು ಅದೇ ಸ್ವಾಧೀನಪಡಿಸಿ ಕೊಂಡಿದ್ದು, ಕಲ್ಯಾಣದ ಸುಭೆಯು ಸಂಪೂರ್ಣವಾಗಿ ತನ್ನ ಸತ್ತೆಗೆ ಒಳಗಾಗಲಿಕ್ಕೆ. ಆ ಸಭೆಯೊಳಗಿನ " ರಾಜಾಮಾಚಿ" ಎಂಬ ದುರ್ಗವನ್ನು ಆತನು ಬೇಗನೆ ವಶಮಾಡಿಕೊಳ್ಳಬೇಕಾಗಿತ್ತು, ಆ ರಾಜಮಾಚಿ ದುರ್ಗವು ಚೌಕಗ್ರಾಮದ ಪ್ರದೇಶದಲ್ಲಿದ್ದದರಿಂದ, ಮುಸಲ್ಮಾನರ ಚಿಕ್ಕ ಚಿಕ್ಕ ಸೈನ್ಯಗಳು ಚೌಕ ಗ್ರಾಮದ ಮೇಲಿಂದ ಹಾದು ಆಗಾಗ್ಗೆ ಆ ದುರ್ಗಕ್ಕೆ ಹೋಗುತ್ತಿದ್ದವು. ಆ ದುರ್ಗವು ಸದ್ಯಕ್ಕೆ ಶಿವಾಜಿಯ ಕೈಕೆಳಗಿನ ತ್ರ್ಯಂಬಕರಾವ ಎಂಬ ಹೆಸರಿನ ಕಿಲ್ಲೇದಾರನ ಅಧೀನದಲ್ಲಿತ್ತು

ಈ ಸ್ಥಿತಿಯಲ್ಲಿ ನಿಬ್ಬಣದಲ್ಲಿಯ ವಿಚಾರವಂತರು ತಮ್ಮೊಳಗೆ—"ಎಷ್ಟು ಹೊತ್ತು ಮಾಡುವರಲ್ಲ! ತಿಳಿಗೇಡಿ ಜನರು, ಅನುವು ಅಪತ್ತು ಗೊತ್ತಿಲ್ಲ" ಎಂದು ಚಡಪಡಿಸಹತ್ತಿದರು. ನೇತಾಜಿಯ ತಂದೆ ಮುದುಕನಂತು ಬಾಯಲ್ಲಿ ಎಸರಿಲ್ಲದೆ—"ಬೇಗನೆ ಬಂಡಿ ಹತ್ತಿರಿ, ಬೇಗನೆ ಬಂಡಿ ಹತ್ತಿರಿ" ಎಂದು ಜನರಿಗೆ ಅಂಗಲಾಚಿ ಹೇಳಿಕೊಳ್ಳಹತ್ತಿದನು. ಬಂಡಿಯವರು ಬಂಡಿಗಳನ್ನು ಮೆಲ್ಲಗೆ ಮುಂದಕ್ಕೆ ಸಾಗಿಸಿದರು. ಆಗ ಹುಡುಗರೂ, ಹೆಂಗಸರೂ—"ಬಂಡಿಗಳು ಹೋಗುವವು ಬೇಗನೆ ಬರ್ರಿ" ಅನ್ನುತ್ತ ಓಡಿ ಓಡಿ ಬಂದು ಬಂಡಿಗಳನ್ನು ಹತ್ತಿಕೊಳ್ಳ ಹತ್ತಿದರು. ಹೀಗೆ ಇತ್ತ ನಿಬ್ಬಣದವರಲ್ಲಿ ಚಟುವಟಿಕೆಯುಂಟಾಗಿರುವಾಗ, ಅತ್ತ ತರುಣರ ತಂಡದಲ್ಲಿ ಏನೋ ಆಲೋಚನೆಯು ನಡೆದಿತ್ತು, ಮರಾಟರು ಅಡಗಿಕೊಂಡು ಯುದ್ಧ ಮಾಡುವಲ್ಲಿ ಬಲು ನಿಪುಣರೆಂಬದು ಇತಿಹಾಸ ಪ್ರಸಿದ್ಧವು. ಈ ರೀತಿಯ ಯುದ್ಧವು ಆ ಗುಡ್ಡಗಾಡು ಜನರ ಮೈಯುಂಡುಹೋಗಿತ್ತು, ಚೌಕ ಗ್ರಾಮದಿಂದ ನಿಬ್ಬಣ ಹೊರಡುವ

ಮೊದಲೇ, ಇಬ್ಬರು ಪಾಳತಿಗಾರರು ನಿಬ್ಬಣ ಹೋಗುವ ಹಾದಿಯ ಸ್ಥಿತಿಗತಿಯನ್ನು ತಿಳಿದು ಕೊಳ್ಳುವದಕ್ಕಾಗಿ ಮುಂದೆ ಹೋಗಿದ್ದರು. ಅವರಲ್ಲಿ ಒಬ್ಬನು, ಹೊಳೆಗೆ ನಿಬ್ಬಣವು ಬಂದು ಬೇಗನೆ ಹೊರಡುವ ಗದ್ದಲು ನಡೆದಾಗ ಅಲ್ಲಿಗೆ ಬಂದು, ನೇತಾಜಿಗೆ ಏನೋ ಸುದ್ದಿಯನ್ನು ಹೇಳಿದನು. ಆಗ ನೇತಾಜಿಯೂ, ಏಸ್ವಾನೂ ಏನೋ ಮುಸಲತ್ತು ನಡೆಸಿದ್ದರು; ಆದರೆ ನಿಬ್ಬಣ ದವರಿಗೆ ಅದರ ಸುದ್ದಿಯಿದ್ದಿಲ್ಲ. ಬಂಡಿಗಳು ಹೊಳೆಯಿಂದ ಮುಂದಕ್ಕೆ ಸಾಗಲು, ಒಮ್ಮಿಂದೊಮ್ಮೆ ತರುಣರ ತಂಡದಲ್ಲಿ ಅರ್ಧಕ್ಕರ್ಧ ಜನರು ಅಕಸ್ಮಾತ್ ಕಾಣದಾದರು. ಇದನ್ನು ನೋಡಿ ನಿಬ್ಬಣದಲ್ಲಿಯ ವಿಚಾರವಂತರಿಗೆ ಆಶ್ಚರ್ಯವಾಯಿತು; ಆದರೆ ಹೀಗೆ ಜನರು ಅಕಸ್ಮಾತ್ ಇಲ್ಲದಂತಾಗಲಿಕ್ಕೆ ಕಾರಣವೇನೆಂಬದು ಅವರಿಗೆ ತಿಳಿಯಲಿಲ್ಲ. ನೇತಾಜಿಯ ತಂದೆಯ ಕಿವಿಗೆ ಆ ಕಾರಣದ ಸುಳುವು ಸ್ವಲ್ಪ ಹತ್ತಿದ್ದರಿಂದ, ಆತನು ಚಿಂತಾತುರನಾಗಿ ಬಾಯಿಂದ ಏನೂ ಮಾತಾಡದೆ ನಿಬ್ಬಣದ ಸಂಗಡ ಗಾಂಭೀರ್ಯದಿಂದ ವಿಚಾರ ಮಾಡುತ್ತ ಸಾಗಿದ್ದನು. ಇದನ್ನು ನೋಡಿ, ಏನೋ, ಭಯದ ಚಿಹ್ನವಿರುವದೆಂದು ನಿಬ್ಬಣದಲ್ಲಿಯ ವಿಚಾರ ವಂತರು ತಿಳಿದುಕೊಂಡು ಆಲೋಚಿಸತೊಡಗಿದರು. ಬಹು ಜನ ತರುಣರು ಅಕಸ್ಮಾತ್ ಕಾಣದಹಾಗಾದದ್ದರಿಂದ, ಹೆಣ್ಣು ಮಕ್ಕಳಲ್ಲಿ ಕೆಲವರು ಕೌತುಕಪಟ್ಟು, ಕೆಲವರು ಭಯಪಟ್ಟು ತಾವು ಸುಮ್ಮನಾದದ್ದಲ್ಲದೆ, ಹುಡುಗರನ್ನು ಗದ್ದರಿಸಿ, ಹತ್ತಿಕ್ಕಿ, ಕುಕ್ಕರಬಡಿದು ಸುಮ್ಮನಿರಿಸ ಹತ್ತಿದರು. ಹೀಗಾಗಿ ಈ ವರೆಗೆ ಚಕ್ಕಂದಿಂದ ಕೆಲೆದಾಡುತ್ತಿದ್ದ ನಿಬ್ಬಣವು, ''ನಗೆ ಹೋಗಿ ಹೊಗೇಯಾದಂ''ತೆ ತೆಪ್ಪಗಾಯಿತು. ಹೆಣ್ಣು ಮಕ್ಕಳು ಒಬ್ಬರನ್ನೊಬ್ಬರು ನೋಡುತ್ತ ''ಜನರು ಎತ್ತ ಹೋದರು? ಏನಾಯಿತು?'' ಎಂದು ಮೆಲ್ಲನೆ ಒಬ್ಬರನ್ನೊಬ್ಬರು ಕೇಳಹತ್ತಿದರು; ಕೆಲವರು ಕಣ್ಣುಸನ್ನೆ ಕೈಸನ್ನೆ ಮಾಡಹತ್ತಿದರು; ಆದರೆ ಯಾರೂ ಯಾರಿಗೂ ಹೇಳಲೊಲ್ಲರು. ಹೀಗಿರುವಾಗ ನಿಬ್ಬಣವು ನಿಂತುಕೊಳ್ಳದೆ ನಿರುತ್ಸಾಹದಿಂದ ಸಾವಕಾಶವಾಗಿ ಮುಂದಕ್ಕೆ ಸಾಗುತ್ತಲೇ ಇತ್ತು.

ಈ ಸ್ಥಿತಿಯಲ್ಲಿ ನಿಬ್ಬಣವು ಅರ್ಧ ತಾಸು ಹಾದಿಯ ನಡೆದು ಹೋಗಿರಬಹುದು. ವಡಗಾವಿಗೆ ಹೋಗುವ ಹಾದಿಯು ಸಾಧಾರಣ ಗುಡ್ಡಗಾಡಿನದಾಗಿತ್ತು. ಆ ಮಾರ್ಗದ ಎಡಬಲ ಗಳಲ್ಲಿ ಎತ್ತರವಾದ ದಿನ್ನೆಗಳು ಅಲ್ಲಲ್ಲಿ ವಿಶೇಷವಾಗಿ ಇದ್ದವು; ಆದ್ದರಿಂದ ಹಾದಿಕಾರರಿಗೆ ಆ ದಿನ್ನೆಗಳ ಹಿಂದಿನ ಭಾಗವು ಏನೂ ಕಾಣುತ್ತಿದ್ದಿಲ್ಲ. ನಿಬ್ಬಣವು ಇಂಥದೇ ಒಂದು ದಿನ್ನೆಯ ಓರೆ ಹಿಡಿದು ಸಾಗಿರುವಾಗ, ಮುಂದೆ ಒಂದು ಬೈಲು ಪ್ರದೇಶದಲ್ಲಿ ಕೆಲವು ಮುಸಲ್ಮಾನ ಸಿಪಾಯಿಗಳು ಚಕ್ಕಂದದಿಂದ ಹರಟೆ ಕೊಚ್ಚುತ್ತ ಕುಳಿತುಕೊಂಡಿರುವಂತೆ ತೋರಿತು. ಅವರಿಗೆ ಈ ನಿಬ್ಬಣದ ಬಂಡಿಗಳು ಬರುತ್ತಿರುವ ಸಪ್ಪಳವು ದೂರದಿಂದಲೇ ಕೇಳಿಸಿತ್ತು; ಆದ್ದರಿಂದ ಯಾವದೋ ಒಂದು ಬೇಟೆಬಲೆಗೆ ಬಿತ್ತೆಂದು ಅವರು ಉಲ್ಲಾಸ ಪಡತೊಡಗಿದ್ದರು; ಆದರೆ ಅವರು ಸ್ಥಳ ಬಿಟ್ಟು ಕದಲಲಿಲ್ಲ. ಸಿಕ್ಕ ಬೇಟೆ ತಮ್ಮಿಂದ ತಪ್ಪಿಸಿಕೊಂಡು ಹೋಗುವದೆತ್ತ? ಎಂಬ ಹೆಮ್ಮೆಯಿಂದ ಅವರು ಕುಳಿತಲ್ಲಿ ಸ್ವಸ್ಥ ಕಾಲು ಕುಳಿತು ಬಿಟ್ಟಿದ್ದರು. ಆ ಮುಸಲ್ಮಾನ ದಂಡಾಳುಗಳು ಅಜಮಾಸು ನೂರು ಜನರಿರಬಹುದು. ಈ ಮಾತನ್ನು ಪಾಳತಿಗಾರನು ಮೊದಲೇ ನೇತಾಜಿ–ಏಸಾಜಿಯವರಿಗೆ ತಿಳಿಸಿದ್ದರಿಂದ, ಅದಕ್ಕೆ

ಅವರು ತಕ್ಕ ಹಂಚಿಕೆಯನ್ನು ಈ ಮೊದಲೇ ಮಾಡಿದ್ದರು. ಇಂತಹ ಸಂಕಟಗಳು ಬರುವ ದೆಂದರೆ, ಮರಾಟರ ಮೈ ಉಂಡು ಹೋಗಿಬಿಟ್ಟಿತು. ಆ ವಿಷಯದ ಅವರ ಅಂಜಿಕೆಯೂ ಮುರಿದುಹೋಗಿತ್ತು, ದಿನದ ಸಾವಿಗೆ ಅತ್ತವರಾರು? ನಿಬ್ಬಣವು ಸನಿಸನಿಯಕ್ಕೆ ಬಂದಬಂದ ಹಾಗೆ ಸಿಪಾಯಿಗಳಿಗೆ ನಿಬ್ಬಣದ ಸ್ವರೂಪವೂ, ನಿಬ್ಬಣಕ್ಕೆ ಸಿಪಾಯಿಗಳ ಸ್ವರೂಪವೂ ಸ್ಪಷ್ಟ ವಾಗಿ ಕಾಣಹತ್ತಿದವು.

ಈ ಮೊದಲೆ ನಿಬ್ಬಣದಲ್ಲಿಯ ಮೂವತ್ತು ಮೂವತ್ತೈದು ಜನರು ಆಕಸ್ಮಾತ್ ಇಲ್ಲದ ಹಾಗಾದದ್ದರಿಂದ, ನಿಬ್ಬಣದಲ್ಲಿ ಈಗ ಬಹಳವಾದರೆ, ಎಲ್ಲರು ಕೂಡಿ ಐವತ್ತು-ಅರವತ್ತು ಜನರು ಉಳಿದಿರಬಹುದು. ಅವರಲ್ಲಿ ಹೆಂಗಸರು, ಹುಡುಗರು ಹಾಗು ಮುದುಕರ ಸಂಖ್ಯೆಯೇ ಹೆಚ್ಚಾಗಿತ್ತು. ಈ ಸ್ಥಿತಿಯು, ನೂರಾರು ಜನರಿದ್ದ ಮುಸಲ್ಮಾನರ ಸಶಸ್ತ್ರ ಸಿಪಾಯಿಗಳಿಗೆ ಚಕ್ಕಂದದ್ದಾಗಿ ತೋರಿದ್ದು ಆಶ್ಚರ್ಯವಲ್ಲ. ಅದರಲ್ಲಿ ಮರಾಟರ ತರುಣರ ತಂಡದವರು, ಹಳ್ಳಿಗಾಡಿನ ಸದಾ ಉಡಿಗೆತೊಡಿಗೆಯ ಕಗ್ಗ ಜನರು. ಅವರು ಆ ಕಗ್ಗತನದ ಉಡಿಗೆತೊಡಿಗೆ ಗಳಿಂದ ಆ ತರುಣರ ಶಕ್ತಿ-ಯುಕ್ತಿಚಪಲತೆಗಳು ಮುಚ್ಚಿ ಹೋದದ್ದರಿಂದ, ಮುಸಲ್ಮಾನ ಸಿಪಾಯಿಗಳು ಅವರನ್ನು ನೋಡಿ ವಿನೋದದಿಂದ—''ಇವೇನು, ಕಾಫರ ಕುರಿಗಳ ಹಿಂಡು'' ಎಂದು ಚಪ್ಪಾಳೆ ಹೊಡೆದು ನಗಹತ್ತಿದರು. ಆ ಸಿಪಾಯಿಗಳ ತಿಂದುಂಡು ಸೊಕ್ಕಿದ ದುಂಡು ದೇಹ, ಕಂಡರೆ ಬೆಪ್ಪಾಗಿ ನಿಲ್ಲುವಂತಹ ಅವರ ಆಡಂಬರದ ಉಡಿಗೆತೊಡಿಗೆ ಅಂಜು ಬುರುಕರ ಎದೆ ಒಡೆಸಿ ನೀರು ಮಾಡುವ ಅವರ ಲಕಲಕಿಸುವ ಕತ್ತಿ, ಕಠಾರಿ-ತುಬಾಕಿಗಳ ಹೊಳವು, ನೋಡಿ ಬಾಯಿಮೇಲೆ ಕೈಯಿಟ್ಟುಕೊಳ್ಳುವಂಥ ಅವರ ಬೆಟ್ಟದಂಥ ಕುದುರೆಗಳು ಇವುಗಳ ಅಬ್ಬರದಲ್ಲಿ ಆ ಮುಸಲ್ಮಾನ ಸಿಪಾಯಿಗಳ ವಿಷಯಾಸಕ್ತಿಯ ಹೇಸಿತನವೂ, ಕಷ್ಟಕ್ಕೆ ತಡೆಯದ ಅವರ ಹೇಡಿತನವೂ ಮರೆಯಾಗಿ ಹೋಗಿದ್ದವು. ಆ ಸಿಪಾಯಿಗಳ ಕುದುರೆಗಳು ಅಲ್ಲಲ್ಲಿ ಸ್ವೇಚ್ಛೆಯಿಂದ ಚಿಗುರು ಹುಲ್ಲು ಮೇಯುತ್ತಿದ್ದವು. ಆಗ ನಿಬ್ಬಣದ ಜನರು ಅವರ ಕಣ್ಣಲ್ಲಿಯೇ ಕಾಣಲಿಲ್ಲ; ಆದರೆ ನಿಬ್ಬಣದವರು, ಅವರಲ್ಲಿಯೂ ವಿಶೇಷವಾಗಿ ತರುಣ ತಂಡ ದವರು ಆ ಸಿಪಾಯಿಗಳ ಈ ಎಚ್ಚರಗೇಡಿತನವನ್ನೂ ಡಾಂಭಿಕತನವನ್ನೂ ಚನ್ನಾಗಿ ಕಂಡು ಹಿಡಿದು ಹಿಗ್ಗಿದರು. ನಿಬ್ಬಣವು ತೀರ ಸನಿಯಕ್ಕೆ ಬರಲು, ಒಬ್ಬ ಸಿಪಾಯಿಯು ಕುಳಿತಲ್ಲಿಂದಲೇ ನಿಬ್ಬಣದವರನ್ನು ಕುರಿತು ಸೊಕ್ಕಿನಿಂದ—''ಯಾರು ನೀವು? ಇಷ್ಟು ಜನರು ಎಲ್ಲಿಗೆ ಹೋಗುತ್ತೀರಿ? ತರುಬಿರಿ ಬಂಡಿ!'' ಎಂದು ಗದ್ದರಿಸಿದನು. ಅದಕ್ಕೆ ಕುದುರೆಯಮೇಲೆ ಕುಳಿತಿದ್ದ ನೇತಾಜಿಯು ಕುದುರೆಯಮೇಲೆಯೇ ಕುಳಿತುಕೊಂಡು ಐಟಿನಿಂದ—''ಮಿಯಾಜೀ, ನಾವು ಲಗ್ನಕ್ಕೆ ಹೋಗುತ್ತೇವೆ, ಹೊತ್ತಾಯಿತು, ನಿಲ್ಲುವ ಹಾಗಿಲ್ಲ, ಬೇಕಾಗಿದ್ದರೆ ನೀವೇ ಇಲ್ಲಿಯ ತನಕ ಬರಬೇಕು, ಬಂಡಿ ತರುಬುವದಿಲ್ಲ!'' ಎಂದು ಗಟ್ಟಿಯಾಗಿ ಕೂಗಿ ಹೇಳಿದನು. ಆಗ ನಿಬ್ಬಣವು ಯಥಾಪ್ರಕಾರವಾಗಿ ಮುಂದಕ್ಕೆ ಸಾಗುತ್ತಲೇ ಇತ್ತು.

ನೇತಾಜಿಯ ಈ ಮಾತುಗಳು ಮುಸಲ್ಮಾನ ಸಿಪಾಯಿಗಳಿಗೆ ಉದ್ಧಟತನದವಾಗಿ ತೋರಿದ್ದರೆ ಆಶ್ಚರ್ಯವಲ್ಲ. ನೇತಾಜಿಯು ಬೇಕೆಂತಲೇ ಸೇರಿಗೆ ಸವ್ವಾಸೇರಾಗಿ ಈ ಮಾತು

ಗಳನ್ನು ಆಡಿದ್ದನು; ಆದ್ದರಿಂದ ನಾಲ್ಕು ಜನ ಸಿಪಾಯಿಗಳು ತಮ್ಮ ಮುಖ್ಯನ ಅಪ್ಪಣೆ ಯಂತೆ ತಮ್ಮ ಮುಸಲ್ಮಾನೀ ಭಾಷೆಯಿಂದ ಬೈಯುತ್ತ ನೇತಾಜಿಯ ಬಳಿಗೆ ರಭಸದಿಂದ ಬಂದು, ಅವನ ಕುದುರೆಯ ಲಗಾಮು ಹಿಡಿದು—''ಕ್ಯಾಬೆ ಕಾಫರ! ಎಷ್ಟು ಸೊಕ್ಕು ನಿನಗೆ, ಕುದುರೆಯ ಮೇಲೆ ಕುಳಿತೇ ಮಾತಾಡುವೆಯಾ? ಇಳಿ ಕೆಳಗೆ'' ಎಂದು ರಟ್ಟೆ ಹಿಡಿದು ನೆಲಕ್ಕೆ ಕೆಡವತೊಡಗಲು, ಚಪಲನೂ, ಬಲಿಷ್ಠನೂ ಆದ ನೇತಾಜಿಯು ರಟ್ಟೆ ಕೊಸರಿಕೊಂಡು ನೆಲಕ್ಕೆ ಧುಮುಕಿ ಆ ಸಿಪಾಯಿಯನ್ನು ಎತ್ತಿನೆಲಕ್ಕೆ ಕೆಡವಿ ಅವನ ಎದೆಯ ಮೇಲೆ ಕುಳಿತು ಅವನ ಎದೆಗೆ ಗುದ್ದಹತ್ತಿದನು. ಅದರಂತೆ ಸೊಕ್ಕಿನಿಂದ ಮೈಮರೆತು ಬಂದಿದ್ದ ಉಳಿದ ಮೂವರು ಸಿಪಾಯಿ ಗಳನ್ನೂ ಬೇರೆ ಮೂವರು ತರುಣ ಬಲಿಷ್ಠ ಮರಾಟರು ನೆಲಕ್ಕೆ ಕೆಡವಿ ಅವರ ಎದೆಯ ಮೇಲೆ ಕುಳಿತುಕೊಂಡು ಎದೆ ಎದೆ ಗುದ್ದಹತ್ತಿದರು. ಏನು ಮಾಡಿದರೂ ಗಟ್ಟಿಗರಾದ ಗರಡಿಯ ಮನೆಯ ಆ ಮರಾಟಾ ತರುಣರು ಕೆಳಗೆ ಬಿದ್ದಿದ್ದ ಆ ಸಿಪಾಯಿಗಳನ್ನು ಮೇಲಕ್ಕೆ ಏಳಗೊಡಲಿಲ್ಲ! ನೆಲಕ್ಕೆ ಬಿದ್ದ ಸಿಪಾಯಿಗಳು ತರುಣರ ಕಸುವಿನ ಗುದ್ದು ತಾಳಲಾರದೆ—''ಯಾ ಅಲ್ಲಾ! ಯಾ ಅಲ್ಲಾ! ತೋಬಾ ತೋಬಾ'' ಎಂದು ಕೂಗಹತ್ತಿದರು! ನಿಬ್ಬಣದವರು ಸುತ್ತಲೆ ಮುತ್ತಿಬಿಟ್ಟಿದ್ದ ರಿಂದ, ದೂರ ಕುಳಿತುಕೊಂಡಿದ್ದ ಸಿಪಾಯಿಗಳ ಹಿಂಡಿಗೆ ಏನೂ ಕಾಣಿಸಲಿಲ್ಲ; ಆದರೆ ತಮ್ಮವರ ಆರ್ತ ಧ್ವನಿಯು ಕಿವಿಗೆ ಬೀಳಲು, ಯಾವ ವಿಚಾರವೂ ಇಲ್ಲದೆ ಸಿಟ್ಟಾಗಿ ಅವರು ಬರಿಗೈಯಿಂದ ಬದುಬುದು ನಿಬ್ಬಣದ ಬಳಿಗೆ ಬಂದುಬಿಟ್ಟರು. ಅಷ್ಟರಲ್ಲಿ ನೇತಾಜಿಯು ಸಂಕೇತದ ಸಿಳ್ಳು ಹಾಕಲು, ಈ ಮೊದಲೆ ಗುಪ್ತರಾಗಿದ್ದ ಮೂವತ್ತು ಜನ ತರುಣರೂ, ಬೇರೊಂದು ಹಳ್ಳಿ ಯಿಂದ ಬಂದಿದ್ದ ಬೇರೆ ಇಪ್ಪತ್ತು ಜನ ತರುಣರೂ ಹೀಗೆ ಒಟ್ಟು ಐವತ್ತು ಜನರು ''ಏನು ಗದ್ದಲ? ಏನು ಗದ್ದಲ?'' ಎಂದು ಕೂಗುತ್ತ ಕೈಗೆ ಸಿಕ್ಕ ಮುಸಲ್ಮಾನರ ಶಸ್ತ್ರಗಳನ್ನು ತಕ್ಕೊಂಡು, ಕೈಗೆ ಸಿಕ್ಕ ಅವರ ಕುದುರೆಗಳನ್ನು ಹತ್ತಿಕೊಂಡು ಬಂದು ನಿಬ್ಬಣವನ್ನು ಮುತ್ತಿದರು! ಆಗ ನಿಬ್ಬಣ ದೊಳಗಿನ ಹೆಂಗಸರೂ, ಹುಡುಗರೂ, ಮುದುಕರೂ ಒತ್ತಟ್ಟಿಗೆ ಕುಳಿತುಕೊಂಡು ನೋಡ ಹತ್ತಿದರು.

ಹೀಗೆ ಆಕಸ್ಮಾತ್ತಾಗಿ ಭೂಮಿಯನ್ನೊಡೆದು ಎದ್ದು ಬಂದಂತೆ ಬಂದ ಮರಾಟರ ತರುಣರನ್ನು ನೋಡಿ, ಮುಸಲ್ಮಾನ ಸಿಪಾಯಿಗಳು ಹೌಹಾರಿ ಮುಂದುಗಾಣದೆ ನಿಂತು ಕೊಂಡರು. ಅವರ ಕೈಯಲ್ಲಿ ಶಸ್ತ್ರಗಳಿಲ್ಲ, ಹತ್ತಲಿಕ್ಕೆ ಅವರಿಗೆ ಕುದುರೆಗಳಿಲ್ಲ, ಗರಡಿಯ ಸಾಧಕ ಮಾಡಿ ಉಕ್ಕಿನ ಲಾಲಂಡಿಗೆಯಂತೆ ಬಿರುಸಾಗಿದ್ದ ಮರಾಟರ ತೋಳಶಕ್ತಿಗೆ, ತಿಂದುಂಡು ದುಂಡುಗಾಗಿದ್ದ ಮುಸಲ್ಮಾನ ಸಿಪಾಯಿಗಳ ಜೊಂಡ ತೋಳುಗಳ ಶಕ್ತಿಯು ಈಡಾಗದೆ, ಆ ಮುಸಲ್ಮಾನ ಸಿಪಾಯಿಗಳು ತರುಣರ ಪೆಟ್ಟು ತಿಂದು ಹಣ್ಣುಹಣ್ಣಾದರು. ಅಷ್ಟರಲ್ಲಿ ಆ ಬೈಲ ಲ್ಲಿದ್ದ ಉಳಿದ ಸಿಪಾಯಿಗಳು ಅವಸರದಿಂದ ತಮ್ಮ ಸಿಕ್ಕ ಶಸ್ತ್ರಗಳನ್ನು ತಕ್ಕೊಂಡು, ತಮ್ಮ ಸಿಕ್ಕ ಕುದುರೆಗಳನ್ನು ಹತ್ತಿಕೊಂಡು ''ಏಕ್ಯಾ, ಏಕ್ಯಾ'' ಎಂದು ಕೂಗುತ್ತ ನಿಬ್ಬಣದ ಬಳಿಗೆ ಬರಲು ಉಭಯ ಪಕ್ಷದವರೂ ಕೈಗೆ ಕೈ ಹತ್ತಿ ಕಾದತೊಡಗಿದರು. ಅಂದಿನ ತರುಣ ಮರಾಟರ ಕಾದಾಟವು ನಿಂತು ನೋಡುವಹಾಗಿತ್ತು, ಮರಾಟರ ತಂತ್ರಗಾರಿಕೆಯಿಂದ ಮೊದಲಿಗೇ

ಮುಸಲ್ಮಾನರು ಕೈಕಾಲುಗಟ್ಟಿಂತಾಗಿದ್ದರು. ರೊಚ್ಚಿಗೆದ್ದಿದ್ದ ಮರಾಟರು ಅಂದಿನ ಕಾಳಗದಲ್ಲಿ ಅಸಿಮಿಸಿ ನೋಡಲಿಲ್ಲ. ಚಪಲರಾದ ಕೆಲವು ಮರಾಟಾ ತರುಣರು, ನೆಲದಮೇಲಿಂದ ಟಣ್ಣನೇ ಮುಸಲ್ಮಾನರ ಕುದುರೆಗಳ ಹಿಂದೆ ಹಾರಿ ಕುಳಿತು, ತಮ್ಮ ಮುಂದೆ ಕುಳಿತಿದ್ದ ಸಿಪಾಯಿಗಳ ಕೈಯೊಳಗಿನ ತುಬಾಕಿಗಳನ್ನು ಕಸಿದು ದೂರ ಬಿಸುಟಿದರು; ಕೆಲವರು ಕೆಳಗಿನಿಂದಲೇ ಹಾರಿ ಸಿಪಾಯಿಗಳ ರೆಟ್ಟೆಗೆ ಕೈಹಾಕಿ ಜೋಲಿ ಹೊಡೆದು ಸಿಪಾಯಿಗಳನ್ನು ನೆಲಕ್ಕೆ ಕೆಡವಿ ಹಣಿದರು; ಕೆಲವರು, ತಾವು ಹತ್ತಿಕೊಂಡಿದ್ದ ಆ ಮುಸಲ್ಮಾನ ಸಿಪಾಯಿಗಳ ಕುದುರೆಗಳನ್ನೇ ಮುಸಲ್ಮಾನ ರಾವುತರಮೇಲೆ ಹಾಕಿ ಅವರೊಡನೆ ಶೌರ್ಯದಿಂದ ಕಾದಾಡ ತೊಡಗಿದರು. ಮರಾಟರ ಗರಡೀ ಸಾಧಕದ ಕಸುವಿನ ಕೈಗಳಿಗೆ, ಆಯತ ಸಮಯಕ್ಕೆ ಮುಸಲ್ಮಾನರ ಉತ್ತಮ ಶಸ್ತ್ರಗಳೂ, ಅವರಿಗೆ ಹತ್ತಲಿಕ್ಕೆ ಉತ್ತಮ ಕುದುರೆಗಳೂ ಸಿಕ್ಕದ್ದರಿಂದ, ಮರಾಟರ ಬಲ ಹೆಚ್ಚಿ, ಅಲ್ಪ ಕಾಲದಲ್ಲಿಯೆ ಬಹು ಜನ ಮುಸಲ್ಮಾನ ಸಿಪಾಯಿಗಳು ಗಾಯ ಹೊಂದಿ ನೆಲಕ್ಕೆ ಬಿದ್ದರು. ಅತ್ತ ತರುಣ ಮರಾಟರಲ್ಲಿಯೂ ಹಲವರಿಗೆ ಗಾಯಗಳಾಗಿದ್ದವು; ಆದರೆ ಉಭಯ ಪಕ್ಷದಲ್ಲಿ ಯಾರೂ ಮರಣ ಹೊಂದದೆಯಿದ್ದದ್ದೊಂದು, ಮದುವೆ ಯಂಥ ಮಂಗಲ ಕಾರ್ಯಕ್ಕೆ ಶುಭ ಲಕ್ಷಣವೆಂದು ಹೇಳಬಹುದು.

ಸುಖಕ್ಕೆ ಮೆಚ್ಚಿದ್ದ ಮುಸಲ್ಮಾನ ಸಿಪಾಯಿಗಳು ಬಡ ಮರಾಟರ ಕಾಟಕತನಕ್ಕೆ ಈಡಾಗಲಿಲ್ಲ ಕುದುರೆ ಇದ್ದವರು ಮೆಲ್ಲಗೆ ಕಾಳಗದ ಕಾಣದಿಂದ ಕಾಲುದೆಗೆದರು; ಕುದುರೆ ಇಲ್ಲದವರು ಮರಾಟರಿಗೆ ಕೂಡಲೆ ಶರಣು ಬಂದರು. ಅಂದಿನ ತರುಣ ಮರಾಟರ ರಂಗೇ ಹಾಗಿತ್ತು; ಅವರ ನಿಬ್ಬಣ ಹೊರಟ ವೇಳೆಯೂ ಒಳ್ಳೆಯದಾಗಿತ್ತು, ಇಂದಿನಂತೆ ಮುಸಲ್ಮಾನ ಸಿಪಾಯಿಗಳು ಮರಾಟರಿಂದ ಎಂದೂ ಪೆಟ್ಟು ತಿಂದಿದ್ದಿಲ್ಲವೆಂದು ಹೇಳಬಹುದು. ಇಂದಿನ ಕಾಳಗದಲ್ಲಿ ಮುಸಲ್ಮಾನ ಸಿಪಾಯಿಗಳಿಗೆ ತರುಣ ಮರಾಟರ ಕೆಚ್ಚುಗಟ್ಟಿದ ಎದೆಯೂ, ಅವರ ಸರಿಯಿಲ್ಲದ ಶಕ್ತಿಯೂ, ನರಿ ಬುದ್ಧಿಯ ಅವರ ಯುಕ್ತಿಯೂ ಚೆನ್ನಾಗಿ ಅನುಭವಕ್ಕೆ ಬಂದು, ಆ ಮುಸಲ್ಮಾನರ ಹುಚ್ಚು ಬಿಟ್ಟು ನಿಚ್ಚಳವಾಯಿತು. ನಿಬ್ಬಣವನ್ನು ಮೊದಲಿಗೆ ನೋಡಿದಾಗ, ''ಇವೇನು ಕಾಫರರ ಕುರಿಗಳು'' ಎಂದು ನಗೆಯಾಡಿದ್ದ ಮುಸಲ್ಮಾನ ಸಿಪಾಯಿಗಳು ಮರಾಟರ ಹೊಡತ ಬಿದ್ದು ಕಡೆಗೆ ''ಯಾ ಅಲ್ಲಾ! ತೋಬಾ ತೋಬಾ, ಎಂದು ಕೂಗಾಡಿದರು. ''ಊಟಕ್ಕೆ ಮೊದಲು ಉಪ್ಪಿನಕಾಯಿ'' ಎಂಬ ಗಾದೆಯಂತೆ, ಯುದ್ಧಕ್ಕೆ ಮೊದಲು ಬೇಕಾದದ್ದು ಯುಕ್ತಿ ಆಮೇಲೆ ಶಕ್ತಿ ಇವೆರಡೂ ಮರಾಟರಲ್ಲಿ ಇದ್ದವು; ಆದರೆ ಅವರಲ್ಲಿ ಉತ್ತಮ ಶಸ್ತ್ರಗಳು, ಕುದುರೆಗಳು ಮೊದಲಾದ ಸಾಧನಗಳಿದ್ದಿಲ್ಲ; ಅವರ ಈ ಕೊರತೆಯು, ಹೊತ್ತಿಗೆ ಸರಿಯಾಗಿ ಮುಸಲ್ಮಾನರಿಂದ ದೂರಾಗಲು, ಜಯಲಕ್ಷ್ಮಿಯು ಮರಾಟರ ಕೊರಳಿಗೆ ಸುಲಭವಾಗಿ ಮಾಲೆ ಹಾಕಿದ್ದೇನಾಶ್ಚರ್ಯವು? ಅಲ್ಲದೆ ಮುಸಲ್ಮಾನ ಸಿಪಾಯಿಗಳ ಬಳಿಯಲ್ಲಿದ್ದ ಸುಲಿಗೆಯ ಸಂಪತ್ತೂ ಅನಾಯಾಸವಾಗಿ ಮರಾಟರ ಕೈಸೇರಿದ್ದರಿಂದ, ಜಯಲಕ್ಷ್ಮಿಯಂತೆ ಎರಡನೆಯವಳಾದ ಶ್ರೀಲಕ್ಷ್ಮಿಯೂ ಮರಾಟರ ಕೈಸೇರಿದಳು; ಮತ್ತು ನಿಬ್ಬಣದವರು ಮುಸಲ್ಮಾನರ ದೊಡ್ಡ ಗಂಡಾಂತರದಿಂದ ಮುಕ್ತರಾದ್ದರಿಂದ, ಮೂರನೆಯವಳಾದ ಮೋಕ್ಷ ಲಕ್ಷ್ಮಿಯೂ ಮರಾಟರ ಮುಂದೆ

ಬಂದು ನಿಂತುಕೊಂಡಂತಾಗಿತ್ತು; ಅಲ್ಲದೆ ಅಂದಿನ ಕಾಳಗದಲ್ಲಿ ಕಂಡುಬಂದಿದ್ದ ತರುಣ ಮರಾಟರ ಶೌರ್ಯವನ್ನು ನೋಡಿ ನಿಬ್ಬಣದೊಳಗಿನ ಹೆಂಗಸರೂ, ಹುಡುಗರೂ, ಮುದುಕರೂ ಪ್ರಸನ್ನತೆಯಿಂದ ತರುಣ ಮರಾಟರನ್ನು ಹಾಡಿಹರಿಸಿದ್ದರಿಂದ, ನಾಲ್ಕನೆಯವಳಾದ ವರ ಲಕ್ಷ್ಮಿಯೂ ಮರಾಟರ ಬೆನ್ನು ಹತ್ತಿ ಬರತೊಡಗಿದಳು.

ಹೀಗೆ ಜಯಲಕ್ಷ್ಮಿ ಶ್ರೀಲಕ್ಷ್ಮಿ ಮೋಕ್ಷಲಕ್ಷ್ಮಿ ವರಲಕ್ಷ್ಮಿ ಎಂಬ ನಾಲ್ವರು ಲಕ್ಷ್ಮೀದೇವಿಯರಿಂದ ಕೂಡಿಕೊಂಡಿದ್ದ ಮರಾಟಾ ತರುಣರು, ತಮಗೆ ಶರಣು ಬಂದಿದ್ದ ಮುಸಲ್ಮಾನ ಸಿಪಾಯಿಗಳ ಶಸ್ತ್ರಗಳನ್ನು ಕಸಿದುಕೊಂಡು ಅವರಿಗೆ ಜೀವದಾನ ಕೊಟ್ಟು ಅವರನ್ನು ಹೋಗಗೊಡಲು, ನಿಬ್ಬಣವು ಜಯಘೋಷ ಮಾಡುತ್ತ ಮುಂದಕ್ಕೆ ಸಾಗಿತು. ಅಷ್ಟರಲ್ಲಿ ಹೊತ್ತು ಮುಣುಗಲು, ಗೊತ್ತು ಮಾಡಿದ ಮಜಲಿಗೆ ನಿಬ್ಬಣವು ಹೋಗದೆ, ಸಮೀಪದ ಒಂದು ಹಳ್ಳಿಯಲ್ಲಿಯೇ ಆನಂದದಿಂದ ವಸ್ತಿಯನ್ನು ಮಾಡಿತು. ಆ ಹಳ್ಳಿಯ ಗುಡಿಯಲ್ಲಿ ಊಟ–ಉಡಿಗೆಯ ವ್ಯವಸ್ಥೆಯು ನಡೆಯಿತು. ಅದರ ಚಿಂತೆ ನೇತಾಜಿಯ ತಂದೆ ಮುದುಕನಿಗೆ ವಿಶೇಷವಾಗಿ ಇತ್ತು, ಲಗ್ನಕ್ಕೆ ಬಂದವರು ಕಷ್ಟಪಡಬಾರದೆಂದು ಆತನು ಮನಃಪೂರ್ವಕವಾಗಿ ಇಚ್ಛಿಸುತ್ತಿದ್ದದ್ದರಿಂದ, ಆತನು ಎರಡನೆಯ ಉಸಾಬರಿಗೆ ಹೋಗದೆ ಮೊದಲು ಸಂಜೆಯ ಊಟದ ವ್ಯವಸ್ಥೆಯಲ್ಲಿ ತೊಡಗಿದ್ದನು. ಕಾಳಗದಲ್ಲಿ ಎಲ್ಲರೂ ದಣಿದದ್ದನ್ನು ಆತನು ಕಣ್ಣುಮುಟ್ಟ ನೋಡಿದ್ದನು; ಮತ್ತು ಹುಡುಗರೂ, ಹೆಂಗಸರೂ ಹಸಿದು ಕಂಗಾಲಾದದ್ದು ಆತನ ಮನಸ್ಸಿನಲ್ಲಿ ಕಟೆಯುತ್ತಿತ್ತು; ಅದರಿಂದ ಬಿಟ್ಟಿದ್ದು ಬಿಟ್ಟು ಆತನು ಬೇಗನೆ ಸಂಜೆಯ ಊಟವಾಗಬೇಕೆಂದು, ಅದರ ವ್ಯವಸ್ಥೆಯಲ್ಲಿ ಮಗ್ನನಾಗಿ ಹೋಗಿದ್ದನು. ಆ ಕೆಲಸದಲ್ಲಿ ಆ ಮದುಕನ ಹೆಂಡತಿಯೂ, ಮದಿಮಗಳಾದ ಗುಣವಂತೆ ಗಂಗೆಯೂ, ಉಳಿದ ಆಪ್ತೇಷ್ಟರೂ ಆತನಿಗೆ ಸಹಾಯಕ ರಾಗಿದ್ದರು.

ಇತ್ತ ಉಳಿದವರೆಲ್ಲರೂ ಬೇಸಿಗೆ ಕಾಲವಾದದ್ದರಿಂದ ಮಳೆಮಾರು ಇಲ್ಲದಿರಲು, ಬೆಳದಿಂಗಳಲ್ಲಿ ಗುಡಿಯ ಮುಂದಿನ ಬೈಲಲ್ಲಿಯೇ ಗುಡಾರಗಳನ್ನು ಹಾಸಿಹರಟೆ ಕೊಚ್ಚುತ್ತ ಕುಳಿತುಕೊಂಡರು. ಮುಸಲ್ಮಾನರ ಕುತ್ತಿನಿಂದ ಪಾರಾದದ್ದರಿಂದ ಎಲ್ಲರಿಗೂ ಆನಂದವೇನೋ ಆಗಿತ್ತು; ಆದರೆ ಪ್ರಬಲರಾದ ಮುಸಲ್ಮಾನರು ಯಾವ ಕಾಲದಲ್ಲಿ ಮತ್ತೆ ಯಾವ ಗಂಡಾಂತರ ತರುವರೋ ಎಂದು ಅವರು ಬಗೆಬಗೆಯಾಗಿ ಆಲೋಚಿಸತೊಡಗಿದರು. ಆ ನಿಬ್ಬಣದೊಳಗಿನ ಮೆತ್ತನ್ನ ಸ್ವಭಾವದ ವಿಚಾರವಂತರಲ್ಲಿ ದತ್ತಾಜಿ ಪಾಟೀಲ ಎಂಬ ಹಿರಿಯ ಮನುಷ್ಯನು ತರುಣರನ್ನು ಕುರಿತು—''ನೀವು ಶೌರ್ಯ ತೋರಿಸಲು, ದೇವರ ದಯದಿಂದ ಇಂದು ನಮಗೆ ಜಯವೇನೋ ಆಯಿತು, ಸಂತೋಷವು; ಆದರೆ ಮುಸಲ್ಮಾನರ ಸಂಗಡ ನಾವು ಮೊದಲಿನಿಂದಲೇ ಎಟ್ಟಿತನದಿಂದ ನಡೆದುಕೊಳ್ಳದೆ ವಿನಯದಿಂದ ನಡೆದುಕೊಂಡಿದ್ದರೆ, ಇದಕ್ಕೂ ನೆಟ್ಟಗಾಗುತ್ತಿತ್ತೋ ಏನೋ! ನೇತ್ಯಾ, ನೀನು ಮುಸಲ್ಮಾನರ ಹೊಟ್ಟೆಯೊಳಗೆ ಚಿಂಕಿ ಚೀಳುವಂತೆ ಮೊದಲಿಗೆ ಮಾತಾಡಿದೆ ಸರಿ; ಮಾತಾಡಿದಂತೆ ನೀನು ಬಹುದಿವಸ ಅವರು ನರಳುವಂತೆ ಅವರ ಮುಗ್ಗಲನ್ನು ಮುರಿದೆಯೆಂಬದರಲ್ಲಿಯೂ ಸಂಶಯವಿಲ್ಲ; ಆದರೆ ನಡೆಯುವವರ ಕಾಲಿಗೆ ನಮಸ್ಕಾರವೆಂಬಂತೆ, ನಾವು ಮೊದಲಿಗೆ ವಿನಯ ತೋರಿಸಿ ಅವರಿಂದಲೇ ತಪ್ಪಾಗುವಂತೆ

ಮಾಡಬೇಕಾಗಿತ್ತು; ಯಾಕಂದರೆ ಅವರು ಬಲಾಢ್ಯರು ಅವರದು ದೊಡ್ಡ ರಾಜ್ಯವಿರುತ್ತದೆ; ಅವರಲ್ಲಿ ಅಪಾರವಾದ ಸೈನ್ಯವಿರುತ್ತದೆ; ಅವರಲ್ಲಿ ದುಡ್ಡಿನ ಕೊರತೆ ಇಲ್ಲ; ಆದರೆ ನಮ್ಮಲ್ಲೇನಿದೆ? ನಾಳೆ ಅವರ ಬಾದಶಹನು ಈ ಸುದ್ದಿಯನ್ನು ಕೇಳಿ ನಮ್ಮ ಹಳ್ಳಿಗಳನ್ನು ಹಾಳು ಮಾಡಲಿಕ್ಕೆ ನಮ್ಮ ಮೇಲೆ ದೊಡ್ಡ ಸೈನ್ಯ ಕಳಿಸಿದರೆ ನಾವು ಮಾಡುವದೇನು? ನಮ್ಮ ಬೆನ್ನಿಗೆ ಹಾಕಿಕೊಳ್ಳುವವರಾರು? ಆದರೆ ನೇತ್ಯಾ ಏನೋ ನನಗೆ ತಿಳಿದ ಮಾತುಗಳನ್ನು ಆಡುತ್ತೇನೆ, ಮನಸ್ಸಿಗೆ ಹಚ್ಚಿಕೊಳ್ಳಬೇಡ. ಇಂದಿನ ಕಾಳಗದಲ್ಲಿಯ ನಿಮ್ಮೆಲ್ಲ ತರುಣ ತಂಡಗಳ ಶೌರ್ಯ ನೋಡಿ ನನಗೆ ಬಹಳ ಸಂತೋಷವಾಗಿದೆ; ಆದರೆ ಒಂದು ನಿದ್ದೆಗೆ ಬೆಳಗಾಗಲಿಲ್ಲೆಂದು ತಿಳಿದು, ಮಾತಿಗೆ ಮಾತು ಹೊರಟು ಎರಡು ಮಾತಾಡಿದೆನಿಷ್ಟೆ!

ಈ ಮೇರೆಗೆ ನುಡಿಯುತ್ತಿರಲು, ನೇತಾಜಿಯ ತಂದೆಯು ಬಿಸಿ ಅಡಿಗೆ, ಮಾಡಿಸದೆ, ಗಡಿಬಿಡಿಯಿಂದ ಇದ್ದದ್ದರಲ್ಲಿ ಸಂಜೆಯ ಊಟದ ವ್ಯವಸ್ಥೆ ಮಾಡಿಸಿ, ಗುಡಾರದ ಆ ಹರಟೆಯ ಮಂದಿಯ ಬಳಿಗೆ ಬಂದು ವಾತ್ಸಲ್ಯದಿಂದ–ತಮ್ಮಗಳಿರಾ, ಏಳಿರಿ, ಮೊದಲು ಊಟಮಾಡಿರಿ. ಊರಿಂದ ಹೊರಡುವಾಗಲೂ ನೀವು ಬಾಯಲ್ಲಿ ನೀರು ಹಾಕಲಿಲ್ಲ. ನೀವಿಲ್ಲದಿದ್ದರೆ ಇಂದು ನಮ್ಮ ಗತಿ ನಮಗೆ ಆಗಿಹೋಗುತ್ತಿತ್ತು. ಇಂದಿನ ಕುತ್ತು ಪಾರುಮಾಡಿ ಪುಣ್ಯ ಕಟ್ಟಿಕೊಂಡಿರಿ. ನಾಳಿಗೆ ದೇವರಿದ್ದಾನೆ. ನಿಮ್ಮ ಶೌರ್ಯವು ಬಣ್ಣಿಸತಕ್ಕದ್ದು, ಏಳಿರಿ, ಊಟಕ್ಕೇಳಿರಿ. ಯಥೇಚ್ಛ ಗೋದಿಯ ರೊಟ್ಟಿಗಳಿವೆ; ಬೇಕಾದಷ್ಟು ಮಾಲದಿಯ ಉಂಡೆಗಳಿವೆ; ಬುತ್ತಿಯ ರಾಸಿಯಿದೆ; ಸಕ್ಕರೆಯಿದೆ, ತುಪ್ಪವಿದೆ, ಮಾವಿನಕಾಯಿ ಹಿಂಡಿಯಿದೆ. ನಿಮ್ಮ ಪುಣ್ಯದಿಂದ ಯಾವದಕ್ಕೂ ಕೊರತೆಯಿಲ್ಲ, ಏಳಿರೇಳಿರಿ! ಉಂಡು ಬೇಕಾದಷ್ಟು ಹರಟೆ ಹೊಡೆಯಿರಿ!

## ಆಗುವದು ಆಗಿಯೇ ತೀರುತ್ತದೆ.

ಹಿರಿಯ ಮನುಷ್ಯನಾದ ತನ್ನ ಸೋದರಮಾವ ಸಾತ್ವಿಕ ದತ್ತಾಜಿ ಪಾಟೀಲನು ಆಡಿದ ಮಾತುಗಳು ನೇತಾಜಿಯ ಮನಸ್ಸಿಗೆ ಹತ್ತಿದವು. ಅವಕ್ಕೆ ಆತನು ಏನೋ ಉತ್ತರ ಕೊಡಬೇಕೆನ್ನುವದರೊಳಗೆ ಆತನ ತಂದೆಯು ಮೇಲೆ ಹೇಳಿದಂತೆ ಎಲ್ಲರನ್ನೂ ಊಟಕ್ಕೆ ಎಬ್ಬಿಸಲು, ಆ ಆಜ್ಞಾಧಾರಕ ನೇತಾಜಿಯು ತನ್ನ ಮನಸ್ಸು ಬಿಗಿ ಹಿಡಿದು ಒಂದು ತುಟಿ ಎರಡು ಮಾಡದೆ ಚಟ್ಟನೆ ಎದ್ದು, ತನ್ನ ಗೆಳೆಯರನ್ನು ಕೈ ಹಿಡಿದು ಊಟಕ್ಕೆ ಎಬ್ಬಿಸಹೋದನು. ಕೂಡಲೆ ಎಲ್ಲ ತರುಣರ ಗುಂಪಿನವರು ಬಡ ಬಡ ಎದ್ದು, ಕೈ–ಕಾಲು ಮೋರೆ ತೊಳಕೊಂಡು ತಮ್ಮ ತಮ್ಮ ಜಾತಿಯ ಪದ್ಧತಿಯಂತೆ ಬೇರೆ ಬೇರೆ ಪಂಕ್ತಿಗಳಾಗಿ ಊಟಕ್ಕೆ ಕುಳಿತುಕೊಂಡರು. ಮರಾಟರ ಕೈಯಲ್ಲಿ ಉಣ್ಣದ ಜಾತಿಯವರ ಸಲುವಾಗಿ ಆ ಮುದುಕನು ಬಹು ಪ್ರೇಮದಿಂದ ಉಪಾಹಾರದ ವ್ಯವಸ್ಥೆ ಮಾಡಿಸಿದ್ದನು. ಎಲ್ಲರೂ ಹರಟೆ ಕೊಚ್ಚುತ್ತ ಆನಂದದಿಂದ ಊಟ ಮಾಡಿ ಕೈ ತೊಳಕೊಂಡು ಪುನಃಗುಡಾರಗಳ ಮೇಲೆ ಕುಳಿತು ಹರಟೆ ಹೊಡೆಯಹತ್ತಿದರು; ಆದರೆ

ನೇತಾಜಿಯ ಮನಸ್ಸು ದತ್ತಾಜಿಯ ಮಾತಿಗೇನು ಉತ್ತರ ಕೊಡಬೇಕೆಂಬದರ ವಿಚಾರದಲ್ಲಿ ಮಗ್ನ ವಾಗಿ ಹೋಗಿತ್ತು. ಊಟ ಮಾಡುವಾಗ ಆತನ ಮನಸ್ಸಿನಲ್ಲಿ ಅದೇ ವಿಚಾರವು; ಎಲೆ–ಅಡಿಕೆ ಹಾಕಿಕೊಳ್ಳಬೇಕಾದ್ರೂ ಅದೇ ವಿಚಾರವು ಹೀಗಾಗಿ ಆತನು ಊಟಕ್ಕೆ ಕೂತಾಗಿನಿಂದ ಈ ವರೆಗೆ ಪಿಟ್ಟೆಂದು ಮಾತಾಡಿದ್ದಿಲ್ಲ, ನಕ್ಕಿದ್ದಿಲ್ಲ. ಇದನ್ನು ನೋಡಿ ದತ್ತಾಜಿಯು ಆತನಿಗೆ— ''ನೇತ್ಯಾ, ಯಾಕಲೇ? ನನ್ನ ಮಾತು ಮನಸ್ಸಿಗೆ ಹಚ್ಚಿಕೊಂಡಿಯೇನು ಮಾತಿಲ್ಲ ಕಥೆಯಿಲ್ಲ; ಹೀಗೇಕೆ ಸುಂದಾಗಿರುತ್ತಿ? ಹೇಳು, ನನ್ನ ಮಾತು, ಅಲ್ಲದಾಗಿದ್ದರೆ ಹೇಳು, ಹಿರಿಯರಾಗಿದ್ದ ನಾವು ಯೋಗ್ಯವಾದದ್ದನ್ನು ಹೇಳದಿದ್ದರೆ ನಿಮಗೆ ಮತ್ತೆ ಯಾರು ಹೇಳಬೇಕು? ಯಾಕೆ? ಪರಸಾಜೀ, ನಾನು ನಿನ್ನ ಮಗನಿಗೆ ಬುದ್ಧಿ ಹೇಳಬೇಕೋ ಹೇಳಬಾರದೊ?'' ಎಂದು ನೇತಾಜಿಯ ತಂದೆಯನ್ನು ಕೇಳಲು, ಆತನು ದತ್ತಾಜಿಗೆ–ದತ್ತಾಜೀ, ಖಾಸ ಸೋದರಮಾವ ನಾದ ನೀನಲ್ಲದೆ, ನಿನ್ನ ಸೋದರಳಿಯನಿಗೆ ಮತ್ತಾರು ಬುದ್ಧಿ ಹೇಳಬೇಕು? ''ತಾಯಿ ಸತ್ತು ಸೋದರಮಾವನುಳಿ'' ಯೆಂದು ಜನರು ವಾಡಿಕೆಯಾಗಿ ಆಡುವ ಮಾತು ವ್ಯರ್ಥವಾದದ್ದೇ? ಮೇಲಾಗಿ ಬಲಿಷ್ಠ ಮುಸಲ್ಮಾನರ ಸಂಬಂಧ! ಇಂದು ತಪ್ಪಿದ್ದರೆ ನಾಳಿಗಾದರೂ ನಮ್ಮ ತಪ್ಪನ್ನು ನಾವು ತಿದ್ದಿಕೊಳ್ಳಬೇಕು. ದತ್ತಾಜೀ, ನಾನು ಊಟದ ಗದ್ದಲದಲ್ಲಿದ್ದದ್ದರಿಂದ ನಿಮ್ಮ ಯಾವ ಮಾತೂ ಕೇಳಲಿಲ್ಲ, ಅನ್ನಲು, ಅಷ್ಟರಲ್ಲಿ ನಿಬ್ಬಣದ ಜನರೆಲ್ಲ ಗುಡಾರದ ಮೇಲೆ ಬಂದು ಕುಳಿತುಕೊಂಡಿದ್ದರು. ಹೆಂಗಸರೂ ತಮ್ಮ ಕೆಲಸ. ಬೊಗಸೆ ತೀರಿಸಿಕೊಂಡು ಗಂಡಸರಿಂದ ಬೇರೆ ಯೊತ್ತಟ್ಟಿಗೆ ಹಾಸಿಕೊಂಡು ಮರ್ಯಾದೆಯಿಂದ ಕುಳಿತುಕೊಂಡರು. ಅಂದು ಅವರು ಜಯಶಾಲಿಗಳಾಗಿದ್ದರೂ ಅವರಿಗೆ ಸಮಾಧಾನವಿದ್ದಿಲ್ಲ; ಮುಸಲ್ಮಾನರ ಅಂಜಿಕೆಯು ಅವರಿಗೆ ಪೂರಾ ಇತ್ತು.

ಹೀಗೆ ಎಲ್ಲರೂ ಉತ್ಸುಕತೆಯಿಂದ ಸ್ತಬ್ಧರಾಗಿ ಕುಳಿತುಕೊಂಡದ್ದನ್ನು ನೋಡಿ ನೇತಾಜಿಯು ತನ್ನ ತಂದೆಯನ್ನು ಕುರಿತು—''ಬಾಬಾ, ಮಾವನು ಹೇಳಿದ ಮಾತುಗಳು ಮುಖ್ಯವಾಗಿ ಮೂರು. ''ಶ್ರೀಮಂತರೂ, ಬಲಿಷ್ಠರೂ ಆದ ಮುಸಲ್ಮಾನರೊಡನೆ, ಬಡವರೂ, ಬಲಹೀನರೂ ಆದ ನಾವು ಒಮ್ಮೆಲೆ ಎಟ್ಟಿತನದಿಂದ ನಡೆಯಬಾರದೆಂ''ಬದು ಆತನ ಒಂದನೆಯ ಮಾತು; ''ಮುಸಲ್ಮಾನರು, ಅರಸರಿರುವರು, ಅವರಲ್ಲಿ ದೊಡ್ಡ ಸೈನ್ಯವಿರುವದು, ನಮ್ಮಲ್ಲಿ ಏನೂ ಇಲ್ಲ; ನಾಳೆ ವಿಜಾಪುರದ ಬಾದಶಹನು ಇಂದಿನ ಸಂಗತಿಯನ್ನು ಕೇಳಿ ಸಿಟ್ಟಾಗಿ ದೊಡ್ಡ ಸೈನ್ಯವನ್ನು ನಮ್ಮ ಮೇಲೆ ಕಳಿಸಿ ನಮ್ಮ ಹಳ್ಳಿಗಳನ್ನು ಹಾಳುಮಾಡಿದರೆ, ನಾವು ಏನು ಮಾಡಬೇಕೆಂ''ಬದು ಆತನ ಎರಡನೆಯ ಮಾತು. ''ಮುಸಲ್ಮಾನರ ದೂರು ಕೇಳಿ ಅವರನ್ನು ಬೆನ್ನಿಗೆ ಹಾಕಿಕೊಳ್ಳಲಿಕ್ಕೆ ಅವರು ಬಾದಶಹನಿರುವಂತೆ, ನಮ್ಮ ದೂರು ಕೇಳಿ ನಮ್ಮನ್ನು ಬೆನ್ನಿಗೆ ಹಾಕಿಕೊಳ್ಳಲಿಕ್ಕೆ ನಮ್ಮವರಾರಿರುವರೆಂ''ಬದು ಆತನ ಮೂರನೆಯ ಮಾತು. ಬಾಬಾ, ಮಾವನ ಈ ಮೂರೂ ಮಾತುಗಳು ವಿಚಾರ ಮಾಡತಕ್ಕವಿರುವವು. ನಿಮ್ಮಂಥ ಹಿರಿಯರಲ್ಲದೆ ಅನುಭವವಿಲ್ಲದ ನಮ್ಮಂಥವರಿಗೆ ಹಿತವಾದದ್ದನ್ನು ಯಾರು ಹೇಳಬೇಕು? ಮಾವಾ ನಾನು ನಿನ್ನ ಮಾತಿಗೆ ಸಿಟ್ಟಾಗಿಲ್ಲ. ''ಸಿಟ್ಟಿನಲ್ಲಿ ತಟ್ಟನೆ ನಾನು ಏನು ತಪ್ಪು ಮಾಡಿದೆನೋ'' ಎಂಬ ಪಶ್ಚಾತ್ತಾಪ

ದಿಂದ ನಾನು ವಿಚಾರಮಗ್ನನಾಗಿರುವೆ ನಿಷ್ಠೆ. ಹೀಗೆ ಪಶ್ಚಾತ್ತಾಪವಾಗದೆ ನಮಗೆ ಬುದ್ಧಿ ಬರುವದಿಲ್ಲ; ಆದರೆ ವಿಚಾರಮಾಡುವಾಗ ನನಗೆ ಹೊಳೆದದ್ದನ್ನು ಈಗ ಹೇಳುವೆನು, ಅದನ್ನು ಮುಖ್ಯವಾಗಿ ನಮ್ಮ ಗೆಳೆಯರು ಲಕ್ಷಪೂರ್ವಕವಾಗಿ ಕೇಳಬೇಕು.

ಮಾವಾ, ಮುಸಲ್ಮಾನರೊಡನೆ ಎಟ್ಟೆತನ ಬೇಡವೆಂದು ನೀನು ಹೇಳಿದೆ ಸರಿ! ಆದರೆ ಈ ವರೆಗೆ ನೀವು ಮುಸಲ್ಮಾನರಿಗೆ ಗೌರವ ಕೊಡುವದಕ್ಕಾಗಿ ಅವರೊಡನೆ ಎಷ್ಟು ತಾಗಿ ಬಾಗಿ ನಡಕೊಂಡಿರುವಿರೆಂಬುದು ನಿಮಗೆ ಗೊತ್ತಿಲ್ಲವೆ? ನಿಮ್ಮನ್ನು ನೋಡಿ ನಾನೂ ಅವ ರೊಡನೆ ನಯ-ಭಯಗಳಿಂದಲೇ ನಡೆದುಕೊಳ್ಳುತ್ತ ಬಂದಿರುವದಿಲ್ಲವೇ? ಆದರೆ ಅಂಜಿ ದವರ ಮೇಲೆ ಕಪ್ಪೆ ಹಾಕಿದಂತೆ, ಆ ದುಷ್ಟರು ನಮ್ಮನ್ನು ಹೆಚ್ಚು ಹೆಚ್ಚು ಅಂಜಿಸುತ್ತ ಒದೆಯುತ್ತ ಬಂದಿರುವರೋ ಇಲ್ಲವೋ ನೀನೇ ಹೇಳು. ಮುಸಲ್ಮಾನರ ಮುಂದೆ ನಮಗೆ ಬೆಲೆಯೇ ಇಲ್ಲದಾಗಿದೆ. ಅವರಿಗೆ ನಾನು ನೊರಜಿನಂತೆ ಕಾಣುವೆವು. ಮುಸಲ್ಮಾನರು ನಮ್ಮನ್ನು ಕುರಿ ಯೆಂದು ತಿಳಿದು ಮುರಿದು ತಿನ್ನುತ್ತಿರುವರು. ಮಾವಾ, ಕುರಿಯು ಹುಲಿಗೆ—''ಹುಲಿಯಪ್ಪ ನವರೆ'' ಎಂದರೂ ಅದು ಕುರಿಯನ್ನು ಮುರಿದು ತಿನ್ನುವದು. ಅಥವಾ ''ಲೇ ಹುಲ್ಯಾ'' ಎಂದರೂ ಅದು ಕುರಿಯನ್ನು ಮುರಿದು ತಿನ್ನವದು, ಅದರಂತೆ, ನಾವು ಮುಸನ್ಮಾನರ ಮುಂದೆ ಮೆತ್ತಗೆ ನಡೆದರೂ ಅಷ್ಟೆ, ಎಟ್ಟೆತನದಿಂದ ನಡೆದರೂ ಅಷ್ಟೆ; ಹೇಗಿದ್ದರೂ ಅವರು ನಮ್ಮ ರಕ್ತ ಹಿಂಡತಕ್ಕವರೇ! ಮಾಮಾ, ಕುರಿಯು ''ಮೇ ಮೇ'' ಎಂದು ತನ್ನ ಜನ್ಮವನ್ನೆಲ್ಲ ಸತ್ಯತನ ದಿಂದ ಕಳೆದರೂ, ಅದರ ಕೊರಳಿಗೆ ದುಷ್ಟರ ಚೂರಿ ತಪ್ಪಿದ್ದಲ್ಲ! ಅದರಂತೆ ದುಷ್ಟರಾದ ಮುಸಲ್ಮಾನರ ಮುಂದೆ ನಾವು ಸತ್ಯತನದಿಂದ ನಡೆದಷ್ಟು, ಅವರು ನಮ್ಮನ್ನು ಸಭ್ಯ ಕುರಿ ಯೆಂದು ತಿಳಿದು ಸುಲಭವಾಗಿ ನಮಗೆ ಚೂರಿಯನ್ನು ಹಾಕುವರು; ಆದರೆ ಮಾವಾ, ನಾವು ಕುರಿಗಳಲ್ಲ, ಮುಸಲ್ಮಾನರಂತೆ ಮನುಷ್ಯರಿರುತ್ತೇವೆ; ಅಂದ ಬಳಿಕ ನಮ್ಮ ವಿಷಯದ ಗೌರವವು ಮೊದಲು ನಮ್ಮಲ್ಲಿರಬೇಕಲ್ಲವೇ? ನಾವೇ ನಮ್ಮ ಗೌರವವನ್ನು ಕಾಯ್ದುಕೊಳ್ಳ ದಿದ್ದರೆ, ಮಂದಿಯೇಕೆ ನಮಗೆ ಗೌರವ ಕೊಡುವರು? ನಾವು ಮನುಷ್ಯರಿದ್ದು ಕುರಿಯಂತೆ ಬಾಳುವದಕ್ಕಿಂತ, ನಾವು ಮನುಷ್ಯರಂತೆ ನಡೆಯುವಾಗ ನಮಗೆ ಮರಣ ಬಂದರೂ ಲೇಸಲ್ಲವೆ? ಮಾವಾ, ಇಂದು ಒದಗಿದ ಪ್ರಸಂಗವನ್ನೇ ಮನಸ್ಸಿನಲ್ಲಿ ತೂಗಿ ನೋಡು. ಇಂದು ನಾವು ಕಾಳಗದಲ್ಲಿ ಗಟ್ಟಿಯಾಗಿ ನಿಂತು ಮುಸಲ್ಮಾನರಿಗೆ ನಮ್ಮ ಮುಂಗೈ ಕಸುವು ತೋರಿಸದೆ, ಅವರ ಮುಂದೆ ದೈನ್ಯದಿಂದ ದಿಂಡರಿಕೆ ಉರುಳಿದ್ದರೂ, ಅವರು ನಮ್ಮನ್ನು ಸುಲಿಯದೆ ಬಿಡುತ್ತಿದ್ದರೆಯೆ? ಮತ್ತು ನಮ್ಮ ಹೆಂಗಸರ ಮರ್ಯಾದೆ ಕಳೆಯದೆ ಹೋಗುತ್ತಿದ್ದರೆಯೆ? ಮಾವಾ, ಈ ವರೆಗೆ ನಾವು ಮುಸಲ್ಮಾನರಿಂದ ಒದಿಸಿಕೊಳ್ಳುತ್ತ ಬಂದಿರುವೆವು ಸರಿ; ಆದರೆ ಇನ್ನು ಮೇಲೆ ನಾವು ಮುಯ್ಯಕ್ಕೆ ಮುಯ್ಯವೆಂದು ಅವರನ್ನು ಒದ್ದು ಒದ್ದು, ''ಮರಾಟರು ಕುರಿಗಳಲ್ಲವೆಂ'' ಬದರ ಅನುಭವವನ್ನು ಅವರಿಗೆ ತಂದು ಕೊಡದಿದ್ದರೆ ಸರ್ವಥಾ ನಮ್ಮ ಪರಿಣಾಮವಾಗದು; ಆದ್ದರಿಂದ ಮಾವಾ ಬಾಬಾ, ನಾನಂತು ದೇವರನ್ನು ಸ್ಮರಿಸಿ ಹೇಳುತ್ತೇನೆ, ಮುಸಲ್ಮಾನರು ಅನ್ಯಾಯವಾಗಿ ಉದ್ಧಾಮತನದಿಂದ ನನ್ನ ಮೇಲೆ ಏರಿಬಂದರೆ, ನನ್ನ ಪ್ರಾಣ

ಹೋಗಲೊಲ್ಲದೇಕೆ, ನಾನು ಅವರ ಮೇಲೆ ನನ್ನ ಖಡ್ಗವನ್ನು ಹಿರಿಯತಕ್ಕವನೇ. ಹಾಗೆ ಮಾಡದೆ ಮಾನಗೇಡಿಯಾಗಿ ನಾನು ಬಾಳಹತ್ತಿದರೆ, ನಾನು ಇದ್ದರೂ ಸತ್ತಹಾಗೆಯೇ ಸರಿ!

ಮಾವಾ, ನೀನು ''ಮುಸಲ್ಮಾನರು ಅರಸರಿರುವರೆಂದು'' ಹೇಳುತ್ತೀ ! ಹೌದು, ಅವರು ಅರಸರಿರುವರು. ವಿಜಾಪುರದ ಬಾದಶಹನಾದ ಮಹಮ್ಮದಶಹನು ಅವರ ಅರಸನಿರುವನು, ಆತನ ಬಳಿಯಲ್ಲಿ ದೊಡ್ಡ ಸೈನ್ಯವೂ ಇರುವುದು; ಆದರೆ ಆ ಬಾದಶಹನೂ, ಆತನ ದೊಡ್ಡ ಸೈನ್ಯವೂ ರಾಜ್ಯದಲ್ಲಿ ಸುಖ–ಶಾಂತಿಗಳನ್ನು ಉಂಟುಮಾಡದೆ, ದೇಶವನ್ನು ಹಾಳು ಮಾಡ ಹತ್ತಿದರೆ, ಅವರ ಗತಿಯೇನಾದೀತು? ಇನ್ನು, ಪರದೇಶದವರೂ, ಪರಧರ್ಮದವರೂ ಆದ ಮುಸಲ್ಮಾನರಿಗೆ ನಮ್ಮ ಅಭಿಮಾನವೇನು? ನಮ್ಮ ಹಿತವನ್ನು ಅವರು ಯಾಕೆ ಮಾಡುವರು? ಆದ್ದರಿಂದ ನೀನು ಹೇಳಿದಂತೆ ವಿಜಾಪುರದ ಬಾದಶಹನು ನಮ್ಮ ಮೇಲಿನ ಸಿಟ್ಟಿನಿಂದ ತನ್ನ ದೊಡ್ಡ ಸೈನ್ಯವನ್ನು ಕಳಿಸಿ ನಮ್ಮ ಹಳ್ಳಿಗಳನ್ನು ಹಾಳುಮಾಡಲಿಕ್ಕೆ ಹಿಂದೆ ಮುಂದೆ ನೋಡಲಿಕ್ಕಿಲ್ಲ ಸರಿ! ಆದರೆ ವಿಜಾಪುರದ ಬಾದಶಹನು ಸರ್ವತಂತ್ರ ಸ್ವತಂತ್ರನಲ್ಲ, ಆತನ ತಲೆಮೆಟ್ಟಿ ಹಾರು ವಂಥ ಮೊಗಲ ಬಾದಶಹನಾದ ಔರಂಗಜೇಬನು ದಿಲ್ಲಿಯಲ್ಲಿ ಆಳುತ್ತಿದ್ದು, ಆತನು ವಿಜಾಪುರದ ಬಾದಶಹನನ್ನು ಮುರಿಯುವದಕ್ಕಾಗಿ ಹೊಂಚು ಹಾಕಿರುವನು. ಅಲ್ಲದೆ, ಮಾವಾ, ನಮ್ಮ ತರುಣ ವೀರನಾದ ಶಿವಾಜಿ ಭೋಸಲೆಯು, ವಿಜಾಪುರದ ಮೊಗಲ ಬಾದಶಾಹಿ ಗಳೆರಡನ್ನೂ ಗೊತ್ತಿಗೆ ಹಚ್ಚಿ, ತಾನು ಸ್ವರಾಜ್ಯ ಸ್ಥಾಪಿಸಬೇಕೆಂದು ಜೀವದ ಪರಿವೆಯಿಲ್ಲದೆ, ಪರಿಪರಿಯಾಗಿ ಕಷ್ಟಪಡುತ್ತಿರುವನು. ಇವರಿಬ್ಬರಲ್ಲದೆ, ನಮ್ಮಂಥ ಹೊಟ್ಟೆ ಉರುಕರು ಕೈ ಸಾಧಿಸಿದಾಗ ಮುಸಲ್ಮಾನರ ಮಗ್ಗಲು ಮುರಿಯಲು ಹವಣಿಸುತ್ತಿರುವೆವು. ಹೀಗಿರುವಾಗ ವಿಜಾಪುರ ಬಾದಶಹನಿಗೆ ನಮ್ಮ ಹಳ್ಳಿಗಳನ್ನು ಹಾಳು ಮಾಡುವದೊಂದೇ ಕೆಲಸವೆ? ಆತನು ಔರಂಗಜೇಬನ ಕಾಟ ತಪ್ಪಿಸಿಕೊಳ್ಳ ಬೇಕಾಗುವದಲ್ಲದೆ, ಶಿವರಾಯನ ಬಂದೋಬಸ್ತುಮಾಡ ಬೇಕಾಗುವದು. ಅದರಂತೆ, ನಮ್ಮಂಥ ಪುಂಡರು ತಲೆ ಎತ್ತದಂತೆಯೂ ನೋಡಿಕೊಳ್ಳ ಬೇಕಾಗುವದು. ಇಂಥ ಪ್ರಸಂಗದಲ್ಲಿ ವಿಜಾಪುರದವರು ನಮ್ಮನ್ನು ಹಾಳುಮಾಡುವದಂತು ಇರಲಿ, ಪ್ರಸಂಗವಶಾತ್ ನಮ್ಮ ತಪ್ಪನ್ನು ಹೊಟ್ಟೆಯಲ್ಲಿ ಹಾಕಿಕೊಂಡು ನಮ್ಮ ಸ್ನೇಹ ಸಂಪಾದಿಸುವ ಪ್ರಸಂಗವೂ ಅವರಿಗೆ ಬರಬಹುದು! ಅಂದಮೇಲೆ ನಮ್ಮ ಸೇಡು ತೀರಿಸಿ ಕೊಳ್ಳಲಿಕ್ಕೆ ದೊಡ್ಡ ಸೈನ್ಯ ಕಳಿಸುವದು. ಬಾದಶಹನಿಗೆ ಹೇಗೆ ಸುಲಭವಾದೀತು? ಮಾವಾ, ಇಬ್ಬರ ಜಗಳದಿಂದ ಮೂರನೆಯವರಿಗೆ ಲಾಭವಲ್ಲವೆ? ಆದ್ದರಿಂದ ಈಗ ನಾವು ಅಷ್ಟು ಅಂಜುವ ಕಾರಣವಿಲ್ಲ, ಇದರ ಮೇಲೆಯೂ ವಿಜಾಪುರದ ಬಾದಶಹನು ನಮ್ಮ ಮೇಲೆ ಸೈನ್ಯ ವನ್ನು ಕಳಿಸಿದರೆ, ನಾವೇನು ಕೈಯಲ್ಲಿ ಬಳೆಯಿಟ್ಟಿರುವದಿಲ್ಲ!

ಮಾವಾ, ಇನ್ನೊಂದು ಮಾತು; ನಾವು ನಮ್ಮ ಈ ಕಷ್ಟಕಾಲದಲ್ಲಿ ದೇವರನ್ನು ಮಾತ್ರ ಸರ್ವಥಾ ಮರೆಯಬಾರದು ನೋಡು. ಆತನು ಬಾದಶಹರ ಬಾದಶಹನೂ, ಅರಸರ ಅರಸನೂ ಆಗಿರುವನು. ಸರ್ವತಂತ್ರ ಸ್ವತಂತ್ರನೂ, ಜಗತ್ತನ್ನು ನಿರ್ಮಿಸಿದವನೂ ಆದ ಆ ಜಗದೀಶ್ವರನ ಮುಂದೆ ನಮ್ಮ ಕ್ಷುದ್ರಮಾನವರ ಪಾಡೇನು? ನಾವು ಬಾದಶಹರಾದರೇನು,

ಮತ್ತಾರಾದರೇನು? ಇಚ್ಛಾಮಾತ್ರದಿಂದ ಸೃಷ್ಟಿ ಮಾಡುವ ದೇವರಮುಂದೆ ನಾವು ಕಃಪದಾರ್ಥ ವಲ್ಲವೆ? ದೇವರು ಧರ್ಮಕ್ಕೆ ಪ್ರಭುವು, ಧರ್ಮವು ಆತನಿಂದಲೇ ಉಂಟಾಗಿರುವದು; ಧರ್ಮ ದಂತೆ ನಡೆಯುವವರನ್ನು ದೇವರು ರಕ್ಷಿಸುವನು; ಪರೋಪಕಾರಕ್ಕಿಂತ ಶ್ರೇಷ್ಠ ಧರ್ಮವಿಲ್ಲ, ಪರಪೀಡೆಗಿಂತ ಹೆಚ್ಚಿನ ಅಧರ್ಮವಿಲ್ಲ; ಅಂದಬಳಿಕ ಪರಪೀಡಕರಾದ ಮುಸಲ್ಮಾನರು ದೇವರ ಕ್ರೋಭಕ್ಕೆ ಪಾತ್ರರಾಗಿರಲು, ತಮ್ಮ ಪುಣ್ಯ ತೀರುವವರೆಗೆ ಅವರು ಉರಿದಾಡಿ, ಕಡೆಗೆ ಕೂಡ್ರ ಬೀಳುವರು! ಆದ್ದರಿಂದ ನಾವು ಮುಸಲ್ಮಾನರಿಗೆ ಅಂಜದೆ, ಪಾಪಕ್ಕೂ, ಪೀಡೆಗೂ ಅಧರ್ಮಕ್ಕೂ ಅಂಜಿ ನಡೆಯತಕ್ಕದ್ದು. ಅಂದರೆ ದೇವರ ಕೃಪೆಯಿಂದ ಧರ್ಮಕ್ಕೆ ಜಯವು ಇಂದಿಲ್ಲ ನಾಳೆ ಕಟ್ಟಿ ಇಟ್ಟದ್ದಾಗಿರುವದು! ಮಾವಾ, ದೇವರು ಸರ್ವಸಾಕ್ಷಿಯಾಗಿರುವನಲ್ಲವೆ? ಆತನು ಅರಿ ಯದ್ದು ಜಗತ್ತಿನಲ್ಲಿ ಯಾವದಿರುವದು? ಆತನಿಗೆ ಅಂಜಿ ಧರ್ಮದಂತೆ ನಡೆಯುವ ನಮಗೆ ಅನ್ಯರ ಭಯವೇನು? ದೇವರು ಜಗತ್ತನ್ನು ಹುಟ್ಟಿಸಿ, ರಕ್ಷಿಸಿ, ನಾಶ ಮಾಡುವವನಾದದ್ದ ರಿಂದ, ಆತನ ಇಚ್ಛೆಯಿಲ್ಲದೆ ಕಡ್ಡಿಯೂ ಕದಲಲಾರದು. ಮಾವಾ, ಈಶ್ವರನ ಇಚ್ಛೆಯಿಂದ ಕಡ್ಡಿಯು ಕ್ಷಣದಲ್ಲಿ ಗುಡ್ಡವಾದೀತು, ಗುಡ್ಡವು ಕ್ಷಣದಲ್ಲಿ ಕಡ್ಡಿಯಾದೀತು! ಆದ್ದರಿಂದ ದೇವರೇ ಗತಿಯೆಂದು ನಾವು ಆತನಿಗೆ ಶರಣು ಹೋಗಿ, ಆತನ ಆಜ್ಞೆಯಾದ ಧರ್ಮವನ್ನು ಪಾಲಿಸಿದರೆ, ಆತನೇ ನಮಗೆ ಸದ್ಬುದ್ಧಿ ಕೊಡುವನು, ಆತನೇ ನಮ್ಮ ಅಜ್ಞಾನವನ್ನು ಕಳೆದು ರಕ್ಷಿಸುವನು; ಅಂದಬಳಿಕ ನಾವು ಮುಸಲ್ಮಾನರಿಗೆ ಅಂಜಿ ನಮ್ಮ ಕ್ಷಾತ್ರಧರ್ಮವನ್ನು ಯಾಕೆ ಬಿಡಬೇಕು? ಬರಲಿ ಮುಸಲ್ಮಾನರು ನಮ್ಮ ಮೇಲೆ, ಅವರನ್ನು ತುಳಿದು ನೆಲಕ್ಕೆ ಒರಸಿಬಿಡೋಣ ವಂತೆ, ಹಾಗೆ ಮಾಡುವದು ನಮ್ಮಿಂದಾಗದಿದ್ದರೆ, ಮಾವಾ, ಅವರನ್ನು ತುಳಿಯುತ್ತಲೇ ಒಂದುದಿನ ಸತ್ತುಹೋಗೋಣವಂತೆ!

ಮಾವಾ, ''ನಮ್ಮನ್ನು ಬೆನ್ನಿಗೆ ಹಾಕಿಕೊಳ್ಳುವವರು ಯಾರೂ ಇಲ್ಲವೆಂ''ದು ನೀನು ಹೇಳುತ್ತೀ; ಆದರೆ ಸ್ವಾಭಿಮಾನಿಗಳಾದ ಮರಾಟರ ಹೃದಯಕ್ಕೆ ಯಾವಾಗಲೂ ಆನಂದವನ್ನೂ, ಉತ್ಸಾಹವನ್ನೂ ಉಂಟು ಮಾಡುತ್ತಿರುವ ತರುಣ ಶಿವರಾಯನನ್ನು ನೀನು ಮರೆತುಬಿಟ್ಟಿರು ವಂತೆ ತೋರುತ್ತದೆ. ನಮ್ಮ ಆ ಶಿವಪ್ರಭುವಿನ ಒಗರು ಎಷ್ಟು, ಪರಾಕ್ರಮವೆಷ್ಟು, ಧೈರ್ಯ ವೆಷ್ಟು? ಶಾಬಾಸ, ಶಿವರಾಯಾ, ನೀನೇ ಮಹಾರಾಷ್ಟ್ರ ಕುಲದೀಪಕನು; ನೀನೇ ನಿಜವಾದ ಗೋ–ಬ್ರಾಹ್ಮಣ ಪ್ರತಿಪಾಲಕನು; ನೀನೇ ವೈದಿಕ ಧರ್ಮರಕ್ಷಕನು! ಮಾವಾ, ಆತನ ಘನತೆ ಯನ್ನು ನೀನು ಕೇಳಿರುವದಿಲ್ಲವೆ? ಕೇವಲ ಚಿಕ್ಕ ಬಾಲಕನಾಗಿದ್ದ ನಮ್ಮ ಆ ಶಿವಾಜಿ ರಾಜನು ತನ್ನ ತಂದೆಯ ಸಂಗಡ ವಿಜಾಪುರದ ಬಾದಶಹನ ದರ್ಬಾರಕ್ಕೆ ಹೋದಾಗ, ತಂದೆ ಹೇಳಿದರೂ ಆ ಬಾಲ ವೀರನು ತನ್ನ ಹುಟ್ಟಗುಣಗಳಾದ, ಸ್ವಾಭಿಮಾನ, ಸ್ವಧರ್ಮಾಭಿಮಾನಗಳ ಮೂಲಕ, ಕೂಡಿ ದರ್ಬಾರವು ಕೌತುಕದಿಂದ ನೋಡುತ್ತಿರಲು, ಬಾದಶಹನಿಗೆ ಕುರ್ನಿಸಾತ (ನಮಸ್ಕಾರ) ಮಾಡಲಿಲ್ಲವಂತೆ! ಆ ಬಾಲ ವೀರನು ದರ್ಬಾರದಿಂದ ಹೊರಟು ದಾರಿಯಹಿಡಿದು ಮನೆಗೆ ಬರುತ್ತಿರುವಾಗ, ತನ್ನ ಎದುರಿಗೆ ಒಬ್ಬ ಮುಸಲ್ಮಾನ ಕಟಕನು ಬೇಕಂತ ಆಕಳ ಕಡಿಯುತ್ತಿರಲು, ಯಾರ ಭಯವೂ ಇಲ್ಲದೆ ನಮ್ಮ ವಸ್ತಾದಿ ಶಿವರಾಯನು ಆತನ ಖಡ್ಗದ ಕೈಯನ್ನು ತನ್ನ ಕೈಖಡ್ಗ

ದಿಂದ ತುಂಡರಿಸಿದನಂತೆ! ಮಾವಾ, ನಮ್ಮ ಆ ಬಾಲರಾಜನು, ಅಲ್ಲ ಅಲ್ಲ ನಮ್ಮ ದೇವರಾದ ಆ ಶಿವರಾಯನು ಹದಿನೆಂಟು ವರ್ಷದವನಿರುವಾಗ ವಿಜಾಪುರದ ಪ್ರಬಲ ಬಾದಶಹನ ವಶದಲ್ಲಿದ್ದ ಸುಲ್ತಾನಗಡವನ್ನು ಸ್ವಾಧೀನ ಪಡಿಸಿಕೊಂಡು ಸ್ವರಾಜ್ಯದ ತೋರಣ ಕಟ್ಟಿದನಂತೆ! ಮಾವಾ, ಇವೇನು ಸರ್ವಸಾಮಾನ್ಯ ಕೆಲಸಗಳೇ? ಒಟ್ಟಿಗೆ, ನಮ್ಮ ಶಿವರಾಯನು ಮನುಷ್ಯನಲ್ಲ ಬಿಡು, ಸಾಕ್ಷಾತ್ ಶ್ರೀ ಸದಾಶಿವನೇ ಸ್ವರಾಜ್ಯ ಸ್ಥಾಪನೆಗಾಗಿ ಶಿವರಾಯನಾಗಿ ಹುಟ್ಟಿರುವನು! ಸಾಕ್ಷಾತ್ ಆದಿ ಮಾಯೆಯಾದ ಶ್ರೀ ಭವಾನಿಯು ನಮ್ಮ ಶಿವರಾಯನ ಸಂಗಡ ಮಾತಾಡುತ್ತಿರುವಳಂತೆ ಮಾವಾ! ಅಂಥವನು ನಮ್ಮ ಅರಸನಾಗಲಿಕ್ಕಿಲ್ಲವೆ? ಅಂತವನು ನಮ್ಮ ದೂರು ಕೇಳಲಿಕ್ಕಿಲ್ಲವೆ? ಅಂಥವನು ನಮಗೆ ಆಶ್ರಯ ಕೊಟ್ಟು ನಮ್ಮನ್ನು ರಕ್ಷಿಸಲಿಕ್ಕಿಲ್ಲವೆ?

ಮಾವಾ, ಏನು ಹೇಳಲಿ? ಇಷ್ಟರೊಳಗೇ ನಾನು ಬಾಬಾನ ಅಪ್ಪಣೆ ಪಡೆದು ಶಿವರಾಯನ ಬಳಿಗೆ ಹೋಗತಕ್ಕವನು; ಆದರೆ ಏನೂ ಪರಾಕ್ರಮ ಮಾಡದೆ ಕೈ ಬೀಸುತ್ತ ಆಶ್ರಯ ಬೇಡ ಹೋಗುವವರನ್ನು ನಮ್ಮ ಆ ತೇಜಸ್ವಿ ಶಿವರಾಯನು ವಿಶೇಷವಾಗಿ ಮನ್ನಿಸುವದಿಲ್ಲವಂತೆ; ಆದ್ದರಿಂದ ಶಿವರಾಯನು ಮೆಚ್ಚಿ ನನ್ನ ಬೆನ್ನು ಚಪ್ಪರಿಸುವಂತೆ ಏನಾದರೂ ಕೆಲಸ ಮಾಡಿಕೊಂಡೇ ಹೋಗಬೇಕೆಂದು ತಡೆದಿದ್ದೇನೆ. ಮಾವಾ, ಇಂದಿನ ಕಾಳಗದಲ್ಲಿ ಸಿಕ್ಕಿರುವ ದುಡ್ಡು, ಕುದುರೆ, ಶಸ್ತ್ರಗಳು ಇವೆಲ್ಲವನ್ನು ತರುಣರು ನಾವು ಶಿವರಾಯನಿಗೆ ಒಪ್ಪಿಸಬಹುದು; ಆದರೆ ಇಷ್ಟರಿಂದ ಆ ಘನವಂತನಿಗೆ ಆಗುವದೇನು? ಪ್ರತಾಪನಿಧಿಯಾದ ನಮ್ಮ ಶಿವರಾಯನು ಬಹು ದೊಡ್ಡವನು, ಅಂಥವನಿಗೆ ಬಹು ದೊಡ್ಡ ಕಾಣಿಕೆಯನ್ನೇ ನಾವು ಒಯ್ಯಬೇಕಾಗುವದು. ಮಾವಾ ಒಂದಾದರೂ ದುರ್ಗವನ್ನು ವಶಮಾಡಿಕೊಳ್ಳದೆ ತರುಣರ ಗುಂಪಿನ ನಾವು ಶಿವರಾಯನನ್ನು ಕಾಣುವದು ಯೋಗ್ಯವಾಗಬಹುದೇ? ನಿಮ್ಮವರಾಗಿದ್ದ ಎಷ್ಟೋ ಜನ ತರುಣರು ನಾವು ಒಟ್ಟುಗೂಡಿ ಮುಸಲ್ಮಾನರೊಡನೆ ಕಾದಿ ಯಾವದೊಂದು ಕೋಟೆಯನ್ನು ತಕ್ಕೊಂಡು ಅದನ್ನು ಶಿವರಾಯನಿಗೆ ಕಾಣಿಕೆಯಾಗಿ ಕೊಡುವದು ಅಶಕ್ಯವಾಗಿದೆ? ಇಂದಿನ ಕಾಳಗದಲ್ಲಿ ಈ ವೀರ ಪರಿವಾರದ ಕೈ ಹೇಗಿರುತ್ತದೆಂಬದನ್ನೂ, ಅವರ ಶಕ್ತಿ–ಯುಕ್ತಿಗಳು ಎಷ್ಟಿರುವವೆಂಬದನ್ನೂ ನೀನು ನೋಡಿದೆಯೋ ಇಲ್ಲವೋ? ಎಲೆ, ಎಸ್ಯಾ, ಜೀವ್ಯಾ, ನಾಸ್ಯಾ, ಸತ್ಯಾ! ಸುಮ್ಮನೆ ಬಾಯಿ ತಕ್ಕೊಂಡು ಮಾತು ಕೇಳುತ್ತ ಏಕೆ ಕುಳಿತುಕೊಂಡಿರುವಿರಲೆ? ಈಗ ಮುಸಲ್ಮಾನರು ತಕ್ಕೊಳ್ಳಬೇಕೆಂದು ಹವಣಿಸುತ್ತಿರುವ ನಮ್ಮ ಶಿವರಾಯನ ''ರಾಜಮಾಚಿ'' ಎಂಬ ದುರ್ಗವನ್ನು ಮುಸಲ್ಮಾನರಿಂದ ರಕ್ಷಿಸುವ ಮೊದಲು, ದೊಡ್ಡ ಧನದ ನಿಧಿಯನ್ನು ನಮ್ಮ ಆ ಮರಾಟಾ ರಾಜನಿಗೆ ಕಾಣಿಕೆಯಾಗಿ ಒಯ್ಯಲಿಕ್ಕೆ ನೀವು ಸಿದ್ಧರಿರುವಿರೋ ಇಲ್ಲವೋ ಹೇಳಿರಿ'' ಎಂದು ಕೇಳಲು, ಎಲ್ಲ ತರುಣರು ಎದ್ದುನಿಂತು—''ಈಗೇ ಸಿದ್ಧರಿರುವೆವು'' ಎಂದು ಉತ್ತರ ಕೊಟ್ಟರು! ಆಗ ನೇತಾಜಿಯು ದತ್ತಾಜಿಗೆ—''ಮಾವಾ, ನೋಡಿದೆಯೇನು ನಮ್ಮ ತರುಣರ ಉತ್ಸಾಹವನ್ನು! ನಾವೆಲ್ಲರೂ ಜೀವದ ಹಂಗುದೊರೆದು ಶಿವರಾಯನ ಸೇವೆ ಮಾಡಲಿಕ್ಕೆ ಟೊಂಕ ಕಟ್ಟಿರುವೆವು! ಇದರ ಮೇಲೆ ದೇವರ ಇಚ್ಛೆಯಂತೆ ''ಆಗುವದು ಆಗಿಯೇ ತೀರುತ್ತದೆ!''

# ರಾಜಕಾರಣದ ಗೂಢ ತಂತ್ರ

ಚೌಕ ಗ್ರಾಮದಿಂದ ಸುಮಾರು ಎರಡು ಹರದಾರಿಗಳ ಮೇಲೆ ಮಾಥೇರಾನ ಎಂಬ ಒಂದು ದುರ್ಗಮವಾದ ಪರ್ವತವಿರುವದು. ಆ ಪರ್ವತದ ಎತ್ತರ ಪ್ರದೇಶದಲ್ಲಿ ಒಂದು ಗುಪ್ತ ವಾದ ಭಯಂಕರ ಗುಹೆಯಿದ್ದಿತು. ಅಲ್ಲಿ ಒಬ್ಬ ಯೋಗೀಶ್ವರನು ವಾಸ ಮಾಡಿಕೊಂಡಿದ್ದನು; ಅದರೆ ಆತನು ಅಲ್ಲಿರುವದು ಬಹು ಸ್ವಲ್ಪ ಜನರಿಗೆ ಮಾತ್ರ ಗೊತ್ತಿತ್ತು. ಆ ಗುಡ್ಡಗಳಲ್ಲಿಯೇ ವಾಸ ಮಾಡಿಕೊಂಡಿರುವ ಭಿಲ್ಲರು, ಕೋಳೀ ಜನರು ಮೊದಲಾದ ಅರಣ್ಯವಾಸಿಗಳಿಗೆ ಮಾತ್ರ ಯಾವಾಗಾದರೊಮ್ಮೆ ಆ ಸಾಧುವಿನ ದರ್ಶನವಾಗುತ್ತಿತ್ತು. ಆ ಕಾಡು ಜನರ ಭಕ್ತಿಯು ಆ ಸಾಧುವಿನಲ್ಲಿ ವಿಶೇಷವಾಗಿತ್ತು. ಆ ಭಾವಿಕ ಜನರು ಆ ಸಾಧುವನ್ನು ದೇವ ರೆಂತಲೇ ಭಾವಿಸಿದ್ದರು. ಆತನ ಆಜ್ಞೆ ಮೀರುವದೆಂದರೆ, ಮಹಾ ದೋಷವೆಂದು ಅವರು ತಿಳಿಯುತ್ತಿದ್ದರು. ಸಾಧುವಿನ ತಪಶ್ಚರ್ಯೆಕ್ಕೆ ಬಾಧೆಯುಂಟಾಗದಂತೆ ಅವರು ಬಹು ಜಾಗರೂಕರಾಗಿ ನಡೆದುಕೊಳ್ಳುತ್ತಿದ್ದರು. ಅವರು ಆ ಸಾಧುವಿನ ವಾಸಸ್ಥಾನದ ಕಡೆಗೆ ಅನ್ಯ ರನ್ನು ಸುಳಿಯಗೊಡರು. ಆತನು ಕರೆದ ಹೊರತು ತಾವೂ ಆ ಗುಹೆಯ ಸನಿಯಕ್ಕೆ ಸುಳಿಯರು. ಸ್ವಾಭಾವಿಕವಾಗಿಯೇ ಆ ಗುಹೆಯ ಪ್ರದೇಶವು ದುರ್ಗಮವಾದದ್ದು; ಮೇಲೆ ಅದು ಕ್ರೂರ ಮೃಗಗಳ ವಾಸಸ್ಥಳ; ಅದೂ ಅಲ್ಲದೆ ಆ ಸ್ಥಳದ ವಿಷಯದ ಹಲವು ಅಂಜಿಕೆ ಹುಟ್ಟಿಸುವ ಸುದ್ದಿಗಳು ಆ ಪರ್ವತ ಪ್ರದೇಶದ ಜನರಲ್ಲಿ ರೂಢವಾಗಿದ್ದವು. ಆದ್ದರಿಂದ ಆ ಸಾಧು ಪುರುಷನ ತಪಶ್ಚರ್ಯೆಕ್ಕಾಗಲಿ, ಆತನ ಬೇರೆ ಉದ್ದೇಶಗಳಿಗಾಗಲಿ ಅನ್ಯರ ಬಾಧೆಯು ಸರ್ವಥಾ ತಟ್ಟುವಹಾಗಿದ್ದಿಲ್ಲ.

ಆ ಸಾಧುವಿನ ವಯಸ್ಸು ಐವತ್ತು ವರ್ಷಗಳ ಮೇಲಿರಬಹುದು. ಆದರೂ ಆತನು ಕೇವಲ ತರುಣನಂತೆ ಪುಷ್ಟನೂ, ತೇಜಸ್ವಿಯೂ ಆಗಿದ್ದನು. ಆತನ ಸುಂದರ ಮುಖವು ಗಂಭೀರವಾದದ್ದು. ಅದರಲ್ಲಿ ಶಾಂತಿಯ ಕಳೆಯು ಉಕ್ಕುತ್ತಲಿತ್ತು. ಆತನ ವಾಸಸ್ಥಳವಾದ ಗುಹೆಗೆ ಒಂದು ಬಾಗಿಲು ಇದ್ದು, ಅದೂ ಗಿಡಗಳ ಗುಂಪಿನಲ್ಲಿ ಮುಚ್ಚಿ ಹೋಗಿತ್ತು. ಗುಹೆಯ ಮೇಲು ಗಡೆಯಲ್ಲಿ ಬೆಳಕಿಂಡಿ ಗಳಿದ್ದು, ಗುಹೆಯಲ್ಲಿ ತಕ್ಕಮಟ್ಟಿಗೆ ಪ್ರಕಾಶವು ಬೀಳುತ್ತಲಿತ್ತು. ಗುಹೆಯ ಬಾಗಿಲು ಪೂರ್ವಕ್ಕಿದ್ದು, ಗುಹೆಯ ಎಡೆಗಡೆಗೆ ಗೋಡೆಗೆ ಹೊಂದಿ ಇದ್ದ ಯೋಗಾಸನದ ಮೇಲೆ ಆ ಸಾಧುವು ಧ್ಯಾನಸ್ಥನಾಗಿ ಕುಳಿತುಕೊಂಡಿದ್ದನು. ಆತನ ಎಡೆಗಡೆಯಲ್ಲಿ ಒರೆಗಾಣಿಸಿದ ಒಂದು ಖಡ್ಗವೂ, ಒಂದು ಢಾಲು ತೂಗಹಾಕಿದ್ದವು. ಮೂಲೆಯಲ್ಲಿ ಒಂದು ಬರ್ಚಿಯು ಇಟ್ಟಿತ್ತು. ಸಾಧುವಿನ ಬಳಿಯಲ್ಲಿ ಒಂದು ಕಮಂಡಲು, ಮತ್ತು ಕಟ್ಟಿಗೆಯ ಥಾಲಿ–ಸೌಟು–ತಾಬಾಣ ಗಳ ಇದ್ದವು; ಇವುಗಳ ಹೊರತು ಆ ಗುಹೆಯಲ್ಲಿರುವ ವಸ್ತುಗಳೆಂದರೆ, ಎದುರಿಗೆ ಗೂಟಕ್ಕೆ ಹಾಕಿದ ಒಂದು ಕೇವೆ ಎದ್ದಿದ ಕಪನಿ, ಒಂದು ಕೇವಿಯ ಕಿವಿಟೊಪ್ಪಿಗೆ, ಸಾಧುವಿನ ಎಡಗಡೆ ಯಲ್ಲಿ ಅಕ್ಷಯ್ಯವಾಗಿ ತುಂಬಿದ ಭಸ್ಮದ್ದೊಂದು ಸಂದುಕ ಇವಿಷ್ಟು ಇದ್ದವು. ಇವುಗಳ ಹೊರತು ಬೇರೆ ಉಪಜೀವನದ ಸಾಧನಗಳು ಯಾವವೂ ಅಲ್ಲಿ ಇದ್ದಿಲ್ಲ. ಸಾಧುವು ಯೋಗದಂಡದ

ಮೇಲೆ ತೋಳನ್ನಿಟ್ಟು ಜಪ ಮಾಡುತ್ತ ಕುಳಿತಿದ್ದನು. ಯಥೇಚ್ಛವಾಗಿ ಭಸ್ಮ ಹಚ್ಚಿನ ಆತನ ದೇಹವನ್ನೂ, ಕೆಂಪು ಬಣ್ಣದ ಕೌಪೀನವನ್ನೂ, ಉನ್ನತ ಜಟಾಮಂಡಲವನ್ನೂ, ಕೊರಳೊಳಗಿನ ರುದ್ರಾಕ್ಷ ಮಾಲೆಯನ್ನೂ ನೋಡಿದರೆ ಪ್ರತ್ಯಕ್ಷ ಪರಮೇಶ್ವರನೇ ಜಗತ್ಕಲ್ಯಾಣಕ್ಕಾಗಿ ಘೋರ ತಪಸ್ಸನ್ನಾಚರಿಸುತ್ತಿರುವನೆಂಬಂತೆ ತೋರುತ್ತಿತ್ತು!

ಮಧ್ಯರಾತ್ರಿಯ ಸಮಯ, ಅಮಾವಾಸ್ಯೆಯ ಕಗ್ಗತ್ತಲು; ಒಬ್ಬ ತರುಣನು ಗುಹೆಯ ಕೆಳಗಡೆಯಲ್ಲಿ ನಿಂತುಕೊಂಡು, ಬಹು ಎತ್ತರದ ಮೇಲಿದ್ದ ಗುಹೆಯ ಬಾಗಿಲ ಕಡೆಗೆ ನೋಡುತ್ತಲಿದ್ದನು. ಆಗ ಆತನಿಗೆ ಕ್ರೂರ ಮೃಗಗಳ, ಅಥವಾ ಹುಳಹುಪ್ಪಡಿಗಳ ಅಂಜಿಕೆಯ ಕಲ್ಪನೆಯೂ ಇದ್ದಂತೆ ತೋರಲಿಲ್ಲ. ಆತನು ತನ್ನ ಭಾಲೆಯನ್ನು ನೆಲದಲ್ಲಿ ನೆಟ್ಟಿದ್ದನು, ಕತ್ತಿ ಢಾಲುಗಳನ್ನು ಒಂದು ಗಿಡದ ಟೊಂಗೆಗೆ ತೂಗಹಾಕಿದ್ದನು. ತಾನು ತೊಟ್ಟುಕೊಂಡಿದ್ದ ಗುಡಗಿಯ ಚಣ್ಣವನ್ನು ಗಟ್ಟಿಯಾಗಿ ಬಿಗಿದುಕೊಂಡು, ತಾನು ಹಾಕಿಕೊಂಡಿದ್ದ ಅಂಗಿಯ ತೋಳುಗಳನ್ನು ಮೇಲಕ್ಕೆ ಏರಿಸಿದ್ದನು. ಬಹು ಎತ್ತರದ ಮೇಲಿನ ಗುಹೆಯ ಬಾಗಿಲಿನಿಂದ ಜೋತುಬಿದ್ದಿದ್ದ ಉದ್ದವಾದ ಆಲದ ಬೇರುಗಳನ್ನು ಕೈಯಲ್ಲಿ ಹಿಡಕೊಂಡು, ಮೇಲಕ್ಕೆ ಏರಿ ಹೋಗಲು ಆತನು ಅತ್ಯಂತ ಆತುರನಾಗಿದ್ದನು; ಆದರೆ ಆತನು ಯಾತರದೋ ಹಾದಿಯ ನೋಡುತ್ತ ಒಂದೇಸವನೆ ಗುಹೆಯ ಬಾಗಿಲ ಕಡೆಗೆ ನೋಡುತ್ತ ನಿಂತಿದ್ದಹಾಗೆ ತೋರುವದು; ಆದರೆ ಅಂದಿನ ಅಮಾವಾಸ್ಯೆಯ ಕಗ್ಗತ್ತಲೆಯಲ್ಲಿ ಆತನಿಗೆ ಅಲ್ಲಿ ಏನು ಕಾಣಬೇಕು? ಅಂದ ಬಳಿಕ ಆತನು ಮೇಲಕ್ಕೆ ಮುಖವೆತ್ತಿ ಗವಿಯ ಬಾಗಿಲಕಡೆಗೆ ನೋಡುತ್ತಿದ್ದನೆಂದು ಹೇಳುವ ದಕ್ಕಿಂತ, ಆತನು ಯಾತರದೋ ಸಪ್ಪಳವಾಗುವ ಹಾದಿಯನ್ನು ನೋಡುತ್ತಿದ್ದನೆಂದು ಹೇಳುವದು ಸಮರ್ಪಕವಾಗಬಹುದು. ಆ ತರುಣನು ಅಲ್ಲಿಗೆ ಬಂದಾಗಿನಿಂದ ಅಖಂಡ ಒಂದು ತಾಸು ಹೀಗೆ ನೋಡುತ್ತ ನಿಂತುಕೊಂಡನು. ಅಷ್ಟರಲ್ಲಿ ಗುಹೆಯೊಳಗಿಂದ—''ಮಂಗಲಮೂರ್ತಿ ಮೋರಯಾ ಮೋರಯಾ'' ಎಂಬ ಗಂಭೀರ ಧ್ವನಿಯು ಉಂಟಾಗಿ, ಅದರ ಪ್ರತಿಧ್ವನಿಯು ಆ ಪರ್ವತದ ಅರಣ್ಯಪ್ರದೇಶದಲ್ಲೆಲ್ಲ ಪಸರಿಸಿತು. ಆಗ ಆ ತರುಣನ ಮೈ ಜುಮ್ಮೆಂದು ಆತನ ಮೈಕೂದಲು ನೆಟ್ಟಗಾದವು! ಆಗ ಭಕ್ತಿಪರವಶನಾದ ಆ ತರುಣನು ಗುಹೆಗೆ ಸಾಷ್ಟಾಂಗ ನಮಸ್ಕಾರಮಾಡಿ, ಬೇರುಗಳನ್ನು ಹಿಡಿದುಕೊಂಡು ಸರಸರ ಏರುತ್ತ ಕ್ಷಣಮಾತ್ರದಲ್ಲಿ ಗುಹೆ ಯಲ್ಲಿ ಪ್ರವೇಶಿಸಿ, ಗಣಪತಿಯ ಉಪಾಸಕನಾದ ಆ ಸಾಧುವಿಗೆ ಸಾಷ್ಟಂಗವೆರಗಿ ದಂಟಿ ನಂತೆ ಉದ್ದಕ್ಕೆ ನೆಲದಮೇಲೆ ಆತನ ಮುಂದೆ ಬಿದ್ದುಬಿಟ್ಟನು!

ಹೀಗಿರುವಾಗ ಆ ಸಾಧು ಪುರುಷನು ಆಚಮನ ಮಾಡಿ ಕಣ್ಣುಗಳಿಗೆ ನೀರು ಹಚ್ಚಿ ಕೊಂಡು ಆ ತರುಣನನ್ನು ಕುರಿತು—''ನೇತಾಜಿ, ಏಳು, ಆಯುಷ್ಮಂತನಾಗು, ವಿಜಯಿ ಯಾಗು! ಮಂಗಲಮೂರ್ತಿಯಾದ ಭಾಲಚಂದ್ರನು ನಿನ್ನ ಕಲ್ಯಾಣಮಾಡಲಿ!'' ಎಂದು ಆಶೀರ್ವದಿಸಲು, ನೇತಾಜಿಯು ಮೇಲಕ್ಕೆ ಎದ್ದು ಕೈಜೋಡಿಸಿ ನಿಂತುಕೊಂಡನು. ತನ್ನ ತಂಗಿ ಯಾದ ಗಂಗೆಯ ಲಗ್ನಕ್ಕೆ ಹೋಗಿದ್ದ ನೇತಾಜಿಯು ಆಕಸ್ಮಾತ್ತಾಗಿ ಇಲ್ಲಿಗೆ ಬಂದದ್ದನ್ನು ನೋಡಿ,

ವಾಚಕರಿಗೆ ಆಶ್ಚರ್ಯ ವಾಗಿರಬಹುದು; ಆದ್ದರಿಂದ ಆ ಸಾಧುವಿಗೂ, ನೇತಾಜಿಗೂ ಇವರ ಸಂಬಂಧವನ್ನು ಸ್ವಲ್ಪದರಲ್ಲಿ ಇಲ್ಲಿ ಹೇಳುವದು ಅವಶ್ಯವಾಗಿರುವದು.

ಶಿವಾಜಿ ಮಹಾರಾಜನು ರಾಜ್ಯಸ್ಥಾಪಿಸಿದ ಕಾಲದಿಂದ ಹಿಂದಿನ ನೂರಾರು ವರ್ಷ ಗಳಿಂದ ಮಹಾರಾಷ್ಟ್ರದಲ್ಲಿ ಹಲವು ಜನ ಸಾಧು–ಸಂತರು, ಜನರ ಮನೋಭೂಮಿಕೆಯಲ್ಲಿ ಶ್ರದ್ಧಾ– ಭಕ್ತಿಗಳ ಬೀಜಗಳನ್ನು ಬಿತ್ತಿ ಬೆಳಿಸಿ, ತದ್ವಾರಾಜನರಲ್ಲಿ ಸತ್ಕರ್ಮ–ಸದಾಚಾರಗಳ ಪ್ರವೃತ್ತಿಯನ್ನೂ, ಪಾಪ–ಪುಣ್ಯಗಳ ಭಯವನ್ನೂ, ದುಷ್ಕರ್ಮ–ದುರಾಚಾರಗಳ ತಿರಸ್ಕಾರ ವನ್ನೂ ಉಂಟು ಮಾಡಿ, ಬ್ರಾಹ್ಮ್ಯವೃತ್ತಿಯ ಸಾತ್ವಿಕ ಭಾವವನ್ನು ಬೆಳಿಸಿದ್ದರು; ಆದ್ದರಿಂದ ಮುಂದೆ ಶಿವಾಜಿಯಂಥ ದೇವಾಂಶಭೂತರಾದ ಕ್ಷಾತ್ರವೃತ್ತಿಯವರು, ಜನರ ಆ ಸಾತ್ವಿಕ ಭಾವಕ್ಕೆ ಕ್ಷಾತ್ರವೃತ್ತಿಯ ರಾಜಸ ಭಾವವನ್ನು ಜೋಡಿಸಲಿಕ್ಕೆ ಸಮರ್ಥರಾದರು. ಹೀಗೆ ಆಗಿನ ಕಾಲದ ಮಹಾರಾಷ್ಟ್ರದಲ್ಲಿ ಸಾಧು–ಸಂತರು ಬ್ರಾಹ್ಮ್ಯವೃತ್ತಿಯ ಸಾತ್ವಿಕ ತೇಜಸ್ಸನ್ನೂ, ಶಿವಾಜಿ ಯಂಥ ಕ್ಷಾತ್ರ ಪ್ರವೃತ್ತಿಯವರು ಕ್ಷಾತ್ರವೃತ್ತಿಯ ರಾಜಸ ತೇಜಸ್ಸನ್ನೂ, ಉಂಟುಮಾಡಿದ್ದರಿಂದ ಆ ಮರಾಟರ, ಬ್ರಾಹ್ಮ್ಯ–ಕ್ಷಾತ್ರ ತೇಜಗಳ ಸಮ್ಮೇಲನದಿಂದ ಮಹಾರಾಷ್ಟ್ರದಲ್ಲಿ ಸುಗಂಧ ಯುಕ್ತವಾದ ಸ್ವರಾಜ್ಯಸ್ಥಾಪನೆಯಾಯಿತು. ಬ್ರಾಹ್ಮ್ಯವೃತ್ತಿಯ ಬರ್ಫದಂತೆ ಅತಿ ಶಾಂತ ವಾದದ್ದು, ಕ್ಷಾತ್ರ ವೃತ್ತಿಯು ಹೆಸರು ಬಂದ ನೀರಿನ ಹಾಗೆ ಬಹುತಾಪದಾಯಕವಾದದ್ದು; ಆದ್ದರಿಂದ ಕೇವಲ ಶಾಂತ ವೃತ್ತಿಯಿಂದ, ಅಥವಾ ಕೇವಲ ಸಂತಾಪದಾಯಕ ವೃತ್ತಿಯಿಂದ ಸುಗಂಧಯುಕ್ತ ಅಂದರೆ ಸದ್ಗುಣ ಯುಕ್ತ ಸ್ವರಾಜ್ಯ ಸ್ಥಾಪನದಂಥ ನಿಜವಾದ ಅಭ್ಯುದಯ ಕಾರಕ ಕಾರ್ಯವು ಆಗಲಾರದು; ಆದ್ದರಿಂದ ರಾಷ್ಟ್ರಹಿತೇಚ್ಛುಗಳು ತಮ್ಮ ಸಂತತಿಗೆ ಬಾಲ್ಯದಲ್ಲಿ ಮೊದಲು ಸಾತ್ವಿಕ ಭಾವವುಂಟಾಗುವಂತೆಯೂ, ಆಮೇಲೆ ರಾಜಸ ಭಾವವುಂಟಾಗುವಂತೆಯೂ ಉಪಾಯಗಳನ್ನು ಯೋಚಿಸಬೇಕಾಗುವದು.

ಇಂತಹ ಬ್ರಾಹ್ಮ್ಯ–ಕ್ಷಾತ್ರವೃತ್ತಿಗಳ ಸಂಯೋಗದ ಸುಯೋಗವು ಆ ನೇತಾಜಿಗೆ ಆತನ ಪೂರ್ವ ಪುಣ್ಯದಿಂದ ಸಹಜವಾಗಿ ಉಂಟಾಗಿತ್ತು, ನೇತಾಜಿಯ ತಂದೆ ಪರಸಾಜಿಯು ಅತ್ಯಂತ ಸಾತ್ವಿಕನೂ, ಭಾವಿಕನೂ ಇದ್ದದ್ದರಿಂದ, ಬಾಲ್ಯದಲ್ಲಾದ ಅಂತಹ ಆ ತಂದೆಯ ಸಹವಾಸದಿಂದ ನೇತಾಜಿಯಲ್ಲಿ ಮೇಲೆ ಹೇಳಿರುವ ಶ್ರದ್ಧಾ, ಭಕ್ತಿ, ಸತ್ಕರ್ಮ ಪ್ರೀತಿ, ದುಷ್ಕರ್ಮಗಳ ತಿರಸ್ಕಾರ, ಪಾಪ–ಪುಣ್ಯಗಳ ಭಯ ಮುಂತಾದ ಹಲವು ಸಾತ್ವಿಕ ಗುಣಗಳ ಉದಯವು ಸಹಜವಾಗಿ ಆಗಿ, ಆತನು ಅತ್ಯಂತ ಆಸ್ತಿಕನಾದನು. ಹೀಗಾಗದೆ ಹುಡುಗರಿಗೆ ನಾಸ್ತಿಕರಾದ, ಅಂದರೆ ಶ್ರದ್ಧಾ ಭಕ್ತಿಹೀನರಾದ ಸ್ವೇಚ್ಛಾಚಾರಿ ತಾಯಿ–ತಂದೆಗಳ ಸಹವಾಸವಾದರೆ, ಹುಡುಗರ ಸ್ವೇಚ್ಛಾಚಾರಕ್ಕೆ ಆಸ್ಪದ ದೊರೆತು, ಅವರು ಸ್ವೇಚ್ಛಾಚಾರದಿಂದ ಪಶುವೃತ್ತಿಯವರಾಗುವರು; ಆದರೆ ನೇತಾಜಿಗೆ ಅಂತಹ ನಾಸ್ತಿಕನಾಗುವ ಕುಯೋಗವು ಒದಗಿಬರಲಿಲ್ಲ, ಬಾಲ್ಯದಲ್ಲಿ ಆಸ್ತಿಕ ಭಾವದವನಾಗಿದ್ದ ನೇತಾಜಿಯು ಹನ್ನೆರಡು ವರ್ಷದವನಿರುವಾಗ, ಮೇಲೆ ಹೇಳಿದ ಮಾಥೇರಾನ ಪರ್ವತದ ಮೇಲೆ ದನಕಾಯಲಿಕ್ಕೆ ಹೋದಾಗ, ಅಕಸ್ಮಾತ್ತಾಗಿ ಆತನಿಗೆ ಮೇಲೆ ಹೇಳಿದ ಸಾಧು ವಿನ ದರ್ಶನವಾಯಿತು. ಕೂಡಲೆ ನೇತಾಜಿಯ ಹೃದಯದಲ್ಲಿಯ ಭಕ್ತಿರಸವು ಜಿಲ್ಲನೆ ಉಕ್ಕಲು,

ಆತನು ಸಾಧುಗಳ ಚರಣಗಳಿಗೆ ಭಕ್ತಿಯಿಂದ ನಮಸ್ಕರಿಸಿದನು. ಆಗ ಸಾಧುಗಳಿಗೆ ನೇತಾಜಿಯನ್ನು ನೋಡಿ ಬಹಳ ಸಂತೋಷವಾಯಿತು. ಅವರು ನೇತಾಜಿಯ ಮೈಮೇಲೆ ಕೈಯಾಡಿಸಿ ಆತನನ್ನು ಕುರಿತು—ಬೇಟಾ, ನೀನು ಸಾಮಾನ್ಯ ಹುಡುಗನಲ್ಲ; ಶೂರನೂ, ಧೀರನೂ ಎಂದು ಶಿವಾಜಿಯಿಂದ ಹೊಗಳಿಸಿ ಕೊಂಡು, ಆತನ ಬಲಗೈಯಂತೆ ನೀನು ಆತನಿಗೆ ಸ್ವರಾಜ್ಯ ಸ್ಥಾಪನೆಯ ಕಾರ್ಯದಲ್ಲಿ ಸಹಾಯಕನಾಗುತ್ತೀ. ಪರಪೀಡಕರಾದ ಮುಸಲ್ಮಾನರಿಗೆ ನೀನು ಭಯಪ್ರದನಾಗುವೆ. ಹಿಡಿ ಗಣಪತಿಯ ಈ ಪ್ರಸಾದವನ್ನು, ಎಂದು ಹೇಳಿ, ತಮ್ಮ ಜೋಳಿಗೆಯೊಳಗಿನ ಪಂಚಕಜ್ಜಾಯದ ಪ್ರಸಾದವನ್ನು ಕೈಮುಟ್ಟಿ ನೇತಾಜಿಗೆ ತಿನಿಸಹತ್ತಿದರು; ಅದರಿಂದ ನೇತಾಜಿಯ ಮನೋವೃತ್ತಿಯು ಬದಲಾಗಿ ಹೋಯಿತು. ಆತನ ಸಾತ್ವಿಕ ಭಾವದ ಜೊತೆಯಲ್ಲಿ ಕ್ಷಾತ್ರತೇಜದ ಅಂಕುರವು ಒಡೆದು ಅದು ಭರದಿಂದ ಬೆಳೆಯಹತ್ತಿತು. ಇದರಿಂದ ಸಾಧು ಸಮಾಗಮದ ಮಹತ್ವವೂ, ಸಾಧುಗಳ ಅನುಗ್ರಹ ಪ್ರಭಾವವೂ ಚನ್ನಾಗಿ ವ್ಯಕ್ತವಾಗುವವು. ಹೀಗೆ ನೇತಾಜಿಯಲ್ಲಿ ಆ ಸಾಧುಗಳ ವಿಷಯದ ಅಕೃತ್ರಿಮ ಭಕ್ತಿಯು ಬೆಳೆಯುತ್ತ ಬೆಳೆಯುತ್ತ ಬಂದದ್ದರಿಂದಲೇ ಹನ್ನೆರಡು ವರುಷದ ವಯುಸ್ಸಿನವನಿರುವಾಗ ಯುದ್ಧದ ಆಟವಾಡುತ್ತಿದ್ದ ಆತನು, ಈಗ ಹದಿನೆಂಟು ವರ್ಷದ ವಯಸ್ಸಿನವನಿರುವಾಗ ತರುಣರ ತಂಡಗಳ ನಾಯಕನಾಗಿ ಮುಸಲ್ಮಾನರನ್ನು ಹಣೆದು ಓಡಿಸಲು ಸಮರ್ಥನಾದದ್ದಲ್ಲದೆ, ಅಮಾವಾಸ್ಯೆಯ ಕಾಳ ರಾತ್ರಿಯಲ್ಲಿ ಯಾತರ ಭಯವೂ ಇಲ್ಲದೆ ಗುರುನಿಷ್ಠೆಯ ಏಕಾಗ್ರತೆಯಿಂದ ಮಾಥೇರಾನದ ತುಟ್ಟ ತುದಿಯಲ್ಲಿರುವ ಭಯಂಕರ ಗುಹೆಯ ಬುಡದಲ್ಲಿ ಬಂದು ನಿಲ್ಲುವಷ್ಟು ದಿಟ್ಟನಾದನು! ಆದ್ದರಿಂದ ಪ್ರಾಮುಖ್ಯವಾಗಿ ಮಹಾತ್ಮರ ಸತ್ವದಿಂದಲ್ಲದೆ, ಬಾಹ್ಯ ಸಾಧನಗಳಿಂದ ಭಾವ ಘಟನೆಯು ಕಾರ್ಯವಾಗುವದಿಲ್ಲವೆಂಬ ಮಾತು ಸತ್ಯವಾದದ್ದೆಂದು ಹೇಳಬೇಕಾಗುವದು.

ಹೀಗೆ ಮಧ್ಯರಾತ್ರಿಯಲ್ಲಿ ಗುಹೆಯನ್ನು ಪ್ರವೇಶಿಸಿ ತನ್ನೆದುರಿಗೆ ಕೈಜೋಡಿಸಿಕೊಂಡು ನಿಂತಿರುವ ನೇತಾಜಿಯನ್ನು ಕುರಿತು ಆ ಸಾಧುಗಳು–

ಸಾಧು—ನೇತಾಜಿ, ನಿನ್ನ ಈ ಏಕನಿಷ್ಠ ಭಕ್ತಿಗಾಗಿ ಈ ಗಣೇಶ ಗೋಸಾವಿಯು ಸುಪ್ರಸನ್ನ ನಾಗಿರುವನು! ನೇತಾಜಿ, ಇಂತಹ ಮಧ್ಯರಾತ್ರಿಯಲ್ಲಿ ಇಂತಹ ಭಯಂಕರ ಸ್ಥಳಕ್ಕೆ ನೀನು ಅಮಾವಾಸ್ಯೆಯ ದಿವಸ ಯಾತರ ಭಯವೂ ಇಲ್ಲದೆ ಬಂದುಬಿಟ್ಟೆಯಲ್ಲ! ಕ್ರೂರ ಮೃಗಗಳೇನು, ಹಾವು–ಚೇಳುಗಳೇನು, ಕಳ್ಳರು–ಕಾಕರೇನು? ನಿನ್ನ ಸಂರಕ್ಷಣದ ಭಾರವು ಜಗನ್ನಾಯಕನಾದ ಶ್ರೀ ವಿನಾಯಕನ ಮೇಲೆ ವಿಶೇಷವಾಗಿ ಬಿದ್ದಿತು! ಅಪ್ಪಾ ನೇತಾಜಿ, ವಿಶೇಷ ಕಾರಣವಿಲ್ಲದೆ ಇಂತಹ ಸಾಹಸ ಮಾಡಬಾರದು ನೋಡು! ನನ್ನ ಮಧ್ಯರಾತ್ರಿಯ ಸಮಾಧಿಯ ಉಥ್ಥಾನದ ಭಯಂಕರ ಕಾಲದಲ್ಲಿ ಹೀಗೆ ತಟ್ಟನೆ ಬಂದು ನಿಲ್ಲುವ ಧೈರ್ಯವು ಯಾರಿಗಾದೀತು? ನೇತಾಜಿ, ಅದಿರಲಿ ಬಿಡು, ನಿನ್ನ ತಂಗಿಯ ಲಗ್ನ ಕಾರ್ಯವು ನಿರ್ವಿಘ್ನ ದಿಂದ ಆಯಿತಷ್ಟೆ? ನಿಬ್ಬಣದ ಕಾಳಗದಲ್ಲಿ ಮುಸಲ್ಮಾನರಿಂದ ದೊರೆತ ಧನವನ್ನೂ, ಕುದುರೆಗಳನ್ನೂ ಶಸ್ತ್ರಗಳನ್ನೂ ಶಿವರಾಯನಿಗೆ ಮುಟ್ಟಿಸುವ ವ್ಯವಸ್ಥೆಯನ್ನೇನು ಮಾಡಿದೆ? ನಿನ್ನ ತರುಣ ಪರಿವಾರವು ಮುಸಲ್ಮಾನರ ಕೈಗೆ ಸಿಗದಂತೆ ಹಂಚಿಕೆ ಮಾಡಿಕೊಂಡಿರುವದೋ ಇಲ್ಲವೋ?

ನೇತಾಜಿ—ಸದ್ಗುರುನಾಥಾ, ನೀನು ತ್ರಿಕಾಲಜ್ಞನು, ನೀನು ಅರಿಯದ್ದು ಯಾವದಿರುವದು? ನನ್ನ ಈ ದೇಹವು ಶ್ರೀ ಗುರುಚರಣಕ್ಕೆ ಅರ್ಪಿಸಿದ್ದಾಗಿರುವದು! ಅಂದಬಳಿಕ ಶ್ರೀ ಗುರುವು ಕೈಕೊಂಡಿರುವ ಧರ್ಮೋದ್ಧಾರದ ಕಾರ್ಯದಲ್ಲಿ ಇದನ್ನು ಉಪಯೋಗಿಸುವಾಗ, ಇದಕ್ಕೆ ಹಗಲೇನು ರಾತ್ರಿಯೇನು? ಹುಣ್ಣಿವೆಯೇನು–ಅಮಾವಾಸ್ಯೆಯೇನು? ಸುಖವೇನು? ದುಃಖವೇನು? ಗುರುದೇವಾ, ಸಮರ್ಥರ ಸೇವಕರನ್ನು ವಕ್ರದೃಷ್ಟಿಯಿಂದ ನೋಡುವ ಧೈರ್ಯವು ಪ್ರತ್ಯಕ್ಷ ಯಮನಿಗೂ ಇಲ್ಲದಿರುವಾಗ, ಹುಲಿಕರಡಿಗಳೇನು ಮಾಡುವವು? ಹಾವು–ಚೇಳು ಗಳಿಂದೇ ನಾಗುವದು! ಕಳ್ಳರುಕಾಕರು ಯಾವ ಗಿಡದ ತಪ್ಪಲು? ಚರಣಗಳ ದರ್ಶನದ ಇಚ್ಛೆಯಾದ ಕೂಡಲೆ ದೇಹದ ಪರಿವೆಯೇ ಇಲ್ಲದಾಗುವಾಗ, ದೇಹಕ್ಕೊದಗಬಹುದಾದ ಬಾಧೆಗಳ ಪರಿವೆಯು ಯಾರಿಗೆ ಉಳಿಯಬೇಕು ಆಗಲಿ ಸಮರ್ಥಾ, ನಿನ್ನ ಚರಣಸೇವೆ ಮಾಡುವಾಗ ಈ ದೇಹದ ಪಾತವಾಗಿ ಅದು ಕೃತಾರ್ಥವಾಗಿ ಹೋಗಲಿ! ಕೃಪಾದೃಷ್ಟಿಯಿಂದ ಕಡ್ಡಿಯನ್ನು ಗುಡ್ಡವಾಗಿ ಮಾಡುವ ಸಾಮರ್ಥ್ಯವು ಶ್ರೀ ಗುರುನಾಥನಲ್ಲಿರುವಾಗ, ಒಬ್ಬ ನೇತಾಜಿಯ ಸ್ಥಳದಲ್ಲಿ ನೂರು ಜನ ನೇತಾಜಿಯರು ಉತ್ಪನ್ನವಾಗುವದರಲ್ಲಿ ಸಂಶಯವೇನು? ಗುರುನಾಥಾ, ನಿಬ್ಬಣದ ಕಾಳಗದಲ್ಲಿ ಪೋರರು ನಾವು ಜಯ ಹೊಂದಿ, ನಿರ್ವಿಘ್ನದಿಂದ ನನ್ನ ತಂಗಿಯ ಲಗ್ನವಾದದ್ದು ಯಾರ ಕೃಪೆಯಿಂದ? ಗುರುದೇವಾ, ಅಲ್ಲಿಯ ಸುಲಿಗೆಯನ್ನು ಗುಪ್ತವಾಗಿ ಸನ್ನಿಧಿಗೆ ತರಬೇಕಾದರೆ ಅಮಾವಾಸ್ಯೆಯ ಮಧ್ಯರಾತ್ರಿಯೇ ತಕ್ಕ ಕಾಲವಲ್ಲವೆ? ತರುಣ ಪರಿವಾರವು ಗುಹೆಯಿಂದ ದೂರದಲ್ಲಿ ನಿಂತುಕೊಂಡಿದ್ದು, ಸನ್ನಿಧಿಯ ದರ್ಶನದ ಹಾದಿಯನ್ನು ನೋಡುತ್ತಿರುವದು.

ಗಣೇಶ ಗೋಸಾವಿ—ಏನು? ನೀನು ನಿನ್ನ ತರುಣ ಪರಿವಾರವನ್ನು ಕರೆದುಕೊಂಡೇ ಇಲ್ಲಿಗೆ ಬಂದಿರುವೆಯಾ? ಕುದುರೆಗಳ ವ್ಯವಸ್ಥೆ ಏನು ಮಾಡಿದೆ? ಸುಲಿಗೆಯ ಧನವನ್ನೂ, ಶಸ್ತ್ರಗಳನ್ನೂ ಇಲ್ಲಿಗೆ ತಂದಿರುವೆಯೋ ಏನು?

ನೇತಾಜಿ—ಹೌದು ಗುರುದೇವಾ, ಕುದುರೆಗಳನ್ನು ರಾಜಿಮಾಚಿಯ ದುರ್ಗದ ಕೆಳಗಿನ ನಮ್ಮವರ ಗುಪ್ತಸ್ಥಳಕ್ಕೆ ಕಳಿಸಿ, ಉಳಿದ ಯಾವತ್ತು ಸುಲಿಗೆಯನ್ನೂ ಶಸ್ತ್ರಗಳನ್ನೂ ಸನ್ನಿಧಿಗೆ ತಂದಿದ್ದೇವೆ. ಸನ್ನಿಧಿಯ ಹೊರತು ಸುರಕ್ಷಿತವಾದ ಸ್ಥಳವು ಮತ್ತಾವದಿರುವದು? ಯಾವದೊಂದರ ವ್ಯವಸ್ಥೆ ಮಾಡಲಿಕ್ಕೆ ಸನ್ನಿಧಿಯ ಅಪ್ಪಣೆ ಬೇಕಷ್ಟೇ? ಕುದುರೆಗಳು ಈ ದುರ್ಗಮವಾದ ಪರ್ವತವೇರಿ ಬರುವದು ಅಶಕ್ಯವಾದದ್ದರಿಂದ ನಿರ್ವಾಹವಿಲ್ಲದೆ ಶ್ರೀ ಗುರುಪ್ರೇರಣೆಯಂತೆ ಅವುಗಳ ವ್ಯವಸ್ಥೆಯನ್ನು ಮಾತ್ರ ಮೇಲೆ ಹೇಳಿದಂತೆ ಮಾಡಿಬಂದಿರುವನು.

ಈ ಮೇರೆಗೆ ನೇತಾಜಿಯು ಆಡಿದ ಮಾತುಗಳನ್ನು ಕೇಳಿ, ಗಣೇಶ ಸಾಧುಗಳು ತಮ್ಮೊಳಗೆ—''ಪ್ರಭೋ, ವಕ್ರತುಂಡಾ!'' ಎಂದು ತಮ್ಮ ಇಷ್ಟದೇವತೆಯ ನಾಮೋಚ್ಚಾರ ಮಾಡುತ್ತ ನೇತಾಜಿಗೆ—''ನೇತಾಜೀ, ನೀನು ಈ ಪಿಲಾಲು ಹಚ್ಚಿಕೊಂಡು ನನ್ನ ಹಿಂದಿನಿಂದ ಬಾ,'' ಎಂದು ನುಡಿದು ತಾವು ಗುಹೆಯ ಉತ್ತರ ದಿಕ್ಕಿನ ಗೋಡೆಯ ಬಳಿಗೆ ಹೋಗಿ ಅಲ್ಲಿ ಏನೋ ಮಾಡಿದರು; ಕೂಡಲೆ ಒಂದು ಸಣ್ಣ ಬಾಗಿಲು ತೆರೆದು, ಗುಹೆಯೊಳಗೆ ಸುಳ್ಳನೆ ಗಾಳಿಯು ಸುಳಿದು ಬಂದಿತು. ಆಗ ಗಣೇಶ ಗೋಸಾವಿಗಳು ದಡದಡ ಪಾವಟಿಗೆ ಇಳಿಯುತ್ತ

ಸಾಗಿದರು. ಇತ್ತ ನೇತಾಜಿಯು ಅವಸರವಸರದಿಂದ ಹಿಲಾಲು ಹಚ್ಚಿಕೊಂಡು ಗೋಸಾವಿಗಳ ಬೆನ್ನುಹತ್ತಲು, ನೂರಾರು ಪಾವಟಿಗೆಗಳನ್ನು ಇಳಿದುಹೋದಬಳಿಕ ಒಂದು ವಿಶಾಲವಾದ ಗುಹಾಪ್ರದೇಶವು ಆತನ ಕಣ್ಣಿಗೆ ಬಿದ್ದಿತು. ಆತನು ಆ ಪ್ರದೇಶವನ್ನು ನೋಡಿದ್ದು ಇದೇ ಮೊದಲು. ಗೋಸಾವಿಗಳು ಅನುಷ್ಠಾನಕ್ಕೆ ಕುಳಿತುಕೊಳ್ಳುತ್ತಿದ್ದ ಗುಹೆಯ ಪ್ರದೇಶವನ್ನಷ್ಟು ಈ ಮೊದಲು ಆತನು ನೋಡಿದ್ದನು. ಅದು ನಾಲ್ಕು ಜನರು ಕುಳಿತುಕೊಳ್ಳುವಷ್ಟು ಮಾತ್ರ ವಿಸ್ತಾರವಾಗಿದ್ದಿತು. ನೇತಾಜಿಯು ಸುಲಿಗೆಯನ್ನು ತಂದದ್ದು ಇದೇ ಮೊದಲು ಆದ್ದರಿಂದ, ಕಾರಣವಿಲ್ಲದೆ ತನ್ನ ಗುರುವಿನ ವಿಸ್ತಾರವಾದ ಆ ಭಾಂಡಾರ ಗೃಹವನ್ನು ನೋಡುವ ಪ್ರಸಂಗವು ಆತನಿಗೆ ಈ ವರೆಗೆ ಬಂದಿದ್ದಿಲ್ಲವೆಂದು ಹೇಳಬಹುದು. ನೇತಾಜಿಯು ಆ ಭಾಂಡಾರ ಗೃಹದಲ್ಲಿಯ ವಸ್ತುಗಳನ್ನು ನೋಡಿ ಬೆರಗಾಗಿ ನಿಂತುಕೊಂಡನು. ತನ್ನ ಗುರುವು ಕೇವಲ ತಪೋಧನನೇ ಆಗಿರದೆ, ಶ್ರೀಮಂತನೂ, ಯುದ್ಧವಿಶಾರದನೂ ಇರುವನೆಂದು ಆತನು ತಿಳಿದನು. ಆಗ ಆತನಿಗೆ, ತಾನು ಮಹಾಭಾರತ ಪುರಾಣದಲ್ಲಿ ಕೇಳಿದ ದ್ರೋಣಕೃಪಾದಿ ಬ್ರಾಹ್ಮಣರ ಶಸ್ತ್ರಾಸ್ತ್ರ ಪಾಂಡಿತ್ಯದ, ಹಾಗೂ ರಾಜ ವೈಭವದ ನೆನಪಾಯಿತು. ತನ್ನ ಗುರುವಿನ ಯೋಗಾಸನದ ಬಳಿಯಲ್ಲಿ ಕತ್ತಿ-ಢಾಲು- ಭಾಲೆಗಳಿರುವದರ ಮರ್ಮವು ಆತನ ಮನಸ್ಸಿಗೆ ಈಗ ಹೊಳೆಯಿತು. ಆ ಗುಪ್ತ ಗುಹೆಯಲ್ಲಿ ವ್ಯವಸ್ಥೆಯಿಂದ ಇಟ್ಟಿದ್ದ ಶಸ್ತ್ರಾಸ್ತ್ರಗಳೂ, ಧನ ಸಂಗ್ರಹವನ್ನೂ ನೋಡಿ ಆತನು ಪರಮಾಶ್ಚರ್ಯ ಪಟ್ಟನು. ಇವುಗಳ ಸಂಗ್ರಹವು ಇಲ್ಲಿ ಹೇಗೆ ಆಗಿರಬಹುದೆಂಬದರ ಗೊತ್ತು ಆತನಿಗೆ ಹತ್ತದಾಯಿತು. ಆ ಭಾವಿಕನು ತನ್ನ ಗುರುವಿನ ಅಗಾಧವಾದ ಮಹಿಮೆಯನ್ನು ಕುರಿತು ಆಲೋಚಿಸುತ್ತ ಮೂಢನಾಗಿ ನಿಂತಿರುವಾಗ, ಗಣೇಶ ಗೋಸಾವಿಗಳು ಆತನನ್ನು ಕುರಿತು-

ಗಣೇಶ ಗೋಸಾವಿ— ''ನೇತಾಜಿ, ನಮ್ಮ ಗೋ-ಬ್ರಾಹ್ಮಣ ಪ್ರತಿಪಾಲಕನಾದ ಶಿವ ರಾಯನ ಒಂದು ಸಣ್ಣ ಭಾಂಡಾರಗೃಹವಿದು! ಆತನ ಪುಣ್ಯದಿಂದಲೇ ಇಲ್ಲಿ ಇವೆಲ್ಲವುಗಳ ಸಂಗ್ರಹವಾದದ್ದು, ನೇತಾಜಿ, ಈ ಭಾಂಡಾರವು ನಮ್ಮ ಶಿವರಾಯನ ಆಪದ್ಧನದ ಸಂಗ್ರಹಸ್ಥಾನ ವಾಗಿರುವದು. ಈಗ ಕೋಟೆಕೊತ್ತಲು ಕಟ್ಟಿಸುತ್ತಿದ್ದ ಶಿವರಾಯನಿಗೆ ಹಣದ ತೊಂದರೆಯು ವಿಶೇಷವಾಗಿದ್ದರೂ, ಈ ಆಪದ್ಧನವನ್ನು ಮುಟ್ಟಲಿಕ್ಕಿಲ್ಲವೆಂಬದು ಆತನ ನಿಶ್ಚಯವಿರುವದ ರಿಂದ, ಆತನೂ, ಆತನ ಸ್ವಾಮಿನಿಷ್ಠ ಶೂರ ಪರಿವಾರವೂ ಪರಾಕ್ರಮದಿಂದಲೇ ದ್ರವ್ಯ ಸಂಪಾದನ ಮಾಡಿ ಕಾರ್ಯ ಸಾಗಿಸಬೇಕಾಗಿರುವದು. ನೇತಾಜೀ, ಈಗ ನೀನು ತಂದಿರುವ ಸುಲಿಗೆಯನ್ನು ಅಪದ್ಧನವಾಗಿ ಈ ಭಾಂಡಾರದಲ್ಲಿ ಸೇರಿಸಿಬಿಡು; ಆದರೆ ಇಷ್ಟರಿಂದ ನಿನ್ನ ಕೆಲಸವಾಗಲಿಲ್ಲ. ಧರ್ಮಸ್ಥಾಪನೆಗಾಗಿ ಸ್ವರಾಜ್ಯ ಸ್ಥಾಪಿಸಲು ಪರಿಪರಿಯಾಗಿ ಕಷ್ಟಪಡುತ್ತಿರುವ ಶಿವ ರಾಯನಿಗೆ ನಿನ್ನ ಪರಾಕ್ರಮದಿಂದ ನೀನು ಧನವನ್ನು ಸಂಪಾದಿಸಿ, ಆತನಿಗೆ ಅದನ್ನು ಕಾಣಿಕೆ ಯಾಗಿ ಅರ್ಪಿಸಿ, ಆತನ ದರ್ಶನ ಮಾಡಿಕೊಳ್ಳದಿದ್ದರೆ, ನಿನ್ನ ಈ ಸಂಪಾದನವನ್ನು ನಾನು ಗೌರವಿಸಲಾರೆನು. ನಿನ್ನಂಥ ಸ್ವಾಮಿನಿಷ್ಠರಾದ ಶೂರರ, ಹಾಗೂ ನಿಮ್ಮಂಥವರ ಸಂಪಾದನದ ಅವಶ್ಯಕತೆಯು ಆ ಶಿವರಾಯನಿಗೆ ಈಗ ವಿಶೇಷವಾಗಿರುವದು; ಆದ್ದರಿಂದ ಈಗ ನೀನು ತಂದಿರುವ ಸುಲಿಗೆಯನ್ನು ನನ್ನ ಈ ಗುಹೆಯ ಕೆಳಗೆ ತಂದಿಡಿಸಿ, ನಿನ್ನ ಪರಿವಾರಕ್ಕೆ ಅಪ್ಪಣೆ

ಕೊಡು. ಈಗ ಅವರಿಗೆ ನಾನು ದರ್ಶನಕೊಡುವದು ಯೋಗ್ಯವಲ್ಲ. ನೀವು ಅಂತಹ ಪರಾಕ್ರಮದ ಕೆಲಸಕ್ಕೆ ಕೈಹಾಕಿದಾಗ ನಿಮಗೆ ನಾನು ಸಹಾಯ ಮಾಡುತ್ತಿರಲು, ಕಾರ್ಯತಃ ನನ್ನ ದರ್ಶನವು ನಿಮ್ಮೆಲ್ಲರಿಗೂ ಸಹಜವಾಗಿಯೇ ಆಗುವದು. ಈ ಗುಪ್ತಸ್ಥಳವು ಅನ್ಯರಿಗೆ ಗೊತ್ತಾಗದಂತೆ ನಿನ್ನ ಪರಿವಾರದ ಸಹಾಯದಿಂದ ನಿನ್ನ ಸುಲಿಗೆಯ ಧನವನ್ನು ಮಾತ್ರ ಈ ಭಾಂಡಾರದಲ್ಲಿ ಸೇರಿಸಿ, ಶಸ್ತ್ರಗಳನ್ನೆಲ್ಲ ತಕ್ಕೊಂಡು ಹೋಗು. ಇಲ್ಲಿಂದಲೇ ನೀನು ಆ ಪರಾಕ್ರಮದ ಕಾರ್ಯಕ್ಕಾಗಿ ಸಂಕಲ್ಪ ಮಾಡು. ಈ ಗುಪ್ತ ಭಾಂಡಾರವು ನಿನ್ನ ಹೊರತು ಮತ್ತೊಬ್ಬರ ಕಣ್ಣಿಗೆ ಸರ್ವಥಾ ಬೀಳಲಾಗದೆಂಬದನ್ನು ಇನ್ನೊಮ್ಮೆ ಹೇಳುವೆನು, ಚನ್ನಾಗಿ ಲಕ್ಷದಲ್ಲಿಡು! ನೇತಾಜೀ, ರಾಜಕಾರಣವು ಗೂಢತಂತ್ರಮಯ ವಾದದ್ದೆಂಬದನ್ನು ನೀನು ಸರ್ವಥಾ ಮರೆಯಬಾರದು ನೋಡು.

ನೇತಾಜಿ (ಕೈಜೋಡಿಸಿ)— ಆಗಲಿ ಮಹಾಸ್ವಾಮೀ, ಅಪ್ಪಣೆಯಂತೆ ನಡೆದುಕೊಳ್ಳುವೆನು; ಆದರೆ ನಾನು ಯಾವ ಪರಾಕ್ರಮದ ಕಾರ್ಯಕ್ಕೆ ಕೈ ಹಾಕಬೇಕೆಂಬ ಬಗ್ಗೆ ಅಪ್ಪಣೆ ಕೊಡಿಸುವ ಕೃಪೆ ಮಾಡಬೇಕು.

ಗಣೇಶ ಗೋಸಾವಿ—ನೇತಾಜೀ, ಚಿಂಚವಡವೆಂಬಲ್ಲಿ ಶ್ರೀ ಗಣಪತಿಯ ಪ್ರಸಿದ್ಧ ದೇವಸ್ಥಾನವಿರುವದು. ಅಲ್ಲಿ ಮೋರಯಾ ಗೋಸಾವಿಗಳೆಂಬ ಹೆಸರಿನ ಪ್ರಸಿದ್ಧ ಗಾಣಪತ್ಯರಿರುವರು; ಅವರು ನನಗೆ ಅಣ್ಣಂದಿರಾಗಬೇಕು. ಅವರ ಔಪಾಶ್ಯ ದೈವತದ ಬಾಹ್ಯ ಪ್ರತಿಮೆಯಾದ ಬಂಗಾರದ ಗಣಪತಿಯನ್ನು ವೆಂಕಾಜೀ ವಾಘ ಎಂಬ ದರವಡೆಖೋರನು, ಅಲ್ಲಿಯ ಸಂಪತ್ತಿನೊಡನೆ ಅಪಹರಿಸಿಕೊಂಡು ಹೋಗಿರುವನು. ನೀನು ಆ ಪ್ರಸಿದ್ಧ ತುಡುಗನ ಶಾಸ್ತ್ರ ಮಾಡಲು ಸಂಕಲ್ಪ ಮಾಡಿ ಶಸ್ತ್ರಗಳನ್ನು ತಕ್ಕೊಂಡು ಪರಿವಾರದೊಡನೆ ಈಗಲೇ ಹೊರಡು; ಶ್ರೀ ಗಣಪತಿಯೇ ನಿನಗೆ ತಕ್ಕ ಸಹಾಯವನ್ನು ಹಲವು ಮುಖಗಳಿಂದ ಒದಗಿಸಿಕೊಡುವನು. ಈಗ ಇಲ್ಲದ ಚಿಕಿತ್ಸೆ ಮಾಡುತ್ತ ಹೊತ್ತುಗಳೆಯಬೇಡ. ಇಂದು ಮುಹೂರ್ತವೂ ಚನ್ನಾಗಿರುವದರಿಂದ, ಆ ಕಾರ್ಯದ ಸಂಕಲ್ಪವನ್ನು ಈಗೇ ಮಾಡಿಬಿಡು. ಶ್ರೀ ಮಂಗಲ ಮೂರ್ತಿಯೇ ನಿನ್ನ ಆ ಸಂಕಲ್ಪವನ್ನು ಪೂರ್ಣ ಮಾಡುವನು. ಆ ಕಾಲಕ್ಕೆ ತಕ್ಕ ಸಮಯದಲ್ಲಿ ನಿಮ್ಮೆಲ್ಲರಿಗೆ ನನ್ನ ದರ್ಶನವಾದೀತು.

## ವೆಂಕಾಜಿ ವಾಘನು

ಶಿವಾಜಿಯ ರಾಜ್ಯಸ್ಥಾಪನದ ಕಾಲವೆಂದರೆ, ಕ್ರಾಂತಿಕಾಲವು. ಅದು ಹಿಂದೂ ಜನರಿಗೆ, ವಿಶೇಷವಾಗಿ ಮರಾಟರಿಗೆ ಅತಿ ತಾಪದಾಯಕವಾಗಿತ್ತೆಂದು ಈ ಮೊದಲೆ ಹೇಳಿದೆ. ಶಿವಾಜಿಯ ರಾಜ್ಯಸ್ಥಾಪನದ ಯತ್ನದಲ್ಲಿ ಮರಾಟರು, ಪ್ರಬಲರಾದ ಮುಸಲ್ಮಾನರನ್ನು ಹೊತ್ತು ಸಾಧಿಸಿ

ಹಣಿಯುತ್ತಿದ್ದರು; ಅದರ ಸೇಡು ತೀರಿಸಿಕೊಳ್ಳುವದಕ್ಕಾಗಿ ಮುಸಲ್ಮಾನರು ಮರಾಟರನ್ನು ಪರಿಪರಿಯಾಗಿ ಕಾಡುತ್ತಿದ್ದರು. ಈ ಕ್ರಮವು ಮಹಾರಾಷ್ಟ್ರದ ಎಲ್ಲ ಭಾಗಗಳಲ್ಲಿ ನಡೆದದ್ದರಿಂದ, ಪ್ರಜೆಗಳು ಸಂಕಟಪರಂಪರೆಯಿಂದ ಕಂಗಾಲಾಗಿ ಹೋಗಿದ್ದರು. ಮುಸಲ್ಮಾನರ ಉಪದ್ರವದಿಂದ ಯಾರು ಗುಳೇಕಟ್ಟಿ ಆಶ್ರಯ ಹುಡುಕುತ್ತ ಗ್ರಾಮಗ್ರಾಮಗಳನ್ನು ತಿರುಗುವರು; ಯಾರು ಅಡವಿಯ ಸೇರುವರು; ಯಾರು ಮರ್ಯಾದೆ ಉಳಿಸಿಕೊಳ್ಳುವದಕ್ಕಾಗಿ ಪ್ರಾಣ ಕೊಡುವರು! ಚೌಕ ಗ್ರಾಮದ ನಿಬ್ಬಣದವರು ಮುಸಲ್ಮಾನರ ಮೈ ಮೆತ್ತಗೆ ಮಾಡಿ ಅವರನ್ನು ಸುಲಿದದ್ದರಿಂದ, ಮುಸಲ್ಮಾನ ದಂಡಾಳುಗಳಿಗೆ ಚೌಕ ಗ್ರಾಮದ ಜನರನ್ನು ಪೀಡಿಸಲಿಕ್ಕೆ ಒಂದು ನೆವ ಸಿಕ್ಕಂತಾಯಿತು. ''ರಾಜಮಾಚಿ'' ದುರ್ಗವನ್ನು ತಕ್ಕೊಳ್ಳುವದಕ್ಕಾಗಿ ಬಂದಿದ್ದ ಮುಸಲ್ಮಾನರ ದೊಡ್ಡ ಸೈನ್ಯವು ಚೌಕಗ್ರಾಮದಬಳಿಗೆ ಬರುತ್ತಿರಲು, ಅಲ್ಲಿಯ ದತ್ತಾಜಿ ಪಾಟೀಲರೇ ಮೊದಲಾದ ಧನಿಕ ಸಂಭಾವಿತ ಗೃಹಸ್ಥರು, ಶಿವಾಜಿಯ ವಶದಲ್ಲಿರುವ ಯಾವದೊಂದು ಭದ್ರವಾದ ದುರ್ಗದ ಆಶ್ರಯ ಪಡೆಯುವದಕ್ಕಾಗಿ ದುರ್ಗದುರ್ಗಗಳಿಗೆ ಹೆಂಡಿರು ಮಕ್ಕಳನ್ನು ಕಟ್ಟಿಕೊಂಡು ಅಲೆದಾಡಹತ್ತಿದರು. ಒಟ್ಟಿಗೆ, ಇತ್ತ ಶಿವಾಜಿಯು ಹಂಚಿಕೆಯಿಂದ ಮಾಡುವ ಯಶಸ್ವಿಯಾದ ನೀತಿಸಮ್ಮತ ಒಗರಿನ ನಿಃಸ್ವಾರ್ಥಬುದ್ಧಿಯ ರಾಜ್ಯಸ್ಥಾಪನದ ಪ್ರಯತ್ನ. ಅತ್ತ ವಿಜಾಪುರದ ಬಾದಶಹನು ಹೆಮ್ಮೆಯಿಂದ ಮಾಡುವ ಅನೀತಿಯ ಅತಿಕ್ರಮಣದ ಡಾಂಭಿಕತನದ ಸ್ವಾರ್ಥಬುದ್ಧಿಯ ರಾಜ್ಯಾಭಿವೃದ್ಧಿಕಾರಕ ಪ್ರಯತ್ನ, ಇವೆರಡರ ವಿರಾಟಗಳ ಅವಸರದಲ್ಲಿ ದೇಶದೊಳಗೆ ಹೇಳಕೇಳುವವರೇ ಇಲ್ಲದಂತಾಗಿ, ಕಳ್ಳರು–ಕಾಕರ ಕಿರುಕುಳ ಉಪದ್ರವಗಳು ವಿಷದ ಮುಳ್ಳುಗಳಂತೆ ಪ್ರಜೆಗಳನ್ನು ಬಾಧಿಸ ತೊಡಗಿದವು. ಆದ್ದರಿಂದ ದೇಶದಲ್ಲಿ ಎಲ್ಲ ಕಡೆಗೂ ಅಶಾಂತಿಯ ಸಾಮ್ರಾಜ್ಯದ ಸ್ಥಾಪನೆ ಯಾದಂತಾಯಿತು.

ಕಳ್ಳರು–ಕಾಕರ ಹಲವು ತಂಡಗಳಲ್ಲಿ ವೆಂಕಾಜಿ ವಾಘನ ತಂಡವು ಅತ್ಯಂತ ಪ್ರಸಿದ್ಧವಾಗಿತ್ತು. ಗುಡ್ಡಗಾಡುಗಳಲ್ಲಿ ವಾಸಮಾಡುವ ಭಿಲ್ಲರು, ಕೋಳೀ ಜಾತಿಯ ಜನರು ವಾಘನ ಅನುಯಾಯಿಗಳಾಗಿದ್ದರು. ಇವರೊಳಗೆ ಕೆಲವು ನೀಚ ವೃತ್ತಿಯ ಮರಾಟರೂ ಕೂಡಿಕೊಂಡಿದ್ದರು; ಆದರೆ ಅವರ ಸಂಖ್ಯೆಯು ಮೊದಮೊದಲು ಕಡಿಮೆಯಾಗಿದ್ದರೂ, ಬರಬರುತ್ತ ಲಾಭದ ಆಶೆಯಿಂದ ಅವರ ಸಂಖ್ಯೆಯು ಹೆಚ್ಚಾಗತೊಡಗಿತು. ವೆಂಕಾಜಿಯು ಅಚ್ಚ ಹಿಂದುವಿದ್ದರೂ, ಮದ್ಯ–ಮಾಂಸ–ಸ್ತ್ರೀ ಮೊದಲಾದ ನೀಚ ವಿಷಯಗಳ ವ್ಯಸನದಿಂದ ಪಾಪ–ಪುಣ್ಯಗಳ ಭಯವಿಲ್ಲದೆ ಆತನು ಅತ್ಯಂತ ಕ್ರೂರನಾಗಿ ನಡೆಯುತ್ತಿದ್ದನು. ಇವನ ಮೋರೆಯಮೋಲೆ ಹುಲಿಯಂತೆ ಉಗ್ರ ಕಳೆಯು ಸುರಿಯುತ್ತಿದ್ದದ್ದರಿಂದ, ಈತನನ್ನು ಜನರು ವಾಘ (ಹುಲಿ) ಎಂದು ಕರೆಯುತ್ತಿದ್ದರು. ಕ್ರೂರ ಕರ್ಮ ಮಾಡುವವರಲ್ಲಿ ವಾಘನು ಅಗ್ರೇಸರನಾಗಿದ್ದನು. ತಾನು ಸ್ವತಃ ಹಿಂದೂ ಧರ್ಮದವನಾಗಿದ್ದರೂ, ಒಮ್ಮೊಮ್ಮೆ ಸಂಪತ್ತುಳ್ಳ ಹಿಂದುಗಳ ದೇವಾಲಯಗಳನ್ನು ಸುಲಿಯಲಿಕ್ಕೂ ಆತನು ಹಿಂದೆ ಮುಂದೆ ನೋಡುತ್ತಿದ್ದಿಲ್ಲ. ಶಿವಾಜಿಯ ಸಮಕಾಲಿನರಾದ ಚಿಂಚವಡದ ಮೋರಯಾ ಗೋಸಾವಿಗಳು ಸ್ಥಾಪನ ಮಾಡಿರುವ ಗಣಪತಿಯ ಸಂಸ್ಥೆಯನ್ನು ಸುಲಿದು, ಅಲ್ಲಿಯ ಬಂಗಾರದ ಗಣಪತಿಯ ಮೂರ್ತಿಯನ್ನು

ತಕ್ಕೊಂಡು ಹೋದದ್ದು ಈ ಮೊದಲೆ ಹೇಳಿದೆ. ಆ ಕಾಲದಲ್ಲಿ ಈ ವಾಘನ ಕೈ ಹಿಡಿಯುವವರೇ ಇಲ್ಲದಾಗಿತ್ತು, ವಿಜಾಪುರದ ಬಾದಶಹನೂ, ಶಿವಾಜಿಯೂ ಪರಸ್ಪರ ಕಾದಾಡುವಾಗ, ದೇಶ ದಲ್ಲಿ ಹೇಳಕೇಳುವವರೇ ಇಲ್ಲದಾಗಿ, ವಿಷಯಸುಖದ ನಂಜು ತಲೆಗೇರಿದ ವಾಘನು ಎಲ್ಲರ ಮೇಲೆ ಗುರುಗುಟ್ಟತೊಡಗಿದ್ದನು! ಯಾರೊಬ್ಬರು ವಿನೋದಕ್ಕಾಗಿ ''ವಾಘನು ಬಂದನೆಂ''ದು ನುಡಿದರೆ ಸಾಕು, ಒಳ್ಳೊಳ್ಳೆಯ ಜನರು ಹೌಹಾರಿ ಕುಳಿತುಕೊಳ್ಳುತ್ತಿದ್ದರು.

ಖಂಡಾಳೆಯ ಹತ್ತರ ದೊಡ್ಡ ದೊಡ್ಡ ಪರ್ವತಶ್ರೇಣಿಗಳು ಹಬ್ಬಿರುವವು. ಅವುಗಳ ಮಧ್ಯದಲ್ಲಿದ್ದ 'ಭಾಜೆ' ಎಂಬ ಗ್ರಾಮದೊಳಗೆ ಬುದ್ಧರ ಕಾಲದ ಒಂದು ವಿಸ್ತಾರವಾದ ವಿಹಾರ ವಿರುವದು, ಅದೇ ವಾಘನ ವಾಸಸ್ಥಾನ. ಅದನ್ನು ಆಗ ವಾಘನ ಗವಿಯೆಂದು ಜನರು ಕರೆಯುತ್ತಿದ್ದರು. ಆ ಬುದ್ಧ ವಿಹಾರವು ಒಂದುವರೆ ಆಳು ಎತ್ತರವಾಗಿಯೂ, ಐದಾರು ನೂರು ಮೊಳೆ ಉದ್ದವಾಗಿಯೂ, ಎಪ್ಪತ್ತೈದು ಮೊಳೆ ಅಗಲವಾಗಿಯೂ ಇತ್ತು ಶ್ರೇಷ್ಠರಾದ ಶಿಲ್ಪಿಗಳು ಗುಡ್ಡವನ್ನು ಕೊರೆದು ಆ ವಿಹಾರವನ್ನು ಮಾಡಿದ್ದರು. ಅದರ ಒಳಭಾಗದಲ್ಲಿ ಅನೇಕ ಸಣ್ಣ ಸಣ್ಣ ಕೋಣೆಗಳೂ, ದಿವಾನಖಾನೆಗಳೂ ಇರುವದನ್ನು ಈಗಲೂ ನೋಡಬಹುದು. ಈ ವಿಹಾರ ದೊಳಗಿನ ಪ್ರತಿ ಒಂದು ಕೋಣೆಯಲ್ಲಿ ನೀರು ದೊರೆಯುವಂತೆ ವ್ಯವಸ್ಥೆ ಮಾಡಿರುವದನ್ನು ನೋಡಿದರೆ, ಯಾರಾದರೂ ಆಶ್ಚರ್ಯಪಡದೆ ಇರಲಾರರು. ನೀರು ಬರುವ ಸ್ಥಳದಲ್ಲಿ ಒಂದು ಕುಂಡವಿದ್ದು, ಆ ಕುಂಡದಲ್ಲಿ ಒಂದು ಬೊಗಸೆಗಿಂತ ಹೆಚ್ಚು ನೀರು ಬರದಂತೆ ಮಾಡಿರುವರು. ಬೇಕಾದಷ್ಟು ಬಳಿಸಿದರೂ ನೀರು ಕಡಿಮೆ ಯಾದಾವೆಂಬ ಮಾತಿಲ್ಲ, ಈ ಚಮತ್ಕಾರವನ್ನು ಅಲ್ಲಿ ಈಗಲೂ ನೋಡಬಹುದು! ಆ ವಿಹಾರವು ಈಗೇ ಹಾಳು ಬಿದ್ದಿರುವದೆಂತಲ್ಲ, ವಾಘನ ಕಾಲ ದಲ್ಲಿಯೇ ಅದು ಶಿಥಿಲವಾಗಿತ್ತು. ಯಾವಾಗಾದರೂ ನೋಡಲಿಕ್ಕೆ ಅದು ಬಹು ಭಯಪ್ರದ. ಒಳಗೆ ನುಗ್ಗಿ ಎಲ್ಲವನ್ನು ನೋಡುವ ಎದೆಯು ಎಂಥ ಎದೆಗಾರನಿಗೂ ಅಗಲಾರದು. ಇಂಥಹ ವಿಹಾರವು ಭಯಂಕರವಾದ ಅರಣ್ಯದಲ್ಲಿ ಅಸಾಧ್ಯವಾದ ಗುಡ್ಡದ ಮೇಲೆ ಇದ್ದವದ್ದರಿಂದ, ವಾಘನ ಕಳ್ಳತನದ ವ್ಯವಹಾರಕ್ಕೆ ಅದು ಬಹಳ ಅನುಕೂಲವಾಗಿತ್ತು, ಅವನ ಎಲ್ಲ ವ್ಯವಹಾರ ಗಳೂ ಈ ಗವಿಯಲ್ಲಿಯೇ ನಡೆಯುತ್ತಿದ್ದವು.

ಸೂರ್ಯೋದಯವಾಗಿ ಎರಡು ತಾಸು ಹೊತ್ತು ಏರಿದೆ. ಖಂಡಾಳೆಯ ಘಟ್ಟದ ಅರಣ್ಯ ಪ್ರದೇಶದಲ್ಲಿ ಆರುಜನ ಪ್ರವಾಸಿಗಳು ದೊಡ್ಡ ಹಾದಿಯಿಂದ ಸಾಗಿದ್ದಾರೆ. ಹೋಗಹೋಗುತ್ತ ಅವರು ದೊಡ್ಡದೊಂದು ಹಳ್ಳವನ್ನು ಸುಗ್ಗಿದರು. ಆಗಿನ ದುರ್ಘಟವಾದ ಕಾಲದಲ್ಲಿ ಹಾದಿ ಕಾರರು ದೊಡ್ಡಹಾದಿಯ ಹಿಡಿದು ಹೋಗುವದು ಭಯಪ್ರದವಾಗಿತ್ತು, ಆ ಆರು ಜನರಲ್ಲಿ ಅತ್ಯಂತ ತರುಣಿಯಾದ ಸುಂದರ ಸ್ತ್ರೀಯೊಬ್ಬಳು ಇದ್ದಳು. ಕೆಲ ಕಾರಣಗಳಿಂದ ಇನ್ನೂ ಆಕೆಯ ವಿವಾಹವಾಗಿದ್ದಿಲ್ಲ, ಅವರೆಲ್ಲರು ಮರಾಠಾ ಜಾತಿಯವರು. ನಾವು ಸುರಕ್ಷಿತವಾಗಿ ಲೋಹಗಡಕ್ಕೆ ಮುಟ್ಟಿ, ಹೇಗೆ ಪಾರಾದೇವೆಂಬ ಚಿಂತೆಯಲ್ಲಿ ಅವರು ಮಗ್ನರಾಗಿದ್ದರು; ಆದ್ದ ರಿಂದ ಅವರು ಹೋಗಹೋಗುತ್ತ ದೊಡ್ಡ ದಾರಿಯನ್ನು ಬಿಟ್ಟು, ಅಡ್ಡದಾರಿಯಿಂದ ಸಾಗ ಬೇಕೆಂದು ಹವಣಿಸಹತ್ತಿದರು. ಅವರು ಮಾರ್ಗವನ್ನು ಕ್ರಮಿಸುತ್ತ ಖಂಡಾಳೆಯ ಘಟ್ಟಕ್ಕೆ

ಬಂದರು. ಅಲ್ಲಿ ಎರಡು ದಾರಿಗಳು ಒಡೆದಿದ್ದವು. ಒಂದು ಪ್ರಶಸ್ತವಾದ ರಾಜಮಾರ್ಗ, ಮತ್ತೊಂದು ಗುಡ್ಡದೊಳಗೆ ಹಾದುಹೋಗುವ ಅಂಕುಡೊಂಕಾದ ಸಣ್ಣ ಕಾಲದಾರಿ. ಆ ಪ್ರವಾಸಿಕರು ಕಾಲದಾರಿಯೇ ಸಮೀಪವೆಂದು ತಿಳಿದು, ಅದರಿಂದಲೇ ಘಟ್ಟವನ್ನು ಇಳಿದರು. ಮುಂದೆ ಹೋಗಹೋಗುತ್ತ ಬಲಗಡೆಯ ಭಾಗದಲ್ಲಿ ಸಣ್ಣ ಸಣ್ಣ ಹೊಲಗಳೂ, ಅವುಗಳಾಚೆಗೆ ಒಂದು ಜಲಾಶಯದ ದಂಡೆಯಲ್ಲಿ ನಾಲ್ಕಾರು ಗುಡಿಸಲುಗಳೂ ಕಾಣಹತ್ತಿದವು. ಅಷ್ಟರಲ್ಲಿ ಐದು ತಾಸು ಹೊತ್ತಾಗಿ ಹೋಗಿತ್ತು, ಆ ಜಲಾಶಯದ ದಂಡೆಯಲ್ಲಿ ವಿಶ್ರಮಿಸಿ ದಣಿವಾರಿಸಿಕೊಂಡು ಹೋಗಬೇಕೆಂದು ಆ ಪ್ರವಾಸಿಗಳು ಯೋಚಿಸಿ ಜಲಾಶಯದ ಕಡೆಗೆ ತಮ್ಮ ಕುದುರೆಗಳನ್ನು ತಿರುಗಿಸಿದರು. ಪಾಪ! ಈ ವಿಶ್ರಾಂತಿಯೇ ತಮ್ಮ ಸಂಕಟಕ್ಕೆ ಕಾರಣವಾದೀತೆಂಬದೇನು ಅವರಿಗೆ ಗೊತ್ತು?

ಪ್ರವಾಸಿಗಳು ಕುದುರೆಗಳಿಂದ ಇಳಿದು ಅವನ್ನು ಮೇಯಲಿಕ್ಕೆ ಬಿಟ್ಟು, ತಾವು ಜಲಾಶಯದ ದಂಡೆಯಮೇಲಿನ ಗಿಡಗಳ ನೆರಳಿನಲ್ಲಿ ಉಶ್ಶೆಂದು ಕುಳಿತುಕೊಂಡರು. ಅವರು ಮಾರ್ಗಾಯಾಸಕ್ಕಿಂತ ಕಳ್ಳರು–ಕಾಕರ ಚಿಂತೆಯಿಂದ ಹಣ್ಣಾಗಿದ್ದರು. ಬಿಸಿಲೆಂದು ಕುಳಿತು ಕೊಂಡರೆ ಹೊತ್ತಾಗುತ್ತಿತ್ತು, ಬಿಸಿಲಿನಲ್ಲಿ ಹೋಗಲಿಕ್ಕೆ ಮನಸ್ಸು ಜರಿಯುತ್ತಿತ್ತು, ಈ ಸ್ಥಿತಿಯಲ್ಲಿ ಅವರು ಆ ಜಲಾಶಯದ ದಂಡೆಯಲ್ಲಿ ಊಟ–ಉಡಿಗೆಯೊಳಗೆ ಎರಡು ತಾಸುಗಳನ್ನು ಕಳೆದರು. ಕುದುರೆಗಳು ನೀರು ಕುಡಿದು ಎಳೆ ಹುಲ್ಲು ಮೇಯುತ್ತಿದ್ದವು. ಒಂಬತ್ತು ತಾಸು ಹೊತ್ತಾಗಿರಲು, ಪುನಃ ಅವರು ತಮ್ಮ ತಮ್ಮ ಕುದುರೆಗಳನ್ನು ಹತ್ತಿಕೊಂಡು ಹಾದಿಯ ಹಿಡಿದರು. ಆ ಪ್ರವಾಸಿಕರ ಬಳಿಯಲ್ಲಿ ತಕ್ಕಮಟ್ಟಿಗೆ ದ್ರವ್ಯ ಸಂಚಯವಿದ್ದದ್ದಲ್ಲದೆ, ಹಿಂದೆ ಹೇಳಿದಂತೆ ಒಂದು ಕನ್ಯಾರತ್ನವು ಅವರ ಬಳಿಯಲ್ಲಿ ಇದ್ದದ್ದರಿಂದ, ಅವರು ವೆಂಕಾಜಿ ವಾಘನ ಈ ಉಪ ದ್ರವದ ಸ್ಥಳದಿಂದ ಬೇಗನೆ ಪಾರಾಗಿ ಹೋಗಬೇಕೆಂದು ಕುದುರೆಗಳನ್ನು ದಡದಡ ನಡಿಸ ಹತ್ತಿದರು; ಆದರೆ ದೈವಸಂಕಲ್ಪವನ್ನು ತಪ್ಪಿಸುವ ವರಾರು? ಅವರು ಜಲಾಶಯದ ದಂಡೆಯ ಮೇಲೆ ವಿಶ್ರಾಂತಿಯನ್ನು ಹೊಂದುತ್ತಿರುವಾಗ, ವಾಘನ ಗುಪ್ತಚಾರರು ಇವರ ಸ್ಥಿತಿಗತಿಗಳನ್ನು ಸೂಕ್ಷ್ಮವಾಗಿ ತಿಳಕೊಂಡು ಯಾವತ್ತೂ ಸಂಗತಿಯನ್ನು ವಾಘನಿಗೆ ತಿಳಿಸಿದರು. ಇತ್ತ ಪ್ರವಾಸಿ ಕರು ಸೂರ್ಯ ಕಡೆಗೆ ನೋಡುತ್ತ 'ಹೊತ್ತಾಯಿತಲ್ಲ' ಎಂದು ಚಡಪಡಿಸುತ್ತ ಬಾಯಿಯಲ್ಲಿ ಅಕ್ಕಿಯಕಾಳು ಹಾಕಿಕೊಂಡು ಹಾದಿಯನ್ನು ವೇಗದಿಂದ ನಡೆದು ಹೋಗುತ್ತಿದ್ದರು. ಹೀಗೆ ಅವರು ಮೂರು ತಾಸು ಹಾದಿಯ ನಡೆದು ಹೋದರು. ಅವರ ವಸತಿಯ ಸ್ಥಳವು ಇನ್ನು ಒಂದು ಕೂಗಳತೆ ಉಳಿದಿರಬಹುದು. ಆಗ ಸೂರ್ಯನು ತನ್ನ ಪರಿಭ್ರಮಣವನ್ನು ಮುಗಿಸಿ, ವಿಶ್ರಾಂತಿಗಾಗಿ ತಾಯಿಯ ಒಡಲು ಸೇರುವವನಂತೆ ಕ್ಷಿತಿಜದ ಕಡೆಗೆ ವೇಗದಿಂದ ಸಾಗಿದ್ದರು. ಆಗ ಪ್ರವಾಸಿಕರು ತಮ್ಮೊಳಗೆ —''ಮೂರೂಸಂಜೆಯಾಗುತ್ತ ಬಂದಿತು ಇಷ್ಟು ಹೊತ್ತಿ ನೊಳಗೆ ನಾವು ಊರ ಸೇರಬೇಕಾಗಿತ್ತು, ಕೆರೆಯ ದಂಡೆಯಮೇಲೆ ಹೊತ್ತುಗಳೆದದ್ದು ತಪ್ಪಾ ಯಿತು'' ಎಂದು ಚಡಪಡಿಸುತ್ತಿರಲು, ಒಂದು ಭಯಂಕರವಾದ ಸಿಳ್ಳಿನ ಸಪ್ಪಳವು ಅವರ ಕಿವಿಗೆ ಬಿದ್ದಿತು. ಆಗ ಆ ಪ್ರವಾಸಿಕರ ಕೈಕಾಲು ತಣ್ಣಗಾದವು. ಅವರ ಅಂಜಿಕೆಯಿಂದ ಕಕ್ಕಾಬಿಕ್ಕಿ

ಯಾಗಿ ಸುತ್ತುಮುತ್ತು ನೋಡಹತ್ತಿದರು. ಆ ಚಲುವೆಯಾದ ಹೆಣ್ಣುಮಗಳಂತು ಗಾಬರಿಯಾಗಿ ಒಮ್ಮೆ ತನ್ನ ಪರಿವಾರದ ಕಡೆಗೆ, ಒಮ್ಮೆ ನಾಲ್ಕೂ ದಿಕ್ಕುಗಳ ಕಡೆಗೆ ನೋಡತೊಡಗಿದಳು; ಆದರೆ ಮುಂದೆ ಯಾರ ಸುಳವೂ ಇಲ್ಲ. ಯಾವ ಸಪ್ಪಳವೂ ಇಲ್ಲ. ಆಗ ಅವರು ಸ್ವಲ್ಪ ಧೈರ್ಯಮಾಡಿ ತಮ್ಮ ಕುದುರೆಗಳನ್ನು ಓಡಿಸಬೇಕೆನ್ನುತ್ತಿರಲು, ಐವತ್ತು-ಅರವತ್ತು ಜನ ಬಿಚ್ಚುಗತ್ತಿಯವರು ಆ ಪ್ರವಾಸಿಕರನ್ನು ಸತ್ತುಗಟ್ಟಿ ನಿಂತುಕೊಂಡು—''ಹಾ! ನಿಲ್ಲಿರಿ, ಕುದುರೆ ಗಳಿಂದ ಇಳಿಯಿರಿ'' ಎಂದು ಗದ್ದರಿಸಿದರು!

ಎಲ್ಲಿ ಬರುವದೋ ಎಂದು ಸಂಕಟಕ್ಕೆ ಹೆದರಿ ಹುದುಗಿಕೊಂಡು ಹೋಗುತ್ತಿದ್ದ ಆ ಪ್ರವಾಸಿಕರ ಎದುರಿಗೆ, ಸಂಕಟವು ಪ್ರತ್ಯಕ್ಷ ಬಂದು ನಿಂತುಕೊಂಡು ಬಿಟ್ಟಿದ್ದರಿಂದ, ಅವರ ಭಯವು ಬಹುಮಟ್ಟಿಗೆ ದೂರವಾಗಿ, ಅವರ ಸಂಕಟಕ್ಕೆ ಎದೆಗೊಟ್ಟು ನಿಲ್ಲಲು ಸಿದ್ಧರಾದರು; ಯಾಕಂದರೆ ಆ ಪ್ರವಾಸಿಕರಾದರೂ ರಣಹೇಡಿಗಳಾಗಿರದೆ, ರಣಶೂರರಾಗಿದ್ದರು. ಆ ತರುಣ ಸುಂದರಿಯು ಕೂಡ ಇಂತಹ ಕಷ್ಟಗಳಿಗೆ ಸೊಪ್ಪು ಹಾಕುವವಳಿದ್ದಿಲ್ಲ. ಸತ್ಸಂಗವಿಲ್ಲದವರಿಗೆ ಲಿಂಗದ ಹಂಗೇನೆಂಬುವಂತೆ, ಜೀವದಹಂಗು ತೊರೆದವರಿಗೆ ಸಂಕಟದ ಪರಿವೆಯೇನು? ವಿವೇಕಿ ಯಾದ ಆ ಪ್ರವಾಸಿಕರ ಮುಖ್ಯನು, ಮುಖಲಕ್ಷಣ ಮೊದಲಾದ ಕೇಳಿಕೆಯ ಮಾತಿನಿಂದ ಈ ಹುಡುಗರ ಗುಂಪಿನಲ್ಲಿ ಇವನೇ ವೆಂಕೋಜಿ ವಾಘನು ಇರುವನೆಂದು ಕಂಡುಹಿಡಿದು, ಆತನ ಕಡೆಗೆ ನೋಡಿ ಸೌಮ್ಯಸ್ವರದಿಂದ—''ವೆಂಕೋಜಿರಾವ, ನಿಮ್ಮ ಶೌರ್ಯದ ಕೀರ್ತಿಯನ್ನು ನಾನು ಬಹಳವಾಗಿ ಕೇಳಿದ್ದೇನೆ. ನಿಮ್ಮಂತ ಶೂರರು, ಬಿಚ್ಚುಗತ್ತಿಯ ಐವತ್ತು-ಅರವತ್ತು ಜನರೊಡನೆ ಬಂದು ಮುತ್ತಿದಾಗ, ನಾವು ಆರು ಜನರು ಮಾಡುವದೇನು? ನಾವು ನಿಮಗೆ ಶರಣು ಬಂದಿದ್ದೇವೆ, ನಮ್ಮಲ್ಲಿರುವ ಧನವನ್ನೆಲ್ಲ ತಕ್ಕೊಂಡು ನಮ್ಮನ್ನು ಬಿಟ್ಟುಬಿಡಿರಿ.

ಪ್ರವಾಸಿಗರ ಮುಖ್ಯನು ಹೀಗೆ ನುಡಿಯುತ್ತಿರಲು, ನೀಚ ಹೃದಯದ ಆ ವೆಂಕೋಜಿ ವಾಘನು ಆ ಸುಂದರ ತರುಣಿಯನ್ನು ನೋಡಿ ಮರುಳಾಗಿ ಹೋಗಿದ್ದನು. ಆದ್ದರಿಂದ ಆತನು ಮುಗುಳುನಗೆ ನಗುತ್ತ ಆ ಮುಖ್ಯನನ್ನು ಕುರಿತು, ಕೇವಲ ಗುರುತು ಇದ್ದವನಂತೆ—''ದತ್ತಾಜಿ ಪಾಟೀಲ, ನೀವು ಒಳ್ಳೆ ವಿವೇಕಿಗಳಿರುವಿರಿ. ನೀವು ಚೌಕ ಗ್ರಾಮದಲ್ಲಿಯ ಶ್ರೀಮಂತರಿರು ವಿರೆಂಬದನ್ನೂ ನಮ್ಮ ಜನರ ಬಾಯಿಂದೆ ಕೇಳಿದ್ದೇನೆ; ಆದ್ದರಿಂದ ನಿಮಗೆ ಒಂದು ಪೆಟ್ಟೂ ಹಾಕುವದಿಲ್ಲ, ನಿಮ್ಮ ಧನವನ್ನೂ ನಾನು ಮುಟ್ಟುವದಿಲ್ಲ; ಆದರೆ ನಿಮ್ಮ ಚೆಲುವೆಯಾದ ಮಗಳು ಕಾಶಿಬಾಯಿಯನ್ನು ಮಾತ್ರ ನನಗೆ ಒಪ್ಪಿಸಿ ಬಿಡಿರಿ; ಹೇಗೂ ಆಕೆಯ ಲಗ್ನವಾಗಿರು ವದಿಲ್ಲ. ನಾನು ಆಕೆಯ ಲಗ್ನ ಮಾಡಿಕೊಳ್ಳಬೇಕೆಂದು ಇಚ್ಛಿಸುತ್ತೇನೆ.''

ವೆಂಕೋಜಿ ವಾಘನ ಈ ಮಾತುಗಳನ್ನು ಕೇಳಿ ದತ್ತಾಜಿ ಪಾಟೀಲನು ಬೆರಗಾದನು. ತನ್ನ ಮನೆತನದ ಆದ್ಯಂತ ಸಂಗತಿಯನ್ನು ಅರಿತಿರುವ ವಾಘನ ಕಾರ್ಯಕೌಶಲ್ಯಕ್ಕಾಗಿ ಆತನು ಮನಸ್ಸಿನಲ್ಲಿ ಮೆಚ್ಚಿದನು; ಆದರೆ ಒಬ್ಬ ರಾಜಗಳ್ಳನು ಕುಲೀನನಾದ ತನ್ನ ಮಗಳ ಲಗ್ನವಾಗುವೆ ನೆಂದು ಬಾಯಿಬಿಟ್ಟು ಹೇಳುವದನ್ನು ಕೇಳಿ, ಆತನಿಗೆ ಬಹಳ ಸಿಟ್ಟು ಬಂದಿತು; ಆದರೂ ಆ ವಿವೇಕಿಯು ತನ್ನ ಸಿಟ್ಟು ಹೊರಗೆ ತೋರಗೊಡದೆ ಪುನಃ ಸೌಮ್ಯ ಸ್ವರದಿಂದಲೇ ವೆಂಕೋಜಿ ಯನ್ನು ಕುರಿತು—

ದತ್ತಾಜಿ–ವೆಂಕೋಜಿ, ನಮ್ಮ ಕಾಶಿಬಾಯಿಯು ನೇತಾಜಿ ಪಾಲಕರನೆಂಬ ಶೂರನನ್ನೇ ಮದುವೆಯಾಗಬೇಕೆಂದು ನಿಶ್ಚಯಿಸಿರುವಳು. ಆ ನೇತಾಜಿಯು ನನ್ನ ಸೋದರಳಿಯನಾದದ್ದ ರಿಂದ, ಆಕೆಯ ಹುಟ್ಟಿದಕೂಡಲೆ ಆಕೆಯನ್ನು ನೇತಾಜಿಗೇ ಕೊಡಬೇಕೆಂದು ನಾನು ಸಂಕಲ್ಪ ಮಾಡಿದ್ದೇನೆ; ಅಂದ ಬಳಿಕ ಕಾಶಿಬಾಯಿಯನ್ನು ನಿಮಗೆ ಹೇಗೆ ಕೊಡಬೇಕು? ನೀವೇ ಹೇಳಿರಿ.

ವೆಂಕೋಜಿ–ಅದರ ವಿಚಾರವು ಇಲ್ಲಿ ಅಡವಿಯಲ್ಲಿ ಬೇಡ, ನೀವು ಒಳ್ಳೆಯ ಮಾತಿನಿಂದ ನನ್ನ ಗುಹೆಗೆ ನಡೆಯಿರಿ, ಸಾವಕಾಶವಾಗಿ ಈ ಮಾತಿನ ವಿಚಾರ ಮಾಡೋಣವಂತೆ. ನೀವು ಸುಮ್ಮನೆ ನಮ್ಮ ಸಂಗಡ ಬಾರದಿದ್ದರೆ, ನಿಮ್ಮನ್ನು ಬಂಧಿಸಿ ಒಯ್ಯಬೇಕಾಗುವದು.

ದತ್ತಾಜಿ–ಬಂಧಿಸುವದೇಕೆ, ಸಂತೋಷದಿಂದ ನಾವು ನಿಮ್ಮ ಗವಿಗೆ ಬರುವೆವು. ನಡೆಯಿರಿ, ಯಾವ ಕಡೆಗೆ ಬರೋಣ?

ಈ ಮೇರೆಗೆ ನುಡಿದು ದತ್ತಾಜಿಯೇ ಮೊದಲಾದ ಈ ಪ್ರವಾಸಿಕರು ತಮ್ಮ ತಮ್ಮ ಕುದುರೆ ಗಳನ್ನು ಹತ್ತಿಕೊಂಡು ಹೊರಡಲು ಸಿದ್ಧರಾದರು. ಆಗ ಬಿಚ್ಚುಗತ್ತಿಯ ಆ ಐವತ್ತು– ಅರವತ್ತು ಜನರು ವೆಂಕಾಜಿಯ ಅಪ್ಪಣೆಯಂತೆ ಅವರನ್ನು ಎಚ್ಚರದಿಂದ ಕಾಯುತ್ತ ಅವರನ್ನು ಗುಹೆಯ ಕಡೆಗೆ ಸಾಗಿಸಿಕೊಂಡು ನಡೆದರು. ಎರಡು ತಾಸು ರಾತ್ರಿಯಾಗುವದರೊಳಗೆ ಎಲ್ಲರೂ ಗುಹೆಗೆ ಬಂದರು. ವಾಘನಿಗೆ ಇಂದು ಅತ್ಯಾನಂದ; ಬಹು ಸಂಭ್ರಮ; ಈ ವರೆಗೆ ಎಷ್ಟೋ ಜನರನ್ನು ಆತನು ಸುಲಿದಿದ್ದರೂ, ಇಷ್ಟು ಸಂತೋಷವು ಆತನಿಗೆ ಎಂದೂ ಆಗಿದ್ದಿಲ್ಲ. ಆತನು ಅಗಣಿತ ದ್ರವ್ಯವನ್ನು ಸಂಪಾದಿಸಿದ್ದನು; ಹೇರಳವಾಗಿ ಮುತ್ತು– ರತ್ನಗಳನ್ನು ಕೂಡಿಸಿದ್ದನು; ಬೆಲೆಯುಳ್ಳ ವಸ್ತ್ರಗಳನ್ನು ರಾಶಿ ರಾಶಿಯಾಗಿ ಒಟ್ಟಿದ್ದನು; ಆದರೆ ಕಾಶೀಬಾಯಿಯಂತಹ ಕನ್ಯಾರತ್ನವು ಆತನಿಗೆ ಈ ವರೆಗೆ ದೊರೆತಿದ್ದಿಲ್ಲ! ಈ ಅಮೂಲ್ಯವಾದ ಕನ್ಯಾರತ್ನದಮೇಲೆ ನಿವಾಳಿಸಿ ಒಗೆ ಯಲಿಕ್ಕೂ ತನ್ನ ಎಲ್ಲ ಸಂಪತ್ತು ಸಾಲಲಿಕ್ಕಿಲ್ಲವೆಂದು ಆತನು ಭಾವಿಸಿದನು! ''ಹೊನ್ನು, ಹೆಣ್ಣು ಹಣ್ಣುಗಳು ಎಲ್ಲ ಅಣ್ಣಗಳ ಚಿತ್ತಹಾರಗಳೆಂದು'' ಸರ್ವಜ್ಞ ಕವಿಯು ಹೇಳಿರುವನು; ಆದರೆ ಹೆಣ್ಣಿನ ಕಾಲದಲ್ಲಿ ಹಣ್ಣು–ಹೊನ್ನುಗಳನ್ನು ಕೂಡ ಮಣ್ಣು ಗೂಡಿಸಿದ ರಾವಣಾಧಿ ಗಳಂಥ ಮಹಾ ಸಮರ್ಥ ಅಣ್ಣಗಳು ಜಗತ್ತಿನಲ್ಲಿ ಆಗಿಹೋಗಿರುವರು; ಅಲ್ಲದೆ, ನಾರದ– ಪರ್ವತರಂಥ ದೇವರ್ಷಿಗಳೂ ಹೆಂಗಸಿನ ಕಾಲದಲ್ಲಿ ಮಂಗನ ಮೋರೆಯವರಾದರು; ಅದ ರಂತೆ ದೇವೇಂದ್ರನೂ, ಚಂದ್ರನೂ ತಾವು ದೇವತೆಗಳಾಗಿದ್ದು ಹೆಣ್ಣಿನ ಕಾಲದಲ್ಲಿ ಮಹಾಪ ವಾದಕ್ಕೆ ಗುರಿಯಾದರು; ವಿಶ್ವಾಮಿತ್ರನಂಥ ಮಹಾ ತಪಸ್ವಿಯು ಹೆಣ್ಣಿನ ಕಾಲದಲ್ಲಿ ತನ್ನ ತಪಸ್ಸನ್ನು ಮಣ್ಣುಗೂಡಿಸಿಕೊಂಡನು; ಅಂದಬಳಿಕ ಮಹಾ ಪಾಪಿಯಾದ ವೆಂಕಾಜಿ ವಾಘನು ಕಾಶಿಯ ರೂಪಕ್ಕೆ ಮರುಳಾದದ್ದರಲ್ಲಿ ಆಶ್ಚರ್ಯವೇನು?

## ದತ್ತಾಜಿಯ ಸಾತ್ವಿಕ ದಾರ್ಢ್ಯ

ಹೀಗೆ ನೀಚತಮನಾದ ವಾಘನು ಅನಾಯಾಸವಾಗಿ ಕೈಗೆ ಸಿಕ್ಕಿದ್ದ ಕಾಶಿಯನ್ನು ಲಗ್ನ ಮಾಡಿಕೊಳ್ಳಬೇಕೆಂದು ಇಚ್ಛಿಸಿ, ಅದಕ್ಕಾಗಿ ಆತನು ಕಾಶಿಯ ತಂದೆಯಾದ ದತ್ತಾಜಿಯ ಮನಸ್ಸನ್ನೂ, ಸ್ವತಃ ಕಾಶಿಯ ಮನಸ್ಸನ್ನೂ ಸುಪ್ರಸನ್ನವಾಗುವಂತೆ ಮಾಡಲು ಪರಿಪರಿಯಾಗಿ ಯತ್ನಿಸತೊಡಗಿದನು. ಅವರಿಗೆ ಇರುವದಕ್ಕೆ ಉತ್ತಮ ಸ್ಥಳ, ಸವಿಯೂಟಗಳು, ತಿನ್ನಲಿಕ್ಕೆ ಬೇಕಾದಷ್ಟು ಹಣ್ಣು-ಹಂಪಲಗಳು, ಸುಖಕರವಾದ ಹಾಸಿಗೆ-ಹುಪ್ಪಡಿ, ಮರ್ಯಾದೆಯ ಸವಿಮಾತುಗಳು ಮುಂತಾದವುಗಳ ವ್ಯವಸ್ಥೆಯನ್ನು ಆತನು ಅತ್ಯುತ್ತಮ ರೀತಿಯಿಂದ ಇಡಿಸಿದನು. ಒಟ್ಟಿಗೆ, ನಾವು ಸೆರೆಯಾಳುಗಳೆಂಬ ಭಾವನೆಯು ಅವರಿಗೆ ಉಂಟಾಗದೆ, ವಾಘನು ಸಜ್ಜನನೂ, ಶ್ರೀಮಂತನೂ, ಸುಖಿಯೂ, ಉದಾರನೂ ಇರುವದೆಂಬ ಭಾವನೆಯು ಅವರಲ್ಲಿ ಉಂಟಾಗುವಂತೆ ಮೋಸಗಾರನಾದ ವೆಂಕಾಜಿ ವಾಘನು ಪರಮಾವಧಿಯಾಗಿ ಯತ್ನಿಸಿದನು; ಆದರೆ ಮುಚ್ಚಿದರೂ ಬಚ್ಚಲ ರೊಜ್ಜಿನ ಹೇಸಿತನವು ಮುಚ್ಚದಿರುವಂತೆ, ವೆಂಕಾಜಿಯು ಕಳ್ಳತನದ ದುವಾರ್ತೆಯ ಹೊಲಸು ಏನು ಮಾಡಿದರೂ ಮುಚ್ಚುವ ಹಾಗಿದ್ದಿಲ್ಲವು. ಹೀಗೆ ವೆಂಕಾಜಿಯು ಆ ತಂದೆ- ಮಕ್ಕಳನ್ನು ರಮಿಸುತ್ತ ಎರಡು ದಿನಗಳನ್ನು ಕಳೆದನು. ಮೂರನೆಯ ದಿವಸ ವಾಘನು ಪ್ರಯತ್ನಪೂರ್ವಕ ಸುಗ್ರಾಸಭೋಜನ ಮಾಡಿಸಿ, ಬೀಗರನ್ನು ಸತ್ಕರಿಸುವಂತೆ ದತ್ತಾಜಿಯನ್ನು ಸತ್ಕರಿಸಿದನು. ದತ್ತಾಜಿಯು ತನ್ನ ಮಾವನೆಂತಲೂ, ಕಾಶಿಯು ತನ್ನ ಹೆಂಡತಿಯೆಂದಲೂ ವಾಘನ ಭಾವನೆಯಾಗಿಹೋಗಿತ್ತು, ಅಂದು ಮಧ್ಯಾಹ್ನದ ಊಟವಾಗಿ ವಿಶ್ರಾಂತಿ ಹೊಂದಿದ ಬಳಿಕ ಇಳಿಹೊತ್ತಿನಲ್ಲಿ ವಾಘನು ದತ್ತಾಜಿಯನ್ನೂ ತನ್ನ ಇಷ್ಟಮಿತ್ರರನ್ನೂ, ಕರೆಸಿ, ಹಣ್ಣು-ಹಂಪಲಗಳನ್ನೂ ಬಗೆಬಗೆಯ ಉತ್ತಮ ಖಾದ್ಯ-ಪೇಯ ಗಳನ್ನೂ, ಅವರೆಲ್ಲರೊಡನೆ ವಿನೋದದಿಂದ ಸೇವಿಸುತ್ತ, ತನ್ನ ಪರಾಕ್ರಮದ ಸುದ್ದಿಗಳನ್ನು ಹೇಳುತ್ತ ತಾಂಬೂಲ ಸೇವನವಾದಮೇಲೆ ತನ್ನ ಜೀವದ ಗೆಳೆಯರೊಡನೆ ದತ್ತಾಜಿಯನ್ನು ತನ್ನ ಭಾಂಡಾರಗ್ರಹಕ್ಕೆ ಕರಕೊಂಡು ಹೋದನು. ಆಮೇಲೆ ಅಲ್ಲಿದ್ದ ತನ್ನ ಅಪಾರವಾದ ಸಂಪತ್ತನ್ನು ಉಬ್ಬಿ ಉಬ್ಬಿ ವರ್ಣಿಸುತ್ತ ದತ್ತಾಜಿಗೆ ತೋರಿಸ ತೊಡಗಿರುವಾಗ, ಆ ವಾಘನು ತನ್ನ ಕಳ್ಳತನದ ಕಲಂಕವನ್ನು ಮರೆತುಬಿಟ್ಟನು. ಚಿಂಚವಡದ ಗಣಪತಿಯ ದೇವಸ್ಥಾನದ ಸುಲಿಗೆಯ ವರ್ಣನ ಮಾಡಿ ತಾನು ಅಪಹರಿಸಿ ತಂದಿದ್ದ ಗಣಪತಿಯ ಬಂಗಾರದ ಮೂರ್ತಿಯನ್ನು ಪ್ರೌಢಿಮೆ ಯಿಂದ ದತ್ತಾಜಿಗೆ ತೋರಿಸಲು, ಭಯ-ಭಕ್ತಿಯಿಂದ ಆ ಭಾವಿಕ ಪಾಟೀಲನ ಮೈ ಕೂದಲು ನೆಟ್ಟಗಾಗಿ, ಆತನು ಗಣಪತಿಗೆ ನಮಸ್ಕಾರಮಾಡಿ ತನಗಾಗಿದ್ದ ಅಸಮಾಧಾನವನ್ನು ತಡೆಯದೆ ವೆಂಕಾಜಿಯನ್ನು ಕುರಿತು-

ದತ್ತಾಜಿ-ವೆಂಕಾಜೀ, ದೇವಸ್ಥಾನದ ಸುಲಿಗೆಯೂ, ಮೂರ್ತಿಯ ಅಪಹಾರವೂ ಮೂರ್ತಿ ಭೇದಕರಾದ ಮುಸಲ್ಮಾನರಲ್ಲಿಯೂ ದುಷ್ಟರಿಂದ ಮಾತ್ರ ಆಗಬಹುದು; ಆದರೆ ಅವರೊಳಗಿನ ಸಜ್ಜನರು ಕೂಡ ಇಂತಹ ದ್ರೋಹದ ಕೆಲಸವನ್ನು ಮಾಡಲಿಕ್ಕೆ ಹೇಸಬಹುದು. ಹೀಗಿದ್ದು, ಮೂರ್ತಿ ಪೂಜಕರೆನಿಸುವ ವೈದಿಕರು ನೀವು, ಇಂತಹ ಹೀನ ಕೆಲಸವನ್ನು ಮಾಡಬಹುದೇ?

ವಿಘ್ನೇಶ್ವರನ ಈ ಮೂರ್ತಿಯನ್ನು ಹೀಗೆ ಅನಾದರದಿಂದ ಇಟ್ಟು ಬಿಡದೇ, ಭಕ್ತಿಯಿಂದ ಇದರ ಪೂಜೆ–ಪುನಸ್ಕಾರಗಳನ್ನಾದರೂ ಮಾಡಿಸಿರಿ. ಭಾಂಡಾರದಲ್ಲಿ ಇಂತಹ ಜಾಗ್ರತ ಮೂರ್ತಿ ಯನ್ನು ಪ್ರತಿಬಂಧಿಸಿ ಇಟ್ಟುಕೊಳ್ಳುವದೆಂದರೆ ಉಡಿಯಲ್ಲಿ ಬೆಂಕಿ ಕಟ್ಟಿಕೊಂಡಹಾಗೆಯೇ ಸರಿ! ವೆಂಕಾಜೀ, ನಿಮ್ಮ ಅಪಾರವಾದ ಸಂಪತ್ತನ್ನು ನೋಡಿ ನನಗೆ ಸಂತೋಷವಾಯಿತು; ಆದರೆ ನಾನು ಈ ಮಂಗಲಮೂರ್ತಿಯ ಪ್ರತಿಮೆಯ ಮುಂದೆ ಇನ್ನು ನಿಲ್ಲಲಾರೆನು. ಈ ಕ್ಷುಬ್ಧ ಗಣಪತಿಯ ಕಣ್ಣುಗಳೊಳಗಿಂದ ಕಿಡಿಗಳು ಹಾರುತ್ತಿರುವದು ನಿಮ್ಮ ಕಣ್ಣಿಗೆ ಕಾಣುವದಿಲ್ಲವೆ?

ಈ ಮೇರೆಗೆ ನುಡಿದು ಭಾವಿಕನಾದ ದತ್ತಾಜಿಯು ಆ ಭಾಂಡಾರ ಗೃಹದಿಂದ ತಟ್ಟನೆ ಹೊರಬಿದ್ದನು. ಅದರಿಂದ ವಾಘನ ವಜ್ರ ಹೃದಯವೂ ಸ್ವಲ್ಪ ಮಿದುವಾಗಿ, ''ನನ್ನ ದುಷ್ಕೃತ್ಯ ವನ್ನು ನಾನು ದತ್ತಾಜಿಯ ಕಣ್ಣಿಗೆ ಹಾಕತಕ್ಕದ್ದಿದ್ದಿಲ್ಲ,' ಎಂದು ಆತನು ಪಶ್ಚಾತ್ತಾಪಪಡ ತೊಡಗಿದನು. ಸತ್ಸಮಾಗಮದ ಪ್ರಭಾವವೇ ಅಂತಹದು. ನಿಜವಾದ ಭಕ್ತಿಭಾವದ ದತ್ತಾಜಿಯ ಕ್ಷಣಮಾತ್ರದ ಉಪದೇಶದಿಂದ ವಾಘನಂತಹ ದುರ್ಜನನಲ್ಲಿ ಸಜ್ಜನತೆಯ ಅಂಕುರವು ಮೊಳೆತದ್ದು ಅಭಿನಂದನೀಯವೇ ಸರಿ! ಸ್ವರಾಜ್ಯದ ಉಗಮಸ್ಥಾನವು ಮನುಷ್ಯನ ಹೃದಯವೇ ಆಗಿರುವದರಿಂದ, ದತ್ತಾಜಿ ಪಾಟೀಲನ ಹೃದಯದ ಸ್ವರಾಜ್ಯವು ಸುಗಂಧಯುಕ್ತವಾದ ದ್ದೆಂತಲೂ, ವೆಂಕಾಜಿ ವಾಘನ ಹೃದಯದ ಸ್ವರಾಜ್ಯವು ದುರ್ಗಂಧಯುಕ್ತವಾದದ್ದೆಂತಲೂ ತಿಳಿದುಕೊಳ್ಳ ಬೇಕಾಗುವದು; ಯಾಕಂದರೆ ಆಸ್ತಿಕನಾದ ದತ್ತಾಜಿಯ ಹೃದಯವು ಸದ್ಗುಣಗಳ ಆಗರವೂ, ನಾಸ್ತಿಕನಾದ ವೆಂಕಾಜಿ ವಾಘನ ಹೃದಯವು ದುರ್ಗುಣಗಳ ಆಗರವೂ ಆಗಿದ್ದವು!

ಹೀಗೆ ಮೌನದಿಂದ ಬಂದು ದಿವಾಣಖಾನೆಯಲ್ಲಿ ಕುಳಿತುಕೊಂಡಿದ್ದ ದತ್ತಾಜಿ ವೆಂಕಾಜಿ ಯರಿಬ್ಬರೂ ಬಹಳ ಹೊತ್ತು ಮೌನವಾಗಿಯೇ ಕುಳಿತುಕೊಂಡರು. ಆಗ ದೈವದ್ರೋಹದ ದರ್ಶನದಿಂದಾಗಿ ಸಂತಾಪವನ್ನು ದತ್ತಾಜಿಯು ಪ್ರಯಾಸದಿಂದ ಮುಚ್ಚಿಕೊಳ್ಳುತ್ತಿರಲು, ಆತನ ಕಣ್ಣುಗಳೂ, ಮುಖವೂ ಕೆಂಪಾದವು. ಅತ್ತ ವೆಂಕಾಜಿಯ ಮನಸ್ಸಿಗೆ ಹುಳ ಕಡಿದಂತಾಗಿ, ''ನಿಜ ವಾಗಿಯೇ ನಾನು ಗಣಪತಿಯ ಕ್ಷೋಭಕ್ಕೆ ಗುರಿಯಾಗಿರಬಹುದೇ'' ಎಂದು ಯೋಚಿಸುತ್ತಿರು ವಾಗ, ಭಯದಿಂದ ಅವನ ತೇಜೋಹಾನಿಯಾಗಿರಲು, ಅದನ್ನು ಮುಚ್ಚಿಕೊಳ್ಳುವದಕ್ಕಾಗಿ ಅವನು ದತ್ತಾಜಿಯನ್ನು ನೋಡಲಾರದೆ ಮೋರೆ ತಗ್ಗಿಸಿ ಕುಳಿತುಕೊಂಡಿರುವಾಗ, ಆತನ ಮುಖವು ಕರಕಿಟ್ಟಿತು. ಹೀಗಿರಲು, ವಿವೇಕಿಯಾದ ದತ್ತಾಜಿಯು ತಾಂಬೂಲ ಉಗುಳುವ ನೆವದಿಂದ ಬಾಗಿಲಬಳಿಗೆ ಎದ್ದು ಹೋಗಿ ಉಗುಳುತ್ತ, ಏನೂ ಅರಿಯದವನಂತೆ, ಬಾಗಿಲಲ್ಲಿ ಬಹಳ ಹೊತ್ತು ಸುಮ್ಮನೆ ನಿಂತುಬಿಟ್ಟನು. ಇತ್ತ ವೆಂಕಾಜಿಯು ತನಗಾಗಿದ್ದ ಅಸಮಾಧಾನದ ಕಸುವು ಕಡಿಮೆಯಾಗಲು, ಪಶ್ಚಾತ್ತಾಪದಿಂದ ದತ್ತಾಜಿಯನ್ನು ಕುರಿತು—''ಬರಬೇಕು ಪಾಟೀಲರೇ? ಸುಮ್ನೆ ನಿಂತುಬಿಟ್ಟೀರಲ್ಲ, ಬರ್ರಿ, ತಾಂಬೂಲ ಹಾಕಿಕೊಳ್ಳಿರಿ,'' ಎಂದು ಕರೆಯಲು, ದತ್ತಾಜಿಯು ಬಂದು ತಾಂಬೂಲ ಹಾಕಿಕೊಳ್ಳಹತ್ತಿದನು. ಆಗ ಪಾಟೀಲನ ಸಂತಾಪವೂ ಕಡಿಮೆಯಾಗಿತ್ತು, ಹೀಗೆ ಇಬ್ಬರೂ ವಿಕಾರರಹಿತರಾಗಿ ತಾಂಬೂಲ ಹಾಕಿಕೊಳ್ಳುತ್ತಿರಲು, ವೆಂಕಾಜಿಯು ದತ್ತಾಜಿಗೆ–

ವೆಂಕಾಜಿ–ಏನೇ ಆಗಲಿ, ನೀವು ಹೇಳಿದಂತೆ ನಾನು ಚಿಂಚವಡದ ದೇವಸ್ಥಾನವನ್ನು ಸುಲಿಯತಕ್ಕದ್ದಿದ್ದಿಲ್ಲ; ಅದಿರಲಿ ಬಿಡಿರಿ, ಆದದ್ದು ಆಗಿ ಹೋಯಿತು. ಆದರೆ ದತ್ತಾಜಿ, ನನ್ನಂತಹ ಅಪಾರ ಸಂಪತ್ತು ಬೇರೆ ಕಡೆಗೆ ನಿಮ್ಮ ಕಣ್ಣಿಗೆ ಬಿದ್ದಿರುವದೆಯೇ? ಕನಸಿನಲ್ಲಿ ಸಹ ಇಂತಹ ಅಗಣಿತ ಸಂಪತ್ತನ್ನು ನೀವು ನೋಡಿರಲಿಕ್ಕಿಲ್ಲ.

ದತ್ತಾಜಿ–ಇಂತಹ ಅಗಣಿತ ಸಂಪತ್ತನ್ನು ಅರಸರಲ್ಲಿ, ಅಥವಾ ಸುಲಿಗೆ ಗಾರರಲ್ಲಿಯಲ್ಲದೆ, ಬೇರೆ ಕಡೆಯಲ್ಲಿ ಕಾಣಲಾಸಲ್ಲ; ಆದರೆ ಮಹಾರಾಷ್ಟ್ರ ದೇಶಕ್ಕೆ ಅರಸನೇ ಇಲ್ಲದಿರುವದರಿಂದ, ನಮ್ಮ ಅರಸನ ಸಂಪತ್ತಂತೂ ನಮ್ಮ ಕಣ್ಣಿಗೆ ಬೀಳುವಹಾಗಿಲ್ಲ; ಇನ್ನು, ಯೋಗಾಯೋಗವಿದ್ದದ್ದ ರಿಂದ ನಿಮ್ಮ ಸುಲಿಗೆಯ ಅಗಣಿತ ಸಂಪತ್ತು ನನ್ನ ಕಣ್ಣಿಗೆ ಬಿದ್ದಿರುವದು. ಆದರೆ ರಾಜರು ತಮ್ಮ ಸಂಪತ್ತನ್ನು ನಿರ್ಬಾಧವಾಗಿ ಭೋಗಿಸುತ್ತಿರುವಂತೆ, ಸುಲಿಗೆಗಾರರಿಗೆ ತಮ್ಮ ಸಂಪತ್ತನ್ನು ಮುಂದಿಯಮುಂದೆ ಭೋಗಿಸಲಿಕ್ಕೆ ಹೇಗೆ ಬರುವದು?

ವೆಂಕಾಜಿ (ನೊಂದ ಮನಸ್ಸಿನಿಂದ)–ಪಾಟೀಲರೇ, ಈಗ ನನ್ನ ಗವಿಯ ಹತ್ತರ ಸುಳಿಯುವ ಎದೆಗಾರನು ಅದಾವನಿರುವನು? ಕೆಲವರು ಊರ ಅರಸರಾಗಿದ್ದರೆ, ನಾನು ಅಡವಿಯ ಅರಸನಾಗಿರುವೆನು; ಹೆಸರಿಗೆ ತಕ್ಕಂತೆ ನಾನು ಜನರಿಗೆಲ್ಲ ವ್ಯಾಘ್ರರೂಪನಾಗಿರುವೆನು. ದತ್ತಾಜೀ, ಅದೇನೇ ಇರಲಿ, ನಾನು ಒಂದು ಗುಟ್ಟಿನ ಮಾತು ನಿಮಗೆ ಹೇಳುತ್ತೇನೆ; ಶ್ರೇಷ್ಠರಾದ ಸುಲಿಗೆಗಾರರೇ ಈಗ ರಾಜರಾಗುತ್ತಿರುವರು, ಈಗ ನೀವೆಲ್ಲರೂ ಶಿವಾಜಿಗೆ ರಾಜನೆನ್ನುವಿರೋ ಇಲ್ಲವೋ? ಅವನು ಮೊದಲು ಶ್ರೇಷ್ಠ ಸುಲಿಗೆಗಾರರನೇ ಆಗಿದ್ದಿಲ್ಲವೇ?

ಹೀಗೆ ವೆಂಕಾಜಿಯು ಶಿವಾಜಿಯನ್ನು ತನಗೆ ಹೋಲಿಸಿಕೊಂಡದ್ದನ್ನು ಕೇಳಿದಕೂಡಲೆ, ದತ್ತಾಜಿಯ ಕಣ್ಣುಗಳು ಸಂತಾಪದಿಂದ ಪುನಃ ಕೆಂಪಾದವು. ಆಗ ಆತನು ತಟ್ಟನೆ ಕಟ್ಟಿಗೆ ಮುರಿ ದಂತೆ ಮಾತಾಡಿಬಿಡತಕ್ಕವನು; ಆದರೆ ತಾನು ವಾಘನ ಸೆರೆಯಾಳೆಂಬುದು ಮನಸ್ಸಿನಲ್ಲಿ ಬರಲು, ಆತನು ವಿವೇಕದಿಂದ––''ವೆಂಕಾಜೀ, ಈಗ ಶಿವಾಜಿರಾಜರ ಹೆಸರೇಕೆ? ಅವರು ದೇಶ ಬಾಂಧವರಾದ ಬಡಬಗ್ಗರ ಸುಲಿಗೆಗಾರರಲ್ಲ; ಮಹಾರಾಷ್ಟ್ರದ ಶತ್ರುಗಳ, ಹಾಗು ಮಹಾರಾಷ್ಟ್ರದ ದ್ರೋಹಿಗಳ ಸುಲಿಗೆಗಾರರು. ವೆಂಕಾಜಿ, ಅವರು ಸ್ವದೇಶಬಾಂಧವರ ಸೊತ್ತನ್ನಾಗಲಿ, ಸ್ವದೇಶ ಬಾಂಧವರ ಸ್ತ್ರೀಯರನ್ನಂತೂ ಇರಲಿ, ಶತ್ರುಗಳ ಸ್ತ್ರೀಯರನ್ನಾಗಲಿ ಅಪಹರಿಸಿದ ಸುದ್ದಿಯನ್ನು ನಿಮ್ಮ ಕಿವಿಯಿಂದ ಕೇಳಿದ್ದರೆ ಹೇಳಿರಿ. ವೆಂಕಾಜೀ, ನಿಮಗೆ ಸಿಟ್ಟು ಬರಬೇಕೆಂದು ನಾನು ಬೇಕಂತ ಕೊಕ್ಕಿ ಮಾತುಗಳನ್ನು ಆಡುವದಿಲ್ಲ; ನಿಜವಾದ ಸಂಗತಿಯನ್ನು ಹೇಳುತ್ತೇನೆ. ನಮಗೆ ಶಿವಾಜಿಯು ಬರಿಯ ರಾಜನೇ ಅಲ್ಲ, ದೇವರು! ಆತನು ತನ್ನನ್ನು ರಾಜನೆಂದಾಗಲಿ, ದೇವರೆಂದಾಗಲಿ ಕರೆಯಿರೆಂದು ಯಾರಿಗೂ ಹೇಳಿರುವದಿಲ್ಲ; ಆದರೆ ಮಹಾರಾಷ್ಟ್ರವೇ ತಾನಾಗಿ ಆತನನ್ನು ತನ್ನ ರಾಜನೆಂದೂ, ದೇವರೆಂದೂ ಕರೆಯುತ್ತಿರುವದು; ಹೀಗೆ ಶಿವಾಜಿಯು ಮಹಾರಾಷ್ಟ್ರಕ್ಕೇ ತಂದೆಯಂತಿರುವನು; ಆದರೆ ವೆಂಕಾಜೀ, ''ನಾನು ಅರಣ್ಯದ ರಾಜನೆಂ''ದು ನೀನು ನಿಮ್ಮ ಬಾಯಿಂದ ಹೇಳುತ್ತೀರಿ; ಆದರೆ ಅರಣ್ಯದಲ್ಲಿರುವವರಾರು? ಪ್ರಾಮುಖ್ಯವಾಗಿ ಕಳ್ಳರಲ್ಲವೆ? ಅಂದಬಳಿಕ ನೀವು ಕಳ್ಳರ ರಾಜನೆಂದು ಹೇಳಿದ ಹಾಗಾಯಿತು. ಹಾದಿಯ

ಬಡಿಯುವದು, ದರವಡೆ ಮಾಡುವದು ನಿಮ್ಮ ಕೆಲಸಗಳು, ಅವನ್ನು ನೀವು ಸದ್ಯಕ್ಕೆ ಮಾಡುತ್ತಲೂ ಇರುವಿರಿ; ಅಂದಬಳಿಕ ಪ್ರಜಾಪಾಲಕ ರಾಜರಾದ ಶಿವಾಜಿ ಮಹಾರಾಜ ರಂಥ ರಾಜರು ನೀವು ಹೇಗಾದೀರಿ?

ದತ್ತಾಜಿಯ ಈ ಮಾತುಗಳಿಂದ ವೆಂಕಾಜಿಯು ಸಿಟ್ಟುಬೆಂಕಿಯಾದನು. ಆತನ ಕ್ರೋಧಾಗ್ನಿಯ ಜಳದಿಂದ ಈ ಮೊದಲೆ ಅವನ ಹೃದಯದಲ್ಲಿ ಸತ್ವವಾಗಮದಿಂದ ಉಂಟಾಗಿದ್ದ ಸೌಜನ್ಯಾಂಕುರವು ಕಮರಿ ಹೋಗಲು, ಆ ದುಷ್ಟನು ಸಿಟ್ಟಿಗೆದ್ದ ಸರ್ಪದಂತೆ ಫೂತ್ಕಾರ ಮಾಡುತ್ತ—''ದತ್ತಾಜಿ, ನನ್ನ ಬಂಧನದಲ್ಲಿ ಸಿಕ್ಕಿರುವ ನೀವು ಬಂಧಮುಕ್ತರಾದ ಬಳಿಕ ಆ ಶಿವಾಜಿಯನ್ನು ಹೊಗಳಿರಿ. ನಿಮ್ಮ ಕಾಶಿಯನ್ನು ಲಗ್ನ ಮಾಡಿಕೊಳ್ಳುವ ಇಚ್ಛೆ ಯಿಂದ ನಾನು ಈ ವರೆಗೆ ನಿಮ್ಮ ಮರ್ಯಾದೆ ಕಾದಿದ್ದೇನೆ; ಇಲ್ಲದಿದ್ದರೆ ಇಷ್ಟುಹೊತ್ತಿಗೆ ನಿಮ್ಮನ್ನು ಗೊತ್ತಿಗೆ ಹಚ್ಚಿಬಿಡುತ್ತಿದ್ದೆನು. ಈಗ ಹೇಳಿರಿ, ನಾನು ಕಾಶಿಯ ಲಗ್ನಮಾಡಿಕೊಳ್ಳಲಿಕ್ಕೆ ನಿಮ್ಮ ಒಪ್ಪಿಗೆ ಇರುವದೋ ಇಲ್ಲವೋ?

ವೆಂಕಾಜಿಯ ಈ ಅಪಮಾನಕಾರಕ ಮಾತುಗಳನ್ನು ಕೇಳಿ ದತ್ತಾಜಿಯ ಮೈಮೇಲಿನ ಎಚ್ಚರವು ತಪ್ಪಿತು. ತಾನು ವೆಂಕಾಜಿಯ ಸೆರೆಯಾಳಾಗಿರುವೆನೆಂಬದನ್ನು ಆತನು ಪೂರಾ ಮರೆತುಬಿಟ್ಟನು. ಸ್ವಕುಲಾಭಿಮಾನದಿಂದ ಆತನು ವೆಂಕಾಜಿಗೆ–ವೆಂಕಾಜಿ, ಗಟ್ಟಿಮುಟ್ಟಿ ಯಾಗಿ ತಿಳಿದುಕೋ, ಪ್ರತಿಜ್ಞೆಮಾಡಿ ಹೇಳುತ್ತೇನೆ; ಮರಾಟಾ ಪಾಟೀಲನ ಮಗಳು ನಿನ್ನಂಥ ಸುಲಿಗೆಗಾರನ ಹೆಂಡತಿಯು ಸರ್ವಥಾ ಆಗಲಾರಳು! ದುಷ್ಟಾ, ಸಿಕ್ಕವರು ಸಿಕ್ಕವರೊಡನೆ ಮದುವೆಯಾಗಲಿಕ್ಕೆ, ಮದುವೆಯಂಬದೇನು ಸೂಳಿಗಾರಿಕೆಯೇ? ಈ ಸ್ವೇಚ್ಛಾಚಾರವು ಪಶು ಗಳಾದದ್ದರಿಂದ, ನಿಮ್ಮಂಥ ಸ್ವೇಚ್ಛಾಚಾರದ ಪಶುವೃತ್ತಿಯವರು ಸಿಕ್ಕವರನ್ನು ಸಿಕ್ಕಹಾಗೆ ಲಗ್ನ ವಾಗಬಹುದು; ಆದರೆ ಮರಾಟರು ನಾವು ಪಶುಗಳಲ್ಲ, ಪರಿಶುದ್ಧ ವೀರ ಕ್ಷತ್ರಿಯ ವಂಶದ ವರಿದ್ದೇವೆ; ಶ್ರೀರಾಮನೇ ಮೊದಲಾದ ಪರಿಶುದ್ಧ ಕ್ಷತ್ರಿಯರು ನಮ್ಮ ಪೂರ್ವಜರು; ಆದ್ದ ರಿಂದ, ಅಚ್ಚ ಮರಾಟರನಾದ ವೀರ ನೇತಾಜಿಗೆ ತನ್ನ ಪಂಚಪ್ರಾಣಗಳನ್ನು ಮನಃಪೂರ್ವಕ ಅರ್ಪಿಸಿರುವ ಕಾಶಿಯೆಂಬ ಕನ್ಯಾರತ್ನವನ್ನು, ನಾನು ಕಾಗೆಯಾದ ನಿನ್ನ ಕೊರಳಿಗೆ ಸರ್ವಥಾ ಕಟ್ಟಲಾರೆನು. ಬೇಕಾದರೆ ಈಗಲೇ ನೀನು ನನ್ನ ಶಿರಚ್ಛೇದ ಮಾಡು.

ವೆಂಕಾಜಿ–ದತ್ತಾಜೀ, ಸ್ವಲ್ಪ ಶಾಂತನಾಗು. ನಿನ್ನ ಮಾತಿನಂತೆ ನಾನು ನಿನ್ನ ಶಿರಚ್ಛೇದ ಮಾಡಿದರೆ, ನಾನು ನಾಳೆ ಕಾಶಿಯ ಲಗ್ನವನ್ನು ಬಲಾತ್ಕಾರದಿಂದ ಮಾಡಿಕೊಳ್ಳುವಾಗ ಆಕೆಯನ್ನು ಯಾರು ಉಳಿಸಿಕೊಳ್ಳುವರು? ಇದೂ ಅಲ್ಲದೆ, ಕಾಶಿಯು ನನ್ನ ವೈಭವಕ್ಕೂ, ಪರಾಕ್ರಮಕ್ಕೂ, ರೂಪಕ್ಕೂ ಮೆಚ್ಚಿ ತಾನಾಗಿ ನನ್ನನ್ನು ಮದುವೆಯಾಗಲಿಕ್ಕೆ ಒಪ್ಪಿದರೆ, ನೀನು ಮಾಡುವದೇನು? ಮಿಯಾ–ಬೀಬಿಗಳು ಒಂದಾದರೆ, ನಿನ್ನಂಥ ಕಾಜಿಯ ಕೆಲಸವೇನಿರುವದು? ಇಲ್ಲದ ನಿನ್ನ ಕ್ಷತ್ರಿಯತ್ವದ ಅಭಿಮಾನಕ್ಕೆ ಬಿದ್ದು ಏನಾದರೂ ಬೊಗಳಬೇಡ. ಹೆಂಗಸರ ನೆಲೆ, ನೀರ ನೆಲೆ, ಕುದುರೆಯ ನೆಲೆ ಕಂಡವರಾರು?

ದತ್ತಾಜಿ (ಉಪಹಾಸದಿಂದ ನಕ್ಕು)– ವೆಂಕಾಜೀ, ನಾನು ಹೇಳುವದು ಶುದ್ಧ ಬೀಜದ ಸ್ತ್ರೀ–ಪುರುಷರ ಲಗ್ನದ ಸಂಬಂಧದ ಮಾತು. ಕಲಿ ಮಹಿಮೆಯು ಹೆಚ್ಚುತ್ತುತ್ತಹೋದಂತೆ, ಶುದ್ಧ ಬೀಜದ ಸ್ತ್ರೀ–ಪುರುಷರು ಕಡಿಮೆಯಾಗುತ್ತ ಜಾತಿಸಂಕರದ ಸ್ವೇಚ್ಛಾಚಾರದ ವಿವಿಧ ವಿವಾಹ ಗಳು, ಅಥವಾ ವಿವಾಹ ಮಾಡಿಕೊಳ್ಳದೆಯೇ ಪಳುಗಳಂತೆ ವಿಹರಿಸುವ ಬಗೆಬಗೆಯ ರೀತಿಗಳು ಇನ್ನು ಮೇಲೆ ಬಳಿಕೆಯಲ್ಲಿ ಬರಬಹುದಾದರೂ, ಶುದ್ಧ ಬೀಜದ ಸ್ತ್ರೀ–ಪುರುಷರ ಶಾಸ್ತ್ರೋಕ್ತ ಲಗ್ನದ ಸಂಪೂರ್ಣ ನಾಶವು ಈ ಜಗತ್ತಿನಲ್ಲಿ ಎಂದೂ ಆಗಲಾರದೆಂಬದನ್ನು ಚನ್ನಾಗಿ ಲಕ್ಷದಲ್ಲಿಡು. ಆದ್ದರಿಂದ ಕಾಶಿಯ ಗುಣ ಪರೀಕ್ಷೆ ಮಾಡದೆ ನೀನು ಆಕೆಗೆ ಏನಾದರೂ ಹೆಸರಿಡಬೇಡ, ನಿನ್ನ ನಾಲಿಗೆ ಹುಳತೀತು. ಎಲೈ ಮದಾಂಧನಾದ ವೆಂಕಾಜೀ, ಕನ್ಯೆಯ ಜಾತಿ, ಕುಲ, ಶೀಲ ಸ್ವಭಾವ ಮುಂತಾದವುಗಳ ಸೂಕ್ಷ್ಮ ವಿಚಾರವನ್ನು ಶಾಸ್ತ್ರಕ್ಕನುಸರಿಸಿ ಮಾಡದೆ, ಶುದ್ಧ ಕತ್ತೆಯಂತೆ ಸಿಕ್ಕ ಸಿಕ್ಕ ಸ್ತ್ರೀಯರ ಮೇಲೆ ಮನಸ್ಸು ಮಾಡುವ ನೀನು ಶುದ್ಧ ಬೀಜದವನಿರಬಹುದೋ ಅಶುದ್ಧ ಬೀಜ ದವನಿರಬಹುದೋ, ಎಂಬುದನ್ನು ನೀನೇ ಮನಸ್ಸಿನಲ್ಲಿ ವಿಚಾರಮಾಡಿ ನೋಡು! ಕಾಶಿಯನ್ನು ನಾನು ಹಡೆದು ಆಕೆಯನ್ನು ದೊಡ್ಡವಳನ್ನಾಗಿ ಮಾಡುವಾಗ, ಆಕೆಯ ಗುಣ ನೋಡಿರುವೆನು, ಆಕೆಯ ಶೀಲ ಸ್ವಭಾವಗಳನ್ನು ಅರಿತಿರುವೆನು; ಆದರೆ ಈಗ ನಾಲ್ಕು ದಿನಗಳಿಂದ ಕೇವಲ ಕಾಶಿಯ ರೂಪವನ್ನು ನೋಡಿ, ''ದೀಪದ ರೂಪವನ್ನು ನೋಡಿದ ಪತಂಗದಂತೆ'' ಮೋಹಿಸಿರುವ ನೀನು, ಕಾಶಿಯ ಗೊಡವಿಗೆ ಹೋಗಿ ವ್ಯರ್ಥಸುಟ್ಟುಹೋದೀ. ಎಲೈ ನೀಚತಮನೇ, ನಿಜವಾದ ಕ್ಷಾತ್ರವೃತ್ತಿಯ ಸಾಧ್ವಿಯರು, ತಮ್ಮ ಪಾತಿವ್ರತ್ಯವನ್ನು ಅನ್ಯರ ಸಹಾಯವಿಲ್ಲದೆ ತಾವೇ ರಕ್ಷಿಸಿ ಕೊಳ್ಳುತ್ತಿರುವರೆಂಬುದು ನಿನಗೆ ಗೊತ್ತಿಲ್ಲವೆ? ಲಂಕೆಯಲ್ಲಿ ಲೋಕಮಾತೆಯಾದ ಶ್ರೀ ಜಾನಕಿಯ ಪಾತಿವ್ರತ್ಯದ ರಕ್ಷಣವನ್ನು ತ್ರೈಲೋಕ್ಯ ವಿಜಯಿಯಾದ ರಾವಣನೆಂಬ ದುಷ್ಟ ರಾಕ್ಷಸೇಂದ್ರನಿಂದ ಯಾರು ಮಾಡಿದರು! ಆ ಲೋಕ ಮಾತೆಯು ಸ್ವತಃ ತನ್ನ ಆತ್ಮತೇಜದಿಂದ ಮಾಡಿಕೊಳ್ಳಲಿಲ್ಲವೆ? ಅದರಂತೆ, ಸಾಧ್ವೀ ಶಿರೋಮಣಿಯಾದ ನಳಪತ್ನಿ ದಮಯಂತಿಯು ಕಟ್ಟಡವಿಯಲ್ಲಿ ದುಷ್ಟ ಕಿರಾತನಿಂದ ತನ್ನ ಪಾತಿವ್ರತ್ಯದ ರಕ್ಷಣವನ್ನು ತನ್ನ ಆತ್ಮತೇಜದಿಂದ ಮಾಡಿಕೊಳ್ಳುವಾಗ, ಆಕೆಯ ಸಹಾಯಕ್ಕೆ ಯಾರು ಹೋಗಿದ್ದರು? ವೆಂಕಾಜೀ, ಈ ಪೌರಾಣಿಕ ಸಂಗತಿಗಳಂತು ಇರಲಿ, ಅತ್ಯಂತ ಪ್ರಬಲನಾಗಿದ್ದ ಅಕಬರಬಾದಶಹನು, ಕ್ಷಾತ್ರತೇಜಾಭಿ ಮಾನಿಯಾದ ರಜಪೂತ ಪೃಥ್ವೀರಾಜಪತ್ನಿ ಸಾಧ್ವಿಸಿರೋಮಣಿ ಜೋಧಬಾಯಿಯನ್ನು ನೌರೋಜದ ಜಾತ್ರಿಯು ಮುಗಿದ ನಂತರ ಮೋಸದಿಂದ ಪ್ರತಿಬಂಧಿಸಿ, ಏಕಾಂತದಲ್ಲಿ ಆಕೆಯ ಪಾತಿವ್ರತ್ಯ ಭಂಗ ಮಾಡಹೋದಾಗ, ಆ ಬಾದಶಹನ ಸೊಕ್ಕನ್ನಿಳಿಸಿ ತನ್ನ ಪಾತಿವ್ರತ್ಯ ರಕ್ಷಣ ಮಾಡಿ ಕೊಂಡದ್ದಲ್ಲದೆ '' ಇನ್ನು ಪರಸ್ತ್ರೀಯರನ್ನು ಕಣ್ಣೆತ್ತಿ ನೋಡಲಿಕ್ಕಿಲ್ಲವೆಂ''ದು ಆ ಸಮರ್ಥ ಬಾದಶಹನಿಂದ ಪ್ರತಿಜ್ಞೆ ಮಾಡಿಸಿಕೊಂಡು ಆತನಿಗೆ ಜೀವದಾನ ಕೊಟ್ಟ ಸಂಗತಿಯು, ಅರಣ್ಯದ ರಾಜನಾದ ನಿನಗೆ ಗೊತ್ತಿರುವದೋ ಇಲ್ಲವೋ ಯಾರು ಬಲ್ಲರು? ಎಲೈ ರಾಜ ಗಳ್ಳಾ ವೆಂಕಾಜೀ, ನಾಸ್ತಿಕನಾದ ನಿನ್ನ ಅರಣ್ಯ ಸ್ವರಾಜ್ಯದಲ್ಲಿ ನಿನ್ನ ದುರ್ಗುಣಗಳ ದುರ್ಗಂಧವು ಎಲ್ಲ ಕಡೆಗೂ ಇಡಗಿರಲು, ದುರ್ಬೀಜದವರಾದ ಪಶುವೃತ್ತಿಯ ಸ್ವೇಚ್ಛಾಚಾರದ ಅಶಾಶ್ವತ

ಗಳಾದ ಹಲವು ವಿವಾಹಗಳು ನಿನ್ನಂಥ ಮುಖಂಡನ ಮಾನ್ಯತೆಯಿಂದ ಹಿಂಡಿಗೆ ಹಿಂಡು ಆಗಬಹುದು; ಆದರೆ ನಮ್ಮ ಶಿವಪ್ರಭುವಿನ ಆಸ್ತಿಕವಾದ ವೈದಿಕ ಸ್ವರಾಜ್ಯದಲ್ಲಿ ಆತನ ಸದ್ಗುಣಗಳ ಸುಗಂಧವು ಎಲ್ಲ ಕಡೆಗೂ ಇಡಗಿರಲು, ಶುದ್ಧ ಬೀಜದವರ ಶಾಸ್ತ್ರೀಯ ವಿವಾಹ ಗಳಿಗೇ ಮಾನ್ಯತೆ ದೊರೆತೀತು; ಅಂಥ ಶಾಶ್ವತ ವಿವಾಹದಿಂದ ಭದ್ರರಾದವರೇ ಗೌರವಶಾಲಿ ಗಳೆನಿಸಿಕೊಂಡಾರು! ಇಂಥವರಿಂದಲೇ ಪಾತಿವ್ರತ್ಯದ ಪ್ರಭಾವವು ಪ್ರಕಟವಾದೀತು! ದೂರ ವೇಕೆ ನನ್ನ ಮಗಳಾದ ಕಾಶಿಯು ಶುದ್ಧ ಬೀಜದವಳೋ, ಅಶುದ್ಧ ಬೀಜದವಳೋ ಎಂಬದರ ಪರೀಕ್ಷೆಯ ಪರಿಣಾಮವನ್ನು ನಾನು ಕಣ್ಣುಮುಟ್ಟ ನೋಡುವೆನು. ಶಿರಚ್ಛೇದ ಮಾಡಿದರೆ, ಸರ್ವ ಸಾಕ್ಷಿಯಾಗಿದ್ದ ಪರಮೇಶ್ವರನ ಬೆಂಬಲದಿಂದ ನಮ್ಮ ಕಾಶಿಯ ಕ್ಷಾತ್ರತೇಜಸ್ಸನ್ನು ಮಹಾರಾಷ್ಟ್ರವೇ ನೋಡಿ ತಲೆದೂಗುವದು!

## ಕಾಶಿಯ ಕ್ಷಾತ್ರತೇಜ

ದತ್ತಾಜಿ ಪಾಟೀಲನ ಈ ನಿಷ್ಠುರ ಮಾತುಗಳನ್ನು ಕೇಳಿ ವೆಂಕಾಜಿಗೆ ಮುಂದೆ ಏನು ಮಾಡ ಬೇಕೆಂಬದು ತೋಚದಾಯಿತು. ಆ ತಾಮಸಿಯು ಸಿಟ್ಟಿನ ಭರದಲ್ಲಿ ದತ್ತಾಜಿಯನ್ನು ಗುಡ್ಡದ ಕೆಳಗೆ ದೊರಕಿಸಬಹುದಾಗಿತ್ತು; ಅಥವಾ ಆತನ ಶಿರಚ್ಛೇದವನ್ನಾದರೂ ಮಾಡಿಸಿಬಿಡ ಬಹುದಾಗಿತ್ತು; ಆದರೆ ಕಾಶಿಯಮೇಲಿನ ಮೋಹವು ಆತನಿಗೆ ಹಾಗೆ ಮಾಡಗೊಡಲಿಲ್ಲ. ತಂದೆಯ ಮರಣದ ಸುದ್ದಿಯನ್ನು ಕೇಳಿ ಕಾಶಿಯು ತಟ್ಟನೆ ಪ್ರಾಣಕೊಟ್ಟರೆ ಮಾಡುವದೇನೆಂದು ಆತನು ಬೆದರಿ ಯೋಚಿಸತೊಡಗಿದನು. ದತ್ತಾಜಿಯ ಮಾತುಗಳಿಂದ ಆತನ ಮನಸ್ಸು ಬಹಳವಾಗಿ ನೊಂದಿತ್ತು; ಆತನು ಯೋಚಿಸತೊಡಗಿದಂತೆ ಆ ಮಾತುಗಳೊಳಗಿನ ಸತ್ಯಾಂಶವೂ, ಓಜಸ್ವಿತೆಯೂ ಆತನ ಮನಸ್ಸಿಗೆ ನಟ್ಟು, ಅದು ಮತ್ತಿಷ್ಟು ವ್ಯಥಿತವಾಗತೊಡಗಿತು. ಆಗ ವಾಘನು ತನ್ನ ಮನಸ್ಸಿ ನಲ್ಲಿ-ಈತನನ್ನು ಕೊಲ್ಲುವದೂ ಕಷ್ಟ, ಕೊಲ್ಲದಿರುವದೂ ಕಷ್ಟ, ಈತನನ್ನು ಹೀಗೆಯೇ ಬಿಟ್ಟರೆ, ತನ್ನ ಮಗಳಿಗೆ ಇಲ್ಲದ ಬೋಧ ಮಾಡಿ ಆಕೆಯ ಮನಸ್ಸನ್ನು ಕೆಡಿಸಬಹುದು; ಆದ್ದ ರಿಂದ ಈತನನ್ನು ಕಠಿಣ ಕಾರಾಗ್ರಹದಲ್ಲಿಡಿಸಿಬಿಡಬೇಕು. ಇದರ ಗಂಧವೂ ಕೂಡ ಕಾಶಿಗೆ ಹತ್ತಬಾರದು. ತನ್ನ ತಂದೆಯ ಗತಿಯು ಏನಾಯಿತೆಂಬದು ತಿಳಿಯದ್ದರಿಂದ ಆಕೆಯು ನಿರಾಶ ಳಾಗಿ ಮೆತ್ತಗಾಗಬಹುದು; ಅತ್ತ ದತ್ತಾಜಿಯೂ ಸೆರೆಮನೆಯ ತಾಪದಿಂದ ಹಣ್ಣಾಗಬಹುದು. ಹೀಗೆ ತಿಂಗಳೊಪ್ಪತ್ತು ಹೋದಬಳಿಕ ಆಮೇಲೆ ಉಪಾಯದಿಂದ ಕಾರ್ಯವನ್ನು ಸಾಧಿಸುವದು ಯೋಗ್ಯವು. ಯಾವದನ್ನಾದರೂ ಒಮ್ಮೆಲೆ ಹೆಚ್ಚು ಜಗ್ಗಬಾರದು.

ಹೀಗೆ ಯೋಚಿಸಿ ವೆಂಕಾಜಿಯು ದತ್ತಾಜಿಯನ್ನು ಕತ್ತಲಕೋಣೆಯಲ್ಲಿಡಿಸಿ, ಪರಿಪರಿಯಾಗಿ ಆತನನ್ನು ಪೀಡಿಸತೊಡಗಿದನು. ಹೀಗೆ ಅಖಂಡ ಒಂದು ತಿಂಗಳು ಕ್ರಮಿಸಿಹೋಯಿತು. ತಂದೆಗೆ ಮಗಳ ಸುದ್ದಿಯಿಲ್ಲ, ಮಗಳಿಗೆ ತಂದೆಯ ಸುದ್ದಿಯಿಲ್ಲ, ಅವರಿಬ್ಬರೂ ಪರಸ್ಪರರ ಚಿಂತೆಯಿಂದ ಕೊರಗ ಹತ್ತಿದರು. ಕಾಶಿಯ ಯೋಗಕ್ಷೇಮದ ವಿಷಯದಲ್ಲಿ ವಾಘನು ಅತ್ಯಂತ ದಕ್ಷ

ನಾಗಿದ್ದರೂ, ಆಕೆಗೆ ತಂದೆಯ ಸುದ್ದಿಯು ಏನೂ ಗೊತ್ತಾಗದಂತೆ ಎಚ್ಚರಪಡುತ್ತಿದ್ದನು, ತಾನೂ ಕಾಶಿಯ ಬಳಿಗೆ ಹೋಗಿದ್ದಿಲ್ಲ, ತನ್ನ ಗುಣಗಳ ಹಾಗೂ ಐಶ್ವರ್ಯದ ವರ್ಣನವನ್ನು ಕಾಶಿಯ ಮುಂದೆ ಮಾಡಿ, ತನ್ನ ಕಡೆಗೆ ಕಾಶಿಯ ಮನಸ್ಸು ತಿರುಗಿಸುವಂತೆ ಪರಿಚಾರಿಕೆಯನ್ನು ನಿಯಮಿಸಿ, ಬಗೆಬಗೆಯ ಹಂಚಿಕೆಗಳನ್ನು ಹಾಕುತ್ತಿದ್ದನು; ಮತ್ತು ಹಲವು ಉಪಾಯಗಳನ್ನು ಒಡ್ಡುತ್ತಿದ್ದನು; ಆದರೂ ಕಾಶಿಯು ಯಾರಿಗೂ ಗುಟ್ಟು ಕೊಡದೆ ಕೇವಲ ಉದಾಸೀನಳಾಗಿ ಕಾಲ ಹರಣ ಮಾಡಹತ್ತಿದಳು. ತಂದೆಯ ಗತಿಯು ಏನಾಯಿತೋ ಎಂಬ ಚಿಂತೆಯು ಆಕೆಯನ್ನು ಯಾವಾಗಲೂ ಬಾಧಿಸುತ್ತಿತ್ತು, ಕಾಶಿಯು ಚೌಕಗ್ರಾಮವನ್ನು ಬಿಟ್ಟಂದಿನಿಂದ ಸಾಧಾರಣ ವಾಗಿ ಕಷ್ಟದಲ್ಲಿಯೇ ಕಾಲಹರಣ ಮಾಡುತ್ತಿದ್ದರೂ, ತಂದೆಯು ಆಕೆಯ ಹತ್ತರಿರುವತನಕ ಆಕೆಯ ಸೌಂದರ್ಯದಲ್ಲೇನು ಕುಂದುಕೊರತೆಗಳು ಉಂಟಾಗಿದ್ದಿಲ್ಲ, ತಾರುಣ್ಯವು ಭರಕ್ಕೆ ಬಂದ ಬಂದಂತೆ ಆಕೆಯ ಸೌಂದರ್ಯವು ಹೆಚ್ಚುತ್ತಲೇ ಇತ್ತು, ಇತ್ತಿತ್ತ ಒಂದು ತಿಂಗಳಿಂದ ತನ್ನ ತಂದೆಯ ಸುದ್ದಿಯು ಗೊತ್ತಾಗದ್ದರಿಂದ, ಆಕೆಯು ಸೊರಗ ಹತ್ತಿದಳು. ಆಕೆಯ ಮುಖ ಕಾಂತಿಯು ಕಡಿಮೆಯಾಗತೊಡಗಿತ್ತು ಆಕೆಯು ಯಾವಾಗಲೂ ಒಂದು ಕೋಣೆಯಲ್ಲಿ ಒಬ್ಬಳೇ ಕುಳಿತುಕೊಂಡಿರುತ್ತಿದ್ದಳು. ಆಕೆಯ ಜೀವವು ಆಕೆಗೆ ಬೇಡಾಯಿತು. ಒಬ್ಬರ ಸಂಗಡ ಮಾತಾಡಳು; ಯಾರು ಏನು ಹೇಳಿದರೂ ಕೇಳಳು; ಯಾವಾಗಲೂ ಕಣ್ಣೀರು ಸುರಿಸುವಳು. ಬರಬರುತ್ತ ಆಕೆಯ ಊಟವೂ ಕಡಿಮೆಯಾಯಿತು. ಈ ಎಲ್ಲ ಸಂಗತಿಗಳೂ ಪ್ರತಿದಿವಸ ವಾಘನ ಕಿವಿಗೆ ಬೀಳುತ್ತಿದ್ದವು.

ಹೀಗಿರುವಾಗ ಕಾಶಿಯ ಸಂಗಡ ಪ್ರವಾಸದಲ್ಲಿದ್ದ ನಾಲ್ವರಲ್ಲಿ ರಾಮಜಿ ಎಂಬ ಒಬ್ಬನು ಅಕಸ್ಮಾತ್ತಾಗಿ ಕಾಶಿಯಬಳಿಗೆ ಬಂದನು. ಆತನನ್ನು ನೋಡಿದ ಕೂಡಲೆ, ವಿಪತ್ತಿನಲ್ಲಿ ಆಪ್ತನನ್ನು ಕಂಡಂತೆ ಕಾಶಿಗೆ ಬಹಳ ಸಂತೋಷವಾಯಿತು. ಆಕೆಯು ಕೂಡಲೆ ರಾಮಜಿಯನ್ನು ಕುರಿತು ಅತ್ಯಂತ ಆತುರದಿಂದ–

ಕಾಶಿ–ರಾಮಜಿ, ಅಪ್ಪನು ಎಲ್ಲಿರುವನು? ಆತನ ಸುದ್ದಿಯೇ ಇಲ್ಲವಲ್ಲ! ನೀನು ಇಷ್ಟು ದಿವಸ ಎಲ್ಲಿ ಇದ್ದೆ? ಇಂದು ಎಲ್ಲಿಂದ ಬಂದೆ?

ರಾಮಜಿ–ಕಾಶೀಬಾಯೀ, ಪಾಟೀಲರ ಸುದ್ದಿಯು ಇಷ್ಟು ದಿವಸ ನನಗೂ ಗೊತ್ತಿದ್ದಿಲ್ಲ, ನಾವು ನಾಲ್ವರೂ ಒಬ್ಬರ ಸುದ್ದಿಯು ಒಬ್ಬರಿಗೆ ಇಲ್ಲದೆ ಬೇರೆ ಬೇರೆ ಕತ್ತಲಕೋಣೆಗಳಲ್ಲಿ ಕೊಳೆಯುತ್ತಿದ್ದೆವು. ಮೊನ್ನೆ ದತ್ತಾಜಿ ಪಾಟೀಲರು ವಾಘನಿಗೆ ಹೇಳಿಕೊಂಡು, ನನ್ನನ್ನು ತಮ್ಮ ಬಳಿಗೆ ಕರೆಸಿಕೊಂಡರು. ಕಾಶೀಬಾಯಿ ನಿನ್ನ ತಂದೆಯವರೂ ನಮ್ಮಂತೆಯೇ ಕತ್ತಲಕೋಣೆ ಯಲ್ಲಿ ಕೊಳೆಯುತ್ತಿರುವರು. ಅವರಿಗೆ ದಿನಾಲು ಹೊಟ್ಟೆತುಂಬ ಕೂಳು ಸಹ ಕೊಡುವದಿಲ್ಲ, ಅವರು ಸೊರಗಿ ಸೊರಗಿ ಕಡ್ಡಿಯಾಗಿರುವರು. ಅವರಿಗೆ ಓಡಾಡುವ ತ್ರಾಣವೂ ಇರುವದಿಲ್ಲ, ಅವರನ್ನು ಪರಿಪರಿಯಾಗಿ ಕಾಡುವಂತೆ ವಾಘನು ತನ್ನವರಿಗೆ ಕಟ್ಟಪ್ಪಣೆ ಮಾಡಿರುವನು; ಆದ್ದರಿಂದ ಹಸಿವೆಯ ಹಾಗು ಯಾತನೆಗಳ ಬಾಧೆಯಿಂದ ಅವರು ಬಳಲುತ್ತಿರುವರು. ನಮಗ ಹೊಟ್ಟೆತುಂಬ ಅನ್ನ ಕೊಡುತ್ತಿರುವದರಿಂದ ನಾವು ತಿಂದುಂಡು ನೆಟ್ಟಗಿದ್ದೇವೆ. ಕಾಶೀಬಾಯೀ, ನಿಮ್ಮ ತಂದೆಯ ದುಸ್ಥಿತಿಯನ್ನು ನಾನು ಹೇಳಲಾರೆನು, ನನಗೆ ಬಹಳ ದುಃಖವಾಗುತ್ತದೆ; ಯಾಕಂದರೆ ಅವರು ನನಗೆ ಅನ್ನ ಕೊಟ್ಟವರು.

ಕಾಶಿ–ರಾಮಜೀ, ಅಪ್ಪನು ನಿನ್ನನ್ನು ಯಾಕೆ ಕರೆಸಿದ್ದನು? ಆತನು ನಿನ್ನ ಮುಂದೆ ಏನು ಹೇಳಿದನು?

ರಾಮು– ಅವರು ಹೇಳಿದ ಮಾತನ್ನು ನಡೆಸುವದು ನಿಮ್ಮಿಂದ ಆಗದು; ಯಾಕಂದರೆ, ಸ್ವತಃ ಪಾಟೀಲರೇ ತಮ್ಮ ಮಾತು ಕಾಶಿಯ ಮುಂದೆ ನಡೆಯುವದೋ ಇಲ್ಲವೋ ಎಂದು ಸಂಶಯಪಡುತ್ತಿರುವರು.

ಕಾಶಿ–ಬಾಬಾನು ಅಂಥ ಮಾತು ಏನು ಹೇಳಿರುವನು? ನಾನು ತಂದೆಯ ಮಾತು ಕೇಳದಷ್ಟು ಕೃತಘ್ನಳಿರುವೆನೆಯೆ? ಅಪ್ಪನು ಹೇಳಿರುವದನ್ನು ಬೇಗನೆ ಹೇಳು; ಆ ಮಾತು ಅವಶ್ಯ ನಡಿಸುವೆನು.

ರಾಮಜಿ–ನಿನ್ನ ಈ ಮಾತು ಸತ್ಯವೆ?

ಕಾಶಿ–ರಾಮಜೀ, ಇಷ್ಟೇಕೆ ನನ್ನಲ್ಲಿ ಅಪನಂಬಿಗೆ? ಅಪ್ಪನ ಮಾತು ಹೇಳುವದಷ್ಟು ನಿನ್ನ ಕೆಲಸ. ಅಪ್ಪನ ಜೀವದ ಚಿಂತೆಯು ನಿನಗಿಂತ ನನಗೆ ಹೆಚ್ಚು ಇರುತ್ತದೆ. ಇಷ್ಟೇಕೆ ನೀನು ನನ್ನನ್ನು ವಚನಬದ್ಧಳಾಗಮಾಡುತ್ತೀ? ನನ್ನ ಬಳಿಗೆ ವಾಘನೇ ನಿನ್ನನ್ನು ಕಳಿಸಿರುವನೋ ಏನು? ಯಾಕಂದರೆ, ನನ್ನ ಶೀಲದ ವಿಷಯದಲ್ಲಿ ಅಪ್ಪನು ಎಳ್ಳಷ್ಟು ಸಂಶಯಪಡತಕ್ಕವನಲ್ಲ. ತನ್ನ ಪ್ರಾಣ ಹೋದರೂ ಆತನು ನನ್ನನ್ನು ಶೀಲಭ್ರಷ್ಟಳಾಗಮಾಡನೆಂಬದನ್ನು ನಾನು ಪೂರಾ ಬಲ್ಲೆನು. ರಾಮಜೀ, ಹೇಳು, ಧೀರನೂ ಗಂಭೀರನೂ ಆದ ನನ್ನ ತಂದೆಯು ಆಮರಣ ಶೀಲವಂತೆಯಾಗಿರುವಂತೆ ನನಗೆ ಏನು ಹೇಳಿರುವನು ಬೇಗನೆ ಹೇಳು. ನನ್ನ ತಂದೆಯ ಶೀಲದ ವಿಷಯವಾಗಿ ನನ್ನ ಸಂಶಯವಿಲ್ಲ, ನನ್ನ ಶೀಲದ ವಿಷಯವಾಗಿ ನನ್ನ ತಂದೆಯ ಸಂಶಯವಿಲ್ಲ; ಅಂದಬಳಿಕ ನಿಷ್ಕಾರಣವಾಗಿ ನನ್ನ ಶೀಲದ ವಿಷಯದ ಸಂಶಯವು ನಿನ್ನಲ್ಲಿ ಯಾಕೆ ಉತ್ಪನ್ನ ವಾಯಿತು? ನಿನ್ನ ಮಾತಿನಲ್ಲಿ ಏನೋ ಕುಟಿಲತನವಿದ್ದಂತೆ ತೋರುತ್ತದೆ! ರಾಮಜೀ, ನಿಜವಾಗಿ ಹೇಳು, ನಿನ್ನನ್ನು ನನ್ನ ಬಳಿಗೆ ಅಪ್ಪನು ಕಳಿಸಿರುವನೋ, ವಾಘನು ಕಳಿಸಿರುವನೋ? ಅಪ್ಪನು ಕಳಿಸಿದ್ದರೆ ಆತನು ಏನು ಹೇಳಿರುವ ನೆಂಬದನ್ನು ಬೇಗನೆ ಹೇಳು. ವಾಘನು ಕಳಿಸಿದ್ದೇ ನಿಜ ವಿದ್ದರೆ, ನಡುವೆ ನಿನ್ನ ಮಧ್ಯಸ್ತಿಕೆಯೇಕೆ? ವಾಘನೇ ಇಲ್ಲಿಗೆ ಬಂದು ನನಗೆ ಹೇಳುವದನ್ನು ಹೇಳಲಿ, ಕೇಳುವದನ್ನು ಕೇಳಲಿ. ಅಥವಾ ಆತನೇ ನನ್ನನ್ನು ಕರೆಸಿದರೆ ಆತನಲ್ಲಿದ್ದಲ್ಲಿಗೆ ನಾನು ಬಂದು ಬಿಡುವೆನು. ನಮ್ಮಂಥ ಸೆರೆಯಾಳುಗಳ ಸಂಗಡ ಮಾತಾಡಲಿಕ್ಕೆ ಆತನಿಗೆ ಇಷ್ಟು ಸಂಕೋಚವೇಕೆ? ಕಳ್ಳನ ಜೀವ ಹುಳ್ಳಹುಳ್ಳಗೆ ಎಂಬ ಮಾತೇ ನಿಜವಿದ್ದರೆ ಉಪಾಯವಿಲ್ಲ, ನನ್ನ ಹಣೇಬರಹದಲ್ಲಿ ಇದ್ದದ್ದೇ ಆಗುವದು.

ಕಾಶಿಯು ಹೀಗೆ ಬಡಬಡ ಮಾತಾಡಿದ್ದನ್ನು ಕೇಳಿ ರಾಮಜಿಯು ಬೆಪ್ಪಾಗಿ ಹೋದನು! ನಿಜವಾದ ಸಂಗತಿಯನ್ನು ತಟ್ಟನೆ ತಿಳಿದುಕೊಂಡ ಆಕೆಯ ಧೂರ್ತತನಕ್ಕಾಗಿ ಆತನು ಪರಮಾಶ್ಚರ್ಯಪಟ್ಟನು. ಕಾಶಿಯ ಮೋರೆಯ ಕಡೆಗೆ ನೋಡುವ ಧೈರ್ಯವೂ ಆತನಿಗೆ ಆಗಲೊಲ್ಲದು. ಆತನ ಮೋರೆ ಕಪ್ಪಿಟ್ಟಿತು; ನಾಲಿಗೆ ತೊದಲಹತ್ತಿತು. ಆತನು ತಲೆತುರಿಸಿ ಕೊಳ್ಳುತ್ತ ತನ್ನ ಎಡದ ಮಗ್ಗಲಿಗೆ ನೋಡಲು, ಇದನ್ನೆಲ್ಲ ಮರೆಗೆ ನಿಂತು ಕೇಳುತ್ತಿದ್ದ ವಾಘನೂ

ಮೂಢನಾಗಿ ನಿಂತುಬಿಟ್ಟಿದ್ದನು. ಆ ಮರಾಠಾ ಸುಂದರಿಯ ವಾಗ್ಬಾಣಗಳು ಆತನ ಹೃದಯದಲ್ಲಿ ನಡಲು, ಆ ಕಳ್ಳನ ಜೊಳ್ಳ ಹೃದಯವು ಕಂಪಿಸಿತು. ಆತನು ಅಲ್ಲಿಂದ ಮೆಲ್ಲನೆ ಕಾಲುದೆಗೆಯ ಬೇಕೆನ್ನುತ್ತಿರಲು ರಾಮಜಿಯು ಧೈರ್ಯದಿಂದ ಕಾಶಿಯನ್ನು ಕುರಿತು –

ರಾಮಜಿ–ಕಾಶೀಬಾಯಿಯೊ, ನನ್ನನ್ನು ನಿನ್ನ ತಂದೆಯು ಕಳಿಸಿರುವದಿಲ್ಲ, ವಾಘನೇ, ಅಲ್ಲ; ಮರೆತೆನು; ನಿನ್ನ ತಂದೆಯೇ ನನ್ನನ್ನು ಕಳಿಸಿರುವನು. ನೀನು ಸಂತೋಷದಿಂದ ವಾಘನ ಲಗ್ನವಾದರೆ, ಆತನು ಬದುಕುವನಂತೆ. ಕಾಶೀಬಾಯಿಯೊ, ನಿಜವಾಗಿ ದೇವರಾಣೆಮಾಡಿ ಹೇಳುವೆನು, ನಿಮ್ಮ ತಂದೆಯೇ ನನ್ನ ಮುಂದೆ ಹೀಗೆ ಹೇಳಿ ಕಳಿಸಿದ್ದಾನೆ.

ರಾಮಜಿಯ ಈ ಎಬಡತನವನ್ನು ನೋಡಿ, ಇಂಥ ದುಃಖದ ಸ್ಥಿತಿಯಲ್ಲಿಯೂ, ಕಾಶಿಗೆ ನಗೆಯು ಬಂದಿತು. ಆಕೆಯು ರಾಮಜಿಗೆ–ರಾಮಜೀ, ಹೋಗಿರಿ, ಇಲ್ಲಿ ನಿಮ್ಮ ಕೆಲಸವಿಲ್ಲ; ನಾನು ಹೇಳುವದನ್ನು ನಿಮ್ಮ ಮುಂದೆ ಈ ಮೊದಲೆ ಹೇಳಿಬಿಟ್ಟಿದ್ದೇನೆ. ನನ್ನ ತಂದೆಗೂ ಅದೇ ಉತ್ತರವು; ವಾಘನಿಗೂ ಅದೇ ಉತ್ತರವು. ಒಟ್ಟಿಗೆ, ಕಾಶಿಯು ಸರ್ವಥಾ ಶೀಲಭ್ರಷ್ಟಳಾ ಗಲೆಂಬುದನ್ನು ನೀವೂ, ನನ್ನ ತಂದೆಯೂ, ವಾಘನೂ ಗಟ್ಟಿಮುಟ್ಟಿಯಾಗಿ ತಿಳಿದುಕೊಳ್ಳಿರಿ.

ಈ ಜಗತ್ತಿನ ಮೂಲ ಘಟಕಗಳು ಶುದ್ಧ ಚೇತನ, ಮತ್ತು ಆ ಚೇತನದ ಶಕ್ತಿ ಎಂಬವು ಎರಡೇ ಇದ್ದು, ಚೇತನವಿಲ್ಲದ ಶಕ್ತಿಯೂ, ಶಕ್ತಿಯಿಲ್ಲದ ಚೇತನವೂ ವ್ಯವಹಾರದೆಸೆಯಲ್ಲಿ ವ್ಯರ್ಥ ವೆಂಬದರಲ್ಲಿ ಸಂಶಯವಿಲ್ಲ, ಪುರುಷರು ಚೇತನಾಸ್ಥಾನಪನ್ನರೂ, ಸ್ತ್ರೀಯರು ಶಕ್ತಿಸ್ಥಾನಾ ಪನ್ನರೂ ಎಂದು ಕಲ್ಪಿಸಿದರೆ, ಜಗದ್ವ್ಯವಹಾರಕ್ಕೆಲ್ಲ ಶಕ್ತಿಯೇ, ಅಥವಾ ಪ್ರಕೃತಿಯೇ ಕಾರಣ ವೆಂದು ಸಾಂಖ್ಯಮತದಂತೆ ಹೇಳಬೇಕಾಗುವದು; ಆದ್ದರಿಂದ ''ಸಾವಿರ ಕುದುರೆಯ ಸವಾರ ಮನೆಯ ಹೆಂಡತಿಯ ಪಿಂಜಾರ'' ಎಂಬ ಲೋಕೋಕ್ತಿಯಲ್ಲಿ ಅರ್ಥವಿರುವದೆಂದು ಹೇಳ ಬೇಕಾಗುವದು. ವೆಂಕಾಜಿ ವಾಘನಂಥ ಕ್ರೂರನನ್ನು ಮಾತಿನಿಂದಲೇ ಮೆತ್ತಗೆ ಮಾಡಿ, ಆತನನ್ನು ಮುಂದಕ್ಕೆ ಒಂದು ಹೆಜ್ಜೆ ಇಡಗೊಡದೆ ಅತ್ತಿಂದತ್ತೇ ದಾಟಹಾಕಿದ ಕಾಶಿಯು, ಸಾಕ್ಷಾತ್ ಜಗನ್ಮಾತೆಯಾದ ಆದಿಶಕ್ತಿಯ ಅಂಶವೆಂದು ಒಪ್ಪಬೇಕಾಗುವದು, ಕಾಶಿಯ ಮಾತುಗಳನ್ನು ಕೇಳಿ ವಾಘನು ಸುಮ್ಮನೆ ತನ್ನ ಸ್ಥಳಕ್ಕೆ ಹೋಗಲು, ರಾಮಜಿಯೂ ತನ್ನ ಸ್ಥಳಕ್ಕೆ ಹೋಗಿಬಿಟ್ಟನು. ತಿರುಗಿ ಅವರಿಬ್ಬರ ಸಂಭಾಷಣ ವಾಗುವ ಕಾರಣವೇ ಉಳಿಯಲಿಲ್ಲ ಈ ಸ್ಥಿತಿಯಲ್ಲಿ ಮತ್ತೆ ಎಂಟು ದಿನಗಳು ಕಳೆದುಹೋದವು. ಇತ್ತ ಕಾಶೀಬಾಯಿಯೂ ಯಥಾಸ್ಥಿತವಾಗಿ ತಂದೆಯ ಆಲೋಚನೆಯಲ್ಲಿ ಮುಳುಗಿಬಿಟ್ಟಳು. ವಾಘನು ರಾಮಜಿಯನ್ನು ಮೋಸದಿಂದ ಕಳಿಸಿದ್ದನು ಚಾಣಾಕ್ಷಳಾದ ಕಾಶಿಯು ಕೂಡಲೆ ಕಂಡುಹಿಡಿದು, ಅದನ್ನು ಬೈಲಿಗೆಳೆದಿದ್ದರೂ, ತನ್ನ ತಂದೆಯ ಸ್ಥಿತಿಯ ಸ್ಪಷ್ಟೀಕರಣವಾಗದ್ದರಿಂದ, ಆಕೆಯ ಚಿಂತೆಯು ಕಿಂಚಿತ್ತಾದರೂ ಕಡಿಮೆಯಾಗಿದ್ದಿಲ್ಲ.

ಹೀಗೆ ಕಾಶಿಯು ಚಿಂತೆಯಿಂದ ಕಾಲಹರಣ ಮಾಡುತ್ತಿರುವಾಗ ಒಂದು ದಿನ ವಾಘನ ಒಬ್ಬ ಸೇವಕನು ಆಕೆಯ ಬಳಿಗೆ ಬಂದು—''ಕಾಶೀಬಾಯೀ, ವೆಂಕಾಜಿ ವಾಘರು ನಿಮಗೆ ಬರಹೇಳಿರುವರು'' ಎಂದು ಹೇಳಿದನು. ಅದನ್ನು ಕೇಳಿದ ಒಂದುಕ್ಷಣ ಆಕೆಯ ಹೃದಯಕ್ಕೆ ಬರೆ ಕೊಟ್ಟಂತಾಯಿತು. ಉತ್ತರ ಕ್ಷಣದಲ್ಲಿ ಆಕೆಯು ಧೈರ್ಯತಾಳಿ, ತನ್ನ ಸೋಕ್ಷ ಮೋಕ್ಷ ಕಾಲವು ಸಮಿಪಿಸಿದ್ದಕ್ಕಾಗಿ ಆಕೆಗೆ ಬಹಳ ಸಮಾಧಾನವಾಯಿತು. ಆಕೆಯ ಕಣ್ಣೀರುಗಳು

ಸುಟ್ಟು ಹೋದವು; ಆಕೆಯ ಕೋಮಲ ಹೃದಯವು ವಜ್ರ ಹೃದಯವಾಯಿತು; ಆಕೆಯ ಮುಖ ದಲ್ಲಿ ಲಾವಣ್ಯದ ಬದಲು ಉಗ್ರ ಕಳೆಯು ಸುರಿಯಹತ್ತಿತ್ತು. ಈ ಸ್ಥಿತಿಯಲ್ಲಿ ಆಕೆಯು ತನ್ನ ಮನಸ್ಸಿನೊಳಗೆ—''ದೇವರ ಇಚ್ಛೆಯ ಹೊರತು ಈ ಜಗತ್ತಿನಲ್ಲಿ ಒಂದು ಕಡ್ಡಿಯು ಕೂಡ ಕದಲುವದಿಲ್ಲವಂತೆ. ಅಂದ ಬಳಿಕ ನಮ್ಮ ನಮ್ಮ ಕರ್ಮಗಳಿಗನುಸರಿಸಿ ಈಶ್ವರೀ ಸಂಕೇತ ದಂತೆ ಅನುಕೂಲ–ಪ್ರತಿಕೂಲ ಪ್ರಸಂಗಗಳೆರಡೂ ಒದಗುತ್ತಿರುವಾಗ, ನಾವು ಚಿಂತೆ ಮಾಡಿ ದರೆ ಆಗುವದೇನು? ಬಂದದ್ದನ್ನು ಸಮಾಧಾನದಿಂದ ಉಂಡು ತೀರಿಸುವದಷ್ಟು ನಮ್ಮ ಕೆಲಸವು ಅಂದಬಳಿಕ ನಾನು ಈಗ ದೇವರ ಮೇಲೆ ಭಾರ ಹಾಕಿ ವಾಘನ ಬಳಿಗೆ ಹೋಗಲೇಬೇಕು. ಆತನಿಂದಾಗಬಹುದಾದ ಮಾನಾಪಮಾನದ ಅಭಿಮಾನವು ದೇವರಿಗೇ ಇರಲಿ. ಸರ್ವರ ರಕ್ಷಕನೂ ದೇವರಿರುವಾಗ, ಆತನನ್ನು ಮರೆತು ಅನ್ಯರ ರಕ್ಷಣವನ್ನು ಇಚ್ಛಿಸಿದರೆ ಆಗುವ ದೇನು? ಹಿಂದಕ್ಕೆ ಕೂಡಿದ ಕೌರವ ಸಭೆಯಲ್ಲಿ ಸಾಧ್ವೀ ಶಿರೋಮಣಿಯಾದ ದ್ರೌಪದಿಯ ಮಾನರಕ್ಷಣವನ್ನು ಯಾರು ಮಾಡಿದರು? ಆಕೆಯ ಐವರು ಮಹಾ ಸಮರ್ಥರಾದ ಗಂಡಂದಿರೋ? ಅಥವಾ ದ್ರೋಣ ಕೃಪರಂಥ ತೇಜೋನಿಧಿಗಳಾದ ಗುರುಗಳೋ? ಅಥವಾ ಮಹಾ ಬುದ್ಧಿಶಾಲಿಗಳಾದ ಭೀಷ್ಮ ಧೃತರಾಷ್ಟ್ರರಂಥ ಹಿರಿಯರೋ? ಅಥವಾ ಕಿಕ್ಕಿರಿಯು ವಂತೆ ಸಭೆ ತುಂಬ ಕುಳಿತು ಬಿಟ್ಟಿದ್ದ ದಯಾವಂತರಾದ ಪುರುಜನ–ಪರಿಜನರೋ? ಅವರೆಲ್ಲರೂ ಒಂದಿಲ್ಲೊಂದು ಕಾರಣದಿಂದ ಉದಾಸೀನ ಭಾವ ತಾಳಿ ಸುಮ್ಮನೆ ಕುಳಿತಿರಲು, ಕಾರ್ಯಕಾರಣಾತೀತನಾದ ಶ್ರೀಕೃಷ್ಣ ಪರಮಾತ್ಮನು ಮಾತ್ರ ಭಕ್ತವಾತ್ಸಲ್ಯದಿಂದ, ಶರಣಾ ಗತಳಾದ ದ್ರೌಪದಿಯ ಮಾನವನ್ನು ಆ ಎಲ್ಲ ತುಂಬಿದ ಸಭೆಯು ಆಶ್ಚರ್ಯದಿಂದ ನೋಡುತ್ತಿರಲು, ತಾನೇ ಅಕ್ಷಯ ವಸ್ತ್ರರೂಪನಾಗಿ ಕಾಯ್ದನು! ದೇವಾ, ದಯಾನಿಧೆ; ಅಂಥ ನೀನು ಈಗಾದರೂ ನನ್ನ ಮಾನವನ್ನು ಕಾಯಿ!

ಈ ಮೇರೆಗೆ ಪ್ರಾರ್ಥಿಸಿ ಕಾಶಿಯು ಚಟ್ಟನೆ ಎದ್ದು, ಗಾಂಭೀರ್ಯದಿಂದ ವೆಂಕಾಜಿ ವಾಘನು ಇದ್ದಲ್ಲಿಗೆ ನಡೆದಳು. ಅಂತಹ ದೇವಭಕ್ತಿಯು ಸ್ಥಿತಿಯಲ್ಲಿ ಆಕೆಗೆ ಯಾರ ಭಯವು? ಅಥವಾ ಯಾತರ ಭಯವು? ಆಕೆಯು ನಿರ್ಭಯದಿಂದ ವೆಂಕಾಜಿಯ ಬಳಿಗೆ ಬಂದು ದಿಟ್ಟತನ ದಿಂದ ಆತನನ್ನು ನೋಡುತ್ತ ನಿಂತುಕೊಂಡಳು. ಆಗ ಆ ಸತ್ವಶಾಲಿನಿಯ ಪವಿತ್ರ ದೃಷ್ಟಿಗಳನ್ನು ಎದುರಿಸುವ ತ್ರಾಣವು ವಾಘನ ಮಲಿನ ದೃಷ್ಟಿಗಳಲ್ಲಿ ಉಳಿಯಲಿಲ್ಲ. ಅವು ಎತ್ತೆತ್ತೋ ಎಡತಾಕ ಹತ್ತಿದವು. ಈ ಜಗತ್ತಿನಲ್ಲಿ ಸತ್ಯಕ್ಕೆ ಅಸತ್ಯವು ಸರ್ವಥಾ ಎದುರಿಸಲಾರದು. ಸತ್ಯದ ಮೂರ್ತಿಯೇ ಆಗಿದ್ದ ಕಾಶಿಯು ಚಲಿಸದೆ ಪರ್ವತದಂತೆ ವಾಘನ ಮುಂದೆ ನಿಂತುಬಿಟ್ಟಿದ್ದಳು. ದುಷ್ಟ ಶಾಸನಕ್ಕಾಗಿ ಅವತರಿಸಿದ್ದ ಸಾಕ್ಷಾತ್ ಆದಿಶಕ್ತಿಯ ಮೂರ್ತಿಯಂತೆ ಆಕೆಯು ತೋರುತ್ತಿದ್ದಳು. ಆಕೆಯ ಗೌರವರ್ಣದ ಗಲ್ಲಗಳು ಆಗ ರಕ್ತವರ್ಣದವಾಗಿದ್ದವು. ಆಕೆಯ ವಿಶಾಲ ನೇತ್ರ ಗಳು ಕಿಡಿಗಳನ್ನು ಉದುರಿಸುವಷ್ಟು ಉಗ್ರವಾಗಿದ್ದವು. ಆಕೆಯ ಹುಬ್ಬುಗಳು ವಕ್ರವಾಗಿದ್ದು, ಆಕೆಯ ಕೆಳದುಟಿಯು ಕಂಪಿಸುವಂತೆ ತೋರುತ್ತಿತ್ತು. ಆಗ ಆ ಅಲೌಕಿಕ ಸುಂದರಿಯು, ಸಾಕ್ಷಾತ್ ತ್ರಿಪುರ ಸುಂದರಿಯಂತೆ ತೋರುತ್ತಿದ್ದರೂ, ವಾಘನಂಥ ಮಹಾ ಪಾಪಿಗಳ ಕಣ್ಣು

ಗಳನ್ನು ಕುಕ್ಕುತ್ತಿದ್ದದ್ದರಿಂದ, ಆ ಪಾಪಿ ವಾಘನು ಕಾಶೀಬಾಯಿಯ ಆ ಕ್ರೋಧ ಸಂತಪ್ತ ದಿವ್ಯ ಮೂರ್ತಿಯನ್ನು ನೋಡಲಾರದಾದನು. ಶೀಲವಂತರಾದ ಸ್ತ್ರೀಯರನ್ನು ತಾವಿದ್ದಲ್ಲಿಗೆ ಕರೆಸುವ ಪುರುಷರ ಅಧಮತನಕ್ಕಿಂತ ಹೆಚ್ಚಿನ ಅಧಮತನವು ಮತ್ತಾವದಿರುವದು? ಅಂತಹ ಅಧಮಾಧಮನಾದ ವಾಘನು ತೇಜೋಹೀನನಾಗಿ ಕಾಶಿಯನ್ನು ಮಾತಾಡಿಸಲಾರದೆ ಸುಮ್ಮನೆ ಕುಳಿತಿರುವದನ್ನು ನೋಡಿ, ಕಾಶೀಬಾಯಿಯು ಕ್ರೋಧಕಂಪಿತ ಸ್ವರದಿಂದ ತಾನೇ ವಾಘನಿಗೆ–

ಕಾಶೀಬಾಯಿ–ವೆಂಕಾಜೀ, ನನ್ನನ್ನು ಯಾಕೆ ಕರೆಸಿದಿರಿ?

ವೆಂಕಾಜಿ—''ನನ್ನನ್ನು ಲಗ್ನ ಮಾಡಿಕೊಳ್ಳಲಿಕ್ಕೆ ನೀನು ಸಮ್ಮತಿಸುವೆಯಾ'' ಎಂದು ಕೇಳುವದಕ್ಕಾಗಿ ನಿನ್ನನ್ನು ಕರೆಸಿರುವೆನು.

ಕಾಶೀಬಾಯಿ–ಈ ಮೊದಲೆ ನಾನು ನೇತಾಜಿ ಪಾಲಕರನನ್ನು ನನ್ನ ಮನಸ್ಸಿನಿಂದ ಲಗ್ನ ಮಾಡಿಕೊಂಡಿದ್ದೇನೆ.

ವೆಂಕಾಜಿ–ಮನಸ್ಸು ಚಂಚಲವಾದದ್ದರಿಂದ, ಅದು ಬೇಕಾದಾಗ ಬೇಕಾದವರನ್ನು ಲಗ್ನ ಮಾಡಿಕೊಳ್ಳಬಹುದು; ಆದರೆ ಪ್ರಸಿದ್ಧ ರೀತಿಯಿಂದ ಶಾಸ್ತ್ರೋಕ್ತ ಲಗ್ನವಾದರೆ ಮಾತ್ರ ಲಗ್ನ ವಾದಂತಾಗುವದು; ಹಾಗೆ ನಿನ್ನ ಲಗ್ನವು ಪ್ರಸಿದ್ಧರೀತಿಯಿಂದ ಆಗಿರುವದಿಲ್ಲ.

ಕಾಶಿ–ವೆಂಕಾಜೀ, ದುರ್ಬೀಜ ಸ್ತ್ರೀಯರ ಮನಸ್ಸು ಮಾತ್ರ ಚಂಚಲವಾಗುತ್ತಿರಬಹುದು. ನಳನನ್ನು ಮನಸಾ ಲಗ್ನವಾಗಿದ್ದ ದಮಯಂತಿಯು, ಇಂದ್ರಾದಿ ದೇವತೆಗಳು ಮುಂದೆ ಬಂದು ನಿಂತರೂ ಅವರನ್ನು ಮದುವೆಯಾಗಲು ಒಪ್ಪಲಿಲ್ಲ! ಪ್ರೌಢ ವಿವಾಹದಲ್ಲಿ ಮಾನಸಿಕ ವಿವಾಹವು ಮುಖ್ಯವು; ಬಾಲವಿವಾಹದಲ್ಲಿ ತಾಯಿ–ತಂದೆಯ ಇಚ್ಛೆಯು ಮುಖ್ಯವು. ತಾರುಣ್ಯದ ಮನಸ್ಸು ವಿಕಾರವಶವಾಗಿರುವದರಿಂದ, ಅದು ಅಸ್ಥಾನದಲ್ಲಿ, ಅಥವಾ ಅಪ್ರಾಪ್ಯಸ್ಥಾನದಲ್ಲಿ ಹೋಗಿ, ವ್ಯಭಿಚಾರ ದೋಷಕ್ಕೆ ಗುರಿಯಾಗುವ ಸಂಭವವಿರುವದರಿಂದ ವೈದಿಕರಲ್ಲಿ, ವಿಶೇಷವಾಗಿ ಬ್ರಾಹ್ಮಣರಲ್ಲಿ ಬಾಲ ವಿವಾಹವೇ ಪ್ರಶಸ್ತವೆಂದು ಎಣಿಸಲ್ಪಟ್ಟಿರುವದು; ಯಾಕಂದರೆ, ಸಹೇತುಕ ಪ್ರೇಮವು ಉತ್ಪನ್ನವಾಗಿ ವಿವಾಹ ಮಾಡಿಕೊಳ್ಳುವದಕ್ಕಿಂತ, ವಿವಾಹವಾದ ಮಾತ್ರದಿಂದ ನಿರ್ಹೇತುಕ ಪ್ರೇಮವನ್ನು ಬೆಳೆಸುತ್ತ ಹೋಗುವದು ಪವಿತ್ರ ಪ್ರೇಮದ ದೃಷ್ಟಿಯಿಂದ ಶ್ರೇಷ್ಠ ವೆಂದು ವೈದಿಕ ಸಿದ್ಧಾಂತವಿರುವದೆಂದು ಕೇಳಿದ್ದೇನೆ. ನನ್ನ ವಿವಾಹವು ಕೇವಲ ಬಾಲವಿವಾಹವೂ ಅಲ್ಲ, ಕೇವಲ ಪ್ರೌಢವಿವಾಹವೂ ಅಲ್ಲ; ಅವೆರಡು ಬಗೆಯ ವಿವಾಹಗಳಿಂದ ಅಲಂಕೃತವಾದ ಶ್ರೇಷ್ಠತರ ಸರ್ವಸಮ್ಮತ ವಿವಾಹವಾಗಿರುತ್ತದೆ. ವೆಂಕಾಜೀ, ಅದೇಕೆಂಬದನ್ನು ಹೇಳುತ್ತೇನೆ ಕೇಳು. ನಾನು ಹುಟ್ಟಿದ ಕೂಡಲೆ ನನ್ನ ತಂದೆ ದತ್ತಾಜಿಯು ತನ್ನ ಸೋದರಳಿಯನಾದ ನೇತಾಜಿಗೆ ನನ್ನನ್ನು ಕೊಡಬೇಕೆಂದು ಸಂಕಲ್ಪ ಮಾಡಿರುವನೆಂದು ನಾನು ಹುಡಿಗೆ ಯಿದ್ದಾಗಿನಿಂದಲೂ ಕೇಳುತ್ತ ಬಂದಿದ್ದೆನು. ಅದಕ್ಕನುಸರಿಸಿ ತಾನು ನೇತಾಜಿಗೆ ಮನಃಪೂರ್ವಕ ನನ್ನ ಪಂಚಪ್ರಾಣಗಳನ್ನು ಅರ್ಪಿಸಿರುವೆನು. ಹೀಗೆ ನನ್ನ ವಿವಾಹಕ್ಕೆ ತಾಯಿ–ತಂದೆಗಳ ಸಮ್ಮತಿಯೂ, ನನ್ನ ಸಮ್ಮತಿಯೂ ಇರುವದರಿಂದ, ಅದು ಸರ್ವಸಮ್ಮತವಾದ ನಿರ್ದೋಷ ವಿವಾಹವಾಗಿರುವದು; ಅದರ ವಾಗ್ನಿಶ್ಚಯವೂ ಈ ಮೊದಲೆ ಆಗಿ ಹೋಗಿರುವದು; ಅಂದಬಳಿಕ ನಾನು ಈಗ ನಿನ್ನ ಪಾಣಿಗ್ರಹಣ ಮಾಡುವದು ಹೇಗೆ?

ವೆಂಕಾಜಿ–ಈ ಹಾಳು ಪುರಾಣವನ್ನು ಈಗ ಕೇಳುವವರಾರು? ನಿನ್ನ ಪ್ರಾಣಗ್ರಹಣ ವನ್ನು ನಾನು ಬಲಾತ್ಕಾರದಿಂದ ಮಾಡಿದರೆ, ಇಲ್ಲಿ ನನ್ನ ಕೈಹಿಡಿಯುವವರು ಯಾರಿದ್ದಾರೆ? ವಿವಾಹದಲ್ಲಿ ಪಾಣಿಗ್ರಹಣವೇ ಮುಖ್ಯವಲ್ಲವೆ?

ಕಾಶಿ–ನನ್ನ ಕೈ ಹಿಡಿಯುವವರು ಯಾರಿದ್ದಾರೆಂದರೆ, ದೇವರು! ವೆಂಕಾಜೀ, ನನ್ನ ಪ್ರಾಣಗ್ರಹಣ ಮಾಡಲಿಕ್ಕೆ ಬರುವ ನಿನ್ನನ್ನು ಹಿಂದಕ್ಕೆ ದೂಡಲಿಕ್ಕೆ ದೇವರಿದ್ದಾನೆ.

ವೆಂಕಾಜಿ–ದೇವರು? ಎಲ್ಲಿಯ ದೇವರು? ಅವನೆಲ್ಲಿದ್ದಾನೆ? ವಾಘನ ಗವಿಯಲ್ಲಿ ಅವನ ಪ್ರತಿಷ್ಠೆಯೇನು? ಕಾಶೀ, ನೀನು ದೇವರು ದೇವರು ಎಂದು ಕುಳಿತಿರು; ಅದರಿಂದ ನನಗೇನು ಬಾಧೆಯಿಲ್ಲ, ನೋಡು ಒಳ್ಳೇ ಜಾಗ್ರತವೆಂದು ಪ್ರಸಿದ್ಧವಾಗಿದ್ದ ಚಿಂಚವಡದ ಬಂಗಾರದ ಗಣಪತಿಯ ಮೂರ್ತಿಯು ನನ್ನ ಬಂಥಾರಗೃಹದಲ್ಲಿ ಉರುಳಾಡುತ್ತಿರುವದು ನೋಡು! ಅದು ನನ್ನನ್ನೇನು ಮಾಡಿದೆ? ಈ ಬಹದ್ದರನಾದ ವೆಂಕಾಜಿ ವಾಘನು ನಾನು ''ದೇವರು ದೇವರೆಂ''ದು ಹರಟುವ ನಿನ್ನ ಪಾಣಿಗ್ರಹಣವನ್ನು ನೇತಾಜಿಗಿಂತಲೂ ಮೊದಲೇ ಮಾಡಿಬಿಡುತ್ತೇನೆ.

ಈ ಮೇರೆಗೆ ನುಡಿದು ವೆಂಕಾಜಿಯು ಮೇಲಕ್ಕೆ ಎದ್ದುನಿಂತನು. ದೇವರನ್ನು ನಿಂದಿಸುವ ವಾಘನ ನೀಚತನವನ್ನು ನೋಡಿ, ಈ ಮೊದಲು ಬೋಧಮಾಡುವಾಗಿನ ಕಾಶಿಯ ಕೆಲ ಮಟ್ಟಿಗಿನ ಶಾಂತ ಮುಖಮುದ್ರೆಯು ಮತ್ತೆ ಉಗ್ರವಾಯಿತು! ಪಾಣಿಗ್ರಹಣವು ವಿವಾಹದಲ್ಲಿ ಮುಖ್ಯ ಕರ್ಮವಾಗಿದ್ದು, ವಾಘನು ನೀಚತನದಿಂದ—''ನೇತಾಜಿಗಿಂತ ಮೊದಲು ನಾನೇ ನಿನ್ನ ಪಾಣಿಗ್ರಹಣ ಮಾಡುವನೆಂ''ದು ಎದ್ದು ನಿಂತದ್ದರಿಂದ, ಆ ಸಾಧ್ವಿಯಲ್ಲಿ ಆದಿಶಕ್ತಿಯ ಆವೇಶ ವಾಗಲು, ಆಕೆಯ ಮೈಮೇಲಿನ ಎಚ್ಚರವು ತಪ್ಪಿತು! ಮನುಷ್ಯನಿಗೆ ಪ್ರಸಂಗವಶಾತ್ ಭೂತಾ ವೇಶ–ದೇವಾವೇಶಗಳೆರಡೂ ಆಗುತ್ತಿರುವದು ಶಾಸ್ತ್ರಸಿದ್ಧವು. ಮಲಿನ ಹೃದಯದವರಿಗೆ ಭೂತಾವೇಶವೂ, ಪವಿತ್ರ ಹೃದಯದವರಿಗೆ ದೇವಾವೇಶವೂ! ಭೀಮಸೇನನ ರುದ್ರಾವೇಶವು ಪ್ರಸಿದ್ಧವಾದದ್ದು. ಅದರಂತೆ, ಆದಿಶಕ್ತಿಯು ಆವೇಶಗೊಂಡಿರಲು, ಆಕೆಯ ಮುಖದ ಸುತ್ತಲು ದಿವ್ಯ ಪ್ರಭೆಯು ಪಸರಿಸಿತು; ಆ ಪ್ರಭೆಯನ್ನು ನೋಡಿ ವಾಘನ ಕಣ್ಣುಗಳು ಮುಚ್ಚಿದವು; ಅವನ ಕಾಲುಗಳು ನಡುಗಹತ್ತಿದವು. ಆತನ ಕೈ ಮುಂದಕ್ಕೆ ಬಾರದಾಯಿತು! ಆತನು ಏನೂ ತೋಚದೆ ಸುಮ್ಮನೆ ನಿಂತುಕೊಂಡು ಬಿಟ್ಟನು. ಇತ್ತ ಆದಿಶಕ್ತಿಯ ಆವೇಶಗೊಂಡಿದ್ದ ಕಾಶಿಯು, ತನ್ನ ಪ್ರಾಣ ಗ್ರಹಣ ಮಾಡಲಿಕ್ಕೆ ಬರುವ ವಾಘನ ಶಾಸನವನ್ನು ಯಾವಾಗ ಮಾಡೇನೆಂದು ಮುಸುಗುಟ್ಟುತ್ತ ನಿಂತಲ್ಲಿ ನಿಂತುಕೊಂಡುಬಿಟ್ಟದ್ದಳು.

ಈ ಸ್ಥಿತಿಯಲ್ಲಿ ಒಂದು ಕ್ಷಣ ಕ್ರಮಿಸಲು, ವೆಂಕಾಜಿಯಲ್ಲಿ ಪಾಪಮೂಲವಾದ ಭೂತಾ ವೇಶವಾಗಿ, ಅವನ ಮೈಮೇಲಿನ ಎಚ್ಚರವೂ ತಪ್ಪಿತು. ಆ ದುಷ್ಟನು ಕಾಶಿಯನ್ನು ಕುರಿತು– ಕಾಶೀ, ಹುಲಿಯಮೇಲೆ ಹೆಣ್ಣು ಚಿಗರಿಯ ಹಾರಿಕೆಯೇ? ನಾನು ಹುಲಿ, ನೀನು ಹೆಣ್ಣು ಚಿಗರೆ. ನೀನು ನನ್ನನ್ನು ಹಿಂದಕ್ಕೆ ಸರಿಸಿದರೆ, ಅದೊಂದು ಅಡವಿಯೊಳಗಿನ ಅದ್ಭುತ. ಚಮತ್ಕಾರ ವೆಂದು ಎಲ್ಲರೂ ತಿಳಿದುಕೊಂಡಾರು! ಇಗೋ, ನಾನು ಬಲಾತ್ಕಾರದಿಂದ ನಿನ್ನ ಪಾಣಿಗ್ರಹಣ ಮಾಡಿಬಿಡುವೆನು ನೋಡು, ಎಂದು ನುಡಿದು, ವಾಘನು ಮುಂದಕ್ಕೆ ಬಂದು ಕಾಶಿಯ ಬಲಗೈ ಯನ್ನು ಹಿಡಿಯಹೋಗಲು, ಕಾಶಿಯು—''ಥೂ ಚಾಂಡಾಲಾ, ಹಾಳಾಗಿ ಹೋಗು. ಸರಿ

ಓಂದಕ್ಕೆ'' ಅನ್ನುತ್ತ ಸರಕ್ಕನೆ ಕಠಾರಿಯನ್ನು ಹಿರಿದು ವಾಘನ ಬಲಹಸ್ತಕ್ಕೆ ಇರಿಯಲು, ಅದರ ನರಗಳು ಹರಿದು, ಆತನು ಚಿಟ್ಟನೆ ಚೀರಿ ನೆಲಕ್ಕೆ ಬಿದ್ದನು! ಆಗ ಕಾಶಿಯು ಕಠಾರಿಯ ರಕ್ತವನ್ನು ಒರಿಸುತ್ತ ಕ್ರೋಧಾವೇಶದಲ್ಲಿಯೇ ತನ್ನ ಸ್ಥಳಕ್ಕೆ ಹೋಗಿಬಿಟ್ಟಳು!

# ಮಹಾತ್ಮರ ಸಂದೇಶ

ವಿಂಧ್ಯಾದ್ರಿಯ ಪರ್ವತಶ್ರೇಣಿ; ಭಗವಾನ್ ಶ್ರೀ ಸೂರ್ಯ ನಾರಾಯಣನು ಪಶ್ಚಿಮ ದಿಕ್ಕಿನ ಕ್ಷಿತಿಜದ ಕಡೆಗೆ ಇಳಿಯತೊಡಗಿದ್ದನು. ಹೊತ್ತು ಇಳಿಮುಖವಾಗಿತ್ತು. ಪಶ್ಚಿಮದಿಕ್ಕಿನ ಪರ್ವತಗಳು ಆ ದಿನಮಣಿಯನ್ನು ಎದುರುಗೊಳ್ಳಲು ಆತುರಪಡುತ್ತಿರುವಂತೆ, ಆಕಾಶ ಮಂಡಲವನ್ನು ಭೇಧಿಸಿ ಮೇಲಕ್ಕೆ ನೋಡುತ್ತಲಿದ್ದವು. ಆ ಪರ್ವತಗಳ ಮೇಲಿನ ಗಹನವಾದ ಅರಣ್ಯದೊಳಗಿನ ಗಿಡಬಳ್ಳಿಗಳು ಚಿಗಿತು ಹಚ್ಚಗೆ ಹಸರು ಮುರಿಯುತ್ತಿದ್ದದ್ದರಿಂದ, ಆ ಶಿವನೇರಿ ದುರ್ಗದ ಗುಡ್ಡಗಾಡು ಪ್ರದೇಶವು, ಶ್ರೀ ಸೂರ್ಯನಾರಾಯಣನ ಸ್ವಾಗತಕ್ಕಾಗಿ ಹಸಿರು ವಸ್ತ್ರ ದಿಂದ ಅಲಂಕೃತವಾಗಿರುವಂತೆ ತೋರುತ್ತಿತ್ತು. ಶಿವನೇರಿ ದುರ್ಗದ ''ಸಿಂಹ'' ಎಂಬ ಹೆಸರಿನ ಮಹಾದ್ವಾರದ ಮೇಲೆ ನಿಲ್ಲಿಸಿದ್ದ ಮರಾಟರ ಪ್ರಸಿದ್ಧವಾದ ಭಗವೀಧ್ವಜವು ಗಾಳಿಯಿಂದ ನರ್ತನ ಮಾಡತ್ತಿರುವಾಗ, ಸ್ವರಾಜ್ಯೋದ್ಯದ ಆನಂದದ ಸೂಚನೆಯನ್ನು ಮಹಾರಾಷ್ಟ್ರಕ್ಕೆ ಮಾಡುತ್ತಿರುವಂತೆ ತೋರುತ್ತಿತ್ತು. ಆ ದುರ್ಗವೇರಿ ಹೋಗುವ ಮಾರ್ಗವು ಸಾಧಾರಣ ಪ್ರಶಸ್ತವಾಗಿದ್ದು, ಮೇಲಕ್ಕೆ ಹೋದಹೋದಂತೆ ಅದು ಅಂಕಡೊಂಕಾಗುತ್ತ ನಡೆದಿತ್ತು. ಆ ಮಾರ್ಗದ ಎರಡೂ ಮಗ್ಗಲುಗಳಲ್ಲಿ ಕಟ್ಟಡದ ದೊಡ್ಡ ದೊಡ್ಡ ಕಲ್ಲುಗಳು ಬಿದ್ದಿದ್ದವು. ಅವು ಗಳಲ್ಲಿ ಕೆಲವನ್ನು ಉಪ್ಪಾರರು ಹೊಡೆದು ಸಮಮಾಡುತ್ತಿದ್ದರು. ಹೊಡೆದು ಸಮಮಾಡಿದ ಕಲ್ಲುಗಳನ್ನು ಆಳುಗಳು ದುರ್ಗದ ಮೇಲೆ ಒಯ್ಯುತ್ತಿದ್ದರು. ಆ ಕಲ್ಲುಗಳನ್ನು ಉಪ್ಪಾರರು ಗಚ್ಚಿನಲ್ಲಿ ಕೂಡಿಸಿ, ದುರ್ಗದ ಸಡಲಿದ ಭಾಗವನ್ನು ಗಟ್ಟಿ ಮಾಡುತ್ತಿದ್ದರು. ಹೀಗೆ ಶಿವನೇರಿ ದುರ್ಗವನ್ನು ಭದ್ರಪಡಿಸುವ ಕೆಲಸವು ಒಳ್ಳೇ ಒತ್ತರದಿಂದ ನಡೆದಿತ್ತು. ಕೆಲಸಗಾರರ ಕಾರ್ಯ ನಿಷ್ಠೆಯನ್ನು ನೋಡುವವರಿಗೆ, ಅವರ ಕೆಲಸದಲ್ಲಿ ಗುತ್ತಿಗೆಯ ಕೆಲಸದ ಟಕಾರಿಕೆಯೂ, ಕೂಲಿಯ ಕೆಲಸದ ಮೈಗಳ್ಳತನವೂ ತೋರದೆ, ಎಲ್ಲರೂ ತಮ್ಮ ತಮ್ಮ ಮನೆಯ ಕೆಲಸ ಮಾಡುತ್ತಿರುವಂತೆ ತೋರುತ್ತಿತ್ತು.

ಹೀಗಿರುವಾಗ, ಶಿವನೇರಿಯ ಕೆಳಗಡೆಯ ದಟ್ಟವಾದ ಗಿಡಗಳ ಗುಂಪಿನೊಳಗಿನ ಕಾಲದಾರಿಯಿಂದ ಯಾರೋ ನಾಲ್ವರು ಪ್ರವಾಸಿಗಳು ಗುಡ್ಡವನ್ನೇರಿ ಬರುತ್ತಿದ್ದರು. ಅವರಲ್ಲಿ ಒಬ್ಬರು ಭಗವೀ ವಸ್ತ್ರಗಳನ್ನೂ, ಉಳಿದವರು ಬಿಳಿಯ ವಸ್ತ್ರಗಳನ್ನೂ ಧರಿಸಿದ್ದರು. ಅವರ ಉಡಿಗೆ-ತೊಡಗೆಗಳ ಮೇಲಿಂದ, ಅವರು ಬ್ರಾಹ್ಮಣರೆಂಬದು ನೋಡುವವರಿಗೆ ಒಡೆದು ಕಾಣುತ್ತಿತ್ತು. ಅವರು ವೇಗದಿಂದ ಗುಡ್ಡವನ್ನೇರುತ್ತಿರಲು, ಅರ್ಧತಾಸಿನಲ್ಲಿ ಅವರು ಆಳುಗಳ

ಕೆಲಸ ನಡೆದಲ್ಲಿಗೆ ಬಂದರು. ಆ ಪ್ರವಾಸಿಗರ ಮುಖದಲ್ಲಿ ಉಜ್ವಲ ಬ್ರಹ್ಮತೇಜಸ್ಸು ಉಕ್ಕು ತ್ತಲಿತ್ತು. ಆ ತೇಜಸ್ಸನ್ನು ನೋಡಿದಕೂಡಲೆ, ಕೆಲಸಗಾರರ ಕೈಗಳು ತಾವಾಗಿ ಮುಗಿಯುತ್ತಿದ್ದವು. ಆಗಿನಕಾಲದಲ್ಲಿ ಬ್ರಾಹ್ಮಣರ ಬ್ರಹ್ಮಕರ್ಮದ ಲೋಕವು ಈಗಿನಷ್ಟು ಆಗಿರದ್ದರಿಂದ, ಬ್ರಾಹ್ಮಣರ ಮುಖ ನೋಡಿದಕೂಡಲೆ ನೋಡುವವರಿಗೆ ''ಇವರು ಬ್ರಾಹ್ಮಣರು'' ಎಂಬ ಗುರುತು ಸಹಜವಾಗಿ ಹತ್ತುತ್ತಿತ್ತು. ಈಗಿನಷ್ಟು ಆಗ ವೇಷಭೂಷಣಗಳ ಬದಲಾವಣೆಯು ಆಗದಿರುವದರಿಂದ ಬ್ರಾಹ್ಮಣರ ಆ ಬಾಹ್ಯ ಚಿಹ್ನ ಗಳಿಂದಲೂ ಇವರು ಬ್ರಾಹ್ಮಣರೆಂದು ಗೊತ್ತು ಹಚ್ಚಬಹುದಾಗಿತ್ತು. ಅದರಂತೆ, ಸಮರ್ಥ ರಾಮದಾಸರು, ಮೋರಯಾ ಗೋಸಾವಿಗಳು, ರಂಗನಾಥ ಸ್ವಾಮಿಗಳು ಮೊದಲಾದ ಹಲವು ಜನ ಬ್ರಾಹ್ಮಣ ಸಾಧುಸತ್ಪುರುಷರು, ತಮ್ಮ ಬುದ್ಧಿಪ್ರಭಾವ ವಿಶೇಷ ದಿಂದಲೂ, ಸತ್ಪುರುಷತ್ವದ ದಿವ್ಯ ತೇಜದಿಂದಲೂ ಶಿವಾಜಿಯಂಥ ಮಹಾ ತೇಜಸ್ವಿ ಅವತಾರಿ ಪುರುಷನ ಮುಂದೆಯೂ, ಗುರುತ್ವವುಳ್ಳವರಾಗಿದ್ದರು. ಇದು ಅಲ್ಲದೆ ತುಕಾರಾಮರಂಥ ಮಹಾ ಭಗವದ್ಭಕ್ತರಾದ ಬ್ರಾಹ್ಮಣೇತರ ಸತ್ಪುರುಷರು, ಸನಾತನ ವೈದಿಕ ಧರ್ಮದ ಕಟ್ಟಳೆಗಳನ್ನು ಮುರಿದು ಸ್ವೇಚ್ಛಾಚಾರಿಗಳಾಗದೆ, ತಮ್ಮ ತಮ್ಮ ವರ್ಣಾಶ್ರಮ ಧರ್ಮಗಳ ನಿಯಮಗಳಂತೆ ಪರಸ್ಪರರು ವಿಕಲ್ಪ ಭಾವವಿಲ್ಲದೆ ಒಬ್ಬರನ್ನೊಬ್ಬರು ಯಥಾ ಯೋಗ್ಯವಾಗಿ ಮನ್ನಿಸುತ್ತಿದ್ದರು;' ಆದ್ದರಿಂದ ಆ ಬ್ರಾಹ್ಮಣ ಪ್ರವಾಸಿಗಳು ಗುಡ್ಡವೇರುತ್ತ ಬರುತ್ತಿರಲು, ಎಲ್ಲ ಕೆಲಸಗಾರರು ತಮ್ಮ ತಮ್ಮ ಭಾವಿಕತನದ ಮಾನವಿದ್ದಂತೆ, ಯಾರು ಕುಳಿತಲ್ಲಿಯೇ ತಲೆಬಾಗಿ ಅವರಿಗೆ ಕೈಮುಗಿಯುವರು, ಯಾರು ಎದ್ದುನಿಂತು ಕೈಮುಗಿಯು ವರು; ಯಾರು ಸಾಷ್ಟಾಂಗ ನಮಸ್ಕಾರ ಮಾಡುವರು. ಆ ಪ್ರವಾಸಿಗರ ಗುರುತು ಹತ್ತಿದವರಂತು, ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಎದ್ದು ಕೈಜೋಡಿಸಿ ಕೊಂಡು ಆ ಭಗವೀ ವಸ್ತ್ರದ ಮಹಾತ್ಮನು ಹೋಗಲು ಅಪ್ಪಣೆ ಕೊಡುವವರೆಗೆ ಅವರು ಬೆನ್ನುಹತ್ತಿ ಹೋಗುವರು. ಹೀಗೆ ಬಹುಜನರ ಮಾನ್ಯತೆ ಪಡೆಯುತ್ತ ಆ ಪ್ರವಾಸಿಗರು ಮುಂದೆ ಮುಂದೆ ಹೋಗುತ್ತಿರಲು, ಕೆಲಸ ಗಾರರಲ್ಲಿ ಗತಾನುಗತಿಕತೆಯು ಹೆಚ್ಚುತ್ತ ಪ್ರತಿ ಒಬ್ಬ ಕೆಲಸಗಾರನು ಪ್ರವಾಸಿಗರನ್ನು ಮನ್ನಿಸ ಹತ್ತಿದನು.

ಹೀಗೆ ಸರ್ವಸಾಮಾನ್ಯರಾಗಿ ಆ ಪ್ರವಾಸಿಗರು ಮೇಲಕ್ಕೆ ಹೋಗುತ್ತಿರುವಾಗ, ಆ ಕೆಲಸಗಾರರ ವರಿಷ್ಠಾಧಿಕಾರಿಗೆ ಆ ಪ್ರವಾಸಿಗರ ದರ್ಶನವಾಯಿತು. ಕೂಡಲೆ ಆ ಅಧಿಕಾರಿಯು ಆ ಭಗವೀವಸ್ತ್ರದ ಮಹಾತ್ಮನ ಚರಣಗಳ ಮೇಲೆ ಮಸ್ತಕವಿಟ್ಟು ಸಾಷ್ಟಾಂಗ ನಮಸ್ಕಾರ ಮಾಡಿದನು. ಆಗ ಆ ಮಹಾತ್ಮನು ತನ್ನ ಮುಂದೆ ಸಾಷ್ಟಾಂಗವೆರಗಿರುವ ಆ ವರಿಷ್ಠಾಧಿಕಾರಿ ಯನ್ನು ಆದರದಿಂದ ಹಿಡಿದೆತ್ತಿ, ಆತನನ್ನು ಕುರಿತು—''ಏಸಾಜೀ, ಎಲ್ಲ ಕ್ಷೇಮವೇ? ಮಹಾರಾಜರು ದುರ್ಗದಲ್ಲಿರುವರೆಯೇ? ಅವರಿಗೆ ಕುಶಲವಷ್ಟೇ?'' ಎಂದು ವಿಚಾರಿಸಲು, ಏಸಾಜಿ ಕಂಕನೆಂಬ ಹೆಸರಿನ ಆ ಶಿವಾಜಿಯ ಬಾಲಮಿತ್ರನು ಅತ್ಯಂತ ವಿನಯದಿಂದ ಕೈಜೋಡಿಸಿ ಕೊಂಡು ತಲೆಬಾಗಿಸಿ—'' ಚರಣಕೃಪೆಯಿಂದ ಮಹಾರಾಜರ ಪೋಷಣದಲ್ಲಿ ನಾವೆಲ್ಲರೂ ಕುಶಲರು! ಪ್ರಭುಗಳು ದುರ್ಗದಲ್ಲಿಯೇ ಇರುವರು; ಚರಣಗಳ ದರ್ಶನಕ್ಕೆ ಬರುವ

ವಿಚಾರವನ್ನು ಮಹಾರಾಜರು ಇಂದೇ ತೆಗೆದಿದ್ದರು.'' ಎಂದು ಹೇಳಲು, ಆ ಮಹಾತ್ಮನು– ಏನು? ಇಷ್ಟು ಬೇಗನೆ ಮಹಾರಾಜರಿಗೆ ನಮ್ಮ ಚಿಂಚವಡದ ದೇವಸ್ಥಾನದ ಸುಲಿಗೆಯ ಸುದ್ದಿಯು ಗೊತ್ತಾಯಿತೇ? ನಮ್ಮ ಶಿವಪ್ರಭುವಿನ ಚಾರುಚಕ್ಷುಗಳು ಅತ್ಯಂತ ತೀಕ್ಷ್ಣವಾದ ವೆಂಬದರಲ್ಲಿ ಸಂಶಯವಿಲ್ಲ! ಪ್ರಭೂ, ಶಿವಬಾ, ನೀನು ನಿಜವಾಗಿಯೂ ಗೋ–ಬ್ರಾಹ್ಮಣರ ಪ್ರತಿಪಾಲಕನು ನಮ್ಮ ಅನಾಥ ಬ್ರಾಹ್ಮಣರ ಮೇಲೆ ನಿನ್ನ ವಾತ್ಸಲ್ಯವೆಷ್ಟು! ಇಂತಹ ಹಲವು ಉಪಾಧಿಮಗ್ನನು ನೀನು ನನ್ನ ದರ್ಶನಕ್ಕೆ ಬರಬೇಕೆಂದೆಯಾ? ನಿನ್ನ ಈ ಭಾವಿಕತನಕ್ಕೆ ಶ್ರೀ ಮಂಗಲಮೂರ್ತಿಯು ಪ್ರಸನ್ನನಾಗದೆ ಹೇಗೆ ಇದ್ದಾನು? ನಿನ್ನಿಂದ ಸ್ವರಾಜ್ಯಸ್ಥಾಪನೆಯಾಗಿ ಅದರ ಸುಗಂಧವು ದಿಗಂತದಲ್ಲಿ ವ್ಯಾಪಿಸದೆ ಹೇಗೆ ಇದ್ದೀತು? ಏಸಾಜಿ, ನಮ್ಮ ಶಿವಬಾನ ಸೌಜನ್ಯದಿಂದ ನನ್ನ ಅಂತರಾತ್ಮನು ಸಂತುಷ್ಟನಾದನು; ನನ್ನ ಮಾರ್ಗಾಯಾಸವು ಅಳಿದು ಹೋಯಿತು! ಅಪ್ಪಾ, ಏಸೂ, ಶಿವರಾಯನ ಬಾಲಮಿತ್ರನೆನಿಸುವ ನೀನೂ ಧನ್ಯನು, ಶಿವರಾಯನ ಗುರುವೆನಿಸುವ ಗೋಸಾವಿಯು ನಾನೂ ಧನ್ಯನು! ಶಿವರಾಯನಂಥರಾಷ್ಟ್ರ ಜ್ಯೋತಿಯನ್ನು ಹೆತ್ತಿರುವ ಮಹಾರಾಷ್ಟ್ರ ಭೂಮಾತೆಯೂ ಧನ್ಯಳೇ ಸರಿ!

ಹೀಗೆ ನುಡಿಯುವಾಗ ಆ ಮೋರಯಾ ಗೋಸಾವಿಗಳ ಕಣ್ಣುಗಳೊಳಗಿಂದ ಆನಂದ ಬಾಷ್ಪಗಳು ಸುರಿಯಹತ್ತಲು, ಅವರ ಶಿಷ್ಯರ ಕಣ್ಣುಗಳೊಳಗಿಂದಲೂ, ಏಸಾಜಿಯ ಕಣ್ಣು ಗಳೊಳಗಿಂದಲೂ ಆನಂದಾಶ್ರುಗಳು ಸುರಿದವು. ಅವರ ಕುತ್ತಿಗೆಯ ಶಿರಗಳು ಬಿಗಿದವು. ಆಗ ಶಿವರಾಯನ ಗಂಭೀರ ಮೂರ್ತಿಯು ಅವರ ಹೃದಯದಲ್ಲಿ ಮೂಡಲು, ಅವರ ಆನಂದಕ್ಕೆ ಮೇರೆಯಿಲ್ಲದಾಯಿತು! ಗೋಸಾವಿಯವರ ಆನಂದೋದ್ರೇಕವು ಕಡಿಮೆಯಾಗಲು, ಅವರು ಶಿವರಾಜನನ್ನು ಪ್ರತ್ಯಕ್ಷವಾಗಿ ನೋಡಲು ಆತುರದಿಂದ ಮುಂದಕ್ಕೆ ಸಾಗಿದರು. ಸತ್ಸಮಾಗಮದ ಈ ಸುಪ್ರಸಂಗವನ್ನು ನೋಡಿ, ಕೆಲಸಗಾರರಿಗೆ ತಮ್ಮ ಕೆಲಸಗಳ ಮರವಾಗಿ ಹೋಗಿ, ಆ ಪ್ರಸಂಗವನ್ನು ಎವೆ ಹಾಕದೆ ನೋಡುತ್ತ ತಮ್ಮ ಕೆಲಸ ಮರೆತು ಸುಮ್ಮನೆ ಕುಳಿತುಕೊಂಡಿದ್ದರು. ಗೋಸಾವಿಗಳು ಸಪರಿವಾರ ಮುಂದಕ್ಕೆ ಸಾಗಲು, ಆ ಕರ್ತವ್ಯನಿಷ್ಠ ಕೆಲಸಗಾರರು ಲಗಬಗೆ ಯಿಂದ ತಮ್ಮ ತಮ್ಮ ಕೆಲಸಗಳಲ್ಲಿ ತೊಡಗಿದರು. ಇಷ್ಟರಲ್ಲಿ ಏಸಾಜಿಯ ಅಪ್ಪಣೆಯಂತೆ ಒಬ್ಬ ಸೇವಕನು ಓಡುತ್ತ ಹೋಗಿ, ಮಹಾರಾಜರಿಗೆ ಮೋರಯಾ ಗೋಸಾವಿಗಳು ಬಂದಿರುವ ಸುದ್ದಿಯನ್ನು ಹೇಳಿದನು. ಕೂಡಲೆ ಮಹಾರಾಜರು ಅವಸರದಿಂದ ಗೋಸಾವಿಯವರ ದರ್ಶನಕ್ಕಾಗಿ ಹೊರಟರು. ಧನ್ಯರಾದ ಆ ಗುರು–ಶಿಷ್ಯರಿಬ್ಬರ ಸಮಾಗಮವು ''ಸಿಂಹ'' ಮಹಾದ್ವಾರದಲ್ಲಿಯೇ ಆಯಿತು.

ಶಿಷ್ಯವಾತ್ಸಲ್ಯದ ಮೋರಯಾ ಗೋಸಾವಿಗಳ ಹೃದಯದಲ್ಲಿ ಶಿವಾಜಿಯ ಪ್ರತಿಮೆಯು ಒಡಮೂಡಿತ್ತೆಂದು ಹಿಂದೆ ಹೇಳಿದೆಯಷ್ಟೆ? ಅದರಂತೆ, ಗುರುಭಕ್ತನಾದ ಭಾವಿಕ ಶಿವರಾಯನ ಹೃದಯದಲ್ಲಿಯೂ ಗೋಸಾವಿಗಳ ಪ್ರತಿಮೆಯು ಮೂಡಿತ್ತು. ಇಂತಹ ಅಕೃತ್ರಿಮ ಭಕ್ತಿ–ವಾತ್ಸಲ್ಯಗಳ ಶಿವರಾಯ–ಗೋಸಾವಿಗಳಿಗೆ ಪರಸ್ಪರರನ್ನು ಕಂಡಾಗ, ತಮ್ಮ ತಮ್ಮ ಇಷ್ಟ ವಸ್ತುಗಳ ಜೋಡಿಗಳ ದರ್ಶನವಾದಂತಾಗಿ, ಅವರಿಗೆ ಪ್ರತ್ಯಕ್ಷ ಭೆಟ್ಟಿಯಾಗುವ ಮೊದಲು

ಆಗಿದ್ದ ಆನಂದದ ಇಮ್ಮಡಿ ಆನಂದವಾಯಿತು! ಶಿವರಾಯನು ಆನಂದದ ಭರದಲ್ಲಿ ಗುರು ಚರಣಗಳಿಗೆ ಎರಗಿರಲು, ಗೋಸಾವಿಗಳು ಆತನನ್ನು ಆತುರದಿಂದ ಹಿಡಿದೆತ್ತಿ ವಾತ್ಸಲ್ಯ ಗದ್ಗದ ಸ್ವರದಿಂದ– ಶಿವಬಾ, ಈ ಗಾಣಪತ್ಯನಿದ್ದಲ್ಲಿಗೆ ನೀನು ಬರಬೇಕೆಂದು ಮಾಡಿದ್ದೆಯಾ? ನಿನ್ನಂಥ ಸಮರ್ಥನಾದ ಧರ್ಮಿಷ್ಠ ರಾಜನು, ನಮ್ಮಂಥ ಪರಾಧೀನರಾದ ಉಪಾಸಕರ ಸಂರಕ್ಷಣ ಮಾಡುವಲ್ಲಿ ಟೊಂಕಕಟ್ಟಿ ನಿಂತಿರುವಾಗ, ವೆಂಕಾಜಿ ವಾಘನಂಥ ದುಷ್ಟರ ಶಾಸನವು ಆಗದೆ ಹೇಗೆ ಉಳಿಯುವದು? ಶಿವಬಾ, ನಿನ್ನ ಜೀವಕ್ಕೆ ಎಳ್ಳಷ್ಟು ಸುಖವಿಲ್ಲ; ಹಗಲು ದುಷ್ಟಶಾಸನ– ಶಿಷ್ಟಪರಿಪಾಲನ ತತ್ಪರನಾಗಿರಬೇಕು, ರಾತ್ರಿ ಅವುಗಳ ಉಪಾಯ ಶೋಧಿಸುತ್ತ ನಿದ್ದೆಗೆಡಬೇಕು! ಹೀಗೆ ಭಗವಾನ್ ಸೂರ್ಯ ನಾರಾಯಣನಂತೆ ಸದಾ ಲೋಕಹಿತ ತತ್ಪರನಾಗಿರುವ ನಿನಗೆ ಊಟ–ನಿದ್ದೆಗಳ ಪರಿವೆಯಾದರೂ ಹೇಗೆ ಇದ್ದೀತು? ಧರ್ಮಮೂರ್ತಿಯೇ, ಗೋಬ್ರಾಹ್ಮಣ ಪ್ರತಿಪಾಲಕಾ, ನಿನ್ನ ಈ ಲೋಕಹಿತತತ್ಪರತೆಗಾಗಿ ಇಡಿಯ ಲೋಕವೇ ನಿನಗೆ ಲುಬ್ಧವಾಗಿ ಹೋಗಿರಲು, ಆ ಲೋಕದ ಪುಣ್ಯಪ್ರಭಾವವು ನಿನ್ನ ಸತ್ವವನ್ನು ವೃದ್ಧಿಗೊಳಿಸುತ್ತಿರುವದು! ಶಿವಬಾ ನೀಚನಾದ ವೆಂಕಾಜಿ ವಾಘನು ನನ್ನ ಉಪಾಸ್ಯ ದೈವತವಾದ ಬಂಗಾರದ ಗಣಪತಿಯನ್ನು ಒಯ್ದಿರುವನೆಂದು ತಿಳಿದು ನೀನು ಅಸಮಾಧಾನ ಪಡಬೇಡ. ಎಲೈ ಮಾತಾಪಿತೃ ಭಕ್ತನಾದ ಶಿವರಾಯನೇ, ಸ್ವರಾಜ್ಯ ಸ್ಥಾಪನದ ಮಹಾಕಾರ್ಯದಲ್ಲಿ ನಿನಗೆ ಉಂಟಾಗಿರುವ ಹಣದ ತೊಂದರೆಯನ್ನು ದೂರ ಮಾಡುವದಕ್ಕಾಗಿ, ನನ್ನ ಹೃದಯಸ್ಥ ಉಪಾಸ್ಯ ಗಣಪತಿಯ ಪ್ರತೀಕವಾದ ಸುವರ್ಣದ ಗಣಪತಿಯು, ನಿನಗಾಗಿ ಆ ದುಷ್ಟ ವಾಘನ ಭಾಂಡಾರವನ್ನೆಲ್ಲ ಬಳಕೊಂಡು ಬರುವದಕ್ಕಾಗಿ ತಾನಾಗಿ ಆತನ ಸಂಗಡ ಹೋಗಿರುವನೆಂದು ತಿಳಿ. ಆದರೆ ಶಿವಬಾ, ಎಲ್ಲ ಕ್ಷೇಮವಷ್ಟೆ? ಜೀಜಾಬಾಯಿ ಮಾತೆಯವರು ದುರ್ಗದಲ್ಲಿರುವರಲ್ಲವೇ? ಅವರಿಗೂ ಆರೋಗ್ಯ ವಿರುವದೆಯೇ? ಮಹಾರಾಷ್ಟ್ರ ಭೂಪತೇ, ನಿನ್ನ ಮೇಲೆ ಪ್ರಜೆಗಳ ವಾತ್ಸಲ್ಯವೆಷ್ಟು? ನಂಬಿಗೆ ಎಷ್ಟು? ಅವರಿಗೆ ಹೊತ್ತಿಗೆ ಸಂಬಳ ಮುಟ್ಟದಿದ್ದರೂ, ಯಾವ ವಿಕಲ್ಪವೂ ಇಲ್ಲದೆ ಅವರು ಕಾರ್ಯತತ್ಪರರಾಗಿರುವದನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ಶಿವಬಾ, ನೀನು ಬಹು ಪುಣ್ಯಶಾಲಿಯು ಕಂಡೆಯಾ! ಜೀಜಾಬಾಯಿಯವರ ಪುಣ್ಯೋದರ ಪ್ರಭಾವವೇ ಅಂತಹದು!

ಈ ಮೇರೆಗೆ ಆ ಸರಳಭಾವದ ಮಹಾನುಭಾವನು ತನ್ನ ಹೊಟ್ಟೆಯೊಳಗಿದ್ದಿದ್ದೆಲ್ಲವನ್ನು ಮಾತುಗಳಿಂದ ತಮ್ಮ ಶಿವಬಾನಮುಂದೆ ಬಡಬಡ ತೆಗೆದು ಇಡುವಾಗ, ಇನ್ನೂ ಯಾವ ಸಂಗತಿಯಾದರೂ ಸಂದಿಗೊಂದಿಯಲ್ಲಿ ಉಳಿದುಗಿಳಿದಿರುವದೋ ಏನೋ ಎಂಬದನ್ನು ಹುಡುಕುವವನಂತೆ, ಸುಮ್ಮನಾಗಲು, ಶಿವಬಾನು ಅತ್ಯಂತ ವಿನಯದಿಂದ ಕೈಜೋಡಿಸಿ— ''ಗುರುದೇವಾ, ತಮಗೆ ಮಾರ್ಗಾಯಾಸವು ಬಹಳವಾಯಿತು; ಅಪ್ಪನವರು ಶ್ರೀ ಗುರು ಚರಣ ದರ್ಶನಕ್ಕಾಗಿ ನನ್ನ ಸಂಗಡಲೇ ಬರಬೇಕೆಂದು ಆತುರಪಡುತ್ತಿದ್ದರು.'' ಎಂದು ಹೇಳಲು, ಆ ಸರಳಭಾವದ ಮಹಾನುಭಾವನು ಶಿವಬಾನಿಗೆ—''ಶಿವಬಾ, ನಡೆ, ಬೇಗನೆ ಆ ಸಾಧ್ವಿಯ ದರ್ಶನ ಮಾಡಿಕೊಳ್ಳೋಣ ನಡೆ. ಮಾತಿನಲ್ಲಿ ನಾನು ಬಹಳ ಹೊತ್ತು ಕಳೆದದ್ದರಿಂದ, ಆ

ಸಾಧ್ವಿಯು ಚಡಪಡಿಸುತ್ತಿರಬಹುದು. ಶಿವಬಾ, ಬ್ರಾಹ್ಮಣರ ಸ್ವಭಾವವೇ ಹೀಗೆ. ಮಾತು ಸಿಕ್ಕರೆ ಅವರಿಗೆ ಮಾರುಹೊಲ ಸಿಕ್ಕಹಾಗೆ! ಏನು ಮಾಡಲಿ, ನಿನ್ನನ್ನು ನೋಡಿದ ಕೂಡಲೆ ಎಲ್ಲ ಹೇಳಿ ಬಿಡುವಹಾಗೆ ನನಗೆ ಆದದ್ದರಿಂದ ಹೇಳಿಬಿಟ್ಟೆನು! ನಡೆ, ಇನ್ನು ತಡಮಾಡದೆ ನೆಟ್ಟಗೆ ವಾಡೆಗೇ ಹೋಗೋಣ.

ಈ ಮೇರೆಗೆ ನುಡಿದು ಮೋರಯಾ ಗೋಸಾವಿಗಳು ಶಿಷ್ಯರೊಡನೆ ಮುಂದಕ್ಕೆ ಸಾಗಲು, ಶಿವಬಾನು ವಿನಯದಿಂದ ಅವರನ್ನು ಕರೆದುಕೊಂಡು ತಾಯಿ ಜೀಜಾಬಾಯಿಯವರು ಇರುವ ವಾಡೆಯ ಕಡೆಗೆ ಸಾಗಿದನು. ಹೋಗ ಹೋಗುತ್ತ ಗೋಸಾವಿಯವರು—''ನಾನು ಎಷ್ಟು ತಡಮಾಡಿದೆನಲ್ಲಾ,'' ಎಂದು ತಮ್ಮ ಮನಸ್ಸಿನಲ್ಲಿ ಪಶ್ಚಾತ್ತಾಪಪಡುತ್ತಲಿದ್ದರು. ಹೀಗೆ ಅವರೆಲ್ಲರೂ ಜೀಜಾಬಾಯಿಯವರ ವಾಡೆಯನ್ನು ಹೊಕ್ಕು ಅವರ ಬಳಿಗೆ ಹೋಗಲು, ಆ ಸಾಧ್ವಿಯು ಗೋಸಾವಿಯವರ ಹಾದಿಯನ್ನು ನೋಡುತ್ತ ಕುಳಿತುಕೊಂಡಿದ್ದಳು. ''ಶಿಷ್ಟಾಗಮನೇ ಅನಧ್ಯಾಯಃ'' ಎಂಬಂತೆ ಆ ಸಾಧ್ವಿಯು ಗೋಸಾವಿಗಳ ಆಗಮನದ ಆನಂದದಲ್ಲಿ ತಮ್ಮ ನಿತ್ಯದ ಪುರಾಣಶ್ರವಣವನ್ನು ಕೂಡ ಅಂದು ನಿಲ್ಲಿಸಿಬಿಟ್ಟಿದ್ದಳು. ಜೀಜಾಬಾಯಿಯವರಿಗೆ ಸಾಧುಸಂತರಲ್ಲಿ ಅತ್ಯಂತ ವಿಶ್ವಾಸ; ಅವರ ದರ್ಶನ ಮಾಡಿಕೊಳ್ಳುವ ವಿಷಯದಲ್ಲಿ ಅವರಿಗೆ ಅತ್ಯಂತ ಸಂಭ್ರಮ! ಗೋಸಾವಿಯವರು ಒಳಗೆ ಬರಲು, ಆ ಜೀಜಾಮಾವುಲಿಯು ಗುರುಚರಣಕ್ಕೆರಗಿ ಅತ್ಯಂತ ವಿನಯದಿಂದ ಕೈಜೋಡಿಸಿ ನಿಂತುಕೊಂಡು ಶಿವಬಾನನ್ನು ಕುರಿತು—''ಶಿವಬಾ, ಇಂದು ಸುದಿನವು; ಅಂತೇ ಸಾಧುಸಮಾಗಮದ ಸುಯೋಗವು ಒದಗಿದೆ; ಆದರೆ ಗೋಸಾವಿಯವರು ದಣಿದಿರುವರು, ಸಂಧ್ಯಾಕಾಲವು ಸಮೀಪಿಸುತ್ತ ಬಂದಿರುವದು; ಆದ್ದರಿಂದ ಮೊದಲು ಅವರ ನಿತ್ಯ ಕರ್ಮಾನುಷ್ಠಾನಕ್ಕೆ ಅನುಕೂಲ ಮಾಡಿಸು, ಅವರ ಸಂಜೆಯ ಉಪಾಹಾರದ ವ್ಯವಸ್ಥೆಯಾಗಿ ಅವರು ವಿಶ್ರಾಂತಿ ಹೊಂದಿ, ನಾಳೆ ಬೆಳಗಿನ ಅನುಷ್ಠಾನ ತೀರಿದ ಬಳಿಕ ಉಳಿದ ಮಾತುಗಳು,'' ಎಂದು ಹೇಳಲು, ಮಹದಾಜ್ಞೆಯೆಂದು ನುಡಿದು, ಶಿವರಾಯನು ಗೋಸಾವಿಗಳಿಗೆ ಅನುಷ್ಠಾನಗೃಹಕ್ಕೆ ದಯಮಾಡಿಸಲು ಬೇಡಿಕೊಂಡನು. ಆಗ ಗೋಸಾವಿಯವರು ಜೀಜಾ ಬಾಯಿಯವರಿಗೆ—''ತಾಯೇ, ನಮ್ಮಂಥ ಮಕ್ಕಳ ಚಿಂತೆ ತಾಯಿಗಲ್ಲದೆ ಮತ್ತೆ ಯಾರಿಗಿರಬೇಕು? ಶಿವಬಾನ ತಾಯಿಯ ಶಿಷ್ಟಾಚಾರದ ವಿಷಯದಲ್ಲಿ ಯಾರಿಗೆ ಏನು ಮಾತಾಡುವ ಪ್ರಸಂಗ ಬಂದೀತು?'' ಎಂದು ನುಡಿದು, ಶಿವಬಾನ ಪ್ರಾರ್ಥನೆಯಂತೆ ಆತನನ್ನು ಹಿಂಬಾಲಿಸಿ, ಅನುಷ್ಠಾನ ಗೃಹದ ಕಡೆಗೆ ಶಿಷ್ಯರೊಡನೆ ಸಾಗಿದರು.

ಮರುದಿವಸ ಬೆಳಗಾಯಿತು. ಮೋರಯಾ ಗೋಸಾವಿಗಳವರು ತಮ್ಮ ನಿತ್ಯ ಕ್ರಮದಂತೆ ಬ್ರಾಹ್ಮೀ ಮುಹೂರ್ತದಲ್ಲಿ ಸ್ನಾನಮಾಡಿ, ತಮ್ಮ ನಿತ್ಯ ಕರ್ಮಾನುಷ್ಠಾನದಲ್ಲಿ ತೊಡಗಿದರು. ಅಂದು ಶಿವನೇರಿಯ ದುರ್ಗದೊಳಗಿನ ಜನರಲ್ಲಿಯೂ, ದುರ್ಗದ ಕೆಲಸಗಾರರಲ್ಲಿಯೂ ಗೋಸಾವಿಗಳ ಆಗಮನದ ಸುದ್ದಿಯೇ ಸುದ್ದಿಯು. ''ನಾವು ಯಾರನ್ನೋ ಮಾಡಿ ನೆಟ್ಟಗೆ ನಮಸ್ಕಾರವನ್ನೂ ಮಾಡಲಿಲ್ಲ'' ಎಂದು ಕೆಲಸಗಾರರಲ್ಲಿ ಕೆಲವರು ಪಶ್ಚಾತ್ತಾಪಪಡುತ್ತಿದ್ದರು.

ಮತ್ತೆ ಕೆಲವರು—"ನಾನು ಹಿಂದಕ್ಕೆ ಇಂಥಲ್ಲಿ ಇವರನ್ನು ನೋಡಿದ್ದೆವು; ಅವರು ಮಹಾತ ಪಸ್ವಿಗಳು, ಶಾಪಾನುಗ್ರಹ ಸಮರ್ಥರು; ನಮಗೆ ಎಷ್ಟೋಸಾರೆ ಅವರ ಮಹಾಮಹಿಮೆಯ ಅನುಭವ ಬಂದಿದೆ" ಎಂದು ಗೋಸಾವಿಗಳನ್ನು ಅಭಿನಂದಿಸುತ್ತಿದ್ದರು. ಇನ್ನು ಕೆಲವರು, "ದೊಡ್ಡವರ ಗುರುತನ್ನು ಪಾಮರರು ನಾವು ಏನು ಹಿಡಿಯುವೆವು? ಅನುಗ್ರಹಿಸಿ ಅವರೇ ತಮ್ಮ ಪರಿಚಯವನ್ನು ನಮಗೆ ಮಾಡಿಕೊಟ್ಟರೆ ಮಾಡಿಕೊಡಬೇಕು. ಒಟ್ಟಿಗೆ, ಅವರ ಗುರುತು ಹಿಡಿಯುವ ಯೋಗ್ಯತೆಯು ನಮ್ಮಲ್ಲಿಲ್ಲ— ಅವರ ಸೇವೆ ಮಾಡುವ ಯೋಗ್ಯತೆಯೂ ನಮ್ಮಲ್ಲಿಲ್ಲ! ಅಹಂಕಾರ–ಮಮಕಾರ ಮಗ್ನರಾದ ನಮಗೆ ನಮ್ಮ ಆತ್ಮದ ಗುರುತೇ ಇಲ್ಲದಿರುವಾಗ, ಮಂದಿಯ ಗುರುತು, ಗೋಸಾವಿಗಳಂಥ ಮೋರಯಾ ಅದರಲ್ಲಿ ಮಹಾತ್ಮರ ಗುರುತು ಆಗುವ ಬಗೆಯೇನು?" ಎಂದು ತಮ್ಮನ್ನು ಹೀಯಾಳಿಸಿ ಕೊಳ್ಳುತ್ತಿದ್ದರು.

ಕೆಲಸಗಾರರ ಈ ಉದ್ಗಾರಗಳು ನಿರರ್ಥಕವಾದವಲ್ಲ, ಸ್ವಸ್ವರೂಪವರಿಯದ ನಮ್ಮಂಥ ಪಾಮರರು ಮಹಾತ್ಮರನ್ನು ಗುರುತಿಸಲಾರೆವೆಂಬ ಮಾತು ಸತ್ಯ ಸಿದ್ಧಾಂತವಾಗಿರುವದು. ಆತ್ಮರಲ್ಲಿ ಮಹಾತ್ಮರು, ದುರಾತ್ಮರು ಎಂಬವರಿಬ್ಬರು ಜಗತ್ತಿಗೆ ಒಡೆದು ಕಾಣಿಸುವವರಾಗಿರುವರು. ಯಾವ ಧರ್ಮಗಳಿಗೂ ಕೇಡು ಬಗೆಯದೆ, ಯಾವ ಧರ್ಮಗಳಲ್ಲಿಯೂ ಕೈಹಾಕದೆ, ಸ್ವಧರ್ಮನಿಷ್ಠೆ ಪರಧರ್ಮ ಸಹಿಷ್ಣುತೆಗಳಿಂದ ಸ್ವಧರ್ಮಾನುಷ್ಠಾನ ತತ್ಪರರಾಗಿ, ಜಗತ್ತಿನ ಅಭ್ಯುದಯಕ್ಕೂ, ನಿಃಶ್ರೇಯಸ್ಸಿಗೂ (ಮೋಕ್ಷಕ್ಕೂ) ಆಸ್ಪದ ಉಂಟು ಮಾಡಿ ಕೊಡುವವರು ಮಹಾತ್ಮರು; ಇದಕ್ಕೆ ವಿರುದ್ಧರಾದವರು, ಅಂದರೆ, ತಮ್ಮ ದುರಹಂಕಾರದಿಂದ ಎಲ್ಲ ಧರ್ಮಗಳಲ್ಲಿಯೂ ಒಂದಿಲ್ಲೊಂದು ದೋಷವನ್ನು ಎಣಿಸುತ್ತ, ಎಲ್ಲ ಧರ್ಮಗಳ ಕಟ್ಟಳೆಗಳಲ್ಲಿಯೂ ಕೈಹಾಕಿ ತಿದ್ದುತ್ತ, ಎಲ್ಲ ಧರ್ಮದವರ ಧರ್ಮಶ್ರದ್ಧೆಯನ್ನೂ ಹಾಳು ಮಾಡುತ್ತ, ತಮಗೆ ಸ್ವಧರ್ಮವೆಂಬುದೇ ಇಲ್ಲದಿರುವದರಿಂದ, ಒರಟ ನೀತಿಗೆ ಮಹತ್ವಕೊಡುವ ನೆವದಿಂದ, ಧರ್ಮಾನುಷ್ಠಾನದ ಬದಲು, ಎಲ್ಲ ಧರ್ಮಗಳ ವಿಷಯದಲ್ಲಿ ಅಭಿಪ್ರಾಯ ಕೊಡುವ ನೀಚ ವೃತ್ತಿಯವರಾಗಿ, ಒರಟಿಯಾದ ಧ್ಯಾನ–ಜಪ–ಪಾರಾಯಣಗಳ ಸೋಗಿನಿಂದ ನಿಜವಾದ ಅಭ್ಯುದಯದ ಗುರುತಿಲ್ಲದೆ, ಮೋಕ್ಷದ ಸ್ವರೂಪವರಿಯದೆ, ಜಗತ್ತನ್ನು ಸ್ವೇಚ್ಛಾಚಾರಿಯಾಗ ಮಾಡಿ ಅದನ್ನು ಅಧಃಪತಗೊಳಿಸುವ ಮಹಾದುಷ್ಟರು ದುರಾತ್ಮರೆನಿಸುವರು; ಆದರೆ ಶಿವಾಜಿ ಮಹಾರಾಜರ ಕಾಲದ ಹಿಂದಿನ ಬಹುಕಾಲದಿಂದ ಮಹಾರಾಷ್ಟ್ರದಲ್ಲಿ ಮೋರಯಾ ಗೋಸಾವಿಗಳಂಥ ಹಲವು ಜನ ಮಹಾತ್ಮರ ಪರಂಪರೆಯು ಸಾಗಿಬಂದದ್ದರಿಂದ, ಶಿವರಾಯನಿಗೆ ಮಹಾರಾಷ್ಟ್ರದಲ್ಲಿ ಸುಗಂಧಯುಕ್ತ ಸ್ವರಾಜ್ಯವನ್ನು ಸ್ಥಾಪಿಸಲಿಕ್ಕೆ ಬಹಳ ಅನುಕೂಲವಾಯಿತು; ಯಾಕಂದರೆ, ಶಾಂತಿದಾಯಕ ಸ್ವರಾಜ್ಯ ಸ್ಥಾಪನೆಗೆ ಪ್ರಾಮುಖ್ಯವಾಗಿ ಶುದ್ಧ ಹೃದಯದ ಆವಶ್ಯಕತೆಯು ಇರುವದು! ಇರಲಿ.

ಮೋರಯಾ ಗೋಸಾವಿಗಳ ಅನುಷ್ಠಾನವು ಮುಗಿಯುತ್ತಿರಲು, ಮೂರುತಾಸು ಹೊತ್ತು ಏರಿತು. ಗೋಸಾವಿಗಳು ಅನುಷ್ಠಾನ ಮುಗಿಸಿಕೊಂಡು ಹೊರಗೆ ಬಂದಾಗ, ಜೀಜಾಬಾಯಿ

ಸಾಹೇಬರವರಿಂದ ಕರೆಯಲಿಕ್ಕೆ ಪಲ್ಲಕ್ಕಿಯು ಬಂದಿರುವದನ್ನು ಶಿಷ್ಯರು ಅವರಿಗೆ ಹೇಳಿದರು. ಆಗ ಗೋಸಾವಿಗಳು ತಟ್ಟನೆ ಎದ್ದು ಗಣಪತಿಯ ಪ್ರಸಾದವನ್ನೂ, ಫಲ ಮಂತ್ರಾಕ್ಷತೆಯನ್ನೂ ಪಲ್ಲಕ್ಕಿಯಲ್ಲಿಟ್ಟು ತಾವು ಶಿಷ್ಯರೊಡನೆ ಕಾಲನಡಿಗೆಯಿಂದಲೇ ಪಲ್ಲಕ್ಕಿಯ ಸಂಗಡ ಸಾಗಿದರು. ಹೀಗೆ ಗೋಸಾವಿಗಳು ಜೀಜಾಬಾಯಿಯವರ ಬಳಿಗೆ ಹೋಗಲು ಆಗ ಜೀಜಾಬಾಯಿಯವರೂ, ಶಿವರಾಯನೂ ಆ ಮಹಾತ್ಮರ ಚರಣಗಳಿಗೆ ವಂದಿಸಿ ಅವರನ್ನು ಉಚ್ಚಾಸನದಲ್ಲಿ ಕುಳ್ಳಿರಿಸಿ, ಆ ಗುರುಗಳ ಪಾದಪೂಜೆ ಮಾಡಿದಬಳಿಕ ಗೋಸಾವಿಯವರ ಸೂಚನೆಯಂತೆ ತಾವೂ ಆಸನಗಳ ಮೇಲೆ ಕುಳಿತುಕೊಂಡರು. ಆಗ ಜೀಜಾಬಾಯಿಯವರು ಗೋಸಾವಿಯವರನ್ನು ಕುರಿತು—

ಜೀಜಾಬಾಯಿ—''ಮಹಾಸ್ವಾಮಿಗಳು ಚಿಂಚವಡದಿಂದ ಕಾಲನಡಿಗೆಯಿಂದಲೇ ಬಂದದ್ದಾಯಿತಲ್ಲ! ವೆಂಕಾಜಿ ವಾಘನ ನೀಚಕೃತಿಯನ್ನು ಕೇಳಿ, ನಮ್ಮ ಶಿವಬಾನು ವ್ಯಸನಪಟ್ಟು ಸನ್ನಿಧಿಗೆ ಬೇಗನೆ ಬರತಕ್ಕವನಿದ್ದನು.

ಗೋಸಾವಿ—ರಾಜಮಾತೇ, ಗಣಪತಿಯ ಪ್ರೇರಣೆಯಾದದ್ದರಿಂದ ನಡೆಯುತ್ತಲೇ ನಾವು ಬಂದುಬಿಟ್ಟೆವು. ತಾಯೀ, ತಪಸ್ವಿಗಳು ಸ್ವಯಂ ದಾಸರೆಂದು ದೊಡ್ಡವರು ಹೇಳುತ್ತಿರುವದರಿಂದ, ನಮ್ಮ ತಪಸ್ವಿ ವೇಷಕ್ಕಾದರೂ ನಮ್ಮ ಕಾಲನಡಿಗೆಯಿಂದ ಭೂಷಣ ಉಂಟಾಗಲಿ. ತಾಯಿ, ಶಿವಭಾನು ಯಾವ ಕೆಲಸ ಮಾಡಬೇಕು – ಯಾವ ಕೆಲಸ ಬಿಡಬೇಕು? ಆತನಿಗೆ ಹಲವು ಕೆಲಸಗಳು; ಆದ್ದರಿಂದ ಆತನಿಗೆ ಸ್ವರಾಜ್ಯಸ್ಥಾಪನದ ಕಾರ್ಯಕ್ಕೆ ಆಸ್ಪದ ದೊರೆಯಬೇಕೆಂದು ಶ್ರೀ ಗಣಪತಿಯೇ ನನ್ನನ್ನು ಈಗ ಇಲ್ಲಿಗೆ ಕಳಿಸಿರಬಹುದು.

ಜೀಜಾಬಾಯಿ—ನಮ್ಮ ಶಿವಬಾನನನ್ನು ಶ್ರೀ ಗುರುಚರಣಗಳ ಮೇಲೆ ಹಾಕಿಬಿಟ್ಟಿರುವೆನು. ಆತನನ್ನು ಅನುಗ್ರಹಿಸಿ ಸರ್ವತೋಪರಿ ರಕ್ಷಿಸುವದು ಸನ್ನಿಧಿಯನ್ನೇ ಕೂಡಿರುವದು. ಈ ವರೆಗೆ ಶಿವಬಾನು ಯಶಸ್ವಿಯಾಗುತ್ತ ಬಂದಿರುವದು, ಕೇವಲ ದೇವಬ್ರಾಹ್ಮಣರ ಆಶೀರ್ವಾದದಿಂದಲೇ ಅಲ್ಲವೆ?

ಗೋಸಾವಿ—ತಾಯೀ, ನಿಮ್ಮ ಶಿವಬಾನು ಸಾಮಾನ್ಯ ಮನುಷ್ಯನಲ್ಲ, ಶಿವಾಂಶನು; ಸಾಕ್ಷಾತ್ ಆದಿಮಾಯೆ ಅಂಬಾಭವಾನಿಯು ಆತನಿಗೆ ಪ್ರಸನ್ನಳಾಗಿರುವಳು; ಮೇಲೆ ರಾಮದಾಸರಂಥ ಸಮರ್ಥರ ವರದ ಹಸ್ತವು ಆತನ ತಲೆಯಮೇಲಿರುವದು! ಇಂಥವನು ಸ್ವರಾಜ್ಯ ಸ್ಥಾಪಕನಾಗುವಲ್ಲಿ ಸಂಶಯವೇನು? ಈ ವಿಷಯದಲ್ಲಿ ಆತನಿಗೆ ನಮ್ಮ ಪೂರ್ಣ ಆಶೀರ್ವಾದವಿರುವದು?

ಜೀಜಾಬಾಯಿ—ಅನುಗ್ರಹಿತಳಾದೆನು. ಶಿವಬಾನೂ ಕೃತಕೃತ್ಯನಾದನು; ಆದರೆ ನಮ್ಮ ಶಿವಬಾನಿಗೆ ಈಗ ಬಂದಿರುವ ದೊಡ್ಡ ತೊಂದರೆಯೆಂದರೆ, ದುಡ್ಡಿನದು! ಈಗ ಎಲ್ಲ ಕಡೆಗೆ ಕೋಟೆಗಳ ದುರಸ್ತಿಯು ನಡೆದಿದೆ; ಹೊಸ ಕೋಟೆ ಕಟ್ಟಬೇಕಾಗಿದೆ; ಸೈನ್ಯವನ್ನು ಹೆಚ್ಚಿಸಬೇಕಾಗಿದೆ; ದುಡ್ಡಿಲ್ಲದ್ದರಿಂದ ಈ ಎಲ್ಲ ಕಾರ್ಯಗಳು ಸಾಗದಾಗಿವೆ. ದುಡ್ಡಿಲ್ಲದ್ದರಿಂದ ಶಸ್ತ್ರಾಸ್ತ್ರಗಳ ಕಾರಖಾನೆಗಳ ಗತಿಯು ಮಂದವಾಗುತ್ತಲಿರುವದು. ಹೊಸ ಆಯುಧಗಳನ್ನು ಕೊಳ್ಳ

ಬೇಕೆಂದರೆ, ಗತಿಯಿಲ್ಲ. ಹೆಚ್ಚಿಗೆ ಹೇಳುವದೇನು? ದುಡ್ಡಿಲ್ಲದ್ದರಿಂದ ಸಾವಿರಾರು ಜನ ಮರಾಠಾ – ಮಾವಳ ದಂಡಾಳುಗಳನ್ನು ನಿರ್ವಾಹವಿಲ್ಲದೆ ಮನೆಗೆ ಹೋಗಹೇಳಬೇಕಾಗಿದೆ. ಮಹಾತ್ಮನ್, ಇನ್ನು ಬೇಗನೆ ದ್ರವ್ಯಾನು ಕೂಲವು ಆಗದಿದ್ದರೆ, ಇದೇ ಈಗ ಒಡೆಯುತ್ತಿರುವ ಮಹಾರಾಷ್ಟ್ರದ ರಾಜ್ಯಾಂಕುರವು, ಮುಸಲ್ಮಾನರ ತಾಪದಿಂದ ಕಮರಿಹೋಗುವ ಸಂಭವವಿರುತ್ತದೆ.

ಗೋಸಾವಿ—ಹೌದು ತಾಯೀ, ನೀನು ಹೇಳುವದು ನಿಜವು; ಆದರೆ ಶಿವಬಾನಿಗೆ ಸ್ವರಾಜ್ಯ ಸ್ಥಾಪಿಸಲು ಪ್ರೇರಣೆ ಮಾಡಿದ ಪರಮಾತ್ಮನಿಗೆ, ಶಿವಬಾನ ದುಡ್ಡಿನ ತೊಂದರೆ ದೂರ ಮಾಡುವದು ದುಸ್ತರವಲ್ಲ! ದುಡ್ಡಿನಿಂದ ಕಾರ್ಯವಾಗದೆ ತಪಸ್ಸಿನಿಂದ ಕಾರ್ಯವಾಗುತ್ತದೆಂಬ ಸಿದ್ಧಾಂತವು, ಶಿವಬಾನ ಅನುಭವಕ್ಕೆ ಬರುವದಕ್ಕಾಗಿ ಆತನಿಗೆ ಹಲವು ವಿಘ್ನಗಳು ಬರುವವು. ಹೀಗೆ ಸ್ವೀಕೃತ ಕಾರ್ಯದಲ್ಲಿ ಬರುವ ವಿಘ್ನಗಳಿಗೆ ಎದೆಗೊಟ್ಟುನಿಂತು, ಕಷ್ಟ–ನಷ್ಟಗಳನ್ನು ಸಹಿಸುತ್ತ ನಿಷ್ಠೆಯಿಂದ ಕಾರ್ಯತತ್ಪರವಾಗಿರುವದೇ ತಪಶ್ಚರ್ಯವು. ಜೀಜಾಬಾಯೀ, ಶಿವಾಜಿಯ ತಪಶ್ಚರ್ಯಕ್ಕೆ ಮೆಚ್ಚಿಯೇ ಚಿಂಚವಡದ ಗಣನಾಥನು ವೆಂಕಾಜಿ ವಾಘನ ಭಾಂಡಾರವನ್ನೆಲ್ಲ ಬಳಕೊಂಡು ಬಂದು ಶಿವಾಜಿಗೆ ಒಪ್ಪಿಸುವದಕ್ಕಾಗಿಯೇ ಆ ದುಷ್ಟನ ಭಾಂಡಾರಗೃಹದಲ್ಲಿ ಹೋಗಿ ಕುಳಿತಿರುವನು; ಹಾಗಿಲ್ಲದಿದ್ದರೆ, ನಮ್ಮ ಆರಾಧ್ಯ ದೇವತೆಯ ಬಾಹ್ಯ ಪ್ರತಿಮೆಯನ್ನು ವಾಘನಂಥ ನೀಚನು ಅಪಹರಿಸಿಕೊಂಡು ಹೋಗಲು ಹೇಗೆ ಸಮರ್ಥನಾದಾನು?

ಜೀಜಾಬಾಯಿ—ಹಾಗಿದ್ದರೆ, ಶಿವಬಾನು ಬೇಗನೆ ಸೈನ್ಯ ತಕ್ಕೊಂಡು ವಾಘನ ಪಾರಪತ್ಯ ಮಾಡಲಿಕ್ಕೆ ಹೋಗಬೇಕಾದೀತಲ್ಲವೆ?

ಗೋಸಾವಿ— ಆ ಕ್ಷುಲಕ ಕಾರ್ಯಕ್ಕಾಗಿ ಶಿವರಾಯನೇನು ಹೋಗುವ ಕಾರಣವಿಲ್ಲ. ಆ ಕಾರ್ಯವನ್ನು ಈವೊತ್ತಿಗೆ ಎಂಟು ದಿನಗಳಲ್ಲಿ ಶಿವಬಾನ ಭಕ್ತನೊಬ್ಬನು ಮಾಡಿಕೊಂಡು ಬಂದು, ಶಿವಬಾನ ಮುಂದೆ ಹಣದ ರಾಶಿಯನ್ನು ಸುರುವುವವನಲ್ಲದೆ, ವೆಂಕಾಜಿ ವಾಘನನ್ನು ಸೆರೆ ಹಿಡಿದುಕೊಂಡು ಬಂದು ಶಿವರಾಯನಿಗೆ ಒಪ್ಪಿಸುವನು.

ಜೀಜಾಬಾಯಿ—(ಶಿವಾಜಿಯನ್ನು ಕುರಿತು) ಶಿವಬಾ, ಮಹಾತ್ಮರ ಭವಿಷ್ಯವಾಣಿಯನ್ನು ಕೇಳಿದಿಯಾ?

ಶಿವಬಾ— ಕೇಳಿದೆನು ತಾಯೀ, ಮಹಾತ್ಮರ ಕೃಪೆಯಿಂದ ನನ್ನ ಚಿಂತೆಯು ದೂರ ವಾಯಿತೆಂದು ಸಮಾಧಾನವನ್ನೂ ಪಟ್ಟಿರುವೆನು!

ಗೋಸಾವಿ—ಶಿವಬಾ, ಇಷ್ಟು ಕೆಲಸವಾಗುವವರೆಗೆ ಈ ಮೋರಯಾ ಗೋಸಾವಿಯ ಗಣಪತಿಯ ಪೂಜೆಯು, ನಿನ್ನ ಈ ಶಿವನೇರಿಗಡದಲ್ಲಿಯೇ ಆಗುವದು.

ಶಿವಬಾ—(ತಲೆಬಾಗಿ ಕೈಜೋಡಿಸಿ) ಅನುಗ್ರಹಿತನಾದೆನು! ಮಹಾತ್ಮನ್, ಆದರೆ ಮಧ್ಯಾಹ್ನಾನುಷ್ಠಾನವಾದ ಬಳಿಕ ಈ ದಾಸನು ಪುನಃ ಸನ್ನಿಧಿಗೆ ಬರಬೇಕೆಂದಿರುವೆನು.

ಗೋಸಾವಿ—ಶಿವಬಾ, ಅವಶ್ಯವಾಗಿ ಬರಬಹುದು. ಲೋಕಕಲ್ಯಾಣಕಾರಕವಾದ ನಿನ್ನ ಸ್ವರಾಜ್ಯಸ್ಥಾಪನದ ಕಾರ್ಯಕ್ಕಾಗಿ ತ್ರಿಕರಣಪೂರ್ವಕವಾಗಿ ಸಹಾಯ ಮಾಡುವದು, ಅನು

ಷ್ಠಾನಗಳಲ್ಲಿ ಮಹಾ ಅನುಷ್ಠಾನವಾಗಿರುವದು! ಮಹಾರಾಷ್ಟ್ರ ಭೂಪತೇ, ನಮ್ಮ ಅನುಷ್ಠಾನದ ಪುಣ್ಯವೆಲ್ಲ ನಿನ್ನದು!

ಈ ಮೇರೆಗೆ ನುಡಿದು ಮೋರಯಾ ಗೋಸಾವಿಗಳು ಶಿವಬಾನ ಉಡಿಯಲ್ಲಿ ಗಣಪತಿಯ ಪ್ರಸಾದವನ್ನೂ, ಫಲ ಮಂತ್ರಾಕ್ಷತೆಯನ್ನೂ ಹಾಕಿ, ತಡಮಾಡದೆ ಮಧ್ಯಾಹ್ನಾನುಷ್ಠಾನಕ್ಕಾಗಿ ಹೊರಟು ನಡೆದರು.

# ಸಂತ್ಸಂಗ ಪ್ರಭಾವ

ಚೌಕ ಗ್ರಾಮದ ಹತ್ತರ ಮಾಥೇರಾನ ಪರ್ವತದ ಮೇಲಿನ ಭಯಂಕರವಾದ ಗವಿಯನ್ನು ವಾಚಕರು ಮರೆತಿರಲಿಕ್ಕಿಲ್ಲ. ಆ ಗವಿಯಿಂದ ನೇತಾಜಿಯು ಶಸ್ತ್ರಗಳನ್ನು ತಕ್ಕೊಂಡು ತನ್ನ ತರುಣ ಪರಿವಾರದೊಡನೆ ಹೊರಟುಹೋದದ್ದೂ ವಾಚಕರ ನೆನಪಿನಲ್ಲಿರ ಬಹುದು. ತನ್ನ ಗುರುಗಳಾದ ಗಣೇಶ ಗೋಸಾವಿಗಳ ಅಪ್ಪಣೆಯಂತೆ, ವೆಂಕಾಜಿ ವಾಘನ ಪಾರಪತ್ಯ ಮಾಡುವದಕ್ಕಾಗಿ ಆತನು ತನ್ನ ತರುಣ ತಂಡಗಳನ್ನು ಪ್ರಯತ್ನಪೂರ್ವಕ ಕೂಡಿಸ ಹತ್ತಿದ್ದನು. ಇತ್ತ ಗೋಸಾವಿಗಳು ಒಂದು ದಿನ ಹಗಲು ಒಂಬತ್ತುತಾಸಿನ ಸುಮಾರಕ್ಕೆ ಗುಹೆಯಲ್ಲಿ ಧ್ಯಾನಸ್ಥರಾಗಿ ಕುಳಿತಿದ್ದವರು, ಒಮ್ಮೆಲೆ ಎಚ್ಚತ್ತು ಗವಿಯ ಹೊರಗೆ ಬಂದು ಕೆಳಗಿಳಿದು ಲೋಹ ಗಡವಿದ್ದ ಕಡೆಗೆ ಹೊರಟುಬಿಟ್ಟರು. ಅವರಿಗೆ ಹಾದಿ ಬಟ್ಟೆಗಳ ಅವಶ್ಯಕತೆಯಿದ್ದಂತೆ ತೋರ ಲಿಲ್ಲ. ಅವರ ಮೈಯಲ್ಲಿ ಒಂದು ಕೇವಿಯ ಕಪನಿ, ತಲೆಗೊಂದು ಕೆಂಪು ಕಿವಿಟೊಪ್ಪಿಗೆ, ಕೈಯಲ್ಲಿ ಒಂದು ಯೋಗದಂಡ, ಹಾಕಿಕೊಂಡದ್ದೊಂದು ಲಂಗೋಟಿ, ಬಗಲಲ್ಲಿ ಒಂದು ಜೋಳಿಗೆ ಇವಿಷ್ಟೇ ಸಾಮಾನುಗಳು ಇದ್ದವು. ಇನ್ನು ಹೇಳದೆ ಮರೆತು ಉಳಿದಿದ್ದ ಪದಾರ್ಥವೊಂದೆಂದರೆ, ಸ್ವಾಮಿಗಳ ಕೈಯೊಳಗಿನ ಗಡುತರವಾದದ್ದೊಂದು ಬಡಿಗೆ. ಅದನ್ನು ಅವರು ತಮ್ಮ ಬಲಗೈ ಯಲ್ಲಿ ಹಿಡಿದಿದ್ದರು. ಅವರ ನಡಿಗೆಯ ಆ ವೇಗವನ್ನೂ, ಅವರ ಆ ಆತುರತೆಯನ್ನೂ ನೋಡಿದರೆ, ಅವರು ಎಲ್ಲಿಗೋ ಬಹು ಬೇಗ ಹೋಗಬೇಕೆಂಬ ಕುತೂಹಲವುಳ್ಳವರಾಗಿದ್ದಾ ರೆಂಬ ಹಾಗೆ ತೋರುತ್ತಿತ್ತು. ಅವರು ಕಾಲುಗಳಲ್ಲಿ ಕಡಾವಿಗೆಗಳನ್ನು ಹಾಕಿಕೊಂಡೇ ಗುಡ್ಡವನ್ನು ನಿರಾಯಾಸದಿಂದ ಇಳಿಯುತ್ತಿದ್ದರು—ಏರುತ್ತಿದ್ದರು! ಹೀಗೆ ಅವರು ಎಡಬಲ ನೋಡದೆ, ಎಲ್ಲಿಯೂ ನಿಲ್ಲದೆ ಅಖಂಡ ಒಂದು ತಾಸು ಕಟ್ಟಡವಿಯಲ್ಲಿ ಹಾದಿ ಬಟ್ಟೆಗಳಿಲ್ಲದೆ ನಡೆದು ಹೋದರು. ಅಷ್ಟರಲ್ಲಿ ಅವರು ಏನಿಲ್ಲೆಂದರೂ ಎರಡು ಹರದಾರಿ ಗಳನ್ನಾದರೂ ನಡೆದು ಹೋಗಿರಬಹುದು. ಹೀಗೆ ಹೋಗುತ್ತಿರುವಾಗ, ಅವರಿಗೆ ಸ್ವಲ್ಪ ದೂರದಲ್ಲಿ ಒಂದು ವಿಶಾಲವಾದ ಸರೋವರವು ಕಾಣಿಸಿತು. ಆಗ ಹೊರಗೆ ಎರಡು ತಾಸು ಹೊತ್ತು ಉಳಿದಿರ ಬಹುದು.

ಗಣೇಶ ಗೋಸಾವಿಗಳು ಹಾಗೆಯೇ ಮುಂದಕ್ಕೆ ಸರೋವರದ ಕಡೆಗೆ ಹೋಗಲು, ಸರೋವರದ ದಂಡೆಯ ಮೇಲೆ ನೂರಾರು ಜನ ಶಸ್ತ್ರಧಾರಿಗಳು ಕುಳಿತುಕೊಂಡಿದ್ದರು.

ಅವರೆಲ್ಲರೂ ಹಿಂದುಗಳೆ. ಅವರ ಮಧ್ಯದಲ್ಲಿ ಒಬ್ಬ ಮುದುಕ, ಒಬ್ಬ ಮುದುಕಿ, ಪ್ರಾಯಸ್ತ ರಾದ ಗಂಡ–ಹೆಂಡಿರಿಬ್ಬರು, ಅವರದೊಂದು ಐದು ವರ್ಷದ ಚಿಕ್ಕ ಗಂಡು ಮಗು, ಇಷ್ಟು ಜನರಿದ್ದರು. ಅವರ ಮುಖಚರ್ಮ–ವೇಷ–ಭೂಷಣಗಳ ಮೇಲಿಂದ, ಅವರು ಬ್ರಾಹ್ಮಣರಿ ರುವರೆಂದು ಯಾರಿಗಾದರೂ ಗೊತ್ತಾಗುವ ಹಾಗಿತ್ತು. ಗಣೇಶ ಗೋಸಾವಿಗಳು ಆ ಜನ ಸಮೂಹದ ಬಳಿಗೆ ಹೋದಕೂಡಲೆ, ಆ ಗೋಸಾವಿಗಳ ದಿವ್ಯ ತೇಜಸ್ಸನ್ನು ನೋಡಿ, ಆ ಸರೋವರದಲ್ಲಿದ್ದವರೆಲ್ಲರೂ ತಟ್ಟನೆ ಎದ್ದು ನಿಂತು ಕೆಲವರು ಅವರನ್ನು ನಮಸ್ಕರಿಸಿದರು, ಕೆಲವರು ಅವರಿಗೆ ಕೈಮುಗಿದರು. ಆಗ ಗೋಸಾವಿಗಳು ಪ್ರಸನ್ನ ಮುದ್ರೆಯ ನಗೆಮೊಗದಿಂದ ಅವರೆಲ್ಲರನ್ನು ಕುರಿತು—''ಸಜ್ಜನರೇ, ಕುಳಿತುಕೊಳ್ಳಿರಿ; ಹೊರಗೆ ಶೀರ ಹೊತ್ತುಹೋಯಿತಲ್ಲ! ಈಗ ನೀವು ಎತ್ತ ಹೋಗತಕ್ಕವರು? ನಿಮ್ಮ ಮುಖ್ಯನಾದ ಹರದೇವನೆಂಬವನು ಒಮ್ಮಿಂದೊಮ್ಮೆ ಮರಣಹೊಂದಲು, ನೀವು ದುಃಖಿತರಾಗಿ ಆತನ ದೇಹ ಸಂಸ್ಕಾರ ಮಾಡುವ ಉದ್ದೇಶ ದಿಂದ ಈ ಸರೋವರದ ಮೇಲೆ ಬಂದು ಕುಳಿತಿರುವರೆಂಬದು, ನಾನು ಧ್ಯಾನಸ್ಥನಾಗಿರುವಾಗ ನನಗೆ ಕಂಡುಬಂದಿತು; ಆದ್ದರಿಂದ ನಾನು ಗಜಾನನ ಪ್ರೇರಣೆಯಿಂದ ನಿಮ್ಮನ್ನು ಎಚ್ಚರ ಗೊಳಿಸುವದಕ್ಕಾಗಿ ಇಲ್ಲಿಗೆ ಧಾವಿಸಿ ಬಂದಿದ್ದೇನೆ. ಯಾತ್ರಸ್ಥರಾಗಿದ್ದ ಈ ಬ್ರಾಹ್ಮಣ ಕುಟುಂಬ ದವರನ್ನು ನೀವು ಸುಲಿದು, ಅವರನ್ನು ಹಿಡಕೊಂಡು ಬಂದಿರುವದರಿಂದ, ಅವರ ಕ್ಷೋಭ ತಟ್ಟಲು ನಿಮಗೆ ಈ ಅನರ್ಥವು ಒದಗಿದೆ. ಬ್ರಾಹ್ಮಣ ಕ್ಷೋಭವು ಸಾಮಾನ್ಯವಾದದ್ದೆಂದು ನೀವು ತಿಳಿಯಬೇಡಿರಿ; ಅದರಲ್ಲಿಯೂ ಈ ಬ್ರಾಹ್ಮಣ ಕುಟುಂಬವು ಸರ್ವಸಾಮಾನ್ಯ ವಾದದ್ದಲ್ಲ. ಇಡಿಯ ಕುಟುಂಬದವರೇ ಮಹಾ ತಪಸ್ವಿಗಳು. ಅವರ ಕ್ಷೋಭವು ನಿಮ್ಮ ಹರಪಾಲ ನನ್ನಷ್ಟೇ ನಾಶಮಾಡಿಬಿಡುವದೆಂದು ನೀವು ತಿಳಿಯಬೇಡಿರಿ; ಆ ಬ್ರಹ್ಮಕ್ಷೋಭವು ನಿಮ್ಮೆಲ್ಲ ರನ್ನು ಪರಿಪರಿಯಾಗಿ ಬಾಧಿಸದೆ ಬಿಡದು.

ಗಣೇಶ ಗೋಸಾವಿಗಳು ಹೀಗೆ ನುಡಿದು ಸುಮ್ಮನಾಗಲು, ಅವರೆಲ್ಲರು ಭಯದಿಂದ ಹೌಹಾರಿ ಕುಳಿತುಕೊಂಡರು. ಈ ಮಹಾತ್ಮರ ಮಾತಿನ ಮೇಲಿಂದ ಇನ್ನುಮೇಲೆ ನಮ್ಮಲ್ಲಿ ಯಾರಿಗೆ ಏನು ಕೇಡಾಗುವದೋ ಎಂದು ಶಂಕಿಸುತ್ತ, ಎಲ್ಲರೂ ಗಣೇಶ ಗೋಸಾವಿಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ—''ಮಹಾತ್ಮರೇ, ಪಾಪಿಗಳಾದ ನಮ್ಮನ್ನು ರಕ್ಷಿಸಿರಿ. ವೆಂಕಾಜಿ ವಾಘನ ಸಹವಾಸದಿಂದ ನಾವು ಈ ವರೆಗೆ ಎಷ್ಟೋ ಜನರನ್ನು ಸುಲಿದೆವು, ಎಷ್ಟೋ ಜನ ರನ್ನು ಕೊಂದೆವು, ಎಷ್ಟೋ ಕುಟುಂಬಗಳ ಘಾತ ಮಾಡಿದೆವು; ಸ್ವಾಮಿ ತಮ್ಮ ಮುಂದೆ ಸುಳ್ಳು ಹೇಳಿ ಯಾವ ನರಕಕ್ಕೆ ಹೋಗೋಣ? ನಾವು ಎಷ್ಟೋ ಬ್ರಹ್ಮಹತ್ಯ ಮಾಡಿದ್ದೇವೆ; ಆದರೆ ಇಂದಿನಂಥ ಪ್ರಸಂಗವು ಮಾತ್ರ ನಮಗೆ ಎಂದೂ ಬಂದಿದ್ದಿಲ್ಲ. ಕಳವು ಮಾಡುವದು ಲಾಭದ ಕೆಲಸವೆಂದು ತಿಳಿದು, ನಾವು ಇನ್ನೂ ಹೆಚ್ಚು ಹೆಚ್ಚು ಪಾಪಗಳನ್ನು ಮಾಡುತ್ತಿದ್ದೆವು; ಆದರೆ ನಿಮ್ಮ ದರ್ಶನವಾದದ್ದರಿಂದ ಯಾಕೋ ನಮಗೆ ಭಯವು ಉತ್ಪನ್ನವಾಗಲು, ನಮಗೆ ಪಶ್ಚಾತ್ತಾಪವಾಗಿದೆ; ನಮ್ಮ ಸರ್ವಾಪರಾಧಗಳನ್ನು ಕ್ಷಮಿಸಿ ನಮಗೆ ಪ್ರಾಣದಾನ ಮಾಡಬೇಕು. ನಿಮ್ಮ ಅಪ್ಪಣೆಯನ್ನು ನಾವು ಸರ್ವಥಾ ಮೀರುವದಿಲ್ಲ. ಈ ಪಾಮರರಿಗೆ ಜೀವದಾನ

ಕೊಟ್ಟು, ಬೇಕಾದ ಶಿಕ್ಷೆಯನ್ನು ಮಾಡಿರಿ. ಈ ಹರಪಾಲನ ಮುಪ್ಪಿನ ತಾಯಿ-ತಂದೆ ಗಳಿರುವರು, ಆತನಿಗೆ ತರುಣ ಹೆಂಡತಿಯೂ, ಇಬ್ಬರು ಸಣ್ಣ ಸಣ್ಣ ಮಕ್ಕಳೂ ಇರುವರು. ಅವರ ಗೋಳಾಟವೇನು ಹೇಳಬೇಕು? ಹರಪಾಲನು ಮೂಲತಃ ಶ್ರೀಮಂತನಿದ್ದು ಇನ್ನೂ ಶ್ರೀಮಂತ ನಾಗಬೇಕೆಂದು ವೆಂಕಾಜಿ ವಾಘನ ಸಹವಾಸದಿಂದ ಕಳವು ಮಾಡಹತ್ತಿದ್ದನು. ಮಹಾತ್ಮರೇ, ನಮಗೂ ಹೆಂಡಿರು-ಮಕ್ಕಳಿರುತ್ತಾರೆ ಸ್ವಾಮೀ! ಕರುಣಾಳುಗಳಾದ ನೀವು ಅವರನ್ನು ಅನಾಥರಾಗಿ ಮಾಡಬಾರದೆಂತಲೇ ಇಲ್ಲಿಗೆ ಧಾವಿಸಿ ಬಂದಿರುವಿರಿ! ಸ್ವಾಮೀ, ಹೇಗಾದರೂ ಮಾಡಿ ನಮ್ಮೆಲ್ಲರ ವಿಪತ್ತನ್ನು ದೂರ ಮಾಡಬೇಕು'' ಎಂದು ಪ್ರಾರ್ಥಿಸಹತ್ತಿದರು. ಕೆಲವರು ಗಟ್ಟಿಯಾಗಿ ಅವರು ಕಾಲುಗಳನ್ನು ಹಿಡಕೊಂಡರು. ಪಾಪ! ಸಂಸಾರದೊಳಗಿನ ಹುಳಗಳು! ಮರಣದ ಭಯದಿಂದ ಒದ್ದಾಡಹತ್ತಿರುವದು ಆಶ್ಚರ್ಯವಲ್ಲ.

ಪಾಮರರ ಈ ಪ್ರಾರ್ಥನೆಯನ್ನು ಕೇಳಿ ಗಣೇಶ ಗೋಸಾವಿಗಳಿಗೆ ದಯ ಉಂಟಾ ಯಿತು; ಅವರು ಆ ಎಲ್ಲ ಕಳ್ಳರನ್ನು ಕುರಿತು—''ಸಜ್ಜನರೇ, ನಿಮಗೆ ಈಗ ನಿಜವಾದ ಪಶ್ಚಾತ್ತಾಪ ವಾಗಿರುವದರಿಂದ, ನಿಮ್ಮ ಪಾಪಗಳೆಲ್ಲ ಶ್ರೀ ಗಣನಾಯಕನ ಕೃಪೆಯಿಂದ ಸುಟ್ಟು ಬೂದಿಯಾಗಿ ಹೋದವು. ಇನ್ನು ನಿಮಗೆ ಯಾವ ವಿಪತ್ತೂ ಬರಲಾರದು. ಈ ಹರಪಾಲನು ಮಹಾ ಪತಿವ್ರತೆಯಾದ ಈ ತರುಣ ಬ್ರಾಹ್ಮಣ ಪತ್ನಿಯ ವಿಷಯದಲ್ಲಿ ದುರ್ಭಾವ ತಾಳಿದ್ದಲ್ಲದೆ, ಆ ಪವಿತ್ರ ಮೂರ್ತಿಯ ಕರಸ್ಪರ್ಶ ಮಾಡಿದ ಮಾತ್ರದಿಂದ ದೀಪದಲ್ಲಿ ಬಿದ್ದ ಪತಂಗದಂತೆ ಮರಣ ಹೊಂದಿರುವನು. ಉತ್ಕಟ ಪಾಪ ಪುಣ್ಯ ಮಾಡುವವರು ತತ್ಕಾಲ ದಲ್ಲಿಯೇ ಅವುಗಳ ಫಲಗಳನ್ನು ಭೋಗಿಸಬೇಕಾಗುವದೆಂಬದಕ್ಕೆ ಈ ಹರಪಾಲನ ಮರಣವೇ ಸಾಕ್ಷಿ!

ಎಲೈ ಸಜ್ಜನರುಗಳಿರಾ, ನೀವು ದುರ್ಜನರಿದ್ದು, ಶ್ರೀ ಗಣಪತಿಯು ನಿಮ್ಮನ್ನು ''ಸಜ್ಜನರೇ'' ಎಂದು ನನ್ನ ಮುಖದಿಂದ ಮೇಲೆ ಮೇಲೆ ಕರೆಸುತ್ತಿರುವನು; ಆದ್ದರಿಂದ ಇಂದಿನಿಂದ ನೀವು ಶ್ರೀ ಗಣೇಶನ ಕೃಪೆಯಿಂದ ಸಜ್ಜನರಾಗಿ ಹೋಗುವಿರಿ; ಆದರೆ ಸಜ್ಜನರೇ, ಪಾಪಿಷ್ಠರ ಪಾಪ ವಿಮೋಚನ ಕಾಲವು ಒದಗಿರುವಾಗಲೇ ಇಂಥ ಮಹಾ ತಪಸ್ವಿಗಳ ಸಮಾಗಮವಾಗುವದು. ನೋಡಿರಿ, ನೀವು ದುರ್ಜನರು ಹೋಗಿ ಇಷ್ಟು ಬೇಗನೆ ಸಜ್ಜನರು ಯಾವ ಉಪಾಯದಿಂದ ಆಗುತ್ತಿದ್ದಿರಿ? ವೇಷಧಾರಿಗಳೆನಿಸುವ ಯಾವ ಪಾಠಕರ ಪಾಠಶಾಲೆಯೂ, ಯಾವ ಉಪ ದೇಶಕನ ಉಪದೇಶವೂ, ಯಾವ ಕೀರ್ತನಕಾರನ ಕೀರ್ತನವೂ ನಿಮ್ಮಂಥ ದುರ್ಜನರನ್ನು ಹೀಗೆ ದರ್ಶನಮಾತ್ರದಿಂದ ಸಜ್ಜನರನ್ನು ಮಾಡಲಾರವು. ಆದರೆ ಅಂತಹ ಅದ್ಭುತ ಶಕ್ತಿಯು ''ದರ್ಶನಾ ದೇವ ಸಾಧವಃ'' ಎಂಬೀ ಉಕ್ತಿಯಂತೆ ಸತ್ಸಂಗದಲ್ಲಿ ಮಾತ್ರ ಇರುತ್ತದೆ. ಹಿಂದು ಗಳಲ್ಲಾಗಲಿ, ಮುಸಲ್ಮಾನರಲ್ಲಾಗಲಿ, ಬೇರೆ ಯಾವ ಧರ್ಮದವರಲ್ಲಿಯೇ ಆಗಲಿ ನಿಜವಾದ ಧರ್ಮಿಷ್ಠರು ಅಪರೂಪವು. ಅಂತಹ ನಿಜವಾದ ಧರ್ಮಿಷ್ಠರು ಯಾವ ಧರ್ಮದ ವರಿದ್ದರೂ, ಅವರು ಭಕ್ತಿ-ಜ್ಞಾನ-ವೈರಾಗ್ಯ ಸಂಪನ್ನರಾದದ್ದರಿಂದ, ಲೋಕವನ್ನು ಉದ್ಧರಿಸ ತಕ್ಕವರೇ ಸರಿ. ಅಂಥವರು ಯಾವ ಧರ್ಮದವರಿದ್ದರೂ ಲೋಕಪೂಜ್ಯರೇ. ಅವರಲ್ಲಿ ಹೆಚ್ಚು ಕಡಿಮೆ ಯೋಗ್ಯತೆಯನ್ನು ಭಾವಿಸಲಾಗದು.

ಸಜ್ಜನರೇ, ''ಈ ವರೆಗೆ ನಾವು ಎಷ್ಟೋ ಜನ ಬ್ರಾಹ್ಮಣರನ್ನು ಘಾತಿಸಿರುವೆ''ವೆಂದು ನೀವೇ ನಿಮ್ಮ ಬಾಯಿಂದ ಹೇಳಿರುವಿರಿ; ಅಂಥವರ ಘಾತದಿಂದ ನಿಮಗೆ ಏನೂ ಕೆಡಕು ಆಗಲಿಲ್ಲವೆಂತಲೂ ನೀವು ಈಗ ಭಾವಿಸುತ್ತಿರಬಹುದು; ಆದರೆ ಆ ಪರಪೀಡೆಯಿಂದ ನಿಮಗೆ ಕೇಡು ಆಗಿದ್ದರೂ, ಮಸಿಯ ಗುಡ್ಡದಲ್ಲಿ ಮಸಿಯಕಲೆ ಕಾಣದಿರುವಂತೆ, ಮಹಾ ಕೆಟ್ಟವರಾದ ನಿಮ್ಮ ಕೆಟ್ಟತನದಲ್ಲಿ ಆ ಪರಪೀಡೆಯ ಕೆಡಕು ನಿಮಗೆ ಒಡೆದು ಕಾಣುವದಿಲ್ಲವು! ಈ ಜಗತ್ತಿನೊಳಗಿನ ಯಾವ ಧರ್ಮದವರಲ್ಲಿಯೇ ಆಗಲಿ, ವೇಷಧಾರಿ ಧರ್ಮಿಷ್ಠರೇ ಬಹಳ. ಅಂಥವರ ಪರಸ್ಪರರ ಸಹವಾಸವೆಂದರೆ, ಕೋಣಕ್ಕೆ ಕೋಣವು ಎದುರಾದಂತೆ. ಕೋಣಕ್ಕೆ ಕೋಣವು ಎದುರಾದರೆ ಫಲವೇನು? ಕಲಹ! ಕಲಹದಲ್ಲಿ ಸಬಲ ಕೋಣನಿಂದ ದುರ್ಬಲ ಕೋಣದ ನಾಶ; ಹೀಗೆ ಈ ಕೋಣಗಳ ಕಾದಾಟದಲ್ಲಿ ನಾಶವಲ್ಲದೆ, ತಾರಣವಿಲ್ಲ; ಆದ್ದರಿಂದ ನೀತಿಕಾರರು ಕೋಣಗೆ ಕೋಣಗೆ ಒಂದೇ ಹಾದಿಯೆಂದು ಹೇಳಿರುವರು. ಆದರೆ ನಿಜವಾದ ಧರ್ಮಿಷ್ಠರು ಕೋಣಗಳಲ್ಲ, ಜಾಣರು, ಅಂದರೆ ಜ್ಞಾನಿಗಳು ವೇಷಧಾರಿ ಧರ್ಮಿಷ್ಠರೆಂಬ ಕೋಣಗಳು ಎದುರಿಗೆ ಬಂದರೆ, ಆ ಜ್ಞಾನಿಗಳು ಅವರ ಉಸಾಬರಿ ಬಿಟ್ಟು ಆ ಕೋಣಗಳ ಎದುರಿಗೆ ಹೋಗದೆ ತಾವು ಬೇರೊಂದು ದಾರಿಯಿಂದ ಹೋಗುವರು; ಆದ್ದರಿಂದ ನೀತಿಕಾರರು ಕೋಣ–ಜಾಣರಿಗೆ ಬಾರದೆ ನಿಮ್ಮಿಂದ ದೂರ ಇರುತ್ತಿರುವರು. ಹೀಗಿದ್ದು, ನೀವು ಇಂಥವರನ್ನು ಕೆಣಕಿ ಇಂದು ಸರ್ವನಾಶವನ್ನು ಮಾಡಿಕೊಳ್ಳುತ್ತಿದ್ದಿರಿ; ಯಾಕಂದರೆ ಈ ಮಹಾತ್ಮರು ಶಮಪ್ರಧಾನರು; ಇಂಥವರಲ್ಲಿ ಸರ್ವದಾಹಕವಾದ ಒಂದು ಗೂಢ ಶಕ್ತಿಯು ಇರುತ್ತಿರುವದು. ಆ ದಾಹಕ ಶಕ್ತಿಯು ನಿಮ್ಮ ವಂಶವನ್ನೇ ಹರಿದು ಬಿಡಬಹುದಾಗಿತ್ತು; ಆದರೆ ಶ್ರೀ ಗಣೇಶನು ನಿಮ್ಮ ಸಲುವಾಗಿಯಲ್ಲ, ಈ ಮಹಾ ತಪಸ್ವಿಗಳ ತಾಪನಿವಾರಣಾರ್ಥ ವಾಗಿ ನಮ್ಮನ್ನು ಪ್ರೇರೇಪಿಸಿ, ಇಲ್ಲಿಗೆ ಕಳಿಸಿರುವನು! ಎಲೈ ಸಜ್ಜನರೇ, ಈ ಮಹಾ ತಪಸ್ವಿ ಕುಟುಂಬದ ಶಾಂತ ಗುಣವನ್ನು ನೋಡಿದಿರಾ? ಈ ವರೆಗೆ ಆ ಗಂಭೀರರಲ್ಲಿ ಸಿಟ್ಟಿನ ಚಿಹ್ನಗಳಿಲ್ಲ, ದುರ್ಭಾಷಣಗಳಂತೂ ಇರಲಿ, ಭಾಷಣವೇ ಇಲ್ಲ; ದೈನ್ಯವಿಲ್ಲ; ಎರಡನೆಯವರ ಮುಂದೆ ತಮ್ಮ ದುಃಖವನ್ನು ದೂರಿಕೊಳ್ಳೋಣವಿಲ್ಲ; ಎಲ್ಲವೂ ಈಶ್ವರೀ ಸಂಕೇತ ದಂತೆ ಆಗುವದೆಂದು ದೃಢವಾಗಿ ನಂಬಿ, ಆ ಮಹಾತ್ಮರು ಸಮಾಧಾನದಿಂದ ಇದ್ದುಬಿಟ್ಟಿರುವರು; ಇಂತಹ ಶಾಂತ ಮೂರ್ತಿಗಳ ದಾದು ಶಾಂತಸ್ವರೂಪವೇ ಆದ ಶ್ರೀ ಗಣಪತಿಗೆ ಇರುವದರಿಂದ, ಆತನು ನನ್ನನ್ನು ಇಲ್ಲಿಗೆ ಕಳಿಸಿ ಈ ಶಾಂತ ಕುಟುಂಬದ ತಾಪನಿವಾರಣ ಮಾಡಿಸುವಾಗ, ನಿಮ್ಮ ತಾಪ ನಿವಾರಣವೂ ಸಹಜವಾಗಿ ಆಯಿತು. ನಮ್ಮ ಬಿಸಿಲ ತಾಪನಿವಾರಣಕ್ಕಾಗಿ ನಾವು ಹಿಡಿದು ಕೊಳ್ಳುವ ಚತ್ತರಿಕೆಯ ನೆರಳು, ನಮ್ಮ ಮೈಯೊಳಗಿನ ತಗಣೆ–ಚಿಕ್ಕಾಡಗಳ ಬಿಸಿಲಿನ ತಾಪದ ನಿವಾರಣವನ್ನು ಮಾಡುವದಿಲ್ಲವೇ? ಅದರಂತೆ ಈ ಮಹಾತ್ಮರ ಸಹವಾಸಮಾಡಿರುವ ನಿಮ್ಮ ತಾಪವನ್ನೂ ಶ್ರೀ ಗಣೇಶನು ನಿವಾರಣ ಮಾಡಿದನೆಂದು ತಿಳಿಯಿರಿ.

ಎಲೈ ಸಜ್ಜನರುಗಳಿರಾ, ಇನ್ನು ನಾನು ಹೇಳುವದನ್ನು ಲಕ್ಷಕೊಟ್ಟು ಕೇಳಿರಿ; ವೇಷಧಾರಿ ಧರ್ಮಿಷ್ಠರು ಆರಿದ ಇದ್ದಲಿಯಂತೆ ಇರುವದರಿಂದ, ಅವರನ್ನು ತುಳಿಯುವ ಭರದಲ್ಲಿ ಬೂದಿ

ಮುಚ್ಚಿದ ನಿಗಿ ನಿಗಿ ಕೆಂಡದಂತೆ ಇದ್ದ ನಿಜವಾದ ಧರ್ಮಿಷ್ಠರನ್ನು ತುಳಿದು ಸರ್ವಸ್ವವನ್ನು ಸುಟ್ಟುಕೊಳ್ಳದಂತೆ ನೀವು ಜಾಗರೂಕರಾಗಿರಬೇಕು. ನೀವು ದೇವರನ್ನೂ, ಧರ್ಮವನ್ನೂ, ಧರ್ಮಿಷ್ಠರನ್ನೂ ಸರ್ವಥಾ ತಿರಸ್ಕರಿಸಬೇಡಿರಿ. ದೇವರೂ, ಆತನಿಂದ ನಿರ್ಮಿತವಾದ ಧರ್ಮವೂ ಗಾಳಿಯಂತೆ ಸೂಕ್ಷ್ಮ ರೂಪದಲ್ಲಿರುವದರಿಂದ, ನಮ್ಮ ಸ್ಥೂಲ ದೃಷ್ಟಿಗೆ ಅವು ಕಾಣದಿದ್ದರೂ, ಕಣ್ಣಿಗೆ ಕಾಣದ ಗಾಳಿಯು ಕ್ಷುಬ್ಧವಾದರೆ ಗಿಡಗಳು ಬೇರುಸಹಿತ ಉರುಳಿ ಬೀಳುವಂತೆ, ಈಶ್ವರೀ ಕ್ಷೋಭ, ಧರ್ಮ ಕ್ಷೋಭ, ಧರ್ಮಿಷ್ಠರ ಕ್ಷೋಭ ಇವುಗಳಿಂದ ನಿಮ್ಮ ಸರ್ವಸ್ವದ ನಾಶವಾಗುವದೆಂಬದನ್ನು ಚನ್ನಾಗಿ ಲಕ್ಷದಲ್ಲಿಡಿರಿ. ಸಜ್ಜನರೇ, ಮಹಾತ್ಮರ ವರಪ್ರದಾನದಿಂದ ನಮ್ಮ ಕಲ್ಯಾಣವಾಗುವಂತೆ, ಅವರ ಶಾಪದಿಂದಲೂ ನಮ್ಮ ಕಲ್ಯಾಣವೇ ಆಗುವದು. ದೊಡ್ಡವರ ವರಪ್ರದಾನದಿಂದ ಶಬರಿಗೆ ಶ್ರೀರಾಮನ ದರ್ಶನವಾದಂತೆ, ಅಹಲ್ಯೆಗೆ ಗೌತುಮರ ಶಾಪದಿಂದಲೂ ಶ್ರೀ ರಾಮ ದರ್ಶನವಾಯಿತು; ಆದರೆ ಶ್ರೀ ಗಣೇಶನ ಮುಖದಿಂದ ನಿಮ್ಮ ಕಲ್ಯಾಣ ಮಾಡಿಸಿದ ಈ ಶಮಪ್ರಧಾನವಾದ ಬ್ರಾಹ್ಮಣ ಕುಟುಂಬವು, ಅನ್ಯರಿಗೆ ಸುಪ್ರಸನ್ನವಾಗಿ ವರಪ್ರಧಾನವನ್ನೂ ಮಾಡುವದಿಲ್ಲ, ಕ್ಷೋಭಿಸಿ ಶಾಪವನ್ನೂ ಕೊಡವದಿಲ್ಲ; ಆದರೆ ಅಂಥ ದಿವ್ಯ ಪುರುಷರ ಪ್ರತಿನಿಧಿಯಾದ ಶ್ರೀ ಗಣೇಶನೇ (ದೇವರೇ) ಅನ್ಯರಿಗೆ ವರವನ್ನಾಗಲಿ, ಶಾಪವನ್ನಾಗಲಿ ಕೊಡುವನು; ಆದ್ದರಿಂದ ನಿಜವಾದ ಸ್ವತಂತ್ರರೆಂದರೆ ಇಂತಹ ಪರಮ ಶಾಂತರಾದ ಮಹಾತ್ಮರೇ ಸರಿ; ಕಾರಣ ಈಗ ನಾನೂ, ನೀವೂ ಈ ದಿವ್ಯ ಪುರುಷ ಕುಟುಂಬಕ್ಕೆ ಸಾಷ್ಟಾಂಗವಾಗಿ ನಮಸ್ಕರಿಸೋಣ'' ಎಂದು ಹೇಳಿ, ಗಣೇಶ ಗೋಸಾವಿಗಳು ಆ ಬ್ರಾಹ್ಮಣ ಕುಟುಂಬಕ್ಕೆ ಸಾಷ್ಟಾಂಗ ನಮಸ್ಕಾರ ಮಾಡಿದಕೂಡಲೆ, ಎಲ್ಲರೂ ಆ ಕುಟುಂಬದವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಎದ್ದು ನಿಂತುಕೊಂಡರು!

ಹೀಗೆ ಗಣೇಶ ಗೋಸಾವಿಗಳೂ, ಉಳಿದ ಸಜ್ಜನರ ಸಮೂಹವು ತಮಗೆ ಸಾಷ್ಟಾಂಗ ನಮಸ್ಕಾರಮಾಡಿ ಎದ್ದು ನಿಂತಿರುವದನ್ನು ನೋಡಿ, ಆ ಬ್ರಾಹ್ಮಣ ಕುಟುಂಬದವರು ಕೂಡಲೆ ತಾವೂ ಆ ಎಲ್ಲ ಜನರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಅವರೆಲ್ಲರ ಮುಂದೆ ಕೈಜೋಡಿಸಿ ತಲೆಬಾಗಿಸಿ ನಿಂತುಕೊಂಡಿರಲು, ಅವರೊಳಗಿನ ವೃದ್ಧ ಬ್ರಾಹ್ಮಣನು ಆ ಎಲ್ಲರನ್ನು ಕುರಿತು —''ಮಹಾತ್ಮರೇ, ನೀವು ಮನುಷ್ಯರಲ್ಲ, ಸಾಕ್ಷಾತ್ ಭಗವದವತಾರ ಮೂರ್ತಿಗಳು; ಆದ್ದರಿಂದ ನನ್ನ ಈ ಸಂಸಾರಾಸಕ್ತ ಕುಟುಂಬವು ನಿಮಗೆ ನಮಸ್ಕಾರ ಮಾಡುವದೂ ಶಕ್ಯವಾಗಿದ್ದಿಲ್ಲ; ಆದರೆ ತಾಯಿ–ತಂದೆಗಳು ತಮ್ಮ ಮಕ್ಕಳಿಗೆ ವಾತ್ಸಲ್ಯದಿಂದ—''ತಮ್ಮಾ, ದೇವರಿಗೆ ನಮಸ್ಕಾರ ಮಾಡಪ್ಪಾ'' ಎಂದು ಹೇಳಿ, ತಾವು ನಮಸ್ಕಾರ ಮಾಡಿ ತೋರಿಸುವಂತೆ, ಬಾಯಿಂದ ಹೇಳದೆಯೂ ಅತ್ಯಂತ ಪ್ರಭಾವಶಾಲಿತ್ವದಿಂದ ನೀವು ನಮಸ್ಕಾರ ಮಾಡಲಿಕ್ಕೆ ನಮಗೆ ಕಲಿಸಿದ್ದರಿಂದ, ನಾವೂ ನಿಮಗೆ ನಮಸ್ಕಾರಮಾಡಿ ಕೃತಾರ್ಥರಾದೆವು. ಸಜ್ಜನರೆ, ನಿಮ್ಮ ದರ್ಶನದಿಂದ ನಮಗೆ ಆದ ಲಾಭವನ್ನು ಬಾಯಿಂದ ವರ್ಣಿಸಲೂ ಶಕ್ಯವಿಲ್ಲವು. ಯಾತ್ರಾರ್ಥವಾಗಿ ಸಾಗಿದ್ದ ನಮ್ಮನ್ನು ನಿರ್ಬಂಧಿಸಿ, ಸುಲಿದ ನಿಮ್ಮ ಅವತಾರ ಮೂರ್ತಿಗಳಲ್ಲಿ, ಯಾರು ರಾಮರಿರುವಿರಿ, ಯಾರು ಕೃಷ್ಣರಿರುವಿರಿ, ಯಾರು ನೃಸಿಂಹರಿರುವಿರಿ, ಯಾರು ವಾಮನರಿರುವಿರಿ,

ಯಾರು ಪರಶುರಾಮರಿರುವಿರಿ; ಒಟ್ಟಿಗೆ ತತ್ವತಃ ಜಗದ್ರೂಪವಾಗಿಯೇ ನೀವು ನಮಗೆ ದರ್ಶನ ಕೊಡುತ್ತಿರುವಿರಿ. ಎಲೈ ಲೀಲಾ ನಾಟಕಿಗಳಾದ ಭಗವನ್ಮೂರ್ತಿಗಳೇ, ಇಂದು ನಮ್ಮ ಜನ್ಮವು ಸಫಲವಾಯಿತು, ನಾವು ಕೃತಾರ್ಥರಾದೆವು. ಭಗವಂತನಾದ ಶ್ರೀ ಗಣಪತಿಯನ್ನು ನೋಡದಿರುವ ನಾವು, ಶ್ರೇಷ್ಠ ಗಾಣಪತ್ಯರಾದ ಈ ಗಣೇಶ ಗೋಸಾವಿಗಳ ದರ್ಶನದಿಂದ, ಶ್ರೀ ಗಣಪತಿಯ ದರ್ಶನ ಮಾಡಿಕೊಳ್ಳುವ ಹಾದಿಯೂ, ಆತನ ದರ್ಶನ ಮಾಡಿಕೊಳ್ಳುವ ಕಣ್ಣುಗಳು ದೊರೆಯುವಂತೆ, ಸಾಧನ ಮಾಡಲಿಕ್ಕೆ ನಮಗೆ ಸಾಮರ್ಥ್ಯ ಬಂದಿತು; ಇದಕ್ಕಿಂತ ಹೆಚ್ಚಿನ ಲಾಭ ಬೇಡ; ಇನ್ನು ತಾವೆಲ್ಲರೂ ಕುಳಿತರೆ, ತಮ್ಮನ್ನು ಅನುಸರಿಸಿ ನಾವೂ ಕುಳಿತುಕೊಳ್ಳುವೆವು.

ಅಹಹ! ಆಗಿನ ಸತ್ಸಂಗದ ಪ್ರಭಾವವನ್ನೇನು ವರ್ಣಿಸುವದು! ಆಗ ಎಲ್ಲರೂ ಏಕರ ಸಾನಂದಾನುಭವವನ್ನು ಪಡೆದಿದ್ದರು. ಎಲ್ಲರಿಗೂ ಸ್ವಕೀಯತ್ವದ ವಿಸ್ಮೃತಿಯಾಗಿ, ಪರಮಾತ್ಮ ತತ್ವದಲ್ಲಿ ದೃಷ್ಟಿಯುಂಟಾಗಿತ್ತು, ಹೀಗೆ ಎಲ್ಲರೂ ಆನಂದಮಗ್ನರಾಗಿರುವಾಗ, ಶ್ರೀ ಗಣೇಶ ಗೋಸಾವಿಗಳು ಮಹಾತ್ಮನಾದ ಆ ವೃದ್ಧ ಬ್ರಾಹ್ಮಣನನ್ನು ಕುರಿತು—''ಸ್ವಾಮೀ, ಈ ಆನಂದದ ಪ್ರಸಂಗದಲ್ಲಿ ಈ ಮೃತಿಹೊಂದಿದ ಹರಪಾಲನೊಬ್ಬನು ಕೃತಾರ್ಥನಾಗದಿರುವದು ಯೋಗ್ಯವಲ್ಲ; ಆದ್ದರಿಂದ ಪೂಜ್ಯಪಾದರೇ, ತಾವು ಈ ಪಾಮರ ಶಿಷ್ಯನ ತಲೆಯ ಮೇಲೆ ವರದ ಹಸ್ತ ವಿಟ್ಟು, ನನ್ನನ್ನು ಅನುಗ್ರಹಿಸಬೇಕು; ಅಂದರೆ ತಮ್ಮ ಅನುಗ್ರಹದ ಬಲದಿಂದ ಈತನನ್ನು ಸಜೀವಗೊಳಿಸಲು, ಶ್ರೀ ಗಣಪತಿಯನ್ನು ನಾನು ಪ್ರಾರ್ಥಿಸುವೆನು. ಮಹಾತ್ಮನ್, ಈತನು ನಿಜವಾಗಿಯೂ ಮರಣ ಹೊಂದಿರದೆ ಸಾಧ್ವಿಯ ಸಂತಾಪದಿಂದ ಕೇವಲ ತಮೋಗುಣ ವ್ಯಾಪ್ತನಾಗಿ ಷುಷುಪ್ತಿಯಲ್ಲಿರುವನು; ಆ ತಮೋಗುಣದ ನಿವಾರಣ ಮಾಡಲು, ತ್ರಿಗುಣಾ ತೀತನಾದ ಆ ಭಗವಾನ್ ವಕ್ರತುಂಡನನ್ನು ಪ್ರಾರ್ಥಿಸುವೆನು,'' ಎಂದು ಹೇಳಿ, ಆ ವೃದ್ಧ ಬ್ರಾಹ್ಮಣೋತ್ತಮನಿಗೆ ದೀರ್ಘದಂಡ ನಮಸ್ಕಾರ ಮಾಡಲು ಆ ಮಹಾತ್ಮನು—''ಗಣೇಶ ಗೋಸಾವಿಗಳೇ, ಈ ಅದ್ಭುತ ಕಾರ್ಯವು ತಮ್ಮಂಥ ಯೋಗಿಶ್ರೇಷ್ಠರಿಗೆ ಅಶಕ್ಯವಲ್ಲ, ಏಳಬೇಕು, ನಿಮ್ಮ ಸೌಜನ್ಯವನ್ನು ಜಗತ್ತೇ ಕಲಿತು ಕೃತಾರ್ಥವಾಗಲೆಂದು ಭಗವಂತನಾದ ಶ್ರೀ ಗಣನಾಯಕನನ್ನು ನಾನು ಪ್ರಾರ್ಥಿಸುವೆನು.'' ಎಂದು ಹೇಳಿ, ಆ ಗಾಣಪತ್ಯ ಮಹಾಪುರುಷನನ್ನು ಮೇಲಕ್ಕೆ ಎಬ್ಬಿಸುವ ನೆವದಿಂದ ಆತನ ಮಸ್ತಕದ ಮೇಲೆ ಕೈಯಿಟ್ಟು, ಎಬ್ಬಿಸಿದರು! ಆಗ ಆ ಗಣೇಶ ಗೋಸಾವಿಗಳು ಶವದಂತೆ ಬಿದ್ದಿರುವ ಹರಪಾಲನನ್ನು ಆ ವೃದ್ಧ ಬ್ರಾಹ್ಮಣನ ಮುಂದೆ ಮಲಗಿಸಹೇಳಿದರು. ಆಗ ಜನರು ಪರಮಾಶ್ಚರ್ಯದಿಂದ ಹರಪಾಲನನ್ನು ತಂದು ಆ ವೃದ್ಧ ಬ್ರಾಹ್ಮಣನ ಮುಂದೆ ಹಾಕಲು, ಗಣೇಶ ಗೋಸಾವಿಗಳು ನಿದ್ದೆ ಹತ್ತಿದವನನ್ನೆಬ್ಬಿಸುವಂತೆ ತಮ್ಮ ಕೈಮುಟ್ಟಿ ಅಲ್ಲಾಡಿಸಿ—''ಏಳು, ಸಜ್ಜನನಾದ ಹರಪಾಲನೇ ಏಳು, ನಿನ್ನನ್ನು ಅನುಗ್ರಹಿಸಲು ಈ ಬ್ರಾಹ್ಮಣ ಕುಟುಂಬವು ಹಾದಿಯ ನೋಡುತ್ತಿರುವದು,'' ಅನ್ನಲು, ಹರಪಾಲನು ನಿದ್ದೆಯಿಂದ ಎಚ್ಚತ್ತವನಂತೆ ಎದ್ದು ಕುಳಿತುಕೊಂಡನು! ಆಗ ಅಲ್ಲಿ ಉಂಟಾದ ಅದ್ಭುತ ರಸವನ್ನು ವರ್ಣಿಸುವ ಯೋಗ್ಯತೆಯು ಲೇಖನಿಯಲ್ಲಿ ಇಲ್ಲದ್ದರಿಂದ, ಅದನ್ನು ಇಟ್ಟು ಸಮ್ಮನಾಗಿ ಬಿಡುವದೇ ನೆಟ್ಟಗೆ!

# ಸಾಧ್ವಿಯ ಶಾಪ

ಕಾಶಿಯು ವೆಂಕಾಜಿ ವಾಘನ ಶಾಸನಮಾಡಿ ತನ್ನ ಕಠಾರಿಯ ರಕ್ತವನ್ನು ವರಿಸುತ್ತ ಕ್ರೋಧಾವೇಶದಿಂದ ತನ್ನ ಕೋಣೆಗೆ ಹೊರಟು ಹೋದಳೆಂದು ಹಿಂದೆ ಹೇಳಿದೆಯಷ್ಟೇ? ಅಂದಿನಿಂದ ಆ ತೇಜಸ್ವಿಯು ಅತ್ಯಂತವಾದ ಉದಾಸೀನಭಾವವನ್ನು ತಾಳಿದಳು. ಇತ್ತ ತಂದೆಯ ನಿಜವಾದ ಸುದ್ದಿಯಿಲ್ಲ, ಅತ್ತ ನೇತಾಜಿಯ ಯಾವ ಸುದ್ದಿಯೂ ಇಲ್ಲ; ವೆಂಕಾಜಿಯು ಅತ್ಯಂತ ಕ್ರೂರನು; ಆತನ ಪರಿಚಾರಿಕೆಯರು ವೆಂಕಾಜಿಯ ಕೇವಲ ಪಕ್ಷಪಾತಿಗಳು; ವೆಂಕಾಜಿಗೆ ತನ್ನ ಪ್ರಾಪ್ತಿಯನ್ನು ಮಾಡಿಕೊಟ್ಟು ಆತನ ಒಲುಮೆಯನ್ನೂ, ಇನಾಮನ್ನೂ ಪಡೆಯಲು ಅತ್ಯಂತ ಆತುರರಾದವರು ಈ ಸ್ಥಿತಿಯಲ್ಲಿ ಆಕೆಯಲ್ಲಿಯ ತಂದೆಯ ವಿಷಯದ ಭಕ್ತಿಗೂ, ನೇತಾಜಿಯ ವಿಷಯದ ಪ್ರೇಮಕ್ಕೂ, ತನ್ನ ಶೀಲರಕ್ಷಣದ ಹುಟ್ಟುಗುಣಕ್ಕೂ, ಆಪ್ತರ ಮುಂದೆ ದುಃಖ ತೋಡಿಕೊಂಡು ದುಃಖದ ವೇಗವನ್ನು ಕಡಿಮೆ ಮಾಡಿಕೊಳ್ಳಲಿಕ್ಕೂ ಬಾಧೆಯುಂಟಾಗಲು, ತಾನು ಬದುಕುವದರಿಂದ ಇನ್ನು ಪ್ರಯೋಜನವಿಲ್ಲೆಂದು ತಿಳಿದು, ಆಕೆಯು ಅನ್ನ-ನೀರು ಬಿಟ್ಟು, ಒಮ್ಮೊಮ್ಮೆ ಉಪವಾಸ ಮಾಡುವಳು! ಆದರೆ ಆಕೆಯು ಅತ್ಯಂತ ಭಾವಿಕಳಾದದ್ದರಿಂದ, ಒಮ್ಮೊಮ್ಮೆ ಮನಸ್ಸಿನಲ್ಲಿ ''ಜಗತ್ತಿನ ಕರ್ತೃವು ದೇವರಲ್ಲವೆ? ಆತನ ತಂತ್ರದಿಂದ ಈ ಜಗತ್ತು ನಡೆದಿರುವದಲ್ಲವೆ? ನಮ್ಮ ಕರ್ಮಗಳಿಗೆ ತಕ್ಕ ಫಲ ದೊರೆಯುವಂತೆ ಆತನ ನಿಶ್ಚಿತ ವ್ಯವಸ್ಥೆಯಿರುವದಲ್ಲವೆ? ಅಂದಬಳಿಕ ಆತನ ಸೂತ್ರಚಾಲಕತ್ವದಂತೆ ನಡೆಯು ವದು ನಮ್ಮ ಗೊಂಬೆಗಳ ಕರ್ತವ್ಯವಾಯಿತು. ಆದ್ದರಿಂದ ಧರ್ಮಕ್ಕನುಸರಿಸಿ, ಈಶ್ವರನ ನಿಯಮ ಗಳಂತೆ ನಡೆಯುವದು ನ್ಯಾಯವಾಗಿರಲು, ನಾನು ಉಪವಾಸ ಮಾಡುವದು ಅಹಂಕಾರದ ಹಟಮಾರಿತನವಲ್ಲವೆ? ಹೀಗೆ ಅಹಂಕಾರದ ಹಟಮಾರಿತನದಿಂದ ದೇಹತ್ಯಾಗ ಮಾಡಿದರೆ ಬಹು ಪುಣ್ಯದ ಬೆಲೆ ಕೊಟ್ಟು, ದೇವರಲ್ಲಿ ಕೊಂಡುಕೊಂಡಿದ್ದ ಈ ಅಲಭ್ಯವಾದ ಮನುಷ್ಯ ದೇಹವನ್ನು ವ್ಯರ್ಥ ಮಣ್ಣುಗೂಡಿಸಿದ ಹಾಗಾಗುವದಲ್ಲ! ಒಮ್ಮೆ ನಾನು ಒಬ್ಬ ಬ್ರಾಹ್ಮಣನ ಮುಖದಿಂದ—''ಮನುಷ್ಯ ದೇಹವು ಪುನಃ ದೊರೆತೀತೆಂಬದರ ನಿಯಮವಿಲ್ಲ; ಆದ್ದರಿಂದ ಮನುಷ್ಯನು ಒಂದು ಕ್ಷಣ ಉಸುರಾಡಿಸಿ, ಒಮ್ಮೆ ದೇವರ ನಾಮೋಚ್ಚಾರ ಮಾಡಿದರೂ ದೊಡ್ಡ ಲಾಭವಾಗುತ್ತಿರಲು, ದೇಹವನ್ನು ಬುದ್ಧಿಪೂರ್ವಕ ನಾಶಗೊಳಿಸುವದರಿಂದ ಆತ್ಮ ಘಾತದ ದೊಡ್ಡ ಪಾಪಬರುವದು''ಎಂದು ಕೇಳಿದ್ದೇನೆ; ಅಂದಬಳಿಕ ಈಗ ನಾನು ನಿರೋಗಿಯಾಗಿರುವ ನನ್ನ ದೇಹವನ್ನು, ಇಂಥ ಅನನುಕೂಲ ಸ್ಥಿತಿಯಲ್ಲಿ ತಂದೆ, ಗಂಡ, ಆಪ್ತೇಷ್ಟರು ಇವರ ವಿಯೋಗಕ್ಕಾಗಿ ನಿರರ್ಥಕ ದುಃಖಪಟ್ಟು, ದುಃಖವೇಗದಿಂದ ಉಪವಾಸಬಿದ್ದು ಸತ್ತು ಹೋಗುವದರಲ್ಲಿ ಜಾಣತನವೇನಿರುವದು? ದೇವರು ಸರ್ವಜ್ಞನು, ಆತನ ತಂತ್ರವು ಗೂಢವಾದದ್ದು. ಆತನ ಇಚ್ಛೆಯಿಂದ ಒಂದು ಕ್ಷಣದಲ್ಲಿ ತಿಪ್ಪಿಯಿದ್ದದ್ದು ಉಪ್ಪರಿಗೆಯಾಗಬಹುದು; ಆದ್ದರಿಂದ ನಾಳೆ, ಅಥವಾ ಎಂದಾದರೂ ನನಗೆ ಅನುಕೂಲಕಾಲವು ಬರಲಿಕ್ಕಿಲ್ಲವೆ? ದೇಹವಿದ್ದರೆ ಏನಾದರೂ ಕಾರ್ಯವಾದೀತಲ್ಲದೆ, ಸತ್ತಬಳಿಕ ಯಾವ ಕಾರ್ಯವಾದೀತು! ನಾನು

ಸತ್ತರೆ ಅಪ್ಪನಿಗೂ ನೇತಾಜಿಗೂ ಎಷ್ಟು ದುಃಖವಾದೀತಲ್ಲ! ಆದ್ದರಿಂದ ಉಪವಾಸದಿಂದ ಸಾಯುವದರಿಂದ ಏನೂ ಪ್ರಯೋಜನ ವಾಗದು. ಇಷ್ಟಪ್ರಾಪ್ತಿಯ ವಿಷಯವಾಗಿ ದೇವರಲ್ಲಿ ವಿಶ್ವಾಸವಿಟ್ಟು ಧರ್ಮಕ್ಕನುಸರಿಸಿ ಸತತ ಪ್ರಯತ್ನ ಮಾಡಬೇಕಲ್ಲದೆ, ದುರಾಶೆಯಿಂದಾಗಲಿ, ನಿರಾಶೆಯಿಂದಾಗಲಿ ದೇಹತ್ಯಾಗ ಮಾಡುವದು ದುರಹಂಕಾರದ ಮೂಢತನವೇ ಸರಿ! ಇಂಥವರು ಶುದ್ಧ ತಾಮಸರೆಂದು ತಿಳಿಯತಕ್ಕದ್ದು.

ಹೀಗೆ ಕಾಶಿಯು ಒಂದು ದಿವಸ ಊಟ, ಒಂದು ದಿವಸ ಉಪವಾಸ ಮಾಡುತ್ತ ಧಾರಣೆ–ಪಾರಣೆಯಿಂದ ಕಾಲಕಳೆಯುತ್ತಿರುವಾಗ, ಇತ್ತ ವಾಘನು ಕಾಸಿಯ ಕಠಾರಿಯಿಂದ ತನ್ನ ಕೈಗೆ ಗಾಯವಾದಾಗಿನಿಂದ ಹಾಸಿಗೆ ಹಿಡಿದು, ಎಲ್ಲಿಯೂ ಹೊರಗೆ ಹೋಗದೆ ಮನೆಯಲ್ಲಿಯೇ ಇದ್ದುಬಿಟ್ಟಿದ್ದನು; ಆತನ ಕೈಯು ಇನ್ನೂ ಮಾದಿದ್ದಿಲ್ಲ; ನೋವು ಯಥಾಸ್ಥಿತವಾಗಿಯೇ ಇತ್ತೆಂದು ಹೇಳಬಹುದು. ವಾಘನ ದೇಹವು ಆತನ ಮನೆಯಲ್ಲಿ ಸ್ವಸ್ಥವಾಗಿ ಇದ್ದರೂ ಆತನ ಮನಸ್ಸು ಆತನ ದೇಹದಲ್ಲಿ ಸ್ವಸ್ಥವಾಗಿದ್ದಿಲ್ಲ. ಅದು ಕಾಶಿಯನ್ನು ನೆನಿಸಿ ನೆನಿಸಿ, ಹಲವು ವಿಕಾರಗಳಿಗೆ ಈಡಾಗುತ್ತಿತ್ತು. ಒಮ್ಮೆ ಆತನು ಕಾಶಿಯ ರೂಪವನ್ನು ನೆನಿಸಿ ಮೋಹಿತನಾಗುತ್ತಿದ್ದನು; ಮತ್ತೊಮ್ಮೆ ಆತನು ಕಾಶಿಯ ಕರ್ಕಶತನವನ್ನು ನೆನಿಸಿ ಸಂತಪ್ತನಾಗುತ್ತಿದ್ದನು; ಇನ್ನೊಮ್ಮೆ ಆತನು ಕಾಶಿಯು ಏಕಾಗಿಯಾಗಿ ತನ್ನ ಕೈಗೆ ಸಿಕ್ಕು ಹೋಗಿರುವದನ್ನು ನೆನಿಸಿ ಆಕೆಯ ವಿಷಯದಲ್ಲಿ ಲೋಭ ತಾಳುವನು; ಆ ಎಟ್ಟಿ ಹುಡಿಗಿಯು ಪ್ರಾಣ ಹೋದರೂ ನನಗೆ ವಶಳಾಗಳೆಂಬದು ಮನಸ್ಸಿನಲ್ಲಿ ಬರಲು, ಆತನು ನಿರಾಶೆನಾಗುವನು. ಹೀಗೆ ವಾಘನು ಮೋಹ, ಸಂತಾಪ, ಲೋಭ, ನಿರಾಶೆ ಮುಂತಾದ ವಿಕಾರಗಳ ಹುಟ್ಟು–ಸಾವುಗಳ ಆಘಾತದಲ್ಲಿ ಜರ್ಜರಿತನಾಗಿದ್ದನು. ಆತನ ಮನಸ್ಸು ಅತ್ಯಂತವಾದ ರಾಜಸವೃತ್ತಿಯದು; ಆತನ ಆ ರಾಜಸಗುಣದಷ್ಟೇ ತಾಮಸಗುಣವೂ ಆತನಲ್ಲಿ ಪ್ರಬಲವಾಗಿತ್ತು; ಸತ್ವಗುಣವು ಆತನಲ್ಲಿ ಅಲ್ಪಸ್ವಲ್ಪವಿದ್ದರೂ ಆತನ ಆ ರಜಸ್ತಮೋಗುಣಗಳ ಅಬ್ಬರದಲ್ಲಿ ಆತನ ಆ ಅಲ್ಪ ಸತ್ವಗುಣದ ಆಟವೇನು ನಡೆಯುತ್ತಿದ್ದಿಲ್ಲ; ಆದ್ದರಿಂದ ಆ ವಾಘನಲ್ಲಿ ಸತ್ವಗುಣದ ಪರಿಣಾಮಗಳಾದ ದೇವರು, ಧರ್ಮ ಇವುಗಳ ವಿಚಾರವೇ ಬರುತ್ತಿದ್ದಿಲ್ಲ; ಅಪ್ಪಿ ತಪ್ಪಿ ಆ ವಿಚಾರವು ಮನಸ್ಸಿನಲ್ಲಿ ಬಂದರೆ, ಆತನಲ್ಲಿಯ ರಜಸ್ತಮೋ ಗುಣಗಳ ಪ್ರಾಬಲ್ಯದ ಮೂಲಕ ಆ ಸಾತ್ವಿಕ ವಿಚಾರದ ಪರ್ಯಾವಸಾನವು ದೇವರ, ಮತ್ತು ಧರ್ಮದ ವಿಷಯದ ದ್ವೇಷಭಾವವುಂಟಾಗುವದರಲ್ಲಿ ಆಗಿ, ಆತನು ಧರ್ಮಿಷ್ಠರ ನಾಶ ಮಾಡಲಿಕ್ಕೆ ಮೆಚ್ಚುವನು; ಮತ್ತು ದೇವಸ್ಥಾನಗಳ ಸುಲಿಯುವ ವಿಷಯದಲ್ಲಿ ಉಲ್ಲಾಸಪಡುವನು. ಅಂತೇ ಅವನು ಚಿಂಚವಡದ ದೇವಸ್ಥಾನವನ್ನು ಸುಲಿದು, ಅಲ್ಲಿಯ ಹೇರಳ ಹಣವನ್ನೂ, ಬಂಗಾರದ ಗಣಪತಿಯ ಮೂರ್ತಿಯನ್ನೂ ಅಪಹರಿಸಿಕೊಂಡು ಬಂದಿದ್ದನು. ಆತನು ಈಗ ಮನೆ ಹಿಡಿದು ಕುಳಿತದ್ದರಿಂದ, ಆತನ ಕನಸು ಮನಸುಗಳಲ್ಲಿ ಕಾಶಿ ವಿಚಾರವೇ ವಿಚಾರವಾಗಿ, ಆತನಿಗೆ ಕಾಶಿಯ ಹೊರತು ಏನೂ ಕಾಣದಾಯಿತು. ಹೀಗೆ ಆತನು ಸದಾ ಕಾಶಿಯನ್ನು ಚಿಂತಿಸುತ್ತಿರುವಾಗ, ಹಿಂದೆ ಹೇಳಿದಂತೆ ಒಂದು ದಿನ ಮಧ್ಯರಾತ್ರಿಯಲ್ಲಿ ಆಕೆಯ ಸುಂದರ ರೂಪವು ಮನಸ್ಸಿನಲ್ಲಿ ಬರಲು, ಆತನಲ್ಲಿ

ಕಾಮವಿಕಾರವು ಉತ್ಪನ್ನವಾಯಿತು! ಆಗ ಆತನು ತನ್ನ ಮನಸ್ಸಿನಲ್ಲಿ—''ಕಾಶಿಯ ಅಂಜಿಕೆಯು ನನಗೆ ಇಷ್ಟೇಕೆ ಇರಬೇಕು? ಒಬ್ಬಳೇ ನನ್ನ ಕೈಯಲ್ಲಿ ಸಿಕ್ಕಿರುವಾಗ, ಬಲಿಷ್ಠನಾದ ನಾನು ತಟ್ಟನೆ ಹೋಗಿ ಆಕೆಯನ್ನು ನನ್ನ ಬಾಹುಪಾಶದಿಂದ ಬಿಗಿದು ಬಿಟ್ಟರೆ, ಆಕೆ ಮಾಡುವದೇನು? ಆಕೆಯ ಬಳಿಯಲ್ಲಿದ್ದ ಗುಪ್ತ ಕಠಾರಿಯನ್ನು ಇಬ್ಬರು ಬಲಿಷ್ಟ ಸ್ತ್ರೀಯರ ಕೈಯಿಂದ ನಿನ್ನೆಯೇ ನಾನು ಕಸಿದು ತರಿಸಿಬಿಟ್ಟಿದ್ದೇನೆ. ಅಂದಬಳಿಕ ನನ್ನ ಇಷ್ಟಾರ್ಥಸಿದ್ಧಿಗೆ ಆತಂಕವೇತರಿಂದ ಬರುವ ಹಾಗಿದೆ? ಆದ್ದರಿಂದ ನಾನು ಈಗೇ ಕಾಸಿಯ ಬಳಿಗೆ ಹೋಗಿಬಿಡಬೇಕು'' ಎಂದವನೇ ಆಗಿನ ಮಧ್ಯರಾತ್ರಿ ಯಲ್ಲಿಯೇ ಕಾಶಿಯ ಕೋಣೆಯ ಬಾಗಿಲನ್ನು ರಭಸದಿಂದ ಒದ್ದು, ಆಕೆಯ ಮುಂದೆ ಬಂದು ನಿಂತುಬಿಟ್ಟನು!

ಆಗ ವಾಘನು ತಟ್ಟನೆ ತನ್ನ ಹಾಸಿಗೆಯಮೇಲಿಂದ ಎದ್ದು ಬಂದವನಾದ್ದರಿಂದ, ವೇಷ ಭೂಷಣಗಳ ಆಡಂಬರವೇನು ಆತನಲ್ಲಿ ಇದ್ದಿಲ್ಲ. ಆತನು ಮೈಯಲ್ಲಿ ಬಗಲಕಸಿಯ ಅಂಗಿ ಯೊಂದನ್ನು ಹಾಕಿಕೊಂಡು, ತಲೆಗೊಂದು ಬಿಳಿ ಕಡ್ಡಿಯ ಕೆಂಪು ವಸ್ತ್ರವನ್ನು ಸುತ್ತಿದ್ದನು. ಆತನು ತನ್ನ ಉಟ್ಟುಕೊಂಡ ಧೋತರದ ಗಂಡುಗಚ್ಚಿಯನ್ನು ಹಾಕಿದ್ದನು. ಹೊತ್ತುಬಿದ್ದರೆ ಇರಲೆಂದು ಬುದ್ಧಿಪೂರ್ವಕವಾಗಿ ಆತನು ತಕ್ಕೊಂಡು ಬಂದಿದ್ದ ಬಿಚ್ಚುಗತ್ತಿಯು, ಆತನ ಗಾಯಮಾಯದ ಬಲಗೈಯಲ್ಲಿ ಇದ್ದಿತು; ಆತನ ಗಾಯವು ಇನ್ನೂ ಪೂರಾ ಮಾಯದೆ ಇದ್ದದ್ದರಿಂದ, ಕತ್ತಿ ಯನ್ನು ಒತ್ತಿ ಹಿಡಿದರೆ ಆ ಗಾಯವು ಪೀಕುತ್ತಿತ್ತು. ಈ ಸ್ಥಿತಿಯಲ್ಲಿ ತನ್ನ ಮುಂದೆ ವಾಘನು ಆಕಸ್ಮಾತ ಬಂದು ನಿಂತದ್ದನ್ನು ನೋಡಿ, ಕಾಶಿಯು ಮೆಟ್ಟಿಬಿದ್ದಳು. ಆಗ ಆಕೆಯು ಬೆದರಿದ ಚಿಗರೆ ಯಂತೆತನ್ನ ವಿಶಾಲವಾದ ಕಣ್ಣುಗಳಿಂದ ವಾಘನನ್ನು ನೋಡಿ—''ಅವ್ವಯ್ಯ, ಪಿಶಾಚವು'' ಎಂದು ನುಡಿದು, ತನ್ನ ಎರಡೂ ಹಸ್ತಗಳಿಂದ ತನ್ನ ಎರಡೂ ಕಣ್ಣುಗಳನ್ನು ಮುಚ್ಚಿ ಕೊಂಡಳು!

ವಾಘನು ತಾನು ಹೋದಕೂಡಲೆ ಕಾಶಿಯನ್ನು ತನ್ನ ಬಾಹುಪಾಶದಿಂದ ಬಿಗಿದು ಬಿಡ ಬೇಕೆಂದು ಯೋಚಿಸಿ ಬಂದಿದ್ದನಷ್ಟೆ? ಆದರೆ ಆತನಿಗೆ ಹಾಗೆ ಮಾಡಲಿಕ್ಕೆ ಕಾಶಿಯ ಆಗಿನ ಮೋಹಕರೂಪ, ಆತನ ಬಲಗೈಯೊಳಗಿನ ಬಿಚ್ಚುಗತ್ತಿ ಇವೆರಡು ಅಡ್ಡಾದವು. ಹೀಗೆ ವಾಘನು ತಟ್ಟನೆ ಕಾಶಿಯನ್ನು ತನ್ನ ಬಾಹುಪಾಶದಿಂದ ಬಿಗಿದುಬಿಡಬೇಕೆಂದು ಯೋಚಿಸಿದ್ದು, ಕಾಶಿಯ ಮೇಲಿನ ವಿರೋಧಭಾವದಿಂದಲ್ಲ, ಕಾಮುಕಭಾವದಿಂದ. ವಿರೋಧಬಾವವು ರಾಜ ಸಗುಣ ದಿಂದುಂಟಾದರೆ, ಕಾಮುಕಭಾವವು ತಮೋಗುಣದಿಂದುಟಾಗುವದು, ಕ್ರೋಧದ ಪರ್ಯವಸಾನವು, ಪ್ರತಿಕಾರದಲ್ಲಾದರೆ, ಮೋಹದ ಪರ್ಯವಸಾನವು ಪತನದಲ್ಲಾಗುವದು; ಆದ್ದರಿಂದ ಮೊದಲೇ ಮೋಹಿಷ್ಠನಾಗಿದ್ದ ವೆಂಕಾಜಿಗೆ, ಈಗ ಆಕಸ್ಮಾತ್ ಕಾಶಿಯ ಅಸ್ತವ್ಯಸ್ತ ಉಡಿಗೆತೊಡಿಗೆಯೂ, ಸರ್ವಾಂಗ ಸುಂದರರೂಪವೂ ಕಣ್ಣಿಗೆ ಬೀಳಲು, ಅವನ್ನು ನೋಡುವ ಭರದಲ್ಲಿ ಬಾಹು ಪಾದಬಂಧನದ ಮರವು ಆತನಿಗೆ ಸಂಪೂರ್ಣವಾಗಿ ಆಗಿಹೋಯಿತು; ಆಗ ಆತನ ಬಲಗೈಯೊಳಗಿನ ಬಿಚ್ಚುಗತ್ತಿಯು ತಾವಾಗಿ ಕಳಚಿ ಬೀಳಲು, ಬಾಯಿ ತೆರೆದು ಕಾಶಿಯನ್ನು ನೋಡುತ್ತಿದ್ದ ಆತನು ಹುಚ್ಚನಹಾಗೆ ಕಾಶಿಯ ಮುಂದೆ ಕೈಜೋಡಿಸಿ ಇಲ್ಲದ ಅಚ್ಛೆಯಿಂದ ಆಕೆಯನ್ನು ಕುರಿತು–

ವಾಘ—ಕಾಶಿ, ನಾನು ಪಿಶಾಚವಲ್ಲ, ವಾಘನು!

ಕಾಶಿ—ಪಿಶಾಚವಲ್ಲದೆ ಮನುಷ್ಯರು ಹೀಗೆ ಮಧ್ಯರಾತ್ರಿಯಲ್ಲಿ ಪರಸ್ತ್ರೀಯರ ಬಳಿಗೆ ಅಕಸ್ಮಾತ್ತಾಗಿ ಬರಬಹುದೆಯೆ? ಆದ್ದರಿಂದ ನೀನು ವಾಘನಲ್ಲ, ನಿಶ್ಚಯವಾಗಿ ಪಿಶಾಚವು.

ವಾಘ—(ಹುಚ್ಚು ನಗೆಯಿಂದ) ಇಲ್ಲ ಕಾಶೀ, ನಾನು ಪಿಶಾಚವಲ್ಲ ನಿಜವಾಗಿಯೇ ವೆಂಕಾಜಿ ವಾಘನು! ಕಣ್ಣು ತೆರೆದು ನೋಡು.

ಕಾಶಿ (ಕಣ್ಣು ತೆರೆದು)—ಅವ್ವಯ್ಯ! ಪಿಶಾಚವಲ್ಲದೆ ಮತ್ತೇನು? ವೆಂಕಾಜಿ ವಾಘನ ರೂಪತಾಳಿ ಪಿಶಾಚವೇ ಬಂದಿದೆ. ಪಿಶಾಚಿಗಳು ಬೇಕಾದ ರೂಪ ಧರಿಸಬಲ್ಲವೆಂದು ನಾನು ಕೇಳಿರುವೆನು. ಎಲೈ ಪಿಶಾಚಿಯೇ ಇಲ್ಲಿ ನಿನ್ನ ಕೆಲಸವೇನು? ನಾನು ಒಬ್ಬ ಅನಾಥ ಸ್ತ್ರೀಯು, ನಿರಪರಾಧಿಯು, ನಿರಾಶ್ರಯಳು; ಅಂದಬಳಿಕ ನಾನು ನಿನಗೆ ಯಾವಬಗೆಯ ಬಲಿ ಕೊಡಲಿಕ್ಕೂ ಸಮರ್ಥಳಲ್ಲ; ಹೋಗು, ಈ ಗವಿಯ ಮಾಲಕನಾದ ವೆಂಕಾಜಿ ವಾಘನು ಶ್ರೀಮಂತ ನಾಗಿದ್ದಾನೆ; ಆತನನ್ನು ನೀನು ಬಡಕೊಂಡರೆ, ಆತನು ನಿನಗೆ ಯಥೇಷ್ಟ ಬಲಿದಾನ ಮಾಡಲು ಸಮರ್ಥನಿದ್ದಾನೆ. ಆದರೆ ಎಲೈ ಪಿಶಾಚವೇ, ನೆನಪಾಯಿತು, ನನ್ನದೊಂದು ಪ್ರಾರ್ಥನೆಯನ್ನು ನೀನು ನಡೆಸುವೆಯಾ?

ವಾಘ (ಆತುರದಿಂದ)— ಅದೇನು ಪ್ರಾರ್ಥನೆ ಹೇಳು, ಅದನ್ನು ನಿನ್ನ ಆಜ್ಞೆಯೆಂದು ತಿಳಿದು ಸಂತೋಷದಿಂದ ಪಾಲಿಸುವೆನು.

ಕಾಶಿ— ಎಲೈ ಪಿಶಾಚವೆ, ದಯಮಾಡಿ ನಿನ್ನ ಮಾತು ಸುಳ್ಳು ಮಾಡಬೇಡ ಕಂಡೆಯಾ! ನೀನು ನೀಚ ಯೋನಿಯವನಾಗಿದ್ದರೂ, ದೇವಯೋನಿಯಲ್ಲಿ ಎಣಿಸಲ್ಪಡುತ್ತೀ; ಆದ್ದರಿಂದ ನಿನಗೆ ದೇವತೆಗಳಂತೆ ಅದೃಶ್ಯವಾಗಲಿಕ್ಕೂ, ಬೇಕಾದ ರೂಪಗಳನ್ನು ಧರಿಸಲಿಕ್ಕೂ ಬರುತ್ತದೆ. ಅದರಂತೆ ಈಗ ನೀನು ವೆಂಕಾಜಿ ವಾಘನ ರೂಪವನ್ನು ಧರಿಸಿ ನನ್ನ ಬಳಿಗೆ ಬಂದೂ ಇರುತ್ತಿ; ಈಗಿನಂತೆ ನೀನು ನನ್ನ ರೂಪವನ್ನು ಧರಿಸಿ ವೆಂಕಾಜಿ ವಾಘನ ಬಳಿಗೆ ಈಗಲೇ ಹೋಗು. ಆ ವಾಘನು ನನ್ನ ಮೇಲೆ ಮೋಹಿಸಿ ವ್ಯರ್ಥಕೆಟ್ಟು ಹೋಗುತ್ತಿರುವನು; ಆದ್ದರಿಂದ ನೀನು ಆತನ ಬಳಿಯಲ್ಲಿ ಆತನ ಹೆಂಡತಿಯಾಗಿ ಇದ್ದು ಬಿಟ್ಟು, ನನ್ನ ಸೆರೆಬಿಡಿಸಿ ಪುಣ್ಯ ಕಟ್ಟಿಕೊಳ್ಳಬಾರದೇ?

ಕಾಶಿಯ ಈ ಮಾತುಗಳನ್ನು ಕೇಳಿ ವೆಂಕಾಜಿಯು ಹುಚ್ಚನಾಗಿ ಹೋದನು. ಮುಂದೆ ಏನು ಮಾತಾಡಬೇಕೆಂಬದು ಆತನಿಗೆ ತಿಳಿಯದಾಯಿತು; ಕಾಶಿಯು ಬೇಕಂತ ಹೀಗೆ ಮಾಡುವಳೋ, ಅಥವಾ ನಿಜವಾಗಿಯೇ ನನ್ನನ್ನು ಪಿಶಾಚವೆಂದು ತಿಳಿದಿರುವಳೋ ಎಂಬದು ಆತನಿಗೆ ಗೊತ್ತಾಗ ಲ್ಲೊಲ್ಲದು. ಆತನು ಹುಚ್ಚನಹಾಗೆ ಕಾಶಿಯ ಕಡೆಗೆ ಎವೆಗೆ ಎವೆ ಹಾಕದೆ ನೋಡುತ್ತಿರಲು, ಮತ್ತೆ ಕಾಶಿಯು—

ಕಾಶಿ—ಪಿಶಾಚವೇ, ಮತ್ತೇನು ನಿನಗೆ ಸಂಶಯ ಬಂದಿದೆ? ಮತ್ತೇನು ವಿಚಾರ ಮಾಡುತ್ತಿರುವೆ? ವಿಚಾರಮಾಡುತ್ತ ನಿಲ್ಲಬೇಡ; ನಿಜವಾಗಿ ಹೇಳುವೆನು, ನೀನು ನನ್ನಹಾಗೆ ಆಗಿ ವಾಘನ ಬಳಿಗೆ ಹೋಗು, ಆ ಕ್ರೂರನು ತನ್ನ ಕ್ರೂರತನವನ್ನು ಬಿಟ್ಟು ನಿಶ್ಚಯವಾಗಿ ನಾಯಿ

ಯಂತೆ ನಿನ್ನ ಬೆನ್ನ ಹತ್ತುವನು! ನನ್ನ ಮಾತು ಸುಳ್ಳಾದರೆ, ಇಗೋ, ನನ್ನ ಕೊರಳಾಣೆ ಮಾಡಿ ಹೇಳುತ್ತೇನೆ, ನಾನು ಇಲ್ಲಿಯೇ ಇರುವೆನು, ಇಲ್ಲಿಗೆ ಬಂದು ನೀನು ನನ್ನನ್ನು ತಿಂದುಬಿಡು, ಅನುಮಾನ ಮಾಡಬೇಡ.

ವಾಘ—ಕಾಶೀ, ಹೀಗೆ ಚೇಷ್ಟೆ ಮಾಡಬೇಡ, ವಾಘನಿಗೆ ಚೇಷ್ಟೆ ತಡೆಯುವದಿಲ್ಲ; ಹಿಂದುಗಡೆ ನಿನ್ನ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ.

ಕಾಶಿ–ಇಲ್ಲ ಪಿಶಾಚವೇ, ನಾನು ಚೇಷ್ಟ ಮಾಡುವದಿಲ್ಲ. ಬೇಕಾದರೆ ನಿನ್ನ ಈ ಖಡ್ಗವನ್ನು ಮುಟ್ಟಿ ಆಣೆಮಾಡಿ ಹೇಳುತ್ತೇನೆ. ನನ್ನ ರೂಪಧರಿಸಿದ ನಿನ್ನನ್ನು ವಾಘನು ನಿಶ್ಚಯವಾಗಿ ಲಗ್ನ ಮಾಡಿಕೊಳ್ಳುವನು, ಮಾಡಿಕೊಳ್ಳದಿದ್ದರೆ, ತಿರುಗಿ ಇಲ್ಲಿಗೆ ಬಂದು ನಿನ್ನ ಇದೇ ಖಡ್ಗದಿಂದ ನನ್ನ ಶಿರಚ್ಛೇದ ಮಾಡುವೆಯಂತೆ!

ಈ ಮೇರೆಗೆ ಕಾಶಿಯು ಕೆಳಗೆ ಬಿದ್ದಿದ್ದ ವೆಂಕಾಜಿಯ ಖಡ್ಗವನ್ನು ತನ್ನ ಕೈಯಲ್ಲಿ ತಕ್ಕೊಂಡು ಅದನ್ನು ಮುಂದೆಮಾಡಿ ನುಡಿಯುತ್ತಿರಲು, ಆಕೆಯ ಕಣ್ಣುಗಳು ಸಿಟ್ಟಿನಿಂದ ಕೆಂಪಾದವು; ಆಕೆಯು ವಾಘನನ್ನು ಕುರಿತು—"ಎಲೈ ದುಷ್ಟಾ, ನರಾಧಮಾ, ನಿನ್ನ ಈ ಖಡ್ಗವು ನನ್ನ ಕೈಯಲ್ಲಿ ಬಂದಿದೆ, ನೀನಂತು ನಿಃಶಸ್ತ್ರನಾಗಿರುವದರಿಂದ ಈ ಇಕ್ಕಟ್ಟಿನ ಕೋಣೆಯಲ್ಲಿ ನಿನ್ನ ಪ್ರಾಣವು ನನ್ನ ಕೈಸೇರಿದಂತಾಗಿದೆ; ಆದರೆ ಈಗ ನಾನು ನಿನ್ನನ್ನು ಕೊಲ್ಲುವದಿಲ್ಲ; ಯಾಕಂದರೆ ನಿನ್ನ ಅನುಯಾಯಿಗಳು ದುಷ್ಟರೇ ಇರುವದರಿಂದ, ನೀನೊಬ್ಬನ ಕಾಟವನ್ನು ತಪ್ಪಿಸಿಕೊಳ್ಳುವದಕ್ಕಾಗಿ ನೂರಾರು ಜನರ ಕಾಟಕ್ಕೆ ನಾನು ಗುರಿಯಾಗಬೇಕಾದೀತು; ಆದ್ದರಿಂದ ಎಲೈ ಚಾಂಡಾಳಾ, ಇನ್ನೊಮ್ಮೆ ಶಾಪವಾಣಿಯನ್ನು ನುಡಿಯುವೆನು ಕೇಳು, "ನೀನು ಇನ್ನು ಬೇಗನೆ ಹಾಳಾಗಿ ಹೋಗುತ್ತೀ!" ಹೋಗು, ನನ್ನ ಕಣ್ಣೆದುರಿಗೆ ನಿಲ್ಲಬೇಡ, ನಿಂತರೆ, ಇಗೋ ನನ್ನ ಕೈಯಲ್ಲಿರುವ ನಿನ್ನ ಈ ಖಡ್ಗಕ್ಕೇ ನೀನು ತುತ್ತಾಗಬೇಕಾದೀತು; ಆದರೆ ಈಗ ನಾನು ಹಾಗೆ ಮಾಡದೆ, ನಿನ್ನ ಈ ಖಡ್ಗಕ್ಕೆ ನನ್ನನ್ನೇ ಬಲಿಯಾಗಿ ಕೊಡುವೆನು; ನೀನು ಜೀವದಿಂದ ಪಾರಾಗಿ ಹೋಗು," ಎಂದು ನುಡಿದು, ಖಡ್ಗವನ್ನು ಝುಳಪಿಸಿ, ಕ್ರೋಧದಿಂದ ಕಿಡಿಗಳನ್ನುದುರಿಸುವ ಕಣ್ಣುಗಳಿಂದ ವಾಘನನ್ನು ದುರುದುರನೆ ನೋಡತೊಡಗಿದಳು! ಖಡ್ಗಧಾರಿಯಾದ ಆ ಕಾಶಿಯ ಉಗ್ರ ಪ್ರತಿಮೆಯನ್ನು ನೋಡಲಾರದೆ ವಾಘನ ಕಣ್ಣುಗಳು ಮುಚ್ಚಿದವು; ಆತನ ಎದೆ ಯೊಡೆದು ನೀರಾಯಿತು; ಆತನು ಬದುಕಿದರೆ ಸಾಕೆಂದು ತಿಳಿದು ಆ ಕೋಣೆಯ ಹೊಸತಿಲ ಹೊರಗೆ ಕಾಲಿಡುತ್ತಿರಲು, ಯಾರೋ ಒಬ್ಬರು ವಾಘನ ಬಲಮುಂಗೈ ಹಿಡಿದು ಧೀರ ಗಂಭೀರ ಧ್ವನಿಯಿಂದ—'ಎಲೈ ವಾಘನೇ ಹೀಗೇಕೆ ಬಾಲ ಮುದುಡಿಕೊಂಡು ನಾಯಿಯಂತೆ ಹೊರಬೀಳುತ್ತೀ? ಧೈರ್ಯತಾಳು. ಬೇಕಾಗಿದ್ದರೆ ನಾನು ನಿನಗೆ ಖಡ್ಗವನ್ನು ಕೊಡುವೆನು ಹಿಡಿ. ನಿನ್ನಗೆ ಚಂಡಿಯ ಸ್ವರೂಪಳಾಗಿ ತೋರುವ ಆ ಸುಂದರ ತರುಣಿಯು, ತನ್ನ ಕೈಯಿಂದ ತನ್ನ ಕುತ್ತಿಗೆ ಕೊಯ್ಯು ಕೊಳ್ಳದಂತೆ, ಇಗೋ ಈ ಖಡ್ಗದಿಂದ ಆಕೆಯ ಚಂಡನ್ನು ನೀನೇ ಕತ್ತರಿಸಿ, ನಿನ್ನ ಪೌರುಷವನ್ನು ವ್ಯಕ್ತಮಾಡು! ಎಲೈ ಪರಸ್ತ್ರೀಕಾಂಕ್ಷಿಯಾದ ಅಧಮಾ, ವೆಂಕಾಜಿ ನಡೆ ತಿರುಗಿ ಕೋಣೆಯೊಳಗೆ. ಎಲೈ ರಾಜಗಳ್ಳಾ, ಸ್ತ್ರೀಹತ್ಯಕ್ಕಾಗಿ ನೀನು ಖಡ್ಗವನ್ನು ತಕ್ಕೊಂಡು

ಬಂದಿದ್ದೀಯಾ?'' ಎಂದು ಗದ್ದರಿಸಿ, ಅವನ ಬಲಮುಂಗೈಯನ್ನು ಹಿಡಿದು ತನ್ನ ಮಹಾ ಸಾಮರ್ಥ್ಯದಿಂದ ಅದನ್ನು ಹಿಚಕಲು, ವಾಘನ ಗಾಯದೊಳಗಿಂದಲೂ, ಆತನ ಐದೂ ಬೆರಳುತುದಿಗಳಿಂದಲೂ ಚಿಲ್ಲನೇ ರಕ್ತವು ಚಿಮ್ಮಿತು! ಆಗ ವಾಘನು ಅತ್ಯಂತ ವ್ಯಥಿತನಾಗಿ, ಗಟ್ಟಿಯಾಗಿ ಒದರಲಿಕ್ಕೂ ನಾಚಿ ಸುಮ್ಮನೆ ಕೋಣೆಯೊಳಗೆ ಹೋಗಿ ಮೋರೆ ಕೆಳಗೆ ಮಾಡಿಕೊಂಡು ನಿಂತನು. ರಾವಣನಂಥ ತ್ರೈಲೋಕ್ಯ ವಿಜಯಿಯೂ, ಪ್ರತ್ಯಕ್ಷ ಕೈಲಾಸಪರ್ವತವನ್ನು ತನ್ನ ಇಪ್ಪತ್ತು ತೋಳಗಳಿಂದ ಎತ್ತಿದ ಮಹಾಸಮರ್ಥನೂ ಕೂಡ, ಲೋಕಮಾತೆ ಜಾನಕಿಯ ಮುಂದೆ ನಾಯಿಯಾಗಿರಲು, ಕಳ್ಳ ವೆಂಕಾಜಿಯು ಕಾಶಿಯಂಥ ಸಾಧ್ವೀ ಸ್ತ್ರೀಯ ಮುಂದೆ ಹುಳಬಿದ್ದ ಹುಚ್ಚನಾಯಿಯಂತೆ ಆದದ್ದೇನು ಆಶ್ಚರ್ಯವು? ''ಪರನಾರಿ ನರಕದ ದಾರಿ''ಯೆಂಬಸಿದ್ಧಾಂತವು ಅನಾದಿ ಕಾಲದಿಂದಲೂ ಅನುಭವಕ್ಕೆ ಬರುತ್ತಲಿದ್ದರೂ, ಮಹಾ ಮಹಾ ತಪಸ್ವಿಗಳೂ ಹೆಣ್ಣಿನ ಕಾಲದಲ್ಲಿ ಮಣ್ಣುಗೂಡತ್ತಲೇ ಬಂದಿರುವದರಿಂದ, ವಿವೇಕಿಗಳು ಪರಸ್ತ್ರೀಯರನ್ನು ಹಡೆದ ತಾಯಂದಿರೆಂದು ತಿಳಿದು, ಅವರಿಗೆ ನಮಸ್ಕಾರಮಾಡುವ ಅಭ್ಯಾಸ ಹಿಡುವದು ಕಲ್ಯಾಣಕರವು!

ಹೀಗೆ ವೆಂಕಾಜಿ ವಾಘನನ್ನು ಒಳಗೆ ದೂಡಿಕೊಂಡು ಹೋದ ವ್ಯಕ್ತಿಯು ಕಾಶಿಯಕಡೆಗೆ ನೋಡಲು, ಕಾಶಿಯು ಆಶ್ಚರ್ಯದಿಂದ ''ನೇತಾಜಿ, ಅಪ್ಪನು ಎಲ್ಲಿ?'' ಎಂದು ಕೇಳುತ್ತಿರುವಾಗ, ಆಕೆಯ ಕಣ್ಣೊಳಗಿಂದ ದಡದಡನೆ ನೀರುಗಳು ಹರಿದವು! ಕೋಣೆಯ ಹೊರಗೆ ನೇತಾಜಿಯು ವೆಂಕಾಜಿಯನ್ನು ಕುರಿತು ಗದ್ದರಿಸಿ ಮಾತಾಡಿದ ದನಿಯಮೇಲಿಂದ ಕಾಶಿಯು, ಇದು ನೇತಾಜಿಯ ದನಿಯೆಂದು ತರ್ಕಿಸಿ, ಕುತೂಹಲದಿಂದ ಆತನ ಎಲ್ಲ ಮಾತುಗಳನ್ನು ಕೇಳುತ್ತಲಿದ್ದಳು; ಮುಂದೆ ವೆಂಕಾಜಿಯೊಡನೆ ನೇತಾಜಿಯು ಒಳಗೆ ಬರಲು, ಆತನನ್ನು ನೋಡಿದ ಕೂಡಲೆ, ಅಂತಹ ಕಷ್ಟಕಾಲದಲ್ಲಿ ತನ್ನ ಪ್ರಿಯಕರನ ದರ್ಶನವಾದದ್ದರಿಂದ ಆಕೆಯ ದುಃಖವು ಇಮ್ಮಡಿಯಾಗಿ ಒತ್ತರಿಸಲು, ಆಕೆಯು ಸಂಕೋಚವಿಲ್ಲದೆ ಬಿಕ್ಕಿ ಬಿಕ್ಕಿ ಅಳಹತ್ತಿದಳು! ಅಷ್ಟರಲ್ಲಿ ಗವಿಯ ಹೊರಗೆ ಹಿಲಾಲಿನ ಬೆಳಕು ಬೀಳಲು, ನೇತಾಜಿಯು ಕಾಶಿಗೆ—''ಕಾಶೀ, ಇನ್ನೇಕೆ ಅಳುತ್ತೀ? ಅಲ್ಲಿ ಮಾವನು ಇದ್ದಾನೆ ನಡೆ; ಅಲ್ಲಿ ಗುರುಗಳಾದ ಗಣೇಶ ಗೋಸಾವಿಗಳೂ ಬಂದಿರುವರು. ವಾಘನನ್ನೇ ಕಾಯುತ್ತಲಿದ್ದ ನಾನು, ವಾಘನು ನಿನ್ನ ಬಳಿಗೆ ಹೊರಟುಬರುವಾಗ, ಆತನ ಬೆನ್ನ ಹಿಂದಿನಿಂದ ನಾನು ಬಂದು, ಈ ಕೋಣೆಯ ಹೊರಗಿನಿಂದ ನಿಮ್ಮಿಬ್ಬರ ಸಂಭಾಷಣವನ್ನು ಕೌತುಕದಿಂದ ಕೇಳಿದೆನು. ನಡೆ, ಈ ದುಷ್ಟ ವಾಘನು ಬೆಳತನಕ ಈ ಕೋಣೆಯಲ್ಲಿಯೇ ಇರಲಿ, ಹೊರಗೆ ನಮ್ಮವರು ಹಿಲಾಲು ತಕ್ಕೊಂಡು ಬಂದಿರುವರು; ಆದ್ದರಿಂದ ಬೆಳಕಿನಲ್ಲಿ ಹೋಗೋಣ ನಡೆ.'' ಎಂದು ನುಡಿಯಲು, ಕಾಶಿಯು ನೇತಾಜಿಯನ್ನು ಹಿಂಬಾಲಿಸಿ ನಡೆದಳು. ಆಗ ನೇತಾಜಿಯ ಅಪ್ಪಣೆಯಂತೆ ಅವನ ಒಬ್ಬ ಸೇವಕನು ವಾಘನ ಕೋಣೆಯ ಬಾಗಿಲಿಗೆ ಚಿಲಕ ಹಾಕಿದನು. ಬಳಿಕ ಅವರೆಲ್ಲರು ಗಣೇಶ ಗೋಸಾವಿಗಳಿರುವಲ್ಲಿಗೆ ಹೋದರು. ಇತ್ತ ವಾಘನು ತನ್ನ ಕೈಗೂ, ತನ್ನ ಮನಸ್ಸಿಗೂ ಆದ ಗಾಯಗಳ ನೋವಿನಿಂದ ಅತ್ಯಂತ ವ್ಯಥಿತನಾಗಿ ನೆಲಕ್ಕೆ ಕುಸಿಬಿದ್ದು ಚಿಂತಿಸತೊಡಗಿದನು.

# ಸ್ವಭಾವ ಪರಿವರ್ತನ

ಹೀಗೆ ನೇತಾಜಿಯು ಕಾಶಿಯನ್ನು ಕರಕೊಂಡು ಹಿಲಾಲಿನ ಬೆಳಕಿನೊಳಗೆ ಗಣೇಶ ಗೋಸಾವಿಗಳ ಬಳಿಗೆ ಹೊರಟು ಹೋಗಲು, ಇತ್ತ ವೆಂಕಾಜಿ ವಾಘನು ಕೋಣೆಯಲ್ಲಿ ಒಬ್ಬನೇ ಆಗಿ, ಆತನ ಮನಸ್ಸಿನಲ್ಲಿ ಹಲವು ವಿಚಾರಗಳು ಉತ್ಪನ್ನವಾದವು. ತನ್ನ ಕಳ್ಳತನವೇ ತನಗೆ ಮುಳು ವಾಯಿತೆಂದು ಆತನು ಪಶ್ಚಾತ್ತಾಪ ಪಡತೊಡಗಿದನು. ಪಶ್ಚಾತ್ತಾಪವು ಪಾಪಶುದ್ಧಿಯ ದೊಡ್ಡ ಪ್ರಾಯಶ್ಚಿತ್ತವೆಂದು ಶಾಸ್ತ್ರವು ಹೇಳುತ್ತಿರುವದು; ವಾಘನಿಗೆ ಹೀಗೆ ಪಶ್ಚಾತ್ತಾಪವಾಗಲಿಕ್ಕೆ ಪ್ರಾಮುಖ್ಯವಾಗಿ ಆತನಿಗಾದ ಸತ್ಸಮಾಗಮವೇ ಕಾರಣವು. ವಾಘನಿಗೆ ದತ್ತಾಜಿ ಪಾಟೀಲ- ಕಾಶಿಯರಂಥ ಸದ್ವೃತ್ತಿಯವರ ಸಹವಾಸವಾದಂದಿನಿಂದ, ಆತನಿಗೆ ಪಶ್ಚಾತ್ತಾಪವಾಗಲು ಆರಂಭ ವಾಯಿತು. ಸಾಧಾರಣವಾಗಿ ಸದ್ಗುಣ-ದುರ್ಗುಣಗಳೆರಡೂ ಸಮಬಲವುಳ್ಳವಾಗಿದ್ದು, ಸದ್ಗುಣಕ್ಕೆ ಈಶ್ವರೀ ಪ್ರಸಾದವೂ, ದುರ್ಗುಣಕ್ಕೆ ಈಶ್ವರೀ ಕ್ಷೋಭವೂ ಫಲಗಳಾಗಿರುವವು. ಈಶ್ವರೀ ಪ್ರಸಾದದಿಂದ ಆತ್ಮಬಲದ ಅಭಿವೃದ್ಧಿಯೂ, ಈಶ್ವರೀ ಕ್ಷೋಭದಿಂದ ಆತ್ಮಬಲದ ನಾಶವೂ ಆಗುವದರಿಂದ, ನಿಜವಾದ ಸದ್ಗುಣೆಯ ಬಲಿಷ್ಠ ಆತನು ನಿಜವಾದ ದುರ್ಗುಣೆಯ ದುರ್ಬಲಾ ತ್ಮನನ್ನು ಜಯಿಸಿ, ಆ ದುರ್ಬಲಾತ್ಮಕ್ಕೆ ಪಶ್ಚಾತ್ತಾಪವನ್ನುಂಟುಮಾಡಲು, ಆ ಪಶ್ಚಾತ್ತಾಪಾಗ್ನಿಯಲ್ಲಿ ದುರಾತ್ಮದ ದುರ್ಗುಣಗಳು ದಗ್ಧವಾಗತೊಡಗುವವು. ಜಗತ್ತಿನಲ್ಲಿ, ತತ್ರಾಪಿ ಈ ಕಲಿಯುಗದಲ್ಲಿ ನಿಜವಾದ ಸದ್ಗುಣೆಗಳು ಅಪರೂಪವಾಗಿದ್ದು, ದುರ್ಗುಣೆಗಳೇ ವಿಶೇಷವಾಗಿರುವದರಿಂದ, ದುರ್ಗುಣೆಗಳಿಗೆ ದುರ್ಗುಣೆಗಳ ಸಹವಾಸವುಂಟಾಗಿ, ಪರಸ್ಪರರ ದುರ್ಗುಣ ದುರಾಚಾರಗಳ ಉತ್ತೇಜನದಿಂದ ದುರ್ಗುಣ-ದುರಾಚಾರಗಳೇ ಜಗತ್ತನ್ನು ವ್ಯಾಪಿಸುತ್ತಿರುವದು ಸ್ವಾಭಾವಿಕ ವಾಗಿರುವದು. ಇದಕ್ಕೆ ನಮ್ಮ ಭರತಭೂಮಿಯ ಈಗಿನ ಸ್ಥಿತಿಯೇ ಸಾಕ್ಷಿಯಾಗಿರುವದು. ಈಗಿನ ಸ್ವೇಚ್ಛಾಚಾರಮೂಲವಾದ ಚಹ-ಕಾಫಿಗಳ ಕುಡಿಯುವದು, ಸಿಗರೇಟು-ಚುಟ್ಟಗಳನ್ನು ಸೇದುವದು, ಸಿನಿಮಾ-ನಾಟಕಗಳನ್ನು ನೋಡುವದು; ಧಾರ್ಮಿಕ ಕರ್ಮಗಳನ್ನು ತ್ಯಜಿಸುವದು, ನಾಸ್ತಿಕರಾಗುವದು, ಗುರುಹಿರಿಯರನ್ನು ಲೆಕ್ಕಿಸದಿರುವದು ಮುಂತಾದ ಹಲವು ಅನರ್ಥಕಾರಕ ವ್ಯವಹಾರಗಳು, ವ್ಯಸನರೂಪಹೊಂದಿ, ಅವು ದೇಶದ ತುಂಬ ಹಬ್ಬುತ್ತಲಿದ್ದರೂ ಯಾರಲ್ಲಿಯೂ ತಮ್ಮ ಆ ದುರ್ಗುಣ-ದುರಾಚಾರಗಳ ವಿಷಯದಲ್ಲಿ ಪಶ್ಚಾತ್ತಾಪವುಂಟಾಗುವದಿಲ್ಲ; ಯಾಕಂದರೆ, ನಿಜವಾದ ಸತ್ಪುರುಷರ ಸಹವಾಸ ಯೋಗವು ಒದಗುವದು ದಿನದಿನಕ್ಕೆ ಅಪರೂಪವಾಗುತ್ತ ನಡೆದಿರುವದು; ಅಲ್ಲದೆ, ಅಂತಹ ಸಹವಾಸಯೋಗವು ಒದಗುವ ಹಾಗಿದ್ದರೂ, ಅದರ ವಿಷಯದಲ್ಲಿ ಜನರ ಅನಾದರವು ಹೆಚ್ಚಾಗುತ್ತಲಿರುವದು. ಇಂಥ ಹೀನ ಸ್ಥಿತಿಯಲ್ಲಿ ಸತ್ಸಮಾಗಮದ ಯೋಗವು ಒದಗಲಿಕ್ಕೆ ಮನುಷ್ಯನ ಪುಣ್ಯೋದಯದ ಕಾಲವೇ ಒದಗಿ ಬಂದಿರಬೇಕಾಗುವದು.

ವಾಘನಿಗೆ ಇಂತಹ ಪುಣ್ಯೋದಯದ ಕಾಲವು ಒದಗಿದ್ದರಿಂದಲೇ, ಆತನಿಗೆ ಸರ್ವಥಾ ಬೇಡಾಗಿದ್ದ ಸತ್ಸಮಾಗಮವು, ಆತನಿಗೆ ತಾನಾಗಿ ಒತ್ತಾಯದಿಂದ ಒದಗುತ್ತ ಬಂದಿತು.

ಆತನಿಗೊದಗಿದ ಆರಂಭದ ಸತ್ಸಮಾಗಮವೆಂದರೆ, ಮೇಲೆ ಹೇಳಿದಂತೆ ದತ್ತಾಜಿ ಪಾಟೀಲನ ಸಮಾಗಮವು. ದತ್ತಾಜಿಯು ವಾಘನ ಭಂಡಾರಗೃಹದಲ್ಲಿ ಚಿಂಚವಡದ ಗಣಪತಿಯ ಬಂಗಾರದ ಮೂರ್ತಿಯನ್ನು ನೋಡಿದಾಗ, ವಾಘನ ಕಿವಿ ಹಿಂಡಿದಂತೆ ಆತನಿಗೆ ನಿಸ್ಪೃಹತೆಯ ಖಂಡತುಂಡ ಉಪದೇಶ ಮಾಡಲು, ವಾಘನಿಗೆ ಪಶ್ಚಾತ್ತಾಪದ ಪ್ರಥಮ ಪರಿಚಯವಾಯಿತು; ಆ ಮೇಲೆ ಕಾಶಿಯು ಮಾತಿನಲ್ಲಿ ವಾಘನ ಬಾಯಿಕಟ್ಟುತ್ತ ಕಟ್ಟುತ್ತ ಕಡೆಗೆ ಬಲಾತ್ಕಾರದಿಂದ ತನ್ನ ಪಾಣಿಗ್ರಹಣ ಮಾಡಬಂದ ಆ ವೆಂಕಾಜಿ ವಾಘನ ಬಲಹಸ್ತಕ್ಕೆ ಕಠಾರಿಯಿಂದ ಇರಿದಾಗ ಆತನಿಗೆ ಪಶ್ಚಾತ್ತಾಪದ ದೃಢಪರಿಚಯವಾಯಿತು; ಆ ಮೇಲೆ ವಾಘನು ಮಧ್ಯರಾತ್ರಿಯಲ್ಲಿ ಕಾಶಿಯಬಳಿಗೆ ಬಂದಾಗ ಕಾಶಿಯು ಚಾತುರ್ಯದಿಂದ ವಾಘನ ಖಡ್ಗವನ್ನು ತಕ್ಕೊಂಡು ಆತನಿಗೆ ಮರಣಭಯವನ್ನುಂಟು ಮಾಡಿದಾಗ, ಆ ವಾಘನಿಗೆ ಪಶ್ಚಾತ್ತಾಪದ ದಾಹಶಕ್ತಿಯ ಅನುಭವವಾಯಿತು. ಆಮೇಲೆ ನೇತಾಜಿಯು ಬಂದಾಗ ವಾಘನ ಸೊಕ್ಕನ್ನು ಪೂರಾ ಇಳಿಸಲು, ಆ ವಾಘನ ಪಶ್ಚಾತ್ತಾಪಾಗ್ನಿಯಲ್ಲಿ ಆತನ ದುರ್ಗುಣಗಳು ಬೆಂದು ಹಣ್ಣಾಗಿ ಅವು ತೀರಾ ಕಸುವುಗೆಟ್ಟವು!

ಹೀಗೆ ವಾಘನ ದುರ್ಗುಣಗಳು ಪಶ್ಚಾತ್ತಾಪಾಗ್ನಿಯಲ್ಲಿ ಬೆಂದು ತೀರ ಹಣ್ಣಾಗಿರುವಾಗ, ಆ ಏಕಾಂತದ ಕೋಣೆಯಲ್ಲಿ ಆತನ ದುಷ್ಟ ಕೃತ್ಯಗಳೆಲ್ಲ ಆತನ ಕಣ್ಣಿಗೆ ಕಟ್ಟಿದಂತಾಗಿ, ಆತನು ದೊಡ್ಡ ದನಿ ತೆಗೆದು ಅಳತೊಡಗಿದನು; ಹೀಗೆ ಮನುಷ್ಯನಿಗೆ ತನ್ನ ದುರ್ಗುಣಗಳು ಕಣ್ಣಿಗೆ ಕಟ್ಟಿ ದಂತಾಗುವದು ಆತನ ಪ್ರಗತಿಯ ಆರಂಭದ ಚಿಹ್ನವಾಗಿರುವದೆಂದು ತಿಳಿಯಬೇಕು. ಹೀಗೆ ಪಶ್ಚಾತ್ತಾಪದಿಂದ ವಾಘನು ಅತ್ತದ್ದು ಇದೇ ಮೊದಲು. ಈವರೆಗೆ ಆತನಿಗೆ ಯಾವ ಕಾರಣ ದಿಂದಲೇ ಆಗಲಿ, ಅಳುವ ಪ್ರಸಂಗವೇ ಬಂದಿದ್ದಿಲ್ಲವೆಂದು ಹೇಳಬಹುದು. ಈವರೆಗೆ ಆತನು ತನ್ನ ದುರ್ಗುಣಗಳು ತನ್ನ ಪ್ರಗತಿಯ ಸಾಧನಗಳೆಂದು ತಿಳಿದಿದ್ದನು. ಕಾಶಿಯ ಪ್ರಾಪ್ತಿಯಾದದ್ದು ತನ್ನ ಪ್ರಗತಿಯೆಂದೇ ಆತನು ತಿಳಿದಿದ್ದನು; ಆದರೆ ರಾವಣನ ಮನೆಯನ್ನು ಸೀತೆಯು ಹೊಕ್ಕ ಕೂಡಲೆ ರಾವಣನು ಮೆಲ್ಲಮೆಲ್ಲನೆ ಅಳಲಿಕ್ಕೆ ಕಲಿಯುತ್ತಕಲಿಯುತ್ತ ಕಡೆಗೆ ದೊಡ್ಡದನಿಯಿಂದ ಅಳಹತ್ತಿದಂತೆ, ಕಾಶಿಯು ವಾಘನ ಗವಿಯನ್ನು ಹೊಕ್ಕಂದಿನಿಂದ ವಾಘನು ಮೊದಲು ಸಣ್ಣಾಗಿ ಅಳಲಿಕ್ಕೆ ಕಲಿಯುತ್ತ ಕಲಿಯುತ್ತ ಈಗ ದೊಡ್ಡ ದನಿಯಿಂದ ಅಳತೊಡಗಿದನು! ವಾಘನ ಈ ದೀರ್ಘ ರೋದನವು ತಾಸುಗಟ್ಟಲೆ ನಡೆದಿತ್ತು. ಆತನು ಅತ್ತ ಅತ್ತ ಹಾಗೆ, ಆತನ ಪಶ್ಚಾತ್ತಾಪ ಶೋಕಗಳ ಅಂಶವು ಕಣ್ಣೀರಿನೊಡನೆ ಹರಿದು ಹೋಗಿ ಹೋಗಿ, ದುರ್ಗುಣಗಳ ಕೆಚ್ಚುಗಟ್ಟಿದ ಆ ವಾಘನ ಮನೋವೃತ್ತಿಯು ಶಿಥಿಲವಾಗಲು, ಆ ಶಿಥಿಲ ಮನೋವೃತ್ತಿಯ ಸದವುಗಳಲ್ಲಿ ಸದ್ಗುಣಗಳ ಕಣಗಳ ಸೇರಹತ್ತಿದ್ದರಿಂದ, ಆತನಿಗೆ ಸ್ವಲ್ಪ ಸಮಾಧಾನವಾಯಿತು. ಅಂತಹ ಆ ಸಮಾಧಾನದ ಸ್ಥಿತಿಯಲ್ಲಿ ಆತನು ಪ್ರಾಮುಖ್ಯವಾಗಿ ಕಾಶಿಯ ಚಾತುರ್ಯದ ಕೃತಿಗಳನ್ನು ನೆನಿಸುವಾಗ, ಆ ಕೃತಿಗಳಿಗೆ ಆಕೆಯ ಸೌಂದರ್ಯದ ಬಣ್ಣವೇರುತ್ತ ಹೋಗಲು, ವಾಘನಿಗೆ ಅದೊಂದು ಆನಂದದ ಅನುಭವವೇ ಆದಂತಾಗಿ, ಆತನು ನೆಲದ ಮೇಲೆ ಬಿದ್ದು ಕೊಂಡಿರು ವಾಗಲೇ ನಿದ್ದೆಹೋದನು. ತಾಸೆರಡು ತಾಸು ಗಾಢನಿದ್ದೆ ಹತ್ತಿದ ಬಳಿಕ ಆತನಿಗೊಂದು ದಿವ್ಯ

ಸ್ವಪ್ನವು ಬಿದ್ದಿತು. ಆ ಸ್ವಪ್ನದಲ್ಲಿ ಒಬ್ಬ ದಿವ್ಯ ಪುರುಷನು ಬಂದು ಮುಗುಳುನಗೆಯಿಂದ ವಾಘ ನನ್ನು ಕುರಿತು—''ಏಳು ವೆಂಕಾಜೀ, ಮೇಲಕ್ಕೆ ಏಳು; ಚಿಂಚವಡದ ಗಣಪತಿಯ ದರ್ಶನಕ್ಕೆ ಹೋಗೋಣ ನಡೆ; ಇನ್ನು ಶೋಕ ಮಾಡಬೇಡ; ಈಗ ಸಮಾಧಾನವಾಯಿತೋ ಇಲ್ಲವೊ? ಏಳು ಏಳು'' ಎಂದು ನುಡಿದು ಆತನ ಕೈ ಹಿಡಿದು ಎಬ್ಬಿಸಿದಂತಾಗಲು, ವಾಘನಿಗೆ ಎಚ್ಚರ ವಾಯಿತು. ಆಗ ಆತನ ಕೈನೋವು ಪೂರಾ ಹೋಗಿ ಬಿಟ್ಟಿರಲು, ಆತನು ಪರಮಾನಂದ ದಿಂದ—''ಹಾ! ಗಣೇಶಾ, ಈ ಪಾಪಿಯನ್ನು ಉದ್ಧಾರ ಮಾಡು'' ಎಂದು ಭಕ್ತಿಯಿಂದ ಅನ್ನುತ್ತ ಮೇಲಕ್ಕೆ ಏಳುತ್ತಿರಲು, ಆತನ ಕೋಣೆಯ ಚಿಲಕ ತೆಗೆದು ಗಣೇಶ ಗೋಸಾವಿಗಳು ಪ್ರತ್ಯಕ್ಷ ವಾಗಿ ವಾಘನ ಎದುರಿಗೆ ಬಂದು ನಿಂತುಕೊಂಡರು; ಆಗ ಅದೇ ಸೂರ್ಯೋದಯವಾಗ ತೊಡಗಿತ್ತು.

ತನ್ನ ಸ್ವಪ್ನದಲ್ಲಿ ಬಂದಿದ್ದ ಸತ್ಪುರುಷನೇ ತನ್ನ ಮುಂದೆ ಬಂದು ನಿಂತದ್ದನ್ನು ನೋಡಿ, ವಾಘನು ಪರಮಾಶ್ಚರ್ಯದಿಂದ ತಟ್ಟನೆ ಎದ್ದು ನಿಂತು, ಭಕ್ತಿಪರವಶನಾಗಿ ಗಣೇಶ ಗೋಸಾವಿ ಗಳ ಚರಣಗಳ ಮೇಲೆ ಬಿದ್ದವನು ಬಿದ್ದುಬಿಟ್ಟನು. ಆಗ ಆ ಮಹಾತ್ಮನ ಚರಣಸ್ಪರ್ಶದಿಂದ ವಾಘನಿಗೆ ಅಪೂರ್ವವಾದ ಆನಂದವಾಗಲು, ಆತನ ಆನಂದಭಾಷ್ಪಗಳಿಂದ ಆ ಗೋಸಾವಿ ಗಳ ಪವಿತ್ರ ಚರಣಗಳ ಕ್ಷಾಲನವಾಗತೊಡಗಿತು! ಆಗ ಗೋಸಾವಿಗಳು ವಾಘನನ್ನು ಹಿಡಿದೆತ್ತಿ ಆತನ ಮೈಮೇಲೆ ಕೈಯಾಡಿಸುತ್ತ ಆತನನ್ನು ಕುರಿತು—''ವೆಂಕಾಜೀ, ನಡೆ, ನಿನ್ನ ಭಾಂಡಾರ ಗೃಹಕ್ಕೆ ಹೋಗುವಾ ನಡೆ, ಅಲ್ಲಿ ಶ್ರೀ ಗಣಪತಿಯ ದರ್ಶನ ಮಾಡಿಕೊಳ್ಳೋಣ! ವಾಘಾ, ಮೊದಲು ನಿನ್ನ ಕೈಯ ನೋವು ಹೇಗಿದೆ ಹೇಳು, ಅದು ಕಡಿಮೆಯಾಗಿದೆಯಲ್ಲವೆ? ಈ ನೇತಾಜಿಯು ಸಿಟ್ಟಿನ ಭರದಲ್ಲಿ ನಿನ್ನನ್ನು ಬಹು ಗಾಸಿಗೊಳಿಸಿದನು.'' ಅನ್ನಲು, ಪೂರಾ ನೋವು ಹೋಗಿಬಿಟ್ಟದ್ದ ವೆಂಕಾಜಿಯ ಕಣ್ಣೊಳಗಿಂದ ಒಂದೇಸವನೆ ನೀರು ಹೋಗುತ್ತಿರಲು, ಆತನು ಲಜ್ಜೆದೊರೆದು—''ಗುರುದೇವಾ, ನನ್ನ ಸ್ವಪ್ನದಲ್ಲೀಯೇ ನನ್ನ ಕೈನೋವು ಪೂರಾ ಕಳೆದುಬಿಟ್ಟಿದ್ದಿ ನೀನು. ಈಗ ನಾನು ಎಚ್ಚತ್ತಿರಲು, ಮತ್ತೆ ಕನಿಕರದಿಂದ ''ನೋವು ಹೇಗಿದೆ?'' ಎಂದು ನನ್ನನ್ನು ಕೇಳುವೆಯಾ? ಸಮರ್ಥಾ, ನನ್ನ ಕೈನೋವು ನಿನ್ನ ಕೃಪೆಯಿಂದ ಸ್ವಪ್ನದಲ್ಲಿಯೇ ಹೋಗಿಬಿಟ್ಟಿದೆ. ಕಾಶೀಬಾಯಿಯು ತನ್ನ ಬಲಹಸ್ತಕ್ಕೆ ಮಾಡಿದ್ದ ಕಠಾರಿಯ ಗಾಯದ ನೋವಿಗೆ, ಅದೇ ಹಸ್ತವನ್ನು ನೇತಾಜಿಯು ತನ್ನ ಮಹಾ ಸಾಮರ್ಥ್ಯದಿಂದ ಹಿಚಿಕಿ ರಕ್ತ ಚಿಮ್ಮಿಸಿದ್ದರಿಂದಾದ ನೋವು ಕೂಡಿ, ನನಗೆ ಪ್ರಾಣಾಂತ ವ್ಯವಸ್ಥೆಯು ಆಗತೊಡಗಿತ್ತು, ಗುರು ದೇವಾ, ಆ ಮಹಾ ವ್ಯಥೆಯನ್ನು ತಾಳಲಾರದೆ ಪಶ್ಚಾತ್ತಾಪದಿಂದ ಪ್ರಾಣತ್ಯಾಗ ಮಾಡ ಬೇಕೆಂತಲೂ ನಾನು ಮಾಡಿದ್ದೆನು; ಆಗ ನಾನು ಹೆಂಗಸಿಗಿಂತಲೂ ಹೆಂಗಸಾಗಿ ದೊಡ್ಡ ದನಿ ಯಿಂದ ಬಹಳ ಹೊತ್ತು ಅತ್ತೆನು; ಆದರೆ ಸದ್ಗುರುನಾಥಾ, ಅಂತಹ ವ್ಯಥೆಯನ್ನು ಅನುಭವಿ ಸುತ್ತಿದ್ದ ನನಗೆ ನಿದ್ದೆ ಹೇಗೆ ಹತ್ತಿತ್ತೋ, ಗುರುದೇವಾ, ನೀನು ಕನಸಿನಲ್ಲಿ ಹೇಗೆ ಬಂದಿಯೋ, ಆ ಮಹಾವ್ಯಥೆಯು ಕನಸಿನಲ್ಲಿಯೇ ಹೇಗೆ ನಿವಾರಣವಾಯಿತೋ ನಾನರಿಯೆನು. ಇದಕ್ಕೆಲ್ಲ ನಿನ್ನ ಕೃಪಾದೃಷ್ಟಿಯೇ ಕಾರಣವೆಂದು ನಾನು ತಿಳಿದಿದ್ದೇನೆ. ಸಮರ್ಥಾ, ಈಗ ನನ್ನ ಕೈ

ನೋವು ಹೋಗಿರುವದಲ್ಲದೆ, ನನ್ನ ದುಷ್ಟ ಮನಸ್ಸೂ ಬದಲು ಆಗಿ ಹೋಗಿರುವದು ಆಶ್ಚರ್ಯವಲ್ಲವೆ?''

ಈ ಮೇರೆಗೆ ನುಡಿದು ವಾಘನು ತನ್ನ ಬಳಿಯಲ್ಲಿ ನಿಂತಿದ್ದ ನೇತಾಜಿಯನ್ನು ಕುರಿತು —''ನೇತಾಜೀ, ಎಲೈ ನನ್ನ ಕೋಟಿ ಕಲ್ಯಾಣಮಾಡಿದ ಪ್ರಿಯ ಮಿತ್ರ ನೇತಾಜಿಯೇ, ಇತ್ತಬಾ, ದಂಗುಬಡಿದು ಸುಮ್ಮನೆ ಯಾಕೆ ನಿಂತಿರುವೆ? ನೀನು ಎಷ್ಟು ಬಲಿಷ್ಠನಿದ್ದರೂ, ನಿನ್ನ ಆ ರಾಜಸ ಬಲವು ಅನ್ಯರಿಗೆ ತಾಪ ಕೊಡತಕ್ಕಂತಹದೇ ಸರಿ; ಆದರೆ ನನ್ನ ಸದ್ಗುರುನಾಥನು ಬಲಿಷ್ಟ ರಲ್ಲಿ ಅತ್ಯಂತ ಬಲಿಷ್ಟನಾಗಿದ್ದರೂ, ಆತನ ಆ ಸಾತ್ವಿಕ ಮಹಾಬಲವು ಅನ್ಯರಿಗೆ ತಾಪ ಕೊಡತ ಕ್ಕಂತಹದಲ್ಲ, ನನ್ನಂಥ ಮಹಾಪಾಪಿಗಳ ತಾಪವನ್ನೂ ನಿವಾರಣ ಮಾಡತಕ್ಕಂತಹದು! ನೇತಾಜಿ, ನಿನ್ನ ಪ್ರಿಯತಮೆಯಾದ ಸಾಧ್ವೀ ಶಿರೋಮಣಿ ಕಾಶೀಬಾಯಿಯ ವಿಷಯದಲ್ಲಿ ಮಹಾನೀಚನು ನಾನು ದುರ್ಭಾವತಾಳಿದ್ದರಿಂದ, ಸ್ವಾಭಾವಿಕವಾಗಿಯೇ ನಾನು ನಿನ್ನ ವೈರಿ ಯಾದೆನು; ಮತ್ತುವೈರಿಯಾದ ನನಗೆ ಮಾಡತಕ್ಕ ಶಾಸನವನ್ನು ನೀನು ಚನ್ನಾಗಿ ಮಾಡಿಯೂ ಮಾಡಿದೆ; ಆದರೆ ನಮ್ಮ ಗುರುದೇವನಿಗೆ ಅತ್ಯಂತ ಪ್ರಿಯವಾಗಿದ್ದ ಧರ್ಮವನ್ನು ನಾನು ಬಿಟ್ಟು, ಅದನ್ನು ದ್ವೇಷಿಸುತ್ತಿರುವದರಿಂದ ನಾನು ಆ ಗುರುದೇವನ ಶತ್ರುವಾದೆನು; ಆದರೆ ಶತ್ರು ಮಿತ್ರಸಮಭಾವದ ಕರುಣಾಳುವಾದ ನನ್ನ ಆ ಸದ್ಗುರುವು, ನನ್ನನ್ನು ಶಿಕ್ಷಿಸುವದರ ಬದಲು ನನ್ನ ಬರಿಯ ತಾಪವನ್ನೇ ಅಲ್ಲ, ನನ್ನ ತಾಪವನ್ನೂ, ದೈನ್ಯವನ್ನೂ ನಿವಾರಣ ಮಾಡಿದನು; ಅಂತೇ ಈಗ ನನ್ನ ಮನಸ್ಸು ಝುಳಝುಳವಾಗಿರುವದು ನನ್ನ ಅನುಭವಕ್ಕೇ ಬರುತ್ತಲಿದೆ! ನೇತಾಜಿ, ನಾನು ತಿಳಿಯಹತ್ತಿದಾಗಿನಿಂದಲೂ ಮಹಾಪಾಪಿಯು, ಸಜ್ಜನ ನಿಂದಕನು, ಧರ್ಮದ್ವೇಷಿಯು, ದೈವದ್ರೋಹಿಯು, ರಾಜ್ಯದ್ರೋಹಿಯು, ಅತ್ಯಂತ ನಾಸ್ತಿಕನು, ಅಹಂಕಾರಿ ಗಳಲ್ಲಿ ಅಗ್ರಗಣ್ಯನು ಆಗಿರುವೆನು. ಇಂತಹ ಹಲವು ದ್ರೋಹಗಳ ಸಮುಚ್ಚಯವುಳ್ಳ ನನ್ನ ಮೇಲೆ ಕೃಪಾ ಸಮುದ್ರನಾದ ಸದ್ಗುರುವು ಮಾಡಿರುವ ಕೃಪೆಯನ್ನು ನೀನು ಈಗ ಕಣ್ಣು ಮುಟ್ಟಿ ನೋಡುಬಾ; ನೇತಾಜೀ, ಸಂಕೋಚಪಡಬೇಡ, ನಿನ್ನ ಮಿತ್ರನಾಗಿದ್ದ ಈ ವೆಂಕಾಜಿಯ ಬಳಿಗೆ ನಿರ್ಭಯದಿಂದ. ಇಗೋ, ನೀನು ಹಿಚಿಕಿ ರಕ್ತ ಚಿಮ್ಮಿಸಿದ್ದ ಈ ನನ್ನ ಬಲಹಸ್ತ ವನ್ನು ಚನ್ನಾಗಿ ನೋಡು'' ಎಂದು ತನ್ನ ಬಲಹಸ್ತವನ್ನು ನೇತಾಜಿಗೆ ತೋರಿಸಲು, ಆ ಹಸ್ತಕ್ಕೆ ಕಾಶಿಯು ಮಾಡಿದ್ದ ಕಠಾರಿಯ ಗಾಯವೂ ಇದ್ದಿಲ್ಲ; ನೇತಾಜಿಯು ಹಿಚಿಕಿ ಒಡೆದಿದ್ದ ಆತನ ಬೆರಳ ತುದಿಗಳ ಒಡಕುಗಳೂ ಇದ್ದಿಲ್ಲ! ಹೀಗೆ ತನ್ನ ಹಸ್ತವನ್ನು ತೋರಿಸುತ್ತಿದ್ದ ವೆಂಕಾಜಿ ವಾಘನ ಹೃದಯದಲ್ಲಿಯ ಭಕ್ತಿರಸವು ಒಮ್ಮೆಲೆ ಉಕ್ಕಿ, ಅದು ಅಶ್ರುರೂಪವಾಗಿ ಕಣ್ಣುಗಳಿಂದ ಮತ್ತೆಹೊರಬೀಳುತ್ತಿರಲು, ಆತನು ದೊಡ್ಡ ದನಿಯಿಂದ ಗೋಸಾವಿಗಳಿಗೆ—''ಗುರುದೇವಾ–ಗುರುದೇವಾ–ಸಮರ್ಥನಾದ ಗುರುದೇವಾ! ನಡೆ; ನಿನ್ನ ಅಪ್ಪಣೆಯಂತೆ ಚಿಂಚವಡದ ಗಣಪತಿಯ ದರ್ಶನಕ್ಕಾಗಿ ನನ್ನ ಭಾಂಡಾರಗೃಹಕ್ಕೆ ಹೋಗುವಾ ನಡೆ.'' ಎಂದು ನುಡಿದು ಭಕ್ತಿ ಯಿಂದ ಚಪ್ಪಾಳೆ ಬಾರಿಸುತ್ತ—''ಹೇರಂಬಾ, ಹೇರಂಬಾ, ಹೇರಂಬಾ, ನಮೋ ನಮೋ'' ಎಂದು ಗಣಪತಿಯ ಭಜನಮಾಡತ್ತ, ಗಣೇಶ ಗೋಸಾವಿಗಳ ಮುಂದೆ ಕುಣಿಯಹತ್ತಿದನು.

ಆಗ ಗಣೇಶ ಗೋಸಾವಿಗಳೂ, ವಾಘನದನಿಗೆ ದನಿಗೂಡಿಸಿ ವಾಘನೊಡನೆ ತಾವೂ ಶ್ರೀ ಗಣಪತಿಯ ಭಜನೆ ಮಾಡುತ್ತ ವಾಘನ ಬೆನ್ನುಹತ್ತಿ ನಡೆದರು. ಹೀಗೆ ಆ ಗುರು–ಶಿಷ್ಯರಿಬ್ಬರೂ ಭಕ್ತಿಪೂರ್ವಕ ಭಜನಮಾಡುತ್ತ ಹೋಗುವದನ್ನು ನೋಡಿ, ಅವರ ಸಂಗಡ ಇದ್ದ ನೇತಾಜಿಯೇ ಮೊದಲಾದವರೂ, ಅತ್ತ ದೂರದಲ್ಲಿ ಇದನ್ನೆಲ್ಲ ನೋಡುತ್ತ ನಿಂತಿದ್ದ, ನೇತಾಜಿ –ವೆಂಕಾಜಿ ವಾಘರಿಬ್ಬರ ಪರಿವಾರದವರೂ ಭಜನೆಮಾಡುತ್ತ ಗೋಸಾವಿಗಳ ಬೆನ್ನುಹತ್ತಿ ನಡೆದರು. ಆಗ ಶ್ರೀ ಗಣೇಶನ ದಿವ್ಯ ನಾಮಘೋಷದಿಂದ ವಾಘನ ಗವಿಯು ಗದಗಮಿಸಿ ಹೋಗಿ, ಅದು ಪವಿತ್ರವಾಗತೊಡಗಿತು. ಆಗ ವಾಘನು ತನ್ನ ಭಾಂಡಾರಗೃಹದಲ್ಲಿದ್ದ ಚಿಂಚವಡದ ಗಣಪತಿಯ ಬಂಗಾರದ ಮೂರ್ತಿಗೆ ಸಾಷ್ಟಾಂಗ ನಮಸ್ಕಾರಮಾಡಿ, ಅದನ್ನು ನಯ–ಭಯ– ಭಕ್ತಿಗಳಿಂದ ತನ್ನ ತಲೆಯಮೇಲೆ ಇಟ್ಟುಕೊಂಡು, ಗೋಸಾವಿಗಳ ಅಪ್ಪಣೆಯಂತೆ ದಿವಾಣಖಾನೆಗೆ ಹೊರಟನು. ಯಾವತ್ತು ಪರಿವಾರವು ಭಜನೆಮಾಡುತ್ತ ಆತನನ್ನು ಹಿಂಬಾಲಿಸಿತು. ಅವರೆಲ್ಲರೂ ದಿವಾಣ ಖಾನೆಗೆ ಬರಲು, ಗಣೇಶ ಗೋಸಾವಿಗಳ ವಾಘನ ತಲೆಯಮೇಲಿನ ಆ ಗಣಪತಿಯ ಮೂರ್ತಿಯನ್ನು ಭಕ್ತಿಯಿಂದ ಇಸುಕೊಂಡು, ದಿವಾಣ ಖಾನೆಯಲ್ಲಿಯ ಅಗ್ರಾಸನದ ಮೇಲೆ ಅದನ್ನು ಸ್ಥಾಪಿಸಿದರು. ಬಳಿಕ ಮಹಾತ್ಮರಾದ ಗಣೇಶ ಗೋಸಾವಿಗಳು ಆ ಮೂರ್ತಿಯನ್ನು ಯಥಾವಿಧಿ ಪೂಜಿಸಲು, ''ಪ್ರತಿ ಮಾಯಂತು ಸಾನ್ನಿಧ್ಯಂ ಅರ್ಚಕಸ್ಯ ತಪೋಬಲಾತ್'' ಎಂಬ ಉಕ್ತಿಯಂತೆ ಅರ್ಚಕರಾದ ಆ ಗಣೇಶ ಗೋಸಾವಿಗಳ ತಪೋಬಲದಿಂದ ಆ ಪ್ರತಿಮೆಯಲ್ಲಿ, ಪುನಃ ಗಣಪತಿಯ ಸಾನ್ನಿಧ್ಯವು ಪ್ರಾಪ್ತವಾಯಿತು. ಈ ಮೊದಲೆ ಪಾಪಿಷ್ಠನಾದ ಅಸ್ಪೃಶ್ಯ ವೆಂಕಾಜಿ ವಾಘನ ಸ್ಪರ್ಶದಿಂದ ಆ ಪ್ರತಿಮೆಯಲ್ಲಿಯ ದೇವತಾ ಸಾನ್ನಿಧ್ಯವು ನಷ್ಟವಾಗಿ ಹೋಗಿತ್ತು, ಆದ್ದರಿಂದಲೇ ದೇವತಾ ಪ್ರತಿಮೆಗಳ ಸಾನ್ನಿಧ್ಯವು ಹೋಗಬಾರದೆಂದು ಪ್ರತಿಮೆಗಳಿಗೆ ಅಸ್ಪೃಶ್ಯರ ಸ್ಪರ್ಶವಾಗದಂತೆ ಎಚ್ಚರಪಡಬೇಕಾಗುತ್ತದೆ!

ಇಲ್ಲಿ ವಿವೇಕಿಗಳಾಗಿದ್ದವರು ದೈವೀಭಾವದ ಪ್ರಭಾವವನ್ನು ಅವಶ್ಯವಾಗಿ ವಿಚಾರಿಸತಕ್ಕದ್ದು. ಈ ಮೊದಲು ವಿಷಯಭಾವದವನಾಗಿದ್ದ ವಾಘನಿಗೆ, ತನ್ನ ಭಾಂಡಾರದಲ್ಲಿ ಚೆಲ್ಲಿಕೊಡತಕ್ಕದ್ದಾಗಿ ತೋರುತ್ತಿದ್ದ ಬಂಗಾರದ ಗಣಪತಿಯೇ, ಈಗ ಅದೇ ವಾಘನು ದೈವೀಭಾವದವನಾದದ್ದರಿಂದ ಅದೇ ಗಣಪತಿಯ ಪ್ರತಿಮೆಯು ಆತನಿಗೆ ಉಪಾಶ್ಯದೈವತವಾಯಿತು! ಈಗ ಆತನು ಆ ಗಣಪತಿಯ ಮೂರ್ತಿಯನ್ನು ಮುಟ್ಟಲಿಕ್ಕೂ ಅಂಜಹತ್ತಿದನು! ಆದ್ದರಿಂದ ವಾಘನು ಈಗ ಆ ಗಣಪತಿಯ ಪ್ರತಿಮೆಗೆ ಅಸ್ಪೃಶ್ಯನಾದನು! ಅಂದಬಳಿಕ ದೇವರು ಮೂರ್ತಿಯಲ್ಲಿರುವನೋ ಅಥವಾ ಭಾವದಲ್ಲಿರುವನೋ ಎಂಬದನ್ನು, ಮೂರ್ತಿಗಳನ್ನು ಒಡೆಯುವವರೂ, ಮುತ್ತು ಸಿಕ್ಕವರನ್ನು ಗುಡಿಯಲ್ಲಿ ಹೋಗಿಸಿ ಭ್ರಷ್ಟಾಕಾರಮಾಡಿ ಮೂರ್ತಿಯಲ್ಲಿಯ ದೇವತ್ವವನ್ನು ಕಳೆದು, ಭಾವಿಕರ ಮೂರ್ತಿವಿಷಯಕ ದೈವೀಭಾವವನ್ನು ಹಾಳುಮಾಡಿ, ಅವರಲ್ಲಿ ಪಾಷಾಣ ಭಾವವನ್ನುಂಟು ಮಾಡುವ ದೈವದ್ರೋಹಿಗಳೂ ವಿಚಾರ ಮಾಡತಕ್ಕದ್ದು! ದೇವತಾ ಪ್ರತಿಮೆಗಳ ಸಂಬಂಧದ ಇಂತಹ ಹಲವು ಗೂಢ ವಿಚಾರಗಳೂ, ಗೌರವತಮಗಳಾದ ರಹಸ್ಯಗಳೂ ವೈದಿಕರೆನಿಸಿಕೊಳ್ಳುವ ಮಹಾ ಮಹಾ ಪಂಡಿತರಿಗೂ, ಲೋಕಾಗ್ರಣಿಗಳಿಗೂ ಸುತಾರಾಂ ತಿಳಿಯದಹಾಗಾಯಿತಲ್ಲ! ಹೀಗಾಗಲಿಕ್ಕೆ ಎಲೈ ಭಾರತ ಭೂಮಾತೇ,

ನಿನ್ನ ದುರ್ದೈವವು ಕಾರಣವಾಗಿರಬಹುದೋ, ಅಥವಾ ಅಧಮಾಧಮರಾಗಿ ಮಾತಾಪಿತೃ ದ್ರೋಹಿಗಳೂ, ದೈವದ್ರೋಹಿಗಳೂ ಆಗುತ್ತನಡೆದಿರುವ ನಿನ್ನ ಮಕ್ಕಳಾದ ನಮ್ಮ ದುರ್ದೈವವು ಕಾರಣವಾಗಿರಬಹುದೋ? ಅಥವಾ ಈ ಎರಡೂ ಕಾರಣಗಳನ್ನು ಹೇಳದೆ, ಕಾಲಮಹಿಮೆ ಯೆಂದು ಹೇಳಿಬಿಡುವದು ನೆಟ್ಟಗಲ್ಲವೆ?

ಇಲ್ಲಿ ಇನ್ನಿಷ್ಟು ಹೇಳುವದು ಆವಶ್ಯವೆಂದು ನಮಗೆ ತೋರುತ್ತದೆ. ಮನುಷ್ಯನ ದುರ್ಭಾವವನ್ನು ಸದ್ಭಾವವಾಗಿ ಮಾಡುವ ಉಪಾಯಗಳಲ್ಲಿ– ಸತ್ಸಮಾಗಮ, ಸದುಪದೇಶ, ಸದ್ಗ್ರಂಥಗಳು ಇವು ಮೂರು ಮುಖ್ಯವಾದವೆಂದು ಹೇಳಲಾಗುವದು; ಆದರೆ ವಿತ್ತಹಾರಕ ರಾದ ವೇಷಧಾರಿ ಸಜ್ಜನರ ಬಂಡೂ, ಕೇವಲ ದ್ರವ್ಯದೃಷ್ಟಿಯುಳ್ಳ ಕೀರ್ತನಕಾರರ, ಹಾಗು ಪುರಾಣಿಕರ, ಹಾಗು ಪ್ರವಚನಕಾರರ, ಅದರಂತೆ ಉಪನ್ಯಾಸಕರ ಸದುಪದೇಶಗಳ ಮಾಲಿಕೆಯೂ, ಎಂಥ ವಿಷಯ ಬರೆದರೆ ಜನರ ದುಡ್ಡು ಉಚ್ಚೀತೆಂಬ ಯೋಚನೆಯಿಂದ ಲೇಖ ಬರೆಯುವ ಲೇಖಕರ ಗ್ರಂಥಗಳ ಹಿಂಡು ಈಗ ದಿನದಿನಕ್ಕೆ ಹೆಚ್ಚುತ್ತ ಇದ್ದರೂ, ಜನರು ಸದ್ಭಾವದವರೂ, ಸದಾಚಾರಿಗಳೂ ಆಗುವದರ ಬದಲು, ಭರದಿಂದ ದುರ್ಭಾವದವರೂ, ದುರಾಚಾರಿಗಳೂ ಆಗುತ್ತಿರುವದರ ಅನುಭವವೇ ಎಲ್ಲ ಕಡೆಗೂ ಬರುತ್ತಿರುವದು. ಹೀಗಿದ್ದು, ಗಣೇಶ ಗೋಸಾವಿಗಳ ದರ್ಶನಮಾತ್ರದಿಂದ ವೆಂಕಾಜಿ ವಾಘನೂ, ಆತನ ಕಳ್ಳರ ಹಿಂಡೂ ತಟ್ಟನೆ ಸದ್ಭಾವದವರಾದದ್ದು ಅಶಕ್ಯವೆಂದು ಲೌಕಿಕಭಾವದವರಿಗೆ ತೋರಬಹುದು. ಕೇವಲ ಲೌಕಿಕ ಭಾವದವರಿಗೆ ಹೀಗೆ ತೋರಿದರೆ ಆಶ್ಚರ್ಯವೂ ಅಲ್ಲ. ಜೀವರು ರಮಿಸುವ ಸ್ಥಾನಗಳು ಎರಡೆಂದರೆ ಎರಡೇ ಇರುವವು. ಅವುಗಳಲ್ಲಿ ಒಂದನೆಯ ಸ್ಥಾನವು ಈ ಸೃಷ್ಟಿಯು; ಎರಡನೆಯ ಸ್ಥಾನವು ಈ ಸೃಷ್ಟಿಯ ಕರ್ತಾರನಾದ ದೇವರು. ಸೃಷ್ಟಿರೂಪ ಮಲಭಾಂಡದಲ್ಲಿ ರಮಿಸುವ ಲೌಕಿಕಭಾವದ ಕೃಮಿರೂಪ ಜೀವರಿಗೆ, ದೇವರೂ, ದೇವಭಕ್ತರೂ, ಧರ್ಮವೂ, ಅಲೌಕಿಕ ಶಕ್ತಿಯ ಅದ್ಭುತ ಕಾರ್ಯಗಳೂ ಬೇಡಾಗುವುವು: ಯಾಕಂದರೆ ಅವರು ಕೇವಲ ಸೃಷ್ಟಿಯನ್ನೇ ಅಲ್ಲದೆ ದೇವರನ್ನು ಕಂಡವರಲ್ಲ. ಇನ್ನು ದೇವರಲ್ಲಿ ರಮಿಸುವವರಿಗೆ ಮಲಭಾಂಡದಂತೆ ತೋರುವ ಈ ಸೃಷ್ಟಿಗೆ ಸೃಷ್ಟಿಯೇ ಬೇಡಾಗುವದು; ಯಾಕಂದರೆ ಅವರು ಸೃಷ್ಟಿಯನ್ನೂ, ದೇವರನ್ನೂ ಕೂಡಿಯೇ ಕಂಡವರಾಗಿದ್ದು, ದೇವರ ಮುಂದೆ ಸೃಷ್ಟಿಯು ಅವರಿಗೆ ತುಚ್ಛವಾಗಿ ತೋರುವದು. ಅಂದಬಳಿಕ ಗಣೇಶ ಗೋಸಾವಿಗಳಂಥ ಕೇವಲ ದೈವೀಭಾವದ ಮಹಾತ್ಮರು ಸೃಷ್ಟಿಯನ್ನು ಮಲಭಾಂಡದಂತೆ ತ್ಯಜಿಸಿದವರಿರುವರು. ಅಂಥ ದೇವಭಕ್ತರೇ ದೇವರ ಕೃಪೆ ಯಿಂದ ''ಕರ್ತುಮ ಕರ್ತುಮನ್ಯಥಾ ಕರ್ತುಂ'' ಸಮರ್ಥರಾಗಿ ಅಶಕ್ಯ ಕಾರ್ಯಗಳನ್ನು ಶಕ್ಯ ವಾಗಿ ಮಾಡುವರು. ಅಂದರೆ ಅವರು ಸೃಷ್ಟಿಯ ಕಾರ್ಯಕಾರಣ ಭಾವವನ್ನನುಸರಿಸಿ ಯಾವ ದೊಂದು ಅದ್ಭುತ ಕಾರ್ಯವನ್ನು ಮಾಡಲಿಕ್ಕೂ, ಅಂತಹ ಆ ಅದ್ಭುತ ಕಾರ್ಯವನ್ನು ಮಾಡದೆ ಇರುವದಕ್ಕೂ, ಸೃಷ್ಟಿಯ ಕಾರ್ಯಕಾರಣಭಾವದ ಹಂಗು ಇಲ್ಲದೆ ಯಾವದೊಂದು ಅದ್ಭುತ ಕಾರ್ಯವನ್ನು, ಅಂದರೆ ೬೦ ವರ್ಷದ ಬಂಜೆಗೆ ಮಕ್ಕಳು ಕೊಡುವಂಥ ಕಾರ್ಯವನ್ನು ಸ್ವತಂತ್ರ ವಾಗಿ ಮಾಡಲಿಕ್ಕೂ ಸಮರ್ಥರಾಗಿರುವರು. ಇಂಥಹ ದೈವೀಭಾವದ ಮಹಾತ್ಮರ ಇಂಥ ಅಲೌಕಿಕ ಅದ್ಭುತ ಕಾರ್ಯಗಳು, ಅಂದರೆ ಪವಾಡಗಳ ಉಲ್ಲೇಖವು ಜಗತ್ತಿನೊಳಗಿನ ಯಾವತ್ತು

ಧರ್ಮಗಳ ಧಾರ್ಮಿಕ ಗ್ರಂಥಗಳಲ್ಲಿಯೂ, ಪುರಾಣಾದಿಗಳಲ್ಲಿಯೂ ಆಗಿರುವದನ್ನು ಕಾಣ ಬಹುದು. ಆದರೆ ಕೇವಲ ಲೌಕಿಕರಾದವರಿಗೆ, ಅಂದರೆ ಕೇವಲ ಸೃಷ್ಟಿರೂಪ ಮಲಭಾಂಡದಲ್ಲಿ ರಮಿಸುವವರಿಗೆ ಅನಾದಿಕಾಲದಿಂದಲೂ ಇಂಥ ಪವಾಡಗಳು ಅಶಕ್ಯಗಳಾಗಿ ತೋರುತ್ತಲೇ ಬಂದಿರುವವು; ಮುಂದಾದರು ಹಾಗೆಯೇ ಅಶಕ್ಯವಾಗಿ ತೋರುತ್ತ ಹೋಗುವವು. ಯಾಕಂದರೆ, ಆ ಕೇವಲ ಲೌಕಿಕರಾದವರು ಸೃಷ್ಟಿಯೊಳಗಿನ ಲೋಕಗಳ ಸುಖಕ್ಕೆ ಮೋಹಿಸಿ, ಸೃಷ್ಟಿಕರ್ತಾರನಾದ ದೇವರ ಉಸಾಬರಿಗೆ ಹೋಗುವದೇ ಇಲ್ಲ! ಇಂಥವರ ಸ್ಥಿತಿಯು ''ಮೂಗುತಿಯ ಮಬ್ಬಿಗೆ ಮೋಹಿಸಿ, ಮೂಗು ಕೊಟ್ಟವನನ್ನು ಮರೆತಂತೆ'' ಆಗಿರುತ್ತದೆ; ಅಂದಬಳಿಕ ಪಾಪ! ಇಂಥ ಪಾಮರರು ''ದಾಕ್ಷಿಯ ಹಣ್ಣು ನಿಲುಕದ ನರಿಯಂತೆ'' ಪವಾಡ ಗಳ ವಿಷಯದಲ್ಲಿ ಹಲ್ಲು ತೆಗೆದು ನಕ್ಕರೆ, ಅವರ ಪಾಮರತ್ವಕ್ಕಾಗಿ ಕನಿಕರಪಡುವದಕ್ಕಿಂತ ಹೆಚ್ಚಿನದೇನೂ ಮಾಡಲಾಗುವದಿಲ್ಲ!

ಒಟ್ಟಿಗೆ, ಹತ್ತಿಯ ಹಂಚುವಲ್ಲಿ ನೊಣದ್ದೇನೆಂಬಂತೆ, ಈಶ್ವರ ಕೃಪೆಯನ್ನು ಪಡೆದಿದ್ದ ಗಣೇಶ ಗೋಸಾವಿಗಳಂಥ ಭಗವದ್ಭಕ್ತರ ಅದ್ಭುತ ಕಾರ್ಯಗಳಲ್ಲಿ ಕೇವಲ ಲೌಕಿಕಭಾವದವರ ದೇನೂ ಪ್ರಯೋಜನವಿರುವದಿಲ್ಲ. ಅಂತಹ ಆ ದೈವೀಭಾವದ ಮಹಾತ್ಮರ ಸಂಕಲ್ಪವನ್ನು ಸಿದ್ಧ ಗೊಳಿಸಲು ಪರಮೇಶ್ವರನೇ ಹೊಣೆಗಾರನು; ಆದ್ದರಿಂದ ಈಗ ಗಣೇಶ ಗೋಸಾವಿಗಳು ವೆಂಕಾಜಿಯನ್ನೂ, ಆತನ ಪರಿವಾರವನ್ನೂ ಸಜ್ಜನರನ್ನಾಗಿ ಮಾಡಬೇಕೆಂದು ಸಂಕಲ್ಪ ಮಾಡಲು, ಆ ಸಂಕಲ್ಪ ಸಿದ್ಧಿಗೆ ಅನುಕೂಲವಾಗುವಂತೆ ಪವಾಡಗಳ ಅನುಭವವು ವೆಂಕಾಜಿಗೂ, ಆತನ ಪರಿವಾರಕ್ಕೂ ಗಣೇಶ ಗೋಸಾವಿಗಳ ಮುಖಾಂತರವಾಗಿ ಆಗಿ, ಅವರೆಲ್ಲರಲ್ಲಿ ಗಣೇಶ ಗೋಸಾವಿಗಳ ವಿಷಯದ ಗುರುಭಾವವು ಉತ್ಪನ್ನವಾಗಲು, ''ಪರಶುಗಲ್ಲು ತಾಕಿದ ಕಬ್ಬಿಣವು ಬಂಗಾರವಾಗುವಂತೆ'' ಆ ತುಡುಗರು ಸಜ್ಜನರಾದರು! ಭಗವದವತಾರಗಳ, ಅಥವಾ ಭಗವ ದ್ಭಕ್ತರ ಮಹಾಮಹಿಮೆಯನ್ನು ವರ್ಣಿಸುವದು ಯಾರ ಯೋಗ್ಯತೆಯು? ಶ್ರೀಮದ್ಭಾಗವತ ದಲ್ಲಿ ಸ್ವತಃ ಶ್ರೀಕೃಷ್ಣನು ಉದ್ಧವನಿಗೆ, ಕಲಿಯುಗದವರ ಕಲ್ಮಿಷ ಮನೋವೃತ್ತಿಗಳು ಹೋಗಿ, ಕೃತಯುಗಕ್ಕೆ ಒಪ್ಪುವಂತೆ ಅವರ ನಿರ್ಮಲ ಮನೋವೃತ್ತಿಗಳು ಆಗಲಿಕ್ಕೆ, ''ನನ್ನ ಅವತಾರದ ಮೈಮೇಲಿನ ಗಾಳಿ ತಾಕಿದರೆ ಸಾಕೆಂ''ದು ಹೇಳಿದ್ದಾನೆ. ಅಂದಬಳಿಕ ಗಣೇಶ ಗೋಸಾವಿಗಳಂಥ ದೈವೀಭಾವದ ಮಹಾತ್ಮರು ಇಚ್ಛಿಸಿದರೆ, ಅವರ ಮೈಮೇಲಿನ ಗಾಳಿತಾಕಿ ಬೇಕಾದ ಕಾರ್ಯ ವಾಗಬಹುದೆಂದು ಆಸ್ತಿಕಬಾವದವರು ನಿಃಶಂಕೆಯಿಂದ ನಂಬತಕ್ಕದ್ದು.

## ಸದ್ಭಾವ ಸಾಮ್ರಾಜ್ಯ

ಈ ಮೊದಲೆ ಶಿವನೇರಿ ದುರ್ಗದಲ್ಲಿ ಚಿಂಚವಡದ ಮೋರಯಾ ಗೋಸಾವಿಗಳು ಶಿವಾಜಿಗೆ—''ಇನ್ನು ಎಂಟು ದಿನಗಳಲ್ಲಿ ವೆಂಕಾಜಿ ವಾಘನೂ, ಆತನ ಸರ್ವಸಂಪತ್ತೂ ನೀನಿದ್ದಲ್ಲಿಗೆ ನಡೆದು ಬರುವವೆಂ''ಬರ್ಥದ ಭವಿಷ್ಯ ಹೇಳಿದ್ದು ವಾಚಕರ ಸ್ಮರಣದಲ್ಲಿರ

ಬಹುದು. ಅದರಂತೆ ''ಅಂತಹ ಸಣ್ಣ ಕೆಲಸಕ್ಕೆ ನೀನು ಸ್ವತಃ ಹೋಗುವ ಕಾರಣವಿಲ್ಲವೆಂ''ದು ಹೇಳಿ, ಆ ಮೋರಯಾ ಗೋಸಾವಿಗಳು ವಾಘನ ಮೇಲಿನ ಶಿವಾಜಿಯ ದಂಡಯಾತ್ರೆ ಯನ್ನು ನಿಲ್ಲಿಸಿದ್ದನ್ನಾದರೂ ವಾಚಕರು ಮರೆತಿರಲಿಕ್ಕಿಲ್ಲ. ಶಿವರಾಯನಿಗಾದರೋ, ಮಹಾತ್ಮರ ಭವಿಷ್ಯವಾಣಿಯಲ್ಲಿ ಅತ್ಯಂತ ವಿಶ್ವಾಸ! ಆದರೆ ದ್ರವ್ಯದ ಅಭಾವದಮೂಲಕ ಆತನ ಸ್ವರಾಜ್ಯ ಸ್ಥಾಪನದ ಪ್ರಯತ್ನದ ಗತಿಯು ತೀರಾ ಮಂದವಾಗಿ ಹೋದದ್ದರಿಂದ, ಆತನಿಗೆ ಬಹಳ ಅಸ ಮಾಧಾನವಾಯಿತು. ಆತನು ಒಮ್ಮೊಮ್ಮೆ ತನ್ನ ಮನಸ್ಸಿನಲ್ಲಿ—''ಈಗೇ ಹೋಗಿ ಆ ವಾಘ ನನ್ನು ಹಣಿದು ಅವನ ಸಂಪತ್ತನ್ನು ಹರಣ ಮಾಡಿಕೊಂಡು ಬಂದುಬಿಡಲಾ?'' ಎಂದು ಆತುರ ಪಡುತ್ತಿರಲು, ಉತ್ತರ ಕ್ಷಣದಲ್ಲಿಯೇ ಆತನ ಮನಸ್ಸಿನಲ್ಲಿ—''ದೊಡ್ಡವರ ಮಾತು ಸುಳ್ಳು ಹೇಗಾದೀತು? ನಾನು ಅವರ ಮಾತು ಮೀರಿ ನಾಸ್ತಿಕತನದಿಂದ ವಾಘನ ಪಾರಪತ್ಯಮಾಡಲಿಕ್ಕೆ ಹೋಗುವ ಸಂಭವವಾದರೂ ಇರುತ್ತದೆಯೇ? ಮೇಲಾಗಿ ವೆಂಕಾಜಿ ವಾಘನು ನಮ್ಮ ಹಿಂದುವೇ ಆಗಿದ್ದು, ಆತನ ಬಳಿಯಲ್ಲಿ ಒಟ್ಟುಗೂಡಿರುವ ಸಂಪತ್ತಾದರೂ ಸ್ವದೇಶಬಾಂಧ ವರನ್ನು ಸುಲಿದು ತಂದು ಕೂಡಿಸಿದ್ದಾಗಿರುವದು; ಅಂದಬಳಿಕ ನ್ಯಾಯತಃ ನಾನು ಅದನ್ನು ಗ್ರಹಿಸಲಿಕ್ಕೂ ಬರುವದಿಲ್ಲ; ಅಂದಬಳಿಕ ನಾನು ಇಷ್ಟು ಉಲಕೋಚಿತನ ಮಾಡುವದು ನ್ಯಾಯವಾಗಬಹುದೇ? ದೊಡ್ಡವರ ಭವಿಷ್ಯವಾಣಿಯಂತೆ ಆ ಸಂಪತ್ತು ತಾನಾಗಿ ನನ್ನ ಬಳಿಗೆ ಬಂದಾಗ, ಅದನ್ನು ಸ್ವೀಕರಿಸುವ ಸಂಬಂಧದಿಂದ ವಿಚಾರ ಮಾಡೋಣವಂತೆ. ಈಗ ಏಳು ದಿನಗಳಂತು ಕ್ರಮಿಸಿಹೋದವು; ನಾಳೆಗೇ ಎಂಟನೇ ದಿವಸವು; ಇಂದು ರಾತ್ರಿ ಶ್ರೀ ಭವಾನಿಯ ಸನ್ನಿಧಿಯಲ್ಲಿ ಕುಳಿತು ಆಕೆಯನ್ನು ಪ್ರಾರ್ಥಿಸುತ್ತ ಇಂದಿನ ಆ ರಾತ್ರಿಯನ್ನು ಕಳೆದುಬಿಟ್ಟ ರಾಯಿತು!

ಶ್ರೇಯಸ್ಕರವಾದ ಮಹಾಕಾರ್ಯ ಮಾಡುವವರಿಗೆ ಸರ್ವಥಾ ಸುಖವಿಲ್ಲವೆಂಬ ಮಾತು ನಿಶ್ಚಯವಾದದ್ದೇ. ಆ ಮಾತು ಶಿವರಾಯನಿಗೂ ಹತ್ತುವದು. ಶಿವರಾಯನು ಮೇಲೆ ಹೇಳಿದಂತೆ ವಿಚಾರಮಾಡಿ ಸುಮ್ಮನೆ ಇದ್ದು ಬಿಡಲಿಲ್ಲ; ಆತನ ಮನಸ್ಸು ಮತ್ತೆ ಮತ್ತೊಂದು ಕಡೆಗೆ ಓಡಿ ಹೋಗಬೇಕೆನ್ನಹತ್ತಿತು. ಆಗ ಆತನು ತನ್ನ ಮನಸ್ಸಿನಲ್ಲಿ—''ವೆಂಕಾಜಿ ವಾಘನ ಸಂಪತ್ತು ಬಂದರೆ ಬರಲಿ, ಅದು ಎಷ್ಟು ಬರುವದೋ ಏನೋ! ನನಗೆ ದುಡ್ಡಿನ ಹಗೇವು ಸಿಕ್ಕರೂ ಸಾಲುವಹಾಗಿಲ್ಲ. ಕೂಲಿಕಾರರ ಕೂಲಿಕುಂಬಳಿ, ದಂಡಾಳುಗಳ ಸಂಬಳಸಾರಿಗೆ, ಅಂಗಡಿಕಾರರ ಉದ್ದರಿ ಉಚಾಪತಿ, ಪತ್ತಿನವರು ಕೊಟ್ಟಿರುವ ಕೈಗಡ ಕಟ್ಟಗಡ ಇವು ನಿಂತುಹೋಗಿವೆ; ಅಖಂಡ ಮೂರು ತಿಂಗಳಾದರೂ ಅವರಿಗೆ ಒಂದು ಪೈಯನ್ನೂ ನಾನು ಕೊಟ್ಟಿರುವದಿಲ್ಲ. ಇವಲ್ಲದೆ, ಸಾವುಕಾರರಿಂದ ಸಾಲವಾಗಿ ತಂದಿದ್ದ ದೊಡ್ಡ ದೊಡ್ಡ ರಕಮುಗಳೂ ಇರುವವು. ಆ ಸಾವುಕಾರರಿಗೆ ಎರಡು ವರ್ಷಗಳಿಂದ ಒಂದುಕಾಸು ಬಡ್ಡಿಯನ್ನು ಕೂಡ ನಾನು ಕೊಡದಿ ರುವದು ಅನ್ಯಾಯವಲ್ಲವೇ? ನಾನು ಮಹಾಕಾರ್ಯಕ್ಕೆ ಕೈ ಹಾಕಿರುವನೆಂದು ತಿಳಿದು, ಯಾರೂ ನನಗೆ ತಗಾದೆ ಮಾಡಿರುವದಿಲ್ಲ ಸರಿ! ಬಡ ಕೂಲಿಕಾರರು ಕೂಡ ಉಪವಾಸದಿಂದಲಾದರೂ ನನ್ನ ಮೇಲಿನ ಭಕ್ತಿಯಿಂದ ಕೆಲಸ ಮಾಡುತ್ತಲಿರುವರು; ಆದರೆ ಇದು ಅವರೆಲ್ಲರ ದೊಡ್ಡಿ

ಸ್ತನದ ಪರಿಣಾಮವಾಯಿತು; ಆದರೆ ನಾನು ಅವರ ದೊಡ್ಡಸ್ತನದ ಉಪಯೋಗ ಮಾಡಿಕೊಂಡು ಆ ಬಡವರ ಸತ್ವಪರೀಕ್ಷೆ ಮಾಡುವದು ನ್ಯಾಯವೇ? ಆದರೆ ಅವರೆಲ್ಲರೂ ನನ್ನ ಬಾಗಿಲು ಕಟ್ಟಿ ಕುಳಿತುಕೊಂಡರೆ ನನ್ನ ಗತಿಯೇನಾದೀತು? ಅವರಿಗೇನು ನನ್ನ ಹಲ್ಲು ಉಚ್ಚಿಕೊಡಲಾ? ದುಡ್ಡಿಗಾಗಿ ನಾನು ಯಾರಿಗೆ ಶರಣುಹೋಗಲಿ? ಹಿಂದಿನ ದುಡ್ಡು ಕೊಡಲಾರದ ನನ್ನಂಥ ಅಧಮನಿಗೆ ಮತ್ತೆ ಹೊಸದಾಗಿ ದುಡ್ಡು ಯಾರು ಕೊಟ್ಟಾರು? ಮಾತೇ ಭವಾನೀ, ಇಂತಹ ಕಷ್ಟವು ನನಗೆ ಯಾಕೆ ಬರಬೇಕು? ನನ್ನ ಯಾಗ್ಯತೆ ಅರಿಯದೆ ಅಹಂಕಾರದಿಂದ ನಾನು ಸ್ವರಾಜ್ಯಸ್ಥಾಪನದ ಕಾರ್ಯಕ್ಕೆ ಕೈಹಾಕಿದ್ದರಿಂದ, ಇಂಥ ಕಷ್ಟದೆಶೆಯು ನನಗೆ ಬಂದಿರಬಹುದೇ? ಅಥವಾ ನನ್ನ ತಂದೆಯವರಾದ ಶಹಾಜಿರಾಜರವರ ಉಪದೇಶದಂತೆ ವಿಜಾಪುರದ ಬಾದಶಹನಿಗೆ ನಾನು ಅಂಕಿತನಾಗಿ ನಡೆಯದೆ, ಎಟ್ಟಿತನದಿಂದ ಸ್ವರಾಜ್ಯಸ್ಥಾಪನೆಯು ಉಸಾಬರಿಗೆ ಹೋಗಲು, ಪಿತೃದ್ರೋಹರಾಜದ್ರೋಹಗಳು ತಟ್ಟಿ ನನ್ನ ಗತಿಯು ಹೀಗಾಗಿರಬಹುದೋ? ನನ್ನ ಪೂಜ್ಯ ತಾಯಂದಿರಾದ ಜೀಜಾಬಾಯಿ ಸಾಹೇಬರವರೂ, ನನ್ನ ಗುರುಗಳಾದ ದಾದೋಜಿ ಕೊಂಡದೇವರವರೂ ನನ್ನ ವಿಷಯದ ಪ್ರೇಮಾಭಿಮಾನಗಳುಳ್ಳವರಾಗಿ ನನ್ನ ಕಾರ್ಯಕ್ಕೆ ಅನುಕೂಲರಾಗಿರುತ್ತಿದ್ದರೂ, ನಾನು ನನ್ನ ತಂದೆಯವರ ವಿರುದ್ಧ ನಡೆದು ಅವರ ಮನಸ್ಸು ನೋಯಿಸದೆ ಅವರು ಹೇಳಿದಂತೆ ಕೇಳಿದರೆ, ನನ್ನ ಆ ತಾಯಿಯವರಿಗೂ, ಗುರುಗಳಿಗೂ ಪರಮಾನಂದವಾಗುವಹಾಗಿದೆ; ಅಂದಬಳಿಕ ನಾನು ಒಂದು ರೀತಿಯಿಂದ ನನ್ನ ಆಪ್ತೇಷ್ಟರೆಲ್ಲರ ವಿರುದ್ಧವಾಗಿ ಈ ನೀಗದ ಮಹಾಕಾರ್ಯಕ್ಕೆ ಕೈಹಾಕಿದ ಹಾಗಾಗಿರುವದು. ಅಂತೇ, ನಾನು ಇಂತಹ ಸಂಕಟಕ್ಕೆ ಈಡಾಗಿದ್ದೇನೆ! ಶಿವ ಶಿವ! ಈ ಸ್ಥಿತಿಯಲ್ಲಿ ನಾನು ಏನು ಮಾಡಬೇಕಾದೀತು? ಯಾರಿಗೆ ಶರಣು ಹೋಗಬೇಕಾದೀತು? ಯಾರಿಗೆ ದಯಬಂದು ನನ್ನನ್ನು ಹೊಟ್ಟೆಯಲ್ಲಿ ಹಾಕಿಕೊಂಡಾರು!

ಶಿವರಾಯನು ಹೀಗೆ ವಿಚಾರ ಮಾಡುತ್ತ ನಿರ್ವಿಣ್ಣನಾಗಿ ಸುಮ್ಮನೆ ಕುಳಿತುಕೊಂಡನು. ಧೀರನೂ, ಗಂಭೀರನೂ, ಕರ್ಮವೀರನೂ, ದೇವಭಕ್ತನೂ ಆಗಿದ್ದ ಶಿವರಾಯನಂಥ ಮಹಾವಿಭೂತಿಯ ಮನಸ್ಸು ಕೂಡ, ಅಪರೂಪವಾಗಿಯೇ ಆಗಲೊಲ್ಲದೇಕೆ, ಇಂತಹ ನೀಚ ಸ್ಥಿತಿಯನ್ನು ಹೊಂದುತ್ತಿರುವದನ್ನು ಮನಸ್ಸಿನಲ್ಲಿ ತಂದರೆ, ತಮ್ಮ ಯೋಗ್ಯತೆ ಮೀರಿದ ಶ್ರೇಯಸ್ಕರ ಕಾರ್ಯಕ್ಕೆ ಕೈಹಾಕಿದ ಸರ್ವಸಾಮಾನ್ಯ ಜನರ ಮನಸ್ಸು, ಪ್ರತಿಕೂಲ ಸ್ಥಿತಿಯಲ್ಲಿ ಚಿಂತೆ ಯಿಂದ ಕೊಳೆಯುತ್ತಲಿದ್ದರೆ ಆಶ್ಚರ್ಯವೇನು? ಹೀಗೆ ಸುಮ್ಮನೆ ಚಿಂತೆಮಾಡುತ್ತ ಕುಳಿತುಕೊಳ್ಳು ವದು ಶಿವರಾಯನ ಸ್ವಭಾವವಲ್ಲ, ಸ್ವಲ್ಪ ಕಾಲ ಹೀಗೆ ವಿಚಾರಮಾಡುತ್ತ ಕುಳಿತವನು ತಟ್ಟನೆ ಎದ್ದು ತನ್ನ ಇಷ್ಟದೈವತವಾದ ಶ್ರೀ ಭವಾನಿಯ ದರ್ಶನಕ್ಕಾಗಿ ಹೋದನು. ಅಂದು ಶುಕ್ರವಾರ, ಶಿವರಾಯನ ಉಪೋಷಣದ ದಿವಸ, ಆ ಭಾವಿಕನು ಅಂದು ಒಂದೇ ಹೊತ್ತು ಊಟ ಮಾಡುತ್ತಿದ್ದನು. ಆತನು ತನ್ನ ಭವಾನಿಯ ಮಂದಿರಕ್ಕೆ ಹೋದಾಗ, ಐದು ತಾಸು ರಾತ್ರಿಯಾಗಿರಬಹುದು; ಮಂದಿರದಲ್ಲಿ ಹಲವು ನಂದಾದೀಪಗಳು ಢಾಳಾಗಿ ಉರಿಯುತ್ತಿದ್ದವು; ಅಂದು ಶುಕ್ರವಾರದ ಅಲಂಕಾರ ಪೂಜೆಯಾದದ್ದರಿಂದ, ಜಗಜ್ಜನನಿ ಅಂಬಾಬಾಯಿಯು ಬಹಳ

ಎದ್ದು ಕಾಣುತ್ತಿದ್ದಳು; ನಮ್ಮ ಭಾವಿಕ ಶಿವರಾಯನಿಗಂತು ಅಂದಿನ ಅಂಬಾಭವಾನಿಯ ಮೂರ್ತಿಯು, ವರಕೊಡಲು ಸಿದ್ಧಳಾಗಿ ನಿಂತಿದ್ದು, ತನ್ನನ್ನು ''ಬೇಗ ಬಾ'' ಎಂದು ಕರೆಯುತ್ತಿರುವ ಹಾಗೆ ತೋರಿತು. ಅಂತಹ ಆ ವರದ ಮೂರ್ತಿಯನ್ನು ನೋಡಿದ ಕೂಡಲೆ ಶಿವರಾಯನ ಚಿಂತೆಯು ದೂರವಾಯಿತು. ಈ ಸ್ಥಿತಿಯಲ್ಲಿ ಆ ದೇವ ಮಂದಿರದ ಏಕಾಂತ ಸ್ಥಾನ, ಆ ಏಕಾಂತ ಸ್ಥಾನವನ್ನು ತುಂಬಿಕೊಂಡು ಹೊರಬಿದ್ದು ಹೋಗುತ್ತಿರುವ ವಿವಿಧ ಸುಗಂಧ ಪುಷ್ಪಗಳ, ಹಾಗು ಸುಗಂಧ ಧೂಪಗಳ ಅಲ್ಹಾದದಾಯಕ ಮಿಶ್ರಗಂಧ, ಆ ಮಿಶ್ರಗಂಧರೂಪ ಪ್ರಸಾದದಿಂದ ಉತ್ತೇಜಿತವಾದ ಶಿವರಾಯನ ದೈವೀಭಾವ, ಆ ದೈವೀಭಾವದಿಂದ ಉತ್ಪನ್ನ ವಾದ ಶಿವರಾಯನ ಕಾರ್ಯೋತ್ಸಾಹ ಇವು ಆ ದೇವಿಯ ಪರಮ ಪ್ರಸಾದಗಳಂತೆ ಒಂದೊಂದಾಗಿ ಶಿವರಾಯನಿಗೆ ಲಭಿಸಲು, ಆತನು ಕಾರ್ಯೋತ್ಸಾಹದಿಂದ ಶ್ರೀ ಭವಾನಿಗೆ ಸಾಷ್ಟಾಂಗ ನಮಸ್ಕಾರಮಾಡಿ ಎದ್ದು ಕೈಜೋಡಿಸಿ ನಿಂತುಕೊಂಡು, ಎವೆ ಇಕ್ಕದೆ ಆ ಜಗನ್ಮಾತೆಯ ಪ್ರತಿಮೆಯನ್ನು ನೋಡುತ್ತ ನಿಂತುಬಿಟ್ಟನು. ಆಗ ಆತನಿಗೆ , ತಾನೂ ಜಗತ್ತೂ ಭವಾನಿ ಯಲ್ಲಿಯೇ ಅಡಗಿಹೋದಂತಾಗಿ, ಭವಾನಿಯೊಬ್ಬಳೇ ಆತನ ಕಣ್ಣಿಗೆ ಕಾಣತೊಡಗಿದಳು! ಹೀಗೆ ಶಿವರಾಯನು ಬಹಳಹೊತ್ತು ದೇವಿಯನ್ನು ನೋಡುತ್ತ ನಿಂತುಕೊಂಡಿರಲು, ದೇವಿಯು ಶಿವರಾಯನಿಗೆ—''ಶಿವಬಾ, ಚಿಂತೆಮಾಡಬೇಡ, ಕಾರ್ಯವು ನಿನ್ನದಲ್ಲ ನನ್ನದು; ಈ ಪ್ರಸಾದ ವನ್ನು ಹಿಡಿ'' ಎಂದು ನುಡಿದಂತಾಯಿತು! ಆಗ ಶಿವರಾಯನು ಉತ್ಸಾಹದಿಂದ ಮುಂದಕ್ಕೆ ಹೋಗಿ ಕೈ ಒಡ್ಡಲು, ದೇವಿಯ ಕಿರೀಟದ ಮೇಲಿನ ಸಂಪಗೆಯ ಹೂ ಶಿವರಾಯನ ಬೊಗಸೆ ಯಲ್ಲಿ ಬಿದ್ದಿತು! ಆಗ ಶಿವರಾಯನಿಗೆ ಆದ ಆನಂದವನ್ನು ವರ್ಣಿಸಲು ಶಕ್ಯವಲ್ಲ. ಆತನು ಮಹಾದೇವಿಯ ಪ್ರಸಾದವನ್ನು ಕಣ್ಣು ಮೂಗುಗಳಿಗೆ ಹಚ್ಚಿಕೊಂಡು, ಆನಂದಬಾಷ್ಪಗಳು ಉದುರುತ್ತಿರಲು ಆತನು ದೇವಿಯನ್ನು ಕುರಿತು—''ಆಯೀ, ಅಂಬಾಭವಾನಿ, ನೀನು ಪ್ರಸಾದ ಕೊಟ್ಟೆ, ಸಂತೋಷವಾಯಿತು; ಆದರೆ ದ್ರವ್ಯಪ್ರಾಪ್ತಿಯ ಕಾರ್ಯವು ಪೂರ್ಣವಾಗುವವರೆಗೆ ನನಗೆ ತೃಪ್ತಿಯು ಮಾತ್ರ ಆಗಲಾರದು!

ಹೀಗೆ ಶಿವರಾಯನು ನುಡಿಯುತ್ತಿರಲು, ತನ್ನ ಬೆನ್ನ ಹಿಂದುಗಡೆಯಲ್ಲಿ ಯಾರೋ ಬಂದು, ಪಾತ್ರೆಯನ್ನು ಕೆಳಗಿಟ್ಟು ಸಪ್ಪಳವಾಯಿತು. ಆಗ ಆತುರದಿಂದ ಶಿವರಾಯನು ಹಿಂದಿರುಗಿ ನೋಡಲು, ಆತನ ತಾಯಿಯಾದ ಜೀಜಾಬಾಯಿಯವರು ಎರಡನೆಯ ಅಂಬಾ ಭವಾನಿಯಂತೆ ಶಿವರಾಯನನ್ನು ಕುರಿತು–ಶಿವಬಾ, ದೇವಿಯಲ್ಲಿ ಎಷ್ಟು ಭಕ್ತಿಯಪ್ಪಾ ನಿನ್ನದು, ಎಂತಹ ದೇವಭಕ್ತನಪ್ಪಾ ನೀನು! ಬರಿಯ ದೇವಿಯ ಪುಷ್ಪದ ಪ್ರಸಾದದಿಂದ ನಿನಗೆ ಆನಂದ ವಾದದ್ದು ಸಹಜವು; ಆದರೆ ನಾನು ಈಗ ತಂದಿರುವ ಅಂಬಾಬಾಯಿಯ ಈ ಪ್ರಸಾದವನ್ನು ಸ್ವೀಕರಿಸದೆ ನಿನಗೆ ತೃಪ್ತಿಯು ಹೇಗಾದೀತು? ಇಂದು ಶುಕ್ರವಾರವಲ್ಲವೆ? ಆರು ತಾಸು ರಾತ್ರಿಯಾಗಿ ಹೋಯಿತು? ಶಿವಬಾ, ಉಪಹಾರ ಮಾಡುವದಿಲ್ಲವೇನು? ಅಪ್ಪಾ ಯಾಕೋ ನೀನು ಇಂದು ಮಧ್ಯಾಹ್ನದ ಊಟವನ್ನೂ ನೆಟ್ಟಗೆ ಮಾಡಿರುವದಿಲ್ಲ, ನಡುವೆಯೂ ಏನೂ ತಿಂದಿರುವದಿಲ್ಲ; ಆದ್ದರಿಂದ ಎಷ್ಟು ಹಸಿದೆಯಲ್ಲಪ್ಪಾ! ಇಗೋ, ದೇವಿಗೆ ಅರ್ಪಿಸಿರುವ ಈ

ಉಪಹಾರದ ಪದಾರ್ಥಗಳ ಪ್ರಸಾದವನ್ನು ನಿನ್ನ ಸಲುವಾಗಿ ತಂದಿದ್ದೇನೆ; ಸ್ವೀಕರಿಸು. ಶಿವಭಾ, ನೀನು ಉಪಹಾರ ಮಾಡದೆ ನನಗೆ ಹಸಿವೆಯಾದರೂ ಹೇಗೆ ಆದೀತು ಹೇಳು!'' ಎಂದು ಕೇಳಲು, ಮಾತೃಭಕ್ತನಾದ ನಮ್ಮ ಶಿವರಾಯನು ತಾಯಿಯ ಚರಣಗಳ ಮೇಲೆ ಮಸ್ತಕವಿಟ್ಟು —''ಅವ್ವಾ, ನೀನು ಪ್ರತ್ಯಕ್ಷ ಅಂಬಾಭವಾನಿಯು! ಇಗೋ ಈ ಅಂಬಾಭವಾನಿಯು ತನ್ನ ಕಿರೀಟದ ಮೇಲಿನ ಈ ಸಂಪಗೆಯ ಪುಷ್ಪದ ಪ್ರಸಾದ ಕೊಟ್ಟಿದ್ದು ಸಾಲದೆ, ಅದೇ ಅಂಬಾ ಭವಾನಿಯು ನಿನ್ನ ರೂಪದಿಂದ ಈ ದಿವ್ಯಪ್ರಸಾದ ಕೊಡಲು, ಪ್ರತ್ಯಕ್ಷವಾಗಿ ಬಂದಿರುವಳು. ಅವ್ವಾ! ಇಷ್ಟು ಹೊತ್ತಾದರೂ ನಿನ್ನ ಉಪಹಾರವಾಗಿರುವದಿಲ್ಲವೇ? ಅವ್ಮಾ! ನೀನು ಹೀಗೆ ಉಪವಾಸ ವನವಾಸ ಮಾಡಿದರೆ ನಿನ್ನ ಶಿವಬಾನ ಗತಿಯೇನು? ಅಂತಹ ಆ ಎಟ್ಟಿ ಮಗನ ಕಾಲದಲ್ಲಿ ನೀನು ಇಷ್ಟು ಹೊತ್ತು ಉಪವಾಸವಿರಬೇಕಾಯಿತಷ್ಟೇ? ಅಂದಬಳಿಕ ನಿನ್ನ ಶಿವಬಾನ ಮಾತೃ ಭಕ್ತಿಗೆ ಸರ್ವಥಾ ಬೆಲೆಯಿಲ್ಲನೋಡು!

ಜಿಜಾಯಿ—ಹಾಗಲ್ಲ ಶಿವಬಾ; ನೀನು ಸರ್ವಥಾ ಎಟ್ಟಿ ಮಗನಲ್ಲ ಕಂಡೆಯಾ! ಮಗೂ, ಶಿವೂ, ನೀನು ನನಗೊಬ್ಬಳಿಗೇ ಅಲ್ಲ, ಇಡಿಯ ಮಹಾರಾಷ್ಟ್ರಕ್ಕೇ, ಅದೇಕೆ ಇಡಿಯ ಭರತ ಭೂಮಿಗೇ ನೀನು ಮುದ್ದು ಮಗುವಾಗಿರುತ್ತೀ. ಅಪ್ಪಾ, ಶಿವರಾಯಾ, ಹಡೆದ ಕರಳು ಶಾಂತ ವಾಗಿದೆ. ತಾಯಿಯು ಶಾಂತಳಾಗಳೆಂಬ ಮಾತು, ನಿನ್ನ ಹೊಟ್ಟೆಯಲ್ಲಿ ಒಬ್ಬ ರಣಶೂರ ಮಗನು ಹುಟ್ಟಿದಾಗ ನಿನ್ನ ಅನುಭವಕ್ಕೆ ಬಂದೀತು! ಇರಲಿ, ಶಿವಭಾ, ನನ್ನ ಆಶೀರ್ವಾದದಿಂದ ಅಂತಹ ಶೂರ ಪುತ್ರನನ್ನು ನೀನು ಬೇಗನೆ ಕಾಣುವೆ; ಆದರೆ ಇಂದು ನನ್ನ ಉಪಹಾರಕ್ಕೆ ಇಷ್ಟು ವಿಲಂಬವಾಗಲಿಕ್ಕೆ ನೀನೊಬ್ಬನೇ ಕಾರಣನಲ್ಲ, ಬೇರೊಂದು ಆನಂದದ ಸುದ್ದಿಯೂ ಕಾರಣವಾಗಿರುವದು!

ಶಿವರಾಯ—ಅವ್ಮಾ, ಅಂತಹ ಆನಂದದ ಸುದ್ದಿಯು ಯಾವದು? ಯಾರಾದರು ಸಾಧು–ಸಂತರ ಚರಣ ಧೂಲಿಯು ನಿನ್ನ ಶಿವಬಾನ ಮನೆಯಲ್ಲಿ ಬಿದ್ದಿತೋ ಏನು?

ಜಿಜಾಯಿ—ಹೌದು ಶಿವಬಾ, ಮಹಾಗಾಣಪತ್ಯರಾದ ಗಣೇಶ ಗೋಸಾವಿಗಳು, ಇಂದು ಎರಡು ತಾಸು ರಾತ್ರಿಯಾಗಿರಲು, ಸಪರಿವಾರ ನಿನ್ನ ವಾಡೆಗೆ ಬಂದರು.

ಶಿವರಾಯ—ಅವ್ವಾ! ಸಪರಿವಾರವೆಂದು ಹೇಳುವೆಯಲ್ಲ, ಹಾಗಾದರೆ ಗಣೇಶ ಗೋಸಾವಿಗಳೊಡನೆ ಮತ್ತೆ ಯಾವ ಯಾವ ಸಾಧು–ಸತ್ಪುರುಷರು ಬಂದಿರುವರು? ಸಾಧು ಗಳ ಪರಿವಾರವು ಸಾಧುಗಳೇ ಇರಬೇಕಾಗುವದಲ್ಲವೆ?

ಜಿಜಾಯಿ—ಹೌದು, ಗಣೇಶ ಗೋಸಾವಿಗಳ ಪರಿವಾರವು ಐದನೂರು ಜನ ಸಾಧು ಗಳಿರುವರು; ಅವರಲ್ಲಿ ವೆಂಕಾಜಿ ವಾಘನೂ ಒಬ್ಬ ಸಾಧುವೇ ಆಗಿರುವನು! ಶಿವಬಾ, ಸಾಧು–ಸಂತರ ಮಹಾ ಮಹಿಮೆಯನ್ನು ವರ್ಣಿಸುವ ಯೋಗ್ಯತೆಯು ಯಾರಿಗಿರುವದು? ರಾಜಗಳ್ಳ ನಾಗಿದ್ದ ವೆಂಕಾಜಿ ವಾಘನು ಕೂಡ ಗಣೇಶ ಗೋಸಾವಿಗಳ ಮಹಿಮಾ ವಿಶೇಷದಿಂದ ಸಾದು ವಾದ್ದಲ್ಲದೆ, ಆತನು ತನ್ನಲ್ಲಿದ್ದ ಚಿಂಚವಡದ ಶ್ರೀ ಗಣಪತಿಯ ಬಂಗಾರದ ಪ್ರತಿಮೆಯ

ಪಲ್ಲಕ್ಕಿಯನ್ನು ಸ್ವತಃ ತನ್ನ ಗವಿಯಿಂದ ಇಲ್ಲಿಯವರೆಗೆ ಹೊತ್ತುಕೊಂಡು ಬಂದಿರುವನಂತೆ! ಶಿವಬಾ, ಆತನ ಅಪಾರವಾದ ಸಂಪತ್ತು ಇಂದೇ ಶಿವನೇರಿಯ ಭಾಂಡಾರವನ್ನು ಸೇರಿದ್ದ ರಿಂದ, ನಿನ್ನ ಧನದ ಕೊರತೆಯ ಚಿಂತೆಯು ದೂರವಾಯಿತು! ನಾಳಿಗೇ ನೀನು ಕೂಲಿಕಾರ ರಿಂದ ದೊಡ್ಡ ದೊಡ್ಡ ಸಾವಕಾರವರೆಗಿನವರ ಎಲ್ಲ ಋಣದಿಂದ ಮುಕ್ತನಾಗಿ, ಸುಖದಿಂದ ನಿದ್ದೆಮಾಡು. ಇನ್ನು ಒಂದು ವರ್ಷ ನೀನು ಎಷ್ಟು ಕೆಲಸಮಾಡಿಸಿದರೂ ನಿನಗೆ ಧನದ ಕೊರತೆ ಬರುವಹಾಗಿಲ್ಲ; ಶಿವಬಾ, ಇದೆಲ್ಲ ಸಂಗತಿಯನ್ನು ಮೋರಯಾ ಗೋಸಾವಿಗಳ ಸಮಕ್ಷ ಗಣೇಶ ಗೋಸಾವಿಗಳಿಂದ ಕೇಳುವ ಆನಂದದಲ್ಲಿ, ನಿನ್ನ ಉಪಹಾರದ ಮರವೂ ನನಗೆ ಆಗಿ ಹೋಯಿತು. ಅಂದಬಳಿಕ ನನ್ನ ಉಪಾಹಾರದ ನೆನಪು ನನಗೆ ಹೇಗೆ ಆಗಬೇಕು?

ಶಿವರಾಯ—ಏನು? ಮೋರಯಾ ಗೋಸಾವಿಗಳ ತಮ್ಮಂದಿರಾದ ಗಣೇಶ ಗೋಸಾವಿ ಗಳು ಬಂದಿರುವರೆಯೆ? ಅವ್ವಾ, ಪ್ರಸಂಗ ಬಂದಹೊರತು ಮನುಷ್ಯನ ಯೋಗ್ಯತೆ ಗೊತ್ತಾ ಗುವದಿಲ್ಲ ಬಿಡು! ಗಣೇಶ ಗೋಸಾವಿಗಳ ದರ್ಶನವು ನನಗೆ ಬಹಳ ಸಾರೆ ಆಗಿರುತ್ತದೆ; ನಾನು ಕೈಕೊಂಡಿರುವ ಕಾರ್ಯಸಾಧನಕ್ಕಾಗಿ ಅವರು ಟೊಂಕ ಕಟ್ಟಿದವರು. ನಾನು ಅವರನ್ನು ಒಬ್ಬ ಸಾಮಾನ್ಯ ಗೋಸಾವಿಗಳೆಂದು ತಿಳಿದಿದ್ದೆನು. ಅಹಹ! ಅವರು ವಾಘನನ್ನು ಸಂತನ್ನಾಗಿ ಮಾಡುವಂತಹ ಸಮರ್ಥರಿರುವರಲ್ಲವೇ? ಆಯೀ, ಜಿಜಾಯಿ, ನಮ್ಮಂಥ ಸಂಸಾರದೊಳಗಿನ ಕ್ರಿಮಿಗಳು, ಸಾಧು–ಸಂತರ ಅಂತ ತಿಳಿಯಲು ಅಸಮರ್ಥರಾದದ್ದರಿಂದ ''ಕಾಷಾಯ ದಂಡ ಮಾತ್ರೇಣ ಯತಿಃ ಪೂಜ್ಯೋ ನ ಸಂಶಯಃ'' ಎಂಬಂತೆ, ಸಾಧು ಸಂತರ ವೇಷ ಭೂಷಣ ಗಳನ್ನು ನೋಡಿದ ಮಾತ್ರದಿಂದ ಅವರನ್ನು ನಾವು ಪೂಜಿಸತಕ್ಕದ್ದು; ಯಾಕಂದರೆ, ನಿಜವಾದ ಸಾಧು–ಸಂತರು ಮುಚ್ಚಿದ ಮುಷ್ಟಿಯಂತೆ, ಇಲ್ಲವೆ ಬೂದಿ ಮುಚ್ಚಿದ ಕೆಂಡದಂತೆ ಇರುವದ ರಿಂದ, ನಾವು ಜಗತ್ತನ್ನೇ ಈಶ್ವರ ಸ್ವರೂಪವೆಂದು ತಿಳಿದು ನಡೆಯುವ ಸಾಧನವಿಟ್ಟರೆ, ಯಾರಿಂದಲೂ ಯಾವ ಬಾಧೆಯೂ ಬರಲಿಕ್ಕಿಲ್ಲ; ಆದರೆ ಅವ್ವಾ, ಗಣೇಶ ಗೋಸಾವಿ ಗಳು ವೆಂಕಾಜಿ ವಾಘನಂಥ ಕಳ್ಳನನ್ನು ಸಾಧುವನ್ನಾಗಿ ಹೇಗೆ ಮಾಡಿದರವ್ವಾ!

ಜಿಜಾಯಿ–ಶಿವಬಾ, ಅದನ್ನೆಲ್ಲ ನಾನು ಹಿಂದುಗಡೆ ಹೇಳುವೆನು! ಸದ್ಯಕ್ಕೆ ನೀನು ಈ ಅಂಬಾಬಾಯಿಯ ಪ್ರಸಾದವನ್ನು ಮೊದಲು ಸ್ವೀಕರಿಸು! ಅಂಬಾಬಾಯಿಯು ದ್ರವ್ಯ ಪ್ರಾಪ್ತಿ ರೂಪವಾದ ನಿನ್ನ ಇಷ್ಟಾರ್ಥವನ್ನು ಪೂರ್ಣ ಮಾಡಿರುವದರಿಂದ, ಇಂದಿನ ಆಕೆಯ ಸಂಪಿಗೆಯ ಹೂವಿನ ಪ್ರಸಾದಕ್ಕೂ, ಆಕೆಯ ಈ ಉಪಹಾರದ ಪ್ರಸಾದಕ್ಕೂ, ಬಹಳ ಗೌರವ ವುಂಟಾಗಿದೆ! ಏಳು, ಶಿವಬಾ, ಅಂಬಾಬಾಯಿಗೆ ನಮಸ್ಕಾರ ಮಾಡಿ ಆಕೆಯ ಈ ಪ್ರಸಾದ ವನ್ನು ಮೊದಲು ಸ್ವೀಕಾರ ಮಾಡು ಏಳು!

ಜಿಜಾಯಿಯ ಈ ಮಾತುಗಳನ್ನು ಕೇಳಿ ಶಿವರಾಯನು ಅಂಬಾಬಾಯಿಯ ಪ್ರತಿಮೆಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಎದ್ದು ನಿಂತುಕೊಂಡು ಆ ಪ್ರತಿಮೆಯ ಮುಖವನ್ನು ದಿಟ್ಟಿಸಿ ನೋಡುತ್ತಿರಲು, ಪ್ರತ್ಯಕ್ಷ ತನ್ನ ತಾಯಿಯೇ ತನ್ನನ್ನು ವಾತ್ಸಲ್ಯದ ಮುಗುಳು ನಗೆಯಿಂದ ನೋಡುತ್ತಿರುವಂತೆ ಶಿವರಾಯನಿಗೆ ತೋರಿತು. ಆಗ ಆತನು ಕೌತುಕದಿಂದ ಹಿಂದಿರುಗಿ ತನ್ನ

ತಾಯಿ ಜಿಜಾಯಿಯ ಕಡೆಗೆ ನೋಡಲು, ಆಗ ಸುಮ್ಮನೆ ವಾತ್ಸಲ್ಯದ ಮುಗುಳು ನಗೆ ನಗುತ್ತಿದ್ದ ಅಂಬಾಬಾಯಿಯ ಪ್ರತಿಮೆಯೇ ಈಗ ಜಿಜಾಯಿಯ ರೂಪದಿಂದ ತನ್ನೊಡನೆ ಮಾತಾಡುತ್ತಿರುವಂತೆ ಕಾಣಲು, ಆ ಪ್ರತಿಮೆಯು ಶಿವರಾಯನಿಗೆ—''ಯಾಕೆ ಶಿವಬಾ, ಸಂಪಗೆಯ ಹೂವಿನ ಪ್ರಸಾದದಿಂದ ನಿನಗೆ ಆನಂದವಾದಂತೆ, ಸಮೃದ್ಧ ಧನಪ್ರಾಪ್ತಿಯ ಸುದ್ದಿಯನ್ನು ಕೇಳಿ ನಿನಗೆ ತೃಪ್ತಿಯೂ ಆಯಿತಷ್ಟೆ? ಹಿಡಿ ದೇವಿಯ ಈ ಪ್ರಸಾದವನ್ನು'' ಎಂದು ನುಡಿದು, ಶುಕ್ರವಾರದ ಪುರಾಣಿ ಸಕ್ಕರೆಯ ಪ್ರಸಾದವನ್ನು ಮೊದಲು ಕೊಟ್ಟು, ಶಿವಬಾನ ಮುಂದೆ ಉಪಹಾರದ ಪದಾರ್ಥಗಳ ಬಂಗಾರದ ಹರಿವಾಣವನ್ನು ಸರಿಸಿದಳು! ಆಗ ಭಾವಿಕನಾದ ಶಿವರಾಯನಿಗೆ ಭಕ್ತಿಯ ಹುಚ್ಚು ಹಿಡಿದಂತಾಗಿತ್ತು. ಆತನು ದೇವಿಯ ಆ ಶುಕ್ರವಾರದ ಪ್ರಸಾದವನ್ನು ಭಕ್ತಿಯಿಂದ ಬಾಯಲ್ಲಿ ಹಾಕಿಕೊಂಡು ಸೇವಿಸುತ್ತಿರುವಾಗ, ಒಮ್ಮೆ ಜಿಜಾಯಿಯ ಕಡೆಗೆ, ಒಮ್ಮೆ ಅಂಬಾಬಾಯಿಯ ಪ್ರತಿಮೆಯ ಕಡೆಗೆ ನೋಡುತ್ತಿರಲು, ಅಂಬಾಬಾಯಿಯು ತನಗೆ ಮೊದಲಿಗೆ ಕೊಟ್ಟ ಪುಷ್ಪ ಪ್ರಸಾದವು ಹೆಚ್ಚಿನದೋ, ಅಥವಾ ತನ್ನ ಆಯಿ ಜೀಜಾಯಿಯು ಈಗ ಕೊಟ್ಟಿರುವ ಶುಕ್ರವಾರದ ಪ್ರಸಾದವು ಹೆಚ್ಚಿನದೋ, ಅಥವಾ ಇವೆರಡಕ್ಕಿಂತಲೂ ನನ್ನ ಆ ಅಪ್ಪನು ಈ ಮೊದಲೆ ಹೇಳಿದ ದ್ರವ್ಯಪ್ರಾಪ್ತಿಯ ಆನಂದದ ಸುದ್ದಿಯ ಪ್ರಸಾದವು ಹೆಚ್ಚಿನದೋ! ಎಂಬದೊಂದು ಮುಂಡಿಗೆಯು ಶಿವರಾಯನ ಮನಸ್ಸಿನಲ್ಲಿ ಉತ್ಪನ್ನವಾಯಿತು. ಆಗ ಶಿವರಾಯನು ಜೀಜಾಯಿಯನ್ನು ಕುರಿತು—

ಶಿವಬಾ—ಆಯೀ, ಜೀಜಾಯಿೂ, ನಿನ್ನ ಪುಣ್ಯೋದರದಿಂದ ಹುಟ್ಟಿದ್ದ ನಿನ್ನ ಈ ಶಿವಬಾನಿಗೆ, ಇಂದು ಮೂರು ಪ್ರಸಾದಗಳು ಸಿಕ್ಕವು. ನೀನು ಬರುವ ಮೊದಲು ದೇವಿಯು ಕೊಟ್ಟಿದ್ದ ತನ್ನ ಕಿರೀಟದ ಮೇಲಿನ ಸಂಪಗೆಯ ಹೂವಿನ ಪ್ರಸಾದವು ಒಂದನೆಯದು, ಆ ಮೇಲೆ ನೀನು ಹೇಳಿದ ದ್ರವ್ಯ ಪ್ರಾಪ್ತಿಯ ಸುದ್ದಿಯ ಪ್ರಸಾದವು ಎರಡನೆಯದು, ಇದೇ ಈಗ ನೀನು ಕೊಟ್ಟಿರುವ ಈ ಶುಕ್ರವಾರದ ಪ್ರಸಾದವು ಮೂರನೆಯದು; ಆದರೆ ಆಯಿೂ, ಈ ಮೂರು ಪ್ರಸಾದಗಳಲ್ಲಿ ಯಾವದು ಶ್ರೇಷ್ಠವೆಂಬದರ ಗೂಢವು ನನಗೆ ತಿಳಿಯಲೊಲ್ಲದು; ಆದ್ದರಿಂದ ಅದನ್ನು ಬಿಚ್ಚಿಹೇಳಲಿಕ್ಕೆ ನೀನೇ ಸಮರ್ಥಳು; ಯಾಕಂದರೆ, ನನ್ನ ಹಡೆದಾಕೆ ನೀನು, ನನಗೆ ಮಾತಾಡುವ ಪ್ರತ್ಯಕ್ಷ ಅಂಬಾಬಾಯಿಯಾಗಿರುತ್ತೀ! ನೀನು ನನ್ನ ಆದಿ ದೈವತವು; ಅಂತೇ ತೈತ್ತರಿಯ ಶ್ರುತಿಯು ಹೇಳಿರುವ ಮಾತೃ, ಪಿತೃ, ಆಚಾರ್ಯ, ಅತಿಥಿ ಎಂಬ ನಾಲ್ಕೆಂದರೆ ನಾಲ್ಕೇ ಜನ ದೇವರಲ್ಲಿ, ನೀನು ಮೊಟ್ಟಮೊದಲಿನ ದೇವತೆಯಾಗಿರುವೆ; ನಿನ್ನಿಂದ ನನಗೆ ಪಿತೃ ದೇವತೆಯ ಪರಿಚಯವಾಯಿತು; ಆ ಪಿತೃ ದೇವತೆಯ ಪ್ರಥಮ ಮಂತ್ರೋಪದೇಶದ ಪ್ರಭಾವದಿಂದ, ನನಗೆ ಗುರುದೇವನ ಪರಿಚಯವಾಯಿತು; ಆ ಗುರುದೇವನು ಸೇವಾಸಂತುಷ್ಟನಾಗಿ ನನ್ನನ್ನು ಅನುಗ್ರಹಿಸಿ ಉಪದೇಶಿಸಲು, ಅತಿಥಿಯು, ಅಂದರೆ ಕಣ್ಣಿಗೆ ಕಾಣುವ ಪ್ರತಿಒಂದು ವಸ್ತುವು ದೇವರೆಂಬ ವಿಚಾರವು ನನಗೆ ಗೊತ್ತಾಯಿತು; ಅಂದ ಬಳಿಕ ತಾಯೀ, ನಿನ್ನ ಶಿವಬಾನು, ಜಗತ್ತನ್ನೇ ದೇವರೆಂದು ತಿಳಿದು ನಡೆದುಕೊಳ್ಳಬೇಕೆಂದು ಉದಾತ್ತ ವಿಚಾರದವನಾದದ್ದರ ಮೂಲಕಾರಣವು, ನೀನೇ ಅಲ್ಲವೆ? ಅಂತೇ ಅತಿಥಿ ದೈವತ

ವಾದ ಅಂಬಾಭವಾನಿಯು ಪುಷ್ಪದ ಒಂದು ಪ್ರಸಾದವನ್ನು ಕೊಟ್ಟರೆ, ಆದಿ ದೈವತವು ನೀನು, ದ್ರವ್ಯಪ್ರಾಪ್ತಿಯ ಸುದ್ದಿಯ, ಹಾಗು ಶುಕ್ರವಾರದ ಪುರಾಣಿ ಸಕ್ಕರೆಯ ಹೀಗೆ ಎರಡು ಪ್ರಸಾದ ಗಳನ್ನು ನನಗೆ ಕೊಟ್ಟಿರುತ್ತೀ!

ಹೀಗೆ ನುಡಿಯುವ ಶಿವಬಾನ ಕಂಠವು ಸದ್ಗದಿತವಾಯಿತು; ಆತನ ಆನಂದಭಾಷ್ಪಗಳು ಒತ್ತರಿಸಿದವು. ಆತನು ಭಕ್ತಿಪರವಶನಾಗಿ ಜೀಜಾಬಾಯಿ ಮಾವುಲಿಗೆ ಸಾಷ್ಟಾಂಗವಾಗಿ ಎರಗಲು, ಆತನ ಮಹಾರಾಷ್ಟ್ರ ಭೂಮಾತೆಯು ತನ್ನ ಸತ್ಪುತ್ರನ ಬಿಸಿ ಅಶ್ರುಗಳ ಸ್ಪರ್ಶದಿಂದ, ಪುಲ ಕಾಂಕಿತ ಗಾತ್ರಳಾಗಿ—''ಅಪ್ಪಾ, ಮಗೂ, ಶಿವಬಾ, ನೀನು ಜಯಶೀಲನಾಗಪ್ಪಾ! ನಿನ್ನನ್ನು ಹಡೆದದ್ದರಿಂದ ನಿನ್ನ ತಾಯಿ ಜೀಜಾಯಿಯ ಹೊಟ್ಟೆ ತಣ್ಣಗಾದಂತೆ, ನಿನಗೆ ಅನ್ನ ನೀರು ಕೊಟ್ಟು ಸಲಹಿದಳೆಂಬ ಆರೋಪಕ್ಕೆ ಗುರಿಯಾದ ನನ್ನ ಹೊಟ್ಟೆಯೂ, ನೀನು ನನ್ನ ಬಂಧ ವಿಮೋಚನೆ ಮಾಡಲಿಕ್ಕೆ ಹೆಣಗುತ್ತಿರುವದರಿಂದ ತಣ್ಣಗಾಗುತ್ತಲಿರುವದು; ಬಾಳಾ, ಏಳು ಇನ್ನು ಮೇಲಕ್ಕೆ'' ಎಂದು ಆತನನ್ನು ಎಬ್ಬಿಸುತ್ತಿರುವಾಗ, ಆ ಮಹಾರಾಷ್ಟ್ರ ಭೂಮಾತೆಯು ಜೀಜಾಯಿಯ ರೂಪವನ್ನು ಧರಿಸಿದಳೋ ಅನ್ನುವಂತೆ, ಜೀಜಾಯಿ ಮಾತೆಯು ಶಿವಬಾನನ್ನು ಮೇಲಕ್ಕೆಬ್ಬಿಸಿ ತಬ್ಬಿಕೊಂಡು, ಆತನ ನೆತ್ತಿಯನ್ನು ಮೂಸಿನೋಡಿ ಆತನ ಮೈಮೇಲೆ ಕೈ ಯಾಡಿಸಿದಳು. ಆಗ ಆ ಸ್ವಾಧ್ವಿಯ ಕಂಠವು ಸದ್ಗದಿತವಾಯಿತು; ಆಕೆಯ ಕಣ್ಣುಗಳೂ ಆನಂದಾಶ್ರುಗಳಿಂದ ತುಂಬಿದವು; ಆಕೆಯ ಮುಖದಿಂದ ಮಾತುಗಳು ಹೊರಡದ್ದರಿಂದ, ಕೆಲ ಹೊತ್ತಿನಮೇಲೆ ಕಂಪಿತ ಸ್ವರದಿಂದ ಆ ಮಾವುಲಿಯು—''ಶಿವಬಾ,'' ಎಂಬ ಒಂದೇ ಒಂದು ಶಬ್ದವನ್ನು ಬಹು ಕಷ್ಟದಿಂದ ನುಡಿಯಲು, ಆ ಮಾತೃಭಕ್ತ ಶಿವರಾಯನಿಗೆ ಭಕ್ತಿಯ ಉದ್ರೇಕ ದಲ್ಲಿ ಒಂದು ಅಕ್ಷರವನ್ನೂ ಉಚ್ಚರಿಸುವ ಅವಸಾನವು ಉಳಿಯದ್ದರಿಂದ, ಆತನು, ಭಕ್ತಿಯ ನಮ್ರತೆಯಿಂದ ತನ್ನ ನೇತ್ರಗಳು ಅಶ್ರುಪೂರ್ಣವಾಗಿರಲು, ಮುಖವೆತ್ತಿ ತಾಯಿಯ ಮುಖವನ್ನು ಅತ್ಯಂತವಾದ ಕೃತಜ್ಞತೆಯಿಂದ ನೋಡತೊಡಗಿದನು! ಧನ್ಯರಾದ ಆ ಮಾತಾ–ಪುತ್ರರ ವಾತ್ಸಲ್ಯ–ಭಕ್ತಿಗಳ ಸಮ್ಮೇಲನದ ಆನಂದದ ಅಮೂರ್ತ ಸ್ವರೂಪವನ್ನು ವರ್ಣಿಸಲು, ಜಡ ಗಳಾದ ಯಾರ ಲೇಖನಿಗಳೂ ಸರ್ವಥಾ ಸಮರ್ಥವಾಗ ಲಾರವೆಂತಲೇ ನಾವು ಭಾವಿಸುವೆವು. ಆ ಅಲಭ್ಯವಾದ ಆನಂದವನ್ನು ಆ ತಾಯಿ ಮಕ್ಕಳಿಬ್ಬರು ಕೆಲಕಾಲ ಅನುಭವಿಸಿ ತೃಪ್ತರಾಗು ತ್ತಿರಲು, ಸಾಧ್ವೀ ಜೀಜಾಬಾಯಿಯವರ ಶಿವಬಾನನ್ನು ಕುರಿತು—

ಜೀಜಾಬಾಯಿ— ಅಪ್ಪಾ, ಶಿವೂ, ಮಾತೃ ದೈವತದ ಶ್ರುತ್ಯುಕ್ತವಾದ ಈ ಗೌರವದ ಉಕ್ತಿಯನ್ನು ನೀನು ಎಲ್ಲಿ ಕೇಳಿದೆಯಪ್ಪಾ!

ಶಿವಬಾ— ಅವ್ವಾ, ನನ್ನ ಆದಿ ಗುರುಗಳಾದ ದಾದೋಜಿಕೊಂಡ ದೇವರಲ್ಲಿ!

ಜೀಜಾಯಿ— ಹೀಗೋ! ಬಹಳ ಸಂತೋಷವು; ಇಂತಹ ಗುರುಭಕ್ತನಾದ ನೀನು ಎಂಥ ಮುಂಡಿಗೆಯನ್ನಾದರೂ ಒಡೆಯಬಹುದು! ಆದರೆ ಶಿವಬಾ, ನಿನ್ನ ಆ ಆದಿ ಗುರುಗಳು, ದೇವರು ಇರುವ ಸ್ಥಳದ ವಿಷಯದ ಬಾಲಪಾಠವನ್ನು ನಿನಗೆ ಹೇಳಿರುವರೋ ಇಲ್ಲವೋ?

ಶಿವಬಾ— ಹೇಳಿರುವರು ತಾಯಿ

ಜೀಜಾಯಿ—ಹಾಗಾದರೆ ದೇವರು ಎಲ್ಲಿ ಇರುವನು ಹೇಳು.

ಶಿವಬಾ—ಅವ್ವಾ, ಎಲ್ಲರ ಹೃದಯದಲ್ಲಿಯೂ, ಎಲ್ಲ ಪದಾರ್ಥಗಳಲ್ಲಿಯೂ, ಎಲ್ಲ ಕಡೆಯಲ್ಲಿಯೂ ದೇವರು ಇರುವನು!

ಜೀಜಾಯಿ—ಅಂದಬಳಿಕ ನಿನ್ನ ಉಪಾಸ್ಯ ದೈವತವಾದ ಅಂಬಾಬಾಯಿಯ ಈ ಮೂರ್ತಿಯಲ್ಲಿ ಇರುವನಲ್ಲವೆ?

ಶಿವಬಾ—ಹೌದು, ಇರುವನು.

ಜೀಜಾಯಿ–ನನ್ನಲ್ಲಿ?

ಶಿವಬಾ —ನಿನ್ನಲ್ಲಿಯೂ ಇರುವನು ತಾಯೀ!

ಜೀಜಾಯಿ—ಅಂದಬಳಿಕ ಶಿವಬಾ, ಹೃದಯದಲ್ಲಿರುವ ದೇವರ ಪ್ರೇರಣೆಯಂತೆ ನಮ್ಮ ವ್ಯವಹಾರಗಳು ನಡೆದಿರುವದರಿಂದ, ಈ ಮೂರ್ತಿಯಲ್ಲಿ, ಹಾಗೂ ನನ್ನಲ್ಲಿ ಇರುವ ದೇವರೇ ಕೊಟ್ಟಿರುವ ಪ್ರಸಂಗೋಚಿತ ಪ್ರಸಾದಗಳಲ್ಲಿ ತಾರತಮ್ಯ ಭಾವವನ್ನು ಸರ್ವಥಾ ಎಣಿಸಲಾಗದ ಕಂಡೆಯಾ! ಶಿವಬಾ, ಸದ್ಭಾವ ಸಾಮ್ರಾಜ್ಯದ ಸ್ಥಿತಿಯು ಹೀಗೆಯೇ ಸರಿ!

## ರಾಜನಿಷ್ಠೆಯ ವೈಭವ

ಮೋರಯಾ ಗೋಸಾವಿಗಳ ಭವಿಷ್ಯವಾಣಿಯ ಎಂಟನೆಯ ದಿವಸವು; ಬೆಳಗಿನ ಎಂಟು ಘಂಟೆಯಾಗಿದೆ; ಉಭಯ ಗೋಸಾವಿಗಳ ಅನುಷ್ಠಾನವು ತೀರಿದೆ; ಆ ಉಭಯ ಗುರುಗಳ ಅನುಗ್ರಹದಿಂದ ತನ್ನ ರಾಜ್ಯಸ್ಥಾಪನದ ಮಹಾಕಾರ್ಯಕ್ಕಾದ ಸಹಾಯಕ್ಕಾಗಿ, ಶಿವರಾಯನು ಭಕ್ತಿನಮ್ರನಾಗಿ, ಅವರನ್ನು ದರ್ಬಾರಕ್ಕೆ ಕರೆದೊಯ್ಯಲು ಸಿದ್ಧನಾಗಿ ಕುಳಿತಿದ್ದಾನೆ; ಪೂಜೆ ಪುನಸ್ಕಾರಗಳಾಗಿದ್ದ ಚಿಂಚವಡದ ಶ್ರೀ ಸಿದ್ಧವಿನಾಯಕನ ಬಂಗಾರದ ಪ್ರತಿಮೆಯ ಪಲ್ಲಕ್ಕಿಯು ಸಿದ್ಧವಾಗುತ್ತಲಿದೆ; ವಿವಿಧ ಮಂಗಲ ವಾದ್ಯಗಳನ್ನು ಬಾರಿಸುವದಕ್ಕಾಗಿ ವಾದಕರು ಪಲ್ಲಕ್ಕಿ ಹೊರಡುವ ಹಾದಿಯನ್ನು ನೋಡುತ್ತಲಿದ್ದಾರೆ; ಬಹು ದೊಡ್ಡ ಧನರಾಸಿಯು ಅಕಸ್ಮಾತ್ ಶಿವರಾಯನ ಭಾಂಡಾರವನ್ನು ಸೇರಿದ ಸುದ್ದಿಯು ಆ ಶಿವನೇರಿ ದುರ್ಗದಲ್ಲೆಲ್ಲ ಹಬ್ಬಲು, ಕೆಲಸಗಾರರೂ, ದುರ್ಗವಾಸಿಗಳೂ, ಬೇರೆ ಉತ್ಸವಪ್ರಿಯರೂ ದರ್ಬಾರದ ಸಮಾರಂಭವನ್ನು ನೋಡುವದಕ್ಕಾಗಿ ಅಲ್ಲಲ್ಲಿ ಗುಂಪುಗುಂಪಾಗಿ ಆಸ್ಥೆಯಿಂದ ನೆರೆಯುತ್ತಲಿದ್ದಾರೆ; ಅಷ್ಟು ಜನಸಮೂಹವು ನೆರೆದಿದ್ದರೂ, ಶಿವರಾಯನ ಪ್ರಖರವಾದ ಕ್ಷಾತ್ರತೇಜಸ್ಸಿನ ದರ್ಪದಿಂದಲೂ, ಆ ಉಭಯ ಗೋಸಾವಿಗಳ ಶಾಂತವಾದ ಬ್ರಹ್ಮತೇಜಸ್ಸಿನ ಮನೋಪಹರತೆಯಿಂದಲೂ ಉಂಟಾದ ಭಯ–ಭಕ್ತಿಗಳ ಮೂಲಕ, ಎಲ್ಲ ಕಡೆಯಲ್ಲಿ ಸ್ತಬ್ಧತೆಯುಂಟಾಗಿದೆ; ಆಗ ಯಾರು ಮನಸಾ ಆ ಉಭಯ ಸತ್ಪುರುಷರನ್ನು ಭಕ್ತಿಯಿಂದ ನಮಿಸತೊಡಗಿದ್ದಾರೆ; ಯಾರು ತಮ್ಮ ಅಭೀಷ್ಟವನ್ನು ಸಲಿಸುವದಕ್ಕಾಗಿ ಕೃಪಾಳುಗಳಾದ ಆ ಮಹಾಮಹಿಮರನ್ನು ಮನಸಾ ಶರಣು

ಹೋಗತೊಡಗಿದ್ದಾರೆ; ಯಾರು ಶಿವರಾಯನ ದಿವ್ಯ ತೇಜಸ್ಸಿಗೂ, ಅಗಾಧ ಕರ್ತೃತ್ವಶಕ್ತಿಗೂ, ಗುರುಭಕ್ತಿ ವಿಶೇಷಕ್ಕೂ, ಯುಕ್ತಿಪ್ರಯುಕ್ತಿಗಳಿಗೂ ಅನುಪಮ ಪರಾಕ್ರಮಕ್ಕೂ ಪ್ರಸನ್ನರಾಗಿ ಆತನ ದರ್ಶನಾಕಾಂಕ್ಷಿಗಳಾಗಿರಲು, ಅವರ ರಾಜನಿಷ್ಠೆಯು ಅಭಿವೃದ್ಧವಾಗತೊಡಗಿದೆ; ಯಾರು ಚಿಂಚವಡದ ಗಣಪತಿಯ ಮೂರ್ತಿಯಲ್ಲಿ ಅತ್ಯಂತ ಶ್ರದ್ಧಾಭಕ್ತಿಗಳುಳ್ಳವರಾಗಿ, ''ಈ ಜಾಗ್ರತ ಮೂರ್ತಿಯನ್ನು ತಕ್ಕೊಂಡು ಹೋಗಿದ್ದ ವೆಂಕಾಜಿ ವಾಘನ ಸರ್ವಸ್ವದ ನಾಶವಾಗಿ ಹೋಯಿತೆಂ''ದು ಮನಸ್ಸಿನಲ್ಲಿ ಅಂದುಕೊಂಡು, ಗಣಪತಿಯ ಮೂರ್ತಿಯ ದರ್ಶನ ಮಾಡಿಕೊಳ್ಳಲು ಅತ್ಯಂತ ಆತುರರಾಗಿದ್ದಾರೆ; ಹೀಗೆ ಎಲ್ಲರೂ ಒಂದಿಲ್ಲೊಂದ ವಿಧದ ಸದ್ಭಾವಗಳನ್ನು ತಾಳುತ್ತ ಉತ್ಸವವು ದರ್ಬಾರಕ್ಕೆ ಸಾಗಿಬರುವ ಹಾದಿಯನ್ನು ಕೌತುಕದಿಂದ ನೋಡುತ್ತಿರಲು, ಒಬ್ಬ ಕಂಚುಕಿಯನ್ನು ಹಿಂಬಾಲಿಸಿ ನೇತಾಜಿ ಪಾಲಕರನ್ನು ವೆಂಕಾಜಿ ವಾಘನೂ ಆ ಉತ್ಸವಕ್ಕೆ ಹೊಸ ಶೋಭೆಯುಂಟಾಗುತ್ತಿರಲು, ಗಣೇಶ ಗೋಸಾವಿಗಳ ಅಪ್ಪಣೆಯಂತೆ ಶಿವರಾಯನ ಬಳಿಗೆ ಬರತೊಡಗಿದರು!

ನೇತಾಜಿಗೆ ಬಾಲ್ಯದಿಂದಲೂ ಶಿವರಾಯನ ಮೇಲೆ ಅತ್ಯಂತವಾದ ಶ್ರದ್ಧೆ; ಆ ಶ್ರದ್ಧೆಯು, ಗಣೇಶ ಗೋಸಾವಿಗಳ ಸಹವಾಸದಿಂದ ದಿನದಿನಕ್ಕೆ ಅಭಿವೃದ್ಧವಾಗುತ್ತಲೇ ಬಂದಿತ್ತು. ಆತನು ಶಿವನೇರಿ ಕೋಟೆಗೆ ಬಂದಿದ್ದ ನಿನ್ನಿನ ರಾತ್ರಿಯಂತು, ಶಿವರಾಯನ ದರ್ಶನದ ಆತುರತೆಯಿಂದ ಆತನಿಗೆ ಬೆಳತನಕನಿದ್ದೆಯೇ ಬಂದಿದ್ದಿಲ್ಲ. ಆತನು ಆ ನಿದ್ದೆಗೇಡಿನಲ್ಲಿ ಕೇಳಿಕೆಯ ಸುದ್ದಿಗಳ, ಹಾಗು ತನ್ನ ಮನಕಲ್ಪನೆಗಳ ಸಹಾಯದಿಂದ ಶಿವರಾಯನದೊಂದು ಮೂರ್ತಿಯನ್ನು ಕಲ್ಪಿಸಿ, ಅದನ್ನು ತನ್ನ ಹೃದಯದಲ್ಲಿಟ್ಟುಕೊಂಡು ಅದನ್ನೇ ಚಿಂತಿಸುತ್ತಲಿದ್ದನು. ಹೀಗಿರುವಾಗ ಆತನು ಮೇಲೆ ಹೇಳಿದಂತೆ ವೆಂಕಾಜಿಯೊಡನೆ ಕಂಚುಕಿಯನ್ನು ಹಿಂಬಾಲಿಸಿ ಹೊರಟಿರಲು, ಆತನು ತನ್ನೊಳಗೆ ''ನನ್ನ ವಿಷಯದಲ್ಲಿ ಶಿವರಾಯನ ಮನಸ್ಸು ಸುಪ್ರಸನ್ನವಾಗುವಂತೆ ನನ್ನಿಂದ ಯಾವ ಪರಾಕ್ರಮದ ಕೆಲಸವಾಗಿರುವದು? ವೆಂಕಾಜಿ ವಾಘನ ಸಂಪತ್ತು ಶಿವರಾಯನಿಗೆ ಪ್ರಾಪ್ತವಾಗಲಿಕ್ಕೆ, ಪ್ರಾಮುಖ್ಯವಾಗಿ ಗಣೇಶ ಗೋಸಾವಿಗಳ ಪ್ರಭಾವವೇ ಕಾರಣವಾಗಿರುವದು. ಆದ್ದರಿಂದ ನಮ್ಮ ಶಿವರಾಯನ ಮನಸ್ಸು ಮೆಚ್ಚುವಂತಹ ಪರಾಕ್ರಮದ ಕಾರ್ಯವನ್ನು ಮಾಡುವ ಸುಯೋಗವು, ನನಗೆ ಇನ್ನು ಮೇಲಾದರೂ ಒದಗಿಬರಲಿಕ್ಕಿಲ್ಲವೆ?'' ಎಂದು ಚಿಂತಿಸುತ್ತಲಿದ್ದನು.

ಹೀಗೆ ನೇತಾಜಿಯು ಚಿಂತಿಸುತ್ತಿರುವಾಗ, ವೆಂಕಾಜಿ ವಾಘನ ಮನಸ್ಸಿನಲ್ಲಿ ಬೇರೆ ವಿಚಾರಗಳು ಉತ್ಪನ್ನವಾಗಿದ್ದವು. ಈ ವರೆಗೆ ಮಾಡಿದ್ದ ನನ್ನ ಕ್ರೂರ ಕರ್ಮಗಳಿಗಾಗಿ ಶಿವರಾಯನು ನನಗೆ ಎಂತಹ ಕಠಿಣ ಶಿಕ್ಷೆಯನ್ನಾದರೂ ವಿಧಿಸಬಹುದು! ನನಗೆ ಆತನು ದೇಹಾಂತ ಪ್ರಾಯಶ್ಚಿತ್ತವನ್ನು ಕೊಟ್ಟರೂ ಅನ್ಯಾಯವಾಗಲಿಕ್ಕಿಲ್ಲ; ನಾನು ಮಾಡಿದ ಪಾಪಗಳಿಗಾಗಿ ನಾನು ಪರಲೋಕದಲ್ಲಿ ದುಃಖವನ್ನು ಭೋಗಿಸಬೇಕಾಗುವದಷ್ಟೇ? ಅಂದಬಳಿಕ ಧರ್ಮರಕ್ಷಕನಾದ ಶಿವರಾಯನು, ತನ್ನ ಶಿಷ್ಟಪಾಲನ–ದುಷ್ಟಸಾಸನ ಧರ್ಮದಂತೆ ದುಷ್ಟನಾದ ನನಗೆ ಕಠಿಣ ಶಿಕ್ಷೆಯನ್ನು ವಿಧಿಸಿದಷ್ಟು ನನಗೆ ಪರಲೋಕದಲ್ಲಾಗಬೇಕಾಗಿರುವ ಶಿಕ್ಷೆಯ ಕಸುವು ಬಹುಮಟ್ಟಿಗೆ ಕಡಿಮೆಯಾದೀತು; ಆದರೆ ಕರುಣಾಳುಗಳಾದ ಗಣೇಶ ಗೋಸಾವಿಗಳ ಪತಿತ ಪಾವನತ್ವದ ಪ್ರಭಾವ

ದಿಂದ, ಭಾವಿಕನಾದ ಶಿವರಾಯನು ನನ್ನನ್ನು ಎಲ್ಲಿ ಕ್ಷಮಿಸಿಬಿಡುವನೋ ಏನೋ! ಶಿವ ರಾಯನು ನನ್ನನ್ನು ಶಿಕ್ಷಿಸಲು ಅಥವಾ ಶಿಕ್ಷಿಸದಿರಲಿ, ಆತನ ಧರ್ಮೋದ್ಧಾರದ ಕಾರ್ಯಕ್ಕಾಗಿ ನನ್ನ ಈ ದೇಹವನ್ನು ಅರ್ಪಿಸುವದೇ ನನ್ನ ನಿಶ್ಚಯವು. ಗಣೇಶ ಗೋಸಾವಿಗಳ ಅದ್ಭುತ ಶಕ್ತಿಯಿಂದ ನನ್ನ ಅಶುದ್ಧ ಮನಸ್ಸು ಈಗ ಶುದ್ಧವಾಗಿರುವದು ಸರಿ; ಆದರೆ ನಾನು ಅಶುದ್ಧ ಚಿತ್ತನಾಗಿದ್ದಾಗಿನ ನನ್ನ ದುಷ್ಕರ್ಮಗಳ ಭೋಗವು ನನಗೆ ಹೇಗೆ ತಪ್ಪೀತು? ಇರಲಿ, ಈಗ ಶಿವರಾಯನ ದರ್ಶನಕ್ಕೆ ಹೊರಟಿರುವ ನನ್ನ ಈ ವಿಚಾರಗಳಿಂದ ಪ್ರಯೋಜನವೇನು? ದೇಹದ ಅಭಿಮಾನವನ್ನೂ, ಜೀವಿತದ ಆಶೆಯನ್ನೂ ಬಿಟ್ಟುಬಿಟ್ಟಿರುವ ನನಗೆ ಯಾತರ ಭಯವು? ನಿರ್ಭಯದಿಂದ ನಾನು ಮೊದಲು ಶಿವರಾಯನ ದರ್ಶನವನ್ನಂತು ಮಾಡಿ ಕೊಳ್ಳುವೆನು.

ಹೀಗೆ ನೇತಾಜಿಯಲ್ಲಿ ಪೌರುಷದ ವಿಚಾರಗಳೂ, ವೆಂಕಾಜಿಯಲ್ಲಿ ಪಶ್ಚಾತ್ತಾಪದ ವಿಚಾರ ಗಳೂ ಉಂಟಾಗಿರಲು, ಅವರಿಬ್ಬರು ದರ್ಶನಕ್ಕಾಗಿ ಬಂದಿರುವದನ್ನು ಕಂಚುಕಿಯು ನಿವೇದಿ ಸಿದನು. ಆಗ ನೇತಾಜಿಯಲ್ಲಿಯೂ, ವೆಂಕಾಜಿಯಲ್ಲಿಯೂ ಗುರುಭಕ್ತಿ-ರಾಜಭಕ್ತಿಗಳೆರಡರ ತಾಕಲಾಟದಿಂದ ವಿನಮ್ರಭಾವವು ಉಂಟಾಗಿರಲು, ಅವರು ಆ ಮೂರು ದಿವ್ಯ ಮೂರ್ತಿ ಗಳಿಗೆ ಸಾಷ್ಟಾಂಗ ನಮಸ್ಕಾರಮಾಡಿ ಕೈಜೋಡಿಸಿ ನಿಂತುಕೊಂಡರು. ಆಗ ಗಣೇಶ ಗೋಸಾವಿ ಗಳು ಶಿವರಾಯನನ್ನು ಕುರಿತು-ಶಿವಪ್ರಭೋ, ಇಂದಿನ ಸಮಾರಂಭದ ಯೋಗವು ಇವರಿಬ್ಬ ರಿಂದ ಉಂಟಾಗಿರುವದು. ನೇತಾಜೀ, ನೀನು ತರುಣರ ಗುಂಪುಗಳನ್ನು ನಿರ್ಮಿಸಿ ಈಗ ಐದುನೂರು ಜನ ತರುಣರ ಸಶಸ್ತ್ರ ಸೈನ್ಯವನ್ನು ಶಿವಪ್ರಭುಗಳ ಸ್ವರಾಜ್ಯ ಸ್ಥಾಪನೆಯ ಮಹಾ ಕಾರ್ಯದ ಸಿದ್ಧಿಗಾಗಿ ಒದಗಿಸಿಕೊಡದಿದ್ದರೆ, ಅಷ್ಟರಮಟ್ಟಿಗೆ ಅವರ ಸಹಾಯ ಸಂಪತ್ತಿನಲ್ಲಿ ಕೊರತೆಯುಂಟಾಗುತ್ತಿತ್ತು; ವೆಂಕಾಜೀ, ನಿನ್ನಿಂದ ಈಗ ಶಿವಪ್ರಭುಗಳಿಗೆ ಒದಗಿರುವ ಧನ ಸಹಾಯವು ಸಣ್ಣಪುಟ್ಟದಲ್ಲ. ನಿಮ್ಮಿಬ್ಬರಿಂದಾಗಿರುವ ಸಹಾಯಗಳು, ಶಾಂತವಾಗುತ್ತಿದ್ದ ದೀಪಕ್ಕೆ ಬತ್ತಿ-ಎಣ್ಣೆಗಳನ್ನು ಹಾಕಿದಂತಾಗಿದೆ; ಅನ್ನಲು, ನೇತಾಜಿಯೂ, ವೆಂಕಾಜಿಯೂ ತಲೆ ತಗ್ಗಿಸಿ ಕೊಂಡು ವಿನಯದಿಂದ ನಿಂತುಕೊಂಡರು. ಆಗ ಶಿವರಾಯನು—''ಹೌದು ಮಹಾ ಸ್ವಾಮಿ,'' ಎಂದು ತಲೆಬಾಗಿ ವಿನಯದಿಂದ ನುಡಿದು ನೇತಾಜಿಯನ್ನು ಕುರಿತು— ''ನೇತಾಜೀ, ಗುರುಗಳು ಅಪ್ಪಣೆ ಕೊಡಿಸಿದಂತೆ ನೀವು ರಾಷ್ಟ್ರಕಾರ್ಯಕ್ಕೆ ಬಹು ದೊಡ್ಡ ಸಹಾಯ ಮಾಡಿರುವಿರಿ. ಈ ವರೆಗೆ ನನಗೆ ಸಹಾಯ ಮಾಡಿದವರಲ್ಲಿ ನಿಮ್ಮ ನೆನಪು ನನಗೆ ಮೇಲೆಮೇಲೆ ಆಗುತ್ತ ಹೋಗುವಲ್ಲಿ ಸಂಶಯವಿಲ್ಲ. ಸ್ವರಾಜ್ಯದೀಪದ ಬತ್ತಿ-ಎಣ್ಣೆಗಳೆರಡೂ ತೀರುತ್ತಿರುವಾಗ, ಶ್ರೀ ಗುರುಗಳು ಅಪ್ಪಣೆಕೊಡಿಸಿದಂತೆ, ನೇತಾಜೀ, ನೀವು ಸೈನ್ಯವನ್ನು ಒದಗಿಸಿ ಹೊಸ ಬತ್ತಿಯನ್ನು ಹಾಕಿದಂತೆ ಆಗಿದೆ; ವೆಂಕಾಜೀ ಗೂಢವಾದ ಈಶ್ವರೀ ಸಂಕೇತ ದಂತೆ ನೀವು ದ್ರವ್ಯ ಸಂಚಯ ಮಾಡಿ ಇಡದಿದ್ದರೆ, ಶಾಂತವಾಗುತ್ತಿದ್ದ ದೀಪಕ್ಕೆ ಎಣ್ಣೆಯಂತೆ ಅದು ಈಗ ಹೇಗೆ ದೊರೆಯುತ್ತಿತ್ತು? ಇನ್ನು ನಿಮ್ಮ ಈ ದ್ರವ್ಯದ ಗ್ರಾಹ್ಯಾಗ್ರಾಹ್ಯತೆಯ ನಿರ್ಣಯ ಹೇಳಲು, ಶ್ರೀ ಗುರುಗಳು ಸಮರ್ಥರಿರುವರು!'' ಎಂದು ನುಡಿದು ಅವರನ್ನು ಯೋಗ್ಯಾಸನಗಳಲ್ಲಿ ಮರ್ಯಾದೆಯಿಂದ ಕುಳ್ಳಿರಿಸಿಕೊಂಡನು.

''ನೋಡಬೇಕು–ನೋಡಬೇಕು; ಶಿವರಾಯನನ್ನು ಬೇಗನೆ ನೋಡಬೇಕು'' ಎಂದು ಆತುರಪಡುತ್ತಿದ್ದ ನೇತಾಜಿಯ ಕಣ್ಣಿಗೆ ಶಿವರಾಯನ ಮೂರ್ತಿಯು ಬೀಳಲು, ಆ ರಾಜನಿಷ್ಠನು ಆಶ್ಚರ್ಯಚಕಿತನಾದನು. ಈ ಮೊದಲೆ ಆತನು ತನ್ನ ಮನಸ್ಸಿನಲ್ಲಿ ಕಲ್ಪಿಸಿಕೊಂಡಿದ್ದ ಶಿವ ರಾಯನ ಮೂರ್ತಿಯು ಈಗ ತೀರಾ ನಿಸ್ತೇಜವಾಗಿ ಹೋಯಿತು. ಮನುಷ್ಯನು ತಾನು ನೋಡಿದ್ದರಮೇಲಿಂದ ನೋಡದೆಯಿದ್ದದ್ದನ್ನು ಕಲ್ಪಿಸುವದು ಸ್ವಾಭಾವಿಕವಷ್ಟೆ? ತನ್ನ ಹುಲ್ಲು ಗುಡಿಸಲ ನೋಡಿ ವಿಜಾಪುರದ ಗೋಲಗುಮಟವನ್ನು ಕಲ್ಪಿಸುವ ಹಳ್ಳಿಯ ಕಗ್ಗನ ಗತಿಯು ಈಗ ನೇತಾಜಿಯದಾಯಿತು! ನೇತಾಜಿಯು ತನ್ನ ಮನಸ್ಸಿನಲ್ಲಿ ಶಿವಾಜಿಯ ಪ್ರತಿಮೆಯನ್ನು ಕಲ್ಪಿಸಿಕೊಂಡದ್ದು, ತನ್ನ ಚೌಕ ಗ್ರಾಮಕ್ಕೆ ಆಗಾಗ್ಗೆ ಬರುತ್ತಲಿದ್ದ ಮುಸಲ್ಮಾನ ದಂಡಾಳುಗಳ ಮುಖ್ಯರಲ್ಲಿ ಶ್ರೇಷ್ಠರಾದವರನ್ನು ನೋಡಿ; ಅಂದಬಳಿಕ ಶಿವರಾಯನಂಥ ಸ್ವಪ್ರಕಾಶಕ ವಿಭೂತಿಯ ಪ್ರಖರ ತೇಜಸ್ಸಿನಲ್ಲಿ, ವಿಷಯಲೋಲುಪರಾದ ಆ ಪರಪ್ರಕಾಶಕ ಮುಸಲ್ಮಾನ ಸಿರಿವಂತ ಸರದಾರರ ಮಂದ ತೇಜಸ್ಸು ಅಡಗಿಹೋದದ್ದೇನಾಶ್ಚರ್ಯವು? ಶಿವರಾಯನ ಆ ದಿವ್ಯ ಮೂರ್ತಿಯನ್ನು ಪ್ರತ್ಯಕ್ಷವಾಗಿ ನೋಡಿ ನೇತಾಜಿಯು ಕೃತಕೃತ್ಯನಾದನು; ವೆಂಕಾಜಿ ಯಂತು, ತಾನು ದತ್ತಾಜಿ ಪಾಟೀಲನ ಮುಂದೆ ಶಿವಾಜಿಯನ್ನು ನಿಂದಿಸಿದ್ದು ನೆನಪಿಗೆ ಬರಲು, ಬಹಳವಾಗಿ ನಾಚಿಕೊಂಡನು. ಅಷ್ಟರಲ್ಲಿ ಗಣಪತಿಯ ಸುವರ್ಣಮೂರ್ತಿಯನ್ನು, ಶೃಂಗರಿಸಿದ ಪಲ್ಲಕ್ಕಿಯಲ್ಲಿ ಕುಳ್ಳಿರಿಸಲು, ನೇತಾಜಿಯೂ, ವೆಂಕಾಜಿಯೂ ಗೋಸಾವಿಗಳಿಬ್ಬರನ್ನು ನಮಸ್ಕರಿಸಿ, ಅತ್ಯಂತ ಪೂಜ್ಯಭಾವದಿಂದ ತಲೆಬಾಗಿ ಕೈಜೋಡಿಸಿ ಶಿವರಾಯನ ಸಂದರ್ಶನ ಮಾಡಿಕೊಂಡು ಪಲ್ಲಕ್ಕಿಯನ್ನು ಭಕ್ತಿಯಿಂದ ಹೊತ್ತುಕೊಳ್ಳಲು, ಆ ವಿಘ್ನೇಶ್ವರನ ಮೆರ ವಣಿಗೆಯು ಸಮಾರಂಭದಿಂದ ಮುಂದಕ್ಕೆ ಸಾಗಿತು. ಆಗ ವಿವಿಧ ಮಂಗಲ ವಾದ್ಯಗಳು ಬಾರಿಸತೊಡಗಿದವು; ಪಲ್ಲಕ್ಕಿಯ ಬಲಗಡೆಯ ಮಗ್ಗಲಲ್ಲಿ ಶಿವರಾಯನು ಗಣಪತಿಗೆ ಚೌರಿ ಯನ್ನು ಬೀಸುತ್ತ ಸಾಗಿಬರುತ್ತಲಿದ್ದನು; ಪಲ್ಲಕ್ಕಿಯ ಎಡಮಗ್ಗಲಲ್ಲಿ ಮಹಾತ್ಮರಾದ ಗೋಸಾವಿ ಗಳಿಬ್ಬರು ಸಾಗಿಬರುತ್ತಲಿದ್ದರು. ಇಂತಹ ಪಲ್ಲಕ್ಕಿಯನ್ನನುಸರಿಸಿ ಕೃತರ್ತತ್ವಶಾಲಿಗಳಾದ ಸರದಾರರೂ, ಸೇನಾಪತಿಗಳೂ ಸಾಗಿಬರುತ್ತಲಿದ್ದರು. ಶಿವರಾಯನ ಆಗಿನ ಅಂಕುರರೂಪದ ಸ್ವರಾಜ್ಯದ ಪುಟ್ಟ ಚತುರಂಗ ಸೇನೆಯಿಂದ, ಮೆರವಣಿಗೆಗೆ ವಿಲಕ್ಷಣ ಶೋಭೆಯುಂಟಾಗಿತ್ತು. ಪಲ್ಲಕ್ಕಿಯ ಮುಂದುಗಡೆಯಲ್ಲಿ ಪಾತರದವರು ಮಂಗಲದ್ಯೋತಕರಾಗಿ ಸಾಗಿದ್ದರು; ಶಿವರಾಯನ ಆಗಿನ ಸ್ವರಾಜ್ಯವು ಅಂಕುರರೂಪವಾಗಿದ್ದರೂ, ಯಾವದೊಂದು ವೃಕ್ಷದ ಅಂಕುರದಲ್ಲಿ ಆ ವೃಕ್ಷದ ಎಲೆ–ಟೊಂಗೆ–ಹರಿ–ಹೂ–ಕಾಯಿಗಳೆಲ್ಲ ಅಡಕವಾಗಿದ್ದು, ಕಾಲ ಕ್ರಮದಂತೆ ಅದರ ಒಂದೊಂದೇ ಆ ಅಂಗಗಳು ಅಭಿವ್ಯಕ್ತವಾಗುತ್ತಬರುವಂತೆ. ಶಿವರಾಯನ ಆ ಅಂಕುರೂಪದ ಸ್ವರಾಜ್ಯದಲ್ಲಿ ರಾಜ್ಯಾಂಗಗಳೆಲ್ಲ ಇರುತ್ತಿದ್ದು, ಕಾಲಕ್ರಮದಂತೆ ಅವು ವ್ಯಕ್ತವಾಗುತ್ತ ಬರುತ್ತಲಿದ್ದವು! ಆ ಮೆರವಣಿಗೆಯಲ್ಲಿ ಆಗುತ್ತಿದ್ದ ಮಂಗಲಮೂರ್ತಿಯ ನಾಮ ಘೋಷವು ಆ ಶಿವನೇರಿ ದುರ್ಗವನ್ನು ತುಂಬಿ ಹೊರಸೂಸುತ್ತಲಿತ್ತು. ಮೆರವಣಿಗೆಯು ಹೀಗೆ ಸಮಾರಂಭದಿಂದ ಸಾಗುತ್ತ ಸಭಾಸ್ಥಾನಕ್ಕೆ ಸಮ್ಮುಖವಾಗಿ ಬರಲು, ಸಭಾಸ್ಥಾನದ ಮುಂದಿನ

ಪಟಾಂಗಣದಲ್ಲಿ ಸಾಲಾಗಿ ಶಿಸ್ತಿನಿಂದ ನಿಲ್ಲಿಸಿದ್ದ ನೇತಾಜಿಯ ಐದನೂರು ಜನ ಉತ್ಸಾಹಿ ತರುಣ ಸೈನಿಕರನ್ನು ನೋಡಿ ಶಿವಾಜಿ ಮಹಾರಾಜರಿಗೆ ಸಂತೋಷವಾಗುವಾಗ, ನೇತಾಜಿಯ ಕರ್ತೃತ್ವಶಾಲಿ ಮೂರ್ತಿಯು ಅವರ ಕಣ್ಣಿಗೆ ಕಟ್ಟಿತು! ಆಗ ತರುಣ ಸೈನಿಕರ ಸೈನ್ಯದ ಶಿಸ್ತಿನಿಂದ ಮೆರವಣಿಗೆಯನ್ನು ಮನ್ನಿಸಿದರು; ಆಗ ಸೌಜನ್ಯದ ಶಿಷ್ಟಸಂಪ್ರದಾಯಕ್ಕನುಸರಿಸಿ ಮಂಗಲ ಮೂರ್ತಿಯ ಜಯಜಯಕಾರ ಧ್ವನಿಯ ಹೊರತು, ಬೇರೆ ಯಾರ ಜಯಜಯಕಾರ ಧ್ವನಿಯೂ ಅಲ್ಲಿ ಕೇಳಬರುತ್ತಿದ್ದಿಲ್ಲ; ಅದರಂತೆ ಉಜ್ವಲ ಬ್ರಾಹ್ಮ–ಕ್ಷಾತ್ರ ತೇಜಸ್ಸುಗಳಿಂದ ದರ್ಪಿತವಾದ ಆ ಮೆರವಣಿಗೆಯಲ್ಲಿ ಶಿಷ್ಟಾಚಾರಕ್ಕೆ ಒಪ್ಪದ ಬೇರೆ ಯಾವ ಹುಡುಗಾಟಿಕೆಯ ವ್ಯವಹಾರ ಗಳೂ ನಡೆಯುತ್ತಿರಲಿಲ್ಲ; ಎಲ್ಲರೂ ನಿಷ್ಠಾವಂತರಾಗಿ ಸ್ವಾಮಿ ಕಾರ್ಯಕ್ಕಾಗಿ ಪ್ರಾಣಕೊಡಲು ಸಿದ್ಧರಾಗಿರುವದು ಮಾತ್ರ ಕಣ್ಣಿಗೆ ಬೀಳುತ್ತಿತ್ತು.

ಹೀಗೆ ಮೆರವಣಿಗೆಯು ಗಣಪತಿಯ ಜಯಘೋಷದೊಡನೆ ಸಭಾಮಂದಿರಕ್ಕೆ ಬರಲು, ಅದರ ಅಗ್ರಸ್ಥಾನದಲ್ಲಿ ಗಣಪತಿಯ ಪ್ರತಿಮೆಯ ಸ್ಥಾಪನವಾಯಿತು. ಎಲ್ಲರೂ ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಂಡರು. ಆಗ ಮೋರಯಾ ಗೋಸಾವಿಗಳು ಸಭಿಕರನ್ನು ಕುರಿತು—

“ವೀರರೇ, ಶ್ರೀ ಗಣಪತಿಯ ಪ್ರೇರಣೆಯಿಂದ ನಮ್ಮ ಶಿವಪ್ರಭುವು, ಗೋ–ಬ್ರಾಹ್ಮಣ ಪ್ರತಿ ಪಾಲನೆಗಾಗಿಯೂ, ವೈದಿಕ ಧರ್ಮಕ್ಕೆ ಪರಧರ್ಮದವರಿಂದ ಆಗುವ ಬಾಧೆಯನ್ನು ತಪ್ಪಿಸುವ ದಕ್ಕಾಗಿಯೂ ಪರಿಪರಿಯಾಗಿ ಕಷ್ಟಪಡುತ್ತಿರುವದು ನಿಮ್ಮೆಲ್ಲರಿಗೆ ಗೊತ್ತಿದ್ದ ಮಾತೇ ಇರುವದ ರಿಂದ, ನಾನು ಮತ್ತೆ ಅದನ್ನು ನಿಮಗೆ ಹೇಳುವ ಕಾರಣವಿಲ್ಲ. ಈ ಪ್ರಸಂಗದಲ್ಲಿ ನಾವೆಲ್ಲರೂ ತ್ರಿಕರಣಪೂರ್ವಕವಾಗಿ ಶಿವರಾಯನಿಗೆ ಸಹಾಯ ಮಾಡತಕ್ಕದ್ದು. ಹಿಂದಕ್ಕೆ ತ್ರಿಪುರಾಸುರ ಸಂಹಾರಕ್ಕಾಗಿ ಪರಮೇಶ್ವರನು ಯತ್ನಿಸುತ್ತಿರಲು, ಬ್ರಹ್ಮೇಂದ್ರಾದಿ ಸಮಸ್ತ ದೇವತೆಗಳೂ ತಮ್ಮ ತಮ್ಮ ಸತ್ವವನ್ನು ಪರಮೇಶ್ವರನಿಗೆ ಅರ್ಪಿಸಿ, ಆತನ ಬಲವನ್ನು ಹೆಚ್ಚಿಸಿದಂತೆ, ನಾವೂ ನಮ್ಮ ಸತ್ವವನ್ನು ಶಿವರಾಯನಿಗೆ ಅರ್ಪಿಸಿ ಆತನ ಬಲವನ್ನೂ ಹೆಚ್ಚಿಸಬೇಕಾಗಿರುತ್ತದೆ. ಸದ್ಯಕ್ಕೆ ನೇತಾಜಿ ಪಾಲಕರನ್ನು ತನ್ನ ಐದು ನೂರು ಜನ ತರುಣ ಪರಿವಾರದೊಡನೆ ತಾನು ಶಿವ ರಾಯನಿಗೆ ಸಹಾಯಕನಾಗಿ ಬಂದು ಕೂಡಿರುವದರಿಂದ, ಶಿವರಾಯನ ಕಾರ್ಯೋತ್ಸಾಹವು ಹೆಚ್ಚಿರುವದರಲ್ಲಿ ಸಂಶಯವಿಲ್ಲ; ಅದರಂತೆ, ವೆಂಕಾಜಿ ವಾಘನು ನಮ್ಮ ಗಣೇಶ ಗೋಸಾವಿಗಳ ಕೃಪೆಯಿಂದ ಕಳ್ಳತನದ ತನ್ನ ದುಷ್ಕರ್ಮವನ್ನು ಬಿಟ್ಟುಕೊಟ್ಟು, ತನ್ನ ಭಂಡಾರವನ್ನೆಲ್ಲ ಶಿವ ರಾಯನಿಗೆ ಬಿಟ್ಟುಕೊಟ್ಟಿರುವದು ಅಭಿನಂದನೀಯವೇ ಸರಿ; ಆದರೆ ಈಗ ನಾವು ಶ್ರೀ ಗಣಪತಿಯ ಸಂದೇಶದಂತೆ ಶಿವರಾಯನಿಗೆ ಸೂಚಿಸುವದೇನಂದರೆ—ಆ ಪ್ರಭುವು ತಾನಾಜಿ ಯನ್ನು ಸಪರಿವಾರ ತನ್ನ ಸ್ವಾಮಿನಿಷ್ಠ ಪರಿವಾರದಲ್ಲಿ ಸೇರಿಸಿಕೊಂಡು, ಆತನಿಗೆ ದೇಶಸೇವೆಯ ದೀಕ್ಷೆಯನ್ನು ಕೊಡಬೇಕು; ಮತ್ತು ವೆಂಕಾಜಿಯು ಸಂಪಾದಿಸಿರುವ ಹೇರಳ ಹಣವನ್ನು ದೇಶ ಕಾರ್ಯದಲ್ಲಿ ಉಪಯೋಗಿಸಿ, ಅದನ್ನು ಪವಿತ್ರವಾಗಿಯೂ, ಸಫಲವಾಗಿಯೂ ಮಾಡಬೇಕು.

ಹೀಗೆ ಮೋರಯಾ ಗೋಸಾವಿಗಳು ಆಜ್ಞಾಪಿಸಿದ್ದನ್ನು ಕೇಳಿ, ಯಾವತ್ತು ಸಭಿಕರು ಶಿವರಾಯನ ಕಡೆಗೆ ನೋಡಹತ್ತಿದರು. ಆಗ ಶಿವರಾಯನು ಮೋರಯಾ ಗೋಸಾವಿಗಳನ್ನು ಕುರಿತು—

ಶಿವರಾಯ—ಸ್ವಾಮಿನ್, ಅನುಗ್ರಹಿತನಾದೆನು; ನೇತಾಜಿಯು ನನ್ನ ಸಹಾಯಕನೇ ಅಲ್ಲ, ನನ್ನ ಕೆಲಸದಲ್ಲಿ ಆತನು ಕೇವಲ ನನ್ನ ಬಲಗೈಯಾಗಿರುವನು.. ಆತನ ಸಹಾಯವು ದೊರೆತದ್ದರಿಂದ ನಾನು ಶ್ರೀ ಗಣಪತಿಯ ಪ್ರೇರಣೆಯಿಂದ ಕೈಕೊಂಡಿರುವ ಸ್ವದೇಶೋದ್ಧಾರದ ಕಾರ್ಯಕ್ಕೆ ಹೊಸ ಕಳೆಯುಂಟಾಗಿರುವದು; ಈಗ ನಾನು ಕಲ್ಯಾಣದ ಕೋಟೆಯನ್ನು ಅವಶ್ಯ ವಾಗಿ ಮುಸಲ್ಮಾನರಿಂದ ಕಸಿದುಕೊಳ್ಳಬೇಕಾಗಿರಲು, ನೇತಾಜಿಯಂಥ ರಣಶೂರನ ಸಹಾಯವು ದೊರೆತದ್ದು ಸುಲಕ್ಷಣವಾಗಿರುವದು! ಆ ಸುಲಕ್ಷಣದ ಮೇಲಿಂದ ನಾನು ಕಲ್ಯಾಣದ ಕೋಟೆಯು ಕೈಸೇರಿತೆಂತಲೇ ಈಗ ತಿಳಿದುಕೊಂಡಿರುತ್ತೇನೆ; ಆದರೆ ಮಹಾತ್ಮನ್, ವೆಂಕಾಜಿ ವಾಘನ ದ್ರವ್ಯವು ಸ್ವದೇಶಬಾಂಧವರನ್ನು ಸುಲಿದು ಅನ್ಯಾಯದಿಂದ ಕೂಡಿಸಿದ್ದಾದ್ದರಿಂದ, ಅದನ್ನು ಪವಿತ್ರ ದೇಶ ಕಾರ್ಯಕ್ಕಾಗಿ ಉಪಯೋಗಿಸುವದರಿಂದ ಹಿತವಾಗಬಹುದೆ? ಬಚ್ಚಲ ನೀರನ್ನು ಅದರ ಲ್ಲಿಯೂ ಮುಚ್ಚಿ ಬಚ್ಚಿಟ್ಟಿದ್ದ ಬಚ್ಚಲ ನೀರನ್ನು ಬಳಿಸುವದರಿಂದ ಆರೋಗ್ಯ ಹಾನಿ ಯಾಗುವಂತೆ, ಕಳವಿನ ಬಚ್ಚಿಟ್ಟಿದ್ದ ದುಡ್ಡನ್ನು, ಅದರಲ್ಲಿಯೂ ಗುಹೆಯಲ್ಲಿ ಬಚ್ಚಿಟ್ಟಿದ್ದ ಕಳವಿನ ದುಡ್ಡನ್ನು ಸತ್ಕಾರ್ಯಕ್ಕೆ ಉಪಯೋಗಿಸುವದರಿಂದ ಹಿತವಾಗಬಹುದೇ ಎಂಬ ಸಂಶಯ ಬಂದದ್ದರಿಂದ, ಅದನ್ನು ವಿಚಾರಣೆಗಾಗಿ ಸನ್ನಿಧಿಯ ಮುಂದೆ ಇಟ್ಟಿರುವೆನು.

ಮೋರಯಾ ಗೋಸಾವಿ—ಶಿವಬಾ, ನೀನು ಕೇಳಿದ್ದು ಸರ್ವಥಾ ಯೋಗ್ಯವಿರುವದು; ಅನ್ಯರಾರೂ ತಕ್ಕೊಳ್ಳದಿರುವ ನಿಷೇಧ ವಸ್ತುವಿನ ದಾನವು ಕುಲಪುರೋಹಿತನದಾಗಿರುವಂತೆ, ಅನ್ಯರದಾರದೂ ಹಕ್ಕು ಇಲ್ಲದ ಸೊತ್ತಿನ ಹಕ್ಕು ರಾಜನದಾದದ್ದರಿಂದ, ರಾಜನು ಅದನ್ನು ಗ್ರಹಿಸಲಿಕ್ಕೆ ಬಾಧೆ ಇಲ್ಲ.

ಶಿವರಾಯ—ಕಳವಿನ ಪದಾರ್ಥಗಳು ಸಿಕ್ಕಲ್ಲಿ, ಅಯಾ ಪದಾರ್ಥಗಳನ್ನು ಅವುಗಳ ಮಾಲಕರಿಗೆ ಕೊಡಿಸುವದು ರಾಜನ ಕರ್ತವ್ಯವಲ್ಲವೆ?

ಮೋರಯಾ ಗೋಸಾವಿಗಳು—ಈ ಮಾತಿನಲ್ಲಿ ಸಂಶಯವೇನು?

ಶಿವರಾಯ—ಹಾಗಾದರೆ, ವೆಂಕಾಜಿ ವಾಘನ ಕಳವಿನ ಮಾಲೆಲ್ಲ ಈಗ ಸಿಕ್ಕಿರುವದು, ಅಂದಬಳಿಕ ''ಮಾಲು ಕಳಕೊಂಡವರು, ತಮ್ಮ ತಮ್ಮ ಪದಾರ್ಥಗಳ ಗುರುತು ಹಿಡಿದು ಅವು ತಮ್ಮವೇ ಎಂಬದರ ನಂಬಿಗೆ ಮಾಡಿಕೊಟ್ಟು ಅವನ್ನು ವೈಯ್ಯಬಹುದೆಂ''ದು ದೇಶದಲ್ಲೆಲ್ಲ ಡಂಗರು ಸಾರಲಿಕ್ಕೆ ಅಪ್ಪಣೆ ದೊರೆಯಬಹುದೇ?

ಮೋರಯಾ ಗೋಸಾವಿ—ಶಿವಬಾ, ಹೀಗೆ ಡಂಗರು ಸಾರುವದು ನಿನ್ನಂಥ ಪಾಪಭೀರು ರಾಜನ ಪವಿತ್ರ ಕರ್ತವ್ಯವೇ ಆಗಿರಲು, ಅದಕ್ಕಾಗಿ ನಮ್ಮ ಅಪ್ಪಣೆ ಕೇಳುವದು ನಿನ್ನ ಸೌಜನ್ಯ ವಾಗಿರುವದು!

ಶಿವರಾಯ—ಆಗಲಿ ಮಹಾಸ್ವಾಮಿ, ತಮ್ಮಂಥ ಮಹಾತ್ಮರ ಸೇವೆಯ ಪುಣ್ಯದಿಂದ ನನ್ನ ಮನಸ್ಸು ಅಡ್ಡಹಾದಿಗೆ ಎಂದೂ ಹೋಗಬಾರದೆಂದು ಮನಃಪೂರ್ವಕವಾಗಿ ನಾನು ಇಚ್ಛಿಸುವೆನು.

ಮೋರಯಾ ಗೋಸಾವಿ—ಆ ಸದಿಚ್ಛೆಯೇ ನಿನ್ನ ವಿಪತ್ತುಗಳ ಪರಾಭವಕ್ಕೆ ಕಾರಣ ವಾಗಿರುವದು; ಆ ಸದಿಚ್ಛೆಗೆ ಋಣಿಯಾಗಿಯೇ ಶ್ರೀ ಅಂಬಾಭವಾನಿಯು ನಿನಗೆ ಸತ್ಪ್ರೇರಣೆ ಮಾಡುವದಕ್ಕಾಗಿ ನಿನ್ನ ಹೃದಯದಲ್ಲಿ ವ್ಯಕ್ತರೂಪದಿಂದ ಸದಾ ವಾಸಿಸುತ್ತಿರುವಳು. ಶಿವಬಾ, ಯಾವದೊಂದು ಕಾರ್ಯವು ತಪಸ್ಸಿನಿಂದ ಆಗುತ್ತದಲ್ಲದೆ ದುಡ್ಡಿನಿಂದಾಗುವದಿಲ್ಲವೆಂಬ ಸಿದ್ಧಾಂತವು ನಿನ್ನ ಮೈ ಉಂಡು ಹೋಗಿರುವದು. ಅಂತೇ ಇಂಥ ಪ್ರತಿಕೂಲ ಸ್ಥಿತಿಯಲ್ಲಿಯೂ ದೇವರನ್ನು ನಂಬಿ ಮನಸ್ಸಿನ ನಿರಹಂಕಾರದ ನಿರ್ಧಾರದಿಂದ ನೀನು, ಕರ್ತವ್ಯನಿಷ್ಠನಾಗಿ ಕಾರ್ಯಸಿದ್ಧಿಗೋಸ್ಕರ ದುಡ್ಡಿಗೆ ಮಹತ್ವ ಕೊಡದೆ ನ್ಯಾಯನೀತಿಗಳಿಗೆ ಮಹತ್ವ ಕೊಟ್ಟು ಪರಿಪರಿಯಾಗಿ ಕಷ್ಟಪಡುತ್ತಿರುವೆ. ಅದೇ ನಿನ್ನ ತಪಶ್ಚರ್ಯವು! ಶಿವಬಾ, ಈ ಜಗತ್ತಿನಲ್ಲಿ ಮೂರು ಬಗೆಯ ತಪಸ್ವಿಗಳು ಇರುವ ರೆಂಬದನ್ನು ನೀನು ಲಕ್ಷದಲ್ಲಿ ಡತಕ್ಕದ್ದು. ನಿನ್ನಂತೆ ಸತ್ವಗುಣ ಪ್ರಧಾನರಾದ ಇಂದ್ರಾದಿ ದೇವತೆಗಳು, ತಮ್ಮ ಕರ್ತೃತ್ವಾಭಿಮಾನವನ್ನು ತೊರೆದು, ಸರ್ವದರ ಕರ್ತಾರನು ಪರಮೇಶ್ವರನೆಂದು ನಂಬಿ, ಸ್ವಪರಶಾಂತಿದಾಯಕ ಸಾತ್ವಿಕಭಾವದಿಂದ ತಪಸ್ಸು ಮಾಡಿ ಪರಮೇಶ್ವರನಿಂದ ಕಾರ್ಯಸಿದ್ಧಿಯನ್ನು ಪಡೆದು, ಗುರುವಾಜ್ಞಾ ಪಾಲನ ಮಾಡುತ್ತ ಸಾತ್ವಿಕರಾಗಿರುವವರಿಗೆ ಪರೋಪಕಾರಿಗಳಾಗಿ, ಸ್ವಪರಹಿತಗಳೆರಡನ್ನೂ ಸಾಧಿಸಿ, ಶಾಂತಿಯ ಸುಖವನ್ನು ಜಗತ್ತಿಗೆ ಒದಗಿಸಿಕೊಟ್ಟಿದ್ದಲ್ಲದೆ,. ತಾವೂ ಅನುಭವಿಸಿದರು; ಇವರು ಉತ್ತಮ ತರಗತಿಯ ತಪಸ್ವಿಗಳು! ಇನ್ನು ರಜೋಗುಣ ಪ್ರಧಾನರಾದ ರಾವಣಾದಿ ದೈತ್ಯರು, ನಾನೇ ಕರ್ತಾರನೆಂಬ ಅಹಂಕಾರ ತಾಳಿ, ಅಹಂಕಾರದ ಕತೃತ್ವ ಶಕ್ತಿಯನ್ನು ಹೆಚ್ಚಿಸಿಕೊಳ್ಳಬೇಕೆಂಬ ಹೆಮ್ಮೆಯಿಂದ ಸ್ವಪರತಾಪದಾಯಕ ರಾಜಸಭಾವದಿಂದ ಘೋರ ತಪಸ್ಸುಮಾಡಿ, ಪರಮೇಶ್ವರ ನಿಂದ ಘೋರ ವರಪ್ರಧಾನರೂಪ ಕಾರ್ಯಸಿದ್ಧಿಯನ್ನು ಪಡೆದು, ಆ ಈಶ್ವರದತ್ತವರದಿಂದ ಉನ್ಮತ್ತರಾಗಲು, ಅವರ ತಮೋಗುಣವು ಹೆಚ್ಚಿ, ಅವರು ಪರಪೀಡೆಯಿಂದ ಲೋಕಕ್ಕೆ ತಾಪವ ನ್ನುಂಟುಮಾಡಿದಲ್ಲದೆ, ತಾವೂ ತಾಪಕ್ಕೆ ಗುರಿಯಾದರು; ಶಿವಬಾ, ಇವರು ಮಧ್ಯಮ ತರಗತಿಯ ತಪಸ್ವಿಗಳು; ಅದರಂತೆ, ಕೇವಲ ತಮೋಗುಣ ಪ್ರಧಾನರಾದ ಮಹಾದುಷ್ಟ ರಾಕ್ಷಸರು, ದೇವರ ಹಾಗು ಧರ್ಮದ ಲಕ್ಷವಿಲ್ಲದೆ, ಸರ್ವದರ ಕರ್ತಾರರು ತಾವೇ ಎಂದು ನಂಬಿ, ತಮ್ಮ ಸ್ವೇಚ್ಛಾಪ್ರವೃತ್ತಿಯಿಂದ ತಮ್ಮ ತಮೋಗುಣದ ಅಭಿವೃದ್ಧಿಯಾಗುವಂತೆ ಹಿಂಸಾಮಯವಾದ ಘೋರತರ ಅಜ್ಞಾನಮಯ ತಪಶ್ಚರ್ಯವನ್ನು ಆಚರಿಸಿ, ದಂಭ, ಮದ, ಮಾನಗಳುಳ್ಳ ವರಾಗಿ, ಇಂದು ಈ ಶತ್ರುಗಳನ್ನು ಜಯಿಸಿದೆವು, ನಾಳೆ ಆ ಶತ್ರುಗಳನ್ನು ಜಯಿಸುವೆವು. ನಾವೇ ಈಶ್ವರನು, ನಾವು ಬೇಕಾದದ್ದನ್ನು ಮಾಡಬಲ್ಲೆವು, ಬೇಕಾದದ್ದನ್ನು ಕೊಡಬಲ್ಲೆವು, ನಾವೇ ಮಹಾಬಲಿಷ್ಠರು, ನಾವೇ ಜ್ಞಾನಿಗಳು ಇತ್ಯಾದಿ ಅಜ್ಞಾನಮೂಲವಾದ ಅಸುರೀಭಾವಪ್ರಾಪ್ತಿ ರೂಪ ಸಿದ್ಧಿಯನ್ನು ಪಡೆದು, ತಾವು ಅಸುರೀ ಯೋನಿಯಲ್ಲಿ ಅಜಸ್ರವಾಗಿ ಬೀಳುವರಲ್ಲದೆ, ಜಗತ್ತಿನಲ್ಲಿಯೂ ಅಸುರಿಭಾವವನ್ನು ಹೆಚ್ಚಿಸುವರು; ಇವರು ಅಧಮ ತಪಸ್ವಿಗಳು. ಹೀಗೆ ಶಿವಬಾ, ಉತ್ತಮ–ಮಧ್ಯಮ–ಅಧಮ ಸಿದ್ಧಿಗಳು ಪ್ರಾಪ್ತವಾಗಲಿಕ್ಕೆ ತಪಸ್ಸೇ ಕಾರಣವು. ಕಾಲ ಚಕ್ರದಲ್ಲಿ ಈಶ್ವರೀ ಸಂಕೇತದಂತೆ ಒಂದೊಂದು ಕಾಲಕ್ಕೆ ಒಂದೊಂದು ಬಗೆಯ ತಪಶ್ಚರ್ಯಕ್ಕೆ

ಪ್ರಾಶಸ್ತ್ಯವುಂಟಾಗುವದು. ಈ ಮಾತು ನಿನಗೆ ತಿಳಿಸಲು, ಶ್ರೀ ಗಣೇಶನ ಪ್ರೇರಣೆಯಾದದ್ದರಿಂದ ತಿಳಿಸಿದ್ದೇನೆ.

ಶಿವರಾಯ–ಮಹಾತ್ಮನೆ, ನಾನು ನಿಶ್ಚಯವಾಗಿ ಅನುಗ್ರಹೀತನಾದೆನು.

ಈ ಮೇರೆಗೆ ಶಿವಬಾನು ನುಡಿಯಲು, ವೆಂಕಾಜಿ ವಾಘನು ಸಭೆಯಲ್ಲಿ ಎದ್ದುನಿಂತನು. ಸ್ತಬ್ಧವಾಗಿದ್ದ ನಯಭಯದ ಆ ಸಭೆಯಲ್ಲಿ ಹೀಗೆ ವೆಂಕಾಜಿಯು ಆಕಸ್ಮಾತ ಎದ್ದುನಿಲ್ಲಲು,ಸಭೆಗೆ ಸಭೆಯೇ ಆತನನ್ನು ಆಶ್ಚರ್ಯದಿಂದ ನೋಡತೊಡಗಿತು. ಆಗ ವಾಘನು ಅತ್ಯಂತ ಭಯ ಗ್ರಸ್ತನಾಗಿದ್ದಂತೆ ತೋರುತ್ತಿದ್ದು, ಆತನ ಕಣ್ಣುಗಳಿಂದ ದುಃಖಾಶ್ರುಗಳು ಉದುರುತ್ತಿದ್ದವು. ಆತನು ಗಣೇಶ ಗೋಸಾವಿಗಳ ಕಡೆಗೆ ಅತ್ಯಂತ ದೈನ್ಯಭಾವದಿಂದ ನೋಡುತ್ತಲಿದ್ದನು. ಆಗ ಗಣೇಶ ಗೋಸಾವಿಗಳು ವಾಘನನ್ನು ಕುರಿತು–

ಗಣೇಶ ಗೋಸಾವಿ–ಯಾಕೆ ವೆಂಕಾಜೀ, ಕಣ್ಣೀರು ಹಾಕುವದೇಕೇ? ಹೇಳಿರಿ, ಗುರು ಗಳಿದ್ದಾರೆ, ಪ್ರಭುವಿರುವನು, ಪ್ರಜೆಗಳಿರುವೆವು; ಏನಾದರೂ ಹೇಳುವದಿದ್ದರೆ ಹೇಳಿರಿ; ಶಿವ ಪ್ರಭುಗಳು ನಿಮ್ಮ ಮಾತು ನಡಿಸಬಹುದು.

ಶಿವರಾಯ––ವೆಂಕಾಜೀ, ಹೇಳಿರಿ, ಶ್ರೀ ವಿಘ್ನೇಶ್ವರ ಸನ್ನಿಧಿಯಲ್ಲಿ ಶ್ರೀ ಗುರುಗಳ ಸಮಕ್ಷ ಹೇಳಬೇಕಾಗಿರುವದನ್ನು ನಿರ್ಭಯದಿಂದ ಹೇಳಿರಿ.

ಈ ಮೇರೆಗೆ ಶಿವರಾಯನ ಅಪ್ಪಣೆ ದೊರೆಯಲು, ವಾಘನು ಕೈಜೋಡಿಸಿ ಗದ್ಗದ ಕಂಠದಿಂದ–ಗುರುದೇವಾ, ಪ್ರಭುವೆ, ಪ್ರಜೆಗಳಿರಾ, ಪೂಜ್ಯರು ಈಗ ಹೇಳಿರುವ ತಪಸ್ವಿಗಳ ಯಾವಬಗೆಯಲ್ಲಿಯೂ ನಾನು ಬರುವದಿಲ್ಲ; ಆ ಮೂರು ಬಗೆಯ ತಪಸ್ವಿಗಳೂ ಜಗಜ್ಜಾಹೀ ರಾಗುವಂತೆ ತಪಸ್ಸು ಮಾಡುವವರಾದದ್ದರಿಂದ, ಅವರಲ್ಲಿ ಒಂದೊಂದು ಬಗೆಯ ಪೌರುಷ ವಿರುವದು; ಆದರೆ ಕಳ್ಳನಾದ ನನ್ನಲ್ಲಿ ಪೌರುಷವನ್ನು ಹುಡುಕಿದರೆ ಅದು ಹೇಗೆ ಸಿಕ್ಕೀತು? ಹೀಗೆ ನಾನು ಪುರುಷನಾಗಿ ಹುಟ್ಟಿ ನನ್ನ ನೀಚತಮನ ಚಾತುರ್ಯಕರ್ಮದಿಂದ ಪೌರುಷಹೀನ ನಾಗಿರುವದರಿಂದ, ಪ್ರಭೂ, ಶಿವರಾಯಾ, ನನ್ನ ಈ ದ್ರೋಹಮಯ ದೇಹವನ್ನು ನಿನ್ನ ಸ್ವರಾಜ್ಯಸಮರದ ವಹ್ನಿಯಲ್ಲಿ, ನನ್ನ ಪರಮಮಿತ್ರನಾದ ಈ ನೇತಾಜಿಯು ಕೌತುಕದಿಂದ ನೋಡುತ್ತಿರಲು, ಆಹುತಿಯಾಗಿ ಅರ್ಪಿಸುವೆನು. ಅಂದರೆ ಮಹಾ ನೀಚನೆನಿಸಿದ ದುರ್ಯೋ ಧನನೂ ಯುದ್ಧ ಸನ್ಮುಖ ಮರಣದಿಂದ ವೀರ ಸ್ವರ್ಗವನ್ನು ಪಡೆದಂತೆ, ನಾನೂ ಅಂತಹ ವೀರ ಸ್ವರ್ಗವನ್ನು ಪಡೆಯುವೆನು. ಇದೇ ನನ್ನ ಕಟ್ಟಕಡೆಯ ಶುಭೇಚ್ಛೆಯು!

ನೇತಾಜಿ–ಪ್ರಭುಗಳೇ, ನನ್ನ ಈ ಪ್ರೀತಿಯ ಮಿತ್ರನ ಇಚ್ಛೆಯನ್ನು ಪೂರ್ಣ ಮಾಡಲಿಕ್ಕೆ ನನಗೂ ಅಪ್ಪಣೆಯಾಗಬೇಕು.

ಶಿವರಾಯ–ವೀರರೇ, ಕಲ್ಯಾಣದ ಕೋಟೆಯನ್ನು ತಕ್ಕೊಳ್ಳುವದಕ್ಕಾಗಿ ಆಬಾಜಿ ಸೋನ ದೇವನನ್ನು ಮುಖ್ಯ ಸೇನಾಪತಿಯನ್ನಾಗಿ ನಿಯಮಿಸಿ ಬೇಗನೆ ಕಳಿಸುವೆನು; ಆಗ ನೀವಿಬ್ಬರೂ ಆತನ ಉಪಸೇನಾಪತಿಗಳಾಗಿರಿ. ನಿಮ್ಮ ರಾಜನಿಷ್ಠೆಯ ವೈಭವವನ್ನು ನೋಡಿ ನನಗೆ ಬಹಳ ಸಂತೋಷವಾಗುವದು.

ಮೋರಯಾ ಗೋಸಾವಿ–ಶಿವರಾಯಾ, ನಿನ್ನ ಈ ವೀರ ಪುಂಗವನಾದ ಆಬಾಜಿ ಸೋನ ದೇವನ, ಹಾಗೂ ಇವರಿಬ್ಬರ ವೀರ ಸಾಹಸಕ್ಕೆ ಮೆಚ್ಚಿ ಶ್ರೀ ಮಂಗಲಮೂರ್ತಿಯ ಕೃಪೆಯಿಂದ ವಿಜಯಲಕ್ಷ್ಮಿಯು ನಿನ್ನ ಕೊರಳಿಗೆ ನಿಶ್ಚಯವಾಗಿ ಮಾಲೆ ಹಾಕುವಳು! ಆದ್ದರಿಂದ ಮುಖ್ಯ ಸೇನಾಪತಿಗೂ, ಈ ಇಬ್ಬರು ಉಪ ಸೇನಾಪತಿಗಳಿಗೂ ದಂಡಯಾತ್ರೆಯ ತಾಂಬೂಲವನ್ನು ಶ್ರೀ ಗಣೇಶನ ಸನ್ನಿಧಿಯಲ್ಲಿ ಈಗಲೇ ಕೊಟ್ಟುಬಿಡು!

## ಮಕರ ಸಂಕ್ರಮಣ

ಹೀಗೆ ಶಿವರಾಯನಿಗೆ ಸರ್ವಸಂಪತ್ತು ಕುಳಿತಲ್ಲಿಗೇ ನಡೆದು ಬಂದರೂ, ಅದು ಕಳವಿನ ದಾದದ್ದರಿಂದ ಆತನಿಗೆ ಅದನ್ನು ಮುಟ್ಟುವ ಮನಸ್ಸಾಗಲಿಲ್ಲ! ಮೋರೆಯಾ ಗೋಸಾವಿಗಳು ನಿರ್ಣಯಿಸಿದಂತೆ, ಆತನು ದೇಶದಲ್ಲೆಲ್ಲ ಡಂಗರು ಸಾರಿಸಿ, ಒಂದು ತಿಂಗಳೊಳಗೆ ಎಲ್ಲರೂ ತಮ್ಮ ತಮ್ಮ ಬದುಕಿನ ಗುರುತು ಹಿಡಿದು ಒಯ್ಯಲಿಕ್ಕೆ ಶಿವನೇರಿ ಕೋಟೆಗೆ ಬರೇಬೇಕೆಂದು ಪ್ರಸಿದ್ಧ ಮಾಡಿದನು. ಮೋರೆಯಾ ಗೋಸಾವಿಗಳ ಅಪ್ಪಣೆಯಂತೆ ಗೊತ್ತು ಮಾಡಿದ ಆ ದಿವಸವು ಮಕರ ಸಂಕ್ರಮಣದ ಪರ್ವಕಾಲವಾಗಿತ್ತು. ಶಿವರಾಯನ ಈ ಡಂಗುರವನ್ನು ಕೇಳಿ ಅವರವರ ಅಧಿಕಾರದಂತೆ ಬೇರೆ ಬೇರೆ ಜನರು ಬೇರೇ ಬೇರೆ ತರ್ಕಗಳನ್ನು ಮಾಡತೊಡಗಿದರು; ಅವರಲ್ಲಿ ಸಜ್ಜನರಾದವರು, ಶಿವರಾಯನ ಪಾಪಭೀರುತ್ವಕ್ಕಾಗಿ ಸಂತೋಷಪಟ್ಟು, ಆತನನ್ನು ಅಭಿನಂದಿಸಿದರು; ದುರ್ಜನರಾದವರು, ಶಿವರಾಯನ ಈ ಡಂಗುರವು ಡಾಂಭಿಕತನದ್ದೆಂದು ಆಕ್ಷೇಪಿಸಿದರು; ಯಾಕಂದರೆ, ವೆಂಕಾಜಿ ವಾಘನ ಕಲುವಿನ ಒಡವೆಗಳನ್ನು ಆಯಾ ಒಡವೆ ಗಳ ಮಾಲಿಕರಿಗೆ ಕೊಡುವ ಶಿವಾಜಿಯು, ತಾನು ಮುಸಲ್ಮಾನ ಬಾದಶಹರ ಹಣವನ್ನು ಹಾದಿಯಲ್ಲಿ ಬಡಿದು ತಕ್ಕೊಳ್ಳುವದು ಕಳವೇ ಆದ್ದರಿಂದ, ತಾನು ಈ ಮೊದಲೆ ಅಪಹರಿಸಿದ್ದ ಆಯಾ ಬಾದಶಹರ ಹಣವನ್ನು ಆಯಾ ಬಾದಶಹರಿಗೆ ಮೊದಲು ಕಳಿಸಿಕೊಟ್ಟು, ಆಮೇಲೆ ಹೀಗೆ ಡಂಗರು ಸಾರಿದ್ದರೆ ನೆಟ್ಟಗಾಗುತ್ತಿತ್ತೆಂದು ಹೇಳುವರು! ಆದರೆ ತತ್ವತಃ ವಿಚಾರ ಮಾಡಿದರೆ, ವೆಂಕಾಜಿಯ ಮಾಲು ಕಳವಿನದಾಗುವಂತೆ, ಶಿವರಾಯನು ಅಪಹರಿಸಿ ತಂದಿದ್ದ ಬಾದಶಹರ ಹಣವು ಕಳವಿನದಾಗುವದಿಲ್ಲ; ಯಾಕಂದರೆ, ವೆಂಕಾಜಿಯು ಕೇವಲ ತನ್ನ ತೃಪ್ತಿಗಾಗಿ ಅನ್ಯರ ಬೇಕಾದವರ ಸೊತ್ತನ್ನು ಅಪಹರಿಸುತ್ತಿದ್ದನು; ಆದರೆ ಶಿವರಾಯನು ಮಹಾರಾಷ್ಟ್ರ ರೂಪ ವಿರಾಟ್ ಪರಮಾತ್ಮನ ತೃಪ್ತಿಗಾಗಿ, ಆ ರಾಷ್ಟ್ರಪುರುಷನ ಸ್ವಾತಂತ್ರ್ಯಹಾರಕರಾದ ಮುಸಲ್ಮಾನರೇ ಮೊದಲಾದ ಪರರಾಷ್ಟ್ರದ ದುಷ್ಟರ ಸೊತ್ತನ್ನು ಅಪಹರಿಸುತ್ತಿದ್ದನು. ಒಟ್ಟಿಗೆ, ವೆಂಕಾಜಿಯ ಕಳವು ಸ್ವಾರ್ಥಮೂಲವಾಗಿದ್ದರೆ, ಶಿವಾಜಿಯ ಕಳವು ಪದಾರ್ಥಮೂಲವಾಗಿರುವದು; ಆದ್ದ ರಿಂದ ಕೇವಲ ಪರಹಿತಕ್ಕಾಗಿ ಮಾಡಿದ ಕಳವು, ಕಳವಲ್ಲ; ಅದರಂತೆ ಕೇವಲ ಪರಹಿತಕ್ಕಾಗಿ ಹೇಳಿದ ಸುಳ್ಳು ಸುಳ್ಳಲ್ಲ! ಅಂತೇ ಅತಿಥಿ ಸತ್ಕಾರಕ್ಕಾಗಿ ಕಬೀರನು ಮಾಡಿದ ಕಳವೂ, ಲೋಕ

ಕಲ್ಯಾಣಕ್ಕಾಗಿ ಧರ್ಮರಾಜನು ದ್ರೋಣಾಚಾರ್ಯರರ ಮರಣದ ಸಂಬಂಧದಿಂದ ಹೇಳಿದ ಸುಳ್ಳೂ ದೇವರಿಗೆ ಸಮ್ಮತವಾದವು; ಯಾಕಂದರೆ, ದೇವರು ಕಬೀರನ ಆ ಅತಿಥಿ ಸತ್ಕಾರದ ಕಾಲಕ್ಕೆ ತಾನೇ ಹಲವು ಜನ ಕಬೀರ ರೂಪ ತಾಳಿ, ಅತಿಥಿಗಳನ್ನು ಸತ್ಕರಿಸಿದ್ದು ಭಕ್ತಿವಿಜಯ ದಲ್ಲಿ ಪ್ರಸಿದ್ಧವಾಗಿರುವದು; ಅದರಂತೆಯೇ ದೇವರು ''ಮಮಪ್ರಾಣಾಹಿ ಪಾಂಡವಾಃ'' ಅಂದರೆ, ''ಪಾಂಡವರು ನನ್ನ ಪಂಚಪ್ರಾಣಗಳು'' ಎಂದು ಅಭಿಮಾನ ತಾಳಿ, ಕಡೆಗೂ ಪಾಂಡವ ಪಕ್ಷಪಾತಿಯೇ ಆಗಿ ನಡೆದುಕೊಂಡದ್ದು, ಮಹಾ ಭಾರತದಲ್ಲಿ ಪ್ರಸಿದ್ಧವಾಗಿರು ವದು! ಇರಲಿ.

ಶಿವರಾಯನ ಈ ಡಂಗುರವನ್ನು ಕೇಳಿ, ದೇಶಾಭಿಮಾನಿಗಳಾದ ಬಹುಜನರು, ''ದೇಶ ಕಾರ್ಯಕ್ಕಾಗಿ ತಮ್ಮ ಸೊತ್ತಿನ ಉಪಯೋಗವಾಗಲೆಂ''ದು ಶಿವನೇರಿ ಕೋಟೆಗೆ ಹೋಗುವ ದನ್ನು ಆತ್ಮಸಂತೋಷದಿಂದ ಬುದ್ಧಿಪೂರ್ವಕವಾಗಿ ಬಿಟ್ಟುಬಿಟ್ಟರು; ಕೆಲವರು, ''ನಾವು ನಮ್ಮ ಸೊತ್ತಿನ ಗೊತ್ತು ಹಿಡಿದು ಅದನ್ನು ಸಂತೋಷದಿಂದ ಶಿವರಾಯನಿಗೆ ಕೊಟ್ಟು ಆತನನ್ನು ಹರಿಸಿ ಬರೋಣವೆಂ''ದು ಹೊರಟರು; ಕೆಲವರು ''ನಾವು ನಮ್ಮ ಮಾಲನ್ನು ಗೊತ್ತು ಹಿಡಿಯೋಣ, ಅದನ್ನು ದೇಶಕಾರ್ಯಕ್ಕಾಗಿ ಕೇಳಿದರೆ ಅಲ್ಲಿಯೇ ಕೊಟ್ಟು ಬರೋಣವೆಂ''ದು ಹೊರಟರು; ಕೆಲವರು ''ನಮ್ಮ ಅಲ್ಪಸ್ವಲ್ಪ ಹಣದಿಂದ ಶಿವರಾಯನ ಮಹಾಕಾರ್ಯಕ್ಕೆ ಆಗುವ ಸಹಾಯವೇನು? ನಮ್ಮ ಆ ಅಲ್ಪ ಹಣವು ಬಡವರಾದ ನಮ್ಮ ವರ್ಷಾರು ತಿಂಗಳ ಗಂಜಿಯಾದೀತು! ಆ ಮಹಾರಾಯನು ಹೇಗೂ ಡಂಗರು ಸಾರಿದ್ದಾನೆ, ನಮ್ಮದನ್ನು ನಾವು ತಕ್ಕೊಂಡು ಬಂದರೆ ತಪ್ಪೇನು?''ಎಂದು ಹೊರಟರು; ಕೆಲವರು, ''ಅಲ್ಲಿ ಏನೇನು ನುಡಿಯುತ್ತದೆಂಬದನ್ನು ನೋಡಿಯಾದರೂ ಬರೋಣ'' ಎಂದು ಹೊರಟರು; ಕೆಲವರು ''ಅಂಥ ಆ ಮಹಾರಾಯನು ಎಂಥವನಿದ್ದಾನೆಂಬದನ್ನು ನೋಡಿಯಾದರೂ ಬರೋಣ'' ಎಂದು ಹೊರಟರು. ಹೀಗೆ ಬೇರೆ ಬೇರೆ ಭಾವಗಳಿಂದ ಹೊರಟು ಬಂದಿದ್ದ ಜನ ಸಮೂಹವು, ಶಿವನೇರಿ ಕೋಟೆಯಲ್ಲಿ ಮಕರ ಸಂಕ್ರಮಣದ ದಿವಸ ಒಟ್ಟುಗೂಡಿತು. ಶಿವರಾಯನು ದರ್ಬಾರದ ಮುಂದಿನ ಪಟಾಂಗಣದಲ್ಲಿ ವಾಘನ ಭಾಂಡಾರದೊಳಗಿನ ಒಡವೆಗಳನ್ನೆಲ್ಲ ವಿಂಗಡಿಸಿ ಇಡಿಸಿದ್ದನು. ಆಗ ಆತನು ಎದ್ದು ನಿಂತು ಶ್ರೀ ಗಣಪತಿಯನ್ನು ನಮಸ್ಕರಿಸಿ, ಗುರುಗಳನ್ನೂ, ಜನಸಮೂಹವನ್ನೂ ಕುರಿತು—'' ಗುರುಗಳೇ, ತಮ್ಮ ಅಪ್ಪಣೆ ಯಂತೆ ದೇಶದಲ್ಲೆಲ್ಲ ಹೊಯಿಸಿದ ಡಂಗುರದಿಂದ ಇಲ್ಲಿ ಜನಸಮೂಹವು ಕೂಡಿದೆ; ಈ ಎಲ್ಲ ಸೊತ್ತು ವೆಂಕಾಜಿ ವಾಘನು ಕಳವಿನಿಂದ ಸಂಪಾದಿಸಿದ್ದು; ಕಳವಿನ ಮಾಲನ್ನು ಗೊತ್ತು ಹಚ್ಚಿತಂದು, ಅವರವರ ಮಾಲನ್ನು ಅವರವರಿಗೆ ಕೊಡುವದು ರಾಜನ ಕರ್ತವ್ಯವು; ಆದ್ದ ರಿಂದ ಎಲ್ಲೈ ಜನರುಗಳಿರಾ, ಈ ಪಟಾಂಗದಲ್ಲಿರುವ ನಿಮ್ಮ ನಿಮ್ಮ ಮಾಲನ್ನು ಗೊತ್ತು ಹಿಡಿದು, ಶ್ರೀ ಗುರುಗಳಿಗೆ ಹೇಳಿ ನಿಮ್ಮ ನಿಮ್ಮ ಮಾಲನ್ನು ನೀವು ಸಂಕೋಚವಿಲ್ಲದೆ ತಕ್ಕೊಂಡು ಹೋಗಬೇಕು'' ಎಂದು ನುಡಿದು, ತನ್ನ ಆಸನದಲ್ಲಿ ಕುಳಿತುಕೊಂಡನು.

ಶಿವಬಾನ ಈ ಮಾತುಗಳನ್ನು ಕೇಳಿ, ಮೋರಯಾ ಗೋಸಾವಿಗಳು ಜನರನ್ನು ಕುರಿತು —''ಸದ್ಗೃಹಸ್ತರೇ, ನಮ್ಮ ಶಿವರಾಜರವರ ಸೌಜನ್ಯವನ್ನು ಕಣ್ಣು ಮುಟ್ಟಿ ನೋಡವದಕ್ಕಾಗಿ ನೀವೆಲ್ಲರೂ ಬಂದದ್ದು ಬಹಳ ಸಂತೋಷಕರವು! ಈ ಪಟಾಂಗಣದಲ್ಲಿರುವ ಸೊತ್ತಿನ ಒಡೆತನವು, ರಾಷ್ಟ್ರಪ್ರತಿಯೆಂಬ ಸಂಬಂಧದಿಂದ ಶಿವರಾಯನದೇ ಆಗಿದ್ದರೂ, ಆತನು ಸೂಕ್ಷ್ಮವಾದ ರಾಜಮರ್ಯಾದೆಯ ಉಲ್ಲಂಘನ ಮಾಡಲಾರದೆ, ಸೌಜನ್ಯದಿಂದ ನಮ್ಮ ಸೊತ್ತನ್ನು ನಮಗೆ ಕೊಡಬೇಕೆಂದು ನಮ್ಮೆಲ್ಲರನ್ನೂ ನೆರೆಸಿರುವನು. ಇದು ಶಿವರಾಯರ ಉದಾತ್ತ ರಾಜನೀತಿ ತತ್ವದ ಪರಿಣಾಮವಾಗಿರುತ್ತದೆ. ಈ ಪಟಾಂಗಣದೊಳಗಿನ ಸೊತ್ತಿನಲ್ಲಿ ಚಿಂಚವಡದ ನಮ್ಮ ಶ್ರೀ ಗಣಪತಿಯ ಸೊತ್ತೂ ಇರುವದು. ಈ ಜಗತ್ತನ್ನು ಹುಟ್ಟಿಸಿದವನೂ, ಅದನ್ನು ರಕ್ಷಿಸುವವನೂ, ಅದರ ನಾಶ ಮಾಡವವನೂ ಶ್ರೀ ಗಣನಾಯಕನೇ ಆಗಿರಲು, ಈ ಕ್ಷುದ್ರತರವಾದ ಸೊತ್ತು ಜಗತ್ತಿಗೇ ಸ್ವಾಮಿಯಾಗಿರುವ ಶ್ರೀ ಗಣಪತಿಯದೆಂದು ಹೇಳುವದು, ಕೇವಲ ಅಜ್ಞಾನದ ಕ್ಷುದ್ರತನವಾಗಿರುವದು; ಆದರೂ ವ್ಯವಹಾರಿಕ ದೃಷ್ಟಿಯಿಂದ ಹಾಗೆ ಹೇಳಬೇಕಾಗುವದು; ಇರಲಿ. ಸಂಸಾರಿಕರು ಸಕಾಮವಾಗಿಯಾಗಲಿ ನಿಷ್ಕಾಮವಾಗಿಯಾಗಲಿ ಕಾರಣಾಂತರದಿಂದ ನಮ್ಮ ಗಣನಾಯಕನಿಗೆ ಅಯಾಚಿತವಾಗಿ ಕಾಣಿಕೆಯೆಂದು ಕೊಟ್ಟಿದ್ದ ವಿವಿಧ ವಸ್ತುಗಳು ಕೂಡಿ ಗಣಪತಿಯ ಇಲ್ಲಿದ್ದ ಸೊತ್ತು ಆಗಿರುತ್ತದೆ; ಆದರೆ ನಮ್ಮ ನಿತ್ಯದ ಉಪಾಸನಾ ಮೂರ್ತಿಯಾಗಿದ್ದ ಈ ಸುವರ್ಣ ಗಣಪತಿಯ ಮೂರ್ತಿಯ ಪರಿಚಯವೊಂದು ಮಾತ್ರ ನಮಗಿರುವದಲ್ಲದೆ, ಬೇರೆ ಕಾಣಿಕೆಯ ಯಾವ ವಸ್ತುಗಳ ಪರಿಚಯವೂ ನಮಗೆ ಸರ್ವಥಾ ಇರುವದಿಲ್ಲ; ಯಾಕಂದರೆ, ನಾವು ಅದನ್ನು ಈ ವರೆಗೆ ಕಣ್ಣೆತ್ತಿ ನೋಡಿರುವದೂ ಇಲ್ಲ! ಅಂದಬಳಿಕ ಆ ಕಾಣಿಕೆಯ ವಸ್ತುಗಳ ಗುರುತು, ಅವನ್ನು ಸ್ವೀಕರಿಸಿರುವ ಶ್ರೀ ಗಣನಾಯಕನಿಗೆ ಅಥವಾ ಆಯಾ ಕಾಣಿಕೆಗಳನ್ನು ಕೊಟ್ಟಿದ್ದ ಭಕ್ತಜನರಿಗೆ, ಅಥವಾ ಅವನ್ನು ಕದ್ದುಕೊಂಡು ಬಂದಿದ್ದ ವೆಂಕಾಜಿ ವಾಘನಿಗೆ ಇದ್ದರೆ ಇರಬೇಕು. ಇನ್ನು ಗಣಪತಿಯಂತು, ''ಇವು ನನ್ನ ಕಾಣಿಕೆಯ ವಸ್ತುಗಳೆಂ''ದು ಬಾಯಿಬಿಟ್ಟು ಹೇಳುವಹಾಗಿಲ್ಲ; ಕಾಣಿಕೆ ಕೊಟ್ಟವರಲ್ಲಿ ಕೃಷ್ಣಾರ್ಪಣ ಬುದ್ಧಿಯಿಂದ ಸ್ವಸತ್ತಾಪರಿತ್ಯಾಗಪೂರ್ವಕವಾಗಿ ಕಾಣಿಕೆ ಕೊಟ್ಟವರಿಗೆ, ತಾವು ಕೊಟ್ಟಿರುವ ಕಾಣಿಕೆಗಳ ಗೊತ್ತುಹತ್ತುವ ಸಂಭವವಿರುವದಿಲ್ಲ; ಯಾಕಂದರೆ ಕಾಣಿಕೆಯಾಗಿ ಕೊಟ್ಟದ್ದನ್ನು ಮರೆತುಬಿಡುವದೇ ಪವಿತ್ರ ಕಾಣಿಕೆಯ ಲಕ್ಷಣವಾಗಿರುವದು. ಇನ್ನು, ಇಂತಹ ಪವಿತ್ರ ಕಾಣಿಕೆಗಳನ್ನು ಕೊಡಲಾರದ ಡಾಂಭಿಕರು, ತಮ್ಮ ದೊಡ್ಡಿಸ್ತನದ ತೋರಿಕೆಗಾಗಿ, ಅಥವಾ ದುರಭಿಮಾನದಿಂದ, ಅಥವಾ ಹೆಚ್ಚಿನ ಸ್ವಾರ್ಥಾಭಿಲಾಷೆಯಿಂದ ಕೊಟ್ಟಿರುವ ಕಾಣಿಕೆಗಳು, ಅವರ ವಾಸನೆಯ ಕ್ಷಯವಾಗದೆಯಿದ್ದದ್ದರಿಂದ, ಆ ಕೊಟ್ಟವರಿಗೆ ಅವುಗಳ ಗೊತ್ತುಹತ್ತುವ ಸಂಭವವಿರುತ್ತದೆ; ಆದರೂ ಅಂಥವರು ಈ ಮಹಾ ಸಭೆಯ ಮುಂದೆ ''ಇವು ನಾವು ಕೊಟ್ಟ ಕಾಣಿಕೆಗಳೆಂ''ದು ಹೇಳಲಿಕ್ಕೆ ನಾಚಿಕೊಳ್ಳಬಹುದು; ಆದ್ದರಿಂದ ಕೇವಲ ನೀಚ ಸ್ವಾರ್ಥಬುದ್ಧಿಯಿಂದ ಕಳವು ಮಾಡಿಕೊಂಡು ಹೋಗಿದ್ದ ವೆಂಕಾಜಿಗೆ ಮಾತ್ರ, ನಮ್ಮ ಗಣಪತಿಯ ಕಾಣಿಕೆಯ ಒಡವೆಗಳ ಪರಿಚಯವಿರುವ ಸಂಭವವಿರುತ್ತದೆ; ಯಾಕಂದರೆ, ಕಳ್ಳರಿಗೆ ಕಳವಿನ

ವಸ್ತುಗಳೇ ಪರಬ್ರಹ್ಮವಾಗಿರುವದರಿಂದ, ಅವರಿಗೆ ತಮ್ಮ ಆ ಪರಬ್ರಹ್ಮದ ಪರಿಯವಿರಲೇಬೇಕು; ಆದದ್ದರಿಂದ ಈಗ ಇಲ್ಲಿಯೇ ಇರುವ ವೆಂಕಾಜಿಗೆ, ನಮ್ಮ ಗಣಪತಿಯ ಸಂಸ್ಥೆಯ ಒಡವೆಗಳ ಪರಿಚಯವಿದ್ದರೆ, ಅವನ್ನು ಆತನು ಸಂಕೋಚಪಡದೆ ವಿಂಗಡಿಸಿ ಇರಬಹುದು.

ಈ ಮೇರೆಗೆ ಮೋರಯಾ ಗೋಸಾವಿಗಳು ಆಡಿದ ಮಾತುಗಳನ್ನು ಕೇಳಿ, ವೆಂಕಾಜಿಯು ತಟ್ಟನೆ ಎದ್ದುನಿಂದು ಕೈ ಜೋಡಿಸಿ ಮೋರಯಾ ಗೋಸಾವಿಗಳನ್ನು ಕುರಿತು—''ಹೌದು ಮಹಾಸ್ವಾಮಿ, ಜಾರಪುರುಷನಿಗೆ ತನ್ನ ಜಾರಸ್ತ್ರೀಯ ಚಿಂತನವು ಯಾವಾಗಲೂ ಇರುವಂತೆ, ಕಳ್ಳರಿಗೆ ನಮಗೆ ಯಾವಾಗಲೂ ಕಳವಿನ ಒಡವೆಗಳ ಚಿಂತನವೇ ಇರುತ್ತದೆ; ಕುರುಬನಿಗೆ ತನ್ನ ಕುರಿಯ ಹಿಂಡಿನೊಳಗಿನ ಪ್ರತಿಯೊಂದು ಕುರಿಯ ಗುರುತು ಇರುವಂತೆ, ನನ್ನ ಭಾಂಡಾರದೊಳಗಿನ ಪ್ರತಿಒಬ್ಬರ ಸೊತ್ತಿನ ಗುರುತೂ ನನಗೆ ಇರುತ್ತದೆ; ಆದ್ದರಿಂದ, ಮಹಾಸ್ವಾಮಿ, ತಮ್ಮ ಪ್ರೇರಣೆಯಂತೆ, ತಮ್ಮ ಶ್ರೀ ಗಣನಾಯಕನ ಸಂಸ್ಥೆಯ ಸಂಪತ್ತನ್ನೆಲ್ಲ ವಿಂಗಡಿಸಿ ಇಡುವೆನಲ್ಲದೆ, ಇಲ್ಲಿ ಕೂಡಿರುವರಲ್ಲಿ ಬಹು ಜನರ ಒಡವೆಗಳ ಗುರುತೂ ನನಗಿರುವದರಿಂದ, ಹೇಳಿದರೆ ಅವನ್ನು ನಾನು ಬಡ ಬಡ ವಿಂಗಡಿಸಿ ಇಡುವೆನು,'' ಎಂದು ಹೇಳಲು, ಮೋರಯಾ ಗೋಸಾವಿಗಳಂತೆ ಬಹುಜನರು ವೆಂಕಾಜಿಯ ಆ ಮಾತಿಗೆ ಒಪ್ಪಿಕೊಂಡದ್ದರಿಂದ, ವೆಂಕಾಜಿಯು ಅಲ್ಲಿದ್ದ ತನ್ನ ಅನುಯಾಯಿಗಳ ಸಹಾಯದಿಂದ, ಚಿಂಚವಡದ ಶ್ರೀ ಗಣನಾಯಕನ ಸಂಸ್ಥೆಯ ಸೊತ್ತನ್ನೂ ದತ್ತಾಜಿ ಪಾಟೀಲನೇ ಮೊದಲಾದ ಕೆಲವರ ಸೊತ್ತನ್ನೂ ವಿಂಗಡಿಸಿ ಇಟ್ಟನು! ಇದನ್ನು ನೋಡಿ ಅಲ್ಲಿನೆರೆದವರಿಗೆ ಪರಮಾಶ್ಚರ್ಯವಾಯಿತು! ಅವರಲ್ಲಿ ಕೆಲವರು ವಾಘನಿಂದ ಬಡಿಸಿಕೊಂಡ ವರಿದ್ದರು, ಕೆಲವರು ಹೊಡಿಸಿಕೊಂಡವರಿದ್ದರು, ಕೆಲವರು ಸುಲಿಸಿಕೊಂಡವರಿದ್ದರು, ಅವರೆಲ್ಲರಿಗೆ ಆಗ ಯಮಸ್ವರೂಪವಾಗಿ ತೋರುತ್ತಿದ್ದ ವಾಘನು, ಈಗ ಸಾಧುವಿನಂತೆ ತೋರುವದನ್ನು ನೋಡಿ ಅವರು ಕೌತುಕಪಟ್ಟರು! ಹಿಂದಕ್ಕೆ ಆ ದುಷ್ಟನಿಂದ ಅನುಭವಿಸಿದ ಕಷ್ಟಕ್ಕಾಗಿ ಈಗ ಆತನಿಗೆ ಹಂಗಿಸಬೇಕೆಂಬ ಬುದ್ಧಿಯು ಬಹು ಜನರಿಗೆ ಆಯಿತು; ಕೆಲವರಿಗಂತು, ಈ ದುಷ್ಟನ ಸೇಡು ತೀರಿಸಿಕೊಳ್ಳದೆ ಬಿಡಬಾರದೆಂಬಂತೆಯೂ ಆಯಿತು; ಆದರೆ ಈಗಿನ ಆತನ ಸೌಮ್ಯವೃತ್ತಿಯನ್ನು, ಈ ಸಭೆಯ ಗೌರವ–ಗಾಂಭೀರ್ಯಗಳನ್ನೂ ನೋಡಿ, ಅವರ ಆ ಹುಟ್ಟಿದ ವಿಚಾರಗಳೆಲ್ಲ ಹುಟ್ಟಿದಾಗಲೇ ಕರಗಿ ಹೋದವು.

ವೆಂಕಾಜಿ ವಾಘನು ತಮ್ಮ ಶ್ರೀ ಗಣಪತಿಯ ಸಂಸ್ಥೆಯ ಸೊತ್ತನ್ನೆಲ್ಲ ವಿಂಗಡಿಸಿ ಇಟ್ಟದ್ದನ್ನು ನೋಡಿ, ಮೋರಯಾ ಗೋಸಾವಿಗಳು ಶಿವರಾಯನನ್ನು ಕುರಿತು—''ಶಿವಬಾ, ಇಗೋ, ನಮ್ಮ ಗಣಪತಿಯ ಸಂಸ್ಥೆಯ ಸೊತ್ತುಗಳಿವು. ಇವುಗಳಲ್ಲಿ ನಮ್ಮ ಉಪಾಸ್ಯದೈವತದ ಬಾಹ್ಯಪ್ರತೀಕವಾದ ಈ ಸುವರ್ಣದ ಗಣಪತಿಯ ಪ್ರತಿಮೆಯೊಂದು ಮಾತ್ರ ನಮ್ಮದು. ಗಣಪತಿಯ ಉಳಿದ ಆಸ್ತಿಯೆಲ್ಲ ನನ್ನದಲ್ಲ, ಗಣಪತಿಯದು; ಆದರೆ ಗಣಪತಿಯು ಸೃಷ್ಟಿಯನ್ನು ಉತ್ಪನ್ನ ಮಾಡುವಾಗ, ತಾನೇ ಭೋಕ್ತೃಗಳಾದ ಜೀವರೂ, ಭೋಗ್ಯಗಳಾದ ವಿವಿಧ ವಿಷಯಗಳೂ ಆಗಿರುವದರಿಂದ, ಗಣಪತಿಯ ಸ್ವಸ್ವರೂಪರಾದ ಯಾವತ್ತು ಜೀವರಾಶಿಗಳ ಭೋಗಕ್ಕೆ, ಗಣಪತಿ ಸ್ವರೂಪದ ಈ ಸೊತ್ತು ವಿನಿಯೋಗಿಸಲ್ಪಡತಕ್ಕದ್ದು; ಅದ್ದರಿಂದ ನಮ್ಮ ಗಣಪತಿಯ ಈ ಸೊತ್ತನ್ನು ಯಥಾ

ಯೋಗ್ಯವಾಗಿ ವಿನಿಯೋಗಿಸುವ ಜಬಾಬದಾರಿಯು ನಿನ್ನದಾಗಿರುವದರಿಂದ, ನೀನು ಗಣಪತಿಯ ಪ್ರತಿನಿಧಿಯಾಗಿ ಇದರ ವ್ಯವಸ್ಥೆ ಮಾಡತಕ್ಕದ್ದು; ಆದ್ದರಿಂದ ನಮ್ಮ ಗಣಪತಿಯ ಈ ಸೊತ್ತನ್ನೆಲ್ಲ ನಿನ್ನ ಭಾಂಡಾರಕ್ಕೆ ಸೇರಿಸಿಬಿಡು, ಉಪಾಸನೆಗಾಗಿ ಗಣಪತಿಯ ಈ ಸುವರ್ಣ ಪ್ರತಿಮೆಯೊಂದು ಮಾತ್ರ ನಮಗಿರಲಿ.

ಹೀಗೆ ಮೋರಯಾ ಗೋಸಾವಿಗಳು ಆಡಿದ ಮಾತುಗಳನ್ನು ಕೇಳಿ, ದತ್ತಾಜಿ ಪಾಟೀಲನು ಎದ್ದುನಿಂತು ಕೈಜೋಡಿಸಿ—''ಪ್ರಭುಗಳೇ, ತಮ್ಮ ಸೇವಕನಾದ ನಾನು ಚೌಕಗ್ರಾಮದ ಪಾಟೀಲಕಿಯಿಂದ ಸಂಪಾದಿಸಿದ ಸೊತ್ತು ಇದು. ಮುಸಲ್ಮಾನರ, ಹಾಗು ಕಳ್ಳರು–ಕಾಕರ ಉಪದ್ರವದಿಂದ ಬಹು ಕಷ್ಟಪಟ್ಟು ಇದನ್ನು ನಾನು ಕಾಯುತ್ತಿರುವದರಿಂದ, ನನಗೆ ತನ್ನ ಈ ಸೊತ್ತು ಬಹಳ ಭಾರವಾಗಿರುವುದು ಪ್ರಭುಗಳ ಪ್ರತಾಪದಿಂದ ಮುಸಲ್ಮಾನರ ಹಾವಳಿಯೂ, ಕಳ್ಳರು –ಕಾಕರ ಉಪದ್ರವವೂ ಅಡಗಿಹೋಗಿ, ದೇಶದಲ್ಲಿ ಎಲ್ಲ ಕಡೆಗೆ ಶಾಂತತೆಯಾದಾಗ, ನಮ್ಮಂಥ ದುರ್ಬಲರು ನಮ್ಮ ನಮ್ಮ ಸೊತ್ತನ್ನು ಸುಲಬವಾಗಿ ರಕ್ಷಿಸಿಕೊಳ್ಳಬಹುದು. ಅಂತಹ ಸುಯೋಗವು ಪ್ರಭುಗಳ ಪುಣ್ಯ ಪ್ರತಾಪದಿಂದ ನಿಶ್ಚಯವಾಗಿ ಬೇಗನೆ ಒದಗಿಬರುವದು. ಅಂತಹ ಆ ಕಷ್ಟಸಾಧ್ಯ ಕಾರ್ಯದಲ್ಲಿ ತೊಡಗಿರುವ ಪ್ರಭುಗಳು, ನನಗೆ ಭಾರವಾಗಿರುವ ನನ್ನ ಈ ಅಲ್ಪ ಸೊತ್ತನ್ನು ಅಳಲಿಯ ಭಕ್ತಿಯಂತೆ ಸ್ವೀಕರಿಸಿ, ಹಿಟ್ಟಿನಲ್ಲಿ ಉಪ್ಪು ಬೆರಿಸಿದಂತೆ ಇದನ್ನು ದೇಶಕಾರ್ಯಕ್ಕೆ ಉಪಯೋಗಿಸಿಕೊಳ್ಳಬೇಕೆಂದು ಪ್ರಾರ್ಥಿಸುವೆನು. ಹಾಗೆ ಮಾಡುವದರಿಂದ ಈ ಸೇವಕನಾದ ಹಳ್ಳಿಯ ಪಾಟೀಲನು ನಾನು, ಸತ್ಕಾರ್ಯಸಾಧನ ಭಾಗಿಯಾಗಿ ಕೃತಾರ್ಥನಾಗಬಹುದು! ಪ್ರಭುರಾಯಾ, ವಿಚಾರಿಸಿ ನೋಡಿದರೆ ಮಹಾತ್ಮರಾದ ಗಣೇಶ ಗೋಸಾವಿಗಳೂ, ಚಿಕ್ಕಂದಿನಿಂದಲೂ ನಿನ್ನ ಭಕ್ತನೇ ಆಗಿರುವ ನಮ್ಮ ನೇತಾಜಿಯೂ ನನ್ನ ಈ ಸೊತ್ತಿನ ನಿಜವಾದ ಸಂಪಾದಕರಾದದ್ದರಿಂದ, ಎಲ್ಲ ಶ್ರೇಯಸ್ಸು ಅವರದು; ಕಲ್ಲಿಗೆ ಹತ್ತಿದ ಬೆಲ್ಲದಂತೆ ನಾನು ಅಲ್ಪ ಭಾಗಿಯು ಮಾತ್ರ; ಆದ್ದರಿಂದ ಇದು ನನ್ನ ಸೊತ್ತೆಂದು ಹೇಳಿ, ಈಗ ಪ್ರಭುವಿಗೆ ಅರ್ಪಿಸುವದೂ ನನ್ನ ದುರಹಂಕಾರದ ಲಕ್ಷಣವಾಗಿರುವದು.

ಈ ಮೇರೆಗೆ ದತ್ತಾಜಿ ಪಾಟೀಲನು ನುಡಿದು ಕುಳಿತುಕೊಳ್ಳಲು, ಆ ಜನಸಮೂಹದಲ್ಲಿ ಒಬ್ಬೊಬ್ಬರೇ ಎದ್ದು, ತಮ್ಮ ತಮ್ಮ ಹೆಸರು ಹೇಳಿ ತಮ್ಮ ತಮ್ಮ ಸೊತ್ತನ್ನು ಶಿವರಾಯನ ಮಹಾಕಾರ್ಯಕ್ಕೆ ಒಪ್ಪಿಸತೊಡಗಿದರು! ಹಾಗೆ ಆತ್ಮಸಂತೋಷದಿಂದ ತಮ್ಮ ತಮ್ಮ ಸೊತ್ತನ್ನು ಶಿವರಾಯನಿಗೆ ಒಪ್ಪಿಸಿದವರಲ್ಲಿ, ಯಾರು ಸಾವಕಾರರಿದ್ದರು; ಯಾರು ಶ್ರೀಮಂತರಿದ್ದರು; ಯಾರು ಜಮೀನದಾರರಿದ್ದರು; ಯಾರು ಒಕ್ಕಲಿಗರಿದ್ದರು; ಯಾರು ಕೂಲಿಕಾರರಿದ್ದರು; ಯಾರು ಭಿಕ್ಷುಕರಿದ್ದರು; ಯಾರು ಅಯಾಚಿತ ವೃತ್ತಿಯ ವೈದಿಕ ಬ್ರಾಹ್ಮಣರಿದ್ದರು! ಇವರೆಲ್ಲರೂ ದೇಶಭಕ್ತಿಯಿಂದ ತಮ್ಮ ತಮ್ಮ ಸೊತ್ತನ್ನು ಶಿವರಾಯನಿಗೆ ಒಪ್ಪಿಸುತ್ತಿರಲು, ''ಇದು ನಮ್ಮದು, ನಮಗಿರಲಿ'' ಎಂದು ಹೇಳುವವರು, ಅಲ್ಲಿಯಾರೂ ಕಾಣದಾದರು! ಆದರೆ ದೇಶಕಾರ್ಯಕ್ಕಾಗಿ ಸೊತ್ತು ಒಪ್ಪಿಸಲಿಕ್ಕೆ, ನಾ ಮುಂದೆ ನೀ ಮುಂದೆ ಎಂದು ಜನರು ಮುಂದುವರಿಯುವದು ಮಾತ್ರ ಅಲ್ಲಿ ಎಲ್ಲರ ಕಣ್ಣಿಗೆ ಬೀಳುತ್ತಿತ್ತು!

ಹೀಗೆ ಎಲ್ಲ ಬಾಬುಗಳ ಜನರೂ ದೇಶಕಾರ್ಯಕ್ಕೆಂದು ತಮ್ಮ ತಮ್ಮ ಸೊತ್ತುಗಳನ್ನೆಲ್ಲ ಅಯಾಚಿತವಾಗಿ ತಾವಾಗಿ ತನಗೆ ಅರ್ಪಿಸುವದನ್ನು ನೋಡಿ, ಧರ್ಮಜ್ಞನಾದ ಶಿವಪ್ರಭುವು ಬಹಳವಾಗಿ ನಾಚಿದನು. ಆತನು ಮೋರಯಾ ಗೋಸಾವಿಗಳನ್ನು ಕುರಿತು–ಮಹಾಸ್ವಾಮಿ, ವೆಂಕಾಜಿಯು ಕೂಡಿಸಿರುವ ಈ ದ್ರವ್ಯನಿಧಿಯಲ್ಲಿ ದೇವಸ್ವ ಇರುವದು; ಬ್ರಹ್ಮಸ್ವ ಇರುವದು; ಜೀವರು ಸುರಿಸಿ ದುಡಿವದರ ಸೊತ್ತು ಇರುವದು; ಇಮಾನಿಯ ರಾಜಸೇವಕರು ಸಂಪಾದಿಸಿದ್ದ ಧನವಿರುವದು; ನ್ಯಾಯದ ಗಳಿಕೆಯೂ ಇರುವದು; ಅನ್ಯಾಯದ ಗಳಿಕೆಯೂ ಇರುವದು; ಅಂದಬಳಿಕ ಇಂತಹ ಸಂಘ ದ್ರವ್ಯವನ್ನು ಸ್ವೀಕರಿಸುವ ನನ್ನ ಗತಿಯು ಏನಾಗಬೇಕು? ನಾನು ದೇಶವಲ್ಲೆಲ್ಲ ಡಂಗರು ಸಾರಿಸಿದ್ದು, ಅವರವರ ಸೊತ್ತನ್ನು ಅವರವರು ಒಯ್ದು ಸಂತೋಷ ಪಡಲೆಂದು! ಆದರೆ ಈಗ ಅದರ ಪರಿಣಾಮವು ''ದೇವರಕಡೆ ಕೈ, ಬಾಯಕಡೆ ಒಯ್'' ಎಂಬಂತಾಯಿತು! ಸ್ವಾಮಿ, ಜನರನ್ನು ಹೀಗೆ ದೇಶಕಾರ್ಯದ ಮಬ್ಬಿಗೆ ಹಾಕಿ ಅವರನ್ನು ಸುಲಿಯುವದು ನನಗೆ ಸರ್ವಥಾ ಅನ್ಯಾಯವಾಗಿ ತೋರುವದು! ಇನ್ನು, ಜನರನ್ನು ಕರೆಸದೆ ಹಾಗೆಯೇ ನಾನು ಈ ಸೊತ್ತನ್ನು ಉಪಯೋಗಿಸಿಕೊಂಡಿದ್ದರೆ, ಜನರ ಆಯಾಸವಾದರೂ ತಪ್ಪುತ್ತಿತ್ತು! ರಾಜನು, ಅದರಲ್ಲಿಯೂ ನನ್ನಂಥ ಕ್ಷತ್ರಿಯನು, ತನ್ನ ಪರಾಕ್ರಮದಿಂದ ಧನ ಸಂಪಾದಿಸಿ, ಅಥವಾ ಪ್ರಜೆಗಳ ಉತ್ಪನ್ನದ ಷಷ್ಠಾಂಶವನ್ನು ಸ್ವೀಕರಿಸಿ ತನ್ನ ರಾಜಕಾರ್ಯ ವನ್ನು ಸಾಗಿಸತಕ್ಕದ್ದು ನ್ಯಾಯವು. ಹೀಗಿದ್ದು, ಈಗ ದೇವಸ್ವ–ಬ್ರಹ್ಮಸ್ವಗಳನ್ನೂ ಕೂಡ ನಿಶ್ಶೇಷ ವಾಗಿ ಸ್ವೀಕರಿಸಲಿಕ್ಕೆ ನನ್ನ ಮನಸ್ಸು ಸರ್ವಥಾ ಒಪ್ಪುವದಿಲ್ಲ! ಇದರಿಂದ ಪ್ರಜಾವಂಚನೆಯ ದೋಷವು ತಟ್ಟುವದೆಂದು ನನಗೆ ಭಯ ಬರುತ್ತದೆ; ಇಂತಹ ಎಲ್ಲ ಬಗೆಯ ಧನದ ಪ್ರತಿ ಗ್ರಹಕ್ಕೆ, ಅಗ್ನಿ ಸದೃಶರಾದ ನಿಸ್ಪೃಹಿ–ಬ್ರಾಹ್ಮಣರೇ ಅಧಿಕಾರಿಗಳಲ್ಲದೆ, ನನ್ನಂಥ ಪಾಪಭೀರು ಕ್ಷತ್ರಿಯರು ಅಧಿಕಾರಿಗಳಲ್ಲವು.

ಮೋರಯಾ ಗೋಸಾವಿ—''ಶಿವರಾಯಾ, ನಿನ್ನ ಮಾತನ್ನು ನಾನು ಒಪ್ಪಿಕೊಳ್ಳುವೆನು, ನಿನ್ನ ಪಾಪಭೀರುತ್ವಕ್ಕಾಗಿ ನನಗೆ ಸಂತೋಷವೂ ಆಗುತ್ತದೆ; ಆದರೆ ಮಹಾರಾಷ್ಟ್ರ ಭೂಪತೇ, ಇದು ಕಲಿಯುಗವು; ಈಗಿನ ದ್ರವ್ಯಬ್ರಹ್ಮೋಪಾಸನೆಯ ಕಾಲದಲ್ಲಿ, ದೇವರು, ಧರ್ಮ, ಪಾಪಭಯ, ಲೋಕಲಜ್ಜೆ ಮೊದಲದವುಗಳ ಮರವಾಗಿ ಹೋಗವದು ಸ್ವಾಭಾವಿಕವು. ಬರ ಬರುತ್ತ ಕ್ಷಾತ್ರವೃತ್ತಿಯ ಲೋಪವು ಸಂಪೂರ್ಣವಾಗಿ ಆಗಿಹೋಗಿ ಹೇಯವಾದ ವಂಚಕತನದ ಭಿಕ್ಷಾವೃತ್ತಿಯಿಂದ ಬೇಕಾದವರು ಬೇಕಾದಹಾಗೆ ಹಣಕೂಡಿಸಿ, ದುರ್ವ್ಯಸನಿಗಳಾಗುತ್ತ ರಾಜಕಾರಣ ನಡೆಸುವ ಸೋಗುತೋರಿಸುವ ಕಾಲವು ಮುಂದೆ ಬರಬೇಕೆಂದಿರುವದು! ಆದರೆ ಶಿವರಾಯಾ, ''ರಾಜಾ ರಾಷ್ಟ್ರಕೃತಂ ಪಾಪಂ'' ಎಂಬಂತೆ, ಅಂತಹ ಎಚ್ಚರಗೇಡಿಯಾದ ನೀಚರಾಜನು, ಅಥವಾ ರಾಷ್ಟ್ರ ಮುಖಂಡರು ತಮ್ಮ ಹೀನ ಮಾರ್ಗದಿಂದ ರಾಷ್ಟ್ರದ ಪಾಪ ಹೆಚ್ಚಿಸಿದ ಅಪರಾಧಕ್ಕಾಗಿ ನರಕವಾಸಿಗಳಾಗಬೇಕಾಗುವದು; ಆದರೆ ಎಲೈ ಪುಣ್ಯಮೂರ್ತಿಯೇ, ಸದಾ ಧರ್ಮವೆಂಬ ಅಭೇದ್ಯ ಕವಚವನ್ನು ತೊಟ್ಟುಕೊಂಡಿರುವ ನಿನ್ನನ್ನು, ಯಾರ ಘೋರ ಪಾಪಗಳೂ ಭೇದಿಸಲಾರವು! ಹಿಂದಕ್ಕೆ ವಿಜಯನಗರದ ರಾಜ್ಯವನ್ನು ಸ್ಥಾಪಿಸುವಾಗ, ಮಹಾತ್ಮ

ರಾದ ವಿದ್ಯಾರಣ್ಯರು ತಮ್ಮ ತಪೋಬಲದಿಂದ ಸುವರ್ಣವೃಷ್ಟಿಮಾಡಿಸಿ ರಾಜಕಾರಣ ನಡಿಸಿದ್ದನ್ನು ಇತಿಹಾಸವು ಹೇಳುತ್ತಿರುವದು; ಆದ್ದರಿಂದ ಎಲೈ ಧರ್ಮಿಷ್ಠನಾದ ಶಿವರಾಜನೇ, ಇದು ಒಂದು ಬಗೆಯ ಸುವರ್ಣವೃಷ್ಟಿಯೆಂತಲೇ ನೀನು ತಿಳಿದುಕೋ! ನಿನ್ನ ರಾಷ್ಟ್ರದಲ್ಲಿಯ ಹಿಂದಕ್ಕೆ ಆಗಿಹೋದ, ಹಾಗು, ಈಗ ಇರುವ ರಾಮದಾಸ, ತುಕಾರಾಮ ಮೊದಲಾದ ಸಾಧು–ಸಂತರ ತಪಸ್ಸಿನ ಪುಣ್ಯದಿಂದ ನೀನು, ರಾಷ್ಟ್ರಕಲ್ಯಾಣಕ್ಕಾಗಿ ಹುಟ್ಟಿ ಬಂದಿರುತ್ತೀ; ಮತ್ತು ಆ ಮಹಾತ್ಮರ ಪುಣ್ಯದಿಂದಲೇ ಹಲವು ಮುಖಗಳಿಂದ ನಿನಗೆ ಜನ ಸಹಾಯವೂ, ಧನಸಹಾಯವೂ ಈಗ ದೊರೆಯುತ್ತಿರುವದೆಂದು ತಿಳಿದುಕೊಳ್ಳು. ನಿನಗೆ ಬರುವ ಎಲ್ಲ ಬಗೆಯ ಪಾಪಗಳನ್ನು ಸಾಧು–ಸಂತರು ತಮ್ಮ ತಪಸ್ಸಿನ ಗೂಢವಾದ ಅಗ್ನಿಯಲ್ಲಿ ಸುಟ್ಟು ಬಿಟ್ಟು ಪ್ರಜಾಪಾಲಕನಾದ ನಿನಗೆ, ಪುಣ್ಯಮೂಲವಾದ ಧರ್ಮಬುದ್ಧಿಯನ್ನು ಕೊಟ್ಟಿರಲು, ಪ್ರಭೂ, ಶಿವರಾಯಾ, ನೀನು ಯಾವ ಪಾಪಕ್ಕೂ ಅಂಜುವ ಕಾರಣವಿಲ್ಲ; ಇದರ ಮೇಲೆಯೂ ನಿನ್ನ ಭಾವಿಕವಾದ ಕೋಮಲ ಹೃದಯವು ಪಾಪಕ್ಕೆ ಅಂಜುತ್ತಿದ್ದರೆ, ಇಂದು ಹೇಗೂ ಮಕರಸಂಕ್ರಮಣದ ಪರ್ವಕಾಲವಿರುತ್ತದೆ; ಆದ್ದರಿಂದ ಈ ಪುಣ್ಯವಂತರು ಭಕ್ತಿಯಿಂದ ನಿನಗೆ ಅರ್ಪಿಸಿರುವ ಈ ಧನರಾಶಿಗಳನ್ನೆಲ್ಲ ಶ್ರೀ ಗಣನಾಯಕನ ಸನ್ನಿಧಿಯಲ್ಲಿ ಕೃಷ್ಣಾರ್ಪಣ ಬುದ್ಧಿಯಿಂದ ನನಗೆ ದಾನಕೊಟ್ಟು ಬಿಡು; ಬರುವ ಪಾಪಕ್ಕೆ ನಾನು ಗುರಿಯಾಗಿ, ಪರ್ವಕಾಲದಲ್ಲಿ ದಾನಮಾಡಿದ ಪುಣ್ಯವನ್ನು ನಿನಗೆ ಬಿಟ್ಟು ಕೊಡುವೆನು. ಶಿವರಾಯಾ, ಇಂದಿನ ದಿವಸವು ಮಹಾ ಪರ್ವವೆನಿಸುವ ಮಕರಸಂಕ್ರಮಣ ದ್ದಿರುವದರಿಂದ, ಇನ್ನೊಂದು ದೊಡ್ಡ ಸುವರ್ಣ ರಾಶಿಯ ದಾನದ ಮಹಾ ಪುಣ್ಯವು ಇದೇ ಪರ್ವಕಾಲದಲ್ಲಿ ನಿನ್ನ ಪದರಿನಲ್ಲಿ ಬೀಳಬಹುದಾಗಿ ತೋರುತ್ತದೆ!

ಈ ಮೇರೆಗೆ ಮೋರಯಾ ಗೋಸಾವಿಗಳು ನುಡಿಯುತ್ತಿರಲು, ಒಬ್ಬ ಉಪ್ಪಾರನು ಕೋಟೆಯ ಗೋಡೆ ಅಗಿಯುತ್ತಿರುವಾಗ ಸಿಕ್ಕ ಒಂದು ಹಿತ್ತಾಳಿಯ ಕೊಳಿವೆಯನ್ನು ತಂದು ಶಿವಪ್ರಭುವಿನ ಮುಂದೆ ಇಟ್ಟು—"ದೇವರೂ ನಮ್ಮ ಆಳುಗಳು ಕೋಟೆಯ ಗೋಡೆಯನ್ನು ಅಗಿಯುವಾಗ ಈ ಕೊಳಿವೆಯು ಸಿಕ್ಕಿತು." ಎಂದು ಹೇಳಿದನು. ಆಗ ಶಿವಪ್ರಭುವು ಆ ಕೊಳಿವೆ ಯನ್ನು ಮೋರಯಾ ಗೋಸಾವಿಗಳ ಕೈಯಲ್ಲಿ ಕೊಡಲು, ಅದನ್ನು ಅವರು ತಕ್ಕೊಂಡು, ಶ್ರೀ ಗಣನಾಯಕನ ಕಡೆ ನೋಡಿ—"ವಿಘ್ನಹರ್ತಾ, ಹೀಗೆ ನೀನು ಶಿವರಾಯನ ಕಾರ್ಯ ಕ್ಕೊದುಗುವ ವಿಘ್ನರಾಶಿಗಳನ್ನು ದೂರಮಾಡಲು ಟೊಂಕ ಕಟ್ಟಿರುವಾಗ, ಆತನಿಗೆ ಯಾವ ವಿಘ್ನಗಳು ಬಂದು ಏನು ಮಾಡುವವು? ಜಯ ಮಂಗಲಮೂರ್ತೇ" ಎಂದು ನುಡಿದು, ಗೋಸಾವಿಗಳು ಆ ಕೊಳವೆಯ ಮುಚ್ಚಳವನ್ನು ತಗೆದು ನೋಡಲು, ಅದರಲ್ಲಿ ಕಾಗದದ ಸುರಳಿಯೊಂದು ಇತ್ತು! ಗೋಸಾವಿಗಳು ಅದನ್ನು ಹೊರಗೆ ತೆಗೆದು ನಗೆಮೊಗದಿಂದ ಓದುತ್ತಿರುವಾಗ, ಎಲ್ಲ ಜನರೂ ಅವರ ಮೋರೆಯ ಕಡೆಗೇ ಕೌತುಕದಿಂದ ನೋಡ ತೊಡಗಿದರು! ಗೋಸಾವಿಗಳು ಆ ಕಾಗದವನ್ನು ಓದುತ್ತ ಹೋದಂತೆ, ಇವರ ಮುಖದಲ್ಲಿ ಆನಂದದ ಕಳೆಯು ಉಕ್ಕುತ್ತ ಬಂದಿತು! ಗೋಸಾವಿಗಳು ಆ ಕಾಗದವನ್ನು ಒಮ್ಮೆ ಓದಿದರು, ಎರಡುಸಾರೆ ಓದಿದರು, ಮೂರುಸಾರೆ ಓದಿದರು! ಆಗ ಅವರು ಆನಂದದ ಭರದಲ್ಲಿ ಶಿವ

ರಾಯನನ್ನು ಕುರಿತು—''ಶಿವಬಾ, ನಿನ್ನ ಅಂಬಾಭವಾನೀಮಾತೆಯು ನಿನ್ನ ಭಕ್ತಿಗೆ ಮೆಚ್ಚಿ, ನಿನಗೆ ಅಪಾರವಾದ ಒಂದು ಗುಪ್ತ ನಿಧಿಯನ್ನು ಕೊಟ್ಟಳು; ಶಿವರಾಯಾ, ಆ ಗುಪ್ತ ನಿಧಿಯು ನಿನ್ನಿಂದ ದೂರ ಇಲ್ಲ; ಆಗೋ, ಅಲ್ಲಿ ಬಹು ಪುರಾತನದ ಒಂದು ಗಚ್ಚಿನ ದೊಡ್ಡ ವೃಂದಾವನವು ಕಾಣುತ್ತದಲ್ಲ, ಅದರಲ್ಲಿಯ ಅಂಬಾಬಾಯಿಯ ಪ್ರತಿಮೆಯನ್ನು, ಈ ಕೋಟೆಯಲ್ಲಿಯೇ ಹುಟ್ಟಿರುವ ನೀನು, ಚಿಕ್ಕಂದಿನಿಂದಲೇ ಪೂಜಿಸುತ್ತ ಬಂದಿರುವಿಯಷ್ಟೇ? ಆ ವೃಂದಾವನದ ಬುಡದಲ್ಲಿಯೇ ಅಪಾರವಾದ ಧನದ ನಿಧಿಯು ಇರುವದೆಂದು ಈ ಕಾಗದದಲ್ಲಿ ಬರೆದಿರುತ್ತದೆ. ತಡವೇಕೆ? ನಿನಗಾಗಿಯೇ ಶ್ರೀ ಅಂಬಾಭವಾನಿಯು ಕಾದಿಟ್ಟಿದ್ದ ಧನರಾಶಿಯನ್ನು, ಈ ಮಂಗಲ ಮೂರ್ತಿಯ ಮುಂದೆ ತಂದು ಸುರುವಿಬಿಡೋಣ, ಕರಿಸು ಕಾಮಾಟಿಗರನ್ನು! ಶಿವಬಾ, ತ್ರಿಕಾಲಜ್ಞರಾದ ಮಹಾತ್ಮರು, ಮುಂದೆ ನಿನ್ನಂಥ ಮಹಾಪುರುಷರ ಮಹಾಕಾರ್ಯಕ್ಕಾಗಿ ಸಹಾಯವಾಗಬೇಕೆಂದು, ಹೀಗೆ ಗುಪ್ತ ನಿಧಿಗಳನ್ನು ಸಂಗ್ರಹಿಸಿಡುವ ಸಾಂಪ್ರದಾಯವು ಅನಾದಿಕಾಲದಿಂದ ನಡೆದು ಬಂದಿರುವದು. ರಾಜ್ಯಸ್ಥಾಪನೆಗೆ, ದೇವಸ್ಥಾನ–ಕೆರೆ–ಕಾಲುವೆ ಮೊದಲಾದವುಗಳ ಜೀರ್ಣೋದ್ಧಾರಕ್ಕೆ ಈ ಗುಪ್ತಧನದ ವಿನಿಯೋಗವಾಗತಕ್ಕದ್ದಿರುವದು. ಹಿಂದಕ್ಕೆ ಕಲ್ಯಾಣ ಪಟ್ಟಣದಲ್ಲಿ ಶ್ರೀ ಬಸವೇಶ್ವರನು ಬಿಜ್ಜಳ ರಾಜನ ಸಿಂಹಾಸನದ ಬುಡದಲ್ಲಿ ಹೂಳಿಟ್ಟಿದ್ದ ಧನರಾಶಿಯನ್ನು, ಆಕಸ್ಮಾತ್ತಾಗಿ ಆಕಾಶದಿಂದ ಬಿದ್ದ ಪತ್ರವನ್ನು ಓದಿ ಬಿಜ್ಜಳ ರಾಜನಿಗೆ ಒದಗಿಸಿಕೊಟ್ಟಿದ್ದ ಸಂಗತಿಯು ಇತಿಹಾಸ ಪ್ರಸಿದ್ಧವಾಗಿರುವದು! ಆ ಬಿದ್ದ ಪತ್ರವನ್ನು ಕೂಡಿದ ಸಭೆಯಲ್ಲಿ ಶ್ರೀ ಬಸವೇಶ್ವರನೊಬ್ಬನೇ ಓದಲು ಸಮರ್ಥನಾದನಂತೆ! ಅಂದಬಳಿಕ ಪುಣ್ಯಪುರುಷರ ಗುಪ್ತನಿಧಿಗಳು ಪುಣ್ಯಪುರುಷರಿಗಲ್ಲದೆ, ಮತ್ತೊಬ್ಬರಿಗೆ ದೊರೆಯವು; ಆದ್ದರಿಂದ ಪುಣ್ಯಪುರುಷಾ ಶಿವಬಾ, ಬೇಗನೇ ಕಾಮಾಟಿಗರನ್ನು ಕರೆಸು, ತಡ ಮಾಡಬೇಡ. ಇಲ್ಲಿ ನೆರೆದಿರುವ ಪುಣ್ಯವಂತರ ಮುಂದೆ ನಿನ್ನ ಮಹಾಪುಣ್ಯವು ಸೂರೆಯಾಗಿ ಹೋಗಲಿ!

ಕೂಡಲೆ ಶಿವರಾಯನ ಅಪ್ಪಣೆಯಂತೆ ಕಾಮಾಟಿಗರು ಗುದ್ದಲಿ–ಸಲಿಕೆಗಳನ್ನು ತಕ್ಕೊಂಡು ಅಲ್ಲಿಗೆ ಬಂದರು. ಆಗ ಮೋರಯಾ ಗೋಸಾವಿಗಳು ಕಾಮಾಟಿಗರನ್ನು ಹಿಂದಕ್ಕೆ ಸರಿಸಿ, ಶ್ರೀ ಗಜಾನನನಿಗೆ ನಮಸ್ಕಾರಮಾಡಿ, ಆತನ ನಾಮಘೋಷ ಮಾಡುತ್ತ ಆ ಕಾಗದದಲ್ಲಿ ಹೇಳಿರುವ ಸಂಕೇತದಂತೆ ಕೆಲವು ಕ್ರಿಯೆಗಳನ್ನು ಮಾಡಲು, ಸಣ್ಣದೊಂದು ಗುಡಿಯಂತೆ ಇದ್ದ ಆ ದೊಡ್ಡ ವೃಂದಾವನವು, ನಿರಾಯಾಸದಿಂದ ಮಗ್ಗಲಿಗೆ ಸರಿದು ಸ್ಥಿರವಾಯಿತು! ವೃಂದಾವನದ ಬುಡದಲ್ಲಿ ನೆಲಮನೆಯ ಬಾಗಿಲು ಇದ್ದು, ಅದನ್ನು ಗೋಸಾವಿಗಳು ಆ ಕಾಗದದಲ್ಲಿಯ ಸಂಕೇತದಂತೆ ತೆರೆಯಲು, ಒಳಗೆ ಪಾವಟಿಗೆಗಳು ಕಣ್ಣಿಗೆ ಬಿದ್ದವು. ಅದನ್ನು ನೋಡಿ ಜನರು ಆಶ್ಚರ್ಯ ಚಕಿತರಾದರು. ಶಿವರಾಯನು ಮೋರಯಾ ಗೋಸಾವಿಗಳನ್ನು ಹಿಂಬಾಲಿಸಿ, ಹಿಲಾಲಿನ ಬೆಳಕಿನ ಸಹಾಯದಿಂದ ಪಾವಟಿಗೆಗಳನ್ನು ಇಳಿದು ಹೋಗಲು, ಕಾಗದದಲ್ಲಿ ಬರೆದಿರುವಂತೆ ಅಪಾರ ವಾದ ಧನನಿಧಿಯು ಅಲ್ಲಿ ಕಣ್ಣಿಗೆ ಬಿದ್ದಿತು! ಆ ಧನನಿಧಿಯೊಳಗಿಂದ ಒಂದು ಬಂಗಾರದ ಬುಟ್ಟಿ ತುಂಬ ಸುವರ್ಣ ನಾಣ್ಯಗಳನ್ನು ಪೂಜೆಗಾಗಿ ಗೋಸಾವಿಗಳು ಗಣಗತಿಯ ಮುಂದೆ ಇಡಿಸಿದರು. ಕೂಡಲೇ ಮೋರಯಾ ಗೋಸಾವಿಗಳು ಆ ಕಾಗದದಲ್ಲಿಯ ಸಂಕೇತದಂತೆ ಕೆಲವು

ಕ್ರಿಯೆಗಳನ್ನು ಮಾಡಲು, ಆ ಭದ್ರವಾದ ವೃಂದಾವನವು ಮತ್ತೆ ತನ್ನ ಸ್ಥಳದಲ್ಲಿ ಮೊದಲಿನಂತೆ ಗಟ್ಟಿಮುಟ್ಟಿಯಾಗಿ ಕುಳಿತುಬಿಟ್ಟಿತು! ಬಳಿಕ ಶಿವರಾಯನು ಆ ಮಹಾಲಕ್ಷ್ಮಿಯ ಪೂಜೆ ಮಾಡಿ, ಆ ಎಲ್ಲ ದ್ರವ್ಯನಿಧಿಯ ಮೇಲೆ ತುಳಸೀಪತ್ರವಿಟ್ಟು, ಅದನ್ನೆಲ್ಲ ಮೋರಯಾ ಗೋಸಾವಿಗಳಿಗೆ ಆ ಪರ್ವಕಾಲದಲ್ಲಿ ಉದಾಕಧಾರಾಪೂರ್ವಕವಾಗಿ ದಾನ ಕೊಡಬೇಕೆನ್ನುತ್ತಿರಲು, ವಿಜಾಪುರದ ಬಾದಶಹನ ಧನವನ್ನು ಅಪಹರಿಸಿಕೊಂಡು ಬರಹೋಗಿದ್ದ ಆಬಾಜಿ ಸೋನದೇವನೂ, ನೇತಾಜಿ ಪಾಲಕರನೂ ಹೇರಳ ಹಣವನ್ನು ತಕ್ಕೊಂಡು ಅಲ್ಲಿಗೆ ಬಂದರು! ಆಗ ಜನರ ಮನೋವೃತ್ತಿಗಳು ಗುಂಗಾಗಿಹೋಗಿ, ಶಿವರಾಯನು ನಿಶ್ಚಯವಾಗಿ ಶಿವಾಂಶನಿರುವನೆಂಬ ನಂಬಿಗೆಯು ಅವರಲ್ಲಿ ಉತ್ಪನ್ನವಾಯಿತು! ಹೀಗೆ ಅಕಸ್ಮಾತ್ತಾಗಿ ಒಂದರಹಿಂದೆ ಒಂದು ಸುವರ್ಣವೃಷ್ಟಿಯ ಸೆಳಕುಗಳು ಬಂದದ್ದರಿಂದ, ಶಿವರಾಯನ ದ್ರವ್ಯದ ತೊಂದರೆಯು ಕಡಿದು ಹೋದದ್ದಲ್ಲದೆ, ಆತನ ವಿಷಯದಲ್ಲಿ ಜನರ ಭಕ್ತಿ–ವಿಶ್ವಾಸಗಳು ಹೆಚ್ಚಿದವು. ಬಳಿಕ ಮೋರಯಾ ಗೋಸಾವಿಗಳು ಶಿವರಾಯನ ಇಚ್ಛೆಯಂತೆ ಆ ಒಟ್ಟು ಗೂಡಿದ ದ್ರವ್ಯನಿಧಿಯನ್ನೆಲ್ಲ ದಾನವಾಗಿ ಗ್ರಹಿಸಿ, ಅದನ್ನು ದೇಶಕಾರ್ಯಕ್ಕೆ ವಿನಿಯೋಗಿಸಬೇಕೆಂದು ಶಿರಾಯನಿಗೆ ತಿರುಗಿ ಒಪ್ಪಿಸಿಬಿಟ್ಟರು! ಇಂತಹ ಅಗಾಧ ನಿಸ್ಪೃಹತೆಯುಳ್ಳ ಬ್ರಾಹ್ಮಣರ ವಿಷಯದಲ್ಲಿಯೇ ಮನು ಮಹಾರಾಜನು ''ಜಗತ್ತೆಲ್ಲ ಬ್ರಾಹ್ಮಣನದೇ'' ಎಂದು ಹೇಳಿರುವನಂತೆ! ಒಟ್ಟಿಗೆ ಜಗತ್ತಿನ ಅಭಾದಿತ ಒಡೆತನವು ನಿಸ್ಪೃಹಿಗಳದಾಗಿರುತ್ತದೆ; ಯಾಕಂದರೆ ''ನಿಸ್ಪೃಹಸ್ಯ ತೃಣಂ ಜಗತ'' ಎಂಬ ಉಕ್ತಿಯಂತೆ, ಅವರು ಜಗತ್ತನ್ನು ಹುಲ್ಲುಕಡ್ಡಿಗೆ ಸಮಾನವಾಗಿ ಎಣಿಸುವರು. ಅಂದಬಳಿಕ ಅವರಿಗೆ ಜಗತ್ತಿನ ಕ್ಷುದ್ರ ಭೋಗೇಚ್ಛೆಯು ಎತ್ತಣಿಂದ ಬರಬೇಕು? ಭೋಗೇಚ್ಛೆಯಿಲ್ಲದವರು ಜಗತ್ತಿನ ಒಡೆತನವು ಯಾತರಿಂದ ನಷ್ಟವಾಗಬೇಕು?

## ಶಿವರಾಯನ ಸೌರಣೆ

ಹೀಗೆ ಶಿವರಾಯನಿಗೆ ಹಲವು ಮುಖಗಳಿಂದ ದ್ರವ್ಯ ಸಹಾಯವು ದೊರೆತದ್ದು ''ಶಾಂತವಾಗುತ್ತಿದ್ದ ದೀಪಕ್ಕೆ ಎಣ್ಣೆಯ ಬುದ್ದಲಿಕೆ ಸಿಕ್ಕಂತಾಯಿತು ಶಿವರಾಯನು ಆ ದ್ರವ್ಯನಿಧಿಯನ್ನು ತಕ್ಕ ಕೆಲಸಕ್ಕೆ ಕೈಬಿಗಿಹಿಡಿದು ವೆಚ್ಚಮಾಡತೊಡಗಿದನು. ಆತನು ಈಗ ಮುಖ್ಯವಾಗಿ ಎರಡು ಕೆಲಸಗಳನ್ನು ಮೊದಲು ಮಾಡಬೇಕಾಗಿತ್ತು—(1) ರಾಯಗಡ ಮೊದಲಾದ ಕೋಟೆಗಳನ್ನು ಕಟ್ಟಿಸುವದು, (2) ಕಲ್ಯಾಣ–ರಾಜಮಾಚಿ ಎಂಬ ಎರಡು ಕೋಟೆಗಳನ್ನು ವಶಮಾಡಿಕೊಳ್ಳುವದು. ಈ ಎರಡು ಕೆಲಸಗಳಿಗೆ ಬೇಕಾಗುವ ದ್ರವ್ಯವು ಈಗ ದೊರೆತದ್ದರಿಂದ, ಶಿವರಾಯನು ಉತ್ಸಾಹದಿಂದ ಈ ಕೆಲಸಗಳಿಗೆ ಕೈ ಹಾಕಿದನು; ಆತನು ಮೊದಲು ಶಸ್ತ್ರಗಳ ಸಂಗ್ರಹವನ್ನು ಮಾಡತೊಡಗಿದನು. ಆಗ ಹಿಂದುಸ್ತಾನದಲ್ಲಿ ವ್ಯಾಪಾರಕ್ಕಾಗಿ ಬಂದಿದ್ದ ಯುರೋಪಿಯರಲ್ಲಿ ಪೋರ್ತಗೀಜರ ಕೈಯು ಮೇಲಾಗಿತ್ತು, ಅವರ ಉತ್ತಮ ಶಸ್ತ್ರಗಳೂ,

ತೋಪು–ತುಬಾಕಿಗಳೂ ಹಿಂದುಸ್ಥಾನದಲ್ಲಿ ಪ್ರಸಿದ್ಧವಾಗಿದ್ದವು. ವಿಜಾಪುರದ ಬಾದಶಹನಿಗೆ ಅವರೇ ಶಸ್ತ್ರ ಮೊದಲಾದ ಯುದ್ಧೋಪಯೋಗಿ ಪದಾರ್ಥಗಳನ್ನು ಪೂರಯಿಸುತ್ತಿದ್ದರು; ಶಿವಾಜಿಯಾದರೂ ಆ ಪೋರ್ತುಗೀಜರಲ್ಲಿಯೇ ಕತ್ತಿ–ಢಾಲು–ತುಬಾಕಿ–ತೋಫುಗಳನ್ನು ಕೊಳ್ಳಬೇಕಾಗುತ್ತಿತ್ತು; ಆತನು ಈ ಮೊದಲೇ ಪೋರ್ತುಗೀಜರಿಂದ ಅವನ್ನು ಕೊಳ್ಳಲು ಯತ್ನಿಸಿದನು; ಆದರೆ ಕಂತದಿಂದ ಹಣಕೊಡುವ ಶಿವರಾಯನ ಕರಾರಿಗೆ ಅವರು ಒಪ್ಪಲಿಲ್ಲ; ಅವರು ರೋಖ ಹಣವನ್ನು ಕೇಳುತ್ತಿದ್ದರು; ಆದರೆ ಶಿವರಾಯನ ಬಳಿಯಲ್ಲಿ ರೋಖ ಹಣ ವಿಲ್ಲದ್ದರಿಂದ, ಆ ಕೆಲಸವು ಅಲ್ಲಿಯೇ ನಿಂತುಹೋಗಿತ್ತು, ತಾನು ಹಣಕೊಡುವದರೊಳಗೆ ವಿಜಾಪುರದ ಬಾದಶಹನು ಆ ಯುದ್ಧದ ಸಾಮಾನುಗಳನ್ನು ಕೊಂಡು, ತನ್ನ ಬಲವನ್ನು ಎಲ್ಲಿ ಹೆಚ್ಚಿಸಿಕೊಳ್ಳುವನೋ ಎಂದು ಶಿವರಾಯನು ಯಾವಾಗಲೂ ಚಿಂತಿಸುತ್ತಿದ್ದನು. ಕಡೆಗೆ ವಿಜಾಪುರದ ಖಜಾನೆಯನ್ನು ಲೂಟಿ ಮಾಡಿಯಾದರೂ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸ ಬೇಕೆಂದು ಆತನು ನಿಶ್ಚಯಿಸಿದ್ದನು. ಮೇಲಾಗಿ ಆತನು ಪೋರ್ತಗೀಜರಿಗೆ ಒಂದು ಹುಸಿ ಗುಂಡು ಹಾಕಿದ್ದನು; ನನಗೆ ಹಣದ ಅನುಕೂಲತೆಯಾಗುವದರೊಳಗೆ ನೀವು ವಿಜಾಪುರದ ಬಾದಶಹನಿಗೆ ಆ ಯುದ್ಧದ ಸಾಮಾನುಗಳನ್ನು ಮಾರಲಿಕ್ಕೆ ಕೊಟ್ಟರೆ, ಕ್ಷಣಶಃ ನೀವು ನನ್ನ ಉಪದ್ರವವನ್ನು ಸಹನ ಮಾಡ ಬೇಕಾದೀತು'' ಎಂದು ಗಟ್ಟಿಮುಟ್ಟಿಯಾಗಿ ಹೇಳಿದ್ದನು. ಈ ಮೊದಲೇ ಶಿವಾಜಿಯು ಮಾಡುತ್ತ ಬಂದಿದ್ದ ಹಲವು ಸಾಹಸದ ಕಾರ್ಯಗಳನ್ನು, ಆ ಪೋರ್ತ ಗೀಜರು ಕೇಳಿದ್ದರು; ಆದ್ದರಿಂದ ಅವರು ಶಿವಾಜಿಯ ಬೆದರಿಕೆಯನ್ನು ದುರ್ಲಕ್ಷಿಸಲಿಲ್ಲ; ಆದರೆ ಆ ಪೋರ್ತುಗೀಜರಿಗೂ ದುಡ್ಡಿನ ಆಚು ಇದ್ದದ್ದರಿಂದ, ಬಹಳ ಅಗ್ಗವಾಗಿಯೇ ಆಗಲೊಲ್ಲ ದೇಕೆ, ರೊಖಹಣ ಕೊಟ್ಟು ಯುದ್ಧ ಸಾಮಗ್ರಿಯನ್ನು ನೀವು ಕೊಳ್ಳಬೇಕೆಂದು ಶಿವಾಜಿಗೆ ಅವರು ದುಂಬಾಲು ಬಿದ್ದರು; ಅಷ್ಟರಲ್ಲಿ ಶಿವಾಜಿಗೆ ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಹೇರಳ ಹಣ ಸಿಕ್ಕಿದ್ದರಿಂದ, ಆತನು ತಡಮಾಡದೆ, ಹದಿನೈದು ಸಾವಿರ ಕತ್ತಿಗಳನ್ನೂ, ಹತ್ತು ಸಾವಿರ ಢಾಲುಗಳನ್ನೂ, ಹತ್ತು ಸಾವಿರ ತುಬಾಕಿಗಳನ್ನೂ, ಹನ್ನೆರಡು ಹಿತ್ತಾಳೆಯ ತೋಫು ಗಳನ್ನೂ ಪೋರ್ತುಗೀಜರಿಂದ ಅಗ್ಗವಾಗಿ ರೋಖ ಹಣಾ ಕೊಟ್ಟು ಕೊಂಡನು. ಇವಲ್ಲದೆ ತನಗೆ ಬೇಕಾದಷ್ಟು ಮದ್ದು ಗುಂಡುಗಳನ್ನೂ, ಕುದುರೆಗಳನ್ನೂ ಹಣಕೊಟ್ಟು ಆತನು ಸಂಗ್ರಹಿಸಿಕೊಂಡನು.

ಹೀಗೆ ಶಿವಾಜಿಯು ತನಗೆ ಸರಿದೋರಿದಷ್ಟು ಯುದ್ಧ ಸಾಮಗ್ರಿಗಳನ್ನು ಸಂಗ್ರಹಿಸಿದ ಬಳಿಕ, ದಂಡು ಹೆಚ್ಚಿಸುವ ಕೆಲಸಕ್ಕೆ ಕೈಹಾಕಿದನು. ಭವಾನಿಯ ಕೃಪೆಯಿಂದ ಹಿಂದೆ ಹೇಳಿದಂತೆ ಆತನಲ್ಲಿ ಈಗ ಹೇರಳ ಹಣ ಕೂಡಿದ್ದರಿಂದ, ಆ ಸೈನ್ಯ ಸಂಗ್ರಹದ ಕೆಲಸವನ್ನಾದರೂ ಆತನು ಸುಲಭವಾಗಿ ಸಾಧಿಸಿಕೊಂಡನು. ಮಕರ ಸಂಕ್ರಮಣದ ದಿವಸ ಶಿವನೇರಿ ಕೋಟೆಯಲ್ಲಾದ ಸುವರ್ಣ ವೃಷ್ಟಿಯನ್ನು ಪ್ರತ್ಯಕ್ಷವಾಗಿ ನೋಡಿ ಹೋಗಿದ್ದವರು ಮಹಾರಾಷ್ಟ್ರದ ತುಂಬ ಅದರ ಸುದ್ದಿಯನ್ನು ಹಬ್ಬಿಸಿದರು; ಸುದ್ದಿಯಲ್ಲಿ ಅತಿಶಯೋಕ್ತಿಯು ಬೆರೆತುಕೊಳ್ಳುವದು ಆಶ್ಚರ್ಯವಲ್ಲ. ಅದರಂತೆ ಆ ಸುದ್ದಿಯ ಅತಿಶಯೋಕ್ತಿಯಾಗುತ್ತಾಗುತ್ತ—''ಶಿವಾಜಿಗೆ ಅಂಬಾ

ಭವಾನಿಯ ಪ್ರತ್ಯಕ್ಷಳಾಗಿದ್ದು, ಆಕೆಯು ತನ್ನ ಭಕ್ತನಾದ ಶಿವರಾಯನಿಗೆ ಬೇಡಿದಾಗ ಬೇಕಾದಷ್ಟು ಹಣ ಒದಗಿಸಿಕೊಡುವಳೆಂ''ಬ ಜನವಾರ್ತೆಯು ದೇಶದ ತುಂಬ ಹಬ್ಬಿ ಬಿಟ್ಟಿತ್ತು. ಆಗ ಕೇಳುವುದೇನು? ಶಿವಾಜಿಯ ದಂಡಿನಲ್ಲಿ ಸೇರಬೇಕೆಂದು ಆತುರಪಡುತ್ತಲಿದ್ದ ಮರಾಟರೂ, ಮಾಳೇಜನರೂ ಶಿವಾಜಿಯ ಬಳಿಗೆ ಧಾವಿಸಿ, ಹೋಗಹತ್ತಿದರು. ಆಗಿನ ಕಾಲದ ಪದ್ಧತಿಯಂತೆ, ಯುದ್ಧಕಲೆಯು ಪುರುಷಮಾತ್ರರಿಗೆ ಅಲ್ಪ ಸ್ವಲ್ಪವಾದರೂ ಬಂದೇ ಬರುತ್ತಿತ್ತು. ಗರಡಿಯ ಮನೆಯಾಡುವದು, ಗುರಿ ಹೊಡೆಯುವದು, ಬೇಟೆಯಾಡುವದು ಮುಂತಾದ ಪೌರುಷದ ಕೆಲಸಗಳು, ಆಗಿನ ಜನರ ನಿತ್ಯಕರ್ಮಗಳಾಗಿದ್ದವೆಂದು ಹೇಳಬಹುದು. ಇಂತಹ ಸ್ಥಿತಿಯಲ್ಲಿ ಯುದ್ಧಕಲೆಯಲ್ಲಿ ತಾವು ನಿಪುಣರೆಂದು ತಿಳಕೊಂಡಿದ್ದ ಸಾವಿರಾರು ಜನರ ಗುಂಪುಗಳು, ಶಿವಾಜಿಯ ಬಳಿಗೆ ಹೋದವು; ಅಲ್ಲದೆ, ಶಿವಾಜಿಯ ಬಾಲಮಿತ್ರರಾದ ಏಸಾಜಿಕಂಕ, ತಾನಾಜಿಮಾಲಸುರೆ, ಬಾಜಿಫಸಲಕರ ಎಂಬವರೂ, ಹೊಸದಾಗಿ ಶಿವಾಜಿಯ ನಂಬಿಗೆಗೆ ಪಾತ್ರನಾಗಿದ್ದ ನೇತಾಜಿ ಪಾಲಕರನೂ ಜನರ ಗುಣ ಪರೀಕ್ಷೆ ಮಾಡಿ ದಂಡಾಳುಗಳನ್ನು ಸಂಗ್ರಹಿಸುತ್ತಿದ್ದರು. ಇತ್ತ ಮೋರೆ ನೋಡಿದಮಾತ್ರದಿಂದ ಜನರ ಗುಣ ತಿಳಿಯುವ ಸಾಮರ್ಥ್ಯವುಳ್ಳ ಶಿವರಾಯನೂ, ಬಡಬಡ ಸಾವಿರಾರು ಜನ ಸೈನಿಕರನ್ನು ಸಂಗ್ರಹಿಸಿದನು. ಒಟ್ಟಿಗೆ, ಈಗ ಶಿವಾಜಿಯಲ್ಲಿ ಇಪ್ಪತ್ತು ಇಪ್ಪತ್ತೈದು ಸಾವಿರ ಸೈನಿಕರ ಸಂಗ್ರಹವಾಗಿರಬಹುದು. ಹೀಗೆ ಅಕಸ್ಮಾತ್ತಾಗಿ ಶಿವರಾಯನ ಸೈನ್ಯಬಲ-ದ್ರವ್ಯಬಲಗಳು ಹೆಚ್ಚಲು, ಆತನ ಅಲೌಕಿಕತೆಯ ಕೀರ್ತಿಯು ದಿಗಂತದಲ್ಲಿ ವ್ಯಾಪಿಸಿತು. ಶಿವರಾಯನು ಶಿವಾವತಾರ ವಾಗಿರದಿದ್ದರೆ, ಇಂತಹ ಅದ್ಭುತ ಕಾರ್ಯಗಳು ತಟ್ಟನೆ ಹೇಗೆ ಆದಾವೆಂದು ಜನರು ಆಶ್ಚರ್ಯದಿಂದ ತಮ್ಮ ತಮ್ಮೊಳಗೆ ಮಾತಾಡಹತ್ತಿದರು. ಹೀಗೆ ಅಕಸ್ಮಾತ್ತಾಗಿ ಆದ ಶಿವಾಜಿಯ ಉತ್ಕರ್ಷದ ಸುದ್ದಿಯು, ಅತ್ತ ವಿಜಾಪುರದ ಬಾದಶಹನಿಗೂ ಹತ್ತಿ ಶಿವಾಜಿಯನ್ನು ಬಗ್ಗು ಬಡಿಯುವದಕ್ಕಾಗಿ ಆತನೂ ಮನಃಪೂರ್ವಕವಾಗಿ ಯತ್ನಿಸತೊಡಗಿದನು.

ಹೀಗೆ ಶಿವರಾಯನು ಧನಸಂಪನ್ನನೂ, ಧಾನ್ಯಸಂಪನ್ನನೂ, ಬಲ ಸಂಪನ್ನನೂ ಆದ ಬಳಿಕ, ಕೋಟೆಗಳ ಭದ್ರತೆಯ ಕಡೆಗೆ ಮನಸ್ಸು ಹಾಕಿದನು. ಶಿಥಿಲವಾಗಿದ್ದ ಕೋಟೆಗಳ ಭದ್ರತೆಗೆ ಒಮ್ಮೆಲೆ ಆರಂಭವಾಯಿತು ಹೀಗೆ ಸರ್ವತೋಮುಖವಾಗಿ ಆಗಹತ್ತಿದ ಶಿವರಾಯನ ಪ್ರಗತಿಯನ್ನು ನೋಡಿ, ಶಿವರಾಯನ ದೇವಾಂಶತ್ವವು ಭಾವಿಕರಿಗೆ ಸ್ಪಷ್ಟವಾಗಿ ತೋರಹತ್ತಿತು; ಅವರು ಅತ್ಯಂತ ಅಭಿಮಾನ ತಾಳಿ ಶಿವರಾಯನ ದೈವಶಾಲಿತ್ವವನ್ನು ಸಂತೋಷದಿಂದ ಕೊಂಡಾಡಹತ್ತಿದರು; ಆತನ ಕಾರ್ಯ-ಕೌಶಲ್ಯವನ್ನು ಹೊಗಳಹತ್ತಿದರು; ಆತನ ಯುಕ್ತಿ ಪ್ರಯುಕ್ತಿಗಳಿಗೆ ತಲೆದೂಗಹತ್ತಿದರು; ಆತನ ಧೈರ್ಯ-ಸಾಹಸಗಳಿಗೆ ಬೆಚ್ಚಿ ಬೆರಗಾಗಹತ್ತಿದರು; ಹೀಗೆ ಜನರು ಆಶ್ಚರ್ಯಪಡುವಂತೆ ಶಿವರಾಯನು ಎಲ್ಲ ಕೋಟೆಗಳ ಕಟ್ಟಡದ ಕಾರ್ಯಗಳನ್ನು ನಡೆಸಿದ್ದರೂ, ಕಟ್ಟಡದ ಆ ಕಾರ್ಯವು ರಾಯಗಡದಲ್ಲಿ ಒಳ್ಳೇ ರಭಸದಿಂದ ನಡೆದಿತ್ತು; ಯಾಕಂದರೆ ಕೊಂಕಣದಲ್ಲಿದ್ದ ಆ ರಾಯಗಡದ ಕೋಟೆಯನ್ನು ವಿಶೇಷವಾಗಿ ಭದ್ರಪಡಿಸಬೇಕೆಂತಲೂ, ಅಲ್ಲಿಯೇ ಮಹಾರಾಷ್ಟ್ರ ರಾಜ್ಯದ ಸಿಂಹಾಸನವನ್ನು ಸ್ಥಾಪಿಸಬೇಕೆಂತಲೂ

ಆ ಶಿವರಾಯನು ನಿಶ್ಚಯಿಸಿದ್ದನು. ಆ ಜೀರ್ಣ ಕೋಟೆಯನ್ನು ಕಟ್ಟಿಸುವಾಗಲೂ ಆತನಿಗೆ ಬಹಳ ದ್ರವ್ಯವು ಸಿಕ್ಕಿತೆಂಬದು ಕೇಳಿಕೆಯಲ್ಲಿರುವದು! ಅನುಕೂಲಕಾಲವು ಒದಗಿದಾಗ ಮನುಷ್ಯನು ಮಣ್ಣು ಹಿಡಿದರೆ ಚಿನ್ನವಾಗುವದೆಂಬ ಮಾತು ಸುಳ್ಳಲ್ಲ;

ಒಂದು ದಿನ ರಾಯಗಡದಲ್ಲಿ ಕೋಟೆಯನ್ನು ಭದ್ರಪಡಿಸುವ ಕೆಲಸವು ಒಳ್ಳೇ ಭರದಿಂದ ಸಾಗಿತ್ತು; ಸಹಸ್ರಾವಧಿ ಕೂಲಿಕಾರರು ದುರ್ಗದ ತುಂಬ ಕೆಲಸ ಮಾಡುತ್ತಿದ್ದರು. ಯಾರು ಕಟ್ಟಡದ ಕಲ್ಲು ಹೊಡೆಯುತ್ತಿದ್ದರು; ಯಾರು ಹೊಡೆದ ಕಲ್ಲುಗಳನ್ನು ಹೊತ್ತು ಒಯ್ಯುತ್ತಿದ್ದರು; ಯಾರು ಗಚ್ಚು ಪೂರಯಿಸುತ್ತಿದ್ದರು; ಯಾರು ಗೋಡೆ ಕಟ್ಟುತ್ತಿದ್ದರು. ಗಚ್ಚು ಕುಟ್ಟುತ್ತಿದ್ದ ಹೆಣ್ಣುಮಕ್ಕಳು ತನ್ನ ಚರಿತ್ರದ ಪದ ಹೇಳುತ್ತ ಗಚ್ಚು ಕುಟ್ಟುವದನ್ನು ಕೇಳಿ, ಶಿವರಾಯನ ಹೃದಯದಲ್ಲಿ ಆನಂದದ ತೆರೆಗಳು ಉತ್ಪನ್ನವಾಗುತ್ತಿದ್ದವು; ಆಗ ಶಿವರಾಯನು ಕೆಲಸ ನೋಡುತ್ತ ನೋಡುತ್ತ ತನ್ನ ಸಂಗಡಿಗರೊಡನೆ ತಮ್ಮ ಹತ್ತರ ಬರಲು, ಕೂಲಿಕಾರರು ಎದ್ದು ನಿಂತು ಬಹು ವಿನಯದಿಂದ ಆತನಿಗೆ ರಾಮರಾಮ ಮಾಡಿ ತಲೆತಗ್ಗಿಸಿ ಸುಮ್ಮನೆ ಪುನಃ ಕೆಲಸದಲ್ಲಿ ತೊಡಗುತ್ತಿದ್ದರು. ತಮ್ಮ ಮೋರೆ ನೋಡಿದಮಾತ್ರದಿಂದ ಶಿವರಾಯನು ತಮ್ಮ ಗುಣಗಳನ್ನು ಕಂಡುಹಿಡಿಯುವನೆಂಬ ಭಯವು ಎಲ್ಲರಿಗೂ ಇದ್ದಿತು; ಶಿವರಾಯನು ಮೆಚ್ಚಿದವರಿಗೆ ಮೆಚ್ಚು ಕೊಡುವಲ್ಲಿ ಹುಚ್ಚು ದೊರೆಯೆಂಬ ಭಕ್ತಿಯೂ ಜನರಲ್ಲಿ ಇದ್ದಿತು; ಆದ್ದರಿಂದ ಯಃಕಶ್ಚಿತ ಕೂಲಿಕಾರರಿಂದ ದೊಡ್ಡ ದೊಡ್ಡ ಕಲಾವಂತ ಉಪ್ಪಾರರವರೆಗೆ ಎಲ್ಲರೂ ಶಿವರಾಯನ ಮೆಚ್ಚಿಗೆಯ ಇಚ್ಛೆಯಿಂದ ಮೈಮುರಿದು ದುಡಿಯುತ್ತಿದ್ದರು. ನೋಡಿದತ್ತೆಲ್ಲ ಕೆಲಸಗಾರರ ಮುಖಗಳಲ್ಲಿ ಉಲ್ಲಾಸವು ಉಕ್ಕುತ್ತಿತ್ತು! ಆಗ ಜನರು ತಮ್ಮತಮ್ಮೊಳಗೆ–ಶಿವಪ್ರಭುವು ನಮ್ಮ ಕೆಲಸ ನೋಡಬಹುದಲ್ಲವೆ! ನಮ್ಮ ಶಿವರಾಯನು ನಮ್ಮ ಕೆಲಸ ನೋಡುತ್ತ ಎಷ್ಟು ಹೊತ್ತು ನಿಂತುಕೊಂಡನಲ್ಲ! ನಮ್ಮ ಶಿವರಾಯನು ತಾನು ದೊಡ್ಡ ಅರಸನಾಗಿದ್ದರೂ, ನಮ್ಮ ಹತ್ತುಗಡಿಯವರಂತೆ ನಮ್ಮ ಮನೆಯವರೆಲ್ಲರ ಯೋಗಕ್ಷೇಮವನ್ನು ವಿಚಾರಿಸಿದನು! ನಮ್ಮ ಶಿವರಾಯನ ನೆನಪಿನ ಶಕ್ತಿಯಾದರೂ ಎಷ್ಟದು! ಹಿಂದಕ್ಕೆ ಲೋಹಗಡದಲ್ಲಿ ಊರ ಊಟ ನಡೆದಾಗ ನಾನು ಐದು ಗಂಗಾಳ ಗೋದಿಹುಗ್ಗಿ ತಿಂದ ಸುದ್ದಿಯನ್ನು ಈ ದಿನ ತೆಗೆದು ಶಿವರಾಯನು ನನಗೆ—''ಜೀವೂಬಾ, ನಾಡದು ರಥಸಪ್ತಮಿಯು; ನಿಮ್ಮೆಲ್ಲರಿಗೆ ಗೋದಿಯ ಹುಗ್ಗಿಯ ಪ್ರಸ್ತವಾಗುವದು; ತಳಿಗೆಯನ್ನು ಬೆಳಗಿ ಇಡು; ಅಂದಿನ ಐದು ಗಂಗಾಳದ ಬದಲು ಈಸಾರೆ ಹತ್ತು ಗಂಗಾಳ ಗೋದಿಹುಗ್ಗಿ ಉಣ್ಣಬೇಕು ನೋಡು;'' ಎಂದು ನಗುತ್ತ ಹೇಳಿದನು. ನಮ್ಮ ಶಿವಬಾ ದೊರೆಗೆ ಒಂದು ಗರ್ವವೇ ಸೊಕ್ಕೇ! ನಮ್ಮಪ್ಪ ಸಮುದ್ರನು! ಬಡವರಿಗಿಂತ ಬಡವನಾಗಿ ನಮ್ಮ ಸಂಗಡ ಮಾತಾಡುವನು; ಆದರೆ ನಮ್ಮ ದೊರೆಗೆ ತಗಲು ತಾಟು ಮಾತ್ರ ಸೇರುವದಿಲ್ಲ. ಸುಳ್ಳಾಡಿದರೆ ಆತನು ಬೆಂಕಿಯ ಘರ್ಜು! ಆತನಿಗೆ ಮೈಗಳ್ಳತನ ಸೇರದು; ನಮ್ಮಪ್ಪನು ಪರರ ಹೆಣ್ಣು ಕಣ್ಣೆತ್ತಿ ನೋಡನು! ಆತನು ಹುಟ್ಟಿ ಬರದಿದ್ದರೆ, ನಮ್ಮ ಲಂಗೋಟಿಯ ಮಂದಿಯನ್ನು ಯಾರು ಕೇಳುತ್ತಿದ್ದರು? ಶಿವರಾಯನ ದರ್ಪಕ್ಕೆ ಒಳ್ಳೊಳ್ಳೆ ಮುಸಲ್ಮಾನ ಸರದಾರರು ಅಂಜಿ ತತ್ತಿಯ ಹಾಕುವರು. ನಮ್ಮ ಶಿವರಾಯನ ಸಮರಂತಿಕೆಯನ್ನು ಕೇಳಿ ವಿಜಾಪುರದ ಬಾದಶಹ

ನಾದ ಮುಹಮ್ಮದಶಹನೂ ತಲೆದೂಗುವನಂತೆ! ಇಂಥ ನಮ್ಮ ದೊರೆ ಶಿವರಾಯನು ನೂರುವರ್ಷ ಬದುಕಲಿ! ಎಂದು ಮಾತಾಡುತ್ತಲಿದ್ದರು. ಇಂತಹ ಹಲವು ಬಗೆಯ ಭಾವಯುಕ್ತ ಗೌರವದ ನುಡಿಗಳು ಶಿವರಾಯನ ವಿಷಯವಾಗಿ ಜನರ ಮುಖದಿಂದ ಹೊರಡುತ್ತಿದ್ದವು. ಹೀಗೆ ಸರ್ವತ್ರ ಶಿವರಾಯನ ಪ್ರಾಶಸ್ತ್ಯವು ತೋರಹತ್ತಿತ್ತು! ಹೀಗಿರುವಾಗ ಶಿವರಾಯನು ಅತ್ಯಂತ ಉತ್ಸಾಹದಿಂದ ರಾಯಗಡದ ಸಂದಿಗೊಂದಿಗಳಲ್ಲಿಯೂ ನಡೆಯುತ್ತಿರುವ ಕೆಲಸಗಳನ್ನು ನೋಡಿ ಸಂತೋಷಪಟ್ಟು ಒಂದು ಎತ್ತರದ ಬಂಡೆಯ ಮೇಲೆ ಕುಳಿತು ಸುತ್ತು ಮುತ್ತು ನೋಡಹತ್ತಿದನು. ಆಗ ಸಹಸ್ರಾವಧಿ ಜನ ಕೂಲಿಕಾರರು ಒಮ್ಮೆಲೆ ಆತನ ಕಣ್ಣಿಗೆ ಬಿದ್ದರು. ಆಗ ಆತನ ಮನಸ್ಸಿನಲ್ಲಿ—ನಾನು ಎಂತಹ ಕರ್ತೃಶಾಲಿಯು, ಇಷ್ಟು ಜನರಿಗೆ ಅನ್ನ ಹಾಕುವೆ ನಲ್ಲವೆ?'' ಎಂಬ ಅಹಂಕಾರದ ಮೊಳಕೆಯು ಒಡೆಯಿತು! ಆಗ ಅಂತಹ ಗುರುಭಕ್ತನೂ ದೇವರನ್ನು ಮರೆತುಬಿಟ್ಟನು! ಈಶ್ವರೀತಂತ್ರದಿಂದಲೇ ಜಗದ್ವ್ಯವಹಾರವು ನಡೆದಿರುವದೆಂಬ ಮಾತು, ಆತನಿಗೆ ಆಗ ಪೂರಾ ಮರೆತು ಹೋಯಿತು! ಹೀಗೆ ದೇವರನ್ನು ಮರೆತು ಬಿಡುವದೇ ಮಾಯೆಯ ಲಕ್ಷಣವಾಗಿರುವದು; ಆ ಮಾಯೆಯನ್ನು ಅಥವಾ ಪ್ರಕೃತಿಯನ್ನು ಮೀರು ವದೂ ಯಾರಿಗಾದರೂ ಅಶಕ್ಯವೇ ಸರಿ; ಅಂತೇ ಭಗವಂತನು ಗೀತೆಯಲ್ಲಿ ''ಮಮ ಮಾಯಾ ದುರತ್ಯಯಾ'' ಎಂದು ಹೇಳಿರುವನು; ಅಂದರೆ ''ನನ್ನ ಮಾಯೆಯನ್ನು ಗೆಲ್ಲುವದು ನನಗೂ ಕಷ್ಟವು'' ಎಂದು ಹೇಳುವದು ಆ ಭಗವದ್ವಾಕ್ಯದ ತಾತ್ಪರ್ಯವು. ''ಸಂಕಟ ಬಂದಾಗ ವೆಂಕಟ ರಮಣ'' ಎಂದು ಲೋಕೋಕ್ತಿಯಂತೆ, ಕಷ್ಟಕಾಲದಲ್ಲಿ ದೇವರ ನೆನಪು ಯಾರಿಗಾದರೂ ಆಗುತ್ತದೆ; ಆದರೆ ಸಂತೋಷಕಾಲದಲ್ಲಿ ಆತನ ವೈಭವದ ನೆನಪಾಗುವದು ಅಪರೂಪವು; ಆಗ ಮನುಷ್ಯನಿಗೆ ಅಹಂಕಾರವು ಬಂದು ಬಿಡುವದು! ಅಹಂಕಾರದಲ್ಲಿ ಸಾತ್ವಿಕಾಹಂಕಾರ, ರಾಜ ಸಾಹಂಕಾರ, ತಾಮಸಾಹಂಕಾರ ಎಂದು ಮೂರು ಪ್ರಕಾರಗಳಿರುವವು; ''ದೇವರ ಕೃಪೆಯಿಂದ ಈ ಮಹಾ ಕಾರ್ಯವನ್ನು ನಾನು ಮಾಡಿದೆನು'' ಎಂಬುದು ಸಾತ್ವಿಕಾಹಂಕಾರವು' ''ನನ್ನ ಕೈ ಕೆಸರಾದದ್ದಕ್ಕೆ ಬಾಯಿ ಮೊಸರಾಯಿತು'' ಎಂಬ ಉಕ್ತಿಯು ರಾಜಸಾಹಂಕಾರದ ಲಕ್ಷಣವನ್ನು ಹೇಳುವದು; ''ನನ್ನ ಹಾಗೆ ಯಾರಿದ್ದಾರೆ? ನನಗೆ ಅಸಾಧ್ಯವಾದದ್ದೇನಿದೆ? ಎಂಬ ವಾಕ್ಯಗಳಿಂದ ತಾಮಸಾಹಂಕಾರದ ಸ್ವರೂಪವು ಗೊತ್ತಾಗುತ್ತದೆ. ''ಎಂಬ ಮಾತುಗಳು ನಿರಹಂಕಾರದವಾಗಿ ರುವವು. ಇವುಗಳಲ್ಲಿ ಸಾತ್ವಿಕಾಹಂಕಾರವು ಈಶ್ವರನ ಜ್ಞಾನಕ್ಕೆ ಸಾಧನ, ರಾಜಸಾಹಂಕಾರವು ಪಾಪಮೂಲವಾದ ಲೋಭೋತ್ಪತ್ತಿಗೆ ಸಾಧನ, ತಾಮಸಾಹಂಕಾರವು ಅಜ್ಞಾನಮೂಲವಾದ ಆತ್ಮನಾಶಕ್ಕೆ ಸಾಧನ, ನಿರಹಂಕಾರವು ಈಶ್ವರ ಪ್ರಾಪ್ತಿಯಾದದ್ದರ ಲಕ್ಷಣವು. ಇದರಿಂದ ವಿಚಾರ ಮಾಡಿ ನೋಡಿದರೆ, ನಮ್ಮ ಶಿವರಾಯನ ಬಂಡೆಯ ಮೇಲೆ ಕುಳಿತಾಗಿನ ಉದ್ಗಾರಗಳು, ಆತನಲ್ಲಿ ತಾಮಸಾಹಂಕಾರದ ಮೊಳಕೆಯೊಡದದ್ದನ್ನು ತೋರಿಸುವವು. ಆದರೆ ಗುರುಭಕ್ತ ರಾದವರಿಗೆ ಇಂತಹ ತಾಮಸಾಹಂಕರಾವು ಸರ್ವಥಾ ಸಲ್ಲದು! ಉದ್ಯೋಗ ತತ್ಪರತೆಯಲ್ಲಿ ಅಕಸ್ಮಾತ ರಾಜಸಾಹಂಕಾರವು ಮಿಂಚುಹೋದರೆ ಕ್ಷಮ್ಯವಾಗಬಹುದು; ಆದರೆ, ತಮ್ಮ ಶಿಷ್ಯರ ಮೇಲೆ ತಾಮಸಾಹಂಕಾರದ ನೆರಳು ಬಿದ್ದದ್ದನ್ನು ನಿಜವಾದ ಗುರುಗಳು ಸಹಿಸಲಾರರು? ಹೀಗೆ

ಶಿವರಾಯನು ತಾಮಸಾಹಂಕಾರ ಪಿಶಾಚದ ಆವೇಶದಲ್ಲಿ ಮತ್ತೆ ತನ್ನ ಮನಸ್ಸಿನೊಳಗೆ—''ನನ್ನ ದೇವಭಕ್ತಿಯು ಎಂತಹದು! ನನ್ನ ಗುರುಭಕ್ತಿಯು ಎಂತಹದು! ನನ್ನಂಥ ಭಕ್ತರು ಜಗತ್ತಿನಲ್ಲಿ ಯಾರಿರುವರು? ಹೀಗಿದ್ದು, ಸಮರ್ಥ ರಾಮದಾಸರು ನನ್ನನ್ನು ಬಿಟ್ಟು ಕಲ್ಯಾಣವನ್ನು ಶ್ರೇಷ್ಠ ಶಿಷ್ಯನೆಂದು ತಿಳಿಯುವರು! ನನಗೆ ಕೇಳಿದಾಗ ಭವಾನಿಯ ಪ್ರಸಾದವು; ಕರೆಸದಿದ್ದರೂ ಮೋರಯಾ ಗೋಸಾವಿಗಳಂತ ಸತ್ಪುರುಷರು ತಾವಾಗಿ ನನ್ನ ಮನೆಗೆ ಬರುವರು. ನನ್ನ ಕೀರ್ತಿಯ ಪ್ರಭಾವವೆಷ್ಟು? ಒಂದು ತಿಂಗಳಲ್ಲಿ ಇಪ್ಪತ್ತುಸ್ಸಾವಿರ ದುಂಡು ತಾನಾಗಿ ಬಂದು ನನ್ನ ಚಾಕರಿಗೆ ನಿಂತಿತು; ಅಂದ ಬಳಿಕ ನಾನು ನನ್ನ ತೋಳ ಸಾಮರ್ಥ್ಯದಿಂದ, ದ್ರವ್ಯಬಲದಿಂದ, ಸೈನ್ಯದ ಕಸುವಿನಿಂದ, ಯುಕ್ತಿ ಪ್ರಯುಕ್ತಿಗಳ ಸಹಾಯದಿಂದ ಬೇಕಾದದ್ದು ಮಾಡಬಲ್ಲೆನು; ವಿಜಾಪುರದ ಬಾದಶಹನೇನು, ದಿಲ್ಲಿಯ ಬಾದಶಹನೇನು, ನನ್ನ ಹೆಸರು ಕೇಳಿದರೆ ಸಾಕು, ಅವರ ಎದೆಗುಂಡಿಗಳು ಬಿಚ್ಚುವವು; ಶಾಬಾಸ! ಶಿವಬಾ ಶಬಾಸ!! ಹೀಗೆಯೇ ನೀನು ಕಷ್ಟಪಟ್ಟು ಒಂದೇ ಸವನೆ ದುಡಿದರೆ, ನೀನು ಹಿಂದೂ ಪದಪಾತಶಾಹಿಯನ್ನು ಸ್ಥಾಪಿಸಬಹುದು?

ಈ ಬಗೆಯ ವಿಚಾರಗಳಲ್ಲಿ ಶಿವರಾಯನು ತಲ್ಲೀನನಾಗಿ ಮನೋರಾಜ್ಯಸುಖವನ್ನು ಭೋಗಿಸುತ್ತಿರಲು, ಅಕಸ್ಮಾತ್ತಾಗಿ ರಾಮದಾಸ ಸ್ವಾಮಿಗಳು ಕಲ್ಯಾಣ ಶಿಷ್ಯನೊಡನೆ ಆತನ ಬಳಿಗೆ ತಟ್ಟನೆ ಬಂದು ನಿಂತುಬಿಟ್ಟರು! ಆದರೆ ವಿಚಾರಮಗ್ನನಾಗಿದ್ದ ಶಿವರಾಯನಿಗೆ ತನ್ನ ಸಮರ್ಥ ಗುರುಗಳು ಪಟ್ಟ ಶಿಷ್ಯನೊಡನೆ ಬಂದದ್ದು ಗೊತ್ತೇ ಆಗಲಿಲ್ಲ! ತನ್ನ ಗೆಳೆಯರು ಗುರುಗಳಿಗೆ ನಮಸ್ಕಾರ ಮಾಡಿದ್ದನ್ನೂ ಆತನು ನೋಡಲಿಲ್ಲ! ಅದನ್ನು ನೋಡಿ ಶಿವರಾಯನ ಪರಿವಾರದವರಿಗೆ ಪರಮಾಶ್ಚರ್ಯವಾಯಿತು. ಸಮರ್ಥರ ಸಮಕ್ಷ ತಮ್ಮ ಶಿವರಾಯನಿಗೆ ಗುರುಗಳ ಆಗಮನದ ಸೂಚನೆ ಮಾಡಲಿಕ್ಕೂ ಅವರಿಗೆ ಅಸ್ಪದ ದೊರೆಯಲೊಲ್ಲದು! ಅಷ್ಟರಲ್ಲಿ ಶಿವರಾಯನು ಮನಸ್ಸಿನಲ್ಲಿ ಏನೋ ಯೋಚಿಸಿ—''ಏಸಾಜಿ'' ಎಂದು ಕರೆದು, ಸುತ್ತುಮುತ್ತು ನೋಡಲು, ಕಲ್ಯಾಣನಿಂದ ಸಹಿತವಾದ ಸಮರ್ಥರ ದಿವ್ಯ ಮೂರ್ತಿಯು! ಕೂಡಲೆ ಶಿವರಾಯನ ತಾಮಸಾಹಂಕಾರದ ಮದ್ದಿನ ರಾಸಿಗೆ ಕೊಳ್ಳಿಯ ಕೊಟ್ಟಂತಾಗಿ, ಆತನ ಹೃದಯವು ತಲ್ಲಣಿಸಿ, ಆತನು ಲಗುಬಗೆಯಿಂದ ಎದ್ದು ಶ್ರೀ ಗುರುಚರಣಗಳ ಮೇಲೆ ಮಸ್ತಕವಿಟ್ಟನು; ಸೂರ್ಯೋದಯವಾಗಲು ಕತ್ತಲೆ ನಿಲ್ಲಬಹುದೇ? ಅಂದರಂತೆ ಸಮರ್ಥರ ದರ್ಶನವಾದ ಕೂಡಲೆ ಶಿವರಾಯನ ತಾಮಸಾಹಂಕಾರವು ಹರಿದು, ಬಟ್ಟಬಯಲಾದದ್ದೇನಾಶ್ಚರ್ಯವು? ಗುರುಗಳು ಎದುರಿಗೆ ಬಂದು ನಿಂತಿದ್ದರೂ ತಾನು ಅವರನ್ನು ಲಕ್ಷಿಸದಿರುವ ಅಪರಾಧಕ್ಕಾಗಿ ಶಿವರಾಯನು ಬಹಳವಾಗಿ ಬೆದರಿದನು; ತನ್ನ ತಾಮಸವೃತ್ತಿಗಾಗಿ ಆತನು ಬಹಳವಾಗಿ ನಾಚಿದನು; ಆಗ ಗುರುಗಳನ್ನು ನೋಡುವ ಧೈರ್ಯವೂ ಆತನಿಗೆ ಆಗದ್ದರಿಂದ, ಆತನು ತಲೆತಗ್ಗಿಸಿ ಸುಮ್ಮನೆ ನಿಂತುಬಿಟ್ಟನು. ಆಗ ಸಮರ್ಥರು ಶಿವರಾಯನಿಗೆ—''ಶಿವಬಾ, ಎಲ್ಲ ಕ್ಷೇಮವೇ? ರಾಯಗಡದ ಭದ್ರತೆಯ ಕೆಲಸವು ನಿರ್ವಿಘ್ನವಾಗಿ ನಡೆದಿದೆಯಷ್ಟೇ?'' ಎಂದು ಕೇಳಲು, ಶಿವರಾಯನು ಕೈ ಜೋಡಿಸಿ—''ಹೌದು ಮಹಾಸ್ವಾಮಿ, ಚರಣಾನುಗ್ರಹಕ್ಕೆ ಯಾವದು ಅಸಾಧ್ಯವು?'' ಎಂದು ನುಡಿದನು; ಆಗ ಆತನ ಹೃದಯವು ಪಶ್ಚಾತ್ತಾಪದಿಂದ ದಗ್ಧ

ವಾಗುತ್ತಲಿದ್ದದ್ದರಿಂದ, ಹೆಚ್ಚು ಮಾತಾಡಲಿಕ್ಕೂ ಆತನಿಗೆ ಧೈರ್ಯ ಸಾಲಲಿಲ್ಲ! ಆಗ ಸಮರ್ಥರು ಶಿವರಾಯನಿಗೆ—''ಶಿವಬಾ, ನಡೆ, ಕೋಟೆಯ ಭದ್ರತೆಯ ಕೆಲಸವು ಹೇಗೆ ಹೇಗೆ ನಡೆದಿದೆ ನೋಡೋಣ ನಡೆ'' ಎಂದು ನುಡಿಯಲು, ಶಿವರಾಯನು ಗುರುಗಳನ್ನು ಹಿಂಬಾಲಿಸಿ ನಡೆದನು. ಶಿವರಾಯನ ಉಗ್ರವಾದ ಕ್ಷಾತ್ರತೇಜಸ್ಸು, ಸಮರ್ಥರ ಸೌಮ್ಯವಾದ ಬ್ರಹ್ಮತೇಜಸ್ಸನ್ನು ಅನುಸರಿಸಿ ಸಾಗಿರಲು, ''ಯತ್ರಯೋಗೇಶ್ವರಃ ಕೃಷ್ಣೋ ಯತ್ರಪಾರ್ಥೊ ಧನುರ್ಧರಃ'' ಎಂಬ ಉಕ್ತಿಗೆ, ಇಲ್ಲಿ ಉದಾಹರಣವು ದೊರೆತಂತಾಯಿತು! ಅಂದಬಳಿಕ ಅಲ್ಲಿ ಸಂಪತ್ತೂ, ಜಯವೂ, ಐಶ್ವರ್ಯವೂ ಉದಯಿಸಿದ್ದರೆ ಆಶ್ಚರ್ಯವೇನು?

ಹೀಗೆ ಸಮರ್ಥರು ಶಿವರಾಯನೊಡನೆ ರಾಯಗಡದಲ್ಲಿ ನಡೆದಿದ್ದ ಕಾಮಗಾರಿಯನ್ನು ನೋಡುತ್ತ ನೋಡುತ್ತ ನಡೆದರು; ಆಗ ಅವರ ಸುವರ್ಣ ಕಾಂತಿಯ ಮೈಬಣ್ಣ, ವೈರಾಗ್ಯ ಸೂಚಕಗಳಾದ ಲಂಗೋಟಿ–ಹೆಗಲ ಜೋಳಿಗೆಗಳು, ಯೋಗಲಾಂಛನವಾದ ಕೈಯೊಳಗಿನ ಯೋಗದಂಡ, ಲೋಕಕಲ್ಯಾಣ ದೀಕ್ಷಾಗುರುತ್ವದ ಗುರುತಾದ ಅವರ ನೈಷ್ಠಿಕ ಬ್ರಹ್ಮ ಚರ್ಯಾಶ್ರಮದ ಸುಂದರ ಗಡ್ಡ–ಮೀಸೆಗಳು ಇವು ಜನಮನೋಹರಗಳಾಗಿ ಶೋಭಿಸುತ್ತಿದ್ದವು. ಸಮರ್ಥರು ಗಂಭೀರವಾದ ನಗೆಮೊಗದಿಂದ ಅಲ್ಲಲ್ಲಿಯ ಕೆಲಸಗಾರರ ಕೆಲಸಗಳನ್ನು ನೋಡುತ್ತ ನೋಡುತ್ತ, ಒಂದು ವಿಶಾಲವಾದ ಬಂಡೆಯ ಬಳಿಯಲ್ಲಿ ಬಂದು ನಿಂತುಕೊಂಡು, ತಮ್ಮ ಶಿವಬಾನನ್ನು ಕುರಿತು—''ಶಿವಬಾ, ಈಗ ನಾವು ನಿನ್ನ ಕೆಲಸಗಾರರ ಚಾತುರ್ಯ–ಸಾಮರ್ಥ್ಯ ಗಳನ್ನು ಪರೀಕ್ಷಿಸಬೇಕೆಂದಿರುವೆವು; ಆದ್ದರಿಂದ ಈ ಮಾರ್ಗದ ಮಧ್ಯದಲ್ಲಿರುವ ಈ ಪ್ರಪಂಚ ಬಂಡೆಯನ್ನು ನಾವು ನಿಂತ ನಿಂತಿರುವಾಗಲೇ ಒಡಿಸಿ ಬೈಲು ಮಾಡಿಸು ನೋಡೋಣ'' ಎಂದು ಕೇಳಿದರು. ಕೂಡಲೆ ಶಿವರಾಯನ ಅಪ್ಪಣೆಯಂತೆ ಚತುರರಾದ ಹಲವು ಜನ ಕಲ್ಲು ಕುಟಿಗರು ಅಲ್ಲಿಗೆ ಧಾವಿಸಿಬಂದು, ಆ ಬಂಡೆಯನ್ನು ಒಡೆಯಹತ್ತಿದರು; ಶಿವರಾಯನ ಆಗ್ರಹದ ಅಪ್ಪಣೆ; ಮೇಲೆ ಸಮರ್ಥರ ನಿರೀಕ್ಷಣ; ಇಷ್ಟು ಸಾಲದೆ, ಬಂಡೆಯು ಬೇಗನೆ ಒಡೆಯಬೇಕೆಂಬ ಸಮರ್ಥರ ಪ್ರಬಲವಾದ ಇಚ್ಛೆ! ಹೀಗೆ ಮೂರು ಶಕ್ತಿಗಳು ಮುಪ್ಪರಿಗೊಂಡು ಬಳಿಕ ಕೇಳುವ ದೇನು? ಸಮರ್ಥರು ಮನಸ್ಸಿಗೆ ಬಂದರೆ ಇಚ್ಛಾಮಾತ್ರದಿಂದ ಹೊಸ ಸೃಷ್ಟಿಯನ್ನು ಮಾಡ ಬಹುದಾಗಿರಲು, ಅಂಥಹ ಆ ಸಮರ್ಥರ ನಿರೀಕ್ಷಣವೂ, ಶಿವರಾಯನ ಆಗ್ರಹದ ಆಜ್ಞೆಯೂ ಆಗ ಕೇವಲ ಔಪಚಾರಿಕಗಳಾಗಿ ಪರಿಣಮಿಸಿದವೆಂದು ಹೇಳಬೇಕಾಗುವದು. ಕಲ್ಲುಕುಟ್ಟಿಗರ ಚಾಣಗಳ ಹೊಡೆತಗಳ ನೆವದಿಂದ ಬಂಡೆಯ ಪಳಕಿಗಳು ಪಳಪಳ ಉಚ್ಚುತ್ತ ಉಚ್ಚುತ್ತ ಬಂಡೆಯು ಸಣ್ಣಾಗಹತ್ತಿತ್ತು. ಹೀಗೆ ಹಲವು ದಿನ ಒಡೆದರೂ ಪೂರಾ ಒಡೆಯದ ಬಂಡೆಯು, ಅರ್ಧ ತಾಸಿನೊಳಗೆ ಮುಕ್ಕಾಲು ಮುರವಸಿ ಒಡೆದುಹೋಯಿತು; ಆಗ ಆ ಬಂಡೆಯ ಗರ್ಭ ದಲ್ಲಿ ಒಂದು ಶುಭ್ರ ವರ್ಣದ ಕಪ್ಪೆಯೂ, ಅದಕ್ಕೆ ಬೇಕಾಗುವಷ್ಟು ನೀರು–ಉಸುಕುಗಳೂ ಇರುವದು ಶಿವರಾಯನ ಕಣ್ಣಿಗೆ ಬಿದ್ದಿತು! ಆಗ ಆತನು ಆಶ್ಚರ್ಯದಿಂದ ಹುಚ್ಚನಾಗಿ ಗುರು ಗಳನ್ನು ಕುರಿತು—''ಮಹಾರಾಜ, ಇಂತಹ ಪ್ರಚಂಡ ಬಂಡೆಯ ಮಧ್ಯದಲ್ಲಿರುವ ಈ ಕಪ್ಪೆ ಯನ್ನು, ಅನ್ನ ನೀರು ಕೊಟ್ಟು ರಕ್ಷಿಸುವವರು ಯಾರು?'' ಎಂದು ಕೇಳಲು, ಸಮರ್ಥರು

ಮುಗುಳು ನಗೆಯಿಂದ—"ಶಿವಬಾ, ಬಹುಜನರಿಗೆ ಅನ್ನಕೊಡುವ ಕರ್ತೃತ್ವಶಾಲಿಗೆ ಪ್ರಭುವು ನೀನಿರುವೆಯಲ್ಲವೆ? ನೀನೇ ಈ ಕಪ್ಪೆಗೆ ಅನ್ನ ನೀರು ಕೊಟ್ಟು ರಕ್ಷಿಸುತ್ತಿರುವೆ, ಬೇರೆ ಯಾರು ರಕ್ಷಿಸಬೇಕು?" ಎಂದು ಹೇಳಲು, ಶಿವರಾಜನು ಮೊಣಕಾಲೂರಿ ಗುರುಚರಣಗಳ ಮೇಲೆ ಮಸ್ತಕವಿಟ್ಟು ಕಣ್ಣೀರುದುರಿಸುತ್ತಲಿರಲು, ಮುಖವೆತ್ತಿ ಕೈಜೋಡಿಸಿ—"ಮಹಾರಾಜ, ಗುರುವಿನ ಗೂಢ ತಂತ್ರವು ಯಾರಿಗೂ ತಿಳಿಯದ್ದು! ಸಮರ್ಥಾ, ನಿನ್ನ ತಂತ್ರದಿಂದ ನನ್ನ ಅಹಂಕಾರವು ಪೂರಾ ನಷ್ಟವಾಗಿ ಹೋಯಿತು! ಸಕಲ ಪ್ರಾಣಿಗಳಿಗೆ ಅನ್ನ ಕೊಡುವವನು ದೇವನೊಬ್ಬನೇ ಎಂಬದು ನನಗೆ ಈಗ ನಿಃಸಂದೇಹವಾಗಿ ತಿಳಿಯಿತು; ಸದ್ಗುರೋ! ನಿನ್ನ ಪಾಮರ ಶಿಷ್ಯನಾದ ಈ ಶಿವಬಾನನಿಗೆ ಹೀಗೆ ಮೇಲೆ ಮೇಲೆ ಕೋರಡೆಯ ಪೆಟ್ಟುಗಳು ಬೀಳುತ್ತಿರುವದರಲ್ಲಿಯೇ ಆತನ ಕಲ್ಯಾಣವಿರುವದು!" ಎಂದು ನುಡಿಯಲು, ಸಮರ್ಥರು ವಾತ್ಸಲ್ಯದಿಂದ ಶಿವರಾಯನನ್ನು ತಬ್ಬಿಕೊಂಡು— "ಶಿವಬಾ, ಹರಿಹರ ಬ್ರಹ್ಮಾದಿಗಳೂ ತಮ್ಮ ತಮ್ಮ ಕಾರ್ಯಗಳ ನಿರ್ವಾಹಕ್ಕಾಗಿ ಮಾಯಾಧೀನರಾಗಿರಲು, ನಮ್ಮನಿಮ್ಮಂಥ ಪಾಮರರ ಮಾಯಾಧೀನತೆಯ ಪಾಡೇನು? ಕಾರ್ಯಕರ್ತಾರರನ್ನಂತು ಅಹಂಕಾರರೂಪವಾದ ಆ ಮಾಯೆಯು ಮೇಲೆ ಮೇಲೆ ಬಾಧಿಸುವದು! ಶಿವರಾಯಾ, ಗುರುಭಕ್ತನಾದ ನಿನಗೆ ಮಾಯಾ ಬಾಧೆಯ ಹಂಗೇಕೆ? ಜಗದ್ವ್ಯಾಪಿಯಾದ ಗುರುತ್ವವು ಒಂದಿಲ್ಲೊಂದು ಮುಖದಿಂದ ನಿನ್ನ ಮಾಯಾಬಾಧೆಯ ನಿವಾರಣ ಮಾಡಲುಸಿದ್ಧವಾಗಿರುವದರಿಂದ, ನೀನು ಆ ಮಾಯಾ ಬಾಧೆಗೆ ಸರ್ವಥಾ ಬೆದರದೆ, ನಿನ್ನ ಕರ್ತವ್ಯ ತತ್ಪರತೆಯನ್ನು ಕಾಯ್ದುಕೊಳ್ಳು!

ಈ ಮೇರೆಗೆ ನುಡಿದು, ಸಮರ್ಥರು, ಸ್ವಲ್ಪಹೊತ್ತು ಆಲೋಚಿಸಿದಂತೆ ಮಾಡಿ ತಟ್ಟನೆ ಶಿವರಾಯನಿಗೆ— "ಶಿವಬಾ, ಬಾ, ಬೇಗನೆ ಓಡಿ ಬಾ" ಎಂದು ನುಡಿದವರೇ ಒಮ್ಮೆಲೆ ಓಡಹತ್ತಿದರು. ಕೂಡಲೆ ಕಲ್ಯಾಣನೂ, ಶಿವರಾಯನೂ ಗುರುಗಳ ಬೆನ್ನುಹತ್ತಿ ಓಡಿಹೋದರು! ಸಮರ್ಥರು ಓಡುತ್ತ ಓಡುತ್ತ ರಾಯಗಡದ ಗೋಡೆಯಮೇಲೆ ನಿಂತು, ಕೆಳಗಿನ ಅಗಾಧವಾದ ಕಂದರವನ್ನು ಹಣಿಕಿ ನೋಡಿ— "ಜಯಜಯ ರಘುವೀರ ಸಮರ್ಥ" ಎಂದು ಗರ್ಜಿಸಿ ಕಂದರದಲ್ಲಿ ಧುಮುಕಿ— "ಶಿವಬಾ, ಬೇಗನೆಬಾ, ಶಿವಬಾ ಬೇಗನೆಬಾ" ಎಂದು ದುಃಖಾರ್ತರಂತೆ ಕೂಗಹತ್ತಿದರು; ಆದರೆ ಶಿವರಾಯನು ಒಮ್ಮೆ ಕಂದರದ ಕಡೆಗೆ, ಒಮ್ಮೆ ಕಲ್ಯಾಣನಕಡೆಗೆ ನೋಡುತ್ತನಿಂತನಲ್ಲದೆ, ಕಂದರದಲ್ಲಿ ತಟ್ಟನೆ ಹಾರಿಕೊಳ್ಳಲೊಲ್ಲನು! ಆಗ ಸಮರ್ಥರು ಒಮ್ಮೆಲೆ "ಕಲ್ಯಾಣ" ಎಂದು ಕರೆಯುವದರೊಳಗೆ ಕಲ್ಯಾಣನು ಕಂದರದಲ್ಲಿ ಹಾರಿಕೊಂಡಿದ್ದನು! ಇದನ್ನು ನೋಡಿ ಶಿವರಾಯನ ಮೈಯು ಜೋರೆಂದು ಬೆವತಿತು; ಆತನ ಮೋರೆ ಹುಚ್ಚೆಟ್ಟಿತು! ತನ್ನ ಶಿಷ್ಯತ್ವದ ಶಿಥಿಲತೆಯು ಆತನ ಕಣ್ಣಿಗೆ ಕಟ್ಟಲು, ತನ್ನ ಪಾಮರತ್ವಕ್ಕಾಗಿ— "ಸಮರ್ಥಾ, ಸದ್ಗುರೋ! ಕಲ್ಯಾಣನೇ ನಿನ್ನ ಪಟ್ಟ ಶಿಷ್ಯನು, ಸರ್ವಥಾ ನಾನಲ್ಲ" ಎಂದು ದೊಡ್ಡ ದನಿಯಿಂದ ಅಳತೊಡಗಿದನು. ಅಷ್ಟರಲ್ಲಿ ಯೋಗಿ ಶ್ರೇಷ್ಠರಾದ ಆ ಗುರುಶಿಷ್ಯರಿಬ್ಬರು ಎತ್ತಣಿಂದೋ ಶಿವರಾಯನ ಬಳಿಗೆ ಬರಲು, ಶಿವರಾಯನು ಅವರಿಗೆ ನಮಸ್ಕಾರಮಾಡಲಿಕ್ಕೂ ನಾಚಿ ಕೈಜೋಡಿಸಿಕೊಂಡು ಸುಮ್ಮನೆ ತಲೆತಗ್ಗಿಸಿ ನಿಂತುಬಿಟ್ಟನು! ಆಗ ಸಮರ್ಥರು ವಾತ್ಸಲ್ಯದಿಂದ

ಶಿವರಾಯನ ಬೆನ್ನಮೇಲೆ ಕೈಯಾಡಿಸಿ— ''ಶಿವಬಾ, ಸೇವಾ ಧರ್ಮವು ಬಹಳ ಗಹನವಪ್ಪಾ! ಅದನ್ನು ತಿಳಿಯುವದು ಯೋಗಿಗಳಿಗೂ ಅಸಾಧ್ಯವು! ನಡೆ, ಜೀಜಾವಾವಲಿಯನ್ನು ಕಾಣಲಿಕ್ಕೆ ಹೋಗೋಣ! ಶಿವಬಾ, ಕಲ್ಯಾಣನು ಸರ್ವಸಂಗ ಪರಿತ್ಯಾಗಿಯಾದ ಶಿಷ್ಯನು; ನೀನು ರಾಷ್ಟ್ರಸಂಸಾರಸಂಗಿಯಾದ ಶಿಷ್ಯನು! ಆದ್ದರಿಂದ ನೀನು ಸರ್ವಥಾ ಅಸವಾಧಾನ ಪಡ ಬೇಡ,ಆತನು ಹಾಗೆಯೇ, ನೀನು ಹೀಗೆಯೇ! ಆದರೆ ಯಾರೂ ಎಚ್ಚರಗೇಡಿಗಳು ಮಾತ್ರ ಆಗಬಾರದು!'' ಎಂದು ನುಡಿದು, ಶಿವರಾಯನೊಡನೆ ಜೀಜಾಬಾಯಿ ಯವರ ವಾಡೆಗೆ ಹೊರಟುಹೋದರು! ಗುರುಶಿಷ್ಯರ ಈ ಗೂಢವಾದ ಸೇವಾಸೂತ್ರವನ್ನು ಈಗಿನ ಸದ್ಗುರಗಳ ಶಿಷ್ಯರೂ, ರಾಷ್ಟ್ರಮುಖಂಡರ ಶಿಷ್ಯರು ಅಥವಾ ಅನುಯಾಯಿಗಳು ಲಕ್ಷಿಸಬಹುದೇನು?

## ಸ್ವಲ್ಪ ಇತಿಹಾಸ

ಹೀಗೆ ಶಿವಾಜಿಯು ದಿನದಿನಕ್ಕೆ ಪ್ರಬಲನಾಗುತ್ತ ನಡೆದಿರುವದನ್ನು ನೋಡಿ ವಿಜಾಪುರದ ಬಾದಶಹನಾದ ಮಹಮ್ಮದನು ಹಿಂದಿನ ಪ್ರಕರಣದಲ್ಲಿ ಹೇಳಿದಂತೆ, ಆ ಶಿವಾಜಿಯ ಶಕ್ತಿಯನ್ನು ಕುಂದಿಸಲಿಕ್ಕೆ ಪ್ರಯತ್ನ ಮಾಡತೊಡಿಗಿದ್ದನು. ಮಹಮ್ಮದಶಹನು ಅತ್ಯಂತ ಸೊಗಸಗಾರನಿದ್ದನು. ಆತನು ರಾಜ್ಯಭಾರವನ್ನೆಲ್ಲ ಮುರಾರಿರಾಯನೆಂಬ ಮಂತ್ರಿಯ ಕೈಯಲ್ಲಿ ಕೊಟ್ಟು, ತಾನು ಯಾವಾಗಲೂ ಮನೋಹರಗಳಾದ ಕಟ್ಟಡಗಳಿಂದ ವಿಜಾಪುರದ ಸೌಂದರ್ಯವನ್ನು ಹೆಚ್ಚಿಸುವದರಲ್ಲಿಯೇ ಮಗ್ನನಾಗಿರುತ್ತಿದ್ದನು. ಇವನು ಕಟ್ಟಸಿದ ಗೋಲ ಗುಮ್ಮಟ, ಇಬ್ರಾಹಿಮರೋಜಾ, ಆಸಾರಮಹಾಲು, ಮೊದಲಾದ ಕಟ್ಟಡಗಳು ಹೊಗಳ ತಕ್ಕಂಥವಿರುವವು. ಇದಲ್ಲದೆ, ಈ ಬಾದಹಶನು ವಿಜಾಪುರ ಪಟ್ಟಣದಲ್ಲಿನಳಗಳನ್ನು ಹಾಕಿಸಿ ನೀರಿನ ಅನುಕೂಲತೆಯನ್ನು ಮಾಡಿಸಿದನು. ಒಟ್ಟಿನಲ್ಲಿ ಈತನು ಪ್ರಜೆಗಳಿಗೆ ಹಿತವಾಗುವಂತೆ ಉತ್ತಮ ರೀತಿಯಿಂದ ರಾಜ್ಯಕಾರಭಾರ ಮಾಡಿದನು. ಈತನ ಆಳಿಕೆಯಲ್ಲಿ ದಂಡಿನೊಳಗೆ ಎಂಬತ್ತು ಸಾವಿರ ರಾವುತರೂ, ಎರಡುವರೆ ಲಕ್ಷ ಕಾಲಾಳೂ, ಐದುನೂರು ಆನೆಗಳೂ ಯಾವಾಗಲೂ ಸಿದ್ಧವಾಗಿರುತ್ತಿದ್ದವು. ಪರದೇಶದ ರಾಜರು ಈತನನ್ನು ಬಹಳವಾಗಿ ಮನ್ನಿ ಸುತ್ತಿದ್ದರು; ಆದರೂ ಈತನು ರಾಜ್ಯಕಾರಭಾರದಲ್ಲಿ ವಿಶೇಷ ಮನಸ್ಸು ಹಾಕದೆ, ಸೊಗಸು ಗಾರಿಕೆಯಲ್ಲಿಯೂ, ಸುಖಸಾಧನಗಳನ್ನು ಹೆಚ್ಚಿಸುವದರಲ್ಲಿಯೂ ಮನಸ್ಸು ಹಾಕಿದ್ದರಿಂದ, ಶಿವಾಜಿಯಂಥ ಶೂರ ಮುತ್ಸದ್ದಿಗೆ, ತನ್ನ ಬಲವನ್ನು ಹೆಚ್ಚಿಸಿಕೊಳ್ಳಲಿಕ್ಕೆ ಬಹುಮಟ್ಟಿಗೆ ಆಸ್ಪದವು ದೊರೆಯಿತು. ಈಗ ಕಲ್ಯಾಣದ ಸುಭೆಯು ಹೆಸರಿಗೆ ವಿಜಾಪುರದವರ ಕೈ ಯಲ್ಲಿದ್ದರೂ, ಆ ಕಲ್ಯಾಣ ಸುಭೆಯೊಳಗಿನ ಜನರು ತಾವು ಸ್ವತಂತ್ರರೆಂದು ತಿಳಿದು ನಡೆ ಯುತ್ತಿದ್ದರು; ಅವರಮೇಲೆ ವಿಜಾಪುರದವರ ಅಧಿಕಾರವು ಅಷ್ಟಕ್ಕಷ್ಟೇ ನಡೆಯುತ್ತಿತ್ತು; ಆದ್ದ ರಿಂದ ವಿಜಾಪುರದ ಬಾದಶಹನು ಕಲ್ಯಾಣದ ಕೋಟೆಯನ್ನು ಪೂರಾ ಸ್ವಾಧೀನಪಡಿಸಿ

ಕೊಂಡು, ಅಲ್ಲಿ ಒಬ್ಬ ಸುಬೇದಾರನನ್ನು ಶಾಶ್ವತವಾಗಿ ಇಟ್ಟು, ಆತನ ಕೈಯಲ್ಲಿ ದೊಡ್ಡ ಸೈನ್ಯ ಕೊಟ್ಟು, ಆ ಸುಭೆಯೊಳಗಿನ ಜನರನ್ನು ಅಂಕಿತರನ್ನಾಗಿ ಮಾಡಿಕೊಳ್ಳುವದು ಅವಶ್ಯ ವಾಗಿತ್ತು. ಇತ್ತ ಶಿವಾಜಿರಾಯರಾದರೂ ಕೈಕಾಲುಬಿಚ್ಚಿ ಮೊದಲು ಆಡಿದ್ದು ಈ ಕಲ್ಯಾಣ ಸುಭೆಯಲ್ಲಿಯೇ. ಆತನಾದರೂ ಈ ಸುಭೆಯಲ್ಲಿಯೇ ತನ್ನ ವರ್ಚಸ್ಸು ಬೆಳಿಸಿ, ಕಲ್ಯಾಣ-ಪುಣೆಗಳ ನಡುವಿನ ತನ್ನ ರಹದಾರಿಯನ್ನು ನಿರ್ಬಾಧವಾಗಿ ಮಾಡಿಕೊಳ್ಳಬೇಕಾಗಿತ್ತು; ಯಾಕಂದರೆ, ಪುಣೆ-ಸುಪೆಗಳೆಂಬ ಎರಡು ಪರಗಣೆಗಳು ಶಿವಾಜಿಯ ಜಹಗೀರನ ಪ್ರದೇಶ ಗಳಾಗಿದ್ದವು; ಆದ್ದರಿಂದ ಈ ಕಲ್ಯಾಣ ಸುಭೆಯೊಳಗಿನ ಕಲ್ಯಾಣ ಕೋಟೆಯನ್ನೂ, ರಾಜಮಾಚಿ ಎಂಬ ಕೋಟೆಯನ್ನೂ ಸ್ವಾಧೀನಪಡಿಸಿಕೊಂಡ ಹೊರತು, ಶಿವಾಜಿಯ ಬೆಳವಣಿಗೆಗೆ ಆಸ್ಪದವು ದೊರೆಯುವಹಾಗಿದ್ದಿಲ್ಲ; ಆದ್ದರಿಂದ ಶಿವಾಜಿಯು ಮೊದಲು ಕಲ್ಯಾಣ ಕೋಟೆಯನ್ನು ಸಂಪೂರ್ಣವಾಗಿ ಸ್ವಾಧೀನಪಡಿಸಿಕೊಳ್ಳಬೇಕೆಂದು ಅತ್ತ ವಿಜಾಪುರದ ಮಹಮ್ಮದಶಹನೂ, ಇತ್ತ ಶಿವಾಜಿಯೂ ದಕ್ಷತೆಯಿಂದ ಯತ್ನಿಸತೊಡಗಿದ್ದರು.

ಮಹಮ್ಮದಶಹನು ಸೊಗಸುಗಾರಿಕೆಯಲ್ಲಿ ಹೊತ್ತುಗಳೆಯುತ್ತಿದ್ದರೂ, ಶಿವಾಜಿಯ ಪ್ರಾಬಲ್ಯದ ಮೂಲಕ ಆತನ ಮನಸ್ಸಿಗೆ ಸಮಾಧಾನವಿದ್ದಿಲ್ಲ; ಆದ್ದರಿಂದ ಆತನು ಬಿಟ್ಟದ್ದು ಬಿಟ್ಟು, ಮುಲಾಣಾಹಯಾತಿಯೆಂಬ ಶೂರ ಸರದಾರನನ್ನು ಕಲ್ಯಾಣದ ಸುಬೇದಾರನನ್ನಾಗಿ ನೇಮಿಸಿ, ಆತನನ್ನು ದೊಡ್ಡ ಸೈನ್ಯದೊಡನೆ ಕಲ್ಯಾಣದ ಕೋಟೆಗೆ ಕಳಿಸಿಬಿಟ್ಟನು. ಮುಲಾಣಾಹ ಯಾತಿಯು ಒಳ್ಳೇ ಶೂರನಿದ್ದನಲ್ಲದೆ, ಮುತ್ಸದ್ದಿಯೂ, ರಾಜಕಾರಣಪಟುವೂ, ಸರಳ ಸ್ವಭಾವ ವನೂ ಆಗಿದ್ದನು. ಆತನು ಬಾದಶಹನ ಅಪ್ಪಣೆಯಂತೆ ಇಪ್ಪತ್ತು ಇಪ್ಪತ್ತೈದುಸಾವಿರ ಸೈನ್ಯ ದೊಡನೆ ಕಲ್ಯಾಣದಮೇಲೆ ಸಾಗಿಬಂದು, ಕಲ್ಯಾಣದ ಕೋಟೆಯನ್ನು ಸ್ವಾಧೀನಪಡಿಸಿಕೊಂಡು, ಆ ಸುಭೆಯ ಮೇಲೆ ಸಂಪೂರ್ಣವಾಗಿ ತನ್ನ ವರ್ಚಸ್ಸು ಕೂಡಿಸತೊಡಗಿದನು. ಈ ಕಲ್ಯಾಣದ ಕೋಟೆಯಲ್ಲದೆ, ಆ ಸುಭೆಯೊಳಗಿನ ರಾಜಮಾಚಿ ಎಂಬ ಕೋಟೆಯೂ ಬಾದಶಹನ ಕೈ ಯಲ್ಲಿಯೇ ಇದ್ದಿತು; ಆದ್ದರಿಂದ ಶಿವಾಜಿಯು ಈ ಸುಭೆಯಲ್ಲಿ ಮುದುಡಿಕೊಂಡು ಎಚ್ಚರ ದಿಂದ ನಡೆಯಬೇಕಾಯಿತು; ಆದರೂ ಆ ಶಿವಾಜಿಯ ಜನರು ತಮ್ಮ ಕಾಯಕದಂತೆ ಸೈನ್ಯದ ಸಣ್ಣ ಸಣ್ಣ ಗುಂಪುಗಳೊಡನೆ ಅಡಗಿಕೊಂಡು, ವಿಜಾಪುರದವರಿಗೆ ತೊಂದರೆ ಕೊಡುತ್ತಲೇ ಇದ್ದರು; ಆದರೆ ಶೂರನಾದ ಮುಲಾಣಾಹಯಾತಿಯು, ಇಂಥ ಸಣ್ಣಪುಟ್ಟ ತೊಂದರೆಗಳಿಗೆ ಸೊಪ್ಪು ಹಾಕುವಂತವನಿದ್ದಿಲ್ಲ. ಮರಾಟರು ದೊಡ್ಡ ಸೈನ್ಯದೊಡನೆ ತನ್ನ ಸಂಗಡ ಯುದ್ಧಕ್ಕೆ ಎದುರಾದರೆ, ತನ್ನ ಕೈತೋರಿಸಬೇಕೆಂದು ಆತನು ಆತುರಪಡುತ್ತಿದ್ದನು; ಅಂತಹ ದೊಡ್ಡ ಸೈನ್ಯವನ್ನು ತಕ್ಕೊಂಡು ಯುದ್ಧಕ್ಕೆ ಬರುವದು ಮರಾಟರಿಗೆ ಶಕ್ಯವೇ ಇಲ್ಲೆಂದು ಆತನ ಭಾವನೆ ಯಾಗಿ ಹೋಗಿತ್ತು. ಯಾಕಂದರೆ, ಶಿವಾಜಿಯ ರಾಜಕಾರಣವು ಗೂಢ ತಂತ್ರಮಯವಾದದ್ದ ರಿಂದ, ಆತನ ನೆಲೆಯು ವಿಜಾಪುರದ ಬಾದಶಹರಂತೆ ಕಣ್ಣುಮುಚ್ಚಿಕೊಂಡು ನಡೆಯುವ ಐಶ್ವರ್ಯಸಂಪನ್ನರಿಗೆ ಹತ್ತುವ ಹಾಗಿದ್ದಿಲ್ಲ. ಶಿವಾಜಿಯೆಂದರೆ ಒಬ್ಬ ಯಃಕಶ್ಚಿತ ಪುಂಡಕಾರ ನೆಂದೇ ಅವರು ತಿಳಿಯುತ್ತ ಬಂದಿದ್ದು, ಮುಲಾಣಾಹಯಾತಿಯಂಥ ಸರಳ ಶೂರ

ಮನುಷ್ಯನು, ಈಗಾದರೂ ಹಾಗೆಯೇ ತಿಳಿದುಕೊಂಡದ್ದು ಆಶ್ಚರ್ಯವಲ್ಲ!

ಮುಲಾಣಾ ಹಯಾತಿಯು ಕಲ್ಯಾಣ ಕೋಟೆಯಲ್ಲಿ ಸ್ಥಿರವಾಗಿ ಇರತಕ್ಕವನಾದದ್ದರಿಂದ, ತನ್ನ ಯಾವತ್ತು ಕುಟುಂಬದ ಜನರೊಡನೆ ಅಲ್ಲಿಗೆ ಬಂದಿದ್ದನು. ಅದರಂತೆ ಎಷ್ಟೋ ಮುಸಲ್ಮಾನ ಕುಟುಂಬಗಳು ಕಲ್ಯಾಣದಲ್ಲಿ ಸ್ಥಿರವಾಗಿ ಇರಲಿಕ್ಕೆ ಬಂದಿದ್ದವು. ಮುಲಾಣಾ ಹಯಾತಿಯ ಮಗನು ಸೈನ್ಯದ ಒಬ್ಬ ಅಧಿಕಾರಿಯಾಗಿದ್ದನು. ಆತನ ಹೆಂಡತಿಯು, ಅಂದರೆ ಮುಲಾಣಾ ಹಯಾತಿಯ ಸೊಸೆಯು ಬಹು ಸುಂದರಿಯೆಂದು ಪ್ರಸಿದ್ಧಳಾಗಿದ್ದಳು! ಆಕೆಯ ಲೋಕೋತ್ತರ ಸೌಂದರ್ಯದ ಕೀರ್ತಿಯು ಎಲ್ಲ ಕಡೆಗೂ ಹಬ್ಬಿತ್ತು. ಹೀಗೆ ಮುಲಾಣಾ ಹಯಾತಿಯು ಸಕುಟುಂಬ ಸಪರಿವಾರ ಕಲ್ಯಾಣದಲ್ಲಿ ವಾಸಿಸಿ, ತನ್ನ ದೊಡ್ಡ ಸೈನ್ಯದ ದರ್ಪದಿಂದ ಕಲ್ಯಾಣದ ಸುಭೆಯಲ್ಲಿ ತನ್ನ ಸಂಪೂರ್ಣ ಅಧಿಕಾರ ಕೂಡಿಸಿ, ಶಿವಾಜಿಯು ಕೈಕಾಲು ಅಲ್ಲಾಡಿಸದಂತೆ ತಾನು ನಿಶ್ಚಿಂತನಾಗಿರಬೇಕೆಂದು ಮನಃಪೂರ್ವಕ ಯತ್ನಿಸತೊಡಗಿದ್ದನು. ಆತನು ತನ್ನ ಸೈನ್ಯಭಾಗಗಳನ್ನು ಆ ಸುಭೆಯ ಬೇರೆ ಬೇರೆ ಭಾಗಗಳಿಗೆ ಕಳಿಸಿ, ಅಲ್ಲಲ್ಲಿ ಸ್ವತಂತ್ರದಿಂದ ನಡೆಯುವವರ ಸೊಕ್ಕು ಮುರಿದು, ಅವರನ್ನು ತನಗೆ ಅಂಕಿತರನ್ನಾಗಿ ಮಾಡಿಕೊಳ್ಳುವ ಕ್ರಮವನ್ನು ಒಂದೇಸವನೆ ನಡೆಸಿದ್ದನು. ಇಂಥ ಸ್ವತಂತ್ರ ಜನರಲ್ಲಿ ಚೌಕಗ್ರಾಮದವರೂ, ವಡಗಾವದವರೂ ಪ್ರಮುಖರಾಗಿದ್ದರೆಂದು ಹೇಳಬಹುದು. ನೇತಾಜಿ ಪಾಲಕರನು ಚೌಕಗ್ರಾಮದವನಾಗಿದ್ದು, ಆತನು ಈಗ ಶಿವಾಜಿಯ ನಂಬಿಗೆಯ ಶೂರ ಸರದಾರರಲ್ಲಿ ಎಣಿಸಲ್ಪಡುತ್ತಿದ್ದದ್ದನ್ನೂ, ಆ ನೇತಾಜಿಯು ತನ್ನ ತಂಗಿಯಾದ ಗಂಗೆಯ ಲಗ್ನವನ್ನು ವಡಗಾವದ ಒಬ್ಬ ಶ್ರೀಮಂತನೊಡನೆ ಮಾಡಿಕೊಡಲಿಕ್ಕೆ ಹೊರಟಿರುವಾಗ ಆತನು ವಿಜಾಪುರದ ದಂಡಿನದೊಂದು ಭಾಗವನ್ನು ಚನ್ನಾಗಿ ಹಣಿದು ಓಡಿಸಿದ್ದನ್ನೂ ವಾಚಕರು ಮರೆತಿರಲಿಕ್ಕಿಲ್ಲ. ಗಂಗೆಯ ಗಂಡನಾದ ರಾಯಬಾ ಎಂಬವನಾದರೂ ಶೂರರಲ್ಲಿ ಎಣಿಸಲ್ಪಡುತ್ತಿದ್ದು, ಆತನು ಶಿವಾಜಿಯ ಭಕ್ತನೂ, ಮುಸಲ್ಮಾನರ ದ್ವೇಷಿಯೂ ಆಗಿದ್ದನು. ಆತನ ಹೆಂಡತಿಯಾದ ಗಂಗೆಯು ತನ್ನ ಅಣ್ಣನಾದ ನೇತಾಜಿಯಂತೆ ಒಳ್ಳೇ ಸ್ವಾಭಿಮಾನಿಯೂ, ಒಗರಿನವಳೂ, ಪತಿಭಕ್ತಿಪರಾಯಣಳೂ ಆಗಿದ್ದಳು. ಆಕೆಯ ಲಗ್ನದ ನಿಬ್ಬಣವನ್ನು ತುರಬಿಪೆಟ್ಟುತಿಂದು ಶರಣು ಬಂದ ಮುಸಲ್ಮಾನರ ಗುಂಪಿನ ಮುಖ್ಯನಾದ ರುಸ್ತುಮಜಮಾಲನೆಂಬ ಸರದಾರನು, ಗಂಗೆಯ ಸೌಂದರ್ಯಕ್ಕೆ ಬೆರಗಾಗಿ, ಆಕೆಯನ್ನು ಬಾದಶಹನ ಜನಾನಖಾನೆಯಲ್ಲಿ ಸೇರಿಸಿ, ಬಾದಶಹನ ಪ್ರೀತಿಯನ್ನು ಸಂಪಾದಿಸಬೇಕೆಂದು ಮಾಡಿದ್ದನು; ಆದರೆ ಮೈಸೊಕ್ಕಿನಿಂದ ನಡೆದ ತಮ್ಮನ್ನು ಆಕಸ್ಮಾತ್ತಾಗಿ ಮರಾಟರು ಸೋಲಿಸಿ ಓಡಿಸಿದ್ದರಿಂದ ವ್ಯಥೆಪಟ್ಟು, ಗಂಗೆಯ ಹರಣಮಾಡಿ ಮರಾಟರ ಸೇಡು ತೀರಿಸಿಕೊಳ್ಳುವ ಸಂಧಿಯನ್ನು ಆಗಿನಿಂದಲೇ ಆತನು ಹುಡುಕುತ್ತಿದ್ದನು.

ಹಿಂದುಗಳ ಸುಂದರ ಸ್ತ್ರೀಯರನ್ನು ಅಪಹರಿಸಿ ತಮ್ಮ ಜನಾನಖಾನೆಯಲ್ಲಿ ಸೇರಿಸಿಕೊಳ್ಳುವದೊಂದು ಕೆಟ್ಟಚಾಳಿಯು ಮುಸಲ್ಮಾನ ಬಾದಶಹರಲ್ಲಿ ಇತ್ತೆಂದು ಹೇಳಬಹುದು. ಅವರು ಅಂಥ ಸ್ತ್ರೀಯರನ್ನು ಸಂಪಾದಿಸಿ ತಂದವರನ್ನು ಪ್ರೀತಿಸುತ್ತಿದ್ದರಲ್ಲದೆ, ದೊಡ್ಡ ದೊಡ್ಡ ಸರದಾರರಿಗೆ ಅಂಥ ಸುಂದರಿಯರ ನಿಕಾ ಮಾಡಿಕೊಟ್ಟು, ಆ ಸರದಾರರನ್ನು ಸಂತುಷ್ಟರಾಗಿ

ಮಾಡಿತ್ತಿದ್ದರು. ಅವರು ಈ ರೀತಿಗನುಸರಿಸಿ ರುಸ್ತುಮ ಜಮಾಲನು, ಬಾದಶಹನ ಮೆಹರ್ಬಾನಿಗಿಯಿಂದ ಗಂಗೆಯು ತನ್ನ ಹೆಂಡತಿಯಾದರೂ ಆಗಬಹುದೆಂದು ಭಾವಿಸಿದ್ದನು; ಯಾಕಂದರೆ ಆತನು ದೊಡ್ಡ ಮನೆತನದ ಸರದಾರನಿದ್ದನಲ್ಲದೆ, ಬಾದಶಹನ ಸಮೀಪದ ಆಪ್ತನೂ ಆಗಿದ್ದನು. ಅಂಥವನು ಚೌಕಗ್ರಾಮದ ನಿಬ್ಬಣದವರಿಂದ ಸೋತದ್ದು ''ಒಳ್ಳೆಯವರ ಮಾನವು ಹಳ್ಳಿಯಲ್ಲಿ ಹೋಯಿತೆಂಬಂ''ತೆ ಆತನ ಮೈಸೊಕ್ಕಿಗಾಗಿ ಆಗಿತ್ತು. ತನ್ನ ಈ ಅಪಮಾನದ ಸೇಡು ತೀರಿಸಿ ಕೊಳ್ಳುವದಕ್ಕಾಗಿಯೇ ಬಾದಶಹನಿಗೆ ಹೇಳಿ ಆತನು ಮುಲಾಣಾಹಯಾತಿಯ ಸಂಗಡ ಬುದ್ಧಿ ಪೂರ್ವಕವಾಗಿ ಸಕುಟುಂಬ ಕಲ್ಯಾಣಕ್ಕೆ ಬಂದಿದ್ದನು. ಈ ಸಂಗತಿಯನ್ನು ಮುಲಾಣಾ ಹಯಾತಿಯೂ ಅರಿತಿದ್ದನು; ಮುಲಾಣಾಹಯಾತಿಗೂ ಹಲವು ಉಪಾಯಗಳಿಂದ ಕಲ್ಯಾಣ ಸುಭೆಯ ಜನರನ್ನು ಬೇಗನೆ ಹಣ್ಣುಮಾಡಿ, ಅವರನ್ನು ಸಂಪೂರ್ಣವಾಗಿ ಸ್ವಾಧೀನಪಡಿಸಿ ಕೊಳ್ಳುವದು ಅವಶ್ಯವಾಗಿತ್ತು; ಆದ್ದರಿಂದ ಆತನು ರುಸ್ತುಮ ಜಮಾಲನ ಉತ್ಕಟೇಚ್ಛೆಯಂತೆ, ವಡಗಾವದ ರಾಯಬಾನ ಪಾರಪತ್ಯಮಾಡಿ ಆತನ ಹೆಂಡತಿಯಾದ ಗಂಗೆಯನ್ನು ಅಪಹರಿಸು ವದಕ್ಕಾಗಿ ಸೈನ್ಯದೊಡನೆ ಆತನನ್ನು ವಡಗಾವದ ಮೇಲೆ ಕೂಡಲೆ ಕಳಿಸಿಬಿಟ್ಟನು.

ಇತ್ತ ಶಿವಾಜಿಯು ಕಲ್ಯಾಣದ ಕೋಟೆಯನ್ನು ತಕ್ಕೊಳ್ಳುವದಕ್ಕಾಗಿ ಆಬಾಜಿ ಸೋನ ದೇವನನ್ನು ಮುಖ್ಯ ಸೇನಾಪತಿಯನ್ನಾಗಿ ನಿಯಮಿಸಿ, ಆತನ ಸಹಾಯಕನನ್ನಾಗಿ ನೇತಾಜಿ ಪಾಲಕರನ್ನೂ, ವೆಂಕಾಜಿ ವಾಘನನ್ನೂ ಉಪಸೇನಾಪತಿಗಳಾಗಿ ನಿಯಮಿಸಿದ್ದನ್ನು ಈ ಮೊದಲೆ ಹೇಳಿರುತ್ತದಷ್ಟೆ? ಆಬಾಜಿ ಸೋನದೇವನು ಜಾತಿಯಿಂದ ಬ್ರಾಹ್ಮಣನಿದ್ದು, ವಿಲಕ್ಷಣ ಧೈರ್ಯಶಾಲಿಯೂ, ಶೂರನೂ, ಬಲಿಶಾಲಿಯೂ ಆಗಿದ್ದನು. ಇದಲ್ಲದೆ ಬ್ರಾಹ್ಮಣ ಜಾತಿಗೆ ಸಹಜವಾದ ತೀಕ್ಷ್ಣ ಬುದ್ಧಿಯು ಅವನಲ್ಲಿದ್ದು, ಆತನು ಯುದ್ಧ ಕಲೆಯಲ್ಲಿ ನಿಪುಣನೂ, ಯುಕ್ತಿ ಪ್ರಯುಕ್ತಿಯಲ್ಲಿ ಅಪ್ರತಿಮನೂ ಆಗಿದ್ದನು. ಆತನ ಈ ಎಲ್ಲ ಗುಣಗಳಿಗಾಗಿ ಪ್ರತ್ಯಕ್ಷ ಶಿವಾಜಿಯು ಆತನ ಬೆನ್ನು ಚಪ್ಪರಿಸುತ್ತಿದ್ದನಲ್ಲದೆ, ಆತನ ಶತ್ರುಗಳೂ ಆತನನ್ನು ನಿರ್ವಾತ್ಸರ್ಯದಿಂದ ಹೊಗಳುತ್ತಿದ್ದರು. ಇಂಥವನಿಗೆ ನೇತಾಜಿಯಂಥ ಏರಿಕೆಯ ರಕ್ತದ ತರುಣ ವೀರನ ಸಹಾಯವೂ, ಪಶ್ಚಾತ್ತಾಪದಿಂದ ಜೀವದ ಹಂಗುದೊರೆದು ಕೇವಲ ದೇಶ ಸೇವೆಯಲ್ಲಿ ದೇಹವಿಡುವ ನಿಶ್ಚಯಮಾಡಿದ ವೆಂಕಾಜಿ ವಾಘನಂಥ ಶೂರನ ಸಹಾಯವೂ ದೊರೆತ ಬಳಿಕ ಕೇಳುವದೇನು? ಪರಸ್ಪರರ ಸಹಾಯ ಸಂಭ್ರಮದಿಂದ ಆ ಮೂವರು ವೀರರ ಉತ್ಸಾಹವು ಇಮ್ಮಡಿಯಾಯಿತು; ಆದರೂ ಕಲ್ಯಾಣದ ಕೋಟೆಯನ್ನು ಮುಸಲ್ಮಾನರಿಂದ ಗೆದ್ದುಕೊಳ್ಳುವದು ಸುಲಭವಾಗಿದ್ದಿಲ್ಲ. ಆ ಕೋಟೆಯ ಕಲ್ಲಿನ ಗೋಡೆಗಳು ಬಹುಭದ್ರ ವಾಗಿದ್ದು, ಆ ಕೋಟೆಯು ಆಯಕಟ್ಟಿನ ಸ್ಥಳಗಳಲ್ಲಿ ಮುಸಲ್ಮಾನರು ದೊಡ್ಡ ದೊಡ್ಡ ತೋಫು ಗಳನ್ನು ಇಟ್ಟು ದಿಗ್ಬಂಧನ ಮಾಡಿದರು; ಅದಲ್ಲದೆ ಈ ಕಲ್ಯಾಣ ಕೋಟೆಯ ಹತ್ತರವೇ ರಾಜ ದುರ್ಗವೆಂಬ ಕೋಟೆಯು ಆ ಕಲ್ಯಾಣದ ಕೋಟೆಯನ್ನು ರಕ್ಷಿಸಲಿಕ್ಕೆ ಬಹು ಅನುಕೂಲವಾಗಿದ್ದು, ಅದು ಮುಸಲ್ಮಾನರ ಸ್ವಾಧೀನದಲ್ಲಿಯೇ ಇದ್ದಿತು. ಮುಸಲ್ಮಾನರಿಗೆ ಇಂತಹ ಅನುಕೂಲತೆ ಗಳಿದ್ದದ್ದಲ್ಲದೆ, ಅವರಿಗೆ ದುಡ್ಡಿನ ಕೊರತೆಯಾಗಲಿ, ಸೈನ್ಯದ ಕೊರತೆಯಾಗಲಿ ಇದ್ದಿಲ್ಲ; ಆದ್ದ

ರಿಂದ ಅವರು ವೈಸೊಕ್ಕಿನಿಂದ ನಡೆದರೂ ನಡೆಯಬಹುದಾಗಿತ್ತು; ಆದರೆ ಮಹಾರಾಷ್ಟ್ರರ ಮಾತು ಹಾಗಲ್ಲ; ಕೂಲಿಕಾರರಂತೆ ಅವರು ಅಂದೇ ತಂದು ಅಂದೇ ಉಣ್ಣುವವರಾದದ್ದ ರಿಂದ, ಅವರು ಬಹು ಎಚ್ಚರದಿಂದ ನಡೆಯಬೇಕಾಗುತ್ತಿತ್ತು; ಆದ್ದರಿಂದ ಮರಾಟರ ಮುಖ್ಯ ನಾದ ಶಿವರಾಯನ ಹಂಚಿಕೆಗಳೂ, ಆತನು ಅಡಗಿಕೊಂಡು ಮಾಡುವ ಯುದ್ಧಾದಿಗಳೂ ಇತಿಹಾಸದಲ್ಲಿ ಪ್ರಸಿದ್ಧವಾಗಿರುವವು. ಅದರಂತೆ ಈಗಾದರು ಮುಲಾಣಾ ಹಯಾತಿಯಂಥ ಸಮರ್ಥ ಸುಬೇದಾರನಿಂದ, ಕಲ್ಯಾಣದ ಕೋಟೆಯನ್ನು ತಕ್ಕೊಳ್ಳುವ ವಿಷಯದಲ್ಲಿ, ಮರಾಟರು ತಮ್ಮತಮ್ಮೊಳಗೆ ಹಂಚಿಕೆ ಹಾಕಹತ್ತಿದರು; ಅದರಲ್ಲಿ ಆಬಾಜಿ ಸೋನದೇವನ ಹಂಚಿಕೆಗಾರಿಕೆ ಯಂತು ಸುಪ್ರಸಿದ್ಧವಾದದ್ದು; ಅದರಮೇಲೆ ಆ ಆಬಾಜಿಗೆ ವೆಂಕಾಜಿ ವಾಘನಂಥ ರಾಜ ಗಳ್ಳನ ಮುಸಲತ್ತಿನ ಸಹಾಯವು ದೊರೆಯಿತು; ಅಂದಬಳಿಕ ಕೇಳುವದೇನು? ಅವರು ತಕ್ಕಹಂಚಿಕೆ ಹಾಕಿ ಒಬ್ಬೊಬ್ಬರು ಒಂದೊಂದು ಕೆಲಸಕ್ಕಾಗಿ ಗುಪ್ತರೀತಿಯಿಂದ ಹೊರಟು ಹೋಗಿ ಬಿಟ್ಟರು; ಅವರ ಗಂಧವು ಕೂಡ ಎರಡನೆಯವರಿಗೆ ಹತ್ತುವಹಾಗಿದ್ದಿಲ್ಲ! ಅಷ್ಟರಲ್ಲಿ ಇತ್ತ ರುಸ್ತುಮ ಜಮಾಲನು ಒಂದು ಸೈನ್ಯದ ಭಾಗವನ್ನು ತಕ್ಕೊಂಡು ವಡಗಾವದಮೇಲೆ ಹೊರಟು ಬಿಟ್ಟಿದ್ದನು. ಆತನು ನಿಂತಲ್ಲಿನಿಲ್ಲದೆ, ಗಂಗೆಯನ್ನು ಈಗ ಹಿಡತರುವೆನೆಂಬ ಹೆಮ್ಮೆಯಿಂದ ವಸ್ತಿಯಮೇಲೆ ವಸ್ತಿಯ ಮಾಡುತ್ತ ವಡಗಾವದ ಸನಿಯಕ್ಕೆ ಬಂದನು. ''ಇನ್ನು ಎರಡು ಹರದಾರಿ ಹೋದ ರಾಯಿತು, ಗಂಗೆಯು ಕೈಸೇರುವಳು'' ಎಂದು ಆತನು ಮನಸ್ಸಿನಲ್ಲಿ ಮಂಡಿಗೆ ತಿನ್ನತೊಡಗಿದ್ದನು.

ಹೀಗಿರುವಾಗ ಇಳಿಹೊತ್ತಿನ ಸಮಯವಾಯಿತು, ಹೊರಗೆ ಒಂದು ತಾಸು ಹೊತ್ತು ಉಳಿದಿರಬಹುದು, ಅಷ್ಟರಲ್ಲಿ ಹಿಂದಿನಂತೆ ಅಡ್ಡದಾರಿಯಿಂದ ಒಂದು ನಿಬ್ಬಣವು ರುಸ್ತುಮ ಜಮಾಲನ ಸೈನ್ಯದಕಡೆಗೆ ಬರತೊಡಗಿತು. ನಿಬ್ಬಣದ ರೀತಿಯಂತೆ ಅದರಲ್ಲಿ ಕೆಲವು ಬಂಡಿ ಗಳಿದ್ದವು, ಕುದುರೆಗಳಿದ್ದವು ಆಳುಗಳಿದ್ದವು, ಹೆಂಗಸರಿದ್ದರು. ರುಸ್ತುಮ ಜಮಾಲನಿಗೆ ಗಂಗೆಯ ಹುಚ್ಚು ಹಿಡಿದದ್ದರಿಂದ, ಆತನ ಲಕ್ಷವು ಹೆಂಗಸರು ಕುಳಿತಿದ್ದ ಬಂಡಿಯಕಡೆಗೆ ಹೋಗಲು ಅಲ್ಲಿ ಗಂಗೆಯೇ ಆತನ ಕಣ್ಣಿಗೆ ಮೊದಲು ಬಿದ್ದಳು; ಆದ್ದರಿಂದ ಆ ಮರುಳು ಮುಸಲ್ಮಾನನು ತನ್ನ ಕುದುರೆಯನ್ನು ನಿಲ್ಲಿಸಿ ಗಂಗೆಯ ಕಡೆಗೆ ದಿಟ್ಟಿಸಿ ನೋಡಹತ್ತಿದನು! ಕೂಡಲೆ ಗಂಗೆಯು ನಾಚಿ ಕೊಂಡು ಮೋರೆಯ ಮೇಲೆ ಸೆರಗು ಎಳಕೊಳ್ಳುತ್ತ, ಹೆಂಗಸರನ್ನು ಸರಿಸಿ ಬಂಡಿಯ ನಡುವೆ ಹೋಗಿ ಕುಳಿತು ಕೊಂಡಳು! ರುಸ್ತುಮ ಜಮಾಲನ ಸೈನ್ಯವು ಆತನ ಹಿಂದೆಯೇ ಸಮೀಪದಲ್ಲಿ ಬರುತ್ತಿತ್ತು, ಆತನ ಬಳಿಯಲ್ಲಿ ಆಗ ನಾಲ್ಕು ಜನ ರಾವುತರು ಮಾತ್ರ ಇದ್ದರು. ಆಗ ರುಸ್ತುಮ ಜಮಾಲನು ಆತುರತೆಯಿಂದ ಆ ನಿಬ್ಬಣದವರನ್ನು ಕುರಿತು–

ರುಸ್ತುಮಜಮಾಲ—''ಯಾರು ನೀವು? ಎಲ್ಲಿಗೆ ಹೋಗುವಿರಿ? ಬಂಡಿಯ ತರುಬಿರಿ.

ನಿಬ್ಬಣದೊಳಗಿನವನೊಬ್ಬನು (ವಿನಯದಿಂದ ಮುಜುರೆಮಾಡಿ)– ನಾವು ವಡಗಾವ ದವರು ಸರಕಾರ! ಚೌಕಗ್ರಾಮದ ಲಗ್ನಕ್ಕೆ ಹೋಗುವೆವು ಬುದ್ಧಿ!

ರುಸ್ತುಮ ಜಮಾಲ — ಚೌಕಗ್ರಾಮದ ಲಗ್ನಕ್ಕೆ? ಯಾರ ಲಗ್ನಕ್ಕೆ?

ನಿಬ್ಬಣದವ — ನೇತಾಜಿಯು ಆ ಕಳ್ಳ ಶಿವಾಜಿಯ ಬಳಿಯಲ್ಲಿರುವನಲ್ಲವೆ? ಅವನ ಲಗ್ನವು ಇಲ್ಲಿ ಹೇಗೆ ಆಗುವದು?

ನಿಬ್ಬಣದವ — (ಸಿಟ್ಟು ನುಂಗಿಕೊಂಡು) ಚೌಕಗ್ರಾಮವು ನೇತಾಜಿಯ ಊರು ಬುದ್ಧೀ; ನೇತಾಜಿಯ ತಾಯಿ–ತಂದೆಗಳೂ, ಕುಟುಂಬದವರೂ ಇಲ್ಲಿಯೇ ಇರುವರು; ಮೇಲಾಗಿ ಹೆಣ್ಣು ಚೌಕಗ್ರಾಮದ್ದೇ; ಅದರಿಂದ ನೇತಾಜಿಯ ಲಗ್ನವು ಈ ಚೌಕಗ್ರಾಮದಲ್ಲಿಯೇ ಆಗುವದು.

ರುಸ್ತುಮ—ನೇತಾಜಿಯು ಬಂದಿರುವನೇನು?

ನಿಬ್ಬಣದವ—ಬಂದು ನಾಲ್ಕು ದಿವಸವಾಯಿತು ದೇವರು! ನಾಳೆ ಅರಿಸಿಣ, ನಾಡದೇ ಅಕ್ಕೀಕಾಳು ಬುದ್ಧೀ.

ರುಸ್ತುಮ—ವಡಗಾವದಲ್ಲಿ ನೀವು ಯಾರು?

ನಿಬ್ಬಣದವ—ನಾವು ರಾಯಬಾ ಸಾವುಕಾರರ ಮನೆಯವರು ಬುದ್ಧೀ; ನೇತಾಜಿಯು ಸಾವುಕಾರರಿಗೆ ಬೀಗನಾಗಬೇಕು; ನೇತಾಜಿಯ ತಂಗಿ ಗಂಗಾ ಬಾಯಿಯವರನ್ನೇ ಅವರಿಗೆ ಕೊಟ್ಟಿದೆ, ಅವರ ಮನೆಯವರೆಲ್ಲ ಲಗ್ನಕ್ಕೆ ಬಂದಿದ್ದಾರೆ ಬುದ್ಧೀ! ಸರಕಾರ, ಹೊತ್ತು ಮುಣುಗುವದು, ಇಲ್ಲಿಯೇ ಸಮೀಪದಲ್ಲಿ ಕಾಣುವ ಹಳ್ಳಿಯಲ್ಲಿ ವಸ್ತಿ ಮಾಡಬೇಕಾಗಿದೆ, ಇದಕ್ಕಾಗಿ ನಿಬ್ಬಣ ಸಾಗಲಿಕ್ಕೆ ಅಪ್ಪಣೆಯಾಗಬೇಕು ಹಜರತ!

ರುಸ್ತುಮ—ನಿಮ್ಮ ರಾಯಬಾ ಸಾವುಕಾರರೆಲ್ಲಿದ್ದಾರೆ?

ನಿಬ್ಬಣದವ—ಇಲ್ಲೇ ಇದ್ದಾರೆ ಬುದ್ಧೀ. ''ರಾಯಬಾಜೀ, ಹಜರತ್ತರು ಕರೆಯುತ್ತಾರೆ, ಬೇಗನೆ ಬರಬೇಕು.''

ಹೀಗೆ ಕರೆದದ್ದನ್ನು ಕೇಳಿದ ಕೂಡಲೆ ರಾಯಬಾನು ಗಡಿಬಿಡಿಯಿಂದ ಬಂದು ಅಂಜಂಜುತ್ತ ರುಸ್ತುಮ ಜಮಾಲರಿಗೆ ಬಗ್ಗಿ ಮುಜುರೆ ಮಾಡಿ—''ನಾನೇ ಸಾವಕಾರ ರಾಯಬಾನು ಸರಕಾರ! ನಿಬ್ಬಣವು ಮುಂದಕ್ಕೆ ಸಾಗಲಿಕ್ಕೆ ಹುಜೂರ ಅಪ್ಪಣೆಯಾಗಬೇಕು'' ಎಂದು ಕೇಳಿಕೊಂಡನು. ಆಗ ರಾಯಬಾನು ಸಾವುಕಾರಿಕೆಯ ಥಾಟಿನಿಂದ ಒಳ್ಳೇ ಸಿಂಗಾರಾಗಿದ್ದನು. ಆತನನ್ನು ದಿಟ್ಟಿಸಿ ನೋಡುತ್ತ, ಹೆಂಗಸರ ಬಂಡಿಯಕಡೆಗೆ ರುಸ್ತುಮ ಜಮಾಲನು ತನ್ನ ದೃಷ್ಟಿಯನ್ನು ಹೊರಳಿಸಲು, ಗಂಗೆಯು ಹಣಿಕಿ ಇತ್ತಕಡೆಗೆ ನೋಡುವಾಗ ಆಕೆಯ ಸುಂದರ ಮುಖವು ಆತನ ಕಣ್ಣಿಗೆ ಬಿದ್ದಿತು. ಹೀಗೆ ಅವರಿಬ್ಬರ ದೃಷ್ಟಿಗಳು ತಾಕಲಾಡುತ್ತಿರಲು, ಗಂಗೆಯು ಕೂಡಲೆ ಮೋರೆಯಮೇಲೆ ಸೆರಗು ಎಳಕೊಳ್ಳುತ್ತ, ಮೋರೆಯನ್ನು ತಿರುಗಿಸಿ ರುಸ್ತುಮನ ಕಣ್ಣಿಗೆ ಮರೆಯಾದಳು. ಅಷ್ಟರಲ್ಲಿ ರುಸ್ತುಮನ ಸೈನಿಕರು ಅಲ್ಲಿಗೆ ಬರಲು, ರುಸ್ತುಮನು ರಾಯ ಬಾನಿಗೆ ಗದ್ದರಿಸಿ—''ರಾಯಬಾ, ಇತ್ತ ನಿಮ್ಮ ಒಡಗಾವ ಊರವರೂ, ಚೌಕಗ್ರಾಮದವರೂ ಬಾದಶರ ವಿರುದ್ಧ ಬಹಳ ಪುಂಡಾಟಿಗೆ ನಡಿಸಿರುತ್ತೀರಿ; ಆದ್ದರಿಂದ ನಿಮ್ಮ ಪಾರಪತ್ಯಕ್ಕಾಗಿ ಬಾದಶಹರು ನನ್ನನ್ನು ಕಳಿಸಿರುವರು; ಆದ್ದರಿಂದ ನಾವು ಈಗ ನಿಮ್ಮ ಲಗ್ನಗಿಗ್ನ ಕೇಳುವದಿಲ್ಲ, ನಿಮ್ಮೆಲ್ಲರನ್ನು ಸೆರೆ ಹಿಡಿದಿದ್ದೇನೆ; ಆದ್ದರಿಂದ ನೀವು ಕಲ್ಯಾಣದ ಕೋಟೆಗೆ ನಡೆಯಿರಿ!

ಹೀಗೆ ರುಸ್ತುಮಜಮಾಲನು ಗದ್ಗರಿಸಿ ನುಡಿಯಲು, ಬಂಡಿಯೊಳಗಿನ ಹೆಂಗಸರೂ, ಹುಡುಗರೂ ದನಿದೆಗೆದು ಅಳತೊಡಗಿದರು. ರಾಯಬಾನೇ ಮೊದಲಾದ ಗಂಡಸರೆಲ್ಲರು ರುಸ್ತುಮ ಜಮಾಲನ ಸುತ್ತು ನೆರೆದರು ವಿನಯದಿಂದ ಕೈಜೋಡಿಸಿ—''ಇಲ್ಲ ಸರಕಾರ! ಬಾದಶಹರ ಮುಂದೆ ನಮ್ಮ ಪುಂಡತನವೇನು ನಡೆದೀತು? ನಮಗೆ ಆಗದವರು ಯಾರೋ ತಮಗೆ ಚುಚ್ಚಿಕೊಟ್ಟಿದ್ದಾರೆ! ಬುದ್ಧಿ, ಲಗ್ನಕ್ಕೆ ಅಡ್ಡಾಗಬೇಡಿರಿ, ಪುಣ್ಯ ಬರುವದು'' ಎಂಬ ಅರ್ಥದಿಂದ ಎಲ್ಲರೂ ಹೇಳಿಕೊಳ್ಳುತ್ತ ಗದ್ದಲವೆಬ್ಬಿಸಿಬಿಟ್ಟರು! ಆಗ ರುಸ್ತುಮ ಜಮಾಲನು ಹೆಂಗಸರ ಬಂಡಿಯಕಡೆಗೆ ನೋಡಲು, ಗಂಗೆಯು ಕಣ್ಣೀರು ಸುರಿಸುತ್ತ ತನ್ನ ಕಡೆಗೆ ದೈನ್ಯ ದಿಂದ ನೋಡುತ್ತಿರುವದು ಆತನ ಕಣ್ಣಿಗೆ ಬಿದ್ದಿತು. ಆಗ ಆತನು ಗದ್ದರಿಸಿ ಎಲ್ಲರನ್ನು ಸುಮ್ಮನಿರಿಸಿ ರಾಜಬಾನನ್ನು ಕುರಿತು—''ನೀವು ಲಗ್ನದ ಆಶೆಯನ್ನಂತು ಬಿಟ್ಟುಬಿಡಿರಿ; ನೀವು ಈಗ ಕಲ್ಯಾಣಕ್ಕೆ ಬರಲೇಬೇಕು. ಆದರೆ ನೀವು ಅಂಜುವ ಕಾರಣವಿಲ್ಲ. ನಾನು ನಮ್ಮ ಸುಬೇದಾರರಾದ ಮುಲಾಣಾ ಹಯಾತಿಯವರಿಗೆ ಎಲ್ಲ ಹೇಳಿ ನಿಮ್ಮನ್ನು ಬೇಗನೆ ಬಿಡಿಸಿ ನಿಮ್ಮ ಊರಿಗೆ ಕಳಿಸುವೆನು; ಆದರೆ ನೀವು ತಕರಾರು ಮಾಡದೆ ಸುಮ್ಮನೆ ನಮಗೆ ಅಧೀನ ರಾಗಿರಿ. ಇಂದು ಇಲ್ಲಿಯೇ ಈ ಕೆರೆಯ ದಂಡೆಯಲ್ಲಿ ಇದ್ದು, ನಾಳಿಗೇ ಕಲ್ಯಾಣಕ್ಕೆ ಹೊರಡೋಣ!

ಈ ಮೇರೆಗೆ ನುಡಿಯುತ್ತ ರುಸ್ತುಮ ಜಮಾಲನು ಮತ್ತೆ ಹೆಂಗಸರ ಬಂಡಿಯಕಡೆಗೆ ನೋಡಲು, ಗಂಗೆಯು ಕಣ್ಣುವರಿಸಿಕೊಳ್ಳುತ್ತಮೋರೆಯ ಮೇಲೆ ಸೆರಗು ಎಳಕೊಂಡು ಬಂಡಿಯ ಮುಂದೆ ಬಂದು ಕುಳಿತಳು. ಅಷ್ಟರಲ್ಲಿ ಮಬ್ಬು ಗತ್ತಲಾಗಹತ್ತಿತ್ತು! ರುಸ್ತುಮ ಜಮಾಲನ ಅಪ್ಪಣೆ ಯಂತೆ, ಆತನ ಸೈನ್ಯವು, ಅಲ್ಲಿಯೇ ಸಮೀಪದಲ್ಲಿದ್ದ ದೊಡ್ಡ ಕೆರೆಯ ದಂಡೆಯ ಮೇಲೆ ತಳ ಊರಿತು! ನಿಬ್ಬಣದ ಜನರೆಲ್ಲ ರುಸ್ತುಮನ ಸೆರೆಯಾಳಾದರು. ಅವರ ಮೇಲೆ ಬಲವಾದ ಕಾವಲು ಬಿದ್ದಿತು; ಆದರೆ ಅವರಿಗೆ ಯಾವಬಗೆಯ ತೊಂದರೆಯೂ, ಕೊರತೆಯೂ ಆಗದಂತೆ ರುಸ್ತುಮ ಜಮಾಲನು ದಕ್ಷತೆಯಿಂದ ವ್ಯವಸ್ಥೆಯಿಡಿಸಿದನು. ನಿಬ್ಬಣದವರಾದರೂ ಯಾವ ತಕರಾರನ್ನೂ ಮಾಡದೆ ರುಸ್ತುಮ ಜಮಾಲನಪ್ಪಣೆಯಂತೆ ನಡೆದುಕೊಳ್ಳಹತ್ತಿದರು.

ಬಡವನು ಹಾದಿಯ ಹಿಡಿದು ಹೋಗುತ್ತಿರುವಾಗ, ಎಡವಿ ದ್ರವ್ಯನಿಧಿಯನ್ನು ಕಾಣು ವಂತೆ, ರುಸ್ತುಮ ಜಮಾಲನು ವಡಗಾವಕ್ಕೆ ಗಂಗೆಯನ್ನು ಹಿಡತರುವದಕ್ಕಾಗಿ ಹೋಗುತ್ತಿರಲು ಹಾದಿಯಲ್ಲಿ ಆಕೆಯು ಅಕಸ್ಮಾತ ಆತನ ಕೈಗೆ ಹತ್ತಿದಳು; ಆದ್ದರಿಂದ ಆತನಿಗೆ ಪರಮಾನಂದ ವಾಯಿತು. ಆ ಆನಂದದಲ್ಲಿ ಆತನ ಮನಸ್ಸಿನೊಳಗೆ ಹಲವು ವಿಚಾರಗಳು ಬರತೊಡಗಿದವು. ಆತನು ಮನಸ್ಸಿನಲ್ಲಿ–ಹಿಂದಂಕ್ಕು ನನಗೆ ಈ ಗಂಗೆಯ ಲಗ್ನದ ನಿಬ್ಬಣವೇ ಹಾದಿಯಲ್ಲಿ ಕೂಡಿ, ಆಗ ನನ್ನ ಜನರೊಡನೆ ನಾನು ಓಡಿಹೋಗಿ ಜೀವ ಉಳಿಸಿಕೊಳ್ಳಬೇಕಾಯಿತು. ಅದರಂತೆ ಈಗಾದರೂ ಆ ಗಂಗೆಯ ನಿಬ್ಬಣವೇ ಹಾದಿಯಲ್ಲಿ ನನಗೆ ಕೂಡಿಕೊಂಡಿದೆ; ಆದರೆ ಆಗಿನ ನಿಬ್ಬಣದವರ ಎಟ್ಟಿತನವೆಷ್ಟು, ಈಗಿನ ನಿಬ್ಬಣದವರ ವಿನಯಭಾವವೆಷ್ಟು! ಈಗಿನ ನಿಬ್ಬಣ ದವರು ಮಾತುಮಾತಿಗೆ ''ಹಜರತ'' ''ದೇವರೂ'' ''ಸರಕಾರ'' ಎಂದು ನುಡಿಯದೆ ಮಾತೇ ಆಡುವದಿಲ್ಲ; ಒಮ್ಮೆ ನಾನು ಮಾತಾಡುತ್ತಾಡುತ್ತ ಶಿವಾಜಿಗೆ ''ಕಳ್ಳ ಶಿವಾಜಿ'' ಎಂದು ಅಂದರೂ,

ನಿಬ್ಬಣದೊಳಗಿನ ಯಾವ ಮನುಷ್ಯನೂ ಸಿಟ್ಟಿಗೆ ಬರಲಿಲ್ಲ! ಶಿವಾಜಿಯ ನಿಂದೆಯನ್ನು ಕೇಳಿ ಮರಾಟರು ಸಿಟ್ಟಾಗದೆ ಇರಲಾಲರು. ಅಂದಬಳಿಕ ಇದರ ಗೂಢವೇನಿರಬಹುದು? ಮರಾಟರು ನಮ್ಮ ಮಹಮ್ಮದ ಬಾದಶಹರ ದರ್ಪಕ್ಕೆ ಅಂಜಿ ನಿಜವಾಗಿಯೇ ಮೆತ್ತಗಾಗಿರಬಹುದೋ, ಅಥವಾ ಇದರಲ್ಲಿ ಮರಾಟರ ಕಾರ್ಯಸಾದಕ ಕುಟಿಲ ತಂತ್ರವೇನಾದರೂ ಇರಬಹುದೊ! ಯಾಕಂದರೆ, ಮರಾಟರು ನಮ್ಮ ಬಹು ಜನರಿಗೆ ಮಂಕುಬೂದಿಯ ಬಳಿದಿರುವದು ಬಹು ಜನರ ಅನುಭವಕ್ಕೆ ಬಂದಿರುವದು. ಅಂದಬಳಿಕ ಇದರಲ್ಲಿ ಸತ್ಯವೇನಿರುವದೆಂಬದನ್ನು ಹೇಗೆ ನಿರ್ಣಯಿಸಬೇಕು? ಗಂಗೆಯ ಗುರುತಂತು ನನಗೆ ಚನ್ನಾಗಿ ಹತ್ತಿತು. ಆಕೆಯ ಅಚ್ಚಳಿಯದ ಸುಂದರ ರೂಪವು ಈಗೂ ಇರುವದು. ಇನ್ನು ಆ ಮಾತಿಗೆ ಎರಡು ವರ್ಷಗಳಾದದ್ದರಿಂದ, ತನ್ನ ಗಂಡನ ಮನೆಯ ಶ್ರೀಮಂತಗಿರಿಯ ಬಾಳಿನಲ್ಲಿ ಉಂಡುಟ್ಟು ಸುಖದಿಂದಿರುವದರಿಂದ ಗಂಗೆಯು ಆಗಿನಕ್ಕಿಂತ ಪ್ಯೆಕ್ಯೆಯಿಂದ ದುಂಡಗಾಗಿರುವದು ನಿಜವು; ಆದರೆ ಅದರಿಂದ ಗಂಗೆಯ ರೂಪಲಾವಣ್ಯಗಳಲ್ಲಿ ಕೊರತೆಯುಂಟಾಗಿರದೆ, ಆಕೆಯ ಸೌಂದರ್ಯವು ಮತ್ತಿಷ್ಟು ಎದ್ದು ಕಾಣುತ್ತಿರುವದು. ಇದೆಲ್ಲ ಸರಿ; ಆದರೆ ಗಂಗೆಯು ಇಷ್ಟು ಅನಾಯಾಸವಾಗಿ ನನಗೆ ಹೇಗೆ ಸಿಕ್ಕಿರಬಹುದು? ಚೌಕಗ್ರಾಮದಲ್ಲಿ ನೇತಾಜಿಯ ಲಗ್ನವು ನಿಜವಾಗಿಯೇ ಆಗುತ್ತಿರ ಬಹುದೆ? ಅಥವಾ ಈಗಲೇ ಒಬ್ಬ ರಾವುತನನ್ನು ಚೌಕಗ್ರಾಮಕ್ಕೆ ಕಳಿಸಿ, ಅಲ್ಲಿಯ ಲಗ್ನದ ಸುದ್ದಿಯನ್ನು ತರಿಸಿಬಿಡಲಾ? ಹೌದು, ಹಾಗೆಯೇ ಮಾಡಬೇಕು, ಸುದ್ದಿ ಬರುವವರೆಗೆ ಒಂದೆರಡು ದಿನ ನಾವು ಇಲ್ಲಿ ಇದ್ದರೂ ಚಿಂತೆಯಿಲ್ಲ! ಅಷ್ಟು ಅವಸರವಾದರೂ ಏನು?

ಈ ಮೇರೆಗೆ ಆಲೋಚಿಸಿ, ರುಸ್ತುಮ ಜಮಾಲನು ಇಬ್ಬರು ರಾವುತರನ್ನು ಕರೆಯುವದ ಕ್ಕಾಗಿ ತನ್ನ ಚಾಕರರನ್ನು ''ಅಬ್ದುಲ್ಲ ಗಫಾರ'' ಎಂದು ಕೂಗಲು ಕೂಡಲೆ, ಆ ಚಾಕರನು ''ಜಿ ಸರಕಾರ'' ಎಂದು ನುಡಿದು, ಎದುರಿಗೆ ಬಂದು ನಿಂತುಕೊಂಡನು. ಆಗ ರುಸ್ತುಮ ಜಮಾಲನು ತನ್ನ ಚಾಕರನಿಗೆ–

ರುಸ್ತುಮ ಜಮಾಲ—ಗಫಾರ, ಈಗ ರಾತ್ರಿಯು ಎಷ್ಟಾಗಿರಬಹುದು?

ಅಬ್ದುಲ್ಲ ಗಫಾರ — ಏಳು ತಾಸು ರಾತ್ರಿಯಾಗಿರಬಹುದು ಸರಕಾರ!

ರುಸ್ತುಮ ಜಮಾಲ— ಚೌಕಗ್ರಾಮವು ಇಲ್ಲಿಂದ ಎಷ್ಟು ದೂರವಿರಬಹುದು?

ಅಬ್ದುಲ ಗಫಾರ—ನಡೆದು ಹೋದರೆ ಎರಡು ದಿನದ ಹಾದಿ, ಕುದುರೆ ಸವಾರನಿಗೆ ಒಂದೇ ದಿನದ ಹಾದಿ; ಸರಿ, ಇಷ್ಟೇ ಇರಬಹುದು ಸರಕಾರ!

ರುಸ್ತುಮ ಜಮಾಲ—ಹಾಗಾದರೆ, ನಮ್ಮ ಇಬ್ಬರು ರಾವುತರನ್ನು ಬೇಗನೆ ಕರೆ; ಆ ಚೌಕ ಗ್ರಾಮದಲ್ಲಿ ನೇತಾಜಿ ಪಾಲಕರನ ಲಗ್ನವು ನಡೆದಿರುವದೋ ಹೇಗೆಂಬದನ್ನು ನೋಡಿ ಕೊಂಡು ಬರಲಿ. ಯಾವ ಮಾತಿನಲ್ಲಿಯೂ ಮರಾಟರನ್ನು ನಂಬಲಾಗದು.

ಈ ಮೇರೆಗೆ ಆಜ್ಞಾಪಿಸಲು, ಅಬ್ದುಲ್ಲ ಗಫಾರನು ಇಬ್ಬರು ರಾವುತರನ್ನು ಕರತಂದನು. ಆಗ ರುಸ್ತುಮ ಜಮಾಲನು ಅವರಿಗೆ ಹೇಳತಕ್ಕದ್ದನ್ನು ಹೇಳಿ, ನೀವು ಎಲ್ಲ ಸಂಗತಿಯನ್ನು ನೆಟ್ಟಗೆ ತಿಳಿದುಕೊಂಡು, ನಾಳೆ ಸಂಜೆಯೊಳಗೇ ಇಲ್ಲಿಗೆ ಬಂದೇ ತೀರಬೇಕೆಂದು ಹೇಳಲು, ''ಅಚ್ಛಾ

ಹುಜೂರ'' ಎಂದು ಹೇಳಿ, ಆ ಇಬ್ಬರು ರಾವುತರು ಚೌಕಗ್ರಾಮಕ್ಕೆ ಹೊರಟು ಹೋದರು. ಇತ್ತ ರುಸ್ತುಮ ಜಮಾಲನು ತನ್ನ ಹಾಸಿಗೆಯಮೇಲೆ ಹೋಗಿ ಮಲಗಿಕೊಂಡನು; ಆದರೆ ಅವನಿಗೆ ಏನುಮಾಡಿದರೂ ನಿದ್ರೆ ಬರಲೊಲ್ಲದು. ಮತ್ತೆ ಆತನು ಮನಸ್ಸಿನಲ್ಲಿ–ನಮ್ಮ ರಾವುತರು ನಾಳೆ ಸಂಜೆಗೆ ಬರುವರಷ್ಟೆ? ಅಲ್ಲಿಯವರೆಗೆ ಗಂಗೆಯ ಗಂಡನನ್ನು ಕರೆಸಿ ಲಗ್ನದ ಸಂಗತಿಯನ್ನು ವಿಚಾರಿಸೋಣ. ಆತನು ಹೇಳುವದೂ, ನಮ್ಮ ರಾವುತರು ಹೇಳುವದೂ ಒಂದೇ ಆದ ಪಕ್ಷದಲ್ಲಿ ಲಗ್ನದ ವಿಷಯದ ನನ್ನ ಸಂಶಯದ ನಿವಾರಣವು ತಾನೇ ಆಗುವದು; ಹೌದು, ಹೀಗೆ ಮಾಡ ಬೇಕು. ನೇತಾಜಿಯ ಲಗ್ನವು ನಡೆದದ್ದೇ ನಿಜವಿದ್ದರೆ., ನೇತಾಜಿಯ ಸೆರೆ ಹಿಡಿಯುವ ಹಂಚಿಕೆ ಯನ್ನೂ ಈಗೇ ಮಾಡಿಬಿಡೋಣ; ಯಾಕಂದರೆ ಶಿವಾಜಿಯು ನೇತಾಜಿಯ ಸಂಬಂಧದಿಂದ ಮಾತಾಡುವಾಗ—'' ಈ ನೇತಾಜಿಯು ನನ್ನ ಕೆಲಸಕ್ಕೆ ಬರಿಯ ಸಹಾಯಕನೇ ಅಲ್ಲ, ನನ್ನ ಬಲಗೈಯಾಗಿರುವನು'' ಎಂದು ಹೇಳುತ್ತಿರುವನಂತೆ; ಅಂದಬಳಿಕ ಆ ತುಂಟ ಮರಾಟನ ಬಲಗೈ ಯನ್ನು ತುಂಡರಿಸಿಬಿಟ್ಟರೆ, ಬಾದಶಹರ ಒಂದು ಮಹತ್ವದ ಕೆಲಸಮಾಡಿ ದಂತಾಗುವದು.

ಈ ಮೇರೆಗೆ ರುಸ್ತುಮ ಜಮಾಲನು ಆಲೋಚಿಸುತ್ತಿರಲು, ಬೆಳಗಾಯಿತು. ಕೂಡಲೆ ಆತನು ಬೆಳಗಿನ ವಿಧಿಗಳನ್ನು ತೀರಿಸಿಕೊಂಡು ನಮಾಜುಮಾಡಿ, ತನ್ನ ಕಚೇರಿಗೆ ಬಂದು ಕೂಡಲೆ ರಾಜಬಾ ಸಾವುಕಾರನನ್ನು ಕರೆಕಳುಹಿದನು. ರಾಯಬಾನು ಕಚೇರಿಗೆ ಬಂದು, ರುಸ್ತುಮ ಜಮಾಲನಿಗೆ ಬಹು ವಿನಯದಿಂದ ಮುಜರೆಮಾಡಿ ನಿಂತುಕೊಳ್ಳಲು, ರುಸ್ತುಮ ಜಮಾಲನು ಆತನನ್ನು ಕುರಿತು–

ರುಸ್ತುಮ ಜಮಾಲ—ರಾಯಬಾ, ನೇತಾಜಿಯ ಲಗ್ನವು ಎಂದು ಆಗುವದೆಂದು ಹೇಳಿದಿರಿ?

ರಾಯಬಾ—ಖಾವಿಂದ, ಇಂದು ಅರಿಸಿಣ, ನಾಳೇ ಅಕ್ಕೀಕಾಳು.

ರುಸ್ತುಮ ಜಮಾಲ — ನೇತಾಜಿಗೆ ಹೆಣ್ಣು ಎಲ್ಲಿಯದು?

ರಾಯಬಾ — ಆತನ ಸೋದರಮಾವನಾದ ದತ್ತಾಜಿ ಪಾಟೀಲನ ಮಗಳು ಕಾಶೀ ಬಾಯಿಯೆಂಬವಳನ್ನು ಆತನಿಗೆ ಕೊಟ್ಟಿದೆ.

ರುಸ್ತುಮ ಜಮಾಲ — ಕಾಶಿಯನ್ನು ವೆಂಕಾಜಿ ವಾಘನು ಹಿಡಕೊಂಡು ಹೋಗಿದ್ದನಂತಲ್ಲ?

ರಾಯಬಾ— ಹೌದು ಸರಕಾರ, ವಾಘನು ಕಾಶೀಬಾಯಿಯನ್ನೂ, ಆಕೆಯ ತಂದೆ ದತ್ತಾಜಿ ಪಾಟೀಲರನ್ನೂ ಕೂಡಿಯೇ ಹಿಡಕೊಂಡು ಹೋಗಿದ್ದನು; ಆದರೆ ನೇತಾಜಿಯು ಅವರನ್ನು ಬಿಡಿಸಿಕೊಂಡು ಬಂದು ಈಗ ಲಗ್ನಮಾಡಿಕೊಳ್ಳುತ್ತಿರುವನು.

ರುಸ್ತುಮ ಜಮಾಲ— ನೇತಾಜಿಯ ಮನೆಯವರು ಯಾರು ಯಾರು ಇರುವರು?

ರಾಯಬಾ— ಮುಖ್ಯ ಮನೆಯವರೆಂದರೆ, ನೇತಾಜಿಯ ಮುಪ್ಪಿನ ತಾಯಿ– ತಂದೆ ಗಳಿಬ್ಬರೇ. ಇನ್ನು ಹೋಳಿಗೆ ತಿನ್ನಲಿಕ್ಕೆ ನೆರೆಹೊರೆಯವರು ಬೇಕಾದಷ್ಟು ಜನರಿರುವರು.

ರುಸ್ತುಮ ಜಮಾಲ— ನೇತಾಜಿಯ ಆಪ್ತರು ಯಾರು ಯಾರು ಲಗ್ನಕ್ಕೆ ಬರುವರು?

ರಾಯಬಾ—ಮುಖ್ಯ ಆಪ್ತರೆಂದರೆ, ನನ್ನ ಹೆಂಡತಿಯೂ, ನಾನು! ನನ್ನ ಹೆಂಡತಿಯು ನೇತಾಜಿಯ ತಂಗಿಯಾಗಬೇಕು. ಸರಕಾರ, ನಮ್ಮನ್ನಂತು ನೀವು ಇಲ್ಲಿ ಪ್ರತಿಬಂಧಿಸಿ ಇಟ್ಟು ಬಿಟ್ಟಿರಿ! ಇನ್ನು ಉಳಿದ ದೂರಿನ ಆಪ್ತೇಷ್ಟರಲ್ಲಿ ಅನುಕೂಲವಿದ್ದವರು ಲಗ್ನಕ್ಕೆ ಬರಬಹುದು, ಅನುಕೂಲವಿಲ್ಲದವರು ಬಿಡಬಹುದು; ಸರಕಾರ, ಇಂದು ನಮಗೆ ಅಪ್ಪಣೆ ಕೊಟ್ಟರೂ, ನಾಳೆ ಅಕ್ಕಿಯಕಾಳಿನ ಹೊತ್ತಿಗೆ ಹೇಗಾದರೂ ಮಾಡಿ ನಾವು ಹೋಗುವೆವು.

ರುಸ್ತುಮ ಜಮಾಲ—ನೀವು ಹೋಗದಿದ್ದರೆ ಲಗ್ನವಾಗುವದಿಲ್ಲವೋ?

ರಾಯಬಾ—ಲಗ್ನವಾಗದೇನು ಮಾಡುವದು ಸರಕಾರ? ಲಗ್ನಕ್ಕೆ ಮದಿಮಕ್ಕಳಿಬ್ಬರಿದ್ದರಾಯಿತು!

ರುಸ್ತುಮ ಜಮಾಲ—ಲಗ್ನಕ್ಕೆ ನಿಮ್ಮ ಶಿವಾಜಿಯ ಕಡೆಯಿಂದ ಯಾರಾದರೂ ಬರುವರೋ?

ರಾಯಬಾ—ಅದನ್ನು ನಾನು ಏನು ಹೇಳಲಿ? ಸತ್ವತಃ ಶಿವಾಜೀ ಮಹಾರಾಜರೇ ನೇತಾಜಿಯ ಲಗ್ನಕ್ಕೆ ಬರುವವರಿದ್ದಾರೆಂದು ಕೇಳಿದ್ದೇನೆ; ಅದು ನಿಜವಾದರೆ, ಶಿವಾಜಿ ಮಹಾರಾಜರ ಸಂಗಡ ಅವರ ಮುಖ್ಯ ಪರಿವಾರವೂ ಲಗ್ನಕ್ಕೆ ಬರತಕ್ಕದ್ದೇ; ಆದರೆ ಸರಕಾರ, ಯಾರ ಲಗ್ನಕ್ಕೆ ಬಂದರೂ, ನನ್ನ ಹೆಂಡತಿಯು ಲಗ್ನಕ್ಕೆ ಹೋಗದಿದ್ದರೆ, ಹಂದರಕ್ಕೆ ಶೋಭೆಯುಂಟಾಗದು! ನೇತಾಜಿಗೆ ಅಕ್ಕ-ತಂಗಿಯರೆಂದರೆ, ನನ್ನ ಆ ಹೆಂಡತಿಯೊಬ್ಬಳೆ! ಆದ್ದರಿಂದ ಸರಕಾರ, ನಮ್ಮನ್ನು ಬಿಟ್ಟುಬಿಡಬೇಕೆಂದು ಪ್ರಾರ್ಥಿಸುವೆನು. ಕಲ್ಯಾಣದ ಕಾರ್ಯಕ್ಕೆ ಹಜರತ್ತರವರು ವಿಘ್ನ ಮಾಡಬಾರದೆಂದು ಬೇಡಿಕೊಳ್ಳುವೆನು.

ರುಸ್ತುಮ ಜಮಾಲ—ರಾಜಬಾ, ಇನ್ನು ನೀವು ಹೋಗಿರಿ; ನೀವು ಹೇಳುವದನ್ನು ಹೇಳಿದಿರಿ; ಅದನ್ನು ನಾವು ಕೇಳಿಯೂ ಕೇಳಿದೆವು; ಇನ್ನು ಮೇಲೆ ನಾವು ಮಾಡುವದನ್ನು ಮಾಡುವೆವು.

ಈ ಮೇರೆಗೆ ರುಸ್ತುಮ ಜಮಾಲನು ಹೇಳಲು, ರಾಜಬಾನು ವಿನಯದಿಂದ ಮುಜುರೆ ಮಾಡಿ, ತನ್ನ ಸ್ಥಳಕ್ಕೆ ಹೊರಟು ಹೋದನು. ಇತ್ತ ರುಸ್ತುಮ ಜಮಾಲನು ಚೌಕ ಗ್ರಾಮಕ್ಕೆ ಹೋಗಿದ್ದ ರಾವುತರ ಹಾದಿಯನ್ನು ಆತುರದಿಂದ ನೋಡುತ್ತಿರಲು, ಅವರು ಎರಡು ತಾಸು ರಾತ್ರಿಯ ಸುಮಾರಕ್ಕೆ ಆತನ ಬಳಿಗೆ ಬಂದು, ಎಲ್ಲ ಸುದ್ದಿಯನ್ನು ಹೇಳಿದರು. ಚೌಕ ಗ್ರಾಮದಲ್ಲಿ ಲಗ್ನ ಸಮಾರಂಭವು ನಡೆದಿದ್ದು ನಿಜವಾಗಿದ್ದು, ಉಳಿದ ಮಾತುಗಳಲ್ಲಿ ಆ ರಾವುತರು ಹೇಳಿದ್ದೂ, ರಾಯಬಾನು ಹೇಳಿದ್ದೂ ಒಂದೇ ಆಗಿತ್ತು; ಅದನ್ನು ಕೇಳಿ ರುಸ್ತುಮ ಜಮಾಲನಿಗೆ ಒಂದು ಬಗೆಯ ಸಮಾಧಾನವಾಯಿತು.

# ಗೌರವದ ಗುಟ್ಟು

ಇತ್ತ ಹೀಗೆ ರುಸ್ತುಮ ಜಮಾಲನು ಸಮಾಧಾನಪಟ್ಟರೂ, ಮುಂದೆ ಇನ್ನು ಏನು ಮಾಡಬೇಕೆಂಬ ವಿಚಾರದಲ್ಲಿ ಆತನು ಮಗ್ನನಾದನು. ತನ್ನಲ್ಲಿರುವವಳು ನಿಶ್ಚಯವಾಗಿ ಗಂಗೆಯೆಂಬ ನಂಬಿಗೆಯು ಮಾತ್ರ ಆತನಿಗೆ ಆಯಿತು. ಈಕೆಯನ್ನು ಈಗ ಕಲ್ಯಾಣಕ್ಕೆ ಕರಕೊಂಡು ಹೋಗಬೇಕೋ; ಅಥವಾ ಇತ್ತಿಂದಿತ್ತ ವಿಜಾಪುರಕ್ಕೇ ಕರಕೊಂಡು ಹೋಗಬೇಕೋ ಎಂದು ಆತನು ಆಲೋಚಿಸತೊಡಗಿದನು. ನಾನು ಕಲ್ಯಾಣಕ್ಕೆ ಹೋಗಿ ಮುಲಾಣಾಹಯಾತಿಯ ಮುಖಾಂತರವಾಗಿ ಈಕೆಯನ್ನು ಬಾದಶಹರ ಕಡೆಗೆ ಕಳಿಸಿದರೆ, ಮುಖ್ಯ ಕೀರ್ತಿಯು ಕಲ್ಯಾಣದ ಸುಬೇದಾರನಾದ ಆ ಮುಲಾಣಾ ಹಯಾತಿಯದಾಗುವದು; ನಾನು ಇತ್ತಿಂದಿತ್ತೇ ವಿಜಾಪುರಕ್ಕೆ ಕರಕೊಂಡು ಹೋದರೆ, ಶಿಸ್ತುತಪ್ಪಿ ನಾನು ಉದ್ಧಟತನದಿಂದ ನಡೆದಂತಾಗುವದು; ಆದರೆ ಶಿಸ್ತು ತಪ್ಪುವದು ದೊಡ್ಡ ಅಪರಾಧವಾದದ್ದರಿಂದ, ನಾನು ಈಗ ಗಂಗೆಯನ್ನು ಕಲ್ಯಾಣಕ್ಕೆ ಕರಕೊಂಡು ಹೋಗುವದೇ ಯೋಗ್ಯವು. ಇನ್ನು ಲಗ್ನಮಾಡಿಕೊಳ್ಳುತ್ತಿರುವ ನೇತಾಜಿಯನ್ನು, ಆತನ ಹೆಂಡತಿಯೊಡನೆ ಈಗೇ ಅಪಹರಿಸಿಕೊಂಡು ಕಲ್ಯಾಣಕ್ಕೆ ಹೋದರೆ, ಮತ್ತೊಂದು ಮಹತ್ವದ ಕೆಲಸವನ್ನೇ ನಾನು ಮಾಡಿದಂತಾಗುವದು; ಯಾಕಂದರೆ, ನೇತಾಜಿಯು ಶಿವಾಜಿಯ ಒಬ್ಬ ಶೂರ ಸರದಾರನಾಗಿರುವನು; ಅಲ್ಲದೆ, ಆತನ ಹೊಸ ಹೆಂಡತಿ ಕಾಶಿಯೂ ಒಳ್ಳೇ ರೂಪವತಿ ಇರುವಳೆಂದು ನಾನೂ ಕೇಳಿದ್ದೇನೆ, ಅಲ್ಲದೆ ನಮ್ಮ ರಾವುತರೂ ಕಣ್ಣುಮುಟ್ಟ ನೋಡಿಬಂದು ಹೇಳಿದ್ದಾರೆ; ಇದೂ ಅಲ್ಲದೆ, ಶಿವಾಜಿಯೂ ಲಗ್ನಕ್ಕೆ ಬರುವ ಸಂಭವವಿರುವದೆಂದು, ರಾಯಬಾನೂ ಹೇಳಿದ್ದಾನೆ, ನಮ್ಮ ರಾವುತರೂ ಹೇಳಿದ್ದಾರೆ; ಅಂದಬಳಿಕ ನಾನು ಹೀಗೆಯೇ ಚೌಕಗ್ರಾಮದ ಮೇಲೆ ಸಾಗಿಹೋಗಿ, ಆ ಲಗ್ನ ಸಮಾರಂಭದೊಳಗಿನ ಜನರನ್ನೆಲ್ಲ ಸೆರೆ ಹಿಡಿದುಬಿಟ್ಟರೆ, ಸುದೈವದಿಂದ ಶಿವಾಜಿಯೂ ನನ್ನ ಕೈಗೆ ಸಿಕ್ಕುಹೋಗಿ ಸರ್ವಾನರ್ಥದ ಮೂಲವನ್ನೇ ನಾನು ಕಡಿದ ಕೀರ್ತಿಗೆ ಪಾತ್ರನಾಗುವೆನು! ಹೀಗಾದಲ್ಲಿ ನನ್ನ ಸುದೈವವು ತೆರೆಯಿತೆಂತಲೇ ತಿಳಿಯಬೇಕು! ಯಾಕಂದರೆ ಬಾದಶಹನ ಸುಪ್ರಸನ್ನತೆಗಾಗಿ ಮಾಡತಕ್ಕ ಕಾರ್ಯಗಳಲ್ಲಿ, ಇದಕ್ಕಿಂತ ಮಹತ್ವದ ಬೇರೆ ಯಾವ ಕಾರ್ಯವೂ ಇರುವದಿಲ್ಲ; ಆದ್ದರಿಂದ ನಾನು ಇದೇ ಕಾಲದಲ್ಲಿ ಚೌಕಗ್ರಾಮದ ಮೇಲೆ ಸಾಗಿ ಹೋಗುವದೇ ಯೋಗ್ಯವು!

ಹೀಗೆ ರುಸ್ತುಮ ಜಮಾಲನು ವಿಚಾರದ ಆವೇಶದಲ್ಲಿ ನಿಶ್ಚಯಿಸಿದನು ಸರಿ; ಆದರೆ, ಶಿವಾಜಿಯ ಮೇಲೆ ತಾನು ಸಾಗಿ ಹೋಗಬೇಕೆಂಬ ವಿಚಾರವು ಆತನ ಮನಸ್ಸಿನಲ್ಲಿ ಬರಲು, ಆತನ ಹೃದಯವು ಗದಗುಟ್ಟಿ ನಡುಗಿತು; ಆಗ ಆತನು ತನ್ನ ಮನಸ್ಸಿನಲ್ಲಿ– ನಾನು ಬಹು ತಿಳಿಗೇಡಿಯು, ಕಾರ್ಯ ಗೌರವವನ್ನು ಸರ್ವಥಾ ಅರಿಯೆನು. ಶಿವಾಜಿಯ ಯೋಗ್ಯತೆಯೇನು, ನನ್ನ ಯೋಗ್ಯತೆಯೇನು? ಶಿವಾಜಿಯು, ಮಹಾ ಸಮರ್ಥರಾದ ನಮ್ಮ ವಿಜಾಪುರದ ಮಹಮ್ಮದ ಬಾದಶಹರ, ಹಾಗು ದಿಲ್ಲಿಯ ಔರಂಗಜೇಬ ಬಾದಶಹರ ಹೀಗೆ ಇಬ್ಬರ ಹೃದಯಗಳನ್ನೂ ಹೊಕ್ಕು ಕೊರೆಯುತ್ತಿರುವನು, ಅವರಿಬ್ಬರು ಬಾದಶಹರಿಗೂ ದಾದು ಹತ್ತುಗೊಡದೆ ಆತನು

ಪ್ರಬಲನಾಗುತ್ತ ನಡೆದಿರುವನು; ಅಂಥವನು ನನ್ನಂಥ ಕ್ಷುದ್ರ ಸರದಾರನ ಗಂಟಲಲ್ಲಿ ಇಳಿಯಬಹುದೇ? ಇಂತಹ ಅಶಕ್ಯ ವಿಚಾರವು ನನ್ನ ಮನಸ್ಸಿನಲ್ಲಿ ಯಾಕೆ ಬಂದಿರಬಹುದು! ಶಿವಾಜಿಯ ಹೆಸರು ದಿಲ್ಲಿಯ ಬಾದಶಹನಿಗೂ ಗೊತ್ತಾಗಿದ್ದರೆ, ನನ್ನ ಹೆಸರು ನನ್ನ ಹೆಂಡತಿಗೂ ನೆಟ್ಟಗೆ ಗೊತ್ತಾಗಿರುವದೋ ಇಲ್ಲವೋ! ಶಿವಾಜಿಯು ಇಂತಹ ಸಣ್ಣಪುಟ್ಟ ಹಳ್ಳಿಯ ಲಗ್ನಕ್ಕೆ ಬರಬಹುದೆ? ಅಥವಾ ಸ್ವಜನಾಭಿಮಾನದ ಆ ಧೀರ ಪುರುಷನು, ತನ್ನವರ ಪ್ರೇಮವನ್ನು ಹೆಚ್ಚಿಸಿಕೊಳ್ಳುವದಕ್ಕಾಗಿ ಒಂದು ವೇಳೆ ಲಗ್ನಕ್ಕೆ ಬಂದಿದ್ದರೂ, ಆತನು ಎಂತಹ ಸಿದ್ಧತೆಯಿಂದ ಬಂದಿರಬಹುದು! ಈ ಯಾವ ವಿಚಾರವನ್ನೂ ಮಾಡದೆ, ಹೆಣ್ಣು–ಹೊನ್ನು–ಮಣ್ಣುಗಳ ಆಶೆಯ ನಾನು, ಜಾಜ್ವಲ್ಯವಾದ ಶಿವಜ್ಯೋತಿಯ ಮೇಲೆ ದುಮುಕಿದರೆ, ನಾನು ಪತಂಗದ ಹುಳದಂತೆ ಸುಟ್ಟುಕೊಂಡು ಸಾಯಬೇಕಾದೀತು? ಎಲೈ ಮೂರ್ಖಾ, ರುಸ್ತುಮ ಜಮಾಲಾ, ಚೌಕಗ್ರಾಮದಿಂದ ಶಿವಸಿಂಹದ ಗುಡುಗು ಇಲ್ಲಿಗೆ ಕೇಳುತ್ತಿರಲು, ನರಿಯಾದ ನೀನು, ಕೈಗೆ ಸಿಕ್ಕಿರುವ ಕ್ಷುದ್ರ ಬೇಟೆಯನ್ನು ಉಳಿಸಿಕೊಂಡು ಓಡಿಹೋಗಿ ಗುದ್ದು ಸೇರಿಕೊಳ್ಳುವದನ್ನು ಬಿಟ್ಟು, ಆ ಸಿಂಹದ ಮೇಲೆ ಬಿದ್ದು, ಅದರ ಕೋರೆ ದಾಡೆ ಕಿತ್ತುಬೇಕೆಂದು ಯೋಚಿಸುತ್ತಿರುವೆಯಾ?'' ಎಂದು ಪ್ರಶ್ನೆ ಮಾಡಿಕೊಳ್ಳುತ್ತಿರುವಾಗ ಆತನ ಮನಸ್ಸಿನಲ್ಲಿ ಶಿವಾಜಿಯ ಕುಟಿಲ ಯುಕ್ತಿಯ ಗಂಭೀರಗಳಾದ ಒಂದೊಂದೇ ಕೆಲಸಗಳು ಸಾಲಾಗಿ ಬರಲು, ಆತನು ಚಳಿ ಬಂದವರಂತೆ ನಿಜವಾಗಿಯೇ ನಡುಗಹತ್ತಿದನು! ಏನು ಮಾಡಿದರೂ ಆತನ ನಡುಗೇ ನಿಲ್ಲಲೊಲ್ಲದು! ಆಗ ಆತನು ಮನಸ್ಸಿನಲ್ಲಿ–ನಾನು ಹೀಗೆ ಅಂಜಿಕೆಯಿಂದ ನಡುಗುವದನ್ನು ಯಾರಾದರೂ ನೋಡಿಗೀಡಿದರೆ, ನಕ್ಕುಬಿಟ್ಟಾರಲ್ಲಾ! ಎಲೈ ರುಸ್ತುಮ ಜಮಾಲಾ, ಒಂದು ದಿನದ ಹಾದಿಯಲ್ಲಿ ಶಿವಾಜಿಯೆಂಬ ಸಿಂಹವು ಲಗ್ನದ ಸಮಾರಂಭದಿಂದ ಚಲ್ಲಾಟವಾಡುತ್ತಿರುವಾಗ, ನೀನು ಹೀಗೆ ನೇತಾಜಿಯ ತಂಗಿಯನ್ನೂ, ಆಕೆಯ ಗಂಡನಾದ ರಾಯಬಾ ಸಾವುಕಾರನನ್ನೂ ಸೆರೆಹಿಡಿದು, ಆ ಲಗ್ನದ ಶೋಭೆಯನ್ನು ಹಾಳುಮಾಡಿ ಬಿಟ್ಟಿರುವೆಯಲ್ಲ! ಈ ಸುದ್ಧಿಯನ್ನು ಆ ಶಿವಸಿಂವನ ಕಿವಿಗೆ ಯಾರಾದರೂ ಹಾಕಿದರೆ, ಆ ಲಗ್ನದ ಮೊದಲು ನಿನ್ನ ಗೋರಿಯೇ ಆಗಿಬಿಟ್ಟೀತು! ಆ ಚಪಲ ಶಿವಸಿಂಹದ ಜಿಗತಗಳಿಗೆ ಈ ಒಂದು ದಿನದ ಹಾದಿಯು ಎತ್ತ ಈಡಾದೀತು! ಛೀ! ಛೀ! ರುಸ್ತುಮ ಜಮಾಲ, ನೀನು ಸಿಕ್ಕುಬಿಟ್ಟೆ, ಶಿವಸಿಂಹನ ಪಂಜರದಲ್ಲಿ ನೀನು ನಿಶ್ಚಯವಾಗಿ ಸಿಕ್ಕುಬಿಟ್ಟೆ!''

ಈ ಮೇರೆಗೆ ತನ್ನೊಳಗೆ ನುಡಿದು ರುಸ್ತುಮ ಜಮಾಲನು ತನ್ನ ಅಯೋಗ್ಯ ವಿಚಾರಕ್ಕಾಗಿ, ತನ್ನ ಕಿವಿಗಳನ್ನು ತಾನೇ ಹಿಂಡಕೊಂಡನು; ಸುತ್ತುಮುತ್ತು ತನ್ನನ್ನು ಯಾರೂ ನೋಡುವದಿಲ್ಲವೆಂಬುದರ ನಂಬಿಗೆ ಮಾಡಿಕೊಂಡು, ಪಶ್ಚಾತ್ತಾಪದಿಂದ ತನ್ನ ಎರಡೂ ಕಪಾಳಗಳಿಗೆ ತಾನೇ ಹೊಡೆದುಕೊಳ್ಳಹತ್ತಿದನು! ಅಷ್ಟರಲ್ಲಿ ಆತನ ಸೇವಕನಾದ ಅಬದೂಲ ಗಫಾರನು ಅಲ್ಲಿಗೆ ಬಂದು– ''ಖಾವಿಂದ, ಚೌಕಗ್ರಾಮದಿಂದ ಒಬ್ಬ ಸವಾರನು ಬಂದಿದ್ದಾನೆ; ಹುಜೂರನ್ನು ಕಾಣಬೇಕೆಂದು ಆತನು ಇಚ್ಛಿಸುವನು,'' ಎಂದು ಹೇಳಲು, ರುಸ್ತುಮ ಜಮಾಲನ ಕೈಕಾಲೇ ಹೋದವು? ಆತನಿಗೆ ಈಗ ಶಿವಾಜಿಯೇ ತನ್ನ ಎದೆಯ ಮೇಲೆ ಬಂದು ಕುಳಿತುಬಿಟ್ಟಂತಾಯಿತು. ಆತನು

ಕಕ್ಕಾಬಿಕ್ಕಿಯಾಗಿ ಅಬ್ದುಲ್ಲ ಗಫಾರನನ್ನು ನೋಡುತ್ತ–''ಗಫಾರ, ಗಫಾರ, ಆ ರಾವುತನು ಯಾವಾಗ ಬಂದನು? ಮತ್ತೇನು ಹೇಳಿದನು? ರಾವುತನು ಒಬ್ಬನೇ ಇರುವನೋ, ಅವನ ಹಿಂದೆ ಮತ್ತೆ ಬೇರೆ ಜನರು ಇರುವರೋ? ಗಫಾರ, ನೀನು ನೆಟ್ಟಗೆ ನೋಡಿಬಂದಿರುವೆಯಷ್ಟೆ? ಮರಾಟರ ಒಬ್ಬ ರಾವುತನು ಕ್ಷಣದಲ್ಲಿ ಸಾವಿರ ಜನರಾಗಬಹುದು! ಅದನ್ನು ನಾನು ಚೌಕ ಗ್ರಾಮದ ಹಿಂದಿನ ನಿಬ್ಬಣದ ಪ್ರಸಂಗದಲ್ಲಿ ನೋಡಿದ್ದೇನೆ, ಗಫಾರ, ನೀನೂ ನೋಡಿದ್ದೀ; ಆದ್ದರಿಂದ ಹೋಗು, ಇನ್ನೊಮ್ಮೆ ನೆಟ್ಟಗೆ ನೋಡಿಬಾ; ಹೋಗುವಾಗ ಬಾಗಿಲು ಗಟ್ಟಿಯಾಗಿ ಇಕ್ಕಿಕೊಂಡು ಮಾತ್ರ ಹೋಗು. ಗಫಾರ, ನಾಲ್ಕೂಕಡೆಗೆ ಚನ್ನಾಗಿ ನೋಡು, ಒಬ್ಬನೇ ರಾವುತನಿದ್ದರೆ ಅವನನ್ನು ಇಲ್ಲಿಗೆ ಕರೆದುಕೊಂಡು ಬಾ, ನಾನು ಅಷ್ಟರಲ್ಲಿ ತಂಬಿಗೆ ತಕ್ಕೊಂಡು ಹೋಗಿಬರುವೆನು.'' ಎಂದು ಹೇಳುವಾಗಿನ ಆ ರುಸ್ತುಮ ಜಮಾಲನ ಹುಚ್ಚಿಟ್ಟಿರುವ ಮೋರೆಯನ್ನು ನೋಡಿ, ಗಫಾರನಿಗೆ ಹುಚ್ಚನಗೆ ಬರಲು, ಅವನು ಬಹು ಪ್ರಯಾಸದಿಂದ ಅದನ್ನು ಮುಚ್ಚಿಕೊಂಡು, ಕೆಮ್ಮುವ ನೆವದಿಂದ ಹೊರಗೆ ಹೋಗಿಬಿಟ್ಟನು. ತನ್ನ ಒಡೆಯನು ತನ್ನ ಕಿವಿ ತಾನೇ ಹಿಂಡಿಕೊಂಡದ್ದನ್ನೂ, ತನ್ನ ಗಲ್ಲಗಲ್ಲಿಗೆ ತಾನೇ ಬಡಕೊಂಡದ್ದನ್ನೂ ಗಫಾರನು ಯಾವ ಮಾಯದಿಂದಲೋ ನೋಡಿದ್ದನು; ಆದ್ದರಿಂದ ಅವನ ನಗೆ ಅವನ ಹೊಟ್ಟೆಯಲ್ಲಿ ಹಿಡಿಸದಾಯಿತು, ಆದರೆ ರುಸ್ತುಮ ಜಮಾಲನ ಮಾನಸಿಕ ವಿಚಾರಗಳು ನಡೆದದ್ದರಿಂದ ಶಿವಾಜಿಯ ವಿಷಯದ ಭಯದ ಉದ್ಗಾರಗಳು ಮಾತ್ರ ಆ ಗಫಾರನ ಕಿವಿಗೆ ಬಿದ್ದಿದ್ದಿಲ್ಲ; ಬಿದ್ದಿದ್ದರೆ, ಆತನಿಗೆ ನಗೆ ಬರುವದರ ಬದಲು, ಇನ್ನು ತನ್ನ ಗತಿಯೇನೆಂದು ಆತನು ರುಸ್ತುಮ ಜಮಾಲನಿಗಿಂತಲೂ ಹೆಚ್ಚು ಅಂಜಬಹುದಾಗಿತ್ತು ಶಿವಾಜಿಯಂತಹ ಪ್ರತಾಪವಂತರು ತಮ್ಮ ಮೇಲೆ ಸಾಗಿ ಬರುವರೆಂಬ ಸುದ್ದಿಯನ್ನು ಕೇಳಿದಕೂಡಲೆ, ಒಳ್ಳೊಳ್ಳೆ ಎದೆಗಾರರ ಎದೆ ಗುಂಡಿಗಳೂ ಬಿಚ್ಚಿ ಹೋಗುತ್ತಿದ್ದ ಹಲವು ಸಂಗತಿಗಳು, ಇತಿಹಾಸದಲ್ಲಿ ನಮೂದಾಗಿರುವದನ್ನು ಕಾಣಬಹುದು! ಇರಲಿ.

ಇತ್ತ ರುಸ್ತುಮ ಜಮಾಲನು ತಾನು ಹೇಳಿದಂತೆ ನಿಜವಾಗಿಯೇ ತಂಬಿಗೆ ತಕ್ಕೊಂಡ ಹೋಗಲು, ಅತ್ತ ಗಫಾರನು ಹೊರಗೆ ಹೋಗಿ ತನ್ನ ಒಡೆಯನು ಹೇಳಿರುವಂತೆ ನಾಲ್ಕೂಕಡೆಗೆ ಚನ್ನಾಗಿ ಹುಡುಕಿನೋಡಿ, ಚೌಕಗ್ರಾಮದ ರಾವುತನು ಒಬ್ಬನೇ ಇರುವದನ್ನು ಮನಗಂಡು ಬಂದು, ಆ ರಾವುತನನ್ನು ಕುರಿತು– ''ಏನಯ್ಯಾ, ನಿನ್ನ ಸಂಗಡಿಗರು ಬೇರೆ ಯಾರಾದರೂ ಇರುವರೆಯೆ? ನಿನ್ನ ಊಟ–ಉಡಿಗೆ ಆಗಿದೆಯೇ? ನೀನು ಚೌಕಗ್ರಾಮವನ್ನು ಯಾವಾಗ ಬಿಟ್ಟಿದ್ದೆ? ನಮ್ಮ ದಣಿಯರು ಇದನ್ನೆಲ್ಲ ವಿಚಾರಿಸಿ, ಮೊದಲು ನಿನ್ನ ಊಟ ಮಾಡಿಸಿಕೊಂಡು, ಆಮೇಲೆ ಕರಕೊಂಡು ಬಾ'' ಎಂದು ನನಗೆ ಹೇಳಿದರು; ಆದ್ದರಿಂದ ಈಗ ನೀವು ಎಷ್ಟು ಜನರಿದ್ದರೂ ಮೊದಲು ಊಟಕ್ಕೆ ನಡೆಯಿರಿ'' ಎಂದು ಹೇಳಲು, ರಾವುತನು–''ನಾವು ಎಷ್ಟು ಜನರಿದ್ದದ್ದನ್ನು ತಕ್ಕೊಂಡು ಈಗ ಮಾಡುವದೇನು? ಮೊದಲು ನಾನು ರುಸ್ತುಮ ಜಮಾಲರನ್ನು ಕಾಣಬೇಕಾಗಿದೆ; ಅವರನ್ನು ಕಂಡಬಳಿಕ ಆಮೇಲೆ ಊಟ–ಉಡಿಗೆಯ ವಿಚಾರ; ಈಗ ಲಕ್ಷ್ಯಕ್ಕೆ

ವಿಘ್ನಬಂದು ಬಿಟ್ಟಿರುವದರಿಂದ, ಅದರ ನಿವಾರಣವು ಮೊದಲು ಆಗಬೇಕಾಗಿರುವದು. ಹೋಗು, ಈಗಂತು ನಾನು ಒಬ್ಬನೇ ಬಂದಿದ್ದೇನೆ; ಮಾತಾಡುತ್ತ ಹೊತ್ತುಗಳೆಯಬೇಡ; ನಿಮ್ಮ ಹಜರತ್ತರಿಗೆ ಹೇಳಿ, ನನಗೆ ಅವರ ಭೆಟ್ಟಿಯನ್ನು ಮಾಡಿಸು; ಅಥವಾ ಅವರ ಭೆಟ್ಟಿಯು ಅವಶ್ಯವೂ ನನಗೆ ಇಲ್ಲ, ನಮ್ಮ ಶಿವಾಜಿ ಮಹಾರಾಜರು ಕೊಟ್ಟಿರುವ ಈ ಪತ್ರವನ್ನು ನಿಮ್ಮ ಹಜರತ್ತರ ಕೈಯಲ್ಲಿಕೊಟ್ಟು, ಅದರ ಉತ್ತರವನ್ನು ತಕ್ಕೊಂಡು ಬಾ; ಅಷ್ಟರಲ್ಲಿ ನಾನು ಇಲ್ಲಿಯೇ ಹೋಗಿ ಬೇಗನೆ ಬರುವೆನು,'' ಎಂದು ಹೇಳಿ, ಆ ರಾವುತನು ತನ್ನ ಕುದುರೆಯನ್ನು ಓಡಿಸುತ್ತ ಎತ್ತೋ ಹೋಗಿಬಿಟ್ಟನು!

ರಾವುತನ ಈ ರೀತಿಯನ್ನು ನೋಡಿ ಗಫಾರನಿಗೂ ಆಶ್ಚರ್ಯವಾಯಿತು. ನಮ್ಮ ರುಸ್ತುಮು ಜಮಾಲರಂಥ ಪ್ರಬಲ ಸರದಾರರ ಬಳಿಗೆ ದೂತನಾಗಿ ಬಂದದ್ದ ರಾವುತನ ಈ ಒಗರು ನೋಡಿ, ಆತನು ತನ್ನ ಮನಸ್ಸಿನಲ್ಲಿ ಆಲೋಚಿಸುತ್ತಿರಲು, ತನ್ನ ಕೈಯೊಳಗಿನ ಪತ್ರವು ಶಿವಾಜಿ ಯದೆಂಬದು ಆತನ ಮನಸ್ಸಿನಲ್ಲಿ ಬಂದಕೂಡಲೆ, ಆತನ ಕೈಯೂ ನಡುಗಹತ್ತಿತು! ಹಿಂದಿನ ಚೌಕಗ್ರಾಮದ ಗಂಗೆಯ ನಿಬ್ಬಣದಲ್ಲಿ ಗಫಾರನು ರುಸ್ತುಮು ಜಮಾಲನ ತೈನಾತಿಯಲ್ಲಿದ್ದು ಆಗ ಮರಾಟರ ಮಾಯಗಾರಿಕೆಯ ಫಲವನ್ನು ಚನ್ನಾಗಿ ಅನುಭವಿಸಿದವನಾಗಿದ್ದನು; ಈಗಂತು ಖಾಸ ಶಿವಾಜಿಯೇ ಪತ್ರವನ್ನು ಬರೆದು ಕಳಿಸಿದ್ದನು; ಆದ್ದರಿಂದ ಈಗ ಶಿವಾಜಿಯೇ ತನ್ನ ಮಾಯಗಾರಿಕೆಯ ಮರಾಟರನ್ನೂ, ಮಾವಳರನ್ನೂ ಕಟ್ಟಿಕೊಂಡು ಬಂದು, ಇಲ್ಲಿಯೇ ಎಲ್ಲಿಯೋ ತಳ ಊರಿ ಬಿಟ್ಟಿರುವನೆಂಬ ಕಲ್ಪನೆಯು ಆ ಗಫಾರನಿಗೆ ಆಗಲು, ಆತನಿಗೂ ನಡಗು ಹುಟ್ಟಿ ತಂಬಿಗೆ ತಕ್ಕೊಂಡು ಹೋಗುವಹಾಗಾಯಿತು! ಆಗ ಆತನು ಆ ಶಿವಾಜಿಯ ಚೀಟಿಯನ್ನು ಬಹು ಜೋಕೆಯಿಂದ ಇಟ್ಟುಕೊಂಡು, ಮೊದಲು ತಂಬಿಗೆ ಹುಡುಕಹತ್ತಿದನು; ಆದರೆ ಬೇಗನೆ ಅದು ಸಿಗದ್ದರಿಂದ, ಹಾಗೇ ಅವಸರದಿಂದ ವಿಧಿಯನ್ನು ತೀರಿಸಿಕೊಂಡು ಬಂದು, ತನ್ನ ಹಜರತ್ತರನ್ನು ಕಾಣಲಿಕ್ಕೆ ಹೋಗಬೇಕೆಂದು ಚೀಟಿಯನ್ನು ನೋಡಿದನು; ಆದರೆ ಗಡಿಬಿಡಿಯಲ್ಲಿ ಚೀಟಿಯು ಎಲ್ಲಿಯೋ ಬಿದ್ದುಹೋಗಿತ್ತು! ಆಗ ಗಫಾರನ ಮೋರೆಯು ಕಪ್ಪಿಟ್ಟಿತು; ಅವನ ಎದೆ ಡವಡವ ಹಾರಹತ್ತಿತು! ತನ್ನ ಹಜರತ್ತಿನ ಅಂಜಿಕೆಗಿಂತ, ಶಿವಾಜಿಯ ಪತ್ರದ ಅಂಜಿಕೆಯು ಗಫಾರನ ಎದೆಯನ್ನು ಓಡಿಸಿ ನೀರುಮಾಡಿ ಬಿಟ್ಟಿತು! ಆಗ ಆತನು ಹುಚ್ಚನ ಹಾಗೆ ನಾಲ್ಕೂ ಕಡೆಗೆ ನೋಡುತ್ತ ನಿಂತುಬಿಟ್ಟನು. ತನ್ನ ಒಡೆಯನ ಬಳಿಗೆ ಹೋಗಿ ಏನು ಹೇಳಬೇಕೆಂಬದು ಆತನಿಗೆ ತಿಳಿಯದ ಹಾಗಾಯಿತು. ಹೀಗೆ ನಿಂತವನು ಧೇನಿಸುತ್ತ ಬಹಳಹೊತ್ತು ನಿಂತೇಬಿಟ್ಟನು! ಇತ್ತ ರುಸ್ತುಮು ಜಮಾಲನೂ ತನ್ನ ಶೌಚವಿಧಿ ಯನ್ನು ತೀರಿಸಿಕೊಂಡು, ಮತ್ತೆ ನಾಲ್ಕುಜನ ಗಟ್ಟಿಗರೊಡನೆ ತನ್ನ ಕಚೇರಿಯಲ್ಲಿ ಬಂದು ಕುಳಿತುಕೊಂಡು, ರಾವುತನ ಹಾದಿಯನ್ನು ನೋಡಹತ್ತಿದನು; ಆದರೆ ಬಹಳ ಹೊತ್ತಾದರೂ ರಾವುತನೂ ಇಲ್ಲ, ಗಫಾರನೂ ಇಲ್ಲ!

ಹೀಗೆ ಬಹಳ ಹೊತ್ತಾದರೂ ಯಾರ ಸುದ್ದಿಯೂ ಗೊತ್ತಾಗದಿರುವದನ್ನು ನೋಡಿ, ರುಸ್ತುಮು ಜಮಾಲನಿಗೆ ಮತ್ತೆ ದಿಗಿಲು ಬಿದ್ದಿತು. ಆತನು ಮನಸ್ಸಿನಲ್ಲಿ–''ಏನು ಚಮತ್ಕಾರ

ವಿದು! ಗಫಾರನು ಇನ್ನೂ ಬರಲಿಲ್ಲವಲ್ಲ! ಅವನು ಶುದ್ಧ ಕತ್ತೆ! ನಾನು ಹೋಗಿ ಬಂದರೂ ಇನ್ನೂ ಬಂದಿಲ್ಲ! ನಿಜವಾಗಿ ನೋಡಿದರೆ, ಗಫಾರನು ಹೀಗೆ ತಡಮಾಡತಕ್ಕವನಲ್ಲ; ನನಗಿಂತಲೂ ಆತನಲ್ಲಿ ಚಟುವಟಿಕೆ ಹೆಚ್ಚು, ಅಂದಬಳಿಕ ಏಕೆ ತಡಮಾಡಿದ್ದಾನು? ಆ ರಾವುತನೇ ಶಿವಾಜಿಯಾಗಿರಬಹುದೇನು? ಅವನು ಗಫಾರನನ್ನು ತುಂಡರಿಸಿ ಬಿಟ್ಟಿರಬಹುದೋ! ನಿಶ್ಚಯವಾಗಿ ನಾನು ದಡ್ಡತನಮಾಡಿದೆನು. ಶಿವಾಜಿಯು ಲಗ್ನಕ್ಕೆ ಬಂದಿರುವನೆಂಬ ಸುದ್ದಿಯನ್ನು ನಾನು ಮೊದಲೇ ಕೇಳಿದ್ದರೆ, ಈ ನಿಬ್ಬಣದವರ ಗೊಡವಿಗೆಯೇ ನಾನು ಹೋಗುತ್ತಿದ್ದಿಲ್ಲ! ಮಾಯಗಾರರಾದ ಮರಾಟರು ಹೇಗೋ ನನ್ನ ಈ ದಡ್ಡತನದ ಸುದ್ದಿಯನ್ನು ಶಿವಾಜಿಗೆ ತಿಳಿಸಿದ್ದರಿಂದ ಆತನು ತನ್ನ ಮಾಯಗಾರ ಮಾಳವರೊಡನೆ ನಿಶ್ಚಯವಾಗಿ ಇಲ್ಲಿಗೆ ಬಂದು ಬಿಟ್ಟಿರುವನು. ಅಂತೇ ನನ್ನ ಹೃದಯವು ಇಷ್ಟು ನಡಗುತ್ತಲಿದೆ; ಎಲಾ! ಏನಿದು! ರಾವುತನಿಲ್ಲ, ಗಫಾರನೂ ಇಲ್ಲ! ಮರಾಟರ ಸಹವಾಸದಿಂದ ನಮ್ಮ ಗಫಾರನೂ ಮಾಯಗಾರನಾದನೋ ಏನು? ಈಗ ಏನು ಮಾಡಬೇಕಾದೀತು? ಇಲ್ಲಿಂದ ಈಗೇ ಕಲ್ಯಾಣಕ್ಕೆ ಹೋಗಿಬಿಡೋಣವೇ? ಹೋಗುವಾಗ ಹಾದಿಯಲ್ಲಿ ಶಿವಾಜಿಯು ಗಂಟುಬಿದ್ದರೆ ಹೇಗೆ! "ಯಾ ಅಲ್ಲಾ! ಕ್ಯಾಹುವಾ!"

ಹೀಗೆ ರುಸ್ತುಮ ಜಮಾಲನು ಸುಮ್ಮನೆ ಹುಚ್ಚನಹಾಗೆ ಏನೇನೋ ಕಲ್ಪಿಸುತ್ತ ತನ್ನೊಳಗೆ ಒಟಗುಟ್ಟುತ್ತ ಕುಳಿತಿದ್ದನು. ನಿಜವಾಗಿಯೆಂದರೆ, ರುಸ್ತುಮ ಜಮಾಲನು ಬಹು ಪುಕ್ಕನು; ತೀರಾ ರಣಹೇಡಿ. ಆತನು ಮುಸಲ್ಮಾನರಂಥ ರಣಶೂರ ಸಮಾಜಕ್ಕೆ ಲಾಂಛನಾಸ್ಪದನಾಗಿದ್ದನು. ಹೀಗೆ ಹೆಸರಾದ ಶೂರ ಜಾತಿಯಲ್ಲಿಯೂ ಹೇಡಿಗಳು ಹುಟ್ಟುವದು ಅನಾದಿಕಾಲದಿಂದ ನಡೆದು ಬಂದಿದೆ. ಭಾರತಕಾಲದಲ್ಲಿ ವಿರಾಟನಂಥ ಶೂರ ಕ್ಷತ್ರಿಯನ ಮಗನಾದ ಉತ್ತರ ಕುಮಾರನು ಹೀಗೆಯೇ ರಣಹೇಡಿಯಾಗಿದ್ದದ್ದು ಪ್ರಸಿದ್ಧವಾಗಿರುವದು. ಅದರಂತೆ, ಪೇಶವಾಯಿಯನ್ನು ಮುಗಿಸಿಬಿಟ್ಟ ಎರಡನೆಯ ಬಾಜೀರಾಯನೂ ರಣಹೇಡಿಯೇ ಆಗಿದ್ದನು. ಹೀಗೆ ಶೂರ ಜನಾಂಗದಲ್ಲಿ, ಅಥವಾ ಶೂರ ವಂಶದಲ್ಲಿ ಹೇಡಿಗಳು ಹುಟ್ಟುವದು ಸೃಷ್ಟಿಯೊಳಗಿನದೊಂದು ಕೌತುಕದ ಸಂಗತಿಯೇ ಸರಿ! ಇರಲಿ. ರುಸ್ತುಮ ಜಮಾಲನು ರಣಹೇಡಿಯಿದ್ದರೂ ಕಾರ್ಯಕುಶಲನೂ, ಸೂಕ್ಷ್ಮದರ್ಶಿಯೂ ಮಾತ್ರ ಆಗಿದ್ದನು. ಇದಲ್ಲದೆ, ಆತನು ದೊಡ್ಡ ಕುಲದವನೂ, ಬಾದಶಹನ ಆಪ್ತನೂ ಆದದ್ದರಿಂದ, ಅವನ ಮಾನ-ಮರ್ಯಾದೆಗೆ ಕೊರತೆಯಿರಲಿಲ್ಲ, ಅಂಥವನು ಈಗ ಶಿವಾಜಿಯ ಹೆಸರು ಕೇಳಿ ಅಂಜಿ ಸುಮ್ಮನೆ ಕಲ್ಪನೆಹಾಕುತ್ತ ಕುಳಿತಿರುವದನ್ನು ನೋಡಿ, ಆ ಕಚೇರಿಯಲ್ಲಿ ಕುಳಿತಿದ್ದ ಹಯಾತಖಾನನೆಂಬವನು ಆ ರುಸ್ತುಮ ಜಮಾಲನನ್ನು ಕುರಿತು- ಸರದಾರ ಸಾಹೇಬ, ಎಲ್ಲಿ? ಚೌಕಗ್ರಾಮದಿಂದ ಬಂದಿದ್ದ ರಾವುತನೆಲ್ಲಿ? ಇಷ್ಟು ಹೊತ್ತಾದರೂ ಅವನ ಸುಳುವೇ ಇಲ್ಲವಲ್ಲ! ಆತನನ್ನು ಕರತರುವದಕ್ಕೆ ಗಫಾರನನ್ನು ಕಳಿಸಿದ್ದಿರಲ್ಲವೆ? ಈಗ ಗಫಾರನೂ ಇಲ್ಲ, ರಾವುತನೂ ಇಲ್ಲ; ಏನು ವಿಚಾರವಿದು?

ರುಸ್ತುಮ ಜಮಾಲ-ನಾನೂ ಅದನ್ನೇ ವಿಚಾರಿಸುತ್ತಲಿದ್ದೇನೆ. ನಾನು ನಾಜೂಕ ಕೆಲಸಕ್ಕೆ ಹೋದದ್ದರಿಂದ, ಕಚೇರಿಗೆ ಬರಲಿಕ್ಕೆ ಸ್ವಲ್ಪ ವಿಲಂಬವಾದದ್ದು ಒಂದು ತಪ್ಪಾಗಿರಬಹುದೇ?

ಹಯಾತಖಾನ–ಅದೇತರ ತಪ್ಪು? ಕೆಲಸದಲ್ಲಿ ತೊಡಗಿದಾಗ ತಡವೂ ಆಗಬಹುದು; ತ್ವರೆಯೂ ಆಗಬಹುದು; ಕಾರ್ಯಾಧೀನರಿಗೆ ಸ್ವಾತಂತ್ರ್ಯವು ಹೇಗಿದ್ದೀತು? ನಿಮಗೆ ಬರಲಿಕ್ಕೆ ತಡವಾದರೂ, ಗಫಾರನೂ, ಬಂದ ರಾವುತನೂ ನಿಮ್ಮ ಹಾದಿಯ ನೋಡುತ್ತ ಬಿದ್ದಿರಬೇಕೋ ಇಲ್ಲವೋ?

ರುಸ್ತುಮ ಜಮಾಲ– ನಿಮ್ಮ ಮಾತು ಸತ್ಯವು. ನಮ್ಮ ಚಾಕರನು ನಮ್ಮನ್ನು ಕಾದುಕೊಂಡು ಬಿದ್ದಿರಬೇಕು, ನಮ್ಮ ಬಳಿಗೆ ದೂತನಾಗಿ ಬಂದವನೂ ನಮ್ಮನ್ನು ಕಾದುಕೊಂಡು ಬಿದ್ದಿರಲೇ ಬೇಕು; ಅದೆಲ್ಲ ಸರಿ! ಆದರೆ ಚೌಕಗ್ರಾಮದಿಂದ ಬಂದ ರಾವುತನು ಮರಾಟನಾದದ್ದರಿಂದ, ವಿಚಾರ ಮಾಡಬೇಕಾಗಿದೆ; ಆ ಚೌಕಗ್ರಾಮದ ಲಗ್ನಕ್ಕೆ ಶಿವಾಜಿಯೂ ಬರುವವನಿದ್ದನೆಂದು ಕೇಳಿದ್ದೇನೆ; ನಾವು ಈಗ ಆ ಲಗ್ನದ ನಿಬ್ಬಣದವರನ್ನು ನಿಷ್ಕಾರಣವಾಗಿ ಸೆರೆ ಹಿಡಿದದ್ದರಿಂದ, ಚೌಕಗ್ರಾಮದ ರಾವುತನಿಗೆ ಇಷ್ಟು ಅಂಜಬೇಕಾಗಿದೆ.

ಶಿವಾಜಿಯ ಹೆಸರು ಕೇಳಿದಕೂಡಲೆ, ಹಯಾತಖಾನನೂ ಮೆತ್ತಗಾದನು. ಆತನ ಮೊದಲಿನ ಮಾತಿನ ರೌಸು ಈಗ ಉಳಿಯಲಿಲ್ಲ, ಆತನು ರುಸ್ತುಮ ಜಮಾಲನಿಗೆ– ''ಹಜರತ್, ಹಾಗಿದ್ದರೆ, ಹೀಗೆ ಸುಮ್ಮನೆ ವಿಚಾರ ಮಾಡುತ್ತ ಕುಳಿತುಕೊಳ್ಳುವದು ನೆಟ್ಟಗಲ್ಲ, ಮೊದಲು ಗಫಾರನನ್ನು ನೋಡಿಸಿರಿ'' ಎಂದು ಹೇಳಿದನು. ಆಗ ರುಸ್ತುಮ ಜಮಾಲನ ಅಪ್ಪಣೆಯಂತೆ 'ಬುಡಣ' ಎಂಬ ಹೆಸರಿನ ಸಿಪಾಯಿಯು ಗಪಾರನನ್ನು ಹುಡುಕಲಿಕ್ಕೆ ಹೋದನು. ಬುಡಣನು ಅತ್ತಿತ್ತ ನೋಡುತ್ತ ಹೋಗುತ್ತಿರಲು, ಗಫಾರನು ಕಳೆದುಹೋಗಿದ್ದ ಚೀಟಿಯನ್ನು ತಿಪ್ಪಿಯ ಬಳಿಯಲ್ಲಿ ಹುಡುಕುತ್ತಿದ್ದನು. ಆಗ ಬುಡಣನು ಹೋದವನೇ ಗಫಾರನಿಗೊಂದು ಗುದ್ದು ಹಾಕಿ – ''ಏ ಸೂವರ! ಗದ್ಧಾ! ಮೈಮೇಲೆ ಎಚ್ಚರಿದೆಯೇ? ಎಷ್ಟು ಹೊತ್ತಾಯಿತು, ಹುಡುಕಿ ಹುಡುಕಿ ಬೇಸತ್ತೆನು! ನಡೆ, ಹಜರತ್ತರು ನಿನ್ನನ್ನು ಕರೆಯುತ್ತಿರುವರು, ನಿನ್ನ ಅವಸ್ಥೆಯಾಗುವದು'' ಎಂದು ನುಡಿದು, ಅವನಿಗೆ ಮಾತಾಡಲಿಕ್ಕೂ ಅವಕಾಶ ಕೊಡದೆ, ಆತನನ್ನು ದಬ್ಬಿಕೊಂಡು ಬಂದು ಕಚೇರಿಯಲ್ಲಿ ನಿಲ್ಲಿಸಿ– ''ಸರಕಾರ, ಈ ಮಹಾರಾಯನು ತಿಪ್ಪಿಯಬಳಿಯಲ್ಲಿ ಏನೋ ಹುಡುಕುತ್ತ ನಿಂತುಬಿಟ್ಟಿದ್ದನು; ಈತನು ಇನ್ನೂ ಎಷ್ಟು ಹೊತ್ತು ನಿಲ್ಲುತ್ತಿದ್ದನೋ, ಏನೋ, ನಾನು ಎಳ ಕೊಂಡು ಬಂದಿದ್ದೇನೆ'' ಎಂದು ಹೇಳಿದನು. ಗಫಾರನನ್ನು ನೋಡಿದಕೂಡಲೆ ರುಸ್ತುಮ ಜಮಾಲನ ಕಣ್ಣುಗಳು ಸಿಟ್ಟಿನಿಂದ ಕೆಂಪಾದವು. ಆತನು ಗಫಾರನನ್ನು ಕುರಿತು–

ರುಸ್ತುಮ ಜಮಾಲ– ಏ ಕತ್ತೇ? ಇಷ್ಟು ಹೊತ್ತೇಕಾಯಿತು? ಏನು ಹುಡುಕುತ್ತ ನಿಂತಿದ್ದೆ?

ಗಫಾರ–ಚೀಟಿಯ ಹುಡುಕುತ್ತ ನಿಂತಿದ್ದೆನು ಸರಕಾರ! ಎಷ್ಟು ಹುಡುಕಿದರೂ ಅದು ಸಿಗಲೊಲ್ಲದು; ಅದರಿಂದ ತಡವಾಯಿತು ಹುಜೂರ.

ರುಸ್ತುಮ ಜಮಾಲ–ಯಾತರ ಚೀಟಿ?

ಗಫಾರ–ರಾವುತನು ಕೊಟ್ಟಿದ್ದ ಚೀಟಿ!

ರುಸ್ತುಮ–ಆ ಚೀಟಿಯನ್ನು ಯಾರು ಕೊಟ್ಟಿದ್ದರಂತೆ?

ಗಫಾರ– ಶಿವಾಜಿಯು ಕೊಟ್ಟಿದ್ದನಂತೆ ಹುಜೂರ.

ರುಸ್ತುಮ– ಖುದ್ದ ಶಿವಾಜಿಯೇ ಕೊಟ್ಟಿದ್ದನೋ ಏನು?

ಗಫಾರ– ಹೌದು ಸರಕಾರ! ಶಿವಾಜಿಯು ಲಗ್ನಕ್ಕೆ ಬಂದಿರುವನಂತೆ! ಆತನೇ ಹೇಳಿ ಚೀಟಿಯ ಕೊಡಿಸಿದನಂತೆ.

ರುಸ್ತುಮ– (ಆಸನವನ್ನು ಗಟ್ಟಿಯಾಗಿ ಒತ್ತಿ) ಎಲ್ಲಿರುವದು ಚೀಟಿ?

ಗಫಾರ– ಅದನ್ನೇ ಹುಡುಕುತ್ತಿದ್ದೆನು ಖಾವಿಂದ! ಈ ಗುಲಾಮನ ಅಪರಾಧವನ್ನು ಕ್ಷಮಿಸಬೇಕು ಖಾವಿಂದ!

ರುಸ್ತುಮ– ಚೀಟಿಯನ್ನು ತಿಪ್ಪಿಯಹತ್ತರ ಏಕೆ ಹುಡುಕುತ್ತಿದ್ದೆ? ಅಲ್ಲಿಗೇಕೆ ಹೋಗಿದ್ದೆ ಸಗಣೀ ತಿನ್ನಲಿಕ್ಕೆ?

ಗಫಾರ– ಇಲ್ಲ ಸರಕಾರ! ಸಗಣಿ ತಿನ್ನಲಿಕ್ಕೆ ಹೋಗಿದ್ದಿಲ್ಲ, ಶಿವಾಜಿಯ ಚೀಟಿ ಎಂದು ಕೇಳಿದ ಕೂಡಲೆ ನನಗೆ ನಡಗು ಹುಟ್ಟಿ ತಂಬಿಗೆ ತಕ್ಕೊಂಡು ಹೋಗುವ ಹಾಗಾಯಿತು, ತಿಪ್ಪೆಗೆ ಹೋದೆನು; ಆ ಗಡಿಬಿಡಿಯಲ್ಲಿ ಚೀಟಿಯು ಎಲ್ಲಿಯೋ ಕಳೆದುಹೋಯಿತು ಸರಕಾರ! ತಪ್ಪು ಮಾಫಮಾಡಬೇಕು ಖಾವಿಂದ!

ರುಸ್ತುಮ–ನಿನ್ನ ಮಾಫಿಯ ಸುಟ್ಟಿತು! ನಿನ್ನ ಖಾವಿಂದರು ಹಾಳಾಗಿ ಹೋದರು! ಮೊದಲು ರಾವುತನೆಲ್ಲಿರುವನು ಹೇಳು. ಅವನು ಒಬ್ಬನೆ ಇರುವನೋ ಬಹುಜನರಿರುವರೋ?

ಗಫಾರ– ನಾನು ಹೋದಾಗಂತು ಒಬ್ಬನೇ ಇದ್ದನು. ನಾನು ಆತನನ್ನು ಕೇಳಲು, ಆತನು–ಈಗಂತು ನಾನೊಬ್ಬನೇ ಇರುವೆನು; ಎಷ್ಟು ಜನರಿದ್ದರೇನು? ಅದರ ಉಸಾಬರಿ ಈಗೇಕೆ?'' ಎಂದು ರಾವುತನು ತಿರುಗಿ ನನ್ನನ್ನೇ ಬೆದರಿಸಿ ಬಿಟ್ಟನು!

ರುಸ್ತುಮ ಜಮಾಲ– ಕತ್ತೆ! ಬೇ ಅಕ್ಕಲ್! ನೀನೇನು ಗಂಡಸೋ ಹೆಂಗಸೋ! ಆತನನ್ನು ದಬ್ಬಿಕೊಂಡೇಕೆ ಬರಲಿಲ್ಲ? ತಂಬಿಗೆ ತಕ್ಕೊಂಡು ಹೋಗಿದ್ದೇನೆಂದು ಹೇಳಲಿಕ್ಕೆ ನಿನಗೆ ನಾಚಿಕೆ ಬರುವದಿಲ್ಲವೆ? ರಣಹೇಡಿ!

ಗಫಾರ– ದಬ್ಬಿಕೊಂಡೇ ಬರುತ್ತಿದ್ದೆನು ಸರಕಾರ! ಆದರೆ ಆ ರಾವುತನು– ''ನಾನು ಈಗ ಬರುವೆನು, ನಿಮ್ಮ ಹಜರತ್ತರಿಗೆ ಈ ಚೀಟಿಯನ್ನು ಕೊಟ್ಟು ಉತ್ತರವನ್ನು ತಕ್ಕೊಂಡು ಬಂದು ಇಲ್ಲಿಯೇ ಇರು. ಲಗ್ನದ ಕೆಲಸ, ತಡವಾಗಬಾರದು. ಬೇಗನೆ ಉತ್ತರ ಬರೆಸಿಕೊಂಡು ಬಾ,'' ಎಂದು ಹೇಳಿದವನೇ, ಕುದುರೆಯನ್ನು ಓಡಿಸುತ್ತ ಎತ್ತೋ ಹೋಗಿಬಿಟ್ಟನು ಸರಕಾರ! ನನ್ನ ಬಳಿಯಲ್ಲಿ ಆತನು ನಿಲ್ಲಲೇ ಇಲ್ಲ!

ಸವಾರನ ಈ ರೀತಿಯನ್ನು ನೋಡಿ ಎಲ್ಲರೂ ದಿಗಿಲು ಬಿದ್ದರು. ಇದು ದೂತರಾಗಿ ಬಂದವರ ರೀತಿಯೇ ಅಲ್ಲವೆಂದು ಅವರು ತಮ್ಮ ತಮ್ಮೊಳಗೇ ಚರ್ಚಿಸಿದರು. ಇದರ ಗೂಢ ವೇನಿರುವದೆಂಬದು ಯಾರಿಗೂ ತಿಳಿಯದಾಯಿತು. ಆಗ ಕಚೇರಿಯೊಳಗಿನವನೊಬ್ಬನು ರುಸ್ತುಮ ಜಮಾಲನಿಗೆ ''ಸರಕಾರ, ಶಿವಾಜಿಯ ಪತ್ರವನ್ನು ನೋಡಿದರೆ ಏನಾದರೂ ಗೊತ್ತಾಗುವದು, ಸುಮ್ಮನೆ ನಾವೇ ಇಲ್ಲಿ ತರ್ಕವಿತರ್ಕಮಾಡುತ್ತ ಕುಳಿತುಕೊಂಡರೆ, ಆಗುವ ದೇನು? ಇನ್ನೊಮ್ಮೆ ಹೋಗಿ ಚನ್ನಾಗಿ ಪತ್ರವನ್ನು ಹುಡುಕಿಕೊಂಡು ಬರಲಿ; ಕಳಿಸಿರಿ, ಮತ್ತೆ

ನಾಲ್ಕು ಜನರನ್ನು!'' ಎಂದು ಹೇಳಲು, ರುಸ್ತುಮ ಜಮಾಲನು ಗಫಾರನ ಸಂಗಡ ಮತ್ತೆ ನಾಲ್ಕು ಜನರನ್ನು ಕಳಿಸಿರಿ, ಆ ಪತ್ರವನ್ನು ಹುಡುಕಿಕೊಂಡೇ ಬರಬೇಕೆಂದು ಕಟ್ಟಪ್ಪಣೆ ಮಾಡಿದನು. ಆಗ ಆ ನಾಲ್ವರೂ ಗಫಾರನ ಸಂಗಡ ಹೋಗಿ ಪತ್ರವನ್ನು ಹುಡುಕುತ್ತಿರಲು, ಗಾಳಿಗೆ ಹಾರಿ ಒಂದು ಗಿಡದ ಕಂಟಿಯಲ್ಲಿ ಸಿಕ್ಕಿಕೊಂಡಿದ್ದ ಆ ಪತ್ರವು ಗಫಾರನ ಕೈಗೆ ಸಿಕ್ಕಿತು. ಆಗ ಅವರಿಗೆ ಹೋದ ಜೀವವು ತಿರುಗಿ ಬಂದಂತಾಯಿತು. ಕೂಡಲೆ ಅವರೆಲ್ಲರೂ ಓಡುತ್ತ ಬಂದು, ಪತ್ರವನ್ನು ರುಸ್ತುಮ ಜಮಾಲನ ಮುಂದೆ ಇಟ್ಟು ಕೃತಕೃತ್ಯರಾದರು.

ಪತ್ರವನ್ನು ಯಾವಾಗ ನೋಡೇವೆಂದು ಅತ್ಯಂತ ಆತುರರಾಗಿದ್ದ ರುಸ್ತುಮ ಜಮಾಲನೇ ಮೊದಲಾದವರು, ಪತ್ರವನ್ನು ಓದಲಿಕ್ಕೆ ತಮ್ಮ ಕಾರಭಾರಿಯ ಕೈಯಲ್ಲಿ ಕೊಟ್ಟರು. ಎಣ್ಣೆಯ ಚೀಟಿಯಂತೆ ಇದ್ದ ಆ ಪತ್ರದಲ್ಲಿ ಉದ್ಧತನದಿಂದ– ''ರುಸ್ತುಮ ಜಮಾಲ, ನೀವು ನಮ್ಮ ನಿಬ್ಬಣದವರನ್ನು ನಿಷ್ಕಾರಣ ಸೆರೆಹಿಡಿದು, ನಮ್ಮ ಲಗ್ನ ಸಮಾರಂಭಕ್ಕೆ ವಿಘ್ನವನ್ನುಂಟು ಮಾಡಿದಿರಿ, ಇದು ನಿಮಗೆ ಕ್ಷೇಮಕರವಾಗದು. ನಮ್ಮ ರಾಯಬಾ ಸಾವುಕಾರರೂ, ಅವರ ಹೆಂಡತಿ ಗಂಗಾಬಾಯಿಯವರೂ ಬಂದ ಹೊರತು, ಲಗ್ನವಾಗುವ ಹಾಗಿಲ್ಲ, ಅವರ ಸಲು ವಾಗಿಯೇ ಲಗ್ನವನ್ನು ಈ ಮುಹೂರ್ತಕ್ಕೆ ಮಾಡದೆ, ಮತ್ತೆ ಎರಡುದಿನ ಮುಂದಕ್ಕೆ ಹಾಕಿರುತ್ತದೆ. ಈ ಪತ್ರವನ್ನು ನೋಡಿದ ಕೂಡಲೆ, ನೀವು ಸೆರೆಹಿಡದವರೆಲ್ಲರನ್ನು ಬಿಟ್ಟು ಕೊಡಬೇಕು. ರುಸ್ತುಮ ಜಮಾಲ, ನೀವು ದೊಡ್ಡ ಮನೆತನದವರು, ಮೇಲೆ ಬಾದಶಹರ ಆಪ್ತರು; ಇಂಥ ದೊಡ್ಡ ಮನುಷ್ಯರಾದ ನಿಮಗೆ ಹೆಂಗಸರಮೇಲಿನ ಕಾಂಕ್ಷೆಯು ಒಪ್ಪುವದಿಲ್ಲ, ನಮ್ಮವರ ತಪ್ಪು ಏನೂ ಇಲ್ಲದೆ ಅವರನ್ನು ಸೆರೆಹಿಡಿದದ್ದರ ಫಲವನ್ನು ನೀವು ಬೇಗನೆ ಉಣ್ಣ ಬೇಕಾದೀತು; ಕಲ್ಯಾಣಕ್ಕೆ ಹೋಗುವದರೊಳಗೆ ನೀವೇ ನಮ್ಮ ಸೆರೆಯಾಳಾದೀರೆಂಬದನ್ನು ಲಕ್ಷದಲ್ಲಿಟ್ಟು, ನಿಬ್ಬಣದವರನ್ನು ಮೊದಲು ಬಿಟ್ಟುಕೊಡಬೇಕು. ನಮ್ಮ ಶಿವಪ್ರಭುಗಳ ಅಪ್ಪಣೆ ಯಂತೆ ನಾನು ಈ ಪತ್ರವನ್ನು ಬರೆದಿದ್ದೇನೆ. ನಿಮ್ಮ ಹಿತವಾದಿಯಾದ ನೇತಾಜಿಯು ಈ ಪತ್ರವನ್ನು ನೀವು ಸರ್ವಥಾ ದುರ್ಲಕ್ಷಿಸಬಾರದು.

ಹೀಗೆ ಸಲಾಮು ಸೂತ್ರಗಳ ಶಿಷ್ಟಾಚಾರವೇನು ಇಲ್ಲದೆ, ಉದ್ಧತತನದಿಂದ ಬರೆದ ಪತ್ರವನ್ನು ನೋಡಿ, ಮರ್ಯಾದಸ್ತನಾದ ರುಸ್ತುಮ ಜಮಾಲನಿಗೆ ಸಿಟ್ಟು ಬಂದಿತು. ಕಚೇರಿ ಯಲ್ಲಿ ಕುಳಿತವರು, ಹೀಗೆ ಅಯೋಗ್ಯವಾಗಿ ಬರೆದ ಪತ್ರದ ವಿಷಯದಲ್ಲಿ ಶಿವಾಜಿಗೆ ಸಿಕ್ಕಹಾಗೆ ಮಾತಾಡಹತ್ತಿದರು; ಆದರೆ ಶಿವಾಜಿಯ ಸಂಬಂಧವಿರುವದೆಂಬ ವಿಚಾರವು ಅವರ ಮನಸ್ಸಿನಲ್ಲಿ ಬರಲು, ಅವರ ಸಿಟ್ಟು ಇಳಿದು ಎಲ್ಲರೂ ಆಲೋಚಿಸತೊಡಗಿದರು. ''ನಿಬ್ಬಣದವರನ್ನು ಬಿಟ್ಟು ಬಿಡಬೇಕೋ, ಅಥವಾ ಅವರನ್ನು ಕೂಡಲೆ ಕಲ್ಯಾಣಕ್ಕೆ ಕರೆದೊಯ್ಯಬೇಕೋ'' ಎಂಬ ವಿಷಯ ದಲ್ಲಿ ಚರ್ಚೆ ನಡೆಯಿತು. ಪತ್ರದಲ್ಲಿ ಶಿವಾಜಿಯ ಹೆಸರು ಎತ್ತಿರದಿದ್ದರೆ, ಅವರು ಅದೇ ಕಾಲ ದಲ್ಲಿಯೇ ಚೌಕಗ್ರಾಮದ ಮೇಲೆ ಸಾಗಿ ಹೋಗಿ, ಲಗ್ನದವರ ಶಾಸನ ಮಾಡುತ್ತಿದ್ದರು; ಹಾಗೆ ಶಾಸನ ಮಾಡುವ ಸಾಮರ್ಥ್ಯವೂ ಅವರಲ್ಲಿ ನಿಶ್ಚಯವಾಗಿ ಇತ್ತು; ಆದರೆ ಶಿವಾಜಿಯ ಹೆಸರು ಕೇಳಿದ ಕೂಡಲೆ ಅವರು ಹೆದರಿದರು. ಕಂಸನಿಗೆ ಎಲ್ಲ ಕಡೆಗೆ ಕೃಷ್ಣನು ಕಾಣುತ್ತಿರುವಂತೆ, ಆಗಿನ

ಮುಸಲ್ಮಾನರಿಗೆ ಎಲ್ಲ ಕಡೆಗೂ ಶಿವಾಜಿಯು ಕಾಣುತ್ತಿದ್ದನು; ಆದ್ದರಿಂದ ಅವರು, ಶಿವಾಜಿಯ ದಂಡು ಬಂದು ಎಲ್ಲಿಯೋ ಅಡಗಿಕೊಂಡಿರು ವದೆಂತಲೇ ನಿಶ್ಚಯಿಸಿದರು. ನಿಜವಾಗಿ ನೋಡಿದರೆ, ಮುಸಲ್ಮಾನರ ಶಕ್ತಿಗೆ ಮರಾಟರು ಸರ್ವಥಾ ಈಡಾಗುವಹಾಗಿದ್ದಿಲ್ಲ. ಮುಸಲ್ಮಾನರು ಮರಾಟರಿಗಿಂತ ದ್ರವ್ಯಬಲದಿಂದ, ಮನುಷ್ಯಬಲದಿಂದ, ಬಾಹುಬಲದಿಂದ ಹೆಚ್ಚಿನವ ರಾಗಿದ್ದರು; ಆದರೆ ಶಿವಾಜಿಯ ರಾಜಕಾರಣದ ಗೂಢ ಯುಕ್ತಿಗೆ ಮುಸಲ್ಮಾನರು ಅಷ್ಟು ಅಂಜುತ್ತಿದ್ದರು; ಆದ್ದರಿಂದ ರಾಜಕಾರಣದಲ್ಲಿ ಶಕ್ತಿಗಿಂತ ಯುಕ್ತಿಯೇ ಹೆಚ್ಚಿನದೆಂದು ಹೇಳ ಬೇಕಾಗುತ್ತದೆ. ''ನಾವು ಸತ್ಯವಾದಿಗಳು, ನಾವು ಹೇಳಿಕೇಳಿ ಡಾಣಾಡಂಗುರವಾಗಿ ರಾಜಕಾರಣ ನಡಿಸುವವರು'' ಎಂದು ನುಡಿದು, ಅದರಂತೆ ರಾಜಕಾರಣ ನಡಿಸುವವರು, ನಿಜವಾದ ರಾಜ ಕಾರಣ ಪುರುಷರಲ್ಲವೆಂತಲೇ ತಿಳಿಯಬೇಕು. ಅಂಥವರನ್ನು ಮರುಳರೆಂತಲೂ ಹೇಳಬಹುದು. ಇರಲಿ, ಹೀಗೆ ರುಸ್ತುಮ ಜಮಾಲನು ತಮ್ಮ ಜನರೊಡನೆ ಆಲೋಚಿಸುತ್ತಿರುವಾಗ, ಕಲ್ಯಾಣ ದಿಂದ ಹೊಸ ಸೈನ್ಯವು ತನ್ನ ಸಹಾಯಕ್ಕೆ ಬಂದ ಸುದ್ದಿಯು ಅಕಸ್ಮಾತ್ತಾಗಿ ಆತನಿಗೆ ಗೊತ್ತಾಗಲು, ತಾನು ಹೇಳಿಕಳಿಸದೆ ಹೀಗೆ ಒಮ್ಮಿಂದೊಮ್ಮೆ ಕಲ್ಯಾಣದಿಂದ ಹೊಸ ಸೈನ್ಯವು ಹೇಗೆ ಬಂತೆಂಬದರ ಗೂಢವನ್ನು ಆತನು ತಿಳಿಯದಾದನು.

ಹೀಗೆ ರಾಜಕಾರಣಗಳೆಲ್ಲ ಗೂಢವಾಗಿಯೇ ನಡೆಯುತ್ತಿರುವವು. ನಾವು ರಾಜಕಾರಣ ವನ್ನು ಸರಳತನದಿಂದ ನಡಿಸುವೆವೆಂಬುವವರು ಮೇಲೆ ಹೇಳಿದಂತೆ ಮರುಳೆ ಸರಿ; ಯಾಕಂದರೆ ''ದನವೊ ಮನವೊ'' ಎಂಬ ಲೋಕೋಕ್ತಿಯಂತೆ, ಒಟ್ಟಿನಲ್ಲಿ ಜನಸಮೂಹವು ಪಶುಸಮಾನ ವೆಂದೇ ತಿಳಿಯತಕ್ಕದ್ದು; ಯಾಕಂದರೆ, ಜನರಲ್ಲಿ ಸರಳ ಸ್ವಭಾವದವರಿರುವರು– ವಕ್ರ ಸ್ವಭಾದ ವರಿರುವರು; ಸತ್ಯವಾದಿಗಳಿರುವರು–ಅಸತ್ಯವಾದಿಗಳಿರುವರು; ಕಳ್ಳರಿರುವರು–ಸರಳರಿ ರುವರು; ಸಜ್ಜನರಿರುವರು–ದುರ್ಜನರಿರುವರು; ಒಟ್ಟಿಗೆ ''ಪಿಂಡಗಳಷ್ಟು ಪ್ರಕೃತಿಗಳು'' ಎಂಬಂತೆ, ವಿವಿಧ ಸ್ವಭಾವದ ಜನರೂ ಪ್ರಜೆಗಳಲ್ಲಿರುವರು; ಆದ್ದರಿಂದ ಅಂಥವರ ಸಂಗಡ ನಡೆದುಕೊಳ್ಳುವಾಗ, ''ಯೇ ಯಥಾಮಾಂ ಪ್ರಪದ್ಯಂತೇ ತಾಂ ಸ್ತಥೈವ ಭಜಾಮ್ಯಹಂ'' ಎಂಬ ಭಗವದುಕ್ತಿಯಂತೆ, ರಾಜನು ತನ್ನ ಪ್ರಜೆಗಳೊಡನೆ, ಯಾರು ಹೇಗೋ ಹಾಗೆ ಅವರ ಸಂಗಡ ತಾನು ನಡೆದುಕೊಳ್ಳಬೇಕಾಗುವದು; ಆದರೆ ಅಷ್ಟು ವ್ಯಕ್ತರೂಪಗಳನ್ನು ಕ್ಷಣಶಃ ಧರಿಸುವದು ಭಗವಂತನಂತೆ ರಾಜಕಾರಣ ಪುರುಷರಿಗೆ ಅಶಕ್ಯವಾಗಿರುವದರಿಂದ, ತಮ್ಮ ಆ ಕೊರತೆಯನ್ನು ಅವರು ತಮ್ಮ ಗೂಢತಂತ್ರದಿಂದ ಮುಚ್ಚಿಕೊಳ್ಳಬೇಕಾಗುವದು! ರಾಜನು ಪ್ರಜೆಗಳಿಗೆ ಸತ್ಯವಾದಿಯಾಗಿಯೂ, ಪ್ರೇಮಲನಾಗಿಯೂ, ಹಿತರಕ್ಷನಾಗಿಯೂ, ನ್ಯಾಯಿಯಾಗಿಯೂ, ಸರ್ವ ಸಮನಾಗಿಯೂ ತೋರಿದರೆ ಮಾತ್ರ ಪ್ರಿಯನಾಗುವನು; ಆದರೆ ಮೇಲೆ ಹೇಳಿದಂತೆ ವಿವಿಧ ಸ್ವಭಾವದ ಜನರಿಗೆಲ್ಲ ಸಮನಾಗಿಯೂ, ಪ್ರಿಯನಾಗಿಯೂ ನಡೆದುಕೊಳ್ಳುವದು ಅನಿಷ್ಟ ವಾದದ್ದರಿಂದ, ಆತನು ಶಾಸನ–ಸಂಧಿ–ವಿಗ್ರಹ ಮೊದಲಾದ ರಾಜಕಾರಣದಲ್ಲಿ ಸರ್ವರ ಹಿತಕ್ಕೆ ಲಕ್ಷಗೊಟ್ಟು, ಗೌಪ್ಯವನ್ನು ಕಾದುಕೊಳ್ಳಬೇಕಾಗುವದು. ಮುಂಜಾಗ್ರತೆಯೂ, ಕೆಲಸದಲ್ಲಿ ದುಡಕ ದಿರುವದೂ, ಮನಸ್ಸು ನೋಯದಂತೆ ಮೆಲ್ಲಮೆಲ್ಲನೆ ಪ್ರಜೆಗಳನ್ನು ರಮಿಸಿ ಕೆಲಸಮಾಡು

ವದೂ, ಕಾರ್ಯಸಾಧನಕ್ಕಾಗಿ ಒಳಗೊಂದು ಹೊರಗೊಂದು ರೂಪತಾಳುವದೂ ಮೊದಲಾದವು ರಾಜಕಾರಣದ ಗುಟ್ಟುಗಳಾಗಿರುವವು. ಅಂತೇ, ಜ್ಞಾನಿಗಳು ರಾಜಕಾರಣವನ್ನು ವೇಶ್ಯಾಸ್ತ್ರೀಯ ಜನತೆಗೆ ಹೋಲಿಸುತ್ತಿರುವರು. ಇಂತಹ ಗೂಢ ರಾಜಕಾರಣದ ಮೂರ್ತಿಯೇ ಆದದ್ದರಿಂದ ಶಿವಾಜಿಯು, ಮುಚ್ಚಿದ ಮುಷ್ಟಿ ಲಕ್ಷ ರೂಪಾಯಿಗಳದೆನ್ನುವಂತೆ, ಅತ್ಯಂತ ಬಲಿಷ್ಠರಾಗಿದ್ದ ಮುಸಲ್ಮಾನ ಬಾದಶಹರಿಗೂ ಭಾರಿಯಾಗಿ ತೋರುತ್ತಿದ್ದನು! ಮೊದಲೇ ಕೈಲಾಗದವರಿರೋಣ, ಮೇಲೆ ಸರಳತನ–ಸತ್ಯವಂತಿಕೆಗಳನ್ನು ತೋರಿಸಹೋಗೋಣ! ಇಂಥವರು ಸ್ವಪರಾಕ್ರಮದಿಂದ ಸರ್ವಥಾ ತಮ್ಮ ಕಾರ್ಯ ಸಾಧಿಸಿಕೊಳ್ಳಲಾರರು. ಇನ್ನು, ಇಂಥವರ ವಿರೋಧಿಗಳು ಎರಡನೆ ಯವರ ಇರುಕಿನಲ್ಲಿ ಸಿಕ್ಕು ಪೇಚಾಡುತ್ತಿರುವಾಗ, ಇವರ ಕಾರ್ಯವು ಸಾಧಿಸಿದರೆ ಸಾಧಿಸಬೇಕು. ಇಂತಹ ಪರಪುಷ್ಟರ ಮೇಲೆ ಸ್ವಪರ ಚಕ್ರಗಳ ರಕ್ಷಣದ ಮುಖ್ಯಜವಾಬದಾರಿಯು ಇಲ್ಲದಿರುವ ದರಿಂದ, ಪ್ರಜೆಗಳ ಗುಣಾವಗುಣಗಳ ತಾರತಮ್ಯದ ಪರಿವೆಯಿಲ್ಲದೆ, ತಮ್ಮ ಪರದತ್ತವಾದ ಅಧಿಕಾರವನ್ನು ನಡಿಸುವಾಗ, ತಮ್ಮ ಸ್ವರೂಪಜ್ಞಾನವಿಲ್ಲದೆ, ಬೇಕಾದಹಾಗೆ ದುಡುಕುವರು; ಸರ್ವರಿಗೂ ಹಿತವಾಗುವಂತೆ ನಡೆದುಕೊಳ್ಳುವ ಗಂಭೀರವಾದ ಧೋರಣವು ತಮಗೆ ತಿಳಿಯದ್ದ ರಿಂದ, ತಮ್ಮ ದುರಹಂಕಾರದ ಕುಕಲ್ಪನೆಗಳ ಬೆನ್ನು ಹತ್ತಿ ಪ್ರಜೆಗಳು ನೊಂದಾರು, ಬೆಂದಾರು ಎಂಬ ದಯಾದಾಕ್ಷಿಣ್ಯಗಳಿಲ್ಲದೆ, ಅಹಂಕಾರ ಮೋಹಿತರಾಗಿ, ದೀನ ರಕ್ಷಣದ ಏಕದೇಶಿಯ ಹಿತವನ್ನು ಮಾಡುವ ಹುರುಳಿಲ್ಲದ ಉದಾರ ಭಾವವನ್ನು ವ್ಯಕ್ತಮಾಡುತ್ತ ಮನಸೋಕ್ತವಾಗಿ ಪ್ರಜಾಶಾಸನ ಮಾಡಹೋಗುವರು. ಇಂಥವರು ಬರಬರುತ್ತ ಪ್ರಜಾನುರಾಗವನ್ನು ಕಳೆದು ಕೊಳ್ಳುತ್ತ ಕಳೆದುಕೊಳ್ಳುತ್ತ, ಕಡೆಗೆ ಪ್ರಜಾಪೀಡಕರ ಪಂಕ್ತಿಯಲ್ಲಿ ಕುಳಿತುಕೊಳ್ಳಬೇಕಾಗುವದು. ಆದರೆ ಈ ಪರಪುಷ್ಟರ ಸ್ವೇಚ್ಛೆಯ ಎಲ್ಲ ಕಾರ್ಯಗಳಿಗೆ ಅವರ ಪೋಷಕರ ಅನುಕೂಲತೆ ದೊರೆಯುವ ಸಂಭವವಿಲ್ಲದ್ದರಿಂದ, ಇವರ ಕಿಡಿಗೇಡಿತನಕ್ಕೆ ಕೆಲಮಟ್ಟಿಗೆ ಪ್ರತಿಬಂಧವುಂಟಾ ದರೆ ಆಗಬೇಕು; ಆದರೆ ಸ್ವಪರಾಕ್ರಮದಿಂದ ಸ್ವರಾಜ್ಯ ಸಂಪಾದಿಸುತ್ತಿರುವ ಶಿವರಾಯ ನಂಥವರು, ಇಂತಹ ಹುಡುಗಾಟಿಕೆಗಳಿಗೆ ಹೋಗದೆ, ತಮ್ಮ ನೆಲೆಯು ಯಾರಿಗೂ ತಿಳಿಯ ದಂತೆ, ಸರ್ವ ಪ್ರಜೆಗಳ ನಿಜವಾದ ಹಿತವು ಸಾಧಿಸುವಲ್ಲಿ ದೃಷ್ಟಿಯಿಟ್ಟು, ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳುವ ಧೀರ–ಗಂಭೀರ ವೃತ್ತಿಯನ್ನು ತಾಳಬೇಕಾಗುವದು. ಶಿವಾಜಿಯು ಇಂತಹ ಗಂಭೀರ ವೃತ್ತಿಯಿಂದ ನಡೆದುಕೊಳ್ಳುತ್ತಿದ್ದರಿಂದಲೇ ಆತನು ಮೇಲೆ ಹೇಳಿದಂತೆ ವಿಜಾಪುರದ ಮಹಮ್ಮದಶಹ, ದಿಲ್ಲಿಯ ಔರಂಗಜೇಬ ಇವರಂಥ ಮಹಾಪ್ರಬಲ ಬಾದಶಹರ ಹಣೆತಕ್ಕೂ ಹಣೆಯದೆ, ಪ್ರಸಂಗಬಂದಾಗ ತಾಗಿ–ಬಾಗಿ, ಪ್ರಸಂಗಬಂದಾಗ ಬಡಿದು–ಹೊಡೆದು ಸ್ವರಾಜ್ಯ ವನ್ನು ಸ್ಥಾಪಿಸಿದನು! ಇಂತಹ ಗಹನ ಮಾರ್ಗವು, ಶಿವಾಜಿಯಂಥ ತಲೆಗೊಟ್ಟು ಕಾರ್ಯ ಮಾಡುವ ಅಂಶಭೂತರಿಗೆ ಗೊತ್ತಾದೀತಲ್ಲದೆ, ಯಾವ ಜವಾಬದಾರಿಯ ಮರ್ಮವನ್ನೂ ಅರಿಯದ, ಕುಕಲ್ಪನೆಯ ಅಹಂಕಾರಿಗಳಾದ ಹಾದಿ–ಬೀದಿಗಳೊಳಗಿನ ಕಾಕ–ಪೋಕರ ಪಿಂಡಿಗೆ ಸರ್ವಥಾ ಗೊತ್ತಾಗಲಾರದು! ಅಂಥವರಿಗೆ ತಮ್ಮ ಗೌರವದ ಗುಟ್ಟು ಯಾತರಲ್ಲಿರುವ ದೆಂಬದೂ ತಿಳಿಯುವ ಸಂಭವವಿರುವದಿಲ್ಲವು!

# ಕುಟಿಲ ತಂತ್ರದ ಕೊರತೆ !

ಹೀಗೆ ಕಲ್ಯಾಣಕೋಟೆಯಿಂದ ಹೊಸ ಸೈನ್ಯವು ತನ್ನ ಸಹಾಯಕ್ಕೆ ತಾನಾಗಿ ಬಂದದ್ದರ ಕಾರಣವು ರುಸ್ತುಮ ಜಮಾಲನಿಗೆ ತಿಳಿಯದಿದ್ದರೂ, ಶಿವಾಜಿಯ ಅಂಜಿಕೆಯಿಂದ, ನಾನು ಕಲ್ಯಾಣಕ್ಕೆ ಸುರಕ್ಷಿತವಾಗಿ ಹೇಗೆ ಹೋದೇನೆಂದು ಚಿಂತಿಸುತ್ತಿದ್ದ ಆತನಿಗೆ, ಆ ಹೊಸ ಸೈನ್ಯದಿಂದ ತುಸು ಧೈರ್ಯಬಂದು, ಆತನು ಕೂಡಲೆ ತನ್ನ ಸೆರೆಯಲ್ಲಿದ್ದ ಮರಾಟರನ್ನು ಕಟ್ಟಿಕೊಂಡು ಕಲ್ಯಾಣಕ್ಕೆ ಹೊರಟುಬಿಟ್ಟನು. ಆದರೂ ಹಾದಿಯಲ್ಲಿ ಶಿವಾಜಿಯು ತನಗೆ ಎಲ್ಲಿ ಗಂಟು ಬೀಳುವನೋ ಎಂದು ಆತನು ಅಂಜಿಕೊಂಡೇ ಸಾಗಿದ್ದನು. ನಿಜವಾಗಿಯೆಂದರೆ, ರುಸ್ತುಮ ಜಮಾಲನು ಹೇಡಿಯೇ ಇದ್ದನೆಂದು ಹಿಂದೆ ಹೇಳಿದೆ; ಅದರಲ್ಲಿ ಶಿವಾಜಿಯ ಹೆಸರಿನ ವಿಲಕ್ಷಣವಾದ ದರ್ಪವು! ಶಿವಾಜಿಯು ಯಾವ ಕಾಲಕ್ಕೆ ಎಲ್ಲಿಂದ ಬರುವನೋ, ಏನು ಮಾಡುವನೋ ಎಂದು ಶೂರ ಮುಸಲ್ಮಾನರೂ ಅಂಜುತ್ತಿದ್ದರು; ಅಂದಬಳಿಕ ಹೇಡಿ ರುಸ್ತುಮ ಜಮಾಲನು ಅಷ್ಟು ಅಂಜುತ್ತಿರುವಲ್ಲಿ ವಿಶೇಷವೇನು ಇಲ್ಲವು; ಆದರೆ ಹಾದಿಯಲ್ಲಿ ಯಾವ ತೊಂದರೆಯೂ ಇಲ್ಲದೆ, ಆತನು ತನ್ನ ಪರಿವಾರದೊಡನೆ ಸುರಕ್ಷಿತವಾಗಿ ಕಲ್ಯಾಣಕ್ಕೆ ಮುಟ್ಟಿದನು; ಅದರಿಂದ ಆತನಿಗೆ ಸಮಾಧಾನವೂ ಆಯಿತು. ಆತನು ಕಲ್ಯಾಣಕ್ಕೆ ಹೋದಕೂಡಲೇ ಮುಲಾಣಾಹಯಾತಿಯನ್ನು ಕಂಡು, ಆತನಿಗೆ ನಡೆದ ಸಂಗತಿಯನ್ನೆಲ್ಲ ಹೇಳಿ, ''ನಾನು ಪತ್ರಬರಿಯದೆ ನೀವು ಸೈನ್ಯವನ್ನೇಕೆ ಕಳಿಸಿದಿರೆಂದು'' ಕೇಳಿದನು. ಅದಕ್ಕೆ ಮುಲಾಣಾ ಹಯಾತಿಯು–''ನೀವು ಸೈನ್ಯ ಕಳಿಸೆಂದು ಪತ್ರ ಬರೆದದ್ದರಿಂದಲೇ ನಾನು ಸೈನ್ಯವನ್ನು ಕಳಿಸಿದ್ದೇನೆ. ನನ್ನ ಗುರುತಿನ ನಿಮ್ಮ ಒಬ್ಬ ರಾವುತನೇ ಪತ್ರವನ್ನು ತಂದುಕೊಟ್ಟಿದ್ದರಿಂದ, ನಾನು ಸಹಾಯಕ್ಕಾಗಿ ದಂಡನ್ನು ಕಳಿಸಿಕೊಡಬೇಕಾಯಿತು. ಇದು ನೋಡಿರಿ ನಿಮ್ಮ ಪತ್ರವು.'' ಎಂದು ಹೇಳಿ, ಮುಲಾಣಾ ಹಯಾತಿಯು ರುಸ್ತುಮ ಜಮಾಲನ ಪತ್ರವನ್ನು ಆತನ ಕೈಯಲ್ಲಿ ಕೊಟ್ಟನು. ಅದನ್ನು ತಕ್ಕೊಂಡು ರುಸ್ತುಮ ಜಮಾಲನು ಓದಿ ನೋಡಲು, ಅದರಲ್ಲಿ– ''ಶಿವಾಜಿಯು ತನ್ನ ದೊಡ್ಡ ಸೈನ್ಯದೊಡನೆ ನನ್ನ ಮೇಲೆ ಸಾಗಿ ಬರುತ್ತಿರುವನು; ನಾನು ನಿಮ್ಮ ಮುಂದೆ ಹೇಳಿದಂತೆ ಮಹತ್ವದ ಜನರನ್ನು ಸೆರೆಹಿಡಕೊಂಡು ಬರುತ್ತಲಿದ್ದೇನೆ; ಕಾರಣ ಈ ಪತ್ರ ಮುಟ್ಟಿದ ದಿವಸವೇ ನನ್ನ ಸಹಾಯಕ್ಕಾಗಿ ಸೈನ್ಯವನ್ನು ಕಳಿಸಬೇಕು'' ಎಂದು ಬರೆದಿತ್ತು. ಪತ್ರದ ಅಕ್ಷರಗಳು ತನ್ನವೇ ಆಗಿದ್ದವು. ಅದರಿಂದ ರುಸ್ತುಮ ಜಮಾಲನು ಪರಮಾಶ್ಚರ್ಯಪಟ್ಟು, ಇದೇನು ಗೌಡ ಬಂಗಾಲವು? ಶಿವಾಜಿಯ ತಂತ್ರವು ಕಲ್ಯಾಣದ ಕೋಟೆಗೂ ಬಂದು ಮುಟ್ಟಿದೆಯಲ್ಲ!'' ಎಂದು ದಿಗಿಲುಬಿದ್ದು, ತನ್ನ ರಾವುತರನ್ನೆಲ್ಲ ಮುಲಾಣಾ ಹಯಾತಿಯ ಮುಂದೆ ಸಾಲಾಗಿ ನಿಲ್ಲಿಸಿ,– ''ನೋಡಿರಿ, ಇವರಲ್ಲಿ ನಿಮ್ಮ ಬಳಿಗೆ ಬಂದಿದ್ದ ರಾವುತನು ಯಾವನು ನೋಡಿ ಹೇಳಿರಿ'' ಎಂದು ಕೇಳಿದನು. ಆಗ ಮುಲಾಣಾ ಹಯಾತಿಯು ಎಲ್ಲರನ್ನೂ ಪರೀಕ್ಷಿಸಿ ನೋಡಿ– ''ಇಗೋ, ಇದೇ ರಾವುತನೇ ನನ್ನ ಬಳಿಗೆ ಬಂದಿದ್ದನು; ಇವನ ಕುದುರೆಯು ಅಚ್ಚ ಬಿಳಿಯ ಬಣ್ಣದ್ದಿತ್ತು; ಇವನೇ ನನಗೆ ಪತ್ರವನ್ನು ಕೊಟ್ಟವನು'' ಎಂದು ಹೇಳಿದನು. ಆಗ ರುಸ್ತುಮ ಜಮಾಲನು ಆ ರಾವುತನಿಗೆ– ''ಮುಬ್ರುಂಖಾ,

ನೀನು ಸುಬೇದಾರ ಸಾಹೇಬರಿಗೆ ಪತ್ರವನ್ನು ಕೊಟ್ಟೆಯಾ,'' ಎಂದು ಕೇಳಲು, ಮುಖ್ತುಂ ಖಾನು–ಇಲ್ಲ ಸರಕಾರ, ನಾನು ಪತ್ರವನ್ನು ಸುಬೇದಾರರ ಕಡೆಗೆ ತಕ್ಕೊಂಡು ಬಂದಿರುವದೇ ಇಲ್ಲ; ಮೇಲಾಗಿ ನನ್ನ ಕುದುರೆಯು ಅಚ್ಚಕೆಂಪು ಬಣ್ಣದ್ದು, ಖಾವಿಂದ, ತಾವೇ ನನ್ನನ್ನೂ, ಜಮಾಲ ಹುಸೇನನನ್ನೂ ಚೌಕಗ್ರಾಮಕ್ಕೆ ಲಗ್ನದ ಸುದ್ದಿಯನ್ನು ತಿಳಕೊಂಡು ಬರಲಿಕ್ಕೆ ಕಳಿಸಿದ್ದಿರಲ್ಲವೇ? ಅಂದಬಳಿಕ ನಾನು ಕಲ್ಯಾಣಕ್ಕೆ ಪತ್ರತಕ್ಕೊಂಡು ಬರುವ ಬಗೆಯೇನು? ಕೇಳಿರಿ, ಬೇಕಾದರೆ ಜಮಾಲ ಹುಸೇನನನ್ನೂ ಕೇಳಿರಿ, ಬೇರೆ ರಾವುತರನ್ನೂ ಕೇಳಿರಿ; ''ನಾನು ಚೌಕಗ್ರಾಮಕ್ಕೆ ಹೋಗಿದ್ದೆನು, ನನ್ನ ಕುದುರೆಯು ಅಚ್ಚಕೆಂಪು ಬಣ್ಣದ್ದು'' ಎಂಬದರ ನಂಬಿಗೆ ಗಾಗಿ ಬೇಕಾದವರನ್ನು ಕೇಳಿರಿ. ಎಂದು ಹೇಳಲು, ಉಳಿದ ರಾವುತರೂ ಮುಲಾಣಾ ಹಯಾತಿಗೆ– ''ಹೌದು ಹಜರತ್, ಮುಖ್ತುಂಖಾನೂ, ಜಮಾಲ ಹುಸೇನಿಯೂ ಚೌಕಗ್ರಾಮಕ್ಕೆ ಹೋಗಿ ಲಗ್ನದ ಸುದ್ದಿಯನ್ನು ತಿಳಕೊಂಡು ಬಂದರು; ನಮಗೆ ಪೂರಾ ಗೊತ್ತಿದೆ. ಮುಖ್ತುಂ ಖಾನನ ಕುದುರೆಯು ಕೆಂಪು ಬಣ್ಣದ್ದಿರುವದು ನಿಜವು'' ಎಂದು ಹೇಳಿದರು; ಅದರಂತೆ ಜಮಾಲ ಹುಸೇನಿಯು– ''ಹೌದು ಖಾವಿಂದ. ನಾನು ಮುಖ್ತುಂಖಾನೂ ಕೂಡಿಯೇ ಚೌಕಗ್ರಾಮಕ್ಕೆ ಹೋಗಿದ್ದೆವು'' ಎಂದು ಹೇಳಿದನು; ಅದಕ್ಕೆ ರುಸ್ತುಮ ಜಮಾಲನೂ ಒಪ್ಪಿದನು; ಅಂದಬಳಿಕ ''ಪತ್ರತಂದಿದ್ದ ರಾವುತನು ಎಲ್ಲಿಂದ ಬಂದಿರಬಹುದು? ಎಂಬ ಮುಂಡಿಗೆಯು, ಯಾರಿಗೂ ಒಡೆಯಲಿಕ್ಕೆ ಬಾರದ್ದಾಗಿ ಎಲ್ಲರ ಮುಂದೆ ಬಿದ್ದು ಬಿಟ್ಟಿತು! ಇದೆಲ್ಲ ಶಿವಾಜಿಯ ಗೂಢ ತಂತ್ರ ವಾಗಿರಬೇಕೆಂದು ಎಲ್ಲರೂ ತರ್ಕಿಸುತ್ತಿರುವಾಗ, ತಂತ್ರಗಾರನಾದ ಶಿವಾಜಿಯು ಇನ್ನೂ ಯಾವ ಯಾವ ತಂತ್ರಗಳನ್ನು ಒಡ್ಡಿರುವನೋ ಏನೋ! ನಮ್ಮ ಸೆರೆಯಲ್ಲಿರುವವರು ಶಿವಾಜಿಯ ತಂತ್ರಕ್ಕೆ ಸಂಬಂಧಿಸಿದವರಿರಬಹುದೋ ಏನೋ! ಮೊನ್ನೆ ಹುಲ್ಲು ಕೂಡಿಸುವ ಗುತ್ತಿಗೆ ಹಿಡಿದಿರುವ ಗೌಸು ದಲಾಲನು, ಶಿವಾಜಿಯ ತಂತ್ರಕ್ಕೆ ಒಳಗಾದವನಿರಬಹುದೋ ಹೇಗೋ! ಶಿವಾಜಿಯ ಗುಪ್ತಚಾರರು ವೇಷಾಂತರದಿಂದ ಎಲ್ಲ ಕಡೆಯಲ್ಲಿ ಹಬ್ಬಿರುವರೆಂದು ಹೇಳುವರು. ಶಿವಾಜಿಯ ಚಾರಚಕ್ಷುವು ಅತ್ಯಂತ ಸೂಕ್ಷ್ಮವಾಗಿರುವದಂತೆ, ಅಂದಬಳಿಕ ಯಾರ ನಂಬಿಗೆ ಯನ್ನು ಯಾರು ಹಿಡಿಯಬೇಕು? ಎಂಬಿವೇ ಮೊದಲಾದ ವಿಚಾರಗಳಿಂದ ಎಲ್ಲರೂ ತರ್ಕ ವಿತರ್ಕಗಳನ್ನು ಮಾಡುತ್ತಿರುವಾಗ, ಗೌಸುದಲಾಲನ ಸಂಶಯ ಬಂದಿದ್ದ ಒಬ್ಬ ಮನುಷ್ಯನು ಮುಲಾಣಾ ಹಯಾತಿಯನ್ನು ಕುರಿತು– ''ಖಾವಿಂದ, ಏನೋ ಚಮತ್ಕಾರವಿದೆ! ಮೊನ್ನೆ ನೀವು ಗೌಸು ದಲಾಲನನ್ನು ದನ–ಕುದುರೆಗಳಿಗೆ ಹುಲ್ಲು ಸಂಗ್ರಹಿಸುವದಕ್ಕಾಗಿ ಇಟ್ಟುಕೊಂಡಿರು ವಿರಲ್ಲ, ಅವರನ್ನು ಚನ್ನಾಗಿ ಪರೀಕ್ಷಿಸಿದಿರಾ'' ಎಂದು ಕೇಳಲು, ರುಸ್ತುಮ ಜಮಾಲನು– ಸುಬೇದಾರ ಸಾಹೇಬ, ಜನರನ್ನು ಚನ್ನಾಗಿ ಪರೀಕ್ಷೆಮಾಡಿ ಇಟ್ಟುಕೊಳ್ಳಿರಿ. ಬೆಳ್ಳಗೆ ಕಾಣುವ ದೆಲ್ಲ ಹಾಲೆಂದು ತಿಳಿಯಬೇಡಿರಿ. ನೀವು ಬಹಳ ಸರಳ ಸ್ವಭಾವದವರಾದದ್ದರಿಂದ ಹೇಳುತ್ತೇನೆ; ಆ ದಲಾಲನನ್ನು ಪೂರಾ ಪರೀಕ್ಷಿಸಿ ಇಟ್ಟುಕೊಂಡಿರುವಿರಷ್ಟೇ?

ಮುಲಾಣಾ ಹಯಾತಿಯು ಒಳ್ಳೇ ಶೂರನೂ, ಹೆಸರಾದ ಮುತ್ಸದ್ದಿಯೂ ಇದ್ದರೂ, ಕೇವಲ ಸರಳ ಸ್ವಭಾವದವನಿದ್ದನೆಂದು ಹಿಂದೆ ಹೇಳಿದೆ. ಕುಟಿಲತನವು ಆತನಿಗೆ ಸರ್ವಥಾ

ಸೇರುತ್ತಿದ್ದಿಲ್ಲ; ಕುಟಿಲತನ ಮಾಡಲಿಕ್ಕೆ ಆತನಿಗೆ ಬರುತ್ತಿದಿಲ್ಲವೆಂತಲೂ ಹೇಳಬಹುದು; ಇದು ಶಿವಾಜಿಯೊಡನೆ ಸಂಬಂಧವಿಟ್ಟುಕೊಂಡಿದ್ದ ಆ ಮುಲಾಣಾ ಹಯಾತಿಯಲ್ಲಿಯದೊಂದು ದೊಡ್ಡ ಕೊರತೆಯಂತಲೇ ತಿಳಿಯತಕ್ಕದ್ದು. ರಾಜಕಾರಣ ಪುರುಷರು ಪ್ರಸಂಗ ಬಂದಹಾಗೆ ಕುಟಿಲತನದಿಂದ, ಸರಳತನ ದಿಂದ, ನಡಿಯುವದರಲ್ಲಿ ಪ್ರವೀಣರಾಗಿರಬೇಕಾಗುವದು. ಭಾರತ ಕಾಲದಲ್ಲಿ ಕುಟಿಲತನದಲ್ಲಿ ಪ್ರಸಿದ್ಧನಾಗಿದ್ದ ಶಕುನಿಯೊಡನೆ, ಧರ್ಮಮೂರ್ತಿಯಾಗಿದ್ದ ಧರ್ಮರಾಜನು ಕೇವಲ ಶುದ್ಧ ಸರಳತನದಿಂದ ನಡಕೊಂಡದ್ದರಿಂದ, ರಾಜ್ಯಭ್ರಷ್ಟನಾಗ ಬೇಕಾಯಿತು! ಈ ಸೃಷ್ಟಿಯೇ ಸರಳತನ–ಕುಟಿಲತನ ಮೊದಲಾದ ಸುಷ್ಟ–ದುಷ್ಟಗಳಾದ ಹಲವು ದ್ವಂದ್ವಗಳ, ಅಂದರೆ ಜೋಡಿಗಳ ಸರಿಬೆರಿಕೆಯಿಂದ ಆಗಿರುವದರಿಂದ, ಸೃಷ್ಟಿವ್ಯವ ಹಾರಾಸಕ್ತರಾದವರೂ, ಸೃಷ್ಟಿಯಲ್ಲಿಯ ವಿವಿಧ ವಿಷಯಗಳ ಸವಿಗಂಡವರೂ ಪ್ರಸಂಗ ಬಂದಹಾಗೆ ಆದಷ್ಟು ಎಚ್ಚರದಿಂದ ಇದ್ದು, ತಮ್ಮ ನಾಶವಾಗದಂತೆಯಾದರೂ ಪ್ರಸಂಗದಲ್ಲಿ ಆ ಕುಟಿಲತನವನ್ನು ಇಲ್ಲವೆ, ಅನ್ಯರ ಕುಟಿಲತನವನ್ನು ತಿಳಿದುಕೊಳ್ಳುವ ಯೋಗ್ಯತೆಯವ ರಾದರೂ ಆಗಿರಬೇಕಾಗುವದು. ದರ್ಮರಾಜನಂತೆ ಕೇವಲ ಸರಳರೀತಿಯಿಂದ ನಡೆದು ಕೊಳ್ಳುವವರು. ದೇವರ ಕೃಪೆಗೆ ಪಾತ್ರರಾಗಬಹುದು, ಅಂಥವರು ಸೃಷ್ಟಿಯ ವಿಷಯ ಸುಖ ವನ್ನು ಕಾಲಿನಿಂದ ಒದ್ದು ಬಿಟ್ಟಿರುವರು; ಅಂಥವರಿಗೇ ಅದು ಚಂದ! ಆದರೆ ಹೊನ್ನು–ಹೆಣ್ಣು–ಮಣ್ಣುಗಳಿಗೆ ಮರುಳಾದವರು ಕೇವಲ ಸರಳತನದಿಂದ ನಡೆದುಕೊಂಡರೆ, ಇದ್ದದ್ದನ್ನೂ ಕಳಕೊಂಡು ಪಶ್ಚಾತ್ತಾಪಕ್ಕೆ ಗುರಿಯಾಗಬೇಕಾಗುವದು. ಇರಲಿ, ಮುಲಾಣಾ ಹಯಾತಿಯು ರುಸ್ತುಮ ಜಮಾಲನ ಪ್ರಶ್ನೆಕ್ಕೆ ತಟ್ಟನೆ ಉತ್ತರ ಕೊಡಲಾರದೆ, ಸ್ವಲ್ಪ ವಿಚಾರಿಸಿ ಆತನನ್ನು ಕುರಿತು–

ಮುಲಾಣಾ ಹಯಾತಿ–ರುಸ್ತುಮ ಜಮಾಲಸಾಹೇಬ, ಗೌಸು ದಲಾಲನನ್ನು ಪರೀಕ್ಷಿಸುವದೇನು? ಆತನು ಮುಸಲ್ಮಾನನಿರುವನಲ್ಲವೆ? ಮುಸಲ್ಮಾನರು ಮುಸಲ್ಮಾನರನ್ನು ಠಕ್ಕಿಸುವದುಂಟೆ?

ರುಸ್ತುಮ– ನೀವು ಈ ಯುಗದವರಲ್ಲ, ಇದು ಕಲಿಯುಗವು! ಈಗ ಮಗನು ತಂದೆಯನ್ನು ಠಕ್ಕಿಸುವನು– ತಂದೆಯು ಮಗನನ್ನು ಠಕ್ಕಿಸುವನು, ಗಂಡನು ಹೆಂಡತಿಯನ್ನು ಠಕ್ಕಿಸುವನು–ಹೆಂಡತಿಯು ಗಂಡನನ್ನು ಠಕ್ಕಿಸುವಳು. ಈ ಕಾಲದಲ್ಲಿ ಯಾರನ್ನು ಯಾರು ನಂಬುವಹಾಗಿಲ್ಲ, ತಮ್ಮ ಎಚ್ಚರದಲ್ಲಿ ತಾವಿರಬೇಕು. ಗೌಸು ದಲಾಲನು ವೇಷಧಾರಿ ಮುಸಲ್ಮಾನನಾಗಿದ್ದರೆ? ಅಥವಾ ಶಿವಾಜಿಯ ಜನರು ಹೇರಳ ಲಂಚ ಕೊಟ್ಟು ಒಡಕೊಂಡಿದ್ದ ಮುಸಲ್ಮಾನನಾಗಿದ್ದರೆ?

ಮುಲಾಣಾ ಹಯಾತಿ– ಹೌದು, ನಿಮ್ಮ ಸಂಶಯವು ಸರಿಯಾದದ್ದು; ಆದರೆ ಈಗ ಹೇಗೆ ಮಾಡಬೇಕು? ಕಲ್ಯಾಣದ ಸುಬೆಯೊಳಗಿನ ಜನರೆಲ್ಲ ನಮಗೆ ಹುಲ್ಲು ಕೊಡದಂತೆ ಕಟ್ಟು ಮಾಡಿಕೊಂಡಿರುವಂತೆ ತೋರುತ್ತದೆ; ಈ ಕೆಲಸದಲ್ಲಿ ಅವರು ತಮ್ಮ ಒಳಜಗಳವನ್ನು ಮರೆತು ಒಕ್ಕಟ್ಟಾಗಿರುವರು; ಆದ್ದರಿಂದ ನಮಗೆ ಯಾರೂ ಹುಲ್ಲು ಕೊಡಲೊಲ್ಲರು; ನಮ್ಮ ದೊಡ್ಡ ಸೈನ್ಯಕ್ಕೆ ಸಾಲುವಷ್ಟು ಧಾನ್ಯಸಂಗ್ರಹವಿಲ್ಲ; ಹೊಟ್ಟು ಮೇವಿನ ಸಂಗ್ರಹವಿಲ್ಲ; ಅಂದಬಳಿಕ

ನಾವು ಸುಮ್ಮನೆ ಕೂತುಬಿಟ್ಟರೆ ಹೇಗೆ ನಡೆದೀತು? ನೀವು ಅತ್ತ ಹೋದಬಳಿಕ ನಾನು ಇತ್ತ ವಿಚಾರಮಾಡುತ್ತ ಕುಳಿತಿದ್ದೆನು, ಅಷ್ಟರಲ್ಲಿ ನಮ್ಮ ಒಬ್ಬ ನಂಬಿಗೆಯ ಸೇವಕನು ಬಂದು, ನನ್ನ ವಿಚಾರಮಗ್ನತೆಯ ಕಾರಣವನ್ನು ತಿಳಿದು ನನಗೆ– ''ಖಾವಿಂದ, ಇದಕ್ಕೇಕೆ ಇಷ್ಟು ಚಿಂತೆ! ನನ್ನ ಗುರುತಿನ ಒಬ್ಬ ದಲಾಲನು ಇದೇ ಕಲ್ಯಾಣಪಟ್ಟಣದಲ್ಲಿರುವನು, ಆತನು ಅಚ್ಚ ಮುಸಲ್ಮಾನನು; ಬಹಳ ನಂಬಿಗೆಯವನು; ನಮ್ಮ ಬಾದಶಹರ ಭಕ್ತನು; ಇಸ್ಲಾಮದ ಅಭಿಮಾನಿಯು'' ಎಂದು ಹೇಳಿ, ನನಗೆ ಆ ಗೌಸು ದಲಾಲನ ಗಂಟು ಹಾಕಿಕೊಟ್ಟಿರುವನು.

ರುಸ್ತುಮ ಜಮಾಲ– ಗೌಸು ದಲಾಲನು ನಿಜವಾದ ಮುಸಲ್ಮಾನನಿರುವನೆಂಬದನ್ನಾದರೂ ಪರೀಕ್ಷಿಸುವಿರಾ?

ಮುಲಾಣಾ ಹಯಾತಿ– ಅದನ್ನೇನು ಪರೀಕ್ಷೆ ಮಾಡುವದು? ಆತನಿಗೆ ಮುಸಲ್ಮಾನರಂತೆ ಗಡ್ಡಗಳಿವೆ; ಆತನು ದಿನಾಲು ಹೊತ್ತು ಹೊತ್ತಿಗೆ ತಪ್ಪದೆ ನಮಾಜು ಮಾಡುತ್ತಾನೆ; ಉತ್ತಮ ರೀತಿಯಿಂದ ಮುಸಲ್ಮಾನೀ ಮಾತಾಡುತ್ತಾನೆ; ಅಂದಬಳಿಕ ಆತನನ್ನು ಮತ್ತೆ ಯಾವ ರೀತಿಯಿಂದ ಪರೀಕ್ಷಿಸಬೇಕು?

ರುಸ್ತುಮ ಜಮಾಲ– ಖಾನಸಾಹೇಬ, ವೇಷಧಾರಿ ಮುಸಲ್ಮಾನರೂ ಇಷ್ಟು ಕೆಲಸ ಮಾಡುವರು. ವೇಷಧಾರಿಗಳನ್ನು ತಯಾರಿಸುವ ಒಂದು ಶಾಲೆಯೇ ಶಿವಾಜಿಯಲ್ಲಿರುವದಂತೆ!

ಮುಲಾಣಾ ಹಯಾತಿ– ಹಾಗಾದರೆ ಇದರ ಪರೀಕ್ಷೆ ಹೇಗಾಗಬೇಕು?

ರುಸ್ತುಮ ಜಮಾಲ– ನಮ್ಮ ಮುಸಲ್ಮಾನರ ಅನ್ನವನ್ನು ಗೌಸು ದಲಾಲನು ಉಣ್ಣುವನೇ?

ಮುಲಾಣಾ ಹಯಾತಿ– ಹಾಹಾ! ಈಗ ಮನಸ್ಸಿನಲ್ಲಿ ಬಂದಿತು. ಇದನ್ನು ನಾನು ಅವಶ್ಯವಾಗಿ ಪರೀಕ್ಷಿಸುವೆನು. ಇಷ್ಟು ಪರೀಕ್ಷಿಸಿಬಿಟ್ಟರೆ ತೀರಿತಷ್ಟೆ?

ರುಸ್ತುಂ ಜಮಾಲ– ಇಷ್ಟರಿಂದ ತೀರಲಿಲ್ಲ, ಗೌಸು ದಲಾಲನ ಜನರು ತರುವ ಹುಲ್ಲು ಹೊರೆಗಳಲ್ಲಿ, ಕತ್ತಿ-ಕಠಾರಿ ಮೊದಲಾದವೇನೂ ಇರುವದಿಲ್ಲವೆಂಬದನ್ನು ಪರೀಕ್ಷಿಸುವಿರಾ?

ಮುಲಾಣಾ ಹಯಾತಿ– ಇಲ್ಲ, ಪರೀಕ್ಷಿಸಿಲ್ಲ. ಇಂದೇ ಅದರ ಪರೀಕ್ಷೆ ಮಾಡಿಬಿಡೋಣ. ರುಸ್ತುಮ ಜಮಾಲ, ನಿಮ್ಮ ಬುದ್ಧಿಗೆ ಬೆಲೆ ಇಲ್ಲ; ನನಗೆ ಈ ಸಂಶಯವೇ ಬಂದಿದ್ದಿಲ್ಲ, ಇಂದು ನೂರಾರು ಹುಲ್ಲುಹೊರೆಗಳು ಬರತಕ್ಕವವೆ; ಯಾಕಂದರೆ, 'ಇನ್ನು ದಿನಾಲು ಬಹಳ ಬಹಳ ಹೊರೆಗಳನ್ನು ತಂದು, ನಿಮ್ಮ ವರ್ಷದ ಹುಲ್ಲನ್ನು ಬೇಗನೆ ಕೂಡಿಸಿಬಿಡುವೆನು; ದಯಮಾಡಿ ದುಡ್ಡುಮಾತ್ರ ನನಗೆ ಒಮ್ಮೆಲೆ ಕೊಡಿರಿ.'' ಎಂದು ಗೌಸು ದಲಾಲನು ಹೇಳಿದ್ದಾನೆ.

ಈ ಮೇರೆಗೆ ಸಂಭಾಷಣವಾಗುತ್ತಿರಲು, ಹುಲ್ಲುಹೊರೆಗಳು ಬಂದ ಸುದ್ಧಿಯನ್ನು ಸೇವಕನು ಹೇಳಿದನು. ಕೂಡಲೆ ರುಸ್ತುಮ ಜಮಾಲನೂ, ಮುಲಾಣಾ ಹಯಾತಿಯೂ ಆಳುಗಳು ಹೊರೆಯಿಳಿಸಿರುವಲ್ಲಿಗೆ ಹೋದರು. ಇನ್ನೂರು ಜನರು ಹೊರೆ ಇಳಿಸಿಕೊಂಡು, ಗೌಸು ದಲಾಲನ ಹಾದಿಯನ್ನು ನೋಡುತ್ತ ಕುಳಿತಿದ್ದರು. ದಲಾಲನು ಬಾರದೆ ಸುಬೇದಾರರೇ ಬಂದದ್ದನ್ನು ನೋಡಿ, ಎಲ್ಲರೂ ಎದ್ದುನಿಂತು ಬಹು ವಿನಯದಿಂದ ಮುಜುರೆಮಾಡಿ, ಮುಲಾಣಾ

ಹಯಾತಿಯ ಅಪ್ಪಣೆಯಾಗಲು ತಮ್ಮ ತಮ್ಮ ಹೊರೆಗಳ ಬಳಿಯಲ್ಲಿ ಕುಳಿತುಕೊಂಡರು. ಅಷ್ಟರಲ್ಲಿ ಗೌಸು ದಲಾಲನೂ ಅಲ್ಲಿಗೆ ಬಂದು, ಸುಬೇದಾರನಿಗೂ, ರುಸ್ತುಮ ಜಮಾಲನಿಗೂ ಬಹು ವಿನಯದಿಂದ ಸಲಾಮುಮಾಡಿ ಅವರನ್ನು ಕುರಿತು–

ಗೌಸು ದಲಾಲ– ಸರಕಾರ, ತಾವೇ ದಯಮಾಡಿಸಿದಿರಲ್ಲ; ಈ ಗುಲಾಮನಿಗೆ ಮತ್ತೇನು ಅಪ್ಪಣೆಯಾಗುವದು?

ಸುಬೇದಾರ– ಮತ್ತೇನು ಅಪ್ಪಣೆಯಿಲ್ಲ, ನಮ್ಮ ರುಸ್ತುಮ ಜಮಾಲ ಸಾಹೇಬರು ಇಂದೇ ಬಂದರು. ನೀವು ಇಮಾನಿಯಿಂದ ಕೆಲಸ ಮಾಡುತ್ತಿದ್ದು, ಬೇಗನೆ ವರ್ಷದ ಹುಲ್ಲು ಕೂಡಿಸಿ ನಮ್ಮ ದೊಡ್ಡ ತೊಂದರೆಯನ್ನು ದೂರ ಮಾಡಿದಿರೆಂದು ನಾನು ಅವರಿಗೆ ಹೇಳಿದ್ದರಿಂದ, ಸಂತೋಷ ಪಟ್ಟು ಅವರು ನಿಮ್ಮನ್ನು ನೋಡಬೇಕೆಂದು ಬಂದಿದ್ದಾರೆ. ನಿಜವಾಗಿಯೂ ನಿಮ್ಮಿಂದ ನಮಗೆ ದೊಡ್ಡ ಸಹಾಯವಾದಂತಾಯಿತು. ಇಲ್ಲದಿದ್ದರೆ, ನಾವು ಬಲಾತ್ಕಾರದಿಂದ ಹುಲ್ಲು ಕೂಡಿಸುವಾಗ, ಜನರಿಗೂ ತ್ರಾಸವಾಗುತ್ತಿತ್ತು; ನಮಗೂ ತೊಂದರೆಯಾಗುತ್ತಿತ್ತು. ನಿಮ್ಮಿಂದ ಅದೆಲ್ಲ ತಪ್ಪಿ, ಗದ್ದಲವಿಲ್ಲದಂತೆ ಕೆಲಸವಾಯಿತು.

ರುಸ್ತುಮ ಜಮಾಲ– ಗೌಸು ಸಾಹೇಬ, ಮೇಲಿನಂತೆ ಹೊರೆಗಳ ಒಳಗೂ ಚಲೋ ಹುಲ್ಲು ಇರುವದಲ್ಲವೆ?

ಗೌಸು– ಉಚ್ಚಿಸಿ ನೋಡಿರಿ ಸರಕಾರ, ಎಲ್ಲ ಹೊರೆಗಳನ್ನು ಉಚ್ಚಿಸಿ ನೋಡಿಬಿಡಿರಿ! ಎಲೇ, ಉಚ್ಚಿರೋ ಎಲ್ಲ ಹೊರೆಗಳನ್ನು! ಖಾವಿಂದರು ಹುಲ್ಲು ನೋಡಲಿ!

ಈ ಮೇರೆಗೆ ನುಡಿದಕೂಡಲೆ, ಆ ಇನ್ನೂರು ಜನರೂ ಹೊರೆಗಳನ್ನು ಬಡಬಡ ಉಚ್ಚಿ ಹುಲ್ಲು ಹರವಿಬಿಟ್ಟರು; ಆದರೆ ಒಳಗೆ ಕತ್ತಿ ಕಟಾರಿಗಳಾಗಲಿ, ಕೆಟ್ಟ ಹುಲ್ಲಾಗಲಿ ಇದ್ದಿಲ್ಲ! ಇದನ್ನು ನೋಡಿ ರುಸ್ತುಮ ಜಮಾಲನು– ''ಶಾಬಾಸ! ಹುಲ್ಲು ಬಹಳ ಚನ್ನಾಗಿದೆ; ಇನ್ನು ಹುಲ್ಲು ಬಣವಿಗೆ ಹಾಕಿಬಿಡಿರಿ,'' ಎಂದು ಹೇಳಲು, ಆಳುಗಳು ತಮ್ಮ ತಮ್ಮ ಹೊರೆಯೊಳಗಿನ ಕಲ್ಲಾಬಿಲ್ಲಿಯಾಗಿ ಹೋಗಿದ್ದ ಹುಲ್ಲು ಸಿವಡುಗಳನ್ನು ಕಟ್ಟಿ ಅವನ್ನು ಬಣವಿಗೆ ಒಟ್ಟುವದ ರೊಳಗೆ ಹೊತ್ತು ಮುಣುಗಿ ಕತ್ತಲಾಗಿ ಹೋಯಿತು. ಇತ್ತ ಗೌಸುವು ಸುಬೇದಾರನನ್ನು ಕುರಿತು–

ಗೌಸು– ಖಾವಿಂದ, ಹೀಗೆ ದಿನಾಲು ಹೊರೆಗಳನ್ನು ಉಚ್ಚಿಸಿ ನೋಡಲಿಕ್ಕೆ ಒಬ್ಬ ಹುಷಾರ ಮನುಷ್ಯನನ್ನು ನಿಯಮಿಸಿಬಿಟ್ಟರೆ, ನಾನು ನಿಶ್ಚಿಂತನಾಗುವೆನು; ಯಾಕಂದರೆ, ನಾನು ಮನೆಯಲ್ಲಿದ್ದು ಒಮ್ಮೊಮ್ಮೆ ಹುಲ್ಲು ತರಿಸುತ್ತಿರುತ್ತೇನೆ, ಅಂದಬಳಿಕ ಆಳುಗಳ ಕೆಲಸ, ಅವರು ಕೆಟ್ಟ ಹುಲ್ಲನ್ನೂ ಹಾಕಿಕೊಂಡು ಬರುವ ಸಂಭವವಿದೆ. ಖಾವಿಂದ, ಇನ್ನೊಂದು ಸೂಕ್ಷ್ಮ ಸಂಗತಿಯನ್ನು ತಮಗೆ ಬುದ್ಧಿಪೂರ್ವಕವಾಗಿ ಹೇಳುತ್ತೇನೆ; ಈಗ ಕಾಫರನಾದ ಶಿವಾಜಿಯ ಪುಂಡಾಟಿಕೆಯು ಎಲ್ಲ ಕಡೆಗೂ ನಡೆದಿರುವದು. ಆದ್ದರಿಂದ ಆತನ ತಂತ್ರವು ಯಾರಿಗೂ ತಿಳಿಯುವದಿಲ್ಲ, ಅಂದಬಳಿಕ ಪ್ರಸಂಗವಶಾತ್ ಈ ಆಳುಗಳು ನನಗೂ ಗೊತ್ತಾಗ ದಂತೆ ಹೊರೆಗಳಲ್ಲಿ ಮತ್ತೇನಾದರೂ ಹಾಕಿಕೊಂಡು ಎಲ್ಲರನ್ನು ಮೋಸಗೊಳಿಸಬಹುದು; ಆದ್ದರಿಂದ ಯಾವ ಬಗೆಯಿಂದಲೇ ಆಗಲಿ, ದಿನಾನು ಹೀಗೆ ಹೊರೆಗಳನ್ನು ಶೋಧಿಸಿಯೇ

ತೀರಬೇಕೆಂದು ಬೇಡಿಕೊಳ್ಳುತ್ತೇನೆ; ಈ ಮಾತನ್ನು ಬುದ್ಧಿಪೂರ್ವಕವಾಗಿ ನಾನೇ ಖಾವಿಂದರಿಗೆ ಅರಿಕೆ ಮಾಡಿಕೊಳ್ಳುವವನಿದ್ದೆನು!

ಮುಲಾಣಾ ಹಯಾತಿ– ಯೋಗ್ಯ ವಿಚಾರ; ಆದರೆ ದಿನಾಲು ಹೀಗೆ ಶೋಧಿಸಿದರೆ, ಬಣಿವಿಯ ಒಟ್ಟಲಿಕ್ಕೆ ಎಷ್ಟು ಹೊತ್ತಾಗುವದಲ್ಲ!

ಗೌಸು– ಆ ಕೆಲಸಕ್ಕಾಗಿ ನಂಬಿಗೆಯ ಒಬ್ಬ ಹುಷಾರ ಮನುಷ್ಯನನ್ನೇ ನಿಯಮಿಸಿ ಬಿಟ್ಟಿರುತ್ತದಲ್ಲ ಸರಕಾರ! ಎಷ್ಟು ಹೊತ್ತಾದರೂ ಆತನು ಆ ಕೆಲಸ ಮಾಡಲೇಬೇಕು; ಯಾರ ಉಪಕಾರಕ್ಕೆ ಮಾಡುವನು? ಸರಕಾರ, ಕಾಫರರಾದ ಮರಾಟರು ಏನು ಮಾಡಿಯಾರು ಏನು ಮಾಡಲಿಕ್ಕಿಲ್ಲವೆಂಬದನ್ನು ಹೇಳಲಾಗುವದಿಲ್ಲ; ನಾವೆಲ್ಲರೂ ಪೂರಾ ಎಚ್ಚರದಿಂದ ನಡೆಯ ಬೇಕಾಗುವದು; ಯಾಕಂದರೆ, ಕಲ್ಯಾಣದ ಸುಭೆಯಲ್ಲಿ ನಮ್ಮ ಅಮಲು ಇನ್ನೂ ಪೂರಾ ಕುಳಿತಿರುವದಿಲ್ಲ!

ರುಸ್ತುಮ ಜಮಾಲ– ಗೌಸು ದಲಾಲರ ಮಾತು ನಿಜವು. ಇದರಿಂದ ಅವರ ಇಮಾನಿ ತನವು ಚನ್ನಾಗಿ ವ್ಯಕ್ತವಾಗುವದು. ಗೌಸುಸಾಹೇಬ, ಇಸ್ಲಾಮಿನ ಅಭಿಮಾನವು ನಮ್ಮೆಲ್ಲರಿಗೂ ಇರಬೇಕಷ್ಟೆ?

ಗೌಸು– ಅಲಬತ್! ಅಲಬತ್! ಅಭಿಮಾನವು ಯಾಕೆ ಇರಲಿಕ್ಕಿಲ್ಲ? ಇರಲೇಬೇಕು ಸರಕಾರ!

ರುಸ್ತುಮ ಜಮಾಲ– ಸುಬೇದಾರರು ನಾಳಿಗೆ ನಿಮಗೂ, ನಿಮ್ಮ ಆಳುಗಳಿಗೆ ಊಟ ಮಾಡಿಸಬೇಕೆಂದು ಮಾಡಿರುತ್ತಾರೆ.

ಮುಲಾಣಾ ಹಯಾತಿ– ನಮ್ಮ ರುಸ್ತುಮ ಜಮಾಲರು ಜಯಶಾಲಿಗಳಾಗಿ ಬಂದದ್ದ ಕ್ಕಾಗಿ ನಿಮಗೆ ಊಟವು!

ಗೌಸು– ಬಹಳ ಸಂತೋಷವು; ಆದರೆ ನಮ್ಮ ಆಳುಗಳಲ್ಲಿ ಮರಾಟರೂ ಇರುವರು; ಅಂದಬಳಿಕ ಅವರಿಗೆ ಬೇರೆ ಅಡಿಗೆಯಾಗಬೇಕಾಗುವದಲ್ಲ!

ರುಸ್ತುಮ– ಅವಶ್ಯವಾಗಿ ಮಾಡಿಸುವೆವು.

ಈ ಮೇರೆಗೆ ಹೇಳಿ ರುಸ್ತುಮ ಜಮಾಲನು, ಮುಲಾಣಾ ಹಯಾತಿಯೂ ಹೊರಟು ಹೋದರು. ಅವರಿಗೆ ಯಾವ ಮಾತಿನ ಸಂಶಯವೂ ಬರಲಿಲ್ಲ. ಗೌಸು ದಲಾಲನು ಮುಸಲ್ಮಾನರ ಕೈಯ ಅಡಿಗೆಯ ಉಣ್ಣುವದೊಂದನ್ನು ಮಾತ್ರ ಅವರು ನೋಡ ಬೇಕಾಯಿತು. ಅದರಂತೆ, ಮರುದಿನದ ಭೋಜನ ಸಮಾರಂಭದಲ್ಲಿ ಗೌಸುವು ಮುಸಲ್ಮಾನ ರೊಡನೆ ಒಂದೇ ಪಾತ್ರೆಯಲ್ಲಿ ಉಂಡನು! ಅದರಿಂದ ಅವನ ವಿಷಯದ ಅವರ ಸಂಶಯವು ಪೂರಾ ನಷ್ಟವಾಗಿ ಹೋಯಿತು; ಆದರೂ ಹುಲ್ಲುಹೊರೆಗಳನ್ನು ಶೋಧಿಸಿ ನೋಡುವದಕ್ಕಾಗಿ ಒಬ್ಬ ನಂಬಿಗೆಯ ಮುಸಲ್ಮಾನನನ್ನು ಅವರು ನಿಯಮಿಸಿದರು. ಹೀಗೆ ಅಖಂಡವಾಗಿ ಒಂದು ತಿಂಗಳು ಹುಲ್ಲುಹೊರೆ ತರುವ ಕೆಲಸ ನಡೆದದ್ದರಿಂದ, ಹೊರೆ ಶೋಧಿಸುವ ಕೆಲಸದಲ್ಲಿ ದುರ್ಲಕ್ಷ್ಯ ವಾಗತೊಡಗಿತು. ಶೋಧಿಸುವಾಗ ಬಹಳ ರಾತ್ರಿಯಾಗಲು, ಆಳುಗಳೆಲ್ಲ ದುರ್ಗದ ಮೇಲೆಯೇ

ವಸ್ತಿಮಾಡಹತ್ತಿದರು. ಒಟ್ಟಿಗೆ, ಹುಲ್ಲುಹೊರೆಯವರ ವಿಚಾರದಲ್ಲಿ ಬರಬರುತ್ತ ಎಲ್ಲರೂ ದುರ್ಲಕ್ಷ ಮಾಡಹತ್ತಿದರು. ಗೌಸುವೂ, ಅವನ ಆಳುಗಳೂ ಕೇವಲ ಮನೆಯವರಾಗಿ ಹೋದರು.

ಹೀಗಿರುವಾಗ ಒಂದುದಿನ ಗೌಸು ದಲಾಲನು ಮುಲಾಣಾ ಹಯಾತಿಯ ಬಳಿಗೆ ಹೋಗಿ ಆತನನ್ನು ಕುರಿತು– ''ಹಜರತ್! ಇನ್ನು ಮಳೆಗಾಲವು ಸಮೀಪಿಸಿತು. ಹುಲ್ಲೂ ಸಾಕಷ್ಟು ಸಿಕ್ಕಂತಾಯಿತು. ಇನ್ನು ಎಂಟು ದಿನಗಳಲ್ಲಿ ಆದಷ್ಟು ಆಳು ತಕ್ಕೊಂಡು ಬಂದು, ಬಣಿವೆ ಗಳನ್ನು ಮುಗಿಸಿಬಿಡುವೆನು. ನಾಡದು ನನ್ನ ಲೆಕ್ಕ ತೀರಿಸಿದರೆ, ಹುಲ್ಲಿನವರ ಲೆಕ್ಕವನ್ನೂ, ಆಳು ಗಳ ಲೆಕ್ಕವನ್ನೂ ತೀರಿಸಿಬಿಡುವೆನು; ಆದ್ದರಿಂದ ನಾಳಿನಿಂದ ಹೊರೆಗಳ ತಪಾಸಣೆಗಾಗಿ ಇಬ್ಬ ರನ್ನು ಕಳಿಸಿಕೊಡಬೇಕು; ಯಾಕಂದರೆ, ಒಬ್ಬರೇ ಆದರೆ ಬಹಳ ರಾತ್ರಿಯಾಗುವದು.'' ಎಂದು ಹೇಳಲು, ಉದಾರನಾದ ಮುಲಾಣಾ ಹಯಾತಿಯು– ''ಏನು ಶೋಧಿಸುವದು? ನಿಮ್ಮಂಥ ಇಮಾನಿ ಜನರ ಕೆಲಸದಲ್ಲಿ ಶೋಧವೇತರದು? ರಾತ್ರಿ ಬಹಳವಾದರೆ ಆಳುಗಳು ರಾತ್ರಿ ಕೋಟೆಯಲ್ಲಿಯೇ ಇರಲೊಲ್ಲರೇಕೆ, ಹೇಗೂ ಈಗ ದಿನಾಲು ವಸ್ತಿಮಾಡುತ್ತಲೇ ಇರುವರು. ನಾಳಿನಿಂದ ಅವರ ಊಟದ ವ್ಯವಸ್ಥೆಯನ್ನೂ ಇಲ್ಲಿಯೇ ಮಾಡಿಸುವೆವು. ಗೌಸುಸಾಹೇಬ ವರ್ಷದ ಹುಲ್ಲು ಕೂಡಿಸಿಕೊಟ್ಟು ನಮ್ಮನ್ನು ನಿಶ್ಚಿಂತರಾಗ ಮಾಡಿದ್ದಕ್ಕಾಗಿ ನಮಗೆ ಬಹಳ ಸಂತೋಷವಾಗಿದೆ; ಕಾರಣ ನಾಳಿನಿಂದ ನೀವೂ, ನಿಮ್ಮ ಆಳುಗಳೂ ಕೋಟೆಯಲ್ಲಿಯೇ ಉಂಡು ಮಲಗಿಕೊಳ್ಳಿರಿ. ನೀವು ಹೇಳಿದಂತೆ ನಾಡದು ನಿಮ್ಮ ಯಾವತ್ತು ಲೆಕ್ಕವನ್ನು ತೀರಿಸಿ ಬಿಡುವೆವು; ನೀವೂ ಎಲ್ಲರ ಲೆಕ್ಕ ತೀರಿಸಿ ನಿಶ್ಚಿಂತರಾಗಿರಿ,'' ಎಂದು ಹೇಳಿದನು. ಅದರಿಂದ ಗೌಸು ದಲಾಲನು ಆನಂದಪಟ್ಟು ಸಲಾಮುಮಾಡಿ ಹೊರಟುಹೋದನು. ಆದರೆ ಆತನ ಆ ಆನಂದದ ಕಾರಣವು ಮಾತ್ರ ಬರಿಯ ಹುಲ್ಲುಹೊರೆಯ ವ್ಯಾಪಾರವು ಮುಗಿದದ್ದಕ್ಕಾಗಿ ಆಗಿರದೆ, ಆತನ ಕುಟಿಲ ತಂತ್ರದ ಕೊರತವು ಸರಿಯಾಗಿ ಸಾಧಿಸಿದ್ದಕ್ಕಾಗಿ ಆಗಿತ್ತು!

## ಮದ್ಯದ ಮದ

ಹೀಗೆ ರುಸ್ತುಂ ಜಮಾಲನು ಮುಲಾಣಾ ಹಯಾತಿಗೆ ಹೇಳಿ ಗೌಸು ದಲಾಲನನ್ನು ಪರೀಕ್ಷಿಸಿದನು; ಆ ದಲಾಲನ ಆಳುಗಳು ದಿನಾಲು ತರುತ್ತಿದ್ದ ಹುಲ್ಲುಹೊರೆಗಳನ್ನು ಪರೀಕ್ಷಿಸಿ, ಅವುಗಳ ನಿತ್ಯದ ಪರೀಕ್ಷೆಗಾಗಿ ಒಬ್ಬ ನಂಬಿಗೆಯ ಮನುಷ್ಯನನ್ನು ನಿಯಮಿಸಿದ್ದನು. ಇನ್ನು, ತಾನು ಸೆರೆ ಹಿಡಿದುಕೊಂಡು ಬಂದಿದ್ದ ಜನರ ಪರೀಕ್ಷೆಮಾಡುವ ಕೆಲಸವೊಂದು ಮಾತ್ರ ಉಳಿಯಿತು. ಅದರ ಪರೀಕ್ಷೆಯನ್ನೂ ಬೇಗನೆ ಮಾಡಿಬಿಡಬೇಕೆಂದು ಆತನು ನಿಶ್ಚಯಿಸಿದನು. ನನ್ನ ಸೆರೆಯಲ್ಲಿ ಸಿಕ್ಕಿದ್ದ ಗಂಗೆಯೂ, ರಾಯಬಾ ಸಾವುಕಾರನೂ ನಿಜವಾದವರೋ ಅಥವಾ ಅವರು ವೇಷಧಾರಿಗಳೋ, ಎಂಬುದನ್ನು ಆತನು ಪರೀಕ್ಷಿಸಬೇಕಾಗಿತ್ತು, ಈ ಕೆಲಸವನ್ನು

ತಾನೊಬ್ಬನೇ ಮಾಡಬೇಕೆಂದು ಆತನು ಮಾಡಿದ್ದನು; ಯಾಕಂದರೆ, ಮುಖ್ಯವಾಗಿ ಗಂಗೆಯ ಮೇಲೆ ಆತನ ಕಾಂಕ್ಷೆ ಬಹಳ. ಆಕೆಯನ್ನು ತಾನೊಬ್ಬನೇ ಪರೀಕ್ಷಿಸುವದು, ಅದರಲ್ಲಿಯೂ ಆ ಕೆಲಸಕ್ಕೆ ಏಕಾಂತದ ಸಮಯವು ಅನು ಕೂಲಿಸುವಂತೆ ಮಾಡುವದು ಬಹಳ ನೆಟ್ಟಗೆಂದು ಆತನು ತಿಳಿದಿದ್ದನು! ರುಸ್ತುಮ ಜಮಾಲರಂಥ ಹೇಡಿ ಮನುಷ್ಯರಲ್ಲಿ ಕುವಿಚಾರಗಳೂ, ಕುಕಲ್ಪನೆ ಗಳೂ, ಕುಹಕತನವೂ ಬಹಳ; ಯಾಕಂದರೆ, ಅವರ ಹೇಡಿತನದ ಹುಳಕನ್ನು ತೆರೆದಿಡುವ ದಕ್ಕಾಗಿಯೇ ಆ ಗುಣಗಳು ಅವರಲ್ಲಿ ಉದಯ ಹೊಂದಿರುವವೆಂದು ಹೇಳಬಹುದು; ಅವರು ತಮ್ಮ ಆ ಹೀನ ಗುಣ ಪ್ರಭಾವವನ್ನು ಜನರಲ್ಲಿ ತೋರಿಸಲಿಕ್ಕೆ ಒಳ್ಳೇ ಅಭಿಮಾನ ಪಡುವರು. ಆದರೆ, ಹೇಡಿಗಳು ತಮ್ಮ ಆ ಹೇಡಿತನದ ಹುಳಕನ್ನು ಮುಚ್ಚಿಕೊಳ್ಳುವದಕ್ಕಾಗಿ ತಮ್ಮ ಆ ಹೀನ ಗುಣಗಳನ್ನು ಉಪಯೋಗಿಸುವಾಗಲ್ಲ ತಮ್ಮ ಆ ಹೇಡಿತನವನ್ನೇ ಹೆಚ್ಚು ಬೈಲಿ ಗಿಟ್ಟಂತಾಗುವದು. ಈಗ ರುಸ್ತುಮ ಜಮಾಲನಿಗೆ ಅಂತಹ ಪ್ರಸಂಗವೇ ಬಂದಿತು. ತಾನು ಮಾಡಬೇಕಾಗಿರುವ ಈ ಗಂಗೆಯ ಪರೀಕ್ಷೆಯ ಕೆಲಸದಲ್ಲಿ, ಮುಲಾಣಾ ಹಯಾತಿಯಂಥ ಶುದ್ಧ ಹೃದಯದ ಸರಳನಾದ ಉದಾರ ಮನುಷ್ಯನಿರುವದು ನೆಟ್ಟಗಲ್ಲೆಂದು ಆತನು ತಿಳಿದನು; ಅದರಿಂದ ಆತನು ಮುಲಾಣಾ ಹಯಾತಿಯನ್ನು ಉಪಾಯದಿಂದ ತಪ್ಪಿಸಿ, ತಾನೊಬ್ಬನೇ ಈ ಕೆಲಸದಲ್ಲಿ ತೊಡಗಬೇಕಾಗಿತ್ತು; ಆದರೆ ಈ ಮೊದಲೆ ತಾನು ಮಾತಾಡಿದ ಪರೀಕ್ಷೆಗಳು, ಮುಲಾಣಾ ಹಯಾತಿಯ ಸಮಕ್ಷ ಆಗಿದ್ದು, ಈಗ ಮಾತ್ರ ತಾನು ಮುಲಾಣಾ ಹಯಾತಿಯನ್ನು ತಪ್ಪಿಸಿ, ತಾನೊಬ್ಬನೇ ಗಂಗೆಯ ಪರೀಕ್ಷೆಯ ಕೆಲಸ ಮಾಡಿದರೆ, ಮುಲಾಣಾ ಹಯಾತಿಯಲ್ಲಿ ತಾನು ಅವಿಶ್ವಾಸ ತೋರಿಸಿದ ಹಾಗಾಗುವದಲ್ಲದೆ, ತನ್ನ ಮನಸ್ಸಿನ ಮಾಲಿನ್ಯವನ್ನು ಆ ನಿರ್ಮಲಾಂತಃಕರಣದ ಉದಾರ ಮನುಷ್ಯನ ಮುಂದೆ ತೆರೆದಿಟ್ಟ ಹಾಗಾಗುವದೆಂದು ಆತನು ಶಂಕಿಸತೊಡಗಿದನು; ಒಟ್ಟಿನಲ್ಲಿ, ಆತನಿಗೆ ಮುಲಾಣಾ ಹಯಾತಿಯ ಸಮಕ್ಷ ಗಂಗೆಯನ್ನು ಪರೀಕ್ಷಿಸುವದೂ ಕಷ್ಟ, ಪರೀಕ್ಷಿಸದಿರುವದೂ ಕಷ್ಟ, ಹೀಗಾಗಿ, ಆ ರುಸ್ತುಮ ಜಮಾಲನು, ಇದಕ್ಕೇನು ಹಂಚಿಕೆ ಮಾಡಬೇಕೆಂದು ಯೋಚಿಸತೊಡಗಿದನು.

ಒಂದು ದಿನ ಆತನು ಹಗಲು ಒಂಬತ್ತು ತಾಸಿನ ಸುಮಾರಕ್ಕೆ ತಾನೇ ಮುಲಾಣಾ ಹಯಾತಿಯ ಬಳಿಗೆ ಹೋದನು. ಆಗ ಯಥಾಸ್ಥಿತವಾಗಿ ಅದರ ಸತ್ಕಾರಗಳೂ, ಯೋಗಕ್ಷೇಮದ ವಿಚಾರಣೆಯೂ ಆದಬಳಿಕ ಮುಲಾಣಾ ಹಯಾತಿಯು ರುಸ್ತುಮ ಜಮಾಲನನ್ನು ಕುರಿತು–

ಮುಲಾಣಾ ಹಯಾತಿ– ಯಾಕೆ ಸರದಾರಸಾಹೇಬ, ಕನಸುಮನಸುಗಳಲ್ಲಿಲ್ಲದೆ ಬಡವರ ಮನೆಗೆ ಭಾಗೀರಥ ಬಂದಂತೆ ಅಕಸ್ಮಾತ್ತಾಗಿ ಬಂದುಬಿಟ್ಟಿರಲ್ಲ! ಬಹಳ ಸಂತೋಷವು; ನಾನೂ ತಮ್ಮ ದರ್ಶನವನ್ನು ಅಪೇಕ್ಷಿಸುತ್ತಿದ್ದೆನು; ಆದರೆ ಅಲ್ಲಾನು ಅಕಸ್ಮಾತ್ತಾಗಿ ಆ ಯೋಗವನ್ನು ಒದಗಿಸಿಕೊಟ್ಟದ್ದರಿಂದ ಬಹಳ ಸಂತೋಷವಾಯಿತು.

ರುಸ್ತುಮಜಮಾಲ– ತಮ್ಮ ಉದಾರ ಮನಸ್ಸೂ, ಸ್ವಜನಾಭಿಮಾನವೂ, ಸೌಜನ್ಯವೂ ಯಾವೂ ಅರಿಯದವಲ್ಲ, ಸುಪ್ರಸಿದ್ಧಗಳು! ತಮ್ಮಂಥವರು ನನ್ನ ಸ್ಮರಣ ಮಾಡುತ್ತಿರುವದೊಂದು, ನನ್ನ ಮೇಲಿನ ಅನುಗ್ರಹದ ಲಕ್ಷಣವೇ ಆಗಿರುವದು! ಆದ್ದರಿಂದ, ಏನಾದರೂ ಅಪ್ಪಣೆ

ಮಾಡುವದಿದ್ದರೆ, ಈಗೇ ಮಾಡಿಬಿಡಬೇಕು, ಅದನ್ನು ತಲೆಯಲ್ಲಿ ಹೊತ್ತು ನಡಿಸಲು ಸಿದ್ಧನಿರುವೆನು.

ಮುಲಾಣಾ ಹಯಾತಿ– ನಿಮ್ಮನ್ನು ಮುದ್ದಾಂ ಕರೆಸುವಂಥ ವಿಶೇಷ ಪ್ರಸಂಗವೇನು ಇಲ್ಲ; ನಿಮ್ಮನ್ನು ಕಾಣುವದೇ ನಮಗೆ ಸಂತೋಷಕರವು! ಅದೊಂದು ನಮಗೆ ಇಷ್ಟವಾದ ಕೆಲಸ! ಸರದಾರ ಸಾಹೇಬ, ಗೌಸುದಲಾಲನನ್ನು ಪರೀಕ್ಷಿಸಿದಿರಿ; ಹುಲ್ಲುಹೊರೆಗಳ ಪರೀಕ್ಷೆಯಾಯಿತು; ಶಿವಾಜಿಯ ಕುಟಿಲ ತಂತ್ರಗಳ ವಿಷಯದಲ್ಲಿ ನನ್ನನ್ನು ಜಾಗ್ರತನನ್ನಾಗಿಯೂ ಮಾಡಿದಿರಿ; ಆದರೆ, ನೀವು ಸೆರೆಹಿಡಿದುಕೊಂಡು ಬಂದಿರುವ ಜನರನ್ನು ಪರೀಕ್ಷಿಸುವದು ನನಗೆ ಅವಶ್ಯವಾಗಿ ತೋರುತ್ತದೆ; ಯಾಕಂದರೆ, ನೀವು ನನ್ನನ್ನು ಎಚ್ಚರಗೊಳಿಸಿದಂದಿನಿಂದ, ನನಗೆ ಎಲ್ಲ ಕಡೆಗೂ ಶಿವಾಜಿಯ ಒಂದಿಲ್ಲೊಂದು ಗೂಢ ತಂತ್ರವಿದ್ದ ಸಂಶಯವು ಬರತೊಡಗಿದೆ!

ರುಸ್ತುಮು ಜಮಾಲ– ತಮ್ಮ ಮಾತು ಕೇಳಿ ನನಗೆ ಬಹಳ ಸಂತೋಷವಾಗುತ್ತದೆ. ಸೇರಿಗೆ ಸವ್ವಾಸೇರು ಆದಹೊರತು ಯಾವ ಕೆಲಸವು ಆಗುವದಿಲ್ಲ! ಸುಬೇದಾರ ಸಾಹೇಬ, ನಿಮ್ಮ ಮನಸ್ಸಿನಲ್ಲಿ ಬಂದಿರುವ ವಿಚಾರವೇ ನನ್ನ ಮನಸ್ಸಿನಲ್ಲಿಯೂ ಬಂದದ್ದರಿಂದ, ಬುದ್ಧಿಪೂರ್ವಕವಾಗಿ ನಾನು ಈಗ ತಮ್ಮನ್ನು ಕಾಣಲಿಕ್ಕೆ ಬಂದಿದ್ದೇನೆ. ನೀವು ಹೇಳಿದಂತೆ, ಆ ಸೆರೆಯಲ್ಲಿರುವವರ ಪರೀಕ್ಷೆಯನ್ನು ಅವಶ್ಯವಾಗಿ ಮಾಡಲೇಬೇಕು.

ಮುಲಾಣಾಹಯಾತಿ– ಆ ಕೆಲಸವನ್ನು ನೀವು ಒಬ್ಬರೇ ಮಾಡತಕ್ಕದ್ದು; ಯಾಕಂದರೆ, ಪರಸ್ತ್ರೀಯರೊಡನೆ ಮಾತಾಡುವದಂತು ಇರಲಿ, ನಾನು ಅವರನ್ನು ಕಣ್ಣೆತ್ತಿಯೂ ನೋಡುವದಿಲ್ಲ.

ರುಸ್ತುಮು ಜಮಾಲ– (ಮನಸ್ಸಿನಲ್ಲಿ ಸಂತೋಷಪಟ್ಟು) ನಿಮ್ಮ ಸಹಾಯವಿಲ್ಲದೆ ನಾನೊಬ್ಬನೇ ಪರೀಕ್ಷಿಸುವದು ಹೇಗೆ? ಹೆಣ್ಣುಮಕ್ಕಳ ಸಂಬಂಧವಿರುವದರಿಂದ, ನೀವು ನನ್ನ ಸಂಗಡ ಇರುವದು ನೆಟ್ಟಗಲ್ಲವೆ?

ಮುಲಾಣಾ ಹಯಾತಿ– ಹೌದು ಸರದಾರ ಸಾಹೇಬ, ನಿಮ್ಮ ಮಾತಿನಂತೆ ನಾನು ಬರಬಹುದು; ಆದರೆ ಈವರೆಗೆ ಪಾಲಿಸುತ್ತ ಬಂದಿದ್ದ ನನ್ನ ನಿಯಮವನ್ನು ನಾನು ನಿಷ್ಕಾರಣ ಮುರಿಯಲಾರೆನು. ಪರಸ್ತ್ರೀಯರ ವ್ಯವಹಾರದಲ್ಲಿ ಹೋಗಲೇಬಾರದೆಂದು ನಾನು ಅಲ್ಲಾನ ಸಾಕ್ಷಿಯಿಂದ ಪ್ರತಿಜ್ಞೆ ಮಾಡಿದ್ದೇನೆ. ನೀವು ಒಂದು ಉದ್ದೇಶದಿಂದ ಆ ವ್ಯವಹಾರವನ್ನು ಬುದ್ಧಿಪೂರ್ವಕ ಮಾಡಿರುತ್ತೀರಿ; ಮೇಲಾಗಿ ಮನುಷ್ಯರ ಪರೀಕ್ಷೆಯಲ್ಲಿ ನನಗಿಂತ ನಿಮ್ಮ ಬುದ್ಧಿಯು ಮುಂದೆ ಓಡುತ್ತಿರುವದೆಂಬದರ ಅನುಭವವು ನನಗೆ ಬಂದುಹೋಗಿರುವದರಿಂದ, ನೀವೇ ಆ ಕೆಲಸ ಮಾಡಲಿಕ್ಕೆ ಅಧಿಕಾರಿಗಳು; ಏನಾದರೂ ಮೋಸವಿದ್ದರೆ, ಅವರನ್ನು ಕೋಟೆಯಲ್ಲಿಟ್ಟು ಕೊಳ್ಳುವದರಿಂದ ಪ್ರಸಂಗದಲ್ಲಿ ಪಶ್ಚಾತ್ತಾಪ ಪಡಬೇಕಾದೀತು; ಆದ್ದರಿಂದ ನೀವು ಒಬ್ಬರೇ ಹೋಗಿ ಅವರನ್ನು ಬೇಗನೆ ಪರೀಕ್ಷಿಸಿ, ಅವರ ಸ್ವರೂಪವನ್ನು ತಿಳಿದುಕೊಂಡು ಬಿಡಿರಿ; ಆ ಮೇಲೆ ನಿಮ್ಮ ಸೂಚನೆಯಂತೆ ಅವರ ವ್ಯವಸ್ಥೆಯನ್ನು ಮಾಡಲಿಕ್ಕೆ ಬಂದೀತು.

ಹೀಗೆ ತನ್ನ ಮನೋದಯವು ಅನಾಯಾಸವಾಗಿ ಸಾಧಿಸಿದ್ದನ್ನು ನೋಡಿ, ರುಸ್ತುಮ ಜಮಾಲನಿಗೆ ಬಹಳ ಸಂತೋಷವಾಯಿತು. ''ರೋಗಿ ಬಯಸಿದ್ದೂ ಹಾಲೋಗರವೇ, ವೈದ್ಯ ಹೇಳಿದ್ದೂ ಹಾಲೊಗರವೇ'' ಎಂಬಂತಾಗಿ, ಆತನು ಮನಸ್ಸಿನಲ್ಲಿ ಹಿರಿಹಿರಿ ಹಿಗ್ಗಿದನು; ಆತನ ಸಂತೋಷವು ಆತನ ಹೊಟ್ಟೆಯಲ್ಲಿ ಹಿಡಿಸದಾಯಿತು. ಆತನು ಮುಲಾಣಾ ಹಯಾತಿಯನ್ನು ಕುರಿತು–

ರುಸ್ತುಮ ಜಮಾಲ– ಹಾಗಾದರೆ, ನಾನೊಬ್ಬನೇ ಅವರ ಪರೀಕ್ಷೆ ಮಾಡತಕ್ಕದ್ದು. ಹೋಗಿರಿ, ಇಂದೇ ಆ ಕೆಲಸವನ್ನು ಆರಂಭಿಸಿಬಿಡಿರಿ; ಆ ಕೆಲಸದಲ್ಲಿ ದುರ್ಲಕ್ಷ್ಯ ಮಾಡುವದು ಯೋಗ್ಯವಲ್ಲ!

ಹೀಗೆ ಮುಲಾಣಾ ಹಯಾತಿಯು ಹೇಳಲು, ರುಸ್ತುಮ ಜಮಾಲನು ಸಂತೋಷದಿಂದ ತನ್ನ ಮನೆಗೆ ಹೋಗಲಿಕ್ಕೆ ಹೊರಟನು. ಹೋಗಹೋಗುತ್ತ ಅವನ ಮನಸ್ಸಿನಲ್ಲಿ ಹಲವು ವಿಚಾರಗಳು ಉತ್ಪನ್ನವಾದವು. ಆತನು ತನ್ನ ಮನಸ್ಸಿನೊಳಗೆ– ಗಂಗೆ ಇದ್ದ ಸ್ಥಳಕ್ಕೆ ಈಗೇ ಹೋಗಿಬಿಡುವೆನು, ನನ್ನ ಸಂಗಡ ನನ್ನ ನಂಬಿಗೆಯ ಒಬ್ಬ ಮರಾಠಾ ಹೆಂಗಸನ್ನು ಕರಕೊಂಡು ಹೋಗಿರಬೇಕು; ಯಾಕಂದರೆ ಕದಾಚಿತ್ ಗಂಗೆಗೆ ನಮ್ಮ ಉರ್ದು ಮಾತು ತಿಳಿಯಲಿಕ್ಕಿಲ್ಲ. ನನಗಾದರೂ ಮರಾಠಿಭಾಷೆಯು ಅಷ್ಟು ನೆಟ್ಟಗೆ ಬರುವದಿಲ್ಲ. ಅಥವಾ ಗಂಗೆಯ ಸಂಗಡ ಮರಾಠಾ ಸ್ತ್ರೀಯರು ಎಂಟು-ಹತ್ತು ಜನರಿರುವರು. ಅವರಲ್ಲಿಯೇ ಒಬ್ಬರನ್ನು ನನ್ನ ಸಹಾಯಕ್ಕೆ ತಕ್ಕೊಂಡುಬಿಡಲಾ? ಅವರಲ್ಲಿ ಯಾರಿಗಾದರೂ ಉರ್ದು ತಿಳಿಯುತ್ತಿರಬಹುದು. ಅಥವಾ ಬೇರೆ ಸ್ತ್ರೀಯರಾದರೂ ಯಾತಕ್ಕೆ? ಗಂಗೆಯು ನನ್ನ ವೈಭವಕ್ಕೆ ಮೆಚ್ಚಿ ನನಗೆ ಅನುಕೂಲವಾಗಿಬಿಟ್ಟರೆ ಕೇಳುವದೇನು? ಬಾದಶಹನ ಪ್ರೀತಿಯಾಗಿ ನನಗೆ ಆಕೆಯನ್ನು ಲಗ್ನ ಮಾಡಿಕೊಡಲು ಆತನು ಒಪ್ಪಿಬಿಟ್ಟರೆ, ನನಗೆ ಇದಕ್ಕೂ ಹೆಚ್ಚಿನದು ಬೇಕಾಗಿರುವದೇನು? ಬಾದಶಹನು ಒಪ್ಪಿಯೇ ಒಪ್ಪುವನು. ಆತನೇನು ನನಗೆ ಹೊರಗಿನವನೆ? ಮೇಲಾಗಿ ನಾನು ಎಷ್ಟೋ ಸುಂದರ ಸ್ತ್ರೀಯರನ್ನು ಆತನ ಜನಾನಖಾನೆಯಲ್ಲಿ ಸೇರಿಸಿರುವೆನು; ಅಂದಬಳಿಕ ನಾನು ಕೇಳಿದರೆ ಗಂಗೆಯನ್ನು ಈಗ ನನಗೆ ಲಗ್ನವಾಡಿ ಕೊಟ್ಟೇ ಕೊಡುವನು. ಗಂಗೆಯು ನಿಶ್ಚಯವಾಗಿ ಗಂಗೆಯೇ ಇರುವಳು; ಆಕೆಯ ವಿಷಯದಲ್ಲಿ ಮೋಸವನ್ನು ಕಲ್ಪಿಸುವಹಾಗಿಲ್ಲ. ಮೊನ್ನೆ ಬಂಡಿಯಲ್ಲಿ ಕುಳಿತಾಗ ಆಕೆಯು ನನ್ನನ್ನು ಅಷ್ಟೇನೂ ತಿರಸ್ಕರಿಸಲಿಲ್ಲ; ನನ್ನ ಕಡೆಗೆ ಮೂರು-ನಾಲ್ಕು ಸಾರೆ ನೋಡಿದಳು; ಕಡೆಗಂತೂ ಬಂಡಿಯ ಮುಂದೆಯೇ ಕುಳಿತುಬಿಟ್ಟು ನನ್ನನ್ನು ನೋಡಹತ್ತಿದಳು. ಆಗಲಿ, ಈಗ ನಾನು ವೈಭವದ ಉಡಿಗೆತೊಡಿಗೆಗಳನ್ನು ಧರಿಸಿ, ಗಂಗೆಗೆ ಉಚಿತವಾಗಿ ಕೊಡುವದಕ್ಕಾಗಿ ಒಂದು ಮುತ್ತಿನ ಕಂಠಿಯನ್ನೂ ತಕ್ಕೊಳ್ಳುವೆನು.

ಹೀಗೆ ಆಲೋಚಿಸಿ, ಪೋಷಾಕು ಹಾಕಿಕೊಂಡು ಮುತ್ತಿನ ಕಂಠಿಯನ್ನು ತಕ್ಕೊಂಡು ಇನ್ನು ಹೊರಡಬೇಕೆಂದು ತನ್ನ ಸೇವಕನಾದ ಅಬ್ದುಲ್ಲಗಫಾರನನ್ನು ಕರೆಯಬೇಕೆನ್ನುತ್ತಿರಲು, ಆ ಅಂಜುಬುರುಕನ ಮನಸ್ಸಿನಲ್ಲಿ ಒಂದು ದೊಡ್ಡ ಸಂಶಯವು ಉತ್ಪನ್ನವಾಯಿತು. ಆತನು ಮತ್ತೆ ಮನಸ್ಸಿನಲ್ಲಿ– ಸೆರೆಯಲ್ಲಿದ್ದ ಅವರೆಲ್ಲ ಹೆಂಗಸರು, ನಿಜವಾದ ಹೆಂಗಸರಿದ್ದರಂತು ಸರಿಯೆ;

ಪ್ರಸಂಗ ಬಂದರೆ ಆ ಎಲ್ಲ ಹೆಂಗಸರ ಸಮಾಚಾರವನ್ನು ನಾನೊಬ್ಬನೇ ತಕ್ಕೊಳ್ಳಬಹುದು; ಯಾಕಂದರೆ ನಾನು ಸಂಗಡ ಕತ್ತಿ-ಕಠಾರಿಗಳನ್ನು ತಕ್ಕೊಂಡೇ ಹೋಗಿರುವೆನು; ಅಲ್ಲದೆ, ನನ್ನ ಹತ್ತರ ಗಟ್ಟಿಗನಾದ ಅಬ್ದುಲ್ಲಗಫಾರನೂ ಇದ್ದೇ ಇರುತ್ತಾನೆ; ಆದರೆ ಅವರೆಲ್ಲರೂ ನಿಜವಾದ ಹೆಂಗಸರೇ ಆಗಿರದೆ, ವೇಷಧಾರಿ ಹೆಂಗಸರಾಗಿದ್ದರೆ ಘಾತವಾದೀತಲ್ಲ! ಹಿಂದಕ್ಕೆ ಅಲ್ಲಾಉದ್ದೀನ ಖಿಲಜಿಗೆ ಪದ್ಮಿನಿಯ ತಮ್ಮನು ಮೋಸಮಾಡಿದಂತೆ, ಈಗ ಯಾವನಾದರೂ ತರುಣ ಮನುಷ್ಯನು, ಅದೇಕೆ? ಗಂಗೆಯ ಅಣ್ಣನಾದ ಖುದ್ದನೇತಾಜಿಯೇ ಹೆಂಗಸಿನ ವೇಷ ಹಾಕಿ ಕೊಂಡು ನನ್ನನ್ನು ಮೋಸಗೊಳಿಸಿದರೆ, ನಾನು ಮಾಡುವದೇನು? ಮರಾಟರ ಮೋಸವು ಯಾರಿಗೂ ತಿಳಿಯದು! ಯಾಕಂದರೆ, ಸೆರೆಯಲ್ಲಿ ಸಿಕ್ಕಿರುವ ಈ ಮರಾಟರ ನಯ ವಿನಯ, ಮರಾಟಾ ರಾವುತನು ಪತ್ರಕೊಟ್ಟು ಬುದ್ಧಿಪೂರ್ವಕವಾಗಿ ಉದ್ಧಟತನದಿಂದ ಹೊರಟು ಹೋದದ್ದು, ಆತನ ಪತ್ರದಲ್ಲಿಯ ಎಟ್ಟಿತನ, ಮುಲಾಣಾ ಹಯಾತಿಯು ಸೈನ್ಯ ಕಳಿಸಲಿಕ್ಕೆ ನನ್ನ ಅಕ್ಷರದಂತೆ ಅಕ್ಷರ ಬರೆದು ನನ್ನ ಮೋಹರು ಮಾಡಿ ಕಳಿಸಿದ್ದು, ಇವನ್ನೆಲ್ಲ ವಿಚಾರಿಸಿದರೆ, ಇವೆಲ್ಲ ಮರಾಟರ ಮೋಸದ ಕೃತಿಗಳೇ ಎಂಬಂತೆ ನನಗೆ ತೋರುತ್ತದೆ, ಆದ್ದರಿಂದ ನಾನೊಬ್ಬನೇ ಹೋಗದೆ ಈಗ ಸಂಗಡ ಮತ್ತೆ ಒಬ್ಬಿಬ್ಬ ಗಟ್ಟಿಗರನ್ನು ಕರಕೊಂಡು ಹೋಗುವದೇ ನನಗೆ ನೆಟ್ಟಗೆ ಕಾಣುತ್ತದೆ; ಈಗ ಒಮ್ಮೆ ಹೀಗೆ ನಾಲ್ಕು ಜನರು ಕೂಡಿ ಹೋಗಿ ಬಂದಬಳಿಕ, ಆ ಮೇಲೆ ನಾನು ಬೇಕಾದಾಗ ಒಬ್ಬನೇ ಹೋದರೂ ಹೋಗ ಬಹುದು; ಆದರೆ ಈಗ ಯಾರನ್ನು ಸಂಗಡ ಕರಕೊಂಡು ಹೋಗೋಣ? ಎರಡನೆಯವರನ್ನು ಈಗ ಕರಕೊಂಡು ಹೋಗಲೇಬೇಕಾಗಿರುವಾಗ, ಮುಲಾಣಾ ಹಯಾತಿಯನ್ನು ಕರಕೊಂಡು ಹೋಗುವದೇ ನೆಟ್ಟಗೆ; ಯಾಕಂದರೆ, ಆತನು ಹೆಸರಾದ ಶೂರನು; ಪ್ರತ್ಯಕ್ಷ ಕಲ್ಯಾಣದ ಸುಬೇದಾರನು; ಆದ್ದರಿಂದ, ಆತನಿಗೆ ಒಂದು ಬಗೆಯಿಂದ ಗೌರವ ಕೊಟ್ಟಂತೆಯೂ ಆಗುವದು; ಆದರೆ, ಆ ಮಹಾರಾಯನು ಪರಸ್ತ್ರೀಯರ ಮುಖವನ್ನೇ ನೋಡುವದಿಲ್ಲ ವಂತೆ; ಹಾಗೆ ಆತನ ನಿಶ್ಚಯವಿರುವದಂತೆ; ಏನು ದಡ್ಡ ಮಂದಿ! ಆಗಲಿ, ಆದರೂ ಒಂದು ಬಗೆಯಿಂದ ನನಗೆ ಅನುಕೂಲವೇ! ಯಾಕಂದರೆ, ಯಾರ ಮನಸ್ಸು ಯಾವ ಕಾಲಕ್ಕೆ ಹೇಗಾಗುವದೆಂಬದನ್ನು ಹೇಳಲಿಕ್ಕೆ ಬರುವದಿಲ್ಲ; ಮುಲಾಣಾ ಹಯಾತಿಯು ಗಂಗೆಯ ಸೌಂದರ್ಯವನ್ನು ಪ್ರತ್ಯಕ್ಷ ನೋಡಿ ಮರುಳಾಗಿ, ಆಕೆಯ ನಿಕಾ ಮಾಡಿಕೊಳ್ಳಲಿಚ್ಛಿಸಿದರೆ ನಾನು ಮಾಡುವದೇನು? ಬಾದಶಹನೂ ಆತನ ಮಾತು ಮೀರಲಾರನು; ಆದ್ದರಿಂದ ಗಂಗೆಯು ಕಣ್ಣಿಗೆ ಬೀಳದಂತೆ ಮರೆಯಲ್ಲಿ ಆತನು ಕುಳಿತು, ಆಕೆಯ ಸಂಗಡ ಆಡುವ ಮಾತು ಗಳನ್ನಷ್ಟು ಕೇಳಲಿ! ಒಟ್ಟಿಗೆ, ಹೇಗಿದ್ದರೂ ಮುಲಾಣಾ ಹಯಾತಿಯನ್ನೇ ನಾನು ಈಗ ಸಂಗಡ ಕರಕೊಂಡು ಹೋಗಬೇಕು. ಅಂದಬಳಿಕ ಈಗ ನನ್ನ ಈ ಒನಪಿನ ಉಡಿಗೆತೊಡಿಗೆಗಳೇಕೆ? ಈ ಮುತ್ತಿನ ಕಂಠಿಯಾದರೂ ಏತಕ್ಕೆ?

ಹೀಗೆ ಯೋಚಿಸಿ, ಆ ಅಂಜುಬುರುಕ ರುಸ್ತುಮ ಜಮಾಲನು ತಾನು ಆಸ್ಥೆಯಿಂದ ಧರಿಸಿದ್ದ ಉಡಿಗೆತೊಡಿಗೆಗಳನ್ನು ತೆಗೆದಿಟ್ಟು, ತನ್ನ ನಿತ್ಯದ ಉಡಿಗೆ-ತೊಡಿಗೆಗಳಿಂದಲೇ

ಪುನಃ ಮುಲಾಣಾ ಹಯಾತಿಯ ಬಳಿಗೆ ಹೋದನು. ಆತನನ್ನು ನೋಡಿ ಮುಲಾಣಾ ಹಯಾತಿಯು ಆತುರದಿಂದ ಆತನನ್ನು ಕುರಿತು–

ಮುಲಾಣಾ ಹಯಾತಿ– ಯಾಕೆ? ಎಷ್ಟು ಬೇಗನೆ ಬಂದುಬಿಟ್ಟಿರಲ್ಲ! ಆ ಹೆಣ್ಣುಮಕ್ಕಳ ಬಳಿಗೆ ಹೋಗಿಯೇ ಬಂದಿರೋ ಏನು?

ರುಸ್ತುಮು ಜಮಾಲ– ಇಲ್ಲ, ನಾನು ಅಲ್ಲಿಗೆ ಹೋಗಿಯೇ ಇಲ್ಲ,

ಮುಲಾಣಾ ಹಯಾತಿ– ಅದೇಕೆ?

ರುಸ್ತುಮು ಜಮಾಲ– ನಿಮ್ಮನ್ನು ಸಂಗಡ ಕರಕೊಂಡು ಹೋದಹೊರತು ನನಗೆ ಸರ್ವಥಾ ಸಮಾಧಾನವಾಗುವಹಾಗಿಲ್ಲ; ಆದ್ದರಿಂದ ನೀವು ಬರಲೇಬೇಕು. ಸುಬೇದಾರ ಸಾಹೇಬ, ಸುಂದರ ಸ್ತ್ರೀಯ ಕೆಲಸ, ಆಕೆಯನ್ನು ಕಳಿಸಿ ಕೊಡುವದು ಬಾದಶಹರ ಜನಾನ ಖಾನೆಗೆ, ಅಂದಬಳಿಕ, ನನಗೆ ಆಗದವರು ಏನಾದರೂ ಬಾದಶಹರ ಮುಂದೆ ಹೇಳಿ, ಅವರ ಮನಸ್ಸು ಕೆಡಿಸಿದರೆ, ಮಾಡುವದೇನು? ನೀವೊಬ್ಬರು ನನ್ನ ಸಂಗಡ ಇದ್ದರೆ, ನನಗೆ ಯಾತರ ಭಯವೂ ಇಲ್ಲ,

ಮುಲಾಣಾ ಹಯಾತಿ– ನಿಮ್ಮಂಥ ದೊಡ್ಡ ಮನುಷ್ಯರ ವಿಷಯದಲ್ಲಿ ನನ್ನಲ್ಲಂತು ಯಾವ ಸಂಶಯವೂ ಉತ್ಪನ್ನವಾಗುವಹಾಗಿಲ್ಲ; ಮತ್ತು ನಿಮ್ಮ ವಿಷಯವಾಗಿ ಬಾದಶಹರ ಮನಸ್ಸು ಯಾರಾದರೂ ಕೆಡಿಸಿದರೆ, ಅದಕ್ಕೆ ನಾನು ಜವಾಬದಾರನು. ನಾನೇ ಬರುತ್ತಿದ್ದೆ; ಆದರೆ ಸುಮ್ಮನೆ ವ್ರತಭಂಗವೇಕೆ ಮಾಡಿಕೊಳ್ಳಬೇಕು? ಅದಕ್ಕಾಗಿ ನೀವು ಒಬ್ಬರೇ ಹೋಗಿ ಬರಬೇಕು; ಬೇಕಾದರೆ ಬೇರೆ ಯಾರನ್ನಾದರೂ ಕರಕೊಂಡು ಹೋಗಬಹುದು.

ರುಸ್ತುಮು ಜಮಾಲ– ಇಲ್ಲ, ಆ ಮಾತು ಆಗುವಹಾಗಿಲ್ಲ, ನಿಮ್ಮ ಕಣ್ಣಿಗೆ ಯಾರೂ ಹೆಂಗಸರು ಬೀಳದಂತೆ ನಾನು ವ್ಯವಸ್ಥೆ ಇಡಿಸುವೆನು, ಇಂದು ನಾವಿಬ್ಬರೂ ಕೂಡಿಯೇ ಆ ಹೆಂಗಸರೆ ಬಳಿಗೆ ಹೋಗಿ, ಅವರ ನಡತೆ–ನಡಾವಳಿಗಳನ್ನು ಪರೀಕ್ಷಿಸೋಣ. ನಾಳಿಗೆ ಸೆರೆಯಲ್ಲಿರುವ ಮರಾಟರ ಗಂಡಸರನ್ನೆಲ್ಲ ದರ್ಬಾರಕ್ಕೆ ಕರೆಸಿ, ಅವರ ವಿಚಾರಮಾಡೋಣ; ಏಳಬೇಕು; ಸುಬೇದಾರ ಸಾಹೇಬ, ಮರಾಟರ ಗತ್ತು ಯಾರಿಗೂ ತಿಳಿಯುವದಿಲ್ಲ, ಗಂಡಸರೇ ಹೆಂಗಸರೆ ಸೋಗು ಹಾಕಿಕೊಂಡು ಬಂದವರಾಗಿದ್ದರೆ, ನಿಮ್ಮಂಥ ಶೂರರು ಸಂಗಡ ಇರಲೇ ಬೇಕು; ಮೇಲಾಗಿ ನೀವು ಈ ಕಲ್ಯಾಣ ಕೋಟೆಯ ಮುಖ್ಯಾಧಿಕಾರಿಗಳು.

ಮುಲಾಣಾ ಹಯಾತಿ– ಆಗಲಿ, ಹಾಗಿದ್ದರೆ ಬರುವೆನು; ಆದರೆ ಅವರನ್ನು ಕಣ್ಣುಮುಟ್ಟಿ ಪರೀಕ್ಷಿಸಿ ನೋಡದೆ, ಮರೆಗೆ ಕುಳಿತುಬಿಟ್ಟರೆ, ಅವರ ಪರೀಕ್ಷೆ ಹೇಗಾದೀತು? ನಾನಂತು ಅವರ ಮುಖಾವಲೋಕನ ಮಾಡುವಹಾಗಿಲ್ಲ, ನನ್ನ ಸಂಗಡ ನೀವು ಬಂದಿರುವದರಿಂದ, ನಿಮಗೂ ಅವರ ಕಣ್ಣಿಗೆ ಬೀಳಲಿಕ್ಕೆ ಅನುಕೂಲವಾಗಲಿಕ್ಕಿಲ್ಲ! ಆದ್ದರಿಂದ ನಾವು ಹೋಗುವ ದಕ್ಕಿಂತ ಮೊದಲು, ಯಾರಾದರೂ ಹೆಂಗಸರು, ಆ ಮರಾಟಾ ಹೆಂಗಸರ ಬಳಿಗೆ ಹೋಗಿರಲಿ; ಅಂದರೆ ಎಲ್ಲ ಹುಳುಕು ಹೊರಬೀಳುವದು; ನೀವು ಹೊರಗಿನಿಂದ ಮಾತಾಡಿಸಿರಿ; ನಾನು ಎಲ್ಲ ಕೇಳಿಕೊಂಡು ಅವರ ಇಂಗಿತ ತಿಳಿದುಕೊಳ್ಳುವೆನು; ಹೆಂಗಸರ ಪರೀಕ್ಷೆಯನ್ನು ಹೆಂಗಸರು ಮಾಡುವದೇ ನ್ಯಾಯವು.

ಮುಲಾಣಾ ಹಯಾತಿಯ ಈ ಮಾತು ರುಸ್ತುಮ ಜಮಾಲನಿಗೆ ಸಮರ್ಪಕವಾಗಿ ತೋರಿತು. ಇದು ಮುತ್ಸದ್ದಿತನದ ಬಹು ಯೋಗ್ಯ ವಿಚಾರವೆಂದು ಆತನು ಆ ಸುಬೇದಾರನನ್ನು ಹೊಗಳಿದನು. ಅಷ್ಟರಲ್ಲಿ, ಗೌಸುದಲಾಲನು ಅಕಸ್ಮಾತ್ತಾಗಿ ಅಲ್ಲಿಗೆ ಬರಲು, ಆತನನ್ನು ನೋಡಿ ಮುಲಾಣಾ ಹಯಾತಿಗೆ ಬಹಳ ಸಂತೋಷವಾಯಿತು. ಆತನು ಗೌಸುದಲಾಲನನ್ನು ಕರೆದು ಕುಳ್ಳಿರಿಸಿಕೊಂಡು, ರುಸ್ತುಮ ಜಮಾಲನನ್ನು ಕುರಿತು– ಸರದಾರ ಸಾಹೇಬ, ನಮ್ಮ ನಂಬಿಗೆ ಯವರಾದ ಗೌಸುದಲಾಲರು ಅನಾಯಾಸವಾಗಿ ಬಂದಿದ್ದಾರೆ; ಸೆರೆಯಲ್ಲಿದ್ದ ಆ ಹೆಂಗಸರನ್ನು ಪರೀಕ್ಷಿಸಲಿಕ್ಕೆ ಅವರ ಮನೆಯ ಹೆಂಗಸರೇ ಹೋಗಿಬಿಡಲಿ, ಸಿಕ್ಕವರನ್ನು ಕಳಿಸುವದು ನೆಟ್ಟ ಗಲ್ಲ, ಎಂದು ಹೇಳಲು, ಅದಕ್ಕೆ ರುಸ್ತುಮ ಜಮಾಲನೂ ಸಂತೋಷದಿಂದ ಒಪ್ಪಿಕೊಂಡನು. ಅವರ ಈ ಮಾತುಗಳನ್ನು ಕೇಳಿ ಗೌಸುದಲಾಲನಿಗಂತು ಬಹಳ ಸಂತೋಷವಾಯಿತು. ಆಗ ಆತನು ಎದ್ದುನಿಂತು– ''ಅವಶ್ಯವಾಗಿ ಕಳಿಸುವೆನು ಖಾವಿಂದ, ಪರೀಕ್ಷೆಯ ಕೆಲಸವನ್ನು ನಮ್ಮ ವರು ಕಸರಿಲ್ಲದೆ ಮಾಡುವರು; ಹೆಂಗಸರಿಗೆ ಹೆಂಗಸರ ಪರೀಕ್ಷೆಯು ತಟ್ಟನೆ ಆಗಿಬಿಡುವದು, ಅದಾವ ದೊಡ್ಡ ಪರೀಕ್ಷೆ!'' ಎಂದು ಹೇಳಿ, ಕೂಡಲೆ ತನ್ನ ಮನೆಯ ಹೆಂಗಸರನ್ನು ಕಳಿಸಿಕೊಡು ವದಕ್ಕಾಗಿ ಹೊರಟು ಹೋಗಲು ಸಿದ್ಧನಾದನು; ಮತ್ತು ಆತನು– ''ಆ ಮರಾಟಾ ಸ್ತ್ರೀಯ ರಲ್ಲಿಯ ಗುಪ್ತ ಶಸ್ತ್ರಗಳನ್ನು ಶೋಧಿಸುವ ನೆವದಿಂದ, ಅವರನ್ನು ಸಂಪೂರ್ಣವಾಗಿ ಪರೀಕ್ಷಿಸ ಬೇಕೆಂದು ನಾನು ನಮ್ಮ ಹೆಂಗಸರಿಗೆ ಹೇಳುವೆನೆಂ''ದು ತಾನಾಗಿ ಹೇಳಿದನು. ಆಗ ರುಸ್ತುಮ ಜಮಾಲನು ತನ್ನ ಸ್ವಭಾವಕ್ಕನುಸರಿಸಿ ಗೌಸುದಲಾಲನಿಗೆ– ಗೌಸುದಲಾಲ, ನಾನು ಹೇಳುವದನ್ನು ಕೇಳಿರಿ; ಒಬ್ಬರಿಗಿಂತ ಇಬ್ಬರು ಲೇಸು; ನಿಮ್ಮ ಮನೆಯ ಹೆಂಗಸರಷ್ಟೇ ಹೋಗುವದಕ್ಕಿಂತ, ಇನ್ನೊಬ್ಬಿಬ್ಬರು ಹೆಂಗಸರನ್ನು ಅವರ ಸಂಗಡ ಕಳಿಸಿಕೊಡಿರಿ; ಹೇಗೂ ಸುಬೇದಾರಸಾಹೇಬರ ಜನಾನಖಾನೆಯ ದಾಸಿಯರು ಇದ್ದೇ ಇರುವರು! ಅವರಲ್ಲಿ ಯಾರಾದರೂ ಇಬ್ಬರು ಹೋಗಲಿ. ನಾವಿಬ್ಬರೂ ಹೊತ್ತು ಮುಣುಗುವದರೊಳಗೆ ಅಲ್ಲಿಗೆ ಬರುವೆವು, ಎಂದು ಹೇಳಿದನು. ಅದಕ್ಕೆ ಗೌಸುದಲಾಲನು– ''ಆಗಲಿ ಸರಕಾರ!'' ಎಂದು ಹೇಳಿ, ಮುಜುರೆಮಾಡಿ ಹೊರಟುಹೋದನು. ಅಷ್ಟರಲ್ಲಿ ಉಪಹಾರದ ಹೊತ್ತಾದ್ದರಿಂದ ಮುಲಾಣಾ ಹಯಾತಿಯೂ, ರುಸ್ತುಮ ಜಮಾಲನೂ ಸಮಾಧಾನದಿಂದ ಉಪಹಾರ ಮಾಡ ತೊಡಗಿದರು.

ಅತ್ತ ಗೌಸುದಲಾಲನ ಸೂಚನೆಯಂತೆ ಆತನ ಮನೆಯ ಹೆಂಗಸರೂ, ರುಸ್ತುಮ ಜಮಾಲನು ಹೇಳಿದಂತೆ ಇಬ್ಬರೂ ದಾಸಿಯರೂ ಗಂಗೆಯ ಜನರಿರುವಲ್ಲಿಗೆ ಹೋದರು. ಗೌಸುದಲಾಲನ ಹೆಂಡತಿಯು ಹೋಗುವಾಗ ಬುದ್ಧಿಪೂರ್ವಕವಾಗಿ ಒಂದು ಮದ್ಯಪಾತ್ರೆ ಯನ್ನು ತಕ್ಕೊಂಡಳು; ಆದರೆ ಅದು ಏನು ಯಾತಕ್ಕೆ ಒಯ್ಯುವದು ಎಂಬ ವಿಚಾರವನ್ನು ಆ ಹೆಂಗಸರಲ್ಲಿ ಯಾರೂ ಮಾಡಲಿಲ್ಲ, ಗೌಸುದಲಾಲನ ಹೆಂಡತಿಯು ಸೆರೆಯಲ್ಲಿದ್ದ ಗಂಗೆಗೆ– ''ನಾನು ನಿಮ್ಮನ್ನು ಕಾಣಲಿಕ್ಕೆ ಬರುವೆನು; ದೊಡ್ಡ ಸರದಾರರ ಮನೆಯ ಗೋಷೆಯ ಹೆಣ್ಣು ಮಕ್ಕಳಿಬ್ಬರು ನನ್ನ ಸಂಗಡ ಬರುವದರಿಂದ, ಅವರ ಮಾನಮರ್ಯಾದೆಯನ್ನು ಸರಿಯಾಗಿ

ಕಾಯಬೇಕಾಗುವದು'' ಎಂದು ತನ್ನ ಮನೆಯ ಹೆಂಗಸರ ಮುಖಾಂತರ ಹೇಳಿಕಲಿಸಿ, ತನ್ನ ಆ ಹೆಂಗಸರ ಕೈಯಲ್ಲಿ, ಉತ್ತಮ ಮಿಠಾಯಿಗಳನ್ನೂ, ಹಣ್ಣು–ಹಂಪಲಗಳನ್ನೂ ಕೊಟ್ಟುಕಳಿಸಿದಳು; ಮತ್ತು ಇತ್ತ ತನ್ನ ಸಂಗಡ ಬರುವ ಇಬ್ಬರು ಆ ಮುಸಲ್ಮಾನ ಸ್ತ್ರೀಯರಿಗೆ– ''ಈಗ ಉಪಾಹಾರದ ಹೊತ್ತಾಗಿದೆ. ನಾನು ಹೇಗೂ ಉಪಹಾರದ ಪದಾರ್ಥಗಳನ್ನು ಮುಂದೆ ಕಳಿಸಿದ್ದೇನೆ; ಆದ್ದರಿಂದ ನಾವೆಲ್ಲರೂ ಅಲ್ಲಿಯೇ ಉಪಹಾರ ಮಾಡೋಣ.'' ಎಂದು ಹೇಳಿದಳು. ಅದಕ್ಕೆ ಅವರು ಒಪ್ಪಿಕೊಳ್ಳಲು, ಅವರೆಲ್ಲರು ತಡಮಾಡದೆ ಆ ಮರಾಟಾ ಸ್ತ್ರೀಯರಿದ್ದಲ್ಲಿಗೆ ಹೋದರು.

ಅಲ್ಲಿಗೆ ಹೋದಕೂಡಲೆ ಗೌಸುದಲಾಲನ ಹೆಂಡತಿಯು ಉಪಾಹಾರದ ವ್ಯವಸ್ಥೆಯಲ್ಲಿ ತೊಡಗಿದಳು. ಆಕೆಯು ಗಂಗೆಯನ್ನು ಕುರಿತು ಉರ್ದು ಭಾಷೆಯಿಂದ– ಗಂಗಾಬಾಯಿ, ಇವರು ಮುಸಲ್ಮಾನರ ದೊಡ್ಡ ಮನೆತನದ ಹೆಣ್ಣುಮಕ್ಕಳು. ಆ ಖಾನದಾನೀ ಮನೆತನದವರ ಸತ್ಕಾರ ಮಾಡುವದು, ಹಳ್ಳಿಯ ಕಗ್ಗರಾದ ನಿಮ್ಮಂಥ ಕಾಫರ ಹೆಣ್ಣುಮಕ್ಕಳಿಂದ ಸರಿಯಾಗಿ ಆಗದು; ಆದ್ದರಿಂದ ನಾನೇ ಇವರ ಉಪಾಹಾರದ ವ್ಯವಸ್ಥೆಯನ್ನು ಮಾಡುತ್ತೇನೆ; ಕೂಡಿರಿ, ನೀವೆಲ್ಲರೂ ಈ ಬೀಬೀ ಸಾಹೇಬರೊಡನೆ ಉಪಹಾರಕ್ಕೆ ಕುಳಿತುಕೊಳ್ಳಿರಿ; ಮಿಠಾಯಿ–ಹಣ್ಣು – ಹಂಪಲ ಗಳಿರುವದರಿಂದ, ನೀವೂ ಅವರೊಡನೆ ಉಪಹಾರ ಮಾಡಬಹುದು. ನಿಮ್ಮ ಯೋಗಕ್ಷೇಮವನ್ನು ವಿಚಾರಿಸಿ, ನಿಮ್ಮ ವಿಚಾರಗಳನ್ನು ತಿಳಿದುಕೊಳ್ಳುವದಕ್ಕಾಗಿ, ಸುಬೇದಾರ ಸಾಹೇಬರೂ, ರುಸ್ತುಮ ಜಮಾಲರವರೂ ನಮ್ಮನ್ನು ಬುದ್ಧಿಪೂರ್ವಕವಾಗಿ ನಿಮ್ಮ ಬಳಿಗೆ ಕಳಿಸಿದ್ದಾರೆ. ಗಂಗಾಬಾಯಿ, ನೀನು ಬಹು ದೈವಶಾಲಿನಿಯು! ಬಾದಶಹರ ಜನಾನಖಾನೆಗೆ ನಾಳೆಯೇ ನೀನು ಹೋಗ ಬೇಕಾಗಿರುವದು. ಅದಕ್ಕೆ ನಿನ್ನ ಸಮ್ಮತಿಯಿರುವದಷ್ಟೆ?'' ಎಂದು ಕೇಳಲು, ಗಂಗೆಯು ಮುಗುಳುನಗೆಯಿಂದ ಆ ಗೌಸುದಲಾಲನ ಹೆಂಡತಿಯಾದ ಫಾತಿಮಾ ನನ್ನು ನೋಡಿ, ನಾಚಿಕೆಯಿಂದ ಮೋರೆ ಕೆಳಗೆ ಹಾಕಿದಳು, ತಿರುಗಿ ಮೋರೆಯನ್ನು ಮೇಲಕ್ಕೆ ಎತ್ತಲೇ ಇಲ್ಲ; ಮತ್ತು ನಾಚಿದವಳಂತೆ ಮೇಲುದಿಯಿಂದ (ಉಪವಸ್ತ್ರದಿಂದ) ತನ್ನ ಸರ್ವಾಂಗ ವನ್ನು ಮುಚ್ಚಿಕೊಂಡಳು. ಬಳಿಕ ಎಲ್ಲರೂ ಉಪಹಾರಕ್ಕೆ ಕುಳಿತರು. ಉಪಹಾರವಾದ ಬಳಿಕ ತಾನು ತಂದಿದ್ದ ಉತ್ಕೃಷ್ಟವಾದ ಮದ್ಯವನ್ನು ಆ ಇಬ್ಬರು ಖಾನದಾನಿ ಬೀಬೀ ಸಾಹೇಬರಿಗೆ ಯಥೇಚ್ಛವಾಗಿ ಕುಡಿಸಿದಳು. ಬಳಿಕ ತಾನೂ ಅದನ್ನು ಕುಡಿದಂತೆ ಮಾಡಿ, ಆ ಮರಾಟಾ ಸ್ತ್ರೀಯನ್ನು ಕುರಿತು– ನಿಮ್ಮಂಥ ಕಗ್ಗ ಜನರಿಗೆ ಈ ಉತ್ತಮ ಮದ್ಯದ ಸವಿಯೇನು ಗೊತ್ತು! ನೀವು ಸಜ್ಜೀ ರೊಟ್ಟಿ ರಾಗಿಮುದ್ದಿಯ ಮಂದಿ! ಇದು ನಮಗೆ ತಡೆಯಲಿಕ್ಕೂ ಇಲ್ಲ; ಎಂದು ಹೇಳಿ, ಆ ಖಾನದಾನಿ ಬೀಬೀ ಸಾಹೇಬರಿಗೇ ಆ ಮದ್ಯವನ್ನು ಮತ್ತಿಷ್ಟು ಕೊಟ್ಟಳು. ಆ ದಾಸಿಯರಿಬ್ಬರು ತಮ್ಮ ಈ ಬಹುಮಾನಕ್ಕಾಗಿ ಮರುಳಾಗಿ ಯಥೇಚ್ಛವಾಗಿ ಮದ್ಯಪಾನ ಮಾಡಿದರು!

ಇತ್ತ ಮುಲಾಣಾ ಹಯಾತಿಯೂ, ರುಸ್ತುಮ ಜಮಾಲನೂ ಉಪಹಾರ ಮಾಡಿ, ಯಥೇಚ್ಛ ಮದ್ಯಪ್ರಾಶನ ಮಾಡಿದರು. ಆ ಮದ್ಯದ ಅಮಲಿನಲ್ಲಿ ಎಷ್ಟು ಹೊತ್ತಾಯಿತೆಂಬ

ದರ ಅರಿವೇ ಅವರಿಗೆ ಉಳಿಯಲಿಲ್ಲ. ಹೊತ್ತು ಮುಣುಗಿ ಕತ್ತಲಾಗಲು, ಗೌಸುದಾಲಾನು ಅವರನ್ನು ಕರೆಯಲಿಕ್ಕೆ ಬಂದನು. ಆತನನ್ನು ನೋಡಿದಕೂಡಲೆ, ರುಸ್ತುಮ ಜಮಾಲನು ಮುಲಾಣಾ ಹಯಾತಿಗೆ– ಸುಬೇದಾರ ಸಾಹೇಬ, ಏಳಿರಿ, ಹೊತ್ತಾಯಿತು; ಮದ್ಯದ ಅಮಲಿನಲ್ಲಿ ನಮಗೆ ಹೊತ್ತೇ ತಿಳಿಯಲಿಲ್ಲ. ಗೌಸುದಲಾಲನು ಕರೆಯಲಿಕ್ಕೆ ಬಂದಿದ್ದಾನೆ, ಎಂದು ಹೇಳಲು, ಮುಲಾಣಾ ಹಯಾತಿಯು ಎದ್ದು ಪೋಷಾಕು ಹಾಕಿಕೊಂಡನು. ಬಳಿಕ ಅವರಿಬ್ಬರು, ಗೌಸುದಲಾಲನನ್ನು ಹಿಂಬಾಲಿಸಿ ನಡೆದರು. ಅವರು ಸೆರೆಮನೆಗೆ ಹೋಗಲು, ರುಸ್ತುಮ ಜಮಾಲನು ಗೌಸುದಲಾಲನಿಗೆ ಮದ್ಯದ ಅಮಲಿನಲ್ಲಿ– ''ದಲಾಲಸಾಹೇಬ, ಕೇಳಿರಿ; ಆ ಹೆಣ್ಣುಮಕ್ಕಳ ವಿಚಾರವೇನೆಂಬದನ್ನು ನಿಮ್ಮವರನ್ನು ಕೇಳಿರಿ, ಬೇಗನೆ ಕೇಳಿರಿ, ನಮ್ಮ ನಿದ್ದೆಯ ಹೊತ್ತು ಮೀರಿಹೋಯಿತು.'' ಎಂದು ಹೇಳಲು, ಗೌಸುದಲಾಲನ ಹೆಂಡತಿ ಫಾತಿಮಾಳು ಒಳಗಿನಿಂದಲೇ,

ಫಾತಿಮಾ– ಸರಕಾರ, ಎಲ್ಲ ನೆಟ್ಟಗದೆ; ಯಾವ ಸಂಶಯಕ್ಕೂ ದಾರಿಯಿಲ್ಲ; ಇದೂ ಅಲ್ಲದೆ, ಬಹು ವಿವೇಕಿಯಾದ ಗಂಗಾಬಾಯಿಯು ನನ್ನ ಮಾತಿಗೆ ಒಡಂಬಟ್ಟು, ಕಳಿಸಿದಾಗ ವಿಜಾಪುರಕ್ಕೆ ಹೋಗಲಿಕ್ಕೆ ಸಿದ್ಧಳಾಗಿದ್ದಾಳೆ; ಸರದಾರ ಸಾಹೇಬರ ಯಾವ ಮಾತನ್ನೂ ಆಕೆ ಮೀರುವಹಾಗಿಲ್ಲ; ಆಕೆಯನ್ನು ಬೇಕಾದಾಗ ವಿಜಾಪುರಕ್ಕೆ ಕಳಿಸಬಹುದು.

ರುಸ್ತುಮ– ನೆಟ್ಟಗಾಯಿತು, ಬಹಳ ನೆಟ್ಟಗಾಯಿತು; ಸುಬೇದಾರ ಸಾಹೇಬ, ಬಹಳ ಹೊತ್ತಾಯಿತು, ಇನ್ನು ಮನೆಗೆ ಹೋಗೋಣ. ದಲಾಲ ಸಾಹೇಬ, ಇನ್ನು ನಿಮ್ಮ ಹೆಣ್ಣು ಮಕ್ಕಳನ್ನು ಕರಕೊಂಡು ನೀವು ನಿಮ್ಮ ಮನೆಗೆ ಹೋಗಿರಿ; ನಮ್ಮವರನ್ನು ಅವರವರ ಮನೆಗೆ ಕಳಿಸಿಬಿಡಿರಿ.

ಫಾತಿಮಾ– ಸರದಾರಸಾಹೇಬ, ಈಗ ರಾತ್ರಿಯು ಬಹಳವಾದದ್ದರಿಂದ, ಎಲ್ಲರೂ ಇಲ್ಲಿಯೇ ಇದ್ದು, ಬೆಳಗಾದ ಬಳಿಕ ಹೋಗಲಿಕ್ಕೆ ಪರವಾನಿಗೆ ದೊರೆಯಬೇಕೆಂದು, ಗಂಗಾ ಬಾಯಿಯು ನಿಮ್ಮನ್ನು ಬೇಡಿಕೊಳ್ಳುತ್ತಾಳೆ; ದಣಿಯರು ಆಕೆಯದಿಷ್ಟು ಮಾತನ್ನು ನಡಿಸಬೇಕು.

ಫಾತಿಮಾನ ಈ ಮಾತಿಗೆ ರುಸ್ತುಮ ಜಮಾಲನು ಉಬ್ಬಿ ಮದ್ಯದ ಗುಂಗಿನಲ್ಲಿ– ''ಬಹುತ ಅಚ್ಛಾ, ಬಹುತ ಅಚ್ಛಾ'' ಎಂದು ನುಡಿದು, ಮುಲಾಣಾ ಹಯಾತಿಯ ಕಡೆಗೆ ನೋಡಲು, ಆತನು– ''ಆಗಲಿ, ಅವಶ್ಯವಾಗಿ ಇರಲೊಲ್ಲರೇಕೆ; ಗೌಸುದಲಾಲ, ನೀವು ಇವರ ಎಲ್ಲ ಬಂದೋಬಸ್ತು ಮಾಡಿ, ಅವರಿಗೆ ಯಾವಬಗೆಯ ತೊಂದರೆಯಾಗದಂತೆಯೂ ನೋಡಿ ಕೊಳ್ಳಿರಿ. ನಾವು ಇನ್ನು ಹೊರಡುವೆವು'' ಎಂದು ಹೇಳಿ, ಮದ್ಯದ ಮದದಿಂದ ಮೋಹಿತ ರಾಗಿದ್ದ ಅವರಿಬ್ಬರೂ ಹೊರಟುಹೋದರು. ಇತ್ತ ಆ ಖಾನದಾನಿಯ ಇಬ್ಬರು ಹೆಣ್ಣು ಮಕ್ಕಳಂತೂ, ಮದ್ಯದ ಮದದಲ್ಲಿ ಯಾವ ಅರಿವೂ ಇಲ್ಲದೆ ಬಿದ್ದುಬಿಟ್ಟಿದ್ದರು! ಒಟ್ಟಿಗೆ, ಅಂದು ಅಲ್ಲಿ ಮದ್ಯದ ಮದದ ಸಾಮ್ರಾಜ್ಯವೇ ಆಗಿಹೋಗಿತ್ತು!

# ವಿಜಯ ಪ್ರಾಪ್ತಿ

ಹೀಗೆ ಮದ್ಯದ ಮದದಿಂದ ಮೋಹಿತರಾಗಿ ರುಸ್ತುಮ ಜಮಾಲನೂ, ಮುಲಾಣಾ ಹಯಾತಿಯೂ ಕಾರ್ಯಹಾನಿಯನ್ನು ಮಾಡಿಕೊಂಡು ಮನೆಗೆ ಹೋಗಲು, ಮರುದಿವಸ ಬೆಳಗಾದಬಳಿಕ ಅವರಿಗೆ ಪಶ್ಚಾತ್ತಾಪವಾಯಿತು; ಯಾಕಂದರೆ, ಹೀಗೆ ತಾವು ಎಚ್ಚರಗೆಟ್ಟು ಕೆಲಸಮಾಡಿದ್ದು ಮೂರ್ಖತನವೆಂದು ಅವರಿಗೆ ತೋರಿತು. ಅವರು ಸೆರೆಯಲ್ಲಿಯ ಹೆಂಗಸರ ಪರೀಕ್ಷೆ ಮಾಡಲಿಕ್ಕೆ ತಮ್ಮ ನಂಬಿಗೆಯವರೆಂದು ಕಳಿಸಿಕೊಟ್ಟಿದ್ದ ಆ ಇಬ್ಬರು ದಾಸಿಯರನ್ನು ಕರೆಸಿ ಕೇಳಲು, ಅವರ ಯೋಗ್ಯತೆಯಂತೆ ಅವರು ಸೆರೆಯಲ್ಲಿದ್ದ ಯಾವತ್ತು ಹೆಂಗಸರನ್ನು, ನಿಜವಾದ ಹೆಂಗಸರೆಂದೇ ವರ್ಣನಮಾಡಿಬಿಟ್ಟು, ಗಂಗೆಯು ವಿಜಾಪುರಕ್ಕೆ ಹೋಗಲಿಕ್ಕೆ ಸಂತೋಷದಿಂದ ಒಪ್ಪಿಕೊಂಡಿರುವಳೆಂದು ಹೇಳಿಬಿಟ್ಟರು. ಜಾಣಳಾದ ಫಾತಿಮೆಯು, ಆ ದಾಸಿಯರನ್ನು ಖಾನದಾನಿಯ ದೊಡ್ಡ ಮನೆತನದ ಹೆಣ್ಣು ಮಕ್ಕಳೆಂದು ವರ್ಣಿಸಿದ್ದಲ್ಲದೆ, ಅವರಿಗೆ ಯಥೇಚ್ಛ ಉಪಹಾರ ಮಾಡಿಸಿ, ಉತ್ತಮವಾದ ಮದ್ಯವನ್ನು ಮಿತಿಮೀರಿ ಕುಡಿಸಿದ್ದಳು; ಆದ್ದರಿಂದ ಅವರು ಉಬ್ಬಿಹೋಗಿ, ತಮ್ಮನ್ನು ಮರ್ಯಾದೆಯಿಂದ ಬಹಳವಾಗಿ ಉಪಚರಿಸಿದಕ್ಕೆ ಕೃತಜ್ಞರಾಗಿ ತಾವು ಮದ್ಯಪಾನದಿಂದ ಅರವುಗೆಟ್ಟು ಬಿದ್ದಿದ್ದರ ಚಕಾರ ಶಬ್ದವನ್ನು ತೆಗೆಯದೆ, ಕೈಗಂಟುಹಾಕಿ ಗಂಗೆಯ ರೂಪವನ್ನೂ, ಗುಣಗಳನ್ನೂ ಯಥೇಚ್ಛ ವರ್ಣಿಸಿಬಿಟ್ಟರು! ಸಣ್ಣ ಜನರ ಮಾತೇ ಅಷ್ಟು! ಅವರು ತಮಗೆ ಬೇಕಾದ ಮಾತನ್ನು ಹೊಗಳುವದೂ ಅತಿಶಯೋಕ್ತಿಯಿಂದಲೇ! ತಮಗೆ ಬೇಡಾದ ಮಾತನ್ನು ಹೀಯಾಳಿಸುವದೂ ಅತಿಶಯೋಕ್ತಿಯಿಂದಲೇ! ಅವರಲ್ಲದೆ ಮತ್ತೆ ಯಾರಾದರೂ ತೀಕ್ಷ್ಣಬುದ್ಧಿಯ ಕುಲೀನರಾದ ಹೊಟ್ಟೆಯುರಕ ಹೆಣ್ಣು ಮಕ್ಕಳಾಗಿದ್ದರೆ, ಆ ಸೆರೆಮನೆಯ ಹೆಂಗಸರ ಹುಳುಕು, ಅವರನ್ನು ನೋಡಿದಕೂಡಲೆ ತಟ್ಟನೆ ಅವರಿಗೆ ಒಡೆದು ಕಾಣಬಹುದಾಗಿತ್ತು; ಆದರೆ ಕಾಫರ ಸ್ತ್ರೀಯರ ಪರೀಕ್ಷೆಗೆ ಕುಲೀನ ಸ್ತ್ರೀಯರನ್ನು ಹೇಗೆ ಕಳಿಸಬೇಕು? ಶಿವಾಜಿಯ ಪುಣ್ಯವೇ ಅಷ್ಟು ಬಲವತ್ತರವಾಗಿರಲು, ರುಸ್ತುಮ ಜಮಾಲನಂಥ ದುರ್ಜನನಾದರೂ ಏನು ಮಾಡುವನು, ಮುಲಾಣಾ ಹಯಾತಿಯಂಥ ಸಜ್ಜನನಾದರೂ ಏನು ಮಾಡುವನು? ಶಿವಾಜಿಯನ್ನು ಮುರಿಯಲಿಕ್ಕೆ ಮುಸಲ್ಮಾನರು ಅಲ್ಪ ಸ್ವಲ್ಪ ಪ್ರಯತ್ನ ಮಾಡಲಿಲ್ಲ. ಆದರೆ ಅವರಿಗೆ ದೈವಾನುಕೂಲತೆಯಿಲ್ಲದ್ದರಿಂದ, ಅವರ ಪ್ರಯತ್ನಗಳೆಲ್ಲ ಕಡೆಗೆ ನಿಷ್ಫಲವಾಗಿ, ಶಿವಾಜಿಯ ಪ್ರಯತ್ನಗಳೆಲ್ಲ ಆತನ ದೈವಾನುಕೂಲತೆಯ ಮೂಲಕ ಸಫಲವಾದವು.

ಈ ಮಾತನ್ನು ಮನಸ್ಸಿನಲ್ಲಿ ತಂದರೆ, ಕಾರ್ಯಸಾಧನಕ್ಕೆ ಸತತವಾದ ಪ್ರಯತ್ನದಂತೆ, ದೈವಾನುಕೂಲವೂ ಅವಶ್ಯವಾಗಿರುವದೆಂಬ ಮಾತನ್ನು ಲಕ್ಷದಲ್ಲಿಡಬೇಕಾಗುವದು. ಹಿಂದಕ್ಕೆ ನಾವು, ದೈವಾನುಕೂಲತೆಯ ಮೂಲಕ ಶಿವಾಜಿಯು ಮಣ್ಣು ಹಿಡಿದರೆ ಚಿನ್ನವಾಗುವದನ್ನು ಹೇಳಿರುವೆವಷ್ಟೆ? ಈಗ ಕಲ್ಯಾಣಕೋಟೆಯನ್ನು ಸ್ವಾಧೀನಪಡಿಸಿಕೊಳ್ಳುವಾಗೂ ಶಿವಾಜಿಗೆ ಅನುಕೂಲವಾದ ಪ್ರಸಂಗಗಳು ಹೇಗೆ ಹೇಗೆ ಒಂದೊಂದಾಗಿ ಒದಗಿ ಬಂದವೆಂಬದನ್ನು ಮನಸ್ಸಿನಲ್ಲಿ ತಂದರೆ, ದೈವಾನುಕೂಲತೆಯ ಮಹತ್ವವು ಮತ್ತಿಷ್ಟು ಎದ್ದು ಕಾಣುವದು.

ವಿಜಾಪುರದ ಮಹಮ್ಮದ ಬಾದಶಹನು ಮುಲಾಣಾ ಹಯಾತಿಯ ಶೌರ್ಯಾದಿ ಅಲಭ್ಯ ಗುಣಗಳನ್ನು ನೋಡಿ, ಶಿವಾಜಿಯನ್ನು ಹಣಿಯಲಿಕ್ಕೆ ಇವನೇ ಯೋಗ್ಯ ವರನೆಂದು ತಿಳಿದು, ಅವನನ್ನು ಕಲ್ಯಾಣದ ಸುಬೇದಾರನನ್ನಾಗಿ ನಿಯಮಿಸಿ, ಕಲ್ಯಾಣದಲ್ಲಿಯೇ ಇರಬೇಕೆಂದು ಆತನನ್ನು ಸಕುಟುಂಬ ಕಳಿಸಿಕೊಟ್ಟಿದ್ದನು; ಆದರೆ ಕುಟಿಲತನವರಿಯದ ಆ ಮುಲಾಣಾ ಹಯಾತಿಯ ಸದ್ಗುಣಗಳೇ, ಈಗ ಕುಟಿಲತನದ ಶಿವಾಜಿಗೆ ಅನುಕೂಲವಾದವು! ಮುಲಾಣಾ ಹಯಾತಿಯು ತನ್ನ ಸರಳ ಸ್ವಭಾವದ ಮೂಲಕ ಗೌಸುದಲಾಲನನ್ನು ಪೂರಾ ನಂಬಿ ಬಿಟ್ಟಿದ್ದೂ, ರುಸ್ತುಮ ಜಮಾಲನ ಸೂಚನೆಯಂತೆ ಆ ಗೌಸು ದಲಾಲನನ್ನೂ, ಅವನ ಹುಲ್ಲು ಹೊರೆಗಳನ್ನೂ ಪರೀಕ್ಷಿಸಿ, ಅವುಗಳ ನಿತ್ಯದ ಪರೀಕ್ಷೆಗಾಗಿ ಒಬ್ಬ ಅಧಿಕಾರಿಯನ್ನು ನಿಯಮಿಸಿ ತಾನು ನಿಶ್ಚಿಂತನಾದದ್ದೂ ಶಿವಾಜಿಗೆ ಅನುಕೂಲವಾದವು, ಯಾಕಂದರೆ, ಅವೆರಡು ಕಾರಣ ಗಳಿಂದ ಗೌಸುದಲಾಲನ ಮೇಲಿನ ಮುಲಾಣಾ ಹಯಾತಿಯ ನಂಬಿಗೆಯು ಮತ್ತಿಷ್ಟು ಹೆಚ್ಚಾಗಿ, ಅದರಿಂದ ಗೌಸುದಲಾಲನಿಗೂ, ಅವನ ಆಳುಗಳಿಗೂ ರಾತ್ರಿ ಕಲ್ಯಾಣಕೋಟೆಯಲ್ಲಿಯೇ ವಸ್ತಿ ಮಾಡಲಿಕ್ಕೆ ಆಸ್ಪದವು ಉಂಟಾಯಿತು! ಅದರಂತೆ, ರುಸ್ತುಮ ಜಮಾಲನು ಅಲ್ಪ ಕಾರಣ ಕ್ಕಾಗಿ ಶಿವಾಜಿಗೆ ಅಂಜಿ ಹುಚ್ಚು ಹುಚ್ಚು ಬಡಿದದ್ದೂ, ಸೆರೆಯಲ್ಲಿಯ ಹೆಂಗಸರ ಪರೀಕ್ಷೆ ಯನ್ನು ತಾವೇ ಮಾಡದೆ, ಗೌಸುದಲಾಲನಂಥ ಹೊಸ ಪರಿಚಯದ ಮನುಷ್ಯನ ಮನೆಯ ಹೆಂಗಸರ, ಹಾಗೂ ಕ್ಷುದ್ರ ದಾಸಿಯರ ಮುಖಾಂತರ ಮಾಡಿಸಿದ್ದೂ, ಮಾರಾಟರ ಮಾಯ ಗಾರಿಕೆಯು ತಮಗೆ ಪೂರಾ ಗೊತ್ತಿದ್ದರೂ, ತಾವು ಮಿತಿಮೀರಿ ಸೆರೆಕುಡಿದು ಹೆಂಗಸರ ಪರೀಕ್ಷೆಗೆ ಹೋದದ್ದೂ ಶಿವಾಜಿಗೆ ಅನುಕೂಲವಾದವು! ಹೀಗೆ ದೈವಾನುಕೂಲವಿದ್ದಾಗ, ಇಂತಹ ಅಶಕ್ಯ ಸಂಗತಿಗಳೂ ಶಕ್ಯವಾಗಲು, ಅದನ್ನೇ ದೈವವಿಲಾಸವೆಂದು ಕರೆಯುವರು.

ಮರುದಿವಸ ರುಸ್ತುಮ ಜಮಾಲರು ಮುಲಾಣಾ ಹಯಾತಿಗೆ– ''ಇಂದು ನಾವೇ ಹೋಗಿ ಆ ಹೆಂಗಸರನ್ನು ಪರೀಕ್ಷಿಸಿಬಿಡೋಣವೆಂ''ದು ಹೇಳಿದನು; ಆದರೆ ಅಂದೇ ಬಾದಶಹನ ಜಯಂತಿಯ ಸಮಾರಂಭದ ಆನಂದದ ಪ್ರಸಂಗವಿದ್ದದ್ದರಿಂದ, ಮುಲಾಣಾಹಯಾತಿಯು ಆತನಿಗೆ– ''ಇಂದು ಬೇಡ, ನಾಳೆ ಪರೀಕ್ಷಿಸೋಣ. ಆ ಕ್ಷುದ್ರ ಕಾಫರ ಹೆಣ್ಣುಮಕ್ಕಳ ಬಿಸಾತಾದರೂ ಏನು? ಅವರಿಗೆ ಇಷ್ಟು ಅಂಜುವದೇಕೆ? ಅವರು ಗಂಡಸರಾಗಿದ್ದರೂ ಅವ ರಿಂದ ನಮಗಾಗುವ ಅಪಾಯವೇನು?'' ಎಂದು ತನ್ನ ಶೌರ್ಯದ ಹೆಮ್ಮೆಯಿಂದ ಅಂದು ಬಿಟ್ಟನು! ಅಂತಹ ವಿವೇಕಿಯಲ್ಲಿ ಇಂತಹ ಅಹಂಭಾವವುಂಟಾದದ್ದೂ, ಬಾದಶಹನ ಜಯಂತಿಯ ಸಮಾರಂಭದ ಯೋಗವು ಅಂದೇ ಒದಗಿದ್ದೂ ಶಿವಾಜಿಯ ಸುದೈವವೇ ಸರಿ. ಇನ್ನೊಂದು ಅತಿಮಹತ್ವದ ಅನುಕೂಲ ಪ್ರಸಂಗವು ಶಿವಾಜಿಗೆ ಹೇಗೆ ಒದಗಿತೆಂಬುದನ್ನು ಇಲ್ಲಿ ಬುದ್ಧಿಪೂರ್ವಕವಾಗಿ ಹೇಳುವೆವು. ಮುಲಾಣಾ ಹಯಾತಿಯು, ಕಲ್ಯಾಣದ ಸುಭೆಯಲ್ಲಿ ತನ್ನ ಅಧಿಕಾರವು ಇನ್ನೂ ಪೂರಾ ಕುಳಿತಿರುವದಿಲ್ಲವೆಂದು ತಿಳಿದು, ತಮ್ಮ ವಿಷಯದ ಅನುರಾಗ ವಿಲ್ಲದ ಪ್ರಜೆಗಳಿಗೆ, ಜಯಂತಿಯ ಸಮಾರಂಭದ ಕರವನ್ನು ಹೇರಬಾರದೆಂದು ಮಾಡಿದ್ದನು; ಆದರೆ ಕಾರ್ಯಸಾಧಕನಾದ ಗೌಸುದಲಾಲನು ಆತನನ್ನು ಕುರಿತು– ಖಾವಿಂದ, ಪ್ರಜೆಗಳು

ತಾವಾಗಿ ಸಂತೋಷದಿಂದ ತಮ್ಮ ರಾಜಭಕ್ತಿಯನ್ನು ಪ್ರಕಟಿಸುವದಕ್ಕಾಗಿ ಕೊಡುವ ಹಣವನ್ನು ತಕ್ಕೊಳ್ಳದೆ, ತಾವೇ ಸರಕಾರದ ವೆಚ್ಚದಿಂದ ಸಮಾರಂಭ ಮಾಡುವದು, ಪ್ರಜೆಗಳ ಅಪ್ರೀತಿಯ, ಅಥವಾ ಔದಾಸೀನ್ಯದ ಲಕ್ಷಣವಾಗಬಹುದಲ್ಲವೆ? ಪ್ರಜಾನುರಾಗವು ಬಾದಶಹರ ದೊಡ್ಡ ಭೂಷಣವು; ನಮ್ಮಂಥ ರಾಜನಿಷ್ಠ ಪ್ರಜೆಗಳು ಇರುತ್ತಿರಲು, ಬಾದಶಹರಿಗೆ ಈ ಭೂಷಣವನ್ನು ಒದಗಿಸಿಕೊಡದಿರುವದು ನಮಗೆ ಲಾಂಛನಾಸ್ಪದವೇ ಸರಿ! ಪ್ರಜೆಗಳು ನಮ್ಮ ಮಹಮ್ಮದ ಬಾದಶಹರಲ್ಲಿ ಅತ್ಯಂತ ನಿಷ್ಠೆಯುಳ್ಳವರಾಗಿದ್ದರು. ನಾನು ಸರಕಾರಕ್ಕೆ ಹುಲ್ಲಿನ ಪೂರೈಕೆ ಮಾಡಿ ಕೊಡುತ್ತಿರುವಾಗ, ಈ ಮಾತಿನ ನಂಬಿಗೆಯು ನನಗೆ ಪೂರಾ ಆಗಿಹೋಗಿರುತ್ತದೆ; ಪ್ರಜೆಗಳ ನಿಷ್ಠೆಯಿಲ್ಲದಿದ್ದರೆ, ಇಷ್ಟು ಅಲ್ಪಕಾಲದಲ್ಲಿ ಇಷ್ಟು ಅಗ್ಗವಾಗಿ ಇಷ್ಟು ಹುಲ್ಲಿನ ಪೂರೈಕೆ ಯಾಗುವ ಸಂಭವವಿತ್ತೆ? ಆದ್ದರಿಂದ ರಾಜನಿಷ್ಠರಾದ ಪ್ರಜೆಗಳಿಂದ ಕರವನ್ನು ಎತ್ತಲಿಕ್ಕೆ ನನಗೆ ಪರವಾನಿಗೆಯನ್ನು ಕೊಟ್ಟರೆ, ನಾನು ಆ ಕೆಲಸವನ್ನು ಅನ್ಯಾಯವಾಗದಂತೆಯೂ, ಪ್ರಜೆಗಳಿಗೆ ನೋವಾಗದಂತೆಯೂ ಮಾಡುವೆನು. ಅರಸನು ಯಾವನಿದ್ದರೂ, ಆತನನ್ನು ಹಿಂದೂ ಜನರು ವಿಷ್ಣು ಸ್ವರೂಪನೆಂದು ತಿಳಿಯುವರು! ಅದರಂತೆ, ಅವರು ರಾಮಕೃಷ್ಣ ಮೊದಲಾದ ಪ್ರಾಚೀನಕಾಲದ ಅರಸರ ಜಯಂತಿಯ ಉತ್ಸವಗಳನ್ನು ಪ್ರತಿವರ್ಷ ಈಗಲಾದರೂ ತಪ್ಪದೆ ಮಾಡುತ್ತಿರುವರು. ತಮ್ಮ ಅರಸನು ಯಾವ ಜಾತಿಯವನಿದ್ದರೂ, ನ್ಯಾಯದಿಂದ ರಾಜ್ಯವಾಳಿದ ರಾಯಿತು, ಅಂಥವನನ್ನು ಹಿಂದೂ ಜನರು ದೇವಾಂಶನೆಂತಲೂ, ತಂದೆಯೆಂತಲೂ ತಿಳಿಯುವರು. ದಿಲ್ಲಿಯ ಅಕಬರ ಬಾದಶಹರಲ್ಲಿ ಅವರ ಭಕ್ತಿಯೆಷ್ಟು! ನಮ್ಮ ಈಗಿನ ವಿಜಾಪುರದ ಮಹಮ್ಮದ ಬಾದಶಹರಲ್ಲೇನು ಅವರ ಭಕ್ತಿಯು ಕಡಿಮೆಯಿರುವದೆಯೇ? ಜಾವಳಿಯ ರಾಜನಾದ ಚಂದ್ರರಾವ ಮೋರೆಯೇ ಮೊದಲಾದ ಎಂಥ ಎಂಥ ಹಿಂದೂ ರಾಜರೂ, ಸರದಾರರೂ ತಮ್ಮ ಜಾತಿಯ ಶಿವಾಜಿಯನ್ನು ಶತ್ರುವೆಂದು ತಿಳಿದು, ನಮ್ಮ ಬಾದಶಹರ ಸೇವೆಯನ್ನು ಈಗೂ ಮಾಡುತ್ತಿರುವರಲ್ಲ! ಅಷ್ಟು ದೂರವೇಕೆ, ಪ್ರತ್ಯಕ್ಷ ಶಿವಾಜಿಯ ತಂದೆ ಶಹಾಜಿರಾಜರೇ ನಮ್ಮ ಮಹಮ್ಮದ ಬಾದಶಹರ ಚಾಕರರಾಗಿ ಶಿವಾಜಿಯ ಗೊಡವೆ ಯನ್ನೇ ಬಿಟ್ಟು, ದೂರ ಕರ್ನಾಟಕಕ್ಕೆ ಹೋಗಿಬಿಟ್ಟಿರುವರು! ಆದ್ದರಿಂದ ಖಾವಿಂದ, ಪ್ರಜೆ ಗಳಿಗೆ ತಮ್ಮ ರಾಜನಿಷ್ಠೆಯನ್ನು ಪ್ರಕಟಿಸುವ ಸುಯೋಗವನ್ನು ಒದಗಿಸಿಕೊಡಬೇಕು'' ಎಂದು ಉಪದೇಶಿಸಲು, ಮುಲಾಣಾ ಹಯಾತಿಯು ಶಿವಾಜಿಯ ಸುದೈವದಿಂದ ಅವನ ಮೋಸದ ಮಾತಿಗೆ ಮರುಳಾಗಿ ಹೋಗಿ, ಆ ಕೆಲಸಕ್ಕೆ ಆ ಗೌಸುದಲಾಲನನ್ನೇ ಈ ಮೊದಲೇ ನಿಯಮಿಸಿ ಬಿಟ್ಟಿದ್ದನು. ಅದರಂತೆ ಗೌಸುದಲಾಲನಾದರೂ ಹದಿನೈದೇ ದಿನಗಳಲ್ಲಿ ಪ್ರಜೆಗಳಿಂದ ಹೇರಳ ಹಣ ಕೂಡಿಸಿ ತಂದುಕೊಟ್ಟಿದ್ದಲ್ಲದೆ, ತಾನು ಸ್ವತಃ ಐದುನೂರು ರೂಪಾಯಿಗಳನ್ನು ಉತ್ಸವ ಕ್ಕಾಗಿ ಕೊಟ್ಟನು. ಆದ್ದರಿಂದ ಮುಲಾಣಾ ಹಯಾತಿಯು ಸಂತುಷ್ಟನಾಗಿಹೋಗಿ, ಆ ಉತ್ಸವದ ಯಾವತ್ತು ವ್ಯವಸ್ಥೆಯನ್ನು ಗೌಸುದಲಾಲನಿಗೆ ಒಪ್ಪಿಸಿದನು! ಇದು ''ಕಳ್ಳನ ಕೈಯಲ್ಲಿ ಗಂಟು ಕೊಟ್ಟಂತೆ'' ಶಿವಾಜಿಗೆ ಅನುಕೂಲವೇ ಆಯಿತೆಂದು ಮುಂದೆ ಓದುತ್ತ ಹೋದಂತೆ ಗೊತ್ತಾಗುವದು.

ಹೀಗೆ ಮುಲಾಣಾ ಹಯಾತಿಯು ಉತ್ಸವದ ಯಾವತ್ತು ವ್ಯವಸ್ಥೆಯನ್ನು ತನಗೆ ಒಪ್ಪಿಸಲು, ಆ ಗೌಸುದಲಾಲನು ಸಂತೋಷಪಟ್ಟು, ಅಂದಿನ ರಾತ್ರಿಯ ಊಟದ ವ್ಯವಸ್ಥೆಯನ್ನೂ, ನಾಚು–ರಂಗು–ಮದ್ದು ಮೊದಲಾದವುಗಳ ವ್ಯವಸ್ಥೆಯನ್ನೂ ಉತ್ತಮ ರೀತಿಯಿಂದ ಮಾಡಿಸಿದನು. ಅವನ ಕಾರ್ಯಾಸಕ್ತಿಯನ್ನೂ, ಉತ್ತಮ ವ್ಯವಸ್ಥೆಯನ್ನೂ ನೋಡಿ, ಎಲ್ಲರೂ ಆನಂದಪಟ್ಟರು; ಅಂದಿನ ಸಮಾರಂಭದಲ್ಲಿ ಗೌಸುದಲಾಲನು ದುಡ್ಡನ್ನು ನೀರಿನ ಹಾಗೆ ವೆಚ್ಚಮಾಡಿದನು. ಮುಸಲ್ಮಾನರ ಅಡಿಗೆಯೇ ಬೇರೆ, ಹಿಂದೂ ಜನರ ಅಡಿಗೆಯೇ ಬೇರೆ; ಮುಸಲ್ಮಾನರು ಊಟಕ್ಕೆ ಕುಳಿತುಕೊಳ್ಳುವ ಸ್ಥಳವೇ ಬೇರೆ, ಹಿಂದೂ ಜನರು ಊಟಕ್ಕೆ ಕುಳಿತುಕೊಳ್ಳುವ ಸ್ಥಳವೇ ಬೇರೆ; ಮುಸಲ್ಮಾನರಿಗೆ ಬಡಿಸುವ ಜನರೇ ಬೇರೆ, ಹಿಂದೂ ಜನರಿಗೆ ಬಡಿಸುವ ಜನರೇ ಬೇರೆ; ಮುಸಲ್ಮಾನರಲ್ಲಿಯೂ ಕೋಟೆಯ ರಕ್ಷಕರು ಕುಳಿತುಕೊಳ್ಳುವ ಸ್ಥಳವೆ ಬೇರೆ, ತೋಫಖಾನೆಯವರು ಕುಳಿತುಕೊಳ್ಳುವ ಸ್ಥಳವೇ ಬೇರೆ, ಉಳಿದವರು ಕುಳಿತುಕೊಳ್ಳುವ ಸ್ಥಳವೆ ಬೇರೆ; ಗೋಷೆಯ ಹೆಣ್ಣುಮಕ್ಕಳ ವ್ಯವಸ್ಥೆಯಂತು ತೀರ ಬೇರೆ. ಆದರೆ ಕಾಫರರಾದ ಹಿಂದುಗಳಲ್ಲಿ ಮಾತ್ರ ಇಂತಹ ವ್ಯವಸ್ಥೆಯಿರದೆ, ದಡ್ಡಿಯಲ್ಲಿ ಕುರಿಗಳನ್ನು ತರಬುವಂತೆ, ಗಂಡಸರು ಹೆಂಗಸರೆಂಬ ತಾರತಮ್ಯವೂ ಇಲ್ಲದೆ, ಅವರನ್ನು ಒತ್ತಟ್ಟಿಗೆ ಕುಳ್ಳಿರಿಸಿ ಬಿಡುವಂತೆ ವ್ಯವಸ್ಥೆ ಮಾಡಿಸಿದ್ದನು; ಹೀಗೆ ಮಾಡಿದ್ದಕ್ಕಾಗಿ ಮುಸಲ್ಮಾನರು ಗೌಸುದಲಾಲನನ್ನು ಬಹಳವಾಗಿ ಹೊಗಳಿದರು!.

ಮೂರು ತಾಸು ರಾತ್ರಿಯಾಯಿತು; ಎಲ್ಲರೂ ಊಟಕ್ಕೆ ಕುಳಿತರು; ಗೌಸುದಲಾಲನು ತಮ್ಮ ಮುಸಲ್ಮಾನರ ಯೋಗಕ್ಷೇಮವನ್ನು ಮೇಲೆ ಮೇಲೆ ವಿಚಾರಿಸುತ್ತಿದ್ದನು; ಅವರಿಗೆ ಆಗ್ರಹ ಮಾಡಿ ಮಾಡಿ ಸವಿಸವಿಯಡಿಗೆಗಳನ್ನು ಬಡಿಸಲಿಕ್ಕೆ ಬಡಿಸುವವರಿಗೆ ಹೇಳುತ್ತಿದ್ದನು; ಗೌಸುದಲಾಲನು ಅಂದಿನ ಅಡಿಗೆಯನ್ನು ಬುದ್ಧಿಪೂರ್ವಕವಾಗಿ ಬಹು ಸರಸವಾಗಿ ಮಾಡಿಸಿದ್ದನು; ಆದರೆ ಕಾಫರರಾದ ಹಿಂದುಗಳನ್ನು ಮಾತಾಡಿಸುವವರೇ ಇಲ್ಲ, ಅವರಿಗೆ ಅನ್ನ ಬಂದರೆ ಆಂಬ್ರವಿಲ್ಲ, ಆಂಬ್ರ ಬಂದರೆ ಅನ್ನವಿಲ್ಲ, ಅವರಿಗೆ ಸವಿಯಡಿಗೆಯಂತು ಇಲ್ಲವೇ ಇಲ್ಲ; ಇಲ್ಲವೆನ್ನಲಿಕ್ಕೆ, ಗೌಸುದಲಾಲನು ಅವರಿಗಾಗಿ ಅಲ್ಪ ಸ್ವಲ್ಪ ಗೋದೀಹುಗ್ಗಿಯನ್ನು ಮಾಡಿಸಿದ್ದನು; ಆದರೆ ಗೋದಿಯ ಅಕ್ಕಿ ಒಂದು ಬೆಂದಿದ್ದರೆ ಒಂದು ಬೆಂದಿದ್ದಿಲ್ಲ; ಗೋದೀ ಅಕ್ಕಿಯೊತ್ತಟ್ಟಿಗೆ, ಬೆಲ್ಲದ ನೀರೊತ್ತಟ್ಟಿಗೆ! ಮುಸಲ್ಮಾನರ ಬಿರಂಜಿಯ ಸುವಾಸನೆಯು ಹಿಂದೂ ಜನರ ಮೂಗಿಗೆ ಬಡಿಯುತ್ತಿದ್ದರೆ, ಆ ಹಿಂದೂ ಕಾಫರರ ಹೊತ್ತಿದ ಗೋದೀಹುಗ್ಗಿಯ ಕಮರಿನ ನಾತವು ಮುಸಲ್ಮಾನರ ಮೂಗಿಗೆ ಬಡೆದು, ಅವರು– ''ಎಂಥ ಕೆಟ್ಟ ಜನರು, ಎಂಥ ಕೆಟ್ಟ ಅಡಿಗೆ'' ಎಂದು ಮೋರೆ ಕಿವುಚುತ್ತಿದ್ದರು. ಅವರು ತಮಗೆ ಬೇಕಾದ ಪದಾರ್ಥಗಳನ್ನು ಘಟ್ಟಿಸಿ ಘಟ್ಟಿಸಿ ಕೂಗಿ ಹಾಕಿಸಿಕೊಳ್ಳುತ್ತಿದ್ದರು; ಬೇಡಿದ ಸಾಮಾನು ಬಾರದಿದ್ದರೆ, ಗೋಸುದಲಾಲನಿಗೆ ಹೇಳಿ ತರಿಸಿ ಸಾಮಾನ ಹಾಕಿಸಿಕೊಂಡು, ''ಇದೇ ಬೇಕು, ಇದು ಬೇಡ'' ಎಂದು ಗದ್ದಲ ಮಾಡದೆ, ಸುಮ್ಮನೆ ಉಣ್ಣುತ್ತಿದ್ದರು. ಬರಿ ಎಲೆಯಾಗಲು, ಬಡಿಸುವವರ ಹಾದೀನೋಡುತ್ತ ಸುಮ್ಮನೆ ಕುಳಿತುಕೊಳ್ಳುತ್ತಿದ್ದರು; ಈ ಸ್ಥಿತಿಯನ್ನು ನೋಡಿ ರುಸ್ತುಮ ಜಮಾಲನು ನಗುತ್ತಿದ್ದನು.

ಆದರೆ ಉದಾರಭಾವದ ಮುಲಾಣಾ ಹಯಾತಿಗೆ ವಿಷಾದವಾಗಿ, ಆತನು ಹಿಂದೂ ಜನರ ಪಂಕ್ತಿಯಲ್ಲಿ ಬಂದು, ಅವರಿಗೆ ಬೇಕಾದ ಸಾಮಾನುಗಳನ್ನು ತರಿಸಿ ಹಾಕಿಸಹತ್ತಿದನು; ಆಗ ರುಸ್ತುಮ ಜಮಾಲನೂ ಆತನ ಅನುಕರಣ ಮಾಡಬೇಕಾಯಿತು; ಅದನ್ನು ನೋಡಿ ಗೌಸುದಲಾಲನು ಗಡಿಬಿಡಿಯಿಂದ ಅಲ್ಲಿಗೆ ಬಂದು– ''ಖಾನಸಾಹೇಬ, ತಾವು ಹೋಗಬೇಕು, ತಸ್ದಿತಕೊಳ್ಳಬಾರದು; ನಾನೆಲ್ಲ ಹಾಕಿಸುತ್ತೇನೆ. (ಊಟಕ್ಕೆ ಕುಳಿತವರನ್ನು ಕುರಿತು) ಸಾವಕಾಶ ಉಣ್ಣಿರಲೇ ಸುಮ್ಮನೆ ಗದ್ದಲ ಮಾಡಬೇಡಿರಿ, ನಿಮಗೇನು ಕಡಿಮೆಯಾಗಿದೆ ತಿನ್ನಲಿಕ್ಕೆ, ಸುಬೇದಾರ ಸಾಹೇಬರಿಗೆ ತೊಂದರೆ ಕೊಡಬೇಡಿರಿ; ರಾಗಿಯ ಮುದ್ದೆಯ ಮೂಳಗಲು ನೀವು ಗೋದಿಯ ಹುಗ್ಗಿಯನ್ನು ಎಂದು ಕಾಣಬೇಕು?''

ಹೀಗೆ ಏನೇನೋ ವಿನೋದಗಳೂ, ಚಮತ್ಕಾರಗಳೂ ಆಗುತ್ತ ಊಟವು ರಾತ್ರಿ ಐದುವರೆ ತಾಸಿಗೆ ಮುಗಿಯಿತು. ಆ ಮೇಲೆ ನಾಚು, ರಂಗು, ಗಾಯನ ಮದ್ದು, ವಿವಿಧ ವಾದ್ಯಗಳು ಆರಂಭವಾದವು. ಉತ್ತಮ ರೋಷನಾಯಿಯ ಮಂದಿರವು, ಸುಗಂಧಮಯವಾಗಿರಲು, ಎಲ್ಲ ಮುಸಲ್ಮಾನರು ''ಕ್ಯಾಬಾತ್, ಕ್ಯಾಬಾತ್! ಖಾಸಿಖಾಸಿ! ಬಹೂತಅಚ್ಛಾ ಬಹೂತಅಚ್ಛಾ!'' ಎಂದು ಆನಂದಘೋಷ ಮಾಡುತ್ತ, ನಾಚು ನೋಡುವಲ್ಲಿ ಪರವಶರಾಗಿ ಕುಳಿತುಕೊಂಡರು; ಆಗ ಹಿಂದೂ ಜನರಲ್ಲಿ ಮನಸ್ಸು ನಿಲ್ಲಲಾರದ ಕೆಲವರು ಮಾತ್ರ, ಬಾಗಿಲಲ್ಲಿ ಹಾಗು ಕಿಡಕಿಗಳಲ್ಲಿ ನೋಡುತ್ತ ನಿಂತು, ಒಳಗಿನವರು ಬೆದರಿಸಲು, ಹಿಂದಕ್ಕೆ ಸರಿಯುತ್ತ ಒಳಗಿನ ಸಮಾರಂಭವನ್ನು ಮಂಡತನದಿಂದ ನೋಡುತ್ತಿದ್ದರು. ಈ ರೀತಿಯನ್ನು ನೋಡಿ ಮುಲಾಣಾ ಹಯಾತಿಗೆ ಪರಮ ವಿಷಾದವಾಗಿ, ಆತನು ಗೌಸುದಲಾಲನನ್ನು ಕರೆಸಿ ಸಿಟ್ಟುಮಾಡಿ ಹೊರಗಿನ ಜನರನ್ನು ಒಳಗೆ ಕರೆಸಿ ಕುಳ್ಳಿರಿಸಿದನು! ಆಗ ಸ್ವಲ್ಪ ಗದ್ದಲವಾಗಲು, ಸಮಾರಂಭವನ್ನು ನೋಡುವಲ್ಲಿ ಮಗ್ನರಾಗಿದ್ದ ಉಳಿದ ಮುಸಲ್ಮಾನರಿಗೆ ತ್ರಾಸವಾಗಿ, ಅವರು ಮುಲಾಣಾ ಹಯಾತಿಯ ಈ ಕೃತಿಯನ್ನು ನೋಡಿ ರೇಗಿ– ''ನಡುವೆ ಈ ಮಹಾರಾಯನು, ಏನು ವಿಘ್ನ ಮಾಡುವನಲ್ಲ! ಸುಮ್ಮನೆ ತನ್ನ ಲೋಡಿಗೆ ತಾನು ಕುಳಿತುಕೊಳ್ಳಬಾರದೆ? ಹೊರಗಿದ್ದವರನ್ನು ಒಳಗೆ ಕರಕೊಂಡು ಸುಮ್ಮನೆ ಗದ್ದಲ ಮಾಡುವನು! ಕಾಫರ ಜನರಿಗೇಕೆ ಇಷ್ಟು ಆದರ'' ಎಂದು ಒಟಗುಟ್ಟುತ್ತಿದ್ದರು! ಮುಸಲ್ಮಾನರೇನು, ಹಿಂದೂ ಜನರೇನು, ಕ್ರಿಶ್ಚನ್ನರೇನು, ಬೇರೆ ಯಾರಾದರೂ ಏನು? ತಮ್ಮ ಮೋಟು ಮೇಲಾದಾಗ ಅವರಲ್ಲಿ ಕ್ಷುದ್ರರು ಹೀಗೆಯೇ ಮಾಡುವರು!

ಹೀಗೆ ಎಲ್ಲ ಸಮಾರಂಭವು ಎಂಟು ತಾಸು ರಾತ್ರಿಗೆ ಮುಗಿಯಲು, ಮದ್ಯಪಾನಕ್ಕೆ ಆರಂಭವಾಯಿತು. ಗೌಸುದಲಾಲನು ಯಥೇಚ್ಛವಾಗಿ ಮದ್ಯತರಿಸಿದ್ದನು. ಅದರಲ್ಲಿ ಕಾವಲುಗಾರರಿಗೂ, ತೋಫಖಾನೆಯವರಿಗೂ ಅತ್ಯುತ್ತಮವಾದ ಮದ್ಯವನ್ನು ತರಿಸಿದ್ದನು. ಯಾರಿಗೂ ಮದ್ಯದ ಕೊರತೆಯಾಗದೆ, ಎಲ್ಲರೂ ಯಥೇಚ್ಛ ಮದ್ಯಪ್ರಾಶನಮಾಡಿ, ಮೂರು ಗಂಟೆಗೆ ಅಲ್ಲಿಂದ ಹೊರಟು, ಜೋಲಿ ಹೊಡೆಯುತ್ತ, ಕೇಕೆ ಹಾಕುತ್ತ, ಒಬ್ಬರನ್ನೊಬ್ಬರು ತಬ್ಬುತ್ತ–ನೂಕುತ್ತ–ಹೊಡೆಯುತ್ತ ತಮ್ಮ ತಮ್ಮ ಸ್ಥಳಗಳಿಗೆ ಹೋಗಿ ಬಿದ್ದುಕೊಂಡರು! ಯಾರು ಸಿಕ್ಕಲ್ಲಿ

ಉರುಳಿದರು! ಮೊದಲೇ ರಾತ್ರಿಯು ಬಹಳವಾಗಿತ್ತು; ಮೇಲೆ ಕಂಟವುಟ ಸುಗ್ರಾಸ ಭೋಜನ! ಅದರಮೇಲೆ ಯಥೇಚ್ಛ ಮದ್ಯಪಾನ! ಅಂದಬಳಿಕ ಕೇಳುವದೇನು? ಎಲ್ಲರೂ ಅರವುಗೆಟ್ಟು ಬಿದ್ದುಕೊಂಡರು! ರುಸ್ತುಮಜಮಾಲನೂ, ಮುಲಾಣಾ ಹಯಾತಿಯೂ ನಾಚು ರಂಗು ನಡೆದಾಗಲೇ ಹೊರಟುಹೋಗಿ ಮಲಗಿಕೊಂಡು ನಿದ್ದೆ ಮಾಡುತ್ತಲಿದ್ದರು; ಅವರೂ ಹವಣಿಯಾಗಿ ಮದ್ಯವನ್ನು ಕುಡಿದೇ ಇದ್ದರು; ಆಗ ಕಾಫರ ಜನರ ಹೊರತು ಉಳಿದ ಕೋಟೆಯಲ್ಲಿರುವವರೆಲ್ಲರಿಗೂ ಸ್ವರ್ಗದ ಸ್ವಪ್ನಗಳು ಬೀಳತೊಡಗಿದ್ದವು! ಹೀಗಿರುವಾಗ, ಒಮ್ಮಿಂದೊಮ್ಮೆ ಕಲ್ಯಾಣದ ಕೋಟೆಯಮೇಲೆ ಹೊರಗಿನಿಂದ ತೋಫುಗಳು ಹಾರಹತ್ತಲು, ಭಯಂಕರ ಧ್ವನಿಯು ದಶದಿಕ್ಕುಗಳನ್ನು ತುಂಬಿ ಒಳಗಿನ ಜನರ ಸಂವಾರವಾಗತೊಡಗಿತು. ಆಗ ಕೋಟೆಯೊಳಗಿನ ಜನರ ಅವ್ಯವಸ್ಥೆಯನ್ನು ಹೇಳುವದೇನು? ಒಬ್ಬರಿಗೊಬ್ಬರ ಸಂಬಂಧವೇ ಇಲ್ಲ; ಶಸ್ತ್ರಗಳಿಲ್ಲ, ಅಸ್ತ್ರಗಳಿಲ್ಲ ಹೇಳುವವರಿಲ್ಲ, ಕೇಳುವವರಿಲ್ಲ! ಮೈಮೇಲೆ ಎಚ್ಚರಿದ್ದರಷ್ಟೇ ಹೇಳುವದು ಕೇಳುವದು! ಆಗ ಮುಲಾಣಾ ಹಯಾತಿಯೂ, ರುಸ್ತುಮ ಜಮಾಲನೂ ಎಚ್ಚತ್ತು ಓಡುತ್ತಬಂದು ''ದಗಾ ದಗಾ! ಏಳಿರಿ, ಯುದ್ಧಕ್ಕೆ ಸಿದ್ಧರಾಗಿರಿ'' ಎಂದು ಕೂಗುತ್ತ ತಮ್ಮವರನ್ನು ಗದ್ದರಿಸಲು, ತೋಫುಖಾನೆಯವರು ಜೋಲೀ ಹೊಡೆಯುತ್ತ ತಮ್ಮ ತೋಫುಗಳ ಬಳಿಗೆ ಹೋಗಿ ತೋಫುಗಳನ್ನು ಹಾರಿಸಹತ್ತಿದರು; ಆ ಮುಸಲ್ಮಾನರ ಭಯಂಕರವಾದ ತೋಫುಗಳು, ಸುರುವಾಗಲು, ಕೋಟೆಯ ಹೊರಗಿನ, ಹಾಗೂ ಒಳಗಿನ ತೋಫುಗಳ ಕರ್ಕಶ ಧ್ವನಿಯಿಂದ ಎಲ್ಲರ ಕಿವಿಗಳು ಗಡಚಿಕ್ಕಿದವು. ಅಷ್ಟರಲ್ಲಿ, ಹುಲ್ಲು ಹೊರೆಯ ಆಳುಗಳೆಂದು ಕೋಟೆಯಲ್ಲಿ ವಸ್ತಿಯನ್ನು ಮಾಡಿದ ಐದುನೂರು ಜನ ಮರಾಟರೂ, ಸೆರೆಯಲ್ಲಿದ್ದ ಸ್ತ್ರೀವೇಷದ ನೇತಾಜಿಯೇ ಮೊದಲಾದ ಹತ್ತು ಜನ ಶೂರ ಪುರುಷರೂ, ಉಳಿದ ಸೆರೆಯಾಳುಗಳೂ ಕತ್ತಿ ಬರ್ಚಿ ಮೊದಲಾದ ಆಯುಧಗಳಿಂದ ಕೋಟೆಯೊಳಗಿನ ಜನರನ್ನು ಸಂಹರಿಸಹತ್ತಿದರು! ಹುಲ್ಲು ಹೊರೆಯೊಳಗಿಂದ ತಪ್ಪಿಸಿ ತಂದಿದ್ದ ಶಸ್ತ್ರಗಳು ವಿಪುಲವಾಗಿದ್ದವು. ಕೋಟೆಯ ಬಾಗಿಲ ಕಾವಲುಗಾರರ ಸಂಹಾರವು ಮೊದಲ ತುತ್ತಿಗೇ ಆಗಿಹೋದದ್ದರಿಂದ, ಕೋಟೆಯ ಬಾಗಿಲು ''ಝುಣಣಣಣಣಣ'' ಎಂದು ಸಪ್ಪಳ ಮಾಡುತ್ತ ತೆರೆದು ಬಿಟ್ಟು, ಕೋಟೆಯ ಹೊರಗಿನಿಂದ ಮತ್ತೆ ಸಾವಿರಾರು ಜನ ಮರಾಟಾ ವೀರರು ''ಹರಹರ ಮಹಾದೇವ'' ಎಂದು ಕೂಗುತ್ತ ಕೋಟೆಯನ್ನು ಹೊಕ್ಕರು! ಇತ್ತ ಮುಸಲ್ಮಾನರಾದರೂ ತಮ್ಮ ಶಸ್ತ್ರಗಳನ್ನು ತಕ್ಕೊಂಡು ಮರಾಟರೊಡನೆ ಶೌರ್ಯದಿಂದ ಕಾದಹತ್ತಿದರು. ಅಷ್ಟರಲ್ಲಿ ಹುಲ್ಲು ಬಣವಿಗಳಿಗೆ ಬೆಂಕಿ ಹತ್ತಿ ಕೋಟೆಯತುಂಬ ಪ್ರಕಾಶ ಬಿದ್ದು, ಅಲ್ಲಿ ನಡೆದಿದ್ದ ಭಯಂಕರ ಕೊಲೆಯು ಅಂಜು ಬುರುಕರ ಎದೆ ನಡುಗಿಸತೊಡಗಿತು! ಹೀಗೆ ಅಖಂಡ ಎರಡು ತಾಸುಗಳವರೆಗೆ ಮಹಾ ಬಲಿಷ್ಠರಾದ ಮುಸಲ್ಮಾನರೂ, ಅತ್ಯಂತ ಚಪಲರಾದ ಮರಾಟರೂ, ಕ್ರಮವಾಗಿ ತಮ್ಮಲ್ಲಿ ಅಲ್ಪ ಸ್ವಲ್ಪ ಕಡಿಮೆಯೆಂದು ತೋರುತ್ತಿರುವ ಚಪಲತನವನ್ನೂ, ಬಲವನ್ನೂ ಯುದ್ಧಾವೇಶದಲ್ಲಿ ಪೂರೈಸಿಕೊಂಡು, ಒಬ್ಬರೂ ಹಿಂದಕ್ಕೆ ಸರಿಯದೆ ಕೈಗೆ ಕೈ ಹತ್ತಿ ಕಾದಹತ್ತಿದರು. ಆಗ ತಡೆದ ಮಳೆಯು ಭರದಿಂದ ಸುರಿದು ಭೋರೆಂದು ನೀರು ಹರಿಯುವಂತೆ, ರಕ್ತದ ಕಾವಲಿಗಳು

ಕೋಟೆಯಲ್ಲಿ ಹರಿಯತೊಡಗಿದವು; ರುಂಡಮುಂಡಗಳು ತುಂಡರಿಸಿ ಬೀಳತೊಡಗಿದವು; ಕಡಿದ ಕೈ–ಕಾಲುಗಳು ಕುಣಿಯತೊಡಗಿದವು; ''ದೀನ ದೀನ, ಹರಹರ ಮಹಾದೇವ'' ಎಂಬ ಧ್ವನಿಗಳು ಕೋಟೆತುಂಬ ಪಸರಿಸತೊಡಗಿದವು! ಯುದ್ಧಾವೇಶದಲ್ಲಿ ಸ್ವಪರಭಾವಗಳು ಅಳಿದುಹೋಗಿ, ಎಲ್ಲರೂ ಯಮಸ್ವರೂಪಿಗಳಾಗಿ ಸಂಹಾರದ ಕಾರ್ಯವನ್ನು ಸಾಗಿಸಿದರು; ಯಾರೂ ಕೈಗೆಡಲೊಲ್ಲರು. ಯಾರೂ ಹಿಂದಕ್ಕೆ ಸರಿಯಲೊಲ್ಲರು; ಅಷ್ಟರಲ್ಲಿ ಮರಾಟರು ಮುಸಲ್ಮಾನ ಗೋಲಂದಾಜರ ಸಂಹಾರ ಮಾಡಿದ್ದರಿಂದ, ಮುಸಲ್ಮಾನರ ಅತ್ಯದ್ಭುತವಾದ ತೋಫುಖಾನೆಯು ಬಂದಾಯಿತು! ಹೊರಗಿನ ಮರಾಟರ ತೋಫುಗಳು ಮಾತ್ರ ಹಾರುತ್ತಿದ್ದವು; ಅವರ ಸಂಪೂರ್ಣ ಸೈನ್ಯವು ಕೋಟೆಯೊಳಗೆ ಬಂದಕೂಡಲೆ, ಆ ಮರಾಟರೂ ತೋಫು ಹಾರಿಸುವದನ್ನು ಬಿಟ್ಟರು; ಆದ್ದರಿಂದ ಇಬ್ಬರೂ ಕೋಟೆಯಲ್ಲಿ ಕೈಗೆ ಕೈಹತ್ತಿ ಕಾದುತ್ತಿರುವಾಗ, ಖಡ್ಗಗಳ ಖಣೆ ಖಟಲೆಂಬ ಶಬ್ದವಾಗುತ್ತಿರಲು, ವೀರರ ಶಿರಸ್ಸುಗಳು ಮಾತ್ರ ತುಂಡರಿಸಿ ಬೀಳುತ್ತಲಿದ್ದವು; ಆಗಿನ ಭಯಂಕರ ಕೊಲೆಯನ್ನು ನೋಡಿದರೆ, ಇದೇನು ಮಾರಿಯ ಹಬ್ಬವೋ, ಯಮನ ಹಾವಳಿಯೋ, ಕಾಲರುದ್ರನ ಕೋಲಾಹಲವೋ ಎಂಬಂತೆ ರಣ ಭೂಮಿಯು ಭಯಂಕರವಾಗಿ ತೋರುತ್ತಿತ್ತು. ಹೀಗೆ ಮುಸಲ್ಮಾನರೂ, ಮರಾಟರೂ ಒಬ್ಬರೂ ಕೈಗೆಡದೆ, ಒಬ್ಬರೂ ಹಿಂದಕ್ಕೆ ಸರಿಯದೆ, ''ಪ್ರಕಾಶ ಲುಬ್ಧಗಳಾಗಿ ದೀಪಜ್ಯೋತಿ ಯಲ್ಲಿ ಬೀಳುವ ಪತಂಗ ಹುಳದಂತೆ, ಜಯಲುಬ್ಧರಾಗಿ ಮುಸಲ್ಮಾನರೂ, ಮರಾಟರೂ ಸಮರ ವಹ್ನಿಯಲ್ಲಿ ಪಟಪಟ ಬೀಳುತ್ತಿರಲು, ಜಯಲಕ್ಷ್ಮಿಯು ಮರಾಟರ ಕಡೆಗೆ ಕೃಪಾದೃಷ್ಟಿಯಿಂದ ನೋಡುತ್ತಿರುವಂತೆ ತೋರಿತು. ಅಷ್ಟರಲ್ಲಿ ಹೊರಗೆ ಒಂದು ತಾಸು ರಾತ್ರಿ ಮಾತ್ರ ಉಳಿ ದಿರಲು, ಮುಸಲ್ಮಾನರ ಯುದ್ಧದ ಕಸುವು ಕಡಿಮೆಯಾಗಹತ್ತಿತು!

ಈ ಭಯಂಕರವಾದ ಕಾಳಗದಲ್ಲಿ ಮುಲಾಣಾ ಹಯಾತಿಯು ತನ್ನ ಹೆಸರಿಗೆ ಒಪ್ಪುವಂತೆ ಅತುಲ ಪರಾಕ್ರಮವನ್ನು ಪ್ರಕಟ ಮಾಡಿದನು; ಮರಾಟರು ತಮ್ಮ ಕುಟಿಲ ತಂತ್ರದಿಂದ ಇಷ್ಟು ಮೋಸ ಮಾಡಿದ್ದರೂ, ಮುಲಾಣಾ ಹಯಾತಿಯು ಅದನ್ನು ಲೆಕ್ಕಕ್ಕೇ ತರಲಿಲ್ಲ; ಆತನ ಹೃದಯವು ಕಂಪಿಸಲಿಲ್ಲ; ಆತನ ಬಾಹುಬಲವು ಕುಗ್ಗಲಿಲ್ಲ; ಆತನ ವಿಚಾರವು ಮಣಿಸಲಿಲ್ಲ! ಮುಸಲ್ಮಾನರು ಬಲದಲ್ಲಿಯೂ, ಮರಾಟರು ಚಾಪಲ್ಯದಲ್ಲಿಯೂ, ಸುಪ್ರಸಿದ್ಧರು; ಆದರೆ ಮುಲಾಣಾ ಹಯಾತಿಯು ಅಂದಿನ ಕಾಳಗದಲ್ಲಿ ಚಪಲರಾದ ಮರಾಟರೂ ಬೆರಳು ಕಚ್ಚು ವಂತೆ, ತನ್ನ ಚಾಪಲ್ಯವನ್ನು ಪ್ರಕಟ ಮಾಡಿದನು; ಯಾಕಂದರೆ, ನೋಡಿದಲ್ಲೆಲ್ಲ ಮುಲಾಣಾ ಹಯಾತಿಯು ಇದ್ದೇ ಇರುತ್ತಿದ್ದನು; ಅಂತೇ ಮದ್ಯದ ಮದದಿಂದ ಮೈಮರೆತಿದ್ದ ತನ್ನ ಶೂರ ಸೈನಿಕರನ್ನೆಲ್ಲ ಕ್ಷಣಮಾತ್ರದಲ್ಲಿ ಎಚ್ಚರಗೊಳಿಸಿ, ಅವರನ್ನು ಯುದ್ಧಕ್ಕೆ ಅಣಿ ಮಾಡಿದನು; ಇಲ್ಲದಿದ್ದರೆ ಮುಸಲ್ಮಾನರಿಗೆ ತಮ್ಮ ಪರಾಕ್ರಮವನ್ನು ಪ್ರಕಟ ಮಾಡಲಿಕ್ಕೂ ಆಸ್ಪದ ದೊರೆಯ ದಂತೆ ಮರಾಟರು ಅವರನ್ನು ನಾಶ ಮಾಡಬಿಡುತ್ತಿದ್ದರು! ಆ ವೀರಾಗ್ರಣಿ ಹಯಾತಿಯು ಮುಲಾಣಾ ತನ್ನ ಸಮರ ಪಾಂಡಿತ್ಯದಿಂದ ಆ ರಣಮಂಡಲದಲ್ಲಿ ಲೀಲೆಯಿಂದ ಯುದ್ಧ ಕೌಶಲ್ಯವನ್ನು ತೋರಿಸುತ್ತಿರುವಾಗ, ಗೌಸುದಲಾಲನು ತತ್ತರಿಸಿದನು; ನೇತಾಜಿ ಪಾಲಕರನು

ನಾಚಿದನು; ಮರಾಟರ ಮುಖ್ಯ ಸೇನಾಪತಿಯಾದ ಆಬಾಜಿ ಸೋನದೇವನು ತಲೆದೂಗಿದನು; ಆದರೂ ಜಯಲಕ್ಷ್ಮಿಯು ಮರಾಟರ ಕೊರಳಿಗೇ ಮಾಲೆ ಹಾಕುವ ಲಕ್ಷಣವು ತೋರಿತು. ಅದನ್ನು ತಿಳಿದು ಮುಲಾಣಾ ಹಯಾತಿಯು ವ್ಯರ್ಥ ಪ್ರಾಣಹಾನಿಯನ್ನು ಮಾಡಿಸಲಾರದೆ, ತನ್ನ ಕತ್ತಿಯನ್ನು ಒರೆಗಾಣಿಸಿದನು; ಕೂಡಲೆ ಅಬಾಜೀ ಸೋನದೇವನೂ, ನೇತಾಜಿಯೂ ಗೌಸುದಲಾಲನೂ ತಮ್ಮ ತಮ್ಮ ಖಡ್ಗಗಳನು ಒರೆಗಾಣಿಸುತ್ತ, ಮುಲಾಣಾಹಯಾತಿಯು ಬಳಿಗೆ ಬಂದು ವಿನಯದಿಂದ ಆತನಿಗೆ ಸಲಾಮುಮಾಡಿ, ಭೂಮಿಯಲ್ಲಿ ದೃಷ್ಟಿಯನ್ನು ಇಟ್ಟು ವಿನಯದಿಂದ ನಿಂತುಕೊಂಡರು! ಆಗ ಮುಲಾಣಾ ಹಯಾತಿಯು ಆ ವೀರತ್ರಯಿಯ ಸೌಜನ್ಯಕ್ಕೆ ಸಂತೋಷಪಟ್ಟು– ''ವೀರರೇ, ನಿಮ್ಮ ಶೌರ್ಯಕ್ಕೆ ನಿಮ್ಮ ಈ ವಿನಯವು ಬಹಳವಾಗಿ ಒಪ್ಪುತ್ತದೆ;'' ಎಂದು ನುಡಿದನು; ಆಗ ಆ ಮೂರು ಹೃದಯಗಳು ಧನ್ಯತೆಯಿಂದ ಕಂಪಿಸು ತ್ತಿರಲು, ಗೌಸುದಲಾಲನು ತನ್ನ ಖಡ್ಗವನ್ನು ದೂರ ಚಲ್ಲಿಕೊಟ್ಟು, ಮುಲಾಣಾಹಯಾತಿಯ ಮುಂದೆ ನಿಂತುಕೊಂಡು ತನ್ನ ಶಿರಸ್ಸನ್ನು ಆತನ ಮುಂದೆ ಒಡ್ಡಿ–

ಗೌಸುದಲಾಲ– ಖಾವಿಂದ, ಈ ದ್ರೋಹಿಯ ಶಿರಸ್ಸನ್ನು ತಮ್ಮ ಪವಿತ್ರವಾದ ಖಡ್ಗ ದಿಂದ ತುಂಡರಿಸಬೇಕು! ನಾನು ಮಹಾ ವಿಶ್ವಾಸಘಾತಕಿಯು! ಮೂಲತಃ ನಾನು ವೆಂಕಾಜಿ ವಾಘನೆಂಬ ಹೆಸರಿನ ರಾಜಗಳ್ಳನಿದ್ದು, ನಮ್ಮ ಶಿವಪ್ರಭುವಿನ ಪುಣ್ಯದಿಂದ ಕಳ್ಳತನಕ್ಕೆ ಹೇಸಿ, ಆ ಪ್ರಭುವಿನ ಕಾರ್ಯದಲ್ಲಿ ದೇಹವಿಡಬೇಕೆಂಬ ಆಸೆಯಿಂದ ಇಲ್ಲಿಯವರೆಗೆ ಈ ದೇಹವನ್ನು ಇಟ್ಟಿದ್ದೆನು; ಆದರೆ ಇಂದಿನ ಯುದ್ಧದಲ್ಲಿ ತಮ್ಮ ಹೊಡತ–ಇರತಗಳಿಂದ ನನ್ನ ದೇಹವು ಜರಡಿಯಂತೆಯಾಗಿದ್ದರೂ, ಅದು ರಣಭೂಮಿಯಲ್ಲಿ ಬಿದ್ದುಹೋಗಲಿಲ್ಲ! ಮೊದಲು ಹಿಂದು ವಾಗಿದ್ದ ನಾನು, ಸ್ವಾಮಿ ಕಾರ್ಯಕ್ಕಾಗಿ ಮುಸಲ್ಮಾನನು ಮಾತ್ರ ಆದೆನು; ಆದ್ದರಿಂದ, ವೀರ ಶಿರೋಮಣಿಗಳೇ, ನನ್ನ ಸಲುವಾಗಿ ನಿಮ್ಮ ಖಡ್ಗವನ್ನು ಒರೆಯಿಂದ ಹಿರಿದು ನನ್ನ ಈ ಶಿರಸ್ಸನ್ನು ತುಂಡರಿಸಿ, ನನ್ನನ್ನು ಮುಕ್ತನಾಗಿಮಾಡಿರಿ!

ಮುಲಾಣಾ ಹಯಾತಿ– ಗೌಸೂ, ಈ ಮುಲಾಣಾ ಹಯಾತಿಯ ಈ ಖಡ್ಗಕ್ಕೆ ಯುದ್ಧ ಮಾಡಲಿಕ್ಕೆ ಎದುರಾದವರ ಶಿರಸ್ಸು ತುಂಡರಿಸುವದು ಮಾತ್ರ ಗೊತ್ತಿರುತ್ತದಲ್ಲದೆ, ನಿನ್ನಂಥ ಸ್ವಾಮಿಭಕ್ತನ ಶಿರಸ್ಸನ್ನು ತುಂಡರಿಸುವದು ಅದಕ್ಕೆ ಗೊತ್ತಿರುವದಿಲ್ಲ; ಧರ್ಮಜೀವರಾದ ಹಿಂದೂ ಜನರು ನೀವು, ಪ್ರಾಣವನ್ನು ಕೊಟ್ಟೀರಿ, ಆದರೆ ಧರ್ಮತ್ಯಾಗ ಮಾಡಲಿಕ್ಕಿಲ್ಲ; ಹೀಗಿದ್ದು, ವೆಂಕಾಜೀ, ನೀನು ಸ್ವಾಮಿಕಾರ್ಯಕ್ಕಾಗಿ ಧರ್ಮತ್ಯಾಗ ಮಾಡಿದೆಯಲ್ಲವೇ? ಶಾಬಾಸ! ನೀನು ಪರಮಧನ್ಯನು! ಇಗೋ, ನಿನ್ನ ಈ ಖಡ್ಗವನ್ನು ನಾನು ನನ್ನ ಕೈಮುಟ್ಟಿ ನಿನಗೆ ಕೊಡುವೆನು, ಹಿಡಿ; ಇದರಿಂದ ನಿನ್ನ ಸ್ವಾಮಿಯ ಹಲವು ಕಾರ್ಯಗಳನ್ನು ಹೀಗೆಯೇ ನೀನು ಮಾಡುತ್ತಹೋಗು!

ಈ ಮೇರೆಗೆ ನುಡಿದು ಮುಲಾಣಾ ಹಯಾತಿಯು ಗೌಸುದಲಾಲನ ಖಡ್ಗವನ್ನು ಆತನಿಗೆ ಕೊಡಲು, ಗೌಸುವು ಅದನ್ನು ಆದರದಿಂದ ಸ್ವೀಕರಿಸಿ, ಸಲಾಮುಮಾಡಿ ಒತ್ತಟ್ಟಿಗೆ ಸರಿದನು. ಅಷ್ಟರಲ್ಲಿ, ನೇತಾಜಿ ಪಾಲಕರನು ಮುಲಾಣಾ ಹಯಾತಿಗೆ ಮುಜುರೆಮಾಡಿ– ''ವೀರವರ,

ನಿನ್ನ ಅಪ್ರತಿಮ ವೀರತ್ವದ ಮುಂದೆ ನಾನು ತಲೆಬಾಗಿಸುವ ಯೋಗವಿದ್ದದ್ದರಿಂದಲೇ, ಗಂಡು ಸಾದ ನಾನು ನನ್ನ ತಂಗಿ ಗಂಗಾಬಾಯಿಯ ರೂಪವನ್ನು ಧರಿಸಿ ನಿನ್ನ ಸೆರೆಮನೆಯಲ್ಲಿರ ಬೇಕಾಯಿತು. ಸ್ವಾಮಿಭಕ್ತರಾದ ಮರಾಟರು ನಾವು, ನಿಮ್ಮ ಶೌರ್ಯವನ್ನು ಮೇಲುಪಂಕ್ತಿ ಯಾಗಿ ಇಟ್ಟುಕೊಂಡೇ ಸ್ವಾಮಿಕಾರ್ಯವನ್ನು ಮಾಡುವೆವು. ಯೋಧಾಗ್ರಣಿಯೇ, ನಿನ್ನ ಅತುಲ ಪರಾಕ್ರಮವನ್ನು ನೋಡಿ, ನನಗೆ ಶಿವಪ್ರಭುವಿನ ಪರಾಕ್ರಮದ ಸ್ಮರಣವಾಯಿತು;'' ಎಂದು ನುಡಿಯಲು, ಮುಲಾಣಾ ಹಯಾತಿಯು, ಆತನನ್ನು ಗಂಭೀರ ಮುದ್ರೆಯಿಂದ ನೋಡಿ, ತಲೆದೂಗಿ ಆತನನ್ನು ಮನ್ನಿಸುತ್ತಿರಲು, ಮುಖ್ಯ ಸೇನಾಪತಿಯಾದ ಆಬಾಜಿ ಸೋನದೇವನು ಗೌರವದ ಮುದ್ರೆಯಿಂದ ಮುಲಾಣಾ ಹಯಾತಿಯನ್ನು ಕುರಿತು– ''ನಿಮ್ಮ ಅತುಲ ಶೌರ್ಯ–ಸಾಹಸಗಳಿಂದ ಅಲಂಕೃತವಾದ ಇಂದಿನ ಸಮರ ಪ್ರಸಂಗವು, ಶೂರರ ಹಬ್ಬ ವಾಗಿ ಪರಿಣಮಿಸಿತು! ಎಲೈ ಯವನವೀರಾ, ನಮ್ಮಂಥ ಬಾಯಿಮಾತಿನ ಬ್ರಾಹ್ಮಣರು, ಕ್ಷಾತ್ರವೃತ್ತಿಯ ನಿಮ್ಮಂಥವರ ತೋಳಸಾಮರ್ಥ್ಯವನ್ನೇನು ವರ್ಣಿಸೋಣ!'' ಎಂದು ನುಡಿಯಲು, ಮುಲಾಣಾ ಹಯಾತಿಯು– ಆಬಾಜಿ ಸೋನದೇವ, ಇಪ್ಪತ್ತೊಂದುಸಾರೆ ಕ್ಷತ್ರಿ ಯರನ್ನು ಸೋಲಿಸಿದ ನಿಮ್ಮ ಪರಶುರಾಮನು, ಬ್ರಾಹ್ಮಣನೇ ಅಲ್ಲವೇ? ಬ್ರಾಹ್ಮಣವೀರಾ, ನಿನ್ನ ಕೀರ್ತಿಕೇಳಿ ನನ್ನ ಕಿವಿಗಳು ಸಂತೋಷಪಟ್ಟಿದ್ದವು, ಇಂದು ನಿನ್ನನ್ನು ನೋಡಿ ನನ್ನ ಕಣ್ಣುಗಳು ಸಂತೋಷಪಟ್ಟವು!

ಈ ಮೇರೆಗೆ ನುಡಿದು, ಮುಲಾಣಾ ಹಯಾತಿಯು, ತನ್ನ ಮುಖ್ಯಸೇನಾಪತಿಯ ಮುಖಾಂತರವಾಗಿ, ತಮ್ಮ ಸೈನ್ಯದವರಿಗೆ ಶಸ್ತ್ರಗಳಿಟ್ಟು ಕೋಟೆಯನ್ನು ಬಿಟ್ಟುಕೊಡಲು ಆಜ್ಞಾಪಿಸಲು, ಮುಸಲ್ಮಾನರು ತಮ್ಮ ಶಸ್ತ್ರಗಳನ್ನಿಟ್ಟು ಕೋಟೆಯಿಂದ ಹೊರಬೀಳತೊಡಗಿದರು; ಆಗ ಮರಾಟರು, ತಮ್ಮ ಶಸ್ತ್ರಗಳನ್ನು ಒರೆಗಾಣಿಸುತ್ತ ಅವರನ್ನು ನಿರ್ಬಾಧವಾಗಿ ಹೋಗ ಗೊಟ್ಟರು! ಎಲ್ಲರೂ ಸುರಕ್ಷಿತ ಹೋದಬಳಿಕ, ಮುಲಾಣಾ ಹಯಾತಿಯು ರುಸ್ತುಮ ಜಮಾಲ ನನ್ನೂ ತನ್ನ ಮಗನನ್ನೂ ಕೂಡಿಕೊಂಡು, ತನ್ನ ಪರಿವಾರದೊಡನೆ ಸಶಸ್ತ್ರನಾಗಿ ಕಲ್ಯಾಣ ಕೋಟೆಯನ್ನು ಮರಾಟರಿಗೆ ಬಿಟ್ಟುಕೊಟ್ಟು ತಾನು ಹೊರಟುಹೋದನು! ಆದರೆ, ಯಾವ ಕಾರಣದಿಂದಲೋ ಆತನ ಆ ಜನಾನಖಾನೆಯು ಮಾತ್ರ ಕಲ್ಯಾಣದ ಕೋಟೆಯಲ್ಲಿಯೇ ಉಳಿಯಿತು! ಜನಾನಖಾನೆಯಲ್ಲಿಯೇ ಮುಲಾಣಾ ಹಯಾತಿಯ ಚಲುವೆಯಾದ ಸೊಸೆಯು ಉಳಿದುಕೊಂಡಿದ್ದಳು! ಹೀಗೆ ಮರಾಟರು ಸಂಪೂರ್ಣ ಜಯಶಾಲಿಗಳಾಗಿ, ಶಿವರಾಜನ ಧ್ವಜವು ಕಲ್ಯಾಣಕೋಟೆಯ ಮೇಲೆ ಏರುತ್ತಿರಲು, ಆಗ ಆ ಜಯಶಾಲಿಗಳಾಗಿದ್ದ ಸ್ವಾಮಿಭಕ್ತಮರಾಟರಿಗೆ ಆದ ಆನಂದವನ್ನು ವರ್ಣಿಸಲು, ನಮ್ಮ ಲೆಕ್ಕಣಿಕೆಯು ಸರ್ವಥಾ ಸಮರ್ಥವಾಗಲಾರದು!

# ಸ್ವರಾಜ್ಯ ಸುಗಂಧ

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ, ಆಬಾಜಿ ಸೋನದೇವನು, ನೇತಾಜಿ ಪಾಲಕರ, ಹಾಗು ವೆಂಕಾಜಿ ವಾಘ ಎಂಬವರ ಸಹಾಯದಿಂದ ಯುಕ್ತಿ-ಪ್ರಯುಕ್ತಿಗಳನ್ನು ಯೋಜಿಸಿ, ಶೌರ್ಯ-ಸಾಹಸಗಳನ್ನು ಪ್ರಕಟಮಾಡಿ ಕಲ್ಯಾಣದ ಕೋಟೆಯ ಮೇಲೆ ತಮ್ಮ ಶಿವಪ್ರಭುವಿನ ಧ್ವಜವನ್ನು ಏರಿಸಿದ ಬಳಿಕ, ಆ ಕೋಟೆಯಲ್ಲಿ ತಕ್ಕ ವ್ಯವಸ್ಥೆಯನ್ನು ಮಾಡಿದನು; ಸುಭೆಯ ಬೇರೆ ಬೇರೆ ಸ್ಥಳಗಳಲ್ಲಿ ತಮ್ಮ ಯೋಗ್ಯ ಅಧಿಕಾರಿಗಳನ್ನು ನಿಯಮಿಸಿ, ಇಡಿಯ ಕಲ್ಯಾಣದ ಸುಭೆಯಲ್ಲಿ ಉತ್ತಮ ಬಂದೋಬಸ್ತು ಮಾಡಿದನು; ಈ ಕೆಲಸದಲ್ಲಿ ಕಲ್ಯಾಣದ ಸುಭೆ ಯೊಳಗಿನ ಜನರಿಂದ ಆಬಾಜಿ ಸೋನದೇವನಿಗೆ ತೊಂದರೆಯಾಗದೆ ಸಹಾಯವೇ ಆಯಿತು; ಯಾಕಂದರೆ, ಕಲ್ಯಾಣದ ಸುಭೆಯು ಮೊದಲಿನಿಂದ ಸ್ವತಂತ್ರವಾಗಿ ಇದ್ದಂತೆ ಇದ್ದು, ಅಲ್ಲಿಯ ಜನರ ಒಲವು ಸ್ವಾಭಾವಿಕವಾಗಿಯೇ ಶಿವಾಜಿಯ ಕಡೆಗೆ ಇದ್ದಿತು. ಸ್ವದೇಶಾಭಿಮಾನ ಪ್ರೇರಿತ ರಾಗಿದ್ದ ಅವರು, ಶಿವರಾಯನ ಕಾರ್ಯದಲ್ಲಿ ಪ್ರಾಣಕೊಡಲಿಕ್ಕೆ ಸಿದ್ಧರಿದ್ದರು. ಇತ್ತ ಶಿವ ರಾಯನಿಗೆ, ಕಲ್ಯಾಣದ ಕೋಟೆಯು ಕೈಸೇರಿ, ಆ ಸುಭೆಯಲ್ಲಿ ತನ್ನ ಅಧಿಕಾರವು ಸ್ಥಿರವಾದ ಸುದ್ದಿಯು ಹತ್ತಲು, ಆತನು ಪರಮಾನಂದಪಟ್ಟು, ಸಾಂಡಣಿಯ ಸ್ವಾರರ ಮುಖಾಂತರ ಆ ಮೂವರು ವೀರರಿಗೆ ಅಭಿನಂದನ ಪತ್ರವನ್ನು ಕಳಿಸಿದ್ದಲ್ಲದೆ, ಆಬಾಜಿ ಸೋನದೇವನನ್ನು ಕಲ್ಯಾಣದ ಸುಭೇದಾರನನ್ನಾಗಿ ನಿಯಮಿಸಿದ ಆಜ್ಞಾಪತ್ರವನ್ನೂ ಕಳಿಸಿದ್ದನು. ಅಲ್ಲದೆ, ಅದೇ ಕೈಯಲ್ಲಿ ರಾಜಮಾಚಿ ಕೋಟೆಯನ್ನು ಸ್ವಾಧೀನಪಡಿಸಿಕೊಳ್ಳುವದಕ್ಕಾಗಿ ನೇತಾಜಿ ಪಾಲಕರನನ್ನು ಮುಖ್ಯ ಸೇನಾಪತಿಯನ್ನಾಗಿಯೂ ವೆಂಕಾಜಿ ವಾಘನನ್ನು ಉಪಸೇನಾಪತಿಯನ್ನಾಗಿಯೂ ನಿಯಮಿಸಿದ ಹುಕುಮನ್ನೂ ಕಳಿಸಿದ್ದನು; ಅಲ್ಲದೆ, ಉಳಿದ ಎಲ್ಲ ಮರಾಟಾ ವೀರರೂ ಸ್ತುತಿಗೆ ಪಾತ್ರರೆಂತಲೂ ಬರೆದು ಕಳಿಸಿದ್ದನು; ಆದ್ದರಿಂದ ಮರಾಟಾ ಮಂಡಲಕ್ಕೇ ತಮ್ಮ ಮೈಯ ಒಂದು ಬೆರಳು ಮಾಂಸವು ಹೆಚ್ಚಿದಂತೆ ಸಂತೋಷವಾಯಿತು!

ನೇತಾಜಿ ಪಾಲಕರನಿಗೆ, ತನ್ನನ್ನು ಶಿವಪ್ರಭುವು ರಾಜಮಾಚಿಯ ದಂಡಯಾತ್ರೆಯಲ್ಲಿ ಮುಖ್ಯ ಸೇನಾಪತಿಯನ್ನಾಗಿ ನಿಯಮಿಸಿದ ಉತ್ಸಾಹಾತಿಶಯದಲ್ಲಿ, ಆತನು ಯುದ್ಧಮಾಡಲು ಚತುರ್ಭುಜನಾದನು! ವೆಂಕಾಜಿ ವಾಘನಿಗಂತು ಆನಂದಭರದಲ್ಲಿ, ತನ್ನ ಮೈಗಾಗಿದ್ದ ಗಾಯ ಗಳೆಲ್ಲ ಮಾದುಹೋದಂತೆ ಆಯಿತು. ಅತ್ತ ಮುಸಲ್ಮಾನರು, ಕಲ್ಯಾಣದಕೋಟೆಯು ತಮ್ಮ ಕೈಬಿಟ್ಟಿದ್ದರಿಂದ, ಅತ್ಯಂತ ನಿರುತ್ಸಾಹಿಗಳಾದರು! ಅವರನ್ನು ಮರಾಟರ ಕರ್ತೃತ್ವಶಾಲಿತ್ವದ ದರ್ಪವು, ಮತ್ತಿಷ್ಟು ಬೆದರಿಸಹತ್ತಿತು; ಅದರಲ್ಲಿ ಮುಲಾಣಾ ಹಯಾತಿಯಂಥ ವೀರನನ್ನು ಮರಾಟರು ಸೋಲಿಸಿದ್ದರಿಂದಂತು, ಅವರ ಕೀರ್ತಿಯು ಎಲ್ಲ ಕಡೆಗೂ ಹಬ್ಬಿ, ಮುಹಮ್ಮದ ಬಾದಶಹನಿಗೆ ಅದು ದುಃಸಹಾಸವಾಯಿತು. ಹೀಗಿರುವಾಗ, ನೇತಾಜಿ ಪಾಲಕರನೂ, ವೆಂಕಾಜಿ ವಾಘನೊಡನೆ, ವಿಜಯೋತ್ಸಾಹದಿಂದ ಹುರುಪುದುಂಬಿದ್ದ ಮರಾಟರ ದೊಡ್ಡ ಸೈನ್ಯವನ್ನು ತಕ್ಕೊಂಡು, ರಾಜವಾಚಿಯ ದುರ್ಗದಮೇಲೆ ಸಾಗಿಹೋದನು. ಆ ದಂಡಯಾತ್ರೆಯಲ್ಲಿ

ನೇತಾಜಿ ಪಾಲಕರನೂ, ವೆಂಕಾಜಿ ವಾಘನೂ ಅಸಾಧಾರಣವಾದ ಶೌರ್ಯ–ಸಾಹಸಗಳನ್ನು ಪ್ರಕಟಿಸಿದ್ದರಿಂದ, ಹಟಮಾರಿ ಮುಸಲ್ಮಾನರೂ ಭದ್ರವಾದ ಆ ರಾಜಮಾಚಿ ಕೋಟೆಯನ್ನು ನೇತಾಜಿಗೆ ಒಪ್ಪಿಸಿ ವಿಜಾಪುರಕ್ಕೆ ಹೊರಟು ಹೋಗಬೇಕಾಯಿತು. ನೇತಾಜಿಯು ಈ ದಂಡ ಯಾತ್ರೆಯಲ್ಲಿ ಪ್ರಕಟಮಾಡಿದ ಅಸಾಧಾರಣ ಶೌರ್ಯವನ್ನು ವರ್ಣಿಸಲಿಕ್ಕೆ, ಸ್ಥಳಾನುಕೂಲ ವಿಲ್ಲದ್ದರಿಂದ, ಅಸಮಾಧಾನಪಟ್ಟು ಲೆಕ್ಕಣಿಕೆಯನ್ನು ತಡೆಯಬೇಕಾಗಿದೆ. ಮನುಷ್ಯನಿಗೆ ಆನಂದ ಪ್ರಸಂಗಗಳಾಗಲಿ, ದುಃಖಪ್ರಸಂಗಗಳಾಗಲಿ ಒಮ್ಮೆ ಬರಹತ್ತಿದವೆಂದರೆ, ಅವು ಒಂದೇಸವನೆ ಸಾಲಾಗಿ ಬರುತ್ತವೆಂಬುವ ಮಾತು ಸುಳ್ಳಲ್ಲ! ಶಿವರಾಯನಿಗೆ ಕಲ್ಯಾಣದ ಕೋಟೆಯು ಕೈಸೇರಿದ ಸುದ್ದಿಯು ಹೋದ ಸ್ವಲ್ಪ ದಿವಸಗಳಲ್ಲಿಯೇ, ರಾಜಮಾಚಿಯ ಕೋಟೆಯು ನೇತಾಜಿಯ ಕೈಸೇರಿದ ಸುದ್ದಿಯು ಹೋಯಿತು; ಆದ್ದರಿಂದ, ಆತನು ದೊಡ್ಡ ದರ್ಬಾರು ನೆರೆಸಿ, ತನ್ನ ಮರಾಟಾ–ಮಾವಳ ವೀರರ ಅಭಿನಂದನ ಮಾಡಬೇಕೆಂದು ಯೋಚಿಸಿ, ನೇತಾಜಿಯನ್ನು ರಾಜಮಾಚಿ ಸುಬೇದಾರನನ್ನಾಗಿ ನಿಯಮಿಸಿದ್ದಲ್ಲದೆ, ನೀನು ಶಿವನೇರಿಯ ದರ್ಬಾರಕ್ಕೆ ಬರಬೇಕೆಂಬ ಆಜ್ಞಾಪತ್ರವನ್ನು ರಾಜಮಾಚಿ ದುರ್ಗಕ್ಕೆ ಕಳಿಸಿದನು; ಅದರಂತೆ, ಕಲ್ಯಾಣಕ್ಕೆ ಆಬಾಜಿ ಸೋನದೇವನಿಗೆ ದರ್ಬಾರಕ್ಕೆ ಬರಲಿಕ್ಕೆ ಶಿವರಾಯನಿಂದ ಆಜ್ಞಾಪತ್ರವು ಹೋಯಿತು.

ಶಿವರಾಯನ ಆಜ್ಞಾಪತ್ರಗಳಂತೆ ಆಬಾಜಿ ಸೋನದೇವನೂ, ನೇತಾಜಿ ಪಾಲಕರನೂ ತಮ್ಮ ಆ ಪ್ರಭುವಿಗೆ ಅರ್ಪಿಸುವದಕ್ಕಾಗಿ ಉತ್ತಮೋತ್ತಮವಾದ ಕಾಣಿಕೆಗಳನ್ನು ತಕ್ಕೊಂಡು, ತಮ್ಮ ಪ್ರಭುವು ನೆರೆಸುವ ದರ್ಬಾರಕ್ಕೆ ಹೊರಟರು. ಮುಲಾಣಾ ಹಯಾತಿಯ ಜನಾನ ಖಾನೆಯು ಕಲ್ಯಾಣದ ಕೋಟೆಯಲ್ಲಿ ಉಳಿದಿದ್ದ ಸಂಗತಿಯನ್ನು ಈ ಮೊದಲೆ ಹೇಳಿದೆಯಷ್ಟೆ? ಜನಾನಖಾನೆ ಯೊಳಗಿದ್ದ ಮುಲಾಣಾ ಹಯಾತಿಯ ಸೊಸೆಯು, ಲೋಕಪ್ರಸಿದ್ಧ ಸುಂದರಿ ಯಿದ್ದಳೆಂಬ ಮಾತಾದರೂ ವಾಚಕರ ಸ್ಮರಣದಲ್ಲಿರಬಹುದು! ಆ ಅಲಭ್ಯ ಸ್ತ್ರೀರತ್ನವನ್ನು ಶಿವರಾಯನಿಗೆ ಒಪ್ಪಿಸತಕ್ಕ ಶ್ರೇಷ್ಠ ಕಾಣಿಕೆಯೆಂದು ತಿಳಿದು, ಆಬಾಜಿ ಸೋನದೇವನು ಎಲ್ಲ ಕಾಣಿಕೆಯೊಡನೆ, ಆ ಕನ್ಯಾರತ್ನದ ಕಾಣಿಕೆಯಿದ್ದ ಯವನ ಜನಾನಖಾನೆಯನ್ನೂ ಶಿವರಾಯನ ದರ್ಬಾರಕ್ಕೆ ಸಾಗಿಸಿಕೊಂಡು ನಡೆದನು. ಹೀಗೆ ಸುಂದರ ಸ್ತ್ರೀಯರನ್ನು ಅಪಹರಿಸುವದು ಮುಸಲ್ಮಾನರ ದೊಂದು ಕೆಟ್ಟ ಚಾಳಿಯೇ ಆಗಿತ್ತೆಂದು ಈ ಮೊದಲೆ ಹೇಳಿರುತ್ತದೆ; ಅವರ ಆ ಕೆಟ್ಟ ಚಾಳಿಯ ಸೇಡು ತೀರಿಸಿಕೊಂಡ ತನ್ನ ಪೌರುಷವನ್ನು ತನ್ನ ಪ್ರಭುವಿನ ಮುಂದೆ ತೋರಿಸುವ ಉಬ್ಬು ಆಗ ಆಬಾಜಿಯಲ್ಲಿ ಉಂಟಾಗಿತ್ತು, ಹೀಗೆ ಸೇಡು ತೀರಿಸಿಕೊಳ್ಳುವದು ಕ್ಷಾತ್ರವೃತ್ತಿಯ ಸ್ವಭಾವವಾಗಿದ್ದು, ಅಂತಹ ಆ ಕ್ಷಾತ್ರವೃತ್ತಿಯನ್ನು ಸ್ವೀಕರಿಸಿದ ಆಬಾಜಿಯು ಬ್ರಾಹ್ಮಣನಾಗಿದ್ದರೂ, ಆ ಕ್ಷಾತ್ರವೃತ್ತಿಯ ಆಶ್ರಯ ದೋಷದಿಂದ ಆತನಿಗೂ ಹೀಗೆ ಸೇಡು ತೀರಿಸಿಕೊಳ್ಳುವ ಬುದ್ಧಿಯು ಉತ್ಪನ್ನವಾಯಿತು! ನಿಜವಾಗಿಯೆಂದರೆ, ಬ್ರಾಹ್ಮಣರು ಶೀಘ್ರ ಕೋಪಿಗಳು; ದೀರ್ಘ ದ್ವೇಷಿಗಳಲ್ಲ; ಆದರೆ ಜತೆಯಂತೆ ಮತಿಯೆಂಬ ನಾಣ್ನುಡಿಯಂತೆ, ಆಬಾಜಿಯೂ ಕ್ಷತ್ರಿಯರ ಸಹವಾಸದಿಂದ ಈಗ ಕ್ಷಾತ್ರಬುದ್ಧಿಯನ್ನು ತಾಳಿದ್ದು ಆಶ್ಚರ್ಯವಲ್ಲ!

ಶಿವನೇರಿಕೋಟೆಯೆಂಬ, ಶಬ್ದದ, ಶಿವನ, ಏರಿ ಎಂಬ ಎರಡು ಅವಯವಗಳನ್ನು ಬಿಡಿಸಿದರೆ, ಆ ಶುದ್ಧವಾದ ಅಚ್ಚಗನ್ನಡ ಶಬ್ದದ ಮೇಲಿಂದ ಶಿವಾಜಿಯ ಆ ಜನ್ಮಸ್ಥಳವು ಹಿಂದಕ್ಕೆ ಕರ್ನಾಟಕವಿದ್ದದ್ದರಿಂದ ಶಿವಾಜಿಯು, ಕನ್ನಡಿಗನೆಂತಲೇ ಅಭಿಮಾನದಿಂದ ಆರೋಪಿಸ ಬೇಕಾಗುತ್ತದೆ, ಇರಲಿ. ಅಂತಹ ಆ ಕನ್ನಡನಾಡಿನ ಶಿವನೇರಿ ಕೋಟೆಯಲ್ಲಿ ನಮ್ಮ ಶಿವರಾಯನ ದರ್ಬಾರದ ಸಿದ್ಧತೆಯು ನಡೆದಿತ್ತು; ಆದರೆ ಆ ದರ್ಬಾರವು ದಿಲ್ಲಿ–ವಿಜಾಪುರಗಳ ಬಾದಶಹರಂಥ ಅತ್ಯಂತ ವೈಭವಶಾಲಿ ಬಾದಶಹರ ದರ್ಬಾರವಲ್ಲದ್ದರಿಂದ, ಅಲ್ಲಿ ಸಂಪತ್ತು ಸೂರೆಯಾಗಿರದೆ, ಸಿಂಗರದ ಸೊಗಸು ಸುಳಿದಾಡದೆ, ಸಭಿಕರ ಲಕಲಕಿಸುವ ಅಲಂಕಾರಗಳ ಬಣ್ಣ ಬಣ್ಣದ ರತ್ನಗಳ ಬೆಳಕು ಬಿದ್ದಿರದೆ, ಶಿವರಾಯನ ಕೀರ್ತಿಪ್ರಭೆಯು, ಆ ಸಂಪತ್ತು ಸಿಂಗಾರ, ರತ್ನಪ್ರಭೆಗಳ ಜನ್ಮಭೂಮಿಯೆನಿಸಿ, ಅಂತಹ ಇನ್ನು ಹಲವು ಆಡಂಬರದ ಸಂಗತಿಗಳನ್ನು ನೆನಪು ಮಾಡಗೊಡ ದಾಗಿತ್ತು, ಅಗ್ರಸ್ಥಾನದಲ್ಲಿ ಕುಳಿತಿದ್ದ ಸಾದಾ ಉಡಿಗೆತೊಡಿಗೆಯು ಶಿವರಾಯನ ಎರಡೂ ಬದಿಗಳಲ್ಲಿ ವೀರಾಸನಗಳನ್ನು ಹಾಕಿಕೊಂಡು ಕುಳಿತಿದ್ದ ಶೂರ ಮರಾಟಾ ವೀರರು ಶಿವಾಜಿಯನ್ನು ಕುರಿತು– ''ಪ್ರಭೋ, ಇನ್ನಾವ ಕೋಟೆಯನ್ನು ತಕ್ಕೊಳ್ಳೋಣ, ಯಾರ ಸೀಮೆಗಳನ್ನು ನುಗ್ಗೋಣ, ನಿನ್ನ ಯಾವ ಶತ್ರುವನ್ನು ಹಣೆದು ಹಿಡತಂದು ನಿನ್ನ ಚರಣಕ್ಕೆ ಕೆಡವೋಣ?'' ಎಂದು ಕೇಳುತ್ತಿರುವರೋ ಎಂಬಂತೆ ತಮ್ಮ ಪ್ರಭುವನ್ನೇ ಕೌತುಕದಿಂದ ನೋಡುತ್ತಲಿದ್ದರು. ಇವರಲ್ಲದೆ, ಶಿವರಾಯನ ಮಂತ್ರಿಗಳೂ, ಪುರೋಹಿತರೂ ಉಚಿತಾಸನ ಗಳಲ್ಲಿ ಕುಳಿತುಕೊಂಡಿದ್ದರು. ಅವರು ತಮ್ಮ ಶಿವರಾಯನ ಶೌರ್ಯದಿಂದಲೇ ಮರಾಟರ ರಾಜ್ಯವು ರೂಪುಗೊಂಡಿದ್ದು, ಈ ಬಗೆಯಾಗಿ ತೋರುತ್ತಿರುವದಲ್ಲವೆ? ಎಂದು ಕೌತುಕ ಪಡುತ್ತಿದ್ದರು. ಇವರಲ್ಲದೆ ಆ ದರ್ಬಾರದಲ್ಲಿಸ್ತುತಿಪಾಠಕರು, ಸೇವಕರು, ಕಲಾವಂತಿನಿಯರು ಈ ಮೊದಲಾದವರು ತಮ್ಮ ತಮ್ಮ ಸ್ಥಳಗಳಲ್ಲಿ ಒಪ್ಪುತ್ತಿದ್ದು, ತಮ್ಮ ಕಾರ್ಯಪ್ರಸಂಗಗಳನ್ನು ಎದುರುನೋಡುತ್ತ, ತಮ್ಮ ನೂತನ ರಾಜನಾದ ಶಿವರಾಯನಲ್ಲಿಯೇ ತಮ್ಮ ದೃಷ್ಟಿ ಗಳನ್ನಿಟ್ಟಿದ್ದರು!

ಹೀಗಿರುವಾಗ ಶಿವರಾಯನು ದರ್ಬಾರದ ಜನರನ್ನು ಕುರಿತು– ವೀರರೇ, ಇಂದಿನ ದರ್ಬಾರವು ನಿಮ್ಮ ಪ್ರತಾಪದ ಪ್ರದರ್ಶನವಾಗಿರುವದು! ನಮ್ಮ ಆಬಾಜಿ ಸೋನದೇವ, ನೇತಾಜಿ ಪಾಲಕರ, ವೆಂಕಾಜಿ ವಾಘ ಇವರೂ, ಈ ಮೂವರೂ ವೀರ ಪುರುಷರ ಅನು ಯಾಯಿ ಗಳಾಗಿರುವ ವೀರರು ನೀವೂ, ಉಜ್ವಲ ಕ್ಷಾತ್ರ ತೇಜಸ್ಸನ್ನು ಪ್ರಕಟಿಸಿ, ಮೈನೆತ್ತರ ದಿಂದ ಯುದ್ಧಭೂಮಿಯನ್ನು ನೆನಿಸದಿದ್ದರೆ, ಕಲ್ಯಾಣದ ಕೋಟೆಯೂ, ರಾಜಮಾಚಿ ಕೋಟೆಯೂ ಮರಾಟರ ಕೋಟೆಗಳೆಂದು ಯಾರು ಕರೆಯುತ್ತಿದ್ದರು? ಮುಸಲ್ಮಾನರ ಬಲವು ದೊಡ್ಡ ದೊಡ್ಡ ಮದ್ದಾನೆಗಳ ಬಲವು; ಆದರೆ ಆ ವೀರರಿಗೆ ನಿಮ್ಮಂಥ ಮಹಾರಾಷ್ಟ್ರದ ಸಿಂಹಗಳ ಯೋಗವಾದದ್ದರಿಂದಲೆ ಅವರ ಅಂಥ ಆನೆಯ ಬಲವು ಕೆಲಸಕ್ಕೆ ಬಾರದೆ, ಅತ್ಯಂತ ಭದ್ರಗಳಾದ ಎರಡು ಕೋಟೆಗಳು ಮಹಾರಾಷ್ಟ್ರದ ಚಿಕ್ಕ ರಾಜ್ಯದ ಆಯಕಟ್ಟಿನ ಸ್ಥಳಗಳಾಗಿ ಹೋದವು; ಆದರೆ ಮಹಾರಾಷ್ಟ್ರ ವೀರರೇ, ಈ ಅಗಾಧ ಕಾರ್ಯವು ಸಿಂಹ

ಗಳಿಂದಲ್ಲದೆ, ಅನ್ಯ ಕ್ಷುದ್ರ ಮೃಗಗಳಿಂದ ಹೇಗಾದೀತು? ಸಿಂಹಗಳಿದ್ದರೆ ಸಿಂಹಾಸನವಲ್ಲವೆ? ಆದ್ದರಿಂದ ನಿಮ್ಮ ಶಿವರಾಯನ ಸಿಂಹಾಸನ ಘಟನೆಯನ್ನು ನೀವು ಈಗ ಭರದಿಂದ ಮಾಡುತ್ತಿರುವಿರಲ್ಲದೆ, ನೀವು ಈಗ ಈ ಅಗ್ರಾಸನದಲ್ಲಿ ಕುಳ್ಳಿರಿಸಿರುವ ಶಿವರಾಯನೂ, ಆತನ ಭಾವೀ ಮಹಾರಾಷ್ಟ್ರ ಸಿಂಹಾಸನವೂ ನಿಮ್ಮ ಸಿಂಹಪರಾಕ್ರಮದ ಪರಿಣಾಮಗಳೇ ಆಗಿರುವವು; ಆದ್ದರಿಂದ ನಿಮ್ಮ ಶಿವರಾಯನು ನಾನು ನಿಮ್ಮ ಅಗಾಧವಾದ ಸ್ವಾಮಿಭಕ್ತಿ–ಶೌರ್ಯ–ಸಾಹಸ –ಸ್ವಾರ್ಥತ್ಯಾಗಗಳಿಗಾಗಿ ಮನಃಪೂರ್ವಕವಾಗಿ ನಿಮ್ಮನ್ನು ಅಭಿನಂದಿಸುವೆನು! ಪುರುಷಶ್ರೇಷ್ಠ ಆಬಾಜಿ ಸೋನದೇವ, ವೀರವರ ನೇತಾಜಿ, ತ್ಯಾಗಿ ಶ್ರೇಷ್ಠ ವೆಂಕಾಜಿ, ನೀವು ಮಾಡಿದ ಪ್ರತಾಪದ ಕೆಲಸಗಳನ್ನು ವರ್ಣಿಸಿ, ನೀವು ಸಂಕೋಚದಿಂದ ನಿಮ್ಮ ಮೋರೆಗಳನ್ನು ತಗ್ಗಿಸುವಂತೆ ಮಾಡುವದಕ್ಕಿಂತ, ನಿಮ್ಮ ಧೀರ ಗಂಭೀರ ಮುಖಮುದ್ರೆಗಳು, ನಮ್ಮೆಲ್ಲರಲ್ಲಿ ಹೊಸ ಹೊಸ ಕಾರ್ಯೋತ್ಸಾಹಗಳನ್ನು ಯಾವಾಗಲೂ ಉಂಟುಮಾಡುತ್ತಿರುವಂತೆ, ನಾನು ಈಗ ಸುಮ್ಮನೆ ಇದ್ದು ಬಿಡುವದೇ ನನಗೆ ನೆಟ್ಟಗೆ ಕಾಣುತ್ತದೆ!

ಹೀಗೆ ಶಿವರಾಯನು ನುಡಿಯಲು, ಆನಂದಪುಲುಕಿತರಾಗಿ ಆಬಾಜಿ ಸೋನದೇವನೂ, ನೇತಾಜಿ ಪಾಲಕರನೂ ತಾವು ತಂದಿದ್ದ ಕಾಣಿಕೆಗಳನ್ನು ತಮ್ಮ ಪ್ರಭುವಿನ ಚರಣಗಳಿಗೆ ಅರ್ಪಿಸಿದರು; ಆಗ ವೆಂಕಾಜಿ ವಾಘನು ಎದ್ದುನಿಂತು, ತನ್ನ ಖಡ್ಗವನ್ನು ಶಿವರಾಯನ ಮುಂದಿಟ್ಟು ಕೈಜೋಡಿಸಿ– "ವೈದಿಕಧರ್ಮ ಸ್ಥಾಪಕಾ, ಸರ್ವ ಧರ್ಮಪಾಲಕಾ, ಶಿವರಾಯಾ, ಇದು ವೀರವರ ಮುಲಾಣಾ ಹಯಾತಿಯು, ನಿನ್ನ ಸೇವೆಯನ್ನು ನಾನು ಒಂದೊಂದಾಗಿ ಇನ್ನೂ ಬಹಳವಾಗಿ ಮಾಡಬೇಕೆಂದು, ತನ್ನ ಕೈಮುಟ್ಟಿ ನನಗೆ ಕೊಟ್ಟ ಖಡ್ಗವು! ಆದ್ದರಿಂದ ಅತ್ಯಂತ ಗೌರವಶಾಲಿಯಾದ ಈ ಖಡ್ಗವನ್ನೇ ಈಗ ನಾನು ನಿನಗೆ ಕಾಣಿಕೆಯಾಗಿ ಅರ್ಪಿಸುವೆನು! ಪ್ರಭೋ, ಧರ್ಮಮೂರ್ತಿಯೇ, ಆ ವೀರಾಗ್ರಣಿ ಮುಲಾಣಾ ಹಯಾತಿಯ ಕರಸ್ಪರ್ಶದಿಂದ ಈ ಖಡ್ಗವು ಪವಿತ್ರವಾಗದಿದ್ದರೆ, ನಿನ್ನಂಥ ಪವಿತ್ರ ಮೂರ್ತಿಗೆ ಒಪ್ಪಿಸತಕ್ಕಂಥ ಮತ್ತೊಂದು ಪವಿತ್ರ ವಸ್ತುವು ಈ ಕಳ್ಳ ವೆಂಕಾಜಿಯಲ್ಲಿ ಹೇಗೆ ಇರಬೇಕು!

ವೆಂಕಾಜಿಯ ಈ ಮಾತುಗಳನ್ನು ಕೇಳಿ, ಶತ್ರುಗಳ ಗುಣಗಳಿಗೂ ಹೊಟ್ಟೆಕಿಚ್ಚು ಪಡದ ಆ ಉದಾರ ಹೃದಯದ ಶಿವರಾಯನು ಆ ವೆಂಕಾಜಿಯ ಖಡ್ಗವನ್ನು ಕೈಯಲ್ಲಿ ತಕ್ಕೊಂಡು– ವೆಂಕಾಜೀ, ಆ ಮುಲಾಣಾ ಹಯಾತಿಯು ನಿಶ್ಚಯವಾಗಿ ವೀರಜನ ವಂದ್ಯನಾಗಿರುವನು! ಅಂಥವನು ನಿನ್ನ ಶೌರ್ಯಕ್ಕೆ ಮೆಚ್ಚಿ, ಸ್ವಾಮಿಕಾರ್ಯ ಮಾಡಲಿಕ್ಕೆ ನೀನು ಅಧಿಕಾರಿಯೆಂದು ನಿರ್ಣಯಿಸಿ, ಈ ಖಡ್ಗವನ್ನು ನಿನಗೆ ಉಚಿತವಾಗಿ ಕೊಟ್ಟಿರುವದರಿಂದ, ಈ ಖಡ್ಗಧಾರಣ ಮಾಡಲಿಕ್ಕೆ ನೀನೇ ಅಧಿಕಾರಿಯು; ಆದ್ದರಿಂದ, ನಾನೂ ಈ ಖಡ್ಗವನ್ನು ಬಹುಮಾನ ಪುರಸ್ಸರ ಸ್ವೀಕರಿಸಿ, ಅದನ್ನು ತಿರುಗಿ ನಿನಗೇ ಬಹುಮಾನವಾಗಿ ಕೊಡುವೆನು; ಆದ್ದರಿಂದ ವೆಂಕಾಜೀ, ಮುಂದಕ್ಕೆ ಬಾ, ಈ ಖಡ್ಗವನ್ನು ತೆಗೆದುಕೋ! ದೇಶಕಲ್ಯಾಣಕ್ಕಾಗಿ ನೀನು ಇದನ್ನು ಉಪಯೋಗಿಸುತ್ತಹೋಗುವದರಿಂದಲೇ ನಾವೆಲ್ಲರೂ ಮುಲಾಣಾ ಹಯಾತಿಯನ್ನು ಸನ್ಮಾನಿಸಿದಂತಾಗುವದು! ಅನ್ನಲು, ವೆಂಕಾಜಿ ವಾಘನು ತನ್ನ ಹೃದಯದಲ್ಲಿಯ ಸ್ವಾಮಿನಿಷ್ಠೆಯು

ಹೊರಸೂಸುತ್ತಿರಲು, ಕೃತಜ್ಞತೆಯಿಂದ ಆ ಖಡ್ಗವನ್ನು ಸ್ವೀಕರಿಸಿ, ತನ್ನ ಸ್ಥಳದಲ್ಲಿ ಕುಳಿತು ಕೊಂಡನು. ಅಷ್ಟರಲ್ಲಿ ಆಬಾಜಿ ಸೋನದೇವನು ಮತ್ತೆ ಎದ್ದುನಿಂತು– ಪ್ರಭೋ, ಇನ್ನೊಂದು ಮಹತ್ವದ ಕಾಣಿಕೆಯಿರುವದು, ಅಪ್ಪಣೆಯಾದರೆ ಒಪ್ಪಿಸುವೆನು.

ಶಿವರಾಯ– ಅದಾವ ಕಾಣಿಕೆ? ನಿನ್ನ ಕಾಣಿಕೆಗಳು ಈ ಮೊದಲೆ ಮುಟ್ಟಿ ಹೋಗಿರುವವಲ್ಲವೆ?

ಈ ಮೇರೆಗೆ ಶಿವರಾಯನು ಪ್ರಶ್ನೆ ಮಾಡುತ್ತಿರಲು, ಆಬಾಜಿಯ ಸಂಜ್ಞೆಯಂತೆ ಮರಾಟಾ ಸ್ತ್ರೀಯರ ನಡುವೆಯಿದ್ದ ಒಬ್ಬ ಗೋಷೆಯ ಹೆಣ್ಣುಮಗಳನ್ನು, ಆ ಸ್ತ್ರೀಯರು ಮುಂದೆ ಮಾಡಿದರು; ಈ ಹೆಣ್ಣುಮಗಳನ್ನು ನೋಡಿದ ಕೂಡಲೆ, ಪರನಾರಿ ಸೋದರ ಶಿವರಾಯನ ಕಣ್ಣುಗಳು ಕೆಂಪಾದವು, ಆತನ ಗಂಭೀರ ಮುಖಮಂಡಲವು ಕ್ರೋಧಸಂತಪ್ತ ವಾಯಿತು! ಆಗ ಆತನು ಆಬಾಜಿಯನ್ನು ಕುರಿತು–

ಶಿವಾಜಿ– ಆಬಾಜೀ, ನಿನ್ನ ಕಾಣಿಕೆ ಯಾವದು? ಇಲ್ಲಿ ಈ ಹೆಣ್ಣುಮಕ್ಕಳೇಕೆ? ಈ ಗೋಷೆಯ ತಾಯಿ ಯಾರು?

ಹೀಗೆ ನುಡಿದು ಶಿವಾಜಿಯು ಆಬಾಜಿ ಸೋನದೇವನ ಕಡೆಗೆ ಕುದ್ಧದೃಷ್ಟಿಯಿಂದ ನೋಡತೊಡಗಲು, ಅಂಥ ಶೂರ ಆಬಾಜಿ ಸೋನದೇವನೆಂದರೇನು, ಗಡಗಡನೆ ನಡುಗ ತೊಡಗಿದನು; ಶಿವರಾಯನ ಪರನಾರೀ ಸೋದರತ್ವದ ಸ್ಮರಣವಾಗಲು, ಆತನ ಮುಖದಿಂದ ಅಕ್ಷರಗಳೇ ಹೊರಡದಾದವು. ಈ ಆಕಸ್ಮಿಕ ಅರಿಷ್ಟ ಪ್ರಸಂಗವು ಒದಗಿದ್ದನ್ನು ನೋಡಿ ಸಭಿಕರು ವಿಷಾದಪಟ್ಟು ಆಶ್ಚರ್ಯದಿಂದ ಶಿವರಾಯನ ಕಡೆಗೊಮ್ಮೆ ಆಬಾಜಿಯ ಕಡೆಗೊಮ್ಮೆ ನೋಡ ತೊಡಗಿದರು! ಅಷ್ಟರಲ್ಲಿ ತೀಕ್ಷ್ಣಬುದ್ಧಿಯ ಶಿವರಾಯನು ಆಬಾಜಿಯ ಕಾಣಿಕೆಯ ವಸ್ತುವಾವ ದೆಂಬದನ್ನರಿತು ಮತ್ತೆ ಆಬಾಜಿಗೆ–

ಶಿವಾಜಿ– ಆಬಾಜೀ, ಅಷ್ಟೇಕೆ ಅಂಜಿಕೆ? ಹೇಳಿರಿ, ನೀವು ತಂದಿರುವ ಕಾಣಿಕೆಯ ವಸ್ತುವು ಯಾವದು ಹೇಳಿರಿ.

ಆಬಾಜಿ– ಪ್ರಭೋ, ನನ್ನ ಅಪರಾಧ ಕ್ಷಮೆಯ ಬಗ್ಗೆ ಅಭಿವಚನ ದೊರೆತರೆ ಹೇಳುವೆನು.

ಶಿವರಾಯ– ಆಬಾಜೀ, ನೀವು ಅಪರಾಧ ಮಾಡತಕ್ಕವರಲ್ಲವೆಂಬದನ್ನು ನಾನು ಪೂರಾ ಬಲ್ಲೆನು; ಆದರೆ ಏನೋ ಪ್ರಮಾದವಾದಂತೆ ತೋರುತ್ತದೆ. ಇರಲಿ, ಅಭಯವಿದೆ, ನಿಮ್ಮ ಕಾಣಿಕೆಯ ವಸ್ತುವು ಯಾವದು ಹೇಳಿರಿ.

ಆಬಾಜಿ– ಪ್ರಭೋ ನಿನ್ನ ಎದುರಿಗೆ ನಿಂತಿರುವ ಗೋಷೆಯ ತಾಯಿಯೇ ಆ ಕಾಣಿಕೆಯ ಒಡವೆಯು! ಶಿವರಾಯಾ, ನಿನ್ನ ಪವಿತ್ರಮೂರ್ತಿಯ ದರ್ಶನ ಮಾತ್ರದಿಂದ ಯವನ ಸಹವಾಸದ ನನ್ನ ಮಲಿನ ಹೃದಯವು ಪವಿತ್ರವಾಯಿತು ಆದರೆ, ಮುಸಲ್ಮಾನರು ನಮ್ಮ ಸುಂದರ ಸ್ತ್ರೀಯರನ್ನು ಅಪಹರಿಸುವ ಸೇಡು ತೀರಿಸುವ ಬುದ್ಧಿಯಿಂದ, ಈ ಸ್ತ್ರೀ ರತ್ನವನ್ನು ನಾನು ನಿಮಗೆ ಕಾಣಿಕೆಯಾಗಿ ತಂದದ್ದು ನಿಜವು! ಧರ್ಮಮೂರ್ತೇ, ಇದು ಸಹವಾಸ ದೋಷವು!

ಶಿವಾಜಿ– ಈ ತಾಯಿಯು ನಿನ್ನ ಕೈಗೆ ಹೇಗೆ ಸಿಕ್ಕಳು? ಮುಲಾಣಾಹಯಾತಿಯು ಪ್ರತಾಪಶಾಲಿ ಸಿಂಹವಲ್ಲವೆ?

ಆಬಾಜಿ– ಕಲ್ಯಾಣಕೋಟೆ ಬಿಟ್ಟು ಹೋಗುವಾಗ, ಆ ಪ್ರತಾಪವಂತರು ಯಾವ ಕಾರಣದಿಂದಲೋ ತಮ್ಮ ಜನಾನಖಾನೆಯನ್ನು ಬಿಟ್ಟುಹೋದರು! ಧರ್ಮಮೂರ್ತೆ, ಆ ಜನಾನಖಾನೆಯೊಳಗಿನ ಸ್ತ್ರೀ ರತ್ನವೇ ಈ ಮುಲಾಣಾ ಹಯಾತಿಯ ಸೊಸೆಯು!

ಶಿವರಾಯ– ಆ ಹೆಣ್ಣುಮಗಳ ಯಾವ ವಿಶೇಷ ಪೂಜ್ಯ ಗುಣಕ್ಕಾಗಿ ಆಕೆಯನ್ನು ನೀನು ಇಲ್ಲಿಗೆ ಕರತಂದೆ?

ಆಬಾಜಿ– ಆಕೆಯ ಲೋಕೋತ್ತರ ಸೌಂದರ್ಯ ಗುಣಕ್ಕಾಗಿ ಪ್ರಭೋ!

ಶಿವರಾಯ– (ಉಪಹಾಸದಿಂದ ನಕ್ಕು) ಆಬಾಜೀ, ಏನು ದಡ್ಡರು ನೀವು! ಚಲುವಿಕೆಯು ಏನು ಅಪರೂಪವು! ನಮ್ಮ ತಾಯಿ ಜೀಜಾಬಾಯಿಯವರು, ಈ ಹೆಣ್ಣುಮಗಳಂತೆ ಚಲುವೆಯಾಗಿದ್ದರೆ, ನಾನೂ ಚಲುವನಾಗಿಯೇ ಹುಟ್ಟುತ್ತಿದ್ದೆನು! ಆಬಾಜೀ, ಶಿವರಾಜನು, ಏಕಪತ್ನೀ ವ್ರತಸ್ಥನಾದ ಶ್ರೀರಾಮ ಚಂದ್ರನ ವಂಶಜನು. ಬಾಪ್ಪಾ ರಾವಳನ ಪವಿತ್ರ ಕುಲದಲ್ಲಿ ಹುಟ್ಟಿದವನು; ಆದ್ದರಿಂದ ಆತನಿಗೆ ಪರಸ್ತ್ರೀಯರು ತಾಯಿಯ ಸಮಾನರು! ಕಾರಣ, ಇನ್ನುಮೇಲೆ ಮಹಾರಾಷ್ಟ್ರರು ನೀವು ಶತ್ರುಗಳ ಜನಾನಖಾನೆಯ ಗೊಡವಿಗೆ ಸರ್ವಥಾ ಹೋಗತಕ್ಕದ್ದಲ್ಲ; ಮತ್ತು ಪರಸ್ತ್ರೀಯರನ್ನು ಕಣ್ಣೆತ್ತಿ ನೋಡತಕ್ಕದ್ದಲ್ಲ. ಆಬಾಜೀ, ನಮ್ಮ ವ್ಯವಹಾರವು ವೀರ ಪುಂಗವರಾದ ಪುರುಷ ಶ್ರೇಷ್ಠರ ಸಂಗಡವಲ್ಲವೆ? ಅಂದಬಳಿಕ ನಮಗೆ ಸ್ತ್ರೀಯರ ಸಂಬಂಧವೇನು? ಈಗ ನೀನು ನಿನ್ನ ಈ ವಿಜಯದ ದರ್ಬಾರವನ್ನು ನೋಡುವದಕ್ಕಾಗಿ ಪ್ರತ್ಯಕ್ಷ ನನ್ನ ತಂಗಿಯನ್ನು ಕರೆದು ತಂದಿರುತ್ತೀ ಎಂದು ನಾನು ತಿಳಿದಿರುವೆನು; ಆದ್ದರಿಂದ ನನ್ನ ಈ ತಂಗಿಯ ಸೀರೆ–ಕುಪ್ಪಸ–ಬಳೆಗಳಿಗಾಗಿ ಇನಾಮುಗ್ರಾಮುಗಳ ಸನದು ಕೊಡಲು, ಚಿಟಣೀಸರಿಗೆ ಹೇಳುವೆನು; ನೀವು ಆ ಸನದು ತಕ್ಕೊಂಡು, ಕೂಡಲೆ ಮುಲಾಣಾ ಹಯಾತಿಯವರ ಯಾವತ್ತು ಜನಾನಖಾನೆಯನ್ನು ಬಹುಮಾನಪುರಸ್ಸರ ವಿಜಾಪುರಕ್ಕೆ ಅವರ ಬಳಿಗೆ ಮುಟ್ಟಿಸಿಬಿಡಿರಿ!

ಈ ಎಲ್ಲ ಮಾತುಗಳನ್ನು ಕೇಳುತ್ತಿದ್ದ, ಹಾಗೂ ಎದೆ ಒಡೆದು ನೀರಾಗಿ ಹೋಗಿ ಜೋರನೆ ಬೆವತಿದ್ದ ಆ ಪತಿವ್ರತೆಯಾದ ಮುಲಾಣಾ ಹಯಾತಿಯ ಸೊಸೆಯು, ನಿಂತಲ್ಲಿಯೇ ಮೊಣಕಾಲೂರಿ ಕುಳಿತು, ಕೈಜೋಡಿಸಿ ಶಿವರಾಯನನ್ನು ಕುರಿತು– ''ಭಾಯೀ, ಶಿವಬಾ, ನನ್ನ ಹಡೆದ ತಂದೆಯೇ ಯಾವಾಗಲೂ ನೀನು ಹೀಗೆಯೇ ಜಯಶೀಲನಾಗಪ್ಪಾ! ಇದು ನಿನ್ನ ತಂಗಿಯ ಹರಕೆ!'' ಎಂದು ನುಡಿಯುವಾಗ, ಆಕೆಯ ಕಂಠಬಿಗಿದು ಆಕೆಯು ಬಿಕ್ಕಿ ಬಿಕ್ಕಿ ಅಳತೊಡಗಿರಲು, ಅಷ್ಟರಲ್ಲಿ ''ಜಯಜಯ ರಘುವೀರ ಸಮರ್ಥ'' ಎಂಬ ಗಂಭೀರ ಧ್ವನಿಯು ಸಭಾಮಂದಿರವನ್ನು ತುಂಬುತ್ತಿರುವಾಗ, ಶ್ರೀ ಸಮರ್ಥ ರಾಮದಾಸಸ್ವಾಮಿಗಳು ಶಿಷ್ಯಸಮೇತರಾಗಿ ಆ ದರ್ಬಾರವನ್ನು ಪ್ರವೇಶಿಸಿದರು! ಕೂಡಲೆ ಸಭೆಗೆ ಸಭೆಯೇ ಎದ್ದುನಿಂತರೂ, ಆ ಪತಿವ್ರತಾ ಶಿರೋಮಣಿಯು, ಮೊಣಕಾಲೂರಿ ಕೈಜೋಡಿಸಿಕೊಂಡು ಕಣ್ಣೀರು ಸುರಿಸುತ್ತಲೇ ಇದ್ದಳು; ಆಗ ಆ ಸಾಧ್ವಿಯನ್ನು ನೋಡಿ, ಕರುಣಾಹೃದಯರಾದ ಸಮರ್ಥರು–ಮಾಯೀ, ಏಳಮ್ಮಾ ನಿಮ್ಮ

ತಂದೆ ಮುಲಾಣಾ ಹಯಾತಿಯನ್ನು ನಾನು ಕಂಡಿದ್ದೆನು; ಆತನು ತನ್ನ ಶೂರ ಚಿರಂಜೀವ ರೊಡನೆ ಕ್ಷೇಮ ದಿಂದಿರುವನು; ಸಾಧ್ವೀ, ಕಣ್ಣೀರು ಒರಿಸಿಕೊಳ್ಳಿ; ನೀನು ನಿನ್ನ ತವರುಮನೆಯಲ್ಲಿ ರುವಾಗ, ಹೀಗೆ ಕಣ್ಣೀರು ಸುರಿಸುವರೇ? ನಿಮ್ಮ ಅಣ್ಣ ಶಿವರಾಯನು ನಿನಗೆ ಸೀರೆ- ಕುಪ್ಪಸ ಮಾಡಿ ನಾಳಿಗೇ ನಿನ್ನ ತಂದೆಯ ಬಳಿಗೆ ಕಳಿಸುವನು; ಚಿಂತೆ ಮಾಡಬೇಡಮ್ಮಾ! ಎಂದು ನುಡಿಯಲು, ಆ ಸಾಧ್ವಿಯು ಕೂಡಲೆ ನೆಲಕ್ಕೆ ಹಣೆಹಚ್ಚಿ ಸಮರ್ಥರಿಗೆ ನಮಸ್ಕರಿಸಿ, ಕಣ್ಣು ಒರಿಸಿಕೊಂಡು, ತನ್ನ ಸ್ತ್ರೀಪರಿವಾರ ದೊಡನೆ ಅಲ್ಲಿಂದ ತಟ್ಟನೆ ತನ್ನ ಸ್ಥಳಕ್ಕೆ ಹೊರಟು ಹೋಗಿಬಿಟ್ಟಳು!

ಹೀಗೆ ಸಮರ್ಥರು, ಆ ಸಾಧ್ವಿಯನ್ನು ಅಭಿನಂದಿಸಿ, ತಮ್ಮ ಚರಣಗಳಿಗೆರಗಿದ ಶಿವರಾಯನನ್ನು ಹಿಡಿದೆತ್ತಿ ಆತನ ಕೈ ಹಿಡಿದು, ಆತನನ್ನು ಆತನ ಆಸನದಲ್ಲಿ ಕುಳ್ಳಿರಿಸಿ, ತಾವೂ ಕುಳಿತುಕೊಳ್ಳಲು, ದರ್ಬಾರಕ್ಕೆ ದರ್ಬಾರವೇ ಕುಳಿತುಕೊಳ್ಳುತ್ತಿರುವಾಗ, ದರ್ಬಾರದ ವೀರರಸದ ರೂಪಾಂತರವು, ತಟ್ಟನೆ ಶಾಂತಿರಸದಲ್ಲಿ ಆಗಿಹೋಯಿತು! ಈ ಅವಸರದಲ್ಲಿ ವೆಂಕಾಜಿಯು ದರ್ಬಾರದಲ್ಲಿ ಎದ್ದು ಕೈ ಜೋಡಿಸಿ ನಿಂತುಕೊಳ್ಳಲು, ಸಮರ್ಥರು ಆತನನ್ನು ನೋಡಿ-

ಸಮರ್ಥರು- ಯಾಕೆ ವೆಂಕಾಜೀ? ಪವಿತ್ರ ಇಸ್ಲಾಮೀ ಮತದಿಂದ ನಿನಗೆ ಶಾಂತಿ ಯುಂಟಾ ಗಿರುವದೆಯೇ? ನೀನು ಸ್ವಾಮಿಸೇವೆಗಾಗಿ ಹಿಂದುವು ಹೋಗಿ ಮುಸಲ್ಮಾನನಾಗಿ, ಅತ್ಯಂತ ಸ್ವಾರ್ಥತ್ಯಾಗಮಾಡಿ ಸಜ್ಜನರಿಗೆ ಮಾನ್ಯನಾಗಿದ್ದರೂ, ಧಾರ್ಮಿಕ ಶಾಂತಿಯು ದೊರೆತ ಹೊರತು ನೀನು ಸುಖಿಯೂ, ಕೃತಾರ್ಥನೂ ಆಗಲಾರೆ! ವೆಂಕಾಜೀ, ಯಾವ ಧರ್ಮಗಳೇನು, ಯಾವ ಮತಗಳೇನು ಕ್ರೋಧ-ಮಾತ್ಸರ್ಯಾದಿ ವಿಕಾರರಹಿತರಾದವರಿಗೇ ಅವು ಇಹ-ಪರ ಸುಖಗಳನ್ನು ಕೊಡುವವು! ಆದ್ದರಿಂದ, ನೀನು ಮುಸಲ್ಮಾನನೇ ಇದ್ದು, ಪೈಗಂಬರರ ಆಜ್ಞೆಯಂತೆ ಭಾವಿಕವಾಗಿ ನಡೆದುಕೊಂಡರೆ, ನೀನು ನಿಶ್ಚಯವಾಗಿ ಕೃತಾರ್ಥನಾಗುವೆ; ಆದರೆ ನಿನ್ನ ಮನಸ್ಸು ಸ್ವಸ್ಥವಾಗಿದೆಯಷ್ಟೆ? ದರವಡೆ ಹಾಕುವದಕ್ಕಾಗಿ ತಮ್ಮ ಹಿಂಡಿನೊಳಗಿನ ಜನಸಂಖ್ಯೆ ಹೆಚ್ಚಿಸಲಿಕ್ಕೆ ಮಾಡುವ ಧರ್ಮಾಂತರವು, ನಿಶ್ಚಯವಾಗಿ ನರಕ ಸಾಧನವಾಗಿರುವದು; ಆದರೆ, ನೀನು ಹಾಗೆ ನೀಚ ಸ್ವಾರ್ಥಿಯಾಗಿ ಧರ್ಮಾಂತರ ಮಾಡಿರುವದಿಲ್ಲ!

ವೆಂಕಾಜಿ- ಮಹಾತ್ಮರೇ, ಸ್ವಾಮಿ ಕಾರ್ಯಸಾಧನೆಗಾಗಿ ನಾನು ಧರ್ಮಾಂತರ ಮಾಡಿದೆನು ಸರಿ; ಆದರೆ ಜನ್ಮತಃ ಹಿಂದೂ ಧರ್ಮದ ಸಂಸ್ಕಾರವಾಗಿದ್ದ ನನ್ನ ಮನಸ್ಸು, ಮುಸಲ್ಮಾನ ಧರ್ಮದಲ್ಲಿ ರಮಿಸಲೊಲ್ಲದು! ಇತ್ತ ಹಿಂದೂ ಧರ್ಮವನ್ನು ಕಳೆದುಕೊಂಡದ್ದರಿಂದ ನನ್ನ ಹಿಂದುತ್ವವು ನಷ್ಟವಾಗಿಹೋಯಿತು. ಅತ್ತ ಮುಸಲ್ಮಾನ ಧರ್ಮದಲ್ಲಿ ಶ್ರದ್ಧಾ-ಭಕ್ತಿ ಗಳಿಲ್ಲದಿರುವದರಿಂದ ಇಸ್ಲಾಮಿತನವೂ ನನ್ನಲ್ಲಿ ಇಲ್ಲದಾಯಿತು. ಆದ್ದರಿಂದ ನಾನು ಧರ್ಮ ಹೀನನಾಗಿ ಪಶ್ಚಾತ್ತಾಪ ಪಡುತ್ತಿರುವಾಗ, ನನ್ನ ಶಾಂತಿಯು ನಷ್ಟವಾಗಿಹೋಗಿದೆ ಮಹಾತ್ಮನ್!

ಸಮರ್ಥರು-ನೀನು ಈಗಲೂ ಮುಸಲ್ಮಾನರಲ್ಲಿಯೇ ಊಟ-ಉಡಿಗೆಯ ಬಳಕೆ ಮಾಡುತ್ತಿರುವೆಯಾ?

ವೆಂಕಾಜಿ– ಇಲ್ಲ ಮಹಾತ್ಮನ್, ನಿರ್ವಾಹವಿಲ್ಲದೆ, ಒಮ್ಮೆ ಅವರೊಡನೆ ಅವರ ಭೋಜನಪಾತ್ರೆಯಲ್ಲಿ ಭೋಜನ ಮಾಡಬೇಕಾದರೆ, ಆದ ನನ್ನ ಸ್ಥಿತಿಯನ್ನು ಬಾಯಿಂದ ನುಡಿಯಲಾರೆನು, ತಿರುಗಿ ಅವರ ಸಂಗಡ ಅನ್ನವ್ಯವಹಾರವಿಲ್ಲ, ಯಾವ ಬಳಕೆಯೂ ಇಲ್ಲ!

ಸಮರ್ಥರು– ನಿಮ್ಮ ಮನೆಯವರು?

ವೆಂಕಾಜಿ– ಅವರಿಗಂತು ಮುಸಲ್ಮಾನರೊಡನೆ ಯಾವ ಸಂಬಂಧವೂ ಇಲ್ಲ.

ಸಮರ್ಥರು– ಈಗ ನೀನು ಹಿಂದುವಾಗಬೇಕೆನ್ನುತ್ತೀಯಾ?

ವೆಂಕಾಜಿ– ಹಾಗೇನು ನನ್ನ ಆಗ್ರಹವಿಲ್ಲ ಸ್ವಾಮಿನ್, ಮುಖ್ಯ ಮಾತು ಸ್ವಾಮಿಕಾರ್ಯ ವಾಯಿತು, ಇನ್ನು ನನಗೆ ಸ್ವರ್ಗವಾದರೂ ಸಂತೋಷವೇ! ನರಕವಾದರೂ ಸಂತೋಷವೇ! ತಮ್ಮ ಅಪ್ಪಣೆಯೇ ನನಗೆ ತಾರಕವಾದದ್ದರಿಂದ, ಇದ್ದ ಮಾತನ್ನು ಸನ್ನಿಧಿಯಲ್ಲಿ ಇಟ್ಟಿದ್ದೇನಷ್ಟೆ!

ಸಮರ್ಥರು– ವೆಂಕಾಜೀ, ಕಾರಾಗೃಹವಾಸದಂಥ ವಿಪತ್ತು ಒದಗಿದಾಗ, ಅನಿರ್ವಾಹ ಪಕ್ಷ ಪರಧರ್ಮದವರ ಅನ್ನವನ್ನು ಉಣ್ಣಬೇಕಾಗುವದು; ಆದರೆ ಅಷ್ಟರಿಂದ ಧರ್ಮಭ್ರಷ್ಟ ರಾಗುವರೆಂದು ನಮ್ಮ ಧರ್ಮಶಾಸ್ತ್ರಕಾರರು ನಿರ್ಣಯಿಸಿರುವದಿಲ್ಲ; ಆ ಸೆರೆಮನೆಯಿಂದ ಬಿಡುಗಡೆ ಹೊಂದಿ ಬಂದ ಬಳಿಕ, ಅವರಿಗೆ ತಕ್ಕ ಪ್ರಾಯಶ್ಚಿತ್ತ ಹೇಳಿ, ಪುನಃ ತಮ್ಮ ತಮ್ಮ ಧರ್ಮದಲ್ಲಿ ಬರುವ ಹಾದಿಯನ್ನು ನಮ್ಮ ಧರ್ಮಶಾಸ್ತ್ರವು ಹೇಳಿರುವದು. ಆದ್ದರಿಂದ ನೀನು ಒಂದು ವರ್ಷ ವ್ರತಸ್ಥನಾಗಿದ್ದು, ಅಖಂಡ ರಾಮನಾಮ ಜಪಮಾಡುತ್ತ ಆಮೇಲೆ ವಿಧಿಯಂತೆ ಪ್ರಾಯಶ್ಚಿತ್ತ ಮಾಡಿಕೊಂಡು, ಪುನಃ ನೀನು ಹಿಂದುವಾಗಿ ನಿನ್ನ ಜಾತಿಯಲ್ಲಿ ಸೇರಬಹುದು.

ವೆಂಕಾಜಿ– ಅವಶ್ಯವಾಗಿ ಹಾಗೆಯೇ ಮಾಡುವೆನು ಸ್ವಾಮೀ, ಮುಣುಗುತ್ತಿದ್ದ ನನಗೆ ದೊಡ್ಡ ಆಧಾರ ಸಿಕ್ಕಂತಾಯಿತು; ಆದರೆ ನಾನು ಇನ್ನೊಂದು ಮಾತು ಕೇಳಿಕೊಳ್ಳ ಬೇಕೆಂದಿರುವೆನು.

ಸಮರ್ಥರು– ಅದಾವ ಮಾತು?

ವೆಂಕಾಜಿ– ನಾನು ಇಂದೇ ನನ್ನ ಈ ಗಡ್ಡಗಳನ್ನು ತೆಗೆಸಿ ಹಿಂದುವಿನ ಆಚರಣೆಗಳನ್ನು ಆಚರಿಸಬಹುದೇ?

ಸಮರ್ಥರು– ಅವಶ್ಯವು ಆಚರಿಸು; ಆದರೆ ಪ್ರಾಯಶ್ಚಿತ್ತದಿಂದ ಪರಿಶುದ್ಧನಾಗುವವರೆಗೆ, ನಿಮ್ಮ ಜಾತಿಯವರೊಡನೆ ನೀನು ಬಳಕೆ ಮಾಡಬೇಡ, ಬೇರೆಯೊತ್ತಟ್ಟಿಗೆ ಕುಳಿತು ಊಟ ಮಾಡು.

ವೆಂಕಾಜಿ– ಮಹದಾಜ್ಞೆ!

ಈ ಮೇರೆಗೆ ನುಡಿದು ವೆಂಕಾಜಿಯು ತನ್ನ ಸ್ಥಳದಲ್ಲಿ ಕುಳಿತುಕೊಳ್ಳಲು, ಆಬಾಜಿ ಸೋನದೇವನು ಮೇಲಕ್ಕೆದ್ದು, ಕೈಜೋಡಿಸಿ ನಿಂತುಕೊಂಡನು. ಆತನನ್ನು ನೋಡಿ ಸಮರ್ಥರು–

ಸಮರ್ಥರು– ಯಾಕೆ ಆಬಾಜೀ, ಬ್ರಾಹ್ಮಣನು ನೀನು ಕ್ಷಾತ್ರವೃತ್ತಿಯನ್ನು ಆಚರಿಸುತ್ತಿರು ವದಕ್ಕಾಗಿ ನಿನಗೆ ಪಶ್ಚಾತ್ತಾಪವಾಗಿರುವದೇನು?

ಆಬಾಜಿ– ಇಲ್ಲ ಸ್ವಾಮಿನ್, ಕಾಲಮಹಿಮೆಯಿಂದ ದ್ರೋಣ–ಕೃಪರಂಥ ಶಾಪಾದಪಿ ಶರಾದಪಿ ಬ್ರಾಹ್ಮಣರೂ, ಅಧರ್ಮ ಪ್ರವೃತ್ತಿಯ ದುರ್ಯೋಧನನನ್ನೂ ಸೇವಿಸಿರುವಾಗ, ನನ್ನಂಥ ಪಾಮರನು ಧರ್ಮಮೂರ್ತಿಯಾಗಿರುವ ನಮ್ಮ ಶಿವಪ್ರಭುವಿನ ಸೇವೆ ಮಾಡುವಾಗ

ನನಗೆ ಆನಂದವಾಗುತ್ತಿರುವದಲ್ಲದೆ, ಸರ್ವಥಾ ಪಶ್ಚಾತ್ತಾಪವಾಗುವದಿಲ್ಲ; ಆದರೆ ನನ್ನ ಚಿತ್ತವೃತ್ತಿಯು, ನಮ್ಮ ಶಿವಪ್ರಭುವಿನ ಶೀಲವರಿಯದಷ್ಟು ಜಡವಾಯಿತಲ್ಲ! ಪರನಾರೀ ಸೋದರನಾದ ನನ್ನ ಪ್ರಭುವಿನ ಘನವಾದ ಯೋಗ್ಯತೆಯರಿಯದೆ, ಒಬ್ಬ ಸಾಧ್ವಿಯನ್ನು ಆ ಧರ್ಮಮೂರ್ತಿಗೆ ಕೂಡಿದ ದರ್ಬಾರದಲ್ಲಿ ನಾನು ಕಾಣಿಕೆಯಾಗಿ ಕೊಡಹೋದೆನಲ್ಲ! ಮಹಾತ್ಮನ್, ಬ್ರಾಹ್ಮಣನು ನಾನು ಸತ್ವಗುಣಿಯಾಗಬೇಕಾಗಿರಲು, ಇಷ್ಟು ತಮೋಗುಣಿಯು ಯಾಕಾದೆನೆಂಬ ಕಾರಣವು ತಿಳಿಯದೆ ನನ್ನ ಹೃದಯವು ಪಶ್ಚಾತ್ತಾಪದಿಂದ ದಗ್ಧವಾಗ ತೊಡಗಿದೆ! ಮಹಾತ್ಮನ್, ಹೀಗೆ ನಾನು ತಾಮಸಿಯು ಯಾಕಾದೆನು? ಇದಕ್ಕೆ ಪ್ರಾಯಶ್ಚಿತ್ತ ವೇನು? ದ್ರೋಣಕೃಪರು ಇಂಥ ತಾಮಸಿಗಳಾದದ್ದು ಭಾರತದಲ್ಲಿ ಕಂಡುಬಂದಿರುವದಿಲ್ಲವಲ್ಲ!

ಸಮರ್ಥರು– ಆಬಾಜಿ, ಈಗ ನಿನಗಾಗಿರುವ ಪಶ್ಚಾತ್ತಾಪವೇ ನಿನ್ನ ಚಿತ್ತಶುದ್ಧಿಗೆ ಸಾಕಾಗಿರುವದು. ದ್ರೋಣ–ಕೃಪರ ಕಾಲವು ಇದಲ್ಲ; ಆಗ ಇನ್ನೂ ಅದೇ ಕಲಿಯ ಪ್ರವೇಶ ವಾಗುತ್ತಲಿತ್ತು; ಈಗ ಕಲಿಯ ಸಾಮ್ರಾಜ್ಯವು ಭರದಿಂದ ಪಸರಿಸುತ್ತಲಿದೆ! ಆಬಾಜಿ, ಮುಂದೆ ಬರಬರುತ್ತ ಕಲಿಯ ಸಾಮ್ರಾಜ್ಯವು ಜಗದ್ವ್ಯಾಪಿಯಾಗಬೇಕಾಗಿರಲು, ಅಂತಹ ಭಯಂಕರ ಕಾಲದ ಅನಾಹುತಗಳಿಗೆ ಸೃಷ್ಟಿಯೇ ನಡುಗುವಾಗ, ಆ ಸೃಷ್ಟಿಯೊಳಗಿನ ಕಃಪದಾರ್ಥ ಗಳಾದ ನಾವೂ ನೀವೂ ನಡುಗುವದು ಆಶ್ಚರ್ಯವೇನು? ಭಾರತ ಕಾಲವು ಕ್ರಮಿಸಿ ಸಾವಿರಾರು ವರ್ಷಗಳಾಗಿರಲು, ನಿನ್ನ ಮನಸ್ಸು ಇಷ್ಟು ತಾಮಸಿಯಾದದ್ದು ಆಶ್ಚರ್ಯವಲ್ಲ. ಹಿಂದೂ ರಾಷ್ಟ್ರಕ್ಕೆ ಅನಾದಿಕಾಲದಿಂದ ಬ್ರಾಹ್ಮಣರು ಮುಖಪ್ರಾಯರು; ಮುಖವು ಕೆಟ್ಟರೆಯೇ ಉಳಿದ ರಾಷ್ಟ್ರಾಂಗಗಳು ಕೆಡುವದರಿಂದ, ಬ್ರಾಹ್ಮಣರು ನಾವೇ ಮೊದಲು ಕೆಡುತ್ತಿರುವೆವು. ಹಾಗು ಮಂದಿಯನ್ನು ಕೆಡಿಸುತ್ತಿರುವೆವು! ಮುಂದಿನ ಭವಿಷ್ಯವನ್ನು ಕುರಿತು, ಶ್ರೀರಾಮನು ನುಡಿಸುವ ನುಡಿಗಳನ್ನು ನೀನು ಕೇಳು; ಇನ್ನು ಮುಂದೆ ಮೊದಲು ಬ್ರಾಹ್ಮಣರೇ ಆಚಾರಭ್ರಷ್ಟ ರಾಗುವರು, ವಿಚಾರಭ್ರಷ್ಟರಾಗುವರು, ವರ್ಣಸಂಕರಮಾಡುವರು, ಜಾತಿಸಂಕರಮಾಡುವರು; ಬ್ರಾಹ್ಮಣರೇ, ರಾಜಪ್ರಜಾ, ಗುರುಶಿಷ್ಯ ಮೊದಲಾದ ಪವಿತ್ರ ಸೇವ್ಯಸೇವಕಭಾವಗಳನ್ನು ಕಾಲಿನಿಂದ ತುಳಿಯುವರು, ಪ್ರೇಮ–ಶ್ರದ್ಧಾ–ಭಕ್ತಿಗಳೆಂಬ ಪವಿತ್ರ ಭಾವಗಳ ಸದ್ದು ಅಡಗಿಸುವರು; ರಾಜರೂ ತಾವೇ ಪ್ರಜೆಗಳೂ ತಾವೇ ಎಂಬ ಘಾತಕಭಾವವನ್ನು ಜನರಲ್ಲಿ ಉಂಟುಮಾಡಿ, ವ್ಯಕ್ತಿಸ್ವಾತಂತ್ರ್ಯದ ಹೆಸರಿನಿಂದ ಸ್ವೇಚ್ಛಾಚಾರವನ್ನು ಜನರಲ್ಲಿ ಬ್ರಾಹ್ಮಣರೇ ಹಬ್ಬಿಸುವರು; ಹಚ್ಚಗಿದ್ದಲ್ಲಿ ಮೇದು ಬೆಚ್ಚಗಿದ್ದಲ್ಲಿ ಮಲಗುವ ಚಾಳಿಯನ್ನು ಬ್ರಾಹ್ಮಣರೇ ಜನರಿಗೆ ಕಲಿಸುವರು; ಸ್ಪೃಶ್ಯರು–ಅಸ್ಪೃಶ್ಯರು, ಬ್ರಾಹ್ಮಣರು–ಬ್ರಾಹ್ಮಣೇತರರು, ಕುಳಗಲು–ರೈತರು, ಸಾವುಕಾರರು– ಸಾಲಗಾರರು, ಬಡವರು–ಶ್ರೀಮಂತರು, ಹೆಂಗಸರು–ಗಂಡಸರು, ಸ್ವದೇಶದವರು– ಪರದೇಶದವರು ಇವೇ ಮೊದಲಾದ ವಿವಿಧ ದ್ವಂದ್ವಗಳನ್ನು ಕಲಹಕ್ಕಾಗಿ ಸಜ್ಜು ಗೊಳಿಸಿ, ಆ ದ್ವಂದ್ವಗಳಲ್ಲಿ ಪರಸ್ಪರರ ವಿಷಯದ ಅನಾದಿಯ ಧಾರ್ಮಿಕ ಪ್ರೇಮಭಾವ ವನ್ನು ಹಾಳುಮಾಡಿ, ದ್ವೇಷಾಗ್ನಿಯು ಧಗಧಗಿಸಿ ಉರಿಯುವಂತೆ ಈ ಪವಿತ್ರ ಭರತ ಭೂಮಿಗೆ ಬ್ರಾಹ್ಮಣರೇ ಬೆಂಕಿಯನ್ನು ಹಚ್ಚುವರು! ಆಬಾಜೀ, ಹೆಚ್ಚಿಗೇನು ಹೇಳಲಿ? ಧರ್ಮಜೀವರಾದ ಭಾರತರನ್ನು ಸ್ವೇಚ್ಛಾಚಾರಿ ಕ್ರೂರಪಶುಗಳನ್ನಾಗಿ ಬ್ರಾಹ್ಮಣರೇ

ಮಾಡತಕ್ಕವರಿರುವರು! ಆದ್ದರಿಂದ ನಾವೆಲ್ಲರೂ ಆ ಕಲಿರಾಜನಿಗೆ– "ಎಲೈ ಮಹಾತ್ಮಾ ಕಲಿಚಕ್ರವರ್ತಿ, ಬ್ರಾಹ್ಮಣರನ್ನು ಮುಂದೆಮಾಡಿ, ಮನುಷ್ಯರನ್ನು ಕ್ರೂರ ಪಶುಗಳಾಗಿ ಮಾಡುತ್ತಿರುವ ನಿನ್ನ ಕುಟಿಲ ಕಲಿತನಕ್ಕೆ ಪಾಮರರಾದ ನಮ್ಮ ನಯಭಯದ ಅನಂತ ಪ್ರಣಾಮಗಳು!" ಎಂದು ಶರಣುಹೋಗತಕ್ಕದ್ದು! ಆಬಾಜೀ, ಇನ್ನು ಮೇಲೆ ಬ್ರಾಹ್ಮಣರು ನಾವು ಬಹುಜೋಕೆಯಿಂದ ಇರಬೇಕು, ನಾವು ನಮ್ಮ ಧರ್ಮ–ಕರ್ಮಗಳನ್ನು ಬಿಡಬಾರದು, ದೇವರನ್ನು ಮರೆಯಬಾರದು, ಸಾಧು–ಸಜ್ಜನರನ್ನು ತಿರಸ್ಕರಿಸಬಾರದು; ಹೀಗೆ ಮಾಡದಿದ್ದರೆ, ಬ್ರಾಹ್ಮಣರು ನಾವು ಜಗತ್ತನ್ನು ಕೆಡಿಸಿದ ಮಹಾ ಪಾಪಕ್ಕಾಗಿ, ಎಲ್ಲರಿಗಿಂತ ಮೊದಲು ನಿಶ್ಚಯ ವಾಗಿ ಹಾಳಾಗಿಹೋಗುವೆವು! ಈಗಿನ ನಮ್ಮ ಶಿವರಾಯನ ಕಾಲದಲ್ಲಿ ಸದ್ಗುಣರೂಪ ಸ್ವರಾಜ್ಯದ ಸುಗಂಧವು ಸುಳಿದಾಡುವಂತೆ, ಮುಂದೆ ಸುಳಿದಾಡಲಾರದು; ಮುಂದೆ ಬರಬರುತ್ತ ಜಗತ್ತಿ ನಲ್ಲಿ ಅಧಾರ್ಮಿಕತೆ, ನಾಸ್ತಿಕತೆಗಳ ಕೊಳಕ ದುರ್ಗಂಧವು ಉತ್ಪನ್ನವಾಗಿ, ಆ ದುರ್ಗಂಧದ ಸ್ವರಾಜ್ಯ ದಲ್ಲಿ ಕ್ರೋಧ, ಅಸೂಯೆ, ದ್ವೇಷ, ಮದ, ಲೋಭ ಮೊದಲಾದ ವಿಕಾರಗಳು ಪ್ರಬಲ ವಾಗಿ, ಆ ವಿಕಾರಗಳ ವಿಕೃತಿಯಿಂದ ಮನುಷ್ಯಪ್ರಾಣಿಯ ಯಾವ ಗತಿಯನ್ನು ಹೊಂದುವನೋ, ಎಷ್ಟು ಕಷ್ಟ–ನಷ್ಟಗಳನ್ನು ಅನುಭವಿಸುವನೋ, ಕಡೆಗೆ ಆತನು ಅಳಿಯುವನೋ– ಉಳಿಯುವನೋ ಎಂಬದನ್ನು ದೇವರೊಬ್ಬನೇ ಬಲ್ಲನು. ಆತನ ತಂತ್ರದಿಂದಲೇ ಜಗತ್ತು ನಡೆದಿರುವದರಿಂದ, ನಾವು, ದ್ವೇಷಾಸೂಯಗಳಿಂದ ಯಾವದಕ್ಕೂ ಹೆಸರಿಡದೆ, ಯಾರನ್ನೂ ನಿಂದಿಸದೆ, ಎಲ್ಲಕ್ಕೂ ಈಶತಂತ್ರವೇ ಕಾರಣವೆಂದು ನಂಬಿ, ನಾವು ಆತನಿಗೆ ಶರಣು ಹೋಗತಕ್ಕದ್ದು, ಅಂದರೆ ಆತನೇ ಜಗತ್ತಿಗೆ ಸನ್ಮಾರ್ಗವನ್ನು ತೋರಿಸಿ ಮಂಗಲವನ್ನೀ ಯುವನು!

ಈ ಮೇರೆಗೆ ನುಡಿದು, ಜಗತ್ತಿನ ತಾಪದ ಸ್ಮರಣದಿಂದ ಉದ್ವಿಗ್ನಚಿತ್ತರಾಗಿದ್ದ ಆ ಸಮರ್ಥರು, ಆ ಶಿವನೇರಿ ಕೋಟೆಯಲ್ಲಿ ಒಂದು ಕ್ಷಣಮಾತ್ರವೂ ಇರಲಾರದೆ, ಶಿವ ರಾಯನಿಗೆ– "ಶಿವರಾಯಾ, ಬಹುಜೋಕೆ, ಧರ್ಮಭ್ರಷ್ಟನಾದೀ, ದೇವರನ್ನು ಮರೆತೀ!" ಎಂದು ಎಚ್ಚರಗೊಳಿಸಿ, ಈಶ್ವರಧ್ಯಾನದಿಂದ ಚಿತ್ತ ಶಾಂತಿಯನ್ನು ಪಡೆಯುವದಕ್ಕಾಗಿ ಅರಣ್ಯಕ್ಕೆ ಹೊರಟು ಹೋಗಿಬಿಟ್ಟರು! ಅವರನ್ನು ಆಗ ತಡೆಯುವ ಯೋಗ್ಯತೆಯು ಅವರ ಶಿಷ್ಯರಿಗೂ ಆಗಲಿಲ್ಲ, ಶಿವರಾಯನಿಗೂ ಆಗಲಿಲ್ಲ! ಮುಂದೆ ಅವರ ಅಪ್ಪಣೆಯಂತೆ ಧರ್ಮ ಕ್ಕನುಸರಿಸಿ ಶಿವರಾಯನು ಮಾಡತಕ್ಕ ಕೆಲಸಗಳನ್ನು ಮಾಡಿದನು. ಎಲ್ಲಕ್ಕೂ ಮೊದಲು, ನೇತಾಜಿಯೊಡನೆ ಸುಮುಹೂರ್ತದಲ್ಲಿ ಕಾಶೀಬಾಯಿಯ ಲಗ್ನವಾಯಿತು, ನೇತಾಜಿ ಸುಬೇದಾರನು ತನ್ನ ಆ ಹೆಂಡತಿಯೊಡನೆ ಶಿವಪ್ರಭುವಿನ ಅಪ್ಪಣೆಯಿಂದ ರಾಜಮಾಚಿ ದುರ್ಗಕ್ಕೂ, ಆಬಾಜಿ ಸೋನದೇವ ಸುಬೇದಾರನು ಕಲ್ಯಾಣದ ಕೋಟೆಗೂ ಹೊರಟು ಹೋದರು! ವೆಂಕಾಜಿ ವಾಘನು ಸಮರ್ಥರ ಅಪ್ಪಣೆಯಂತೆ ಒಂದು ವರ್ಷ ವ್ರತಸ್ಥನಾಗಿದ್ದು, ಪ್ರಾಯಶ್ಚಿತ್ತ ವಿಧಿಯನ್ನು ತೀರಿಸಿ, ಪುನಃ ಮರಾಟನಾದನು!

**ಸಂಪೂರ್ಣ**

# ಪ್ರಸ್ತಾವನೆ

ಅತಿ ಗರ್ವವು ನಾಶಕರವೆಂದು ಹೇಳಲವಶ್ಯವಿಲ್ಲ. ''ಅತಿಗರ್ವೇಣ ರಾವಣಃ'' ಎಂಬಂತೆ, ಮಹಾಬಲಿಷ್ಠನೂ, ಅತ್ಯಂತ ವೈಭವಶಾಲಿಯೂ ಆದ ರಾವಣನ ನಾಶವು, ಅತಿ ಗರ್ವದಿಂದಲೇ ಆಯಿತೆಂಬದು ಶ್ರೀಮದ್ರಾಮಾಯಣದಿಂದ ಗೊತ್ತಾಗುವದು. ಅದರಂತೆ, ಪ್ರತಾಪಶಾಲಿಯಾದ ಭಾವುಸಾಹೇಬನ ಅತಿ ಗರ್ವದ ಬಾಧೆಯಿಂದ ಮಹಾರಾಷ್ಟ್ರದ ಉತ್ಕರ್ಷವು ಕುಗ್ಗಿತೆಂಬದು ನಮ್ಮ ಈ ಕುರುಕ್ಷೇತ್ರದ ಕಾದಂಬರಿಯಿಂದ ಗೊತ್ತಾಗಬಹುದಾಗಿದೆ. ರಾವಣನೂ, ಭಾವೂಸಾಹೇಬನೂ ಹಿಂದಿನವರಾದದ್ದರಿಂದ, ಅವರ ಮಾತು ಹೋಗಲಿ. ಇದೇ ಈಗ ಮುಗಿಯುತ್ತಿರುವ ಜರ್ಮನಿಯ ಕೇಸರ ಬಾದಶಹನ ಗರ್ವದ ಬಾಧೆಯು, ಜಗತ್ತನ್ನೇ ಇನ್ನೂ ಬಾಧಿಸುತ್ತಿರುವದು!

ಆದರೂ ಶ್ರೀರಾಮನಿಂದ ರಾವಣನ ಗರ್ವವೂ, ಅಬದಾಲಿಯಿಂದ ಭಾವೂಸಾಹೇಬನ ಗರ್ವವೂ ಅಡಗಿಹೋದಂತೆ, ನಮ್ಮ ಸಾರ್ವಭೌಮಸರಕಾರದ ವಿವೇಕದ ಸಾಮರ್ಥ್ಯದಿಂದ, ಕೇಸರ ಬಾದಶಹನ ಗರ್ವವು ಅಡಗಿಹೋಗಿರುವದರಿಂದ, ಇಡಿಯ ಜಗತ್ತೇ ಸುಖದ ಹಾದಿಯ ಹಿಡಿದಿರುವದೆಂದು ಹೇಳಬಹುದು. ಈ ಭಾಗ್ಯೋದಯದ ಶ್ರೇಯಸ್ಸಿಗೆ ನಮ್ಮ ಸಾರ್ವಭೌಮ ಸರಕಾರವು ದೊಡ್ಡ ಪ್ರಮಾಣದಿಂದ ಪಾಲುಗಾರವಾಗಿರುತ್ತದೆಂದು ನಾವು ಸಂತೋಷದಿಂದ ಹೇಳುವೆವು.

ನಮ್ಮ ಸರಕಾರದ ಈ ಔದಾರ್ಯದ ಕೃತಿಯ ಒಂದುಬಗೆಯ ಸ್ಮಾರಕಕ್ಕಾಗಿಯೇ ಈ ''ಕುರುಕ್ಷೇತ್ರ''ವೆಂಬ ಕಾದಂಬರಿಯನ್ನು ಸದ್ಗುರುವು ಬರೆಸಿರುವನೆಂದು ನಾವು ತಿಳಿಯುತ್ತೇವೆ. ನಮ್ಮ ಸಾರ್ವಭೌಮ ಸರಕಾರದ ಕೃಪಾಛತ್ರದಲ್ಲಿ ಉತ್ತರೋತ್ತರ ನಮ್ಮ ಉತ್ಕರ್ಷವಾಗುತ್ತ ಹೋಗಿ, ನಮ್ಮ ಕೃತಜ್ಞತೆಗೆ ಸರಕಾರವು ಹೆಚ್ಚುಹೆಚ್ಚು ಪಾತ್ರವಾಗುವಂತೆ ಅನುಗ್ರಹಿಸಲೆಂದು ಶ್ರೀ ಸದ್ಗುರುವನ್ನು ನಾವು ಪ್ರಾರ್ಥಿಸುವೆವು.

ಯೋಗ್ಯತಾಸಂಪನ್ನ ಮಹಾರಾಷ್ಟ್ರ ಲೇಖಕರಾದ ಮ. ರಾ. ರಾ. ನಾಗೇಶ ವಿನಾಯಕ ಬಾಪಟರವರ ''ಪಾನಿಪತಚಿಮೋಹೀಮ'' ಎಂಬ ಕಾದಂಬರಿಯು ನಮ್ಮ ಈ ಕಾದಂಬರಿಯ ಮೂಲಧನವಾಗಿರುವದು. ಅತಿ ಅವಸರ ಪ್ರಸಂಗದಲ್ಲಿ ನಮ್ಮ ಸನ್ಮಾನನೀಯ ಬಾಪಟಸಾಹೇಬರವರಿಂದ ನಮ್ಮ ಧಾರ್ಮಿಕ ಸಂಸ್ಥೆಗಾದ ಸಹಾಯಕ್ಕಾಗಿ ನಾವು ಅತ್ಯಂತ ಕೃತಜ್ಞರಾಗಿರುವೆವು.

ನಮ್ಮ ಮಿತ್ರರಾದ ರಾ. ರಾ. ರಾಮಚಂದ್ರ ಕೃಷ್ಣ ದೇಶಪಾಂಡೆಯವರು ಯೋಗ್ಯತಾ ಸಂಪನ್ನರಿದ್ದು, ನಮ್ಮ ಸಂಸ್ಥೆಯಲ್ಲಿ ಲೇಖನ ಕಾರ್ಯವನ್ನು ಮಾಡಹತ್ತಿರುತ್ತಾರೆ. ಅವರ ಈ ಸ್ತುತ್ಯಕಾರ್ಯದ ಅಭಿನಂದನಕ್ಕಾಗಿಯೇ ನಾವು ಬುದ್ಧಿಪೂರ್ವಕವಾಗಿ ಅವರ ಹೆಸರನ್ನು ಈ ಕಾದಂಬರಿಯ ಲೇಖಕರೆಂದು ನಮ್ಮ ಜತೆಗೆ ಉಲ್ಲೇಖಿಸಿರುವೆವು. ನಮ್ಮ ಈ ಮನೋದಯ ದಂತೆ ಅವರಿಂದ ಕನ್ನಡಿಗರ ಸೇವೆಯು ಘಟಿಸುವಂತೆ ಶ್ರೀ ಗುರುವು ಅನುಗ್ರಹಿಸಲಿ

| | |
|---|---|
| **ಸದ್ಗುರು ಆಫೀಸ,** | ಕನ್ನಡಿಗರ ಸೇವಕ |
| ಹಾವೇರಿ | **ವೇ. ತಿ. ಕುಲಕರಣಿ** |
| ತಾ. ೮–೧೧–೧೯ | ಗಳಗನಾಥ |

# ದುರುಳತನ

ಉಷಃಕಾಲವು, ನಕ್ಷತ್ರಗಳು ಕಾಂತಿಹೀನವಾಗತೊಡಗಿವೆ. ಚಂದ್ರಮನು ಕತ್ತಲೆಯನ್ನು ಓಡಿಸಿ ದಣಿದವನಂತೆ ತೇಜೋಹೀನನಾಗುತ್ತಿರಲು, ಆತನಿಗೆ ಬೆಂಬಲವಾಗಿ ಭರದಿಂದ ಬರುವ ದಿನಮಣಿಯಿಂದ ಮೂಡಲು ಬೆಳಗತೊಡಗಿದೆ. ''ಏಳಿರಿ ಏಳಿರಿ, ಬೆಳಗಾಯಿತು, ಮಲಗ ಬೇಡಿರಿ'' ಎಂದು ಕೂಗಿ ಕೂಗಿ ಜನರನ್ನು ಎಬ್ಬಿಸುವಂತೆ, ಪಕ್ಷಿಗಳು ಕಿಲಿಕಿಲಿ ಧ್ವನಿ ಮಾಡತೊಡಗಿವೆ. ಬೆಳಗಿನ ತಂಗಾಳಿಯು ಸುತ್ತಲೆ ಸುಗಂಧವನ್ನು ಬೀರುತ್ತ ಸುಳ್ಳನೆ ಸುಳಿಯತೊಡಗಿದೆ. ಧನುಸ್ಸಂಕ್ರಮಣದ ಕೊನೆಯ ಕಾಲವಾದದ್ದರಿಂದ, ಚಳಿಯು ಜಗತ್ತನ್ನು ಗದಗದ ನಡುಗಿಸುತ್ತಲಿದೆ; ಆದರೂ ನಸಿಕಿನಲ್ಲಿ ಎದ್ದು ವೀರರು ಧನುರ್ಮಾಸದ ಊಟವನ್ನು ತೀರಿಸಿಕೊಂಡು ದಿನದಂತೆ ದ್ವಂದ್ವಯುದ್ಧಕ್ಕಾಗಿ ರಣ ಸ್ತಂಭದ ಕಡೆಗೆ ಸಾಗಿಬರುತ್ತಲಿದ್ದಾರೆ. ಹಾದಿಕಾರರು ಬೆಳಗಿನ ಕೆಲಸಗಳನ್ನು ತೀರಿಸಿಕೊಂಡು ಉಲ್ಲಾಸದಿಂದ ಹಾದಿಯ ಹಿಡಿಯ ತೊಡಗಿದ್ದಾರೆ. ಯಾತ್ರಿಕರು ತಮ್ಮ ಪದ್ಧತಿಯಂತೆ ಕೆಲವರು ಪ್ರಾತಃಸ್ಮರಣದ ಶ್ಲೋಕಗಳ ನ್ನನ್ನುತ್ತ ಕೆಲವರು ಶಿವನಾಮವನ್ನು, ಕೆಲವರು ರಾಮನಾಮವನ್ನು ಉಚ್ಚರಿಸುತ್ತ ಕೆಲವರು ವಿಷ್ಣುಸಹಸ್ರದ ಪಾರಾಯಣಮಾಡುತ್ತ ಕೆಲವರು ಗೀತೆಯನ್ನು ಪಟಿಸುತ್ತ ಉಲ್ಲಾಸದಿಂದ ತಮ್ಮ ತಮ್ಮ ಕ್ಷೇತ್ರಾಭಿಮುಖರಾಗಿ ಸಾಗಿರುತ್ತಾರೆ. ಶ್ರೀ ಕುರುಕ್ಷೇತ್ರದೊಳಗಿನ ಪುರಾಣಪ್ರಸಿದ್ಧವಾದ ಭೀಷ್ಮ ಕುಂಡ, ಸೈನ್ಯಕುಂಡ, ಸ್ಥಾನೇಶ್ವರ ಕುಂಡ, ಬಾಣಗಂಗಾ, ಕುರುಧ್ವಜತೀರ್ಥ, ಚಕ್ರವ್ಯೂಹ ತೀರ್ಥ ಮೊದಲಾದ ಭಾರತೀಯ ತೀರ್ಥಗಳಲ್ಲಿ ಸ್ನಾನಮಾಡಿ, ಕರ್ಮಠಬ್ರಾಹ್ಮಣರು ಅರ್ಘ್ಯ ಜಲವನ್ನು ಬೊಗಸೆಯಲ್ಲಿ ತುಂಬಿಕೊಂಡು ಸೂರ್ಯಮಂಡಲದಕಡೆಗೆ ದೃಷ್ಟಿಯನ್ನಿಟ್ಟು ನಿಂತು ಕೊಂಡಿದ್ದಾರೆ. ಅಷ್ಟರಲ್ಲಿ ಸೂರ್ಯಬಿಂಬವು ಹೊರಹೊರಟು ಎಳೆ ಬಿಸಿಲು ಪಸರಿಸತೊಡಗಿತು. ಇಂಥ ಪ್ರಸಂಗದಲ್ಲಿ ಒಬ್ಬ ತರುಣ ವೈರಾಗಿಣಿಯು ಕುರುಕ್ಷೇತ್ರದೊಳಗಿನ ದಂಡಿನ ಪಾಳಯದಕಡೆಗೆ ಅಡ್ಡದಾರಿಯಿಂದ ಒಬ್ಬಳೇ ಸಾಗಿದ್ದಳು.

ಆ ತರುಣಿಯ ವಯಸ್ಸು ಹದಿನಾರು ಹದಿನೇಳು ವರ್ಷದ್ದಿರಬಹುದು. ಆಕೆಯ ಬಣ್ಣ ಸಾದಗಪ್ಪು, ಮೈಕಟ್ಟು ತೆಳ್ಳಗೆ, ನಿಲುವಿಕೆ ಗಿಡ್ಡತರ. ಆಕೆಯ ಹಣೆಯು ವಿಶಾಲವಾಗಿದ್ದು, ಅಚ್ಚ ಕರ್‍ರಗಿನ ಉದ್ದ ತಲೆಗೂದಲು ಆಕೆಯ ಬೆನ್ನನ್ನು ಮುಚ್ಚುಹಾಕಿ ತಿಗಗಳನ್ನು ಅತಿಕ್ರಮಿಸಿ ಅಲೆದಾಡುತ್ತಿದ್ದವು. ಆಕೆಯ ಮನೋಹರವಾದ ಕಣ್ಣುಗಳು ಅಷ್ಟು ದೊಡ್ಡವಿಲ್ಲದಿದ್ದರೂ

ತೇಜಃಪುಂಜವಾಗಿದ್ದವು. ಆಕೆಯ ಧನುಷ್ಯಾಕೃತಿಯ ಹುಬ್ಬುಗಳು ನೆಟ್ಟನ್ನ ಮೂಗು, ಅಚ್ಚ ಕೆಂಪಾದ ತುಟಿಗಳು ಆಕೆಯ ಸೌಂದರ್ಯವನ್ನು ಹೆಚ್ಚಿಸುತ್ತಲಿದ್ದವು. ಆಕೆಯ ತೆಳ್ಳನ್ನ ಗಲ್ಲಗಳು ತೇಜಃಪುಂಜವಾಗಿದ್ದು, ಗದ್ದದ ಹಾಗು ಎಡಗಲ್ಲದ ಮೇಲಿನ ಚಿಕ್ಕ ಹಚ್ಚಿಯಬಟ್ಟುಗಳು ನಿಚ್ಚಳ ವಾಗಿ ಕಾಣುತ್ತಿದ್ದವು. ದಾಡಿಂಬಬೀಜದಂಥ ಹಲ್ಲುಗಳು ಬೆಳ್ಳಗೆ ಸ್ವಚ್ಛವಾಗಿದ್ದವು. ಒಟ್ಟಿನಮೇಲೆ ಆಕೆಯ ಮುಖಮುದ್ರೆಯು ಸುಪ್ರಸನ್ನವಾಗಿತ್ತೆಂದು ಹೇಳಬಹುದು. ಆಕೆಯು ನೆಲಕ್ಕೆ ಎಳೆಯು ವಂಥ ಒಂದು ಕ್ಯಾವಿಯ ಕಪನಿಯನ್ನು ಹಾಕಿಕೊಂಡು. ಅದರ ಮೇಲೆ ಸೈಲಾದ ಒಂದು ಗಿಡ್ಡ ಅಂಗಿಯನ್ನು ತೊಟ್ಟುಕೊಂಡಿದ್ದಳು. ಆಕೆಯ ಎಡ ಹೆಗಲ ಮೇಲಿಂದ ಒಂದು ಕಿರಿಯಗಲ ವಸ್ತ್ರದಪಟ್ಟಿಯು ಬಲಬಗಲೊಳಗಿಂದ ಹೊಟ್ಟೆಯ ಮೇಲೆ ಹಾದು ಎದೆಯಮೇಲೆ ಗಂಟು ಹೊಡೆದಿತ್ತು. ಆಕೆಯು ಕಿವಿಟೊಪ್ಪಿಗೆಯನ್ನು ಹಾಕಿಕೊಂಡಿದ್ದು, ಅದರ ಕಸಿಗಳನ್ನು ಮೇಲಕ್ಕೇರಿಸಿ ತಲೆಯಮೇಲೆ ಅವುಗಳ ಗಂಟು ಹೊಡೆದಿದ್ದಳು. ಆಕೆಯ ಬಲಗಾಲೊಳಗಿನ ಕಬ್ಬಿಣದ ಸರಿಗೆಯೂ, ಬಲಗೈ ಯೊಳಗಿನ ತಂತಿಯ ಪೋಣಿಕೆಯ ಮಣಿಗಳ ಮಾಲೆಯೂ, ಕೊರಳೊಳಗಿನ ಕಾಜು–ಕಲ್ಲು– ಆನೆಹಲ್ಲುಗಳ ಸರಗಳೂ ಆಕೆಯ ವೈರಾಗ್ಯದ ಲಕ್ಷಣ ಗಳಾಗಿದ್ದವು. ಆ ಲಕ್ಷಣಗಳಿಗೆ ಕ್ಯಾವಿಯ ಉಡಿಗೆ–ತೊಡಿಗೆಯ ಜೋಡುದೊರೆತದ್ದರಿಂದ, ಆಕೆಯ ವೈರಾಗ್ಯಕ್ಕೆ ಮತ್ತಿಷ್ಟು ಕಳೆಯೇರಿ ದಂತಾಗಿತ್ತು. ಆಕೆಯು ಸರ್ವಾಂಗಕ್ಕೆ ಬೂದಿಯ ಬಳಿದು ಬರಿಗಾಲಿನಿಂದ ನಡೆಯುತ್ತಿದ್ದಳು. ಆಕೆಯ ಪಾದಗಳೂ, ಬೆರಳುಗಳೂ ಸುಂದರ ವಾಗಿದ್ದವು. ಬಲಗೈಯಲ್ಲಿ ಸುಂದರವಾದ ಕರಿಯಬಣ್ಣದ ನುಣಪಾದ ಬೆತ್ತವಿದ್ದು, ಅದರ ಹಿಡಿಕೆಗೆ ಗೆಜ್ಜೆಯ ಗೊಂಚಲುಗಳು ಹಚ್ಚಿದ್ದವು. ಅವುಗಳ ''ಗುಲುಗುಲು'' ಎಂಬ ಮಂಜುಲ ಧ್ವನಿಯು ಕಿವಿಗೆ ಇಂಪಾಗಿ ಕೇಳುತ್ತಿತ್ತು. ಎಡಗಡೆಯ ಹೆಗಲ ಮೇಲೆ ಎಡಗೈಯಿಂದ ಹಿಡಿದ ಒಂದು ಸರಸ್ವತೀ ವೀಣೆಯು ಒಪ್ಪುತ್ತಿತ್ತು. ಅದರ ಎರಡೂ ತುದಿಗಳಿಗೆ ಒಂದೊಂದು ಬಣ್ಣದ ಸಣ್ಣ ಸಣ್ಣ ಕುಂಬಳಕಾಯಿಗಳಿದ್ದವು. ವೀಣೆಯ ಕಿವಿಗಳು ಆನೆಹಲ್ಲಿನವಿದ್ದವು.

ಈ ಚಂದದಿಂದ ತರುಣಿಯು ಮೆಲ್ಲಮೆಲ್ಲನೆ ಹೆಜ್ಜೆಯಿಡುತ್ತ ಸಾಗಿದ್ದಳು. ಆಗ ಕುದುರೆ ಗಳ ಹೇಕರಿಸುವ ಸಪ್ಪಳವೂ, ಆನೆಗಳ ಗಂಭೀರಧ್ವನಿಯೂ, ನೌಬತ್ತು ಬಜಂತ್ರಿ, ಕೊಂಬು, ತುತೂರಿ, ಕರ್ಣೆ ಇವುಗಳ ಧ್ವನಿಯೂ, ತಾಸೆಯ ಕಡಕಡಾಟವೂ ಮನುಷ್ಯರ ಕರ್ಕಶ ಕೂಗುಗಳೂ ಆಕೆಯ ಕಿವಿಗೆ ಬೀಳತೊಡಗಿದವು; ಆದ್ದರಿಂದ ಸಮೀಪದಲ್ಲಿಯೇ ದಂಡಿನ ಛಾವಣಿಯಿರಬಹುದೆಂದು ತಿಳಿದು, ಆಕೆಯು ಒಂದು ಹಳ್ಳದ ದಂಡಿಯ ಹಿಡಿದು ಛಾವಣಿಯ ದಿಕ್ಕಿಗೆ ಸಾಗಿದ್ದವು. ಅಷ್ಟರಲ್ಲಿ ಇಬ್ಬರು ಟೊಣಪರಾದ ಪಠಾಣರು ಆಕೆಯ ಕಣ್ಣಿಗೆ ಬಿದ್ದರು. ಅವರನ್ನು ನೋಡಿದ ಕೂಡಲೆ ಆ ಬೈರಾಗಿಣಿಯ ಸೊಂಡೆಯೊಣಗಿತು. ಆಕೆಯ ಕಣ್ಣುಗಳು ಕತ್ತಲಗೂಡಿಸಿದಹಾಗಾದವು ಸರ್ವಾಂಗದಲ್ಲಿ ಕಂಪವು ಉತ್ಪನ್ನವಾಯಿತು. ಆಗ ಚಳಿಗಾಲದ ಬೆಳಗಿನ ಸಮಯವಾಗಿದ್ದರೂ, ಅಂಜಿಕೆಯಿಂದ ಆಕೆಯ ಮೈಯ್ಯು ಜೋರೆಂದು ಬೆವತಿತು. ಆಕೆಯನ್ನು ನೋಡಿ ಆ ಕಾಳ ಪುರುಷರಿಗೆ ಹರ್ಷವಾಯುವು ಉತ್ಪನ್ನವಾಯಿತು. ಅವರು ಅಟ್ಟಹಾಸದಿಂದ ಗಹಗಹಿಸಿ ನಗ ತೊಡಗಿದರು. ಅವರು ನಗುತ್ತ

ಆ ತರುಣಬೈರಾಗಿಣಿಯ ಬಳಿಗೆ ಹೋಗಿ ಆಕೆಯ ಕೈಹಿಡಿಯಲು, ಆಕೆಯು ಅಂಜಿ ನೆಲಕ್ಕೆ ಕುಸಿದಳು. ಆಕೆಗೆ ತನ್ನ ಚಿತ್ತದ, ಹಾಗು ವೀಣೆಯ ಅರವು ಸಹ ಉಳಿಯಲಿಲ್ಲ. ಆಕೆಯು ಅವನ್ನು ಪಟ್ಟನೆ ಚಲ್ಲಿಕೊಟ್ಟು, ಕೈ ಜೋಡಿಸಿ ದೀನಸ್ವರದಿಂದ ಆ ಟೋಣಪರನ್ನು ಕುರಿತು-ಜೀ ಸಾಹೇಬ, ನನ್ನನ್ನು ಕ್ಷಮಿಸಿರಿ, ಹೊಟ್ಟೆಯಲ್ಲಿ ಹಾಕಿಕೊಂಡು ಬಿಟ್ಟುಬಿಡಿರಿ. ನಾನೊಬ್ಬ ಬಡಬೈರಾಗಿಣಿಯಿರುವೆನು. ವೀಣೆ ಬಾರಿಸುತ್ತ ಅತ್ತಿತ್ತ ಅಲೆದಾಡುತ್ತ ಹೊಟ್ಟೆಯ ಸಲುವಾಗಿ ಬಿಕ್ಕೆ ಬೇಡುತ್ತಿರುವೆನು. ನನ್ನಂಥ ಕಂಗಾಲ ಭಿಕ್ಷುಕಳನ್ನು ಯಾವವೀರನು ಬಾಧೆಪಡಿಸ ಬಹುದು? ವೀರರೆ, ನನಗೆ ಸ್ವಲ್ಪ ಹಾಡಲಿಕ್ಕೂ ಬರುತ್ತದೆ.

ಬೈರಾಗಿಣಿಯ ಈ ಪ್ರಾರ್ಥನೆಯು ದಯಾಶೂನ್ಯರಾದ ಆ ಕಾಡ ಲಥ್ಥರಮುಂದೆ ಏನು ನಡೆಯಬೇಕು? ಅವರು ಆಕೆಯ ಪ್ರಾರ್ಥನೆಯನ್ನು ಕಿವಿಯ ಮೇಲೆಯೇ ಹಾಕಿಕೊಳ್ಳಲಿಲ್ಲ. ಆ ಪ್ರಾರ್ಥನೆಯನ್ನು ಆಕೆಯು ನಮ್ಮ ದೇಶದ ಸಿಪಾಯಿಗಳ ಮುಂದೆ ಮಾಡಿಕೊಂಡಿದ್ದರೆ, ಅವರು ಹಿಂದೂಜನರೇ ಇರಲಿ-ಮುಸಲ್ಮಾನರೇ ಇರಲಿ, ಆಕೆಗೆ ಹೆಚ್ಚಿನ ಲಾಭವೇನು ಆಗದಿದ್ದರೂ; ಅವರು ಆಕೆಯ ಕಂಗಾಲಸ್ಥಿತಿಯನ್ನೂ, ಬೈರಾಗಿಣಿಯ ವೇಷವನ್ನೂ ನೋಡಿ ಆಕೆಯನ್ನು ಬಿಟ್ಟುಬಿಡಬಹುದಾಗಿತ್ತು; ಆದರೆ ಆ ಕಾಬೂಲದ ಗುಡ್ಡಗಾಡ ಪಠಾಣಜನರು ಆಕೆಯಮಾತನ್ನು ಕಿವಿಯಮೇಲೆಯೇ ಹಾಕಿಕೊಳ್ಳಲಿಲ್ಲ. ಮೊದಲು ಬೈರಾಗಿಣಿಯ ಹಿಂದು ಸ್ಥಾನೀಭಾಷೆಯು ಅಪಸ್ತೂನೀ ಭಾಷೆಯ ಪಠಾಣರಿಗೆ ತಿಳಿಯಲಿಲ್ಲ. ತಮಗೆ ಅಲ್ಲಾನು ಕಾಫರಜಾತಿಯ ಒಂದು ಹರಯದ ಹುಡುಗೆಯನ್ನು ದಯಪಾಲಿಸಿದನೆಂದು ಅವರು ತಿಳಿದುಕೊಂಡರು.

ಹೀಗೆ ಆ ಹುಂಬ ಪಠಾಣಸಿಪಾಯಿಗಳಿಗೆ ಒಂದು ಬೇಟೆಯು ಸಿಕ್ಕಂತೆ ಆದರೂ, ಆ ಬೇಟೆಯು ಯಾರ ಪಾಲಿನದೆಂಬ ಬಗ್ಗೆ ಅವರೊಳಗೆ ಜಗಳವುಂಟಾಯಿತು. ಅವರಲ್ಲಿ ಬೈರಾಗಿಣಿಯ ಕೈಹಿಡಿದಿದ್ದ ಖುದಾಯಾರನೆಂಬವನು ತನ್ನ ಸಂಗಡಿಗನಾದ ಅಬದುಲಕಾದ ರನನ್ನು ಕುರಿತು—''ಅಬದುಲಕಾದರ, ಇಂದು ಉತ್ತಮಬೇಟೆಯು ಸಿಕ್ಕಿತು. ಈ ದೇಶಕ್ಕೆ ಬಂದು ಒಂದು ತಿಂಗಳಾಗಿದ್ದರೂ, ಹೆಂಗಸರ ಮೋರೆಯೇ ಕಣ್ಣಿಗೆ ಬಿದ್ದಿದ್ದಿಲ್ಲ. ಅಹಹ! ಎಂಥ ಹುಡುಗೆ ಸಿಕ್ಕಿತಿದು! ಈಕೆಯನ್ನು ಯಾವನಾದರೊಬ್ಬ ಅಮೀರನಿಗೆ ಮಾರಿಬಿಟ್ಟರೆ, ಹೇರಳ ಹಣಬರಬಹುದಲ್ಲ!'' ಅನ್ನಲು, ದುಡ್ಡಿನ ಮಾತುಕೇಳಿ ಅಬದುಲಕಾದರನ ಬಾಯಲ್ಲಿ ನೀರು ಒಡೆದವು. ಆತನು ಮಾತ್ಸರ್ಯದಿಂದ ಖುದಾಯಾರನನ್ನು ಕುರಿತು—''ಅಲ್ಲೋ, ಪಾಳಯದಲ್ಲಿಸ್ತ್ರೀಯರ ಪ್ರವೇಶ ವಾಗಬಾರದೆಂದು ಬಾದಶಹನ ಕಟ್ಟಪ್ಪಣೆ ಇರುವದಲ್ಲವೆ? ಅಂದಬಳಿಕ ಈ ಹುಡುಗೆಯನ್ನು ಛಾವಣಿಯಲ್ಲಿ ಹ್ಯಾಗೆ ಕರೆದುಕೊಂಡು ಹೋಗುವೆ? ಈಕೆಯನ್ನು ಮಾರುವದಾದರೂ ಯಾರಿಗೆ? ಮೇಲಾಗಿ ನಿನಗೊಬ್ಬನಿಗೇ ಮಾರುವ ಹಕ್ಕು ಹ್ಯಾಗೆ ಬರುವದು? ನಮಗಿಬ್ಬರಿಗೂ ಈ ಹುಡುಗೆಯು ಸಿಕ್ಕಿರುವದರಿಂದ, ಈಕೆಯ ಮೇಲೆ ಇಬ್ಬರ ಹಕ್ಕೂ ಸಮಾನವಾಗಿರುವದು'' ಎಂದು ಹೇಳಿದನು. ಬಳಿಕ ಅವರಿಬ್ಬರಲ್ಲಿ ವಾದ-ವಿವಾದವಾಗಿ ಕೈಗೆ ಕೈ ಹತ್ತುವ ಪ್ರಸಂಗವೂ ಒದಗಿತು. ಆದರೂ ಅವರು ತಮ್ಮೊಳಗೆ

ವಿವೇಕತಾಳಿ, ಬಂದ ಬೆಲೆಯನ್ನು ಇಬ್ಬರೂ ಸಮನಾಗಿ ಹಂಚಿಕೊಳ್ಳಬೇಕೆಂಬ ಸಂಕೇತದಿಂದ ಪಾಳಯದಕಡೆಗೆ ಹೊರಟರು, ಬೈರಾಗಿಣಿಯ ಮಾತು ಅವರಿಗೆ ತಿಳಿಯುವಹಾಗಿದ್ದಿಲ್ಲ, ಅವರಮಾತು ಬೈರಾಗಿಣಿಗೆ ತಿಳಿಯುವಹಾಗಿದ್ದಿಲ್ಲ; ಆದ್ದರಿಂದ ಅವರು ಬೈರಾಗಿಣಿಯ ಮಾತು ಕಿವಿಯಮೇಲೆ ಹಾಕಿಕೊಳ್ಳದೆ, ಆಕೆಯನ್ನು ಮಾತಾಡಿಸುವ ಗೊಡವಿಗೆ ಹೋಗದೆ, ಆಕೆಯ ರಟ್ಟೆಯ ಹಿಡಿದು ಎಳೆಯುತ್ತ ಸುಮ್ಮನೆ ಪಾಳಯದಕಡೆಗೆ ನಡೆದರು.

ಮೂಲತಃ ಬೈರಾಗಿಣಿಯು ಒಳ್ಳೇ ದಿಟ್ಟಳಿದ್ದಳು. ಹಾಗಿಲ್ಲದಿದ್ದರೆ ಒಬ್ಬಳೇ ದಂಡಿನ ಪಾಳಯದಕಡೆಗೆ ಸಾಗಿಹೋಗುವ ಸಾಹಸ ಮಾಡಬಹುದೇ? ಆದರೆ ಆಕೆಯ ಲಾಗತಪ್ಪಿ ಆಕೆಯು ಮುಸಲಮಾನ ಸಿಪಾಯಿಗಳ ಕೈಗೆ ಹತ್ತಿದಳು. ತಮ್ಮವರ ಪಾಳಯವೇ ಸನಿಯಕ್ಕೆ ಬಂತೆಂಬ ತಪ್ಪು ತಿಳುವಳಿಕೆಯಿಂದ ಆಕೆಯ ಘಾತವಾಯಿತು. ಯಮದೂತರಂತೆ ಇದ್ದ ಯವನರ ಜಗ್ಗಾಟದಲ್ಲಿ ಆ ಕೋಮಲಾಂಗಿಯು ಬಹಳವಾಗಿ ಗಾಸಿಯಾದಳು. ಆ ಬಲಿಷ್ಠ ಸಿಪಾಯಿಗಳ ಉಗ್ರಸ್ವರೂಪ, ಅಂಜಿಕೆ ಬರುವ ಅವರ ಒರಟತನ, ಮೂಗು ಮುಚ್ಚಿಕೊಳ್ಳು ವಂಥ ಅವರ ಹೊಲಸುತನ ಇವುಗಳಿಂದ ಬೈರಾಗಿಣಿಯ ಜೀವವು ತೇಲು ಮೇಲಾಗಹತ್ತಿತ್ತು. ದಯಾಶೂನ್ಯರಾದ ಆ ಸಿಪಾಯಿಗಳು ಇದನ್ನಾವದನ್ನೂ ಲಕ್ಷಿಸದೆ, ಒಂದೇ ಸವನೆ ಆಕೆಯನ್ನು ಎಳೆದುಕೊಂಡು ಪಾಳಯದ ಬಾಗಿಲಿಗೆ ಹೋದರು. ಅಲ್ಲಿ ದೊಡ್ಡ ದೊಡ್ಡ ಗಿಡಗಳನ್ನು ಕಡಿದು ಅವನ್ನು ಗೋಡೆಯಹಾಗೆ ಛಾವಣಿಯ ಸುತ್ತುಮುತ್ತು ಒಟ್ಟಿದ್ದರು. ಅವುಗಳ ಹರಿಗಳು ಹೊರಮುಗ್ಗಲಾಗಿ, ಬೇರುಗಳು ಒಳಮುಗ್ಗಲಾಗುವಂತೆ ಗೋಡೆಯನ್ನು ರಚಿಸಿದ್ದರು. ಆ ಗೋಡೆಯ ಒಳಮುಗ್ಗಲಲ್ಲಿ ಎಲ್ಲಕಡೆಯಲ್ಲಿ ತಂಬುಗಳನ್ನೂ, ಡೇರೆಗಳನ್ನೂ ನಿಲ್ಲಿಸಿದ್ದರು. ಕೆಂಪು, ಕಪ್ಪು, ಬಿಳಿದು ಮೊದಲಾದ ಹಲವು ಬಣ್ಣಗಳ ಆ ಡೇರೆ–ರಾವುಟಿಗಳು, ಗೋಡೆಗಳಿಗಿಂತ ಬಹಳ ಎತ್ತರವಾಗಿದ್ದವು. ಅವುಗಳ ಕಳಸಗಳಿಗೆ ಬಂಗಾರದ ಮುಲಾಮು ಮಾಡಿದ್ದರು. ಆ ಸಿಪಾಯಿಗಳು ಬೈರಾಗಿಣಿಯನ್ನು ಎಳಕೊಂಡು ಪಾಳಯದ ಬಾಗಿಲಿಗೆ ಹೋದರು. ಅಲ್ಲಿಯ ಕಾವಲುಗಾರರು ಗುರುತಿನವರಾದದ್ದರಿಂದ, ಒಳಗೆ ಹೋಗಲಿಕ್ಕೆ ಅವರಿಗೆ ತೊಂದರೆಯಾಗಲಿಲ್ಲ; ಆದರೆ ಅವರು ಅಂಜುತ್ತ ಮುಂದಕ್ಕೆ ಸಾಗಿರಲು, ಕೆಲವು ಗುರುತಿಲ್ಲದ ಸಿಪಾಯಿಗಳು ಹೀಗೆ ಪಾಳಯದಲ್ಲಿ ಹೆಂಗಸನ್ನು ಎಳೆದೊಯ್ಯುತ್ತಿರುವದನ್ನು ನೋಡಿ ಗದ್ದರಿಸಿ—''ಯಾರವರು? ಶಹಾನಅಪ್ಪಣೆಯ ಎಚ್ಚರವಿಲ್ಲವೆ? ಈ ಹೆಂಗಸನ್ನು ಎತ್ತ ಎಳೆದೊಯ್ಯುವಿರಿ? ನಿಲ್ಲಿರಿ, ಮುಂದಕ್ಕೆ ಹೆಜ್ಜೆಯಿಟ್ಟರೆ ಪರಿಣಾಮವಾಗಲಿಕ್ಕಿಲ್ಲ, ಇಂಥ ಮರೆ–ಮೋಸಗಳು ಎಂದೂ ನಡೆಯಲಿಕ್ಕಿಲ್ಲ'' ಎಂದು ನಿರ್ಬಂಧಿಸಿದರು. ಆ ಹೊಸ ಸಿಪಾಯಿ ಗಳಾದರೂ ಬೈರಾಗಿಣಿಗೆ ಮರುಳಾಗಿ ಹೀಗೆ ಮಾತಾಡುತ್ತಲಿದ್ದರು. ಆಗ ಅವರಿಗೂ ಖುದಾಯಾರ, ದಾವುದ ಇವರಿಗೂ ಜಗಳ ಹುಟ್ಟಿತು. ಅವರು ಒದರಿ ಒದರಿ ಮಾತಾಡುತ್ತ ಒಬ್ಬರಮೇಲೊಬ್ಬರು ಶಸ್ತ್ರ ಹಿರಿದು ದುಮುಕಹತ್ತಿದರು. ಬೈರಾಗಿಣಿಯನ್ನು ದಾವುದನು ತನ್ನ ಕಡೆಗೆ ಎಳೆಯಹತ್ತಿದನು; ಖುದಾ ಯಾರನು ತನ್ನ ಕಡೆಗೆ ಎಳೆಯಹತ್ತಿದನು. ಬೇರೆ ಸಿಪಾಯಿಗಳಲ್ಲಿ ಕೆಲವರು ಆಕೆಯನ್ನು ತಮ್ಮಕಡೆಗೆ ಎಳೆಯಹತ್ತಿದರು. ಹೀಗೆ ಗೊಂದಲವೆದ್ದು ಹೊಡೆದಾಟಕ್ಕೆ ಆರಂಭವಾಗಿಯಿತು.

ಇನ್ನು ಸ್ವಲ್ಪ ತಡವಾಗಿದ್ದರೆ ಕೆಲವು ಹೆಣಗಳು ಬಿದ್ದು ರಕ್ತವು ಹರಿಯಬಹುದಾಗಿತ್ತು. ಅಷ್ಟ ರಲ್ಲಿ ಚೌಕಿಯ ಮುಖ್ಯನಾದ ಲುತುಫಖಾನನು ಇದನ್ನು ನೋಡಿ ತನ್ನ ಕೈಯೊಳಗಿನ ಭಯಂಕರವಾದ ಚಪಗೊಡಲಿಯನ್ನು ಎತ್ತಿಕೊಂಡು ಗದ್ದರಿಸುತ್ತ ಧಾವಿಸಿ ಅಲ್ಲಿಗೆ ಬರಲು, ಜನರು ಅತ್ತಿಂದತ್ತ ಹಿಂದಕ್ಕೆ ಸರಿದು ನಿಂತುಕೊಂಡರು. ಹೊಡೆದಾಟವು ನಿಂತು ಗದ್ದಲವು ಕಡಿಮೆಯಾಯಿತು. ಆದರೂ ಹೊಡದಾಡಲಿಕ್ಕೆ ನಿಂತವರು ಒಬ್ಬರನ್ನೊಬ್ಬರು ಕೆಟ್ಟಕಣ್ಣಿನಿಂದ ನೋಡುತ್ತಿದ್ದರು.

ಹೀಗೆ ಲುತುಫಖಾನನು ಗದ್ದಲವ ನಿಲ್ಲಿಸಿ ಗದ್ದರಿಸಿ—''ಏನು ಗದ್ದಲವಿದು? ನಿಮ್ಮನ್ನು ಯಾರೂ ಕೇಳುವವರಿಲ್ಲವೆ? ಖುದಾಯಾರ, ದಾವುದ, ಪುಂಡಾಟಿಕೆಯೇನಿದು? ಈ ತರುಣಿ ಯಾರು? ಯಮದೂತರಂತೆ ಈಕೆಯನ್ನು ಹೀಗೆ ಯಾಕೆ ಎಳೆದಾಡುವಿರಿ? ಹೆಂಗಸರನ್ನು ಛಾವಣಿಯಲ್ಲಿ ಕರತರಲಾಗದೆಂದು ಶಹಾನು ನಿರ್ಬಂಧಿಸಿದ್ದು ನಿಮಗೆ ಗೊತ್ತಿಲ್ಲವೆ?'' ಎಂದು ನುಡಿಯುತ್ತ, ಬೈರಾಗಿಣಿಯಕಡೆಗೆ ನೋಡಿದನು. ಆಕೆಯ ಮೋಹಕ ಸ್ವರೂಪವು ಲುತುಫನ ಮನಸ್ಸನ್ನು ಆಕರ್ಷಿಸಿತು. ಆತನು ಎವೆಯಿಕ್ಕದೆ ಆಕೆಯನ್ನು ನೋಡತೊಡಗಿದನು. ಜನರು ಸುತ್ತುಮುತ್ತು ನೆರೆದಿದ್ದರು. ದಾವುದನು ಬೈರಾಗಿಣಿಯ ರಟ್ಟೆಯನ್ನು ಹಿಡಿದಿದ್ದನು. ಆಗ ಲುತುಫನು ಆತನನ್ನು ಕುರಿತು—''ದಾವುದ, ಈ ಬೈರಾಗಿಣಿಯ ಕೈಬಿಡು. ಈಕೆಯ ಬಾಧ್ಯತೆಗೆ ನೀನು ಸಂಬಂಧಪಡುವದಿಲ್ಲ, ಶಹಾನ ಅಪ್ಪಣೆಯನ್ನು ಮೀರಿದ್ದರಿಂದ ನೀನು ಕಠಿಣಶಿಕ್ಷೆಗೆ ಪಾತ್ರನಾಗಿರುವೆ. ಈ ಸುದ್ದಿಯು ಶಹಾನ ಕಿವಿಗೆ ಮುಟ್ಟಿದರೆ, ಆತನು ನಿನ್ನನ್ನು ತೋಫಿನ ಬಾಯಿಗೆ ಕೊಡಬಹುದು. ಸರಿಹಿಂದಕ್ಕೆ ತುಂಟತನ ಮಾಡಿದರೆ ನಿನ್ನ ಮುಸುಕೆ ಬಿಗಿಸಿ ಸೆರೆ ಮನೆಯಲ್ಲಿ ಚಲ್ಲಿಸೇನು.'' ಎಂದು ಬೆದರಿಕೆಹಾಕಲು, ದಾವುದನು ಸಂತಾಪದಿಂದ ತಲೆ ಯಲ್ಲಾಡಿಸುತ್ತ—ಮಿಯ್ಯಾಸಾಬ, ಇದನ್ನೆಲ್ಲ ನಾನು ಬಲ್ಲೆನು. ಶಹಾನ ಅಪ್ಪಣೆಯು ನಮ್ಮಂಥ ಬಡಸಿಪಾಯಿಗಳಿಗೆ; ನಿಮ್ಮಂಥ ಅಮೀರ ಉಮರಾವರಿಗಲ್ಲ! ಅವರು ಬತ್ತಲೆ ಕುಣಿದರೂ ಯಾರೂ ಕೇಳುವದಿಲ್ಲ, ನಮ್ಮಕಾಯದೆಯೇ ಬೇರೆ, ನಿಮ್ಮ ಕಾಯದೆಯೇ ಬೇರೆಯಲ್ಲವೆ? ಆದರೆ ಮಿಯ್ಯಾಸಾಹೇಬ, ಬಹುಜೋಕೆ. ನಮ್ಮಂಥ ಸಿಪಾಯಿಗಳಿರುವದರಿಂದಲೇ ನಿಮ್ಮಂಥ ಅಮೀರ–ಉಮರಾವರ, ಹಾಗು ಸರದಾರರ ಪರಿಣಾಮವಾಗಿದೆ. ಇಲ್ಲದಿದ್ದರೆ ಕಾಫರರು ಇಷ್ಟು ಹೊತ್ತಿಗೆ ನಿಮ್ಮನ್ನೂ, ಶಹಾನನ್ನೂ ತಿಂದುಬಿಡುತ್ತಿದ್ದರು. ನಮ್ಮ ಗೊಡವಿಗೆ ನೀವು ವಿಶೇಷವಾಗಿ ಬರಬಾರದು. ನಮ್ಮನ್ನು ಹೀಗೆ ಛಲಿಸುವದು ಸರಿಯಲ್ಲ, ಇಂಥ ಸಣ್ಣಪುಟ್ಟ ಕೆಲಸದಲ್ಲಿ ನೀವು ಕೈಹಾಕುವದು ಭೂಷಣ ವಲ್ಲ, ಇದರಿಂದ ಸರ್ವಥಾ ಹಿತವಾಗದು. ಇಂಥ ಸಣ್ಣ ಕೆಲಸಗಳ ವ್ಯವಸ್ಥೆಯನ್ನು ನಮ್ಮೊಳಗೆ ನಾವು ಮಾಡಿಕೊಳ್ಳುವೆವು. ಇಷ್ಟು ಅನುಕೂಲತೆಯನ್ನು ನೀವು ನಮಗೆ ಮಾಡಿಕೊಡಲೇಬೇಕು; ಅಂದರೆ ನಿಮ್ಮ ಸಲುವಾಗಿ ಯುದ್ಧದಲ್ಲಿ ನಮ್ಮ ಚಂಡು ಕೊಯ್ದಿಡಲು ನಾವು ಸಿದ್ಧರಾಗುವೆವು. ವೈರಿಗಳಾದ ಕಾಫರರ ರುಂಡಗಳ ಚಂಡಾಡಲಿಕ್ಕೆ ನಾವು. ಹಿಂದೆ ಮುಂದೆ ನೋಡಲಿಕ್ಕಿಲ್ಲ, ಮಿಯ್ಯಾಸಾಹೇಬ, ಇದರ ಮೇಲೆಯೂ ನೀವು ನಮ್ಮ ಬೇಟೆಯ ಆಶೆಮಾಡಿದರೆ, ಇಗೋ, ಈ ಶಸ್ತ್ರದಿಂದ ಈ ತರುಣಿಯನ್ನು ಇಲ್ಲಿಯೇ ತುಂಡರಿಸಿಚಲ್ಲುವೆನು, ನಿಮ್ಮ ಕೈಗೆ ಹತ್ತಗೊಡಲಿಕ್ಕಿಲ್ಲ!

ಕ್ರೂರರ ಈ ಸಂಭಾಷಣದ ಅರ್ಥವು ಬೈರಾಗಿಣಿಗೆ ತಿಳಿಯದಿದ್ದರೂ, ಅವರ ಹಾವ ಭಾವ ಮೊದಲಾದವುಗಳಿಂದ ತನಗೆ ಪ್ರಾಣಸಂಕಟವು ಒದಗಿತೆಂದು ಆಕೆಯು ತಿಳಿದಳು. ಮರಣಕಂಪವು ಹುಟ್ಟಿದಹಾಗಾಗಿ ಆಕೆಯು ನಡುಗತೊಡಗಿದಳು; ಆದರೆ ಆ ಕಟಕರಿಗೆ ಏನು ಮಾಡಿದರೆ ದಯವು ಉತ್ಪನ್ನವಾದೀತು? ದಾವುದನು ಬೈರಾಗಿಣಿಯ ರಟ್ಟೆಯನ್ನು ಬಿಡದಾದನು. ಅದನ್ನು ನೋಡಿ ಖುದಾಯಾರನೂ ಬೈರಾಗಿಣಿಯ ಮತ್ತೊಂದು ರಟ್ಟೆ ಹಿಡಿದು ಎಳೆಯ ಹತ್ತಿದನು. ಆ ಕ್ರೂರರು ಮೊದಲಿನ ತಮ್ಮ ಕರಾರು ಮುರಿದು ಮತ್ತೆ ಜಗಳಾಡಹತ್ತಿದರು. ಅವರು ಕಡೆಗೆ ಸಿಟ್ಟಿಗೆದ್ದು ಶಸ್ತ್ರಹಿರಿದು ಒಬ್ಬರಮೇಲೊಬ್ಬರು ಬೀಳಲು, ಬೈರಾಗಿಣಿಯ ಬಿಡುಗಡೆಯಾಗಿ ಆಕೆಯು ಲುತುಫನಿಗೆ ಶರಣುಹೋಗಿ ತನ್ನನ್ನು ಕಾಪಾಡಬೇಕೆಂದು ಬೇಡಿ ಕೊಳ್ಳಹತ್ತಿದಳು. ಆ ಇಬ್ಬರು ಕ್ರೂರಸಿಪಾಯಿಗಳಿಗಿಂತಲೂ ಲುತುಫನು ಆಕೆಗೆ ಸೌಮ್ಯನಾಗಿ ತೋರಿದನು. ಬಂದರೆ ಈತನಿಗೇ ದಯವು ಬಂದೀತೆಂದು ಆಕೆಯ ಭಾವನೆಯಾಯಿತು. ನಿಜವಾಗಿ ಬೈರಾಗಿಣಿಯು ಬಹಳ ಹಣ್ಣಾಗಿದ್ದಳು. ಆಕೆಯು ಮನಸ್ಸಿನಲ್ಲಿ ಶ್ರೀರಾಮನಿಗೆ ಮೊರೆಯಿಟ್ಟು—ಪ್ರಭೋ ಸೀತಾಪತೇ, ಈ ಅನಾಥಳ ಮೇಲೆ ದಯಮಾಡು. ನನ್ನ ಈ ಯಮ ಯಾತನೆಯನ್ನು ಪರಿಹರಿಸು. ನಾನು ಕಷ್ಟವನ್ನು ಎಷ್ಟಂತ ಅನುಭವಿಸಲಿ? ಸೀತಾಮಾತೆಯನ್ನು ದುಷ್ಟ ರಾವಣನ ಬಾಧೆಯಿಂದ ಮುಕ್ತಮಾಡಿದ ನೀನು, ಈ ರಾಕ್ಷಸರ ಬಾಧೆಯಿಂದ ನನ್ನನ್ನು ಮುಕ್ತಮಾಡಿಸಲು ಯಾರನ್ನಾದರೂ ಪ್ರೇರಿಸು. ನಿನ್ನ ಹೊರತು ನನಗೆ ಅನ್ಯಗತಿಯಿಲ್ಲ, ನೀನು ಅನಾಥರಕ್ಷಕನಲ್ಲವೆ?

ಬೈರಾಗಿಣಿಯು ಈ ಮೇರೆಗೆ ಮನಸ್ಸಿನಲ್ಲಿ ಪ್ರಾರ್ಥಿಸುತ್ತಿರಲು, ಇತ್ತ ಲುತುಫಖಾನನ ಕಾಮವಾಸನೆಯು ಹೆಚ್ಚಿ ಆತನು ಬೈರಾಗಿಣಿಯನ್ನು ಅಪಹರಿಸಲು ಯತ್ನಿಸಹತ್ತಿದ್ದನು. ಇದನ್ನು ನೋಡಿ ಖುದಾಯರ–ದಾವುದರಿಬ್ಬರೂ ಸಂತಾಪಗೊಂಡರು. ಏನು ಮಾಡಿದರೂ ಬೈರಾಗಿಣಿ ಯನ್ನು ಖಾನನಿಗೆ ಹತ್ತಗೊಡಬಾರದೆಂದು ಅವರಿಬ್ಬರೂ ಭಾವಿಸಿ, ಒಬ್ಬನು ಆಕೆಯನ್ನು ತುಂಡರಿಸುವದಕ್ಕಾಗಿ ಖಡ್ಗವೆತ್ತಿದನು, ಇನ್ನೊಬ್ಬನು ಆಕೆಯನ್ನು ಇರಿಯುವದಕ್ಕಾಗಿ ಕಠಾರಿಯನ್ನು ಹಿರಿದನು. ಆಗ ಬೈರಾಗಿಣಿಯ ಸ್ಥಿತಿಯೇನಾಗಿರಬಹುದೆಂಬದನ್ನು ವಾಚಕರೇ ತರ್ಕಿಸಬಹುದು. ಆಕೆಯು ಕಣ್ಣು ಮುಚ್ಚಿಕೊಂಡು ಮೇಲೆ ಹೇಳಿದಂತೆ ಶ್ರೀರಾಮನನ್ನು ಪ್ರಾರ್ಥಿಸುತ್ತ ಮರಣಕ್ಕೆ ಸಿದ್ಧವಾಗಿದ್ದಳು. ಅಷ್ಟರಲ್ಲಿ ಶ್ರೀರಘುಪತಿಯು ಆಕೆಯನ್ನು ಕರುಣಿಸಿದಂತೆ ತೋರಿತು. ''ಸರಿಯಿರಿ ಸರಿಯಿರಿ; ಹಾದಿಹಾದಿ; ಬದಿಗಾಗಿರಿ'' ಎಂಬ ಗದ್ದರಿಕೆಯ ಶಬ್ದಗಳು ಕಿವಿಗೆ ಬೀಳತೊಡಗಿದವು. ಹೀಗೆ ಗದ್ದರಿಸುವವರು ದಂಡಿನೊಳಗಿನ ಕಾಲಾಳುಗಳಾಗಿದ್ದರು. ಅವರು ಹಳದಿ ರೇಶಿಮೆಯ ಸಾಟಿನಿಯ ಪೋಷಾಕು ಹಾಕಿದ್ದರು. ಅವರ ಕೈಯಲ್ಲಿ ಭಾಲೆ–ಬರಚಿ ಗಳಿದ್ದವು. ಅವರು ಜನರ ದಟ್ಟಣೆಯೊಳಗಿಂದ ಹಾದಿಯಮಾಡುತ್ತ ಬರುತ್ತಿದ್ದರು. ಅವರ ಹಿಂದಿನಿಂದ ನಾಲ್ಕು ಜನ ಸರದಾರರು, ತಮ್ಮ ಬೆಟ್ಟದಂಥ ಕುದುರೆಗಳನ್ನೇರಿ ಸಾವಕಾಶ ವಾಗಿ ಬರುತ್ತಲಿದ್ದರು. ವಿಶ್ರಾಂತಿ ಗಾಗಿ ಹೊರಗೆ ಹೋಗಿದ್ದ ಅವರು ಈಗ ತಮ್ಮ ಡೇರೆಯ ಕಡೆಗೆ ನಡೆದಿದ್ದರು. ಎಲ್ಲಕ್ಕೂ ಮುಂದೆ ಅಹಮ್ಮದಶಹಾ ಅಬದಾಲಿಯು ಬರುತ್ತಲಿದ್ದನು. ಆತನು ಪ್ರಸಿದ್ಧ ವೀರನೂ, ಯುದ್ಧ ವಿಶಾರದನೂ ಆಗಿದ್ದನು. ಆತನು ಥಳಥಳಿಸುವ ತುರ್ಕಿ

ಜಾತಿಯ ಕಪ್ಪು ಸಾರಂಗಿ ಕುದುರೆಯನ್ನು ಹತ್ತಿದ್ದನು. ಕುದುರೆಯು ಎತ್ತರವಾಗಿದ್ದು, ಒಳ್ಳೇ ತುಂಬಿದ ಮೈಕಟ್ಟಿನದಾಗಿತ್ತು, ಅದರ ಮೈಮೇಲಿನ ಸಾಮಾನುಗಳು ಬಹು ಬೆಲೆಯುಳ್ಳ ವಾಗಿದ್ದವು. ಅದರ ಕಡಿವಾಣದಲ್ಲಿ ಮಾಡಿದ ಬಂಗಾರ– ರತ್ನಗಳ ಕಲಾಕೌಶಲ್ಯದ ಅತ್ಯುತ್ತಮ ಕೆಲಸವು ಚಿತ್ತಾಕರ್ಷಕವಾಗಿತ್ತು, ಅಬದಾಲಿಯು ಭವ್ಯ ಪುರುಷನಾಗಿದ್ದನು. ಅವನ ಗಡ್ಡ ಮೀಸೆಗಳೂ, ತಲೆಗೂದಲುಗಳೂ ಗಿಡ್ಡಾಗಿದ್ದವು. ಅವುಗಳಿಗೆ ಕಲಪು ಮಾಡಿದ್ದರಿಂದ, ನೆರೆ ಹಾದದ್ದು ಕಾಣುತ್ತಿದ್ದಿಲ್ಲ. ಆತನು ಅಷ್ಟು ಕೆಂಪಗೂ ಇದ್ದಿಲ್ಲ ಕರ್ರಗೂ ಇದ್ದಿಲ್ಲ. ಆತನ ದೊಡ್ಡ ತುಟಿಗಳು ಕಪ್ಪು ಛಾಯದವಾಗಿದ್ದವು. ಮೂಗು ದೊಡ್ಡದಿದ್ದು ಸರಳ ವಾಗಿತ್ತು, ಕಣ್ಣುಗಳು ಸಣ್ಣವಾದರೂ ತೇಜಃಪುಂಜವಾಗಿದ್ದವು. ಆತನ ಗಡುತರವಾದ ಹುಬ್ಬುಗಳು ಧನುಷ್ಯಾಕಾರ ದಿಂದ ಒಪ್ಪುತ್ತಿದ್ದು, ಬೊಡ್ಡೆಯಲ್ಲಿ ಅವುಗಳ ಸಂಗಮವಾಗಿತ್ತು, ಆತನ ಹಣೆಯು ವಿಶಾಲ ವಾಗಿದ್ದು, ಅದರಲ್ಲಿ ಬಾಣದ ಗಾಯದ ಗುರುತು, ಸ್ಪಷ್ಟವಾಗಿ ಕಾಣುತ್ತಿತ್ತು, ತಲೆಗೆ ಮೊಗಲರತರದ ಟೊಪ್ಪಿಗೆಯನ್ನು ಹಾಕಿಕೊಂಡು ಅದರ ಸುತ್ತು ಬಹುಬೆಲೆಯುಳ್ಳ ಕಾಶ್ಮೀರೀ ಶಾಲಿನ ಪೇಟಾ ಸುತ್ತಿದ್ದನು. ಮೈಯಲ್ಲಿ ಕಪ್ಪುಮೂಡಿಯ ಕಾಶ್ಮೀರೀ ನಿಲುವಂಗಿಯನ್ನು ತೊಟ್ಟು ಕೊಂಡಿದ್ದನು. ಮುಗಿಲಬಣ್ಣದ ಸೈಲಾದ ಪಾಯಜಮೆಯನ್ನು ತೊಟ್ಟು, ಇರಾಣದ ಮುಶಾ ಫರಿ ಬೂಟುಗಳನ್ನು ಮೆಟ್ಟಿದ್ದನು. ಟೊಂಕದಲ್ಲಿ ಬಂಗಾರದ ಮಡಾಸಿನ ಅಗಲಾದಪಟ್ಟಿ ಯಿದ್ದು, ಅದಕ್ಕೆ ಉದ್ದವಾದ, ಹಾಗು ಭಾರವುಳ್ಳ ಖುರಾಸಾಣಿಯ ಬಿಚ್ಚುಗತ್ತಿಯನ್ನು ತೊಡಕಿ ಸಿದ್ದನು. ಇದಲ್ಲದೆ ವಿವಿಧ ಶಸ್ತ್ರಗಳು ಆತನ ದೇಹದಲ್ಲಿ ಒಪ್ಪುತ್ತಿದ್ದವು. ಮುಖಮುದ್ರೆಯಿಂದ ಆತನು ತ್ರಾಸದ ಸ್ವಭಾವದವನಾಗಿಯೂ, ಸಿಟ್ಟಿನವನಾಗಿಯೂ, ಸಿಡಕನಾಗಿಯೂ ತೋರುತ್ತಿದ್ದನು. ಆತನನ್ನು ಹಿಂಬಾಲಿಸಿದ್ದ ಮುಸಲ್ಮಾನಸರದಾರರೂ ಅಬದಾಲಿಯಂತೆಯೇ ಶೂರರೂ, ದರ್ಶನೀಯರೂ, ಘನವಂತರೂ, ಯೋಗ್ಯತಾಸಂಪನ್ನರೂ ಆಗಿದ್ದರು. ಆಯಾ ಸರದಾರರ ಸ್ತುತಿಪಾಠಕರು ತಮ್ಮ ತಮ್ಮ ಒಡೆಯರನ್ನು ಸ್ತುತಿಸುತ್ತಿದ್ದರು. ಸಿಂಹದ ಹಿಡಿಕೆಯ ಬಂಗಾರದ ಬೆತ್ತಗಳಿಂದ ಚೋಪದಾರರು ಹಾದಿಯುಬಿಡಿಸುತ್ತಿದ್ದರು. ಆಗ ಅಬದಾಲಿಯ ಕಣ್ಣಿಗೆ ಬೈರಾಗಿಣಿಯು ಬೀಳಲು, ತನ್ನ ಅಪ್ಪಣೆಯ ವಿರುದ್ಧವಾಗಿ ಇಲ್ಲಿ ಸ್ತ್ರೀಯೇಕೆಂಬ ವಿಚಾರದಿಂದ ಆತನು ಕ್ರೋಧಸಂತಪ್ತನಾದನು.

## ವಿಪರೀತ ಕಲ್ಪನೆ

ಪ್ರಿಯವಾಚಕರೇ, ದಂಡಿನ ಪಾಳಯಗಳು ಯಾರವು? ಬೈರಾಗಿಣಿಯು ಯಾರ ಪಾಳಯದ ಕಡೆಗೆ ಹೊರಟಿದ್ದಳು? ಎಂಬದನ್ನರಿತುಕೊಳ್ಳುವ ಇಚ್ಛೆಯು ನಿಮಗಾಗಿರ ಬಹುದಾದ್ದರಿಂದ, ಅವನ್ನು ಇಲ್ಲಿ ಹೇಳುವೆವು. ನಿಮ್ಮಲ್ಲಿ ಬಹುಜನರು ಇತಿಹಾಸ ಓದಿದವರಿರ ಬಹುದು. ಇತಿಹಾಸ ಓದದೆಯಿದ್ದವರಿಗೂ ಅದು ತಿಳಿಯುವಹಾಗೆ ನಾವು ಸ್ವಲ್ಪದರಲ್ಲಿ ಹೇಳಬೇಕೆಂದು ಮಾಡಿದ್ದೇವೆ. ಕೌರವ–ಪಾಂಡವರ ಹೆಸರನ್ನು ಕೇಳದೆಯಿದ್ದ ಜನರು ನಮ್ಮಲ್ಲಿ

ಇಲ್ಲವಷ್ಟೆ? ಆ ಪ್ರತಾಪಿಗಳ ಕಾಲದಲ್ಲಿ ನಮ್ಮ ದೇಶವು ಸುಖ-ಸಂಪನ್ನವಾಗಿದ್ದು, ಅದು ಸ್ವಾತಂತ್ರ್ಯದ ಸೌಖ್ಯವನ್ನಾದರೂ ಸಂಪೂರ್ಣವಾಗಿ ಭೋಗಿಸುತ್ತಿತ್ತು; ಆದರೆ ಸುಖದ ಮುಂದೆ ದುಃಖವೂ, ಸ್ವಾತಂತ್ರ್ಯದ ಮುಂದೆ ಪಾರತಂತ್ರ್ಯವೂ ಕಟ್ಟಿಇಟ್ಟಿರುವವೆಂದು ಹೇಳ ಬಹುದಾಗಿದೆ. ಆರ್ಯಧರ್ಮದ ನಾವು ಬರಬರುತ್ತ ಸುಖಲೋಲುಪರಾಗಿ ಮೊದಲು ವಿಷ ಯಾಧೀನರಾಗಲು, ನಮ್ಮಲ್ಲಿ ದೌರ್ಬಲ್ಯವು ಸೇರಿ ಮೆಲ್ಲಮೆಲ್ಲನೆ ಪರಾಧೀನತೆಯು ನಮ್ಮ ಬಳಿಗೆ ಬರತೊಡಗಿತು. ಆಗ ಗ್ರೀಕರು, ಶಕರು, ಮುಸಲ್ಮಾನರು, ಇಂಗ್ಲೀಷರು ಕ್ರಮವಾಗಿ ನಮ್ಮ ದೇಶಕ್ಕೆ ಬಂದು ನಮ್ಮ ತಲೆಗೇರಿದ ವಿಷಯಲೋಲುಪತೆಯ ನಂಜನ್ನು ಇಳಿಸಿ, ನಮಗೆ ಪರಾಧೀನತೆಯ ಅನುಭವ ವನ್ನು ತಂದುಕೊಡಹತ್ತಿದರು. ಈಗ ನಾವು ಬರೆಯುವ ಕಾದಂಬರಿಯು, ನಮ್ಮ ದೇಶದೊಳಗಿನ ಮುಸಲ್ಮಾನರ ಇಳಿಕೆಯ ಕಾಲದ ಪ್ರಸಂಗವಾಗಿರುತ್ತದೆ.

ಮುಸಲ್ಮಾನರೊಳಗಿನ ಅಕಬರ, ಔರಂಗಜೇಬರೆಂಬ ಬಾದಶಹರ ಹೆಸರನ್ನು ಕೇಳದೆ ಯಿದ್ದ ಹಿಂದೂಜನರು ಕಡಿಮೆಯೆಂದು ಹೇಳಬಹುದು. ನಮ್ಮ ದೇಶಕ್ಕೆ ಮುಸಲ್ಮಾನರು ಬರಹತ್ತಿದ ಬಳಿಕ ಸರಾಸರಿ ಸಾವಿರವರ್ಷಗಳಾದ ಮೇಲೆ ಈ ಬಾದಶಹರು ದಿಲ್ಲಿಯಲ್ಲಿ ಆಳಿದರು. ಅವರು ಆಳಿದ ಕಾಲವು ಮುಸಲ್ಮಾನರ ಅತ್ಯುತ್ಕರ್ಷದ ಕಾಲವಾಗಿತ್ತು. ನಮ್ಮ ಈ ಕಾದಂಬರಿಯ ಕಾಲದಲ್ಲಿ, ಅಂದರೆ ಸನ್ ೧೭೬೧ನೆಯ ಇಸವಿಯಲ್ಲಿ ಔರಂಗಜೇಬನು ತೀರಿಹೋಗಿ, ಅವನ ಮಕ್ಕಳು, ಮೊಮ್ಮಕ್ಕಳು ದಿಲ್ಲಿಯಲ್ಲಿ ಆಳುತ್ತಿದ್ದರು. ಮುಸಲ್ಮಾನರಲ್ಲಿ ಅಕಬರಬಾದಶಹನಂಥ ಒಳ್ಳೆಯ ಅರಸರೂ ಆದರು, ಔರಂಗಜೇಬನಂಥ ದುಷ್ಟ ಅರಸರೂ ಆದರು; ಆದರೆ ಒಟ್ಟಿನಮೇಲೆ ಮುಸಲ್ಮಾನರು ಧರ್ಮಾಭಿಮಾನದಿಂದ ಹಿಂದೂಜನರನ್ನು ಪರಿಪರಿಯಾಗಿ ಹಿಂಸಿಸಿದರೆಂದು ಹೇಳಲಿಕ್ಕೆ ಬಾಧೆಯಿಲ್ಲ. ಅವರಲ್ಲಿ ಔರಂಗಜೇಬನಂತು ಈ ಧಾರ್ಮಿಕಹಿಂಸೆಗೆ ಕಳಸವಿಟ್ಟನೆಂದು ಹೇಳಬಹುದು. ಇಂಥ ಬಗೆಬಗೆಯ ಹಿಂಸೆಯಿಂದ ಹಿಂದೂ ಜನರು ಜರ್ಜರರಾಗಿ, ಆಗಾಗ್ಗೆ ದೇವರಿಗೆ ಮೊರೆಯಿಡುವರು. ಆಗ ಶಿವಾಜಿಯಂಥ ಎಷ್ಟೋ ತೇಜಸ್ವಿಗಳು ತಲೆಯೆತ್ತಿ ಮುಸಲ್ಮಾನರಿಗೆ ಬಗ್ಗದೆ ಸ್ವರಾಜ್ಯಗಳನ್ನು ಸ್ಥಾಪಿಸುವರು. ಮುಸಲ್ಮಾನರ ಉಪಟಲದ ಕಾಲದಲ್ಲಾದ ಇಂಥ ಸ್ವರಾಜ್ಯಗಳಲ್ಲಿ ದಕ್ಷಿಣದೊಳಗಿನ ವಿಜಯನಗರದ ರಾಜ್ಯವೂ ಮರಾಟರ ರಾಜ್ಯವೂ ಹೆಸರಾದವುಗಳು.

ವಿಜಯನಗರದ ರಾಜ್ಯವು ಈಗ ೬೦೦ ವರ್ಷಗಳ ಹಿಂದೆ ಸ್ಥಾಪಿಸಲ್ಪಟ್ಟಿದ್ದು, ಅದು ೩೦೦ ವರ್ಷ ಬಾಳಿ ನಾಶವಾದ ಬಳಿಕ, ಸರಾಸರಿ ನೂರು ವರ್ಷಗಳ ಮೇಲೆ ಮರಾಟರ ರಾಜ್ಯವನ್ನು ಶಿವಾಜಿ ಮಹಾರಾಜನು ದಕ್ಷಿಣದಲ್ಲಿ ಸ್ಥಾಪಿಸಿದನು. ಆತನೂ, ಆತನ ಮಕ್ಕಳೂ ಸ್ವತಂತ್ರದಿಂದ ೩೫ ವರ್ಷ ರಾಜ್ಯವಾಳಿದರು. ಬಳಿಕ, ಆತನ ಮೊಮ್ಮಗನಾದ ಶಾಹೂರಾಜನು ರಾಜ್ಯಸೂತ್ರಗಳನ್ನೆಲ್ಲ ಪೇಶ್ವೆಯವರಿಗೆ ಒಪ್ಪಿಸಿ, ''ನೀವು ಛತ್ರಪತಿಯ ರಾಜ್ಯವನ್ನು ವಿಸ್ತರಿಸ ಬೇಕೆಂದು'' ಹೇಳಿ ತಾನು ಸಾತಾರೆಯಲ್ಲಿ ಸ್ವಸ್ಥವಾಗಿ ಇರಹತ್ತಿದನು. ಪೇಶ್ವೆಯವರು ಬ್ರಾಹ್ಮಣರು; ಆದರೂ ಅವರು ಕ್ಷಾತ್ರಧರ್ಮವನ್ನು ಸ್ವೀಕರಿಸಿ ಧೌರಂಧರ್ಯದಿಂದ ರಾಜ್ಯ ವಾಳಿ ಇಡಿಯ ಹಿಂದುಸ್ಥಾನದ ಮೇಲೆ ತಮ್ಮ ವರ್ಚಸ್ಸನ್ನು ಸ್ಥಾಪಿಸಿದರು. ಪ್ರತ್ಯಕ್ಷ ದಿಲ್ಲೀ

ಬಾದಶಹನ ಕಾರಭಾರದಲ್ಲಿಯೂ ಅವರ ಕೈಸೇರಿತು. ಮೊದಲನೇ ಬಾಜೀರಾವ, ನಾನಾಸಾಹೇಬ, ದೊಡ್ಡ ಮಾಧವರಾವ ಎಂಬವರು ಪೇಶ್ವೆಯವರಲ್ಲಿ ಮಹಾಪರಾಕ್ರಮಿಗಳೂ, ರಾಜಕಾರ್ಯ ಧುರಂಧರರೂ ಆದರು. ಇವರ ಅಬ್ಬರಕ್ಕೆ ಹೈದರಾಬಾದದ ನಿಜಾಮನು ತತ್ತರಿಸಿದನು; ಹೈದರಾಲಿಯು ಬೆದರಿದನು; ಮೈಸೂರ ವ್ಯಾಘ್ರನೆನಿಸುವ ಟೀಪುವು ಮೆತ್ತಗಾದನು; ದಿಲ್ಲಿಯ ಬಾದಶಹನು ದಿಗಿಲು ಬಿದ್ದನು; ನಮ್ಮ ಇಂಗ್ಲಿಷರು ಆಶ್ಚರ್ಯದಿಂದ ತಲೆದೂಗಿದರು! ಇಂಥ ಪೇಶ್ವೆಯವರೊಳಗಿನ ೩ನೇ ಪೇಶ್ವೆಯಾದ ನಾನಾಸಾಹೇಬನ ಕಾಲದಲ್ಲಿ ನಮ್ಮ ಈ ಕಾದಂಬರಿಯ ಪ್ರಸಂಗವು ಒದಗಿತು.

ನಾನಾಸಾಹೇಬನ ಕಾಲವು ಪೇಶ್ವೆಯವರ ಅತ್ಯುತ್ಕರ್ಷದ ಕಾಲವೆಂದು ಹೇಳಬಹುದು. ಮೊಗಲರು ವಿಷಯಾಧೀನರಾಗಿ ದುರ್ಬಲರಾಗಲು, ಅವರ ರಾಜ್ಯವನ್ನು ತುಂಡರಿಸುವದಕ್ಕಾಗಿ ಇಂಗ್ರಜರು, ಸೀಕರು, ರೋಹಿಲರು, ರಜಪೂತರು, ಜಾಟರು, ಮಹಾರಾಷ್ಟ್ರರು, ಇರಾಣಿ ಜನರು, ದುರಾಣಿಜನರು, ಗಿಲಚಿಜನರು ಮುಂದುವರಿದರು. ಇವರೆಲ್ಲರಲ್ಲಿ ಮರಾಟರು ಒಳ್ಳೇ ಗಟ್ಟಿಗರಾದದ್ದರಿಂದ, ಅವರು ಎಲ್ಲರಿಗಿಂತ ನಾಲ್ಕುಹೆಜ್ಜೆ ಮುಂದಕ್ಕೆ ಹೋದರೆಂದು ಹೇಳ ಬಹುದು. ಬರಬರುತ್ತ ಅವರ ತೇಜಸ್ವಿತೆಯು ಮಿನುಗಹತ್ತಿತು. ದರ್ಪವು ಹೆಚ್ಚಿತು; ಆದ್ದರಿಂದ ಇವರೇ ಹಿಂದುಸ್ಥಾನದ ಸಾರ್ವಭೌಮರಾಜರಾಗಬಹುದೆಂದು ಜನರು ತರ್ಕಿಸಹತ್ತಿದರು. ಅವರ ಸರದಾರ ಮಂಡಲವು ಬಹು ದೊಡ್ಡದಿದ್ದದರಿಂದ ದೇಶದತುಂಬ ಹಬ್ಬಿತು. ಅವರ ಮುಖ್ಯಸ್ಥನು ಪೇಶ್ವೆಯು. ಪ್ರತಿವರ್ಷ ಮಳೆಗಾಲ ಹೋದಕೂಡಲೆ ತಮ್ಮ ತಮ್ಮ ಸರಂಜಾಮುಗಳೊಡನೆ ಮಹಾರಾಷ್ಟ್ರ ಸರದಾರರು, ಪೇಶ್ವೆ ಸರಕಾರದ ಅಪ್ಪಣೆಯಾದ ಸ್ಥಳದಲ್ಲಿ ಒಟ್ಟುಗೂಡುತ್ತಿದ್ದರು. ಅಲ್ಲಿ ಅವರೆಲ್ಲರ ಭೆಟ್ಟಿಯಾದನಂತರ ಪೇಶ್ವೆಯವರ ಜರಿ ಪಟಕಾನಿಶಾನೆಯೂ, ಢಾಲೂ ಹೊರಳಿದ ದಿಕ್ಕಿಗೆ ಅವರು ದಂಡೆತ್ತಿ ಹೋಗುತ್ತಿದ್ದರು. ವಿಜಯಾದಶಮಿಯು ಅವರು ದಂಡೆತ್ತಿ ಹೋಗುವ ಸುಮುಹೂರ್ತವಾಗಿತ್ತು. ಹೀಗೆ ದಂಡೆತ್ತಿ ಹೋದಬಳಿಕ, ''ಇಂದು ಈ ಪ್ರಾಂತವನ್ನು ಕೈ ಸೇರಿಸಿ ಕೊಂಡರು, ನಾಳೆ ಆ ಪ್ರಾಂತವನ್ನು ಕೈ ಸೇರಿಸಿಕೊಂಡರು, ನಾಡದು ನಿಜಾಮನನ್ನು ಹಣ್ಣಿಗೆ ತಂದರು, ಆಚೇನಾಡದು ದಿಲ್ಲಿಯ ಕಡೆಗೆ ಧುಮುಕಿದರು'' ಎಂಬ ಸುದ್ದಿಗಳು ವಕೀಲರ ಮುಖಾಂತರ ಪುಣೆಗೆ ಬರುತ್ತಿದ್ದವು. ಶ್ರೀಮಂತರ ಸವಾರಿಯು ಇಂದು ಕರ್ನಾಟಕದಲ್ಲಿದ್ದರೆ, ನಾಳೆ ಗುಜರಾಥದ ಕಡೆಗೆ ಹೊರಳುವದು; ಈ ವರ್ಷ ಮಾಳವವನ್ನು ಹೊಕ್ಕು ಅಲ್ಲಿಯ ಬಂದೋಬಸ್ತು ಮಾಡಿದರೆ, ಮುಂದಿನವರ್ಷ ಬಂಗಾಲದ ಕಡೆ ಸಾಗುವದು. ಪ್ರಿಯವಾಚಕರೇ, ಎಲ್ಲಿಯ ಪುಣೆಯು, ಎಲ್ಲಿಯ ದಿಲ್ಲಿಯು, ಎಲ್ಲಿಯ ಗ್ವಾಲ್ಹೇರವು, ಎಲ್ಲಿಯ ಬಂಗಾಲವು? ಅಹಹ! ಪಂಜಾಬವು ಸಮೀಪವೇ? ಮೈಸೂರು ಹತ್ತರವೇ? ಕಾಸಿಯು ಬಾಗಿಲ ಮುಂದಿನದೇ? ಅದೂ ಇರಲಿ. ಈಗಿನಂತೆ ಆಗ ಉಗೆ ಬಂಡಿಗಳಿದ್ದಿಲ್ಲ–ಲೈನಹಾದಿಗಳಿದ್ದಿಲ್ಲ; ಪೂಲುಗಳಿದ್ದಿಲ್ಲ– ಗುಡ್ಡಕೊರೆದು ಮಾಡಿದ ಹಾದಿಗಳಿದ್ದಿಲ್ಲ. ಇಂಥ ಸ್ಥಿತಿಯಲ್ಲಿ ದಕ್ಷಿಣದ ಭಿವರಥಡಿ, ಗಂಗಥಡಿ, ಕೃಷ್ಣಥಡಿ, ಮಾಣದೇಶೀ, ಮಾದವಾನೀ

ಜಾತಿಯ ಗಿಡ್ಡತರಹ ಚಪಲ ಕುದುರೆಗಳು ಭಾಗೀರಥಿಯಲ್ಲಿ ಮೈ ತೊಳೆದವು; ಅಟಕದ ಕಾಬೂಲನದಿಯ ನೀರು ಕುಡಿದವು!! ಅಂದಬಳಿಕ ನಮ್ಮ ಮರಾಟರು ಧನ್ಯರಲ್ಲವೆ? ಅವರ ಪರಾಕ್ರಮವೆ ಸಫಲವಾದದ್ದಲ್ಲವೆ? ಅವರ ಸಾಹಸವು ಸಾರ್ಥಕವಾಯಿತಲ್ಲವೆ? ಮರಾಟಾವೀರರು ದಕ್ಷಿಣದ ನಮ್ಮ ಆ ಗಿಡ್ಡ ಕುದುರೆಗಳನ್ನು ಹತ್ತಿಕೊಂಡು ದೇಶದೇಶಗಳಲ್ಲಿ ನಾಲ್ಕೂ ಕಡೆಗೆ ತಿರುಗಹತ್ತಿದರೆಂದರೆ, ಗುಜರಾಥದಭಾಯಿಗಳು, ಕರ್ನಾಟಕದ ಅಪ್ಪನವರು, ಬಂಗಾಲದ ಬಾಬುಗಳು, ಮುಸಲಮಾನಸಿಪಾಯಿಗಳು, ಪರದ್ವೀಪಸ್ಥ ಟೊಪ್ಪಿಗೆಯವರು ಗದಗುಟ್ಟಿ ನಡಗುತ್ತಿದ್ದರು!

ನಾನಾಸಾಹೇಬ ಪೇಶವೆಗೆ ಅವನ ತಮ್ಮನಾದ ರಘುನಾಥರಾಯನೂ, ಕಕ್ಕನಮಗನಾದ ಸದಾಶಿವರಾವಭಾವುವೂ ಸಹಾಯಕರಾಗಿದ್ದರು. ರಘುನಾಥರಾಯನು ಅನುಭವಿಕ ಸುಪ್ರಸಿದ್ಧ ವೀರನು. ಸಿಂದೆ, ಹೋಳಕರ, ಗಾಯಕವಾಡ, ಭೋಸಲೆಯೆಂಬವರು ಮಹಾರಾಷ್ಟ್ರ ಮಂಡಲದ ಪ್ರಸಿದ್ಧ ಸರದಾರರಾಗಿ, ಒಂದೊಂದು ನಿಟ್ಟಿನ ವ್ಯವಸ್ಥೆಯನ್ನು ಒಬ್ಬೊಬ್ಬರು ಕೈಕೊಂಡಿದ್ದರು. ಸದ್ಯಕ್ಕೆ ಪೇಶ್ವೆ ಸರಕಾರದಲ್ಲಿ ತರುಣನಾದ ಸದಾಶಿವರಾವಭಾವುವಿನ ವರ್ಚಸ್ಸವೇ ವಿಶೇಷವಾಗಿತ್ತೆಂದು ಹೇಳಬಹುದು. ಆತನು ಪ್ರಸಿದ್ಧ ವೀರನಾದ ಚಿಮಣಾಜಿ ಅಪ್ಪಾನ ಮಗನು. ಈತನು ಸ್ವಲ್ಪದಿನಗಳ ಹಿಂದೆ ಉದಗಿರಿಯಲ್ಲಿ ನಿಜಾಮನನ್ನು ಪೂರ್ಣವಾಗಿ ಸೋಲಿಸಿದ್ದರಿಂದ, ಆತನ ವರ್ಚಸ್ಸಿಗೆ ವಿಶೇಷ ಕಳೆಯೇರಿದಂತಾಗಿತ್ತು; ಜನರಲ್ಲಿ ಆತನ ಸ್ತುತಿಸ್ತೋತ್ರಗಳು ವಿಶೇಷವಾಗಿ ನಡೆದಿದ್ದವು; ಆದ್ದರಿಂದ, ಸದಾಶಿವರಾಯನಿಗೆ ಸ್ವರ್ಗವು ಮೂರೇ ಗೇಣು ಉಳಿದಿತ್ತೆಂದು ಹೇಳಬಹುದು. ಆತನನ್ನು ಗರ್ವವು ಬಾಧಿಸಹತ್ತಿತ್ತು, ತನಗೆ ಸರಿಯಾದವರು ಯಾರೂ ಇಲ್ಲವೆಂತಲೂ, ಹೆಸರು ಎತ್ತುವಂಥ ವೀರನು ತಾನು ಒಬ್ಬನೇ ಎಂತಲೂ, ತಾನು ಬೇಕಾದದ್ದನ್ನು ಮಾಡಬಲ್ಲವನೆಂತಲೂ ಆತನು ತಿಳಿದುಕೊಳ್ಳಹತ್ತಿದ್ದನು. ಆತನು ಯುರೋಪದ ಪದ್ಧತಿಯಂತೆ ಇಬ್ರಾಹಿಮಖಾನಗಾರದಿಯ ಕೈಯಿಂದ ಕೆಲವು ಕವಾಯತಿಯ ದಂಡನ್ನು ಸಿದ್ಧಪಡಿಸಿಕೊಂಡಿದ್ದನು. ಇಬ್ರಾಹಿಮಖಾನನು ಪ್ರಸಿದ್ಧ ಫ್ರೇಂಚಸರದಾರನಾದ ಬುಸಿಯ ಕೈಯಲ್ಲಿ ಕಲಿತವನಾಗಿದ್ದನು. ಹೀಗೆ ಸತ್ವದ ವಿಷಯವಾಗಿ ಹೆಮ್ಮೆಪಡುತ್ತಿದ್ದ ಸದಾಶಿವರಾಯನು ಪುಣೆಯಲ್ಲಿ ನಿಂತು ರಾಜ್ಯಕಾರಭಾರ ನಡಿಸುತ್ತಿದ್ದನು. ರಾಘೋಬಾ ದಾದಾನು ಹೊರಗೆ ದಂಡೆತ್ತಿ ಹೋಗುತ್ತಿದ್ದನು. ಆ ರಣಶೂರ ರಾಘೋಬನು ಉತ್ತರಕ್ಕೆ ದಂಡೆತ್ತಿ ಹೋಗಿ ಅಬದಾಲಿಯ ಮಗನಾದ ತೈಮೂರಶಹನನ್ನು ಸೋಲಿಸಿ, ಆತನನ್ನು ಅಟಕಪಟ್ಟಣದ ಗಡಿದಾಟಿಸಿ ಅದೇ ಪುಣೆಗೆ ಬಂದಿದ್ದನು.

ಹೀಗೆ ಎಲ್ಲಕಡೆಯಿಂದ ತನಗೆ ಜಯಪ್ರಾಪ್ತಿಯಾಗುತ್ತ ಬಂದದ್ದರಿಂದಲೂ, ತನ್ನ ಸೇನಾಬಲವು ಮಿತಿಮೀರಿ ಹೆಚ್ಚಿದ್ದರಿಂದಲೂ, ತನ್ನ ಯಶೋದುಂದುಭಿಯು ದಿಕ್ಕುದಿಕ್ಕಿಗೆ ಹಬ್ಬಿ, ಅದರ ಪ್ರತಿಧ್ವನಿಯು ಕಿವಿ ಮರಗುಟ್ಟುವಹಾಗೆ ತನಗೆ ಕೇಳಹತ್ತಿದ್ದರಿಂದಲೂ ಮನುಷ್ಯ ರಚಿತವಾದ ಪೇಶ್ವೆಸರಕಾರಕ್ಕೆ ಮನುಷ್ಯ ಸ್ವಭಾವಕ್ಕನುಸರಿಸಿ ಒಂದು ಪ್ರಕಾರದ ಹೆಮ್ಮೆಯು ಬಂದಿತು. ಅದರಿಂದ ಆ ಸರಕಾರದ ಕಾರ್ಯದಕ್ಷತೆಯೂ, ದೂರದರ್ಶಿತ್ವವೂ,

ವಿವೇಕಬುದ್ಧಿಯೂ ಸಡಲಹತ್ತಿದರೆ ಆಶ್ಚರ್ಯವೇನು? ಈ ಜಗತ್ತಿನಲ್ಲಿ ಇಂದಿನವರೆಗೆ ಯಾರ ಹೆಮ್ಮೆಯೂ ಮುಜಲುಗಂಡಿಲ್ಲ, ಸೇರಿಗೆ ಸವ್ವಾಸೇರೆಂಬಂತೆ, ಒಬ್ಬರ ಹೆಮ್ಮೆಯನ್ನು ಮುರಿಯ ಲಿಕ್ಕೆ ಮತ್ತೊಬ್ಬರ ನಿರ್ಮಾಣವು ಆಗೇ ಆಗುವದು. ಅದರಂತೆ, ಮರಾಟರ ಹೆಮ್ಮೆ ಯನ್ನು ಮುರಿಯಲಿಕ್ಕೆ ಈಗ ಹಿಂದುಸ್ಥಾನದ ವಾಯವ್ಯ ಮೂಲೆಯಲ್ಲಿ ಒಬ್ಬವೀರನು ಉತ್ಪನ್ನ ನಾಗಿದ್ದನು. ಅವನೇ ಅಹಮ್ಮದಶಹಾ ಅಬದಾಲಿಯು. ಅಬದಾಲಿಯು ಸಾಮಾನ್ಯ ಕೋಟಿ ಯೊಳಗಿನ ಮನುಷ್ಯನಿದ್ದಿಲ್ಲ; ಶಿವಾಜಿ ಮಹಾರಾಜ, ಮೊದಲನೇ ಬಾಜೀರಾಯರಂತೆ ಹುಟ್ಟಾ ಬುದ್ಧಿಶಾಲಿಯೂ, ದೂರದರ್ಶಿಯೂ ಆದ ಪುರುಷನಾಗಿದ್ದನು. ನಮ್ಮ ಕಡೆಯ ಮೊಗಲಸರ ದಾರರಂತೆ ಆತನು ವಿಷಯಾಸಕ್ತನಿದ್ದಿಲ್ಲ, ಮಂದಿಯಬೊಗಸೆಯಿಂದ ನೀರು ಕುಡಿಯುವದಂತು ಆತನಿಗೆ ಗೊತ್ತೇ ಇದ್ದಿಲ್ಲ. ಆತನ ಶೌರ್ಯ, ಚಟವಟಿಕೆ, ಶಿಸ್ತು ದೂರದೃಷ್ಟಿ, ಧೈರ್ಯ, ದರ್ಪ ಈ ಗುಣಗಳು ಹೊಗಳತಕ್ಕವಾಗಿದ್ದವು. ಆತನು ಪ್ರಸಿದ್ಧ ನಾದಿರಶಹನ ಕೈಯಲ್ಲಿ ನುರಿತವ ನಾಗಿದ್ದನು. ಅಂದಬಳಿಕ ಕೇಳುವದೇನು? ಗುರುವಿನಂತೆ ಶಿಷ್ಯ! ಅಬದಾಲಿಯು ಈ ಮೊದಲೆ ತನ್ನ ರಾಜ್ಯವಾದ ಅಫಗಾಣಿಸ್ಥಾನದಿಂದ ಹೊರಟು ಹಿಂದುಸ್ಥಾನದಲ್ಲಿ ನುಗ್ಗಿ ಪಂಜಾಬ ಪ್ರಾಂತವನ್ನು ಕೈವಶಮಾಡಿಕೊಂಡು ಅದಕ್ಕೆ ತನ್ನ ಮಗನಾದ ತೈಮೂರಶಹನನ್ನು ಸುಬೇದಾರ ನಾಗಿ ನಿಯಮಿಸಿದ್ದನು. ಮೇಲೆ ಹೇಳಿದಂತೆ ರಾಘೋ ಬಾದಾದಾನು ಆ ತೈಮೂರಶಹನನ್ನು ಓಡಿಸಿ ಪಂಜಾಬವನ್ನು ಸ್ವಾಧೀನಪಡಿಸಿ ಕೊಂಡದ್ದರಿಂದ, ಅಬದಾಲಿಯು ಸಿಟ್ಟಾಗಿ ಈಗ ಮತ್ತೆ ಹಿಂದುಸ್ಥಾನದ ಮೇಲೆ ದಂಡೆತ್ತಿಬಂದಿದ್ದನು.

ಅಬದಾಲಿಯ ಅಬ್ಬರಕ್ಕೆ ಶಿಂದೆ ಹೋಳಕರ ಮೊದಲಾದ ಉತ್ತರದಕಡೆಯ ಮರಾಟಾ ಸರದಾರರು ಈಡಾಗಲಿಲ್ಲ, ರಘೋಬಾದಾದಾನಿಂದ ಪಂಜಾಬದ ಸುಬೇದಾರನಾಗಿ ನಿಯಮಿಸಲ್ಪಟ್ಟಿದ್ದ ಶಾಬಾಜಿರಾವ ಸಿಂದೆಯವರನ್ನು ಅಬದಾಲಿಯು ಹೊಡೆದೋಡಿಸಿ, ನೆಟ್ಟಗೆ ದಿಲ್ಲಿಯಮೇಲೆ ಸಾಗಿಬಂದನು; ಯಾಕಂದರೆ, ಆಗಿನ ದಿಲ್ಲಿಯ ಬಾದಶಹನಾದ ಎರಡನೇ ಅಲಮಗೀರನೂ, ಆತನ ವಜೀರನಾದ ಗಾಜುದ್ದೀನಖಾನನೂ ಮರಾಟರ ಪಕ್ಷದವರಾಗಿ ದ್ದರು. ಹೀಗೆ ಅಬದಾಲಿಯು ಅಬ್ಬರಿಸಿ ಉತ್ತರಹಿಂದುಸ್ಥಾನದ ಮರಾಟರ ಅಧಿಕಾರಕ್ಷೇತ್ರದ ನೆಲಗಟ್ಟನ್ನು ಅದರಿಸಹತ್ತಿದ ಸುದ್ದಿಯು ಪುಣೆಗೆ ಮುಟ್ಟಿತು; ಆದರೆ ಹೆಮ್ಮೆಯ ಪೇಶ್ವೆಯ ಸರಕಾರವು ಇದಕ್ಕೆ ಸೊಪ್ಪುಹಾಕಲಿಲ್ಲ. ತಾನು ಅಬದಾಲಿಯನ್ನು ಸಹಜವಾಗಿ ಹೊಡೆದೋಡಿಸಿ ತನ್ನ ವರ್ಚಸ್ವವನ್ನು ನಿರಾಯಾಸವಾಗಿ ಕಾಯ್ದುಕೊಳ್ಳಬಹುದೆಂದು ಅದು ಭಾವಿಸಿತು. ಅದರ ಅಪ್ಪಣೆಯಂತೆ ಉತ್ತರ ಹಿಂದುಸ್ಥಾನದ ದಂಡಯಾತ್ರೆಗಾಗಿ ಮರಾಟರ ಸೈನ್ಯವು ಸಿದ್ಧವಾಗ ತೊಡಗಿತು. ಈ ಮಹತ್ವದ ಕಾರ್ಯಕ್ಕಾಗಿ ಕಂಕಣಕಟ್ಟುವ ಯೋಗ್ಯವೀರನು ರಾಘೋಬಾದಾ ದಾನೇ ಆಗಿದ್ದನು; ಆದರೆ ಅಬದಾಲಿಗೆ ಅನುಭವಿಕನಾದ ತಕ್ಕ ವೀರನ ಜೋಡು ದೊರೆ ಯುವ ಯೋಗವಿದ್ದಂತೆ ತೋರಲಿಲ್ಲ. ಈ ಬ್ರಾಹ್ಮಣವೀರನು ಮೇಲೆ ಹೇಳಿದಂತೆ ತೈಮೂರಶ ಹನನ್ನು ಸೋಲಿಸಿ ಪುಣೆಗೆ ಬಂದಾಗ, ದುಡ್ಡು ತರದೆ ಸಾಲಮಾಡಿಕೊಂಡು ಬಂದಿದ್ದನು. ಆಗ ತರುಣನಾದ ಸದಾ ಶಿವರಾಯನು ಅವಿವೇಕತನದಿಂದ ದಾದಾನಿಗೆ ಪಿಕ್ಕುಮಾತು ಆಡಿದನು.

ಅದರಿಂದ ರಾಘೋ ಬಾದಾದಾನು ಈಗ ದಂಡಯಾತ್ರೆಗೆ ಸಮ್ಮತಿಸದೆ, ''ನಾನು ಇನ್ನು ಪುಣೆಯಲ್ಲಿ ನಿಂತು ಕಾರಭಾರ ಸಾಗಿಸುವೆನು, ನೀವು ದಂಡಯಾತ್ರೆಗೆ ಹೋಗಿರಿ'' ಎಂದು ಸದಾಶಿವರಾವ ಭಾವುನಿಗೆ ಹೇಳಿದನು. ಆದರೆ ಭಾವುವು ಹಿಂಜರಿಯುವವನೆಯೆ? ತರುಣ ನಾದ ಭಾವುವು ತನ್ನ ಏರಿಕೆಯ ರಕ್ತದ ಧರ್ಮಕ್ಕನುಸರಿಸಿ ಉದಗಿರಿಯ ಜಯದ ಹೆಮ್ಮೆಯಿಂದ ತಟ್ಟನೆ ದಂಡಯಾತ್ರೆಗೆ ಒಪ್ಪಿಕೊಂಡು, ನಾನಾಸಾಹೇಬನ ಅಪ್ಪಣೆಪಡೆದು ಸೈನ್ಯವನ್ನು ಸಿದ್ಧ ಗೊಳಿಸಹತ್ತಿದನು.

ಭಾವೂಸಾಹೇಬನು ಸರ್ವಸನ್ನಾಹದೊಡನೆ ಉತ್ತರಹಿಂದುಸ್ಥಾನಕ್ಕೆ ತೆರಳಿದನು. ಆಗ ಗಾದಿಯ ಮಾಲಕನಾದ ಶ್ರೀಮಂತ ನಾನಾಸಾಹೇಬನು ಉತ್ತರಹಿಂದುಸ್ಥಾನದ ಯಾವತ್ತು ರಜಪೂತ, ಜಾಟ, ಜವಾಹೀರ ಮೊದಲಾದ ಜಾತಿಯ ಹಿಂದೂರಾಜರಿಗೂ, ಮಾಂಡಲಿ ಕರಿಗೂ, ಸಂಸ್ಥಾನಿಕರಿಗೂ ಸಾಂಡಣೆಸವಾರರ ಮುಖಾಂತರ ಪತ್ರಬರೆದು ತಿಳಿಸಿದೇನೆಂದರೆ— ''ಹಿಂದೂ ಧರ್ಮಾಭಿಮಾನಿಗಳೇ, ಹಿಂದೂಧರ್ಮದ ಸಂರಕ್ಷಣಕ್ಕಾಗಿಯೂ, ಗೋವಧವನ್ನು ನಿಲ್ಲಿಸುವದಕ್ಕಾಗಿಯೂ, ಮ್ಲೇಂಛರ ಪ್ರಾಬಲ್ಯವನ್ನು ಕುಗ್ಗಿಸುವದಕ್ಕಾಗಿಯೂ ಶ್ರೀ ಶಂಕರನ ತ್ರಿಶೂಲವನ್ನು ಧರಿಸಿ ಸದಾಶಿವರಾವ ಭಾವೂರವರು ಉತ್ತರಹಿಂದುಸ್ಥಾನಕ್ಕೆ ದಂಡೆತ್ತಿ ಬಂದಿದ್ದಾರೆ; ಆದ್ದರಿಂದ ನೀವೆಲ್ಲರೂ ಕೂಡಲೆ ನಿಮ್ಮ ನಿಮ್ಮ ಸೈನ್ಯಗಳೊಡನೆ ಸಿದ್ಧರಾಗಿ ಅವರನ್ನು ಕೂಡಿಕೊಳ್ಳಬೇಕು.'' ಈ ಪತ್ರದಂತೆ ಒಬ್ಬೊಬ್ಬರೇ ಹಿಂದೂರಾಜರು ಭಾವುವನ್ನು ಕೂಡುತ್ತ ಹೋದದ್ದರಿಂದ, ಆತನ ಸೇನಾಸಮುದ್ರವು ಉಕ್ಕೇರುತ್ತ ಹೋಯಿತು. ಶ್ರೀಮಂತ ನಾನಾಸಾಹೇಬರ ಹಿರಿಯ ಮಗನಾದ ಯುವರಾಜ ವಿಶ್ವಾಸರಾಯನು ಈ ದಂಡಯಾತ್ರೆಯ ಕೂಡ ಹೊರಟಿದ್ದನು. ಆತನು ಕೇವಲ ಹದಿನೆಂಟು ವರ್ಷದ ಬಾಲಕನಾಗಿದ್ದನು. ಆತನನ್ನು ಇಷ್ಟು ದೂರದ ದಂಡಯಾತ್ರೆಗೆ ಕಳಿಸಲಾರೆನೆಂದು ಆತನ ತಾಯಿಯಾದ ಗೋಪಿಕಾ ಬಾಯಿಯು ಹಟಹಿಡಿದಳು. ಆಗ ಸದಾಶಿವರಾಯನು—''ಅತ್ತಿಗೆಯವರೇ, ರಾವಸಾಹೇಬ ರನ್ನು ನೀವು ಹುಡುಗರೆಂದು ತಿಳಿಯುವಿರಿ, ಆದರೆ ಅವರು ಸಿಂಹನ ಮರಿಯಿರುವರು, ನರಿನಾಯಿಗಳ ಕುನ್ನಿಯಲ್ಲ.'' ಎಂದು ಹೇಳಿದನಂತೆ! ಹಿಂದುಸ್ಥಾನದ ಆಗಿನ ಕಾಲವೇ ಪೌರುಷದ್ದಾಗಿತ್ತು! ಇರಲಿ. ಹೀಗೆ ಮರಾಠಾಸೇನಾಸಮುದ್ರದ ಪ್ರವಾಹವು ದಕ್ಷಿಣದಿಂದ ಉತ್ತರಕ್ಕೆ ಸಾಗಿ, ಅದರ ತ್ರಿಶೂಲ ಲಾಂಛಿತ ಜರಿಪಟಕಾನಿಶಾನೆಯು ಉತ್ತರಹಿಂದುಸ್ಥಾನ ದಲ್ಲಿ ಮೆರೆಯಹತ್ತಿತು. ಅದಕ್ಕೆ ಎದುರಾಗಿ ದುರಾಣಿಬಾದಶಹನ ಅರ್ಧಚಂದ್ರಲಾಂಛನದ ಹಸರುಬಣ್ಣದ ನಿಶಾನೆಯು ಮಹಮ್ಮದೀ ಧರ್ಮದವರನ್ನು ಉತ್ತೇಜನಗೊಳಿಸುತ್ತ ರೋಹಿಲಖಂಡದತುಂಬ ಸಂಚರಿಸುತ್ತಲಿತ್ತು. ಹೀಗೆ ಮರಾಟರ ತ್ರಿಶೂಲವೂ, ಮುಸಲಮಾನರ ಅರ್ಧಚಂದ್ರವೂ ಕಾದಲಿಕ್ಕೆ ಸಿದ್ಧವಾಗಿದ್ದವು. ಆಗ ಮಳೆಗಾಲವಾದದ್ದರಿಂದ ಕಾಳಾ–ಯಮುನಾ ನದಿಗಳೆರಡೂ ತುಂಬಿ ಹರಿಯುತ್ತಿದ್ದವು. ದಿಲ್ಲಿಗೆ ಹೋಗುವ ಹಾದಿಯು ಪೂರ್ಣವಾಗಿ ಕಟ್ಟಿ ಹೋಗಿತ್ತು. ಭಾವೂಸಾಹೇಬನು ಮಾರ್ಗವನ್ನು ಕ್ರಮಿಸುತ್ತ ಗಂಭೀರಾನದಿಯನ್ನು ದಾಟಿ ಆಗ್ರಾಪಟ್ಟಣದ ಕಡೆಗೆ ತಿರುಗಿದನು. ಈ ಕಾಲದಲ್ಲಿ ಆತನಿಗೆ ಸ್ವರ್ಗವು ಎರಡೇ ಬೆರಳು

ಉಳಿದಿತ್ತು, ವಾಚಕರೇ, ಯಾಕೆ ಉಳಿಯಬಾರದು? ಶ್ರೀಮಂತ ಪೇಶ್ವೆಯ ಕುಲದಲ್ಲಿ ಜನ್ಮ, ತಂದೆಯ ವಿಖ್ಯಾತಕೀರ್ತಿ, ಸ್ವಂತದ ಪರಾಕ್ರಮ, ಅತುಲ ವೈಭವ, ಅಮರ್ಯಾದಿತವಾದ ಸೈನ್ಯ, ಅರಸೊತ್ತಿಗೆ, ದಿವ್ಯವಾದ ಶರೀರಸಂಪತ್ತು, ತಾರುಣ್ಯದಭರ ಇವೆಲ್ಲವುಗಳ ಪ್ರಾಪ್ತಿಯಾದ ಬಳಿಕ, ಮನುಷ್ಯನು ಗರ್ವಿಷ್ಠನಾದರೇನಾಶ್ಚರ್ಯ? ಆಗದಿದ್ದರೆ ಮಾತ್ರ ಆಶ್ಚರ್ಯವೆಂದು ಹೇಳಬಹುದು.

ಹೀಗೆ ಭಾವುಸಾಹೇಬನು ಸ್ವತಃ ಸೈನ್ಯವಸಾಗಿಸಿಕೊಂಡು ಮುಂದಕ್ಕೆ ಬರುವ ವರ್ತಮಾನವನ್ನು ಕೇಳಿ ಮಲ್ಹಾರರಾವಹೋಳಕರನು—''ಸಾಹೇಬ, ನೀವು ಹೀಗೆ ಮೊದಲೇ ಮುಂದಕ್ಕೆ ಬರತಕ್ಕದ್ದಲ್ಲ; ವೈರಿಗಳು ಯೋಗ್ಯತಾಸಂಪನ್ನರಿರುವರು. ನಜೀಬಉದ್ದವಲಾ, ಸುಜಾಉದ್ದವಲಾ, ಅಹಮ್ಮದಖಾನಲಂಗಡಾ, ಅಹಮ್ಮದಶಹಾ ಅಬದುಲ್ಲಾ ಇವರೇನು ಸಾಮಾನ್ಯ ಪುರುಷರಲ್ಲ! ತಮ್ಮಂಥ ಶ್ರೇಷ್ಠ ಪುರುಷರು ಈರ್ಷೆಗೆ ಬಿದ್ದು ಮುಂದಕ್ಕೆ ಬರುವದು ಹಿತವಲ್ಲ. ಆದ್ದರಿಂದ, ಸಾಹೇಬರವರು ಮಾಳವಾಪ್ರಾಂತದಲ್ಲಿ ತಳವೂರಿ ನಿಂತುಕೊಂಡು, ಬರಿಯಸೈನ್ಯವನ್ನಷ್ಟು ಮುಂದಕ್ಕೆ ಕಳಿಸಿಕೊಡಬೇಕು. ಸಾಹೇಬರವರ ಒಗರಿನಿಂದಲೇ ನಾವು ಕಾರ್ಯವನ್ನು ಸಾಧಿಸುವೆವು'' ಎಂದು ಸ್ಪಷ್ಟವಾಗಿ ಹೇಳಿಕಳಿಸಿದನು. ಅದಕ್ಕೆ ಬಳವಂತರಾವ ಮೇಹೇಂದಳೆ ಎಂಬ ತರುಣನು ಭಾವೂ ಸಾಹೇಬನಿಗೆ–ಸಾಹೇಬ, ಸಿಂದೆ– ಹೋಳಕರರು ಇತ್ತಕಡೆ ಬಹುದಿವಸ ಸ್ವತಂತ್ರವಾಗಿ ವ್ಯವಹರಿಸಿ ಅರಸರಾಗಿರುವರು; ಅಂದಬಳಿಕ ನಾವು ಬಂದದ್ದು ಅವರಿಗೆ ಹ್ಯಾಗೆ ಸಹನವಾಗಬೇಕು? ಅವರು ನಮ್ಮನ್ನು ಹೀಗೆ ತಡೆಯತಕ್ಕದ್ದೇ ಸರಿ. ಭಾವುಸಾಹೇಬ, ತಮ್ಮ ಯೋಗ್ಯತೆಯೇನು ಸಾಮಾನ್ಯವಾದದ್ದಲ್ಲ. ತಮ್ಮ ಪುಣ್ಯಪ್ರತಾಪದ ಮುಂದೆ ಅಬದಾಲಿಯ ಪಾಡೇನು? ತಮಗೆ ಎದುರಾಗುವ ಧೈರ್ಯವು ಅವನಿಗೆ ಸರ್ವಥಾ ಬರಲಾರದು. ಈ ಮಾತು ತಾವು ಸೆರಗಿಗೆ ಗಂಟುಹೊಡೆದು ನೆನಪಿಟ್ಟುಕೊಳ್ಳಬೇಕು; ಅಂದ ಬಳಿಕ ಹೋಳಕರನೇನು ಹೇಳುವನು? ನಾವು ಹೀಗೆಯೇ ಸಾಗಿ ದಿಲ್ಲಿಯವರೆಗೆ ಹೋಗೋಣ,'' ಎಂದು ಹೇಳಿದನು. ''ವಿನಾಶಕಾಲೇ ವಿಪರೀತಬುದ್ಧಿಃ'' ಎನ್ನುವಂತೆ ಸದಾಶಿವರಾಯನು ಮೇಹೇಂದಳೆಯ ಮಾತನ್ನು ಕೇಳಿ ಹಾಗೆಯೇ ಮುಂದಕ್ಕೆ ಸಾಗಿಹೋಗಹತ್ತಿದನು. ಈ ಸುದ್ದಿಯನ್ನು ಕೇಳಿ ಮತ್ತೆ ಹೋಳಕರನು ಭಾವುಸಾಹೇಬನಿಗೆ—''ಮಾಳವಪ್ರಾಂತದಲ್ಲಿ ತಳವೂರಿ ನಿಂತು ಕೊಳ್ಳಬೇಕೆಂದು ನಾನು ಬರೆದಿರಲು, ನೀವು ಮುಂದಕ್ಕೆ ಯಾಕೆಬಂದಿರಿ? ಇದರಮೇಲಿಂದ ನೋಡುತ್ತಿರಲು, ನಿಮ್ಮ ಸುತ್ತುಮುತ್ತು ನೆರೆದಿರುವ ತರುಣರೇ ನಿಮಗೆ ಹಿತಕರ್ತರಾಗಿ ತೋರುವಂತೆ ಕಾಣುತ್ತದೆ. ನಾವು ವೃದ್ಧರು, ಅರವತ್ತು ವರ್ಷದ ಅರವು–ಮರವು ನಮಗಾಗಿರುವದು. ನಾವು ಇಲ್ಲಿಯವರೆಗೆ ಮಾಡಿದ್ದೆಲ್ಲ ಸಾಹೇಬರವರ ಅನಹಿತಕ್ಕಾಗಿಯೇ ಇರುವದು. ಇರಲಿ, ಇನ್ನು ಎಲ್ಲರೂ ಕೂಡಿ ಸ್ವರಾಜ್ಯದ ಹಿತವನ್ನು ಸಾಧಿಸಬೇಕು.'' ಎಂದು ಬರೆದನು.

ಹೀಗೆ ಹೋಳಕರನು ಸ್ಪಷ್ಟವಾಗಿ ಬರೆದದ್ದನ್ನು ನೋಡಿ ಭಾವುಸಾಹೇಬನು ವಿಠ್ಠಲಶಿವದೇವವಿಂಚೂರಕರನ ಅಭಿಪ್ರಾಯವನ್ನು ವಿಚಾರಿಸಿದನು. ಅದಕ್ಕೆ ವಿಂಚೂರಕರನು—

''ಸಾಹೇಬ, ಸಂಗಡ ಹೆಂಡಿರುಮಕ್ಕಳು ಬಂದಿರುವರು. ಅದರಂತೆ, ನಿಮ್ಮ ರಾಜ್ಯವು ನಿರ್ಭಯವಾದದ್ದೆಂದು ತಿಳಿದು ಎಷ್ಟೋ ಸರದಾರರ ಕುಟುಂಬದವರೂ ಕಾಶಿಯ ಯಾತ್ರೆಗಾಗಿ ಹೊರಟಿರುವರು. ಶತ್ರುವಿನ ಪ್ರಾಬಲ್ಯ ಬಹಳ. ಪ್ರಸಂಗವು ಹೀಗೆಯೇ ಬಂದೀತೆಂದು ಹೇಳುವ ಹಾಗಿಲ್ಲ; ಆದ್ದರಿಂದ ಮಲ್ಹಾರರಾಯರು ಸೂಚಿಸಿದಂತೆ ಸಾಹೇಬರವರು ಪಾಳಯಬಿಟ್ಟುಕೊಂಡು ಇಲ್ಲಿಯೇ ಇರಬೇಕು.'' ಎಂದು ಹೇಳಿದನು. ಆದರೆ, ವಿಂಚೂರಕರನು ಸಿಂದೆ, ಹೋಳಕರರಂತೆ ಉತ್ತರಹಿಂದುಸ್ಥಾನದಲ್ಲಿರತಕ್ಕ ಸರದಾರನಾದದ್ದರಿಂದ, ಆತನ ಮಾತುಗಳು ಭಾವೂಸಾಹೇಬನಿಗೆ ವಿಕಲ್ಪವಾಗಿ ತೋರಿದವು. ಉತ್ತರಹಿಂದುಸ್ಥಾನದ ಈ ಸರದಾರರ ಗುಟ್ಟೆಲ್ಲ ಒಂದೇ ಇರುವದೆಂದು ಆತನು ತಿಳಿದು, ವಿಂಚೂರಕರನಮಾತಿಗೆ ಲಕ್ಷಗೊಡದೆ ನಗೆಯಾಡಿ ಮುಂದಕ್ಕೆ ಸಾಗಿದನು. ಮುಂದೆ ಗಂಭೀರಾನದಿಯ ತೀರದಲ್ಲಿ ಆಗ್ರಾಪಟ್ಟಣದ ಹತ್ತರ ಭಾವುಸಾಹೇಬನಿಗೂ, ಹೋಳಕರನಿಗೂ ಭೆಟ್ಟಿಯಾಯಿತು. ಆಗ ಹೋಳಕರನು ಭಾವುಸಾಹೇಬನ ಹಂಗು ಇಡದೆ ನೆರೆದ ಸಭೆಯಲ್ಲಿ ಗರ್ಜಿಸಿ—''ಭಾವುಸಾಹೇಬ, ನದಿಯ ಆಚೆಯಲ್ಲಿ ಇರಬೇಕೆಂದು ನಾನು ಪತ್ರಬರೆದಿರುವಾಗೆ, ನದಿಯದಾಟಿ ಬರಲಿಕ್ಕೆ ಕಾರಣವೇನು? ಸುತ್ತಲೆ ನೆರೆದಿರುವ ತರುಣರು ತೀರಬುದ್ಧಿಗೇಡಿಗಳಿರುವರು; ಖುದ್ದಸವಾರಿಯನ್ನು ಇಲ್ಲಿಯವರೆಗೆ ಕರತಂದು ಸಂಕಟಕ್ಕೆ ಗುರಿಮಾಡಿದರು. ಇನ್ನು ಸಂಕಟವನ್ನು ತಪ್ಪಿಸಲಿಕ್ಕೆ ಯತ್ನವಿಲ್ಲ'' ಎಂದು ಹೇಳಿದನು. ಹಿತಹಚ್ಚಿಕೊಳ್ಳದವರಿಗೆ ಏನು ಹೇಳಿದರೆ ಏನು ಪ್ರಯೋಜನವಾಗುವದು? ಹಣೆಕೊಯ್ದು ಮಣೆ ಮಾಡಿದರೂ ಅವರು ಕೇಳುವರೇ? ಅವರ ವಿಕಲ್ಪವು ಮಾತ್ರ ಹೆಚ್ಚಾಗುವದು!

## ಅವಿಚಾರ

ಗರ್ವಿಷ್ಠನಾದ ತರುಣಭಾವುವಿಗೆ ಹೋಳಕರನ ಆಲೋಚನೆಯು ಸರಿಬೀಳಲಿಲ್ಲ. ಹೇಳಿ ಹೇಳಿದಂತೆ ಹೋಳಕರನ ವಿಷಯದ ಕುಭಾವನೆಯು ಮಾತ್ರ ಆತನಲ್ಲಿ ಹೆಚ್ಚುತ್ತ ಹೋಯಿತು. ಹೋಳಕರನೂ ಮನಸ್ಸು ತೆಗೆಯಹತ್ತಿದನು. ಇಂಥ ಅವಿಚಾರದ ಕೃತಿಗಳು ಭಾವುಸಾಹೇಬನಿಂದ ಒಂದರಹಿಂದೊಂದು ಘಟಿಸುತ್ತ ಹೋದವು. ದಿಲ್ಲಿಯು ಕೈಸೇರಿದ ಬಳಿಕಂತು ಸದಾಶಿವ ರಾಯನ ಗರ್ವಕ್ಕೆ ಮತ್ತಿಷ್ಟು ಕಳೆಯೇರಿತು. ಬಾದಶಾಹಿಯ ಸಿಂಹಾಸನದ ಮೇಲೆ ವಿಶ್ವಾಸ ರಾಯನನ್ನು ಕುಳ್ಳಿರಿಸುವ ವಿಚಾರವು ನಡೆಯಿತು. ವಜೀರಿಯ ಕೆಲಸವನ್ನು ಸುಜಾಉದ್ದೌಲನಿಗೆ ಕೊಡ ಬೇಕೆಂದು ಮಾಡಿದರು. ಇವೆಲ್ಲ ಅವಿಚಾರದ ಕೆಲಸಗಳೇ ಸರಿ; ಯಾಕಂದರೆ, ಇದರಿಂದ ಸಿಂದೆ, ಹೋಳಕರರ ಮನಸ್ಸಿಗೆ ಸಮಾಧಾನವಾಗಿ ಅಂತಃಕಲಹಕ್ಕೆ ಆಸ್ಪದವು ದೊರೆಯಿತು. ಬಾದಶಾಹಿಯ ಮಾಂಡಲಿಕ ರಾಜರಿಗೆ ಇದು ರಾಜದ್ರೋಹದ ಕೆಲಸವಾಗಿ ತೋರಿತು. ಮುಂದೆ ಕೈಯೊಳಗಿನ ರೋಖ ಸಿಲಕು ತೀರಿಹೋಗಿ ವೆಚ್ಚವು ನಡೆಯದಾಗಲು, ಭಾವುಸಾಹೇಬನು ಹೆಚ್ಚಿನ ಅವಿಚಾರದ ಕೆಲಸಕ್ಕೆ ಕೈ ಹಾಕಿದನು. ಬಾದ

ಶಹನ ಸಿಂಹಾಸನಕ್ಕೂ, ಕಚೇರಿಗೂ ಅಂಗೈದಪ್ಪಾದ ಬೆಳ್ಳಿಯ ತಗಡಿನ ಛತ್ತು ಕೂಡ್ರಿಸಿದ್ದರು. ಅದರ ಮೇಲಿನ ಬಂಗಾರದ ವರಕಿನ ಕೌಶಲ್ಯದ ಕೃತಿಯು ಜನರ ಚಿತ್ತಹರಣ ಮಾಡುತ್ತಿತ್ತು. ದುಡ್ಡಿಗೆ ಜೋತಿದ್ದ ಭಾವುಸಾಹೇಬನ ದೃಷ್ಟಿಯು ಆ ಬೆಳ್ಳಿಯ ಛತ್ತಿನಮೇಲೆ ಹೋಯಿತು. ತಗಡುಉಚ್ಚಿಸಿ ಟಂಕಸಾಲೆಯಲ್ಲಿ ಅದರ ನಾಣ್ಯಗಳನ್ನು ಹೊಯಿಸಿ ದಂಡಿನ ಸಂಬಳ-ಸಾರಿಗೆ ತೀರಿಸಬೇಕೆಂದು ಆತನು ಮಾಡಿದನು. ಆಗ ಬಾದಶಾಹಿಯ ಸ್ವಾಮಿನಿಷ್ಠ ಮಾಂಡಲಿಕನಾದ ಸುರಜಮಲ್ಲ ಜಾಟನು ಬೇಡಿಕೊಂಡದ್ದೇ ನೆಂದರೆ-ಭಾವುಸಾಹೇಬ, ತಾವು ಬಾದಶಾಹಿಯ ಸಿಂಹಾಸನದ ಮರ್ಯಾದೆಯನ್ನು ಕಾಯಲೇಬೇಕು. ಪೂರ್ವದಲ್ಲಿ ನಾದಿರಶಹನು ಸಿಂಹಾಸನವನ್ನು ಸ್ವಾಧೀನಪಡಿಸಿಕೊಂಡನು; ಆದರೆ ಆತನು ಅದರ ಬಂಗಾರದ ಕಳಸವನ್ನು ಒಯ್ದನಲ್ಲದೆ, ಛತ್ತನ್ನು ಮುಟ್ಟಲಿಲ್ಲ, ಆಮೇಲೆ ಕಂದಹಾರದ ಬಾದಶಹನಾದ ಅಬದುಲಅಲಿಯು ಎರಡುಸಾರೆ ದಂಡೆತ್ತಿಬಂದು ಹಾವಳಿ ಮಾಡಿ ಹೋದನು. ಆತನು ತೋಫು ಮೊದಲುಮಾಡಿ ಎಲ್ಲಸಾಮಾನು ಒಯ್ದರೂ ಸಿಂಹಾಸನದ ಅಪಮಾನ ಮಾಡಲಿಲ್ಲ, ಸದ್ಯಕ್ಕೆ ನಿಮ್ಮ ಬಳಿಯಲ್ಲಿ ಬಾದಶಹನ ಉಮರಾವನಾದ ನಾನು ಇರುತ್ತೇನೆ. ನಮ್ಮ ಕಣ್ಣೆದುರಿಗೆ ಇಂಥ ಕೆಲಸವಾಗಬಾರದು. ಇದರಿಂದ ನಿಮಗೆ ಯಶಃಪ್ರಾಪ್ತಿ ಯಾಗಲಿಕ್ಕಿಲ್ಲ, ಸ್ವಾಮಿದ್ರೋಹದ ಪಾತಕವೂ ತಟ್ಟೀತು; ಆದ್ದರಿಂದ ಈಗ ನಿಮ್ಮನ್ನು ಬೇಡಿ ಕೊಳ್ಳುವದೇನಂದರೆ, ದಯಮಾಡಿ ನನ್ನ ಇಷ್ಟು ಮಾತನ್ನು ನಡಿಸಿಕೊಡಬೇಕು. ನಿಮಗೆ ವೆಚ್ಚಕ್ಕೆ ತೊಂದರೆಯಾಗಿದ್ದರೆ, ನನಗೆ ಅಪ್ಪಣೆ ಯಾಗಬೇಕು. ಐದುಲಕ್ಷ ರೂಪಾಯಿಗಳನ್ನು ಕೊಡುವೆನು.

ಉದಾತ್ತ ವಿಚಾರದ ಸ್ವಾಮಿನಿಷ್ಠ ಜಾಟನ ಈ ಸಮಂಜಸ ಮಾತು ನಡಿಸುವ ಸುಬುದ್ಧಿಯು ಆ ತರುಣ ಮದಾಂಧಮರಾಟನಿಗೆ ಆಗಲಿಲ್ಲ. ಜಾಟನ ಮಾತಿನಿಂದ ಭಾವುಸಾಹೇಬ, ಮೇಹೇಂದಳೆ ಮೊದಲಾದವರ ಬಾಯಲ್ಲಿ ಮತ್ತಿಷ್ಟು ನೀರು ಒಡೆದವು. ತಗಡು ಉಚ್ಚಿಸಿದರೆ ಇದಕ್ಕೂ ಹೆಚ್ಚು ಉತ್ಪನ್ನವಾಗುವದೆಂಬ ದುರಾಶೆಗೆ ಅವರು ಒಳಗಾದರು. ಕಡೆಗೆ ಹಟಮಾರಿ ಭಾವು ಸಾಹೇಬನು ದ್ರವ್ಯಲೋಭದಿಂದ ಛತ್ತಿನ ತಗಡು ಉಚ್ಚಿಸಿದನು. ಆಶ್ಚರ್ಯದ ಸಂಗತಿಯೇ ನಂದರೆ, ತಗಡಿನ ಬೆಲೆಯು ಮೂರು ಲಕ್ಷಕ್ಕಿಂತ ಹೆಚ್ಚು ಆಗಲಿಲ್ಲ! ಆಗ ಮತ್ತೆ ಸುರಜಮಲ್ಲನು ಭಾವುಸಾಹೇಬನಿಗೆ-''ಭಾವು ಸಾಹೇಬ, ನಾವು ಬಳಿಯಲ್ಲಿರುತ್ತಿರಲು, ಸಿಂಹಾಸನದ ವಿಧ್ವಂಸಮಾಡಿಸಿದಿರಿ. ಇದರಿಂದ ನಮಗೆ ಕಲಂಕವುಂಟಾಯಿತು. ನಮ್ಮ ವಿನಂತಿಯನ್ನೆಲ್ಲ ಸಾಹೇಬರವರು ಅಲ್ಲಗಳೆದುಬಿಡುವಿರಿ! ಹಿಂದುಧರ್ಮವ ಮುಣಗಿಸಬೇಕೆಂದು ನಮ್ಮ ಮನಸ್ಸಿ ನಲ್ಲಿರುವದಿಲ್ಲ, ರಾಜ್ಯದಲ್ಲಿ ಸ್ವಾಸ್ಥ್ಯವುಂಟಾಗಬೇಕೆಂದು ನಮ್ಮ ಮನಸ್ಸಿನಲ್ಲಿರುತ್ತದೆ. ಯಮುನೆಯ ಉದಕವನ್ನು ಹಿಡಿದು ನಾವೂ, ನೀವೂ ಮಿತ್ರತ್ವದ ಶಪಥವಹಿಸಿದ್ದರ ಪರಿಣಾಮವು ಇದೇಯೋ! ಈಗಾದರೂ ನಮ್ಮ ಮಾತು ಕೇಳುವಹಾಗಿದ್ದರೆ, ಛತ್ತಿನ ತಗಡನ್ನು ಪುನಃ ಮೊದಲಿನಂತೆ ಕೂಡಿಸಿರಿ. ಅದರಿಂದ ನಿಮಗೆ ನಿಶ್ಚಯವಾಗಿ ಜಯಪ್ರಾಪ್ತಿಯಾಗುವದು. ಸಾಹೇಬ, ನನ್ನ ಮತ್ತೊಂದು ವಿನಂತಿಯೇನಂದರೆ, ಗಾಜುದ್ದೀನನ ವಜೀರಿಯ ಪದವಿಯನ್ನು ಪುನಃ ಗಾಜುದ್ದೀನನಿಗೆ ಕೊಡಬೇಕು. ಈ ಸಂಬಂಧದಿಂದ ಸಿಂದೆ-ಹೋಳಕರರು, ಹಾಗು ನಾನು

ಪ್ರಮಾಣಬದ್ಧರಾಗಿರುವೆವು. ಮುಂದೆ ನಮ್ಮ ಸಣ್ಣ-ಪುಟ್ಟ ವಿನಂತಿಗಳನ್ನು ಮನ್ನಿಸುತ್ತಹೋದರೆ, ನಾವು ಸರ್ವಾಂಶದಿಂದ ನಿಮ್ಮವರೇ ಇರುವೆವು. ನಿಮಗೆ ಹತ್ತುವಷ್ಟು ಕಾಳು-ಕಡಿ ಮೊದಲಾದ ಸಾಹಿತ್ಯಗಳನ್ನು ಒದಗಿಸಿಕೊಡುವೆವು. ನೀವು ದಿಲ್ಲಿಯನ್ನು ಬಿಟ್ಟು ಮುಂದಕ್ಕೆ ಹೋಗಬೇಡಿರಿ. ಇಲ್ಲಿಯೇ ಇದ್ದು ಎಲ್ಲ ಕಾರಭಾರವನ್ನೂ, ಮಸಲತ್ತುಗಳನ್ನೂ ನಡಿಸಿ ನಮಗೆ ಅಪ್ಪಣೆ ಕೊಡುತ್ತ ಹೋಗಿರಿ. ಕದಾಚಿತ್, ಪುಂಜಪುರದವರ ಪಾರಿಪತ್ಯಮಾಡುವದು ನಿಮ್ಮ ಮನಸ್ಸಿನಲ್ಲಿದ್ದರೆ, ಇಲ್ಲಿಯೇ ಇದ್ದು ಹಲವು ಪ್ರಕಾರದಿಂದ ಮಾಡಿರಿ; ಆದರೆ ನೀವು ವೈರಿಗಳ ಅಳವಿನಲ್ಲಿ ಸಿಗ ಬೇಡಿರಿ. ಎಂದು ಉತ್ತಮಪ್ರಕಾರದ ಆಲೋಚನೆಯನ್ನು ಹೇಳಿದನು; ಆದರೆ ಗರ್ವಿಷ್ಠನಾದ ಭಾವುಸಾಹೇಬನು ಅವಿಚಾರದಿಂದ ಸರಳಹೃದಯದ ಜಾಟನಿಗೆ ಪ್ರತ್ಯುತ್ತರವಾಗಿ ''ನಾವು ನಿಮ್ಮ ಬಲವನ್ನು ನಂಬಿ ದಕ್ಷಿಣವನ್ನು ಬಿಟ್ಟು ಬಂದಿರುವದಿಲ್ಲ. ನಮ್ಮ ಮನಸ್ಸಿಗೆ ಬಂದಂತೆ ನಾವು ಮಾಡುವೆವು. ಅದನ್ನು ನೋಡುವದು ನಿಮ್ಮಿಂದಾದರೆ ಇಲ್ಲಿ ಇರಬೇಕು, ಆಗದಿದ್ದರೆ ನಿಮ್ಮ ಸ್ಥಾನಕ್ಕೆ ನೀವು ಹೊರಟುಹೋಗಬೇಕು. ಅಬದಾಲಿಯ ಪಾರಿಪತ್ಯವಾದಬಳಿಕ ನಾವೂ, ನೀವೂ ನೋಡಿಕೊಳ್ಳೋಣವಂತೆ!'' ಎಂದನು. ಪ್ರಿಯ ವಾಚಕರೇ, ಬುದ್ಧಿ ಹೇಳುವವರ ಕೂಡ ಗುದ್ದಾಡುವ ಈ ರೀತಿಯನ್ನು ನೋಡಿದಿರಾ? ಎಂಥ ಅವಿಚಾರವಿದು! ಭಾವುವಿಗಾದರೂ ಏಕೆ ಅನ್ನಬೇಕು? ಭವಿತವ್ಯವನ್ನು ತಪ್ಪಿಸುವದು ಬ್ರಹ್ಮಾದಿಗಳಿಂದಲೂ ಆಗದು!

ಈ ಮೇರೆಗೆ ಭಾವೂಸಾಹೇಬನು ಯುಕ್ತಿಯುಕ್ತವಾದ ಯಾವಮಾತನ್ನೂ ನಡಿಸದೆ, ಬಾದಶಹನ ರತ್ನಖಚಿತವಾದ ಬಂಗಾರದ ಸಿಂಹಾಸನವನ್ನೂ, ದೊರೆತ ಬೆಳ್ಳಿಬಂಗಾರವನ್ನೂ ತಕ್ಕೊಂಡು ಬೆಳ್ಳಿಯ ಛತ್ತನ್ನು ಅಪಹರಿಸಿ ಕುಂಜಪುರದ ಕಡೆಗೆ ಸೈನ್ಯದೊಡನೆ ಸಾಗಿದನು. ಉತ್ತರ ಹಿಂದುಸ್ಥಾನದವರ ಯಾವಮಾತನ್ನೂ ನಡಿಸಲಿಕ್ಕಿಲ್ಲೆಂದು ಆತನೂ, ಆತನ ದಕ್ಷಿಣದ ಪರಿವಾರ ದವರೂ ನಿಶ್ಚಯಿಸಿದ್ದರೆಂದು ಹೇಳಬಹುದು. ಅವರು ಮೇವು-ಮಿಡಚಿಗಳ ಸಲುವಾಗಿ ಬಾದಶಾಹಿಯ ದೇಶವನ್ನು ಇಪ್ಪತ್ತು ಇಪ್ಪತ್ತೈದು ಹರದಾರಿಯವರೆಗೆ ಸುಲಿದು ಉಧ್ವಸ್ತ ಮಾಡಿದರು. ದುರಾಣಿ ಅಹಮ್ಮದಶಹನಿಗೆ ಅನ್ನಸಾಮುಗ್ರಿಯು ದೊರೆಯದಾಯಿತು. ಭಾವು ಸಾಹೇಬನ ಭಾಂಡಾರದಲ್ಲಿ ಏಳುಕೋಟಿ ರೂಪಾಯಿಗಳ ಸಂಗ್ರಹವಾಯಿತು. ಕುಂಜ ಪುರದೊಳಗಿನ ಬಾದಶಾಹೀ ಭಾಂಡಾರದೊಳಗಿನ ಧನವನ್ನು ಭಾವು ಸಾಹೇಬನು ಸುಲಿದನು. ಒಟ್ಟಿಗೆ ಮರಾಟರ ಭಾಂಡಾರದಲ್ಲಿ ಒಂಬತ್ತು ಕೋಟಿ ರೂಪಾಯಿಗಳ ಸಿಲಕು ಆಯಿತು. ಇತ್ತ ದುರಾಣಿ ಬಾದಶಹನ ಸೈನ್ಯದ ಬೀಡು ಯಮುನೆಯ ದಂಡೆಯಲ್ಲಿತ್ತು. ನಾವೆಗಳ ಪೂಲಿನ ಸಹಾಯದಿಂದ ಆತನ ಸೈನ್ಯವು ಯಮುನೆಯನ್ನು ದಾಟಿ ಇತ್ತಕಡೆಗೆ ಬರತೊಡಗಿತು. ಆಗ ಮರಾಟಾ ಸರದಾರರಾದ ವಿಂಚೂರಕರ, ಸಮಸೇರಬಹಾದ್ದರ, ಮಾಣಕೇಶ್ವರ, ಪವಾರ, ಗಾಯಕವಾಡ, ಸಿಂದೆ, ಗಾರದಿ ಎಂಬವರು ತೋಪುಗಳ ಹೊಡತದಿಂದ ಆ ಸೈನ್ಯದ ಸಂಹಾರ ಮಾಡತೊಡಗಿದರು. ಅದರಿಂದ ಶತ್ರುಗಳ ಸೈನಿಕರಲ್ಲಿ ಬಹುಜನರು ರಣಭೂಮಿಯಲ್ಲಿ ಮಡಿದರು. ಅಬದಾಲಿಯ ಮತ್ತೊಂದು ಸೈನ್ಯವು ಬಾವು ಸಾಹೇಬನ ದರ್ಪದ ಸವಿಗಂಡು ಹಿಂದಿರುಗಿ ಓಡತೊಗಿತು. ತನ್ನ ಸೈನ್ಯದ ಈ ಗತಿಯನ್ನು ನೋಡಿ ಅಬದಾಲಿಯು ವಿಚಾರ

ಮಗ್ನನಾದನು. ಆತನು ತನ್ನ ಮಿತ್ರರಾದ ಸುಜಾಉದ್ದೌಲನೇ ಮೊದಲಾದವರ ಸಂಗಡ ಆಲೋಚಿಸ ತೊಡಗಿದನು. ಆಗ ಮನಸೂರ ಅಲಿಯು ಅಬದಾಲಿಯನ್ನು ಕುರಿತು– ''ಮರಾಟರು ಒಳ್ಳೇ ರಣಶೂರರು. ಅವರೆದುರಿಗೆ ಎದೆಗೊಟ್ಟು ನಿಲ್ಲುವದು ಸಾಮಾನ್ಯ ಕೆಲಸವಲ್ಲ. ಮೇಲೆ ದುಷ್ಕಾಳ ಬಿದ್ದಿರುವದು. ನಮ್ಮ ಅನ್ನಸಂಗ್ರಹವು ತೀರುತ್ತಬಂದಿರುವದು. ಮರಾಟರಿಗೆ ಅನ್ನದ ಕೊರತೆಯಿಲ್ಲ, ಮೇಲಾಗಿ ಬಾದಶಹನ ಭಾಂಡಾರವು ಅವರ ಕೈಸೇರಿತು. ಹೋದಲ್ಲಿ ಅವರಿಗೆ ಜಯವೂ, ನಮಗೆ ಅಪಜಯವೂ ಪ್ರಾಪ್ತವಾಗುತ್ತಿರುವವು. ಯುದ್ಧದಲ್ಲಿ ಅವರ ಕೈ ಮುಂದಾಗಿರುವದು. ಹ್ಯಾಗೆ ಮಾಡಬೇಕು? ಏನು ಮಾಡಬೇಕು? ಎಂಥ ಹೊತ್ತು ಬಂದಿತಲ್ಲ!'' ಎಂದು ನುಡಿಯಲು, ಸುಜಾಉದ್ದೌಲನು–''ಸಂಧಾನಾರ್ಥವಾಗಿ ಭಾವೂ ಸಾಹೇಬನ ಕಡೆಗೆ ವಕೀಲನನ್ನು ಕಳಿಸಬೇಕೆ''ಂದು ಹೇಳಿದನು. ಬಳಿಕ ಬಹಳಹೊತ್ತು ಅರೆದಾಟವಾಗಿ, ಕಡೆಗೆ ಸಂಧಾನಾರ್ಥವಾಗಿ ವಕೀಲನನ್ನು ಕಳಿಸಬೇಕೆಂದು ಗೊತ್ತಾಯಿತು. ಆಮೇಲೆ ರಹಿಮತಖಾ, ರಸುಲಖಾಪಠಾಣ, ಮಣೆರಾಮರಜಪೂತ, ಮಹದಾಜಿಸುಭಾನರಾವ ಎಂಬ ನಾಲ್ವರು ವಕೀಲರನ್ನು ಸಂಧಾನಾರ್ಥವಾಗಿ ಭಾವುಸಾಹೇಬನ ಕಡೆಗೆ ಕಳಿಸಿದರು. ಅವರ ಸಂಗಡ ಒಂದು ಪತ್ರವನ್ನೂ, ನಜರಾಣೆಯನ್ನೂ ದುರಾಣಿಯು ಕಳಿಸಿದ್ದನು.

ಭಾವುಸಾಹೇಬನ ಮಲ್ಹಾರರಾವಹೋಳಕರ, ದಾಮಾಜಿ ಗಾಯಕವಾಡ, ಸಮಶೇರಬಹದ್ದೂರ, ಇಬ್ರಾಹಿಮಖಾನಗಾರದಿ, ವಿಂಚೂರಕರ, ಪವಾರ, ಬಾಳಕೃಷ್ಣಶಾಸ್ತ್ರಿ, ಮೇಹೇಂದಳೆ, ಬಾಬುರಾವಭಾನುಫಡಣವೀಸ, ಲಕ್ಷ್ಮಣರಾವಪಾನಸೆ, ಜನಕೋಜಿ ಸಿಂದೆ, ಮಹದಾಜಿ ಸಿಂದೆ, ಲಕ್ಷ್ಮಣಬಲ್ಲಾಳ ಮೊದಲಾದ ಸರದಾರರ ದರಬಾರ ನೆರೆಸಿ, ದುರಾಣಿಯ ಕಡೆಯಿಂದ ಬಂದ ವಕೀಲರನ್ನು ಕಾಣಿಸಿಕೊಂಡನು. ಶಹನಕಡೆಯಿಂದ ನಜರಾಣೆಯಾಗಿ ಬಂದ, ಆನೆ–ಕುದುರೆ– ಉಡುಗರೆ–ಅಲಂಕಾರ ಮೊದಲಾದವವನ್ನು ಆತನು ಸ್ವೀಕರಿಸಿದನು. ಬಳಿಕ ಬಂದಪತ್ರವನ್ನು ಒಡೆದುನೋಡಲು, ಅದರಲ್ಲಿ ಅಬದಾಲಿಯು ಒಗರಿನಿಂದ ಬರೆದದ್ದರ ತಾತ್ಪರ್ಯ ವೇನಂದರೆ–''ನೀವು ನಿಮ್ಮ ರಾಜ್ಯದ ಗಡಿ ದಾಟಿ ಮುಂದಕ್ಕೆ ಸಾಗಿಬಂದಿರಿ. ಪಂಜಾಬ, ಬಂಗಾಲ, ಅಂತರ್ವೇದಿ, ಮಾರವಾಡ ಇವು ಬಾದಶಹನ ರಾಜ್ಯದ ಭಾಗಗಳಾಗಿದ್ದು, ಅವುಗಳ ಮೇಲೆ ನೀವು ಕಣ್ಣು ಇಟ್ಟಿರುವಿರಿ. ಗುಜರಾಥಪ್ರಾಂತವನ್ನೂ ನೀವು ಸ್ವಾಧೀನಪಡಿಸಿಕೊಂಡಿರಿ. ದಿಲ್ಲಿಯ ಬಾದಶಾಹಿಯ ಸಿಂಹಾಸನವನ್ನೊಡೆದು, ಅದರ ಅಮರ್ಯಾದೆ ಮಾಡಿರುವಿರಿ. ಬಾದಶಹನು ನಮ್ಮನ್ನು ಸಹಾಯಕ್ಕಾಗಿ ಕರೆದಿರುವನು. ನೀವು ದಕ್ಷಿಣದ ರಾಜ್ಯವನ್ನು ಉಪಭೋಗಿಸಿ, ದಿಲ್ಲೀಪತಿಯ ಗೌರವವನ್ನು ಕಾಯತಕ್ಕದ್ದು; ಆದರೆ ನೀವು ಹಾಗೆ ನಡೆಯಲಿಲ್ಲ, ಆದರೂ ಆಗಲಿ. ಈಗ ದಿಲ್ಲೀಪತಿಯ ಕೈಯಿಂದ ದಂಡಯಾತ್ರೆಯ ವೆಚ್ಚವನ್ನು ಪಡೆದು ನೀವು ದಕ್ಷಿಣಕ್ಕೆ ಹೊರಟುಹೋಗತಕ್ಕದ್ದು. ಚಿತ್ತೂರ, ಜೋಧಪೂರ, ಜಯಪೂರ, ಉದೇಪೂರ ಅಜಮೀರ ಮೊದಲಾದ ಐವತ್ತೆರಡು ಜನರು ದಿಲ್ಲಿಯ ಬಾದಶಹನ ಮಾಂಡಲಿಕರಿರುತ್ತಾರೆ. ಅವರನ್ನು ವಶಮಾಡಿಕೊಂಡು ದಿಲ್ಲಿಯ ಬಾದಶಾಹಿಯನ್ನು ನೀವು ಸಂಪೂರ್ಣವಾಗಿ ಮುಣುಗಿಸುವ ಯತ್ನಮಾಡುತ್ತಿರುವಿರಿ; ಆದರೆ ಬಾದಶಹನ

ಮೇಲೆ ಶಸ್ತ್ರವೆತ್ತುವವರ ಶಾಸನಮಾಡುವದಕ್ಕಾಗಿಯೂ, ಅವರ ಉದ್ದಾಮತನದ ಕೃತಿಯನ್ನು ನಿಲ್ಲಿಸುವದಕ್ಕಾಗಿಯೂ ನಾವು ನಮ್ಮ ದೇಶವನ್ನು ಬಿಟ್ಟು ಸೈನ್ಯದೊಡನೆ ಇಲ್ಲಿಗೆ ಬಂದಿರುವೆವು. ನೀವು ದಕ್ಷಿಣದ ಆರುವರಿ ಸುಭೆಗಳನ್ನು ಆಕ್ರಮಿಸಿ, ಈಗ ಬಾದಶಾಹಿಯನ್ನು ಮುಣುಗಿಸುವ ಯೋಚನೆಯಲ್ಲಿರುವಿರಿ. ಇದರಿಂದ ನಿಮಗೆ ಹಿತವಾಗಲಿಕ್ಕಿಲ್ಲ. ಬಾದಶಹನು ಕೃಪಾವಂತನಾಗಿ ನಿಮಗೆ ಪೂರ್ವದಲ್ಲಿ ೬ ಸುಭೆಗಳ ಸರದೇಶಮುಖಿಯ ಸನದು ಕೊಟ್ಟಿರುವನು. ಅವನ್ನು ಉಪಭೋಗಿಸುತ್ತ ಸುಖವಾಗಿ ಇರಬೇಕು. ನರ್ಮದೆಯ ದಕ್ಷಿಣತೀರದಿಂದತ್ತ ಕಡೆಯ ಗಡಿಯನ್ನು ರಕ್ಷಿಸಿಕೊಂಡು ಇರಬೇಕು. ಮೇವು– ಮಿಡಚಿಯ ಸಲುವಾಗಿ ಎರಡುಕೋಟಿ ರೂಪಾಯಿ, ದಂಡಯಾತ್ರೆಯ ವೆಚ್ಚದಸಲುವಾಗಿ ಒಂದುಕೋಟಿ ರೂಪಾಯಿ ಕೂಡಿ ಮೂರು ಕೋಟಿ ರೂಪಾಯಿಯ ಬಾದಶಾಹಿಯ ಹೊಸ ಸನದು ಮಾಡಿಕೊಡುವೆವು; ಅದನ್ನು ತಕ್ಕೊಂಡು ಉಳಿದ ಮಾಂಡಲಿಕರಂತೆ ನೀವೂ ಇರಬೇಕು. ಇದಕ್ಕೆ ನಿಮ್ಮ ಒಪ್ಪಿಗೆಯಿದ್ದರೆ, ನಮ್ಮ ನಿಮ್ಮ ಒಡಂಬಡಿಕೆಯಾಗುವದು. ಇದಕ್ಕೆ ಒಪ್ಪಿ ಕೊಳ್ಳುತ್ತಿದ್ದರೆಯೇ ನೀವು ಉತ್ತರಕಳಿಸಬೇಕು; ಅಂದರೆ ಬಾದಶಹರವರಿಗೆ ಹೇಳಿ ಎಲ್ಲ ವ್ಯವಸ್ಥೆಮಾಡಿಕೊಡುವೆವು. ಇದಕ್ಕೆ ಒಪ್ಪಿಕೊಳ್ಳದಿದ್ದರೆ ಮಾತ್ರ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ.

ಮರಾಟರ ಉತ್ಕರ್ಷಸ್ಥಿತಿಯನ್ನು ಮನಸ್ಸಿನಲ್ಲಿ ತಂದರೆ, ಅಬದಾಲಿಯ ಈ ಪತ್ರವು ಒರಟತನದ್ದಾಗಿಯೂ ಬೆದರಿಕೆ ತೋರಿಸುವಂತಹದಾಗಿಯೂ ತೋರುವದು. ಭಾವು ಸಾಹೇಬನಂತು ಅದನ್ನು ಓದಿಸಿ ಕೇಳಿ ನಖಶಿಖಾಂತವಾಗಿ ಉರಿಯಹತ್ತಿದನು. ಆದರೆ ತನಗಾದ ಸಂತಾಪವನ್ನು ಆತನು ಹೊರಗೆಡವದೆ–''ಇದರ ಉತ್ತರವನ್ನು ಬೇಗನೆ ನಮ್ಮ ವಕೀಲರ ಮುಖಾಂತರವಾಗಿ ಕಳಿಸುವೆನೆಂ''ದು ಹೇಳಿ, ಬಂದ ವಕೀಲರನ್ನು ಮರ್ಯಾದೆಯಿಂದ ಕಳಿಸಿಕೊಟ್ಟನು. ಆಮೇಲೆ ಮಸಲತ್ತಿಗೆ ಆರಂಭವಾಯಿತು. ಅಬದಾಲಿಯ ಕರಾರುಗಳಿಗೆ ಒಪ್ಪಿಕೊಳ್ಳದೆ ಆತನನ್ನು ಯುದ್ಧದಿಂದಲೇ ಹಣ್ಣಿಗೆ ತರಬೇಕೆಂದು ಭಾವೂಸಾಹೇಬನೂ, ಮೇಹೇಂದಳೆಯೂ ಅಭಿಪ್ರಾಯಪಟ್ಟರು; ಆದರೆ ಆ ಮಾತು ಹೋಳಕರನ ಮನಸ್ಸಿಗೆ ಬರಲಿಲ್ಲ. ಆತನು–''ಭಾವು ಸಾಹೇಬ, ದುರಾಣಿಗಳು ಗುಡ್ಡಗಾಡ ಜನರು. ಅವರೊಡನೆ ಕಾದಿ ನಾವು ತಡೆಯಲಾರೆವು. ಸದ್ಯಕ್ಕೆ ನಮ್ಮ ಸ್ಥಿತಿಯು ತೀರ ದುರ್ಬಲವಾಗಿರುವದು. ಹಟಮಾರಿತನವು ನೆಟ್ಟಗಲ್ಲ. ಈಗ ಆತನ ಕರಾರುಗಳಿಗೆ ಒಪ್ಪಿಕೊಂಡು ಮರ್ಯಾದೆಯಿಂದ ಹಿಂದಕ್ಕೆ ಸರಿದು ಹೋಗುವದು ನನಗೆ ನೆಟ್ಟಗೆ ಕಾಣುತ್ತದೆ. ಈ ವರ್ಷ ಉಜ್ಜಯಿನಿಯಲ್ಲಿ ಸೈನ್ಯದ ಬೀಡು ಬಿಟ್ಟುಕೊಂಡು ಇರೋಣ. ಮುಂದಿನ ವರ್ಷ ಈ ಅಬದಾಲಿಯನ್ನು ನೋಡಿಕೊಳ್ಳೋಣವಂತೆ. ಪುಣೆಗೆ ಹೋಗುವದು ಮನಸ್ಸಿಗೆ ಬಾರದಿದ್ದರೆ, ಇತ್ತಕಡೆಯಲ್ಲಿ ಸರ್ವರೂ ಕ್ಷಿಪ್ರಾನದಿಯ ದಂಡೆಯಲ್ಲಿ ಇರೋಣವಂತೆ. ಮದ್ದು, ಗುಂಡು, ಆನೆ, ಕುದುರೆ, ಒಂಟೆ, ಎತ್ತು, ತೋಫಖಾನೆ, ಇವು ತಿಂದುಂಡು ಪರಿಪುಷ್ಟವಾದವೆಂದರೆ, ಮುಂದಿನ ವರ್ಷ ಬರಿಯ ಅಬದಾಲಿಯದೇ ಏಕೆ, ರೋಮ–ಶಾಮದೇಶಗಳ ಸಮಾಚಾರವನ್ನೂ ತೆಗೆದುಕೊಳ್ಳೋಣವಂತೆ. ಭಾವೂಸಾಹೇಬ, ಪ್ರಸಂಗಬಂದರೆ, ಹಿಂದುಗಳು ಹೋಗಿ ಮುಸಲ್ಮಾನರಾಗೋಣ; ಆದರೆ ಛತ್ರಪತಿಯ ಮಾನ

ವನ್ನು ಕಾಯ್ದುಕೊಳ್ಳೋಣ! ಈ ಮಾತಿನಲ್ಲಿ ಎಷ್ಟು ಮಾತ್ರವೂ ಅಂತರವಾಗದು. ನಿಮ್ಮ ಸೇವೆಯಲ್ಲಿಯೇ ಕರಿಯ ಕೂದಲುಗಳು ಬೆಳ್ಳಗಾಗಿರುವ ನನ್ನಂಥ ಮುದುಕ ಸರದಾರರು ಹಲವರು ಇರುವರು. ಅವರ ಮಾತನ್ನು ತಾವು ಕೇಳಲೇಬೇಕು. ನಿಮ್ಮ ಹಟವನ್ನೇ ನಡಿಸಿದರೆ ಸ್ವರಾಜ್ಯಕ್ಕೆ ಹಾನಿತಟ್ಟೀತು. ಹಿಂದಕ್ಕೆ ನಿಮ್ಮ ಹಿರಿಯರಾದ ಅಪ್ಪಾಸಾಹೇಬರವರು (ಚಿಮಣಾಜಿ ಅಪ್ಪಾ) ವಸಯೀಕೋಟೆಯನ್ನು ಸ್ವಾಧೀನಪಡಿಸಿಕೊಳ್ಳುವದಕ್ಕಾಗಿ ಭೀಷ್ಮ ಪ್ರತಿಜ್ಞೆಯಂಥ ಘೋರ ಪ್ರತಿಜ್ಞೆಯನ್ನು ಮಾಡಿದ್ದರು; ಆಗ್ಗೆ ಅವರು ನನ್ನ ಮಾತು ಕೇಳಿದ್ದರಿಂದ ಈ ದಿವಸ ಗಳನ್ನು ನಾವು ನೋಡಿದೆವು. ಅದರಂತೆ, ಈಗ ನೀವಾದರೂ ನನ್ನ ಮಾತು ನಡಿಸಬೇಕೆಂದು ಈ ಬುಜರುಖ ಸೇವಕನ ಪ್ರಾರ್ಥನೆಯಿರುವದು. ಈ ಕಾಲದಲ್ಲಿ ನನಗೆ ಯೋಗ್ಯತೋರಿ ದ್ದನ್ನು ಅರಿಕೆಮಾಡಿ ಕೊಂಡಿರುವೆನು. ಇದರ ಮೇಲೆ ಶಾಸ್ತ್ರಿಗಳು ವಯೋವೃದ್ಧರಿರುವರು; ತಾವು ಜ್ಞಾನವೃದ್ಧರಿರುವಿರಿ. ತಮ್ಮ ಮತವನ್ನು ಮುಂದಿಡಬಹುದು; ಅನ್ನಲು, ಕೃಷ್ಣಶಾಸ್ತ್ರಿಗಳು ಸಾಮ–ದಾಮಗಳಿಂದ ಕಾರ್ಯಮಾಡಿಕೊಳ್ಳುವದೇ ವಿಹಿತವೆಂದು ಅಭಿಪ್ರಾಯಪಟ್ಟರು.

ಬಳಿಕ ಸರ್ವಾನುಮತದಿಂದ ಅಬದಾಲಿಯಕಡೆಗೆ ವಕೀಲರ ಕಳಿಸುವದು ಗೊತ್ತಾಗಿ ಬಾಬುರಾವಭಾನುಫಡಣವೀಸ, ಲಕ್ಷ್ಮಣಬಲ್ಲಾಳ, ದುರಾಣಶಹ ಎಂಬ ಮೂವರನ್ನು ವಕೀಲರನ್ನಾಗಿ ಅಬದಾಲಿಯಕಡೆಗೆ ಕಳಿಸಿದರು. ಅವರ ಸಂಗಡ ಅಬದಾಲಿಯ ಹೆಸರಿನಿಂದ ಭಾವುಸಾಹೇಬನು ಒಂದು ಪತ್ರವನ್ನು ಕೊಟ್ಟಿದ್ದನು. ಅದರ ಅಭಿಪ್ರಾಯವೇನಂದರೆ–ನಿಮ್ಮ ಪತ್ರವು ಮುಟ್ಟಿತು. ಅದಕ್ಕೆ ನಾವು ಬರೆಯುವ ಉತ್ತರವೇನಂದರೆ– ಹಿಂದುಪದಪಾದಶಹ ಛತ್ರಪತಿಮಹಾರಾಜರವರು ತಮ್ಮ ರಾಜ್ಯದ ವ್ಯವಸ್ಥೆಯನ್ನು ತಮ್ಮ ಮನಸ್ಸಿಗೆ ಬಂದಂತೆ ಮಾಡಲು ಸ್ವತಂತ್ರರಿರುವರು. ಅವರ ಕೆಲಸದಲ್ಲಿ ನೀವು ಕೈ ಹಾಕಿ ಅಸ್ತವ್ಯಸ್ತಮಾಡುವ ಕಾರಣ ವಿಲ್ಲ, ನೀವು ಪರದೇಶದ ರಾಜರಾಗಿದ್ದು ಸುಜಾಉದ್ದೌಲಾ, ಹಾಗು ನಜೀಬುದ್ದೌಲಾ ಇವರ ಮಾತು ಕೇಳಿ ನಿಮ್ಮ ಗಡಿಯನ್ನು ದಾಟಿ ನಮ್ಮ ದೇಶದಲ್ಲಿ ಬಂದಿರುತ್ತೀರಿ. ನೀವು ಹೀಗೆ ಮಾಡಿದ್ದು ಯೋಗ್ಯವಲ್ಲ. ಹಿಂದಕ್ಕೇ ನೀವು ಹಿಂದುಸ್ತಾನದಮೇಲೆ ದಂಡೆತ್ತಿಬಂದು ಮುಸಲ್ಮಾನ ಬಾದಶಾಹಿಯನ್ನು ಮುಣುಗಿಸಿರುತ್ತೀರಿ. ಈಗ ದಿಲ್ಲಿಯ ಮಿರಾಬೇಗಮರನ್ನು ಬೆನ್ನಿಗೆ ಕಟ್ಟಿ ಕೊಂಡು ಮತ್ತೆ ಬಂದು ವ್ಯರ್ಥವಾಗಿ ಪುಂಡಾಟಿಕೆ ನಡಿಸಿರುವಿರಿ. ಇದು ಸರಿಯಲ್ಲ, ಹಿಂದಕ್ಕೆ ನೀವು ಬಂದು ಗೊಂದಲಹಾಕಿದಾಗ ನಾವು ಇದ್ದರೆ, ದಿಲ್ಲಿಯ ಬಾದಶಾಹಿಯನ್ನು ಹೀಗೆ ಕೆಡಿಸುತ್ತಿದ್ದಿಲ್ಲ. ಸದ್ಯಕ್ಕೆ ನಮ್ಮ ಮಸಲತ್ತಿಗೆ ಅಡ್ಡಬರುವ ಅಧಿಕಾರವು ನಿಮಗಿಲ್ಲ. ನಮಗೆ ಯೋಗ್ಯವಾಗಿ ತೋರಿದ್ದನ್ನು ಮಾಡಲಿಕ್ಕೆ ನಮ್ಮ ಛತ್ರಪತಿಸರಕಾರವೂ, ಪೇಶ್ವೆ ಸರಕಾರವೂ ಸಮರ್ಥವಿರುತ್ತವೆ. ನೀವು ನಿಮ್ಮ ಗಡಿದಾಟಿ ಬಂದರೆ ಮರಾಟರು ನಾವು, ರೋಮ–ಶಾಮಗಳ ಸಮಾಚಾರವನ್ನು ಸಹ ತಕ್ಕೊಳ್ಳುವಾಗ, ನಿಮ್ಮ ಪಾಡೇನು? ನಮ್ಮೊಡನೆ ಸ್ನೇಹ ಬಳಿಸುವ ಇಚ್ಛೆ ನಿಮಗಿದ್ದರೆ, ಕೂಡಲೆ ಸೈನ್ಯಸಹಿತವಾಗಿ ಅಟಕವನ್ನು ದಾಟಿ ನಿಮ್ಮ ದೇಶಕ್ಕೆ ಹೋಗಿರಿ. ಇತ್ತ ಎಲ್ಲ ಮಾತಿನ ಸಿದ್ಧತೆಯಿರುವದು. ನಿಮ್ಮನ್ನು ಕರತಂದವರು ಏನು ಸುರಕೊಳ್ಳು ವರೋ ನಾವರಿಯೆವು. ಛತ್ರಪತಿಯ ದೌಲತ್ತಿನ ಕರ್ತಾರರು ಪಂತ–ಪ್ರಧಾನರಿದ್ದು, ಅವರ

ಮೇಲೆ ಯಾವತ್ತು ರಾಜ್ಯದ ಭಾರವಿರುವದು. ಛತ್ರಪತಿಯ ಕೃಪೆಯಿಂದ ಅವರು ರಾಜ್ಯ ವನ್ನು ಸಂಪಾದಿಸಿ ವಿಸ್ತರಿಸಿದರು. ಇನ್ನು ಮೇಲೆಯೂ ಅದನ್ನು ವಿಸ್ತರಿಸುವ ಉತ್ಸಾಹವು ಅವರಿಗಿ ರುವದು. ನೀವು ತಿರುಗಿ ಹೋಗದಿದ್ದರೆ, ನಿಮ್ಮನ್ನು ಅಟಕದಾಟಿಸಿ ಅಟ್ಟಲಿಕ್ಕೆ ನಮ್ಮ ಮೂರುಲಕ್ಷ ಸೈನ್ಯವು ಸಿದ್ಧವಾಗಿರುವದು.

ಪ್ರಿಯವಾಚಕರೇ, ಈ ಉತ್ತರವನ್ನು ಓದಿ ಅತ್ಯಂತ ಅಭಿಮಾನಿಯಾದ ಆ ದುರಾಣಿ ಪುರುಷವ್ಯಾಘ್ರನ ಸ್ಥಿತಿಯೇನಾಗಿರಬಹುದೆಂಬದನ್ನು ನೀವೇ ತರ್ಕಿಸತಕ್ಕದ್ದು. ಆಗ ಆ ಅಬದಾಲಿಯು ಹೆಚ್ಚಿಗೆಯೇನೂ ಮಾತಾಡದೆ, ಆ ವಕೀಲರಿಗೆ ಅಪ್ಪಣೆಕೊಟ್ಟು ಕಳಿಸುವಾಗ– ''ಒಳ್ಳೇದು, ನೀವು ಹೋಗಿರಿ. ಮರಾಟರು ದುರಾಣಿಯನ್ನು ಅಟಕ ದಾಟಿ, ಅಟ್ಟುವರೋ, ದುರಾಣಿಶಹನು ಮರಾಟರನ್ನು ದಕ್ಷಿಣಕ್ಕೆ ಅಟ್ಟುವನೋ, ಎಂಬದನ್ನು ನೋಡುವದ ಕ್ಕಾಗಿಯೇ ನಾವು ಬರುತ್ತಿರುವೆವೆ''ಂದು ನಿಮ್ಮ ಯಜಮಾನರಿಗೆ ಹೇಳಿರಿ ಎಂದು ನುಡಿದನು.

## ದಂಡಿನಪಾಳಯಗಳು

ಈ ಮೇರೆಗೆ ಭಾವುಸಾಹೇಬನು ದುರಾಣಿಯಕಡೆಗೆ ತಮ್ಮ ವಕೀಲರನ್ನು ಕಳಿಸಿದರೂ, ಆತನು ಯುದ್ಧಪ್ರಸಂಗವು ತಪ್ಪದಂತೆಯೇ ಪತ್ರಬರೆದನೆಂಬದು ವಾಚಕರಿಗೆ ಗೊತ್ತಾಗಿರ ಬಹುದು. ಉತ್ತರಹಿಂದುಸ್ತಾನದ ಅನುಭವಿಕ ಸರದಾರರು ಈಗ ಯುದ್ಧ ಮಾಡಬಾರದೆಂದು ಬೇಕಾದಷ್ಟು ಹೇಳಿದರು ಬಾವು ಸಾಹೇಬನು ಕೇಳಲಿಲ್ಲ. ಯುದ್ಧ ಮಾಡಿಯೇತೀರಬೇಕೆಂದು ಆತನು ಹಟಹಿಡಿದನು. ಬಾದಶಾಹಿ ಸಿಂಹಾಸನದ ಅಪಮಾನ ಮಾಡಿದ್ದರಿಂದ ಉತ್ತರ ಹಿಂದುಸ್ಥಾನದ ಮುಸಲ್ಮಾನ–ಜಾಟ–ರಜಪೂತ ಅರಸರು ಭಾವು ಸಾಹೇಬನ ಮೇಲಿನ ಮನಸ್ಸು ತೆಗೆದು ಒಬ್ಬೊಬ್ಬರೇ ದಿಲ್ಲಿಯಿಂದ ಹೊರಟುಹೋಗಹತ್ತಿದರು. ಆಗ ಆ ಗರ್ವಿಷ್ಠ ಸದಾಶಿವರಾಯನು ಈ ಬಾದಶಾಹಿಪರಿವಾರದ ಸಹಾಯವನ್ನು ಲಕ್ಷಿಸಲಿಲ್ಲ. ಆತನು ತನ್ನ ದಕ್ಷಿಣದ ಪರಿವಾರವನ್ನು ಕುರಿತು—''ಹೋಗಲಿ ಇವರೆಲ್ಲರೂ ಹೊರಟುಹೋಗಿಬಿಡಲಿ, ಅದಕ್ಕಾಗಿ ಚಿಂತೆಮಾಡುವ ಕಾರಣವಿಲ್ಲ. ಬೆಟ್ಟಿಯಬೆನಕನ ಎರಡು ಕಾಲುಮುರಿದರೇನು ಅದು ಕುಂಟುಬೀಳುವದಿಲ್ಲ. ನಮ್ಮ ದಕ್ಷಿಣದಂಡು ಶತ್ರುಗಳ ಸಮಾಚಾರತಕ್ಕೊಳ್ಳಲು ಸಮರ್ಥವಿರುವದು. ಇಂಥ ಕುಲಗೇಡಿಗಳೂ, ಅರ್ಧ ಹಿಂದೂ ಅರ್ಧ ಮುಸಲ್ಮಾನರಾಗಿರುವವರೂ ನಮಗೆ ಬೇಡವೇಬೇಡ. ಅವರು ಹೋದರೆ ನಮ್ಮ ಕೆಲಸನಿಲ್ಲುವದಿಲ್ಲ'' ಎಂದು ಹೇಳಿದನು. ಪ್ರಿಯ ವಾಚಕರೇ, ಎಂಥ ಗರ್ವವಿದು! ತನ್ನ ಕೈಯಲ್ಲಿಸದ್ಯಕ್ಕೆ ಸಾಕಷ್ಟು ಸೈನ್ಯವಿದ್ದರೂ, ಭಾವೂ ಸಾಹೇಬನು ಹೀಗೆ ನಿಷ್ಠುರ ಮಾತುಗಳನ್ನಾಡಿ ತನ್ನ ಬಲವನ್ನು ಕಡಿಮೆ ಮಾಡಿಕೊಳ್ಳತಕ್ಕ ದ್ದಿದ್ದಿಲ್ಲ. ಇದೆಂಥ ಮುತ್ಸದ್ದಿಗಿರಿಯು? ಇದೆಂಥ ಜಾಣತನವು?

ಹೀಗಿರುವಾಗ ಮಳೆಗಾಲವು ಹೋಗತೊಡಗಿತು. ಹೊಳೆಗಳು ಇಳಿಯಹತ್ತಿದವು. ಸಂಗ್ರಾಮದ ದಿವಸಗಳು ಸಮೀಪಿಸತೊಡಗಿದವು. ಆಗ ಭಾವೂಸಾಹೇಬನು ರಾಜೇಬಹಾದ್ದರ ನಾರೋಶಂಕರನನ್ನು ಹತ್ತುಸಾವಿರ ದಂಡಿನೊಡನೆ ದಿಲ್ಲಿಯಲ್ಲಿಟ್ಟು, ಅಲ್ಲಿಂದ ೫೦/೬೦ ಹರ ದಾರಿಗಳ ಮೇಲಿರುವ ಕುಂಜಪುರದ ಠಾಣೆಯಕಡೆಗೆ ತಾನು ಸ್ವತಃ ದಂಡಿನೊಡನೆ ಸಾಗಿದನು. ಕುಂಜಪುರದ ಟಾಣೆಯು ಅಬದಾಲಿಯದು. ತನಗೆ ಅಂಥಪ್ರಸಂಗ ಬಂದರೆ ಹಿಂತುರಿಗಿ ಪಂಜಾಬದ ಮಾರ್ಗದಿಂದ ಸ್ವದೇಶಕ್ಕೆ ಹೋಗಲಿಕ್ಕೆ ಅನುಕೂಲವಾಗಬೇಕೆಂತಲೂ, ಹೊಸ ದಾಗಿ ಸೈನ್ಯದ ಸಹಾಯಪಡೆಯಲಿಕ್ಕೆ ತೊಂದರೆಯಾಗಬಾರದೆಂತಲೂ ಆ ಯವನವೀರನು ಒಂದೇ ಜಾತಿಯ ಹತ್ತುಸ್ತಾವಿರ ಜನ ರೋಹಿಲರನ್ನು ಅಲ್ಲಿ ಇಟ್ಟಿದ್ದನು. ಈ ಮಹತ್ವದ ಠಾಣ್ಯವನ್ನು ಸ್ವಾಧೀನಪಡಿಸಿಕೊಂಡು, ದುರಾಣಿಯ ಸ್ವದೇಶಕ್ಕೆ ಹೋಗುವ ದಾರಿಯನ್ನು ಕಟ್ಟಬೇಕೆಂದು ಭಾವುಸಾಹೇಬನು ತನ್ನ ಎಲ್ಲ ದಂಡಿನೊಡನೆ ಹೊರಟಿದ್ದನು. ಹೀಗೆ ಮಾಡಿದರೆ ತನ್ನ ದೇಶಕ್ಕೆ ಹೋಗುವದಾರಿಯು ತನಗೂ ಕಟ್ಟಾಗುವದೆಂಬದನ್ನು ಆತನು ಲಕ್ಷಿಸಲೇ ಇಲ್ಲ; ಯಾಕಂದರೆ, ತಾನು ಸೋಲುವೆನೆಂಬ ಕಲ್ಪನೆಯುಸಹ ಆತನಿಗಿದ್ದಿಲ್ಲ. ತಾನು ಸಹಜವಾಗಿ ದುರಾಣಿಯನ್ನು ಸೋಲಿಸುವೆನೆಂತಲೂ, ದುರಾಣಿಯ ಜನರನ್ನು ಒಬ್ಬರುಳಿಯದಂತೆ ತುಂಡ ರಿಸಬೇಕೆಂತಲೂ ಭಾವಿಸಿ ಈಗ ಆತನು ದುರಾಣಿಯ ಹಾದಿಯ ಕಟ್ಟುವದಕ್ಕಾಗಿ ಹೊರಟಿ ದ್ದನು. ಆತನ ಸುದೈವದಿಂದಲೋ, ದುರ್ದೈವದಿಂದಲೋ ಆತನ ಬಯಕೆಯು ಪೂರ್ಣ ವಾಯಿತು ಕುಂಜ ಪುರದವರೊಡನೆ ನಿಕರದ ಕಾಳಗವಾಯಿತು. ಕುಂಜಪುರದಿಂದ ಹೊರಟ ರೋಹಿಲರನ್ನು ಮರಾಟರು ತುಂಡರಿಸಿಚಲ್ಲಹತ್ತಿದರು. ಕಡೆಗೆ ರೋಹಿಲರು ಸಂಪೂರ್ಣವಾಗಿ ಸೋತು, ಅವರ ಮುಖ್ಯಸ್ಥನಾದ ಸುಬೇದಾರ ದಾಲೀಲಖಾನನು ಜೀವದಿಂದ ದಾಮಾಜಿ ಗಾಯಕವಾಡನ ಕೈಯಲ್ಲಿ ಸಿಕ್ಕನು. ಅದರಂತೆ, ಕುತುಬಶಹಾ, ಮಹಮ್ಮದಕತ್ತಲಬಾಜ ಎಂಬವ ರಿಬ್ಬರೂ ಮರಾಟರ ಕೈ ಸೇರಿದರು. ಕುತುಬಶಹನು ಹಿಂದಕ್ಕೆ ದತ್ತಾಜಿಸಿಂದೆಯ ಶಿರಚ್ಛೇದ ಮಾಡಿದ್ದರಿಂದ, ಆ ಯವನ ಸರದಾರನು ಯಾವಾಗ ಕೈಯಲ್ಲಿ ಸಿಕ್ಕಾನೆಂದು ಮರಾಟರು ಹಾದಿಯನೋಡುತ್ತಿದ್ದರು.

ಮರಾಟರು ಕುಂಜಪುರವನ್ನು ಸುಲಿದು ವಿಧ್ವಂಸಮಾಡಿದರು. ದಾಮಾಜಿ ಗಾಯಕ ವಾಡನು ಕುತುಬಶಹನನ್ನು ಆನೆಯ ಮೇಲೆ ಹಾಕಿಕೊಂಡು ಭಾವೂಸಾಹೇಬನ ಬಳಿಗೆ ಕರತಂದನು. ಇವನು ದತ್ತಾಜಿ ಸಿಂದೆಯ ಶಿರಚ್ಛೇದಮಾಡಿದವನೆಂದು ಹೇಳಿದಕೂಡಲೆ, ಭಾವು ಸಾಹೇಬನು ಅಂಗಾಲಿನಿಂದ ನಡುನೆತ್ತಿಯವರೆಗೆ ಉರಿಯಹತ್ತಿದನು. ಆತನು ಸಂತಾಪದ ಭರದಲ್ಲಿ–''ಇವನನ್ನು ಆನೆಯಮೇಲೆ ಹಾಕಿಕೊಂಡೇಕೆ ಬಂದಿರಿ? ಕೆಳಗೆಳೆಯಿರಿ'' ಎಂದು ಗದ್ದರಿಸಲು ಕುತುಬಶಹನು ತಾನೇ ಆನೆಯ ಮೇಲಿಂದ ಕೆಳಗೆ ದುಮುಕಿಹೋಗಿ ಭಾವು ಸಾಬೇಬನ ಮುಂದೆ ನಿಂತುಕೊಂಡನು. ಆಗ–''ಈ ನೀಚನನ್ನು ಥಾಲಿನ ಬಳಿಗೆ ಕರ ದೊಯ್ದು ಶಿರಚ್ಛೇದ ಮಾಡಿರಿ.'' ಎಂದು ಭಾವುಸಾಹೇಬನು ಆಜ್ಞಾಪಿಸಿದನು. ಆತನಿಗೆ ಜೀವದಾನ ಕೊಡಬೇಕೆಂದು ಸಿಂದೆ–ಹೋಳಕರ ಮೊದಲಾದವರು ಮಧ್ಯಸ್ಥಿಕೆ ನಡೆಸಿದರು,

ಬೇಡಿಕೊಂಡರು; ಆದರೆ ಭಾವುಸಾಹೇಬ ಕೇಳಲಿಲ್ಲ. ''ಇವನ ಶಿರಚ್ಛೇದ ಮಾಡಿರೆಂದು'' ಮೂರುಸಾರೆ ಅಪ್ಪಣೆ ಮಾಡಿದನು. ಆಗ ಉಪಾಯವಿಲ್ಲದೆ ಡಾಲಿನ ಬಳಿಗೆ ಕರೆದೊಯ್ದು ಶಿರಚ್ಛೇದ ಮಾಡಿದರು. ಅವನ ಹಿಂದೆಯೇ ಮಹಮ್ಮದ ಕತ್ತಲಬಾಜಿಯ ಶಿರಚ್ಛೇದವೂ ಆಯಿತು. ಬಳಿಕ ಭಾವುಸಾಹೇಬನು ಕುಂಜಪುರದ ಕೋಟೆಯನ್ನು ಅಗಿಸಿ ನೆಲಸಮ ಮಾಡಿಸಿ ಬಿಟ್ಟನು. ಈ ಸುದ್ದಿಯು ಅಬದಾಲಿಗೆ ಗೊತ್ತಾಯಿತು. ಕುಂಜಪುರದವರ ಸಹಾಯಕ್ಕೆ ದಂಡು ಕಳಿಸುವ ಆತನ ಯತ್ನವು ನಿಷ್ಫಲವಾಯಿತು. ಆತನ ದಂಡು ಯಮುನೆಯನ್ನು ದಾಟಿ ಬರುತ್ತಿರುವಾಗ, ಮದ್ದಿಗೆ ಬೆಂಕಿ ಹತ್ತಿ ಅನರ್ಥವಾಯಿತು. ಆಗ ಸರಾಸರಿ ಹದಿನೈದು ನೂರು ಜನರು ಪ್ರಾಣಕ್ಕೆ ಎರವಾದರು; ಹೇರಳ ಮದ್ದು-ಗುಂಡುಗಳು ನಾಶವಾಯಿತು; ಅನ್ನ ಸಾಮಗ್ರಿಯು ಮುಣುಗಿತು; ಆದರೂ ಆ ಪುರುಷವ್ಯಾಘ್ರನಾದ ದುರಾಣಿಬಾದಶಹನು ಎದೆಗುಂದದೆ ಉಳಿದ ಸೈನ್ಯದೊಡನೆ ಯಮುನೆಯನ್ನು ದಾಟಿ ಬಂದು ಅಕಸ್ಮಾತ್ತಾಗಿ ಮರಾಟರ ಮೇಲೆ ಬಿದ್ದನು. ಆಗ ಮರಾಟರು ನಿರ್ಭಯದಿಂದ ಮನಬಂದಂತೆ ಚಕ್ಕಂದ ವಾಡುತ್ತಿದ್ದರು. ಹೀಗೆ ಅಬದಾಲಿಯು ಅಕಸ್ಮಾತ್ತಾಗಿ ಬಿದ್ದದ್ದರಿಂದ ಅವರು ಹೌ ಹಾರಿದರು. ಈ ಪ್ರಸಂಗದಲ್ಲಿ ೨೦೦೦ ಜನ ಮರಾಟರನ್ನು ಅಬದಾಲಿಯು ತುಂಡರಿಸಿ ಚಲ್ಲಿದನು. ಆತನ ೧೦೦೦ ಜನ ದುರಾಣಿಗಳೂ ಪ್ರಾಣಕ್ಕೆ ಎರವಾದರು. ಹೀಗೆ ಸಂಜೆಯ ತನಕ ನಿಕರದ ಕಾಳಗ ವಾಗಿ ಆವರವರು ಅವರವರ ಪಾಳಯಕ್ಕೆ ಹೊರಟುಹೋದರು.

ಬಳಿಕ ಪ್ರತಿದಿನ ಸಣ್ಣ-ಪುಟ್ಟ ಕಾಳಗಗಳಾಗತೊಡಗಿ, ಅವುಗಳಲ್ಲೆಲ್ಲ ಮರಾಟರೇ ಹಿಂದಕ್ಕೆ ಸರಿಯುತ್ತಹೋದರು. ಕಡೆಗೆ ಉಭಯಪಕ್ಷದ ಸೈನ್ಯಗಳು ಕುರುಕ್ಷೇತ್ರಕ್ಕೆ ಬಂದವು. ಅಲ್ಲಿ ಭಾವುಸಾಹೇಬನು ತನ್ನ ಛಾವಣಿಯ ಸುತ್ತಲು ನಾಲ್ವತ್ತು ಮೊಳ ಅಗಲ, ಹತ್ತು ಮೊಳ ಆಳವಾದ ಅಗಳತತೋಡಿಸಿ, ಅದರ ಒಳಗಡೆಯಲ್ಲಿ ಗೋಡೆಕಟ್ಟಿಸಿ ಭದ್ರಪಡಿಸಿದನು. ಅತ್ತ ಅಬದಾಲಿಯು ಮರಾಟರ ಛಾವಣಿಯಿಂದ ನಾಲ್ಕೈದು ಹರದಾರಿಯಮೇಲೆ ಯಮುನೆಯ ದಂಡೆಯಲ್ಲಿ ತನ್ನ ಛಾವಣಿಯನ್ನು ಊರಿದನು. ಆತನು ಗಿಡಗಳಕಡಿಸಿ ಅದರ ಗೋಡೆಕಟ್ಟಿ ಸಿದ್ದನ್ನು ಹಿಂದೆ ಹೇಳಿದೆ. ಉಭಯತರ ಬಲಗಳೂ ಸರ್ವಸನ್ನಾಹದಿಂದ ಸಜ್ಜಾಗಿದ್ದವು. ದುರಾಣಿ ಬಾದಶಹನಕಡೆ ಮುಖ್ಯಸರದಾರರು- ೧. ವಜೀರಶಹಾವಲ್ಲೀಖಾನ, ೨. ವಜೀರಅಲ್ಲಾಖಾನಕ ಜಲಬಾಷ, ೩. ಶಹಾಜಹಾನಖಾನ, ೪. ಶಾಹಾಪನಂದಖಾನ, ೫. ಶಾಹಾನಶೀರಖಾನಬಲೂಚಿ, ೬. ಶಾಹಾಬರಖುರದಾರಖಾನ, ೭. ಶಹಾಮುರಾದಖಾನಮೊಗಲ ಎಂಬವರೇಳು ಜನರಿದ್ದರು. ಇವರಲ್ಲದೆ, ನವಾಬಸುಜಾಉದ್ದವಲಾ, ನಜೀಬಉದ್ದವಲಾ, ದುಂದೀಖಾನ, ಹಾಫೀಜ್ ರಹಂಮತ, ಅಹಮ್ಮದಖಾನಬಂಗಷ ಮುಂತಾದ ಹಿಂದುಸ್ಥಾನಸರದಾರರು ಅನೇಕ ಜನ ರಿದ್ದರು. ಆತನ ಪ್ರತಿ ಒಂದು ದಸ್ತಿನಲ್ಲಿ (ಗುಂಪಿನಲ್ಲಿ) ಹನ್ನೆರಡುನೂರು ಜನರಂತೆ ಇಪತ್ತು ನಾಲ್ಕು ದಸ್ತು ಕುದುರೆಯ ಸವಾರರ ಈತ್ಯುತ್ಕೃಷ್ಟ ಪಲಟಣವು ಶತ್ರುಗಳಿಗೆ ಭಯವನ್ನುಂಟು ಮಾಡುತ್ತಲಿತ್ತು; ಯಾವತ್ತು ರಾವುತರೂ, ಕಾಲಾಳೂ ಕೂಡಿ ಒಂದುಲಕ್ಷ ಸೈನ್ಯವೂ, ಎಪ್ಪತ್ತೈದು ಎಂಬತ್ತು ತೋಫುಗಳೂ, ಎರಡುಸಾವಿರ ಒಂಟೆಗಳೂ, ನೂರಾರು ಆನೆಗಳೂ ಆತನ

ದಂಡಿನಲ್ಲಿದ್ದವು. ಇದರ ಹೊರತು ಬೇರೆ ತಾತ್ಕಾಲಿಕವಾಗಿ ಇಟ್ಟಿದ್ದ ಸೈನ್ಯವು ಈ ಕಾಯಂಸೈನ್ಯದ ನಾಲ್ಕುಪಟ್ಟು ಇತ್ತು. ದುರಾಣೀಶಿಪಾಯಿಗಳು ಶರೀರದಿಂದ ಭವ್ಯರು-ಬಲಿಷ್ಠರು; ಅವರ ತುರ್ಕೀಕುದುರೆಗಳು ದೊಡ್ಡವು-ಧಷ್ಟ-ಪುಷ್ಟಗಳು ಆಗಿದ್ದವು. ಅದರಂತೆ ಸೈನಿಕರ ಆಯುಧಗಳೂ ಉತ್ತಮ ತರದವಾಗಿದ್ದವು.

ಇತ್ತ ಭಾವುಸಾಹೇಬನ ಮುಖ್ಯಸರದಾರರು-೧ ಮಲ್ಹಾರರಾವಹೋಳಕರ, ೨. ಜನಕೋಜಿ ಸಿಂದೆ, ೩. ತುಕೋಜಿಸಿಂದೆ, ೪. ಮಹದಾಜಿಸಿಂದೆ, ೫. ದಾಮಾಜಿಗಾಯಕವಾಡ, ೬.ಯಶವಂತ ರಾವಪವಾರ, ೭. ಬಾಳೋಜಿಜಾಧವ, ೮. ಸಮಶೇರಬಹಾದ್ದರ, ೯. ವಿಠ್ಠಲ ಶಿವದೇವ ವಿಂಚೂರಕರ, ೧೦. ಅಂತಾಜಿಮಾಣಕೇಶ್ವರ, ೧೧. ಇಬ್ರಾಹಿಮಖಾನಗಾರದೀ, ೧೨. ಬಳವಂತ ರಾವಮೇಹೇಂದಳೆ ಎಂಬವರಾಗಿದ್ದರು. ಇವರಲ್ಲದೆ ಕೆಳಗಿನ ತರಗತಿಯ ಸರದಾರರು ೧೫೦ ಜನರಿದ್ದರು. ಇಬ್ರಾಹಿಮಖಾನಗಾರದಿಯ ಕೈಯಲ್ಲಿ ಫಿರಂಗಿಯವರ ಪದ್ಧತಿಯಂತೆ ಕವಾಯಿತುಕಲಿತ ಹನ್ನೆರಡು ಪಲಟಣಗಳೂ, ಎರಡುಸಾವಿರ ರಾವುತರೂ ಯುದ್ಧೋತ್ಸಾಹಿಗಳಾಗಿ ಯಾವಾಗಲೂ ಟೊಂಕಕಟ್ಟಿ ಸಿದ್ಧರಾಗಿರುತ್ತಿದ್ದರು; ಇದಲ್ಲದೆ ಆತನ ಕೈಯಲ್ಲಿ ದೊಡ್ಡ ದೊಡ್ಡ ನಾಲ್ವತ್ತು ತೋಫುಗಳಿದ್ದವು. ಈ ತೋಫಖಾನೆಯಲ್ಲದೆ, ಮಹಿಪತರಾವಲಕ್ಷ್ಮಣಪಾನಸೆ ಎಂಬವನ ಕೈಕೆಳಗೆ ಪೇಶವಾಯಿಯ ಪದ್ಧತಿಯಂತೆ ಇದ್ದ ತೋಪಖಾನೆಯು ಬೇರೆ. ಹೀಗೆ ಭಾವುಸಾಹೇಬನ ಕೈಕೆಳಗಿನ ಶಾಶ್ವತಸೈನ್ಯದ ಲೆಕ್ಕವನ್ನೂ ತಾತ್ಕಾಲಿಕವಾಗಿ ಇಟ್ಟುಕೊಂಡಿದ್ದ ಸೈನ್ಯದ ಲೆಕ್ಕವನ್ನೂ ಮಾಡಿದರೆ, ಎಲ್ಲಕೂಡಿ ಕುದುರೆಯ ಸವಾರರು ಮೂರುಲಕ್ಷ, ಕಾಲಾಳು ಎಪ್ಪತ್ತೈದು ಸಾವಿರ ಆಗುತ್ತಿದ್ದರು. ಅವರಲ್ಲಿ ಪೆಂಡಾರಿಗಳನ್ನು ಕೂಡಿಸಿದರೆ ನಾಲ್ಕು ನಾಲ್ಕೂಕಾಲುಲಕ್ಷ ಸೈನ್ಯವಾಗುತ್ತಿತ್ತು. ಇದಲ್ಲದೆ ಎರಡುನೂರು ಆನೆಗಳು, ಸಣ್ಣ-ದೊಡ್ಡ ಸಾವಿರಾರು ತೋಫುಗಳು, ಒಂಟೆಯ ರಾವುತರು, ನಾಲ್ವತ್ತುಸಾವಿರ ಧನುರ್ಧಾರಿಗಳು, ಮದ್ದು-ಗುಂಡು, ಕವಣೆಗಳು ಮೊದಲಾದವುಗಳ ಸಿದ್ಧತೆಯು ವಿಪುಲವಾಗಿತ್ತು. ಹೀಗೆ ಇಬ್ಬರೂ ಸರ್ವಸನ್ನಾಹದಿಂದ ಸಜ್ಜಾಗಿ ಅಮೋಘಬಲಸಂಪನ್ನರಾಗಿದ್ದರೂ, ಒಬ್ಬರ ಅಂಜಿಕೆಯು ಮತ್ತೊಬ್ಬರಿಗಿದ್ದದ್ದರಿಂದ, ತಾವಾಗಿ ಮುಂದುವರಿದು ಹೋಗಲು ಅಂಜಿ ಬಹುದಿವಸ ಸುಮ್ಮನೆ ಒಂದೊಂದು ನಿಟ್ಟಿನಲ್ಲಿ ಒಬ್ಬೊಬ್ಬರು ತಳವೂರಿ ಕುಳಿತುಬಿಟ್ಟಿದ್ದರು. ಹೀಗಿರುವಾಗ, ಹಿಂದೆ ಹೇಳಿದ ಬೈರಾಗಿಣಿಯು ಮರಾಟರ ಪಾಳಯಕ್ಕೆ ಹೋಗಬೇಕೆಂದು ಹೊರಟು, ತಪ್ಪಿ ದುರಾಣೆಯ ಛಾವಣಿಯಕಡೆಗೆ ಹೊರಟಿದ್ದಳು. ಆಗ ದಾವುದ, ಹಾಗು ಖುದಾಯಾರ ಎಂಬವರ ಕೈಯಲ್ಲಿ ಆಕೆಯು ಸಿಕ್ಕು ಗಾಸಿಯಾದಳೆಂಬದ್ದು ಈ ಮೊದಲೇ ಹೇಳಿದೆ.

ಹಿಂದೆ ಹೇಳಿದಂತೆ ದುರಾಣಿಅಹಮ್ಮದ ಶಹನು ತನ್ನ ಮಿತ್ರರೊಡನೆ ಬೈರಾಗಿಣಿಯಿದ್ದೆಡೆಗೆ ಬರಲು, ಜನರು ನಯ-ಭಯದಿಂದ ಹಿಂದಕ್ಕೆ ಸರಿದು ಸುಮ್ಮನೆ ದೂರನಿಂತುಕೊಂಡರು. ಮೇಲೆ ಹೇಳಿದಂತೆ ಸ್ತ್ರೀಯನ್ನು ನೋಡಿ ಸಿಟ್ಟಾದ ಶಹಾನು ಲುತುಫಖಾನನನ್ನು ಕುರಿತು- ''ಖಾನಸಾಹೇಬ, ಏನು ಗದ್ದಲವಿದು? ನಿಮ್ಮ ಕಣ್ಣೆದುರಿನಲ್ಲಿ ನಿಮ್ಮ ಚೌಕಿಯ ಮೇಲೆ ಇಷ್ಟು ಪುಂಡಾಟಿಕೆಯೇ? ಎಂಥ ನಾಚಿಕೆಗೇಡಿತನವು! ಛಾವಣಿಯಲ್ಲಿ ಸ್ತ್ರೀಯರ ಪ್ರವೇಶ

ವಾಗಲಾಗದೆಂದು ನಮ್ಮ ಅಪ್ಪಣೆಯಿದ್ದು, ಇಲ್ಲಿ ಈ ಕಾಫರರ ಹುಡುಗೆಯೇಕೆ? ಈಕೆಯ ಕರತಂದವನನ್ನು ಇತ್ತ ನಮ್ಮೆದುರಿಗೆ ತಂದುನಿಲ್ಲಿಸಿರಿ.'' ಎಂದು ನುಡಿಯಲು, ಲುತುಫನು ದಾವುದ–ಖುದಾಯಾರರ ಸಂಗತಿಯನ್ನು ತಿಳಿಸಿ, ಅವರನ್ನು ಶಹಾನ ಎದುರಿಗೆ ನಿಲ್ಲಿಸಿದನು. ಆಗ ಅಬದಾಲಿಯು ಅವರನ್ನು ಕುರಿತು ಸಂತಾಪದಿಂದ–''ಲುಚ್ಚೇ! ಕವ್‌ಅಸ್ಸಲ! ಹರಾಮಖೋರ! ನಿಮ್ಮ ಛಾವಣಿಯ ಸಂರಕ್ಷಣದ ಕೆಲಸವನ್ನು ಬಿಟ್ಟು ಕೊಟ್ಟು ಹೆಂಗಸರನ್ನು ಹುಡುಕುತ್ತ್ತಿರುಗುವಿರಾ? ಈ ಅವ್ಯವಸ್ಥೆಯು ಕೆಲಸದ್ದಲ್ಲ. ಇದಕ್ಕೆ ತಕ್ಕ ಶಾಸನವಾಗಲೇಬೇಕು. ಲುತುಫಖಾನ, ಇವರನ್ನು ಪ್ರತಿಬಂಧಧಲ್ಲಿಡಿಸಿ ನಾಲ್ಕುದಿನ ಉಪವಾಸಕೆಡವಿರಿ. ಪ್ರತಿದಿನ ಪ್ರಸಿದ್ಧಸ್ಥಳದಲ್ಲಿ ಇವರ ಬೆನ್ನಮೇಲೆ ಐವತ್ತೈದು ಪಟಿಕೆಗಳನ್ನು ಹೊಡೆಯುತ್ತ ಹೋಗಿರಿ. ಹೀಗೆ ದಂಡಾಳುಗಳು ಹೆಂಗಸರ ಹರಿಗೆಬಿದ್ದು ಮನಸ್ಸಿಗೆ ಬಂದಂತೆ ನಡೆದರೆ, ಅವ್ಯವಸ್ಥೆಯಾಗಿ ಹಗಲುಹಾಡೇ ಮರಾಟರು ನಮ್ಮ ಮೇಲೆ ಬೀಳಬಹುದು. ಲಷ್ಕರಿಯ ಕಾಯದೆಗಳನ್ನು ಮುರಿದರೆ ಏನು ಪರಿಣಾಮವಾಗುವದೆಂಬದು ಉಳಿದವರಿಗೆ ಗೊತ್ತಾಗಲಿ. ಕಳಿಸಿರಿ, ಇವರನ್ನು ವಜೀರಸಾಹೇಬರಕಡೆಗೆ ಹೆಡಮುರಿಗೆ ಕಟ್ಟಿಕಳಿಸಿರಿ.'' ಎಂದು ಆಜ್ಞಾಪಿಸಲು, ಕೂಡಲೆ ಲುತುಫನ ಸಿಪಾಯಿಗಳು ಖುದಾಯಾರ– ದಾವುದರನ್ನು ಹೆಡಮುರಿಗೆ ಕಟ್ಟಿ ಎಳೆದೊಯ್ದರು. ಶಹಾನ ದೃಷ್ಟಿಯು ಬಳಿಕ ಬೈರಾಗಿಣಿಯ ಕಡೆಗೆ ಹೊರಳಿತು. ಶಹಾನ ಈ ಕಠಿಣತರವಾದ ನ್ಯಾಯ–ನಿಷ್ಠುರತೆಯನ್ನು ನೋಡಿ ಬೈರಾಗಿಣಿಯು ಸ್ವಲ್ಪ ಧೈರ್ಯಗೊಂಡಿದ್ದಳು.

ಹೀಗೆ ಬೈರಾಗಿಣಿಯ ಕಡೆಗೆ ಹೊರಳಿದ ಶಹಾನು ಆಕೆಯನ್ನು ದಿಟ್ಟಿಸಿನೋಡಿ–''ನೀನು ಯಾರು? ಇತ್ತಕಡೆಗೆ ಯಾಕೆಬಂದೆ!'' ಎಂದು ಪ್ರಶ್ನೆ ಮಾಡಲು, ಬೈರಾಗಿಣಿಯು ಮೋರೆ ತಗ್ಗಿಸಿ ಎರಡೂ ಕೈಜೋಡಿಸಿ ಬಹುವಿನಯದಿಂದ ಬಾದಶಹನಿಗೆ ಸಲಾಮುಮಾಡಿ– ''ಖುದಾವಂತ ಸರಕಾರ, ನಾನೊಬ್ಬ ಹಿಂದೂಜಾತಿಯ ತಿರಕ ಹುಡುಗೆಯು. ಸದ್ಯಕ್ಕೆ ನನ್ನ ತಾಯಿ–ತಂದೆಗಳು ಖಾವಿಂದರು; ಎರಡನೆಯ ತಾಯಿ–ತಂದೆ ಮೇಲಿನ ಭಗವಂತನು. ಇವರಿಬ್ಬರ ಹೊರತು ನನಗೆ ಬೇರೆ ಯಾರೂ ರಕ್ಷಕರಿಲ್ಲ. ದಂಡಿನ ಛಾವಣಿಗಳಿದ್ದಲ್ಲೆಲ್ಲ ಹೋಗಿ ಈ ವೀಣೆ ಬಾರಿಸಿ ಸಿಪಾಯಿ ಗಳನ್ನು ಸಂತೋಷಪಡಿಸಿ ನಾನು ಹೊಟ್ಟೆ ತುಂಬಿಕೊಳ್ಳುತ್ತಿರುವೆನು. ನಮ್ಮಂಥ ತಿರಕರಿಗೆ ನಮ್ಮ ಹಿಂದುಸ್ಥಾನದ ಸಿಪಾಯಿಗಳು ಎಷ್ಟು ಮಾತ್ರವೂ ತೊಂದರೆಕೊಡುವದಿಲ್ಲ. ಕೆಲವರು ಹಣ–ಕಾಸು ಕೊಡುವರು; ಕೆಲವರು ಕಾಳು ನೀಡುವರು; ಕೆಲವರು ಅನ್ನವಿಕ್ಕುವರು; ಕೆಲವರು ಹಳಿಯ–ಪಳಿಯ ಅರಿವೆ ಕೊಡುವರು. ಹೀಗಾಗಿ ನಮ್ಮ ಉಪಜೀವನವು ಸಾಗುವದು; ಆದರೆ ಖಾವಿಂದ, ನಿಮ್ಮ ವಿಲಾಯತಿಯ ಸಿಪಾಯಿಗಳ ಮಾತು ನನಗೆ ತಿಳಿಯುವದಿಲ್ಲ. ಅವರ ದೇಶ–ಪದ್ಧತಿಗಳೂ, ನಡತೆ–ನಡಾವಳಿಗಳೂ ನನಗೆ ಗೊತ್ತಿಲ್ಲ. ಇದು ಹಿಂದುಸ್ಥಾನದ ದಂಡಿನ ಪಾಳಯುವಿರಬಹುದೆಂದು ತಿಳಿದು ನಾನು ಹಾದಿಯತಪ್ಪಿ ಬಂದೆನು. ನನ್ನನ್ನು ನಿಮ್ಮ ಸಿಪಾಯಿಗಳು ಹಾದಿಯಲ್ಲಿ ಹಿಡಿದು ಎಳತಂದರು. ಅವರು ಹಾದಿಯಲ್ಲಿ ನನ್ನನ್ನು ಬಹಳವಾಗಿ ಪೀಡಿಸಿದರು. ಖಾವಿಂದರು ದಯಾವಂತರಿರುವಿರಿ; ದೀನರಕ್ಷಕರಿರುವಿರಿ. ಹುಜೂರ, ತಮ್ಮ ಪಾದಧೂಳಿಯಾಗಿದ್ದ ನಾನು ಸನ್ನಿಧಿಗೆ ಶರಣುಬಂದಿದ್ದೇನೆ. ರಕ್ಷಿಸುವ

ಭಾರವು ಸನ್ನಿಧಿಯನ್ನೇ ಕೂಡಿದೆ,'' ಎಂದು ಬಹುವಿನಯ ದಿಂದ ಮಾತಾಡಿ ಬಾದಶಹನ ಹತ್ತರ ಹೋಗಿ ಆತನ ಚರಣಕ್ಕೆ ವಂದಿಸಿದಳು. ಆಕೆಯ ಮಾತು ಬಾದಶಹನಿಗೆ ತಿಳಿಯಲಿಲ್ಲ; ಆದರೂ ಆಕೆಯ ಹಾವ–ಭಾವಗಳಿಂದಲೂ, ಕೃತಿಗಳಿಂದಲೂ ಬಾದಶಹನು ಆಕೆಯ ಮನೋದಯವನ್ನರಿತು, ಈಕೆಯು ಏನು ಅನ್ನುವಳೆಂದು ಸುಜಾಉದ್ದೌಲ ನನ್ನು ಕೇಳಿದನು. ಆತನಿಗೂ ಬೈರಾಗಿಣಿಯ ಮಾತು ನೆಟ್ಟಗೆ ತಿಳಿದಿದ್ದಿಲ್ಲ. ನಜೀಬಉದ್ದೌಲನಿಗೆ ಮಾತ್ರ, ಹಿಂದಿ–ಉರ್ದು ಮೊದಲಾದ ಎಷ್ಟೋ ಭಾಷೆಗಳ ಪರಿಚಯವಿತ್ತು, ಆತನು ಬೈರಾಗಿಣಿಯ ಮಾತಿನ ಭಾಷಾಂತರಮಾಡಿ ಶಹನಿಗೆ ಹೇಳಿದನು.

ಬೈರಾಗಿಣಿಯ ಈ ಮಾತುಗಳನ್ನು ಕೇಳಿ, ಅಬದಾಲಿಗೆ ಕನಿಕರಹುಟ್ಟಿತು. ಆತನು ನಜೀಬಉದ್ದೌಲನ ಮುಖಾಂತರವಾಗಿ ಬೈರಾಗಿಣಿಗೆ ಕೇಳತಕ್ಕದ್ದನ್ನು ಕೇಳಿದನು. ಬೈರಾಗಿಣಿಯು ಸರಳ ಹೃದಯದವಳೆಂತಲೂ, ಶತ್ರುಗಳ ಕಡೆಯಿಂದ ಬಂದ ಗುಪ್ತಚಾರಳಲ್ಲೆಂತಲೂ ಆತನಿಗೆ ಗೊತ್ತಾಯಿತು; ಮತ್ತು ತನ್ನ ಸಿಪಾಯಿಗಳು ಬಲಾತ್ಕಾರದ ಅತಿ ಪ್ರಸಂಗಕ್ಕೆ ಹೋಗಿರುವ ದಿಲ್ಲೆಂಬದನ್ನು ಕೇಳಿ ಆತನು ಸಮಾಧಾನಪಟ್ಟನು. ಬೈರಾಗಿಣಿಯನ್ನು ನೋಡಿ ಬಾದಶಹನು ಸುಪ್ರಸನ್ನನಾಗಿದ್ದನು. ಕೆಲವು ಜನರ ಮುಖಚರ್ಯದಲ್ಲಿ ಚಿತ್ತಾಹಾರಕ ಶಕ್ತಿಯು ಸ್ವಾಭಾವಿಕ ವಾಗಿಯೇ ಇರುತ್ತದೆ. ಅದರಂತೆ ಬೈರಾಗಿಣಿಯ ಮುಖಚರ್ಯದ ಲಕ್ಷಣವಿದ್ದು, ಆಕೆಯು ಶಹನ ಚಿತ್ತವನ್ನು ಸ್ವಾಭಾವಿಕವಾಗಿ ಹರಣ ಮಾಡಿದ್ದಳು. ಆಕೆಯ ಬಾಯಿಂದ ಎರಡು ಪದ ಗಳನ್ನು ಕೇಳಬೇಕೆಂಬ ಇಚ್ಛೆಯು ಶಹನಿಗೆ ಉತ್ಪನ್ನವಾಯಿತು. ಆತನು ನಜೀಬ ಉದ್ದೌಲನಿಗೆ –''ವಜೀರಸಾಹೇಬ, ಈ ಹುಡುಗೆಯು ಯಾವ ಜಾತಿಯವಳು? ಈಕೆಯ ಉಡಿಗೆ–ತೊಡಿಗೆ ಗಳು ವಿಲಕ್ಷಣವಾಗಿ ತೋರುವವು. ಈಕೆಯಲ್ಲಿರುವ ತಂತುವಾದ್ಯವನ್ನು ನೋಡಿದರೆ, ಈಕೆಗೆ ಹಾಡಲಿಕ್ಕೆ ಬರಬಹುದೆನ್ನುವ ಹಾಗೆ ತೋರುತ್ತದೆ. ಹೇಳಿರಿ, ಒಂದೆರಡು ಪದಗಳನ್ನು ಹಾಡೆಂದು ಈಕೆಗೆ ಹೇಳಿರಿ,'' ಎಂದು ನುಡಿದನು. ಅದಕ್ಕೆ ನಜೀಬನು– ''ಖಾವಿಂದ, ಈಕೆಯು ಬೈರಾಗಿಣಿಯು. ನಮ್ಮ ದರವೇಶಿಗಳಂತೆ ಬೈರಾಗಿಣಿಯರು ದೇವರ ಸ್ತೋತ್ರಪದ ಗಳನ್ನು ಹಾಡಿ ಭಿಕ್ಷೆಬೇಡಿ ಹೊಟ್ಟೆ ತುಂಬಿಕೊಳ್ಳುವರು. ಈಕೆಗಾದರೂ ಹಾಡಲಿಕ್ಕೆ ಬರುತ್ತಿರಲೇ ಬೇಕು ಎಂದು ಹೇಳಿ ಬೈರಾಗಿಣಿಗೆ–ಏ ಛೋಕರೀ, ಬಾದಶಹರವರು ನಿನ್ನ ಬಾಯಿಂದ ಎರಡು ಹಾಡು ಕೇಳಬೇಕೆನ್ನುತ್ತಾರೆ. ನಿನ್ನ ವೀಣೆಯನ್ನು ಸಜ್ಜುಮಾಡಿಕೊಂಡು ಚನ್ನಾಗಿ ಹಾಡು, ಎಂದು ಹೇಳಿದನು. ಆಗ ಬೈರಾಗಿಣಿಯು ಎದ್ದು ಬಾದಶಹನಿಗೆ ನೆಲಮುಟ್ಟಿ ಮುಜುರೆಮಾಡಿ ಆತನ ಕುದುರೆಯ ಮುಂದೆ ಕುಳಿತು ತನ್ನ ವೀಣೆಯ ಕಿವಿಗಳನ್ನು ತಿರುವಿ ಸಪ್ತಸ್ವರಗಳನ್ನು ಕೂಡಿಸಿ ದಳು. ಬಳಿಕ ಆಕೆಯು ಮತ್ತೆ ಎದ್ದುನಿಂತು ಬಾದಶಹನಿಗೆ ಮುಜುರೆಮಾಡಿ ಮುಂದಕ್ಕೆ ಸರಿದುನಿಂತು ಗಾಯನಮಾಡಡತೊಡಗಿದಳು.

ಮೊದಲೇ ಸ್ತ್ರೀಜಾತಿ; ಅದರಲ್ಲಿ ನವಯೌವನ; ಮೇಲೆ ಸುಮನೋಹರಕಂಠ; ಕೇಳುವದೇನು? ಬೈರಾಗಿಣಿಯು ಗಿರಡಿಯಮೇಲೆ ಗಿರಡಿಯ ಹೊರಳಿಸಿ ಹಾಡತೊಡಗಲು, ಬಾದಶಹನು ಸಂತೋಷಭರಿತನಾದನು. ನಮ್ಮ ದೇಶದ ಯಾವತ್ತು ತಂತುವಾದ್ಯಗಳಲ್ಲಿ

ವೀಣೆಯು ಬಹು ಸುಸ್ವರವುಳ್ಳದ್ದೆಂದು ತಿಳಿಯಲ್ಪಟ್ಟಿರುವದು. ನಮ್ಮವರಿಗಂತು ಅದು ಪ್ರಿಯವಾದದ್ದೇ ಸರಿ; ಆದರೆ, ವಿಲಾಯತಿಯ ಜನರಿಗೂ ಅದು ಬಹು ಮನೋಹರವಾಗಿ ತೋರಿತು. ಬೈರಾಗಿಣಿಯ ಸುದೈವದಿಂದ ಅಂದಿನ ಆಕೆಯ ಗಾಯನವು ಬಹು ರಮ್ಯವಾಯಿತು. ಆಕೆಯ ಗಾಯನ- ವಾದನಗಳು ಸಶಾಸ್ತ್ರವಾಗಿಯೂ, ತಾಲಬದ್ಧವಾಗಿಯೂ ಇದ್ದವು. ಆ ತರುಣ ಬೈರಾಗಿಣಿಯು ಆನಂದಪರವಶಳಾಗಿ ಗಾಯನಮಾಡುತ್ತಿರಲು, ವೀಣೆಯನಾದ ವಾವುದು, ಆಕೆಯ ಮಧುರ ಕಂಠಧ್ವನಿಯಾವದು ಎಂಬುದನ್ನೂ, ಸುಜಾಉದ್ದೌಲನಂಥ ರಸಿಕ ಗಾಯನಪಟು ಸರದಾರನು ಕೂಡ ತಿಳಿಯದಾದನು. ಅಂದಬಳಿಕ ಉಳಿದವರಪಾಡೇನು? ವಿಲಾಯತಿಯ ಆ ಪಠಾಣ ಜನರಿಗೆ ಬೈರಾಗಿಣಿಯ ಹಾಡಿನೊಳಗಿನದೊಂದು ಅಕ್ಷರಸಹ ತಿಳಿಯುತ್ತಿದ್ದಿಲ್ಲ; ಆದರೆ ಅವರು ನಾದಲುಬ್ಧರಾಗಿ ಬೈರಾಗಿಣಿಯ ಸುತ್ತು ಮುತ್ತು ನೆರೆದಿದ್ದರು. ಹೀಗೆ ಎಲ್ಲರೂ ಆನಂದ ಪರವಶವಾಗಿರುವಾಗ ಬೈರಾಗಿಣಿಯು ತನ್ನ ಗಾಯನವನ್ನು ನಿಲ್ಲಿಸಿ ವೀಣೆಯನ್ನು ಕೆಳಗಿಟ್ಟು, ಬಾದಶಹನಿಗೆ ನೆಲ ಮುಟ್ಟಿ ಸಲಾಮುಮಾಡಿ ಮತ್ತೆ ಕೈ ಜೋಡಿಸಿ ನಿಂತುಕೊಂಡು–''ಖಾವಿಂದ, ನಾನು ಹಿಂದೂ ಬೈರಾಗಿಣಿಯು ನಿಮ್ಮ ವಿಲಾಯತಿಯ ಜನರ ಸ್ಥಿತಿ–ರೀತಿಗಳು ನನಗೆ ಗೊತ್ತಿಲ್ಲದ್ದರಿಂದ, ನಾನು ಇಲ್ಲಿ ಒಂದು ಕ್ಷಣವಾದರೂ ಇರಲಾರೆನು. ತಾವು ನನ್ನ ಹಡೆದ ತಾಯಿ–ತಂದೆಗಳಹಾಗೆ ಇರುವಿರಿ. ನನಗೆ ಎರಡುದಿನ ಅನ್ನವಿಲ್ಲ, ಇಲ್ಲಿ ನೀರು ಕುಡಿಯುವದಕ್ಕೂ ನನಗೆ ಮನಸ್ಸಾಗಲೊಲ್ಲದು. ದಯಮಾಡಿ ನನ್ನನ್ನು ಮರಾಟರ ಛಾವಣಿಗೆ ಕಳಿಸಬೇಕು. ಅಲ್ಲಿ ಭಿಕ್ಷೆಬೇಡಿ ಹೊಟ್ಟೆ ತುಂಬಿಕೊಳ್ಳುವೆನು.'' ಎಂದು ಬೇಡಿ ಕೊಳ್ಳಲು, ನಜೀಬಉದ್ದೌಲನು ಆಕೆಯ ಮಾತಿನ ಅಭಿಪ್ರಾಯವನ್ನು ಬಾದಶಹನಿಗೆ ತಿಳಿಸಿದನು. ಕೂಡಲೆ ಬಾದಶಹನು ಉತುಫಖಾನನಿಗೆ–''ಖಾನಸಾಹೇಬ, ಈಗಲೆ ಈಕೆಯನ್ನು ನಮ್ಮ ಛಾವಣಿಯಿಂದ ಹೊರಡಿಸಿ ಸುರಕ್ಷಿತವಾಗಿ ಮರಾಟರ ಛಾವಣಿಗೆ ಮುಟ್ಟಿಸಿಬಿಡಿರಿ. ಈಕೆಯನ್ನು ಯಾರೂ ಬಲಾತ್ಕರಿಸ ದಂತೆಯೂ, ಈಕೆಗೆ ಯಾವ ಬಗೆಯ ತೊಂದರೆಯು ತಟ್ಟದಂತೆಯೂ ಎಚ್ಚರಪಡಿರಿ. ಅಲ್ಲಾ–ಇನಶಾನ್, ಯಾರಾದರೂ ಈಕೆಯ ಕೈ ಮೈ ಮುಟ್ಟಿದರೆ, ಅವರ ಕೈ ಕಡಿಸುವೆನೆಂಬುದನ್ನು ಚನ್ನಾಗಿ ನೆನಪಿನಲ್ಲಿಡಿರಿ.

ಈ ಮೇರೆಗೆ ಅಜ್ಞಾಪಿಸಿ ಬಾದಶಹನು ಇನ್ನು ಮುಂದಕ್ಕೆ ಸಾಗತಕ್ಕವನು; ಅಷ್ಟರಲ್ಲಿ ಹಾಫೀಜಹಮಂತಖಾನನು ಬಾದಶಹನ ಕುದುರೆಯ ಬಳಿಗೆ ತನ್ನ ಕುದುರೆಯನ್ನು ಒಯ್ದು– ''ಖಾವಿಂದ, ಈ ಬಡವೆಯನ್ನು ಇಷ್ಟು ಹೊತ್ತು ದಣಿಸಿರುವೆವು. ಈಕೆಗೆ ನಮ್ಮಿಂದ ಏನಾದರೂ ಉಚಿತವು ದೊರೆಯತಕ್ಕದ್ದೆಂದು ನನಗೆ ತೋರುತ್ತದೆ,'' ಎಂದು ಸೂಚಿಸಿ, ತನ್ನ ಜೊಕ್ಕಣದೊಳಗಿಂದ ಮೂರು ಹೊನ್ನುಗಳನ್ನು ತೆಗೆದು ಬೈರಾಗಿಣಿಯ ಉಡಿಯಲ್ಲಿ ಚಲ್ಲಿ ದನು. ಆಗ ಬಾದಶಹನು– ''ರಹಮಂತಖಾನ, ಈ ಕಾಲದಲ್ಲಿ ನೀವು ನನಗೆ ಯೋಗ್ಯ ಸೂಚನೆ ಮಾಡಿದಿರಿ; ಈಕೆಗೆ ನಮ್ಮಿಂದೇನೂ ಮುಟ್ಟದಿದ್ದರೆ, ದುರಾಣಿಗಳು ಕಾಡುಜನರೆಂತಲೂ, ದಯಾಶೂನ್ಯರೆಂತಲೂ, ಲುಬ್ಧರೆಂತಲೂ, ಮೂರ್ಖರೆಂತಲೂ ಈ ಬೈರಾಗಿಣಿಯು ಭಾವಿಸಿ, ಮರಾಟರ ಮುಂದೆ ನಮ್ಮ ಹರಲಿಯನ್ನು ಮಾಡಬಹುದಾಗಿತ್ತು, ಹೀಗಾಗುವದು ಯೋಗ್ಯ

ವಲ್ಲ,'' ಎಂದು ನುಡಿದು ಆತನು ತನ್ನ ನಂಬಿಗೆಯ ಸೇವಕನಕಡೆಗೆ ಹೊರಳಿ– ''ಜವಾಮರ್ದ ಬಹಾಲೀಮು, ಈ ಕಾಫರರ ಹುಡುಗೆಗೆ ಖುರಾಸಾಣದ ಬಾದಶಹನ ನೆನಪು ಇರುವಂತೆ, ಒಂದು ಬೊಗಸೆತುಂಬ ಮೊಹರುಗಳನ್ನು ಈಕೆಯ ಉಡಿಯಲ್ಲಿ ಹಾಕಿ, ಇಷ್ಟು ಇನಾಮನ್ನು ಬಾದಶಹನು ಕೊಟ್ಟಿರುವನೆಂದು ಮಹಾರಾಷ್ಟ್ರರಾಜನಾದ ಬಾವುಸಾಹೇಬನಿಗೆ ತಿಳಿಸೆಂದು ಈಕೆಗೆ ಹೇಳು'' ಎಂದು ಆಜ್ಞಾಪಿಸಿದನು. ಆಗ ಸುಜಾಉದ್ದೌಲನೂ ಬೈರಾಗಿಣಿಗೆ ಕೈಯೊಳಗಿನ ಸಲಕಡಿಯನ್ನು ಉಚಿತಕೊಟ್ಟು ವಿನಯದಿಂದ ಬಾದಶಹನಿಗೆ–''ಹುಜೂರ. ಕೈ ಸಡಿಲು ಬಿಟ್ಟು ಇನಾಮು ಕೊಡಲಿಕ್ಕೆ ನಮ್ಮ ಬಳಿಯಲ್ಲಿ ವಿಪುಲಧನಸಂಗ್ರಹವೆಲ್ಲಿದೆ? ಸದ್ಯಕ್ಕೆ ದಂಡಿನವರಿಗೆ ಸಂಬಳ ಕೊಡುವದರೊಳಗೇ ನಮಗೆ ಸಾಕುಬೇಕಾಗಿಹೋಗಿದೆ. ಈಗ ಖಜಾನೆಯಲ್ಲಿ ರೋಖ ಸಿಲಕು ಬಹು ಸ್ವಲ್ಪವಿರುವದೆಂದು ಮೊನ್ನೆ ನಮ್ಮ ದಿವಾಣ ಕಾಶೀನಾಥ ಪಂಡಿತನು ಅನ್ನುತ್ತಿದ್ದನು.'' ಎಂದು ನುಡಿಯುತ್ತಿರಲು ನಜೀಬಉದ್ದೌಲನು ಮುಂದಕ್ಕೆ ಹೋಗಿ–ನಿಮ್ಮಂತೆ ನಮ್ಮ ಭಾಂಡಾರದಲ್ಲಿಯೂ ಸಿಲುಕು ಸರಿದುಹೋಗಿರುವದು. ಆದರೂ ಚಿಂತೆಮಾಡುವ ಕಾರಣವಿಲ್ಲ.'' ಎಂದು ನುಡಿದು, ತನ್ನ ಕೊರಳೊಳಗಿನ ಹತ್ತು ಎಳೆಯ ಗೋಪನ್ನು ಬೈರಾಗಿಣಿಯ ಮೇಲೆ ಒಗೆದನು. ಇದನ್ನು ನೋಡಿ ಅಲ್ಲಿದ್ದ ಉಳಿದಸರದಾರರು, ನಾನುಕೊಡು–ನೀನು ಕೊಡು ಅನ್ನುತ್ತ ಅಭಿಮಾನದಿಂದ ಕೈಗೆಬಂದಂತೆ ಕೊಡಲು, ಬೈರಾಗಿಣಿಯ ಪ್ರಾಪ್ತಿಯು ನೋಡುವವರಿಗೆ ಕಣ್ಣು ಕಿಸರಾಯಿತು. ಅದನ್ನು ನೋಡಿ ಬಾದಶಹನು ಸಂತೋಷಪಟ್ಟು ಮತ್ತೆ ಲುತುಫಖಾನನಿಗೆ–''ಸರದಾರ, ಈ ಹುಡುಗೆಯನ್ನು ಈಕೆಯ ಈ ಆಸ್ತಿಯೊಡನೆ ಈಗಲೆ ಸುರಕ್ಷಿತವಾಗಿ ಮರಾಟರ ಛಾವಣಿಗೆ ಮುಟ್ಟಿಸಿರಿ. ನಮ್ಮ ಅಪ್ಪಣೆಯಲ್ಲಿ ಅಂತರವಾದರೆ ಅದಕ್ಕೆ ನೀವೇ ಜವಾಬುದಾರರು,'' ಎಂದು ಹೇಳಿ; ತನ್ನ ಕುದುರೆಯನ್ನು ಬಿಟ್ಟನು. ಮೊದಲೇ ನಿಂತು ನಿಂತು ಬೇಸತ್ತಿದ್ದ ಆತನ ಶ್ರೇಷ್ಠವಾದ ಕುದುರೆಯು ಭರದಿಂದ ಸಾಗಿತು. ಆತನನ್ನು ಹಿಂಬಾಲಿಸಿ ಆತನ ಮಿತ್ರರ ಕುದುರೆಗಳೂ ನಡೆದವು.

ಇತ್ತ ಲುತುಫಖಾನನಿಗೆ ಬಹಳ ವಿಷಾದವಾಯಿತು. ಆತನು ಬೈರಾಗಿಣಿಗೆ ಮರುಳಾದದ್ದನ್ನು ವಾಚಕರು ಬಲ್ಲರು. ತಾನು, ಖುದಾಯಾರ–ದಾವುದರ ಬಾಯಿಬಡಿದು ಬೈರಾಗಿಣಿಯನ್ನು ಅಪಹರಿಸಬೇಕೆಂದು ಆತನು ಮಾಡಿದ್ದನು; ಆದರೆ ಅಕಸ್ಮಾತ್ ಅಲ್ಲಿಗೆ ಬಾದಶಹನು ಬಂದದ್ದರಿಂದ ಬಟ್ಟಿಕೆಟ್ಟುಹೋಯಿತು. ಆದರೂ ಬೈರಾಗಿಣಿಯ ಮೇಲಿನ ಆತನ ಆಶೆಯು ಒಮ್ಮೆಲೆ ಹೋಗಲಿಲ್ಲ, ತನಗೆ ಅನುಕೂಲವಾಗುವದಕ್ಕಾಗಿ ಆತನು ಬೈರಾಗಿಣಿಗೆ ಪರಿಪರಿಯಾಗಿ ಹೇಳಿ ಕೊಂಡನು. ನನಗೆ ವಶವಾದರೆ ನಿನಗೆ ಇಂಥ ಇಂಥ ಲಾಭಗಳಾಗುವವು, ನೀನು ಇಂಥ ಇಂಥ ಪದವಿಗೇರುವೆ ಎಂದು ಬೈರಾಗಿಣಿಯ ಬಾಯಲ್ಲಿ ನೀರು ಒಡೆಯುವ ಹಾಗೆ ಖಾನನು ಸವಿಯನ್ನು ಸುರಿಸಿದನು. ಬಹಳ ಹೇಳುವದೇನು? ಆತನು ಬೈರಾಗಿಣಿಗೆ ಕೈಮುಗಿದನು, ಕಾಲುಬಿದ್ದನು; ಕಡೆಗೆ ಬೆದರಿಕೆ ಹಾಕಿದನು. ಆದರೆ ಆ ಶುದ್ಧಾಂತಃಕರಣದ ಪಾಪಭೀರುವಾದ ದಿಟ್ಟಬೈರಾಗಿಣಿಯು ಯಾತಕ್ಕೂ ಹಣಿಯಲಿಲ್ಲ. ಆಕೆಯು ಆಗಾಗ್ಗೆ

ಖಾನನಿಗೆ–''ನಾನೊಬ್ಬ ತಿರಕರಹುಡುಗೆಯು. ನನಗೇಕೆ ಇಷ್ಟುಮಾನ? ತಮ್ಮಂಥ ದೊಡ್ಡ ಮನುಷ್ಯರು ಇಂಥ ಅಲ್ಲದಮಾತಿಗೆ ಹೋಗತಕ್ಕದ್ದಲ್ಲ, ಸರದಾರಸಾಹೇಬ, ಸುಮ್ಮನೆ ತಡ ಮಾಡಬೇಡರಿ. ಬಾದಶಹರ ಅಪ್ಪಣೆಯಂತೆ ಮೊದಲು ನನ್ನನ್ನು ದಾಟಹಾಕಿರಿ ಎಂದು ಹೇಳಿ ಕೊಳ್ಳುತ್ತಿದ್ದಳು. ಕ್ರೂರ ಬಾದಶಹನ ಶಾಸನಕ್ಕೂ ಅಂಜದೆ ತಾನು ಮಾಡಿದ ಯತ್ನವು ನಿಷ್ಫಲ ವಾದದ್ದನ್ನು ನೋಡಿ ಲುತುಫಖಾನನು ಚಡಪಡಿಸಿದನು; ಆದರೂ ಬಾದಶಹನ ಭಯದಿಂದ ಬೈರಾಗಿಣಿಯನ್ನು ಬಲಾತ್ಕರಿಸಲಾರದೆ ಆತನು ಸಂತಾಪದಿಂದ ತಕ್ಕ ಸನ್ನಾಹದೊಡನೆ ಆಕೆ ಯನ್ನು ಮರಾಟರ ಛಾವಣಿಗೆ ನಿರ್ವಾಹವಿಲ್ಲದೆ ಕಳಿಸಬೇಕಾಯಿತು.

## ಪಶ್ಚಾತ್ತಾಪ

ಹೀಗೆ ಉಭಯಸೈನ್ಯಗಳೂ ತಮ್ಮ ತಮ್ಮ ಸ್ಥಳಗಳಲ್ಲಿ ಬೀಡು ಬಿಟ್ಟುಕೊಂಡು ಕುಳಿತಿದ್ದವು. ಮುಂದುವರಿದು ಏರಿಹೋಗುವ ಧೈರ್ಯವು ಒಬ್ಬರಿಗೂ ಆಗಲೊಲ್ಲದು. ಒಬ್ಬರು ಮತ್ತೊಬ್ಬರಿಗೆ ಅನ್ನ ಸಾಮಗ್ರಿಯು ಮುಟ್ಟದಂತೆ ಮಾಡತೊಡಗಿದರು. ಮರಾಟರ ಕಡೆಯ ಪೆಂಡಾರಿಗಳು ಅತ್ಯಂತ ಚಪಲರು. ಇಂದು ನಾಗಪುರದಲ್ಲಿದ್ದರೆ ನಾಳೆ ಅವರು ದಿಲ್ಲಿಯ ಲ್ಲಿರುತ್ತಿದ್ದರು. ದುರಾಣಿಯ ಸೈನ್ಯಕ್ಕೆ ಮುಟ್ಟುವ ಅನ್ನಸಾಮಗ್ರಿಯನ್ನು ಅಪಹರಿಸುವದು ಅವರ ಕೆಲಸ ವಾಗಿತ್ತು, ಹೀಗೆ ಪೆಂಡಾರಿಗಳು ಅಬದಾಲಿಗೆ ಬಹಳತೊಂದರೆ ಕೊಡಹತ್ತಿದರು. ಆಗ ಅಬದಾಲಿಯು ತನ್ನ ಶೂರರಾವುತರ ಸಹಾಯದಿಂದ ಮರಾಟರನ್ನು ತುಂಡರಿಸಹತ್ತಿ ದನು. ಇದರಿಂದ ಮರಾಟರಿಗೆ ಅನ್ನಸಂಗ್ರಹವು ಮುಟ್ಟದಂತಾಯಿತು. ಮರಾಟರ ಕ್ರೂರತನಕ್ಕಾಗಿ ಉತ್ತರ ಹಿಂದುಸ್ಥಾನದ ಜನರು ಅವರನ್ನು ಬಹಳವಾಗಿ ದ್ವೇಷಿಸುತ್ತಿದ್ದರು. ಮರಾಟರು ಹಾದಿಯನ್ನು ಕೇಳಿದರೆ, ಅವರು ಬುದ್ಧಿಪೂರ್ವಕವಾಗಿ ದುರಾಣಿಯ ಶಹನ ಪಾಳಯದಕಡೆಯ ಹಾದಿಯನ್ನು ತೋರಿಸುತ್ತಿದ್ದರು. ಇದರಿಂದ ಮರಾಟರು ಅನಾಯಾಸವಾಗಿಯೇ ಅಫಗಾಣರ ಬಾಯಿಗೆ ಹೋಗಿ ಮರಣ ಹೊಂದುತ್ತಿದ್ದರು. ಹೀಗಾಗಿ ಮರಾಟರು ಬಹಳ ಅಂಜಿದರು. ಅವರು ತಮ್ಮ ಪಾಳಯವನ್ನು ಬಿಟ್ಟು ದೂರ ಹೋಗದಾದರು. ದಕ್ಷಿಣದನಿವಾಸಿಗಳಾದ ಅವರಿಗೆ ಉತ್ತರ ಹಿಂದುಸ್ಥಾನದೊಳಗಿನ ಹಾದಿಗಳ ಗೊತ್ತು ಇದ್ದಿಲ್ಲ, ಅದರಲ್ಲಿ, ಉತ್ತರ ಹಿಂದುಸ್ಥಾನದ ಪ್ರಜೆಗಳು ಅವರಿಗೆ ಸೇರಿದವರು. ಅಬದಾಲಿಯಂತು ಅವರನ್ನು ನುಂಗಲಿಕ್ಕೆ ಆಯೆಂದು ಬಾಯಿ ತೆರೆದು ನಿಂತಂತೆ ಆಗಿತ್ತು, ಹೀಗಾಗಿ ಮರಾಟರು ದುರಾಣಿಗಳ ಹೆಸರು ಕೇಳಿದರೆ ಗದಗುಟ್ಟಿ ನಡಗ ಹತ್ತಿದರು. ಮೊದಲಿಗೆ ಅಫಗಾಣರೂ, ಉತ್ತರಹಿಂದುಸ್ಥಾನದ ನಿವಾಸಿಗಳೂ ಮರಾಟರ ಹೆಸರು ಕೇಳಿದರೆ ನಡಗುತ್ತಿದ್ದರು. ಈಗ ವಿಪರೀತ ಸ್ಥಿತಿಯು ಒದಗಿ ದಂತಾಗಿತ್ತು, ಮರಾಟರ ಅನ್ನ ಸಾಮಗ್ರಿಯು ತೀರಿತು. ಹೊಸ ಸಾಮಗ್ರಿಯು ಹೊರಗಿನಿಂದ ಬಾರದಾಯಿತು. ಮುಂದೆ ಏನು ಮಾಡಬೇಕೆಂಬ ಚಿಂತೆಯು ಮರಾಟರಿಗೆ ಉತ್ಪನ್ನವಾಯಿತು.

ಮರಾಟರ ಈ ದುರ್ದೆಸೆಯನ್ನು ನೋಡಿ, ಉತ್ತರಹಿಂದುಸ್ಥಾನದ ರೈತರಿಗೆ ಸಂತೋಷ ವಾಗತೊಡಗಿತ್ತು ಇದಕ್ಕೆಲ್ಲ ಮರಾಟರ ಕ್ರೂರತನವೇ ಕಾರಣವು. ಉತ್ತರದವರು ಸ್ವಾಭಾವಿಕ ವಾಗಿಯೇ ವಿಲಾಯತಿಯ ಪಠಾಣ ಜನರನ್ನು ದ್ವೇಷಿಸುತ್ತಿದ್ದರು; ಆದರೆ ಭಾವೂಸಾಹೇಬನ ಜನರು ಮನಬಂದಂತೆ ಜನರನ್ನು ಪೀಡಿಸಿ ದ್ವೇಷವನ್ನು ಸಂಪಾದಿಸಿದ್ದರಿಂದ, ಆ ಉತ್ತರದ ಜನರಿಗೆ ಮರಾಟರಿಗಿಂತ ಪಠಾಣರೇ ಒಳ್ಳೆಯವರಾಗಿ ತೋರಿದರು.

ಮರಾಟರಿಗೆ ದ್ರವ್ಯದ ದುಷ್ಕಾಳವಾದದ್ದರಿಂದ ಅವರ ಸರದಾರನಾದ ಗೋವಿಂದ ಪಂತ ಬುಂದಲೆಯೆಂಬನು ಇಪ್ಪತ್ತು ಲಕ್ಷ ರೂಪಾಯಿಗಳನ್ನು ದಿಲ್ಲಿಯ ಮಾರ್ಗವಾಗಿ ಕುರು ಕ್ಷೇತ್ರಕ್ಕೆ ಕಳಿಸಿದನು; ಆದರೆ ರಾಜೇಬಹಾದ್ದರನಾರೋಶಂಕರ ಎಂಬವನಿಂದ ಆ ಹಣವನ್ನು ಕುರುಕ್ಷೇತ್ರಕ್ಕೆ ಸುರಕ್ಷಿತವಾಗಿ ಮುಟ್ಟಿಸುವದು ಆಗಲಿಲ್ಲ, ಮಧ್ಯದಲ್ಲಿ ದುರಾಣಿಶಹನು ಅದನ್ನು ನುಂಗಿದನು. ಈ ವರ್ತಮಾನವನ್ನು ಕೇಳಿ ಭಾವೂಸಾಹೇಬ ಗೋವಿಂದಪಂತ ಬುಂದಲೆಗೆ–''ಪಂತ, ನಿಮ್ಮಿಂದ ಧಾನ್ಯಸಂಗ್ರಹವ ಒದಗಿಸಿಕೊಡುವದು ಆಗಲೊಲ್ಲದು. ಯಮುನಾತೀರದಲ್ಲಿಯೂ, ದಿಲ್ಲಿಯ ಬಳಿಯಲ್ಲಿಯೂ ಅಲ್ಲಲ್ಲಿ ತಿರುಗುತ್ತಿರುವ ನಮ್ಮ ಸೈನ್ಯವನ್ನು ಒಟ್ಟುಗೂಡಿಸಿ, ದುರಾಣಿಯ ಸೈನ್ಯದ ಸಮಾಚಾರವನ್ನು ತಕ್ಕೊಂಡು, ಆತನಿಗೆ ಧಾನ್ಯಸಂಗ್ರಹವು ಒದಗಿದಂತೆ ಮಾಡಬೇಕು,'' ಎಂದು ಆಜ್ಞಾಪಿಸಿದನು. ಗೋವಿಂದಪಂತನು ಹೆಸರಾದ ವೀರನು. ಆತನು ಶ್ರೀಮಂತರ ಅಪ್ಪಣೆಯನ್ನು ಶಿರಸಾವಹಿಸಿ ಸೈನ್ಯದ ಗುಂಪುಗಳನ್ನು ಒಟ್ಟುಗೂಡಿಸಿ, ಹನ್ನೆರಡುಸಾವಿರ ರಾವುತರೊಡನೆ ದುರಾಣಿಯಮೇಲೆ ಸಾಗಿಹೋದನು. ಅಂತರವೇದಿಯಿಂದಲೂ, ರೋಹಿಲ ಖಂಡದೊಳಗಿಂದಲೂ ಹೋಗುತ್ತಿದ್ದ ದುರಾಣಿಯ ಅನ್ನ ಸಂಗ್ರಹವನ್ನು ಆತನು ನಡುವೇ ಪ್ರತಿಬಂಧಿಸಹತ್ತಿದನು. ಅದರಿಂದ ದುರಾಣಿಯ ಸೈನ್ಯ ದಲ್ಲಿಯೂ ಅನ್ನದ ದುರ್ಭಿಕ್ಷವು ಉಂಟಾಯಿತು. ಹೀಗೆ ಮರಾಟರಿಗೊದಗಿದ ವಿಪತ್ತು ತನ್ನ ಪಾಲಿಗೆ ಬಂದದ್ದನ್ನು ನೋಡಿ, ದುರಾಣಿಯು ಆಲೋಚಿಸತೊಡಗಿದನು; ಆದರೆ ಆತನು ಮಹಾಬುದ್ಧಿಶಾಲಿಯು. ಹೊತ್ತಿಗೆ ಸರಿಯಾದ ಹಂಚಿಕೆಯು ಅವನಿಗೆ ತಟ್ಟನೆ ಹೊಳೆಯುತ್ತಿತ್ತು, ಈ ಈಶ್ವರೀಕೃಪೆಯ ಯೋಗದಿಂದ ಆ ವೀರಪುರುಷನು, ಬಂದ ಗಂಡಾಂತರದಿಂದ ಆಗಾಗ್ಗೆ ಮುಕ್ತನಾಗುತ್ತಿದ್ದನು. ಗೋವೀದಪಂತನ ದಂಡಿನ ಪಾಳಯವು ಅಲ್ಲಿಂದ ಮೂವತ್ತುನಾಲ್ವತ್ತು ಹರದಾರಿಯ ಮೇಲೆ ಇತ್ತು, ಇಷ್ಟುದೂರ ಪಠಾಣರು ತನ್ನಮೇಲೆ ಸಾಗಿಬರುವದು ಅಸಂಭ ವವೆಂದು ತಿಳಿದು, ಆ ಮರಾಟಾವೀರನು ಸ್ವಲ್ಪ ಸೈನ್ಯವನ್ನು ಬಳಿಯಲ್ಲಿಟ್ಟುಕೊಂಡು ಉಳಿದ ಸೈನ್ಯವನ್ನೆಲ್ಲ ನಾಲ್ಕೂಕಡೆ ಪಸರಿಸಿ ಇಟ್ಟಿದ್ದನು. ಈ ಸುದ್ದಿಯನ್ನು ಗುಪ್ತಚಾರರ ಮುಖಾಂತರ ವಾಗಿ ಧೂರ್ತಅಬದಾಲಿಯು ತಿಳಿದು, ಅದಕ್ಕೆ ತಕ್ಕ ಆಟವನ್ನು ಹೂಡಿದನು. ಜ್ಯೋತ್ಯಾ ಗುಜರನೆಂಬ ಪ್ರಸಿದ್ಧ ಹೇರನು ಬುಂದಲೆ ಸರದಾರನ ಸ್ಥಿತಿ–ಗತಿಗಳನ್ನು ಯಥಾರ್ಥವಾಗಿ ಅಬದಾಲಿಗೆ ತಿಳಿಸಿದ್ದನು.

ಹೀಗಿರುವಾಗ ಕಾರ್ಯಕುಶಲನಾದ ಅಬದಾಲಿಯು, ವಜೀರ ಶಹಾವಲ್ಲಿಖಾನನ ಮಗನಾದ ಅತಾಯಿಖಾನನನ್ನು ಗೋವಿಂದಪಂತನಮೇಲೆ ಕೂಡಲೆ ಕಳಿಸಿಕೊಟ್ಟನು. ಬಾದಶಹನ

ತಂತ್ರದಂತೆ ಅತಾಯಿಖಾನನು ಹದಿನೈದು ಸಾವಿರ ರಾವುತರೊಡನೆ ಸದ್ದಿಲ್ಲದೆ ಗೋವಿಂದ ಪಂತನಮೇಲೆ ಸಾಗಿಹೋದನು. ಆತನ ಸಹಾಯಕ್ಕಾಗಿ, ನಜೀಬಖಾನರೋಹಿಲೆಯ ಮಾವ ನಾದ ದುಂದೀಖಾನ ರೋಹಿಲೆಯನ್ನೂ, ಉಮರಾವಗೀರ ಗೋಸಾವಿಯನ್ನೂ, ಅಹಮ್ಮದಖಾನ ಲಂಗಡಾ ಎಂಬವನನ್ನೂ ಅಬದಾಲಿಯು ಕಳಿಸಿದ್ದನು. ಅವರೆಲ್ಲರು ತಟ್ಟನೆ ಸಾಗಿಹೋಗಿ ಒಂದುರಾತ್ರಿಯಲ್ಲಿ ನಾಲ್ವತ್ತು ಹರದಾರಿಯ ಮಾರ್ಗವನ್ನು ಕ್ರಮಿಸಿದರು. ಈ ಯಾವ ಸುದ್ದಿಯೂ ಗೋವಿಂದಪಂತನಿಗೆ ಗೊತ್ತಾಗಿದ್ದಿಲ್ಲ. ಮೇಲಾಗಿ ಪಠಾಣರು ಗೋವಿಂದಪಂತ ನನ್ನು ವಂಚಿಸುವದಕ್ಕಾಗಿ, ತಮ್ಮ ಸೈನ್ಯದಲ್ಲಿ ಹೋಳಕರನ ನಿಶಾನೆಯಂಥ ನಿಶಾನೆಗಳನ್ನು ಉಪಯೋಗಿಸಿದ್ದರು. ಇದರಿಂದಂತು ಗೋವಿಂದಪಂತನ ಸೈನ್ಯದವರು ಪೂರಾ ಮೋಸ ಹೋದರು. ಅವರು ಅತಾಯಿಖಾನನ ಸೈನ್ಯವನ್ನು ನೋಡಿ, ಹೋಳಕರನ ಸೈನ್ಯವು ತಮಗೆ ಸಹಾಯ ಮಾಡುವದಕ್ಕಾಗಿ ಬರುವದೆಂದು ತಿಳಿದುಕೊಂಡು ನಿರ್ಭೀತರಾಗಿ, ಸ್ವಸ್ಥ ಇದ್ದರು. ಅಷ್ಟರಲ್ಲಿ ಅತಾಯಿಖಾನನ ಸೈನ್ಯವು ಗೋವಿಂದಪಂತನ ಸೈನ್ಯದಮೇಲೆ ಬಿದ್ದು ಕೈಗೆ ಸಿಕ್ಕವ ರನ್ನು ತುಂಡರಿಸಹತ್ತಿತು. ಮೊದಲ ಉಸಲಿಗೇ ರೋಹಿಲರು ಮರಾಟರ ಹದಿನೈದುನೂರು ಜನರ ಶಿರಚ್ಛೇದಮಾಡಿದರು. ಈ ಆಕಸ್ಮಿಕ ಮುತ್ತಿಗೆಯಿಂದ ಮರಾಟರು ಕಂಗೆಟ್ಟರು. ಅವರಿಗೆ ವ್ಯವಸ್ಥೆಯಿಂದ ಓಡಿಹೋಗಲಿಕ್ಕೂ ಬಾರದಾಯಿತು. ಅವರು ದಾರಿಸಿಕ್ಕತ್ತ ಓಡತೊಡಗಿದರು. ಈ ಘೋರಪ್ರಸಂಗದಲ್ಲಿ ಗೋವಿಂದಪಂತನು ಮುಂದುಗಾಣದೆ ಕುದುರೆಯನ್ನು ಹತ್ತಿ ಓಡಹತ್ತಿದನು. ಒಂದೆರಡು ಹರದಾರಿ ಓಡಿಹೋಗುತ್ತಿರಲು, ಆತನು ಕುದುರೆಯ ಮೇಲಿಂದ ಬಿದ್ದನು. ಪುನಃ ಆತನು ಕುದುರೆಯನ್ನು ಹತ್ತಿ ಮತ್ತೆ ಒಂದೆರಡು ಹರದಾರಿ ಓಡಿದನು. ಪುನಃ ಕುದುರೆಯ ಮೇಲಿಂದ ಬಿದ್ದನು. ''ಬಲವಿಲ್ಲದಾಗ ನೆಲವೆದ್ದು ಬಡಿಯಿತೆ''ನ್ನುವಂತೆ, ಆಗ ಗೋವಿಂದಪಂತನ ಕಾಲುಮುರಿದು, ಆತನಿಗೆ ಎದ್ದು ನಿಲ್ಲಲಿಕ್ಕೆ ಬಾರದಾಯಿತು, ಆ ಸ್ಥಿತಿಯಲ್ಲಿ ತಮ್ಮ ಕುದುರೆಯ ಮೇಲಿಂದ ಹಾರಿ ಆತನನ್ನು ಕುದುರೆಯ ಮೇಲೆ ಕುಳ್ಳಿರಿಸಲಿಕ್ಕೆ ಯಾರಿಗೂ ಅವಕಾಶವು ದೊರೆಯಲಿಲ್ಲ. ಗೋವಿಂದಪಂತನ ಮಗನೂ ನೆಲಕ್ಕೆ ಬಿದ್ದ ತನ್ನ ತಂದೆಯನ್ನು ಬಿಟ್ಟು ಓಡಿ ಹೋದನು. ಹೀಗೆ ಪರಾಧೀನನಾಗಿ ಬಿದ್ದಿದ್ದ ಗೋವಿಂದಪಂತನನ್ನು ಶತ್ರು ಗಳು ಸೆರೆಹಿಡಿದರು. ಗೋವಿಂದಪಂತನು ಪ್ರಾಣ ದಾನ ಮಾಡುವದಕ್ಕಾಗಿ ಅತಾಯಿಖಾನ ನನ್ನು ಬೇಡಿಕೊಂಡನು. ತನ್ನನ್ನು ಜೀವದಿಂದ ಬಿಟ್ಟರೆ, ಒಂದು ಕೋಟಿರೂಪಾಯಿ ಕೊಡುವೆ ನೆಂದು ಹೇಳಿಕೊಂಡನು; ಆದರೆ ಅತಾಯಿಖಾನನಿಗೆ ದಯೆಬರಲಿಲ್ಲ! ಆ ಯಮದೂತನು ಕೂಡಲೆ ಗೋವಿಂದಪಂತನ ಶಿರಚ್ಛೇದಮಾಡಿ, ಶಿರಸ್ಸನ್ನು ತಕ್ಕೊಂಡು ದಿಂಡವನ್ನು ಅಲ್ಲಿಯೇ ಚಲ್ಲಿಕೊಟ್ಟನು. ಅದು ಅಲ್ಪಕಾಲ ಚಟಪಟ ಒದ್ದಾಡಿ ತಣ್ಣಗಾಯಿತು. ಗೋವಿಂದಪಂತನ ಉಳಿದ ಸೈನ್ಯವು ದಿಕ್ಕುಪಾಲಾಗಿ ಓಡಿಹೋಯಿತು. ಬಳಿಕ ಅತಾಯಿಖಾನನು ಗೋವಿಂದ ಪಂತನ ಶಿರಸ್ಸನ್ನು ತಕ್ಕೊಂಡು ಆನಂದದಭರದಿಂದ ಶಹಾನ ಛಾವಣಿಯ ಕಡೆಗೆ ಸಾಗಿದನು.

ಗೋವಿಂದಪಂತನ ಶಿರಸ್ಸನ್ನು ನೋಡಿ ನಜೀಬಖಾನ ರೋಹಿಲೆಗಾದ ಆನಂದವು ಅವನ ಹೊಟ್ಟೆಯಲ್ಲಿ ಹಿಡಿಸದಾಯಿತು. ಆತನು ಆ ಶಿರಸ್ಸನ್ನು ಒಂದು ವಸ್ತ್ರದಲ್ಲಿ ಸುತ್ತಿ

ಕೊಂಡು ಶಹಾನ ಬಳಿಗೆ ಹೋಗಿ, ಅದನ್ನು ಆತನಿಗೆ ಕಾಣಿಕೆಯಾಗಿ ಕೊಟ್ಟನು. ಅಹಮ್ಮದ ಶಹನು ಅದನ್ನು ಒಬ್ಬ ವಕೀಲನ ಕೈಯಿಂದ ಸದಾಶಿವರಾವ ಬಾವುವಿನ ಕಡೆಗೆ ಕಳಿಸಿ–''ನಿಮ್ಮ ಸರದಾರನಾದ ಗೋವಿಂದಪಂತ ಬುಂದಲೆಯು ನಿಮ್ಮ ಸಲುವಾಗಿ ಸ್ವರ್ಗದಲ್ಲಿ ಸ್ಥಳನೋಡುವ ದಕ್ಕಾಗಿ ಮುಂದೆ ಹೋದನು. ನಿಮಗೆ ತಕ್ಕ ಸ್ಥಳವು ತಟ್ಟನೆ ಗೊತ್ತಾದದ್ದರಿಂದ, ನಿಮ್ಮನ್ನು ಕರೆಯುವದಕ್ಕಾಗಿ ಈಗ ತನ್ನ ಶಿರಸ್ಸನ್ನು ನಿಮ್ಮ ಬಳಿಗೆ ಕಳಿಸಿದ್ದಾನೆ. ಇದು ನಿಮ್ಮ ಗೋವಿಂದಪಂತನ ಶಿರಸ್ಸು ಅಹುದೋ ಅಲ್ಲವೋ ನೋಡಿಕೊಳ್ಳಬೇಕು.'' ಎಂಬರ್ಥದ ಪತ್ರವನ್ನೂ ಆ ವಕೀಲನ ಕೈಯಲ್ಲಿ ಕೊಟ್ಟಿದ್ದನು. ಭಾವು ಸಾಹೇಬನು ಗೋವಿಂದಪಂತನ ಶಿರಸ್ಸನ್ನೂ, ದುರಾಣಿಯ ಪತ್ರವನ್ನೂ ನೋಡಿ ಮನಸ್ಸಿನಲ್ಲಿ ಬಹು ವ್ಯಸನಪಟ್ಟನು. ಇದು ಗೋವಿಂದಪಂತನ ಶಿರಸ್ಸೇ ಎಂದು ಬಳಿಯಲ್ಲಿ ಕುಳಿತಿದ್ದ ಸರದಾರರು ಗೊತ್ತು ಹಿಡಿದರು. ಕೂಡಲೆ ಅವರ ಮೋರೆಗಳು ಕಪ್ಪಿಟ್ಟವು. ಅಂತರ್ವೇದಿ ಯೊಳಗಿನ ಒಬ್ಬ ವೀರ ಶಿರೋ ಮಣಿಯು ಅಡಗಿದನೆಂದು ಅವರು ಬಹಳ ವ್ಯಸನಪಟ್ಟರು. ಸೈನ್ಯದಲ್ಲೆಲ್ಲ ಈ ಸುದ್ದಿಯು ಹಬ್ಬಲು, ಹಾಹಾಕಾರವಿಟ್ಟಿತು. ಇಡಿಯ ಭಾವಣಿಯಲ್ಲಿ ಭಯ–ಶೋಕಗಳ ಸುಳಿದಾಟ ವಾಯಿತು. ಮರಾಟರು ಕೈಕಾಲು ಗೆಟ್ಟರು. ಈ ದಂಡಯಾತ್ರೆಯ ಲಕ್ಷಣವು ಬರಬರುತ್ತ ದುರ್ಲಕ್ಷಣವಿಟ್ಟಿದ್ದರಿಂದ, ಅವರ ಉತ್ಸಾಹವು ಕುಗ್ಗಿತು. ಹೀಗಿರುವಾಗ ಭಾವುಸಾಹೇಬನು ಅಬದಾಲಿಯ ಉತ್ತರಕ್ಕೆ ಪ್ರತ್ಯುತ್ತರವಾಗಿ–''ದುರಾಣೀಶಹಾ, ಆ ವೀರಸ್ವರ್ಗವು ಎಲ್ಲ ವೀರರ ಸಲುವಾಗಿಯೂ ಇರುತ್ತದೆ. ನಿಮ್ಮ ಸಲುವಾಗಿ ಅಲ್ಲಾನು ಬೇರೆ ಸ್ವರ್ಗವ ನಿರ್ಮಿಸಿರುವ ನೆಂದು ನೀವು ಸರ್ವಥಾ ತಿಳಿಯಬೇಡಿರಿ. ನೀವು ದೊಡ್ಡ ಕಂದಹಾರದ ಬಾದಶಹರು, ನಿಮ್ಮಂಥವರನ್ನು ನಾವು ಸ್ವರ್ಗಕ್ಕೆ ಕಳಿಸಬೇಕಾಗಿರಲು ನಮ್ಮ ಏಕನಿಷ್ಠ ಸರದಾರರಾದ ಗೋವಿಂದಪಂತರು ನಿಮ್ಮ ಸಲುವಾಗಿ ಯೋಗ್ಯಸ್ಥಳ ನೋಡಲಿಕ್ಕೆ ಮುಂದೆ ಹೋಗದಿದ್ದರೆ ಹ್ಯಾಗೆ? ಬಾದಶಹನೇ, ನಿನ್ನ ಯೋಗ್ಯತೆಗೆ ತಕ್ಕಂತೆ ವ್ಯವಸ್ಥೆ ಮಾಡುವದು ನಮ್ಮ ಕರ್ತವ್ಯ ವಲ್ಲವೆ? ಇಂಥ ಪವಿತ್ರಕರ್ತವ್ಯವನ್ನು ಜರಗಿಸುವದಕ್ಕಾಗಿಯೇ ನಮ್ಮ ಗೋವಿಂದಪಂತರು ಮುಂದೆ ಹೋಗಿರುವರು'' ಎಂದು ಪತ್ರ ಬರೆದು ಅವನ ವಕೀಲನನ್ನು ಕಳಿಸಿಕೊಟ್ಟನು.

ಇಷ್ಟೆಲ್ಲ ಆದಬಳಿಕ ನಮ್ಮ ಆ ತರುಣ ಮಹಾರಾಷ್ಟ್ರವೀರನು ದುಃಖದಿಂದ ಉಸುರ್ಗ ಳೆದು ಅಂತರ್ಗೃಹವನ್ನು ಪ್ರವೇಶಿಸಿದನು. ಗೋವಿಂದಪಂತನ ಮರಣದಿಂದ ಆ ತರುಣ ಪೇಶ್ವೆಯು ಬಹಳವಾಗಿ ನೊಂದುಕೊಂಡು ಚಿಂತಾಜ್ವರದಿಂದ ಚಡಪಡಿಸಹತ್ತಿದನು. ಆತನ ಮುಖವು ಕಳಾಹೀನವಾಯಿತು. ಸರ್ವಾಂಗಕ್ಕೆ ಪ್ರೇತಕಳೆಯೇರಿ, ಅದು ಬಲಹೀನವಾಯಿತು. ಪ್ರತ್ಯಕ್ಷ ಮೃತ್ಯುವು ಭಯಂಕರ ರೂಪತಾಳಿ ತನ್ನನ್ನು ನುಂಗಲಿಕ್ಕೆ ಧಾವಿಸಿಬರುತ್ತಿರುವಂತೆ ಆತನಿಗೆ ತೋರಿತು. ಹಿಂದೆ, ಮುಂದೆ, ಕೆಳಗೆ, ಮೇಲೆ, ಒಳಗೆ, ಹೊರಗೆ ಎಲ್ಲಕಡೆಯಲ್ಲಿಯೂ ಆತನಿಗೆ ಮೃತ್ಯುವಿನ ಸ್ವರೂಪವೇ ಕಾಣತೊಡಗಿತು. ಈ ಸ್ಥಿತಿಯಲ್ಲಿ ಆ ಮಾನಧನನಾದ ಭಾವುವು ಸಿಟ್ಟಿನಿಂದ ಅವಡುಗಚ್ಚಿ, ಹುಬ್ಬು ಗಂಟಿಕ್ಕಿ–''ಈ ದುರಾಣಿಯ ಗಂಟಲು ಹಿಚುಕುವ ಯೋಗವನ್ನು ಪರಮೇಶ್ವರನು ಈಗ ಒದಗಿಸಿಕೊಟ್ಟಿರಲಿಕ್ಕಿಲ್ಲವೆ? ಭರತಭೂಮಾತೆಯೇ?

ನಿನ್ನ ಪುತ್ರರೆನಿಸುವ ನಾವು ಮೂರ್ಖತನದಿಂದ ಆಚರಿಸಹತ್ತಿದ್ದರಿಂದ ಹೀಗೆ ಸಂತಾಪಕ್ಕೂ, ಲೋಕವಿಡಂಬನೆಗೂ ಒಳಗಾಗುತ್ತಿರಬಹುದೇನು? ಅಥವಾ, ಪುರಾಣ ಪ್ರಸಿದ್ಧಳಾದ ನಮ್ಮ ವೀರ ಮಾತೆಯೆನಿಸುವ ನಿನ್ನ ದುರ್ದೈವವು ಮುಂದುವರಿದಿರುವದೋ? ಕಾರಣವಾದರೂ ಏನಿರುವ ದೆಂಬದು ತಿಳಿಯದಾಗಿದೆ. ನಾನು ದಿಲ್ಲಿಯ ಬಾದಶಹನ ಸಿಂಹಾಸನದ ಬೆಳ್ಳಿಯ ತಗಡು ಸುಲಿದದ್ದು ಅನ್ಯಾಯವೆಂದು ಈ ಉತ್ತರದ ಬಾದಶಾಹಿಯ ಪಕ್ಷದಜನರು ಅನ್ನುವರು; ಆದರೆ ಹಿಂದಕ್ಕೆ ದುಷ್ಟ ಔರಂಗಜೇಬನ ಕಾಲದಲ್ಲಿ, ನಮ್ಮ ಪೂಜ್ಯಛತ್ರಪತಿಯ ರಾಯಗಡದೊಳಗಿನ ಸಿಂಹಾಸನವನ್ನು ಯಾತಿಕಖಾನನ ಹಸ್ತಕನಾದ ಕಾಸಮಖಾನನು ಕಿತ್ತು ಒಗೆದದ್ದು ನ್ಯಾಯವೆಂದು ಛತ್ರಪತಿಯ ಸೇವಕರು ನಾವು ತಿಳಿದುಕೊಳ್ಳೋಣವೆ? ಹಾಯ್ ಹಾಯ್! ದುಷ್ಟಯವನರು ನಮ್ಮ ಗುಡಿ–ಗುಂಡಾರಗಳನ್ನು ಕೆಡವಿದರು; ಮೂರ್ತಿಗಳನ್ನು ಭ್ರಷ್ಟಗೊಳಿಸಿದರು; ಪತಿವ್ರತೆ ಯರ ಮಾನಭಂಗಮಾಡಿದರುಃ ಬಡಪ್ರಜೆಗಳ ರುಂಡಗಳನ್ನು ಕರಕರಕೊಯ್ದರು! ಮುಸಲ್ಮಾನರ ಈ ಕ್ರೂರತನವೆತ್ತೋ ಹೋಯಿತು; ಆದರೆ, ನಮ್ಮ ದಂಡಯಾತ್ರೆಯ ಅನುಕೂಲತೆಗಾಗಿ ಹಿಂದಿನ ದುರ್ವೃತ್ತದ ಸ್ಮರಣದಿಂದ ಸಂತಾಪವಾಗಲು, ಈಗ ನಮ್ಮಿಂದ ಅಲ್ಪ–ಸ್ವಲ್ಪ ಪ್ರಜಾ ಪೀಡೆಯೂ, ಮುಸಲ್ಮಾನಧರ್ಮದ ವಿಡಂಬನೆಯೂ ಆದದ್ದು ಕ್ಷಮ್ಯವಲ್ಲವೆ? ಛೀ, ಛೀ! ಸಾತ್ವಿಕ ಸ್ವಭಾವದ ಆರ್ಯಭೂಮಾತೆಯೆ? ನಿನಗೆ ದೋಷವಿಡುವದು ನಿನ್ನ ಪುತ್ರರೆನಿಸುವ ನಮಗೆ ಭೂಷಣವಲ್ಲ, ನೀನು ಪರಮಸಾತ್ವಿಕೆಯು. ಧರ್ಮರಾಜನಂಥ ಅಜಾತಶತ್ರುಗಳನ್ನೇ ಪ್ರೇಮ ದಿಂದ ಅಪ್ಪಿ ಮುಂಡಾಡುವ ಕರುಣಾಶಾಲಿ ಯಾದ ಗಂಭೀರ ಸ್ವಭಾವದ ಅಧ್ಯಾತ್ಮದೃಷ್ಟಿಯ ತಾಯಿಯು ನೀನು! ಅಂದಬಳಿಕ, ನಮ್ಮಂಥ ರಾಜಸ–ತಾಮಸವೃತ್ತಿಯ ಮಕ್ಕಳನ್ನು ಯಾಕೆ ಮನ್ನಿಸುವೆ? ಹಿಂದಕ್ಕೆ ನೀನು ನಿನ್ನ ಹೊಟ್ಟೆಯ ಮಗನಾದ ನರಕಾಸುರನ ದುರ್ವರ್ತನವನ್ನು ಕೂಡ ತಡೆಯಲಿಲ್ಲ; ಶ್ರೀ ಹರಿಯು ಕೈಯಿಂದ ಅವನ ಸಂಹಾರಮಾಡಿಸಿದ್ದು ಲೋಕವಿಶ್ರುತ ವಾಗಿರುವದು. ಅದರಂತೆ, ಹಿರಣ್ಯಾಕ್ಷ–ಹಿರಣ್ಯಕಸಿಪು, ರಾವಣ–ಕುಂಭಕರ್ಣ, ದುರ್ಯೋಧನ –ದುಶ್ಯಾಸನ ಮೊದಲಾದ ವೀರಪುತ್ರರಿಂದ ನೀನು ವೀರಮಾತೆಯೆಂದು ಹೊಗಳಿಸಿಕೊಂಡರೂ ಆ ಮಕ್ಕಳ ದುರ್ವರ್ತನಕ್ಕಾಗಿ ಅವರ ಸದ್ಗುಣಗಳಾವ ವನ್ನೂ ಲೆಕ್ಕಿಸದೆ, ಅವರನ್ನು ನೀನು ದಂಡಿಸದೆ ಬಿಡಲಿಲ್ಲ! ಅಂದಬಳಿಕ ನನ್ನ ಪಾಡೇನು? ಆದರೆ ತಾಯೀ, ನಿನ್ನ ವೀರಪುತ್ರ ಚಿಮಣಾಜಿಯ ಮಗನೆನಿಸುವ ನಾನು, ಅಭಿಮಾನದಿಂದ ಈಗ ದಂಡಯಾತ್ರೆಯ ಉದ್ಯೋಗ ವನ್ನು ಕೈಕೊಂಡದ್ದು, ತಪ್ಪೋ–ಒಪ್ಪೋ, ನಾನರಿಯೆನು. ನಾನು ನಿನ್ನ ಕ್ಷೋಭಕ್ಕೇ ಗುರಿಯಾಗಲಿ, ಅಥವಾ ಪ್ರಸಾದಕ್ಕೇ ಪಾತ್ರನಾಗಲಿ, ನಿನ್ನ ದೌಹಿತ್ರನೆನಿಸುವ ನಾನು, ವೀರರಿಗೆ ಸಲ್ಲದ ಕೆಲಸ ವನ್ನು ಮಾತ್ರ ಎಂದೂ ಮಾಡಲಿಕ್ಕಿಲ್ಲ! ಭಾವುವಿನ ಕೃತಿಯು ಲೋಕಕ್ಕೆ ಮಾನ್ಯವಾಗಲಿಕ್ಕೆ– ಅಥವಾ ಅಮಾನ್ಯವಾಗಲಿಕ್ಕೆ, ಮುಂದೆ ಆತನಿಗೆ ಒದಗಬೇಕಾಗಿರುವ ಜಯಾಪಜಯಗಳು ಕಾರಣವಾಗಿರುವವು, ಭಾವುವು ಜಯಶಾಲಿಯಾದರೆ ಆತನ ತಪ್ಪೂ ಒಪ್ಪಾಗಿ, ಆತನು ಲೋಕಾದರಕ್ಕೂ, ಜನರ ಸ್ತುತಿ–ಸ್ತೋತ್ರಗಳಿಗೂ ಪಾತ್ರನಾಗುವನು. ಆತನು ಸೋತರೆ, ಆತನ

ಒಳ್ಳೆಯ ಕೆಲಸಗಳೂ ಕೆಟ್ಟವಾಗಿ ಆತನು ಲೋಕನಿಂದ್ಯನಾಗುವನು. ತಾಯೀ, ಆ ನಿಂದಾಸ್ತುತಿ ಗಳನ್ನು ಕಟ್ಟಿಕೊಂಡು ನಾನು ಮಾಡುವದೇನು? ಈಗ ನನ್ನ ಕೈಮೀರಿಹೋಗಿದೆ. ನಾನು ಹಿಂದಕ್ಕೆ ತಿರುಗಲಿಕ್ಕೆ ಬಾರದಷ್ಟು ದೂರ ಸಾಗಿಹೋಗಿರುತ್ತೇನೆ. ಇನ್ನು ತೇಲಲಿ–ಮುಳು ಗಲಿ, ಹೀಗೆಯೇ ನಾನು ಮುಂದಕ್ಕೆ ಸಾಗಿಹೋಗತಕ್ಕವನೇ ಸರಿ!

ಹೀಗೆ ಅಂದುಕೊಳ್ಳುವಾಗ ವೀರ ಭಾವುಸಾಹೇಬನ ನೇತ್ರಗಳು ದುಃಖಾಶ್ರು ಪೂರ್ಣ ವಾಗಿದ್ದವು. ಆತನು ಆಗ ಮನದಣಿಯಾಗಿ ಕಣ್ಣೀರು ಸುರಿಸಿದ್ದರೆ ಆತನ ದುಃಖವು ಕಡಿಮೆಯಾಗ ಬಹುದಾಗಿತ್ತು; ಆದರೆ ಆತನು ಹಾಗೆ ಕಣ್ಣೀರು ಸುರಿಸುತ್ತ ಕುಳಿತುಕೊಳ್ಳುವಹಾಗಿದ್ದಿಲ್ಲ. ಆತನು ಶೋಕಗ್ರಸ್ತನಾಗುವದರಿಂದ ಇಡಿಯ ಸೈನ್ಯವೇ ಶೋಕಗ್ರಸ್ತವಾಗುವಸಂಭವವಿತ್ತು; ಅದರಿಂದ ಆತನು ಕಣ್ಣೀರು ಒರಿಸಿಕೊಂಡು ದುಃಖವನ್ನು ನುಂಗಿಕೊಂಡನು. ಈ ಸ್ಥಿತಿಯಲ್ಲಿ ಕೆಲವು ಕಾಲವು ಕ್ರಮಿಸಿದ ಬಳಿಕ ಭಾವುಸಾಹೇಬನು ತನ್ನೊಳಗೆ–''ಛೀ ಛೀ! ಹೀಗೆ ದುಃಖಮಾಡುತ್ತ ಕುಳಿತುಕೊಳ್ಳುವದು ಹೇಡಿಗಳ ಲಕ್ಷಣವು; ಇದು ನನಗೆ ಒಪ್ಪುವದಿಲ್ಲ. ನನ್ನ ಬುಂದೇಲೇ ಮೊದಲಾದ ಸರದಾರರ ಮರಣದ ಸೇಡು ತೀರಿಸಿಕೊಂಡ ಹೊರತು ನಾನು ಸ್ವಸ್ಥವಾಗಲಾ ರೆನು; ಆದರೆ ಈ ಪ್ರಸಂಗದಲ್ಲಿ ಯಾವಮಾರ್ಗದಿಂದ ಹೋಗಬೇಕಾದೀತು? ಏನು ಹಂಚಿಕೆ ಮಾಡಬೇಕಾದೀತು? ಯಾರ ಮಾತು ಕೇಳಿದರೆ ಈ ಗಂಡಾಂತರದೊಳಗಿಂದ ನಾನು ಪಾರಾದೇನು? ಹಾಯ್ ಹಾಯ್! ಏನೂ ತೋಚದಾಯಿತಲ್ಲ! ಹೋಳಕರನ ಮಾತು ಮೀರಿದ್ದೂ, ಸುರಜಮಲ್ಲಜಾಟನ ಮಾತು ಕೇಳದೆಯಿದ್ದದ್ದೂ, ಉತ್ತರದ ಮಾಂಡಲಿಕ ರಾಜರ ಸಹಾಯವನ್ನು ತುಚ್ಛೀಕರಿಸಿ ಅವರ ಮನಸ್ಸನ್ನು ನೋಡಿಸಿದ್ದೂ ಹಿತಕರವಾಗಲಿಲ್ಲ. ಅದರಂತೆ ನಾವು ಉತ್ತರದ ಮುಸಲ್ಮಾನರ ಮನಸ್ಸನ್ನು ನೋಯಿಸಲೂ ಬಾರದಾಗಿತ್ತು. ಆದರೆ, ಮೊದಲು ಮೂರ್ಖತನಮಾಡಿ ಈಗ ಪಶ್ಚಾತ್ತಾಪಪಟ್ಟರೆ ಪ್ರಯೋಜನವೇನಾಗುವದು? ಆಗಲಿ, ಕಾಲಕ್ಕನುಸರಿಸಿ ಬುದ್ಧಿಯು ಆಗುತ್ತದೆ. ಅದಕ್ಕಾಗಿ ಕೈಕಾಲುಗೆಡುವದು ಸರಿಯಲ್ಲ. ಆ ದುಷ್ಟ ದುರಾಣೀಶಹನನ್ನೂ, ಅವನ ಸರದಾರರನ್ನೂ ಹಣಿದು ಹಣ್ಣುಮಾಡದೆ ಈ ಭಾವುವು ಎಂದೂ ಶಸ್ತ್ರವನ್ನು ಕೆಳಗಿಡಲಾರನು. ಜನರು ನನ್ನನ್ನು ಪರಶುರಾಮಾವತಾರ ವೆಂದು ಕರೆಯುವದೇನು ವ್ಯರ್ಥವೆ?

ಈ ಪ್ರಕಾರ ನುಡಿಯುವಾಗ, ಭಾವುವು ತನ್ನ ಅಂಗಿಯ ತೋಳನ್ನು ಮೇಲಕ್ಕೆ ಸರಿಸಿ ಹಲ್ಲುಕಡಿದನು. ಆ ಪರಮ ಶಿವೋಪಾಸಕನು ಆವೇಶದ ಭರದಲ್ಲಿ ತನ್ನ ಉಪಾಸ್ಯದೈವತವನ್ನು ಅನನ್ಯಭಾವದಿಂದ ಪ್ರಾರ್ಥಿಸಿ, ಅಂತಃಶಿಬಿರದಿಂದ ಹೊರಬಿದ್ದನು. ಆಗಿನ ಪ್ರತಿಕೂಲ ಕಾಲದಲ್ಲಿಯೂ ಆ ಮಾನಧನಾಗ್ರಣಿಯ ನೈಸರ್ಗಿಕವಾದ ಮಾನೀಸ್ವಭಾವವು ಜಾಗ್ರತ ವಾಗಿತ್ತು. ಯಾವನು ಉದಗಿರಿಯ ಕಾಳಗದಲ್ಲಿ ನಿಜಾಮನನ್ನು ಸಂಪೂರ್ಣವಾಗಿ ಸೋಲಿಸಿ ಕೀರ್ತಿಶಾಲಿ ಯಾಗಿದ್ದನೋ, ಯಾವನ ''ಭಾವುಗರದಿ'' ಎಂಬ ಅನ್ವರ್ಥಕ ನಾಮವು ಹಿಂದು ಸ್ಥಾನದ ತುಂಬ ಸಣ್ಣವರಿಂದ ದೊಡ್ಡವರವರೆಗೆ ಇಂದಿಗೂ ಗರ್ಜಿಸುತ್ತಿರುವದೋ, ಯಾವನ ಕೀರ್ತಿಯನ್ನು ಬಖರೀಕಾರರೂ, ಇತಿಹಾಸಕಾರರೂ, ಕವಿಗಳೂ, ಶಾಹೀರರೂ, ಗೊಂದಲಿಗರೂ

ರಸಭರಿತವಾಗಿ ವರ್ಣಿಸಿರುವರೋ, ಯಾವನ ಪರಾಕ್ರಮದ ದರ್ಶಕವಾದ ''ಮರ್ದಕೇ ಗರ್ದ ಮೇರಹೇನಾ, ನಾಮರ್ದಕೇಸರಹದ್ದಮೇ ನ ರಹೇನಾ'' ಎಂಬ ವಚನವು ಹಿಂದುಸ್ಥಾನೀಭಾಷೆ ಯಲ್ಲಿ ಇಂದಿಗೂ ಸ್ಮಾರಕವಾಗಿ ಉಳದಿರುವದೋ ಆ ರಣಗಂಭೀರನಾದ ಮಾನಧನಾಗ್ರಣಿ, ಯುದ್ಧಪಟು– ಸದಾಶಿವರಾವ ಚಿಮಣಾಜಿ– ಉರ್ಫ ಭಾವುಗರದಿಯು, ಎಲ್ಲ ಸರದಾರರ ಆಲೋಚನೆಯನ್ನು ಕೇಳಿಕೊಳ್ಳಬೇಕೆಂದು ನಿಶ್ಚಯಿಸಿ, ಅಂದುರಾತ್ರಿ ದರ್ಬಾರು ನೆರೆಸಿದನು.

## ಅಂತಃಕಲಹ

**ಈ ಪ್ರಸಂಗದಲ್ಲಿ ಭಾವೂಸಾಹೇಬನು ನೆರೆಸಿದ ದರ್ಬಾರವು ಅಪೂರ್ವವಾದುದು.** ಅದನ್ನು ಯಥಾರ್ಥವಾಗಿ ವರ್ಣಿಸುವ ಸಾಮರ್ಥ್ಯವು, ಅಂಥ ದರ್ಬಾರವನ್ನು ಹುಟ್ಟಿ ನೋಡದ ನಮ್ಮ ಲೇಖನಿಯಲ್ಲಿ ಸರ್ವಥಾ ಇಲ್ಲವೆಂದು ಹೇಳಬಹುದು; ಆದರೂ ವರ್ಣಿಸದಿದ್ದರೆ ಹಿಡಿದ ಕೆಲಸವು ಪೂರ್ಣವಾಗುವದಿಲ್ಲವಾದದ್ದರಿಂದ, ನಮಗೆ ದೊರೆತ ವರ್ಣನದ ಆಧಾರ ದಿಂದ ಅದನ್ನು ನಮಗೆ ಬಂದಹಾಗೆ ವರ್ಣಿಸುವೆವು. ಪ್ರಿಯವಾಚಕರೇ, ಉಜ್ವಲ ಕ್ಷಾತ್ರ ತೇಜಸ್ಸಿನಿಂದ ಬೆಳಗುವ ಆ ದಿವ್ಯದರ್ಬಾರದ ವರ್ಣನವನ್ನು, ಕತ್ತಲಲ್ಲಿ ಹೊರಗೆ ಹೋಗ ಲಾರದ ನಮ್ಮಂಥ ಅಂಜುಬುರುಕರು ವರ್ಣಿಸಹೋಗುವದು ಪರಮ·ಸಾಹಸವೇ ಸರಿ. ಇರಲಿ ಪುರಾಣ ಪ್ರಸಿದ್ಧವಾದ ಆ ಕುರುಕ್ಷೇತ್ರದ ರಣಭೂಮಿಯೊಳಗಿನ ಭವ್ಯವಾದ ಡೇರೆಯಲ್ಲಿ ರಾತ್ರಿ ಮರಾಟಾವೀರರ ದರ್ಬಾರವು ನೆರೆಯಿತು. ಶ್ರೀಮಂತರು ಕುಳಿತುಕೊಳ್ಳುವ ಮುಖ್ಯ ಗಾದಿಯ ಎಡಬಲಗಳಲ್ಲಿ, ನರೆಗೂದಲಿನ, ಹಾಗು ಕಪ್ಪುಕೂದಲಿನ ನಾಲ್ಕು ಸಾವಿರ ಜನ ವೀರರು ವೀರಾಸನದಿಂದ ಸಾಲಿನಹಿಂದೆ ಸಾಲಾಗಿ ಕುಳಿತುಕೊಂಡಿದ್ದರು. ಅವರಲ್ಲಿ ದ್ರೋಣ– ಭೀಷ್ಮಾದಿ ಭಾರತೀಯ ವೀರರನ್ನು ಹೋಲುವ ವೀರರು ಮುಂದಿನ ಸಾಲಿನಲ್ಲಿ ಕುಳಿತಿದ್ದರು. ಹಂಡೆ–ಝುಮರುಗಳಲ್ಲಿ ಢಾಳಾಗಿ ಉರಿಯುವ ದೀಪ ಪ್ರಕಾಶದಿಂದ ವೀರರ ಶಸ್ತ್ರಗಳು ಲಕಲಕ ಹೊಳೆಯುತ್ತಿದ್ದವು. ವಜ್ರ, ಮುತ್ತು, ಪಚ್ಚ, ಬಂಗಾರ, ಬೆಳ್ಳಿ, ಸಾಣೆಹಿಡಿದಶಸ್ತ್ರಗಳು ಇವುಗಳ ಮೇಲೆ ಬಿದ್ದ ದೀಪ ಪ್ರಕಾಶದ ಪರಾವರ್ತನವಾಗಿ, ಆಯಾ ವರ್ಣಗಳ ಸಮ್ಮಿಶ್ರಣ ದಿಂದ ದರ್ಬಾರಕ್ಕೆ ವಿಲಕ್ಷಣ ಶೋಭೆಯುಂಟಾಗಿತ್ತು. ಆಗ ನಡನಡುವೆ ''ದೌಲತಜಾದಾ, ಖಿಡೇತಾಜೀಮ, ಮುಜ ರಾಪರನಿಗಾಕೀಜಿಯೇ, ತಫಾವತ್ಸೇ, ಆಸ್ತೇಕದಮ್‌ಮುಲಾಜಾ, ನಿಗಾರ ಖ್ಬೋಮಹಾರಾಜ'' ಎಂದು ಭಾಲದಾರ–ಚೋಪದಾರರು ಉಚ್ಚಸ್ವರದಿಂದ ಒದರುತ್ತಿದ್ದರು. ಶ್ರೀಮಂತ ಭಾವುಸಾಹೇಬರವರ ಖಾಸಸವಾರಿಯು ಮುಖ್ಯಗಾದಿಯಮೇಲೆ ಲೋಡಿಗೆ ಆತು ವಿರಾಜ ಮಾನವಾಗಿತ್ತು, ಅವರ ಬಲಗಡೆಗೆ ಯುವರಾಜ ವಿಶ್ವಾಸರಾವ, ಉರ್ಫ ರಾವ ಸಾಹೇಬರವರ ಸವಾರಿಯು ಎರಡನೆಯ ಲೋಡಿಗೆ ಕುಳಿತುಕೊಂಡಿತ್ತು, ಇವರಿಬ್ಬರ ಸಂಬಂಧವು ಕಕ್ಕಮಕ್ಕಳದಾದ್ದರಿಂದ, ವಿಶ್ವಾಸರಾಯನು ತನ್ನ ಕಕ್ಕನಾದ ಸದಾಶಿವರಾಯನ ಗೌರವವನ್ನು

ಕಾಯುವದಕ್ಕಾಗಿ, ಮಾತಾಡುವಾಗ ವಿನಯದಿಂದ ಸ್ವಲ್ಪಬಾಗಿ ಮಾತಾಡುತ್ತಿದ್ದನು. ಯುವ ರಾಜನು ಅಲ್ಪವಯಸ್ಕನಾದ್ದರಿಂದ, ಈ ದಂಡಯಾತ್ರೆಯ ಯಾವತ್ತು ಆಧಿಪತ್ಯವು ಭಾವು ಸಾಹೇಬನ ಕಡೆಗಿತ್ತು, ಆ ಕಕ್ಕ–ಮಕ್ಕಳ ಆಗಿನ ಉಲ್ಲಸಿತ ಮುಖಮುದ್ರೆಯನ್ನು ನೋಡಿ, ದರ್ಬಾರ ದೊಳಗಿನ ಯಾವತ್ತು ಸರದಾರಮಂಡಲವೂ ಉಲ್ಲಾಸಪೂರ್ಣವಾಗಿತ್ತು.

ಭಾವುಸಾಹೇಬನು ಸ್ಫಟಿಕದಂಥ ಗೌರವರ್ಣದವನಾಗಿದ್ದನು.· ಆತನ ವಯಸ್ಸು ಮೂವತ್ತರ ಒಳ–ಹೊರಗೆ ಇರಬಹುದು. ಆ ವೀರನ ನಿಲುವಿಕೆ ಎತ್ತರ, ಮೈಕಟ್ಟು ತೆಳ್ಳಗೆ, ಠೀವಿ ಐಟಿನದು, ಹಣೆ – ಕಣ್ಣು– ಮೂಗು–ಮೀಸೆ– ಗಲ್ಲ ಮೊದಲಾದ ಅವಯುವಗಳು ಚಿತ್ರದಲ್ಲಿ ಕೊರೆದಹಾಗೆ ಇದ್ದವು. ಒಟ್ಟಿನಿಂದ ಭಾವು ಸಾಹೇಬನು ಸುಂದರನಿದ್ದನು ಆದರೆ ಆತನ ಮುಖ ಮುದ್ರೆಯಲ್ಲಿ ಸ್ವಲ್ಪ ಉಗ್ರಕಳೆಯು ಮಿನುಗುತ್ತಿತ್ತು, ಆತನ ಸ್ವಭಾವವು ದುಡುಕಿನದು, ಮಾತು ಘಣಘಣಿಸುವಂಥವು, ಉಡಿಗೆ–ತೊಡಿಗೆ ತೀರಸಾದಾ. ಢಂಭಾಚಾರವು ಸರ್ವಥಾ ಸೇರುತ್ತಿದ್ದಿಲ್ಲ, ಆತನು ತಲೆಗೊಂದು ಬ್ರಾಹ್ಮಣರ ತರದ ಬಿಳಿಯ ಸಣ್ಣ ಮುಂಡಾಸವನ್ನು ಹಾಕಿಕೊಂಡು, ಮೈಯಲ್ಲಿ ಬಿಳಿಯ ನಿಲುವಂಗಿಯನ್ನು ತೊಟ್ಟುಕೊಂಡಿದ್ದನು. ಆತನು ತೊಟ್ಟ ಇಜಾರವೂ, ಮೆಟ್ಟಿದ ಪಾಯಜಮುಗಳೂ ಬಿಳಿಯವೇ ಆಗಿದ್ದವು. ಕೊರಳೊಳಗಿನ ಪಚ್ಚ– ಮುತ್ತು–ರತ್ನಗಳ ಕಂಠಿಯು, ಆ ಮಾನಧನವೀರನನ್ನು ಬಹುಮಾನಗೊಳಿಸುತ್ತಿತ್ತು, ಭಾವೂ ಸಾಹೇಬನ ಟೊಂಕಕ್ಕೆ ಸುತ್ತಿದ ಚಾಂದೇರಿಯ ಶಾಲೂ, ಹೆಗಲಮೇಲೆ ಒಗೆದುಕೊಂಡಿದ್ದ ಬನಾರಸದ ಭರಜರಿಯ ಶಾಲೂ ಪೇಶವಾಯಿಯ ಠೀವಿಯನ್ನು ವ್ಯಕ್ತಮಾಡುತ್ತಿದ್ದವು. ಆ ಬ್ರಾಹ್ಮಣವೀರನು, ಚೇಳಿನಾಕಾರದ್ದೊಂದು ವಜ್ರದ ಹಿಡಿಕೆಯ ಕಠಾರಿಯನ್ನು ಟೊಂಕದಲ್ಲಿ ಸಿಗಿಸಿಕೊಂಡು, ತನ್ನ ಬಿಚ್ಚುಗತ್ತಿಯನ್ನು ತನ್ನ ಮುಂದೆ ಅಡ್ಡ ಇಟ್ಟಿದ್ದನು. ಆತನ ಖಡ್ಗದ ಹಿಡಿಕೆಯೂ, ಒರೆಯೂ ವಜ್ರ–ವೈಢೂರ್ಯಗಳಿಂದ ಲಕಲಕಿಸುತ್ತಿದ್ದವು. ಪ್ರಿಯವಾಚಕರೇ, ಪ್ರಕೃತದ ಕುರುಕ್ಷೇತ್ರದ ಘೋರಸಂಗ್ರಾಮದಲ್ಲಿಯ ವಿಜಯದಿಂದ ಆಸೇತು ಹಿಮಾಚಲ ಭರತಖಂಡದ ಸಾಮ್ರಾಜ್ಯಾಧಿಪತಿಯಾಗಬಹುದಾಗಿದ್ದ ಘನವಂತನಾದ ಭಾವೂ ಸಾಹೇಬನ ಈ ಉಡಿಗೆ–ತೊಡಿಗೆಗಳು ತೀರ ಸಾದಾ ಅಲ್ಲದೆ ಮತ್ತೇನು?

ಇಂಥ ಭಾವೂಸಾಹೇಬನ ಬಲಕ್ಕೆ ಕುಳಿತಿದ್ದ ಯುವರಾಜ ವಿಶ್ವಾಸರಾಯನ ಸೌಂದರ್ಯವನ್ನು ವರ್ಣಿಸುವದು ಅಶಕ್ಯವೇ ಸರಿ. ರಘುನಾಥಯಾದವನು ತನ್ನ ಪಾನಪತದ ಮೋಹೀಮಿನ ಬಖರದಲ್ಲಿ–''ಪುರುಷರೊಳಗೆ ಸುಂದರನು ವಿಶ್ವಾಸರಾಯನು, ಸ್ತ್ರೀಯರಲ್ಲಿ ಸುಂದರಿಯು ಸಮಶೇರಬಹದ್ದರನ ತಾಯಿಯಾದ ಮಸ್ತಾನಿಬಾಯಿಸಾಹೇಬರು; ಹೀಗೆ ಇಬ್ಬರೇ ದಕ್ಷಿಣದಲ್ಲಿ ಸುಂದರರಾದರೆಂ''ದು ಬರೆದಿರುವನು. ಇದರಮೇಲಿಂದ, ವಿಶ್ವಾಸ ರಾಯನು ಎಷ್ಟು ಚಲುವನಾಗಿದ್ದನೆಂಬದನ್ನು ವಾಚಕರು ತರ್ಕಿಸಬಹುದು. ಬ್ರಾಹ್ಮಣವರ್ಣ, ಚಿತ್ಪಾವನಕುಲ, ಪೇಶವೆಯವಂಶ, ಗರ್ಭಶ್ರೀಮಂತಿಕೆ ಇವೆಲ್ಲವುಗಳ ಅಮೃತಸಿದ್ಧಿಯೋಗ ದಿಂದ ಹುಟ್ಟಿದ ರಾಜಪಿಂಡದ ವಿಷಯವಾಗಿ ನಾವು–''ಆತನು ಕೆಂಪಗಿದ್ದನು, ತೇಜಃಪುಂಜ ನಾಗಿದ್ದನು, ಆತನ ಕಣ್ಣು ದೊಡ್ಡವಿದ್ದವು'' ಇತ್ಯಾದಿ ಸರ್ವಸಾಧಾರಣ ವರ್ಣನದಿಂದ

ಕಾದಂಬರಿಯ ಪುಟಗಳನ್ನು ಹೆಚ್ಚಿಸುವದರಲ್ಲಿ ಪ್ರಯೋಜನವೇನಿದೆ? ಆ ಬಾಲವೀರನ ಮೀಸೆಗಳು ಅದೇ ಒಡೆಯುತ್ತಿದ್ದವು. ಮುಖದಲ್ಲಿ ಬಾಲೌತ್ಸುಕ್ಯದ ಸುಹಾಸ್ಯವು ಮಿನುಗುತ್ತಿತ್ತು, ಮೋರೆಯ ಹೋಲಿಕೆಯು ತಂದೆ ಯಾದ ನಾನಾ ಸಾಹೇಬನ ಹಾಗೆ, ಬಣ್ಣ-ಮೈಕಟ್ಟುಗಳು ತಾಯಿಯಾದ ಗೋಪಿಕಾಬಾಯಿಯ ಹಾಗೆ ಇದ್ದವು. ವಿಶ್ವಾಸರಾಯನು ತಲೆಗೆ ಹಾಕಿಕೊಂಡಿದ್ದ ಹಸರುಬಣ್ಣದ ಮಂದೀಲಿಗೆ, ಬಂಗಾರದ ಜನರ ಪಟ್ಟಿಗಳೂ, ಹೂಗಳೂ ಇದ್ದವು. ಮಂದೀಲಿನ ಮುಂದಿನ ಮಗ್ಗಲಿಗೆ ಶಿರಪೇಚು ಇದ್ದು, ಬಲಗಡೆ ಮುತ್ತಿನಗೊಂಚಲು ಅಲೆದಾಡುತ್ತಿತ್ತು, ಆ ಯುವರಾಜನು ಭರಜರಿಯ ನಿಲುವಂಗಿಯನ್ನು ತೊಟ್ಟುಕೊಂಡು, ಬಹುಬೆಲೆಯುಳ್ಳ ಬನಾರಸದ ಚಿತ್ರ – ವಿಚಿತ್ರವಾದ ಶಾಲನ್ನು ಟೊಂಕಕ್ಕೆ ಸುತ್ತಿದ್ದನು. ಆತನು ತೊಟ್ಟ ಇಜಾರವು ಕಿನಕಾಪಿನದಾಗಿತ್ತು, ಮುತ್ತು-ರತ್ನ-ವಜ್ರ- ವೈಢೂರ್ಯಗಳ ತೇಜಃಪುಂಜವಾದ ಕಂಠಿಯಿಂದ ಆತನ ವಕ್ಷಸ್ಥಳವು ಮುಚ್ಚಿಹೋಗಿತ್ತು, ದುಂಡಮಲ್ಲಿಗೆ, ಗುಲಾಬಿ ಮೊದಲಾದ ಸುವಾಸಿಕ ಪುಷ್ಪ ಗಳ ಅರಳುಮುಗ್ಗೆಗಳ ಉನ್ನತವಾದ ಕೊರಳಮಾಲೆಯು ಪಾದಗಳವರೆಗೆ ಇಳಿಬಿದ್ದು ಬಳಕು ತ್ತಲಿತ್ತು, ಕಿವಿಗಳೊಳಗಿನ ದೊಡ್ಡಮುತ್ತಿನ ಚೌಕಳಿಗಳು, ಹೆಗಲುಗಳ ಮೇಲಿನ ರತ್ನಖಚಿತ ಗಳಾದ ಬಾಹುಪೂರಗಳು, ಎಡಗೈಯೊಳಗಿನ ರತ್ನಕೆಚ್ಚಿದ ಸಲಕಡಿಗಳು, ಬಲಗೈಯೊಳಗಿನ ರತ್ನ-ಪಚ್ಚಗಳ ಪೋಚಿ, ಬೆರಳೊಳಗಿನ ರತ್ನದುಂಗುರಗಳು ದೀಪಪ್ರಕಾಶದಲ್ಲಿ ಲಕಲಕನೆ ಹೊಳೆಯುತ್ತಿದ್ದವು. ಆತನ ಟೊಂಕದಲ್ಲಿ ಪಿಸ್ತೂಲು ಇದ್ದು, ಬಲಗೈಯ ಮುಷ್ಟಿಯಲ್ಲಿ ಕಠಾರಿಯೂ, ಮುಂದುಗಡೆ ಯಲ್ಲೊಂದು ಬಿಚ್ಚುಗತ್ತಿಯೂ ಇದ್ದವು. ಅವುಗಳ ಹಿಡಿಕೆಗಳೊಳಗಿನ ರತ್ನಗಳಿಂದ ದರ್ಬಾರದ ಜನರ ಕಣ್ಣುಗಳು ಕುಕ್ಕುತ್ತಿದ್ದವು.

ರಾಜಕಾರ್ಯದಲ್ಲಿಯೂ, ರಣಕಾರ್ಯದಲ್ಲಿಯೂ ಧುರೀಣರಾದ ಹಲವು ಜನ ವೀರರು ಆ ದರ್ಬಾರದಲ್ಲಿ ಕುಳಿತಿದ್ದರು. ಅವರಲ್ಲಿ ಎತ್ತರವಾದ ಗಟ್ಟಿಮುಟ್ಟಿ ಮೈಕಟ್ಟಿನ, ಅಗಲಾದ ಎದೆಯ, ನರೆಗೂದಲಿನ, ಹೊಳೆಯುವ ಕಣ್ಣುಗಳ, ಭವ್ಯವೂ-ಗಂಭೀರವೂ ಆದ ಮುಖ ಮುದ್ರೆಯ, ಸ್ಪಷ್ಟಮಾತಿನ, ರಾಣಗಾಜಿಯೆಂದು ಹೆಸರುಪಡೆದಿದ್ದ ದಯಾಯುಕ್ತ ಸ್ವಭಾವದ ಮಲ್ಹಾರರಾವ ಹೋಳಕರನು ಕಣ್ಣುಗಳನ್ನು ಗರಗರ ತಿರುಗಿಸುತ್ತ ಮೀಸೆಯನ್ನು ಹುರಿ ಮಾಡುತ್ತಲಿದ್ದನು. ಆತನ ಉಗ್ರವೃತ್ತಿಗೆ ಒಪ್ಪುವಂತೆ ''ಭೀಮು'' ಎಂಬ ಹೆಸರನ್ನೂ ನಾನಾ ಸಾಹೇಬನು ಕೊಟ್ಟಿದ್ದನು. ಆ ಮಲ್ಹಾರರಾಯನ ಮಗ್ಗಲಿಗೆ, ಶಾಂತವೃತ್ತಿಯವನೂ, ದುಡುಕದೆ ಕೆಲಸಮಾಡುವವನೂ, ಚತುರನೂ ಆದ ಸೇನಾಖಾಸ ಖೇಲಸಮಶೇರಬಹಾದ್ದರ ದಮಾಜಿ ಗಾಯಕವಾಡನು ಕುಳಿತಿದ್ದನು. ಆತನ ಆಚೆಕಡೆಯಲ್ಲಿ, ಹೈಡಂಬಾಪುತ್ರನಂತೆ ಮಹಾ ಪರಾಕ್ರಮ ಶಾಲಿಯಾದ ಮಸ್ತಾನಿಯಮಗ ಸಮಶೇರಬಹದ್ದರನು, ಖಡ್ಗದಮೇಲೆ ಕೈಯಿಟ್ಟು ಕುಳಿತು ಕೊಂಡಿದ್ದನು. ಅಲಿಜಾಬಹದ್ದರ ಜಯಪ್ಪಾ ಸಿಂದೆಯ ತರುಣಪುತ್ರನಾದ ಖಡ್ಗಪಟು ಜನಕೋಜಿ ಸಿಂದೆಯು ಎದುರಿಗಿನ ಸಾಲಿನಲ್ಲಿ ವೀರಾಸನದಿಂದ ಕುಳಿತುಕೊಂಡಿದ್ದನು. ಆತನ ಬಳಿಯಲ್ಲಿ, ಭಾವೂಸಾಹೇಬನ ಕಂಠಮಣಿಯೂ, ಮಂತ್ರಾಲೋಚಕನೂ, ಗಟ್ಟಿಮುಟ್ಟಿ ಮೈಕಟ್ಟಿನ ಭವ್ಯಪುರುಷನೂ, ಸ್ವಾಮಿಕಾರ್ಯಕ್ಕಾಗಿ ಚಿತೆಯಲ್ಲಿ ಹಾರಿಕೊಳ್ಳಲಿಕ್ಕೂ ಹಿಂದೆ-

ಮುಂದೆ ನೋಡದವನೂ, ಐವತ್ತುವರ್ಷದ ವಯಸ್ಸು ಮೀರಿದವನೂ ಆದ ಬಳವಂತರಾವ ಗಣಪತ ಮೇಹೇಂದಳೆ ಎಂಬವನು ಶ್ರೀಮಂತರಕಡೆಗೆ ದೃಷ್ಟಿಯನ್ನಿಟ್ಟು ಕುಳಿತುಕೊಂಡಿದ್ದನು. ಆತನ ಹತ್ತರವೇ ಯುದ್ಧ ಕುಶಲನಾದ ಮಹಾಪರಾಕ್ರಮಿ ಯಶವಂತರಾವಪವಾರನು ಮೀಸೆಯ ಮೇಲೆ ಕೈಹಾಕುತ್ತ ಕುಳಿತಿದ್ದನು. ಆತನಿಂದತ್ತ–ಸಾಧಾರಣ ಎತ್ತರದ, ಹುರಿಕಟ್ಟಿನ ಮೈಯ, ಕಪ್ಪುಬಣ್ಣದ, ಸೀಡಕಸ್ವಭಾವದ, ಕನಿಕರದ ಮನಸ್ಸಿನ, ಡಾಂಭಿಕನಲ್ಲದ ಆಜಾನಬಾಹುವಾದ ಉಮದೇತುಲ್ಮುಲುಕ್‌ಬಹಾದ್ದರ ವಿಠ್ಠಲರಾವವಿಂಚೂರಕರ ಎಂಬವನು ಲಷ್ಕರೀ ಪೋಷಾಕು ಹಾಕಿಕೊಂಡು ಕುಳಿತಿದ್ದನು. ಆತನು ಕುದುರೆಹತ್ತುವಲ್ಲಿ ಒಳ್ಳೇ ಸಮರ್ಥನು. ಇವರಲ್ಲದೆ ಬೇರೆ ಎಷ್ಟೋ ಸಣ್ಣ–ದೊಡ್ಡ ಬ್ರಾಹ್ಮಣಸರದಾರರೂ, ಮರಾಠಾಸರದಾರರೂ ಸಾಲುಸಾಲಾಗಿ ಕುಳಿತುಕೊಂಡಿದ್ದರು.

ಭಾವೂಸಾಹೇಬನ ಬಲಗಡೆಗೆ ಚಪ್ಪರದ ಮೀಸೆಯವನೂ, ಉದ್ದಗಡ್ಡದವನೂ ಆದ ಒಬ್ಬ ಯವನ ವೀರನು ಕುಳಿತಿದ್ದನು. ಆತನ ಹೆಸರು ಇಬ್ರಾಹಿಮಖಾನ ಗಾರದಿ. ಆತನ ಮುಖಮುದ್ರೆಯು ಅತ್ಯಂತ ಉಗ್ರವಾದದ್ದು. ಆತನು ತುಸು ಹೆಚ್ಚುಕಡಿಮೆ ಭಾವುಸಾಹೇಬನ ಓರಿಗೆಯವನಾಗಿದ್ದನು. ಆತನ ಮೇಲೆ ಭಾವುಸಾಹೇಬನ ಪ್ರೇಮ ಬಹಳ; ವಿಶ್ವಾಸಹೆಚ್ಚು. ಆತನು ತಲೆಗೆ ಫಿರಂಗಿಯರ ಟೊಪ್ಪಿಗೆಯಂಥ ಬಿಳಿಯ ಟೊಪ್ಪಿಗೆಯನ್ನು ಹಾಕಿಕೊಂಡು, ಮೈಯಲ್ಲಿ ಕೆಂಪು ಬನಾತಿನ ಕೋಟು ತೊಟ್ಟುಕೊಂಡಿದ್ದನು ಆ ಕೋಟಿನಮೇಲೆ ಹಳದಿಯ, ಹಾಗು ಜರದ ಕಲಾಬತಿನ ಪಟ್ಟಿಗಳಿದ್ದವು. ಟೊಪ್ಪಿಗೆಗೆ ಬಿಳಿಯ ಪುಚ್ಚದ ಗೊಂಚಲಿನ ತುರಾ ಯಿಯಿತ್ತು. ಒಟ್ಟಿಗೆ, ಆತನ ಪೋಷಾಕು ಸಂಪೂರ್ಣವಾಗಿ ಫಿರಂಗಿಗಳ ಪೋಷಾಕಿನಂತಿದ್ದು, ಆತನು ತನ್ನ ಟೊಂಕದ ಭರಗಚ್ಚಿಯ ಪಟ್ಟಿಗೆ ಜೋಡು ಪಿಸ್ತೂಲುಗಳನ್ನು ಜೋಲು ಬಿಟ್ಟಿದ್ದನು. ಬಿಗಿಯಾದ ಇಜಾರವ ತೊಟ್ಟಿದ್ದರಿಂದ ಮರಾಟಾ ವೀರರಂತೆ ಆತನಿಗೆ ವೀರಾಸನಹಾಕಿ ಕುಳಿತುಕೊಳ್ಳಲಿಕ್ಕೆ ಬರುತ್ತಿದ್ದಿಲ್ಲ; ಆದ್ದರಿಂದ ಆತನು ಬಹು ಪ್ರಯಾಸದಿಂದ ಎರಡೂ ಮುಂಡೆಗಳನ್ನು ಊರಿ ಸ್ವಲ್ಪ ಬಾಗಿ ಕುಳಿತು ಕೊಂಡಿದ್ದನು. ಆತನ ಎಡಗೈಯಲ್ಲಿ ಖಡ್ಗವೂ, ಬಲಗೈಯಲ್ಲಿ ದುರ್ಬಿನೂ ಇದ್ದು, ಯಾವ ಯಾವ ಸರದಾರರು ಎಲ್ಲೆಲ್ಲಿ ಕುಳಿತಿ ರುವರು, ಯಾರ ಯಾರ ಮುಖಚರ್ಯವು ಹ್ಯಾಗೆ ಹ್ಯಾಗೆ ಇರುವದು ಎಂಬದನ್ನು ಆಗಾಗ್ಗೆ ಆತನು ದುರ್ಬಿನಿ ಯಲ್ಲಿನೋಡುತ್ತಿದ್ದನು. ಆತನು ಕವಾಯತಿಯ ಸೈನ್ಯದ ಮುಖ್ಯ ಸೇನಾನಾಯ ಕನಾಗಿದ್ದನು. ಆತನ ಮೋರೆಯಮೇಲೆ ಅಲ್ಪಸ್ವಲ್ಪ ಮೈಲಿಯ ಕಲೆಗಳಿದ್ದವು. ಗಾರದಿಯು ರಣಾಂಗಣದಲ್ಲಿ ನಿಂತು, ಭಾರತಯುದ್ಧದಲ್ಲಿ ಪರ್ವತಗಳ ಮಳೆಗರೆಯುವ ಘಟೋತ್ಕಜನಂತೆ ಶತ್ರುಗಳ ಮೇಲೆ ತೋಫಿನ ಗುಂಡುಗಳ ಮಳೆಗರೆಯ ಹತ್ತಿದನೆಂದರೆ, ಶತ್ರುಗಳು ಗದಗುಟ್ಟಿ ನಡಗುತ್ತಿದ್ದರು. ಈ ಮಹಮ್ಮದೀಯ ಸರದಾರನು ಭಾವುಸಾಹೇಬನ ಬಲಗೈಯಂತೆ ಇದ್ದನು. ಈ ವೀರನ ತೋಫಖಾನೆಯೂ, ತುಬಾಕಿಗಳೂ ದಡ–ದಡಾಯಿಸಿ ಹಾರುತ್ತಿರುವಾಗ, ಗಟ್ಟಿ ಮುಟ್ಟಿ ಕುದುರೆಯ ವಿಲಾಯತಿಯ ಪಠಾಣರಿರಲಿ, ಕವಚಶಿರಸ್ತ್ರಾಣದ ಮೊಗಲ ರಾವುತರಿರಲಿ, ನಾದಿರಶಹನ ಕೈಕೆಳಗೆ ನುರಿತ ವೀರಪುಂಗವರಿರಲಿ, ಈ ಗಾರದೀ ವೀರನಮೇಲೆ ಏರಿ

ಹೋಗುವ ಧೈರ್ಯವು ಯಾರಿಗೂ ಆಗದೆಂದು ಬಾವುಸಾಹೇಬನು ನಂಬಿದ್ದನು; ಆದರಿಂದಲೇ ಈ ಯವನ ವೀರನಮೇಲೆ ಆ ತರುಣ ಪೇಶ್ವೆಯರ ಪ್ರೇಮವು ವಿಶೇಷವಾಗಿತ್ತು.

ಹೀಗೆ ಮಹಾಮಹಾವೀರರು ದರ್ಬಾರದಲ್ಲಿ ಒತ್ತಟ್ಟಿಗೆ ಕುಳಿತಿದ್ದರೂ ಅವರ ಮನಸ್ಸುಗಳು ಒತ್ತಟ್ಟಾಗಿದ್ದಿಲ್ಲ. ಅವರಲ್ಲಿ ಮುಖ್ಯವಾಗಿ ಎರಡು ಪಂಗಡಗಳಿದ್ದವು. ಮಲ್ಹಾರರಾವ ಹೋಳಕರನ ಪಂಗಡ ಒಂದು, ಇಬ್ರಾಹಿಮು ಖಾನಗಾರದಿಯ ಪಂಗಡ ಮತ್ತೊಂದು ಕೆಲವು ಸರದಾರರು ಹೋಳಕರನ ಪಕ್ಷದವರಾಗಿದ್ದರು, ಕೆಲವರು ಗಾರದಿಯ ಪಕ್ಷದವರಾಗಿದ್ದರು. ಬೇರೆ ಕೆಲವರು ಯಾವಪಕ್ಷಕ್ಕೂ ಸೇರದೆ ಉದಾಸೀನ ಪಕ್ಷದವರಾಗಿದ್ದರು. ಹೀಗಾಗಿ, ಹಿಂದಕ್ಕೆ ಕೌರವಸೈನ್ಯ ದೊಳಗಿನ ವೀರರಲ್ಲಿ ಪರಸ್ಪರ ಮನಸ್ತಾಪವಿದ್ದಂತೆ ಈಗ ಮಹಾರಾಷ್ಟ್ರವೀರರಲ್ಲಿಯೂ ಪರಸ್ಪರ ಮನಸ್ತಾಪವಿತ್ತು. ಹೋಳಕರನು ಹೇಳಿದ್ದು ಗಾರದಿಯ ಮನಸ್ಸಿಗೆ ಬರುತ್ತಿದ್ದಿಲ್ಲ; ಗಾರದಿಯು ಹೇಳಿದ್ದು ಹೋಳಕರನ ಮನಸ್ಸಿಗೆ ಬರುತ್ತಿದ್ದಿಲ್ಲ. ಉತ್ತರದ ಮಹಾರಾಷ್ಟ್ರಸರದಾರರಿಗೂ, ದಕ್ಷಿಣದ ಮಹಾರಾಷ್ಟ್ರಸರದಾರರಿಗೂ ನೆಟ್ಟಗಿದ್ದಿಲ್ಲ. ಸದಾಶಿವರಾವ ಭಾವುವಿನ ಒಲವು ಮಾಹಿಮಖಾನ ಗಾರದಿಯ ಕಡೆಗೆ ವಿಶೇಷವಾಗಿ ಇತ್ತು. ಹೋಳಕರನ ಮಾತಿನಲ್ಲಿ ಆತನ ವಿಶ್ವಾಸವಿದ್ದಿಲ್ಲ; ಆದರೂ ಈಗ ಪ್ರಸಂಗವು ಮೈಮೇಲೆ ಬಂದದ್ದರಿಂದ ಭಾವೂಸಾಬನು ಎಲ್ಲ ಸರದಾರರ ವಿಚಾರವನ್ನು ಕೇಳಿಕೊಂಡು ಎಲ್ಲರೊಡನೆ ಬೆರತುಕೊಂಡು ಯೋಗ್ಯಮಾರ್ಗವ ಹಿಡಿಯುವದಕ್ಕಾಗಿ ಇಂದಿನ ದರ್ಬಾರವನ್ನು ಆತುರದಿಂದ ನೆರೆಸಿದ್ದನು. ಮಹದಾಜಿಸಿಂಧೆಯು ಬರಲಿಲ್ಲವೆಂದು ಆತನು ಮಾರ್ಗಪ್ರತೀಕ್ಷೆ ಮಾಡುತ್ತಿರಲು, ಅಷ್ಟರಲ್ಲಿ ಆತನೂ ಬಂದನು. ಮಹದಾಜಿಯು ಅಪ್ರತಿಮ ವೀರನಿದ್ದನು. ಸಿಂಧೆಯ ಮನೆತನದಲ್ಲಿ ಆತನಷ್ಟು ಪ್ರಸಿದ್ಧರು ಯಾರೂ ಆಗಲಿಲ್ಲೆಂದು ಹೇಳ ಬಹುದು. ಆ ತರುಣವೀರನಮೇಲೆ ಭಾವೂಸಾಹೇಬನ ವಿಶ್ವಾಸ ಬಹಳ. ಆ ಮಹದಾಜಿಯು ಪದ್ಧತಿಯಂತೆ ಶ್ರೀಮಂತರಿಗೆ ಮುಜರೆ ಮಾಡಿ ತನ್ನ ಆಸನದಲ್ಲಿ ಕುಳಿತುಕೊಳ್ಳಲು, ಭಾವೂ ಸಾಹೇಬನು ಯಾವತ್ತೂ ಸರದಾರ ಮಂಡಲವನ್ನುದ್ದೇಶಿಸಿ–''ವೀರರೇ, ನಿಮ್ಮನ್ನು ಕರೆಸಿದ ಕಾರಣವನ್ನು ಕುರಿತು ನಾನು ಈಗ ಹೇಳಬೇಕಾಗಿಲ್ಲ; ಆದರೆ ಎಲ್ಲರಿಗೂ ಗೊತ್ತೇ ಇರುವದು. ನಮ್ಮ ದಂಡಿನ ಸ್ಥಿತಿ–ಗತಿಗಳನ್ನೂ ನೀವು ಬಲ್ಲಿರಿ. ಅದರ ಸಂಬಂಧದಿಂದಲೂ ನಾನು ಈಗ ಒಡೆದು ಹೇಳುವಕಾರಣವಿಲ್ಲ; ಆದರೆ ಇನ್ನು ಮುಂದೆ ಏನು ಮಾಡಬೇಕೆಂಬುದಕ್ಕೆ ನಿಮ್ಮೆಲ್ಲರ ಆಲೋಚನೆಯ ಅವಶ್ಯಕತೆಯಿರುತ್ತದೆ; ಅದನ್ನು ನೀವು ಬಚ್ಚಿಡದೆ ಹೇಳತಕ್ಕದ್ದು.'' ಎಂದು ನುಡಿಯಲು, ಆಸ್ತಬ್ಧವಾದ ದರ್ಬಾರದಲ್ಲಿ ಒಬ್ಬರ ಮುಖವನ್ನೊಬ್ಬರು ನೋಡುತ್ತಿದ್ದರಲ್ಲದೆ, ಬಾಯಿಬಿಚ್ಚಿ ಒಬ್ಬರೂ ಮಾತಾಡದಾದರು. ''ನಮಗೆ ಮಾತಾಡುವ ಪ್ರಸಂಗಬೇಡ, ಬೇರೆ ಯಾರಾದರೂ ಮಾತಾಡಲೊಲ್ಲರೇಕೆ,'' ಎಂದು ಪ್ರತಿಯೊಬ್ಬರು ಮನಸ್ಸಿನಲ್ಲಿ ಅಂದುಕೊಂಡು ಸುಮ್ಮನೆ ಕುಳಿತಿದ್ದರು.

ದರ್ಬಾರದ ಸರದಾರರಲ್ಲಿ ಮಲ್ಹಾರರಾವಹೋಳಕರನೇ ಗೌರವಶಾಲಿಯಾಗಿದ್ದನೆಂದು ಹೇಳಬಹುದು. ಆತನ ಬೆಳಕು ಎಲ್ಲಕಡೆಯಲ್ಲಿ ಇತ್ತು. ಪೇಶ್ವೆಯರೊಳಗಿನ ಭಾವುಸಾಹೇಬನೇ

ಮೊದಲಾದ ಇತ್ತಕಡೆಯ ಪುರುಷರು, ಆ ಮಲ್ಹಾರರಾಯನನ್ನು ''ಕಾಕಾಸಾಹೇಬ'' ಎಂದು ಗೌರವದಿಂದ ಕರೆಯುತ್ತಿದ್ದರು; ಯಾಕಂದರೆ, ಆತನು ಮೊದಲನೇ ಬಾಜೀರಾಯನ ಕಾಲದ ವೀರಾಗ್ರಣಿಯಾಗಿದ್ದನು. ಬಾವುಸಾಹೇಬನು ಬಾಯಿಂದ ಮಲ್ಹಾರರಾಯನಿಗೆ ಕಾಕಾ ಸಾಹೇಬ ನೆಂದು ಕರೆದಂತೆ ಕೃತಿಯಿಂದಲೂ, ಮನಸ್ಸಿನಿಂದಲೂ ಆತನನ್ನು ಕಾಕಾಸಾಹೇಬನೆಂದೇ ತಿಳಿದು ನಡೆದಿದ್ದರೆ ಆತನು ಇಂಥ ವಿಪನ್ನಸ್ಥಿತಿಗೆ ಬರುತ್ತಿದ್ದಿಲ್ಲವೆಂದು ಹೇಳಬಹುದು. ಇರಲಿ, ಹೀಗೆ ಎಲ್ಲರೂ ಸುಮ್ಮನೆ ಕುಳಿತದ್ದನ್ನು ನೋಡಿ ಭಾವುಸಾಹೇಬನು ಹೋಳಕರನಿಗೆ– ''ಕಾಕಾ ಸಾಹೇಬ, ನೀವೂ ಸುಮ್ಮನೆ ಕುಳಿತರೆ ಮಾತಾಡುವರಾರು? ನಿಮಗೆ ಯೋಗ್ಯತೋರಿದ್ದನ್ನು ಹೇಳಬೇಕು,'' ಎಂದು ನುಡಿಯಲು, ಆ ವೃದ್ಧವೀರನು ತನ್ನ ಬಳಿಯಲ್ಲಿ ಕುಳಿತಿದ್ದ ದಮಾಜಿ ಗಾಯಕವಾಡನಿಗೆ ಮಾತ್ರ ಕೇಳುವಂತೆ ಮೆಲ್ಲನೆ ''ನಮ್ಮ ಆಲೋಚನೆಯನ್ನು ಇಂದಾದರೂ ಯಾಕೆ ಕೇಳಬೇಕೆಂ''ದು ಒಟಗುಟ್ಟಿ ಭಾವು ಸಾಹೇಬನನ್ನು ಕುರಿತು ಗಟ್ಟಿಯಾಗಿ ''ಸಾಹೇಬ, ನನ್ನ ಆಲೋಚನೆಯನ್ನು ಹೇಳಿ ಆರುತಿಂಗಳಾಯಿತು; ಅವರು ಅದನ್ನು ಕೇಳುವವರಾರು? (ಕಣ್ಣು ಕೆಕ್ಕರಿಸಿ ಮೀಸೆಯ ಮೇಲೆ ಕೈಹಾಕಿ) ಮನೆಯ ಗರಿಗಳನ್ನು ಕಾಯಲಿಕ್ಕೆ ಮನೆಯ ಕುರುಬನು ಬರುವದಿಲ್ಲ, ಅದಕ್ಕಾಗಿ ಹೊರಗಿನ ಕುರುಬನೇ ನೆಟ್ಟಗೆ!

ಹೀಗೆ ಇಬ್ರಾಹಿಮಖಾನನ ಮನಸ್ಸಿಗೆ ಹತ್ತುವಂತೆ ಆಡಿದ ಹೋಳಕನ ಮಾತುಗಳನ್ನು ಕೇಳಿ ಬಾವುಸಾಹೇಬನ ಕಣ್ಣುಗಳು ಕೆಂಪಾದವು. ಆದರೂ ಪ್ರಸಂಗವನ್ನರಿತು ಆತನು ಸಿಟ್ಟನ್ನು ನುಂಗಿ, ತೋರಿಕೆಯ ನಗೆ ಮೊಗದಿಂದ ಹೋಳಕರನನ್ನು ಕುರಿತು–''ಕಾಕಾಸಾಹೇಬ, ಒಮ್ಮೊಮ್ಮೆ ಮನೆಯ ಜಾಣ ಕುರುಬನು ಅಡ್ಡಹಾದಿಯ ಹಿಡಿದು ನಡೆಯ ಹತ್ತಿದ್ದರೆ, ತಕ್ಕ ಹಾದಿಯ ತೋರಿಸುವುದಕ್ಕಾಗಿ ಯಜಮಾನನು ಹೊರಗಿನ ಕುರುಬನನ್ನು ಕೇಳಬೇಕಾಗುತ್ತದೆ. ನಾವು ಒಮ್ಮೆಲೆ ಶತ್ರುಗಳ ಮೈಮೇಲೆ ಏರಿ ಹೋಗದೆ ನಿಮ್ಮ ಮಾತಿನಂತೆ ಒತ್ತಟ್ಟಿಗೆ ಕುಳಿತು ಬಿಟ್ಟಿದ್ದರಿಂದ, ನಮಗೆ ಈಗ ಕಠಿಣ ಪ್ರಸಂಗವು ಪ್ರಾಪ್ತವಾಗಿರುತ್ತದೆ.

ಇಬ್ರಾಹಿಮಖಾನ–ಸರಕಾರದ ಮಾತು ಕೆಲವಂಶದಿಂದ ನಿಜವಿರುವದು. ಶತ್ರುವು ಯಮುನಾನದಿಯನ್ನು ದಾಟಿಬಂದಾಗಲೇ ನಾವು ಅವನ ಮೇಲೆಬಿದ್ದು ಹಿಂದಕ್ಕಟ್ಟಿ ಬಿಡ ಬೇಕಾಗಿತ್ತು, ಹಾಗೆ ಮಾಡಬೇಕೆಂದು ನಾನು ಆಗ ಸಾಹೇಬರಿಗೆ ಹೇಳಿದೆನು; ಆದರೆ ಸಾಹೇಬರು ಕೇಳಲಿಲ್ಲ, ಫಿರಂಗಿಗಳ ಕವಾಯಿತು ಕಲಿತ ನಮ್ಮ ಸಿಪಾಯಿಗಳಿಗೆ ಸೋಲಿನ ಸುದ್ದಿಯೇ ಗೊತ್ತಿಲ್ಲ, ನಮ್ಮ ವುಸ್ತಾದಿಯಾದ ಬುಶಿಸಾಹೇಬನು, ಮೊದಲು ತಾವಾಗಿಯೇ ಶತ್ರುಗಳ ಮೇಲೆ ಏರಿಹೋಗಬೇಕೆಂದು ಯಾವಾಗಲೂ ಅನ್ನುತ್ತಿದ್ದನು.

ಮಲ್ಹಾರರಾವ–(ತಿರಸ್ಕಾರದಿಂದ) ಹಾಗೆ ಅನ್ನುವದು ಟೊಪ್ಪಿಗೆಯವರ ಶಿಷ್ಯರಿಗೆ ಚಂದಕಾಣುವದು! ಅದು ಅವರ ಪಾಲಿಗೇ ಇರಲಿ. ತಾವಾಗಿ ಶತ್ರುಗಳ ಕೈಯಲ್ಲಿ ತಮ್ಮ ಚಂಡು ಕೊಟ್ಟು ಕೊಯ್ಸಿಕೊಂಡು, ತಮ್ಮ ಹೆಂಡಿರು ಮಕ್ಕಳನ್ನು ಅವರ ಪಾಲು ಮಾಡುವ ರೀತಿಯು ನಮಗೆ ಸರ್ವಥಾಬೇಡ! ಇಂಥ ಅರಣ್ಯ ಪಾಂಡಿತ್ಯವನ್ನು ನಮಗೆ ನಮ್ಮ ಹಿರಿಯರು ಕಲಿಸಿ

ನಮ್ಮನ್ನು ಕತ್ತಿಗಳಾಗ ಮಾಡಿರುವದಿಲ್ಲ. ಕತ್ತಿಗಳ ಹಾಗೆ ತಟ್ಟನೆ ಒದ್ದು ಬಡಿಸಿಕೊಳ್ಳುವದು ನಮಗೆ ಬೇಡವೇಬೇಡ!

ಇಬ್ರಾಹಿಮಖಾನ–(ಗಟ್ಟಿಯಾಗಿ ಒದರಿ) ಒರಟಮಾತಿನಿಂದ ಸುಮ್ಮನೆ ಯಾಕೆ ಸಿಟ್ಟಿಗೆಬ್ಬಿಸುವಿರಿ? ಸುಮ್ಮನೆ ಎರಡನೆಯವರ ಮೇಲೆ ತಪ್ಪು ಹೊರಿಸುವದರಿಂದಾಗುವ ಪ್ರಯೋಜನವಾದರೂ ಏನು? ಈಗೊದಗಿರುವ ದುಷ್ಪರಿಣಾಮದ ಜವಾಬದಾರಿಯು ನಮ್ಮ ಮೇಲೆ ಸರ್ವಥಾ ಇರುವದಿಲ್ಲ. ಇದೆಲ್ಲ ನಿಮ್ಮ ಮೂರ್ಖತನದ ಪರಿಣಾಮವು. ಶ್ರೀಮಂತರು ನಿಮ್ಮನ್ನು ನಂಬಿ ಬೆನ್ನುಹತ್ತಿದರು; ಅವರ ಪರಿವಾರವು ನೀವು ಹೇಳಿದ ಹಾಗೆ ಕುಣಿಯಹತ್ತಿತು. ಕ್ಷಣಕ್ಕೊಂದು ವಿಚಾರವು. ಒಮ್ಮೆ ಸತ್ತವರಂತೆ ಒತ್ತಟ್ಟಿಗೆ ಸುಮ್ಮನೆ ಬಿದ್ದು ಬಿಟ್ಟಿರಿ, ಒಮ್ಮೆ ಲೂಟಿಯ ಆಶೆಯಿಂದ ಸಿಕ್ಕಹಾಗೆ ಹರಿದಾಡಿದಿರಿ; ಒಮ್ಮೆ ಕಾರಣವಿಲ್ಲದೆ ಹಿಂದಕ್ಕೆ ಸರಿದಿರಿ, ಒಮ್ಮೆ ಮುಂದಕ್ಕೆ ಸಾಗಿದಿರಿ. ಹೀಗೆ ಹುಡುಗಾಟಿಕೆಯ ವ್ಯಾಪಾರವನ್ನು ನಡಿಸಿ ಈ ಹಾಡು ಮಾಡಿದಿರಿ. ಅದಕ್ಕೆ ನಾವೇನು ಮಾಡೋಣ? ನೀವು ಬರ್ಚಿಯಿಂದ ಇರಿಯತ್ತ, ಖಡ್ಗಗಳಿಂದ ತುಂಡರಿಸುತ್ತ ನಿಶ್ಚಯದಿಂದ ಮುಂದಕ್ಕೆ ಸಾಗಿಹೋಗಿದ್ದರೆ, ಪಠಾಣರನ್ನು ಹಾ ಹಾ ಅನ್ನುವದರೊಳಗಾಗಿ ಯಮುನಾ ನದಿಯನ್ನು ದಾಟಿಸಿ ಅಟ್ಟಬಹುದಾಗಿತ್ತು.

ಹೋಳಕರ–(ಸಂತಾಪದಿಂದ ಕಣ್ಣು ಕೆಂಪಗೆ ಮಾಡಿ) ನನಗೆ ಸಿಟ್ಟು ಬಂದರೂ, ಮೋರೆಯ ಮುಂದೆ ಸ್ಪಷ್ಟವಾಗಿ ಮಾತಾಡುವೆನು, ಹೆಂಗಸರ ಹಾಗೆ ಹಿಂದೆ ಒಬ್ಬರ ನಿಂದೆ ಮಾಡುವದಿಲ್ಲ. ಬೈಯುವದಿದ್ದರೆ ಮೋರೆಯ ಮುಂದೆಯೇ ಬೈಯುವೆನು. ಖಾನಸಾಹೇಬ, ನಾನು ನಿಮಗೆ ಸ್ಪಷ್ಟವಾಗಿ ಹೇಳುತ್ತೇನೆ. ನಮ್ಮ ಸೈನ್ಯವನ್ನು ಕೆಲಸಕ್ಕೆ ಬಾರದ್ದನ್ನಾಗಿ ಮಾಡಿದವರೇ ನೀವು. ಈಗಾದರೂ ಶ್ರೀಮಂತರಿಗೆ ಇಲ್ಲದ್ದೊಂದು ಹೇಳಿ ನೀವು ನಮ್ಮನ್ನು ನಾಶಗೊಳಿಸುವ ಹಾಗೆ ತೋರುತ್ತದೆ. ಈಗ ನಾನು ಸ್ಪಷ್ಟವಾಗಿ ಸೂಚಿಸುವೆನೇನಂದರೆ, ನಮ್ಮ ಸೈನ್ಯವು ಇಂದೇ ಹಿಂದಕ್ಕೆ ಸರಿಯಬೇಕು. ನಿಮ್ಮ ಕಲಾಯತಿಯ ಸೈನ್ಯವನ್ನು ನೀವು ಬೇಕಾದ ಹಾಗೆ ಕುಣಿಸಿರಿ. ನಿಮ್ಮ ನಾಚಿಕೆ ಸಿಪಾಯಿಗಳ ನಾಚಿನ ಕಾಲಲ್ಲಿ ನಾವು ಇಲ್ಲಿ ಕೊಳೆಯುತ್ತ ಬೀಳಬೇಕಾಯಿತು. ನಮ್ಮ ಮಾತನ್ನೇ ಶ್ರೀಮಂತರು ಕೇಳಿದ್ದರೆ ಇಷ್ಟು ಹೊತ್ತಿಗೆ ಹಿಂದಕ್ಕೆ ಸರಿದು ಗಂಡಾಂತರದಿಂದ ಪಾರಾಗುತ್ತಿದ್ದೆವು, ಈಗಾದರೂ ನಮ್ಮನ್ನು ಹೋಗಗೊಟ್ಟು ನೀವು ಬೇಕಾದ ಹಾಗೆ ಕುಣಿಯಿರಿ. ನಾವು ಹೋಗುವದರಿಂದ ನಿಮ್ಮ ಕುಣಿತಕ್ಕೆ ಪ್ರತಿಬಂಧವೂ ಉಂಟಾಗಲಿಕ್ಕಿಲ್ಲ.

ಇಬ್ರಾಹಿಮಖಾನ–(ಸಿಟ್ಟಿನಿಂದ ಮೀಸೆಯ ಹುರಿಮಾಡಿ) ಸುಬೇದಾರ, ನೀವು ಮನಸ್ಸಿನಲ್ಲಿ ಏನು ತಿಳಿದಿರುವಿರಿ? ಈಗ ನಾನು ಕುರಾಣವನ್ನು ಮುಟ್ಟಿ ಹೇಳುತ್ತೇನೆ, ನೆಟ್ಟಗೆ ಕೇಳಿರಿ. ಯಾವ ಸರದಾರನು ನನ್ನನ್ನು ದುರಾಣಿಯವರ ದವಡೆಯಲ್ಲಿ ಕೊಟ್ಟು, ರಂಡೆ–ಮುಂಡೆಯಂತೆ ಪಾರಾಗಿ ಹೋಗಬೇಕೆನ್ನುವನೋ, ಅವನನ್ನು ಶತ್ರುವೆಂದು ತಿಳಿದು ಅವನ ಮೇಲೆ ನನ್ನ ತೋಫಿನ ಗುಂಡುಗಳ ಮಳೆ ಸುರಿಸುವೆನು. ಆತನನ್ನು ಗೊತ್ತಿಗೆ ಹಚ್ಚದೆ ನಾನು

ಎಂದಿಗೂ ಬಿಡಲಿಕ್ಕಿಲ್ಲ, ಸುಬೇದಾರಸಾಹೇಬ, ಅಲ್ಲಾನನ್ನು ಸ್ಮರಿಸಿಹೇಳುತ್ತೇನೆ; ಎಂದಿಲ್ಲೊಂದು ದಿನ ಮರಣವು ತಪ್ಪಿದ್ದಲ್ಲ, ಅದು ಎಲ್ಲರಪಾಲಿಗೂ ಇರುವದು; ಆದರೆ ನಾನು ಜೀವದಿಂದಿರುವದರೊಳಗೆ ನಿಮ್ಮ ಸೇಡು ತೀರಿಸಿಕೊಳ್ಳದೆ ಬಿಡುವದಿಲ್ಲ, ನಾನು ಸೇಡುತೀರಿಸಿಕೊಂಡೇ ಪ್ರಾಣಬಿಡುವೆನೆಂಬದನ್ನು ಚನ್ನಾಗಿ ನೆನಪಿನಲ್ಲಿಡಿರಿ!

ಈಮೇರೆಗೆ ಇಬ್ರಾಹಿಮಖಾನನು ಆಡಿದ ಕಠೋರ ಭಾಷಣವನ್ನು ಕೇಳಿ ಹೋಳಕರನು ಸಂತಪ್ತನಾದನು. ಆತನು ಸರಕ್ಕನೆ ಒರೆಯಿಂದ ಖಡ್ಗವನ್ನು ಹಿರಿದು ಎದ್ದು ನಿಂತು ಗಾರದಿ ಸರದಾರನನ್ನು ಕೆಕ್ಕರಿಸಿ ನೋಡಹತ್ತಿದನು. ಆತನ ಮೂಗಿನ ಹೊರಳಿಗಳು ಅರಳಿ ಭರದಿಂದ ಉಸಿರು ಹಾಯುವಾಗ ಮುಸು ಮುಸು ಸಪ್ಪಳವಾಗುತ್ತಿತ್ತು, ಅತ್ತ ಗಾರದಿ ಸರದಾರನೂ ಸಂತಾಪಗೊಂಡು ತನ್ನ ತುಂಬಿದ ಪಿಸ್ತೂಲನ್ನು ಮುಂದಕ್ಕೆ ಚಾಚಿ ಹಿಡಿದನು. ಈ ಅನರ್ಥವನ್ನು ನೋಡಿ ವಿಶ್ವಾಸರಾಯನು ತಟ್ಟನೆ ಗಾದಿಯಿಂದ ಎದ್ದು ಹೋಗಿ ಇಬ್ರಾಹಿಮಖಾನನ ಕೈಯೊಳಗಿನ ಪಿಸ್ತೂಲನ್ನು ಕಸಕೊಂಡನು. ಅತ್ತ ಯಶವಂತರಾವ ಪವಾರನು ಹೋಳಕರನ ಮುಂಗೈ ಹಿಡಿದು –''ಸುಬೇದಾರ, ಇದೇನು ಅನರ್ಥವು? ನೀವು ಎಲ್ಲಿ ಇರುವಿರೆಂಬದನ್ನು ಮನಸ್ಸಿನಲ್ಲಿ ತಂದುಕೊಳ್ಳಿರಿ'' ಅನ್ನಲು, ಸದಾಶಿವರಾವ ಭಾವುವು ಅಸಮಾಧಾನಪಟ್ಟು, ತನ್ನ ಯೋಗ್ಯತೆಗೆ ತಕ್ಕಂತೆ ಮಾತಾಡಿ, ತನ್ನ ಇಬ್ಬರು ಪ್ರಮುಖ ಸರದಾರರನ್ನು ಸಮಾಧಾನ ಗೊಳಿಸಿದನು. ಭಾವುವು ಸಂತಪ್ತ ಸ್ವಭಾವದವನೂ, ಹಟಮಾರಿಯೂ ಇದ್ದನು. ತನ್ನ ಮನಸ್ಸಿನಂತೆ ಕೆಲಸವಾದಾಗ ಆತನು ಆನಂದಪಡುವನು, ಆಗದಾಗ ವ್ಯಸನಪಡುವನು; ಅದರಂತೆ ಅಪಯಶಸ್ಸು ಪ್ರಾಪ್ತವಾಗದಾಗ ನಿರಾಶೆಪಡುವನು. ಹೀಗೆ ಫಲಕ್ಕನುಸರಿಸಿ ಆತನ ವೃತ್ತಿಯಲ್ಲಿ ಚಾಂಚಲ್ಯವು ತೋರಿದರೂ, ಆತನ ಪ್ರಾರಬ್ಧಯೋಗವು ಚಮತ್ಕಾರವಾದದ್ದಿತ್ತೆಂದು ಹೇಳಬಹುದು; ಯಾಕಂದರೆ ಆತನ ಅಪ್ಪಣೆಯನ್ನು ಯಾರೂ ಮೀರುತ್ತಿದ್ದಿಲ್ಲ! ಈ ಪ್ರಸಂಗದಲ್ಲಿ ಆತನು ಗಾಂಭೀರ್ಯದಿಂದ ತನ್ನ ಆ ಇಬ್ಬರು ಪ್ರಮುಖ ಸರದಾರರನ್ನು ಕುರಿತು– ''ಕಾಕಾಸಾಹೇಬ, ನೀವು ಹಿರಿಯರು, ನಮ್ಮಂಥ ತರುಣರಿಗೆ ಬುದ್ಧಿಹೇಳತಕ್ಕವರು; ಹೀಗಿದ್ದು ಕೂಡಿದ ದರ್ಬಾರದಲ್ಲಿ ಕಲಹಪ್ರಸಂಗವೆ? ಖಾನಸಾಹೇಬ, ದುರಾಣಿಯೊಡನೆ ಕಾದುವದು ಒತ್ತಟ್ಟಿಗುಳಿದು, ನಮ್ಮನಮ್ಮೊಳಗೇ ಕಾದಾಟಕ್ಕಾರಂಭವಾಯಿತಲ್ಲ! ನೀವು ಎಲ್ಲಿ ಕುಳಿತಿರುವಿರಿ, ಯಾವ ಕೆಲಸಕ್ಕೆ ಬಂದಿರುವಿರಿ ಎಂಬದನ್ನು ಮರೆತಂತೆ ತೋರುತ್ತದೆ. ಕಾಲಕ್ಕನುಸರಿಸಿ ಆದದ್ದು ಆಗಿ ಹೋಯಿತು. ಯಾರಿಂದ ತಪ್ಪಾಗಿದ್ದರೂ ಅದನ್ನು ಪುನಃ ಉಚ್ಚರಿಸುವದರಲ್ಲಿ ಪ್ರಯೋಜನವಿಲ್ಲ, ನೀವಿಬ್ಬರೂ ತಿಳಿದವರಿರುವಿರಿ. ಯಾವ ಪ್ರಸಂಗದಲ್ಲಿ ಹ್ಯಾಗೆ ನಡೆಯ ಬೇಕೆಂಬದರ ವಿಚಾರವು ನಿಮಗಿರುತ್ತದೆ. ಈಗ ನಮಗೆ ಜಯಪ್ರಾಪ್ತಿಯಾಗಬೇಕೆಂಬ ಇಚ್ಛೆಯಿದ್ದರೆ, ನೀವೆಲ್ಲರೂ ಒಮ್ಮನಸ್ಸಿನಿಂದ ನಡೆದುಕೊಳ್ಳಿರಿ. ಅಂತಃಕಲಹಗಳನ್ನು ಮರೆಯಿರಿ. ಸ್ವರಾಜ್ಯದ ಹಿತಕ್ಕಾಗಿ ಒಕ್ಕಟ್ಟಿನಿಂದ ಮನಃಪೂರ್ವಕವಾಗಿ ಯತ್ನಿಸಬೇಕೆಂದು ನಿಮ್ಮನ್ನು ನಾನು ಆಜ್ಞಾಪಿಸುವೆನು. ನನ್ನ ಅಪ್ಪಣೆಯನ್ನು ನಡಿಸುವಿರೆಂದು ಪೂರ್ಣವಾಗಿ ನಂಬಿದ್ದೇನೆ.

ಭಾವುಸಾಹೇಬನ ಈ ಮಾತುಗಳನ್ನು ಕೇಳಿ ಮಲ್ಹಾರರಾಯನು ತನ್ನ ಸ್ಥಳದಲ್ಲಿ ಕುಳಿತು ಕೊಂಡನು; ಗಾರದಿಯೂ ತನ್ನ ಸ್ಥಳದಲ್ಲಿ ಕುಳಿತುಕೊಂಡನು. ಆಗ ಬಳವಂತರಾವ ಮೇಹೇಂದಳೆಯು–''ಹೀಗೆ ನೀವು ಪರಸ್ಪರ ಕಲಹಬೆಳೆಸುವದು ಶೌರ್ಯದ ಲಕ್ಷಣವಲ್ಲ. ಶೂರರಾದವರು ವೈರಿಗಳೊಡನೆ ಕಾದುವಾಗ ಶೌರ್ಯವನ್ನು ತೋರಿಸತಕ್ಕದ್ದು. ನಿಮ್ಮಲ್ಲಿಯ ಅಂತಃಕಲಹವನ್ನು ಮೇಲಾಟದಿಂದ ಶತ್ರುಗಳ ಹಣಿಯುವದರಲ್ಲಿ ಉಪಯೋಗಿಸಿಕೊಳ್ಳು ವದು ನನಗೆ ನೆಟ್ಟಗೆ ಕಾಣುತ್ತದೆ. ಈಶ್ವರೇಚ್ಛೆಯಿದ್ದಂತಾಗುವದು; ಆದರೆ ಹೀಗೆ ಒಂದೇ ಸ್ಥಳದಲ್ಲಿ ಕೊಳೆಯುತ್ತ ಬಿದ್ದುಕೊಳ್ಳುವದು ನನ್ನ ಮನಸ್ಸಿಗೆ ಸರ್ವಥಾ ಬರುವದಿಲ್ಲ. 'ಒಂದು ಕಡತ ಎರಡು ತುಂಡು' ಎನ್ನುವ ಹಾಗೆ ಈಗ ಮಾಡಬೇಕು. ಈ ಯುದ್ಧದ ಸಂಬಂಧದಿಂದ ಎರಡರಲ್ಲಿ ಒಂದರ ನಿರ್ಣಯವು ಬೇಗನೆ ಆಗುವದು ನನಗೆ ನೆಟ್ಟಗೆ ಕಾಣುತ್ತದೆ'' ಎಂದು ನುಡಿಯಲು, ಮಹದಾಜಿಸಿಂದೆಯು ಎದ್ದು ನಿಂತು ಆವೇಶದಿಂದ—''ವೀರರೇ, ನಿಮ್ಮ ಬಾಹುಗಳಿಗೆ ಯುದ್ಧ ಮಾಡುವ ತಿಂಡೆಯಿಟ್ಟಿದ್ದರೆ, ಅದನ್ನು ಶತ್ರುಗಳೊಡನೆ ಕಾದಿ ಕಳೆದು ಕೊಳ್ಳಿರಿ. ಹೀಗೆ ನಮ್ಮ ನಮ್ಮೊಳಗೆ ಕಾದಾಡುವದರಲ್ಲಿ ಪೌರುಷವೇನು? ಈಗ ನಾನು ಎಲ್ಲರನ್ನು ಪ್ರಾರ್ಥಿಸುವ ನೇನಂದರೆ, ನೀವು ಶಿವಛತ್ರಪತಿಯ ಅನುಯಾಯಿಗಳಾಗಿದ್ದರೆ, ಸ್ವರಾಜ್ಯದ ಅಭಿಮಾನವು ನಿಮಗಿದ್ದರೆ, ನೀವು ವೀರಜನನಿಯರ ಪುತ್ರರೂ–ವೀರಪತ್ನಿಯರ ಪತಿಗಳೂ–ವೀರಕುಮಾರರ ತಂದೆಗಳೂ ಆಗಿದ್ದರೆ ಮೇಹೇಂದಳೆಯವರ ಅಭಿಪ್ರಾಯದಂತೆ ಸರಕ್ಕನೆ ಶಸ್ತ್ರಗಳನ್ನು ಒರೆಗಳಿಂದ ಹಿರಿದು ಶತ್ರುಗಳ ಮೇಲೆ ಧುಮುಕಲಿಕ್ಕೆ ತಟ್ಟನೆ ಸಿದ್ಧ ರಾಗಿರಿ. ಸಡ್ಡು ಹೊಡೆದು ದುರಾಣಿಶಹನನ್ನು ಬರಮಾಡಿಕೊಂಡು ಮರಾಟರ ಕೈಯಲ್ಲಿ ಆತನಿಗೆ ಚನ್ನಾಗಿ ತೋರಿಸಿರಿ. ಈ ಮಹದಾಜಿಯ ಕುದುರೆಯು ಹೊರಗೆ ಜೀನು ಹಾಕಿ ಸಿದ್ಧವಾಗಿ ನಿಂತಿರುವದು. ಜೀನು ಇಳಿಸದೆ ಹಾಗೆಯೇ ಆತನು ಸ್ವಾಮಿಕಾರ್ಯಕ್ಕಾಗಿ ರಣಕ್ಕೆ ಹೊರಡಲು ಸಿದ್ಧನಾಗಿರುವನೆಂಬದನ್ನು ಚನ್ನಾಗಿ ನೆನಪಿನಲ್ಲಿಡಿರಿ,'' ಎಂದು ನುಡಿದು, ಆತನು ತನ್ನ ಖಡ್ಗವನ್ನು ಹಿರಿದು—''ಜಯಜಗದಂಬೆ, ಜಯತುಳಜಾ ಭವಾನಿ'' ಎಂದು ಗರ್ಜಿಸಿದನು.

ಹೀಗೆ ಸಿಂದೆಯು ತನ್ನ ಮನೆತನಕ್ಕೆ ಒಪ್ಪುವಂತೆ ಆಡಿದ ವೀರಾಲಾಪಗಳನ್ನು ಕೇಳಿ ದರ್ಬಾರದ ಸರದಾರರೂ ಆವೇಶಗೊಂಡು ತಮ್ಮ ಖಡ್ಗಗಳನ್ನು ಒರೆಯಿಂದ ಹಿರಿದರು. ಆಗ ಮಲ್ಹಾರರಾವ ಹೋಳಕರನು ಎದ್ದು ನಿಂತು ಖಡ್ಗವೆತ್ತಿ–''ಶಾಬಾಸ, ಮಹದಾಜೀ, ಶಾಬಾಸ! ನಿಮ್ಮ ಮಾತುಗಳು ನಿಮ್ಮ ಶೌರ್ಯಕ್ಕೆ ಒಪ್ಪುವಹಾಗಿವೆ. ಮೇಹೇಂದಳೆಯವರ ವಿಚಾರವು ನನಗೆ ಸಮ್ಮತವದೆ. ಇಂದೇ ದುರಾಣಿಶಹನಮೇಲೆ ದಂಡೆತ್ತಿಹೋಗಲಿಕ್ಕೆ ನಾನು ಸಿದ್ಧನಿರುತ್ತೇನೆ. ನಮಗೆ ನಾಶಪ್ರಸಂಗವು ಒದಗಿರುವದೆಂಬದೇನೋ ನಿಜ; ಆದರೆ ಆ ಪ್ರಸಂಗಕ್ಕೆ ನನ್ನ ಚಂಡನ್ನು ಮೊದಲು ಮುಂದೆ ಮಾಡುವೆನು. ನಾನೂ, ಯಶವಂತರಾವಪವಾರನೂ ಕೂಡಿ ಸೈನ್ಯದೊಡನೆ ಇಂದು ರಾತ್ರಿ ದುರಾಣಿಯಮೇಲೆ ಸಾಗಿಹೋಗುವೆವು. ಸಮಶೇರಬಹದ್ದರನೂ, ವಿಠ್ಠಲರಾವ ವಿಂಚೂರಕರನೂ ನಮ್ಮ ದಂಡಿನಿಂದ ಒಂದು ಕೂಗಳತೆಯ ಅಂತರದಲ್ಲಿದ್ದು, ನಮ್ಮ ಸೈನ್ಯದ ಹಿಂಭಾಗವನ್ನು ರಕ್ಷಿಸುತ್ತಿರಲಿ. ಜನಕೋಜಿಸಿಂದೆ, ಮಹದಾಜಿಸಿಂದೆ ಇವರು ತಮ್ಮ ಸೈನ್ಯ

ದೊಡನೆ ದುರಾಣಿಯ ಛಾವಣಿಯ ಸಂರಕ್ಷಕ ಸೈನ್ಯದಮೇಲೆ ಅಕಸ್ಮಾತ್ತಾಗಿ ಬಿದ್ದು ಅದನ್ನು ತುಂಡರಿಸಲಿ. ಇಬ್ರಾಹಿಮಖಾನರು ನಮ್ಮ ಛಾವಣಿಯನ್ನು ರಕ್ಷಿಸಲಿ. ನಾನು ದುರಾಣಿಯ ಛಾವಣಿಯ ಮುಖ್ಯದ್ವಾರದಿಂದ ಒಳಗೆ ಪ್ರವೇಶಿಸಿ, ದುರಾಣಿಯು ಏಳುವದರೊಳಗೆ ಅವನ ಡೇರೆಯನ್ನು ಮುತ್ತುವೆನು. ಇಂದಿನ ಸಂಗ್ರಾಮದಲ್ಲಿ ದುರಾಣಿಯನ್ನು ಸೆರೆ ಹಿಡಿಯುವೆನು; ಒಂದುಪಕ್ಷದಲ್ಲಿ ಅದು ಸಾಧಿಸದಿದ್ದರೆ ಅವನ ದಂಡನ್ನು ತುಂಡರಿಸುವೆನು. ನಮ್ಮ ಬಾಲೆಯ ರಾವುತರು ದುರಾಣಿಯ ಛಾವಣಿಯಮೇಲೆ ಬಹು ಎಚ್ಚರದಿಂದ ಏರಿಹೋಗಬೇಕು–ಸದ್ದಿಲ್ಲದೆ ಏರಿ ಹೋಗಬೇಕು; ಯಾವಬಗೆಯ ವಾದ್ಯಗಳನ್ನೂ ಬಾರಿಸಬಾರದು; ಯಾವಬಗೆಯ ಸಪ್ಪಳ ವನ್ನೂ ಮಾಡಬಾರದು. ನಾನು ಸೂಚಿಸಿದಕೂಡಲೆ ಸುಮ್ಮನೆ ನನ್ನ ಬೆನ್ನಹತ್ತಿಬರಬೇಕು. ನಾಳೆ ಮ್ಹಾಳಸಾಕಾಂತನ ಕೃಪೆಯಿಂದ ದುರಾಣಿಯನ್ನು ಬೆರಳಿನ ಮೇಲೆ ಹ್ಯಾಗೆ ಕುಣಿಸುವೆನೆಂಬು ದನ್ನು ನೋಡಬೇಕು. ಭಾವುಸಾಹೇಬ, ನಮ್ಮ ಬರ್ಚಿಗಳಿಗೆ ನಾಳೆ ಮನದಣಿಯಾಗಿ ಪಠಾಣರ ರಕ್ತವನ್ನು ಕುಡಿಸುವೆನು!

## ಕುರುಬನ ಕರಾಮತಿ!

ಹೀಗೆ ಹೋಳಕರನು ನುಡಿಯಲು, ಭಾವುಸಾಹೇಬನು ಅದಕ್ಕೆ ಒಪ್ಪಿಕೊಂಡು, ದರ್ಬಾರದ ಕಾರ್ಯವನ್ನು ಮುಗಿಸಿದನು. ಬಳಿಕ ಆ ಕಕ್ಕ–ಮಕ್ಕಳು ಎದ್ದು ದಿವಾಣಖಾನೆಯೊಳಗೆ ಹೋದರು. ಭಾವುಸಾಹೇಬನು ಯುದ್ಧ ಕಲೆಯನ್ನು ಚನ್ನಾಗಿ ಬಲ್ಲವನಾಗಿದ್ದನು. ಉದಗಿರಿ ಮೊದಲಾದ ಹಲವು ಯುದ್ಧಗಳಲ್ಲಿ ಜಯಹೊಂದಿ ಆತನು ಕೀರ್ತಿಯು ಪಡೆದಿದ್ದನು. ಆತನಿಗೆ ಈಗಿನ ತನ್ನ ದುರವಸ್ಥೆಯ ಸಂಪೂರ್ಣ ಜ್ಞಾನವಿದ್ದದ್ದರಿಂದ, ತನಗೆ ಜಯವಾಗುವ ಲಕ್ಷಣ ವಿಲ್ಲೆಂದು ಆತನು ತಿಳಿದುಕೊಂಡಿದ್ದನು; ಆದ್ದರಿಂದ ಹೋಳಕರನ ಪ್ರಯತ್ನಕ್ಕೆ ಯಶಸ್ಸು ದೊರೆಯುವ ನಂಬಿಗೆಯು ಆತನಿಗಿದ್ದಿಲ್ಲ. ಆತನು ಅಂತರಂಗದಲ್ಲಿ ತೀರ ಉದಾಸೀನನಾಗಿ ದ್ದನು. ಈ ಸ್ಥಿತಿಯಲ್ಲಿ ವಿಶ್ವಾಸರಾಯನನ್ನು ನೋಡಿ ಆತನಿಗೆ ಬಹಳ ವ್ಯಸನವಾಯಿತು. ಅತ್ತಿಗೆ ಯಾದ ಗೋಪಿಕಾಬಾಯಿಯು, ಇಷ್ಟುದೂರ ಮಗನನ್ನು ಕಳುಹಿಸಲಿಕ್ಕೆ ಅಂದೇಶಪಡುತ್ತಿರು ವಾಗ, ನಾನೇ ಒತ್ತಾಯದಿಂದ ಕರತಂದು ಈತನನ್ನು ಗಂಡಾಂತರಕ್ಕೆ ಗುರಿಮಾಡಿದಹಾಗಾಯಿ ತೆಂದು ಆತನು ಮಿಡುಕಿದನು. ಭಾವು ಸಾಹೇಬನ ಹೊಟ್ಟೆಯಲ್ಲಿಮಕ್ಕಳಿದ್ದಿಲ್ಲ. ತನ್ನ ಅಣ್ಣನಮಗ ನಾದ ವಿಶ್ವಾಸರಾಯನ ಮೇಲೆ ಆತನ ಪ್ರೇಮವು ಹೆಚ್ಚು; ಆದ್ದರಿಂದ ಆ ಮಾನಧನನಾದ ಭಾವುವು ವಿಶ್ವಾಸರಾಯನನ್ನು ಕುರಿತು—''ಬಾಳಾ, ವಿಶ್ವಾಸರಾಯಾ, ಈ ದಂಡಯಾತ್ರೆಯ ಪರಿಣಾಮವು ನನಗೆ ನೆಟ್ಟಗೆ ಕಾಣುವದಿಲ್ಲ. ನನ್ನ ತಪ್ಪೇ ಇರಲಿ–ನಮ್ಮ ಜನರತಪ್ಪೇ ಇರಲಿ, ಅಥವಾ ನಮ್ಮ ಪ್ರಾರಬ್ಧ ಕರ್ಮವು ಬುದ್ಧಿಗೆ ಭ್ರಂಶವನ್ನುಂಟುಮಾಡಿರಲಿ; ನಮ್ಮ ಪಕ್ಷಕ್ಕೆ ಜಯ ಉಂಟಾಗುವದಿಲ್ಲೆಂಬದು ನಿಶ್ಚಯವು! ನಮ್ಮ ಪಕ್ಷವು ರಸಾತಳಕ್ಕೆ ಹೋಗಬೇಕೆಂದು

ಈಶ್ವರೀ ಸಂಕೇತವಿದ್ದಂತೆ ತೋರುತ್ತದೆ. ಹೊರಗಿನಿಂದ ನಮಗೆ ದೊಡ್ಡ ಸಹಾಯವು ಒದಗಿದ ಹೊರತು ನಮಗೆ ಜಯಪ್ರಾಪ್ತಿಯಾಗುವದಿಲ್ಲ; ನಮ್ಮ ಬಿಡುಗಡೆಯಾಗುವದಿಲ್ಲ. ಆ ಸಹಾಯವು ನಮಗೆ ಎಲ್ಲಿಂದ ದೊರೆಯಬೇಕು? ಉತ್ತರ ಹಿಂದುಸ್ಥಾನದವರ ಮನಸ್ಸನ್ನು ನಾವು ನೋಯಿಸಿರುವದರಿಂದ, ಅವರ ಸಹಾಯವು ನಮಗೆ ದೊರೆಯುವಹಾಗಿಲ್ಲ. ನನಗೆ ಹೆಚ್ಚು ಸೈನ್ಯವು ಬೇಡೆಂದು ಅಣ್ಣನಿಗೆ ಪ್ರತಿಜ್ಞಾಪೂರ್ವಕವಾಗಿ ನಾನು ಹೇಳಿಬಂದಿರುವದರಿಂದ, ಈಗ ಮತ್ತೆ ಸೈನ್ಯದ ಸಹಾಯಕಳಿಸೆಂದು ನಾನು ಆತನಿಗೆ ಯಾವ ಮೋರೆಯಿಂದ ಹೇಳಿಕಳಿಸಲಿ? ಬಾಳಾ, ಯೋಗ ವಿದ್ದಂತಾಗುವದು; ಅದಕ್ಕಾಗಿ ನನಗೆ ಚಿಂತೆಯಿಲ್ಲ; ಆದರೆ ನನ್ನ ಸಂಗಡ ನೀನೂ ಗಂಡಾಂತರಕ್ಕೆ ಗುರಿಯಾದದ್ದಕ್ಕಾಗಿ ನನಗೆ ಬಹಳ ದುಃಖವಾಗುತ್ತದೆ. ನಿನ್ನನ್ನು ಈಗ ಪುಣೆಗೆ ಸುರಕ್ಷಿತವಾಗಿ ಮುಟ್ಟಿಸುವೆನು, ನೀನು ಹೋಗಿಬಿಡು.

ಕಕ್ಕನ ಈ ನಿರಾಶೆಯ ಉದ್ಗಾರವನ್ನು ಕೇಳಿ ವಿಶ್ವಾಸರಾಯನ ಸರ್ವಾಂಗದೊಳಗಿನ ರಕ್ತವು ತಪ್ತವಾಯಿತು. ಆತನು ಎಡಗೈಯಲ್ಲಿ ಕಕ್ಕನ ಕೊರಳಿಗೆ ಹಾಕಿ ಬಲಗೈಯ ಖಡ್ಗವೆತ್ತಿ— "ಕಾಕಾಸಾಹೇಬ, ದುರ್ದೈವದಿಂದ ತಮಗೆ ಪ್ರಾಣಭಯವು ಒದಗಿದರೆ, ನಿಮ್ಮನ್ನು ಬಿಟ್ಟು ನಾನು ಪುಣೆಗೆ ನಾನಾಸಾಹೇಬರ ಕಡೆಗೆ ಹೋದೇನೆಂಬದನ್ನು ನೀವು ಮರೆತುಬಿಡಿರಿ. ಕಡೆ ತನಕ ನಿಮಗೆ ಸಹಾಯಮಾಡುತ್ತ ನಿಮಗೆ ಬೆಂಬಲವಾಗಿರುವೆನು. ಅಂಥ ಪ್ರಸಂಗವೇ ಒದಗಿದರೆ ರಣಾಂಗಣದಲ್ಲಿ ಬಿದ್ದು ದೇಹವನ್ನು ಚರಣಕ್ಕರ್ಪಿಸುವೆನು! ಕಾಕಾಸಾಹೇಬ, ಬ್ರಾಹ್ಮಣರಾದ ಶ್ರೀವರ್ಧನ ಕುಲಕರಣಿಯವರು ನಾವು, ನಮ್ಮ ಬ್ರಾಹ್ಮಣ ಧರ್ಮವನ್ನು ಬಿಟ್ಟು ಕ್ಷಾತ್ರಧರ್ಮವನ್ನು ಕೈಕೊಂಡದ್ದು ಹೀಗೆ ಅಂಜಿ ರಣಾಂಗಣದಿಂದ ಓಡಿಹೋಗುವದ ಕ್ಕಾಗಿಯೋ ಏನು? ತಾವು ನಿಶ್ಚಿಂತರಾಗಿರಬೇಕು. ತಮ್ಮ ವಿಶ್ವಾಸನು ಮರಣಕ್ಕೆ ಸರ್ವಥಾ ಅಂಜನು. ಆತನ ಪಿತೃವ್ಯಭಕ್ತಿಯಲ್ಲಿಯೂ, ಕ್ಷಾತ್ರತೇಜದಲ್ಲಿಯೂ ತಮ್ಮ ಸಂಪೂರ್ಣ ವಿಶ್ವಾಸ ವಿರಲಿ" ಎಂದು ನುಡಿದನು. ಮಗನ ಈ ಪ್ರೇಮಭರಿತವಾದ ಉತ್ಸಾಹಯುಕ್ತ ಭಾಷಣವನ್ನು ಕೇಳಿ ಭಾವುಸಾಹೇಬನಿಗೆ ಪರಮಾನಂದವಾಯಿತು. ಆಗ ಆ ಕಕ್ಕ–ಮಕ್ಕಳು ಪರಸ್ಪರ ಪ್ರೇಮ ದಿಂದ ಒಬ್ಬರನ್ನೊಬ್ಬರು ಆಲಿಂಗಿಸಿದರು. ಕಕ್ಕನ ಮಾತಿನಿಂದ ವಿಶ್ವಾಸರಾಯನಿಗೆ ಅಂತ ರಂಗದಲ್ಲಿ ಸಮಾಧಾನ ವಾಗಿದ್ದಿಲ್ಲ, ಆತನು ಜನಕೋಟಿ ಸಿಂಧೆಯನ್ನು ಏಕಾಂತದಲ್ಲಿ ಕರಿಸಿ ಕೊಂಡನು. ಅವರಿಬ್ಬರು ಬಹಳ ಹೊತ್ತು ವಿಚಾರಮಾಡಿದರು. ಬಳಿಕ, ಅವರು ನಾನಾ ಸಾಹೇಬರವರ ಕಡೆಗೆ ಪತ್ರಬರೆದು ಕಳಿಸಬೇಕೆಂದು ನಿಶ್ಚಯಿಸಿದರು. ಆಗ ವಿಶ್ವಾಸರಾಯನು ಗೊತ್ತಾದಂತೆ ತನ್ನ ತಂದೆಗೆ ಬರೆದ ಪತ್ರವೇನಂದರೆ–

ತೀರ್ಥರೂಪ ರಾಜಶ್ರೀ ನಾನಾಸಾಹೇಬ ಪೇಶವೆ, ಪಂತಪ್ರಧಾನ, ಮುಕ್ಕಾಮಪುಣೆ ಹಿರಿಯರ ಸೇವೆಗೆ–

ಅಪತ್ಯ ವಿಶ್ವಾಸರಾಯನು ತ್ರಿಕಾಲದಲ್ಲಿಯೂ ಚರಣಗಳಮೇಲೆ ಮಸ್ತಕವಿಟ್ಟು ಮಾಡುವ ಶಿರಸಾಷ್ಟಾಂಗ ನಮಸ್ಕಾರ ವಿಜ್ಞಾಪನೆಗಳು– ಮಿತಿ ಪೌಷ್ಯ ಶುದ್ಧ ಪ್ರತಿಪದಿಯಲ್ಲಿ ಸ್ವಾರಿಮುಕ್ಕಾಮ ಕುರುಕ್ಷೇತ್ರದ ಛಾವಣಿಯಲ್ಲಿ ಹಿರಿಯರ ಆಶೀರ್ವಾದದಿಂದ ಸುಖರೂಪ ವಾಗಿರುವೆವು. ವಿಶೇಷ–ಈ ಕುರುಕ್ಷೇತ್ರದ ರಣಭೂಮಿಯಲ್ಲಿ ಗಿಲಚಿ ಜನರ ಸಾಮರ್ಥ್ಯವು

ವಿಶೇಷವಾಗಿರುವದು. ನಮ್ಮ ಪರಿಣಾಮವು ನೆಟ್ಟಗೆ ಕಾಣುವದಿಲ್ಲ. ಶ್ರೀ. ಭಾವುಸಾಹೇಬ ಕಕ್ಕಂದಿರು ಅಭಿಮಾನಕ್ಕೆ ಬಿದ್ದಿರುವರು. ಈಗ ಪ್ರಜ್ವಲಿಸುತ್ತಿರುವ ರಣಕುಂಡದಲ್ಲಿ ಸರ್ವ ಸೈನ್ಯ ಸಹಿತವಾಗಿ ಅವರ ಆಹುತಿಯಾಗುವಂತೆ ತೋರುತ್ತದೆ! ಅವರು ಹಿರಿಯರ ಕಡೆಗೆ ತಮ್ಮ ಕೊಂಕು– ಕೊರತೆಗಳನ್ನು ಬರೆದು ತಿಳಿಸಲಾರರು. ಇಂಥ ಸಂಕಟಸಮಯದಲ್ಲಿ ಐವತ್ತುಸಾವಿರ ಸೈನ್ಯವನ್ನೂ, ಒಂದು ಕೋಟಿ ರೂಪಾಯಿಗಳನ್ನೂ ಕೂಡಲೆ ಕಳಿಸಿಕೊಡದಿದ್ದರೆ, ಪುನಃ ನಿಮ್ಮ ದರ್ಶನವಾಗಲಿಕ್ಕಿಲ್ಲ, ಪತ್ರ ಮುಖದಿಂದಾಗಿರುವ ಈ ದರ್ಶನವೇ ಕಡೆಯದೆಂದು ತಿಳಿಯ ಬೇಕು! ಹಿರಿಯರಿಗೆ ನನ್ನ ಹೊರತು ಇನ್ನೂ ಇಬ್ಬರು ಮಕ್ಕಳಿರುವರು. ದೇವರ ದಯದಿಂದ ತಮಗೆ ಮತ್ತೆಮಕ್ಕಳಾಗುವ ಸಂಭವವಿರುತ್ತದೆ; ಆದರೆ ಕಾಕಾಸಾಹೇಬರಂಥ ಬಂಧುಗಳು ಮಾತ್ರ ತಮಗೆ ಸಿಗಲಾರರು! ಆದ್ದರಿಂದ ಸಾವಿರ ಕೆಲಸಗಳನ್ನು ಬಿಟ್ಟು ಮೊದಲು ಸಹಾಯವನ್ನೊದಗಿಸಿ ಕೊಟ್ಟು ಈ ಪ್ರಸಂಗದಲ್ಲಿ ಸಂರಕ್ಷಿಸಬೇಕು. ಬರೆಯತಕ್ಕ ಸಂಗತಿಯು ಇದಕ್ಕೂ ಹೆಚ್ಚಿನದು ಯಾವದೂ ಇಲ್ಲ. ಸೇವೆಗೆ ಶ್ರುತವಿರಬೇಕು. ಇತಿ ವಿಜ್ಞಾಪನೆಗಳು

ತಮ್ಮ ಬಾಲಕ,
ವಿಶ್ವಾಸ.

ಹೀಗೆ ವಿಶ್ವಾಸರಾಯನು ಪ್ರಸಂಗೋಚಿತ ವಿಚಾರಮಾಡಿ ಪತ್ರ ಕಳಿಸುತ್ತಿರಲು, ಅತ್ತ ಹೋಳಕರನು ದುರಾಣಿಯಮೇಲೆ ಅಕಸ್ಮಾತ್ ರಾತ್ರಿ ಬೀಳುವುದಕ್ಕಾಗಿ ಹೆಣಗುತ್ತಲಿದ್ದನು. ಆತನ ಗುಪ್ತಸಿದ್ಧತೆಯು ಒತ್ತರದಿಂದ ನಡೆದಿತ್ತು. ಹೋಳಕರನ ಈ ಯತ್ನವು ಸಫಲವಾಗುವದ ರಿಂದ, ಕಮರಿಹೋಗಿದ್ದ ಮಹಾರಾಷ್ಟ್ರರ ಆಶಾವೃಕ್ಷಕ್ಕೆ ಚಿಗರುಗಳೊಡೆಯಬಹುದಾಗಿತ್ತು. ಆದ್ದರಿಂದ ಹೋಳಕರನ ಪ್ರತಿಜ್ಞೆಗೆ ಬಹಳ ಗೌರವವುಂಟಾಗಿತ್ತು. ಅಂಥ ಗೌರವಕ್ಕೆ ಹೋಳಕ ರನು ನಿಶ್ಚಯವಾಗಿ ಪಾತ್ರನಿದ್ದನು. ಆತನು ನೆರೆದ ದರ್ಬಾರದಲ್ಲಿ ಇಬ್ರಾಹಿಮಖಾನನ ಮೇಲಿನ ಸಿಟ್ಟಿನಿಂದ ಮೀಸೆಯಮೇಲೆ ಕೈಹಾಕಿ ಪ್ರತಿಜ್ಞೆ ಮಾಡಿದ್ದರಿಂದ, ತನ್ನ ಆ ಮೀಸೆಗೆ ಮಣ್ಣು ಹತ್ತದಂತೆ ಆತನು ನೋಡಿಕೊಳ್ಳಬೇಕಾಗಿತ್ತು. ಆತನ ಸೂಚನೆಯಂತೆ ಮಹದಾಜಿ ಸಿಂದೆಯು ತನ್ನ ಸೈನ್ಯ ದೊಡನೆ ಅತಾಯಿಖಾನನ ಸೈನ್ಯದಮೇಲೆ ಸಾಗಿಹೋದನು. ಸಮಶೇರ ಬಹದ್ದರನೂ, ವಿಂಚೂರಕರನೂ ಹೋಳಕರನಿಗೆ ಸಹಾಯಕರಾಗಿ ಹೊರಟರು. ದುರಾಣಿಬಾದ ಶಹನ ಪ್ರತ್ಯಕ್ಷ ದಂಡಿನ ಸಮಾಚಾರವನ್ನು, ಒಮ್ಮೆ ತನ್ನ ಕೈಮುಟ್ಟಿ ತಕ್ಕೊಳ್ಳಬೇಕೆಂದು ಹೋಳಕರನು ಮಾಡಿದ್ದನು. ಆ ಸಂಧಿಯು ಈಗ ಒದಗಿಬಂದಂತಾಗಿತ್ತು. ಐದು ಸಾವಿರ ಪೆಂಡಾರಿಗಳ ಸೈನ್ಯವನ್ನೂ ಹತ್ತು ಸಾವಿರ ರಾವುತರನ್ನೂ ಕಟ್ಟಿಕೊಂಡು, ನಮ್ಮ ಆ ಕುರುಬ ಸರದಾರನು ಮಧ್ಯರಾತ್ರಿಯಲ್ಲಿ ಭಾವಣಿಯಿಂದ ಹೊರಟನು. ಅಷ್ಟು ಹೊತ್ತಿಗೆ ಸಿಂದೆಯು ಅತಾಯಿಖಾನನಮೇಲೆ ಸಾಗಿಹೋಗಿದ್ದನು. ಖಾನನು ಅತ್ತ ಯುದ್ಧದಲ್ಲಿ ತೊಡಗಿದ್ದರಿಂದ ಅವನ ಗಸ್ತಿಯು ಬಂದುಬಿದ್ದು, ಹೋಳಕರನು ಶಹಾನ ಭಾವಣಿಯಮೇಲೆ ಸಪ್ಪಳಿಲ್ಲದೆ ನಿರ್ಬಾಧವಾಗಿ ಸಾಗಿಹೋಗಲಿಕ್ಕೆ ಅನುಕೂಲವಾಯಿತು. ಅತಾಯಿಖಾನನು ಯುದ್ಧದಲ್ಲಿ ತೊಡಗಿದ ಸುದ್ದಿಯನ್ನು, ಆ ಖಾನನ ಜನರು ಶಹಾನಿಗೆ ತಿಳಿಸಿದರು; ಆದರೆ ಶಹಾನು ಅದಕ್ಕೆ

ಅಷ್ಟು ಮಹತ್ವಕೊಡಲಿಲ್ಲ. ಈ ಮೊದಲೆ ಅತಾಯಿಖಾನನು ಅಕಸ್ಮಾತ್ತಾಗಿ ಗೋವಿಂದಪಂತ ಬುಂದಲೆಯನ್ನು ಕೊಂದ ಸಿಟ್ಟಿನಿಂದ ಮರಾಟರು ಅವನ ಸೇಡು ತೀರಿಸಿಕೊಳ್ಳಲಿಕ್ಕೆ ಬಂದಿರ ಬಹುದೆಂದು ಆತನು ತಿಳಿದು ಖಾನನ ಸಹಾಯಕ್ಕೆ ತನ್ನ ಖಾಸಸೈನ್ಯ ವನ್ನೂ, ಸುಜಾಉದ್ದೌಲನ ಮೊಗಲರಾವುತರನ್ನೂ ಕಳಿಸಿ, ತನ್ನ ಬಳಿಯಲ್ಲಿ ಅಫಗಾಣಕಾಲಾಳನ್ನೂ, ಹಾಫೀಜರಹಮಂತ ಖಾನನ ರೋಹಿಲೆಜನರನ್ನೂ ಇಟ್ಟುಕೊಂಡನು. ಇದಕ್ಕೂ ಹೆಚ್ಚಿನ ವ್ಯವಸ್ಥೆಯನ್ನೇನು ಮಾಡುವ ಕಾರಣವಿಲ್ಲೆಂದು ಶಹಾನು ತಿಳಿದು ಸ್ವಸ್ಥವಾಗಿದ್ದನು. ಆತನ ಈ ತಪ್ಪುತಿಳುವಳಿಕೆಯ ಲಾಭವು ಮಲ್ಹಾರರಾಯನಿಗಾಯಿತು. ಆ ವೃದ್ಧ ರಣವೀರನು ನಿರ್ಬಾಧವಾಗಿ ಮುಂದಕ್ಕೆ ಸಾಗಿಹೋದನು. ಉತ್ತರ ಹಿಂದುಸ್ಥಾನದಲ್ಲಿ ಚಳಿಗಾಲದೊಳಗೆ ಮಂಜು ಬಹು ದಟ್ಟವಾಗಿ ಬೀಳುತ್ತದೆ. ಅದರಂತೆ ಈಗ ಮಂಜು ಬಿದ್ದದರಿಂದ, ದುರಾಣಿಗಳಿಗೆ ಹೋಳಕರನ ಜನರು ಬರುವದು ಕಾಣಲಿಲ್ಲ.

ಶಹಾನು ಜಾತ್ಯಾ ಒಳ್ಳೇ ಜಾಣನು, ಧೂರ್ತನು; ಆದರೆ ಯುದ್ಧಮಾಡಿ ನರೆಹಾಯ್ದಿದ್ದ ಮಲ್ಹಾರರಾಯನು ಯುಕ್ತಿಯಿಂದ ಆತನನ್ನು ಚನ್ನಾಗಿ ಮೋಸಗೊಳಿಸಿದನು. ಒಂದು ದಿನ್ನೆಯ ಮೇಲೆ ಶಹಾನ ಕೆಂಪು ಡೇರೆಯನ್ನು ಹೊಡೆದಿದ್ದರು. ಅದರ ಸುತ್ತುತುಬಾಕಿಯವರ ಜಾಗರೂಕ ವಾದ ಕಾವಲು ಇತ್ತು, ಮಲ್ಹಾರರಾಯನ ಜನರು ತೀರಹತ್ತರ ಹೋಗಲು, ಆ ಕಾವಲುಗಾರರಿಗೆ ಅವರ ಸುಳವು ಹತ್ತಿ ಕೂಡಲೆ ಅವರು ತುಬಾಕಿಗಳನ್ನು ಹಾರಿಸಿದರು. ಅದಕ್ಕೆ ಮರಾಟ ದಿಂದಲೂ ಪ್ರತ್ಯುತ್ತರವು ದೊರೆಯಿತು. ಮರಾಟರು ''ಹರ ಹರ ಮಹಾದೇವ'' ಎಂದು ಗರ್ಜಿಸುತ್ತ ಕೈಗೆ ಸಿಕ್ಕವರನ್ನು ತುಂಡರಿಸುತ್ತ ಮುಂದಕ್ಕೆ ಸಾಗಿದರು. ಅವರ ಸೈನ್ಯದ್ದೊಂದು ಗುಂಪು ಶಹಾನ ಛಾವಣಿಯ ದ್ವಾರದೊಳಗಿಂದ ಸಾಗಿಹೋಗಿ ಡೇರೆಯ ಮುಂದಿನ ಓಣಿ ಯನ್ನು ಸೇರಿತು. ಮತ್ತೊಂದು ಗುಂಪು ಬೇರೊಂದು ನಿಟ್ಟಿನಿಂದ ಡೇರೆಯಿದ್ದ ದಿನ್ನೆಯನ್ನು ಏರಿ ಹೋಗಹತ್ತಿತು. ಹೀಗೆ ಸೂರ್ಯೋದಯವಾಗುತ್ತಿರಲು, ಮಲ್ಹಾರರಾಯನು ತನ್ನ ಪ್ರತಿಜ್ಞೆ ಯಂತೆ ದುರಾಣಿಯ ಶಹನ ಡೇರೆಗೆ ಮುತ್ತಿಗೆ ಹಾಕಿದನು. ಈ ಪ್ರಸಂಗದಲ್ಲಿ ದುರಾಣಿ ಅಹಮ್ಮದಶಹನು ತನ್ನ ಡೇರೆಯಲ್ಲಿ ಇದ್ದರೆ, ಹೋಳಕರನ ಪ್ರತಿಜ್ಞೆಯು ಪೂರ್ಣವಾಗಿ ಶಹಾನು ಹೋಳಕರನ ಸೆರೆಯಾಳಾಗಬಹುದಾಗಿತ್ತು; ಆದರೆ ಗುರಿಯು ಸ್ವಲ್ಪದರಲ್ಲಿ ತಪ್ಪಿದಂತಾಯಿತು! ಅಂದು ಶಹಾನು ಸುದೈವದಿಂದ ಬೇರೆ ಡೇರೆಯಲ್ಲಿ ಮಲಗಿಕೊಂಡದ್ದ ರಿಂದ ಪಾರಾದನು. ದೇವರು ಕಾಯುವಾಗ ಯಾರು ಏನು ಮಾಡುವರು? ಹೀಗೆ ಹೋಳ ಕರನು ಡೇರೆಯನ್ನು ಮುತ್ತಿದಾಗ, ಅತ್ತ ಸಮಶೇರಬಹಾದ್ದರ, ವಿಂಚೂರಕರ ಇವರು ದುರಾಣಿಯ ಛಾವಣಿಯೊಳಗಿನ ಜನರನ್ನು ತುಂಡರಿಸಹತ್ತಿದರು; ಅತ್ತ ಮಹದಾಜಿ ಸಿಂದೆಯು ಅತಾಯಿಖಾನನ ಮೈಯನ್ನು ಚನ್ನಾಗಿ ನುಗ್ಗು ಮಾಡಿದ್ದನು. ಹೀಗೆ ಮರಾಟರು ಎಲ್ಲ ಕಡೆ ಯಿಂದಲೂ ಏರಿಬಂದು ಅನರ್ಥ ಮಾಡತೊಡಗಿರುವದನ್ನು ನೋಡಿ ಶಹಾನು ದಂಗು ಬಡಿದನು. ಅಂಥ ಲೌಕಿಕ ಬುದ್ಧಿಶಾಲಿಯ, ಹಾಗು ಕೈಕೂತ ರಣವೀರನ ಬುದ್ಧಿಯೂ, ಆಗ ಮಸಣಿಸಿ ಹೋಯಿತು! ತಾನು ಏಳುವದರೊಳಗೆ ಮರಾಟರು ತನ್ನ ಡೇರೆಯ ಮುತ್ತಿದರಲ್ಲ ಎಂದು ಆತನು ಆಶ್ಚರ್ಯದಿಂದ ಬೆರಳು ಕಚ್ಚಿದನು. ತಾನು ನಿನ್ನೆ ತನ್ನ ಡೇರೆಯಲ್ಲಿ ಮಲಗದೆ ಇದ್ದದ್ದೊಂದು ಅಲ್ಲಾನ ಕೃಪೆಯೆಂದು ಆತನು ತಿಳಿದನು.

ಈ ಪ್ರಸಂಗದಲ್ಲಿ ಮರಾಟರು ಪ್ರಕಟಿಸಿದ ಪರಾಕ್ರಮವು ಆಶ್ಚರ್ಯಕರವಾಗಿತ್ತು. ಅವರ ಆವೇಶದ ಹೊಡತಕ್ಕೆ ದುರಾಣಿಯ ಪಾಳಯವು ತತ್ತರಿಸಿತು; ದುರಾಣಿಯು ದಂಗುಬಡಿದನು. ಏನುಮಾಡಬೇಕೆಂಬದು ಆತನಿಗೆ ತೋಚದಾಯಿತು. ''ಮಲ್ಹಾರ ಆಯಾ! ಮಲ್ಹಾರಆಯಾ'' ಎಂಬ ಭಯಸೂಚಕ ಧ್ವನಿಯು ಛಾವಣಿಯ ತುಂಬ ಹಬ್ಬಿತು. ಪೆಂಡಾರಿಗಳು ತಮ್ಮ ಲೂಟಿಯ ಕಾಯಕವನ್ನು ನಡಿಸಿದರು. ಲೂಟಿಯೊಡನೆ ಜನಸಂಹಾರದ ಕಾರ್ಯವನ್ನೂ ಸಾಗಿಸಿದರು. ಆಗ–''ಅಬ್ ಕ್ಯಾಕರನಾ! ಅರೇ ಅಲ್ಲಾ! ಬಡಾಗಹಜಬಹುವಾ! ತೋಬಾ! ತೋಬಾ!'' ಎಂಬ ಧ್ವನಿಯಿಂದ ದಿಕ್ಕುಗಳು ತುಂಬಿದವು. ಕೆಲವು ಹೊತ್ತಿನಮೇಲೆ ಬರ್ಚಿಯ ಯುದ್ಧವು ನಿಂತು ಖಡ್ಗದ ಯುದ್ಧಕ್ಕೆ ಆರಂಭವಾಯಿತು. ಆ ಘೋರವಾದ ಕಾದಾಟದಲ್ಲಿ ಹೋಳಕರ–ಗಾಯಕವಾಡ– ವಿಂಚೂರಕರರವರ ಹಲವು ಜನ ವೀರರು ರಣಭೂಮಿಯಲ್ಲಿ ಬಿದ್ದರು! ಆ ಮೇಲೆ ಆ ಮೂವರು ವೀರರೂ ಸೈನ್ಯದೊಡನೆ ಜಲಪ್ರವಾಹದಂತೆ ದುರಾಣಿಯ ಸೈನ್ಯದಮೇಲೆ ಹರಿದುಹೋದರು. ಉಭಯದಳದ ವೀರರ ಖಡ್ಗಗಳ ಹೊಡೆತದ ''ಸಪ್ ಸಪ್'' ಎಂಬ ಸಪ್ಪಳವು ಎಲ್ಲ ಕಡೆಯಲ್ಲಿ ಕೇಳಹತ್ತಿತು. ರಣಕೊಂಬು, ರಣಭೇರಿ ಮೊದಲಾದ ರಣ ವಾದ್ಯಗಳು ಬೋರ್ಗರೆಯಹತ್ತಿದವು. ಮರಾಟರ ಆ ಮೂವರು ವೀರರಿಗೂ ರಣಮದವೇರಿ, ಅವರು ಎದುರಾದವರನ್ನು ತುಂಡರಿಸುತ್ತ ಸಾಗಿದರು. ಸ್ವತಃ ಮಲ್ಹಾರರಾಯನು ಎಲ್ಲರಿಗಿಂತ ಮುಂದೆ ಹೋಗಿ ಶಹನ ಡೇರೆಯ ಮುಂದಿನ ಹಸರು ನಿಶಾನೆಯನ್ನು ಹೊಡೆದು ಕೆಡವಿ, ಅದರ ಸ್ಥಳದಲ್ಲಿ ತನ್ನ ಟೊಂಕಕ್ಕೆ ಸುತ್ತಿದ ಕಂದಿಯಬಣ್ಣದ ಸೆಲ್ಲೆಯ ನಿಶಾನೆಮಾಡಿ ನಿಲ್ಲಿಸಿದನು! ಈ ನಿಶಾನೆಯನ್ನು ನೋಡಿದಕೂಡಲೆ ಮರಾಟಾವೀರರು ''ಹರಹರ ಮಹಾದೇವ'' ಎಂದು ಗರ್ಜಿಸಿ ಒತ್ತರದಿಂದ ಮುಂದಕ್ಕೆ ಸಾಗಿಹೋದರು. ಆಗ ಸುಜಾಉದ್ದೌಲನು ಬಾದಶಹನ ಬಳಿಯಲ್ಲಿ ಕುಳಿತಿದ್ದನು. ಆತನನ್ನು ಕುರಿತು ಬಾದಶಹನು—''ಮರಾಠಾಸರದಾರರು ಭಯಂಕರ ಸಾಹಸಮಾಡಿದರು! ಮರಾಠರು ಹೆಸರಾದ ವೀರರಿರುವರು. ಇಂಥ ಪರಾಕ್ರಮಿಗಳಿರುವ ರೆಂಬದು ನನಗೆ ಗೊತ್ತಿದ್ದಿಲ್ಲ, ಇವರೊಡನೆ ಒಡಂಬಡಿಕೆ ಮಾಡಿ ಕೊಳ್ಳುವದು ನೆಟ್ಟಗೆ! ಹಾಗೆ ಮಾಡುವದರಲ್ಲಿಯೇ ಜಾಣತನವಿರುತ್ತದೆ. ಅನ್ನದ ದುಷ್ಕಾಳ ಬಿದ್ದಿದ್ದರೂ, ಈ ಸೈತಾನರು ಯಥಾಸ್ಥಿತವಾಗಿ ತಮ್ಮ ರಣಕಾರ್ಯವನ್ನು ಸಾಗಿಸುತ್ತಿರುವರಲ್ಲ! ಶಾಬಾಸ! ಇವರ ಬಲವು ಅಧಿಕವಾಗಿದ್ದಂತೆ ತೋರುತ್ತದೆ. ಈ ಪ್ರಸಂಗದಲ್ಲಿ ಏನು ಮಾಡಬೇಕೆಂಬದು ನನಗೆ ಸರ್ವಥಾ ಸೂಚಿಸದಾಗಿದೆ'' ಎಂದು ನುಡಿದನು. ಪ್ರಿಯವಾಚಕರೇ, ನಮ್ಮ ಕುರುಬ ಸರದಾರ ಮಲ್ಲಾರ ರಾವ ಹೋಳಕರನ ಯೋಗ್ಯತೆಯೇ ಅಂತಹದು! ಕುದುರೆಯ ದೌಡು, ದಾಂಡಪಟ್ಟೆ, ಬರ್ಚಿ, ಬಂದೂಕು ಮೊದಲಾದ ಯುದ್ಧೋಪಕರಣಗಳ ಉಪಯೋಗಿಸುವದರಲ್ಲಿ ಮಲ್ಲಾರರಾಯನ ಕೈ ಹಿಡಿಯುವವರು ಆಗಿನ ಕಾಲದಲ್ಲಿ ಮತ್ತೊಬ್ಬರಿದ್ದಿಲ್ಲ! ''ಮಲ್ಲಾರ ಆಯಾ'' ಎಂಬ ಶಬ್ದವು ಶತ್ರು ಕಿವಿಗೆ ಬಿದ್ದರೆ ತೀರಿತು; ಅವರು ದೆಸೆಗೆಟ್ಟು ಓಡುತ್ತಿದ್ದರು. ಇಷ್ಟು ದರ್ಪವು ಮಲ್ಲಾರ ರಾಯನದಿತ್ತು, ಆತನ ಪರಾಕ್ರಮದ ವರ್ತಮಾನವು ಶತ್ರುಗಳ ಕಿವಿಗಳಲ್ಲಿ ಯಾವಾಗಲೂ ದಿಮಿಗುಟ್ಟುತ್ತಿತ್ತು, ಮಲ್ಲಾರರಾಯನು ತನ್ನ ಜರಿಪಟಕಾ ನಿಶಾನೆಯನ್ನೂ, ಭೇರಿಯನ್ನೂ

ಸಾಗಿಸಿಕೊಂಡು ಶಹಾನ ಡೇರೆಯ ಕಡೆಗೆ ಸಾಗಿದಕೂಡಲೆ, ಮರಾಟರ ಸೇನಾಸಮುದ್ರವು ಉಕ್ಕೇರಿ ಅವನ ಬೆಂಬಲವಾಗಿ ಸಾಗಿತು. ಆಗ ಶತ್ರುಸೈನ್ಯವು ಭಿನ್ನ ವಿಚ್ಛಿನ್ನವಾಗಿ, ಅದು ಒಂದೊಂದು ಹೆಜ್ಜೆ ಹಿಂದಕ್ಕೆ ಸರಿಯಹತ್ತಿತು! ರಣದೇವತೆಯು ಹೊಟ್ಟೆತುಂಬ ರಕ್ತ ಕುಡಿದು ತೃಪ್ತಳಾದಳು! ಹೀಗೆ ಮೂರು ಗಳಿಗೆಗಳವರೆಗೆ ಸಂಗ್ರಾಮವು ನಡೆಯಿತು; ಆದರೆ ಜಯಾಪಜಯಗಳ ನಿರ್ಣಯವು ಮಾತ್ರ ಸ್ಪಷ್ಟವಾಗಿ ಆಗಲಿಲ್ಲ.

## ದೈವಬಲವೇ ಬಲವು!

ಹೀಗೆ ಮರಾಟರು ಅಕಸ್ಮಾತ್ತಾಗಿ ದುರಾಣೀಶಹನ ಛಾವಣಿಯಮೇಲೆ ಬಿದ್ದು ಅದನ್ನು ನಡುಗಿಸಿದರು. ಅವರು ಶಹಾನ ಜಿಹಾದದ ಪವಿತ್ರ ನಿಶಾನೆಯನ್ನು ಕೆಡವಿ ಹರಿದು ದೂರ ಚಲ್ಲಿಕೊಟ್ಟು, ಆತನ ಸ್ವಂತದ ಕೆಂಪು ಡೇರೆಯನ್ನು ಭಾಲೆಯಿಂದ ಚುಚ್ಚಿ–ಚುಚ್ಚಿ ಚೂರು–ಚೂರು ಮಾಡಿ ಸುಟ್ಟು ಬಿಟ್ಟರು. ಮೊದಲನೆಯ ದೌಡಿನಲ್ಲಿಯೇ ಅಫಗಾಣರ ಎರಡು ಸಾವಿರ ಶಿಪಾಯಿಗಳೂ, ಒಂದು ಸಾವಿರ ಬಾಜಾರು ಬುಣಗಿನವರೂ ಪ್ರಾಣಕ್ಕೆ ಎರವಾದರು! ಹೀಗೆ ಮಲ್ಹಾರರಾಯನ ಹೊಂಚಿನ ಹೊಡೆತವು ಉತ್ತಮರೀತಿಯಿಂದ ಕೊನೆಗಂಡರೂ, ಶಹಾನನ್ನು ಸೆರೆಹಿಡಿಯುವ ಆತನ ಪ್ರತಿಜ್ಞೆಯು ಪೂರ್ಣವಾಗಲಿಲ್ಲ. ಮೇಲೆ ಹೇಳಿದಂತೆ ಬಾದಶಹನ ಮೇಲೆ ಅಲ್ಲಾನ ಕೃಪೆಯಿದ್ದದ್ದರಿಂದಲೇ ಆತನು ಅಂದು ಬೇರೆ ಕಡೆಯಲ್ಲಿ ಮಲಗಿ, ಮಲ್ಹಾರರಾಯನ ಕೈಯೊಳಗಿಂದ ಪಾರಾದನು! ಆತನು ಕೆಂಪು ಡೇರೆಯಲ್ಲಿ ಮಲಗಿದ್ದರೆ ನಿಶ್ಚಯವಾಗಿ ಪ್ರಾಣಕ್ಕೆ ಎರವಾಗುತ್ತಿದ್ದನು. ಈ ಮುತ್ತಿಗೆಯಲ್ಲಿ ದುರಾಣಿಯ ದಂಡಾಳುಗಳನ್ನು ಸೊಪ್ಪೆಯ ಶಿವುಡುಗಳಂತೆ ನೆಲಕ್ಕೆ ಉರುಳಿಸಿ ಹಿಂದಿರುಗಿ ಬರುವೆನೆಂತಲೂ ಹೋಳಕರನು ಪ್ರತಿಜ್ಞೆ ಮಾಡಿದ್ದನು; ಆದರೆ ಆತನ ಆ ಭೀಷ್ಮ ಪ್ರತಿಜ್ಞೆಯು ಪೂರ್ಣವಾಗಿ ಕೊನೆಗಾಣಲಿಲ್ಲ. ಮಾತಾಡುವದು ಸುಲಭವು; ಆದರೆ ಮಾತಾಡಿದಂತೆ ಕೃತಿಮಾಡಿ ತೋರಿಸುವದು ಸುಲಭವಲ್ಲ. ನುಡಿಯಂತೆ ನಡೆಯಾಗಲಿಕ್ಕೂ ಈಶ್ವರನ ಕೃಪೆಯು ಬೇಕಾಗುತ್ತದೆ. ಭಾರತ ಯುದ್ಧದಲ್ಲಿ ಅರ್ಜುನನು ಆವೇಶದ ಭರದಲ್ಲಿ ಘೋರಪ್ರತಿಜ್ಞೆ ಮಾಡಿಬಿಡುವನು; ಆದರೆ ಆತನಿಗೆ ಶ್ರೀಕೃಷ್ಣ ಪರಮಾತ್ಮನ ಸಹಾಯವಿದ್ದದ್ದರಿಂದಲೇ ಅವು ಪೂರ್ಣವಾಗುತ್ತಿದ್ದವು; ಅದರಂತೆ, ಈಗ ಮಲ್ಹಾರರಾಯನ ಮೇಲೆ, ಅಥವಾ ಭಾವೂಸಾಹೇಬನ ಮೇಲೆ ಈಶ್ವರಕೃಪೆಯು ಇದ್ದರೆ ಮಲ್ಹಾರರಾಯನ ಆವೇಶದ ಪ್ರತಿಜ್ಞೆಯು ಪೂರ್ಣವಾಗುತ್ತಿತ್ತು. ಆದರೆ ಕೌರವರಂತೆ ಆಗ್ಗೆ ಮಹಾರಾಷ್ಟ್ರರಿಗೆ ಈಶ್ವರ ಕೃಪೆಯು ತಪ್ಪಿದ್ದರಿಂದ, ಅವರಲ್ಲಿ ಅಂತಃಕಲಹಗಳು ಉತ್ಪನ್ನವಾಗಿ ಅವರು ತಮ್ಮೊಳಗೆ ಒಬ್ಬರ ಅಹಿತವನ್ನೊಬ್ಬರು ಚಿಂತಿಸುತ್ತಿದ್ದರು; ಮತ್ತು ಒಬ್ಬರ ನಾಶಕ್ಕಾಗಿ ಒಬ್ಬರು ಪ್ರವರ್ತಿಸುತ್ತಿದ್ದರು. ಇದಕ್ಕೆ ವಿರುದ್ಧವಾಗಿ ದುರಾಣಿಶಹನ ಸ್ಥಿತಿಯಿತ್ತೆಂದು ಹೇಳಬಹುದು. ಆತನ ಸರದಾರರಲ್ಲಿ ಕೆಲವರು ಪರಸ್ಪರ ವೈಮನಸ್ಸುಳ್ಳವರಾಗಿದ್ದರೂ, ಅವರೆಲ್ಲರನ್ನು

ಮಿಸಿಕಾಡಗೊಡದಷ್ಟು ದುರಾಣಿಶಹನು ಸಮರ್ಥನೂ, ಧೂರ್ತನೂ ಇದ್ದನು. ಇದರಿಂದ ಅವನ ದಂಡಿನಲ್ಲಿ ಏಕಮತವೂ, ಏಕವಿಚಾರವೂ ಇದ್ದವು; ಮೇಲಾಗಿ ದುರಾಣಿಯ ಮೇಲೆ ಈಶ್ವರ ಕೃಪೆಯಿತ್ತೆಂಬದು ಹಲವು ಸಂಗತಿಗಳಿಂದ ವ್ಯಕ್ತವಾಗುವದು; ಈ ಕೃಪೆಯ ಮೂಲಕ ವಾಗಿಯೇ ಆ ಯವನವೀರನು ಭಾವೂಸಾಹೇಬನಂತೆ ಸೊಕ್ಕಿನಿಂದ ಮೈಮರೆತು ಅವಿಚಾರದ ಕೆಲಸಗಳನ್ನು ಮಾಡಲಿಲ್ಲ. ಆತನು ಮೈತುಂಬ ಎಚ್ಚರವುಳ್ಳವನಾಗಿ, ಮರಾಟರ ನಿಜವಾದ ಯೋಗ್ಯತೆಯನ್ನರಿತು ಅದಕ್ಕೆ ತಕ್ಕ ಹಾಗೆ ನಡೆದುಕೊಳ್ಳುತ್ತಿದ್ದನು. ಆತನ ಸೈನ್ಯದಲ್ಲಿ ಉತ್ತಮ ವ್ಯವಸ್ಥೆಯಿದ್ದು, ಸೈನ್ಯವು ಯಾವಾಗಲೂ ಜಾಗರೂಕವಾಗಿರುತ್ತಿತ್ತು.

ಪೂರ್ವಕಾಲದಲ್ಲಿ ಛಾವಣಿಯೊಳಗೆ ಡೇರೆಗಳನ್ನು ಮನಸ್ಸಿಗೆ ಬಂದಂತೆ ನಿಲ್ಲಿಸುವ ಪದ್ಧತಿಯಿತ್ತು; ಆದರೆ ಚತುರನಾದ ದುರಾಣೀಶಹನು ಮರಾಟರ ಮುತ್ತಿಗೆಯ ರೀತಿಯನ್ನು ಅರಿತವನಾಗಿ ಡೇರೆಗಳನ್ನು ಎರಡೆರಡು ಸಾಲಾಗಿ ನಿಲ್ಲಿಸಿದ್ದನು. ಆ ಎರಡು ಸಾಲುಗಳ ನಡುವೆ ಒಬ್ಬ ಮನುಷ್ಯನು ಮಾತ್ರ ಪ್ರಯಾಸದಿಂದ ಹೋಗುವಷ್ಟು ಸ್ಥಳವಿರುತ್ತಿತ್ತು, ಅದರಂತೆ ಶಹನು ತನ್ನ ಛಾವಣಿಯ ಸುತ್ತಲು ಗಿಡಗಳ ಗೋಡೆಯನ್ನೂ, ಕೊತ್ತಲುಗಳನ್ನೂ ಮಾಡಿ, ಅವುಗಳನ್ನು ಮಣ್ಣು ತುಂಬಿ ಭದ್ರಪಡಿಸಿದ್ದನೆಂದು ನಾವು ಹಿಂದೆಯೊಮ್ಮೆ ಹೇಳಿದ್ದೇವೆ. ಆ ಮಣ್ಣಿನಿಂದ ಮುಚ್ಚಿದ ಕಟ್ಟಿಗೆಯ ಬುರಜುಗಳ ಮೇಲೆ ಆತನು ತೋಫುಗಳನ್ನಿಟ್ಟಿದ್ದನು. ಹೀಗೆ ವ್ಯವಸ್ಥೆ ಮಾಡಿರದಿದ್ದರೆ, ಈ ಕಾಲದಲ್ಲಿ ದುರಾಣಿಶಹನ ಸರ್ವಸ್ವದ ನಾಶವಾಗುತ್ತಿತ್ತೆಂದು ಹೇಳಬಹುದು. ಮೊದ ಮೊದಲು ಮರಾಟರು ಮಿಗಿಮೀರಿದರು. ಅವರು ಅಫಗಾಣರನ್ನು ಹಣಿಯುತ್ತ ಮುಂದಕ್ಕೆ ಸಾಗಿಹೋದರು. ಮಲ್ಹಾರರಾಯನು ಆವೇಶದಿಂದ ಸಾಗಿ ಹೋಗಿ ದುರಾಣಿಯನ್ನು ಸೆರೆಹಿಡಿಯುವ ಉಬ್ಬಿನಿಂದ ನಡಛಾವಣಿಗೆ ಹೋಗಿ ಮುಟ್ಟಿದನು. ಅಲ್ಲಿ ಆತನು ನಿಂತು ತನ್ನ ಕೈ ಕತ್ತಿಯನ್ನು ನೆಗಹಿ ತನ್ನ ಜನರನ್ನು ಪ್ರೋತ್ಸಾಹಿಸುತ್ತಿರಲು, ದುರಾಣಿಯ ಸಂಪೂರ್ಣ ಛಾವಣಿಯು ಎಚ್ಚತ್ತು ಯುದ್ಧಕ್ಕೆ ಸಿದ್ಧವಾಯಿತು. ಮೊದಲು ಮರಾಟರ ಹೊಡತವನ್ನು ತಪ್ಪಿಸಿಕೊಳ್ಳುವದಕ್ಕಾಗಿ ಅಫಗಾಣರು ಅಲ್ಲಲ್ಲಿ ಅಡಗಿದ್ದರು. ಕೆಲವರು ಡೇರೆಗಳ ನಡುವಿನ ಕಿರಿ ಓಣಿಯಲ್ಲಿ ಹುದುಗಿದ್ದರು; ಕೆಲವರು ಡೇರೆಯಲ್ಲಿ ಹೊಕ್ಕಿದ್ದರು; ಕೆಲವರು ಕೊತ್ತಳಗಳನ್ನು ಏರಿ ತೋಪುಗಳಗಳ ಆಶ್ರಯ ಪಡೆದಿದ್ದರು; ಕೆಲವರು ಸಾಮಾನುಗಳ ಸಂದಿಯಲ್ಲಿ–ಕೆಲವರು ಕಾಳಿನ ಚೀಲಗಳಲ್ಲಿ ಹೀಗೆ ಸದವು ಸಿಕ್ಕಲ್ಲಿ ಅಡಗಿಕೊಂಡಿದ್ದರು. ಅವರನ್ನು ಹಣಿಯುವದಕ್ಕಾಗಿ ಮರಾಟರಾವುತರು ಮುಂದಕ್ಕೆ ಸಾಗಿ ಹೋದರು; ಆದರೆ ಡೇರೆಗಳ ಹಗ್ಗಗಳಲ್ಲಿ ಕುದುರೆಗಳ ಕಾಲುಗಳು ಸಿಕ್ಕು ಅವು ದಬ ದಬ ಬೀಳಹತ್ತಿದವು. ಆಗ ಕೆಲವು ರಾವುತರು ಕುದುರೆಯಿಂದ ದುಮುಕಿ, ಕುದುರೆಗಳನ್ನು ಬಿಟ್ಟು ಕೊಟ್ಟು ಕೈಕತ್ತಿಯಿಂದ ಅಫಗಾಣರನ್ನು ತುಂಡರಿಸಹತ್ತಿ ದರು; ಕೆಲವರು ಡೇರೆಗಳ ಹಗ್ಗಗಳನ್ನು ಕತ್ತಿ– ಕಠಾರಿಗಳಿಂದ ಕೊಯ್ದು, ಗೂಟಗಳನ್ನು ಕಿತ್ತಿ ಡೇರೆಗಳನ್ನು ಕೆಡವಿ ಕುದುರೆಗಳು ಹೋಗಲಿಕ್ಕೆ ಹಾದಿಯ ಮಾಡುತ್ತಿದ್ದರು. ಇತ್ತ ಕೆಲವು ಮರಾಟರು ತೋಪುಹೂಡಿದ ಬುರುಜುಗಳನ್ನು ಸ್ವಾಧೀನಪಡಿಸಿಕೊಂಡು, ಆವೇಶದಿಂದ ಬಡಬಡ ಬುರುಜಗಳನ್ನೇರಹತ್ತಿದರು. ಈ ಬುರುಜುಗಳೇ ಮರಾಟರ, ನಾಶಕ್ಕೆ ಕಾರಣ

ವಾದವು; ಯಾಕಂದರೆ, ಭಾರವು ಹೆಚ್ಚಾದಂತೆ ಆ ಕಟ್ಟಿಗೆ ಮಣ್ಣಿನ ಬುರುಜುಗಳು ಹೊರಗಿನ ಅಗಳತದಲ್ಲಿ ನಮಸ್ಕಾರ ಹಾಕಹತ್ತಿದವು. ಅಷ್ಟರಲ್ಲಿ ಅಫಗಾಣರ ಬಲವು ಹೆಚ್ಚಿ ಅವರು ಮಾರಾಟರ ಮೇಲೆ ತೋಪುಗಳ ಗುಂಡುಗಳನ್ನು ಸುರಿಸಹತ್ತಿದರು. ಹೀಗಾಗಿ ಬರಬರುತ್ತ ಮರಾಟರ ಸಂಹಾರದ ಮಿತಿಯು ಮೀರಿತು.

ಎಷ್ಟಾದರೂ ಮರಾಟರು ಹೊರಗಿನಿಂದ ಎತ್ತಿಬಂದವರು. ನೆಲೆಯೂರಿಕೊಂಡಿದ್ದ ಅಫಗಾಣರಿಗಿದ್ದಷ್ಟು ಅನುಕೂಲತೆಗಳು ಅವರಿಗಿದ್ದಿಲ್ಲ. ಒಂದೇಸವನೆ ಮೂರು ತಾಸು ಮರಾಟರು ಆವೇಶದಿಂದ ಕಾದಿದ್ದರಿಂದ ಅವರು ದಣಿದಿದ್ದರು. ಅವರಿಗೆ ಹೊಸ ಸೈನ್ಯದ ಸಹಾಯವು ಬೇಗನೆ ಬರುವಹಾಗಿದ್ದಿಲ್ಲ, ಅಫಗಾಣರ ಸೈನ್ಯದ ಹೊಸ-ಹೊಸ ಗುಂಪುಗಳು ಕಾದಲು ಸಿದ್ಧವಾದವು. ಅಡಗಿದವರು ಅಲ್ಲಲ್ಲಿ ಹೊರಬಿದ್ದು ಮರಾಟರನ್ನು ತುಂಡರಿಸಹತ್ತಿದರು. ಹೀಗಾಗಿ ಮರಾಟರು ಕಂಗೆಟ್ಟು ಹಿಂದಕ್ಕೆ ಸರಿಯಹತ್ತಿದರು. ದುರಾಣಿಯು ಸುಜಾಉದ್ದೌಲನೇ ಮೊದಲಾದ ತನ್ನ ಸರದಾರರೊಡನೆ ಯುದ್ಧದ ಮುಖ್ಯಸ್ಥಳಕ್ಕೆ ಬಂದು, ತನ್ನ ಸೈನಿಕರನ್ನು ಉತ್ಸಾಹಗೊಳಿಸುತ್ತಿದ್ದನು. ಹೀಗೆ ತನ್ನ ಪಕ್ಷವು ಹಿಂಜರಿಯಹತ್ತಿದ್ದನ್ನೂ, ಅಫಗಾಣರ ಬಲವು ಹೆಚ್ಚುತ್ತಹೋದದ್ದನ್ನೂ ನೋಡಿ, ಹೋಳಕರನು ತನ್ನ ಸೈನ್ಯಕ್ಕೆ ರಣಭೂಮಿಯಿಂದ ಹಿಂದಕ್ಕೆ ಸರಿಯಲು ಸೂಚಿಸಿದನು; ಮತ್ತು ವಿಂಚೂರಕರನಿಗೂ, ಸಮಶೇರಬಹದ್ದರನಿಗೂ ಹಿಂದಿರುಗಿ ಹೋಗುವ ಸೈನ್ಯವನ್ನು ರಕ್ಷಿಸಬೇಕೆಂದು ಆ ವೃದ್ಧವೀರನು ಆಜ್ಞಾಪಿಸಿದನು. ಬಳಿಕ ಹೋಳಕರನು ಸ್ವತಃ ಅಫಗಾಣರೊಡನೆ ಕಾದುತ್ತ ಮೆಲ್ಲನೆ ಸಮರಭೂಮಿಯಿಂದ ತನ್ನ ಪಾಳಯದ ಕಡೆಗೆ ಸಾಗಿಬರುತ್ತಲಿದ್ದನು. ಹೀಗೆ ಸಾಗಿಬರುವಾಗಿ ವಿಂಚೂರಕರನೂ, ಸಮಶೇರಬಹದ್ದರನೂ, ಅತ್ತ ಮಹದಾಜಿಸಿಂದೆಯೂ ಪರಾಕ್ರಮದಿಂದ ಕಾದಿ ಹೋಳಕರನ ಸೈನ್ಯವನ್ನು ರಕ್ಷಿಸಿದರು; ಆದ್ದರಿಂದ ಹೇಳಿಕೊಳ್ಳುವಂಥ ಪ್ರಾಣಹಾನಿಯಾಗಲಿಲ್ಲ; ಆದರೂ ಅಫಗಾಣರು ಮರಾಠರನ್ನು ತುಂಡರಿಸಲಿಕ್ಕೆ ಹಿಂದೆ-ಮುಂದೆ ನೋಡಲಿಲ್ಲ; ಸಾಧಿಸಿದಷ್ಟು ಸೇಡು ತೀರಿಸಿಕೊಳ್ಳಹತ್ತಿದರು. ಹಿಂದಿರುಗಿ ಹೋಗುತ್ತಿರುವ ಮರಾಟರ ದಂಡನ್ನು ಅವರು ಅಟ್ಟಿಬರುತ್ತಲೇ ಇದ್ದರು. ಹಿಂದಿನಿಂದ ಹೊಸಸೈನ್ಯವು ಅವರ ಸಹಾಯಕ್ಕೆ ಬರುತ್ತಲಿತ್ತು, ಅವರನ್ನು ಮಹದಾಜಿಸಿಂದೆಯೂ, ವಿಂಚೂರಕರನೂ, ಸಮಶೇರಬಹದ್ದರನೂ ತಡೆಯುತ್ತಿದ್ದರು. ಹೋಳಕರನು ತಮ್ಮ ಛಾವಣಿಯ ಸನಿಯಕ್ಕೆ ಹೋದನು. ಇತ್ತ ಮಹದಾಜಿಸಿಂದೆಯು ತನಗೆ ಎದುರಾದ ಅಫಗಾಣರನ್ನು ಸೋಲಿಸಿ ಹಿಂದಕ್ಕಟ್ಟಿ ಜಯಶಾಲಿಯಾದನು; ಆದರೂ ಅಫಗಾಣರ ಮತ್ತೊಂದು ದೊಡ್ಡ ದಂಡು ಹೋಳಕರನ ಸೈನ್ಯದಮೇಲೆ ಸಾಗಿಬರುತ್ತಿತ್ತು, ಅದಕ್ಕೆ ಇಬ್ರಾಹಿಮಖಾನಗಾರದಿಯು ಎದುರಾಗಿ, ತನ್ನ ಕವಾಯತಿಯ ಸೈನ್ಯದ ಕೈಯಿಂದ ಅದನ್ನು ಹೊಡೆದೋಡಿಸಿ ಜಯವನ್ನು ಸಂಪಾದಿಸಿದನು.

ಹೀಗೆ ಸಿಂದೆಯೂ, ಇಬ್ರಾಹಿಮಖಾನನೂ ಅಫಗಾಣರನ್ನು ಹೊಡೆದೋಡಿಸಿದರೂ, ಹೋಳಕರನು ಪೆಟ್ಟುತಿಂದು ಹಿಂದಿರುಗಿ ಬಂದದ್ದರಿಂದ, ಒಟ್ಟಿನಮೇಲೆ ಮರಾಟರಿಗೆ ಸೋಲು ಬಂದಂತಾಯಿತು. ಸದಾಶಿವರಾವಭಾವು, ವಿಶ್ವಾಸರಾವ, ಬಳವಂತರಾವ ಮೇಹೇಂದಲೆ

ಮೊದಲಾದವರು ಕುದುರೆಗಳನ್ನು ಹತ್ತಿಕೊಂಡು ಛಾವಣಿಯ ಬಾಗಿಲೊಳಗೆ ನಿಂತುಕೊಂಡಿದ್ದರು. ಮಹದಾಜಿಸಿಂದೆಯು ತನಗೆ ಜಯವಾಯಿತೆಂಬ ಸಂತೋಷದಿಂದ ಛಾವಣಿಯನ್ನು ಪ್ರವೇಶಿಸಿ, ಭಾವುಸಾಹೇಬನಿಗೆ ಮುಜರೆಮಾಡಲು, ಭಾವುಸಾಹೇಬನು ಮುಜರೆಯನ್ನು ಸ್ವೀಕರಿಸಿ ಸ್ವಲ್ಪ ಸಿಟ್ಟಿನ ಮುದ್ರೆಯಿಂದ—''ಯಾಕೆ ಸಿಂದೇಸಾಹೇಬ, ದುರಾಣಿಯಿಂದ ಪೆಟ್ಟುತಿಂದು ಹಿಂದಿರುಗಿ ಬಂದಿರಾ?'' ಎಂದು ಪ್ರಶ್ನಮಾಡಿದನು. ರಾತ್ರಿಯ ಯುದ್ಧದ ಪರಿಣಾಮದಿಂದ ಒಟ್ಟಿನಮೇಲೆ ಬಾವುಸಾಹೇಬನು ಹೀಗೆ ಪ್ರಶ್ನೆ ಮಾಡಬಹುದಾಗಿತ್ತು. ಇದನ್ನರಿತು ಸಿಂದೆಯು ಮನಸ್ಸಿನಲ್ಲಿ ಸ್ವಲ್ಪ ಖಿನ್ನನಾಗಿ ಶ್ರೀಮಂತರನ್ನು ಕುರಿತು—''ಧನೀ ಸಾಹೇಬ, ತಾವು ಪರಶುರಾಮನ ಅವತಾರ ವಾಗಿರುವದರಿಂದ, ತಮಗೆ ಗೊತ್ತಿಲ್ಲದ ವಿಷಯ ವಿಲ್ಲ; ಅಂದಬಳಿಕ ನಾನು ಸ್ವತಃ ಪೆಟ್ಟು ತಿಂದಿಲ್ಲೆಂಬದು ವಿದಿತವಾಗಿರಬಹುದು. ತಮ್ಮ ಮಾತು ಬೇರೆ ಯಾರಿಗಾದರೂ ಹತ್ತುತ್ತಿದ್ದರೆ ಹತ್ತುತ್ತಿರಬಹುದು,'' ಎಂದು ಅನ್ನಲು, ಸದಾಶಿವರಾಯನು —''ಪಾಟೀಲಬಾವಾ, ಏನೇ ಇರಲಿ, ನೀವು ಪೆಟ್ಟು ತಿಂದರೇನು, ಎರಡನೆಯವರು ಪೆಟ್ಟು ತಿಂದರೇನು, ನಾವು ಒಂದೇ ಎಂದು ತಿಳಿಯುವೆವು'' ಎಂದು ನುಡಿದನು. ಅದಕ್ಕೆ ಸಿಂದೆಯು ತಿರುಗಿ ಮಾತಾಡದೆ ಮುಂದಕ್ಕೆ ಸಾಗಿದನು. ಅಷ್ಟರಲ್ಲಿ ಇಬ್ರಾಹಿಮಖಾನಗಾರದಿಯ ಸೈನ್ಯವು ಅಫಗಾಣರನ್ನು ಓಡಿಸಿ ಶಿಸ್ತಿನಿಂದ ಹೆಜ್ಜೆಹಾಕುತ್ತ, ಬರುತ್ತಿರುವದು ಭಾವುಸಾಹೇಬನ ಕಣ್ಣಿಗೆ ಬಿದ್ದಿತು. ಗಾರದಿಯಮೇಲೆ ಭಾವುಸಾಹೇಬನ ವಿಶ್ವಾಸ ಬಹಳವೆಂಬುದನ್ನು ವಾಚಕರು ಬಲ್ಲರು. ಪಸ್ರಂಗ ಒದಗಿದಲ್ಲಿ ಈತನೇ ನಮ್ಮ ಮಾನವನ್ನು ಕಾಯುವನೆಂದು ಭಾವು ಸಾಹೇಬನು ಸಂಪೂರ್ಣವಾಗಿ ನಂಬಿದ್ದನು. ಭಾರತಯುದ್ಧದಲ್ಲಿ ದುರ್ಯೋಧನನು ಕರ್ಣನನ್ನು ನಂಬಿದಂತೆ, ಈಗ ಭಾವೂಸಾಹೇಬನು ಗಾರದಿಯನ್ನು ನಂಬಿದ್ದನೆಂದು ಹೇಳಬಹುದು. ಗಾರದಿಯೂ, ಬಳವಂತರಾಮಮೇಹೇಂದಳೆಯೂ ಬೇಗನೆ ದುರಾಣಿಯಮೇಲೆ ಬಿದ್ದು ಸೋಕ್ಷ–ಮೋಕ್ಷವನ್ನು ಕಂಡುಕೊಂಡು ಬಿಡಬೇಕೆಂದು ಅಭಿಪ್ರಾಯ ಪಡುತ್ತಿದ್ದರು. ಈಗ ಗಾರದಿಯು ಜಯಶಾಲಿಯಾಗಿ ಬಂದದ್ದನ್ನು ನೋಡಿ ಬಳವಂತರಾವ ಮೇಹೇಂದಳೆಯು ಸಂಧಿಸಾಧಿಸಿ ಭಾವೂಸಾಹೇಬನನ್ನು ಕುರಿತು—''ಭಾವುಸಾಹೇಬ, ಹೀಗೆಯೇ ಇಲ್ಲಿ ಎಷ್ಟು ದಿವಸ ಕೊಳೆಯುತ್ತ ಬಿದ್ದುಕೊಳ್ಳಬೇಕು? ಒಮ್ಮೆ ನಿರ್ಧಾರದಿಂದ ಕಾದಿ ಇಲ್ಲಿಂದ ಪಾರಾಗ ದಿದ್ದರೆ ಪರಿಣಾಮವಾಗದು. ಸುಮ್ಮನೆ ಕಾಲಹರಣಮಾಡುತ್ತ ಕುಳಿತಂತೆ ನಮಗೆ ಹೆಚ್ಚು ಹಾನಿಯು ತಟ್ಟಬಹುದೆಂದು ನನಗೆ ತೋರುತ್ತದೆ; ಇದರಮೇಲೆ ಸರಕಾರದ ಇಚ್ಛೆಯು'' ಎಂದು ಹೇಳಿದನು.

ಹೋಳಕರನು ತನ್ನ ಪ್ರತಿಜ್ಞೆಯನ್ನು ಈಡೇರಿಸುವದಕ್ಕಾಗಿ ಮನಃಪೂರ್ವಕ ಹೆಣಗಿದನು; ಆದರೆ ದೈವಬಲವು ತಪ್ಪಿದ್ದರಿಂದ ಅವನ ಶ್ರಮಕ್ಕೆ ಪೂರ್ಣಫಲವು ದೊರೆಯಲಿಲ್ಲ. ಇದರಿಂದ ಆ ವೃದ್ಧವೀರನ ಮನಸ್ಸಿಗೆ ಬಹಳಹತ್ತಿತು. ಅದರಲ್ಲಿ ಆತನಿಗೆ ಆಗದ ಸರ ದಾರರು ಹಿಂದೆ– ಮುಂದೆ ಮರ್ಮಭೇದಕ ಮಾತುಗಳನ್ನಾಡಿ ಅವನ ಮನಸ್ಸನ್ನು ಮತ್ತಿಷ್ಟು ನೋಯಿಸಿದರು. ಇದರಿಂದ ಹೋಳಕರನು ತೀರ ಉದಾಸೀನನಾದನು. ಆದರೂ ಭಾವು ಸಾಹೇಬನು ಆತನ ಆಲೋಚನೆಯನ್ನು ವಿಚಾರಿಸಿದಾಗ, ''ನೀವು ಒಮ್ಮೆಲೆ ಹುಂಬತನದಿಂದ

ದುರಾಣಿಯಮೇಲೆ ಬೀಳುವದರಿಂದ ಹಿತವಾಗದೆಂ''ದು ಹೇಳುತ್ತಲಿದ್ದನು; ಆದರೆ ಇಬ್ರಾಹಿಮಖಾನನಿಗೂ, ಮೇಹೇಂದಳೆಗೂ ಈ ಮಾತು ಸರಿಬೀಳುತ್ತಿದ್ದಿಲ್ಲ. ಇತ್ತಿತ್ತ ಭಾವು ಸಾಹೇಬನಿಗಾದರೂ ಒಮ್ಮೆಲೆ ಶತ್ರುಗಳಮೇಲೆ ಸಾಗಿಹೋಗುವದು ಹಿತಕರವಾಗಿ ತೋರ ದಾಯಿತು. ಅದಕ್ಕೆ ಕಾರಣ ಗಳಾವವೆಂದರೆ–

೧. ಪುಣೆಯಿಂದ ತನಗೆ ಸಹಾಯವು ಬರುವದೆಂದು ಆತನು ನಂಬಿದ್ದನು.

೨. ಹೋಳಕರನ ಮಧ್ಯಸ್ಥಿಯಿಂದ ಸುರಜಮಲ್ಲಜಾಟನು ಧಾನ್ಯದ ಪೂರಯಿಕೆ ಮಾಡಿ ಕೊಡಬಹುದೆಂತಲೂ, ಧನದ ಸಹಾಯವನ್ನೊದಗಿಸಿಕೊಡಬಹುದೆಂತಲೂ ಆತನು ತಿಳಿದಿದ್ದನು.

೩. ಅಯೋಧ್ಯೆಯ ನವಾಬನಾದ ಸುಜೋಉದ್ದೌಲನು ತನ್ನ ಪಕ್ಷದವನಿದ್ದು, ಆತನು ಅಹಮ್ಮದಶಹನ ಪಕ್ಷವನ್ನು ಬಿಟ್ಟು ಅಯೋಧ್ಯೆಗೆ ಹೋಗಬಹುದೆಂದು ಆ ತರುಣ ಪೇಶ್ವೆಯು ನಂಬಿದ್ದನು.

ಇವೇ ಮುಂತಾದ ಕಾರಣಗಳಿಂದ ಬಾವುಸಾಹೇಬನು ದುರಾಣಿಯಮೇಲೆ ತಾನಾಗಿ ಏರಿಹೋಗಲಿಕ್ಕೆ ಮನಸ್ಸು ಮಾಡುತ್ತಿದ್ದಿಲ್ಲ. ಇದು ಮೇಹೆಂದಳೆಯ ಮನಸ್ಸಿಗೆ ಬರಲಿಲ್ಲ. ಆತನು ಘೇ ಘೇ ಎಂದು ಕುದುರೆಯನ್ನು ದುರಾಣಿಯಮೇಲೆ ಹಾಕಿ ಅವನನ್ನು ಸದೆಬಡೆದು ಪಾರಾಗಿ ಹೋಗಬೇಕೆನ್ನುತ್ತಿದ್ದನು. ಮಲ್ಹಾರರಾಯನು ಆಕಸ್ಮಿಕ ಏರಿಹೋಗಿ ಪೆಟ್ಟುತಿಂದು ಬಂದದ್ದರಿಂದ, ಬಾವುಸಾಹೇಬನು ಒಮ್ಮೆಲೆ ಏರಿಹೋಗಲಿಕ್ಕೆ ಹೆದರುತ್ತಿರಬಹುದಾದ್ದರಿಂದ, ನಾನು ಸ್ವತಃ ಪ್ರಸಂಗನೋಡಿ ದುರಾಣಿಯ ಸರದಾರರ ಮೇಲೆ ಬಿದ್ದು ತಮ್ಮವರಿಗೆ ಧೈರ್ಯಬರುವಂತೆ ಮಾಡಬೇಕೆಂದು ಮೇಹೇಂದಳೆಯು ಮಾಡಿದನು. ಇಂಥ ಸಾಹಸದ ಆಲೋಚನೆ ಮಾಡಲಿಕ್ಕೆ ಆತನು ತಕ್ಕ ವೀರನೇ ಆಗಿದ್ದನು. ಆತನ ಮನೋದಯಕ್ಕನುಸರಿಸಿ ಒಂದು ಪ್ರಸಂಗವೂ ಒದಗಿ ಬಂತು. ಭಾವುಸಾಹೇಬನ ಮುಖ್ಯ ಆಲೋಚಕನು ಮೇಹೇಂದಳೆಯಾದದ್ದರಿಂದ, ಆತನ ಮಾತನ್ನು ಬಾವುಸಾಹೇಬನು ಮೀರುವಹಾಗಿದ್ದಿಲ್ಲ. ಹೀಗಿರುವಾಗ ಅಬದಾಲಿಯ ವಜೀರ ನಾದ ಶಹಾವಲ್ಲಿಖಾನನು, ಶಸ್ತ್ರಧಾರಿಗಳಾದ ರಾವುತರೊಡನೆ ಶುಕ್ರವಾರ ಛಾವಣಿಯಿಂದ ಹೊರಟ. ಜುಮ್ಮಾಮಸೀದೆಗೆ ನಮಾಜುಮಾಡುವದಕ್ಕೆ ಹೋಗುವನೆಂಬ ಗುಪ್ತವರ್ತಮಾನವು ಮೇಹೇಂದಳೆಗೆ ಹತ್ತಿತು. ಈ ಸಂಧಿಯು ವಜೀರನ ಸಮಾಚಾರ ತಕ್ಕೊಳ್ಳುವದಕ್ಕೆ ಯೋಗ್ಯ ವಿರುವದೆಂದು ತಿಳಿದು, ಮೇಹೇಂದಳೆಯು ಆತನನ್ನು ಹೊಂಚು ಹಾಕಿ ಹೊಡೆಯುವ ಆಲೋಚನೆಯನ್ನು ಮಾಡಿದನು. ಅದಕ್ಕೆ ಭಾವಸಾಹೇಬನೂ, ವಿಶ್ವಾಸರಾಯನೂ, ಸಿಂದೆಯೂ ಒಪ್ಪಿಕೊಂಡರು. ಆಗ ಮೇಹೇಂದಳೆಯು ಶ್ರೀಮಂತರ ಸುಪ್ರಸಿದ್ಧ ಹುಜೂರ ಪಾಗಾದ ರಾವುತ ರೊಡನೆ ಜರಿಪಟಕಾ ನಿಶಾನೆಯನ್ನು ತಕ್ಕೊಂಡು, ದಂಡಯಾತ್ರೆಯ ಭೇರಿಯನ್ನು ಹೊಡಿಸಿ, ಅಗಳತದಿಂದ ಹೊರಬಿದ್ದನು. ಆತನ ಹಿಂದಿನಿಂದ ಭಾವುಸಾಹೇಬನೂ, ಉಳಿದ ಸರದಾರರೂ ತಮ್ಮ ತಮ್ಮ ಸೈನ್ಯಗಳೊಡನೆ ಹೊರಟರು.

ಬಳಿಕ ಉಭಯ ಪಕ್ಷಗಳಲ್ಲಿ ಯುದ್ಧವು ಆರಂಭವಾಯಿತು. ಎರಡೂ ಕಡೆಯಿಂದಲೂ ಹೊಸ–ಹೊಸ ಸೈನ್ಯಗಳು ಸಹಾಯಕ್ಕೆ ಬರತೊಡಗಿದವು. ಬಳವಂತರಾಯನ ಇಚ್ಛೆಯಂತೆ

ಉಭಯ ಸೈನಿಕರೂ ಒಬ್ಬರಮೇಲೊಬ್ಬರು ಬಿದ್ದು ಕಾದತೊಡಗಿದರು. ಅಂದು ರೋಹಿಲರೂ, ದುರಾಣಿಜನರೂ ಮರಾಟರಮೇಲೆ ಕೇವಲ ಬೆಂಕಿಯ ಮಳೆಗರೆದು ಅವರನ್ನು ಸುಟ್ಟು ಸೂರೆಹೊಯ್ದರೆಂದು ಹೇಳಬಹುದು! ಎರಡೂಕಡೆಯಿಂದಲೂ ತೋಫುಗಳು ಹಾರಹತ್ತಿ ಹೊಗೆ-ಧೂಳಗಲಿಂದ ದಿಕ್ಕುಗಳು ಕಾಣದಾದವು. ಸೂರ್ಯನಿಗೆ ಖಗ್ರಾಸಗ್ರಹಣ ಹಿಡಿದಂತೆ ರಣಭೂಮಿಯಲ್ಲಿ ಕತ್ತಲೆ ಬಿದ್ದಿತು. ಹೀಗೆ ಘೋರಸಂಗ್ರಾಮವೆಸಗಿರುವಾಗ ಬಳವಂತರಾವ ಮೇಹೇಂದಳೆಯ ಸೈನಿಕರು ಸೋತು ಓಡಹತ್ತಿದರು. ಆಗ ಮೇಹೇಂದಲೆಯು ವೈರಿಗಳಿಗೆ ಬೆನ್ನು ತೋರಿಸಿ ಓಡಿ ಹೋಗಲಾರದೆ, ತನ್ನ ಸೈನಿಕರನ್ನು ಮತ್ತೆ ಹಿಂದಕ್ಕೆ ತಿರುಗಿಸಿ ''ಹರ ಹರ ಮಹಾದೇವ'' ಎಂದು ಗರ್ಜಿಸಿ ವೈರಿಗಳ ಮೇಲೆ ಬಿದ್ದನು. ದುರ್ದೈವದಿಂದಲೇ ಆತನಿಗೆ ಹೀಗೆ ಬುದ್ಧಿಯಾಯಿತೆಂದು ಹೇಳಬಹುದು. ಮೇಹೇಂದಳೆಯು ಶೌರ್ಯದಿಂದ ಕಾದುತ್ತಿರುವಾಗ ಶತ್ರುಗಳ ಕಡೆಯಿಂದ ಬಂದು ಗುಂಡು ಸೊಯ್ ಗುಟ್ಟುತ್ತ ಬಂದು ಆತನ ಎದೆಗೆ ಬಡೆದು, ಆತನು ಕುದುರೆಯ ಮೇಲಿಂದ ನೆಲಕ್ಕುರುಳಿದನು. ಕೂಡಲೆ ಒಬ್ಬ ದುರಾಣಿಯು ಓಡುತ್ತ ಬಂದು ಬಳವಂತರಾಯನ ಎದೆಯಮೇಲೆ ಕಾಲಿಟ್ಟು ತನ್ನ ಖಡ್ಗದಿಂದ ಆತನ ರುಂಡವನ್ನು ತುಂಡರಿಸಹೋದನು. ಅಷ್ಟರಲ್ಲಿ ಸ್ವಾಮಿಭಕ್ತನಾದ ಖಂಡೇರಾವನಾಯಕ ನಿಂಬಾಳಕರ, ಎಂಬವನು ತನ್ನ ಒಡೆಯನಮೇಲೆ ಬಿದ್ದು ದುರಾಣಿಯ ಖಡ್ಗಕ್ಕೆ ತಾನು ಬಲಿಯಾದನು! ಧನ್ಯನು! ಸ್ವಾಮಿಭಕ್ತನಾದ ನಿಂಬಾಳಕರನು ಪರಮಧನ್ಯನು!! ಹೀಗೆ ತಮ್ಮ ಸರದಾರನು ನೆಲಕ್ಕುರುಳಿದ ಕೂಡಲೆ ಮರಾಠರು ತಮ್ಮ ಅಗಳತದವರೆಗೆ ಹಿಂದಕ್ಕೆ ಸರಿದರು. ಇಬ್ರಾಹಿಮ ಖಾನನ ತೋಫುಗಳು ಹಾರುತ್ತಿದ್ದದ್ದರಿಂದ ಅವರನ್ನು ಬೆನ್ನಟ್ಟಿ ಬರಲಿಕ್ಕೆ ಶತ್ರುಗಳಿಗೆ ಆಸ್ಪದ ವಾಗಲಿಲ್ಲ. ಮೇಹೇಂದಳೆಯು ರಮಾಂಗಣದಲ್ಲಿ ಬಿದ್ದದ್ದನ್ನು ನೋಡಿ ಸಿಂದೆ-ಹೋಳಕರರು ಆವೇಶದಿಂದ ತಮ್ಮ ತಮ್ಮ ರಾವುತರನ್ನು ಶತ್ರುಗಳಮೇಲೆ ನೂಕಿ, ಐದಾರು ಸಾವಿರ ರೋಹಿಲರನ್ನು ಕುರಿಗಳಂತೆ ಕೊಯ್ದರು. ಹೆಣಗಳ ರಾಶಿಯು ಬಿದ್ದಿತು; ರಕ್ತಪ್ರವಾಹವು ಹರಿಯಿತು! ನಾಲ್ಕುಗಳಿಗೆ ರಾತ್ರಿಯವರೆಗೆ ಯುದ್ಧವು ನಡೆದಬಳಿಕ, ಉಭಯ ಸೈನಿಕರೂ ತಮ್ಮ ತಮ್ಮ ಛಾವಣಿಗೆ ತೆರಳಿದರು.

ಮೆಹೇಂದಳೆಯಂಥ ಅನುಭವಿಕನಾದ ಶೂರಸರದಾರನು ಮಡಿದದ್ದರಿಂದ, ಭಾವು ಸಾಹೇಬನು ಶೋಕಸಾಗರದಲ್ಲಿ ಮುಣುಗಿದನು. ಗಾಯಹೊಂದಿದ ಮೇಹೇಂದಳೆಯನ್ನು ಹೇರಿಕೊಂಡು ಛಾವಣಿಗೆ ಹೋದರು. ಆಗ ಮೇಹೇಂದಳೆಗೆ ಟುಕು-ಟುಕು ಜೀವವಿತ್ತು, ಆತನ ನಾಡಿಗಳು ಸರಿಯಹತ್ತಿದ್ದವು. ಬಾಯಲ್ಲಿ ತುಳಸೀಪತ್ರವನ್ನೂ, ಗಂಗಾಜಲವನ್ನೂ ಹಾಕಿ, ಉಪಾಧ್ಯಾಯರು ಬಳಿಯಲ್ಲಿ ಕುಳಿತು ಗೀತಾಪಾಠವನ್ನು ನಡಿಸಿದರು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ಮೇಹೇಂದಳೆಯ ಪ್ರಾಣೋತ್ಕ್ರಮಣವಾಯಿತು! ಆಗ ಆತನ ಹೆಂಡತಿಯಾದ ಲಕ್ಷ್ಮೀಬಾಯಿಯ ದುಃಖವನ್ನು ವರ್ಣಿಸಲಾಸಲ್ಲ; ಆದರೆ ಆ ಪತಿವ್ರತೆಯು ತನಗಾದ ದುಃಖ ವನ್ನು ಹೊರಗೆಡವದೆ, ಪತಿಯೊಡನೆ ಸತಿಹೋಗುವದನ್ನು ನಿಶ್ಚಯಿಸಿದಳು. ಆಕೆಯ ಮಗನಾದ ಅಪ್ಪಾರಾಯನೆಂಬವನು ಹನ್ನೆರಡು ವರ್ಷದ ಬಾಲಕನಾಗಿದ್ದನು. ಲಕ್ಷ್ಮೀಬಾಯಿಯನ್ನು ಭಾವು

ಸಾಹೇಬನು ಒಡಹುಟ್ಟಿದ ಅಕ್ಕನಂತೆ ಮನ್ನಿಸುತ್ತಿದ್ದನು. ಈ ಸ್ಥಿತಿಯಲ್ಲಿ ಲಕ್ಷ್ಮೀಬಾಯಿಯು ಪತಿಯ ಪಶ್ಚಾತ್ ಬದುಕಿ ಇರಬಹುದಾಗಿತ್ತು; ಇತ್ತ ಪುತ್ರವಾತ್ಸಲ್ಯ, ಅತ್ತ ಬಾವುಸಾಹೇಬನ ಭಗಿನೀಪ್ರೇಮ ಇವು ಆಕೆಯ ಸಹಗಮನಕ್ಕೆ ಪ್ರತಿಬಂಧಕಗಳಾಗಬಹುದಾಗಿತ್ತು; ಆದರೆ ಆ ಸಾಧ್ವಿಯು ಇದಕ್ಕಾವದಕ್ಕೂ ಮನಸ್ಸು ಮಾಡಲಿಲ್ಲ. ಬೇಕಾದವರು ಬೇಕಾದ ಶಾಸ್ತ್ರಾರ್ಥ ಹೇಳಿದರು, ಬೇಕಾದವರು ಬೇಕಾದ ಆಶೆ ತೋರಿಸಿದರು, ಕೂಸಾದ ಅಪ್ಪಾನು ಕೊರಳಿಗೆ ಬಿದ್ದು ಬೇಕಾದಷ್ಟು ಅತ್ತನು, ಬಾವುಸಾಹೇಬನು ಸಹಗಮನ ಮಾಡಬಾರದೆಂದು ಸೆರಗೊಡ್ಡಿ ಬೇಕಾದಷ್ಟು ಬೇಡಿಕೊಂಡನು; ಆದರೆ ಲಕ್ಷ್ಮೀ ಬಾಯಿಯು ಅದಾವದಕ್ಕೂ ಕಿವಿಗೊಡದೆ– ಸೋಲದೆ– ಮೋಹವಶವಾಗದೆ–ಭಿಡೆಗೆ ಬೀಳದೆ–ಸಹಗಮನವನ್ನೇ ನಿರ್ಧರಿಸಿದಳು! ಆಕೆಯು ಬಾವು ಸಾಹೇಬನನ್ನು ಕುರಿತು–''ಭಾವುಸಾಹೇಬ, ಪ್ರಾಣೇಶ್ವರನು ನನ್ನನ್ನು ಬಿಟ್ಟು ಪರಲೋಕಕ್ಕೆ ತೆರಳಿರಲು, ನಾನು ಇಲ್ಲಿ ಉಳಿದು ಮಾಡುವದೇನು? ಅವರೆಲ್ಲಿಯೋ ನಾನು ಅಲ್ಲಿ! ಈಗ ನನಗೆ ಬದುಕಿರೋಣವೇ ಮರಣವು, ಮರಣವೇ ಬದುಕಿರೋಣವೆಂದು ತಿಳಿ ಯಿರಿ. ನನ್ನ ಕೂಸಾದ ಅಪ್ಪಾರಾಯನನ್ನು ನಿಮ್ಮ ಉಡಿಯಲ್ಲಿ ಹಾಕಿರುವೆನು, ಆತನನ್ನು ರಕ್ಷಿಸಿರಿ. ಸರ್ವೇಶ್ವರನು ಎಲ್ಲರನ್ನು ರಕ್ಷಿಸುತ್ತಿರುವಾಗ ನಾವು ಯೋಚಿಸಿ ಮಾಡುವದೇನು? ನಾಶವಂತ ವಾದ ಈ ಐಹಿಕಮೋಹಪಾಶದಲ್ಲಿ ನನ್ನನ್ನು ತೊಡಗಿಸಿ ಮಾಡುವದೇನು? ನಾಶವಂತವಾದ ಈ ಐಹಿಕಮೋಹಪಾಶದಲ್ಲಿ ನನ್ನನ್ನು ತೊಡಗಿಸಬೇಡಿರಿ. ವೀರಪುತ್ರರಿಗೆ ರಣಾಂಗಣದಲ್ಲಿಯ ಮರಣದಂತೆ, ಸತಿಯರಿಗೆ ಸಹಗಮನವು ಶ್ರೇಯಸ್ಕರವು! ಹಣೆತುಂಬ ಕುಂಕುಮ, ಕೊರಳ ತುಂಬ ಮಂಗಲಸೂತ್ರ, ಕೈತುಂಬ ಬಳೆ ಇವೇ ನಮ್ಮ ಐಶ್ವರ್ಯಗಳು! ಈ ಅಖಂಡ ಸೌಭಾಗ್ಯ ಗಳು ನನ್ನ ಸಂಗಡ ಬರುತ್ತಿರುವಾಗ, ನಾನು ಅವಕ್ಕೆ ಎರವಾಗಲಾ? ಬೇಗನೆ ನನ್ನ ಪ್ರಯಾಣದ ಸಿದ್ಧತೆಯನ್ನು ಮಾಡಿರಿ'' ಎಂದು ಹೇಳಿದಳು ! ಅಹಹ! ಆರ್ಯ ಸ್ತ್ರೀಯರೇ, ನೀವು ಧನ್ಯರು! ಪರಮಧನ್ಯರು!!

ಬಳಿಕ ಶ್ರೀಮಂತರ ಡೇರೆಯ ಬಳಿಯ ಪ್ರಶಸ್ತವಾದ ಬೈಲಿನಲ್ಲಿ ಚಿತೆಯು ಸಿದ್ಧ ವಾಯಿತು. ಅದರಮೇಲೆ ಲಕ್ಷ್ಮೀಬಾಯಿಯ ಪತಿಯ ಶವವನ್ನಿಟ್ಟರು. ಲಕ್ಷ್ಮೀಬಾಯಿಯು ಬಿಳಿಯ ಪತ್ತಲವನ್ನುಟ್ಟು, ಹಣೆತುಂಬ ಕುಂಕುಮ ಹಚ್ಚಿಕೊಂಡು ಸರ್ವಾಲಂಕಾರಗಳನ್ನಿಟ್ಟುಕೊಂಡಳು. ಭಾವುವಿನ ಹೆಂಡತಿಯಾದ ಪಾರ್ವತೀಬಾಯಿಯು ಆ ಸಾಧ್ವಿಯ ಉಡಿತುಂಬಿದಳು. ಬಳಿಕ ಆ ಪುಣ್ಯವಂತಳು ಎಲ್ಲರ ಅಪ್ಪಣೆಯನ್ನು ಕೇಳಿಕೊಳ್ಳುತ್ತ ಚಿತೆಯಬಳಿಗೆ ಹೋದಳು. ಆಗ ಅಪ್ಪಾನು ಹೊರಳಾಡಿ ಅಳುವದನ್ನೂ, ಅತ್ತ ಧೀರನಾದ ಭಾವುಸಾಹೇಬನು ಮೂಢನಂತೆ ಕಣ್ಣೀರು ಸುರಿಸುವದನ್ನೂ ನೋಡಿ ನೆರೆದವರ ಕಣ್ಣುಗಳಲ್ಲಿ ನೀರುಸುರಿದವು! ದುಃಖಾತಿಶಯ ದಿಂದ ಬಾವೂಸಾಹೇಬನಿಗೆ ಮೂರ್ಛೆಬಂದಿತು. ಲಕ್ಷ್ಮೀಬಾಯಿಯು ತನ್ನ ಮೈಮೇಲಿನ ಅಲಂಕಾರ ಗಳನ್ನೆಲ್ಲ ತನ್ನ ದಾಸಿಗೆ ಕೊಟ್ಟು, ಚಿತೆಗೆ ಅಗ್ನಿಸಂಸ್ಕಾರ ಮಾಡಿ ಅದನ್ನು ಹತ್ತಿ ಪತಿಯ ಮಸ್ತಕವನ್ನು ತೊಡೆಯಮೇಲೆ ಇಟ್ಟುಕೊಂಡು ಕುಳಿತು ಕಣ್ಣು ಮುಚ್ಚಿಕೊಂಡು ಶ್ರೀ ಲಕ್ಷ್ಮೀ–ನಾರಾಯಣನನ್ನು ಧ್ಯಾನಿಸತೊಡಗಿದಳು! ಆಗ ಮಂಗಲವಾದ್ಯಗಳು ಬೋರ್ಗರೆಯು

ತ್ತಿದ್ದವು; ಬ್ರಾಹ್ಮಣರು ವೇದಘೋಷಮಾಡುತ್ತ ಚಂದನ, ಕರ್ಪೂರ, ತುಪ್ಪ ಇತ್ಯಾದಿ ಜ್ವಾಲಾ ಗ್ರಾಹಿಪದಾರ್ಥಗಳನ್ನು ಚಿತೆಯಮೇಲೆ ಸುರಿಯುತ್ತಿದ್ದರು. ಚಿತೆಯು ನಾಲ್ಕೂಕಡೆಯಿಂದ ಪ್ರಜ್ವಲಿಸಿತು. ಆಗ ಆ ಸತಿಯು ಮಿಸುಕಲಿಲ್ಲ, ಉಸ್ಸೆಂದು ಉಸುರಲಿಲ್ಲ! ಒಂದು ಪ್ರಹರದಲ್ಲಿ ಚಿತೆಯು ಸುಟ್ಟು, ಬೂದಿ ಯಾಯಿತು! ಎಲ್ಲರೂ ಸತಿಯನ್ನು ಕೊಂಡಾಡುತ್ತ, ಚಿತೆಯನ್ನು ನಮಸ್ಕರಿಸುತ್ತ ಹೊರಟು ಹೋದರು. ಪ್ರಿಯವಾಚಕರೇ, ದೈವಬಲ ತಪ್ಪಿದಬಳಿಕ, ಮಲ್ಹಾರ ರಾಯನೇನು ಮಾಡುವನು, ಮೇಹೇಂದಳೆಯೇನು ಮಾಡುವನು?

## ಉಮೆಯು

ಹೀಗೆ ಗೋವಿಂದಪಂತಬುಂದೇಲೇ, ಬಳವಂತರಾವಮೇಹೇಂದಳೇಯೆಂಬವರಿಬ್ಬರು ವೀರರು ರಣಭೂಮಿಯಲ್ಲಿ ಬಿದ್ದದ್ದರಿಂದ, ಮರಾಟರ ಉತ್ಸಾಹವು ಕುಗ್ಗಿತು. ಪ್ರಮುಖ ಸರದಾರರು ಮುಂದಿನ ಪರಿಣಾಮವನ್ನು ಕುರಿತು ಆಲೋಚಿಸತೊಡಗಿದರು. ಮಹದಾಜಿ ಸಿಂದೆಯು ತನ್ನ ಡೇರೆಯಲ್ಲಿ ಯಶವಂತರಾವಪವಾರನ ಸಂಗಡ ಹೀಗೆ ಆಲೋಚಿಸುತ್ತ ಕುಳಿತಿರುವಾಗ, ಡೇರೆಯ ಹೊರಗೆ ಯಾವಳೋ ಒಬ್ಬ ಸ್ತ್ರೀಯು ಮಂಜುಲಸ್ವರದಿಂದ ಹಾಡತೊಡಗಿದ್ದಳು; ಆದರೆ ಈ ಹಾಡು ಬಾರಿಸೋಣವು ಯಾರಿಗೆಬೇಕಾಗಿತ್ತು? ಧಾನ್ಯ ಸಂಗ್ರಹವು ತೀರಿದ್ದ ರಿಂದಲೂ, ಹೊಸ ಧಾನ್ಯವನ್ನು ಪೂರಯಿಸುವದು ಆಗದ್ದರಿಂದಲೂ ಛಾವಣಿಯಲ್ಲಿ ದುರ್ಭಿಕ್ಷ ಬಿದ್ದು, ದಂಡಿನವರು ಉಪವಾಸ ಸಾಯಹತ್ತಿದರು. ಎಲ್ಲ ಬಗೆಯಿಂದಲೂ ಛಾವಣಿಯಲ್ಲಿ ಅವ್ಯವಸ್ಥೆಯುಂಟಾಯಿತು. ನಿರಾಶೆಯಿಂದ ಸಿಪಾಯಿಗಳು ತಮ್ಮ ಸರದಾರರ ಮಾತು ಕೇಳದಾದರು. ಮಲ್ಹಾರರಾವಹೋಳಕರನು ಹಿಂದಿರುಗಿ ಬಂದದ್ದರಿಂದ, ಸೈನಿಕರಲ್ಲಿ ಆತನ ಒಗರು ಕಡಿಮೆ ಯಾಗಿತ್ತು, ಅಂತಃಕಲಹ, ಜಾತಿಮತ್ಸರ ಇವುಗಳಿಂದ ಸರದಾರರಲ್ಲಿ ಎರಡು– ಮೂರು ಬಣಗಳಾಗಿದ್ದವು. ಒಬ್ಬರ ನೀರು ಕಡಿಮೆಯಾದರೆ ಮತ್ತೊಬ್ಬರಿಗೆ ಸಂತೋಷ ವಾಗುತ್ತಿತ್ತು. ಪ್ರತಿ ಒಬ್ಬನು ತನ್ನ ಪ್ರತಿಷ್ಠೆಯನ್ನೂ–ಲಾಭವನ್ನೂ ನೋಡಿ ಕೊಳ್ಳುತ್ತಿದ್ದನಲ್ಲದೆ, ಸಾಮಾನ್ಯ ಹಿತಕ್ಕೆ ಯಾವನೂ ಲಕ್ಷ್ಯಗೊಡುತ್ತಿದ್ದಿಲ್ಲ, ದನಗಳ ಮೇವು ಮಿಡಚಿ ತೀರಿ, ಅವು ಪಟ–ಪಟ ಸಾಯಹತ್ತಿದವು. ಧಾನ್ಯದ ಬದಲು ದನ–ಕರುಗಳ ಮಾಂಸವನ್ನು ಉಪಯೋಗಿಸಹತ್ತಿದರೂ, ದಂಡಿನವರ ಹಸಿವೆಯು ಹಿಂಗಲೊಲ್ಲದು. ಸತ್ತದನಗಳ ದುರ್ಗಂಧವು ನಾಲ್ಕೂ ಕಡೆಗೆ ಪಸರಿ ಸಿತು. ಪ್ರತ್ಯಕ್ಷ ದಂಡಾಳುಗಳೂ ಒಪ್ಪತ್ತಿನ ಊಟವನ್ನು ಕಾಣದಿರುವಾಗ, ಬಾಜಾರಬುಣಗಿ ನವರ ಪಾಡೇನು? ಅವರು ಕೂಳಿಲ್ಲದೆ ಬಿದ್ದಲ್ಲಿಬಿದ್ದು ಸಾಯಹತ್ತಿದರು. ಸಿಪಾಯಿಗಳು ಮರ್ಯಾದೆಬಿಟ್ಟು, ತಮ್ಮ ಸರದಾರರಿಗೆ–''ನಾವು ಎಷ್ಟುದಿನ ಉಪವಾಸವಿರೋಣ? ನಿಮ್ಮ ಮನೆಯೊಳಗಿನ ಕಾಳಿನ ಚೀಲಗಳನ್ನು ಲೂಟಿಮಾಡಿ ಒಯ್ಯುವೆವು. ನಿಮ್ಮ ಮುಂದಿನ ಬಡಿಸಿದ ಎಡೆಯನ್ನು ಎಳೆದುಕೊಂಡು ಹೋಗವೆವು. ನಿಮಗೆ ಊಟ ಮಾಡಗೊಡಲಿಕ್ಕಿಲ್ಲ'' ಎಂದು ಬಾಯಿಗೆ

ಬಂದಂತೆ ಮೋರೆಯ ಮುಂದೆಯೇ ಮಾತಾಡಹತ್ತಿದರು! ಪಾನಿಪತದ ಊರೊಳಗಿನ ಧಾನ್ಯ ಸಂಗ್ರವೆಲ್ಲದಂಡಿನವರ ಪಾಲಾಯಿತು. ಧಾನ್ಯಗಳ ಚೀಲಗಳನ್ನು ತೋರಿಸದವರನ್ನು ಸಿಪಾಯಿಗಳು ಸಾಯಹೊಡೆಯುವರು. ಒಬ್ಬರನ್ನೊಬ್ಬರು ಕೇಳುವಹಾಗಿದ್ದಿಲ್ಲ. ಬಲವಂತನು ಬದುಕಿದ ನೆಂಬ ಭಯಂಕರ ಸ್ಥಿತಿಯು ಪ್ರಾಪ್ತವಾಯಿತು. ಭಾವುಸಾಹೇಬನ ಹಂಗನ್ನೂ ದಂಡಿನವರು ಇಡದಾದರು. ಅವರ ಅಪಶಬ್ದಕ್ಕೆ ಆ ಮಾನಧನನೂ ಗುರಿಯಾದನು. ಈ ಸ್ಥಿತಿಯಲ್ಲಿ ಸಿಂದೇನ ಡೇರೆಯ ಮುಂದೆ ಹಾಡುತ್ತಿರುವ ಸ್ತ್ರೀಯ ಹಾಡಿಕೆಯನ್ನು ಯಾರು ಕೇಳಬೇಕು?

ಆದರೂ ಮನುಷ್ಯಸ್ವಭಾವವು ಶಾಶ್ವತವಾಗಿ ಯಾವದನ್ನೂ ಹಚ್ಚಿಕೊಳ್ಳತಕ್ಕದ್ದಲ್ಲ. ಅದರಲ್ಲಿ ವೀರಪುರುಷರಂತು ತಮ್ಮ ವೀರ್ಯದ ಪ್ರಭಾವದಲ್ಲಿ ಕ್ಷುದ್ರ ಮಾನಸಿಕ ವಿಕಾರ ಗಳನ್ನು ಸಂಪೂರ್ಣವಾಗಿ ಧಿಕ್ಕರಿಸುವರು. ಅದರಂತೆ, ಈಗ ಇಂಪಾದ ಗಾಯನಧ್ವನಿಯು ಕಿವಿಗೆ ಬಿದ್ದಕೂಡಲೆ, ನಮ್ಮ ಇಬ್ಬರು ಮರಾಟಾವೀರರ ಔದಾಸೀನ್ಯವು ನಷ್ಟವಾಯಿತು. ಕೇವಲ ಉದಾಸೀನರಾಗಿದ್ದ ಅವರಿಗೆ ಆ ಗಾಯನವು ಬಹು ಸುಶ್ರಾವ್ಯವಾಯಿತು. ಮಹದಾಜಿಯ ಲಕ್ಷವಂತು ಆ ಗಾಯನ ಕೇಳುವಲ್ಲಿ ಮಗ್ನವಾಗಿಹೋಯಿತು. ಬರಬರುತ್ತ ಅವರು ಮಾತು ಬಿಟ್ಟು ಹಾಡು ಕೇಳುತ್ತಕುಳಿತುಕೊಂಡರು. ಗಾಯಕಿಯ ಧ್ವನಿಯು ಬಹು ಮಂಜುಲವಾದದ್ದು. ಅದು ವೀಣೆಯನಾದದಲ್ಲಿ ಬೆರೆತುಹೋಗಿ, ಕೇಳುವವರ ಚಿತ್ತವನ್ನು ಕೂಡಲೆ ಆಕರ್ಷಿಸುತ್ತಿತ್ತು. ಹಾಡು ಕೇಳುತ್ತ ಹೋದಹೋದಂತೆ ಮಹದಾಜಿಯ ಮನಸ್ಸು ಗಾಯಕಿಯನ್ನು ಪ್ರತ್ಯಕ್ಷ ನೋಡುವದಕ್ಕಾಗಿ ಹರಿಯಹತ್ತಿತು. ಆತನಿಗೆ ಗಾಯನಧ್ವನಿಯ ಗುರುತು ಹತ್ತಿದಹಾಗಾಗು ವದು; ಆದರೆ ಅದನ್ನು ಎಲ್ಲಿ ಕೇಳಿದ್ದೆನು, ಎಂದು ಕೇಳಿದ್ದೆನು ಎಂಬದರ ನೆನಪು ಆಗಲೊಲ್ಲದು! ಹೀಗೆ ಆತನು ಆಲೋಚಿಸುತ್ತಿರುವಾಗ ಏನೂ ಸ್ಮರಣಕ್ಕೆ ಬಾರದಿರಲು, ಆತನು ಯಶವಂತ ರಾಯನನ್ನು ಕುರಿತು–''ರಾವ, ನಮ್ಮ ಉದಾಸೀನವಾದ ಮನಸ್ಸನ್ನು ಗಾಯಕಿಯು ಚನ್ನಾಗಿ ರಮಿಸಿದಳು. ನಡೆಯಿರಿ, ಹೊರಗೆ ಹೋಗಿ ಇನ್ನು ನಾಲ್ಕು ಒಳ್ಳೆಯ ಪದಗಳನ್ನು ಹೇಳಿಸಿ ಆಕೆಗೆ ಏನಾದರೂ ಕೊಡೋಣ ನಡೆಯಿರಿ.'' ಎಂದು ಹೇಳಿ, ಆತನೊಡನೆ ಹೊರಗೆ ಬಂದನು. ಗಾಯಕಿಯು ಕಣ್ಣಿಗೆ ಬಿದ್ದಕೂಡಲೆ ಆ ತರುಣ ಸಿಂದೆಗೆ ಆಶ್ಚರ್ಯವಾಯಿತು. ''ಈಕೆ ಇಲ್ಲಿಗೆ ಹ್ಯಾಗೆ ಬಂದಳು?'' ಎಂದು ಆತನು ಮನಸ್ಸಿನಲ್ಲಿ ಅಂದುಕೊಂಡು, ''ಮನುಷ್ಯರ ಹಾಗೆ ಮನುಷ್ಯರು ಇರುವದಿಲ್ಲವೆ? ಇನ್ನಿಷ್ಟು ವಿಚಾರಮಾಡಿ ಆಮೇಲೆ ಈಕೆಯನ್ನು ಕೇಳೋಣ'' ಎಂದು ಆಲೋಚಿಸಿ, ಪವಾರ ನೊಡನೆ ಗಾಯನ ಕೇಳುತ್ತ ಕುಳಿತುಕೊಂಡನು. ಸಿಂದೆಯನ್ನು ನೋಡಿ ಆ ಗಾಯಕಿಯೂ ಸಂಕೋಚ ಪಡುವಂತೆ ತೋರಿತು. ಮೊದಲಿನಂತೆ ಆಕೆಯು ಮೈ ಚಳಿ ಬಿಟ್ಟು ಹಾಡದಾದಳು. ಆಕೆಯ ಮೈ ಹುದುಗಿತು. ದೃಷ್ಟಿಯು ಅಧೋಮುಖವಾಯಿತು; ಆಕೆಯು ಸಂಕೋಚಭಾವದಿಂದ ಸಿಂದೆಯನ್ನು ನೋಡತೊಡಗಿದಳು! ಬರಬರುತ್ತ ಆಕೆಯು ತನ್ನ ವೀಣೆಯನ್ನು ಕೆಳಗಿಟ್ಟು, ತಲೆಬಾಗಿ ಸುಮ್ಮನೆ ಕುಳಿತುಕೊಂಡಳು!

ಇದನ್ನು ನೋಡಿ ಸಿಂದೆಯ ಸಂಶಯದ ಪರಾಭವವಾಗಿ, ಆತನು ಆ ಸ್ತ್ರೀಯನ್ನು ಕುರಿತು –''ಉಮಾ, ನೀನು ಇಲ್ಲಿಗೆ ಹೇಗೆ ಬಂದೆ? ನಿನ್ನ ಆ ವರದಾ–ತಾಪೀನದಿಗಳ ಸಂಗಮಸ್ಥಾನದ

ಮಠವೆತ್ತ, ಈ ಕುರುಕ್ಷೇತ್ರವೆತ್ತ? ಇಷ್ಟು ದೂರ ನಿನ್ನನ್ನು ಯಾರು ಕರತಂದರು?'' ಎಂದು ಕೇಳಲು, ಉಮೆಯು ವಿನಯದಿಂದ ಕೈಜೋಡಿಸಿ–''ಸರಕಾರ, ಕಣ್ಣಿಗೆ ದೂರವಾದರೂ ಕಾಲಿಗೆ ದೂರವಲ್ಲ, ನನ್ನ ಮನಸ್ಸನ್ನು ತಾವು ಎಳೆದುಕೊಂಡು ಬಂದದ್ದರಿಂದ, ತಮ್ಮನ್ನು ಹುಡುಕುತ್ತ ನಾನು ಬಂದೆನು'' ಎಂದು ದಿಟ್ಟತನದಿಂದ ಉತ್ತರಕೊಟ್ಟಳು. ಇವರಿಬ್ಬರ ಮಾತುಗಳನ್ನು ಯಶವಂತರಾಯನು ಆಶ್ಚರ್ಯದಿಂದ ಕೇಳುತ್ತಿದ್ದನು. ಸಿಂದೆಯು ಕೆಲವು ಹೊತ್ತು ಆಲೋಚಿಸಿ ಪವಾರನನ್ನು ಕುರಿತು–ಪವಾರಸಾಹೇಬ, ಸ್ತ್ರೀಯರು ಅತ್ಯಂತ ಸಾಹಸಿಗಳೆಂಬದು ಸುಳ್ಳಲ್ಲ. ಈ ಹುಡುಗೆಯ ಸಾಹಸದ ಸುದ್ದಿಯನ್ನು ಕೇಳಿದರೆ ನೀವು ಆಶ್ಚರ್ಯಪಡಬಹುದು. ನಾನು ದಕ್ಷಿಣದಲ್ಲಿರುವಾಗ ಒಮ್ಮೆ ಖಾನದೇಶದ ಅಡವಿಯಲ್ಲಿ ಬೇಟೆಗೆ ಹೋಗಿದ್ದೆನು. ಆಗ ನನಗೆ ನೀರಡಿಕೆ ಬಹಳ ಆದದ್ದರಿಂದ, ನೀರು ಹುಡುಕುತ್ತ ಒಂದು ಮಠಕ್ಕೆ ಹೋದೆನು. ಈ ಹುಡುಗೆಯು ಆ ಮಠದ ಮಹಾಂತನ ಮಗಳು. ನಾನು ಹೋದಾಗ ಈಕೆಯ ತಂದೆಯು ಮಠದಲ್ಲಿದ್ದಿಲ್ಲ, ಈಕೆಯು ನದಿಗೆ ನೀರಿಗೆ ಹೋಗಿದ್ದಳು. ಮಠದಲ್ಲಿ ಯಾರೂ ಇಲ್ಲದ್ದರಿಂದ ಅದರ ಬಾಗಿಲು ಹಾಕಿರಲು, ನಾನು ನಿರಾಶೆಪಟ್ಟು ಇನ್ನು ಕುದುರೆಯನ್ನು ತಿರುಗಿಸತಕ್ಕವನು, ಅಷ್ಟರಲ್ಲಿ ಈಕೆಯು ತಲೆಯಮೇಲೆ ಬಿಂದಿಗೆ ಹೊತ್ತುಕೊಂಡು ಬಂದಳು. ಸನಿಯಕ್ಕೆ ಬಂದ ಕೂಡಲೆ ಕುಡಿಯಲಿಕ್ಕೆ ನೀರು ಕೊಡಬೇಕೆಂದು ಕೇಳಲು, ಈಕೆಯು ತಂದ ಬಿಂದಿಗೆಯಿಂದಲೇ ನನ್ನ ಬೊಗಸೆಯಲ್ಲಿ ನೀರು ಹನಿಸಹತ್ತಿದಳು. ನೀರು ಕುಡಿಯುವಾಗ ಈ ಹುಡುಗೆಯ ಮನಸ್ಸು ನನ್ನನ್ನು ನೋಡಿ ಮೋಹಿತವಾಗಿರುವಂತೆ ನನಗೆ ತೋರಿತು. ಆಗ ನಾನು ಸ್ವಾಭಾವಿಕವಾದ ವಿನೋದದಿಂದ–''ಏ ಪೋರೀ, ನಿನಗೆ ನಾನು ಮಂತ್ರಹಾಕಿ ಹೋಗುವೆನು. ಇನ್ನು ನೀನು ನನ್ನವಳಾದೆ ನಾಳೆ ನನ್ನನ್ನು ಹುಡುಕುತ್ತ ನಾಯಿಯಹಾಗೆ ಬೆನ್ನುಹತ್ತಿ ಬರುತ್ತೀ ನೋಡು.'' ಎಂದು ನುಡಿದೆನು; ಆದರೆ ಅದನ್ನೇ ನಿಜವೆಂದು ತಿಳಿದು ಈ ಹುಡುಗೆಯು ನನ್ನನ್ನು ಹುಡುಕುತ್ತ ಬಂದಂತೆ ತೋರುತ್ತದೆ. ಪಾಪ! ಬಡವೆಯು ಎಷ್ಟು ದಣಿದಳು! ತಂದೆಯನ್ನು ಬಿಟ್ಟು ಬಂದು ಎಂಥ ಸಾಹಸ ಕರ್ಮಮಾಡಿದಳಲ್ಲ! ಆದರೆ ರಾವ, ಪ್ರೇಮದ ಮಹಿಮೆಯು ವಿಲಕ್ಷಣ ವಿರುವದಲ್ಲವೆ?'' ಎಂದು ನುಡಿದು, ಮಹದಾಜಿಯು ಉಮೆಯನ್ನು ಕುರಿತು ನಗುತ್ತ–

ಮಹದಾಜಿ–ಉಮೆ! ಇಷ್ಟು ಕಷ್ಟಪಟ್ಟು ಬಂದು ಇಲ್ಲಿ ಏನು ಕಟ್ಟಿಕೊಳ್ಳುವೆ?

ಉಮೆ–ಚರಣಗಳ ದರ್ಶನಲಾಭವಾದ ಬಳಿಕ ನನಗೆ ಹೆಚ್ಚಿನದೇನು ಬೇಕು?

ಮಹದಾಜಿ–ಹಾಗಾದರೆ ದರ್ಶನವಾಯಿತಲ್ಲ, ನಡೆಯಿನ್ನು!

ಉಮೆ–ಚರಣಗಳ ದರ್ಶನವಾದ ಬಳಿಕ ಅವುಗಳನ್ನು ಸೇವಿಸಿ ಧನ್ಯವಾಗದೆ ಹಾಗೇಯೇ ಹೋಗಬಹುದೆ?

ಮಹದಾಜಿ–ಘೋರ ಸಂಗ್ರಾಮ ನಡೆದಿರುವಾಗ ನಿನ್ನಿಂದಾಗುವ ಪ್ರಯೋಜನವೇನು?

ಉಮೆ–ಇಂಥ ಕಠಿಣ ಪ್ರಸಂಗದಲ್ಲಿ ನನ್ನ ಸೇವೆಯು ಪ್ರಯೋಜನವಾದರೆ ಮಾತ್ರ ನಾನು ಇಷ್ಟುದೂರ ಕಷ್ಟಪಟ್ಟು ಬಂದದ್ದರ ಸಾರ್ಥಕವಾಗುವದು. ಸರಕಾರ, ತಮ್ಮ ಸಂಕಟಗಳಿಗೆ ಪಾಲುಗಾರಳಾಗುವದಕ್ಕಾಗಿಯೇ ನಿಮ್ಮ ಉಮೆಯು ನಿಮ್ಮನ್ನು ಹುಡುಕುತ್ತ ಬಂದಿರುವಳು. ಹೇಳಿರಿ,

ತಮ್ಮ ಸಲುವಾಗಿ ಬೆಂಕಿಯಲ್ಲಿ ಹಾರಿಕೊಳ್ಳಲಾ? ನಾನು ಏನು ಮಾಡಿದರೆ ತಮಗೆ ಹಿತವಾಗು ತ್ತದೆಂಬದನ್ನು ದಯಮಾಡಿ ಹೇಳಿರಿ. ಏಕಾಕಿಯಾಗಿ ತಮ್ಮನ್ನು ಹುಡುಕುವಾಗ ನನಗಾದಷ್ಟು ಕಷ್ಟವು, ಈಗ ತಮ್ಮ ಚರಣಗಳನ್ನು ಕಂಡಿರುವ ನನಗೆ ಆಗುವಹಾಗಿಲ್ಲ. ಮಠವಾಸಿಯಾದ ನಿಮ್ಮ ಉಮೆಯ ನಿಷ್ಠೆಯನ್ನಾದರೂ ಪರೀಕ್ಷಿಸಿಬಿಡಿರಿ!

ಹೀಗೆ ಅತಿ ಸಾಹಸದಿಂದ ನುಡಿಯುವ ಸ್ತ್ರೀಯು ಯಾರಿರಬಹುದೆಂಬದನ್ನು ನಮ್ಮ ವಾಚಕರು ತರ್ಕಿಸಿರಬಹುದು. ದುರಾಣಿ ಬಾದಶಹನ ಮನಸ್ಸು ಮೆಚ್ಚಿಸಿ, ಆತನ ಛಾವಣಿ ಯಿಂದ ಪಾರಾಗಿಬಂದ ಬೈರಾಗಿಣಿಯೇ ಈ ಉಮೆಯೆಂದು ನಾವು ವಾಚಕರಿಗೆ ಸ್ಪಷ್ಟವಾಗಿ ಹೇಳುವೆವು. ಇನ್ನು ಮೇಲೆ ನಾವು ಬೈರಾಗಿಣಿಯೆಂದು ಕರೆಯದೆ ಆಕೆಯನ್ನು ಉಮೆಯೆಂದೇ ಕರೆಯುತ್ತೇವೆ. ಉಮೆಯು ಹೀಗೆ ಸ್ಪಷ್ಟ ಮಾತಾಡುವದನ್ನು ಕೇಳಿ ಆ ಇಬ್ಬರು ಸರದಾರರು ಆಶ್ಚರ್ಯದಿಂದ ಒಬ್ಬರ ಮೋರೆಯನ್ನೊಬ್ಬರು ನೋಡುತ್ತಿರಲು, ಭಾವುಸಾಹೇಬನ ಕಡೆ ಯಿಂದ ಒಬ್ಬ ಭಾಲದಾರನು ಬಂದು ಸಿಂದೆಯನ್ನು ಕುರಿತು–''ಶ್ರೀಮಂತ ಬಾವು ಸಾಹೇಬ ರವರು ಈಗಲೆ ತಮಗೆ ಬರಹೇಳಿರುವರು.'' ಎಂದು ವಿಜ್ಞಾಪಿಸಿದನು. ಕೂಡಲೆ ಸಿಂದೆಯು ಎದ್ದು ತನ್ನ ಕುದುರೆಯನ್ನು ತರಹೇಳಿ ಪೋಷಾಕು ಹಾಕಿಕೊಳ್ಳಲಿಕ್ಕೆ ಒಳಗೆ ಹೊರಟನು. ಅತ್ತ ಯಶವಂತ ರಾಯನು ತನ್ನ ಡೇರೆಗೆ ಹೊರಟನು. ಇದನ್ನೆಲ್ಲ ನೋಡುತ್ತ ಕುಳಿತಿದ್ದ ಉಮೆಯು –''ಇಂಥಲ್ಲಿ ನನ್ನಂಥ ಕಂಗಾಲ ಭಿಕ್ಷುಕಿಯನ್ನು ಯಾರು ಕೇಳುವರು? ಸುಳ್ಳೇ ನನ್ನ ಭ್ರಾಂತಿಯು!'' ಎಂದು ಪಶ್ಚಾತ್ತಾಪ ಪಡುತ್ತ ಕುಳಿತಿರುವಾಗ, ಇಬ್ಬರು ದಾಸಿಯರು ಬಂದು ಅವಳನ್ನು ಆದರದಿಂದ ಒಳಗೆ ಕರಕೊಂಡು ಹೋದರು. ಇತ್ತ ಮಹದಾಜಿಯು ದರ್ಬಾರದ ಉಡಿಗೆ–ತೊಡಿಗೆಗಳನ್ನು ಧರಿಸಿ ತನ್ನ 'ಬಿಜಲಿ' ಎಂಬ ಹೆಸರಿನ ಕುದುರೆಯನ್ನು ಹತ್ತಿ ಶ್ರೀಮಂತರ ಡೇರೆಯ ಕಡೆಗೆ ನಡೆದನು. ಶ್ರೀಮಂತರು ಈಗ ತನ್ನನ್ನು ಯಾಕೆ ಕರೆಸಿರಬಹು ದೆಂದು ಆತನು ಯೋಚಿಸುತ್ತಲಿದ್ದನು. ಏನಾದರೂ ಕೇಳುವದಕ್ಕಾಗಿ ನಾಲ್ಕು ಜನ ಸರದಾರ ರೊಡನೆ ತನ್ನನ್ನು ಕರೆಸಿರಬಹುದೆಂದು ಆತನು ತಿಳಿದನು. ಆದರೆ ಹಾಗೇನೂ ಇದ್ದಿಲ್ಲ. ಶ್ರೀಮಂತರು ಬೇರೆ ಯಾವ ಸರದಾರರನ್ನೂ ಕರಿಸದೆ, ಕೇವಲ ಮಹದಾಜಿ ಸಿಂದೆಯೊಬ್ಬ ನನ್ನೇ ಕರೆಸಿದ್ದರು. ಶ್ರೀಮಂತರ ಚೋಪದಾರನು ಮಹದಾಜಿಯನ್ನು ಶ್ರೀಮಂತರ ಖಾಸ ಡೇರೆಗೆ ಕರಕೊಂಡು ಹೋದನು. ಅಲ್ಲಿ ಬೇರೆ ಸರದಾರರಾರೂ ಇದ್ದಿಲ್ಲ. ಸದಾಶಿವರಾವ ಭಾವುರವರು ಬೆಳ್ಳಿಯ ಪಲ್ಲಂಗದ ಮೇಲೆ ಒಬ್ಬರೇ ವಿಚಾರಮಾಡುತ್ತ ಕುಳಿತಿದ್ದರು. ಅವರ ಮುಖ ಮುದ್ರೆಯು ದಿನದಂತೆ ಉಲ್ಲಸಿತವಾಗಿದ್ದಿಲ್ಲ; ಅದು ತೀರ ಬಾಡಿಹೋಗಿತ್ತು. ಅವರು ಒಳಗೆ ಧೋತರ ಜೋಡಿಸಿದ ಬರಿಯದೊಂದು ಶಾಲಜೋಡಿಯನ್ನು ಹೊದ್ದುಕೊಂಡು ಕುಳಿತಿದ್ದರು. ಕಣ್ಣುಗಳಲ್ಲಿ ಮಾತ್ರ ಚಾಂಚಲ್ಯವು ತೋರುತ್ತಿತ್ತು. ಅವರ ಕುಟುಂಬವಾದ ಪಾರ್ವತೀಬಾಯಿ, ವಿಶ್ವಾಸರಾಯರ ಕುಟುಂಬವಾದ ಲಕ್ಷ್ಮೀಬಾಯಿ, ಬೇರೆ ಎಷ್ಟೋ ಸ್ತ್ರೀಯರು ಮೈತೊಳೆದು ಮಡಿಬಟ್ಟೆಗಳನ್ನುಟ್ಟುಕೊಂಡು ಸರ್ವಾಲಂಕಾರ ವಿಭೂಷಿತೆಯರಾಗಿ ರೇಶಿಮೆಯ ಪಡದೆಯ ಹಿಂದೆ ರುಕ್ಮಿಣೀ ಸ್ವಯಂವರ, ಶಿವಲೀಲಾಮೃತ, ರಾಮವಿಜಯ, ಹರಿವಿಜಯ, ಪಾಂಡವ

ಪ್ರತಾಪ, ಗುರುಚರಿತ್ರ, ಮಂಗಲಮೂರ್ತಿಮೋರಯಾನ ಸ್ತೋತ್ರಗಳು ಮೊದಲಾದ ಪುಸ್ತಕಗಳನ್ನು ಓದುತ್ತ ಕುಳಿತಿದ್ದರು. ಅವರ ಸುತ್ತಲು ಹುಡುಗರೂ, ಸೇವಕರೂ, ದಾಸ–ದಾಸಿಯರೂ ಗಾಬರಿಯಾಗದವರಂತೆ ತಿರುಗಾಡುತ್ತಿದ್ದರು. ಭಾವುಸಾಹೇಬನು ಚಿಂತಾಗ್ರಸ್ತನಾದದ್ದರಿಂದ, ಎಲ್ಲರ ಮೋರೆಗಳು ಅಸವು ಹೀರಿದ್ದವು. ಇದೆಲ್ಲ ಕಣ್ಣಿಗೆ ಬೀಳುತ್ತಿರುವಾಗ, ಮಹದಾಜಿ ಸಿಂದೆಯು ಭಾವುಸಾಹೇಬನಿಗೆ ಬಹು ವಿನಯದಿಂದ ಮುಜುರೆಮಾಡಿ, ದೂರ ಕುಳಿತುಕೊಳ್ಳುತ್ತಿದ್ದನು. ಅಷ್ಟರಲ್ಲಿ ಭಾವುವು ಗೊಗ್ಗರ ದನಿಯಿಂದ—''ಮಹದಾಜೀ, ಹೀಗೆ ಹತ್ತರ ಬರ್ರಿ. ದರ್ಬಾರದ ಮಾನ–ಮರ್ಯಾದೆಗಳು ಈಗ ನನಗೆ ಬೇಕಾಗಿಲ್ಲ, ದರ್ಬಾರದ ಸಂಬಂಧವನ್ನೆಣಿಸದೆ ಮನೆಯವರೆಂದು ತಿಳಿದು ನಾನು ನಿಮ್ಮನ್ನು ಕರೆಸಿರುವೆನು. ಮಿತ್ರತ್ವದ ಸಂಬಂಧದಿಂದ ನಿಮ್ಮ ಆಲೋಚನೆಯು ನನಗೆ ಬೇಕಾಗಿದೆ. ಆದ್ದರಿಂದ ಹೇಳತಕ್ಕದ್ದನ್ನು ಸರಳಮನಸ್ಸಿನಿಂದ ಹೇಳಿರಿ.'' ಎಂದು ನುಡಿಯಲು, ಮಹದಾಜಿಯು ಪಲ್ಲಂಗದ್ದೊಂದು ಕಾಲಿಗೆ ವಿನಯದಿಂದ ಒರಗಿಕೊಂಡು ಪಲ್ಲಂಗದ ಮೇಲೆ ಕುಳಿತು ಎರಡೂ ಕೈಗಳನ್ನು ಜೋಡಿಸಿ—''ಅಪ್ಪಣೆಯಾದಲ್ಲಿ ಶುದ್ಧಾಂತಃಕರಣದಿಂದ ನನ್ನ ವಿಚಾರಗಳನ್ನು ಅರಿಕೆಮಾಡಿಕೊಳ್ಳುವೆನು, ಅಪ್ಪಣೆ ಕೊಡಿಸಬೇಕು'' ಎಂದು ಕೇಳಿಕೊಂಡನು.

ಮಹದಾಜಿಯ ಈ ಮಾತುಗಳನ್ನು ಕೇಳಿ ಭಾವುಸಾಹೇಬನು ವಿಚಾರಮಗ್ನನಾದನು. ತನ್ನ ಸೈನ್ಯದ ದುರವಸ್ಥೆಯ ಅನುಭವವು ಆತನಿಗೆ ಆಗಿತ್ತು, ಒಂದುದಿನ ಆತನ ಡೇರೆಯ ಮುಂದೆ ಸಾವಿರಾರು ಜನ ದಂಡಾಳುಗಳು ನೆರೆದು ನಿಶ್ಶಂಕೆಯಿಂದ—''ಸರಕಾರ, ಇನ್ನು ನಮ್ಮಿಂದ ತಡೆಯುವದಾಗದು. ಉಪವಾಸದಿಂದ ನಮ್ಮ ಪ್ರಾಣಗಳು ಹಾರುತ್ತಲಿವೆ. ಹೀಗೆಯೇ ನಮ್ಮನ್ನು ಎಷ್ಟು ದಿನ ಕೊಳೆಹಾಕುವಿರಿ? ಉಪವಾಸದ ಕಷ್ಟವನ್ನು ತಪ್ಪಿಸಿಕೊಳ್ಳುವದಕ್ಕಾಗಿ ನಮ್ಮಲ್ಲಿಯೆ ಸಾವಿರಾರು ಜನರು ಮೊನ್ನೆ ರಾತ್ರಿ ತಪ್ಪಿಸಿಕೊಂಡು ದಕ್ಷಿಣಕ್ಕೆ ಹೋಗಬೇಕೆಂದು ಹೊರಟರು; ಆದರೆ ಹಾದಿಯಲ್ಲಿ ಅವರನ್ನು ಅಫಗಾಣರು ತುಂಡರಿಸಿ ಚಲ್ಲಿದರು. ಹೀಗೆ ಉಪವಾಸ ನಮ್ಮನ್ನು ಕೊಲ್ಲುವದಕ್ಕಿಂತ, ದುರಾಣಿಯಮೇಲೆ ಬೀಳಲಿಕ್ಕೆ ನಮಗೆ ಅಪ್ಪಣೆ ಕೊಟ್ಟುಬಿಡಿರಿ. ದಿನದಿನಕ್ಕೆ ಉಪವಾಸದಿಂದ ನಮ್ಮ ಕೈಕಾಲ ನಾಡಿಗಳು ಸಾಯಹತ್ತಿವೆ. ಕಾದಿ ರಣದಲ್ಲಿ ಮಡಿಯುವದು ಬೇಕು, ಹೀಗೆ ಉಪವಾಸದಿಂದ ಕೊಳೆಯುತ್ತ ಸಾಯುವದು ಬೇಡ.'' ಎಂದು ದೂರಿಕೊಳ್ಳಲು, ಭಾವುಸಾಹೇಬನಿಗೆ ಅವರ ದೈನ್ಯವನ್ನು ನೋಡಿ ಬಹಳ ದುಃಖವಾಯಿತು; ಆದರೂ ಅದನ್ನು ಆತನು ತೋರಗೊಡದೆ ಸಮಾಧಾನದಿಂದ—''ವೀರರೇ, ಸ್ವಲ್ಪ ಸಮಾಧಾನ ತಾಳಿರಿ. ನೀವು ಹೇಳುವದೆಲ್ಲ ನಿಜವೆಂಬದನ್ನು ನಾನು ಬಲ್ಲೆನು. ಇದೇ ಕಾಲವು ಕಡೆತನಕ ಇರಲಿಕ್ಕಿಲ್ಲ, ಹೀಗೆ ನೀವು ಕೊಳೆಯುತ್ತ ಬೀಳಬೇಕೆಂದು ನನ್ನ ಮನಸ್ಸಿನಲ್ಲಿಯೂ ಇರುವದಿಲ್ಲ, ಆದರೆ ಯಾವದನ್ನಾದರೂ ವಿಚಾರದಿಂದ ಮಾಡಬೇಕಾಗಿದೆ. ಇನ್ನು ಬಹಳ ದಿವಸ ಹೀಗೆ ಕುಳಿತುಕೊಳ್ಳುವಹಾಗಿಲ್ಲ, ಇಂದು ನಿಮಗೆ ಹೊಟ್ಟೆತುಂಬ ಊಟಕ್ಕೆ ಹಾಕಿಸುವೆನು. ಬೇಗನೆ ನಿಮ್ಮ ಮನಸ್ಸಿನಂತೆ ಮಾಡುವೆನು,'' ಎಂದು ಹೇಳಿ, ಅನ್ನ ಹುಳಿಗೆ ಬೇಕಾಗುವಷ್ಟು ಸಾಹಿತ್ಯವನ್ನು ಇಡಿಯ ಸೈನ್ಯಕ್ಕೆ ಕೊಡಿಸಲು ಉಗ್ರಾಣದ ಅಧಿಕಾರಿಗಳಿಗೆ

ಅಪ್ಪಣೆಕೊಟ್ಟು, ನೆರೆದ ಜನರನ್ನು ಸಮಾಧಾನಪಡಿಸಿ ಕಳಿಸಿದ್ದನು. ಬಳಿಕ ಇಬ್ರಾಹಿಮಖಾನ ಗಾರದಿಯೂ, ಬಳವಂತರಾವ ಮೇಹೇಂದಳೆಯೂ ಹೇಳುತ್ತ ಬಂದಂತೆ, ದುರಾಣಿಯಮೇಲೆ ಒಮ್ಮೆಲೆ ಸಾಗಿಹೋಗುವದನ್ನು ನಿಶ್ಚಯಿಸಿ, ನಾಳೆಯೇ ದುರಾಣಿಯ ಮೇಲೆ ಏರಿಹೋಗತಕ್ಕದ್ದೆಂದು ಸೈನ್ಯದಲ್ಲಿ ಪ್ರಸಿದ್ಧಪಡಿಸಿದ್ದನು; ಆದರೆ ಅದರಿಂದ ಆತನಿಗೆ ಎಳ್ಳಷ್ಟು ಸಮಾಧಾನವಾಗಿದ್ದಿಲ್ಲ. ಹೀಗೆ ಏರಿಹೋಗುವಲ್ಲಿ ತನ್ನ ಸರ್ವಸ್ವದ ನಾಶವಾಗುವದೇ ನಿಶ್ಚಯವೆಂದು ಆತನು ತಿಳಿದಿದ್ದನು; ಆದ್ದರಿಂದ, ಇಂಥ ಪ್ರಸಂಗದಲ್ಲಿ ತನ್ನ ಕುಟುಂಬದವರ ಸಂರಕ್ಷಣದ ವ್ಯವಸ್ಥೆಯನ್ನಾದರೂ ಮಾಡಿಡಬೇಕೆಂದು, ತಿಳಿದು, ಅದನ್ನು ಆಲೋಚಿಸುವದಕ್ಕಾಗಿಯೂ, ಕಡೆಯ ಮತ್ತಾವ ಉಪಾಯ ಮಾಡಿದರೆ ತಮ್ಮ ಪರಿಣಾಮ ವಾದೀತೆಂಬದನ್ನು ತಿಳಿದುಕೊಳ್ಳುವದಕ್ಕಾಗಿಯೂ ಆತನು ಈಗ ಮಹದಾಜಿಯನ್ನು ಕರೆಸಿದ್ದನು. ಆದ್ದರಿಂದ ಮಹದಾಜಿಯ ಮುಂದೆ ಮೊದಲು ಯಾವ ಮಾತು ತೆಗೆಯಬೇಕೆಂಬದನ್ನು ಕುರಿತು ಆತನು ಆಲೋಚಿಸಹತ್ತಿದನು. ಕೆಲ ಹೊತ್ತಿನಮೇಲೆ ಆ ತರುಣಪೇಶ್ವೆಯು ಸಿಂದೆಯನ್ನು ಕುರಿತು—

ಭಾವುಸಾಹೇಬ— ಮಹಾದಾಜೀ, ನಿಮ್ಮ ಮನಸ್ಸಿನ ವಿಚಾರಗಳನ್ನು ನನ್ನ ಮುಂದೆ ಈಗ ಸ್ಪಷ್ಟವಾಗಿ ಹೇಳಿರಿ, ಸ್ವಲ್ಪವೂ ಬಚ್ಚಿಡಬೇಡಿರಿ. ಬಚ್ಚಿಟ್ಟರೆ ನನ್ನ ಕೊರಳ ಆಣೆಯಿರುವದು! ನನಗೆ ಮುಖಸ್ತುತಿಯು ಬೇಡ. ಮುಖಸ್ತುತಿಗೆ ಇದು ತಕ್ಕ ಸಮಯವೂ ಅಲ್ಲ. ಪಾಟೀಲಬಾವಾ, ನನ್ನ ಬುದ್ಧಿಗೆ ಏನೂ ತೋಚದಾಗಿದೆ. ಯೋಗ್ಯವಾದ ಆಲೋಚನೆ ಹೇಳುವ ಮನುಷ್ಯರು ನನಗೆ ಬೇಕಾಗಿದ್ದಾರೆ ವಿಶ್ವಾಸರಾಯರು ಹುಡುಗರು, ಹುಡುಗತನದ ವಿಚಾರವು ಈಗ ಕೆಲಸದ್ದಲ್ಲ. ಸಮಶೇರಬಹದ್ದರರು ಸಮಶೇರದ ಕೆಲಸ ಮಾಡತಕ್ಕವರಲ್ಲದೆ, ರಾಜಕಾರಣದಲ್ಲಿ ಅವರ ಬುದ್ಧಿಯು ಹರಿಯುವದಿಲ್ಲ. ಇಬ್ರಾಹಿಮಖಾನ ಗಾರದಿಯವರು ಯಾವಾಗಲೂ ತಮ್ಮ ಮದ್ದು ಗುಂಡುಗಳ ವಿಚಾರದಲ್ಲಿಯೇ ಮಗ್ನರಾಗಿರುವರು. ಅವರ ಆಲೋಚನೆಯೂ ಕೆಲಸಕ್ಕೆ ಬಾರದು! ಬಳವಂತರಾವ ಮೇಹೇಂದಳೆಯವರು ಮಾತ್ರ ಅನುಭವಿಕ ಮುತ್ಸದ್ದಿಗಳೂ, ಯುದ್ಧದಲ್ಲಿ ಒಳಿತಾಗಿ ನುರುಪಡಿ ಹೊಂದಿದ ವೀರರೂ ಇದ್ದರು; ಆದರೆ ದುರ್ದೈವದಿಂದ ನಿನ್ನಿನ ಯುದ್ಧದಲ್ಲಿ ಅವರು ಮರಣಹೊಂದಿದರು! ದಮಾಜಿಗಾಯಕವಾಡರವರು ಸ್ವಹಿತದಕ್ಷರು, ತಮ್ಮದೊಂದು ಹಿತವು ಸಾಧಿಸಿದರಾಯಿತು. ಯಾರು ಹಾಳಾದರೂ ಅವರು ನೋಡುವಹಾಗಿಲ್ಲ. ಇದ್ದುಬಿದ್ದು, ನಮ್ಮ ನಂಬಿಗೆಯು ಯಶವಂತರಾವಪವಾರರವರ ಮೇಲೆ; ಆದರೆ ಅವರು ನಮಗಿಂತಲೂ ಕೈಕಾಲುಗೆಟ್ಟಿದ್ದಾರೆ. ಹೋಳಕರರ ಹೊಟ್ಟೆಯೊಳಗಿನ ಮಾತು ನಮಗೆ ತಿಳಿಯಲೊಲ್ಲದು. ಇವರ ಹೊರತು ಬೇರೆ ಎಷ್ಟೋ ಜನ ಬ್ರಾಹ್ಮಣ ಪ್ರಭು ಮಹಾರಾಷ್ಟ್ರ ಜಾತಿಯ ಸರದಾರರು ಇರುವರು; ಆದರೆ ಅವರಲ್ಲಿ ಮೊದಲಿನ ಉತ್ಸಾಹವು ಈಗ ಉಳಿದಿರುವದಿಲ್ಲ. ಹೀಗೆ ನಮ್ಮ ಪಕ್ಷವು ಅತ್ಯಂತ ದುರ್ಬಲವೂ, ಉತ್ಸಾಹ ಹೀನವೂ, ಒಕ್ಕಟ್ಟಿಲ್ಲದ್ದೂ ಆಗಿರುವದು; ಆದ್ದರಿಂದ ಮುಂದೆ ಏನು ಮಾಡಬೇಕೆಂಬದನ್ನು ತಿಳಿದುಕೊಳ್ಳುವದಕ್ಕಾಗಿಯೇ ಈಗ ನಾನು ನಿಮ್ಮನ್ನು ಕರೆಸಿಕೊಂಡಿರುವೆನು. ಸುಜಾ ಉದ್ದೌಲನು ನಮ್ಮನ್ನು ಮೋಸಗೊಳಿಸುತ್ತಿರುವಂತೆ

ತೋರುತ್ತದೆ; ಆತನ ನಂಬಿಗೆ ಹಿಡಿಯಲಿಕ್ಕೆ ಬರುವದಿಲ್ಲೆಂದು ನಾನು ತಿಳಿದಿರುವೆನು; ಆದರೆ ಆತನ ಮಿತ್ರತ್ವದ ಬಗ್ಗೆ ನಿಮ್ಮ ವಿಚಾರವೇನಿರುವದು?

ಮಹದಾಜಿ—(ಸ್ವಲ್ಪ ಹೊತ್ತು ಸುಮ್ಮನಿದ್ದು) ತಮ್ಮ ವಿಷಯವಾಗಿ ಸುಜಾ ಉದ್ದೌಲನ ಮನಸ್ಸು ಶುದ್ಧವಿದ್ದಂತೆ ನನಗೆ ತೋರುತ್ತದೆ. ಆತನ ಮನಸ್ಸು ನಮ್ಮ ಕಡೆಗೆ ಹರಿಯುತ್ತಿದ್ದಷ್ಟು ಅಬದಾಲಿಯ ಕಡೆಗೆ ಹರಿಯುತ್ತಿರುವದಿಲ್ಲೆಂಬದು ನಿಶ್ಚಯವು; ಆದರೆ, ಆ ಮನುಷ್ಯನು ತನ್ನ ಹಾನಿ ಮಾಡಿಕೊಂಡು ಮಂದಿಯ ಕೆಲಸ ಮಾಡತಕ್ಕವನು ಮಾತ್ರ ಅಲ್ಲವು. ತನ್ನ ಹಿತವಾಗಿ ನಮ್ಮ ಹಿತಮಾಡಲಿಕ್ಕೆ ಬರುವಹಾಗಿದ್ದ ಪಕ್ಷದಲ್ಲಿ ಆತನು ಅಷ್ಟರಮಟ್ಟಿಗೆ ಮಾಡಬಹುದು. ತಾವು ಆತನಿಗೆ ದಿಲ್ಲಿಯ ವಜೀರನ ಅಧಿಕಾರ ಕೊಡುವೆವೆಂದು ಹೇಳಿದ್ದರ ಆಶೆ ಮಾಡಿ ಕೊಂಡು ಆತನು ನಿಮ್ಮವನಾಗಿ ಇರುವನು; ಆದರೂ ಈ ಪ್ರಸಂಗದಲ್ಲಿ ಆತನಿಂದ ನಮಗೆ ಹೆಚ್ಚು ಪ್ರಯೋಜನ ವಾದೀತೆಂದು ನಾನು ಹೇಳಲಾರೆನು.

ಭಾವುಸಾಹೇಬ—ಅದೇಕೆ? ಹಾಗೆ ನೀವು ಹೇಳುವದಕ್ಕೆ ಸ್ಪಷ್ಟ ಕಾರಣವೇನಾದರೂ ಇದ್ದರೆ ಅದನ್ನು ನನ್ನ ಮುಂದೆ ಬಚ್ಚಿಡದೆ ಹೇಳಿರಿ.

ಮಹದಾಜಿ—ಸರಕಾರ, ಈವರೆಗೆ ನಾವು ಮುಸಲ್ಮಾನರೊಡನೆ ನಡೆದುಕೊಂಡ ರೀತಿಯನ್ನೂ, ನಾವು ದಿಲ್ಲಿಯಲ್ಲಿ ನಡಿಸಿದ ಕೃತ್ಯಗಳನ್ನೂ ಮನಸ್ಸಿನಲ್ಲಿ ತಂದರೆ, ಮುಸಲ್ಮಾನರು ತಮ್ಮ ಜಾತಿಯವರನ್ನು ಬಿಟ್ಟು ನಮ್ಮ ಕಡೆಗೆ ಬರುವಧೈರ್ಯಮಾಡಲಾರರೆಂದು ತಮಗೂ ತೋರಬಹುದು. ಸುಜಾಉದ್ದೌಲನು ನಮ್ಮ ಕಡೆಗೆ ಬಂದರೂ ಅವನ ಸೈನ್ಯದವರು ಅವನನ್ನು ಅನುಸರಿಸುವರೋ ಇಲ್ಲವೋ ಹೇಳಲಾಗುವದಿಲ್ಲ; ಅಂದಬಳಿಕ ಸೈನ್ಯವಿಲ್ಲದೆ ಒಬ್ಬ ಸಜಾ ನನ್ನು ಕಟ್ಟಿಕೊಂಡು ನಾವು ಮಾಡುವದೇನು? ನಮ್ಮಮೇಲೆ ಯಾವ ಮುಸಲ್ಮಾನನ ನಂಬಿಗೆಯೂ ಇರುವದಿಲ್ಲ. ಹಿಂದುಸ್ಥಾನದಲ್ಲೆಲ್ಲ ಮಸೀದೆಗಳಲ್ಲಿ ಪ್ರಾರ್ಥನೆಗಾಗಿ ಕರೆಯುವ ಶಬ್ದಗಳನ್ನು ನಾವು ಉಚ್ಚರಿಸಗೊಡುವದಿಲ್ಲೆಂದು ಎಲ್ಲ ಕಡೆಗೆ ತಾವು ಪ್ರಸಿದ್ಧಪಡಿಸಿರುವಿರಿ; ಬಾದಶಾಹಿಯ ಸಿಂಹಾಸನದಮೇಲೆ ಶ್ರೀಮಂತ ವಿಶ್ವಾಸರಾಯರವರನ್ನು ಕುಳ್ಳಿರಿಸಿದಿರಿ; ದಿಲ್ಲಿಯ ಬಾದಶಾಹಿಯ ವಾಡೆಯನ್ನು ಸುಲಿದು–ಸೂರೆಮಾಡಿದಿರಿ. ಅಂದಬಳಿಕ ಸರಕಾರ, ನಮ್ಮನ್ನು ಯಾವ ಮುಸಲ್ಮಾನನು ನಂಬಬಹುದು? ನೀವು ಸುಜಾಉದ್ದೌಲನಿಗೆ ದಿಲ್ಲಿಯ ವಜೀರಿಯ ಅಧಿಕಾರವನ್ನು ಕೊಡುತ್ತೇವೆಂದು ಹೇಳಿರುವಿರಿ; ಆದರೆ ನಾಳೆ ಪ್ರಸಂಗವಶಾತ್ ಯುದ್ಧದಲ್ಲಿ ನಮಗೆ ಜಯವಾದರೆ, ನೀವು ವಚನಭ್ರಷ್ಟರಾಗಿ ದಿಲ್ಲಿಯ ವಜೀರಿಯ ಅಧಿಕಾರ ವನ್ನು ಒಬ್ಬ ಹಿಂದುವಿಗೆ ಕೊಡ ಬಹುದೆಂದು. ಸುಜಾನು ಯಾಕೆ ಶಂಕಿಸಬಾರದು? ಈಗ ಸುಮ್ಮನೆ ಆಶೆ ತೋರಿಸುವದಕ್ಕಾಗಿ ವಚನಕೊಟ್ಟಿರುವಿರೆಂದು ಆತನು ತಿಳಿದುಕೊಳ್ಳುವ ಸಂಭವ ವಿಲ್ಲವೆ? ನಮ್ಮ ಕೃತಿಯೇ ಇದಕ್ಕೆ ಸಾಕ್ಷಿಯು. ಸರಕಾರ, ಸ್ಪಷ್ಟಮಾತಾಡುವದಕ್ಕಾಗಿ ಕ್ಷಮೆಯಿರಬೇಕು. ಹಾಗೆ ಸ್ಪಷ್ಟವಾಗಿ ಹೇಳದಿದ್ದರೆ ಮುಂದಿನ ಆಲೋಚನೆಗೆ ತೊಂದರೆ ಬರುವದು; ಆದ್ದರಿಂದ, ಸುಜಾಉದ್ದೌಲನು ಇಂಥ ಕಠಿಣಪ್ರಸಂಗದಲ್ಲಿ ಅಬದಾಲಿಗೆ ವಿರೋಧಿಯಾಗಿ

ನಮಗೆ ಸಹಾಯಮಾಡುವನೆಂದು ನಾನಂತೂ ಹೇಳಲಾರೆನು. ನಮ್ಮ ಈ ವಿಪನ್ನ ಸ್ಥಿತಿಯಲ್ಲಿಯೂ ಆತನು ಯಾವ ದೊಡ್ಡ ಆಶೆಯಿಂದ ನಮಗೆ ಸಹಾಯಮಾಡಬೇಕು?

ಭಾವುಸಾಹೇಬ—(ಪಶ್ಚಾತ್ತಾಪದಿಂದ) ಮಹದಾಜೀ, ನಿಮ್ಮ ಮಾತು ಒಪ್ಪತಕ್ಕದ್ದೇಸರಿ; ಆದರೆ ಹಲವು ಪ್ರಸಂಗಗಳಲ್ಲಿ ನಾನೂ, ಸುಜಾನೂ ವಚನಬದ್ಧರಾಗಿರುವದರಿಂದ, ಅಂಥ ಕಠಿಣ ಪ್ರಸಂಗವೇ ಒದಗಿದರೆ ನಮ್ಮ ಕುಟುಂಬದವರ ಸಂರಕ್ಷಣವನ್ನೂ ಸುಜಾನು ಮಾಡಲಿಕ್ಕಿಲ್ಲವೆ? ಅಬದಾಲಿಯು ಸುಜಾನ ಅಷ್ಟು ಮಾತನ್ನೂ ನಡಿಸಲಿಕ್ಕಿಲ್ಲವೆ? ನಮ್ಮ ಗಂಡಸರದು ಹ್ಯಾಗಾದರೂ ಆಗಲಿ, ಪಾಪ! (ಪಡದೆಯಕಡೆಗೆ ಬೆರಳುಮಾಡಿ) ಈ ಅಬಲಾಜನರ ಸುರಕ್ಷಿತತೆಯ ವ್ಯವಸ್ಥೆಯನ್ನೇನಾದರೂ ಮಾಡುವದು ಅವಶ್ಯವಾಗಿದೆ.

ಮಹದಾಜೀ ಕಥಾಚಿತ್ ಅಷ್ಟು ಸಹಾಯವನ್ನು ಸುಜಾನು ಮಾಡಬಹುದು; ಸುಜಾನು ಒಬ್ಬನೇ ಏಕೆ, ನನ್ನ ಮಿತ್ರನಾದ ಹಾಫೀಜರಹಮ್ಮತಖಾನನೂ, ಹೋಳಕರನ ಮಿತ್ರನಾದ ನಜೀಬ ಉದ್ದೌಲನೂ, ಪ್ರಸಂಗವರಿತು ಸಾಧಿಸಿದಷ್ಟು ನಮ್ಮ ಹಿತಮಾಡಬಹುದು; ಆದರೆ ಅವರು ಸಂಪೂರ್ಣವಾಗಿ ಶತ್ರುಭಾವವನ್ನು ಬಿಡುವರೆಂದುಮಾತ್ರ ಹೇಳಲಾಗುವದಿಲ್ಲ. ಈಶ್ವರ ಪ್ರೇರಣೆ ಯಾದರೆ ಅವರಿಂದ ಅಲ್ಪ ಸ್ವಲ್ಪ ಸಹಾಯವಾಗಬಹುದು.

ಮಹಾದಾಜಿಯ ಈ ಮಾತುಗಳನ್ನು ಕೇಳಿ ಭಾವುಸಾಹೇಬನು ಚಿಂತಾಕ್ರಾಂತನಾಗಿ ಕುಳಿತುಕೊಂಡನು. ಸ್ವಂತದ ವಿಷಯವಾಗಿ ಆತನಿಗೆ ಚಿಂತೆಯಿದ್ದಿಲ್ಲ, ತನ್ನ ಕುಟುಂಬದ ಜನರ ವಿಷಯವಾಗಿ ಆತನು ಚಿಂತಿಸುತ್ತಿದ್ದನು. ಇದನ್ನೆಲ್ಲ ಪರದೆಯ ಮರೆಗೆ ಕುಳಿತುಕೇಳುತ್ತಿದ್ದ, ಆತನ ಹೆಂಡತಿಯಾದ ಪಾರ್ವತೀಬಾಯಿಯು ಹೊರಗೆ ಬಂದು ಪತಿಯಚರಣಗಳ ಮೇಲೆ ಮಸ್ತಕ ವಿಟ್ಟು, ಚರಣಗಳನ್ನು ಗಟ್ಟಿಯಾಗಿ ಹಿಡಕೊಂಡು—''ಮಹಾರಾಜ, ಇದಕ್ಕೇಕೆ ಇಷ್ಟೊಂದು ಚಿಂತೆ? ಹೆಂಗಸರು, ಹುಡುಗರ ಚಿಂತೆಯಿದ್ದರೆ, ರಜಪೂತಜನರಂತೆ ಜೋಹಾರ ಮಾಡಿರಿ. ನಿಮ್ಮ ಕೈಯಿಂದ ನಮ್ಮನ್ನು ಸಂಹರಿಸಿ ಕೇಶರಿಯ ಪೋಷಾಕಿನಿಂದ ಸಮರಭೂಮಿಗೆ ಹೊರಡಬೇಕು. ಇಂಥ ಪ್ರಸಂಗದಲ್ಲಿ ರಜಪೂತ ಸ್ತ್ರೀಯರು ಪ್ರಾಣವನ್ನರ್ಪಿಸಲಿಕ್ಕೆ ಸಿದ್ಧರಾಗುವರು. ಅದರಂತೆ ಮಾಡಲಿಕ್ಕೆ ದಕ್ಷಿಣದ ಹೆಂಗಸರು ನಾವು ಹಿಂಜರಿಯೋಣವೇನು? ಅವರಿಗೆ ಮಾತ್ರ ಮಾನ– ಮರ್ಯಾದೆ ಗಳಿರುವವು, ನಮಗಿರುವದಿಲ್ಲವೆ? ನಾವೂ ಕುಲೀನರಾದ ತಾಯಿ–ತಂದೆಗಳ ಹೊಟ್ಟೆಯಲ್ಲಿ ಹುಟ್ಟಿರುವೆವು!'' ಎಂದು ಹೇಳಿದಳು. ಜೋಹಾರವೆಂಬ ಶಬ್ದವನ್ನು ಕೇಳಿದಕೂಡಲೆ ಸಿಂದೆಯ ಮೈಮೇಲಿನ ಕೂದಲುಗಳು ನೆಟ್ಟಗಾದವು. ಆತನಿಗೆ ತನ್ನ ಜನಾನಖಾನೆಯ ನೆನಪಾಯಿತು. ಜೋಹಾರದಲ್ಲಿ ತಮ್ಮ ಹೆಂಗಸರ ಸಂಹಾರವೂ ಆಗುವದೆಂದು ತಿಳಿದು ಆತನ ಮೋರೆ ಹುಚ್ಚಿಟ್ಟು, ಆತನ ಮುಖದಿಂದ ಶಬ್ದಗಳು ಹೊರಡದಾದವು. ಆಗ ಭಾವೂಸಾಹೇಬನು ಪಾರ್ವತೀಬಾಯಿ ಯನ್ನು ಎಬ್ಬಿಸಿ—''ಇಂಥ ಘೋರಕೃತಿಯು ನಮ್ಮಿಂದ ಸರ್ವಥಾ ಆಗಲಾರದು. ನಮ್ಮ ದಕ್ಷಿಣದ ಯಾವ ಜಾತಿಯವರಲ್ಲಿಯೂ ಈ ಜೋಹಾರದ ಸಾಂಪ್ರದಾಯ ವಿರುವದಿಲ್ಲ. ಈ ಕಾಲದಲ್ಲಿ ದೇವರ ಅವಕೃಪೆಯಿಂದ ನಮಗೆ ಸೋಲು ಬಂದರೆ, ನಮ್ಮ ಪಶ್ಚಾತ್ ನಮ್ಮ ಹೆಂಡರು–ಮಕ್ಕಳ ಗತಿಯು ಅವರ ದೈವದಲ್ಲಿದ್ದಂತಾ

ಗುವದು; ಆದರೆ ನಾವು ಬದುಕಿ ಇರುವವರೆಗೆ ಸ್ತ್ರೀಹತ್ಯೆ–ಶಿಶುಹತ್ಯೆಗಳನ್ನು ಮಾಡುವದಿಲ್ಲ ಬೇರೆಯವರಿಗೂ ಮಾಡಗೊಡವದಿಲ್ಲ ಎಂದು ಸ್ಪಷ್ಟವಾಗಿ ಹೇಳಿದನು.

ಪತಿಯು ತನ್ನ ಮಾತಿಗೆ ಒಪ್ಪಿಕೊಳ್ಳದ್ದಕ್ಕಾಗಿ ಪಾರ್ವತೀಬಾಯಿಯು ಅಸಮಾಧಾನ ಪಟ್ಟು ಕಣ್ಣೀರು ಸುರಿಸುತ್ತ ಹೊರಟುಹೋದಳು. ಆಗ ಭಾವುಸಾಹೇಬನು ಮಹದಾಜಿಯನ್ನು ಕುರಿತು—''ಸಿಂದೇ, ಕೇಳಿದಿರಾ ಈ ಸಾಹಸದ ಮಾತನ್ನು! ಆದರೆ ಹಾಗೆ ಮಾಡುವದು ಉಚಿತವಲ್ಲ, ಇರಲಿ, ಇನ್ನೊಂದು ಮಾತು ನಿಮಗೆ ಹೇಳಬೇಕಾಗಿದೆ ಸುಜಾಉದ್ದೌಲನ ಆಶೆಯು ನನಗೆ ಬಿಡಲೊಲ್ಲದು; ಆದ್ದರಿಂದ ಕಟ್ಟಕಡೆಯ ಪತ್ರವನ್ನು ಆತನಿಗೆ ಕಳಿಸಿಕೊಡ ಬೇಕೆನ್ನುತ್ತೇನೆ; ನಿಮ್ಮ ನಂಬಿಗೆಯ ಮನುಷ್ಯನನ್ನು ಕಳಿಸಿ ಇಷ್ಟು ಕೆಲಸಮಾಡಿಸಬೇಕು. ಈ ಕ್ಷಣದಲ್ಲಿ ಈ ಕಾರ್ಯವಾಗಬೇಕು. ತಡವಾದರೆ ಪ್ರಯೋಜನವಾಗದು. ನಾಳೆ ಬೆಳಗಾಗುವದ ರೊಳಗಾಗಿ ಪತ್ರದ ಉತ್ತರವು ನನ್ನ ಕೈಗೆ ಬರಬೇಕು. ನೋಡಿರಿ, ಯಾರನ್ನು ಕಳಿಸಬೇಕೆಂಬ ದನ್ನು ವಿಚಾರಮಾಡಿರಿ. ಇದು ಕಡೆಯ ಪ್ರಯತ್ನವು. ಸುಜಾಉದ್ದೌಲನ ದಿವಾಣನಾದ ಕಾಶೀ ರಾಜನು ಒಳ್ಳೇ ಧೂರ್ತನಿರುವನು. ಸುಜಾಉದ್ದೌಲನ ಕಡೆಗೆ ನಾವು ಕಳಿಸಿರುವ ಕಾಣಿಕೆಗಳನ್ನು ಆ ಧೂರ್ತ ಬ್ರಾಹ್ಮಣನು ಆಗಾಗ್ಗೆ ಮುಟ್ಟಿಸಿರುವನೋ ಇಲ್ಲವೋ ಯಾರಿಗೆ ಗೊತ್ತು? ಆತನು ನಮ್ಮ ಪತ್ರಗಳನ್ನು ಓದಿ ತೋರಿಸುತ್ತಿರಲಿಕ್ಕಿಲ್ಲ. ಓದಿತೋರಿಸಿದರೂ ಅದನ್ನು ಇದ್ದಕ್ಕಿದ್ದಹಾಗೆ ಓದಿಹೇಳುತ್ತಿರಲಿಕ್ಕಿಲ್ಲ! ಮಹದಾಜೀ, ಅತ್ತ ಏನು ಆಗುತ್ತಿರಬಹುದೆಂಬದನ್ನು ಯಾರು ಹೇಳಬೇಕು? ಈ ಪ್ರಸಂಗದಲ್ಲಿ ಅತ್ಯಂತ ಚತುರನಾದವನು ಸುಜಾನಕಡೆಗೆ ಹೋಗಬೇಕಾ ಗಿರುವದು. ಆ ಹೋಗುವವನು ನಂಬಿಗೆಯವನಿರಬೇಕು; ಅತ್ತ ಕಡೆಯವರಿಗೆ ಅಪರಿಚಿತನಾ ಗಿರಬೇಕು; ಅಂದರೆ ಕಾರ್ಯವಾಗುವದು. ಏನೇ ಮಾಡಿರಿ, ಇಷ್ಟು ಕಾರ್ಯವನ್ನು ಈಗಲೇ ನೀವು ಮಾಡಬೇಕು!'' ಎಂದು ಹೇಳಿದನು. ಆಗ ಮಹದಾಜಿಯು ನಾನೇ ಸ್ವತಃ ಹೋಗಿ ಬರುತ್ತೇನೆನ್ನಲು, ಭಾವು ಸಾಹೇಬನು ಅದಕ್ಕೆ ಒಪ್ಪಲಿಲ್ಲ. ನಾಳಿನ ಯುದ್ಧದಲ್ಲಿ ನೀವು ಇರಲೇ ಬೇಕಾದ್ದರಿಂದ, ಬೇರೆ ಯಾರನ್ನಾದರೂ ಈ ಕಾರ್ಯಕ್ಕೆ ನಿಯಮಿಸಬೇಕೆಂದು ಹೇಳಿ, ಸ್ವತಃ ಸುಜಾನಿಗೆ ಪತ್ರವನ್ನು ಬರೆದು ತನ್ನ ಮೊಹರುಮಾಡಿ ಮಹದಾಜಿಯ ಕೈಯಲ್ಲಿ ಕೊಟ್ಟನು.

ಸ್ವಾಮಿನಿಷ್ಠನಾದ ಮಹದಾಜಿಯು ತಿರುಗಿ ಮಾತಾಡಲಿಲ್ಲ; ಆಗ ಮಾತಾಡಿ ಹೊತ್ತು ಕಳೆಯುವಹಾಗೂ ಇದ್ದಿಲ್ಲ; ನಾಳೆ ಬೆಳಗಾಗುತ್ತಲೆ ಅವರು ದುರಾಣಿಯ ಮೇಲೆ ಸಾಗಿಹೋಗ ಬೇಕಾಗಿತ್ತು; ಆದ್ದರಿಂದ ಮಹದಾಜಿಯು ಶ್ರೀಮಂತರ ಮಾತಿಗೆ ಒಪ್ಪಿಕೊಂಡು ಕಾಗದ ತಕ್ಕೊಂಡು ಮುಜರೆಮಾಡಿ ಹೊರಟುಹೋದನು. ಈ ಕೆಲಸಕ್ಕಾಗಿ ಯಾರನ್ನು ಕಳಿಸಬೇಕೆಂಬ ಬಗ್ಗೆ ಆತನು ಆಲೋಚಿಸತೊಡಗಿದನು; ಆದರೆ ಯೋಗ್ಯಮನುಷ್ಯರ ಗೊತ್ತು ಹತ್ತಲೊಲ್ಲದು. ಆತನು ಆಲೋಚಿಸುತ್ತಲೇ ಕುದುರೆಯನ್ನು ಇಳಿದು ಡೇರೆಯನ್ನು ಹೊಕ್ಕನು. ಅಲ್ಲಿ ಉಮೆಯು ಆತನ ಕಣ್ಣಿಗೆ ಬಿದ್ದಳು ಆಕೆಯ ಸ್ವಾಭಾವಿಕವಾದ ಅಲೌಕಿಕ ತೇಜಸ್ಸನ್ನೂ, ಕರ್ತೃತ್ವಶಕ್ತಿಯನ್ನೂ ಮನಸ್ಸಿನಲ್ಲಿ ತಂದು, ಆಕೆಯನ್ನೇ ಪುರುಷವೇಷದಿಂದ ಸುಜಾನಬಳಿಗೆ ಕಳಿಸಬೇಕೆಂದು ಆತನು ಮಾಡಿದನು. ''ಮುಣುಗುವವನಿಗೆ ಹುಲ್ಲುಕಡ್ಡಿಯೂ ಆಧಾರವಾಗಿ ತೋರುತ್ತದೆಂ''ಬ ಮಾತು

ಸುಳ್ಳಲ್ಲ. ಉಮೆಯು ತರುಣಸ್ತ್ರೀಯಾದರೂ, ಆಕೆಯು ಕಾರ್ಯವ ಸಾಧಿಸುವಳೆಂದು ಮಹದಾಜಿಯು ತಿಳಿದನು. ಕೂಡಲೆ ಆತನು ಉಮೆಯನ್ನು ಒತ್ತಟ್ಟಿಗೆ ಕರೆದು ಈ ಪ್ರಸಕ್ತಿಯನ್ನು ತೆಗೆಯಲು, ಆಕೆಯು ಸಂತೋಷದಿಂದ ಒಪ್ಪಿಕೊಂಡಳು. ಆಕೆಯ ಸಂಗಡ ತನ್ನ ನಂಬಿಗೆಯ ಜಾಣ ವೃದ್ಧ ಸರದಾರನಾದ ಮಹಿಪತರಾಯನನ್ನು ಕಳಿಸಬೇಕೆಂದು ನಿಶ್ಚಯಿಸಿ, ಸಿಂದೆಯು ಪ್ರಯಾಣದ ಸಿದ್ಧತೆಯಲ್ಲಿ ತೊಡಗಿದನು. ಇಪ್ಪತ್ತೈದು ಜನ ಶೂರ ಮರಾಟಾ ರಾವುತರೊಡನೆ ಮಹಿಪತರಾಯನು ಉಮೆಯ ರಕ್ಷಕನಾಗಿ ಹೋಗಬೇಕೆಂದು ಗೊತ್ತಾಯಿತು. ಉಮೆಯು ಬೈರಾಗಿಣಿಯು ಹೋಗಿ ತರುಣಸರದಾರನಾದಳು. ಆಕೆಯ ಜನ್ಮಕಾಲದ ಮಹರ್ದಶೆಯೇ ಅಂತಹದು. ಕೆಸರಿನಲ್ಲಿ ಕಮಲಗಳು ಹುಟ್ಟುವಂತೆ, ಕಲ್ಲಿದ್ದಲಿಯಲ್ಲಿ ವಜ್ರವು ಹೊರಡುವಂತೆ ಆಕೆಯು ಬೈರಾಗಿಗಳ ಹೊಟ್ಟೆಯಲ್ಲಿ ಮಹಾತೇಜಸ್ವಿಯಾಗಿ ಹುಟ್ಟಿದ್ದಳು. ಆಕೆಯ ಆಗಿನ ರೂಪವನ್ನೂ ಉತ್ಸಾಹವನ್ನೂ, ವಿಲಕ್ಷಣಧೈರ್ಯವನ್ನೂ ನೋಡಿ ಮಹದಾಜಿಯು ಕೌತುಕಪಟ್ಟನು. ಪಾಪ! ಇಷ್ಟು ಕಷ್ಟಪಟ್ಟು ತನ್ನಬಳಿಗೆ ಬಂದಿದ್ದವಳನ್ನು ಮತ್ತೆ ಕಷ್ಟಕ್ಕೆ ಗುರಿ ಮಾಡಿದದಕ್ಕಾಗಿ ಆತನಿಗೆ ಪಶ್ಚಾತ್ತಾಪವಾಯಿತು. ಆತನು ಮನಸ್ಸಿನಲ್ಲಿ ಮರುಗಿ ಆಕೆಯನ್ನು ಕುರಿತು—''ಉಮೆ, ನಿನ್ನ ಸಾಹಸಕ್ಕಾಗಿ ನಾನು ಮೆಚ್ಚಿದೆನು, ನನ್ನ ಮೇಲಿನ ನಿನ್ನ ನಿಷ್ಠೆಯು ಬಣ್ಣಿಸತಕ್ಕಂತಹದೇ ಸರಿ! ನೀನು ಇನ್ನು ಶತ್ರುಗಳ ಪಾಳಯಕ್ಕೆ ಹೋಗುವ ಕಾರಣವಿಲ್ಲ, ನಿನ್ನನ್ನು ಅಂಥ ಸಾಹಸದ ಕೆಲಸಕ್ಕೆ ಗುರಿಮಾಡುವದು ನನ್ನ ಧರ್ಮವೂ ಅಲ್ಲ, ಆ ಕೆಲಸವನ್ನು ಮಹಿಪತ ರಾಯರು ಮಾಡುವರು.'' ಎಂದು ಹೇಳಲು, ಉಮೆಯು—''ಮಹಾರಾಜ, ನಾನು ದುರಾಣಿ ಯಶಹನ ಛಾವಣಿಯನ್ನೂ ನೋಡಿದ್ದೇನೆ, ನಿಮ್ಮ ಛಾವಣಿಯನ್ನೂ ನೋಡಿದ್ದೇನೆ; ಉಭಯ ಪಕ್ಷದಲ್ಲಿ ನಡೆದ ಕಾಳಗದ ಪರಿಣಾಮವೂ ನನಗೆ ಗೊತ್ತಿದೆ. ಇದಲ್ಲದೆ ಈಗಿನ ನಿಮ್ಮ ಛಾವಣಿಯ ಭಯಂಕರ ಸ್ಥಿತಿಯು ನನ್ನ ಕಣ್ಣಿಗೆ ಕಟ್ಟಿರುತ್ತದೆ. ಅಂದಬಳಿಕ ಈಗ ನಾನು ಸಂಕಟಕ್ಕೆ ಹೆದರಿ ಸುಜಾಉದ್ದೌಲನ ಕಡೆಗೆ ಹೋಗದೆಯಿರುವದು ಸ್ವಜನಾಭಿಮಾನಕ್ಕೆ ಒಪ್ಪಬಹುದೇ? ನಾನು ಹೆಂಗಸಾದರೇನಾಯಿತು? ನನ್ನಿಂದ ಹೆಚ್ಚಿನಕೆಲಸವೇನೂ ಆಗದಿದ್ದರೂ, ಒಬ್ಬರಿಗಿಂತ ಇಬ್ಬರು ಲೇಸೆನ್ನುವಂತೆ ಮಹಿಪತರಾಯರ ಸಂಗಡಲಾದರೂ ನಾನು ಹೋಗುವೆನು. ನನ್ನ ದೇಶ–ಬಾಂಧವರು ಈ ಪರಿಸಂಕಟಕ್ಕೆ ಗುರಿಯಾಗಿರಲು, ನಾನು ಮಾತ್ರ ಸಂಕಟಕ್ಕೆ ಹೆದರ ಬಹುದೆಯೆ? ಈಗ ನಿಯಮಿಸಿದ ಕೆಲಸವನ್ನು ನಾನು ಮಾಡಿಕೊಂಡೇ ಬರುವೆನು, ಅಪ್ಪಣೆಯಾಗ ಬೇಕು,'' ಎಂದು ಹೇಳಿದಳು. ಅದಕ್ಕೆ ಮಹದಾಜಿಯು ತಿರುಗಿ ಮಾತಾಡದೆ ಆಕೆಯನ್ನು ಸುಜಾ ಉದ್ದೌಲನ ಛಾವಣಿಗೆ ಕಳಿಸಿಕೊಟ್ಟನು. ಇತ್ತ ಭಾವುಸಾಹೇಬನು ಹೋಳಕರನ ಮನಸ್ಸನ್ನು ಒಲಿಸಿಕೊಳ್ಳಬೇಕೆಂದು ಯೋಜಿಸಿ, ಆ ವೃದ್ಧವೀರನನ್ನು ಕರೆಯುವದಕ್ಕಾಗಿ ಒಬ್ಬ ಸೇವಕನನ್ನು ಕಳಿಸಿದನು.

# ಸ್ವಾರ್ಥಸಾಧನ

ಮಲ್ಹಾರರಾಯನನ್ನು ಕರೆಸಿಕೊಂಡು ಭಾವುಸಾಹೇಬನು ಆಲೋಚಿಸಿದ್ದನ್ನು ತಿಳಿಸುವ ಮೊದಲು, ಮಲ್ಹಾರರಾಯನ ಒಲವು ಯಾವ ಬಗೆಯದಿತ್ತೆಂಬದನ್ನು ತಿಳಿಸುವದು ಅವಶ್ಯ ವಾಗಿದೆ. ಮಲ್ಹಾರರಾಯನು ಮೊದಲನೆಯ ಬಾಜೀರಾಯನ ಕಾಲದಲ್ಲಿ ಪ್ರಸಿದ್ಧಿಗೆ ಬಂದ ಸರದಾರನು. ಬಾಜೀರಾಯನ ಮೇಲೆಯೂ, ಆತನ ಮಗನಾದ ನಾನಾಸಾಹೇಬನ ಮೇಲೆಯೂ ಮಲ್ಹಾರ ರಾಯನ ಭಕ್ತಿ ಬಹಳ. ಭಾವುಸಾಹೇಬನ ತಂದೆಯಾದ ಚಿಮಣಾಜಿ ಅಪ್ಪಾನ ಮೇಲೆಯೂ ಆತನ ವಿಶ್ವಾಸ ಹೆಚ್ಚು. ಆದರೆ ಭಾವುಸಾಹೇಬನ ಗರ್ವಿಷ್ಠಸ್ವಭಾವವೂ, ದುರುಳ ತನವೂ ಮಲ್ಹಾರರಾಯನಿಗೆ ಸೇರುತ್ತಿದ್ದಿಲ್ಲ. ಭಾವುಸಾಹೇಬನು ಉತ್ತರ ಹಿಂದುಸ್ಥಾನಕ್ಕೆ ಬಂದಾಗಿ ನಿಂದ ನಡಿಸಿದ ಅನಾಚಾರಗಳೂ ಮಲ್ಹಾರರಾಯನ ಮನಸ್ಸಿಗೆ ಬರುತ್ತಿದ್ದಿಲ್ಲ. ಮದಾಂಧನಾದ ಈ ತರುಣ ಪೇಶ್ವೆಯು ಜಯಶಾಲಿಯಾದರೆ ನನ್ನ ಮೇಲೆ ಕೈ ಮಾಡಲಿಕ್ಕೂ ಹಿಂದೆ–ಮುಂದೆ ನೋಡಲಿಕ್ಕಿಲ್ಲೆಂಬ ಭಯವು ಮಲ್ಹಾರರಾಯನನ್ನು ಬಾಧಿಸುತ್ತಿತ್ತು ಸಿಂದೆ ಹೋಳಕರರ ಅಂತರಂಗಗಳು ನೆಟ್ಟಗಿದ್ದಿಲ್ಲ. ಭಾವುಸಾಹೇಬನ ಪ್ರೇಮವು ಸಿಂದೆಯ ಮೇಲೆ ಬಹಳ. ಹೀಗಾಗಿ ಮಲ್ಹಾರರಾಯನು ಭಾವುಸಾಹೇಬನ ದುಷ್ಟತನವನ್ನು ಮನಸ್ಸಿನಲ್ಲಿ ತಂದು, ತನ್ನ ಪರಿಣಾಮದ ಹಾದಿಯನ್ನು ಕಂಡುಕೊಳ್ಳುವ ಹವಣಿಕೆಯಲ್ಲಿದ್ದನು. ರೋಹಿಲೇ ಸರದಾರನಾದ ನಜೀಬ ಉದ್ದೌಲನು ಅಬದಾಲಿಯ ಪಕ್ಷದ ಪ್ರಸಿದ್ಧ ಸರದಾರನೆಂಬದನ್ನು ವಾಚಕರು ಬಲ್ಲರಷ್ಟೆ? ಆ ನಜೀಬನು ಮಲ್ಹಾರರಾಯನ ಮಿತ್ರನಾಗಿದ್ದನು. ಅವರಿಬ್ಬರ ಗುಪ್ತ ಪತ್ರವ್ಯವಹಾರವು ನಡೆ ದಿತ್ತು. ಪ್ರಸಂಗ ಒದಗಿದರೆ ತಾನು ಹ್ಯಾಗೆ ನಡೆದುಕೊಳ್ಳಬೇಕೆಂಬ ಬಗ್ಗೆ ನಜೀಬಉದ್ದೌಲ ನೊಡನೆ ಮಲ್ಹಾರರಾಯನು ಆಲೋಚಿಸುತ್ತಿದ್ದನು. ಇತ್ತ ಭಾವುಸಾಹೇಬನು ಮಹದಾಜಿಯ ಸಂಗಡ ಆಲೋಚಿಸುತ್ತಿರುವಾಗ, ಅತ್ತ ಮಲ್ಹಾರರಾಯನು ನಜೀಬನ ಗುಪ್ತಚಾರನಾದ ಗಂಗಾದಾಸನ ಸಂಗಡ ಆಲೋಚಿಸುತ್ತಿದ್ದನು. ಸ್ವಾಮಿಭಕ್ತಿಗಿಂತಲೂ, ಸ್ವಾರ್ಥದ ಕಸುವು ಹೆಚ್ಚಿನ ದಾದ್ದರಿಂದ, ಜಗತ್ತೇ ಸ್ವಾರ್ಥಕ್ಕೆ ಶರಣು ಹೋಗಿರುತ್ತದೆಂದು ಹೇಳಬಹುದು. ಅಂದಬಳಿಕ ಮಲ್ಹಾರರಾಯನ ಪಾಡೇನು? ಗಂಗಾದಾಸನು ಹೋಳಕರನನ್ನು ಕಾಣಲಿಕ್ಕೆ ಬಂದಾಗ, ಹೋಳಕ ರನು ತನ್ನ ಛಾವಣಿಯೊಳಗಿನದೊಂದು ಸಣ್ಣ ಡೇರೆಯಲ್ಲಿ ಕುಳಿತಿದ್ದನು.

ಮಲ್ಹಾರರಾಯನ ಆ ಸಣ್ಣ ಡೇರೆಯು ಛಾವಣಿಯೊಳಗಿನದೊಂದು ಮೂಲೆಯಲ್ಲಿ ಇತ್ತು. ಆತನು ಸರಕಾರಿಯ ಕೆಲಸಗಳನ್ನು ಆ ಡೇರೆಯಲ್ಲಿ ಕುಳಿತು ಮಾಡುತ್ತಿದ್ದನು. ಆತನ ಯೋಗ್ಯತೆಗೆ ಒಪ್ಪುವಂತೆ ಅಲ್ಲಿ ಒಂದಾದರೂ ಆಡಂಬರದ ಪದಾರ್ಥಗಳಿದ್ದಿಲ್ಲ. ಮಲ್ಹಾರ ರಾಯನ ಇರವು ತೀರ ಸಾದಾತರದ್ದು. ಆತನು ಸರದಾರಿಕೆಯನ್ನು ಮಾಡಹತ್ತಿ ಮೂವತ್ತು ಮೂವತ್ತೈದು ವರ್ಷ ಗಳಾಗಿದ್ದವು. ಆತನಿಗೆ ರಾಜಸತ್ತೆ, ರಾಜವೈಭವ ಮೊದಲಾದವುಗಳ ಅನುಕೂಲತೆಯಿತ್ತು. ಸ್ವತಃ ಆತನ ಹೆಸರಿನ ದರ್ಪವು ಎಷ್ಟರಮಟ್ಟಿಗೆ ಇತ್ತೆಂಬದನ್ನು ಹಿಂದೆಯೊಮ್ಮೆ ಹೇಳಿದ್ದೇವೆ. ''ಮಲ್ಹಾರ ಆಯಾ'' ಎಂಬ ಗುಲ್ಲು ಆದಕೂಡಲೆ, ಮುಸಲ್ಮಾನರ

ಎದೆಯೊಡೆದು ನೀರಾಗುತ್ತಿತ್ತು, ನೀರು ಕುಡಿಯುತ್ತಿದ್ದ ಅವರ ಕುದುರೆಗಳು ಮಲ್ಹಾರಿಯ ಹೆಸರು ಕಿವಿಗೆ ಬಿದ್ದಕೂಡಲೆ ನೀರು ಕುಡಿಯುವದನ್ನು ಬಿಟ್ಟು ಸುಮ್ಮನೆ ನಿಲ್ಲುತ್ತಿದ್ದವಂತೆ! ಮಲ್ಹಾರ ರಾಯನು ದಂಡೆತ್ತಿ ಹೋಗಿರಲಿ, ಬೇಟೆಗೆ ಹೋಗಿರಲಿ, ಶಾಂತತೆಯ ಕಾಲದಲ್ಲಿ ರಾಜ್ಯಕಾರ ಭಾರ ಮಾಡುತ್ತಿರಲಿ ಡಾಂಭಿಕತನವು ಆತನ ಎಡ–ಬಲ ಸುಳಿಯುವಹಾಗಿದ್ದಿಲ್ಲ, ಆತನ ಕೈ ಕೆಳಗಿನ ಸರದಾರರೂ, ದಂಡಿನೊಳಗಿನ ಸಿಪಾಯಿಗಳೂ ಆತನಿಗಿಂತ ಹೆಚ್ಚು ಡೌಲಿನವರಾಗಿದ್ದರು. ಮಲ್ಹಾರರಾಯನ ಈ ಸಾದಾತನವನ್ನು ನೋಡಿ, ಕೆಲಜನರು ಆತನನ್ನು ಜೀನನೆಂದು ತಿಳಿಯುತ್ತಿದ್ದರು; ಆದರೆ ಅದು ಅವರ ತಪ್ಪುತಿಳುವಳಿಕೆಯು ಆತನು ತನ್ನ ಸುಖಕ್ಕಾಗಿ ಸಿಕ್ಕಹಾಗೆ ವೆಚ್ಚಮಾಡುತ್ತಿದ್ದಿಲ್ಲವೆಂಬದೇನೋ ನಿಜ; ಆದರೆ ಯೋಗ್ಯಪ್ರಸಂಗದಲ್ಲಿ ಅವನಂಥ ಉದಾರರನ್ನು ಕಾಣುವದು ಅಪರೂಪವು. ಮಲ್ಹಾರರಾಯನ ಔದಾರ್ಯದ ಪ್ರಸಂಗಗಳನ್ನು ಬಖರಕಾರರು ತಮ್ಮ ಬಖರಗಳಲ್ಲಿ ಬರೆದಿಟ್ಟಿರುವರು. ಆ ಸಂಬಂಧದ ದಂತ ಕಥೆಗಳೂ ಇರುವವು. ಒಬ್ಬ ಚರಿತ್ರಕಾರನು ಈ ವೀರ ಪುರುಷನ ಸಂಬಂಧದಿಂದ—''ಮಲ್ಹಾರರಾಯನು ಶಾಂತಸ್ವಭಾವದವನೂ, ದಯಾಳುವೂ, ಪರೋಪಕಾರಿಯೂ, ನಿರಭಿಮಾನಿಯೂ, ಶೂರನೂ ಇದ್ದನಲ್ಲದೆ, ಆತನು ಸಾಹಸಿಯೂ, ಪರಮೋದಾರನೂ ಇದ್ದನೆಂದು ವರ್ಣಿಸಿರುತ್ತಾನೆ. ಸ್ವತಃ ಮಲ್ಹಾರರಾಯನಿಗೆ ದುಡ್ಡಿನ ಲಕ್ಷವಿದ್ದಿಲ್ಲ. ಯಾವನಾದರೂ ಸಿಪಾಯಿಯು ಪರಾಕ್ರಮವನ್ನು ಪ್ರಕಟಿಸಿದರೆ, ತನ್ನ ಕಾರಭಾರಿಗೆ—''ತುಂಬಿಸಿರಿ ಇವನ ಢಾಲನ್ನು ರೂಪಾಯಿಗಳಿಂದ'' ಎಂದು ಅನ್ನುತ್ತಿದ್ದನು!

ನಜೀಬನ ಗುಪ್ತಚಾರನಾದ ಗಂಗಾದಾಸನು ಹೋಳಕರನ ಡೇರೆಯನ್ನು ಪ್ರವೇಶಿಸಿದಾಗ, ಅಲ್ಲಿ ಮುಂದೆ ಬರೆದಿರುವ ಪದಾರ್ಥಗಳು ಅವನ ಕಣ್ಣಿಗೆ ಬಿದ್ದವು. ಓತ್ತಟ್ಟಿಗೆ ಮೂಲೆಯಲ್ಲಿ ಒಂದು ಸಾಧಾರಣವಾದ ಕಟ್ಟಿಗೆಯ ಪಲ್ಲಂಗವಿದ್ದು, ಅದರಮೇಲೆ ಜಮಖಾನಿಗಾದಿಯ ಸರ್ವ ಸಾಧಾರಣವಾದ ಪ್ರವಾಸದ್ದೊಂದು ಹಾಸಿಗೆಯನ್ನು ಹಾಸಿದ್ದರು. ಕೆಳಗೆ ನೆಲದಮೇಲೆ ಒಂದು ಹುಲ್ಲಿನ ಚಾಪೆಯನ್ನು ಉರುಳಿಸಿ, ಅದರಮೇಲೆ ಕಂದುಬಣ್ಣದ ಜಾಜಮು ಹಾಸಿದ್ದರು. ಅದರ ಮೇಲೆ ಖಡ್ಗ, ಭಾಲೆ, ಮೊದಲಾದ ಯುದ್ಧೋಪಯೋಗಿ ಶಸ್ತ್ರಗಳಿದ್ದವು. ಒಂದು ಮೂಲೆಯಲ್ಲಿ ಒಂದು ಹಿತ್ತಾಳಿಯ ಸಮೆಯು ಇಟ್ಟಿತ್ತು, ಮತ್ತೊಂದು ಮೂಲೆಯಲ್ಲಿ ನೀರು ತುಂಬಿದ್ದೊಂದು ಮಣ್ಣಿನಕೊಡ, ಅದರಬಳಿಯಲ್ಲಿ ನೀರುಕುಡಿಯುವ ಹಿತ್ತಾಳಿಯವೆರಡು ಜಾಂಬುಗಳು ಇಟ್ಟಿದ್ದವು. ಇವಲ್ಲದೆ ಒಂದು ಸರ್ವಸಾಧಾರಣವಾದ ಗುಡಗುಡಿಯು, ಎರಡು ಚಿಲಿಮಿಗಳು, ಕಾಸಿಕೊಳ್ಳುವದಕ್ಕಾಗಿ ಹೊತ್ತಿಸಿ ಇಟ್ಟದ್ದೊಂದು ಅಗ್ಗಿಷ್ಟಿಗೆ, ಚಿಲಿಮಿಗೆ ಕೆಂಡವನ್ನು ಹೇರುವ ದಕ್ಕಾಗಿಯೂ, ಕೆಂಡವನ್ನು ಅಲ್ಲಾಡಿಸುವದಕ್ಕಾಗಿಯೂ ಬೇಕಾಗುವ ಕಬ್ಬಿದ್ದೊಂದು ತಂಡಾಸ, ಒಂದರೆಡರು ಕಬ್ಬಿಣದ ತೀವಟಿಗೆಗಳು, ಇಷ್ಟು ಸಾಮಾನುಗಳು ಇದ್ದವು ಮತ್ತೊಂದು ಕಡೆಯಲ್ಲಿ ಜಮಾಖರ್ಚಿನ ಪುಸ್ತಕಗಳು, ಬೇರೆ ಕೆಲವು ಪುಸ್ತಕಗಳು ಇದ್ದವು. ಕೀರ್ದಿಯನ್ನು ಕೈಯಲ್ಲಿ ತಕ್ಕೊಂಡು ರಾವಜಿಮಹಾದೇವ ಪಾರನೇಕರ ಫಡಣವೀಸನೂ, ರಾಜಾರಾಮ ಮಹಾದೇವ ಕಾರಕೂನನೂ ಯಜಮಾನನಿಗೆ ಜಮಾಖರ್ಚನ್ನು ಓದಿತೋರಿಸುತ್ತಿದ್ದರು. ಗಂಗಾದಾಸನನ್ನು

ನೋಡಿದಕೂಡಲೆ ಹೋಳಕರನು ಅವರಿಬ್ಬರಿಗೂ ಹೊರಗೆ ಹೋಗಹೇಳಿದನು. ಕೂಡಲೆ ಅವರು ಇದ್ದ ಪುಸ್ತಕಗಳನ್ನು ಇದ್ದ ಹಾಗೆ ಇಟ್ಟು. ತಮ್ಮ ಹೊರುವಧೋತರನ್ನು ಕುಳಿತಸ್ಥಳ ದಲ್ಲಿಯೇ ಬಿಟ್ಟು ಹೊರಗೆಹೋದರು. ಗುಪ್ತಚಾರನ ಮಾತುಗಳನ್ನು ಯಾರೂ ಕೇಳಬಾರ ದೆಂದು, ಡೇರೆಯಿಂದ ಹತ್ತುಮೊಳದಮೇಲೆ ಒಬ್ಬ ವಿಶ್ವಾಸದ ವೃದ್ಧ-ಕುಶಲಸಿಪಾಯಿಯನ್ನು ನಿಲ್ಲಿಸಿದ್ದರು. ಆ ಸಿಪಾಯಿಯು ಮಲ್ಹಾರರಾಯನಿಗಿಂತ ವೃದ್ಧನಾಗಿದ್ದನು. ಆತನ ಮುಖ ಮುದ್ರೆಯು ಉಗ್ರವಿದ್ದು, ಧ್ವನಿಯು ಕರ್ಕಶವಾಗಿತ್ತು, ಆತನ ಮೈಕಟ್ಟು ಹುರಿಕಟ್ಟಿನದು; ಉಡಿಗೆ-ತೊಡಿಗೆಗಳು ಉರುಟುತರ. ಆತನ ಕೈಯಲ್ಲಿ ಉದ್ದವಾದದ್ದೊಂದು ಖಡ್ಗವಿತ್ತು. ಮಲ್ಹಾರರಾಯನು ಪಲ್ಲಂಗದ ಕೆಳಗಿನ ತನ್ನ ಗಾದಿಯ ಮೇಲೆ ಕಾಲಮೇಲೆ ಕಾಲ ಹಾಕಿ ಕೊಂಡು ಕುಳಿತು, ಅಡಕಒತ್ತಿನಿಂದ ಅಡಿಕೆಒಡಿದು ಬಾಯಲ್ಲಿ ಹಾಕಿಕೊಳ್ಳುತ್ತಿದ್ದನು. ಆತನು ಕೆಂಪದೊಂದು ರಜಾಯಿಯನ್ನು ಹೊದ್ದುಕೊಂಡಿದ್ದನು. ಹೀಗೆ ವೀರಶ್ರೇಷ್ಠನಾದ ಆ ಕುರುಬ ಸರದಾರನು ಒಳ್ಳೇ ಎಚ್ಚರದಿಂದ ಕುಳಿತಿರಲು, ವೇಷಧಾರಿ ಬ್ರಾಹ್ಮಣನಾದ ಗಂಗಾದಾಸನು ಒಳಗೆ ಹೋದಕೂಡಲೆ ಹೋಳಕರನಿಗೆ ಬಾಗಿ ಮುಜುರೆ ಮಾಡಿದನು. ಆಗ ಹೋಳಕರನು ಕುಳಿತ ಹಾಗೆಯೇ ಕುಳಿತುಕೊಂಡಿದ್ದು, ಕೈಯನ್ನು ಎತ್ತದೆ, ಬರಿಯ ತಲೆಬಾಗಿ ಮುಜುರೆಯನ್ನು ತಕ್ಕೊಂಡನು. ಯಾಕಂದರೆ, ಚಾರನು ಆತನ ಪೂರ್ಣಪರಿಚಯ ದವನಾಗಿದ್ದನು. ಗಂಗಾದಾಸನು ವೇಷಧಾರಿ ಬ್ರಾಹ್ಮಣನಾಗಿರದೆ, ನಿಜವಾದ ವೇದ-ಶಾಸ್ತ್ರ ಪಾರಂಗತ ಬ್ರಾಹ್ಮಣನಾಗಿದ್ದರೆ, ಹೋಳಕರನು ಎದ್ದುನಿಂತು ಎರಡು ಹೆಜ್ಜೆಮುಂದಕ್ಕೆ ಹೋಗಿ ಬ್ರಾಹ್ಮಣನ ಚರಣಗಳ ಮೇಲೆ ಮಸ್ತಕವಿಡುತ್ತಿದ್ದನು. ಯಾಕಂದರೆ, ''ವರ್ಣಾನಾಂ ಬ್ರಾಹ್ಮಣೋಗುರುಃ'' ಎಂಬ ಉಕ್ತಿಯಲ್ಲಿ ಆಗಿನಕಾಲದ ಜನರ ದೃಢವಿಶ್ವಾಸವಿತ್ತು, ಆಗಿನ ಅಧಿಕಾರಸಂಪನ್ನನಾದ ರಾಜನಿರಲಿ, ಶೂರ ಸರದಾರನಿರಲಿ, ಕ್ರೂರ ಸಿಪಾಯಿಯಿರಲಿ ಅವರು ವೇದಮೂರ್ತಿಗಳನ್ನು ಮನ್ನಿಸುತ್ತಲಿದ್ದರು. ಈ ಪದ್ಧತಿಯು ಋಷಿ ಕಾಲದಿಂದ ನಡೆದುಬಂದಿತ್ತು, ಇರಲಿ, ಹೋಳಕರನು ತನ್ನೆದುರಿಗೆ ನಿಂತಿದ್ದ ವೇಷಧಾರಿಯಾದಿ ಗಂಗಾದಾಸನೆಂಬ ಬ್ರಾಹ್ಮಣನಿಗೆ—''ಬೀರಬಲ್, ಈಗ ನೀನು ಬಂದದ್ದು ಬಹಳ ನೆಟ್ಟಗಾಯಿತು. ನಮ್ಮ ಗೆಳೆಯ ನಜೀಬರವರ ಕಡೆಯ ವಿಶೇಷ ವರ್ತಮಾನ ವೇನು?'' ಎಂದು ಕೇಳಲು, ಆ ಜಾಟಜಾತಿಯ ರಜಪೂತನಾದ ಬೀರಬಲ್ಲನು ತನ್ನ ಬಗಲ ಕಸಿಯ ಹರಕ ಅಂಗಿಯ ಕಿಸೆಯೊಳಗಿಂದ ಒಂದು ಲಕ್ಕೋಟಿಯನ್ನು ತೆಗೆದು—''ಈ ಲಕ್ಕೋಟಿ ಯನ್ನು ನಜೀಬ ಸಾಹೇಬರು ಕೊಟ್ಟಿದ್ದಾರೆ'' ಎಂದು ಹೇಳಿ, ಅದನ್ನು ಹೋಳಕರನ ಕೈಯಲ್ಲಿ ಕೊಟ್ಟನು. ಕೂಡಲೆ ಹೋಳಕರನು ಹುಬ್ಬುಗಂಟಿಕ್ಕಿ ಅದನ್ನು ತಕ್ಕೊಂಡು ಬಳಿಯಲ್ಲಿದ್ದ ಅಗ್ಗಿಷ್ಟಿಗೆಯಲ್ಲಿ ಚಲ್ಲಲು, ಅದು ಸುಟ್ಟು ಬೂದಿಯಾಗಿ ಹೋಯಿತು!

ಹೀಗೆ ಹೋಳಕರನು ಲಕ್ಕೋಟಿಯಗತಿ ಮಾಡಿದ್ದನ್ನು ನೋಡಿ ಬೀರಬಲ್ಲನು ಬೆರ ಗಾದನು. ಮಲ್ಹಾರರಾಯನು ಲಕ್ಕೋಟಿಯನ್ನು ಒಡೆಯಲಿಲ್ಲ, ಓದಿ ನೋಡಲಿಲ್ಲ! ಇದರ ಅರ್ಥವೇ ಬೀರಬಲ್ಲನಿಗೆ ತಿಳಿಯದಾಯಿತು. ಆಗ ಹೋಳಕರನು ಸಿಟ್ಟಿನಿಂದ ಹುಬ್ಬು ಗಂಟಿಕ್ಕಿ ಅವಡುಗಚ್ಚಿ ಬೀರಬಲ್ಲನಿಗೆ—''ಇಂಥ ಚೀಟಿ-ಪಾಟಿಗಳನ್ನು ನನ್ನ ಕಡೆಗೆ ಕಳಿಸುತ್ತ

ಬರಬೇಡೆಂದು ನಾನು ನಜೀಬನಿಗೆ ಹಲವುಸಾರೆ ಹೇಳಿದ್ದೇನೆ; ಆದರೆ ಆತನು ತನ್ನ ಚಾಳಿಯನ್ನು ಬಿಡುವದಿಲ್ಲ. ನನಗೆ ನೆಟ್ಟಗೆ ಓದಲಿಕ್ಕೆ ಬರುವದಿಲ್ಲ, ಕಾರಕೂನರ ಕಡೆಯಿಂದ ಓದಿಸಿದರೆ ಗುಪ್ತಸಂಗತಿಗಳು ಹೊರಬೀಳುತ್ತವೆ. ಯಾರ ನಂಬಿಗೆಯೇನು? ಚೀಟ–ಪಾಟಿಗಳಾದರೂ ಯಾತಕ್ಕೆ ಬೇಕು? ಮನಸ್ಸು ಒಂದಿದ್ದರಾಯಿತು. ನಡುವೆ ಚೀಟಿಯು ಯಾರ ಕೈಗಾದರೂ ಸಿಕ್ಕಿಗಿಕ್ಕರೆ ಅರ್ಥವು ಹೋಗಿ ಅನರ್ಥವಾದೀತಲ್ಲ! ಹೇಳು, ನಜೀಬನು ಬಾಯಿಮಾತು ಏನಾದರೂ ಹೇಳಿದ್ದರೆ ಹೇಳು'' ಎಂದು ಕೇಳಲು, ಗಂಗಾದಾಸನು—

ಗಂಗಾದಾಸ—ನಜೀಬಸಾಹೇಬರು ಬಾಯಿಮಾತು ಹೇಳಿದ್ದು ಬೇರೆಯಿರುವದು; ಆದರೆ ನಂಬಿಗೆಗಾಗಿ ಅವರು ತಮ್ಮ ಹಸ್ತಾಕ್ಷರದ ಚೀಟಿಯನ್ನು ಕೊಟ್ಟಿದ್ದರು. ಅದರ ಮೇಲೆ ಅವರ ರುಜುವಿದ್ದಿಲ್ಲ.

ಮಲ್ಹಾರರಾವ—ಬೆಂಕಿಹಚ್ಚು ಆ ನಂಬಿಗೆಗೆ! ಇಂಥ ನಂಬಿಗೆಯು ಎಲ್ಲಿಯಾದರೂ ನಮ್ಮನ್ನು ಹಾಳುಮಾಡಿಬಿಟ್ಟೀತು. ಇನ್ನು ಹೀಗೆ ಮಾಡಬೇಡೆಂದು ರೋಹಿಲನಿಗೆ ಹೇಳು. ಇರಲಿ, ಆತನು ಬಾಯಿಮಾತು ಏನು ಹೇಳಿರುವನು?

ಗಂಗದಾಸ—''ಕಟ್ಟಕಡೆಯ ಪ್ರಸಂಗವು ಸಮೀಪಿಸಿರುವದು. ನಾವೂ, ನೀವೂ ಹಳೆಯ ಗೆಳೆಯರು. ನಮ್ಮ–ನಿಮ್ಮೊಳಗಾದ ಕರಾರುಗಳನ್ನು ನಾನು ನಿಜವೆಂದು ನಂಬಬೇಕೋ ಹೇಗೆಂಬದನ್ನು ಸ್ಪಷ್ಟವಾಗಿ ಹೇಳಿರಿ'' ಎಂದು ನಜೀಬಸಾಹೇಬರು ಹೇಳಿದ್ದಾರೆ.

ಮಲ್ಹಾರರಾವ—ಏನಂದಿ? ಆತನಮೇಲಿನ ನಮ್ಮ ನಂಬಿಗೆಯು ಹಾರಿತೇ? ಆತನಿಗೆ ಈ ಸಂಶಯವಾದರೂ ಹ್ಯಾಗೆ ಬಂದಿತು? ನನ್ನ ಮೇಲೆ ಭಾವುಸಾಹೇಬರ ಸಿಟ್ಟು ಇರುವದು. ನನ್ನಲ್ಲಿ ಅವರ ನಂಬಿಗೆ ಉಳಿದಿರುವದಿಲ್ಲ. ಹಲವುಸಾರೆ ಅವರು ನನ್ನ ಮಾನಭಂಗ ಮಾಡಿರುವರು. ಗಾರದಿಯ ಮಾತು ಕೇಳಿ ನನ್ನನ್ನು ತುಚ್ಛೀಕರಿಸುತ್ತಿರುವರು. ಜನಕೋಜಿ–ಮಹದಾಜಿಗಳು ನಿನ್ನೆ–ಮೊನ್ನಿನ ಹುಡುಗರು. ಅವರು ನನ್ನ ಹಿರಿಯತನದ ಮಾನವನ್ನು ಕಾಯುವದಿಲ್ಲ ಹಿಂದೆ ನಗೆಯಾಡುವರು. ಇದೆಲ್ಲ ನಿಜವಿದ್ದರೂ, ನಜೀಬನಿಗೆ ಈಗ ಪ್ರತ್ಯಕ್ಷ ಸಹಾಯಮಾಡುವದು ನನ್ನಿಂದಾಗುವದಿಲ್ಲ. ಈ ಮೊದಲೆ ನಾನು ಹೇಳಿಕಳಿಸಿದಂತೆ ನಡೆದುಕೊಳ್ಳದಿದ್ದರೆ, ಆತನ ನಾಲ್ವತ್ತೆರಡು ಕುಲಗಳು ನರಕದಲ್ಲಿ ಬೀಳುವವೆಂದು ನಜೀಬನಿಗೆ ಹೇಳು. ಇದೇ ನನ್ನ ಕಟ್ಟಕಡೆಯ ಮಾತು. ನಾನಂತು ಆತನ ಮುಂದೆ ಹೇಳಿದಂತೆ ನಡೆದುಕೊಂಡೇ ನಡೆದುಕೊಳ್ಳುವೆನು.

ಈ ಮೇರೆಗೆ ಮಾತು ಕಥೆಗಳಾಗಿ ಗಂಗಾದಾಸನು ಮುಜುರೆಮಾಡಿ ಹೊರಟುಹೋದನು. ಅಷ್ಟರಲ್ಲಿ ಓಬ್ಬ ಸೇವಕನು ಬಂದು—''ಶ್ರೀಮಂತರು ತಮಗೆ ಈಗಲೇ ಬರಹೇಳಿರುವರು'' ಎಂದು ಹೇಳಿದನು. ಆಗ ಮಲ್ಹಾರರಾಯನು ತನ್ನೊಳಗೆ—''ಇಂಥ ಹೊತ್ತಿನಲ್ಲಿ ಇಷ್ಟು ಅವಸರದಿಂದ ನನ್ನನ್ನು ಯಾಕೆ ಕರೆಸಿರಬಹುದು? ಶ್ರೀಮಂತರಿಗೆ ಈ ಕುರುಬನನ್ನು ಮತ್ತೆ ಮತ್ತೆ ಕರಿಸಲೇಬೇಕಾಗುವದಲ್ಲ! ಕಟ್ಟಕಡೆಯ ಪ್ರಸಂಗವು ಸಮೀಪಿಸಿತೆಂದು ನಜೀಬನು ಹೇಳಿಕಳಿಸಿರುವನು. ನಮ್ಮ ಕಡೆಗೂ ಏನೋ ಗೊಂದಲ ನಡೆದಂತೆ ತೋರುತ್ತದೆ. ನೋಡೋಣ, ಇನ್ನು ಮುಂದೆ ಏನೇನು ಆಗುತ್ತದೆಂಬದನ್ನು ಕಣ್ತೆರೆದು ನೋಡೋಣ! ಯಾವ ಯಾವ ಗಂಡಸು ಏನೇನು ಗಂಡಸುತನ ತೋರಿಸುತ್ತಾನೆಂಬದು ತಾನೇ ಬೈಲಿಗೆ ಬರುತ್ತದೆ.'' ಎಂದು

ಅಂದುಕೊಂಡು ಪೋಷಾಕು ಧರಿಸಿ ಹೊರಗೆ ನಿಲ್ಲಿಸಿದ ತನ್ನ ಫುಲಮತಿ ಎಂಬ ಕುದುರೆಯನ್ನು ಹತ್ತಿಕೊಂಡು ಶ್ರೀಮಂತರ ಡೇರೆಯ ಕಡೆಗೆ ನಡೆದನು. ಇಷ್ಟು ಹೊತ್ತಿಗೆ ಆತನ ಸ್ವಾರ್ಥದ ಮಸಲತ್ತು ನಜೀಬನೊಡನೆ ಮುಗಿದುಹೋಗಿತ್ತು!

ಮಲ್ಹಾರರಾಯನು ತನ್ನ ಸಂಗಡ ಎಂಟು–ಹತ್ತು ಜನ ಶಸ್ತ್ರಧಾರಿಗಳಾದ ಸಿಪಾಯಿಗಳನ್ನು ಕರಕೊಂಡಿದ್ದನು. ಆತನು ಕುದುರೆ ಇಳಿದು ಡೇರೆಯೊಳಗೆ ಬಂದಕೂಡಲೆ, ಭಾವುಸಾಹೇಬನು ಎದ್ದು ನಿಂತುಕೊಂಡನು. ಮಲ್ಹಾರರಾಯನು ಭಾವುಸಾಹೇಬನ ಬಲಕ್ಕೆ ಕೆಲವು ಅಂತರದ ಮೇಲೆ ಕುಳಿತುಕೊಂಡನು. ಮೊದಲು ಉಭಯರ ಕುಶಲಪ್ರಶ್ನಗಳಾದವು. ಹೊರಗೆ ನೋಡುವ ವರಿಗೆ ಭಾವುಸಾಹೇಬನು ಮಲ್ಹಾರರಾಯನೊಡನೆ ಸಂತೋಷದಿಂದ ಮಾತಾಡುತ್ತಿದ್ದ ಹಾಗೆ ತೋರುತ್ತಿತ್ತು; ಆದರೆ ಅಂತರಂಗದಲ್ಲಿ ಆತನ ಮನೋವಿಕಾರಗಳು ಉಕ್ಕೇರುತ್ತಿದ್ದವು. ಆತನು ಮಹದಾಜಿಯೊಡನೆ ಸರಳಮನಸ್ಸಿನಿಂದ ಮಾತಾಡಿದಂತೆ, ಈಗ ಮಲ್ಹಾರರಾಯನ ಸಂಗಡ ಮಾತಾಡಲಿಲ್ಲ, ಆ ವೃದ್ಧವೀರನೊಡನೆ ಆತನು ಶುದ್ಧಾಂತಃಕರಣದಿಂದ ನಡೆದುಕೊಳ್ಳಲಿಲ್ಲ. ಹೃದಯ ಶುದ್ಧವಿಲ್ಲದವರ ಮಾತು ಕಥೆಗಳು ಹೀಗೆಯೇ ಸರಿ, ಬಳಿಯಲ್ಲಿದ್ದ ಜನರನ್ನೆಲ್ಲ ಭಾವುಸಾಹೇಬನು ದೂರಕಳಿಸಿದನು. ಇಬ್ಬರ ಹೊರತು ಯಾರೂ ಅಲ್ಲಿ ಉಳಿಯಲಿಲ್ಲ. ಬಳಿಕ ಭಾವುಸಾಹೇಬನು ಮಲ್ಹಾರರಾಯನನ್ನು ಕುರಿತು—

ಭಾವುಸಾಹೇಬ—ಕಾಕಾಸಾಹೇಬ, ಹೀಗೆಯೇ ಈ ಯುದ್ಧ ಪ್ರಸಂಗವನ್ನು ಎಷ್ಟು ದಿವಸ ಕೊಳೆಯಗೊಡುವಿರಿ? ಈ ಪ್ರಸಂಗವನ್ನು ನಾಳಿಗೇ ಮುಗಿಸಿಬಿಡುವದು ನನಗೆ ನೆಟ್ಟಗೆ ಕಾಣುತ್ತದೆ. ದಂಡು ಒತ್ತಟ್ಟಿಗೆ ಕುಳಿತು ಕೊಳೆಯಹತ್ತಿರುವದು. ಹಲವು ರಾವುತರ ಕುದುರೆ ಗಳು ಸತ್ತದ್ದರಿಂದ, ಅವರು ಕಾಲನಡಿಗೆಯಿಂದ ಏನು ಮಾಡಬೇಕು? ನಾವು ಬರಬರುತ್ತ ನಿರ್ಬಲರಾಗ ತೊಡಗಿರುತ್ತೇವೆ. ಯುಮುನಾ ನದಿಯನ್ನು ಬೆನ್ನಹಿಂದೆ ಮಾಡಿಕೊಂಡು ನಾವು ಬಿಗುವಿನಿಂದ ಮುಂದಕ್ಕೆ ಸಾಗಿಹೋಗಿ ಒಂದು ಭದ್ರವಾದ ಸ್ಥಳವನ್ನು ಹಿಡಿದುಕೊಳ್ಳದಿದ್ದರೆ ಪರಿಣಾಮವಾಗದು. ದುರಾಣಿಯ ಛಾವಣಿಯ ಎದುರಿಗೆ ತೋಫುಗಳನ್ನು ಹೂಡಿ ಇಡಬೇಕು. ಹೀಗೆ ನನ್ನ ವಿಚಾರವಿದ್ದದ್ದನ್ನು ತಿಳಿಸಿದೆನು. ಇನ್ನು ನಿಮಗೆ ಸರಿದೋರಿದ್ದನ್ನು ಮಾಜದೆ ಹೇಳಬೇಕು.

ಮಲ್ಹಾರರಾವ—ಭಾವುಸಾಹೇಬ, ನನ್ನ ಕುರುಬನ ವಿಚಾರವನ್ನೇನು ಕೇಳುವಿರಿ? ನಿಮ್ಮ ವಿಚಾರವೇ ನನ್ನ ವಿಚಾರವು. ಅದಕ್ಕೆ ನನ್ನ ಸಂಪೂರ್ಣ ಒಪ್ಪಿಗೆಯಿರುವದು; ಆದರೆ ಸ್ವಲ್ಪ ವಿಚಾರಮಾಡಿ ಮುಂದುವರಿಯಬೇಕು. ಒಮ್ಮೆಲೆ ದುಡುಕುವದು ಹಿತಕರವಲ್ಲ, ಉಪವಾಸ ದಿಂದ ಸಿಪಾಯಿಗಳು ಕಸುವುಗೆಟ್ಟಿರುವರು. ಶೀತಬಾಧೆಯಿಂದ ಅವರ ಕೈ–ಕಾಲುಗಳು ಬಾತಿ ರುವವು. ಇಂಥವರು ವೈರಿಗಳ ಮೇಲೆ ಹ್ಯಾಗೆ ಸಾಗಿಹೋಗಬೇಕು? ಅವರು ಶಸ್ತ್ರಗಳನ್ನಾದರೂ ಹ್ಯಾಗೆ ಪ್ರಯೋಗಿಸಬೇಕು? ನೀವು ಹಟಮಾರಿತನಕ್ಕೆ ಬಿದ್ದದ್ದರಿಂದ ಈ ಸ್ಥಿತಿಯು ಪ್ರಾಪ್ತ ವಾಯಿತು. ಅದರ ದುಷ್ಫಲವನ್ನು ಈಗ ಎಲ್ಲರೂ ಭೋಗಿಸಬೇಕಾಯಿತು. ಬಹು ಕಷ್ಟಪಟ್ಟು

ಸಂಪಾದಿಸಿದ ದೌಲತ್ತುವಯುಣುಗಿ ಹಾಳಾಗುವ ಪ್ರಸಂಗವು ಒದಗಿತು. ನಾನು ಹೇಳಿದಾಗ ಸ್ವಲ್ಪ ಹಿಂದಕ್ಕೆ ಸರಿದಿದ್ದರೆ ಈ ಹಾಡು ಆಗುತ್ತಿದ್ದಿಲ್ಲ. ನಾವು ತೀರ ಹಣ್ಣಾಗಿಹತ್ತೆಸರಿಗೆ ಬಂದದ್ದು ಅಹಮ್ಮದಶಹನಿಗೆ ಗೊತ್ತಾಗ್ತಿರುವದು. ನಾನಾಸಾಹೇಬರು ಇದ್ದರೆ ಹೀಗಾಗುತ್ತಿದ್ದಿಲ್ಲ. ಅವರು ಪ್ರಸಂಗನೋಡಿ ನಡೆದುಕೊಳ್ಳುತ್ತಿದ್ದರು. ದುರಾಣಿಯ ಹಂಗೇನು? ಹಾ ಹಾ ಅನ್ನುವದ ರೊಳಗೆ ಅವನನ್ನು ಓಡಿಸಬಹುದೆಂದು ನಿಮ್ಮವರು ತಿಳಿದಿರಬಹುದು; ಆದರೆ ಆ ಹೆಮ್ಮೆಯ ನ್ನೆಲ್ಲ ಕಟ್ಟಿ ಇಡಬೇಕು! ಹಾಗೆ ಹೆಮ್ಮೆಪಡುವ ಕಾಲವು ಮೀರಿಹೋಯಿತು. ಸ್ವಾಮಿಕಾರ್ಯ ಕ್ಕಾಗಿ ದೇಹವಿಡುವ ಬುದ್ಧಿಯು ಸಂಪೂರ್ಣವಾಗಿ ನಮಗಿರುತ್ತದೆ; ಆದರೆ ಹೊಟ್ಟೆತುಂಬ ಅನ್ನವಿಲ್ಲ. ಎದ್ದರೆ ಕಣ್ಣು ಕತ್ತಲು ಗೂಡಿಸುತ್ತವೆ; ಅಂದಬಳಿಕ ಬರಿಹೊಟ್ಟೆಯಿಂದ ನಮ್ಮ ಸೈನಿಕರು ಹ್ಯಾಗೆ ಕಾದಬೇಕು? ನಾಳೆ ನಾವು ಜೀವದ ಹಂಗುದೊರೆದು ಯುದ್ಧಕ್ಕೆ ಹೊರಟರೂ ಹೊರಡಬಹುದು; ಆದರೆ ನಮಗೆ ಜಯ ವಾಗುವ ಸಂಭವವಿಲ್ಲ; ಅಂದಬಳಿಕ ಸುಮ್ಮನೆ ನಮ್ಮ ಸೈನ್ಯವ ಕೊಲ್ಲಿಸುವಲ್ಲಿ ಪ್ರಯೋಜನವೇನು? ಭಾವುಸಾಹೇಬ, ಸಜ್ಜಾಗಿ ನಿಂತ ದುರಾಣಿಯ ಸೈನ್ಯವನ್ನು ಭೇದಿಸಿಹೋಗುವದು ಶಕ್ಯವಲ್ಲ; ಆದ್ದರಿಂದ ನಾಳಿಗೇ ಶತ್ರುಗಳ ಮೇಲೆ ಸಾಗಿಹೋಗಬೇಡಿರಿ. ಇನ್ನು ನಾಲ್ಕೆಂಟುದಿನ ನೋಡಿ ಸಾಗಿಹೋಗೋಣವಂತೆ.

ಭಾವುಸಾಹೇಬ—ಕಾಕಾಸಾಹೇಬ, ಹಿಂದೆ ಆಗಿಹೋದದ್ದನ್ನು ಕೆದರಿ ಕೆದರಿ ತೆಗೆ ಯುವ ದರಲ್ಲಿ ಪ್ರಯೋಜನವಿಲ್ಲ. ಆದದ್ದು ಆಗಿಹೋಯಿತು. ನನ್ನಿಂದಾಗಲಿ, ಗಾರದಿ ಯಿಂದಾಗಲಿ, ಬೇರೆಯಾರಿಂದಲೇ ಆಗಲಿ ಏನಾದರೂ ಅಪರಾಧವಾಗಿದ್ದರೆ ಅದನ್ನು ಹೊಟ್ಟೆಯಲ್ಲಿ ಹಾಕಿ ಕೊಳ್ಳಿರಿ. ಈಗ ನಾವೆಲ್ಲರೂ ಒಬ್ಬ ತಾಯಿಯ ಮಕ್ಕಳೆಂದು ತಿಳಿದು ನಡೆಯೋಣ. ಇದು ನಿಮ್ಮ ಮನಸ್ಸಿಗೆ ಬರುತ್ತದೆಯೋ?

ಮಲ್ಹಾರರಾಯ—ಹೀಗೆ ಮೊದಲಿನಿಂದಲೇ ತಿಳಿದು ನಡೆದಿದ್ದರೆ ಎಷ್ಟು ನೆಟ್ಟಗಾಗು ತ್ತಿತ್ತು! ಬಿಳಿಗೂದಲಿನ ಕುರುಬನು ನಿಮ್ಮ ಅನುಯಾಯಿಗಳಿಗೆ ಆಗ ಬೇಡಾಗಿದ್ದನು ಈಗ ಸಂಕಟಕ್ಕೆ ಗುರಿಯಾಗಿರಲು, ಬಿಡಿಸಲಿಕ್ಕೆ ಆತನು ಬೇಕಾದನು. ಮೊದಲಿನಿಂದಲೇ ನನ್ನ ಮಾತು ಕೇಳಿದ್ದರೆ ಈ ಪ್ರಸಂಗವು ಯಾಕೆ ಬರುತ್ತಿತ್ತು?

ಈ ಮೇರೆಗೆ ಮಲ್ಹಾರರಾಯನು ಸರಳತನದಿಂದ ಹಿತದಮಾತು ಆಡದೆ ತಿರುತಿರುಗಿ ಹಂಗಿಸುವದನ್ನು ನೋಡಿ ಅಭಿಮಾನಿಯಾದ ಭಾವುಸಾಹೇಬನು ಸಂತಾಪಗೊಂಡನು. ಆದರೆ ಪ್ರಸಂಗವರಿತು ಅದನ್ನು ಹೊರಗೆಡವದೆ ಆತನು ಮತ್ತೆ ಹೋಳಕರನನ್ನು ಕುರಿತು—

ಭಾವುಸಾಹೇಬ—ಆದದ್ದು ಆಗಿಹೋಯಿತು. ಇನ್ನು ಅದನ್ನು ಚರ್ಚಿಸುತ್ತ ಕುಳಿತು ಕೊಳ್ಳುವಲ್ಲಿ ಅರ್ಥವಿಲ್ಲೆಂದು ಆಗಲೆ ಹೇಳಲಿಲ್ಲವೆ? ಪುನಃ ಆ ಮಾತು ಯಾಕೆ? ಕಾಕಾಸಾಹೇಬ, ಕಾಲಕ್ಕನುಸರಿಸಿ ಆಗುವದನ್ನು ಯಾರೂ ತಪ್ಪಿಸುವದಿಲ್ಲ. ನಾನು ಸ್ವತಃ ಅಪರಾಧಿಯಾಗಿದ್ದರೂ ಕ್ಷಮಿಸಿರಿ. ನನ್ನ ಸಾವಿರ ತಪ್ಪುಗಳಿದ್ದರೂ ಹೊಟ್ಟೆಯಲ್ಲಿ ಹಾಕಿಕೊಂಡು, ನಾಳೆ ಕೇಶರಿ ಬಣ್ಣದ ಪೋಷಾಕಿನಿಂದ ಸಮರಭೂಮಿಯಲ್ಲಿ ಸಡ್ಡು ಹೊಡೆದು ನಿಂತು ನಮ್ಮ ಮರ್ಯಾದೆಯನ್ನು ಕಾಯಿರಿ. ನನ್ನದಿಷ್ಟು ಮಾತನ್ನು ನೀವು ನಡಿಸಲೇಬೇಕು.

ಈ ಮೇರೆಗೆ ನುಡಿದು ಭಾವುಸಾಹೇಬನು ಮಲ್ಹಾರರಾಯನ ಮುಂದೆ ತನ್ನ ಶಾಲಿನ ಸೆರಗು ಒಡ್ಡಿದನು; ಆದರೆ ಸ್ವಾರ್ಥದ ಬಲಿಗೆಬಿದ್ದ ಮಲ್ಹಾರರಾಯನ ಮನಸ್ಸು ತಿರುಗಲಿಲ್ಲ; ಆತನು ಗುಟ್ಟುಕೊಟ್ಟು ಮಾತಾಡಲಿಲ್ಲ!

## ಯುದ್ಧೋಪಕ್ರಮ

ಇದಕ್ಕೂ ಮೊದಲಿನ ಭಾವುಸಾಹೇಬನ ಅಭಿಮಾನವೆಷ್ಟು–ಗರ್ವವೆಷ್ಟು! ಆತನು ಮಲ್ಹಾರರಾಯನ ಅಪಮಾನವನ್ನು ಎಷ್ಟೋಸಾರೆ ಮಾಡಿದ್ದನು. ಅಂಥ ಭಾವುಸಾಹೇಬನೇ, ಈಗ ಸಂಕಟಸಮಯವು ಪ್ರಾಪ್ತವಾದದ್ದರಿಂದ ಅದೇ ಹೋಳಕರನಿಗೆ ಅಂಗಲಾಚಿ ಬೇಡಿ ಕೊಳ್ಳ ಹತ್ತಿದನು! ಹೀಗೆ ಆತನ ಸ್ವಭಾವದಲ್ಲಾದ ಹೆಚ್ಚುಕಡಿಮೆಯನ್ನು ನೋಡಿ ಮಲ್ಹಾರ ರಾಯನು ಆಶ್ಚರ್ಯಪಟ್ಟನು. ''ಈಗ ಇವರಿಗೆ ಈ ಕುರುಬನ ಬೆಲೆ ಗೊತ್ತಾಯಿತೆ''ಂದು ಮನಸ್ಸಿನಲ್ಲಿ ಅಂದುಕೊಂಡು, ಆತನು ಭಾವುಸಾಹೇಬನನ್ನು ಕುರಿತು—

ಮಲ್ಹಾರರಾವ—ಭಾವುಸಾಹೇಬ, ತಾವು ಹೀಗೆ ಕುರುಬನನ್ನು ಸೆರಗೊಡ್ಡಿ ಬೇಡಿಕೊಳ್ಳ ಬಹುದೆ? ಕ್ಷಮಿಸುವದಕ್ಕಾಗಿ ಆತನನ್ನು ಪ್ರಾರ್ಥಿಸಬಹುದೆ? ನಿಮ್ಮ ಬುದ್ಧಿಭ್ರಂಶವಾಗಿರು ವದಿಲ್ಲವಷ್ಟೆ? ನಾನು ನಿಮ್ಮ ಸೇವಕನು. ಒಡೆಯನ ಅಪ್ಪಣೆಯನ್ನು ಮನ್ನಿಸುವದಷ್ಟು ಸೇವಕರ ಕೆಲಸವು!

ಹೋಳಕರನ ಈ ಮಾತನ್ನು ಕೇಳಿ ಭಾವುಸಾಹೇಬನು ಸ್ತಬ್ಧನಾದನು. ಆತನು ಹೋಳ ಕರನನ್ನು ಬೇಡಿಕೊಂಡನು, ಆತನಿಗೆ ಸೆರಗೊಡ್ಡಿದನು; ಆದರೂ ಹೋಳಕರನು ತನ್ನ ಹೊಟ್ಟೆ ಯೊಳಗಿನ ಸಿಟ್ಟುಬಿಡಲೊಲ್ಲನು; ಮತ್ತು ಗುಟ್ಟುಕೊಟ್ಟು ಮಾತಾಡಲೊಲ್ಲನು! ಕಾಲು ಬೀಳುವ ತನಕ ಭಾವುವು ಹಣ್ಣಾದರೂ ಹೋಳಕರನ ಸಮಾಧಾನವಾಗಲೊಲ್ಲದು. ಆಗ ಭಾವು ಸಾಹೇಬನು ಮತ್ತೆಹೋಳಕರನಿಗೆ—

ಭಾವುಸಾಹೇಬ—ಆದಮಾತು ಅರದಾಟದಿಂದ ಕೂಡಿ ಬರುವಹಾಗಿಲ್ಲ, ಅದರ ಚರ್ಚೆಯಿಂದ ಇನ್ನು ಪ್ರಯೋಜನವೇನು? ಮುಂದೆ ಆಗಬೇಕಾದದ್ದು ಆಗಿಯೇ ತೀರುವದು. ಅದನ್ನು ಯಾರೂ ತಪ್ಪಿಸುವದಿಲ್ಲ, ಕಾಕಾಸಾಹೇಬ, ನಮ್ಮ ವಿಷಯದ ನಿಮ್ಮ ಮನಸ್ಸಿನ ಕಿಲುಬನ್ನು ಬಿಟ್ಟುಬಿಡಬೇಕೆಂದು ಪ್ರಾರ್ಥಿಸುವೆನು? ಈಗ ಹಿರಿಯರಾದ ನೀವು ನನ್ನವೆರಡು ಮಾತುಗಳನ್ನು ನಡಿಸುವಿರಾ? ಅವನ್ನು ನಿಮ್ಮ ಮುಂದೆ ಹೇಳಲಾ?

ಮಲ್ಹಾರರಾಯ—ಹೇಳಿರಿ ಭಾವುಸಾಹೇಬ, ನನ್ನ ಕಿವಿಗಳು ಕೇಳಲಿಕ್ಕೆ ಸಿದ್ಧವಾಗಿರುವವು.

ಭಾವುಸಾಹೇಬ—ಆದರೆ ಈ ಕಿವಿಯಿಂದ ಕೇಳಿ ಈ ಕಿವಿಯಿಂದ ಬಿಟ್ಟರೆನ್ನುವ ಹಾಗೆ ಮಾಡಬಾರದು. ನನ್ನ ಮಾತುಗಳನ್ನು ನಡಿಸುವೆವೆಂದು ನೀವು ಮೊದಲು ನನಗೆ ವಚನಕೊಡಿರಿ.

ಮಲ್ಹಾರರಾವ—(ಸಮಾಧಾನದಿಂದ) ನಾನು ಶ್ರೀಮಂತರ ಹಳೆಯ ಸೇವಕನಿರುವೆನೆಂದು ಆಗಲೆ ಅರಿಕೆಮಾಡಿಕೊಂಡಿರುವೆನಲ್ಲವೆ? ಅಂದಬಳಿಕ ತಮ್ಮ ಅಪ್ಪಣೆಯು ನನಗೆ ಶಿರಸಾವಂದ್ಯವಾಗಿರಲು, ಪುನಃ ನಾನು ವಚನಕೊಡುವದೇಕೆ?

ಭಾವುಸಾಹೇಬ–ಸುಬೇದಾರ, ಹಾಗಾದರೆ ಹೇಳುವೆನು ಕೇಳಿರಿ. ಮೊದಲನೆಯ ಮಾತೇನಂದರೆ, ನೀವು ನಮ್ಮ ಮೇಲಿನ ಸಿಟ್ಟುಬಿಟ್ಟು ನಾಳಿನ ಯುದ್ಧದಲ್ಲಿ ಮನಃಪೂರ್ವಕವಾಗಿ ಕಾದಬೇಕು. ನೀವು ಈಗ ಹೊರಗೆ ಎಷ್ಟು ಸಮಾಧಾನ ತೋರಿಸಿದರೂ, ಎಷ್ಟು ಸವಿಮಾತುಗಳಾಡಿದರೂ, ಎಷ್ಟು ವಿನಯವನ್ನು ಪ್ರಕಟಿಸಿದರೂ ನಿಮ್ಮ ಹೊಟ್ಟೆಯೊಳಗಿನ ಸಿಟ್ಟು ಹೋಗಿಲ್ಲವೆಂಬದನ್ನು ನಾನು ಬಲ್ಲೆನು. ನನ್ನ ವಿಷಯದ ನಿಮ್ಮ ದ್ವೇಷಭಾವವು ನಷ್ಟವಾಗಿರುವದಿಲ್ಲ. ಇದರಲ್ಲಿ ಸರ್ವಾಂಶದಿಂದ ನಿಮ್ಮ ತಪ್ಪೇ ಇರುವದೆಂದು ನಾನು ಅನ್ನುವದಿಲ್ಲ. ನನ್ನ ಬಾಯಿಂದ ಪ್ರಸಂಗವಶಾತ್ ಹೊರಟಿದ್ದ ನಿಷ್ಠುರ ಮಾತುಗಳ ಪರಿಣಾಮವಿ ದೆಂದು ನಾನು ತಿಳಿದಿರುವೆನು; ಅದರಂತೆ, ನನ್ನ ಮಿತ್ರರು ನಿಮ್ಮ ಶತ್ರುಗಳಾಗಿರುವರೆಂಬದನ್ನೂ ನಾನು ಬಲ್ಲೆನು; ಆದರೂ ನಾನು ಯಾರವನೆಂಬದನ್ನಿಷ್ಟು ನೀವು ಮನಸ್ಸಿನಲ್ಲಿ ತಂದುಕೊಳ್ಳಿರಿ. ನಾನು, ಸದ್ಯಕ್ಕೆ ನಿಮ್ಮ ಒಡೆಯರಾಗಿದ್ದ ಶ್ರೀಮಂತ ನಾನಾಸಾಹೇಬ ಪೇಶ್ವೆಯವರ ಕಕ್ಕನಮಗನೂ, ಚಿಮಣಾಜಿ ಅಪ್ಪಾನವರ ಮಗನೂ, ಮಹಾರಾಷ್ಟ್ರ ರಾಜ್ಯವನ್ನು ಅಭಿವೃದ್ಧಿಗೊಳಿಸಿದ, ಹಾಗು ನಿಮ್ಮನ್ನು ಬೆನ್ನಲಿಬಿದ್ದ ತಮ್ಮನಂತೆ ನಡಿಸಿಕೊಂಡಿದ್ದ ಬಾಜೀರಾವ ಸಾಹೇಬರವರ ಪ್ರತ್ಯಕ್ಷ ಮೊಮ್ಮಗನೂ ಇರುತ್ತೇನೆ. ಇಂಥ ಈ ಸದಾಶಿವರಾಯನು ಸಣ್ಣಮೋರೆಮಾಡಿಕೊಂಡು ನಿಮ್ಮ ಮುಂದೆ ಕುಳಿತುಕೊಂಡು ನಿಮ್ಮನ್ನು ಪ್ರಾರ್ಥಿಸುತ್ತಲಿದ್ದಾನೆ; ನಿಮ್ಮ ಮುಂದೆ ಮೂಗು ಎಳೆಯುತ್ತಲಿದ್ದಾನೆ! ಈ ಪ್ರಸಂಗದಲ್ಲಿ, ನಿಮ್ಮ ಯಜಮಾನನ ಸಂತತಿಯವನಾದ ನನ್ನನ್ನು ನೀವು ಕೊಲ್ಲುವಿರೋ ಕಾಯುವಿರೋ? ನಿಮ್ಮ ಮನಸ್ಸಿನೊಳಗಿದ್ದದ್ದನ್ನು ಪರಮೇಶ್ವರನೇ ಬಲ್ಲನು! ಆದರೆ ಕಾಕಾಸಾಹೇಬ, ನಾನು ಈಗ ಗಟ್ಟಿಮುಟ್ಟಿಯಾಗಿ ಹೇಳುವದನ್ನು ಚನ್ನಾಗಿ ಕೇಳಿಕೊಳ್ಳಿರಿ. ಮನುಷ್ಯನ ಸ್ವಭಾವವು ಯಾವಾಗಲೂ ಒಂದೇಸವನಾಗಿರುವದಿಲ್ಲ. ಅದು ಯಾವಾಗ ಶಾಂತವಿರುವದು, ಯಾವಾಗ ಕ್ಷುಬ್ಧವಾಗುವದು, ಪ್ರಸಂಗಕ್ಕನುಸರಿಸಿ ಸ್ವಭಾವದಲ್ಲಿ ಬದಲಾವಣೆಯಾಗುವದು; ಆದ್ದರಿಂದ ನಾಳಿನ ರಣಾಂಗಣದಲ್ಲಿ ನಿಮ್ಮ ಸ್ವಭಾವದಲ್ಲಿ ಚಾಂಚಲ್ಯವುಂಟಾದರೆ, ಆಗ ನಿಮ್ಮ ಕಡೆಗೆ ಬುದ್ಧಿಪೂರ್ವಕವಾಗಿ ನಾನು ಒಬ್ಬ ರಾವುತನನ್ನು ಕಳಿಸುವೆನು. ಆತನು ನಿಮ್ಮನ್ನು ಕುರಿತು—''ಸುಬೇದಾರಸಾಹೇಬ, ನಿಮಗೆ ಸೂಚಿಸಿದಂತೆ ಮಾಡುವ ಪ್ರಸಂಗವು ಈಗ ಒದಗಿರುವದು'' ಎಂದು ನಿಮ್ಮನ್ನು ಎಚ್ಚರಗೊಳಿಸಬಹುದು. ಆಗ ನಿಮ್ಮ ಕುಲಸ್ವಾಮಿಯಾದ ಖಂಡೋಬನು ಬುದ್ಧಿಕೊಟ್ಟಂತೆ ನೀವು ನಡೆದುಕೊಳ್ಳಿರಿ. ಇದರಮೇಲೆಯೂ ಅಂತಃಕಲಹದ ಸೇಡು ತೀರಿಸಿಕೊಳ್ಳುವದು ನಿಮಗೆ ಸರಿದೋರಿದರೆ ಹಾಗೆ ಮಾಡಿರಿ. ಅದರ ಪರಿಣಾಮವೇನಾದೀತೆಂಬದನ್ನು ಮಾತ್ರ ಮನಸ್ಸಿನಲ್ಲಿ ತಂದುಕೊಳ್ಳಿರಿ. ಅದರಿಂದ ಲಕ್ಷಾವಧಿಸೈನ್ಯದ ಸಂಹಾರವಾದೀತು—ಸ್ವರಾಜ್ಯವು ಮುಣುಗೀತು–ಮರಾಟರ ಹೆಸರಿಗೆ ದುಷ್ಕೀರ್ತಿಯ ಕಲಂಕತಗಲೀತು–ಎಲ್ಲ ಬಗೆಯ ಮಹಾಪಾಪವು ನಿಮ್ಮ ತಲೆಯಮೇಲೆ ಹೊತ್ತೀತು–ನಿಮ್ಮ ಸಂತತಿ

ಯವರು ಮೋರೆ ತಗ್ಗಿಸಬೇಕಾದೀತು–ಬಹಳ ಹೇಳುವದೇನು? ಯಾವತ್ತುರಾಷ್ಟ್ರದ ಶಾಪವು ನಿಮಗೆ ತಟ್ಟೀತು!

ಭಾವುಸಾಹೇಬನ ಈ ದಾರುಣ ವಚನಗಳನ್ನು ಹೋಳಕರನು ಸುಮ್ಮನೆ ಕೇಳುತ್ತಲಿದ್ದನು. ಆತನ ಮುಖದಿಂದ ಅಕ್ಷರಗಳು ಹೊರಡಲೊಲ್ಲವು. ಆಗ ಪುನಃ ಭಾವುಸಾಹೇಬನು ಆತನನ್ನು ಕುರಿತು–ಸುಬೇದಾರ, ಇನ್ನು ಎರಡನೆಯ ಮಾತನ್ನು ಹೇಳುತ್ತೇನೆ ಕೇಳಿಕೊಳ್ಳಿರಿ. ನಾಳೆ ಕದಾಚಿತ್ ಎಲ್ಲರೊಡನೆ ನನಗೂ ರಣಭೂಮಿಯಲ್ಲಿ ಬೀಳುವ ಪ್ರಸಂಗ ಒದಗೀತು. ಯಾಕಂದರೆ, ಎಲ್ಲರು ಹಿಡಿದ ಹಾದಿಯೇ ನನ್ನ ಹಾದಿಯು! ದುರ್ದೈವದಿಂದ ಅಂಥ ಪ್ರಸಂಗ ಒದಗಿದರೆ, ಹೆಂಗಸರು ಹುಡುಗರ ಸಂರಕ್ಷಣವನ್ನು ನೀವು ಮಾಡಬೇಕೆಂಬದು ನನ್ನ ಆ ಎರಡನೆಯ ಮಾತು. ಪಾಪ! ಕುಟುಂಬದವರೇನು ಅಪರಾಧ ಮಾಡಿರುವರು? ನಮ್ಮ ಪಶ್ಚಾತ್ ನಮ್ಮ ಕುಟುಂಬದವರು ಜೀವದಿಂದ ಶತ್ರುಗಳ ಕೈಯಲ್ಲಿ ಸಿಗಬಾರದೆಂದು ನಾನು ಇಚ್ಛಿಸುವೆನು. ಕಾಕಾಸಾಹೇಬ, ನೀವು ಆ ಅನಾಥ ಪ್ರಾಣಿಗಳ ಮರ್ಯಾದೆಯನ್ನೂ, ಜೀವವನ್ನೂ ಉಳಿಸುವ ಕೀರ್ತಿಯನ್ನು ಸಂಪಾದಿಸಿ, ಅವರ ಆಶೀರ್ವಾದವನ್ನೂ ಪಡೆಯಿರಿ. ನಜೀಬಖಾನ ರೋಹಿಲೆಯು ನಿಮ್ಮ ಪರಮ ಸ್ನೇಹಿತ ನಾಗಿರುವನು. ಆತನ ಮಾತು ಅಹಮ್ಮದಶಹನ ಮುಂದೆ ನಡೆಯುವದು; ಆದ್ದರಿಂದ ಆತನ ಮುಖಾಂತರ ನೀವು ನಮ್ಮ ಕುಟುಂಬದವರ ಸಂರಕ್ಷಣವನ್ನು ಮಾಡಬೇಕು. ಇಂದಿಗೆ ನೀವು ನಮ್ಮ ತಂದೆಯ ಸಮಾನರಿರುವಿರಿ. (ಹೀಗೆ ನುಡಿಯುವಾಗ ಭಾವುಸಾಹೇಬನ ಕಣ್ಣೀರುಗಳು ಬಳ ಬಳ ಉದುರಹತ್ತಿದವು. ಅವನ್ನು ಶಾಲಿನಿಂದ ಒರಿಸಿಕೊಳ್ಳುತ್ತ) ಕಾಕಾಸಾಹೇಬ, ನಮ್ಮ ರಾವಸಾಹೇಬನೂ, ಅಪ್ಪಾಸಾಹೇಬರೂ ನಿಮ್ಮನ್ನು ಬಂಧುವೆಂದು ಭಾವಿಸಿದ್ದರಲ್ಲವೆ? ಆ ದೃಷ್ಟಿಯಿಂದ ನೋಡಿದರೆ, ನಾವು ನಿಮ್ಮ ಮಕ್ಕಳಾದೆವು. ನಿಮ್ಮನ್ನು ನಾವು ''ಕಾಕಾ, ಕಾಕಾ'' ಎಂದು ಕರೆಯುತ್ತೇವೆ; ಆದ್ದರಿಂದ ನಮ್ಮ ಹಿರಿಯರ ಪಶ್ಚಾತ್ ಮಕ್ಕಳನ್ನೂ, ಸೊಸೆಂದಿರನ್ನೂ ರಕ್ಷಿಸುವ ಅಧಿಕಾರವು ನಿಮ್ಮದಿರುತ್ತದೆ. ಕಾಕಾಸಾಹೇಬ, ನನ್ನ ಮಾತುಗಳನ್ನು ನೀವು ಕೇಳಿದಿರಷ್ಟೆ? ಈಗ ಒಮ್ಮೆ ''ನಾನು ಕೇಳಿದೆನು.'' ಎಂದು ಅನ್ನಿರಿ, ಅಂದರೆ ನನಗೆ ಸ್ವಲ್ಪ ಸಮಾಧಾನವಾಗುವದು.

ಮಲ್ಹಾರರಾವ—ಕೇಳಿದೆನು, ಭಾವುಸಾಹೇಬ, ಎಲ್ಲಾ ಕೇಳಿದೆನು! ಅಂಥ ಪ್ರಸಂಗವನ್ನು ದೇವರು ತರಲೇಬೇಡ. ಕದಾಚಿತ್ ಅಂಥ ಪ್ರಸಂಗವು ಬಂದದ್ದೇ ಆದರೆ, ನಾನು ಜೀವದಿಂದಿರುವವರೆಗೆ ಹುಡುಗರು ಹೆಂಗಸರ ಮರ್ಯಾದೆಗೂ, ಅವರ ಜೀವಕ್ಕೂ ಅಪಾಯವಾಗಗೊಡಲಿಕ್ಕಿಲ್ಲ, ಈ ವಿಷಯದಲ್ಲಿ ನಾನು ಮನಃಪೂರ್ವಕವಾಗಿ ಯತ್ನಿಸುವೆನು.

ಈ ಮಾತುಗಳನ್ನು ಹೋಳಕರನ ಮುಖದಿಂದ ಮನಃಪೂರ್ವಕವಾಗಿ ಹೊರಟದ್ದನ್ನು ಕೇಳಿ ಭಾವುಸಾಹೇಬನಿಗೆ ಸ್ವಲ್ಪ ಸಮಾಧಾನವಾದಂತಾಯಿತು. ಆತನು ಮಲ್ಹಾರರಾಯನಿಗೆ—''ಸಾಕು, ಇಷ್ಟು ಮಾತು ತಮ್ಮ ಮುಖದಿಂದ ಹೊರಟದ್ದೇ ಸಾಕು. ಇನ್ನು ಮುಂದಿನ ಚಿಂತೆ ನನಗಿಲ್ಲ, ಈಶ್ವರೇಚ್ಛೆಯ ಹೊರತು ಒಂದು ಕಡ್ಡಿಯೂ ಅಲ್ಲಾಡುವದಿಲ್ಲ, ಆತನ ಪ್ರೇರಣೆಯಿಂದಲೇ ನಾವು ನಾಳೆ ನಮ್ಮ ಶಿರಃಕಮಲಗಳನ್ನು ಕೈಯಲ್ಲಿ ಹಿಡಕೊಂಡು ಸಮರಾಂಗಣಕ್ಕೆ

ಹೋಗುವೆವು. ಈ ಮಾತಿನ ವಿಚಾರಕ್ಕಾಗಿಯೇ ಇಂದು ರಾತ್ರಿ ದರ್ಬಾರು ನೆರೆಯತಕ್ಕದ್ದದೆ. ಆಗ ನಿಮ್ಮ ವಿಚಾರಗಳನ್ನು ತಿಳಿಸಬೇಕು. ನಿಮ್ಮಂಥ ಸುಜ್ಞರೂ, ವಯೋವೃದ್ಧರೂ ಆದ ಸರದಾರರ ಆಲೋಚನೆಯು ಈ ಕಠಿಣ ಪ್ರಸಂಗದಲ್ಲಿ ಅತ್ಯಂತ ಹಿತಕರವಾಗುವಲ್ಲಿ ಸಂಶಯ ವಿಲ್ಲ.'' ಎಂದು ನುಡಿಯಲು, ಮಲ್ಹಾರರಾಯನು—''ಸರಕಾರದ ಇಚ್ಛೆಯಂತೆ ನಡೆಯು ವದು ನನ್ನ ಕೆಲಸವು. ಹೆಚ್ಚಿನದನ್ನು ನಾನರಿಯೆನು.'' ಎಂದು ಹೇಳಿದನು. ಮುಂದೆ ಸ್ವಲ್ಪ ಮಾತು-ಕಥೆಗಳು ನಡೆದು ಮಲ್ಹಾರ ರಾಯನು ಭಾವುಸಾಹೇಬನ ಅಪ್ಪಣೆಪಡೆದು ತನ್ನ 'ಫುಲಮತಿ' ಕುದುರೆಯನ್ನೇರಿ ಪರಿವಾರ ದೊಡನೆ ಡೇರೆಗೆ ಹೊರಟನು. ಹೋಗಹೋಗುತ್ತ ಆತನು ತನ್ನ ಮನಸ್ಸಿನಲ್ಲಿ— (''ಸಬ್ ಜಗ್ಗೇ ಸಾಪ ತೇಡಾಚಲೇ, ಲೇಕಿನ ಬಿಲಮೇ ಸೀದಾಘುಸೆ'') ಎಂಬಂತೆ ಈ ಬ್ರಾಹ್ಮಣನು ಈಗ ನನಗೆ ಬ್ರಹ್ಮಜ್ಞಾನವನ್ನು ಬೋಧಿಸು ತ್ತಾನೆ. ಈಗೆಲ್ಲ ಸವಿಮಾತು ಸುರಿಸುವನು. ಈತನ ಮಾತಿಗೆ ಮರುಳಾಗಿ ನಾನು ನಾಳೆ ದುರಾಣಿಯ ಜನರನ್ನು ತುಂಡರಿಸಿ ಚಲ್ಲಿದರೆ, ಈತನು ಹಾವಿನ ಹಾಗೆ ನನ್ನ ಮೇಲೆಯೇ ತಿರುಗಿ ಬೀಳುವದಿಲ್ಲೆಂದು ಹ್ಯಾಗೆ ಹೇಳಬೇಕು? ಇವರು ನಿನ್ನೆಮೊನ್ನಿನ ಹುಡುಗರು. ನನ್ನ ಮುಂದೆ ಬರಿಮೈಯಿಂದ ಓಡಾಡುತ್ತಿದ್ದರು. ಇನ್ನೂ ಇವರ ತಲೆಯಮೇಲಿನ ಮಾಂಸವಾರಿಲ್ಲ, ಇಂಥವರು ನನಗೆ ಬುದ್ಧಿಗಲಿಸುತ್ತಾರೆ! ನಾಳೆ ಇವರ ಸಮಶೇಕಬಹದ್ದರ, ಪುರಂದರೆ, ಸಿಂದೆ, ಇಬ್ರಾಹಿಮಖಾನ ಇವರು ಜಯಶಾಲಿಗಳಾದರೆ, ಇವರ ಕಣ್ಣು ತಿರುಗಿ ಹೋದಾವು. ಇವರ ನಂಬಿಗೆ ನನಗಿಲ್ಲ, ನಮ್ಮ ರಾವಸಾಹೇಬ, ಅಪ್ಪಾಸಾಹೇಬ, ನಾನಾಸಾಹೇಬ ಇವರು ಎಂಥ ದೊಡ್ಡ ಮನುಷ್ಯರು? ಅವರು ಹೊಟ್ಟೆಯ ಮಕ್ಕಳಂತೆ ನಮ್ಮನ್ನು ರಕ್ಷಿಸಿದರು. ಅಂತೇ ಅವರ ಕಾಲೊಳಗಿನ ಜೋಡುಗಳಿದ್ದಲ್ಲಿ ನಮ್ಮ ತಲೆಗಳನ್ನಿಳಿಸಲಿಕ್ಕೆ ನಾವು ಸಿದ್ಧರಿರುತ್ತಿದ್ದೆವು.'' ಎಂದು ಒಟಗುಟ್ಟುತ್ತ ತನ್ನ ಡೇರೆಯನ್ನು ಹೊಕ್ಕನು. ಇತ್ತ ಭಾವೂ ಸಾಹೇಬನು ಮನಸ್ಸಿನಲ್ಲಿ-— ''ಈತನು ನಮಗೆ ಘಾತಮಾಡುವನೋ ಏನೋ ಎಂಬ ಸಂಶಯವು ನನಗೆ ಬರಹತ್ತಿದೆ. ಈತನಲ್ಲಿ ವಿಶ್ವಾಸವಿಟ್ಟು ನಡೆಯುವದು ಶ್ರೇಯಸ್ಕರವಲ್ಲ. ದೇವರು ಈತನಿಗೆ ಸದ್ಬುದ್ಧಿಯನ್ನು ಕೊಡಲಿ'' ಎಂದು ಅಂದುಕೊಳ್ಳುತ್ತಿರಲು, ಸೂರ್ಯಾಸ್ತಮಯವಾಗಿ ಸಾಯಂಸಂಧ್ಯಾಕಾಲವು ಪ್ರಾಪ್ತವಾಯಿತು; ಆದ್ದರಿಂದ ಆತನು ಅಲ್ಲಿಂದ ಎದ್ದು, ಸಂಧ್ಯಾವಂದನದ ಡೇರೆಯನ್ನು ಹೊಕ್ಕನು.

ಮರುದಿವಸ ಬೆಳಗಿನಲ್ಲಿಯೇ ಯುದ್ಧವು ಆರಂಭವಾಗತಕ್ಕದ್ದಾದ್ದರಿಂದ, ಯಾವ ಕೆಲಸಕ್ಕೂ ಹೆಚ್ಚು ಅವಕಾಶವು ದೊರೆಯುವಂತೆ ಇದ್ದಿಲ್ಲ. ಶ್ರೀಮಂತರ ಸಂಧ್ಯಾವಂದನದ ಕೆಲಸವು ತೀರಿದಕೂಡಲೆ ದರ್ಬಾರದ ಕಾರ್ಯಕ್ಕೆ ಆರಂಭವಾಯಿತು. ದಂಡಿನ ಭಾವಣೆಯೆಲ್ಲ ಯುದ್ಧೋತ್ಸುಕವಾಗಿತ್ತು; ಯಾಕಂದರೆ, ಅನ್ನದ ದುರ್ಭಿಕ್ಷದ ಮೂಲಕ ಉಪವಾಸದ ಕಷ್ಟವು ಎಲ್ಲರಿಗೂ ದುಸ್ಸಹವಾಗಿತ್ತು, ಯಾವತ್ತು ಸರದಾರರು ದರ್ಬಾರಕ್ಕೆ ಬಂದು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಂಡರು. ಶ್ರೀಮಂತರ ಸವಾರಿಗಳೂ ತಮ್ಮ ಗಾದಿಗಳನ್ನಲಂಕರಿಸಿದವು. ದರ್ಬಾರದ ಗದ್ದಲವಡಗಿ ಸ್ತಬ್ಧತೆಯಾಗಲು, ಭಾವುಸಾಹೇಬನು ಎದ್ದು ನಿಂತು ಊರ್ಧ್ವದೃಷ್ಟಿ

ಯಿಂದ—''ರಣದೇವತೆಗಳಿರಾ, ನಿಮ್ಮ ಕೃಪಾಛತ್ರವೂ, ಅನುಗ್ರಹವೂ ನಮ್ಮ ಮೇಲಿದ್ದರೆ ಮರಾಟರ ಯಶೋದುಂದುಭಿಯು ಭರತಖಂಡದಲ್ಲಿಯೇ ಏಕೆ, ಖುರಾಸಾಣದ ಪರ್ವತ ಶಿಖರಗಳ ಮೇಲೆಯೂ ದಿಮಿಗುಟ್ಟಬಹುದು!'' ಎಂದು ನುಡಿಯಲು, ಅದನ್ನೇ ದರ್ಬಾರದ ವೀರರೆಲ್ಲ ಪುನಃ ಉಚ್ಚರಿಸಿ ಜಯಘೋಷ ಮಾಡಿದರು. ಆ ಘೋಷದ ಅನುಕರಣವನ್ನು ದರ್ಬಾರದ ಹೊರಗಿನ ಪ್ರಚಂಡ ವೀರ ಸಮೂಹವು ಮಾಡಲು, ಜಯನಾದದ ಧ್ವನಿ-ಪ್ರತಿಧ್ವನಿಗಳಿಂದ ದಶ ದಿಕ್ಕುಗಳು ತುಂಬಿದವು. ಸೈನಿಕರು—''ಇನ್ನು ಕೇಶರಿಯ ಪೋಷಾಕು ಕೊಟ್ಟು, ನಮ್ಮನ್ನು ಸಮರಭೂಮಿಗೆ ಕಳಿಸಿರಿ. ಬರ್ಚಿ-ಭಾಲೆಗಳಿಂದ ಚುಚ್ಚಿಸಿಕೊಳ್ಳುವದ ಕ್ಕಿಂತ ಹಸಿವೆಯ ತೀವ್ರವಾದ ವೇದನೆಯು ನಮಗೆ ಅಸಹ್ಯವಾಗಿದೆ. ಬೇಗನೆ ನಮ್ಮನ್ನು ದುರಾಣಿಯಮೇಲೆ ಯುದ್ಧಕ್ಕೆ ಕಳಿಸಿರಿ ಇನ್ನು ನಾವು ತಡೆಯಲಾರೆವು.'' ಎಂದು ನುಡಿಯುತ್ತಿರಲು, ಭಾವುಸಾಹೇಬನ ಅಪ್ಪಣೆಯಂತೆ ಸೇವಕರು ಕೇಶರಿಯ ಪೋಷಾಕುಗಳನ್ನೂ, ವೀಳಯಗಳಿಂದ ತುಂಬಿದ ತಬಕಗಳನ್ನೂ ತಂದಿಟ್ಟರು. ಬಳಿಕ ಭಾವುಸಾಹೇಬನು ಯಾವತ್ತು ವೀರರನ್ನು ಕುರಿತು—ವೀರರೇ, ನಮ್ಮ ಪರಾಕ್ರಮವನ್ನು ಪ್ರಕಟಿಸಲು ಸಮಯವು ಸಮೀಪಿಸಿರುವದರಿಂದ, ಮಾತಾಡುತ್ತ ಕಾಲಕಳೆಯುವದು ವ್ಯರ್ಥವೇ ಸರಿ; ನಾಳೆ ಬೆಳಗಾಗುತ್ತಲೇ ರಣಭೂಮಿಗೆ ತೆರಳತಕ್ಕದ್ದು, ನಾಳಿನ ಯುದ್ಧದಲ್ಲಿ ನಾವು ಜಯಶಾಲಿಗಳಾಗೋಣ, ಇಲ್ಲವೆ ರಣಭೂಮಿಯಲ್ಲಿ ದೇಹವನ್ನಿಡೋಣ. ಇವೆರಡರಲ್ಲಿ ಒಂದರ ನಿರ್ಣಯಕ್ಕೆ ಇನ್ನು ಇಪ್ಪತ್ತು ನಾಲ್ಕು ತಾಸುಗಳ ಅವಕಾಶವು ಮಾತ್ರ ಉಳಿದಿರುವದು. ಸರಕಾರಿಯ ಉಗ್ರಾಣದೊಳಗಿನ ಕಾಳು-ಕಡಿಯಮೇಲೆ, ಹಾಗು ಮೇವು ಮಿಡಚಿಯಮೇಲೆ ಇಂದು ಎಲ್ಲ ಛಾವಣಿಯವರ ಅಧಿಕಾರವಿರುತ್ತದೆ, ಇಂದು ಛಾವಣಿಯಲ್ಲಿ ಉಪವಾಸವೆಂಬ ಶಬ್ದವು ಕಿವಿಗೆ ಬೀಳಲಾಗದು. ಎಲ್ಲರಿಗೂ ಸುಗ್ರಾಸ ಭೋಜನದ ವ್ಯವಸ್ಥೆ ಯಿಡಿಸುವದಕ್ಕಾಗಿ ಉಗ್ರಾಣದ ಅಧಿಕಾರಿಗಳಿಗೆ ಅಪ್ಪಣೆಯಾಗಿದೆ. ವೀರರೇ ಇನ್ನು ಸ್ವತಃ ನಾನು ನಾಳೆ ಯುದ್ಧಮಾಡುವ ಸಂಬಂಧದಿಂದ ಹೆಚ್ಚಿಗೆ ಮಾತಾಡುವದಿಲ್ಲ ನಾಳಿನ ಸಮರದಲ್ಲಿ ನನ್ನ ಕೃತಿಯಿಂದ ಅದು ವ್ಯಕ್ತವಾಗುವದು. ನಿಮಗಾದರೂ ಕೃತಿಯಿಂದ ಪೌರುಷವ ವ್ಯಕ್ತಮಾಡುವ ಸದ್ಬುದ್ಧಿಯನ್ನು ಪರಮೇಶ್ವರನು ಕೊಡಲಿ ನಾಳಿನ ಯುದ್ಧದಲ್ಲಿ ''ಅರ್ಥಂವಾ ಸಾಧಯೇತ್, ದೇಹಂವಾ ಪಾತಯೇತ್'' ಎಂಬುದು ನನ್ನ ದೃಢಸಂಕಲ್ಪವಾಗಿರುತ್ತದೆ. ನೀವು ಇನ್ನು ಕೇಶರಿಯ ಪೋಷಾಕನ್ನು ಧರಿಸಿ, ವೀಳೆಯವನ್ನು ಕೈಕೊಂಡು ಯುದ್ಧಕ್ಕೆ ಸಿದ್ಧರಾಗಿರಿ.

ಈ ಮೇರೆಗೆ ಭಾವುಸಾಹೇಬನ ನಿರ್ಧಾರದ ಮಾತು ಮುಗಿದಮೇಲೆ ಖಾಸಸ್ವಾರಿಗಳಿಗೆ ಕೇಶರಿಯ ಪೋಷಾಕನ್ನೂ, ವೀಳಯವನ್ನೂ, ಹೂಮಾಲೆಯನ್ನೂ, ಸುಗಂಧದ್ರವ್ಯಗಳನ್ನೂ ಸಮರ್ಪಿಸಿದರು. ಅದರಂತೆ, ಉಳಿದ ಸರದಾರರ ಸಂಭಾವನೆಯೂ ಆಯಿತು. ಆಗ ಭಾವುಸಾಹೇಬನು ಗಂಗಾಜಲಪೂರ್ಣ-ಸುವರ್ಣಕಲಶವನ್ನು ಕೈಯಲ್ಲಿ ಹಿಡಿದು—''ನಾಳಿನ ಯುದ್ಧ ಪ್ರಸಂಗದಲ್ಲಿ ಜಯಪ್ರಾಪ್ತಿಗಾಗಿ ನಾನು ನನ್ನ ಶಿರಃಕಮಲವನ್ನು ಭೂಲಿಂಗಕ್ಕೆ ಅರ್ಪಿಸುವೆನು. ಅಪಕೀರ್ತಿಗೆ ಗುರಿಯಾಗಿ ರಣಭೂಮಿಯಿಂದ ಸರ್ವಥಾ ಕಾಲುದೆಗೆಯಲಿಕ್ಕಿಲ್ಲ'' ಎಂದು

ಭೀಷ್ಮಪ್ರತಿಜ್ಞೆಯ ಶಬ್ದಗಳನ್ನು ಉಚ್ಚರಿಸಿ, ಗಂಗೋದಕವನ್ನು ಬಿಟ್ಟನು! ಆ ತರುಣ ಬ್ರಾಹ್ಮಣವೀರನ ಘೋರಪ್ರತಿಜ್ಞೆಯನ್ನು ಕೇಳಿ, ವೀರರ ಹೃದಯಗಳು ಕೂಡ ಕಂಪಿಸುತ್ತಿರಲು, ಮತ್ತೆ ಆ ವೀರನು ಗಾಂಭೀರ್ಯದಿಂದ ದರ್ಬಾರದ ವೀರರಿಗೆ—''ನೀವಾದರೂ ಸ್ವಾಮಿ-ಸೇವಕ ಭಾವವನ್ನರಿತು ಮರಾಟರ ಕೀರ್ತಿರಕ್ಷಣಕ್ಕಾಗಿ ವಂಚನೆಯಿಲ್ಲದೆ ಕಾದತಕ್ಕದ್ದು. ನಿಮ್ಮಂಥ ಶೂರರೂ, ಸಮಂಜಸರೂ, ಶಸ್ತ್ರಾಸ್ತ್ರ ಕುಶಲರೂ ಆದವರಿಗೆ ಹೆಚ್ಚಿಗೆ ಹೇಳಲವಶ್ಯವಿಲ್ಲ.'' ಎಂದು ನುಡಿದು, ಸುಮ್ಮನಾದನು.

ಭಾವುಸಾಹೇಬನ ಈ ವೀರೋಚಿತ ಭಾಷಣವನ್ನು ಕೇಳಿ ದರ್ಬಾರದ ಜನರ ಯುದ್ಧೋತ್ಸಾಹವು ಹೆಚ್ಚಿತು. ಅವರಿಗೆ ಸಂಗ್ರಾಮದಲ್ಲಿ ಜಯಪ್ರಾಪ್ತಿಯಾಗುವ ಆಶೆಯು ವಿಶೇಷವಾಗಿರದಿದ್ದರೂ, ಇನ್ನು ತಮಗೆ ಛಾವಣಿಯಲ್ಲಿ ಬಿದ್ದುಕೊಳೆಯುವದು ತಪ್ಪಿತೆಂದು ಅವರು ಸಂತೋಷಪಟ್ಟರು. ಅವರ ಜಯಘೋಷದಿಂದ ವೀರರ ಬಾಹುಗಳು ಸ್ಫುರಣಗೊಂಡವು. ಅದನ್ನು ನೋಡಿ ಭಾವುಸಾಹೇಬನಿಗೂ ಸಂತೋಷವಾಯಿತು. ಬಳಿಕ ಆಯಾ ಸರದಾರರು ನಾಳಿನ ಯುದ್ಧದಲ್ಲಿ ತಾವು ಮಾಡಬಹುದಾದ ಕೆಲಸಗಳನ್ನು ಆವೇಶದಿಂದ ವರ್ಣಿಸ ತೊಡಗಿದರು. ಇಬ್ರಾಹಿಮಖಾನಗಾರದಿಯು, ತನ್ನ ಕವಾಯತಿಯ ಸೈನ್ಯದ ಸ್ವಾಮಿಭಕ್ತಿಯ ಸೌರಭವನ್ನು ನಾಳೆ ಚನ್ನಾಗಿ ತೋರಿಸುವೆನೆಂದು ಹೇಳಿದನು. ದಮಾಜಿಗಾಯಕವಾಡನು—ನಾಳಿನ ಸಮರದಲ್ಲಿರೋಹಿಲರ ಸಮಾಚಾರವನ್ನು ನಾನು ಚನ್ನಾಗಿ ತಕ್ಕೊಳ್ಳುವೆನೆಂದು ನುಡಿದನು. ಹೋಳಕರನು—ಹೀಗೆ ಒಮ್ಮೆಲೆ ಶತ್ರುಗಳ ಮೇಲೆ ಬೀಳುವರು, ದೀಪದ ಮೇಲೆ ಪತಂಗದ ಹುಳವು ಬಿದ್ದಹಾಗೆಯೇಸರಿ. ನಾವು ವೃದ್ಧರು; ನಮಗೆ ಅರವತ್ತುವರುಷದ ಅರವು- ಮರವು; ಆದರೂ ನಮ್ಮ ಗಾಯಕವಾಡ, ವಿಂಚೂರಕರ, ನವಾಬರವರ ಮಾರ್ಗವನ್ನನುಸರಿಸಿ ನಾನು ಹೋಗ ತಕ್ಕವನು.'' ಎಂದು ಉಸುರಿದನು. ವಿಠ್ಠಲರಾವ ವಿಂಚೂರಕರನು—''ನಮ್ಮೆಲ್ಲರಲ್ಲಿ ಸುಬೇದಾರ ಹೋಳಕರರೇ ಶ್ರೇಷ್ಠರು. ಅವರು ಔದಾಸೀನ್ಯವ ಪ್ರಕಟಿಸುವದನ್ನು ನೋಡಿದರೆ, ನಮ್ಮ ದುರ್ದೈವವು ಹಿಂಗಲ್ಲವೆಂದು ಹೇಳಬೇಕಾಗುತ್ತದೆ. ಆಗಲಿ, ಈಶ್ವರರೇಚ್ಛೆ ಯಿದ್ದಂತಾಗುವದು. ನಾವು ಸ್ವಾಮಿಭಕ್ತಿಯಿಂದ ರಣಕಾರ್ಯವನ್ನು ನಡಿಸಿದರಾಯಿತು'' ಎಂದು ನುಡಿದನು. ಜನಕೋಜಿ ಸಿಂದೆ, ಮಹದಾಜಿಸಿಂದೆ, ಸಮಶೇರಬಹದ್ದರ, ಪುರಂದರೆ ಇವರು—ನಾವು ಖಾಸ ಸಾರಿಗಳನ್ನು ಬಿಟ್ಟು ಅಗಲೆವೆಂತಲೂ, ಪ್ರಾಣಾಂತ ಸಮಯವು ಒದಗಿದರೂ ನಮ್ಮ ಬೆಂಗಾವಲಿನ ಕೆಲಸವನ್ನು ಬಿಡೆವೆಂತಲೂ ಹೇಳಿದರು. ಅಂತಾಜಿಮಾಣಕೇಶ್ವರನು-ಇನ್ನು ಮೇಲೆ ಮಾತಿನಲ್ಲಿ ಹೊತ್ತುಗಳೆಯುವದು ಸರಿಯಲ್ಲ. ಇನ್ನು ಹೊತ್ತು ಸ್ವಲ್ಪ ಉಳಿದದೆ. ತಮ್ಮ ತಮ್ಮ ಪರಾಕ್ರಮವನ್ನೂ, ಸ್ವಾಮಿಭಕ್ತಿಯನ್ನೂ ತೋರಿಸುವ ಸುಸಮಯವು ಸಮೀಪಿಸಿದೆ. ನಾನು ಜಾತಿಯಿಂದ ಬ್ರಾಹ್ಮಣನು. ನಮ್ಮ ಹಿರಿಯರು ಸ್ನಾನ-ಸಂಧ್ಯೆ, ಯಜ್ಞ-ಯಾಗ, ಜಪ-ತಪಾದಿ ಸಾತ್ವಿಕ ಕರ್ಮಗಳನ್ನಾಚರಿಸುತ್ತಿದ್ದರು. ನಾವು ಅವನ್ನು ಬಿಟ್ಟು ಕೈಯಲ್ಲಿ ಶಸ್ತ್ರಧರಿಸಿ ಯುದ್ಧವಿದ್ಯೆಯ ಅಧ್ಯಯನ ಮಾಡಿ ರಾಜಸವಾದ ಯುದ್ಧಕರ್ಮವನ್ನು ಕೈಕೊಂಡೆವು. ನಮ್ಮ ಹೊಸವಿದ್ಯೆಯ ಪರೀಕ್ಷೆಯ ಸಮಯವು ಒದಗಿದೆ.

ಅದನ್ನು ನಾವು ವ್ಯರ್ಥ ಹೋಗಗೊಡಲಾರೆವು. ನಮ್ಮಿಂದ ಹೆಚ್ಚಿನ ಸಾಹಸವಾಗದಿದ್ದರೂ, ನಮ್ಮ ಮರಾಠಾಬಂಧುಗಳ ಸಮಾನಸ್ಕಂಧರಾಗಿಯಾದರೂ ನಾವು ಕಾದದೆ ಬಿಡೆವು.

ಈ ಮೇರೆಗೆ ಆಡುವ ವೀರರ ಆವೇಶದ ಮಾತುಗಳನ್ನು ಕೇಳಿ ಭಾವುಸಾಹೇಬನಿಗೆ ಸಂತೋಷವಾಯಿತು. ಮುಂದೆ ಸ್ವಲ್ಪಹೊತ್ತಿನಲ್ಲಿ ಸೈನ್ಯದ ರಚನಾಪದ್ಧತಿಯನ್ನು ಭಾವುಸಾಹೇಬನು ಹೇಳಿದ ಬಳಿಕ ದರ್ಬಾರದ ಕೆಲಸವು ತೀರಿ, ಎಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ಹೊರಟರು. ಆಗ ಹೊರಗೆ ತೋಫುಗಳು ಗರ್ಜಿಸತೊಡಗಿದವು. ನಗಾರೆ ನೌಬತ್ತುಗಳು ಬಾರಿಸಹತ್ತಿದವು. ಎಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ಹೋಗಿ, ಅಂದಿನ ರಾತ್ರಿಯೆಲ್ಲ ಸ್ವಚ್ಛಂದವಾಗಿ ವರ್ತಿಸಲು ನಿಶ್ಚಯಿಸಿದರು; ಯಾಕಂದರೆ, ನಾಳಿನ ಯುದ್ಧದಲ್ಲಿ ಉಳಿಯುವೆವೆಂದು ಯಾರೂ ನಿಶ್ಚಯ ದಿಂದ ಹೇಳುವಹಾಗಿದ್ದಿಲ್ಲ. ವೀರರಿಗೆ ಮರಣವು ತೃಣಪ್ರಾಯವೆಂಬುದನ್ನು, ಅಂದಿನ ರಾತ್ರಿಯ ಮರಾಟರ ಛಾವಣಿಯೊಳಗಿನ ಆನಂದೋತ್ಸವಗಳನ್ನು ಕಣ್ಣುಮುಟ್ಟಿ ನೋಡಿದ ವರು ಮನಗಾಣಬಹುದಾಗಿತ್ತು. ಎಲ್ಲಿ ನಾಚುರಂಗುಗಳು ನಡೆದವೆ; ಎಲ್ಲಿ ಭೋಜನ ಸಮಾರಂಭಗಳು ಸಾಗಿವೆ. ಎಲ್ಲಿ ಪ್ರಿಯ ಜನರ ಸಲ್ಲಾಪಗಳು ಸುರಿಯುತ್ತಲಿವೆ; ಎಲ್ಲಿ ಆಟ–ನೋಟಗಳು ಸಾಗಿವೆ; ಎಲ್ಲಿ ಭವಿಷ್ಯವಾದವು ನಡೆದದೆ; ಹೀಗೆ ಒಂದಿಲ್ಲೊಂದು ಬಗೆಯ ಚಕ್ಕಂದದ ಕೃತಿಯಲ್ಲಿ ಸೈನಿಕರ ಕಾಲಕ್ರಮಣವಾಗತೊಡಗಿತ್ತು. ಹೀಗೆ ಇತ್ತ ಈ ಛಾವಣಿಯಲ್ಲಿ ಈ ಬಗೆಯ ವ್ಯವಹಾರಗಳು ನಡೆದಿರುವಾಗ, ಅತ್ತ ಉಮೆಯು. ಮಹಿಪತರಾಯನೊಡನೆ ಸುಜಾನ ಡೇರೆಯನ್ನು ಪ್ರವೇಶಿಸಿ, ಆತನ ಇಂಗಿತವನ್ನು ಅರಿತುಕೊಳ್ಳುತ್ತಿದ್ದಳು. ಆ ಕರ್ತೃತ್ವ ಶಾಲಿನಿಯಾದ ತರುಣಿಯು ತನ್ನ ಆ ಸಾಹಸದ ಕಾರ್ಯವನ್ನು ಹ್ಯಾಗೆ ಸಾಗಿಸಿದಳೆಂಬದನ್ನು ಮುಂದಿನ ಪ್ರಕರಣದಲ್ಲಿ ಹೇಳುವೆವು.

## ಸುಜಾನಸ್ವಾರ್ಥದಸಡಗರವು

ಉಭಯ ದಳಗಳು ಯುದ್ಧೋತ್ಸುಕವಾಗಿ ಒಂದನ್ನೊಂದು ತುಳಿದು ನೆಲಕ್ಕೊರಿಸುವದಕ್ಕೆ ಹೊಂಚು ಹಾಕಿರಲು, ಉಮೆಯು ಮಹಿವತರಾಯನೊಡನೆ ಸುಜಾನ ಛಾವಣಿಯನ್ನು ಪ್ರವೇಶಿಸುವಾಗ ಎಷ್ಟು ಕಷ್ಟವಾಗಿರಬಹುದೆಂಬದನ್ನು ವಾಚಕರು ತರ್ಕಿಸಬಹುದು; ಆದರೂ, ಭಾವೂಸಾಹೇಬನ ಪರಮ ಮಿತ್ರನೆನಿಸಿ, ಸ್ವಾರ್ಥದಮೇಲೆ ಕೈಊರಿ ಅತ್ತಿತ್ತ ಎರಡೂ ಪಕ್ಷಗಳ ಕಡೆಗೆ ಟಕಮಕ ನೋಡುತ್ತ, ಎತ್ತಕಡೆಗೆ ಸರಿದರೆ ತನ್ನ ಕಾರ್ಯವಾದೀತೆಂದು ಯೋಚಿಸುತ್ತ ಕುಳಿತಿದ್ದ ಸುಜಾಉದ್ದೌಲನು ಸ್ವಾರ್ಥದ ಸಡಗರವು ಬೈಲಿಗೆ ಬೀಳುವದಕ್ಕಾಗಿಯೇ ಉಮೆಯು ಆತನ ಛಾವಣಿಯನ್ನು ಸುರಕ್ಷಿತವಾಗಿ ಪ್ರವೇಶಿಸಿದಳೆಂದು ಹೇಳಬಹುದು. ಸುಜಾನು ಸಾಮಾನ್ಯ ಕೋಟೆಯೊಳಗಿನ ಮನುಷ್ಯನಿದ್ದಿಲ್ಲ. ಆತನು ಮಹಾಬಲಾಢ್ಯನೂ, ರಾಜಕಾರಣಪಟುವೂ, ಧೂರ್ತನೂ ಆಗಿದ್ದನು. ಆತನು ಮದೋನ್ಮತ್ತವಾದ ಆನೆಯ ಹಿಂಗಾಲುಗಳಿಗೆ ತನ್ನ ಕಾಲು

ಕೊಟ್ಟು ಅದರ ಬಾಲವನ್ನು ಹಿಡಿದು ಹಿಂದಕ್ಕೆ ಜಗ್ಗಹತ್ತಿದರೆ, ಆನೆಗೆ ಮುಂದಕ್ಕೆ ಹೆಜ್ಜೆಯಿಡುವ ತ್ರಾಣವಾಗುತ್ತಿದ್ದಿಲ್ಲವಂತೆ! ಆತನು ಬಲಿಷ್ಠನಿದ್ದಂತೆ ಚಲುವನೂ ಇದ್ದು, ಆಡಂಬರಕ್ಕೆ ಮೆಚ್ಚಿದವನಿದ್ದನು. ರಾಜ್ಯವೃದ್ಧಿಯಲ್ಲಿ ಅವನ ಆಸಕ್ತಿ ಬಹಳ. ಭಾವುಸಾಹೇಬನ ಸಹಾಯ ದಿಂದ ದಿಲ್ಲಿಯ ಬಾದಶಾಹಿಯವಜೀರಾಯತಿಯನ್ನು ಸಂಪಾದಿಸಲು ಆತನು ಹವಣಿಸು ತ್ತಿದ್ದನು; ಆದ್ದರಿಂದ ಅಂತರಂಗದಲ್ಲಿ ಆತನು ಮರಾಟರ ವಿಜಯವನ್ನು ಇಚ್ಛಿಸುತ್ತಿದ್ದನು; ಆದರೆ ಅದನ್ನು ಹೊರಗೆ ತೋರಿಸದೆ, ಅಬದಾಲಿಯ ಪಕ್ಷವಹಿಸಿ ಅವನ ಕಚ್ಚೆಯನ್ನು ಹಿಡಿದವ ನಂತೆ ಆಚರಿಸುತ್ತಿದ್ದನು.

ಸುಜಾನು ಅತ್ಯಂತ ವಿಷಯಾಸಕ್ತನೂ ಇದ್ದನು. ಅಂತಃಪುರದೊಳಗಿನ ಸುಂದರ ಯುವತೀ ಸಮೂಹದೊಡನೆ ಕ್ರೀಡಿಸುವಲ್ಲಿ ಆತನ ಕಾಲಹರಣವು ವಿಶೇಷವಾಗಿ ಆಗುತ್ತಿತ್ತು. ತನ್ನ ಈ ವಿಷಯಸುಖೋಪಭೋಗದ ಶಕ್ತಿಯು ಹೆಚ್ಚುವದಕ್ಕಾಗಿ ಯಾವಾಗಲೂ ವಾಜೀಕರಣವನ್ನು ಉಪಯೋಗಿಸುತ್ತಿದ್ದನು. ಆತನು ತನ್ನ ಆಡಳಿತದಲ್ಲಿ ತನ್ನ ರಾಜಧಾನಿಯಾದ ಲಖನೂರನ್ನು ಹಲವು ಸುಂದರ ಮಂದಿರಗಳಿಂದ ಅಲಂಕರಿಸಿದ್ದನಲ್ಲದೆ, ಚಿನ್ನದ್ದೊಂದು ತಾಬೂತ ಮಾಡಿಸಿ ಅದರಲ್ಲಿ ತನ್ನ ಸುಂದರವಾದ ಮುಂಡಾಸವನ್ನೂ, ತುರಾಯಿ–ಶಿರಪೇಚ ಮೊದಲಾದ ಅಲಂಕಾರ ಗಳನ್ನೂ ಇಟ್ಟಿದ್ದನಂತೆ! ಆತನ ರಾಜಧಾನಿಯ ಸಂಪತ್ತು ವಿಫುಲವಾಗಿತ್ತು, ಅಲ್ಲಿ ಆನೆಗಳಿಗೆ ಕೊರತೆಯಿದ್ದಿಲ್ಲ. ಅಗಸರ ಅರಿವೆಯ ಮೊಟ್ಟೆಗಳನ್ನು ಹೊರಲಿಕ್ಕೂ ಚಿಟ್ಟಾನೆಗಳನ್ನು ಉಪ ಯೋಗಿಸುತ್ತಿದ್ದರಂತೆ! ಸುಜಾನ ಔದಾರ್ಯವೂ ವಿಲಕ್ಷಣವಾಗಿತ್ತು. ಆತನು ಪ್ರತಿವರ್ಷ ಒಬ್ಬ ತಿರುಕನನ್ನು ಶ್ರೀಮಂತನನ್ನಾಗಿ ಮಾಡುತ್ತಿದ್ದನು. ತಾನು ಯಾವಾಗಾದರೂ ರಾಜಧಾನಿಯಲ್ಲಿ ತಿರುಗಾಡಲಿಕ್ಕೆ ಹೊರಟಾಗ, ಯಾವನಾದರೂ ಒಬ್ಬ ಸುಸ್ವರೂಪಿಯಾದ ತಿರುಕನು ಕಣ್ಣಿಗೆ ಬಿದ್ದು, ತನ್ನ ಮನಸ್ಸಿಗೆ ಬಂದರೆ, ಆತನನ್ನು ತನ್ನ ವಾಡೆಗೆ ಕರಕೊಂಡು ಹೋಗಿ, ಉತ್ತಮ ವಸ್ತ್ರಾಭರಣ ಗಳಿಂದ ಅಲಂಕರಿಸಿ, ಸುಂದರ ಸ್ತ್ರೀಯೊಡನೆ ಆತನ ಲಗ್ನಮಾಡುತ್ತಿದ್ದನು. ಬಳಿಕ ಆತನಿಗೆ ಇರುವದಕ್ಕಾಗಿ ಒಂದು ಸುಂದರ ಮಂದಿರವನ್ನು ಕಟ್ಟಿಸಿಕೊಟ್ಟು, ಮಾನ–ಮರ್ಯಾದೆ ಗಳಿಂದ ಆತನನ್ನು ದೊಡ್ಡ ಪದವಿಗೆ ಏರಿಸುತ್ತಿದ್ದನು; ಆದ್ದರಿಂದ ಜನರಲ್ಲಿ ಸುಜಾನ ಸಂಬಂಧ ದಿಂದ—''ಜಿನಕೋನದೇ ಮೌಲಾ, ಉಸಕೋದೇ ಸುಜಾಉದ್ದೌಲಾ'' ಎಂಬ ಉಕ್ತಿಯು ರೂಢವಾಗಿತ್ತು.

ಇಂಥ ಘನವಂತನಾದ ಸುಜಾನ ದರ್ಶನಕ್ಕಾಗಿ ಉಮೆಯು ಹೋಗಿ ಆತನ ದಿವಾಣ ಖಾನೆಯನ್ನು ಪ್ರವೇಶಿಸಿದಾಗ, ಅಲ್ಲಿ ಆತನಿದ್ದಿಲ್ಲ. ಆತನ ದಿವಾಣನಾದ ಕಾಶೀರಾಜ ಪಂಡಿತನು ಗುದ್ದಮಳದ ಕುತನಿಯ ಗಾದಿಯಮೇಲೆ ಲೋಡಿಗೆ ಆತು ಕುಳಿತಿದ್ದನು. ಕಾಶೀರಾಜಪಂಡಿತನು ದಕ್ಷಿಣದ ಬ್ರಾಹ್ಮಣನು. ಆತನ ವಯಸ್ಸು ಮೂವತ್ತರ ಹೊರಗೊಳಗೆ ಇರಬಹುದು. ಆತನ ನಿಲುವಿಕೆ ಗಿಡ್ಡದರ, ಮೈಕಟ್ಟು ತೆಳ್ಳಗೆ. ಆತನ ಅಚ್ಚಕರಿಗುಡ್ಡಿಯ ದೊಡ್ಡ ಕಣ್ಣುಗಳು ತೇಜಃ ಪುಂಜವಾಗಿದ್ದು, ತುಟಿ, ಮೂಗುಗಳು ಸುಂದರವಾಗಿದ್ದವು. ಸಾದಗಪ್ಪಿನ ಆ ಬ್ರಾಹ್ಮಣನ ಮುಖದಲ್ಲಿ

ಸ್ವಲ್ಪ ಮೈಲಿಯ ಕಲೆಗಳಿದ್ದವು. ಆತನಿಗೆ ಮರಾಠಿ, ಫಾರ್ಸಿ, ಹಿಂದಿ, ಸಂಸ್ಕೃತ ಈ ನಾಲ್ಕು ಭಾಷೆಗಳು ಚನ್ನಾಗಿ ಬರುತ್ತಿದ್ದವು. ಆತನ ನಸ್ಯ ಏರಿಸುವ ಚಟವು ಬಲು ಬಲಿಷ್ಠವಾಗಿತ್ತು, ಆತನು ಎಂಥ ಮಹತ್ವದ ಕೆಲಸದಲ್ಲಿಯೇ ತೊಡಗಿರಲಿ, ಆತನಿಗೆ ಎಷ್ಟು ಅವಸರದ ಕೆಲಸವೇ ಇರಲಿ, ನಸ್ಯವ ಏರಿಸದಿದ್ದರೆ ಕೆಲಸವಾಗುತ್ತಿದ್ದಿಲ್ಲ. ಸಾಧಾರಣ ಪಾವುನಸ್ಯ ಹಿಡಿಯುವ ಬೆಳ್ಳಿಯ ಡಬ್ಬಿಯನ್ನು ತುಂಬಿ ಇಟ್ಟುಕೊಳ್ಳದಿದ್ದರೆ ಆತನ ಕೆಲಸವಾಗಲಿಕ್ಕೆ ದೊಡ್ಡ ತೊಂದರೆಯಾಗುತ್ತಿತ್ತು. ಇಂಥ ಆ ಬ್ರಾಹ್ಮಣ ಮುತ್ಸದ್ದಿಯು ಈಗ ಗಲಗಿನ ಲೆಕ್ಕಣಿಕೆಯನ್ನು ದೌತಿಯಲ್ಲಿ ಎದ್ದಿ, ಯಾವದೋ ಒಂದು ಮಸೂದೆಯನ್ನು ತಿದ್ದುವ ಕೆಲಸದಲ್ಲಿ ಮಗ್ನನಾಗಿದ್ದನು. ಆತನು ತನ್ನೆದುರಿಗೆ ಬಂದು ನಿಂತಿದ್ದ ಪುರುಷ ವೇಷಧಾರಿಯಾದ ಉಮೆಯನ್ನು ಕುರಿತು—

ಕಾಶೀರಾಜಪಂಡಿತ—ಮಿರಝಾಸಾಹೇಬರೆಂಬವರು ನೀವೇ ಏನು? ಕುಳಿತುಕೊಳ್ಳಿರಿ. ನಿಮಗೆ ಮರಾಠಿಭಾಷೆಯು ಚನ್ನಾಗಿ ಬರುತ್ತದಲ್ಲವೆ?

ಮಿರಝಾ—ರಾವಸಾಹೇಬ, ನನಗೆ ಮರಾಠಿಯು ನೆಟ್ಟಗೆ ತಿಳಿಯುವದಿಲ್ಲ. ನನಗೆ ಮಿರಝಾ–ಜಾನ–ವಾಝುನೆನ್ನುವರು.

ಕಾಶೀರಾಜಪಂಡಿತ—ಹಾಗಾದರೆ ಮಿರ್ಝಾಸಾಹೇಬ, ನಿಮಗೆ ಫಾರ್ಸಿಭಾಷೆಯು ನೆಟ್ಟಗೆ ಬರುತ್ತಿರಬಹುದು?

ಈ ಮಾತಿಗೆ ಬೇಗನೆ ಉತ್ತರಬಾರದ್ದನ್ನು ನೋಡಿ ಕಾಶೀರಾಜನು ತನ್ನ ಕಾರಕೂನರಿಗೆಲ್ಲ ಹೊರಗೆ ಹೋಗಹೇಳಿದನು. ಕೂಡಲೆ ಅವರು ದಪ್ತರಗಳನ್ನು ಹಾಗೇಬಿಟ್ಟು ಹೊರಗೆ ಹೋದರು. ಕಾಶೀರಾಜನು ಕಸುವಿನಿಂದ ನಸ್ಯವನ್ನು ಏರಿಸಿ ಮೂಗು ಒರಿಸಿಕೊಂಡು— "ನೀವು ಮಿರಝಾ–ಜಾನ–ವಾಝುನೆನಿಸಿಕೊಂಡಬಳಿಕ, ನಿಮಗೆ ಫಾರ್ಸಿಭಾಷೆಯು ಬರಲೇಬೇಕು. ನಿಮಗೆ ಜನ್ಮಭಾಷೆಯೂ ಬರುವದಿಲ್ಲ, ನಿಮ್ಮ ಯಜಮಾನನ ಭಾಷೆಯಾದ ಮಹಾರಾಷ್ಟ್ರವೂ ಬರುವದಿಲ್ಲ. ಇದೇನು ಗೂಢವು? ಹಾಗಾದರೆ ನಿಮಗೆ ಹಿಂದೀ ಭಾಷೆಯು ಬರುವದೋ?"

ಮಿರಝಾ—ಜೀ ಹುಜೂರ, ನನಗೆ ಹಿಂದೀಭಾಷೆಯು ನೆಟ್ಟಗೆ ತಿಳಿಯುತ್ತದೆ.

ಕಾಶೀರಾಜ—ಶ್ರೀಮಂತ ಭಾವುಸಾಹೇಬರವರು ನಮ್ಮ ಹೆಸರಿನಿಂದ ಪತ್ರವೇನಾದರೂ ಕೊಟ್ಟಿರುವರೋ?

ಮಿರಝಾ—ಕೊಟ್ಟಿರುವರು ಸರಕಾರ; ಬಂದವಾಡಿದ ಒಂದು ಲಕ್ಕೋಟಿಯನ್ನು ಶ್ರೀಮಂತರು ನನ್ನ ಕೈಯಲ್ಲಿ ಕೊಟ್ಟಿರುವರು.

ಕಾಶೀರಾಜ—ತೆಗೆಯಿರಿ ಹಾಗಾದರೆ, ಅದನ್ನು ನಾನು ನೋಡುವೆನು.

ಮಿರಝಾ—ಸರಕಾರ, ನನ್ನನ್ನು ಕ್ಷಮಿಸಬೇಕು. ಸ್ವತಃ ನವಾಬಸಾಹೇಬರ ಕೈಯೊಳಗಲ್ಲದೆ ಬೇರೆಯವರ ಕೈಯಲ್ಲಿ ಲಕ್ಕೋಟಿಯನ್ನು ಕೊಡಲಿಕ್ಕೆ ಶ್ರೀಮಂತರ ಅಪ್ಪಣೆಯಿಲ್ಲ.

ಕಾಶೀರಾಜ—(ಒಂದು ಚಿಮಟಿಗೆ ನಸ್ಯವೇರಿಸಿ) ಮಿರಝಾಸಾಹೇಬ, ನಾನು ಯಾರೆಂಬದು ನಿಮಗೆ ಗೊತ್ತಾಗಿಲ್ಲೆಂಬಂತೆ ತೋರುತ್ತದೆ.

ಮಿರಝಾ—ಇಲ್ಲ ಸರಕಾರ, ತಮ್ಮನ್ನು ಎಂದೂ ಕಾಣದೆಯಿದ್ದ ನನಗೆ, ತಾವು ಯಾರೆಂಬದು ಹ್ಯಾಗೆ ಗೊತ್ತಾಗಬೇಕು?

ಕಾಶೀರಾಜ–ನನ್ನನ್ನು ಕಾಶೀರಾಜನೆಂದು ಕರೆಯುವರು. ನಾನು ನವಾಬ ವಜೀರ ಸಾಹೇಬರವರ ದಿವಾಣನಿರುವೆನು, ಗೊತ್ತಾಯಿತೇ?

ಮಿರಝಾ–ಜಾಹಾಂಗೀರ ಶಹಾರವರಿಗೇ ನವಾಬಸಾಹೇಬರ ವಜೀರರೆನ್ನುವರೆಂದು ನಾನು ಕೇಳಿದ್ದೆನು. ಅದೇನೇ ಇರಲಿ, ನಾನು ಶ್ರೀಮಂತರ ಅಪ್ಪಣೆಯಂತೆ ನಡೆಯಲೇ ಬೇಕಾಗಿ ರುವದು. ನವಾಬಸಾಹೇಬರ ಹೊರತು ಬೇರೆಯವರ ಕೈಯಲ್ಲಿ ಲಕ್ಕೋಟಿಯನ್ನು ಕೊಡುವ ಹಾಗಿಲ್ಲ.

ಕಾಶೀರಾಜನು ದಕ್ಷಿಣದ ದೇಶಸ್ಥ ಬ್ರಾಹ್ಮಣನಿದ್ದು, ಸುಜಾಉದ್ದೌಲನ ಮುಖ್ಯ ದಿವಾಣ ನಾಗಿದ್ದನು. ನಾಮಾಂಕಿತಮುತ್ಸದ್ದಿಗಳಲ್ಲಿ ಆತನ ಗಣನೆಯಿತ್ತು, ತನ್ನ ಕೈಯಲ್ಲಿ ಲಕ್ಕೋಟಿಯ ಕೊಡದೆಯಿದ್ದದ್ದು ಕಾಶೀರಾಜನ ಮನಸ್ಸಿಗೆ ಹತ್ತಿದರೂ, ಆತನು ಬಾಯಿಂದ ಏನೂ ಅನ್ನದೆ ಸಿಟ್ಟಿನಿಂದ ಒಮ್ಮೆ ನಸ್ಯವೇರಿಸಿಕೊಂಡು ಮನಸ್ಸಿನಲ್ಲಿ ಆಲೋಚಿಸಿ ಮಿರ್ಝಾನಿಗೆ– ನೀವು ಇಲ್ಲಿಯೇ ಕುಳಿತುಕೊಳ್ಳಿರಿ, ನಾನು ಈಗ ಬರುವೆನು, ಎಂದು ಹೇಳಿ, ಸುಜಾಉದ್ದೌಲನ ಬಳಿಗೆ ಹೋದನು.

ಸ್ವಲ್ಪ ಹೊತ್ತಿನಲ್ಲಿಯೇ ಸುಜಾಉದ್ದೌಲನು ಅಲ್ಲಿಗೆ ಬಂದನು. ಕೂಡಲೆ ಮಿರ್ಝಾ–ಜಾನ–ವಾರಝನು ವಿನಯದಿಂದ ಆತನಿಗೆ ಮುಜುರೆಮಾಡಿ ಮರ್ಯಾದೆಯಿಂದ ನಿಂತು ಕೊಂಡನು. ಆಗ ಸುಜಾಉದ್ದೌಲನು ಮದ್ಯಪಾನದಿಂದ ಮತ್ತನಾಗಿದ್ದನು. ಆತನು ಮಿರ್ಝಾ ನಿಗೆ—"ಮಿರ್ಝಾಸಾಹೇಬ, ಇಂದು ನಮ್ಮಲ್ಲಿ ಮೇಜವಾನೆಯಿದೆ. ದೊಡ್ಡ–ದೊಡ್ಡ ಸರ ದಾರರು ಊಟಕ್ಕೆ ಬಂದಿದ್ದಾರೆ. ಈಗ ನಿಮ್ಮನ್ನು ಕಾಣಲಿಕ್ಕೆ ಅವಕಾಶವಿಲ್ಲ, ನಾಳೆ ಬೆಳಗಾಗು ವತನಕ ನೀವು ನಮ್ಮಲ್ಲಿ ಇದ್ದರೆ ನೆಟ್ಟಗಾಗುವದು. ಆಮೇಲೆ ನೀವು ಬಂದ ಕೆಲಸವನ್ನು ವಿಚಾರಿಸಿ, ಮಾಡತಕ್ಕದ್ದನ್ನು ಮಾಡುವೆನು." ಎಂದು ಹೇಳಲು, ಮಿರ್ಝಾನು ಬಗ್ಗಿ ನವಾಬ ಸಾಹೇಬನಿಗೆ ಕುರ್ನಿಸಾತ ಮಾಡಿ ಬಹು ವಿನಯದಿಂದ ಭಾವುಸಾಹೇಬನ ಲಕ್ಕೋಟಿಯನ್ನು ಆತನ ಕೈಯಲ್ಲಿ ಕೊಟ್ಟನು. ಹಿಂದಕ್ಕೆ ತಾನು ದುರಾಣಿಯ ಛಾವಣಿಯಲ್ಲಿ ಸಿಕ್ಕಾಗ ಸುಜಾ ಉದ್ದೌಲನನ್ನು ನೋಡಿದ ಗುರುತು ಉಮೆಗೆ ಹತ್ತಿತ್ತು, ಸುಜಾಉದ್ದೌಲನು ಭಾವುಸಾಹೇಬನ ಲಕ್ಕೋಟಿಯನ್ನು ಒಡೆದು ಒಳಗಿನ ಪತ್ರವನ್ನು ತೆಗೆದು, ಅದು ಭಾವುಸಾಹೇಬರ ಹಸ್ತಾಕ್ಷ ರದ್ದೇ ಎಂದು ಗೊತ್ತುಹಿಡಿದು ಓದಹತ್ತಿದನು. ಓದ–ಓದಿದಂತೆ ಸುಜಾನ ಮೋರೆಯು ಕಪ್ಪಿಡಹತ್ತಿ, ಪತ್ರ ಓದುವದಾದ ಕೂಡಲೆ ಅದು ತಾನೇ ಕೈಯೊಳಗಿಂದ ಕಳಚಿಬಿತ್ತು, ಆಗ ಸುಜಾನ ಮದ್ಯದ ಮದವೆಲ್ಲ ಇಳಿದುಹೋಗಿತ್ತು, ಆತನು ಕಾಶೀರಾಜನಿಗೆ—"ಪಂಡಿತಜೀ, ಈ ಪತ್ರವನ್ನು ಓದಿನೋಡಿರಿ," ಎಂದು ಹೇಳಲು, ಕೂಡಲೆ ಆ ಬ್ರಾಹ್ಮಣನು ಅದನ್ನು ತಕ್ಕೊಂಡು ಪೂರ್ಣವಾಗಿ ಓದಿದನು. ಆಗ ಅವನ ಮುಖದಿಂದ—"ರಾಮಾ, ದಾಶರಥೇ, ಎಂಥ ಪ್ರಸಂಗವನ್ನು ತಂದೆ! ಗಹಜಬ! ಗಹಜಬ!" ಎಂಬ ಶಬ್ದಗಳು ಹೊರಟವು. ಇಂಥ

ಅಸಮಾಧಾನಕಾರಕ ಪತ್ರವೇನಿರಬಹುದೆಂದು ವಾಚಕರು ಅದನ್ನು ಅರಿತುಕೊಳ್ಳಲು ಆತುರ ಪಡುತ್ತಿರಬಹುದು; ಆದ್ದರಿಂದ ಆ ಪಾರಶೀಪತ್ರದ ಭಾಷಾಂತರವನ್ನು ಕೆಳಗೆ ಬರೆಯುವೆವು.

''ಅಣ್ಣಾ ನವಾಬಸಾಹೇಬನೇ, ನಾನು ಈಗ ದುಃಖಸಾಗರದಲ್ಲಿ ಮುಣುಗಿರುವೆನು. ನನ್ನ ಕೆಲವು ಮಿತ್ರರು ನನ್ನನ್ನು ನಡುಬಾವಿಯವರೆಗೆ ಜಗ್ಗಿ, ನಡುವೇ ಹಗ್ಗ ಕೊಯ್ದು ಹಾಗೆ ಮಾಡಿರುವರು. ನನ್ನ ನೀರಡಿಕೆಯನ್ನು ಹೋಗಲಾಡಿಸಿ ಜೀವದಾನ ಕೊಡುವಂಥ ಸಮರ್ಥನು ನಿನ್ನ ಹೊರತು ಬೇರೆ ಯಾವನೂ ಇಲ್ಲ. ಎಷ್ಟೋ ಮಿತ್ರರು ನನ್ನ ವಿಷಯವಾಗಿ ತಮ್ಮ ಮನಸ್ಸನ್ನು ಕಲ್ಲುಮಾಡಿರುತ್ತಾರೆ. ಈಗಿನ ಕಾಲಕ್ಕೆ ಖುದಾನು ನನ್ನ ಮೇಲೆ ಕಣ್ಣು ಕೆಕ್ಕರಿಸಿದ್ದಾನೆ; ಆದ್ದರಿಂದ ನನಗೇನೂ ತಿಳಿಯದಾಗಿದೆ. ನನ್ನ ಆಯುಶ್ಯವು ಪೂರ್ಣವಾಗಿ ತುಂಬಿಬಂದಿರುವದೆಂದು ನನಗೆ ತೋರಹತ್ತಿದೆ.

ನವಾಬಸಾಹೇಬ, ನಿನ್ನನ್ನು ನಾನು ಒಡಹುಟ್ಟಿದ ಅಣ್ಣನೆಂದು ತಿಳಿಯುವೆನು. ನಿನ್ನಮೇಲೆ ಖುದಾನ ಪೂರ್ಣಕೃಪೆಯಿರುವದು. ಈ ಮೊದಲು ನಿನ್ನ ಮೇಲೆ ನನ್ನ ನಂಬಿಗೆ ಯಿದ್ದಂತೆ, ಈಗಾದರೂ ಇರುತ್ತದೆ. ಸದ್ಯಕ್ಕೆ ನೀವು ವೈಭವದ ಶಿಖರವನ್ನೇರಿರುವಿರಿ. ಇಂದಿನ ನಿಮ್ಮ ವೈಭವವನ್ನು ಇಂದ್ರನ ವೈಭವವು ಸರಿಗಟ್ಟಲಾರದು. ನವಾಬ ವಝೀರಸಾಹೇಬ, ನಿನ್ನನ್ನು ಜನರು ಸುಜಾಉದ್ದೌಲನೆಂದು ಕರೆಯುವದು ಯಥಾರ್ಥವಾಗಿರುತ್ತದೆ; ಯಾಕಂದರೆ, ನೀನು ನಿಜವಾಗಿಯೇ ಜಗತ್ತಿಗೆ ಪ್ರಕಾಶವನ್ನುಂಟು ಮಾಡುವ ಸೂರ್ಯನಿರುತ್ತೀ.

ಬಂಧೋ, ಸುಜಾಉದ್ದೌಲಾ, ಖುದಾನ ಕೃಪೆಯಿಂದ ದೊಡ್ಡಪದವಿಗೇರಿರುವ ಜನರು ಸುಳ್ಳು ಆಡಿದರೆ ಜಗತ್ತು ಬದುಕುವದುಂಟೇ? ನೀನು ಸುಜ್ಞನಿರುವೆ. ನಮ್ಮ–ನಿಮ್ಮೊಳಗಾಗಿದ್ದ ಆಣೆ–ಚೂರಿಗಳು ನಿನ್ನ ನೆನಪಿನಲ್ಲಿರಬಹುದು. ಈಗ ನಾನು ಹೆಚ್ಚಿಗೆ ಬರೆಯುವದೇನು? ನೀನು ನಿನ್ನ ಕಲ್ಯಾಣವನ್ನು ಮಾಡಿಕೊಂಡು ನನ್ನ ಕಲ್ಯಾಣದ ಮಾರ್ಗವನ್ನು ಹುಡುಕು. ನಮ್ಮ–ನಿಮ್ಮ ಖುದಾನು ಒಬ್ಬನೇ ಇರುವನು. ಆತನ ದೃಷ್ಟಿಯು ಎಲ್ಲರ ಮೇಲೆಯೂ ಸರಿಯಾಗಿರುವದು. ನಿನ್ನಿಂದ ನಮ್ಮ ಕಲ್ಯಾಣವಾಗುವ ಹಾಗಿದ್ದರೆ ಬೇಗನೆ ಮಾಡು. ತೀರ ಕೊರಳಿಗೆ ಬಂದಿರುವದು. ಒಂದೊಂದು ಕ್ಷಣವು ಒಂದೊಂದು ಯುಗದಂತೆ ಭಾಸವಾಗುತ್ತಲಿದೆ. ಇನ್ನು ಒಂದು ಕ್ಷಣದ ವಿಲಂಬವೂ ಆಗುವಹಾಗಿಲ್ಲ, ನಾಳೆ ಬೆಳಗಾಗುತ್ತಲೆ ನಾವು ಛಾವಣಿಯಿಂದ ಹೊರಬಿದ್ದು, ಕಡೆಯ ಪರಿಣಾಮವನ್ನು ಕಂಡುಕೊಳ್ಳುವೆವು. ಈ ಪ್ರಸಂಗದಲ್ಲಿ ನೀನು ಜಾಗರೂಕನಾಗಿದ್ದು, ಯೋಗ್ಯತೋರಿದಂತೆ ಮಾಡು. ''ನಾಲಿಗೆಯಿಂದ ಹೊರಟ ಮಾತಿನ ಬೆಲೆಯು ಜಗತ್ತಿನ ಬೆಲೆ ಗಿಂತಲೂ ಹೆಚ್ಚಿರುವದೆಂ''ದು ಪಾರಶೀಭಾಷೆಯ ಉಕ್ತಿಯಿರುವದು, ಅದನ್ನು ಮರೆಯಬೇಡ. ಮೋಸಗಾರರೂ, ವಿಶ್ವಾಸಘಾತಕರೂ ಆದವರ ಮೋರೆಗಳು ಕರಕಿಡಲಿ! ಖುದೌನು ನಿನಗೆ ಸದ್ಬುದ್ಧಿಯನ್ನು ಕೊಡಲಿ! ಮಿತ್ರಾ, ಇದಕ್ಕೂ ಹೆಚ್ಚಿಗೆ ನಾನೇನು ಬರೆಯಲಿ?''

ಮಾನಧನನಾದ ಭಾವೂಸಾಹೇಬನು ಸೂಜಾನಿಗೆ ಇಷ್ಟು ವಿನಯದಿಂದ ಕೊರಳಿಗೆ ಬಿದ್ದು ಪತ್ರಬರೆದದ್ದನ್ನು ನೋಡಿ ವಾಚಕರಿಗೆ ಆಶ್ಚರ್ಯವಾಗಬಹುದು! ಆದರೆ ಪ್ರಸಂಗವು

ಯಾರ ಮನೆಯದು? ಜೀವಹೋಗುವ ಕಾಲದಲ್ಲಿಯೂ ಮನುಷ್ಯನು ಒದ್ದಾಡುವದನ್ನು ಬಿಡುವದಿಲ್ಲ. ಮನುಷ್ಯನ ಆಶಾತಂತುವು ಕಡೆತನಕ ಹರಿಯುವದಿಲ್ಲ. ಅದರಂತೆ, ಭಾವೂ ಸಾಹೇಬನು ತನ್ನ ಸಂರಕ್ಷಣದ ಕಡೆಯ ಉಪಾಯವೆಂದು ತಿಳಿದು ಇಷ್ಟು ಅಭಿಮಾನ ತೊರೆದು ಸುಜಾನಿಗೆ ಪತ್ರಬರೆದಿದ್ದನು. ಅದನ್ನು ಓದಿ ಸುಜಾ ಉದ್ದೌಲನ ಮನಸ್ಸಿನಲ್ಲಿ ಆಶ್ಚರ್ಯ, ದುರ್ಧರತಾ, ಕರುಣಾ, ಭಯ–ಭಾವಗಳು ಕ್ರಮವಾಗಿ ಹುಟ್ಟಿ ಲಯಹೊಂದಿದವು. ಆತನು ಕಾಶೀರಾಜನೊಡನೆ ಆಲೋಚಿಸತೊಡಗಿದನು. ಅವರಿಬ್ಬರಲ್ಲಿ ಬಹಳ ಹೊತ್ತು ಅರೆ ದಾಟ ವಾಯಿತು. ಬಳಿಕ ಸುಜಾಉದ್ದೌಲನು ಕಾಶೀರಾಜನ ಅನುಮತಿಯಿಂದ ಭಾವುಸಾಹೇಬನಿಗೆ ಉತ್ತರ ಬರೆದನು, ಅದರ ತಾತ್ಪರ್ಯವೇನಂದರೆ—

ಭಾವುಸಾಹೇಬ, ನಿಮ್ಮೊಡನೆ ನನ್ನ ಮಿತ್ರತ್ವವು ಸ್ಥಿರವಾಗಿರುವದು. ಅದರ ವಿಷಯವಾಗಿ ತಾವು ನಿಶ್ಚಿಂತರಾಗಿರಬೇಕು. ನಿಮ್ಮ ಈಗಿನ ಮಸಲತ್ತನ್ನು ನಾವು ಎರಡನೆಯವರಿಗೆ ಸರ್ವಥಾ ತಿಳಿಸುವದಿಲ್ಲ. ನೀವು ದುರಾಣಿಯ ಛಾವಣಿಯ ಮೇಲೆ ಏರಿ ಬರುವದಾದರೆ, ಹೀಗೆ ಪ್ರಸಿದ್ಧ ವಾಗಿ ಅರವುಗೆಟ್ಟ ಸೌರಣೆಯಿಂದ ಬರಬಾರದು; ಇದರಿಂದ ನಿಮಗೆ ತಪ್ಪದೆ ಹಾನಿಯಾಗುವ ದೆಂದು ನನಗೆ ತೋರುತ್ತದೆ. ನೀವು ಗುಪ್ತರೀತಿಯಿಂದ ಜಾಗರೂಕವಾದ ಸಿದ್ಧತೆಮಾಡಿಕೊಂಡು ಏರಿಬರತಕ್ಕದ್ದು. ಹೀಗೆ ಏರಿಬಂದರೆ ಕದಾಚಿತ್ ನಿಮಗೆ ಲಾಭವಾದೀತೆಂದು ನಾನು ಸೂಚಿಸುವೆನು. ಮಿತ್ರತ್ವದ ಸಂಬಂಧದಿಂದ ನಾನು ಹೀಗೆ ತಿಳಿಸುತ್ತೇನೆ. ಇದರ ಮೇಲೆ ನಿಮಗೆ ಸರಿದೋರಿದಂತೆ ಮಾಡಬಹುದು. ಈ ಪ್ರಸಂಗದಲ್ಲಿ ನಾನು ಹೀಗೆಯೇ ನಡೆದುಕೊಂಡೇ ನೆಂದು ಹೇಳಿ, ನಿಮಗೆ ವಚನಬದ್ಧನಾಗಲು ಬರುವಹಾಗಿಲ್ಲ. ನೀವು ನನ್ನ ಬಂಧುಗಳಿರುವಿ ರೆಂಬದು ನನ್ನ ಲಕ್ಷದಲ್ಲಿ ಸಂಪೂರ್ಣವಾಗಿರುವದರಿಂದ, ನನಗೆ ಸ್ವಲ್ಪ ಹಾದಿಸಿಕ್ಕರೆ ಸಾಕು, ನಿಮ್ಮ ಹಿತವನ್ನು ಸಾಧಿಸಿದೆನೆಂದು ತಿಳಿಯಿರಿ. ಮಲ್ಹಾರರಾಯನಮೇಲೆ ಮಾತ್ರ ನಿಮ್ಮ ಪೂರ್ಣ ಲಕ್ಷವಿರಬೇಕು. ಆತನು ಮನಃಪೂರ್ವಕ ನಿಮಗೆ ಸಹಾಯಮಾಡಿದರೆ, ಇನ್ನೂ ನಿಮ್ಮ ಕೈಯೇ ಮೇಲಾಗುವ ಸಂಭವವಿರುತ್ತದೆಂದು ನನಗೆ ತೋರುತ್ತದೆ.

ಹೀಗೆ ಸುಜಾನು ತನ್ನ ಕೈಮುಟ್ಟಿ ಪತ್ರಬರೆದು ಮೊಹರು–ಮುದ್ರೆಗಳನ್ನು ಮಾಡಿ, ಅದನ್ನು ಮಿರ್ಝಾ–ಜಾನ–ವಾಝುನಿಗೆ ಮುಟ್ಟಿಸೆಂದು ಕಾಶೀರಾಜನ ಕೈಯಲ್ಲಿ ಕೊಟ್ಟನು; ಆದರೆ ಮತ್ತೇನು ತಿಳಿಯಿತೋ ಏನೋ, ಆ ಧೂರ್ತ ಸುಜಾನು ಆ ಲಕ್ಕೋಟೆಯನ್ನು ಇಸಕೊಂಡು ತಾನೇ ಮಿರ್ಝಾನ ಕೈಯಲ್ಲಿ ಕೊಡಬೇಕೆಂದು ಹೊರಟನು. ಅಷ್ಟರಲ್ಲಿ ಅದ ಕ್ಕೊಂದು ದೊಡ್ಡ ವಿಘ್ನವು ಒದಗಿ ಸುಜಾನನ್ನು ನಡುವೇ ತರಬುಹಾಕಿತು! ಹಿಂದಕ್ಕೆ ಒಂದನೆಯ ಪ್ರಕರಣದಲ್ಲಿ ದಾವುದ– ಖುದಾಯಾರರ ಹೆಸರು ಬಂದದ್ದನ್ನೂ, ಅವರು ಬೈರಾಗಿಣಿಯನ್ನು ದುರಾಣಿಯ ಛಾವಣಿಗೆ ಎಳೆದೊಯ್ದದ್ದನ್ನೂ ವಾಚಕರು ಮರೆತಿರಲಿಕ್ಕಿಲ್ಲ. ಅದರಂತೆ, ಹೋಳಕರನ ಛಾವಣಿಗೆ ಗಂಗಾದಾಸನೆಂಬ ಹೆಸರಿನಿಂದ ಹೋಗಿದ್ದ ಪ್ರಸಿದ್ಧ ಗೂಢಚಾರ ನಾದ ಬೀರಬಲ್ಲನ ಪರಿಚಯವೂ ವಾಚಕರಿಗಿರಬಹುದು. ಈಗ ಸುಜಾನು ಪತ್ರವನ್ನು ತಕ್ಕೊಂಡು ಬರುತ್ತಿರುವಾಗ, ದಾವುದನೆಂಬವನು ಬೀರಬಲ್ಲನನ್ನು ಕುರಿತು—''ಬೀರಬಲ್ಲ,

ಹಿಂದಕ್ಕೆ ನಮ್ಮ ಕೈಗೆಸಿಕ್ಕಿದ್ದ ಬೈರಾಗಿಣಿಯು ಈಗ ಪುರುಷವೇಷದಿಂದ ನವಾಬಸಾಹೇಬರ ಬಳಿಗೆ ಬಂದಿರುತ್ತಾಳೆ. ಆಕೆಯು ಮರಾಟರ ಕಡೆಯಿಂದ ಬಂದಂತೆ ತೋರುತ್ತದೆ. ನವಾಬ ಸಾಹೇಬರ ಒಲವು ಮರಾಟರ ಕಡೆಗೆ ಇರುವದು ಪ್ರಸಿದ್ಧವು. ಆ ಪೋರಿಯು ತಿರುಗಿ ಮರಾಟರ ಛಾವಣಿಗೆ ಹೋಗುತ್ತಿರುವಾಗ, ಹಾದಿಯಲ್ಲಿ ನಾನು ಗಂಟುಬಿದ್ದು ಆಕೆಯನ್ನು ಎಳೆದೊಯ್ಯುವೆನು, ಅನ್ನಲು, ಬೀರಬಲ್ಲನು-ಏ, ಲಠ್ಯಾ, ಬರೇ ಎಳೆದೊಯ್ದರೇನು ಪ್ರಯೋಜನವಾದೀತು? ಆ ಪೋರಿಯ ಬಳಿಯಲ್ಲಿ ಪತ್ರವೇನಾದರೂ ಸಿಕ್ಕರೆ ಅಬದಾಲಿಯ ಕೃಪೆಗೆ ಪಾತ್ರವಾಗಬಹುದು. ಮರಾಟರ ಛಾವಣಿಯಲ್ಲಿ ಏನೋ ಮಸಲತ್ತು ನಡೆದಂತೆ ತೋರುತ್ತದೆ. ಅದನ್ನು ತಿಳಕೊಂಡು ಬರಲಿಕ್ಕೆ ನಮ್ಮವರನ್ನು ಕಳಿಸಿದ್ದೇನೆ. ಅದೇ ಸಂಧಾನ ಕ್ಕಾಗಿಯೇ ಆ ಪೋರಿಯು ಪುರುಷವೇಷದಿಂದ ನವಾಬರ ಬಳಿಗೆ ಬಂದಿರಬಹುದು; ಆದ್ದ ರಿಂದ, ಬಹು ಜೋಕೆ. ಆಕೆಯ ಬೆನ್ನು ಬಿಡಬೇಡ. ನಾನೂ ಆಕೆಯ ಮೇಲೆಯೇ ಕಣ್ಣು ಇಟ್ಟಿರುವೆನು'' ಎಂದು ಹೇಳಿದನು.

ಈ ಮಾತುಗಳನ್ನು ಕೇಳಿದಕೂಡಲೆ ಸುಜಾಉದ್ದೌಲನ ಕೈ-ಕಾಲುಗಳು ತಣ್ಣಗಾದವು. ಅದರಲ್ಲಿ, ಬೀರಬಲ್ಲನೆಂಬ ಹೆಸರು ಕಿವಿಗೆ ಬಿದ್ದಕೂಡಲೆ, ಸುಜಾನ ಜೀವವು ನೆತ್ತಿಯಿಂದಲೇ ಹೋಗಹತ್ತಿತು. ಬೀರಬಲ್ಲನು ಸಾಮಾನ್ಯ ವ್ಯಕ್ತಿಯಲ್ಲ. ಆತನ ಮೇಲೆ ಅಬದಾಲಿಯ ವಿಶ್ವಾಸವು ಸಂಪೂರ್ಣವಾಗಿ ಇತ್ತು, ಬೀರಬಲನು ಹೇಳಿದಮಾತು ಅಬದಾಲಿಗೆ ಪದವಾಕ್ಯ ಪ್ರಮಾಣ ವಾಗಿತ್ತು; ಆದ್ದರಿಂದ ಸುಜಾನು ಗದಗುಟ್ಟಿ ನಡುಗಿ, ಲಕ್ಕೋಟಿಯನ್ನು ಉದ್ದಹಿಡಿದು ಚರ-ಚರ ಹರಿದು ಅದನ್ನು ಚೂರು-ಚೂರು ಮಾಡಿ ಹಾರಿಸಿಬಿಟ್ಟನು! ತಾನೇ ಲಕ್ಕೋಟಿಯ ಕೊಡಬಂದದ್ದೊಂದು ಅಲ್ಲಾನ ಕೃಪೆಯೆಂದು ಆತನು ತಿಳಿದು ಮನಸ್ಸಿನಲ್ಲಿ—ಅಹಹಾ! ನಾನು ಇಂದು ಒಂದು ಕುತ್ತಿನಿಂದ ಪಾರಾದಂತಾಯಿತು! ಇಲ್ಲದಿದ್ದರೆ ಬೀರಬಲ್ಲನು ಘಾತಮಾಡಿ ಬಿಡುತ್ತಿದ್ದನು. ನಾನು ಇನ್ನು ಭಾವುಸಾಹೇಬನಿಗೆ ಪತ್ರವನ್ನೇ ಕೊಡಬಾರದು. ಬಾಯಿಮಾತಿ ನಿಂದ ಬೇಕಾದಷ್ಟು ಧೈರ್ಯ ಹೇಳಿಕಳಿಸಿದರೂ ಚಿಂತೆಯಿಲ್ಲ; ಮತ್ತು ಇತ್ತ ಬೀರಬಲ್ಲನು ಅಬ ದಾಲಿಯ ಬಳಿಗೆ ಹೋಗುವದರೊಳಗಾಗಿ ನಾನು ಅಲ್ಲಿಗೆ ಹೋಗಿ ಅಬದಾಲಿಗೆ ಭಾವು ಸಾಹೇಬನ ಪತ್ರವನ್ನು ತೋರಿಸಿಬಿಡಬೇಕು; ಅಂದರೆ ಅಬದಾಲಿಯ ಪ್ರಸನ್ನತೆಗೆ ನಾನು ಪಾತ್ರನಾಗದಿದ್ದರೂ, ಆತನ ರೋಷಕ್ಕಾದರೂ ಗುರಿಯಾಗಲಿಕ್ಕಿಲ್ಲ'' ಎಂದು ಯೋಚಿಸಿ, ತಟ್ಟನೆ ಮಿರ್ಝಾನ ಬಳಿಗೆ ಹೋಗಿ—''ಮಿರ್ಝಾ-ಜಾನ-ವಾಝು, ಇನ್ನು ನೀನು ಇಲ್ಲಿ ಒಂದು ಕ್ಷಣವಾದರೂ ನಿಲ್ಲಬೇಡ. ನಿಂತರೆ ಹಾನಿಗೆ ಗುರಿಯಾದೀ. ನಿನ್ನನ್ನು ಹಾದಿಯಲ್ಲಿ ಹಿಡಿಯ ಬೇಕೆಂದು ನಿನ್ನ ವೈರಿಗಳು ಯೋಚಿಸಿರುವರು; ಈಗ ಪತ್ರ ಬರಕೊಡಲು ನನಗೆ ಅವಕಾಶ ವಿಲ್ಲ. ಆದ್ದರಿಂದ ನನ್ನ ಬಂಧುವಾದ ಭಾವು ಸಾಹೇಬರವರಿಗೆ ಬಾಯಿಮಾತಿನಿಂದಲೇ ನನ್ನ ಸೂಚನೆಗಳನ್ನು ತಿಳಿಸು. ಅವರ ಪತ್ರದ ಸಂಗತಿಯೆಲ್ಲ ನನಗೆ ತಿಳಿಯಿತು. ಅವರು ಮಹಾ ಸಂಕಟಕ್ಕೆ ಗುರಿಯಾದದ್ದನ್ನು ನೋಡಿ ನನಗೆ ಪರಮಕ್ಲೇಶವಾಗಿದೆ. ಅಲ್ಲಾನು ಅಪ್ಪಣೆಯಾದರೆ, ನಾಳಿನ ದಿವಸ ನಿಮ್ಮ ಹಿತಸಾಧಿಸುವ ಪ್ರಸಂಗ ಒದಗಿದಲ್ಲಿ ಸಾಧಿಸುವೆನು. ಮುಂದೆ

ಏನಾದೀತೆಂಬದ್ದನು ನಾನು ಈಗ ಹೇಳಲಾರೆನಾದರೂ, ಅಲ್ಲಾನನ್ನು ಸ್ಮರಿಸಿ ಹೇಳುವೆನೇನಂದರೆ— ''ಅಫಗಾಣ ಜನರಿಗಿಂತಲೂ ನಿಮ್ಮಕಡೆಗೆ ನನ್ನ ಮನಸ್ಸು ಬಹಳವಾಗಿ ಹರಿಯುತ್ತದೆ. ಕಡೆಗೆ ನಿಮಗೇ ಯಶಸ್ಸು ದೊರೆಯಬೇಕೆಂದು ನಾನು ಸಂಪೂರ್ಣವಾಗಿ ಇಚ್ಛಿಸುವೆನು. ಇದಕ್ಕೂ ಹೆಚ್ಚಿಗೆ ನಾನು ಏನೂ ಹೇಳಲಾರೆನು. ಇಷ್ಟು ಸಂಗತಿಯನ್ನು ಭಾವೂ ಸಾಹೇಬರಿಗೆ ತಿಳಿಸು.'' ಎಂದು ಹೇಳಿ, ಮತ್ತೆಮಿರ್ಝಾನಿಗೆ– ''ಹೂ, ಮಿರ್ಝಾ, ಏಳಿರಿ, ಇನ್ನು ಕುಳಿತರೆ ಘಾತವಾದೀತು! ಎಂದು ಹೇಳಿ, ನಿರುಪದ್ರವ ಸ್ಥಳದವರೆಗೆ ಸುರಕ್ಷಿತ ಮುಟ್ಟಿಸಿ ಬರಲು, ತನ್ನವರನ್ನು ಆಜ್ಞಾಪಿಸಿ ಮೊದಲು ಮಿರ್ಝಾನನ್ನು ದಾಟಿಹಾಕಿದನು. ಬಳಿಕ ತಾನು ಕುದುರೆಯನ್ನೇರಿ ಅಬದಾಲಿಗೆ ಭಾವು ಸಾಹೇಬನ ಪತ್ರವನ್ನು ತೋರಿಸುವದಕ್ಕಾಗಿ ಅವಸರದಿಂದ ಹೊರಟುಹೋದನು. ಅಷ್ಟರಲ್ಲಿ ಶುಕ್ರೋದಯವಾಗಿ ''ಕುಕೂಕೂ'' ಎಂದು ಕೋಳಿಯು ಕೂಗಿತು! ಪ್ರಿಯವಾಚಕರೇ, ನೋಡಿದಿರಾ ಸುಜಾನ ಸ್ವಾರ್ಥದ ಸಡಗರವು ಹ್ಯಾಗಿದೆ?

## ಅಂತಃಪುರವಾರ್ತೆಯು!

ಈ ಕುರುಕ್ಷೇತ್ರದ, ಅಥವಾ ಪಾನಿಪತದ ಘನ–ಘೋರ ಸಂಗ್ರಾಮ ಪ್ರಸಂಗದಲ್ಲಿ ಬಾವುಸಾಹೇಬನಿಂದ ಹಲವು ಅಪರಾಧಗಳಾದವು. ಅವುಗಳಲ್ಲಿ ಕುಟುಂಬದ ಜನರನ್ನು ಸಂಗಡ ಕರಕೊಂಡು ಹೋದದ್ದೊಂದು ಆತನ ಮುಖ್ಯ ಅಪರಾಧಗಳಲ್ಲಿ ಎಣಿಸಲ್ಪಡುವದು. ಭಾವು ಸಾಹೇಬನೂ, ಆತನ ಸರದಾರರೂ ಸಾರಾ–ಸಾರ ವಿಚಾರವಿಲ್ಲದೆ ಈ ಕೆಲಸವನ್ನು ಮಾಡಿದರೆಂದು ಹೇಳಬಹುದು; ಯಾಕಂದರೆ ಪ್ರತಿಪಕ್ಷಿಯಾದ ಅಹಮ್ಮದ ಶಹಾ ಅಬದಾಲಿಯು ಅಂಥ–ಇಂಥ ಸಾಮಾನ್ಯ ಪುರುಷನಿದ್ದಿಲ್ಲ; ಆತನು ಶತ್ರುಗಳಿಗೆ ಕಾಲ ಸ್ವರೂಪನಾಗಿದ್ದನು. ಇಂಥ ಪ್ರಸಂಗದಲ್ಲಿ ಪೇಶ್ವೆಯವರು ಲಂಗಧಡಕ್ಕಾಗಿ ಹೋಗತಕ್ಕದ್ದಿತ್ತು; ಆದರೆ ''ವಿನಾಶಕಾಲೇ ವಿಪರೀತಬುದ್ಧಿಃ'' ಅನ್ನುವಂತೆ, ಭಾವು ಸಾಹೇಬನಿಗೆ ತನ್ನ ಬಾಹುಬಲದ, ಹಾಗು ಸೈನ್ಯಬಲದ ಗರ್ವವು ಬಾಧಿಸುತ್ತಲಿತ್ತು. ''ಅಃ! ದುರಾಣಿ ದುರಾಣಿ! ಅವನದೇನು ಹಂಗು? ಹಾ ಹಾ ಅನ್ನುವದ ರೊಳಗಾಗಿ ಅವನನ್ನು ಗಾಳಿಯಪಟಮಾಡಿ ಹಾರಿಸಿಬಿಟ್ಟು ಸಹಜವಾಗಿ ಕಾಶೀ, ಪ್ರಯಾಗ, ಗಯಾ, ಮಥುರಾ, ವೃಂದಾವನ, ಅಯೋಧ್ಯಾ ಮೊದಲಾದವುಗಳ ಯಾತ್ರೆಮಾಡಿಕೊಂಡು ಬರೋಣವಂತೆ! ನಮ್ಮ ಸಂಗಡ ಅನಾಯಾಸವಾಗಿ ಹೆಂಗಸರ ತೀರ್ಥಯಾತ್ರೆಗಳೂ ಆಗುವವು.'' ಎಂದು ತಿಳಿದು, ಭಾವುಸಾಹೇಬನು ತನ್ನ ಹೆಂಡತಿಯಾದ ಪಾರ್ವತೀಬಾಯಿಯನ್ನು ಸಂಗಡ ಕರ ಕೊಂಡನು. ಆತನನ್ನು ನೋಡಿ ನಾನಾಫಡಣವೀಸ, ಬಳವಂತರಾವಮೇಹೇಂದಳೆ, ಪುರಂದರೆ, ಪವಾರ, ಸಿಂದೆ, ಮೊದಲಾದವರೂ ತಮ್ಮ ತಮ್ಮ ಕುಟುಂಬಗಳನ್ನು ಸಂಗಡ ಕರಕೊಂಡರು. ಜನಾನಖಾನೆಯ ಸಂಗಡ ಒಕ್ಕಲಿಗಿತ್ತಿಯರ ಹಿಂಡೂ ಹೊರಟಿತು. ಹುಜುರೆಗಳು, ಶಾಗೀರ್ದಿಗಲು, ಸಿಪಾಯಿಗಳು, ಸವಾರರು ಉಬ್ಬಿ ಉಬ್ಬಿ ತಮ್ಮ

ಹೆಂಡಿರು–ಮಕ್ಕಳನ್ನು ಸಂಗಡ ಕರಕೊಂಡರು. ಹೀಗೆ ಸೈನ್ಯದಲ್ಲಿ ಕಾದುವವರಿಗಿಂತ ತಿನ್ನುವವರ ಸಂಖ್ಯೆಯೇ ಹೆಚ್ಚಾಯಿತು. ಇದರಿಂದ ಅನ್ನದ ಬರಬಿದ್ದು ಅದೊಂದು ಮಹಾರಾಷ್ಟ್ರರ ಅಪ ಜಯದ ಮುಖ್ಯ ಕಾರಣವಾಯಿತು.

ಈ ಸ್ತ್ರೀಪರಿವಾರದಲ್ಲಿ ಶ್ರೀಮಂತರ ಮನೆತನದವರೆಂದರೆ, ಇಬ್ಬರು ಮೂವರು ಮಾತ್ರ ಇದ್ದರು. ಉಳಿದವರೆಲ್ಲ ಆಶ್ರಿತ ಕುಟುಂಬದವರಾಗಿದ್ದರು. ಈ ಮೂವರಲ್ಲಿ, ಬಳವಂತರಾವ ಮೇಹೇಂದಳೆಯ ಕುಟುಂಬವು ಪತಿಯೊಡನೆ ಸತಿಹೋದದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ, ಇನ್ನು ಉಳಿದ ಇಬ್ಬರೆಂದರೆ, ಸದಾಶಿವರಾವಭಾವುವಿನ ಕುಟುಂಬವಾದ ಪಾರ್ವತೀಬಾಯಿ, ವಿಶ್ವಾಸರಾಯನ ಕುಟುಂಬವಾದ ಲಕ್ಷ್ಮೀಬಾಯಿ! ಈ ಶ್ರೀಮಂತರಾದ ಉಮಾ–ರಮೆಯರ ವೃತ್ತಾಂತವನ್ನು ಬರೆಯುವಾಗ ನಮಗೆ ಪರಮಾವಧಿ ದುಃಖವಾಗುತ್ತದೆ; ಯಾಕಂದರೆ ಇವರು ಕಾದಂಬರಿಯೊಳಗಿನ ಕಾಲ್ಪನಿಕ ಪಾತ್ರಗಳಲ್ಲ, ನಿಜವಾಗಿಯೇ ಆಗಿಹೋದ ಸನ್ಮಾನನೀಯ ಸತಿಯರಾಗಿರುವರು. ರಣಶೂರರಾದ ಸದಾಶಿವರಾವ, ವಿಶ್ವಾಸರಾವ ಇವರ ಮೇಲೆಯೂ, ಅವರ ಸುಕುಮಾರರೂ, ಸುಶೀಲರೂ, ಸದಾಚಾರಿಗಳೂ ಆದ ಸ್ತ್ರೀಯರ ಮೇಲೆಯೂ ಅತಿ ಕಠಿಣ ಪ್ರಸಂಗ ಒದಗಿ, ಅವರ ದುರ್ದೆಸೆಯಾಗುವದು ದುಃಖದ ಸಂಗತಿಯೇ ಸರಿ; ಆದರೆ ಅಭಿಮಾನ ದಿಂದ ದುಃಖಪಡುವದಕ್ಕಿಂತ ನಮಗೆ ಹೆಚ್ಚಿನದೇನು ತಿಳಿಯುವದು? ನಾವು ನಗುವವರ ಸಂಗಡ ನಗಬಲ್ಲೆವು, ಅಳುವವರ ಸಂಗಡ ಅಳಬಲ್ಲೆವು. ಇದು ಭ್ರಾಂತಿಯೇ ಸರಿ. ನಿರಭಿಮಾನಿಗಳಾದ ಗುಣಗ್ರಾಹಿಗಳಿಗೆ ಪೇಶ್ವೆಯೂ ಅಷ್ಟೇ, ದುರಾಣಿಯೂ ಅಷ್ಟೇ! ಈ ಜಗತ್ತಿನಲ್ಲಿ ಕಾಲಕ್ಕನುಸರಿಸಿ ಆಗುವದೆಲ್ಲ ಹಿತಕ್ಕಾಗಿಯೇ ಆಗುತ್ತವೆಂದು ತಿಳಿದುಕೊಂಡ ಹೊರತು, ನಮ್ಮ ಅಭಿಮಾನದ ಸ್ವಭಾವಕ್ಕೆ ಸಮಾಧಾನವಾಗಲಾರದು; ಆದ್ದರಿಂದ ಮುಂದೆ ನಾವು ಬರೆಯುವ ಹೃದಯದ್ರಾವಕ ಸಂಗತಿಯನ್ನು ವಾಚಕರು ಗಟ್ಟಿಮನಸ್ಸಿನಿಂದ ಓದಿ, ಅದರಲ್ಲಿ ತೋರುವ ನಮ್ಮವರ ಉಜ್ವಲತೆಯಿಂದ ಸಮಾಧಾನಪಟ್ಟು ನಿರಾಶಪಡದೆ ಆಶಾ ವಾದಿಗಳಾಗತಕ್ಕದ್ದು. ಇರಲಿ, ನಮ್ಮ ಶ್ರೀಮಂತ ಹೆಣ್ಣು ಮಕ್ಕಳಾದ ಪಾರ್ವತೀಬಾಯಿ–ಲಕ್ಷ್ಮೀಬಾಯಿಯವರ ಪರಿಚಯವನ್ನು ವಾಚಕರಿಗೆ ಮೊದಲು ಮಾಡಿಕೊಡುವೆವು.

ಭಾವುಸಾಹೇಬನ ಹೆಂಡತಿಯಾದ ಪಾರ್ವತೀಬಾಯಿಯು ಪುಣೆಯೊಳಗಿನ ಭಿಕೋ ಬಾನಾಯಿಕ ಕೋಲ್ಹಟಿಕರ ಎಂಬ ಕೋಟ್ಯಾಧೀಶ ಸಾವುಕಾರನ ಮಗಳು. ಪ್ರಸಂಗವಿಶೇಷದಲ್ಲಿ ನಾಯಕರಿಂದ ಪೇಶ್ವೆಯವರಿಗೆ ಹಣದ ಪೂರಯಿಕೆಯಾಗುತ್ತಿತ್ತು. ಈ ದಂಡಯಾತ್ರೆಯ ಕಾಲದಲ್ಲಿ ಪಾರ್ವತೀಬಾಯಿಯ ವಯಸ್ಸು ಸರಾಸರಿ ಇಪ್ಪತ್ತು ವರ್ಷದ್ದಾಗಿರಬಹುದು. ಆಕೆಯವರ್ಣ ಕೆಂಪು, ನಿಲುವಿಕೆ ಅಷ್ಟು ಎತ್ತರವೂ ಅಲ್ಲ, ಅಷ್ಟುಗಿಡ್ಡಲೂ ಅಲ್ಲ –ಹವಣಿ ಯದು. ಆಕೆಯ ಅಂಗಕಾಂತಿಯೂ, ಮುಖಶೋಭೆಯೂ ರಮಣೀಯವಾಗಿದ್ದವು; ಆದರೆ ಇತ್ತಕಡೆಯ ಸಂಗ್ರಾಮಪ್ರಸಂಗದ ತಾಪದಿಂದ ಆಕೆಯು ದಿನದಿನಕ್ಕೆ ಕೃಶವಾಗುತ್ತನಡೆದಿದ್ದಳು. ಆಕೆಯ ಹೊಟ್ಟೆಯಲ್ಲಿ ಮಕ್ಕಳಿದ್ದಿಲ್ಲ. ಅನಪತ್ಯಸ್ತ್ರೀಯರು ಪತಿಯನ್ನಗಲಿ ಇರಲಾರರಾದ್ದರಿಂದ, ಪಾರ್ವತೀಬಾಯಿಯು ಪತಿಯೊಡನೆ ಹಟದಿಂದ ಹೊರಟಿದ್ದಳು. ಪತಿನಿಷ್ಠೆ, ಭೂತದಯೆ,

ನಮ್ರವೃತ್ತಿ, ಮೃದುಭಾಷಣ ಇವು ಈಕೆಯ ಮುಖ್ಯ ಗುಣಗಳಾಗಿದ್ದವು. ಈಕೆಯ ಆಶ್ರಿತ ಜನರು ಈಕೆಯನ್ನು ಕಂಡರೆ ಬಿದ್ದು ಸಾಯುತ್ತಿದ್ದರು. ಈಕೆ ಮುಖದಿಂದ ಕಠೋರವಾಣಿಗಳೂ, ಅಮಂಗಲವಾಣಿಗಳೂ ಎಂದೂ ಹೊರಡುತ್ತಿದ್ದಿಲ್ಲ. ಆಗಿನ ಕಾಲದ ಜನರು ಭಾವುಸಾಹೇಬ ನನ್ನು ಅರ್ಜುನನಿಗೂ, ಪಾರ್ವತೀಬಾಯಿಯನ್ನು ಸುಭದ್ರೆಗೂ ಹೋಲಿಸುತ್ತಿದ್ದರು. ''ಕುಲಕೀ ಶೋಭಾ ಶೀಲ ಎಂಬ ತುಳಸೀದಾಸನ ಉಕ್ತಿಯಂತೆ, ಪಾರ್ವತೀಬಾಯಿಯ ದೊಡ್ಡ ಕುಲಕ್ಕೆ ಒಪ್ಪುವಂತೆ ಆಕೆಯ ಶೀಲವಿತ್ತು. ಈ ದುರ್ಧರ ಪ್ರಸಂಗದಲ್ಲಿ ಆ ಪತಿವ್ರತೆಯು ಕುಂಕುಮ ಕಾಡಿಗೆ, ಮಣಿ, ಮಂಗಲಸೂತ್ರ, ಬುಗುಡೆ-ನತ್ತು ಇವಿಷ್ಟೇ ಸೌಭಾಗ್ಯಾಲಂಕಾರಗಳನ್ನು ಧರಿಸಿದ್ದಳು. ಎಲ್ಲ ರತ್ನಗಳಲ್ಲಿ ಶ್ರೇಷ್ಠ ರತ್ನವಾದ ಪಾತಿವ್ರತ್ಯ ರತ್ನದಿಂದ ಪ್ರಕಾಶಿಸುವ ಸಾಧ್ವಿಯ ರಿಗೆ ಉಳಿದ ಅಲಂಕಾರಗಳ ಬೆಲೆಯೇನು? ಪಾರ್ವತೀಬಾಯಿಗೆ ಕುದುರೆ ಏರಲಿಕ್ಕೂ, ಬರ್ಚಿ, ಕತ್ತಿ ಬಂದೂಕುಗಳನ್ನು ಉಪಯೋಗಿಸಲಿಕ್ಕೂ ಬರುತ್ತಿತ್ತು.

ಪಾರ್ವತೀಬಾಯಿಯಂತೆ ಲಕ್ಷ್ಮೀಬಾಯಿಯೂ ಕುಲೀನ ಮನೆತನದ ಹೆಣ್ಣುಮಗಳಿದ್ದಳು. ಪುಣೆಯಲ್ಲಿದ್ದ ಸದಾಶಿವರಾವ ಹರಿದೀಕ್ಷಿತ ಪಟವರ್ಧನ ಎಂಬ ಪಲ್ಲಕ್ಕಿಯ ಪದವಿಯ ದೊಡ್ಡ ಸಾವುಕಾರನು ಈಕೆಯ ತಂದೆಯು. ಈಗ ಲಕ್ಷ್ಮೀಬಾಯಿಯ ವಯಸ್ಸು ಹದಿನಾರು ವರ್ಷದ್ದಿತ್ತು. ಆಕೆಯ ಮೈಬಣ್ಣ ಕೆಂಪು, ನಿಲುವಿಕೆ ಗಿಡ್ಡದರ, ಮೈಕಟ್ಟು ತೆಳ್ಳಗೆ, ಅವಯವಗಳು ಚಲ್ವಿಕೆಯನ್ನು ಹೆಚ್ಚಿಸುವಂತೆ ಯಥಾಸ್ಥಿತವಾಗಿದ್ದವು. ಕ್ಷಾತ್ರತೇಜ, ಲಾವಣ್ಯ ಈ ಗುಣಗಳ ಯೋಗದಿಂದ ಅನುಕ್ರಮವಾಗಿ ವಿಶ್ವಾಸರಾಯನನ್ನು ಅಭಿಮನ್ಯುವಿಗೂ, ಲಕ್ಷ್ಮೀಬಾಯಿಯನ್ನು ವತ್ಸಲೆಗೂ ಹೋಲಿಸುತ್ತಿದ್ದರು. ಈಕೆಯ ಹೊಟ್ಟೆಯಲ್ಲಿಯೂ ಮಕ್ಕಳಾಗಿದ್ದಿಲ್ಲ. ಈಕೆಯ ಮೇಲೆ ವಿಶ್ವಾಸ ರಾಯನ ಪ್ರೇಮ ಬಹಳ. ಈಕೆಯೂ ಕುದುರೆಯನ್ನು ಚನ್ನಾಗಿ ಹತ್ತುತ್ತಿದ್ದಳು. ಶಸ್ತ್ರವಿದ್ಯೆ ಯನ್ನೂ ಅರಿತಿದ್ದಳು. ಈ ಇಬ್ಬರು ಸ್ತ್ರೀಯರ ಕುಲ-ಶೀಲ, ರೂಪ-ರೇಖೆ, ಗುಣ-ಗಾಂಭೀರ್ಯಗಳನ್ನು ಮನಸ್ಸಿನಲ್ಲಿ ತಂದರೆ, ಇವರ ವಿಷಯವಾಗಿ ಪೂಜ್ಯಭಾವವು ಹುಟ್ಟದೆ ಯಿರದು. ಇದೊಂದು ಕಲ್ಪಿತ ಕಾದಂಬರಿಯಾಗಿದ್ದು ಇವರಿಬ್ಬರು ಕಲ್ಪಿತ ಸ್ತ್ರೀಯರಾಗಿದ್ದರೆ, ಇಂಥ ಸುಕುಮಾರಿಯರನ್ನು ಇಷ್ಟುದೂರ ಕರೆತಂದು ಈ ಪರಿಯ ಸಂಕಟಕ್ಕೆ ನಾವು ಎಂದೂ ಗುರಿಮಾಡುತ್ತಿದ್ದಿಲ್ಲ. ಅಷ್ಟು ಕಠಿಣ ಹೃದಯವು ನಮ್ಮದಲ್ಲವೆಂತಲೂ ವಾಚಕರಿಗೆ ಹೇಳ ಬಹುದು. ಹಿಂದಕ್ಕೆ ನಾವು ಕುಮುದಿನೀ ಕಾದಂಬರಿಯಲ್ಲಿ ಚಿನ್ನ ಓಬಲನ ಕ್ರೂರತನವನ್ನು ವರ್ಣಿಸುವಾಗ ನಮ್ಮ ಕಣ್ಣೀರುಗಳುದುರಿದವು. ನಮ್ಮ ಮೈಸೂರಕಡೆಯ ಒಬ್ಬ ಸಹೃದಯ ಮಿತ್ರರು ಅದನ್ನು ಓದಿ ಮೂರ್ಛಿತರಾದರಂತೆ! ಆದರೆ ಮಾಡುವದೇನು? ನಡೆದದ್ದನ್ನು ನಡೆದ ಹಾಗೆ ವರ್ಣಿಸದಿದ್ದರೆ ನಿರ್ವಾಹವಿಲ್ಲ! ಪ್ರಸಂಗವಿಶೇಷದಲ್ಲಿ ಕಾದಂಬರಿಗೆ ಬಣ್ಣ ವೇರಿಸುವ ಭರದಲ್ಲಿ ಕೋಮಲಹೃದಯವೂ ಕಠಿಣವಾಗಬೇಕಾಗುತ್ತದೆ; ಪ್ರಸಂಗ ವಿಶೇಷದಲ್ಲಿ ಕಣ್ಣೀರು ಸುರಿಸುತ್ತಲೂ ಬರೆಯಬೇಕಾಗುತ್ತದೆ ಇರಲಿ.

ತಮ್ಮ ದುರವಸ್ಥೆಯು ಮರಾಟರ ಛಾವಣಿಯೊಳಗಿನ ಅಬಾಲವೃದ್ಧರಿಗೂ ಗೊತ್ತಾಗಿ ತ್ತೆಂದು ಹೇಳಬಹುದು. ಪ್ರತಿ ಒಬ್ಬರು ಚಿಂತಾಮಗ್ನರಾಗಿದ್ದರು. ಎಲ್ಲಿ ನೋಡಿದರೂ

ಅಸಮಾಧಾನ, ಎಲ್ಲಿ ನೋಡಿದರೂ ನಿರುತ್ಸಾಹ, ಎಲ್ಲಿ ನೋಡಿದರೂ ದುಃಖೋತ್ಪಾದಕ ಸಂಭಾಷಣಗಳು! ಅಂದಬಳಿಕ ಆ ಛಾವಣಿಯ ಕಲಾಹೀನತೆಯನ್ನೇನು ವರ್ಣಿಸಬೇಕು? ಮರುದಿವಸವೇ ಘನಘೋರ ಸಂಗ್ರಾಮವು ಒದಗತಕ್ಕದ್ದಿದ್ದದರಿಂದ, ವೀರರು ತಮ್ಮ ಪತ್ನಿಯರನ್ನು ಬಗೆಬಗೆಯಿಂದ ಸಮಾಧಾನಪಡಿಸುತ್ತಿದ್ದರು. ಪುಣೆಯಿಂದ ಉಬ್ಬಿ ಉಬ್ಬಿ ತಮ್ಮ ಹೆಂಡಿರನ್ನು ಕರಕೊಂಡುಬಂದ ಗಂಡಂದಿರು, ಇನ್ನು ತಮ್ಮ ಹೆಂಡಿರಗತಿಯೇನೆಂದು ಉಸುರ್ಗಳೆದು ಚಿಂತಿಸುತ್ತಿದ್ದರು. ಒಬ್ಬ ಸಾಧಾರಣ ಸಿಪಾಯಿಯಿಂದ ಶ್ರೀಮಂತರವರೆಗೆ ಕೌಟುಂಬಿಕ ಚಿಂತೆಯು ಎಲ್ಲರನ್ನು ವ್ಯಾಪಿಸಿತ್ತು. ಭಾವುಸಾಹೇಬನ ಹೆಂಡತಿಯಾದ ಪಾರ್ವತೀಬಾಯಿಯಂತು ತನ್ನ ಸೈನ್ಯದ ದುರವಸ್ಥೆಯನ್ನು ಚನ್ನಾಗಿ ಅರಿತವಳಾದ್ದರಿಂದ, ಮುಂದೆ ತಮ್ಮ ಗತಿಯೇನೆಂದು ತನ್ನ ತೊತ್ತಿನ ಸಂಗಡ ಆಲೋಚಿಸುತ್ತ ಕುಳಿತಿದ್ದಳು. ಆಕೆಯ ಕಣ್ಣೀರುಗಳು ಒಂದೇಸವನೆ ಸುರಿಯುತ್ತಿದ್ದವು. ಅಷ್ಟರಲ್ಲಿ ಭಾವು ಸಾಹೇಬನು ಬಂದ ವರ್ತಮಾನವು ತಿಳಿಯಲು, ಆ ಪತಿವ್ರತೆಯು ಕಣ್ಣುಗಳನ್ನು ಒರಿಸಿಕೊಂಡು, ಪತಿಯ ಮನಸ್ಸಿಗೆ ಅಸಮಾಧಾನವಾಗಬಾರದೆಂದು ದುಃಖವನ್ನು ನುಂಗಿಕೊಂಡು ಆದರದಿಂದ ಪತಿಯನ್ನು ಬರಮಾಡಿಕೊಂಡಳು; ಆದರೆ ಈ ಕೃತ್ರಿಮಸಮಾಧಾನವು ಹ್ಯಾಗೆ ಉಳಿಯಬೇಕು? ಪತಿಯ ಮುಖವನ್ನು ನೋಡಿದಕೂಡಲೆ ಆಕೆಯ ಹೊಟ್ಟೆಯೊಳಗಿನ ಇಲ್ಲದ ದುಃಖವು ಒತ್ತರಿಸಿ, ಆಕೆಯು ಪತಿಯನ್ನು ಅಪ್ಪಿಕೊಂಡಳು; ಕೂಡಲೆ ಆಕೆಯ ಕಣ್ಣೀರುಗಳು ಬಳಬಳ ಉದುರ ಹತ್ತಲು, ಆಕೆಯು ಬಿಕ್ಕಿಬಿಕ್ಕಿ ಅಳತೊಡಗಿದಳು. ಆಗ ಭಾವುಸಾಹೇಬನು ಕಳವಳಿಸಿ–

ಭಾವುಸಾಹೇಬ–ಇದೇನು? ಹೀಗೆ ಹುಚ್ಚರಂತೆ ಅಳಬೇಕೇನು? ಇದರಿಂದ ನಾಳಿನ ಯುದ್ಧರಂಗಕ್ಕಾಗಿ ನಮ್ಮ ಉತ್ಸಾಹವು ಹೆಚ್ಚಬಹುದೋ? ಇದು ನಮ್ಮ ಕಾರ್ಯಕ್ಕೆ ಅಪಶಕುನವಾಗಿ ತೋರುತ್ತದೆ.

ಪಾರ್ವತಿಬಾಯಿ–(ಕಣ್ಣು ಒರಿಸಿಕೊಳ್ಳುತ್ತ) ಈ ಪ್ರಸಂಗದಲ್ಲಿ ಇಷ್ಟು ಹಟಮಾರಿತನವೇಕೆ? ಒಡಂಬಡಿಕೆಯಾಗುವಹಾಗಿಲ್ಲವೆ? ಮುಸಲ್ಮಾನರ ಬಲವು ಅಧಿಕವಾಗಿ, ತಮಗೇನಾದರೂ ಅಪಾಯವಾದರೆ ಪರಿಣಾಮವೇನಾದೀತು? ಬರಿಯ ನಮ್ಮಷ್ಟಕ್ಕೇ ಹೋಗುವಹಾಗಿಲ್ಲ, ಕೂಸಾದ ವಿಶ್ವಾಸನನ್ನೂ, ಆತನ ಹೆಂಡತಿಯನ್ನೂ ಸಂಗಡ ಕರಕೊಂಡು ಬಂದಿದ್ದೇವೆ. ಅತ್ತಿಗೆಯವರು ಮಗನನ್ನು ಕಳಿಸಲಾರದಾಗಿದ್ದರು; ಆದರೆ ನಿಮ್ಮ ಮಾತು ಮುರಿಯಲಾರದೆ ಕಳಿಸಿದರು. ಈ ಪ್ರಸಂಗದಲ್ಲಿ ದೇವರು ಮುನಿದರೆ ಎಂಥ ಅಪಕೀರ್ತಿಗೆ ಗುರಿಯಾಗಬೇಕಾದೀತಲ್ಲ! ಅಪಕೀರ್ತಿಯ ಮಾತೂ ಹೋಗಲಿ, ಅಂಥ ದುರ್ಧರಪ್ರಸಂಗ ಒದಗಿದರೆ ಅಬಲೆಯರಾದ ನಮ್ಮ ಮರ್ಯಾದಾ ರಕ್ಷಣವು ಹ್ಯಾಗಾಗಬೇಕು? ನೀವು ನಾಳೆ ಯುದ್ಧಕ್ಕೆ ಹೊರಡುವದೇ ನಿಶ್ಚಯವಿದ್ದರೆ, ಕೈಮುಟ್ಟಿ, ನಮ್ಮನ್ನು ಸಂಹರಿಸಿ ಹೋಗಿಬಿಡಿರಿ. ನನ್ನ ಹಿಂದೆ ಅಳುವವರು ಯಾರಿರುವರು? ನನ್ನ ಹೊಟ್ಟೆ ಯಲ್ಲಿ ಮಕ್ಕಳಿಲ್ಲ–ಮರಿಯಿಲ್ಲ, ನಿಮ್ಮದೊಂದು ಜೀವದ ಸಲುವಾಗಿ ನನ್ನ ಜೀವನವು; ಅಂದಬಳಿಕ ನಿಮ್ಮನ್ನು ದುರ್ಧರ ಸಂಕಟಕ್ಕೆ ಗುರಿಮಾಡಿ ನಾನು ಬದುಕಿ ಹ್ಯಾಗೆ ಉಳಿಯಲಿ?

ಭಾವುಸಾಹೇಬ–(ಗದ್ಗದವಹಿಡಿದು ರಮಿಸುತ್ತ) ದೇವರ ದಯದಿಂದ ಅಂಥ ದುರ್ಧರ ಪ್ರಸಂಗವು ನಿಮ್ಮ ಪಾಲಿಗೆ ಬರಲೇಬೇಡ; ಆದರೆ ಪ್ರಿಯೇ, ಒಡಂಬಡಿಕೆ ಮಾಡಿಕೊಳ್ಳುವ ಹಾಗಿದ್ದರೆ ಇಷ್ಟು ಹೊತ್ತಿಗೇ ಮಾಡಿಕೊಳ್ಳುತ್ತಿದ್ದೆನು. ಅಣ್ಣನ ಮುಂದೆ ನಾನು ಆಡಿರುವ ಪೌರುಷದ ಮಾತುಗಳನ್ನು ನೆನಿಸಿಕೊಂಡರೆ, ನನ್ನ ಅಭಿಮಾನದ ಸ್ವಭಾವಕ್ಕೆ ಒಡಂಬಡಿಕೆ ಮಾಡಿಕೊಳ್ಳುವದು ಸೇರುವದಿಲ್ಲ. ಮೇಲಾಗಿ ಒಡಂಬಡಿಕೆ ಮಾಡಿಕೊಳ್ಳುವ ಕಾಲವೂ ಮೀರಿ ಹೋಗಿದೆ. ಇನ್ನು, ವಿಶ್ವಾಸನ ಸಂಬಂಧದಿಂದ ನೀನಾಡುವ ಮಾತು ನಮ್ಮ ಬ್ರಹ್ಮ ಹೃದಯಕ್ಕೆ ಒಪ್ಪತಕ್ಕದ್ದೇ ಸರಿ; ಆದರೆ ಬ್ರಾಹ್ಮಣರಾದ ನಾವು ಕ್ಷಾತ್ರಧರ್ಮವನ್ನು ಕೈಕೊಂಡಿರುವೆವಲ್ಲವೆ? ಈ ಯುದ್ಧದಲ್ಲಿ ಜಯವಾದರೆ ವಿಶ್ವಾಸನು ಆಸೇತು ಹಿಮಾಚಲ ಭರತಖಂಡದ ಸಾರ್ವಭೌಮ ಪದವಿ ಪಡೆಯಬಹುದಲ್ಲ! ಅಂದಬಳಿಕ ಸಾರ್ವಭೌಮನಾಗುವವನು ಸಮರದಲ್ಲಿ ಒದಗಬಹು ದಾಗಿರುವ ಮರಣಕ್ಕೆ ಸಿದ್ಧನಾಗಿರಲೇಬೇಕಲ್ಲವೆ? ನೀನು ಪಾಂಡವಪ್ರತಾಪವನ್ನು ದಿನಾಲು ಓದುವೆಯಲ್ಲ? ಅಭಿಮನ್ಯುವಿನ ಕತೆಯು ಗೊತ್ತಿಲ್ಲವೆ? ಸಾಕ್ಷಾತ್ ಭಗವದವತಾರವಾದ ಶ್ರೀ ಕೃಷ್ಣ ಪರಮಾತ್ಮನು ಅಭಿಮನ್ಯುವಿನ ಸೋದರಮಾವನು. ಮೂರುಲೋಕದ ಗಂಡನೆನಿಸುವ ಅರ್ಜುನನು ಅಭಿಮನ್ಯುವಿನ ತಂದೆಯು, ಹದಿನಾರು ಸಹಸ್ರ ಆನೆಗಳ ಬಲದ ಭೀಮ ಸೇನನು ಅಭಿಮನ್ಯುವಿನ ದೊಡ್ಡಪ್ಪನು; ಅಜಾತಶತ್ರುವೆನಿಸುವ ಧರ್ಮರಾಜನು ಅಭಿಮನ್ಯುವಿನ ಹಿತಚಿಂತಕನು. ಹೀಗಿದ್ದರೂ ಅಭಿಮನ್ಯುವಿಗೆ ಯುದ್ಧದಲ್ಲಿ ಮರಣವು ಯಾಕೆ ಒದಗಿತು? ಕ್ಷಾತ್ರಧರ್ಮದ ಸ್ವರೂಪವೇ ಹಾಗಿರುವದು; ಆದ್ದರಿಂದ ನೀನು ಸಾಮಾನ್ಯ ಸ್ತ್ರೀಯಂತೆ ಶೋಕಿಸಲಾಗದು. ಈಗ ಒಡಂಬಡಿಕೆ ಮಾಡಿಕೊಂಡು ಕಳ್ಳತನದಿಂದ ಜೀವ ಉಳಿಸಿಕೊಂಡರೆ, ನಮಗೆ ಚಿರಂಜೀವಿ ಪದವಿಯು ದೊರೆಯುವದೋ? ಈ ನಾಶವಂತ ಜಗತ್ತಿನಲ್ಲಿ ಯಾವದು ಶಾಶ್ವತ? ಈಗ ಪಾಂಡವರೂ ಹೋಗಿರುವರು, ಕೌರವರೂ ಹೋಗಿರುವರು; ಅವರ ಕೀರ್ತಿಯು ಮಾತ್ರ ಉಳಿದಿರುವದು. ಅದರಂತೆ, ನಮ್ಮ ಮಹಾರಾಷ್ಟ್ರ ರಾಜ್ಯಸ್ಥಾಪಕರಾದ ಶಿವಾಜಿ ಮಹಾರಾಜರು ಈಗ ಉಳಿದಿರುವರೇ? ಅವರ ರಾಜ್ಯವನ್ನು ಬೆಳಸಿದ ನಮ್ಮ ಪ್ರತಾಪಶಾಲಿ, ಪಿತೃವ್ಯರಾದ ಬಾಜೀರಾವ ಸಾಹೇಬರು ಬದುಕಿರುವರೇ? ಅದರಂತೆ, ಕ್ಷಾತ್ರವೃತ್ತಿಯಿಂದ ಮೆರೆಯುತ್ತಿರುವ ನಿನ್ನ ಪತಿಯಾದ ಭಾವುವು ತನ್ನ ಅಣ್ಣನ ಮುಂದೆ ನುಡಿದಂತೆ ಕಾರ್ಯಮಾಡಿಯಾನು, ಇಲ್ಲವೆ ರಣಭೂಮಿಯಲ್ಲಿ ದೇಹವಿಟ್ಟು ಕೀರ್ತಿಶೇಷನಾದಾನು! ಪ್ರಿಯೇ ನೀನು ಆ ಭಾವುವಿನ ಅರ್ಧಾಂಗಿಯಲ್ಲವೆ? ಅಂದಬಳಿಕ ನಿನ್ನ ಯೋಗ್ಯತೆಗೆ ತಕ್ಕಂತೆ ಈಗ ನೀನು ಆಚರಿಸತಕ್ಕದ್ದು. ಇದು ಕಣ್ಣೀರು ಹಾಕುವ ಸಮಯವಲ್ಲ. ಭಾರತದೊಳಗಿನ ವೀರಪತ್ನಿಯರ ಉದ್ಗಾರಗಳನ್ನೂ, ಅವರ ಉಜ್ವಲಾ ಚರಣೆಗಳನ್ನೂ ನೆನಪಿಗೆ ತಂದುಕೊಳ್ಳು. ಮೇಲಾಗಿ ನೀನು ಯುದ್ಧ ಕಲೆಯನ್ನು ಬಲ್ಲವಳಿರುವೆ. ಅಂಥ ಪ್ರಸಂಗವು ಒದಗಿದರೆ ನಮ್ಮ ಕಾಕಾ ಸಾಹೇಬರವರಾದ ಮಲ್ಹಾರರಾವ ಹೋಳಕರರವರು ನಿಮ್ಮ ಸಂರಕ್ಷಣ ಜವಾಬುದಾರಿಯನ್ನು ಹೊತ್ತಿರುತ್ತಾರೆ; ಅಂದಬಳಿಕ ಅದರ ಚಿಂತೆಯೇಕೆ? ವೈರಿಗಳು ಬಲಿಷ್ಠರಿದ್ದರೆ ನಾವೇನು ಬಲಹೀನರಿರುವೆವೇನು? ಆ ಯವನರೊಡನೆ ಒಡಂಬಡಿಕೆ ಮಾಡಿಕೊಂಡು

ಹಿಂದಿರುಗಿದರೆ ಅಣ್ಣನೇನು ಅಂದಾನು? ಜನರೇನು ಅಂದಾರು? ಅಕಸ್ಮಾತ್ ವಿಪರೀತ ಪ್ರಸಂಗವು ಒದಗಿದರೆ ನೆಟ್ಟಗೇ ಆಯಿತು. ಅದರಲ್ಲಿಯೇ ಮಹತ್ವಪೂರ್ಣ ವಿರುವದು. ನಾವು ಹೋದರೆ ನಮ್ಮ ಪೇಶವೆಯವರ ವೀರವಂಶವೇನು ನಷ್ಟವಾದಂತಾಗಲಿಲ್ಲ! ನಮ್ಮ ತಲೆಮೆಟ್ಟಿ ಹಾರುವ ವೀರರು ನಮ್ಮಲ್ಲಿ ಈಗ ಇರುವರು, ಮುಂದೆ ಉತ್ಪನ್ನವಾಗಬಹುದು.

ಈಮೇರೆಗೆ ಭಾವುಸಾಹೇಬನು ಆಡಿದ ಆವೇಶದ ಮಾತುಗಳನ್ನು ಕೇಳಿ, ವೀರಪತ್ನಿಯಾದ ಪಾರ್ವತೀಬಾಯಿಯು ಸಮಾಧಾನ ತಾಳಿ ಪತಿಯನ್ನು ಕುರಿತ–ಅಪ್ಪಯ್ಯಾ! ನಾನು ಮೋಹದ ಬಲೆಗೆ ಬಿದ್ದು ತಪ್ಪಿದೆನು. ಈ ಕ್ಷಾತ್ರತೇಜಸ್ಸಿನ ಮಾತುಗಳಿಂದ ದುರ್ಬಲರೂ ಸಬಲರಾಗ ಬಹುದು! ಮಹಾಮಹಾ ವೀರರೂ ಚರಣಗಳ ಪ್ರತಾಪಕ್ಕೆ ಅಂಜಿ ನಡೆಯುತ್ತಿರುವದೇನು ವ್ಯರ್ಥವೆ? ನಾನು ಪರಮ ಧನ್ಯಳು. ನಾನು ಅಬಲೆಯಾದರೂ ತಮ್ಮ ಪಾಣಿಗ್ರಹಣದ ಪುಣ್ಯದಿಂದ ರಣಭೂಮಿಯಲ್ಲಿ ಸ್ವತಃ ಕಾದಲು ಉತ್ಸಾಹಗೊಂಡಿದ್ದೇನೆ. ಆದ್ದರಿಂದ ಹೋಳ ಕರನಿಗೆ ನಮ್ಮನ್ನು ಒಪ್ಪಿಸದೆ, ಸ್ವತಃ ನಿಮ್ಮ ಆನೆಗಳ ಹಿಂದಿನಿಂದಲೇ ನಮ್ಮ ಆನೆಗಳನ್ನು ಸಾಗಿಸಿಕೊಂಡು ನಾಳಿನ ಸಮರಭೂಮಿಯ ಪಯಣವನ್ನು ಬೆಳಿಸಬೇಕು. ಸತ್ಯಭಾಮೆಯು ಶ್ರೀ ಕೃಷ್ಣನಿಗೂ, ಕೈಕೇಯಿಯು ದಶರಥನಿಗೂ ರಣದಲ್ಲಿ ಸಹಾಯ ಮಾಡಿದಂತೆ, ನಾನು ತಮಗೆ ಸಹಾಯಮಾಡುವ ಉತ್ಸಾಹವುಳ್ಳವಳಾಗಿರುವೆನು. ನನ್ನದಿಷ್ಟು ಮನೋದಯವನ್ನು ಸಫಲಗೊಳಿಸಬೇಕೆಂದು ಪ್ರಾರ್ಥಿಸುವೆನು. ಎಂದು ನುಡಿಯಲು, ಭಾವುಸಾಹೇಬನು– ಪ್ರಿಯೇ, ನಿನ್ನ ಮಾತು ಕೇಳಿ ಬಹಳ ಸಮಾಧಾನವಾಯಿತು. ಆದರೆ, ಸ್ತ್ರೀಯರಿಂದ ಸಹಾಯ ಪಡೆಯುವ ಪ್ರಸಂಗವು ನಮಗೆ ಬರಲೇಬೇಡ; ಆದರೂ ನಿನ್ನ ಇಚ್ಛೆಯಂತೆ ಮಾಡಬಹುದು,'' ಎಂದು ಅಭಯವಿತ್ತನು. ಬಳಿಕ ಆ ವೀರದಂಪತಿಗಳು ಸಮಾಧಾನದಿಂದ ನಿದ್ದೆಹೋದರು. ಇತ್ತ ವಿಶ್ವಾಸರಾಯನೂ ತನ್ನ ಹೆಂಡತಿಯನ್ನು ಹೀಗೆಯೇ ವಿರೋಚಿತ ಭಾಷಣಗಳಿಂದ ಸಮಾಧಾನ ಗೊಳಿಸಿದನು. ಸಿಂಹದ ಹೊಟ್ಟೆಯಲ್ಲಿ ಸಿಂಹವೇ ಹುಟ್ಟುವದಲ್ಲವೆ? ಅಂದಬಳಿಕ ಹೇಡಿತನದ ಮಾತುಗಳು ವಿಶ್ವಾಸರಾಯನ ಬಾಯಿಂದಲಾದರೂ ಹ್ಯಾಗೆ ಹೊರಡುವವು? ಹೀಗೆ ಆ ಘೋರವಾದ ರಾತ್ರಿಯು ಮರಾಟರ ಭಾವಣೆಯೊಳಗಿನ ವೀರರ ಹಾಗು ವೀರಪತ್ನಿಯರ ವೀರ್ಯೋದ್ದೀಪಕವಾಗಿ ಕ್ರಮಿಸುತ್ತಿರಲು, ನಿಯಮಿತಕಾಲದ ರಣಭೇರಿಯು ದಣುಗುಟ್ಟಿ ಬಾರಿಸಹತ್ತಿತು.

## ಸಂಗ್ರಾಮಗಮನ

ನೌಬತ್ತಿನ ಧ್ವನಿಯನ್ನು ಕೇಳಿ ಭಾವುಸಾಹೇಬನೂ, ವಿಶ್ವಾಸರಾಯನೂ ಎಚ್ಚತ್ತರು. ಅವರು ಮೂರು–ನಾಲ್ಕು, ತಾಸು ನಿದ್ದೆ ಮಾಡಿರಬಹುದು. ಪಾರ್ವತೀಬಾಯಿ, ಲಕ್ಷ್ಮೀಬಾಯಿ ಯವರಿಗಂತು ಆ ರಾತ್ರಿ ಗಾಢನಿದ್ರೆಯು ಹತ್ತಲೇ ಇಲ್ಲ. ಅವರಿಗೆ ದುಷ್ಟ ಸ್ವಪ್ನಗಳು ಮೇಲೆ ಮೇಲೆ

ಬೀಳುತ್ತಲಿದ್ದವು. ಎಚ್ಚರಾದಾಗೊಮ್ಮೆ ಅವರು ಉಸುರ್ಗಳೆದು ತಮ್ಮ ಪತಿಯ ಮುಖಾವಲೋಕನ ಮಾಡುತ್ತಿದ್ದರು! ಅವರಿಗೆ ಸಮಾಧಾನದ ಲೇಶವಿದ್ದಿಲ್ಲ. ತಮ್ಮ ಪತಿಗಳು ಎದ್ದು ಕುಳಿತಕೂಡಲೆ ಆ ಉಭಯ ಶ್ರೀಮತಿಯರೂ ಅಸಮಾಧಾನದಿಂದ ಎದ್ದು ಕುಳಿತು ಪತಿಗಳ ಮುಖವನ್ನು ಆತುರದಿಂದ ನೋಡಹತ್ತಿದರು. ಆಗ ಭಾವುಸಾಹೇಬನು ಪಾರ್ವತೀ ಬಾಯಿಯನ್ನು ಕುರಿತು– ''ಏಳಿರಿ, ಇನ್ನು ನಮ್ಮ ಪ್ರಯಾಣಕ್ಕೆ ಒಪ್ಪಿಗೆಕೊಡಿರಿ.'' ಎಂದು ನುಡಿಯಲು, ಆ ಶಬ್ದಗಳು ಕಿವಿಗೆ ಬಿದ್ದಕೂಡಲೆ ಪಾರ್ವತೀಬಾಯಿಯ ಮನಸ್ಸಿನ ಸ್ಥಿತಿಯು ಏನಾಗಿರಬಹುದೆಂಬದನ್ನು ನಾವು ವರ್ಣಿಸಲಾರೆವು. ವಾಚಕರೇ ಅದನ್ನು ತರ್ಕಿಸಬೇಕು. ಹೆಂಡತಿಯ ಒಪ್ಪಿಗೆ ಕೇಳಿಕೊಳ್ಳುವಾಗ ಭಾವುಸಾಹೇಬನ ಕಣ್ಣುಗ್ಗಳೂ ಅಶ್ರುಪೂರ್ಣ ವಾಗಿದ್ದವು. ಆಗ ಪಾರ್ವತೀಬಾಯಿಯು ಆತನ ಮುಖವನ್ನು ನೋಡುತ್ತ—''ಚರಣಗಳ ಸಂರಕ್ಷಣದ ಭಾರವು ನಮ್ಮ ಕುಲಸ್ವಾಮಿನಿಯ ಕಡೆಗೇ ಇರುವದು! ಹೋಗಿ ಬರಬೇಕು, ಜಯ ಸಂಪಾದಿಸಿಕೊಂಡು ಬರಬೇಕು'' ಎಂದು ಬಹು ಕಷ್ಟದಿಂದ ನುಡಿದು, ಅಪಶಕುನದ ಭಯದಿಂದ ಕಣ್ಣೀರುಗಳನ್ನು ತಡೆದು ದುಃಖವನ್ನು ಹತ್ತೊತ್ತಿಕೊಂಡು ಪತಿಯ ಚರಣಕ್ಕೆರ ಗಿದಳು. ಆಗ ಬಾವುಸಾಹೇಬನು ಸದ್ಗದಿತಾಂತಃಕರಣದಿಂದ ಪಾರ್ವತೀಬಾಯಿ ಯನ್ನು ಒಮ್ಮೆ ಚುಂಬಿಸಿ ಪಿಟ್ಟೆಂದು ಮಾತಾಡದೆ ಹೊರಟುಹೋದನು. ಇತ್ತ ವಿಶ್ವಾಸರಾಯನ ಕಡೆಯ ಸುದ್ದಿಯೂ ಇದೇ ಬಗೆಯದು! ಆ ತರುಣ ದಂಪತಿಗಳ ವಿಯೋಗಪ್ರಸಂಗವನ್ನು ವರ್ಣಿಸು ವದು ಯಾರಿಗೂ ಶಕ್ಯವಲ್ಲ. ಬಳಿಕ ಆ ಕಕ್ಕಮಕ್ಕಳು ತಮ್ಮತಮ್ಮ ಹೆಂಡಿರ ಅನುಮತಿ ಪಡೆದು ಶೌಚ–ಮುಖಮಾರ್ಜನಾದಿ ಪ್ರಾತರ್ವಿಧಿಗಳನ್ನು ತೀರಿಸಿಕೊಂಡರು. ಭಾವುಸಾಹೇಬನು ತನ್ನ ಯಾವತ್ತು ಸಣ್ಣ–ದೊಡ್ಡ ಸರದಾರರಿಗೆ ತಮ್ಮ ತಮ್ಮ ಸೈನ್ಯಗಳೊಡನೆ ಯುದ್ಧಕ್ಕೆ ಸನ್ನದ್ಧ ರಾಗಲು ಆಜ್ಞಾಪಿಸಿದನು. ಬಳಿಕ ಅವರಿಬ್ಬರೂ ತೈಲಾಭ್ಯಂಗ ಮಾಡಿ ಮಂಗಲಸ್ನಾನ ಮಾಡಿದರು. ನಿತ್ಯನಿಯಮದಂತೆ ದೇವತಾರ್ಚನವಾಗಿ ಅಲ್ಪಾಹಾರವಾಯಿತು. ತಾಂಬೂಲ ಭಕ್ಷಣಾನಂತರ ಅವರು ಉಕ್ಕಿನ ಕವಚವನ್ನೂ, ಶಸ್ತ್ರಾಸ್ತ್ರಗಳನ್ನೂ, ಕೇಶರೀಬಣ್ಣದ ಪೋಷಾಕನ್ನೂ ಧರಿಸಿದರು. ವಿಶ್ವಾಸರಾಯನು ಶಿರಪೇಚನ್ನೂ, ತುರಾಯಿಯನ್ನೂ, ಚೌಕಳಿಯನ್ನೂ, ಬುಜ ಬಂಧಗಳನ್ನೂ, ಮುತ್ತು–ರತ್ನಗಳ ಕಂಟಿಯನ್ನೂ ಧರಿಸಿಕೊಂಡು, ಕೈಯಲ್ಲಿ ಧನುರ್ಬಾಣ ಗಳನ್ನು ಧರಿಸಿ ಸಜ್ಜಾದನು. ಭಾವುಸಾಹೇಬನು ಸಾದಾಪೋಷಾಕು ಹಾಕಿಕೊಂಡು, ಕೈಯಲ್ಲಿ ಖಡ್ಗವನ್ನೂ, ಚಪ್ಪ ಕೊಡಲಿಯನ್ನೂ ಧರಿಸಿ ಸಿದ್ಧನಾದನು. ಧ್ವಜವಾಹಕರು ಧ್ವಜವನ್ನು ಹಿಡಿದ ಕೂಡಲೆ ನಗಾರೆ– ನೌಬತ್ತು ಮೊದಲಾದ ವಾದ್ಯಗಳು ಬಾರಿಸಹತ್ತಿದವು. ಈ ರಣವಾದ್ಯ ಧ್ವನಿಗಳಿಂದ ಇಡಿಯ ಭಾವಣೆಯು ದಿಮಿಗುಟ್ಟಿ ಹೋಯಿತು.

ಈ ರಣವಾದ್ಯಧ್ವನಿಯು ಕಿವಿಗೆ ಬಿದ್ದಕೂಡಲೆ ಯಾವತ್ತು ಸರದಾರರು ಭಗವಾ ಝೇಂಡಾದ (ಕೆಂಪುಶಾಟಿಯ ನಿಶಾನಿಯ) ಬಳಿಯಲ್ಲಿ ನೆರೆದರು. ಈ ಪ್ರಸಂಗದಲ್ಲಿ ಸುಜಾಉದ್ದೌಲನ ಕಡೆಗೆ ಹೋಗಿದ್ದ ವಕೀಲನ ಸುದ್ದಿಯು ತಿಳಿಯದ್ದರಿಂದ, ಭಾವುಸಾಹೇಬನ ಮನಸ್ಸು ವ್ಯಗ್ರವಾಗಿತ್ತು, ''ಸುಜಾನು ನಮ್ಮ ಹಿತದ ಮಾರ್ಗವನ್ನು ಸೂಚಿಸಿದನೋ ಅಥವಾ ವಿಶ್ವಾಸಘಾತಮಾಡಿ ವಕೀಲನನ್ನು ದುರಾಣಿಗೆ ಒಪ್ಪಿಸಿದನೋ? ಅಥವಾ ಬರುವಾಗ ಹಾದಿ

ಯಲ್ಲಿ ಯಾರಾದರೂ ವಕೀಲನನ್ನು ಹಿಡಿದು ಪ್ರತಿಬಂಧಿಸಿದರೋ? ಏನಾಯಿತೋ ತಿಳಿಯದು. ವಕೀಲನು ಹೋದಹೊತ್ತು ನೋಡಿದರೆ, ಸರಳ ರೀತಿಯಿಂದ ಎಲ್ಲ ಕೆಲಸವಾಗಿದ್ದ ಪಕ್ಷದಲ್ಲಿ ಇಷ್ಟು ಹೊತ್ತಿಗೆ ಆತನು ಬರಬಹುದಾಗಿತ್ತು'' ಎಂಬ ವಿಚಾರಗಳು ಭಾವುಸಾಹೇಬನ ಮನಸ್ಸಿನಲ್ಲಿ ಬಂದವು. ಮಹದಾಜಿಯ ಬಳಿಗೆ ಆ ವಕೀಲನು ಮೊದಲು ಬರುವ ಸಂಭವವಿರುವದರಿಂದ, ಅಲ್ಲಿ ಬಂದಿರಬಹುದೆಂದು ತಿಳಿದು, ನೋಡಿ ಬರಲಿಕ್ಕೆ ಭಾವುವು ಸೇವಕನನ್ನು ಅಟ್ಟಿದನು; ಆದರೆ ಅಲ್ಲಿಗೂ ವಕೀಲನು ಬಂದಿದ್ದಿಲ್ಲ. ಮುಂದೆ ಏನುಮಾಡಬೇಕೆಂಬದು ಭಾವುವಿಗೆ ತಿಳಿಯ ದಾಯಿತು. ಎಲ್ಲರೂ ಯುದ್ಧಕ್ಕೆ ಹೊರಡಬೇಕೆಂದು ಆಜ್ಞಾಪಿಸಿದ್ದನ್ನು ತಿರುಗಿ ತಕ್ಕೊಳ್ಳಲಿಕ್ಕೆ ಆತನಿಗೆ ಬರುವಹಾಗಿದ್ದಿಲ್ಲ. ಯುದ್ಧಕ್ಕೆ ಹೊರಡುವ ಸಮಯವಂತು ಸಮೀಪಿಸಿತು. ಹೀಗಾಗಿ ಆತನು ಬಹು ಚಿಂತೆಗೊಳಗಾದನು. ಕಡೆಗೆ ಆತನು ಮನಸ್ಸಿನ ನಿರ್ಧಾರದಿಂದ–''ಆದದ್ದು ಆಗಲಿ, ಮುಂದಕ್ಕೆ ಇಟ್ಟ ಹೆಜ್ಜೆಯನ್ನು ಹಿಂದಕ್ಕೆ ಇಡುವ ಹಾಗಿಲ್ಲ. ಈಗ ಯುದ್ಧಕ್ಕೆ ಹೊರಡಲೇಬೇಕು'' ಎಂದು ನಿಶ್ಚಯಿಸಿದನು. ಭಗವಾಝೇಂಡಾದ ಬಳಿಯಲ್ಲಿ ಎಲ್ಲಾ ಸರದಾರರು ನೆರದೇ ಇದ್ದರು. ಅವರು, ರಣಕ್ಕೆ ಹೊರಡಲು ಸಿದ್ಧನಾಗಿಬಂದ ಭಾವುಸಾಹೇಬನಿಗೆ ಮುಜರೆ ಮಾಡಲು, ಭಾವುವು ಆ ಎಲ್ಲ ಸರದಾರರನ್ನು, ಮುಖ್ಯವಾಗಿ–ಮಲ್ಹಾರರಾವ ಹೋಳಕರ, ಜನಕೋಜಿಸಿಂದೆ, ವಿಂಚೂರಕರ, ದಮಾಜಿಗಾಯಕವಾಡ ಇವರನ್ನು ಬಳಿಯಲ್ಲಿ ಕರೆದು–ಇಂದು ಸತ್ವಪರೀಕ್ಷೆಯ ಕಾಲವು ಒದಗಿದಂತಾಗಿರುತ್ತದೆ. ನಾವು ಶಿರಸ್ಸುಗಳನ್ನು ಕೈಯಲ್ಲಿ ಹಿಡಿದು ಸಮರಭೂಮಿಗೆ ಹೊರಟಿರುತ್ತೇವೆ. ಏಕನಿಷ್ಠೆಯಿಂದ ಕಾದುವದರ ಹೊರತು ಅನ್ಯವಿಚಾರಗಳನ್ನು ಯಾರೂ ಅಣುಮಾತ್ರವೂ ಮನಸ್ಸಿನಲ್ಲಿ ತರಲಾಗದು. ನೀವು ನಮ್ಮ ಹಳೇಸರದಾರರು. ಕೈಲಾಸವಾಸಿಗಳಾದ ನಮ್ಮ ಇಬ್ಬರು ಹಿರಿಯರ ಕಾಲದಲ್ಲಿಯೂ ಧೌರಂಧರ್ಯದಿಂದ ನೀವು ರಣಪಾಂಡಿತ್ಯವನ್ನು ತೋರಿಸಿದವರು. ಅವರ ಅನ್ನದಿಂದ ಬೆಳೆದ ನಿಮ್ಮ ದೇಹಗಳನ್ನು ಸಾರ್ಥಕಮಾಡುವ ಸಮಯವು ಈಗ ಒದಗಿರುತ್ತದೆ. ಸ್ವರ್ಗಲೋಕದಲ್ಲಿದ್ದ ನಿಮ್ಮ ಆ ರಾವಸಾಹೇಬರೂ, ಅಪ್ಪಾಸಾಹೇಬರೂ ಮೆಚ್ಚಿ ನಿಮ್ಮ ಬೆನ್ನು ಚಪ್ಪರಿಸುವ ಹಾಗೆ ಕೆಲಸಮಾಡಿರಿ. ಅವರು ಯಾವತ್ತು ದೌಲತ್ತಿನಿಂದ ಸಹಿತವಾಗಿ ನಮ್ಮನ್ನು ನಿಮ್ಮ ಉಡಿಯಲ್ಲಿ ಹಾಕಿರುವರು. ಇದನ್ನು ಮರೆಯದೆ ನೀವು ಯಶಸ್ಸನ್ನು ಕಾಯ್ದುಕೊಳ್ಳತಕ್ಕದ್ದು.

ಈಮೇರೆಗೆ ಭಾವುಸಾಹೇಬನು ಸೆರಗೊಡ್ಡಿ ಬೇಡಿಕೊಳ್ಳಲು, ಸರದಾರರು ಆತನನ್ನು ಕುರಿತು–''ಭಾವೂಸಾಹೇಬ, ಇಂದಿನ ಕಾಳಗದಲ್ಲಿ ನಾವು ಸರ್ವಥಾ ಜೀವದ ಹಂಗು ಇಡುವದಿಲ್ಲ. ದುರಾಣಿಯನ್ನು ಯಾರು ಕೇಳಬೇಕು? ಛತ್ರಪತಿಯ ಮಹಾರಾಜರ ಪುಣ್ಯದಿಂದ ಆತನನ್ನು ಮಣ್ಣುಗೂಡಿಸಿ ಬಿಡುವೆವು ತಾವು ಚಿಂತಿಸಬಾರದು.'' ಎಂದು ಹೇಳಿ, ಮುಜುರೆಮಾಡಿ ತಮ್ಮ ತಮ್ಮ ಸ್ಥಳಗಳಿಗೆ ಹೋಗಿ ನಿಂತುಕೊಂಡರು. ಅಷ್ಟರಲ್ಲಿ ಅಂಬಾರಿ ಹಾಕಿ ಅಲಂಕರಿಸಿ ಸಿದ್ಧಮಾಡಿದ್ದ ಹತ್ತು ಆನೆಗಳನ್ನು ಮಾವುತರು ಭಾವುಸಾಹೇಬನ ಬಳಿಯಲ್ಲಿ ತಂದು ನಿಲ್ಲಿಸಿದರು. ಪೂರ್ವದಲ್ಲಿ ಇರಾಣದ ಬಾದಶಹನು ಪೇಶ್ವೆಯವರಿಗೆ ಕಾಣಿಕೆ

ಯಾಗಿ ಕೊಟ್ಟಿದ್ದ ಬಿಳಿಯ ಆನೆಯೂ ಅದರೊಳಗೆ ಇತ್ತು, ಅದರ ಹೆಸರು ಗಜರಾಜನು. ಅದರಮೇಲೆ ಜರಿಪಟಿಕಾ ನಿಶಾನೆಯನ್ನು ನಿಲ್ಲಿಸಿದ್ದರು. ಶ್ಯಾಮಸುಂದರಬಕ್ಷ ಎಂಬ ಹೆಸರಿನ ಆನೆಯ ಅಂಬಾರಿಯಲ್ಲಿ ಸ್ವತಃ ಭಾವುಸಾಹೇಬನು ಕುಳಿತುಕೊಂಡನು. ಅದರ ಖವಾಸಖಾನೆ ಯಲ್ಲಿ ಖಾಸಗೀ ತೈನಾತಿಯ ಹುಜುರೆಗಳು ನಿಂತುಕೊಂಡರು. ಅದರ ಅಂಬಾರಿಯ ನಾಲ್ಕೂ ಕಂಬಗಳಿಗೆ ರತ್ನಖಚಿತಗಳಾದ ನಾಲ್ಕು ಚಪ್ಪಕೊಡಲಿಗಳನ್ನು ಕಟ್ಟಿದ್ದರು. ಇವು ಭಾವುಸಾಹೇಬನು ಪರಶುರಾಮಾವತಾರವೆಂದು ಜನರು ತಿಳಿಯುತ್ತಿದ್ದದ್ದರ ಕುರುಹುಗಳಾಗಿದ್ದವು. ಜಮದಗ್ನಿಪುತ್ರ ನಾದ ಆ ಪುರಾಣಪ್ರಸಿದ್ಧ ಪರಶುರಾಮನು ಈ ಚಪ್ಪಕೊಡಲಿಯಿಂದಲೇ ಇಪ್ಪತ್ತೊಂದು ಸಾರೆ ಕ್ಷತ್ರಿಯರನ್ನು ನಾಶಗೊಳಿಸಿದ್ದನು. ಆ ಶ್ಯಾಮಸುಂದರ ಗಜವು ಕಾಡಿಗೆಯ ಗುಡ್ಡದಂತೆ ಕಠ್ರಗೆ ಸುಣುಗುಟ್ಟುತ್ತಿತ್ತು, ಇನ್ನು ಮೂರನೆಯ ಆನೆಯು ಗಜಾನನ ಭಕ್ಷನು. ಅದರ ಮೇಲಿನ ಅಂಬಾರಿಯಲ್ಲಿ ವಿಶ್ವಾಸ ರಾಯನು ವಿರಾಜಮಾನನಾಗಿದ್ದನು. ಆತನ ಖವಾಸಖಾನೆಯಲ್ಲಿ ಚವರಿಬಾರದಾರರೂ, ಮಾನಕರಿಗಳೂ ಕುಳಿತುಕೊಂಡರು. ಬಿಲ್ಲು-ಬಾಣಗಳು, ಬಂದೂಕು, ಖಡ್ಗ ಮೊದಲಾದ ಆಯುಧಗಳು ಆತನ ಬಳಿಯಲ್ಲಿದ್ದವು. ಈ ಮೂರು ಆನೆಗಳ ಹಿಂದಿನಿಂದ ಫತ್ತೇಗಜ ಮೊದಲಾದ ಮತ್ತೆಮೂರು ಅಂಬಾರೆಯ ಆನೆಗಳು ಸಾಗಿದ್ದವು. ಅವುಗಳ ಮೇಲೆ ಪಾರ್ವತೀಬಾಯಿ; ಲಕ್ಷ್ಮೀ ಬಾಯಿ, ನಾನಾಫಡಣವೀಸನ ತಾಯಿ-ಹೆಂಡತಿ ಮೊದಲಾದ ಹೆಂಗಸರು ಕುಳಿತು ಕೊಂಡಿದ್ದರು. ಹೆಂಗಸರನ್ನು ರಣಭೂಮಿಗೆ ಕರಕೊಂಡು ಹೋಗಬಾರ ದೆಂದು ಭಾವುಸಾಹೇಬನು ಮಾಡಿದ್ದನು; ಆದರೆ ಸೈನ್ಯವು ಹೊರಡುವಾಗ ಅವರು ಬಹಳ ಆಕ್ರೋಶಮಾಡಿದ್ದರಿಂದ ಅವರನ್ನು ಸಂಗಡ ಕರಕೊಂಡು ಹೋಗಬೇಕಾಯಿತು. ಪಾರ್ವತೀ ಬಾಯಿಯೂ, ಲಕ್ಷ್ಮೀ ಬಾಯಿಯೂ ಪುರುಷವೇಷವನ್ನು ಧರಿಸಿದ್ದರು. ಅವರ ಖವಾಸಖಾನೆ ಯಲ್ಲಿ ಪ್ರೌಢವಯಸ್ಸಿನ ದಾಸಿಯರೂ, ಬೇರೆ ಆಶ್ರಿತ ಸ್ತ್ರೀಯರೂ ಕುಳಿತುಕೊಂಡಿದ್ದರು. ಉಳಿದ ಆನೆಗಳಲ್ಲಿ ನಾನಾ ಫಡಣವೀಸ ಹರಿಪಂತಫಡಕೆ, ಜಾಮದಾರ ಮೊದಲಾದ ಮಾನಕರಿಗಳು ಕುಳಿತಿದ್ದರು. ಅವರೆಲ್ಲರೂ ಶಸ್ತ್ರಧಾರಿಗಳಾಗಿದ್ದರು. ಈ ಎಲ್ಲ ಆನೆಗಳು ಬಹು ಬೆಲೆಯುಳ್ಳ ವಸ್ತ್ರಾಭರಣಗಳಿಂದ ಅಲಂಕೃತವಾಗಿದ್ದವು. ಅವುಗಳಲ್ಲಿ ಶ್ರೀಮಂತರು ಕುಳಿತ ಆನೆಗಳ ಐಶ್ವರ್ಯವನ್ನಂತು ವರ್ಣಿಸಲು ಅಸಾಧ್ಯವೇ ಸರಿ. ಜರದ ಜೂಲಗಳು ಆನೆಗಳ ಕಾಲತನಕ ಇಳಿಬಿದ್ದಿದ್ದು, ಅವುಗಳ ಕೊರಳೊಳಗಿನ ಬೆಳ್ಳಿ-ಬಂಗಾರದ ಗಂಟೆಗಳ ಸರಗಳಿಂದ ಅವು ಮನೋಹರವಾಗಿ ಒಪ್ಪುತ್ತಿದ್ದವು. ಆನೆಗಳ ಕಾಲುಗಳಲ್ಲಿ ಬೆಳ್ಳಿ-ಬಂಗಾರದ ಕಡಗ- ಸರಪಳಿಗಳು ಒಪ್ಪುತ್ತಿದ್ದವು. ಅಂಬಾರಿಗಳು ಬೆಳ್ಳಿ- ಬಂಗಾರದ ತಗಡುಗಳಿಂದ ಮುಚ್ಚುಹಾಕಿದ್ದು, ನಡನಡುವೆ ಕಲಾಕುಸರಿನಲ್ಲಿ ರತ್ನಗಳನ್ನು ಕೂಡಿಸಿ, ಅಲ್ಲಲ್ಲಿ ಮುತ್ತಿನ ಝೂಲರಗಳನ್ನೂ, ಗೊಂಚಲಗಳನ್ನೂ ಇಳಿಬಿಟ್ಟಿದ್ದರು. ಮಾವುತರು ವಸ್ತ್ರಾಲಂಕಾರ ವಿಭೂಷಿತರಾಗಿ, ಶಸ್ತ್ರಾಸ್ತ್ರ ಗಳಿಂದ ಒಪ್ಪುತ್ತ ಎರಡೂ ಕೈಗಳಲ್ಲಿ ಎರಡು ಅಂಕುಶಗಳನ್ನು ಹಿಡಿದು ಆನೆಗಳ ಕಿವಿಗಳಿಗೆ ಇರಿಯುತ್ತಿದ್ದರು.

ಹೀಗೆ ಮರಾಟರ ದಂಡು ಪಾನಿಪತದ ಛಾವಣಿಯನ್ನು ಬಿಟ್ಟು ಹೊರಟು ಕಂದಕವನ್ನು ದಾಟಿಹೋದಾಗ, ಇನ್ನೂ ಎರಡು ಮೂರುಗಳಿಗೆ ರಾತ್ರಿಯಿತ್ತು, ಆಗ ದಕ್ಷಿಣ ದಿಕ್ಕಿನಲ್ಲಿ ಬಹು ಉದ್ದವಾದ ಚಂಡಿಕೆಯ ಧೂಮಕೇತುವು ಮೂಡಿತ್ತು. ಈ ಅನಿಷ್ಟಸೂಚಕ ನಕ್ಷತ್ರವು ಈಗ ಮೂರು ತಿಂಗಳಿನಿಂದ ಬೆಳಗುಮುಂಜಾನೆ ಮೂಡುತ್ತಲಿತ್ತು. ಅದರ ಗತಿಯು ದಕ್ಷಿಣ ದಿಂದ ಉತ್ತರಕಡೆಗೆ ಇತ್ತು. ಆಗ ಮರಾಟರ ಸೈನ್ಯವು ಮುಂದಕ್ಕೆ ಸಾಗಿಹೋಗಿ ಸಾಲುಹಿಡಿದು ದುರಾಣಿಯ ಸೈನ್ಯಕ್ಕೆ ಎದುರಾಗಿ ನಿಂತ ಬಳಿಕ, ಪುನಃ ಯಾವತ್ತು ಸರದಾರರು ಭಾವು ಸಾಹೇಬನ ಅಂಬಾರಿಯ ಬಳಿಯಲ್ಲಿ ಬಂದು, ಆತನಿಗೆ ಮತ್ತೆ ಮುಜುರೆಮಾಡಿದರು. ಶ್ರೀಮಂತರ ಆನೆಗಳು ಸೈನ್ಯದ ಮಧ್ಯದಲ್ಲಿ ನಿಂತುಕೊಂಡಿದ್ದವು. ಅಲ್ಲಿಂದ ಭಾವುಸಾಹೇಬನು ಸರದಾರರ ಮುಜುರೆಗಳನ್ನು ಸ್ವೀಕರಿಸಿ, ನಾಲ್ಕೂ ಕಡೆಗೆ ತನ್ನ ಸೈನ್ಯವನ್ನು ದೃಷ್ಟಿಹರಿಯುವವ ರೆಗೆ ನೋಡಿದನು; ಆದರೆ ಅದರ ಅಂತವು ಹತ್ತಲಿಲ್ಲ. ಎದುರಿಗೆ ತನ್ನ ದೃಷ್ಟಿಗೆ ಹರಿಯದಂತೆ ಅಮರ್ಯಾದಿತವಾಗಿ ನಿಂತುಕೊಂಡಿರ ಬಹುದಾದ ಶತ್ರುಸೈನ್ಯವನ್ನೂ ಆತನು ಮನಸ್ಸಿನಲ್ಲಿ ತಂದನು. ಆಗ ಕ್ಷಣಮಾತ್ರ ಆತನ ಚಿತ್ತವೃತ್ತಿಯು ಆಶ್ಚರ್ಯದಿಂದ ತಟಸ್ಥವಾಯಿತು. ಈ ಎರಡೂ ಸೈನ್ಯಗಳನ್ನು ನೋಡಿ ಆತನಿಗೆ, ಇದೇ ಸ್ಥಳದಲ್ಲಿ ಹಿಂದಕ್ಕೆ ನಿಂತುಕೊಂಡಿದ್ದ ಕೌರವ–ಪಾಂಡವರ ಪ್ರಚಂಡ ಸೈನ್ಯದ ಸ್ಮರಣವಾಯಿತು. ಉಭಯದಳದ ಸರದಾರರನ್ನೂ ಆತನು ಮನಸ್ಸಿನಲ್ಲಿ ತರಲು, ಧರ್ಮರಾಜ, ಭೀಮ, ಅರ್ಜುನ, ನಕುಲ, ಸಹದೇವ, ಅಭಿಮನ್ಯು, ಸಾತ್ಯಕಿ, ಘಟೋತ್ಕಜ–ಹಾಗು ಆತನ ಮಕ್ಕಳು, ದ್ರುಪದರಾಜ, ವಿರಾಟರಾಜ, ದೃಷ್ಟದ್ಯುಮ್ನ, ಕಾಶೀರಾಜ, ದೃಷ್ಟಕೇತು, ಕುಂತಿಭೋೕ, ಶೈಬ್ಯ, ಯುಧಾಮನ್ಯು, ದುರ್ಯೋಧನ, ದುಶ್ಯಾಸನ, ದುರ್ಧರ್ಷ್ಯ, ದುರ್ಮುಖ, ಜಯದ್ರಥ, ಶಲ್ಯ, ಕರ್ಣ, ವಿಕರ್ಣ, ಅಲಂಬುಷ, ಭಗದತ್ತ ಸೋಮದತ್ತ ಭೂರಿಶ್ರವ, ಅಶ್ವತ್ಥಾಮ, ಕೃತವರ್ಮ, ದ್ರೋಣಾಚಾರ್ಯ, ಭೀಷ್ಮಾಚಾರ್ಯ, ಕೃಪಾಚಾರ್ಯ, ಶಕುನಿ ಮೊದಲಾದ ಅತಿರಥಿ ಮಹಾರಥಿಗಳು ಮತ್ತೆ ಕುರುಕ್ಷೇತ್ರದಲ್ಲಿ ನಿಂತುಕೊಂಡಿರುವಂತೆ ಆತನಿಗೆ ಭಾಸವಾಯಿತು. ಆ ಕಾಲದಲ್ಲಿ ಉನ್ನತವಾದ ಅಂಬಾರಿ ಯಲ್ಲಿ ಕುಳಿತಿದ್ದ ಭಾವುಸಾಹೇಬನು, ಪರಶುಧರನಾದ ಸಾಕ್ಷಾತ್ ಪರಶುರಾಮನೋ, ಅಥವಾ ಪಾಂಡುಪುತ್ರನಾದ ಧನುರ್ಧರಾಗ್ರೇಸರ ಅರ್ಜುನನೋ ಎಂಬಂತೆ ಸೈನಿಕರಿಗೆ ತೋರಿದನು. ಕೆಂಪಡರಿದ ಕಣ್ಣಿನ ಆ ವೀರಾಗ್ರಣಿಯ ಆಗಿನ ಉಗ್ರನ ಮೂರ್ತಿಯನ್ನು ನೋಡುವ ಧೈರ್ಯವು ಯಾರಿಗೆ ಆಗುವದು? ಆತನ ಸುತ್ತು ಮುತ್ತು ಹುಜೂರಪಾಗಾದೊಳಗಿನ ಐವತ್ತು ಸಾವಿರ ರಾವುತರ ದಳವು ಸಾಲುಹಿಡಿದು ನಿಂತುಕೊಂಡಿತ್ತು. ಇಂಥ ಅಮೋಘ ಬಲಶಾಲಿಯನ್ನು, ಕೆಣಕುವ ಸಾಹಸವನ್ನು ಯಾರು ಮಾಡಬಹುದು? ಅಹಮ್ಮದಶಹಾ ಅಬದಾಲಿಯಂಥ ಕೆಚ್ಚೆದೆಯ ಬಲಶಾಲಿಯಾದ ವೀರಪುರುಷನಲ್ಲದೆ ಆಗಿನ ಕಾಲದಲ್ಲಿ ಮತ್ತೆ ಯಾರೂ ಅಂಥ ಸಾಹಸ ಮಾಡುವಹಾಗಿದ್ದಿಲ್ಲ.

ಹಿಂದಕ್ಕೆ ಸುಜಾಉದ್ದೌಲನು, ಭಾವುಸಾಹೇಬನಿಗೆ ಕೊಡುವದಕ್ಕಾಗಿ ಬರಕೊಂಡು ಬಂದಿದ್ದ ಉತ್ತರವನ್ನು ಹರಿದು ಚೂರು–ಚೂರು ಮಾಡಿ, ತಾನು ಭಾವುಸಾಹೇಬನಿಂದ

ಬಂದಿದ್ದ ಪತ್ರವನ್ನು ತಕ್ಕೊಂಡು ದುರಾಣಿಬಾದಶಹನ ಕಡೆಗೆ ಕುದುರೆ ಓಡಿಸುತ್ತ ಹೋದ ನೆಂದು ಹೇಳಿದ್ದು ವಾಚಕರ ಸ್ಮರಣದಲ್ಲಿರಬಹುದು. ಸುಜಾಉದ್ದೌಲನು ಹೋಗುವದಕ್ಕಿಂತ ಮೊದಲೇ ಮಧ್ಯರಾತ್ರಿಯ ಸಮಯದಲ್ಲಿ ಅಹಮ್ಮದಶಹನು ತನ್ನ ನಿತ್ಯನಿಯಮದಂತೆ ತನ್ನ ಸೈನ್ಯದಲ್ಲೆಲ್ಲ ತಿರುಗಿ ಅದರ ವ್ಯವಸ್ಥೆಯನ್ನು ನೋಡಿಬಂದು, ನಸಿಕಿನಲ್ಲಿ ನನ್ನನ್ನು ಎಬ್ಬಿಸ ಬೇಕೆಂದಲೂ, ನಿಮಾಜಿಗೆ ಹೋಗುವದಕ್ಕಾಗಿ ಕುದುರೆಗೆ ಜೀನುಹಾಕಿ ಸಿದ್ಧಮಾಡಿ ಇಟ್ಟಿರ ಬೇಕೆಂತಲೂ ಸೇವಕರಿಗೆ ಹೇಳಿ ಮಲಗಿಕೊಂಡಿದ್ದನು. ಎಂಥ ಅವಸರದ ಕೆಲಸವಿದ್ದರೂ ಆತನು ನಿಮಾಜು ಮಾಡದೆ ಇರುತ್ತಿದ್ದಿಲ್ಲ. ಆತನು ನಿಮಾಜು ಮಾಡುವದಕ್ಕಾಗಿ ಒಂದು ಎತ್ತರವಾದ ಸ್ಥಳದಲ್ಲಿ ಒಂದು ಸಣ್ಣ ಡೇರೆಯನ್ನು ಹೊಡಸಿದ್ದು, ಅಲ್ಲಿ ದಿನಾಲು ನಸಿಕಿನಲ್ಲಿ ತಪ್ಪದೆ ನಿಮಾಜು ಮಾಡುತ್ತಿದ್ದನು. ಸುಜಾಉದ್ದೌಲನು ಹೋದಾಗ ಆ ಕಾರ್ಯದಕ್ಷ ಬಾದಶಹನು ಅದೇ ಎದ್ದು ಕುಳಿತಿದ್ದನು. ನಿಮಾಜಿಗೆ ಹೊರಡಲಿಕ್ಕೆ ಇನ್ನೂ ಅರ್ಧತಾಸಿನ ಅವಕಾಶವಿತ್ತು. ಸುಜಾ ಉದ್ದೌಲನು ಬಂದ ವರ್ತಮಾನವನ್ನು ಸೇವಕರು ಹೇಳಲು, ಬಾದಶಹನು ಆತನನ್ನು ಕರೆಸಿ ಕೊಂಡು "ವಿಶೇಷ ವರ್ತಮಾನವೇನೆಂ"ದು ಕೇಳಿದನು. ಅದಕ್ಕೆ ಸುಜಾಉದ್ದೌಲನು ಮರಾಟರು ದಂಡೆತ್ತಿ ಬಂದ ಸುದ್ದಿಯನ್ನು ಹೇಳಿದನು; ಆದರೆ ಅದು ಬಾದಶಹನಿಗೆ ನಿಜವೆಂದು ತೋರ ಲಿಲ್ಲ; ಯಾಕಂದರೆ, ಹಾಗೆ ದಂಡೆತ್ತಿ ಬರುವದು ಮರಾಟರಿಗೆ ಹಿತವಲ್ಲೆಂಬದು ಆ ಯುದ್ಧ ಕಲಾವಿಶಾರದನಿಗೆ ಗೊತ್ತಿತ್ತು; ಆದ್ದರಿಂದ ತಮ್ಮನ್ನು ಬೆದರಿಸಲಿಕ್ಕೆ ಮರಾಟರು ಏನಾದರೂ ಸುಳ್ಳೆ ಸುದ್ದಿಯ ಹುಟ್ಟಿಸಿರಬಹುದೆಂದು ಆತನು ತಿಳಿದುಕೊಂಡನು; ಆದರೆ ಸುಜಾಉದ್ದೌಲನು ಭಾವುಸಾಹೇಬನ ಹಸ್ತಾಕ್ಷರದ ಪತ್ರವನ್ನು ತೋರಿಸಲು, ಬಾದಶಹನಿಗೆ ನಂಬಿಗೆಯಾಯಿತು. ಕೂಡಲೆ ಆತನು ಸೈನ್ಯವನ್ನು ಸಿದ್ಧಗೊಳಿಸಲು ಅಪ್ಪಣೆಮಾಡಿ, ತನ್ನ ಬಳಿಯ, ಹಾಗು ಬೇರೆ ಬೇರೆ ಕಡೆಯ ಸರದಾರರನ್ನು ಕರತರಲು ಸವಾರರನ್ನು ಓಡಿಸಿದನು. ಬಾಶಹನ ಮುಖ್ಯವಜೀರ ನಾದ ಶಹಾವಲ್ಲೀಖಾನ, ಶಾಹಾಪಸಂದಖಾನ, ನಜೀಬದ್ದೌಲಾ, ಬರಖುರ ದಾರಖಾನ, ಅಮೀರಬೇಗಖಾನ, ದುಂದಿಖಾನ, ಅಹಮ್ಮದಖಾನಬಂಗಷ, ಹಾಫೀಜರ ಹಂಮುತಖಾನ ಮೊದಲಾದ ಸರದಾರರನ್ನು ಬಾದಶಹನು ಕರೆಕಳುಹಿದನು. ಬಳಿಕ ತಾನು ಸುಜಾಉದ್ದೌಲ ನೊಡನೆ ಕುದುರೆಯನ್ನೇರಿ ನಿಮಾಜು ಮಾಡುವದಕ್ಕಾಗಿ ಹೊರಟನು. ನಿಮಾಜು ಆದಮೇಲೆ ಆತನು ಎತ್ತರವಾದ ಸ್ಥಳದಲ್ಲಿ ನಿಂತು ಮೊದಲು ಪಾನಿಪತ್ತದ ಭಾವಣೆಯಕಡೆಗೆ ನೋಡ ಹತ್ತಿದನು.

ಆಗ ಬೆಳಗಾಗುತ್ತ ಬಂದಿತ್ತು. ಬೆಳಗಿನ ಲಕ್ಷಣಗಳು ಆಕಾಶದಲ್ಲಿಯೂ, ಭೂಮಿ ಯಲ್ಲಿಯೂ ತೋರುತ್ತಲಿದ್ದವು. ಹೇಮಂತಋತುವಿನೊಳಗಿನ ಉತ್ತರ ಹಿಂದುಸ್ಥಾನದ ಬೆಳಗಿನ ತುಂತು ರುಹನಿಯ ಮಂಜು ದಟ್ಟವಾಗಿ ಬಿದ್ದಿತ್ತು. ಆ ಮಂಜಿನ ಆಚೆಕಡೆಯಲ್ಲಿ ದಂಡು ಯುದ್ಧಕ್ಕೆ ಹ್ಯಾಗೆ ನಿಂತಿರುವದೆಂಬದನ್ನು ನೋಡುವದಕ್ಕಾಗಿ ಬಾದಶಹನು ಕಣ್ಣು ಹರಿಯುವ ವರೆಗೆ ಕೆಕ್ಕರಿಸಿ ನೋಡಿದನು; ಮತ್ತು ಏನಾದರೂ ಸಪ್ಪಳವಾಗುತ್ತಿರುವದೇನೆಂದು ಕಿವಿಗೆ ಕೈ ಒಡ್ಡಿಒಡ್ಡಿ ಕೇಳಿದನು; ಆದರೆ ವಿಶ್ವೇಶ್ವರನಿಂದ ನಿರ್ಮಿಸಲ್ಪಟ್ಟ ಆ ಮಂಜಿನ ಪರದೆಯ

ಆಚೆಯಕಡೆಯಲ್ಲಿ ಏನೂ ಕಾಣಿಸಲಿಲ್ಲ–ಯಾವ ಸಪ್ಪಳವೂ ಕೇಳಿಸಲಿಲ್ಲ; ಆಗ ಅಬದಾಲಿಯು ಸಂಶಯದ ಮುದ್ರೆಯಿಂದ ಸುಜಾಉದ್ದೌಲನನ್ನು ನೋಡುತ್ತ, ಹಾಗೇ ಆತನೊಡನೆ ರಣ ಸ್ತಂಭದಕಡೆಗೆ ನಡೆದನು. ಅಷ್ಟರಲ್ಲಿ ಶಹಾನ ದಂಡಿನ ಕಾವಲುಗಾರರು ಮರಾಟರ ರುಂಡ ಗಳನ್ನು ಚಂಡಾಡಿ, ಒಂದೊಂದು ಹಸಿತಲೆಯನ್ನು ತಮ್ಮ ಕುದುರೆಯ ಬೆನ್ನಿಗೆ ಕಟ್ಟಿಕೊಂಡು, ವಸ್ತ್ರಾಭರಣಗಳ ಲೂಟಿಯನ್ನು ಹೇರಿಕೊಂಡು ಸೆರೆಹಿಡಿದ ಹೆಂಗಸರು–ಹುಡುಗರು ಡಾವಣಿ ಯೊಡನೆ ಶಹಾನ ಎದುರಿಗೆ ಬಂದರು. ಅವರು ಶಹಾನನ್ನು ವಂದಿಸಿ–''ಖಾವಂದ, ಪರವರದಿಗಾರ, ಕಾಫರಜನರು ತಮ್ಮ ಚಾವಣಿಯನ್ನು ಬಿಟ್ಟು ಕತ್ತಲಲ್ಲಿ ಕರ್ನೋಳದ ಕಡೆಗೆ ಹಿಂಡುಗಟ್ಟಿ ಹಾದಿಹಿಡಿಸದೆ ಓಡುತ್ತಿದ್ದರು. ಅವರಲ್ಲಿ ಬಹುಜನರನ್ನು ಕೊಂದು ಸುಲಿಗೆ ಯನ್ನೂ, ಸೆರೆಯವರನ್ನೂ ತಂದಿದ್ದೇವೆ'' ಎಂದು ಹೇಳಿದರು. ಅದನ್ನು ಕೇಳಿ ಅಬದಾಲಿಯು ಸುಜಾಉದ್ದೌಲನ ಕಡೆಗೆ ತಿರುಗಿ ಸಿಟ್ಟಿನಿಂದ– ನವಾಬಸಾಹೇಬ, ಈ ಮಾತು ಕೇಳಿದಿರೇನು? ಸುಳ್ಳೇ ನಿಮಗೆ ಮರಾಟರು ದಂಡೆತ್ತಿಬಂದ ಸುದ್ದಿಯನ್ನು ಹೇಳಿದಿರಿ.'' ಎಂದು ಕೇಳಲು, ಸುಜಾನುಬೆದರಿ ''ಖಾವಂದ, ನನಗೆ ಹತ್ತಿದ ಸುದ್ದಿಯನ್ನು ಮುಟ್ಟಿಸಿದೆನು. ಇದರಲ್ಲಿ ನನ್ನದೇ ನಾದರೂ ಅಪರಾಧವಿದ್ದರೆ ಕ್ಷಮಿಸಬೇಕು'' ಎಂದು ಪ್ರಾರ್ಥಿಸಿದನು. ಸುಜಾಉದ್ದೌಲನು ಮರಾಟರ ಪಕ್ಷದವನೆಂದು ತಿಳಿದು ಅವರನ್ನು ಬಾದಶಹನು ನಂಬುತ್ತಿದ್ದಿಲ್ಲ; ಆದರೆ ಸ್ವಲ್ಪ ಹೊತ್ತಿನಲ್ಲಿ ಮರಾಟರ ಕಡೆಯ ತೋಫುಗಳು ಹಾರಹತ್ತಲು, ಶಹಾನ ಸಂಶಯವು ದೂರ ವಾಗಿ ಆತನು ಮುಗುಳುನಗೆ ನಗುತ್ತ ಸುಜಾಉದ್ದೌಲನಿಗೆ–''ನವಾಬಸಾಹೇಬ, ನಾನು ಮೊದಲು ಸುಳ್ಳೆಂದು ತಿಳಿದಿದ್ದೆನು. ಈಗ ಮರಾಟರು ಮೊದಲು ಏರಿಬಂದದ್ದು ಬಹಳ ನೆಟ್ಟಗಾಯಿತು. ಇನ್ನು ಜಯಲಕ್ಷ್ಮಿಯು ನಿಶ್ಚಯವಾಗಿ ನಮಗೇ ಮಾಲೆ ಹಾಕುವಳು. ಎಂದು ಹೇಳಿ, ತನ್ನ ಸೈನ್ಯವನ್ನು ಸಿದ್ಧಗೊಳಿಸುವ ಕಾರ್ಯವನ್ನು ಒತ್ತರದಿಂದ ಸಾಗಿಸಿದನು. ಯಾವಾಗಲೂ ಜಾಗರೂಕವಾಗಿರುತ್ತಿದ್ದ ತನ್ನ ಸೈನ್ಯವನ್ನು ಸಿದ್ಧಗೊಲಿಸಲಿಕ್ಕೆ ಆತನಿಗೆ ವಿಲಂಬ ವಾಗಲಿಲ್ಲ, ಭಾವುಸಾಹೇಬನು ವಕೀಲನನ್ನು ಕಳಿಸಿ, ಆ ವೀರಾಗ್ರಣಿಯನ್ನು ಮುಂಗಡ ಎಚ್ಚರಗೊಳಿಸಿದಂತೆ ಮಾತ್ರ ಆಯಿತು. ಸ್ವತಃ ಆತನಿಗೆ ಯಾವ ಪ್ರಯೋಜನವೂ ಆಗಲಿಲ್ಲ, ದೈವಶಾಲಿಗಳ ಮಾತು ಹೀಗೆಯೇ ಸರಿ!

## ಮರಾಟರ ಪರಾಕ್ರಮ

ಅಫಗಾಣರು ರಣಾಂಗಣದಲ್ಲಿ ಒಳ್ಳೆಯ ವ್ಯವಸ್ಥೆಯಿಂದಲೂ, ಸಿದ್ಧತೆಯಿಂದಲೂ ಎದುರಾಗಿ ನಿಂತಿದ್ದರು. ಅವರು ಒಬ್ಬರಿಗೊಬ್ಬರು ಹೊಂದಿ ಸಾಲಾಗಿ ನಿಂತದ್ದರಿಂದ, ಅವರನ್ನು ಭೇದಿಸಿ ಹೋಗಲಿಕ್ಕೆ ಮರಾಟರಿಗೆ ಬರುವಹಾಗಿದ್ದಿಲ್ಲ, ಉಭಯದಳದವರೂ ಒಬ್ಬರ ಮೇಲೊಬ್ಬರು ತೋಫುಗಳನ್ನು ಹಾರಿಸಹತ್ತಿದರು. ಸೂರ್ಯೋದಯವಾಗಿ ತಕ್ಕಮಟ್ಟಿಗೆ ಹೊತ್ತು

ಏರಿದ್ದರೂ, ತೋಫು–ತುಬಾಕಿಗಳ ಹೊಡತದ ಹೊಗೆಯಲ್ಲಿ ಸೂರ್ಯ ದರ್ಶನವಾಗುತ್ತಿದ್ದಿಲ್ಲ. ಯುದ್ಧಮಾಡುವ ಕ್ರಮದ ಬಗ್ಗೆ ಮರಾಟರ ಭಾವಣೆಯಲ್ಲಿ ಗೊತ್ತಾದದ್ದು ಸಮರಭೂಮಿಗೆ ಬಂದಬಳಿಕ ಉಳಿಯಲಿಲ್ಲ. ಯಾರು ಮುಂದಕ್ಕೆ ಸಾಗಬೇಕು, ಯಾರು ಹಿಂದಿನಿಂದ ಬರಬೇಕು, ಎಂಬದರ ನಿಯಮವು ಉಳಿಯದೆ, ಎಲ್ಲರೂ ಮನಸ್ಸಿಗೆ ಬಂದಹಾಗೆ ಮುಂದಕ್ಕೆ ಸಾಗಿಬಿಟ್ಟರು. ಮರಾಟರ ದಂಡು ಬೇಗ ಬೇಗನೆ ಸರಿದುಹೋಗಿ ವೈರಿಗಳ ದಂಡಿಗೆ ಸಮೀಪಿಸಿತು. ಇಬ್ರಾಹಿಮಖಾನಗಾರದಿಯ ಸೈನ್ಯಕ್ಕೂ, ರೋಹಿಲರ ಸೈನ್ಯಕ್ಕೂ ಅಂತರವು ತೀರ ಸ್ವಲ್ಪ ಉಳಿಯಿತು. ಆಗ ಇಬ್ರಾಹಿಮಖಾನನು ಶ್ರೀಮಂತರ ಸವಾರಿಗಳಿದ್ದಲ್ಲಿಗೆ ಕುದುರೆ ಓಡಿಸುತ್ತ ಹೋಗಿ ತನ್ನ ಬಿಚ್ಚುಗತ್ತಿಯಿಂದ ಶ್ರೀಮಂತರಿಗೆ ಮುಜರೆಮಾಡಿ–''ಪರಶುರಾಮಾವತಾರ ಭಾವುಸಾಹೇಬ, ನಾನು ಜಾತಿಯಿಂದ ಮುಸಲ್ಮಾನನಿರುವೆನು. ನನ್ನ ಧರ್ಮ ಬೇರೆ, ನನ್ನ ಜಾತಿ ಬೇರೆ, ನನ್ನ ಜನರು ಪರಕೀಯರು, ಎಂದು ಎಷ್ಟೋ ಜನ ಮರಾಟಾಸರದಾರರು ನನ್ನನ್ನು ದ್ವೇಷಿಸುತ್ತಿರುವರು. ಕೆಲವರಂತು ನೆರೆದ ದರ್ಬಾರದಲ್ಲಿ ನನ್ನನ್ನು ನಿಂದಿಸಿದರು; ಆದರೆ ಮೌಲಾ–ಮಲಿಕನ ದಯದಿಂದ ಆ ನಿಂದಾವಚನಗಳನ್ನು ಸುಳ್ಳು ಮಾಡುವ ಪ್ರಸಂಗವು ಬಂದೊದಗಿದೆ. ನಾನು ನನ್ನ ಸಿಪಾಯಿಗಳ ಮೇಲುಕಟ್ಟಿ ಸಂಬಳದ ವಿಷಯವಾಗಿ ನಿಮಗೆ ಬಹಳ ತೊಂದರೆ ಕೊಟ್ಟಿದ್ದರಿಂದ, ನಿಮಗೂ ಸಿಟ್ಟು ಬರುತ್ತಿತ್ತು; ಏರಿದ ಸಂಬಳವು ಖಜಾನಿಯಿಂದ ಇನ್ನೂ ಸಿಪಾಯಿಗಳಿಗೆ ಮುಟ್ಟಿರುವದಿಲ್ಲ; ಆದರೂ ಅಲ್ಲಾನನ್ನು ಸ್ಮರಿಸಿ ಹೇಳುವದೇನಂದರೆ–ಈಗ ಖಾವಂದರವರ ಚಾಕರಿಯನ್ನು ಮನಃಪೂರ್ವಕ ಮಾಡುವಲ್ಲಿ ನಮ್ಮ ಸೈನಿಕರು ಸರ್ವಥಾ ತಪ್ಪಲಿಕ್ಕಿಲ್ಲ; ಮತ್ತು ಇಂದಿನ ಯುದ್ಧ ಪ್ರಸಂಗದಲ್ಲಿ ನಮ್ಮಿಂದ ವಿಶ್ವಾಸಘಾತವು ಸರ್ವಥಾ ಆಗಲಿಕ್ಕಿಲ್ಲ. ಖಾವಂದರವರ ಸಲುವಾಗಿ ನಮ್ಮ ಶಿರಸ್ಸುಗಳನ್ನು ಕೈಯಲ್ಲಿ ಹಿಡಿದು ಯುದ್ಧಕ್ಕೆ ಸನ್ನದ್ಧ ರಾಗಿರುತ್ತೇವೆ. ಇನ್ನು ನಮ್ಮ ಶೂರಸಿಪಾಯಿಗಳ ಪರಾಕ್ರಮವನ್ನು ಪರೀಕ್ಷಿಸಬೇಕು. ನಮ್ಮ ಸಲುವಾಗಿ ಆದ ವೆಚ್ಚವು ಬಡ್ಡಿ ಸಹಿತವಾಗಿ ಖಾವಂದರವರಿಗೆ ಇಂದು ಕೂಡಿ ಬಂದೀತು. ಇನ್ನು ವೈರಿಗಳ ಮೇಲೆ ಬೀಳಲು ನಮಗೆ ಅಪ್ಪಣೆ ದೊರೆಯಬೇಕು.'' ಎಂದು ಬೇಡಿಕೊಂಡನು. ಆಗ ಭಾವುಸಾಹೇಬನು ಅಂಬಾರಿಯೊಳಗಿಂದ ತನ್ನ ಖಡ್ಗದಿಂದಲೇ ಮುಜರೆಯನ್ನು ತಕ್ಕೊಂಡು—''ಖಾನಸಾಹೇಬ, ಈ ಕಾಲದಲ್ಲಿ ಕೃತಿಯಿಂದ ಪರಾಕ್ರಮವನ್ನು ತೋರಿಸತಕ್ಕದ್ದು. ನಮ್ಮ ಕಾಲಿಕಾಮಾತೆಗೆ ರಕ್ತಪಾನದ ಇಚ್ಛೆಯಾಗಿದೆ. ಆಕೆಗೆ ಕಂಟಮಟ ರಕ್ತವನ್ನು ಕುಡಿಸಿ ತೃಪ್ತಿಪಡಿಸಬೇಕು. ಅಷ್ಟು ಆಗದಿದ್ದರೆ, ಆದಷ್ಟು ರಕ್ತ ಕುಡಿಸಿ ಆಕೆಯನ್ನು ಸಂತೋಷಪಡಿಸಬೇಕು.'' ಎಂದು ಹೇಳಿದನು.

ಕೂಡಲೆ ಗಾರದಿಯು ತನ್ನ ಹತುಸ್ತಾವಿರ ಕವಾಯತಿಯ ಸೈನ್ಯದ ರಣಪಾಂಡಿತ್ಯವನ್ನು ತೋರಿಸಲು ಸಜ್ಜಾದನು. ಆತನು ಸ್ವತಃ ಕೈಯಲ್ಲಿ ಸಣ್ಣದೊಂದು ನಿಶಾನೆಯನ್ನು ಹಿಡಿದುಕೊಂಡು ಕವಾಯತಿಯ ಶಬ್ದಗಳನ್ನು ಉಚ್ಚರಿಸುತ್ತ ರೋಹಿಲರ ಮೇಲೆ ತೋಪು–ತುಬಾಕಿಯ ಗುಂಡುಗಳ ಮಳೆ ಸುರಿಸಹತ್ತಿದನು. ರೋಹಿಲರು ಹೆಸರಾದ ವೀರರು; ಆದರೆ ಇಬ್ರಾಹಿಮಖಾನನ ಪರಾಕ್ರಮಕ್ಕೆ ಅವರು ನಿಲ್ಲದಾದರು. ಪ್ರತ್ಯಕ್ಷ ಘಟೋತ್ಕಜನಂತೆ ಇಬ್ರಾಹಿಮಖಾನನು ಸೈನ್ಯದ ಸಂಹಾರದ ಕಾರ್ಯವನ್ನು ಭಯಂಕರವಾಗಿ ನಡಿಸಿದನು. ಆತನಿಗೆ ಸಮಶೇರ

ಬಹಾದ್ದರನೂ, ದವಾಜಿಗಾಯಕವಾಡನೂ ಒಳಿತಾಗಿ ಸಹಾಯಮಾಡಿದರು. ಮರಾಟರ ಈ ಶೌರ್ಯವನ್ನು ನೋಡಿ ಅಹಮ್ಮದಶಹನು ಆಶ್ಚರ್ಯಪಟ್ಟನು. ಈ ಘೋರಸಂಗ್ರಾಮದಲ್ಲಿ ಇಬ್ರಾಹಿಮಖಾನನ ಆರು ಪಟಾಲಮುಗಳು ನಾಶವಾದವು. ಸ್ವತಃ ಅವನಿಗೂ ಗಾಯಗಳಾದವು. ಎಂಟು ಸಾವಿರ ಜನ ರೋಹಿಲರು ರಣದಲ್ಲಿ ಮಡಿದರು. ಸ್ವತಃ ದವಾಜಿಗಾಯಕವಾಡನಿಗೂ ಗಾಯಗಳಾದವು; ಆದರೂ ಆ ವೀರರು ಹಿಂಜರಿಯದೆ ಒಂದೇಸವನೆ ರೋಹಿಲರನ್ನು ಹಣಿಯಹತ್ತಿದರು. ರೋಹಿಲರು ಮರಾಟರ ಈ ಉಬ್ಬಾಳುತನವನ್ನು ತಡೆಯಲಾರದೆ ಸಮರ ಭೂಮಿಯಿಂದ ಕಾಲುದೆಗೆದರು. ಆಗ ಮರಾಟರು ಶನೈಶ್ಚರನಂತೆ ಅವರ ಬೆನ್ನಟ್ಟಿ ಮಾಡಿದ ಕೊಲೆಗೆ ಲೆಕ್ಕವಿಲ್ಲ, ಆಗ ಅವರು ಲೇಶವಾದರೂ ದಯೆಯನ್ನು ತೋರಿಸಲಿಲ್ಲ. ಹೀಗೆ ಇಬ್ರಾಹಿಮಖಾನ ಗಾರದಿಯೂ, ದವಾಜಿಗಾಯಕವಾಡನೂ ವಿಲಕ್ಷಣ ಪರಾಕ್ರಮವನ್ನು ಪ್ರಕಟಿಸಿ, ರೋಹಿಲರನ್ನು ಹೊಡೆದೋಡಿಸಿ, ಜಯವನ್ನು ಸಂಪಾದಿಸುತ್ತಿರಲು, ಅತ್ತ ಖುದ್ದ ಶ್ರೀಮಂತರ ಸವಾರಿಗಳಿರುವ ನಿಟ್ಟಿನಲ್ಲಿ ವಿಜಯಧ್ವನಿಯ ಕೋಲಾಹಲವುಂಟಾಯಿತು. ಅದನ್ನು ಕೇಳಿ ಮರಾಟರ ಸೈನ್ಯದ ನಿರಾಶೆ–ನಿರುತ್ಸಾಹಗಳೆಲ್ಲ ಅಳಿದು ಹೋಗಿ, ಅವರು ಉತ್ಸಾಹಶಾಲಿಗಳಾಗಿ ಪರಾಕ್ರಮದಿಂದ ಕಾದಹತ್ತಿದರು. ಜಯಪ್ರಾಪ್ತಿಯ ಆಶೆಯು ಅವರಿಗೆ ತೋರಹತ್ತಿತು. ಅಬದಾಲಿಯ ಮುಖ್ಯ ವಜೀರನಾದ ಶಹಾವಲ್ಲೀಖಾನನೊಡನೆ ಭಾವುಸಾಹೇಬನೂ, ವಿಶ್ವಾಸರಾಯನೂ ಕಾದತೊಡಗಿದ್ದರು. ಶಹಾವಲ್ಲೀಖಾನನು ಸಾಮಾನ್ಯ ವೀರನಲ್ಲ, ಉಚ್ಚ ತರದ ವೀರಕೋಟಿಯಲ್ಲಿ ಆತನ ಗಣನೆಯಿತ್ತು, ಹಲವು ಯುದ್ಧಗಳಲ್ಲಿ ಜಯವನ್ನು ಸಂಪಾದಿಸಿ ಆತನು ವೃದ್ಧನಾಗಿದ್ದನು. ಆತನ ರಾವುತರೂ ಒಳ್ಳೇ ರಣಶೂರರಾಗಿದ್ದರು. ಉತ್ತರದ ಕಡೆಯ ಆ ವೀರರ ಭವ್ಯಶರೀರಗಳು ರಿಪುಭಯಂಕರಗಳಾಗಿದ್ದವು. ಅಫಗಾಣರ ಹತ್ತುಸಾವಿರ ರಾವುತರೂ, ದುರಾಣಿಯ ಏಳುಸಾವಿರ ರಾವುತರೂ, ಬಂದೂಕು ಹಿಡಿದು ಇರಾಣಿಯ ಐದು ಸಾವಿರಜನರೂ, ಒಂದು ಸಾವಿರ ಸಾಂಡಣಿಯ ಸವಾರರೂ ಇಷ್ಟು ಸೈನ್ಯವು ಶಹಾವಲ್ಲೀಖಾನನಿಗೆ ಅಂಕಿತವಾಗಿ ಮರಾಟರೊಡನೆ ಕಾದುತ್ತಿತ್ತು. ಈ ಪ್ರಚಂಡಸೈನ್ಯದೊಡನೆ ಶಹಾವಲ್ಲೀಖಾನನು ಮರಾಟರಿಗೆ ಎದುರಾಗಿ ಕಾದುತ್ತ ಅವರ ಪ್ರಚಂಡ ಪರಾಕ್ರಮಕ್ಕೆ ಅಳುಕದೆ ಸ್ಥಳಬಿಟ್ಟು ಕದಲದೆ ನಿಂತುಕೊಂಡಿದ್ದನು. ಈ ವಜೀರನ ಸೈನ್ಯದ ನಂಬಿಗೆಯು ಅಬದಾಲಿಗೆ ವಿಶೇಷವಾಗಿ ಇತ್ತು; ಆದರೆ ಜೀವದ ಹಂಗುದೊರೆದು ಕಾದುತ್ತಿರುವ ಮರಾಟರ ಪರಾಕ್ರಮಕ್ಕೆ ಅಂಥ ವಜೀರನ ಅಭೇದ್ಯಸೈನ್ಯವೂ ಈಡಾಗಲಿಲ್ಲ, ಮರಾಟರ ಹೊಡತವನ್ನು ತಾಳಲಾರದೆ ಅದು ಸಮರಭೂಮಿಯಿಂದ ಕಾಲದೆಗೆಯಹತ್ತಿತು. ಅದನ್ನು ನೋಡಿ ಶಹಾವಲ್ಲೀಖಾನನೂ, ಆತನ ಮಗನಾದ ಅತಾಯಿಖಾನನೂ ತಮ್ಮ ಸೈನಿಕರನ್ನು ತಡೆಯಲು ವಿಶ್ವಪ್ರಯತ್ನಮಾಡಿದರು; ಆದರೆ ಅದರಿಂದ ಪ್ರಯೋಜನವೇನು ಆಗದೆ ಸೈನಿಕರು ದಾರಿಸಿಕ್ಕತ್ತ ಓಡತೊಡಗಿದರು. ಆಗ ಶಹಾವಲ್ಲೀಖಾನನ ಸಂತಾಪವು ಮಿತಿಮೀರಿತು. ಆ ವೃದ್ಧವೀರನು ಸಿಟ್ಟಿನಭರದಲ್ಲಿ ತನ್ನ ಗಡ್ಡದ ಕೂದಲುಗಳನ್ನು ಕಿತ್ತುತ್ತ ತನ್ನ ಸೈನಿಕರನ್ನು ಕುರಿತು–''ವೀರರೇ, ಎತ್ತ ಓಡಿ ಹೋಗುವಿರಿ? ನಿಮ್ಮ ದೇಶವು ಯಾವ ಕಡೆಗೆ ಉಳಿಯಿತು? ನೀವು ಯುದ್ಧದಲ್ಲಿ ಪರಾಜಿತ

ರಾದರೆ ಮರಾಟರು ನಿಮ್ಮನ್ನು ತುಂಡರಿಸಿ ಚಲ್ಲದೆ ಬಿಡರು. ನಿಮ್ಮಂಥ ವೀರರಿಗೆ ಈ ಪಲಾಯನವು ಭೂಷಣವೆ? ಹಿಂದಿರುಗಿರಿ'' ಎಂದು ಒದರುತ್ತ ಓಡಿಹೋಗುವವರನ್ನು ತುಂಡರಿಸುತ್ತ ತನ್ನ ಸೈನಿಕರನ್ನು ಹಿಂದಿರುಗಿಸಲಿಕ್ಕೆ ವಿಶ್ವಪ್ರಯತ್ನ ಮಾಡಿದನು; ಆದರೆ ಪ್ರಯೋಜನವೇನು ಆಗಲಿಲ್ಲ.

ಹೀಗೆ ಶಹಾವಲ್ಲೀಖಾನನು ತನ್ನ ಸೈನಿಕರನ್ನು ಹಿಂದಿರುಗಿಸಲು ಪ್ರಯತ್ನ ಮಾಡುತ್ತಿರುವಾಗ ಆತನ ಕುದುರೆಯು ಬೆದರಿ ಆ ವೃದ್ಧ ವಜೀರನನ್ನು ಸಮರಭೂಮಿಯಿಂದ ಓಡಿಸಿಕೊಂಡು ಹೋಗಹತ್ತಿತು. ಆಗ ಆ ವೃದ್ಧವೀರನು ಕುದುರೆಯನ್ನು ನಿಲ್ಲಿಸಲು ಬೇಕಾದಷ್ಟು ಯತ್ನಿಸಿದನು; ಆದರೆ ಅದು ವಶವಾಗಲಿಲ್ಲ. ಕಡೆಗೆ ಆ ಪ್ರಚಂಡಾಶ್ವವು ವಜೀರನನ್ನು ಹೊತ್ತುಕೊಂಡುಹೋಗಿ ಪುಟಿಚಂಡಿನಂತೆ ಆತನನ್ನು ಹಾರಿಸಿ ಒತ್ತಟ್ಟಿಗೆ ಒಗೆದು ಬಿಟ್ಟಿತು. ಆಗ ಆ ವೃದ್ಧ ವಜೀರನ ಮೈ ನುಗ್ಗಾಯಿತು. ಅಷ್ಟರಲ್ಲಿ ಆತನ ವೀರಪುತ್ರನಾದ ಅತಾಯಿಖಾನನು ಕುದುರೆ ಓಡಿಸುತ್ತಬಂದು, ತನ್ನ ತಂದೆಯನ್ನು ಹಿಡಿದೆತ್ತಿ ಮತ್ತೊಂದು ಕುದುರೆಯ ಮೇಲೆ ಕುಳ್ಳಿರಿಸಲು ಯತ್ನಿಸತೊಡಗಿದನು. ಇತ್ತ ಮರಾಟರ ವೀರಾವೇಶವು ಮಿತಿಮೀರಿ ಅವರು ''ಹರಹರಮಹಾದೇವ, ಜಯಭವಾನೀ'' ಎಂದು ಗರ್ಜಿಸುತ್ತ ವಜೀರನ ಸೈನ್ಯವನ್ನು ಹಣಿಯುತ್ತ ಅದನ್ನು ಭೇದಿಸಿ ತಾವು ಪಾರಾಗಿ ಹೋಗುವ ದಾರಿಯನ್ನು ಮಾಡಿಕೊಂಡರು. ಹೀಗೆ ಶಹಾವಲ್ಲೀಖಾನನ ಸೈನ್ಯವನ್ನು ಭೇದಿಸಿದ್ದು ಸಾಮಾನ್ಯ ಪರಾಕ್ರಮವಲ್ಲ. ಅತಾಯಿಖಾನನು ತನ್ನ ತಂದೆಯನ್ನು ರಕ್ಷಿಸುತ್ತಿರುವಾಗ ವಿಶ್ವಾಸರಾಯನ ಬಂದೂಕಿನೊಳಗಿಂದ ಹೊರಟದ್ದೊಂದು ಗುಂಡು ಆತನ ಎದೆಗೆ ಬಡೆಯಲು ಆತನು—''ಯಾ ಅಲ್ಲಾ'' ಎಂದು ಒದರಿ ತಂದೆಯ ಮೇಲೆ ಬಿದ್ದು ಗತಪ್ರಾಣನಾದನು. ಈತನು ಹಿಂದಕ್ಕೆ ಗೋವಿಂದಪಂತ ಬುಂದಲೆಯ ಶಿರಸ್ಸನ್ನು ಕೊಯ್ದು ಶಹಾನಿಗೆ ಕಾಣಿಕೆಯಾಗಿ ಅರ್ಪಿಸಿದ್ದನು. ಮಗನ ಈ ದುರವಸ್ಥೆಯನ್ನು ನೋಡಿ ಶಹಾವಲ್ಲಿಯು ಮೂರ್ಛಿತನಾಗಿ ಹಿಂದಕ್ಕೆ ಬಿದ್ದನು. ಅಷ್ಟರಲ್ಲಿ ಬಳಿಯಲ್ಲಿದ್ದವರು ಆತನನ್ನು ದರ ದರ ಎಳೆದೊಯ್ಯುತ್ತಿರಲು; ವಿಶ್ವಾಸರಾಯನ ಗಜರಾಜನು ಮದೋದಕವನ್ನು ಸ್ರವಿಸುತ್ತ ಅತಾಯಿಖಾನನ ಶವದ ಮೇಲೆ ಥೈ ಥೈಯೆಂದು ಕುಣಿದು ಅದನ್ನು ನೆಲಕ್ಕೊರಿಸಿಬಿಟ್ಟಿತು! ಅತ್ತ ಬೇರೆ ಕಡೆಯಲ್ಲಿಯ ಉಳಿದ ಮೊಗಲರು, ಅಫಗಾಣರು, ಪಠಾಣರು, ರೋಹಿಲರು ಮೊದಲಾದವರನ್ನು ಮರಾಟರು ಹೊಡೆದು ಹಿಂದಕ್ಕಟ್ಟಿದರು. ಈ ಘನಘೋರ ಸಂಗ್ರಾಮದಲ್ಲಿ ಮರಾಟರ ಅಸಂಖ್ಯದಳದ ಸಂಹಾರ ವಾಯಿತು. ರಣಭೂಮಿಯಲ್ಲಿ ರಕ್ತವು ಸರವುಗಟ್ಟಿ ಹರಿಯಹತ್ತಿತು. ಹೀಗೆ ಮರಾಟರು ಜಯಶಾಲಿಗಳಾಗುತ್ತಿರುವಾಗ ಒಮ್ಮೆಲೆ ದುರ್ದೈವದ ವಕ್ರದೃಷ್ಟಿಯು ಅವರ ಮೇಲೆ ಹೊರಳಿತು. ದುರಾಣಿಯ ಸೈನ್ಯವು ಮತ್ತೆ ಮರಾಟರ ಮೇಲೆ ವೇಗದಿಂದ ಬಿದ್ದಿತು. ಆಗ ಮರಾಟರು ಹಿಂದಕ್ಕೆ ಸರಿಯಹತ್ತಿದರು. ಇದನ್ನು ನೋಡಿ ಭಾವುಸಾಹೇಬನು ತನ್ನ ಆನೆಯನ್ನು ಒತ್ತರದಿಂದ ಮುಂದಕ್ಕೆ ನೂಕಿದನು. ಎಡಗಡೆಯಿಂದ ವಿಶ್ವಾಸರಾಯನೂ ಭರದಿಂದ ಏರಿಬಂದನು. ಬಲಗಡೆಯಿಂದ ಜನಕೋಜಿ ಸಿಂದೆಯೂ, ಮಹದಾಜಿಸಿಂದೆಯೂ ಸೈನ್ಯವನ್ನು ಸಂಹರಿಸುತ್ತ ಮುಂದಕ್ಕೆ ಸಾಗಿಬಂದರು.

ಬಾಣಗಳ ಯುದ್ಧವು ನಿಂತು ಖಡ್ಗಗಳ ಯುದ್ಧಕ್ಕೆ ಆರಂಭವಾಯಿತು. ಒಂದು ಪ್ರಹರದವರೆಗೆ ಈ ಶಸ್ತ್ರಯುದ್ಧವು ನಡೆದು ರಣವು ಶವಮಯ ವಾಯಿತು. ಉಭಯ ದಳದ ವೀರರೂ ಒಬ್ಬರ ಲ್ಲೊಬ್ಬರು ಬೆರೆತು ಹೋಗಿ ಸ್ವ-ಪರಭೇದ ವನ್ನರಿಯದೆ ಆವೇಶದಿಂದ ಕಾದತೊಡಗಿದ್ದರು. ಎಲ್ಲರಿಗೂ ರಣಮದವೇರಿದಂತಾಗಿತ್ತು, ಉಭಯ ಶ್ರೀಮಂತರ ಆನೆಗಳೂ ಸ್ವ ಸೈನಿಕರನ್ನು ಪ್ರೋತ್ಸಾಹಿಸುತ್ತ ವೈರಿಗಳನ್ನು ಸಂಹರಿಸುತ್ತ ಮುಂದುವರಿದು ಸಾಗುತ್ತಲಿದ್ದವು. ಆಗ ಬಾವೂ ಸಾಹೇಬನು ಅಂಬಾರಿಯಿಂದ ಕೆಳಗಿಳಿದು ಎರಡೂ ಕೈಗಳಲ್ಲಿ ಎರಡು ಖಡ್ಗಗಳನ್ನು ಧರಿಸಿ ಕೃತಾಂತನಂತೆ ಶತ್ರುಗಳನ್ನು ಸಂಹರಿಸ ತೊಡಗಿದ್ದನು. ಇದನ್ನು ನೋಡಿ ಉಳಿದ ಮರಾಟ ವೀರರೂ ರೊಚ್ಚಿಗೆದ್ದು ಶತ್ರುಗಳ ಮೇಲೆ ಬಿದ್ದು ಅವರನ್ನು ಸಂಹರಿಸತೊಡಗಿದರು. ಈ ಪ್ರಸಂಗದಲ್ಲಿ ನೂರಾರು ಜನ ಸರದಾರರು ಗಾಯವಡೆದು ಅವರ ದೇಹಗಳು ರಕ್ತಮಯ ವಾದವು. ಕೆಲವರು ರಣಭೂಮಿಯಲ್ಲಿ ಶಯನ ಮಾಡಿದರು; ಕೆಲವರು ಮೂರ್ಛಿತರಾದರು; ಕೆಲವರ ರುಂಡಗಳು ಪುಟಿಚಂಡಿನಂತೆ ಹಾರಿದವು, ಕೆಲವರ ಹೊಟ್ಟೆಯೊಳಗಿನ ಕರಳುಗಳು ಹೊರಬಿದ್ದವು. ಯಾವ ಬಣದವರೂ ಕಾದುವಲ್ಲಿ ಕಸರುಮಾಡಲಿಲ್ಲ, ಈಗಿನ ಯುದ್ಧಾವೇಶದಲ್ಲಿ ವಿಶ್ವಾಸರಾಯನ ಆನೆಯು ಬಹಳ ಮುಂದಕ್ಕೆ ಸಾಗಿಹೋಗಿತ್ತು, ಅದನ್ನು ಹಿಂದಕ್ಕೆ ತಿರುಗಿಸಿ ಮೊದಲಿದ್ದ ಸ್ಥಳದಲ್ಲಿಯೇ ನಿಲ್ಲಿಸಿದರು. ಬಳಿಕ ಭಾವುಸಾಹೇಬನು ತನ್ನ ಪ್ರೀತಿಯ ಕುದುರೆ ಯನ್ನೇರಿ ಶತ್ರುಗಳೊಡನೆ ಕಾದತೊಡಗಿದನು. ಆ ಕಾಳಗದಲ್ಲಿ ಎರಡೂ ಪಕ್ಷದವರು ಕೂಡಿ ನಾಲ್ವತ್ತುಸಾವಿರ ವೀರರು ರಣಭೂಮಿಯಲ್ಲಿ ಮಡಿದರು. ಸರಾಸರಿ ಹತ್ತುಸಾವಿರ ಜನರು ಗಾಯಹೊಂದಿದ್ದರು. ಬಾವುಸಾಹೇಬನು ಅರ್ವಾಚೀನಕಾಲದ ಒಬ್ಬ ಭಾರತೀಯ ವೀರನಾಗಿಹೋದನು. ಮಜ್ಜಿಗೆ ಅನ್ನ ಉಣ್ಣುವ ಭಟ್ಟನ ವಂಶದಲ್ಲಿ ಇಂಥ ಪುತ್ರರತ್ನವನ್ನು ಹಡೆದ ವೀರಮಾತೆಯಾದ ರಖುಮಾಬಾಯಿಯ ಧನ್ಯವಾದವನ್ನು ಎಷ್ಟು ಮಾಡಿದರೂ ಸ್ವಲ್ಪವೇ ಇರುವದು! ಅದರಂತೆ, ಭಾವುವಿನ ಪ್ರತಾಪಶಾಲಿ ಪಿತ್ರನಾದ ಚಿಮಣಾಜಿ ಅಪ್ಪಾನೂ ಧನ್ಯನೇ ಸರಿ! ಇಂಥ ವೀರಪುತ್ರರನ್ನು ನೋಡುವ ಹಿಂದುಗಳಿಗೆ ದಶರಥ, ಪಂಡು, ಶಹಾಜಿ ಮುಂತಾದ ಪುಣ್ಯಶಾಲಿಗಳ ನೆನಪಾಗದೆ ಹೋಗಲಿಕ್ಕಿಲ್ಲ, ದುರಾಣಿಯ ಮೂವತ್ತು ಸಾವಿರ ದಂಡಾಳುಗಳು ಮರಣಹೊಂದಿದರು; ಎಂಟುಸಾವಿರ ಜನರು ಗಾಯಪಟ್ಟರು. ಭಾವಣಿಯಲ್ಲಿ ಇಪ್ಪತ್ತುಸಾವಿರ ಕುದುರೆಗಳೂ, ಏಳುನೂರು ಒಂಟೆಗಳೂ, ಎರಡುನೂರು ಆನೆಗಳೂ ಉಳಿದಿದ್ದವು. ಇತ್ತ ಭಾವುಸಾಹೇಬನ ಹುಜೂರಾತ ಪಾಗೆಯ ಇಪ್ಪತ್ತುಸಾವಿರ ರಾವುತರೂ, ಹದಿನೈದುಸಾವಿರ ಕುದುರೆಗಳೂ, ಐನೂರು ಒಂಟೆಗಳೂ, ನೂರಾರು ಆನೆಗಳೂ ಮರಣ ಹೊಂದಿದವು. ಈ ಸಮರದಲ್ಲಿ ಅಬದಾಲಿಯ ಇಬ್ಬರು ಮಕ್ಕಳಾದ ತೇಜೂರಶಹಾ, ನಜೀಮುಶಹಾ ಎಂಬವ ರಿಬ್ಬರು ರಣಭೂಮಿಯಲ್ಲಿ ಬಿದ್ದರು. ಇವರಲ್ಲದೆ ಎಷ್ಟೋ ಪ್ರಾಯಸ್ಥರಾದ ಪಠಾಣವೀರರೂ, ರೋಹಿಲೆ ವೀರರೂ ಪ್ರಾಣಕ್ಕೆ ಎರವಾದರು. ಕಡೆಗೆ ದುರಾಣಿಯ ಸೈನ್ಯವು ಸೋತು ಹಿಂದಕ್ಕೆ ಸರಿಯಿತು. ಅವರಲ್ಲಿ ಕಾದುವ ತ್ರಾಣವು ಯಾರಲ್ಲಿಯೂ ಉಳಿಯಲಿಲ್ಲ, ಭಾವುಸಾಹೇಬನು ಶತ್ರುಗಳ ಬೆನ್ನುಬಿಡದೆ-''ಹೊಡೆಯಿರಿ, ಕಡಿಯಿರಿ, ಇರಿಯಿರಿ, ಕೊಲ್ಲಿರಿ, ತಿವಿಯಿರಿ'' ಎಂದು

ಒದರುತ್ತ ದುರಾಣಿಯ ಉಳಿದ ಸೈನ್ಯವನ್ನು ಹೊಡೆದೋಡಿಸಿದನು. ದುರಾಣಿಯ ಎಲ್ಲಸೈನ್ಯವೂ ಛಾವಣಿಯನ್ನು ಪ್ರವೇಶಿಸಿತು. ಈ ವಿಜಯದಿಂದ ಭಾವುಸಾಹೇಬನಿಗಾದ ಆನಂದವನ್ನು ವರ್ಣಿಸಲಾಸಲ್ಲ! ಆಗ ಆತನು ಕುದುರೆಯಿಂದ ಇಳಿದು ಪುನಃ ಅಂಬಾರಿಯಲ್ಲಿ ಕುಳಿತುಕೊಂಡನು. ಆ ಇಬ್ಬರು ಕಕ್ಕಮಕ್ಕಳ ಆನೆಗಳು ಜೋಡಾಗಿ ಸಾಗಿದವು. ರಣತುತೂರೆ, ರಣ ಕೊಂಬು, ರಣಭೇರಿ, ಬೇರೆವಾದ್ಯಗಳು ಭೋರ್ಗರೆಯಹತ್ತಿದವು. ಮರಾಟರು ಜಯಶಾಲಿಗಳಾದರು; ದುರಾಣಿಯ ವಜೀರನಾದ ಶಹಾವಲ್ಲೀಖಾನನು ಸಂಪೂರ್ಣ ಪರಾಜಿತನಾದನು.

ಹೀಗೆ ಮರಾಟರು ಜಯಶಾಲಿಗಳಾಗಿ ಶಹಾವಲ್ಲೀಖಾನನನ್ನು ಸೋಲಿಸಿದ್ದರಿಂದ, ಯಮುನಾನದಿಯ ಕಡೆಗೆ ಹೋಗುವ ಅವರ ದಾರಿಯು ತೆರವಾದಂತಾಯಿತು. ಇದೇ ಸಮಯದಲ್ಲಿ ಎಲ್ಲ ಮರಾಠಾ ಸರದಾರರೂ ಒಕ್ಕಟ್ಟಿನಿಂದ ದುರಾಣಿಯ ಸೈನ್ಯವನ್ನು ನೂಕುತ್ತ ನಡೆದಿದ್ದರೆ, ಆ ಸೈನ್ಯವು ತನ್ನ ದೇಶದಕಡೆಗೆ ಹೊರಟು ಹೋಗಿಬಿಡಬಹುದಾಗಿತ್ತು, ರಣ ಭೂಮಿಯಲ್ಲಿ ಒಬ್ಬನೂ ಮುಸಲ್ಮಾನನು ಉಳಿಯುತ್ತಿದ್ದಿಲ್ಲ. ಮರಾಟರ ಈ ವಿಜಯವನ್ನು ನೋಡಿ ಸ್ವಾರ್ಥಸಾಧುವಾದ ಸುಜಾಉದ್ದೌಲನು ರಾಜಾದೇವೀದತ್ತ ಎಂಬವನ ಸಂಗಡ ಭಾವುಸಾಹೇಬನ ಕಡೆಗೆ–''ನೀವು ಜಯಶಾಲಿಗಳಾದದ್ದನ್ನು ನೋಡಿ ನನಗೆ ಬಹಳ ಸಂತೋಷ ವಾಗುತ್ತದೆ. ನನ್ನ ಮಿತ್ರತ್ವದ ಚಿಂತೆಯನ್ನು ತಾವು ಹಿಡಿಯಬಾರದು. ನಾನು ನಿಮ್ಮ ಪಕ್ಷ ದವನೇ ಇದ್ದೇನೆಂದು ತಿಳಿಯಿರಿ'' ಎಂದು ಹೇಳಿಕಳಿಸಿದನು; ಆದರೆ ಮರಾಟರಿಗೆ ಈ ಸಂಗ್ರಾಮದಲ್ಲಿ ಜಯವಾಗುವ ಯೋಗವಿದ್ದಿಲ್ಲ; ಆದ್ದರಿಂದ ಕೆಲವು ವಿಪರೀತ ಪ್ರಸಂಗಗಳು ಒದಗಿಬಂದು, ಈಗ ಮರಾಟರಿಗಾಗಿದ್ದ ವಿಜಯವು ಕ್ಷಣಿಕವಾಗಿ ಪರಿಣಮಿಸಿತು. ಈ ವಿಜಯದ ಪ್ರಸಂಗದಲ್ಲಿ ಸುಜಾಉದ್ದೌಲತನು ದುರಾಣಿಯ ಪಕ್ಷವನ್ನು ಬಿಟ್ಟು ಭಾವು ಸಾಹೇಬನ ಪಕ್ಷಕ್ಕೆ ಕೂಡಿಕೊಳ್ಳಬಹುದಾಗಿತ್ತು, ಆದರೆ ಇನ್ನೂ ಕೆಲವು ಹೊತ್ತು ನೋಡೋಣ ನವೆಂದು ಆ ಸ್ವಾರ್ಥಸಾಧುವಾದ ನವಾಬನು ಯುದ್ಧದ ಪರಿಣಾಮವನ್ನು ನಿರೀಕ್ಷಿಸುತ್ತ ನಿಂತು ಕೊಂಡನು. ಅಷ್ಟರಲ್ಲಿ ಮರಾಟರ ಕಡೆಯ ಪ್ರಸಿದ್ಧ ವೀರನಾದ ವಿಠ್ಠಲರಾವ ವಿಂಚೂರಕರನು ದುಂದೀಖಾನ ನೊಡನೆ ಪರಾಕ್ರಮದಿಂದ ಕಾದುತ್ತಿರುವಾಗ ರಣಭೂಮಿಯಲ್ಲಿ ಗಾಯ ಹೊಂದಿದ್ದನು. ಇದನ್ನು ನೋಡಿ ದುರಾಣಿಯ ಸೈನ್ಯದಲ್ಲಿ ಆನಂದೋದ್ಗಾರಗಳೂ, ಮರಾಟರ ಸೈನ್ಯದಲ್ಲಿ ದುಃಖೋದ್ಗಾರಗಳೂ ಹೊರಡಹತ್ತಿದವು. ಬರಬರುತ್ತ ಜಯಲಕ್ಷ್ಮಿಯು ತೂಗಾಡ ಹತ್ತಿದಳು. ಆಕೆಯು ಯಾರ ಕಡೆಗೆ ಒಲಿಯುವಳೆಂಬದನ್ನು ನಿರ್ಧರಿಸಲಿಕ್ಕೆ ಬಾರದಾಯಿತು. ಅದನ್ನು ನೋಡಿ ಸುಜಾಉದ್ದೌಲನು, ತಾನು ಹಾದಿಯ ನೋಡಿದ್ದು ನೆಟ್ಟಗಾಯಿತು, ಇನ್ನಿಷ್ಟು ಹೊತ್ತು ಯುದ್ಧದ ಪರಿಣಾಮವನ್ನು ನೋಡಿ ಯಾರ ಪಕ್ಷಕ್ಕೆ ಕೂಡಬೇಕೆಂಬದನ್ನು ನಿರ್ಧರಿಸೋಣ, ಎಂದು ಅಂದುಕೊಳ್ಳುತ್ತ ತಟಸ್ಥನಾಗಿ ಎರಡೂ ದಂಡೆಗಳ ಮೇಲೆ ಕೈಯಿಟ್ಟು ನಿಂತುಕೊಂಡನು. ಅಷ್ಟರಲ್ಲಿ ಅಕಸ್ಮಾತ್ ಹೋಳಕರನು ರಣಭೂಮಿಯನ್ನು ಬಿಟ್ಟು ಜಾರತೊಡಗಿದನು. ಈ ವೃದ್ಧವೀರನ ಸಿಟ್ಟು ಬಾವುಸಾಹೇಬನ ಮೇಲೆ ಎಷ್ಟಿತ್ತೆಂಬದನ್ನು ವಾಚಕರು ಬಲ್ಲರು. ಆತನು ಸುಜಾಉದ್ದೌಲನಂತೆ, ಸ್ವಾರ್ಥದ ಆಶೆಯಿಂದ ನಜೀಬಉದ್ದೌಲನೊಡನೆ ಮೊದಲೇ ಮಾತು

ಮುಗಿಸಿಕೊಂಡಂತೆ, ಈಗ ರಣಭೂಮಿಯನ್ನು ಬಿಟ್ಟು ಸಾಗಿದನು. ಈವರೆಗಾದರೂ ಆತನು ಮನಸ್ಸುಗೊಟ್ಟು ಯುದ್ಧವನ್ನು ಮಾಡಿದ್ದೇ ಇಲ್ಲ; ಆತನು ಇಷ್ಟು ಹೊತ್ತಿನತನಕ ನಜೀಬನ ಸೈನ್ಯದೊಡನೆ ತೋರಿಕೆಗಾಗಿ ಕಾದುತ್ತ ನಿಂತು ಕೊಂಡಿದ್ದನು.

ಇತ್ತ ಇಬ್ರಾಹಿಮಖಾನಗಾರದಿಯು ಪರಾಕ್ರಮದಿಂದ ಕಾದಿ ಜಯವನ್ನು ಸಂಪಾದಿಸಿದ್ದರೂ, ಆ ಕ್ಷಣಿಕ ವಿಜಯಸಂಪಾದನದಲ್ಲಿ ಆತನ ಸೈನ್ಯದ ನಾಶವು ಮಿತಿಮೀರಿ ಆಗಿತ್ತು, ತನ್ನ ಉಳಿದ ಸೈನ್ಯದೊಡನೆ ಗಾರದಿಯು ವಿಶ್ರಾಂತಿಯನ್ನು ಹೊಂದುತ್ತಲಿದ್ದನು. ಈ ಸ್ಥಿತಿಯಲ್ಲಿ ಆತನು ಶತ್ರುಗಳ ಮೇಲೆ ಏರಿಹೋಗಿದ್ದರೂ ವಿಶೇಷ ಪ್ರಯೋಜನವಾಗುವಂತೆ ಇದ್ದಿಲ್ಲ. ದಮಾಜಿ ಗಾಯಕವಾಡನು ರೋಹಿಲರೊಡನೆ ಪರಾಕ್ರಮದಿಂದ ಕಾದಿ ಅವರನ್ನು ಬೆನ್ನಟ್ಟಿ ಹೋದವನು ಹೋಗಿಯೇ ಬಿಟ್ಟನು. ತಿರುಗಿ ಆತನು ರಣಭೂಮಿಯನ್ನು ಕಾಣಲಿಲ್ಲ! ಹೀಗೆ ತನ್ನ ಸೈನ್ಯದಲ್ಲಾದ ಅವ್ಯವಸ್ಥೆಯನ್ನೂ, ಫಿತೂರಿಯನ್ನೂ ನೋಡಿ ಭಾವುಸಾಹೇಬನು ಅಸಮಾಧಾನಪಟ್ಟನು. ಆತನು ಎಲ್ಲ ಸೈನ್ಯದೊಡನೆ ಒಮ್ಮೆಲೆ ಮುಂದುವರಿದು ಬಂದು ಬಿಟ್ಟಿದ್ದರಿಂದ, ಪ್ರಸಂಗದಲ್ಲಿ ಉಪಯೋಗಿಸುವಂತೆ ಕೆಲವು ಸೈನ್ಯವನ್ನು ಹಿಂದೆ ಕಾದು ಇಟ್ಟಿದ್ದಿಲ್ಲ. ಈ ತಪ್ಪು ದುರಾಣಿಶಹನಿಂದ ಘಟಿಸಲಿಲ್ಲಾದ್ದರಿಂದ ಇನ್ನು ಮುಂದೆ ಯುದ್ಧದಲ್ಲಿ ಆತನ ಕೈಯೇ ಮೇಲಾಗುವ ಪ್ರಸಂಗವು ಒದಗಿತು. ಒಳ್ಳೇ ಹೊತ್ತಿನಲ್ಲಿ ಹೋಳಕರನು ಭಾವುಸಾಹೇಬನಿಗೆ ಕೈ ತೋರಿಸಿದನು. ದಮಾಜಿಗಾಯಕವಾಡನು ಶತ್ರುಗಳ ಬೆನ್ನಟ್ಟುತ್ತ ನಡೆದುಬಿಟ್ಟನು. ಆಗ ಶತ್ರುವಿನ ಬಳಿಯಲ್ಲಿ ಕಾದಿ ದಣಿಯದೆಯಿದ್ದ ಉತ್ಸಾಹಶಾಲಿಯಾಗಿದ್ದ ಕಾದಿಟ್ಟು ದೊಡ್ಡ ಸೈನ್ಯವು ಯುದ್ಧಕ್ಕೆ ಸಿದ್ಧವಾಗಿತ್ತು, ಸುಜಾಉದ್ದೌಲನು ತಟಸ್ಥ ವೃತ್ತಿಯನ್ನು ಬಿಟ್ಟು ತನ್ನನ್ನು ಕೂಡಿಕೊಳ್ಳ ಲೊಲ್ಲನು. ಇದನ್ನೆಲ್ಲನೋಡಿ ಭಾವುಸಾಹೇಬನು ಜಯದ ಬಗ್ಗೆ ನಿರಾಶೆಪಡಹತ್ತಿದನು. ಆ ವೀರನು ಎಷ್ಟೋ ಯುದ್ಧಗಳಲ್ಲಿ ಜಯವನ್ನು ಸಂಪಾದಿಸಿದವನಾಗಿದ್ದನು. ಆತನಿಗೆ ಈ ಸಂಗ್ರಾಮದ ಲಕ್ಷಣವು ನೆಟ್ಟಗೆ ಕಾಣಲಿಲ್ಲ. ಎದುರಿಗೆ ಕಾಣುವ ದುರಾಣಿಯ ಕಾದಿಟ್ಟ ಸೈನ್ಯದಿಂದ ತನ್ನ ದಣಿದು ಹೋಗಿದ್ದ ಸೈನ್ಯದ ಸಂಹಾರವು ನಿಶ್ಚಯವಾಗಿ ಆಗುವದೆಂದು ಆತನು ತಿಳಿದನು. ಈಗಾದರೂ ಹೋಳಕರನು ದುರಾಣಿಯ ಕಾದಿಟ್ಟ ಸೈನ್ಯದ ಸಮಾಚಾರ ತಕ್ಕೊಳ್ಳಲು ಸಿದ್ಧನಾದರೆ, ತನಗೆ ಜಯವಾಗುವ ಸಂಭವವಿರುತ್ತದೆಂದು ತಿಳಿದು, ಆತನು ಒಬ್ಬ ರಾವುತನನ್ನು ಹೋಳಕರನ ಕಡೆಗೆ ಅಟ್ಟಿದನು. ಆ ರಾವುತನು ಕುದುರೆಯನ್ನು ಓಡಿಸುತ್ತ ಹೋಳಕರನ ಬಳಿಗೆ ಹೋಗಿ—''ನೀವು ನವಾಬ ಸುಜಾಉದ್ದೌಲನಮೇಲೆ ಏರಿಹೋಗದೆ, ದುರಾಣಿಯು ನಮ್ಮ ಮೇಲೆ ಅಟ್ಟಿರುವ ಆತನ ಕಾದಿಟ್ಟ ಸೈನ್ಯದ ಸಮಾಚಾರವನ್ನು ತಕ್ಕೊಂಡು ನಮ್ಮನ್ನು ರಕ್ಷಿಸಬೇಕು.'' ಎಂದು ಸೂಚಿಸಿದನು. ಹೋಳಕರನು ಈ ಕಾಲದಲ್ಲಿ ಭಾವುಸಾಹೇಬನ ಈ ಅಪ್ಪಣೆಯನ್ನು ಪಾಲಿಸಿದ್ದರೆ, ಪಾನಿಪನತದ (ಕುರುಕ್ಷೇತ್ರದ) ಯುದ್ಧದ ಸ್ವರೂಪವೇ ಬದಲಾಗುತ್ತಿತ್ತೆಂದು ಹೇಳಬಹುದು. ಬರಿಯ ಒಂದು ಯುದ್ಧದ ಸ್ವರೂಪವೇ ಏಕೆ, ಇಡಿಯ ಹಿಂದುಸ್ಥಾನದ ಇತಿಹಾಸದ; ಸ್ವರೂಪವೇ ಬೇರೆ ವಿಧವಾಗಿ ಬರೆಯಲ್ಪಡುತ್ತಿತ್ತು! ಆದರೆ ಪ್ರಿಯ ವಾಚಕರೇ, ಹೀಗಾಗಿದ್ದರೆ ಹಾಳಾಗುತ್ತಿತ್ತೆಂದು ಹೇಳುವದರಲ್ಲಿ ಏನು ಪ್ರಯೋಜನವಿದೆ?

ಈಶ್ವರೀತಂತ್ರದಿಂದ ಕಾಲಕಾಲಕ್ಕೆ ಒದಗುತ್ತಿದ್ದ ಸಂಗತಿಗಳು ನಮ್ಮ ಹಿತಕ್ಕಾಗಿಯೇ ಒದಗುತ್ತಿರುತ್ತವೆಂದು ತಿಳಿದು ನಾವು ಸಮಾಧಾನಪಡತಕ್ಕದ್ದು. ಹೋಳಕರನು ತನ್ನ ಅಪ್ಪಣೆಯನ್ನು ನಡಿಸುವನೋ ಇಲ್ಲವೋ ಎಂದು ಆತುರದಿಂದ ನೋಡುತ್ತಲಿದ್ದ ಭಾವೂಸಾಹೇಬನು ನಿರಾಶೆಪಡುವಂತೆ ಮಲ್ಹಾರರಾಯನು ತನ್ನ ಸೈನ್ಯದೊಡನೆ ರಣಾಂಗಣದಿಂದ ಹೊರಟು ಹೋಗಿಬಿಟ್ಟನು! ಇನ್ನು ಸುಜಾಉದ್ದೌಲನ ಸ್ವರೂಪವೇನಾಗುವದೆಂಬದನ್ನು ನೋಡುವದಕ್ಕಾಗಿ ಭಾವುವು ಅತ್ತಕಡೆಗೆ ಹೊರಳಿದನು; ಆದರೆ ಆ ಧೂರ್ತ ಸುಜಾನು ಹೋಳಕರನು ಹೊರಟು ಹೋಗುವದನ್ನು ನೋಡುತ್ತ ಸುಮ್ಮನೆ ನಿಂತುಬಿಟ್ಟಿದ್ದನು. ಅಷ್ಟರಲ್ಲಿ ಒಬ್ಬ ತರುಣ ಸರದಾರನು ಕುದುರೆಯನ್ನು ಓಡಿಸುತ್ತ ಭಾವುಸಾಹೇಬನ ಆನೆಯ ಬಳಿಗೆ ಬಂದು ವಿನಯದಿಂದ ಮುಜರೆಮಾಡಿ–''ಸರಕಾರ ಆ ಸ್ವಾರ್ಥಪರಾಯಣನಾದ ಸುಜಾಉದ್ದೌಲನ ನಂಬಿಗೆಯನ್ನು ತಾವು ಸರ್ವಥಾ ಹಿಡಿಯಬಾರದು. ಆತನು ಗೆದ್ದ ಎತ್ತಿನ ಬಾಲ ಹಿಡಿಯುವವನಿರುವನು. ಮಿತ್ರತ್ವದ ಕಡೆಗೆ ಸರ್ವಥಾ ಆತನ ಲಕ್ಷವಿಲ್ಲ. ಆತನ ಆಶೆಯನ್ನು ಬಿಟ್ಟು ತಾವು ಮಾಡತಕ್ಕದ್ದನ್ನು ಮಾಡಬೇಕು'' ಎಂದು ಹೇಳಿದನು ಹೀಗೆ ಹೇಳುವ ತರುಣ ಸರದಾರನು ನಮ್ಮ ವೇಷಧಾರಿ ಉಮೆಯಾಗಿದ್ದನು. ಮಹದಾಜಿಯು ಶ್ರೀಮಂತರಿಗೆ ಆಕೆಯ ಪರಿಚಯ ಮಾಡಿಕೊಡಲು, ಅವರು ಕೌತುಕದಿಂದ ಆಕೆಯನ್ನು ನೋಡಿ, ಕೂಡಲೆ ಹಲ್ಲುಕಡೆಯುತ್ತ ಸುಜಾಉದ್ದೌಲನು ನಿಂತಿರುವ ದಿಕ್ಕಿಗೆ ಹೊರಳಿದರು. ಇತ್ತ ಉಮೆಯು ಮಿಂಚಿನಂತೆ ಹೊಳೆದು ಕ್ಷಣದಲ್ಲಿ ಎತ್ತೋ ಅದೃಶ್ಯವಾಗಿ ಹೋದಳು!

## ರಣಯಜ್ಞದ ಪ್ರಥಮಾಹುತಿಯು

ಹೀಗೆ ತನ್ನ ದೊಡ್ಡ ಎರಡು ಆಧಾರಗಳು ತಪ್ಪಿದ್ದರಿಂದಲೂ, ದಮಾಜಿಗಾಯಕವಾಡನು ತಿರುಗಿ ರಣಭೂಮಿಗೆ ಬಾರದ್ದರಿಂದಲೂ ಭಾವುಸಾಹೇಬನು ನಿರಾಶೆಪಟ್ಟನು. ಇನ್ನು ತಮ್ಮ ಪರಿಣಾಮವಾಗದೆಂದು ತಿಳಿದು ಆ ರಣಧೀರನು ಅಸಹಾಯನಾಗಿಯೇ ಕಾದಿತೀರಬೇಕೆಂದು ತನ್ನ ಸರದಾರರನ್ನು ಉತ್ತೇಜನಗೊಳಿಸತೊಡಗಿದನು. ಇತ್ತ ದುರಾಣಿಯು ಒಂದು ಉನ್ನತವಾದ ಸ್ಥಳದಲ್ಲಿ ಗಾಸೆ ಹಾಸಿಕೊಂಡು ಕುಳಿತು ಸಮಾಧಾನದಿಂದ ಗುಡುಗುಡಿಯನ್ನು ಸೇದುತ್ತ ದುರ್ಬಿನಿ ಯೊಳಗಿಂದ ಯುದ್ಧ ವ್ಯಾಪಾರವನ್ನು ನೋಡುತ್ತಿದ್ದನು. ಮರಾಟರ ಶೌರ್ಯಕ್ಕೆ ಆತನು ಮೆಚ್ಚಿದನು. ಅದರಲ್ಲಿ ಇಬ್ರಾಹಿಮಖಾನಗಾರದಿಯ ಪರಾಕ್ರಮಕ್ಕಂತೂ ಆತನು ತಲೆದೂಗಿದನು. ದೊಡ್ಡ ಮನಸ್ಸಿನ ಗಣಗ್ರಾಹಿಗಳು ಪರರ ಗುಣಗಳನ್ನು ಯಾಕೆ ಮತ್ಸರಿಸುವರು? ಆದರೂ ಮರಾಟರು ಆವೇಶದಿಂದ ಕಾದಿ ದಣೆದಿರುವರೆಂತಲೂ, ಪ್ರಸಂಗದಲ್ಲಿ ಉತ್ಸಾಹದಿಂದ ಕಾದುವಂಥ ಸೈನ್ಯವನ್ನು ಬಾವುಸಾಹೇಬನು ಕಾದು ಇಟ್ಟಿಲ್ಲವೆಂತಲೂ ಆ ಧೂರ್ತನು

ತಿಳಕೊಂಡನು. ತನ್ನ ವಜೀರನ ಜನರು ಸೋತು ಓಡುತ್ತಿದ್ದರೂ, ಅದರಂತೆ ರೋಹಿಲರನ್ನು ಗಾಯಕವಾಡನು ಹಣಿದು ಹಣ್ಣು ಮಾಡುತ್ತಿದ್ದರೂ, ಹಾಗೆಯೇ, ಎಲ್ಲ ಕಡೆಯಲ್ಲಿಯೂ ತನ್ನವರು ಸಮರಭೂಮಿಯಿಂದ ಹಿಂದಕ್ಕೆ ಜಾರಿದಂತೆ ತೋರುತ್ತಿದ್ದರೂ ಆ ಧೀರನ ಶಾಂತ ವೃತ್ತಿಯು ಚಲಿಸಲಿಲ್ಲ. ಆತನು ಸಮಾಧಾನದಿಂದ ದುರ್ಬಿನಿಯಲ್ಲಿ ಯುದ್ಧ ವ್ಯಾಪಾರವನ್ನು ನೋಡುತ್ತಲಿದ್ದನು. ಆಗ ಆತನ ಕಾದಿಟ್ಟ ಸೈನ್ಯದ ಮೇಲಿನ ಸರದಾರರು ಮುಂದುವರಿದು ಬಂದು ಶಹಾನನ್ನು ಕುರಿತು–''ಖಾವಿಂದ, ವಜೀರಸಾಹೇಬರ ಸಹಾಯಕ್ಕಾಗಿ ನಮಗೆ ಅಪ್ಪಣೆ ಕೊಡಬೇಕು'' ಎಂದು ಕೇಳಿಕೊಳ್ಳಲು,ಶಹಾನು ಸ್ವಲ್ಪ ಸಿಟ್ಟಿನಿಂದ–''ನೀವು ನನ್ನನ್ನು ಎಚ್ಚರ ಗೊಳಿಸಲವಶ್ಯವಿಲ್ಲ. ನಾವೆಲ್ಲ ನೋಡುತ್ತಿರುವೆನು. ನಾನು ಹೇಳಿದಂತೆ ನೀವು ಮಾಡಿರಿ. ನೀವು ನಿಮ್ಮ ಸ್ಥಳದಲ್ಲಿ ಸಿದ್ಧವಾಗಿರತಕ್ಕದ್ದು. ಅಪ್ಪಣೆಯಾದ ಕೂಡಲೆ ಸಮರಭೂಮಿಗೆ ಸಾಗಿರೆಂದ ರಾಯಿತು.'' ಎಂದು ಗದ್ದರಿಸಿ, ಅವರನ್ನು ಹಿಂದಕ್ಕಟ್ಟಿದನು. ಇದರಿಂದ ಆ ಸರದಾರರು ನೊಂದುಕೊಂಡು ಸಿಟ್ಟುಬೆಂಕಿಯಾದರು; ಆದರೂ ಶಹಾನ ಅಪ್ಪಣೆಯನ್ನು ಮೀರಲಿಕ್ಕೆ ಅವರಿಗೆ ಬಾರದಾಗಿತ್ತು. ಹೀಗಿರುವಾಗ ಒಬ್ಬ ಸವಾರನು ಕುದುರೆಯನ್ನು ಓಡಿಸುತ್ತ ಬಂದು ಬಾದಶಹನಿಗೆ ಕುರ್ನಿಸಾತಮಾಡಿ ''ಖುದಾವಂತ ಪರವರದಿಗಾರ, ವಜೀರಸಾಹೇಬರು ಗಾಯಹೊಂದಿರುವರು. ಅವರ ಶೂರಪುತ್ರನಾದ ಅತಾಯಿಖಾನು ಯುದ್ಧದಲ್ಲಿ ಮರಣ ಹೊಂದಿದನು! ರಾಜಪುತ್ರನಾದ ತೇಜುರಶಹಾ, ನಜೀಮಶಹಾ ಇವರು ರಣಭೂಮಿಯಲ್ಲಿ ದೇಹವಿಟ್ಟರು,'' ಎಂದು ಹೇಳಿದನು. ಈ ದುಷ್ಟವಾರ್ತೆಯನ್ನು ಕೇಳಿ ಶಹಾನ ಅಂತಃಕರಣಕ್ಕೆ ಬರೆಕೊಟ್ಟಂತಾಯಿತು; ಆದರೂ ಆತನು ಆ ದುಃಖವನ್ನೆಲ್ಲ ನುಂಗಿಕೊಂಡು ಸಮಾಧಾನ ದಿಂದ–''ಹಾಗಾದರೆ ಅವರು ಈ ಲೋಕವನ್ನು ಬಿಟ್ಟು ಅಲ್ಲಾನ ಕಡೆಗೆ ಹೋದರು! ಬಹಳ ಒಳ್ಳೆಯದಾಯಿತು! ಅವರು ತಮ್ಮ ತಾಯಿಯ ಉದರಗಳನ್ನು ಧನ್ಯವಾಗ ಮಾಡಿದರು! ಅತ್ತ ಪರಲೋಕದಲ್ಲಿ ಅವರು ಬಹುಮಾನವನ್ನು ಪಡೆಯುವರು! ಜಗತ್ತು ಅವರ ತಾಯಂದಿರನ್ನು ಧನ್ಯರೆಂದು ಶ್ಲಾಘಿಸುವದು! ಅವರು ವೀರಜನನಿಯರೆನಿಸುವರು! ಅಂದಬಳಿಕ ಇದಕ್ಕೂ ಹೆಚ್ಚಿನದೇನು ಬೇಕು?'' ಎಂದು ನುಡಿದು, ಒಂದು ಝುರಿಕೆ ಗುಡಗುಡಿ ಸೇದಿ, ಚಟ್ಟನೆ ಎದ್ದು ದುರ್ಬಿನಿಯಿಂದ ಸಮರಭೂಮಿಯನ್ನು ನಾಲ್ಕೂ ಕಡೆಗೆ ನೋಡಹತ್ತಿದನು. ಯುದ್ಧವು ಬಹುಭರದಿಂದ ಸಾಗಿತ್ತು. ಮರಾಟರು ಮುಂದಕ್ಕೆ ಸಾಗಿಬಂದು ಸಿಂಹನಾದ ಮಾಡತೊಡಗಿದ್ದರು. ಉಭಯ ದಳಗಳ ದುಂದುಭಿಗಳ ಕರ್ಕಶಧ್ವನಿಗಳು ಕಿವಿಗಳನ್ನು ಗಡಚಿಕ್ಕುತ್ತಿದ್ದವು. ಸಿಪಾಯಿ ಗಳ ಘನಘೋರ ಗರ್ಜನೆ, ರಣವಾದ್ಯಗಳ ಗಂಭೀರಧ್ವನಿ, ಆನೆಗಳ ಚೀತ್ಕಾರ, ಕುದುರೆಗಳ ಹೇಷಾರವ ಇವುಗಳಿಂದ ರಣಭೂಮಿಯು ದಿಮಿಗುಟ್ಟಿ ಹೋಗಿತ್ತು!

ಹೀಗೆ ಘನಘೋರ ಸಂಗ್ರಾಮವು ನಡೆದಿರುವಾಗ ನಜೀಬಉದ್ದೌಲನ ಕಡೆಯಿಂದ ಒಬ್ಬ ಸವಾರನು ಕುದುರೆ ಓಡಿಸುತ್ತ ಶಹನ ಬಳಿಗೆ ಬಂದು–''ಇನಶಾ–ಅಲ್ಲಾ ನನ್ನ ಕಡೆಯ ಯುದ್ಧದ ಚಿಂತೆಯನ್ನು ಬಿಡಬೇಕು. ಅಲ್ಲಾನ ಕೃಪೆಯಿಂದ ನಾನು ಶತ್ರುಗಳನ್ನು ಹೊಡೆ ದೋಡಿಸಿದೆನು. ಮಲ್ಹಾರರಾವ ಹೋಳಕರನು ಕಾದುವದನ್ನು ಬಿಟ್ಟು ಹೊರಟು ಹೋದನು.''

ಎಂದು ಹೇಳಿದನು. ಅದರಂತೆ ಹೋಳಕರನ ಪ್ರಚಂಡಸೈನ್ಯವು ರಣಭೂಮಿಯಿಂದ ಜಾರಿ ಹೋಗುತ್ತಿರುವಾಗ ಆತನ ಭಗವಾನಿಶಾನೆಯು ಬಾದಶಹನಿಗೆ ಸ್ಪಷ್ಟವಾಗಿ ಕಾಣಿಸಹತ್ತಿತು. ತನಗೆ ಬೇಕಾದದ್ದೇ ಕಣ್ಣಿಗೆ ಬಿದ್ದದ್ದನ್ನು ನೋಡಿ ಬಾದಶಹನು ಸಂತೋಷಪಟ್ಟನು. ಕೂಡಲೆ ಆತನು ಕುದುರೆಯನ್ನು ಸಜ್ಜುಮಾಡಿ ತರಿಸಿಕೊಂಡು ಶಹಾಪಸಂದಖಾನನಿಗೆ–''ನೀವು ಕೂಡಲೆ ಮುಂದಕ್ಕೆ ಸಾಗಿಹೋಗಿ ವಜೀರನಿಗೆ ಸಹಾಯ ಮಾಡಿರಿ. ತೋಫ್‌ರೂಬೇಗ ಉನ್‌ಬಕ್ಕನು ನನ್ನ ಸ್ವಂತದ ಸೈನ್ಯವನ್ನು ಸಂಗಡ ಕರಕೊಂಡು ಸಮರಭೂಮಿಗೆ ಸಾಗಿಹೋಗಲಿ. ಇದ್ದಬಿದ್ದ ಛಾವಣಿಯಲ್ಲಿಯ ಸೈನ್ಯವನ್ನೆಲ್ಲ ಒಟ್ಟುಗೂಡಿಸಿ ಶಹಾವಲ್ಲಿಖಾನರ ಸಹಾಯಕ್ಕಾಗಿ ಕಳಿಸಿರಿ'' ಎಂದು ಹೇಳಿ, ಮಹಮ್ಮದ ಅಜೀಮನನ್ನು ಸುಜಾಉದ್ದೌಲನ ಕಡೆಗೆ ಅಟ್ಟಿ ಸುಜಾನಿಗೆ –''ನೀವು ಈಗಲೆ ಕಾಫರರಾದ ಮರಾಟರ ಸೈನ್ಯದ ಹಿಮ್ಮಗ್ಗಲಿನ ಮೇಲೆ ಭರದಿಂದ ಬೀಳ ಬೇಕು. ಹಾಗೆ ಮಾಡದಿದ್ದರೆ ನಿಮ್ಮನ್ನು ನನ್ನ ಶತ್ರುವೆಂದು ತಿಳಿಯುವೆನು,'' ಎಂದು ಹೇಳಿ ಕಳಿಸಿದನು. ಬಳಿಕ ಸ್ವತಃ ತಾನು ಕುದುರೆಯನ್ನೇರಿ ಸೈನ್ಯವನ್ನು ಪ್ರೋತ್ಸಾಹಿಸುವದಕ್ಕಾಗಿ ಕೃತಾಂತನಂತೆ ಮುಂದಕ್ಕೆ ಸಾಗಿದನು. ಆ ಕಾಲದಲ್ಲಿ ಆತನ ಕಣ್ಣುಗಳು ಕೆಂಪಡರಿದ್ದವು; ತುಟಿ ಗಳು ನಡಗುತ್ತಿದ್ದವು; ಹುಬ್ಬುಗಳು ವಕ್ರವಾಗಿದ್ದವು; ಆತನ ಮುಖಮುದ್ರೆಯು ಬಹು ಉಗ್ರ ವಾಗಿ ತೋರುತ್ತಿತ್ತು. ಹೀಗೆ ವೀರಾಗ್ರಣಿಯಾದ ಆ ದುರಾಣಿಯು ತನ್ನ ಶೂರ ಸೈನಿಕರೊಡನೆ ಸಂತಾಪದಿಂದ ಮರಾಟರನ್ನು ಮುತ್ತಿ ಹಣಿಯಹತ್ತಲು, ಪ್ರಳಯಕಾಲದ ಕೋಲಾಹಲದ ಕ್ರೂರಕೃತಿಯು ರಣಭೂಮಿಯಲ್ಲಿ ಪ್ರಕಟವಾಯಿತು! ಆಗಿನ ಉಭಯದಳದ ಕೊಲೆಯ ಬಗೆ ಯನ್ನೇನು ವರ್ಣಿಸಬೇಕು? ಆಗಲಾದರೂ ಮರಾಟಾವೀರರು ಹಿಂದಕ್ಕೆ ಸರಿಯಲಿಲ್ಲ. ಮಧ್ಯಾಹ್ನದ ಆರುತಾಸು ಮೀರಿಹೋಗುತ್ತಿರಲು, ಸೂರ್ಯನ ಪ್ರಚಂಡ ತಾಪವು ಸೈನಿಕರಿಗೆ ದುಸ್ಸಹವಾಯಿತು. ಧೂಲಿಯಿಂದ ಸಿಪಾಯಿಗಳ ಸರ್ವಾಂಗಗಳು ಮುಸುಕಿದವು. ನೀರಡಿಕೆ ಯಿಂದ ಅವರ ಗಂಟಲು ಹರಿಯಹತ್ತಿದವು. ಅವರ ಗಾಯಗಳ ವ್ಯಥೆಯು ದುಃಸಹವಾಯಿತು. ಕಾದಿಕಾದಿ ಅವರ ಕೈಗಳು ಸೋತವು; ನಡೆದು–ನಡೆದು ಅವರ ಕಾಲುಗಳು ಮುಂದಕ್ಕೆ ಹೆಜ್ಜೆಯಿಡದಾದವು; ಗರ್ಜಿಸಿ–ಗರ್ಜಿಸಿ ಅವರ ಗಂಟಲು ಹರಿದುಹೋದವು. ಬಾಯಿಗಳಿಗೆ ಬುರುಗುಬಂದವು. ಅವರು ಹಸಿವೆಯಿಂದ ಹಣ್ಣಾದರು. ಸೂರ್ಯನ ಪ್ರಖರತಾಪದಿಂದ ಮೈಗೆ ಬೆಂಕಿ ಹತ್ತಿದಹಾಗಾಯಿತು. ಎಲ್ಲರು ನೀರು ನೀರು ಎಂದು ಒರಲಹತ್ತಿದರು. ನಾಲಿಗೆ ಅಂಟುಗವಿದವು. ನೀರಡಿಕೆಯನ್ನು ತಡೆಯಲಾರದೆ ವೀರರು ಶಸ್ತ್ರಗಳಿಗೆ ಹತ್ತಿದ ರಕ್ತವನ್ನು ನೆಕ್ಕ ಹತ್ತಿದರು. ಸರ್ವಾಂಗಗಳು ಬೆವತುಜೋರಿಕ್ಕಿದ್ದವು. ಬಾಯಲ್ಲಿ ಧೂಳವು ಮಸುಕಿ ಶ್ವಾಸೋಚ್ಛ್ವಾಸದ ಕ್ರಿಯೆಗೆ ಪ್ರತಿಬಂಧವಾಗತೊಡಗಿತು. ಗಂಧಕದ ಹೊಗೆಯಿಂದ ಉಸರು ಗಟ್ಟುತ್ತಿರಲು, ಪ್ರಾಣ ವಾಯುವಿನ ನಿರೋಧವಾಗಿ ಬಾಯಿಂದ ಮಾತುಗಳು ಹೊರಡದಾದವು. ಇಂಥ ಘೋರ ಸಂಗ್ರಾಮವೆಸಗಿರುವಾಗ ಮರಾಟರಿಗೆ ಹಲವು ಸಂಗತಿಗಳು ಪ್ರತಿಕೂಲವಾಗಿದ್ದರೂ, ಯುದ್ಧ ದಲ್ಲಿ ಇನ್ನೂ ಅವರ ಕೈಯೇ ಮೇಲಾಗಿತ್ತು. ಅಫಗಾಣರಿಗೆ ಜಯದ ಆಶೆಯು ತೋರ ದಾಯಿತು; ಆದರೂ ಅವರ ಧರ್ಮಾಭಿಮಾನವು ಉಜ್ವಲವಾದದ್ದರಿಂದ, ಅವರು ಯಾವ ಸಂಕಟಕ್ಕೂ ಹಿಂಜರಿಯದೆ ಕಾದುತ್ತಲಿದ್ದರು!

ಶಹವಲ್ಲೀಖಾನನಿಗೆ ಹೊಸ ಸೈನ್ಯದ ಸಹಾಯವು ಒದಗಿದ್ದರಿಂದ ಅವನು ಉತ್ಸಾಹ ದಿಂದ ಕಾದತೊಡಗಿದ್ದನು. ತನ್ನ ವೀರಪುತ್ರನ ಮರಣದಿಂದ ಆತನ ಸಂತಾಪವು ಅನಿವಾರ್ಯ ದಾಗಿತ್ತು. ದುರಾಣಿಯ ದಣಿಯದೆಯಿದ್ದ ಸೈನ್ಯದೊಡನೆ ಭಾವುಸಾಹೇಬನೂ, ವಿಶ್ವಾಸ ರಾಯನೂ ಪರಾಕ್ರಮದಿಂದ ಕಾದುತ್ತಿರಲು, ತಮ್ಮ ಹಿಂದಿನಿಂದ ಸುಜಾಉದ್ದೌಲನ ಪ್ರಚಂಡ ಸೈನ್ಯವು ಅಕಸ್ಮಾತ್ತಾಗಿ ಸಾಗಿಬಂದು ತಮ್ಮ ಸೈನ್ಯವ ಸಂಹರಿಸತೊಡಗಿದ್ದು ಭಾವುಸಾಹೇಬನ ಕಣ್ಣಿಗೆ ಬಿದ್ದಿತು. ಕೂಡಲೆ ಆ ವೀರನ ಕೈ-ಕಾಲು ತಣ್ಣಗಾದವು. ಅತ್ತ ಹೋಳಕರನು ತನ್ನ ಸ್ಥಳದಲ್ಲಿ ಕಣ್ಣಿಗೆ ಬೀಳಲಿಲ್ಲ; ಇತ್ತ ಹಿಂದೆ ಸುಜಾಉದ್ದೌಲನ ಸೈನ್ಯ, ಮುಂದೆ ದುರಾಣಿಯ ಕಾದಿಟ್ಟಸೈನ್ಯ, ಎಡಬಲಗಳಲ್ಲಿ ರೋಹಿಲರ ಹಾಗು ಅಫಗಾಣರ ಸೈನ್ಯ. ಹೀಗೆ ನಾಲ್ಕೂ ಕಡೆ ಯಿಂದಲೂ ತಾವು ಮುತ್ತಲ್ಪಟ್ಟಿದ್ದನ್ನು ನೋಡಿ ಆ ಬ್ರಾಹ್ಮಣವೀರನ ಉತ್ಸಾಹವು ಕುಗ್ಗಿ ಹೋಯಿತು. ತನ್ನ ಮುಖ್ಯ ಸೈನ್ಯದ ಸಂಬಂಧ ತಪ್ಪಿ ತಾವು ಕೆಲವು ಸೈನ್ಯದೊಡನೆ ಶತ್ರುಗಳ ಸೈನ್ಯದಿಂದ ಸಂಪೂರ್ಣವಾಗಿ ಮುತ್ತಲ್ಪಟ್ಟಿದ್ದರಿಂದ ಇನ್ನು ತಮ್ಮ ನಾಶಕಾಲವು ಸಮೀಪಿಸಿತೆಂದು ಆತನು ತಿಳಿಕೊಂಡನು. ಕೂಡಲೆ ಆತನು ಆನಂದರಾವ ನಿಂಬಾಳಕರನನ್ನು ಕರೆದು– ''ನಿಂಬಾಳಕರ, ನೀವು ಈಗಲೇ ಹೋಳಕರನ ಕಡೆಗೆ ಹೋಗಿ ಇಷ್ಟೇ ಹೇಳತಕ್ಕದ್ದು; ಕಾಕಾಸಾಹೇಬ, ನಾನು ಬೇಡಿಕೊಂಡದ್ದು ನಿಮ್ಮ ಸ್ಮರಣ ದಲ್ಲಿರುವದಷ್ಟೆ? ಹೀಗಿದ್ದು ನೀವು ರಣಾಂಗಣವನ್ನು ಬಿಟ್ಟು ಜಾರಿಹೋದಿರಿ! ಆದರೂ ಚಿಂತೆಯಿಲ್ಲ! ಇನ್ನು ನಮ್ಮ ಹೆಂಡಿರು- ಮಕ್ಕಳನ್ನಾದರೂ ಸಂಗಡ ಕರಕೊಂಡು ಹೋಗಿರಿ; ಮತ್ತು ಅತ್ತಿಗೆಗೂ, ಅಣ್ಣನಿಗೂ ನೀವು ಕೈ ಜೋಡಿಸಿ ತಿಳಿಸತಕ್ಕದ್ದೇನಂದರೆ-ನಿಮ್ಮ ವಿಶ್ವಾಸವಿರುವ ಸದಾಶಿವರಾಯರು ಲಕ್ಷದಂಡಿನೊಡನೆ ಇಂದ್ರಲೋಕಕ್ಕೆ ಹೊರಟುಹೋದರು! ಅವರು ಅಲ್ಲಿ ಸುರಕ್ಷಿತವಾಗಿರುವದರಿಂದ ನೀವು ಚಿಂತೆಮಾಡಬಾರದು. ನಿಂಬಾಳಕರ, ನೀವು ಹೋಳಕರನಿಗೆ ಕಟ್ಟಕಡೆಗೆ ಹೀಗೆ ಹೇಳಿಬಿಡಿರಿ- ನಮ್ಮ ಕುಟುಂಬದವರನ್ನು ಕರಕೊಂಡು ಹೋಗುವದಾಗದಿದ್ದರೆ ಅವರ ಶಿರಚ್ಛೇದ ಮಾಡಿದರೂ ಚಿಂತೆಯಿಲ್ಲ, ಅವರು ಶತ್ರುಗಳ ಕೈಸೇರದಿದ್ದರಾಯಿತು; ಅಷ್ಟೇ ನನಗೆ ಸಮಾಧಾನವು!

ಈ ಮೇರೆಗೆ ಭಾವುಸಾಹೇಬನು ಹೋಳಕರನಿಗೆ ಹೇಳಿಕಳಿಸಿದ ಬಳಿಕ ತನ್ನ ಬಳಿ ಯಲ್ಲಿ ನಿಂತಿದ್ದ ಜನಕೋಜಿಸಿಂದೆಯನ್ನು ಕುರಿತು-''ಸಿಂದೇ, ನೀವೂ ಹೋಗುವಹಾಗಿದ್ದರೆ ಹೋಗಿಬಿಡಿರಿ!'' ಎಂದು ಅನ್ನಲು, ಜನಕೋಜಿಯು ಸ್ಪಷ್ಟವಾಗಿ-''ಸರಕಾರ, ನನ್ನಿಂದ ಆ ಮಾತು ಸರ್ವಥಾ ಆಗಲಾರದು, ಖಾವಂದರವರ ಜೋಡುಗಳಿದ್ದಲ್ಲಿ ನನ್ನ ಶಿರಸ್ಸು ಬಿದ್ದೀತು. ಇದರಲ್ಲಿ ಎಳ್ಳಷ್ಟು ಅಂತರವಾಗಲಿಕ್ಕಿಲ್ಲ'' ಎಂದು ಉತ್ತರಕೊಟ್ಟನು! ಬಳಿಕ ಭಾವುಸಾಹೇಬನು ತನ್ನ ಮಾವುತನಿಗೆ-ನನ್ನ ಆನೆಯನ್ನು ವಿಶ್ವಾಸರಾಯನ ಕಡೆಗೆ ಸಾಗಿಸಿಕೊಂಡು ಹೋಗೆಂದು ಆಜ್ಞಾಪಿಸಲು, ಕೂಡಲೆ ಮಾವುತರು ''ಧಜಿಧಜಿ'' ಎಂದು ಅಂಕುಶದಿಂದ ಇರಿದಕೂಡಲೆ ಆ ಕ್ರೂರಪಶುವು ಜನರನ್ನು ತುಳಿಯುತ್ತ ವಿಶ್ವಾಸರಾಯನ ಬಳಿಗೆ ಹೋಯಿತು. ಆ ಬಾಲ ವೀರನು ಪ್ರಾತಃಕಾಲದಿಂದ ಆರು ತಾಸಿನವರೆಗೆ ಒಂದೇಸವನೆ ಶತ್ರುಗಳ ಮೇಲೆ ಶರವೃಷ್ಟಿ ಗರೆಯುತ್ತ ತುಬಾಕಿಗಳ ಗುಂಡುಗಳನ್ನು ಸುರಿಸುತ್ತ ವಿಶ್ರಾಂತಿಯಿಲ್ಲದೆ ಕಾದುತ್ತಿದ್ದನು. ಭಾವು

ಸಾಹೇಬನ ದನಿಯು ಕಿವಿಗೆ ಬಿದ್ದಕೂಡಲೆ ಆತನು ಹಿಂದಿರುಗಿ ನೋಡಿ ನಗುತ್ತ–''ಕಾಕಾ ಸಾಹೇಬ, ಇನ್ನು ನಾವು ಪಂಜರದೊಳಗಿನ ಹಕ್ಕಿಯಂತೆ ಸಿಕ್ಕು ಬೀಳುವಲ್ಲಿ ಹುರುಳಿಲ್ಲ, ನಾವಾಗಿ ವೈರಿಗಳ ಕೈಯಲ್ಲಿ ಸಿಗಬೇಕಾದೀತು. ರಣದೇವಿಗೆ ನಮ್ಮ ಶಿರಕಮಲಗಳನ್ನು ಅರ್ಪಿಸುವ ಸಮಯವು ಸಮೀಪಿಸುತ್ತಲಿದೆ. ಇಂದು ನಾನಾಸಾಹೇಬರ ಒಬ್ಬ ಪ್ರಿಯ ಬಂಧುವೂ, ಒಬ್ಬಮಗನೂ ಇಲ್ಲದಂತಾದರೆಂದು ತಿಳಿಯತಕ್ಕದ್ದು. ಹ್ಯಾಗಿದ್ದರೂ ಮರಣವು ತಪ್ಪುವಹಾಗಿಲ್ಲ. ಅಂದಬಳಿಕ ಅಂಬಾರಿಯಿಂದ ಕೆಳಗಿಳಿದು ಕುದುರೆಗಳನ್ನೇರಿ ಕೈಯಲ್ಲಿ ಖಡ್ಗ ಗಳನ್ನು ಧರಿಸಿ ಕ್ಷಾತ್ರಧರ್ಮೋಚಿತ ಶೌರ್ಯಕರ್ಮದಿಂದ ಧಾರಾತೀರ್ಥದಲ್ಲಿದೇಹವಿಡುವದು ಯೋಗ್ಯವಲ್ಲವೆ? ಎಂದು ನುಡಿಯಲು, ಭಾವುಸಾಹೇಬನು ಅದಕ್ಕೆ ಒಪ್ಪಿಕೊಂಡನು. ಆನೆಗಳ ಹಿಂದೆ ಶ್ರೀಮಂತರ ಸಲುವಾಗಿ ಆರಿಸಿದ ೩೦–೩೫ ಹೆಣ್ಣು ಗಂಡು ಕುದುರೆಗಳು ಜೀನುಹಾಕಿ ಸಿದ್ಧವಾಗಿ ಸಾಗಿಬರುತ್ತಲಿದ್ದವು. ಅವುಗಳಲ್ಲಿ ಕೆಲವು ಅರಬಸ್ಥಾನದವು, ಕೆಲವು ಕಾಠೇವಾಡದವು, ಕೆಲವು ದಕ್ಷಿಣದವು ಇದ್ದವು. ಹಯಪಾನ, ಪೀಲಬಾಲಾ ಎಂಬ ಎರಡು ಕುದುರೆಗಳನ್ನು ಖಾಸವಾಗೆಯ ಜಮಾದಾರನು ಶ್ರೀಮಂತರ ಮುಂದೆ ನಿಲ್ಲಿಸಿದನು. ಹಯಪಾನದ ಮೇಲೆ ಭಾವುಸಾಹೇಬನ ಪ್ರೇಮ ಬಹಳ. ಪೀಲಬಾಲದ ಮೇಲೆ ವಿಶ್ವಾಸರಾಯನ ಪ್ರೇಮ ಬಹಳ. ಜಮಾದಾರನು ಕುದುರೆಗಳನ್ನು ತಂದು ನಿಲ್ಲಿಸಿದಕೂಡಲೆ, ಮಾವುತರು ಆನೆಗಳನ್ನು ಕುಳ್ಳಿರಿ ಸಿದರು. ಬಳಿಕ ಆ ವೀರರಿಬ್ಬರು ನಿಚ್ಚಣಿಕೆಯಿಂದ ಕೆಳಗಿಳಿದು ಒಬ್ಬರನ್ನೊಬ್ಬರು ಬಿಗಿ ಯಾಗಿ ಅಪ್ಪಿಕೊಂಡರು. ಇದು ತಮ್ಮ ಕಡೆಯ ದರ್ಶನವೆಂದು ಅವರು ತಿಳಿದಿದ್ದರು. ಆಗ ಭಾವುಸಾಹೇಬನ ನೇತ್ರಗಳು ಅಶ್ರುಪೂರ್ಣವಾಗಲು, ಆತನು ವಿಶ್ವಾಸರಾಯನನ್ನು ಕುರಿತು ವಾತ್ಸಲ್ಯದಿಂದ—''ತಮ್ಮಾ ವಿಶ್ವಾಸರಾಯಾ, ನೀನು ನನ್ನ ಹಯಪಾನವನ್ನು ಹತ್ತಿಕೋ. ಅದು ಬಹು ವಿಶ್ವಾಸದ ಪ್ರಾಣಿಯು. ತ್ವರೆಮಾಡಿದರೆ ಅದರ ಸಹಾಯದಿಂದ ನೀನು ಸಮರಭೂಮಿ ಯಿಂದ ಇನ್ನಾದರೂ ಪಾರಾಗಿಹೋಗುವ ಸಂಭವವಿರುತ್ತದೆ. ಹೋಗು, ಪ್ರಾಣರಕ್ಷಣ ಮಾಡಿಕೋ. ಹಾದಿಯಲ್ಲಿ ಕಾಕಾಸಾಹೇಬರು ನಿನಗೆ ಭೆಟ್ಟಿಯಾಗಬಹುದು. ನನ್ನಮೇಲೆ ಅವರ ಸಿಟ್ಟು ಎಷ್ಟು ಇದ್ದರೂ, ನಿನ್ನನ್ನು ಅವರು ನಿಶ್ಚಯವಾಗಿ ರಕ್ಷಿಸುವರು. ನಜೀಬನು ಅವರ ಮಿತ್ರ ನಿದ್ದದ್ದರಿಂದ ಅವರಿಗೆ ಶತ್ರುಗಳ ಭಯವಿಲ್ಲ. ಯಾರ ಮಾತನ್ನೂ ಕೇಳದೆ ಇಂದು ನಾನು ಸಂಗ್ರಾಮವನ್ನು ಹೂಡಿರುವದರಿಂದ, ಅದರ ಫಲವನ್ನು ನಾನು ಭೋಗಿಸುವದು ಯೋಗ್ಯವು.

ಕಕ್ಕನ ಈ ಮಾತುಗಳನ್ನು ಕೇಳಿ ವಿಶ್ವಾಸರಾಯನ ಕುತ್ತಿಗೆ ಶಿರಗಳು ಬಿಗಿದವು. ಆತನು ವಿನಯದಿಂದ—''ಕಾಕಾಸಾಹೇಬ, ತಾವು ಹೀಗೆ ನುಡಿಯುವದು ವಿಶ್ವಾಸನಿಗೆ ಒಂದು ಬಗೆಯ ಕುಂದನ್ನುಂಟುಮಾಡಿದಂತೆಯೇ ಸರಿ. ಪೆಟ್ಟುತಿಂದ ನಾಯಿಯು ತೊಡೆಗಳಲ್ಲಿ ಬಾಲಸೇರಿಸಿ ಕೊಂಡು ಓಡುವಂತೆ, ವೈರಿಗಳ ಪೆಟ್ಟಿನಿಂದ ಸಮರಭೂಮಿಯಿಂದ ಓಡಿಹೋಗುವ ವಿಶ್ವಾಸನು ನಿಮ್ಮ ಮಗನೆನಿಸಬಹುದೋ? ಹೀಗೆ ನಾನು ಹೇಡಿಯಂತೆ ಓಡಿಹೋದರೆ, ಇತಿಹಾಸಕಾರರೂ ಶಾಹೀರರೂ, ಕವಿಗಳೂ ನನ್ನನ್ನು ಏನೆಂದು ವರ್ಣಿಸಬಹುದು? ನನ್ನ ನಿಂದ್ಯಕರ್ಮವನ್ನು ಉಲ್ಲೇಖಿಸದೆ ಇರಬಹುದೆ? ಕಾಕಾಸಾಹೇಬ, ದೇಹಪಾತವಾಗಲೊಲ್ಲದೇಕೆ, ಇಂಥ ನಿಂದ್ಯ

ಕರ್ಮವನ್ನು ಮಾತ್ರ ನಾನು ಸರ್ವಥಾ ಮಾಡಲಿಕ್ಕಿಲ್ಲ. ಎಂಥ ಕಠಿಣಪ್ರಸಂಗ ಒದಗಿದರೂ ನಾನು ನಿಮ್ಮನ್ನು ಅಗಲಿ ಹೋಗಲಾರೆನು. ಎಲ್ಲಿ ನೀವೋ, ಅಲ್ಲಿ ನಾನು. ಈ ಸಂಕಲ್ಪದಲ್ಲಿ ಎಂದೂ ಅಂತರವಾಗಲಿಕ್ಕಿಲ್ಲ, ಎಂದು ನುಡಿಯಲು, ಅವರಿಬ್ಬರು ಪುನಃ ಒಬ್ಬರನ್ನೊಬ್ಬರು ಆಲಿಂಗಿಸಿ ತಮ್ಮ ತಮ್ಮ ಕುದುರೆಗಳನ್ನು ಹತ್ತಿದರು. ಅವರ ತೀಕ್ಷ್ಣ ಖಡ್ಗಗಳು ಕೈಯಲ್ಲಿ ಹೊಳೆಯಹತ್ತಿದವು. ಯಾವ ದೇಶದಲ್ಲಿ ಯಾವ ಭಟ್ಟಕುಲದಲ್ಲಿ ಆ ವೀರಶ್ರೇಷ್ಠರು ಜನ್ಮವೆತ್ತಿದ್ದರೋ, ಆ ಪರಮ ಪ್ರಿಯವಾದ ಕ್ಷಾತ್ರದೇಶದ, ಹಾಗೂ ಆ ಪವಿತ್ರಕುಲದ ಹೆಸರು ಮೆರಿಸುವದಕ್ಕಾಗಿ ತಮ್ಮ ಪಂಚಪ್ರಾಣಗಳನ್ನು ಅರ್ಪಿಸಲಿಕ್ಕೆ ಆ ನರಪುಂಗವರು ಸಿದ್ಧರಾದರು! ಸುತ್ತುಮುತ್ತು ಜನರ ದಟ್ಟಣೆಯಾದದ್ದರಿಂದ ಅವರ ಕುದುರೆಗಳು ಮುಂದಕ್ಕೆ ಸಾಗಲಿಕ್ಕೆ ಪ್ರತಿಬಂಧವಾಗತೊಡಗಿತು. ಶತ್ರುಗಳ ಮುತ್ತಿಗೆಯನ್ನು ಭೇದಿಸಿ ಹೋಗುವದು ಅಸಾಧ್ಯವಾಯಿತು. ಪಕ್ಷಿಗಳಾಗಿದ್ದರೆ ಅವರು ಆಕಾಶದಲ್ಲಿ ಉಡ್ಡಾಣ ಮಾಡಿ ಹೋಗಬಹುದಾಗಿತ್ತು. ಭೂಮಿಯು ಬಿರಿದಿದ್ದರೆ ಅವರು ಆದಿಶೇಷನ ತಲೆಯಮೇಲೆ ಹೋಗಿ ನಿಲ್ಲಬಹುದಾಗಿತ್ತು. ಒಟ್ಟಿಗೆ, ಯಾವ ದಿಕ್ಕುಗಳೂ ಅವರ ಸಲುವಾಗಿ ತೆರದಿದ್ದಿಲ್ಲ. ಎಸರು ಬಂದ ನೀರಲ್ಲಿ ಅಕ್ಕಿಯು ಕುದಿಯುವಂತೆ, ಮರಾಟರು ಶತ್ರುಗಳ ಮಧ್ಯದಲ್ಲಿ ಸಿಕ್ಕು ಬೇಯಹತ್ತಿದರು. ಮುಸಿಯಲ್ಲಿಯ ಬಂಗಾರವು ಕರಗಿ ಒಟ್ಟಾಗುವಂತೆ, ಮರಾಟರ ಸೈನ್ಯವು ಶತ್ರುಗಳ ಮಧ್ಯದಲ್ಲಿ ಒಟ್ಟಾಯಿತು; ಆದರೆ ಜೀವದ ಹಂಗು ದೊರೆದ ಆ ವೀರರು ಶತ್ರುಗಳಿಗೆ ಹಣೆಯಲಿಲ್ಲ. ಯುದ್ಧಮಾಡಿ ದಣಿಯದೆ ಯಿದ್ದ ಸುಜಾಉದ್ದೌಲನ ಸೈನ್ಯವೂ, ದುರಾಣಿಯ ಸೈನ್ಯವೂ ಒಳ್ಳೇ ಶೌರ್ಯದಿಂದ ಮರಾಟರನ್ನು ಹಣಿಯಹತ್ತಿದರೂ ಮರಾಟರು ಅವರ ಆಟವನ್ನು ನಡೆಯ ಗೊಡಲಿಲ್ಲ. ಆ ವೀರರು ಶತ್ರುಗಳಿಗೆ ಶರಣುಹೋಗಲಿಲ್ಲ. ಮುಯ್ಯಕ್ಕೆ ಮುಯ್ಯ ತೀರಿಸುವದನ್ನು ಬಿಡಲಿಲ್ಲ! ಅಷ್ಟರಲ್ಲಿ ಮರಾಟರ ದುರ್ದೈವದ ವಕ್ರದೃಷ್ಟಿಯ ಪರಮಾವಧಿಯಾಯಿತು. ಒಮ್ಮಿಂದೊಮ್ಮೆ ಅವರ ತಲೆ ಮೇಲೆ ಆಕಾಶದ ಕೊಡಲಿಯು ಬಿದ್ದಂತಾಯಿತು; ಅತಿವೇಗದ ವಿದ್ಯುತ್ಸ್ಪರ್ಶವಾದಂತಾಯಿತು; ಉಗ್ರಕಾಲನು ತನ್ನ ಪರಾಕ್ರಮವನ್ನು ಸಂಪೂರ್ಣವಾಗಿ ತೋರಿಸಿದ್ದನು. ಒಬ್ಬ ಯುಸಫ್‌ರ್ಝಾಯಿ ಸಿಪಾಯಿಯ ತುಬಾಕಿಯೊಳಗಿಂದ ಎರಡು ಗುಂಡುಗಳು ಸುಯ್‌ಗುಟ್ಟುತ್ತಹೋಗಿ ವಿಶ್ವಾಸರಾಯನ ಎದೆಗೆ ಬಡಿದವು! ಮತ್ತೊಬ್ಬನು ಬಿಟ್ಟಬಾಣವು ಆ ಬಾಲವೀರನ ಕಣ್ಣಿಗೆ ತೆರೆದು ಹೋಯಿತು. ಮೂರನೆಯವನೊಬ್ಬನ ಖಡ್ಗದ ಜಾರಿಕೆಯು ಕಡತವು ಆ ಸುಕುಮಾರನ ಹೆಗಲಿಗೆ ಬಿದ್ದಿತು. ಅಷ್ಟರಲ್ಲಿ ಖಡ್ಗದಿಂದ ಹೊಡೆದ ಸಿಪಾಯಿಯ ರುಂಡವನ್ನು ಒಬ್ಬ ಮರಾಟಾ ಸಿಪಾಯಿಯು ತುಂಡರಿಸಿದನು. ಆ ಕಾಲದಲ್ಲಿ ಹುಜುರಾತಪಾಗೆಯವರು ವಿಲಕ್ಷಣ ಪರಾಕ್ರಮವನ್ನು ಪ್ರಕಟಿಸಿ ಶತ್ರುಗಳನ್ನು ಒಳಿತಾಗಿ ಹಿಂದಕ್ಕೆಸರಿಸಿದರು. ಹೀಗೆ ವಿಶ್ವಾಸನಿಗೆ ಒಂದರ ಹಿಂದೊಂದು ಮೂರು ಗಾಯಗಳಾದದ್ದರಿಂದ, ಮುಂದಕ್ಕೆ ಜೋಲಿಹೋಗಿ ಆತನು ಕುದುರೆಯ ಕುತ್ತಿಗೆಯ ಮೇಲೆ ಸಾಗರಬಿದ್ದನು. ಆ ಕಾಲದಲ್ಲಿ ಇಳಿಹೊತ್ತಿನ ಸಮಯವಾಗಿತ್ತು. ಒಂಬತ್ತು ತಾಸು ಮೀರಿರಬಹುದು. ಈ ಅನರ್ಥವನ್ನು ನೋಡಿ ಭಾವು ಸಾಹೇಬನು ಕುದುರೆಯ ಮೇಲಿಂದ ಹಾರಿಹೋಗಿ ವಿಶ್ವಾಸರಾಯನನ್ನು ಮೆಲ್ಲಗೆ ಇಳಿಸಿ ಕೊಂಡನು. ಆ ಪುತ್ರವತ್ಸಲನು ಕಣ್ಣೀರು ಸುರಿಸುತ್ತ–''ಬಾಳಾ, ನಿನ್ನಮೇಲೆ ಎಂಥ ಅನರ್ಥವು ಒದಗಿತಲ್ಲ! ಅಪ್ಪಾ, ಈಗ

ನಿನಗೆ ಹ್ಯಾಗಾಗುತ್ತದೆ? ಬೆದರಬೇಡ, ಧೈರ್ಯಮಾಡು. ಇಲ್ಲಿ ನಾನಿದ್ದೇನೆ ನೋಡು. ಈ ನನ್ನ ಕೈಗೆ ತಲೆ ಆನಿಸಿ ಕುಳಿತುಕೋ, ಅಂದರೆ ಸಮಾಧಾನವಾಗುವದು.'' ಎಂದು ನುಡಿಯುತ್ತಿರಲು, ವಿಶ್ವಾಸರಾಯನ ಜೀವವು ತೇಲು–ಮೇಲಾಗಹತ್ತಿತ್ತು. ಆತನ ಉಸುರು ಕಟ್ಟಿತು. ಕಣ್ಣು ಕತ್ತಲಗೂಡಿಸಹತ್ತಿದ್ದವು. ಆತನು ಮೆಲ್ಲನೆ ಕಣ್ಣು ತೆರೆಯಲು ಭಾವುಸಾಹೇಬನು ಕಣ್ಣಿಗೆ ಬಿದ್ದನು. ಆಗ ವಿಶ್ವಾಸರಾಯನು ನರಳುತ್ತ ಕಕ್ಕನಿಗೆ–''ಕಾಕಾಸಾಹೇಬ, ನನ್ನ ಆಯುಷ್ಯವು ತೀರಿತು! ಇನ್ನು ನನ್ನ ಆಶೆಯನ್ನು ಬಿಡಿರಿ! ನೀವು ಹೋಗಿರಿ, ಅತ್ತ ಯುದ್ಧದಲ್ಲಿ ಅವ್ಯವಸ್ಥೆಯಾದೀತು! ಅಯೀ! ನಾನಾಸಾಹೇಬ! ಎಂದು ನುಡಿಯುತ್ತಿರುವಷ್ಟರಲ್ಲಿಯೇ ಆ ಬಾಲವೀರನ ಬಾಯಿಯು ಹೋಯಿತು. ಮಗನ ಮೈಯಲ್ಲಿ ಸೋರುತ್ತಿರುವ ರಕ್ತವನ್ನು ಭಾವುಸಾಹೇಬನು ತನ್ನ ಸೆಲ್ಲೆಯಿಂದ ಒತ್ತಿ ತನ್ನ ಸೆಲ್ಲೆಯ ತುಂಡುಗಳಿಂದ ಎರಡೂ ಗಾಯಗಳನ್ನು ಕಟ್ಟಿದನು. ಮಗನು ಉಳಿಯುವ ಆಶೆಯು ಭಾವುಸಾಹೇಬನಿಗೆ ತೋರಲಿಲ್ಲ. ಅಂಥ ಸ್ಥಿತಿಯಲ್ಲಿಯೇ ಆತನು ವಿಶ್ವಾಸರಾಯನನ್ನು ಪುನಃ ಆತನ ಆನೆಯ ಅಂಬಾರಿಯಲ್ಲಿ ಕುಳ್ಳಿರಿಸಿದನು. ಕೂಡಲೆ ಮಾವುತರೂ, ಚೌರಿಬಾರರೂ ತಮ್ಮ ಸೆಲ್ಲೆಯಿಂದ ವಿಶ್ವಾಸರಾಯನ ಶವವನ್ನು ಅಂಬಾರಿಯ ಕಂಬಕ್ಕೆ ಕಟ್ಟಿ, ಸೈನ್ಯದವರು ಧೈರ್ಯಗೆಡಬಾರದೆಂದು ಶವದ ಕೈಯಲ್ಲಿ ಧನುರ್ಬಾಣಗಳನ್ನು ಕೊಟ್ಟು ಕುಳ್ಳಿರಿಸಿದರು. ಈ ಸುದ್ದಿಯು ಪಾರ್ವತೀಬಾಯಿಗೂ, ಲಕ್ಷ್ಮೀಬಾಯಿಗೂ ತಿಳಿಯಲು; ಅವರ ಶೋಕಕ್ಕೆ ನೆಲೆಯಿಲ್ಲದಾಯಿತು. ವಿಶ್ವಾಸರಾಯನ ಹೆಂಡತಿಯಾದ ಲಕ್ಷ್ಮೀಬಾಯಿಯ ಶೋಕಾತಿಶಯದಿಂದ ಮೈಮರೆತು ಬಳಿಯ ದಾಸಿಯರಿಗೆ ಅಸುಗೊಳ್ಳದೆ ಅಂಬಾರಿಯ ಮೇಲಿಂದ ಕೆಳಗೆ ದುಮುಕಲು, ಶವಗಳ ರಾಶಿಯಲ್ಲಿ ಎತ್ತೋ ಮುಚ್ಚಿ ಹೋದಳು. ಹೀಗೆ ಭಾವೀ ಪೇಶ್ವೆಯಾದ ವಿಶ್ವಾಸರಾಯನೂ, ಆತನ ಪ್ರಿಯಪತ್ನಿಯಾದ ಲಕ್ಷ್ಮೀಬಾಯಿಯೂ ತಮ್ಮ ಅಷ್ಟೈಶ್ವರ್ಯಗಳನ್ನೂ ರಾಜವೈಭವವನ್ನೂ ತ್ಯಜಿಸಿ ''ಕಟ್ಲೆ ತುಂಬಿದ ಬಳಿಕ ಕ್ಷಣ ಮಾತ್ರವಿರಲಿಲ್ಲ'' ಎಂಬ ಕನಕದಾಸನ ಉಕ್ತಿಯಂತೆ ಇಹಲೋಕವನ್ನು ತ್ಯಜಿಸಿ, ವೀರಸ್ವರ್ಗಕ್ಕೆ ಏರಿದರು. ಪ್ರಿಯವಾಚಕರೇ, ''ದೇಹತ್ಯಾಗಿ ತಾಕೀರ್ತಿಮಾಗೇ ಉರಾವಿ'' ಎಂಬಂತೆ, ಈ ಬಾಲವೀರನ ಶೌರ್ಯವನ್ನು ಬಖರಕಾರರೂ, ಶಾಹಿರರೂ, ಕವಿಗಳೂ ಬಹಳವಾಗಿ ವರ್ಣಿಸಿರುವರು!

## ರಣಯಜ್ಞದ ಪೂರ್ಣಾಹುತಿಯು

ಮಹಾಭಾರತದ ಯುದ್ಧದಲ್ಲಿ ವೀರಾಗ್ರಣಿಯಾದ ಅಭಿಮನ್ಯುವು ಸಮರಭೂಮಿಯಲ್ಲಿ ಬಿದ್ದದ್ದನ್ನು ನೋಡಿ ಅರ್ಜುನನಿಗೆ ದುಃಖವಾದಂತೆ, ಈಗ ವಿಶ್ವಾಸರಾಯನು ಪತನ ಹೊಂದಿದ್ದನ್ನು ನೋಡಿ ಭಾವುಸಾಹೇಬನಿಗೆ ದುಃಖವಾಯಿತು. ಆತನು ತಲೆಯಮೇಲೆ ಕೈಯಿಟ್ಟು – ಹಾಯ್ ಹಾಯ್! ದೈವಗತಿಯು ಎಷ್ಟು ವಿಚಿತ್ರವಾದದ್ದು! ಭವಿತವ್ಯವನ್ನು ತಪ್ಪಿಸುವದು ಯಾರಿಂದಲೂ ಆಗದು. ವಿಶ್ವಾಸರಾಯಾ, ನಿನ್ನನ್ನು ದಿಲ್ಲಿಯ ಸಿಂಹಾಸನದ

ಮೇಲೆ ಕುಳ್ಳಿರಿಸಬೇಕೆಂದು ನಾನು ಕರಕೊಂಡು ಬಂದಿದ್ದೆನಲ್ಲವೆ? ಆದರೆ ದುರ್ದೈವವು ನಿನ್ನನ್ನು ಚಿತಾರೋಹಣ ಮಾಡಿಸಲಿಕ್ಕೆ ಸಿದ್ಧವಾಯಿತು! ಅಥವಾ ಪವಿತ್ರವಾದ ಪಾತಶಾಹಿಯ ಸಿಂಹಾಸನವನ್ನು ಹತ್ತಿಸುವ ನನ್ನ ಮಹತ್ವಾಕಾಂಕ್ಷೆಯ ಪರಿಣಾಮವು ಹೀಗಾಗಿರಬಹುದೇ? ಅದರಲ್ಲಿ ಸಂಶಯವೇನು? ಸುರಜಮಲ್ಲನ ಬುದ್ಧಿವಾದವು ಆಗ ನನಗೆ ರೋಚಿಸಲಿಲ್ಲ! ಕಾಕಾಸಾಹೇಬರ ಹಿತೋಪದೇಶವನ್ನು ನಾನು ಮನ್ನಿಸಲಿಲ್ಲ, ಆಗ ಅಂಥ ವಿಲಕ್ಷಣಗರ್ವ ದಿಂದ ಅಂಧನು ನಾನು ಹ್ಯಾಗಾಗಿರಬಹುದು? ಬಾಳಾವಿಶ್ವಾಸಾ, ನೀನು ಶ್ರೀ ಶಿವಛತ್ರ ಪತಿಯ ವಂಶಜರ ಶ್ರೇಷ್ಠ ಮಂತ್ರಿಯಲ್ಲವೆ? ಅಂಥ ಪವಿತ್ರಪದವಿಯನ್ನು ಬಿಟ್ಟು ಬಾದಾ ಶಾಹಿಯ ಪದವಿಗೇರಹೋದದ್ದು ಒಂದು ಬಗೆಯ ಸ್ವಾಮಿ ದ್ರೋಹವಾಗಿರಬಹುದೇನು? ನಮ್ಮ ಶಿವಾಜಿಮಹಾರಾಜರು ದಿಲ್ಲಿಗೆ ಹೋದಾಗ ಯಾವ ಭಾವನೆಯಿಂದಲೇ ಆಗಲೊಲ್ಲ ದೇಕೆ, ಬಾದಶಹನ ಸಿಂಹಾಸನದ ಮುಂದೆ ಕುರ್ನಿಸಾತ ಮಾಡಿದ್ದರಲ್ಲವೆ? ಆ ದಿಲ್ಲಿ ಬಾದಶಹನ ಕಡೆಯಿಂದಲೇ 'ಛತ್ರಪತಿ'ಯೆಂಬ ಬಿರುದನ್ನು ಆ ನಮ್ಮ ಸ್ವಾಮಿಯು ಸಂಪಾದಿಸಿದ್ದನಲ್ಲವೆ? ಅಂಥ ನಮ್ಮ ಸ್ವಾಮಿಯ ಸ್ವಾಮಿಯಾದ ಬಾದಶಹನ ಸಿಂಹಾಸನವೇರಿಸಲು ಯತ್ನಿಸಿದ್ದು ಸ್ವಾಮಿ ದ್ರೋಹವಲ್ಲದೆ ಮತ್ತೇನು? ಆದರೆ ಬಾಳಾ, ನನ್ನ ದ್ರೋಹವು ನಿನಗೆ ಯಾಕೆ ಬಡಕೊಳ್ಳ ಬೇಕು? ವಿಶ್ವಾಸಾ, ನಿನ್ನ ನಾಶಕ್ಕೆ ನಾನೇ ಕಾರಣನಾದೆನಲ್ಲ! ಇರಲಿ, ಇನ್ನು ಎಷ್ಟು ಶೋಕಿಸಿದರೇ ನಾಗುವದು? ಇನ್ನು ನಾವೂ ವಿಶ್ವಾಸನನ್ನು ಹಿಂಬಾಲಿಸಿ ಹೋಗಿ ಬಿಡೋ, ಅನ್ನಲು, ಜನಕೋಜಿಸಿಂದೆಯು—ಸರಕಾರ, ಹೀಗೆ ಶೋಕಿಸುವಲ್ಲಿ ಪ್ರಯೋಜನವೇನು? ವಿಶ್ವಾಸರಾಯ ರನ್ನು ಹಿಂಬಾಲಿಸುವಲ್ಲಿಯಾದರೂ ಲಾಭವೇನು? ದುರಾಣಿಯ ಸೇಡು ತೀರಿಸಿಕೊಳ್ಳುವದಕ್ಕಾಗಿ ಈಗ ತಾವು ಸಮರಭೂಮಿಯಿಂದ ಜಾರಿಹೋಗ ಬೇಕೆಂದು ಈ ದಾಸನ ಪ್ರಾರ್ಥನೆ ಯಿರುವದು. ದುರಾಣಿಯ ಶಾಸನಮಾಡಲಿಕ್ಕೆ ತಾವೇ ಯೋಗ್ಯರೂ, ಬಾಧ್ಯಸ್ಥರೂ ಇರುವಿರಿ. ನಾವು ಶೌರ್ಯ—ಸಾಹಸದಿಂದಲೂ, ಯುಕ್ತಿ ಪ್ರಯುಕ್ತಿಯಿಂದಲೂ ನಿಮ್ಮನ್ನು ರಣಭೂಮಿ ಯಿಂದ ದಾಟಿಸುವೆವು. ಹ್ಯಾಗೂ ನಾವು ಜೀವದ ಹಂಗುದೊರೆದಿರುತ್ತೇವೆ. ನಮ್ಮ ಪಶ್ಚಾತ್ ನೀವು ದುರಾಣಿಯ ಸೇಡು ತೀರಿಸಿಕೊಂಡರೆ ನಮ್ಮ ಆತ್ಮಶಾಂತಿಯಾಗುವದು. ಏಳಬೇಕು, ಹಯಪಾನನನ್ನು ಆರೋಹಿಸಬೇಕು. ಇಂದು ಈ ಸ್ವಾಮಿನಿಷ್ಠರ ಯೋಗ್ಯತೆಯನ್ನಾದರೂ ಪರೀಕ್ಷಿಸಬೇಕು. ಎಂದು ಜನಕೋಜಿಸಿಂದೆಯೇ ಮೊದಲಾದ ವೀರರು ಭಾವೂಸಾಹೇಬನಿಗೆ ಹೇಳಿ, ಆತನ ಹಯಪಾನವನ್ನು ಮುಂದೆ ತಂದು ನಿಲ್ಲಿಸಿದರು.

ಸಿಂದೆಯ ಈ ಮಾತುಗಳನ್ನು ಕೇಳಿ ಭಾವುಸಾಹೇಬನು ಎದ್ದು ನಿಂತು ತನ್ನ ಕೈ ಖಡ್ಗವನ್ನು ಝುಳುಪಿಸಿ ಹಯಪಾನದ ಕಡಿವಾಣವನ್ನು ಹಿಡಿದು—ಜನಕೋಜೀ, ನಿಮ್ಮ ಮಾತು ಸ್ವಾಮಿ ನಿಷ್ಠೆಗೂ, ಸ್ವಾಭಿಮಾನಕ್ಕೂ, ಸಮರಪಾಂಡಿತ್ಯಕ್ಕೂ ಒಪ್ಪುತ್ತಲಿವೆ. ನೀವು ಸ್ವಾಮಿನಿಷ್ಠ ಸೇವಕರಷ್ಟೇ ಅಲ್ಲ, ಭಾವುವಿನ ಪ್ರಾಣಕ್ಕಾಗಿ ಪ್ರಾಣಕೊಡುವ ಪರಮಮಿತ್ರರೂ ಆಗಿರುವಿರಿ! ಆದರೆ ವಿಶ್ವಾಸನು ಹೋದದ್ದರಿಂದ ಭಾವುವು ಇನ್ನು ಹಿಂದೆ ಉಳಿಯಲಾರನು. ವಿಶ್ವಾಸರಾಯನನ್ನು ಬಿಟ್ಟು ಭಾವುವು ನಾನಾಸಾಹೇಬನನ್ನು ಕಾಣಬಹುದೆ? ಅತ್ತಿಗೆಯವರನ್ನು ಮಾತಾಡಿಸಬಹುದೆ? ಭಾವುವಿನ ಸ್ವಭಾವವನ್ನು ಬಲ್ಲ ನಿಮ್ಮ ಮುಂದೆ ಹೆಚ್ಚಿಗೆ ಹೇಳಲಾರೆನು. ನಮ್ಮ ವಿಶ್ವಾಸನು

'' ನೀವಿದ್ದಲ್ಲಿ ನಾನು'' ಎಂಬ ಉದಾತ್ತವಿಚಾರವನ್ನು ಹೊರಗೆಡವಿ, ಅದರಂತೆ ನಡೆದು ತಾನು ಸ್ವರ್ಗಕ್ಕೆ ಹೋಗಿರಲು, ನಾನು ಮಾತ್ರ ಆತನಿದ್ದಲ್ಲಿಗೆ ಹೋಗದಿರುವದು ನನ್ನ ಹಿರಿಯ ತನಕ್ಕೆ ಒಪ್ಪುವದೆಯೇ? ಜನಕೋಜೀ, ದುರಾಣಿಯ ಈಗಿನ ಜಯವು ಒಂದುಬಗೆಯ ಅಪಜಯವೆಂದು ಭಾವಿಸಿರಿ. ಅವನು ತನ್ನ ಪುತ್ರ–ಮಿತ್ರರನ್ನು ಈ ಕುರುಕ್ಷೇತ್ರದಲ್ಲಿ ಒಕ್ಕಲಿಕ್ಕಿ ತಾನೊಬ್ಬನೇ ಸ್ವದೇಶಕ್ಕೆ ಹೋಗಬೇಕಾಗುವದು. ಏಳಿರಿ, ಮರಾಟರ ಕಟ್ಟಕಡೆ ಪರಾಕ್ರಮವನ್ನು ಈ ಕುರುಕ್ಷೇತ್ರದಲ್ಲಿ ತೋರಿಸಿಬಿಡೋಣ! ಎಂದು ನುಡಿದು ಬೊಗಸೆ ಯೊಡ್ಡಲು, ಪರಿಚಾರಕನು ಗಂಗೋದಕವನ್ನು ಆ ಬೊಗಸೆಯಲ್ಲಿ ಸುರಿದನು. ಗಂಗೋದಕ ದಿಂದ ತುಂಬಿದ ಪಾತ್ರೆಗಳು ಎತ್ತುಗಳ ಮೇಲೆ ಹೇರಿ ಸವಾರಿಯ ಸಂಗಡ ಸಿದ್ಧವಾಗಿದ್ದವು. ಸ್ವಲ್ಪ ಗಂಗೋದಕ ಪ್ರಾಶನಮಾಡಿ ಭಾವುಸಾಹೇಬನು ಎಲ್ಲರ ಅಪ್ಪಣೆಪಡೆದು ಹಯಪಾನ ನನ್ನು ಏರಿದನು. ಆತನ ಕೈಯಲ್ಲಿ ಖಡ್ಗ, ಟೊಂಕದಲ್ಲಿ ಜೋಡುಲಳಿಗೆಯ ಪಿಸ್ತೂಲು ಒಪ್ಪುತ್ತಿದ್ದವು. ಭಾವುಸಾಹೇಬನ ಆಗಿನ ಉಗ್ರಮೂರ್ತಿಯನ್ನು ನೋಡುವದು ಅಶಕ್ಯವೇ ಸರಿ! ಹಯಪಾನನು ಯಜಮಾನನ ಮನೋದಯವನ್ನು ತಿಳಿದು ಶತ್ರುಗಳ ಮೇಲೆ ಆವೇಶ ದಿಂದ ಏರಿಹೋಗಲು ಆತುರಪಡಹತ್ತಿತು. ಆಗ ಭಾವುಸಾಹೇಬನು ತನ್ನ ಬಳಿಯಲ್ಲಿದ್ದ– ಸಮಶೇರಬಹದ್ದರ, ಜನಕೋಜಿಸಿಂದೆ, ಮುಕುಂದಜಿಸಿಂದೆ, ಸೋನಜೀ ಭಾಪಕರ ಮೊದಲಾದ ಕೆಲವು ಸರದಾರರನ್ನು ಬಳಿಯಲ್ಲಿ ಕರೆದು—''ಮಿತ್ರರೇ'' ಸದ್ಯಕ್ಕೆ ನಾವು ಯುದ್ಧದಲ್ಲಿ ಜಯ ವನ್ನು ಸಂಪಾದಿಸಬೇಕು, ಇಲ್ಲವೆ ರಣಭೂಮಿಯಲ್ಲಿ ದೇಹವಿಡಬೇಕು ಎಂಬ ಪ್ರಸಂಗವು ಬಂದೊದಗಿರುತ್ತದೆ. ಜಯದ ಆಶೆಯಂತು ಕಂಡಹಾಗೆಯೇ ಇರುತ್ತದೆ. ಇನ್ನು ರುಧಿರ ಗಂಗೆ ಯಲ್ಲಿ ಸ್ನಾನಮಾಡಿ ಸ್ವರ್ಗಕ್ಕೆ ಹೋಗುವ ಮಾರ್ಗವೊಂದು ನಮಗೆ ಪ್ರಶಸ್ತವಾಗಿ ತೆರೆದಿರು ವದು; ಆದರೆ ಆ ಮಾರ್ಗದಿಂದ ಹೋಗುವ ಧೈರ್ಯವಿದ್ದವರು ಮಾತ್ರ ನನ್ನ ಸಂಗಡ ಬರಬೇಕು. ಧೈರ್ಯವಿಲ್ಲದವರಿಗೆ ಹಿಂದಿನ ಹಾದಿಯು ತೆರೆದಿರುವದು. ಮೋರೆಯ ಮುಂದೆ ಒಪ್ಪಿಕೊಂಡು ಹಿಂದಿನಿಂದ ವಿಶ್ವಾಸಘಾತ ಮಾಡುವದು ಮಾತ್ರ ಭೂಷಣವಲ್ಲ'' ಅನ್ನಲು, ತುಕೋಜಿ ಸಿಂದೆಯೂ, ಸೋನಜೀಭಾಪಕರನೂ ಭಾವು ಸಾಹೇಬನಿಗೆ–ಸರಕಾರ, ಇಂದು ಕ್ಷಾತ್ರ ಧರ್ಮದ ಪರಮಾವಧಿಯಾಯಿತು. ಎಲ್ಲ ಕಡೆಯಲ್ಲಿ ಆಕಾಶವು ಹರಿದರೆ ಅದಕ್ಕೆ ತೇಪೆ ಹಚ್ಚು ವದು ಹ್ಯಾಗೆ? ಈ ಪ್ರಸಂಗದಲ್ಲಿ ಹಿಂದಕ್ಕೆ ಸರಿಯುವದೇ ಯುಕ್ತವಾಗಿತ್ತು; ಆದರೆ ಸರಕಾರದ ನಿಶ್ಚಯವಿರುವದರಿಂದ, ನಾವೂ ಸ್ವಾಮಿ–ಸೇವಕ ಸಂಬಂಧಕ್ಕನುಸರಿಸಿ ರುಧಿರಗಂಗೆಯಲ್ಲಿ ಸ್ನಾನಮಾಡುವದಕ್ಕಾಗಿ ಸಿದ್ಧರಿರುವೆವು'' ಎಂದು ಹೇಳಿದರು.

ಇತ್ತ ಹಯಪಾನ ಕುದುರೆಯು ನಿಂತಲ್ಲಿ ನಿಲ್ಲದೆ ಶತ್ರುಗಳ ಮೇಲೆ ಸಾಗಿಹೋಗಲಿಕ್ಕೆ ಅತ್ಯಂತ ಆತುರಪಡುತ್ತಲಿತ್ತು, ಆ ದಿವ್ಯಾಶ್ವದ ತುಟಿಗಳು ಸಿಟ್ಟಿನಿಂದ ಸ್ಫುರಣ ಹೊಂದುತ್ತಿದ್ದವು. ಕಣ್ಣೊಳಗಿಂದ ಕಿಡಿಗಳು ಹಾರುತ್ತಿದ್ದವು. ಸಿಟ್ಟಿನಿಂದ ಲಗಾಮವನ್ನು ಕಡಿಯುತ್ತಿರುವಾಗ ಅದರ ಬಾಯಿಂದ ಬುರುಗೂ, ರಕ್ತವೂ ಸೋರುತ್ತಿದ್ದವು. ಕಿವಿಗಳನ್ನು ನಿಗರಿಸಿ ಅದು ನಾಲ್ಕೂಕಡೆಗೆ ನೋಡುತ್ತಿತ್ತು, ಅದರ ಕೊರಳಲ್ಲಿ ಬಂಗಾರದ ತಂತಿಯಲ್ಲಿ ಪೋಣಿಸಿದ ನವರತ್ನಗಳ ಹಾರವೂ,

ಮುತ್ತಿನ ಸರವೂ ಅಲೆದಾಡುತ್ತಿದ್ದವು. ಅದರ ಆಯಾಲದ ಕೂದಲುಗಳನ್ನೂ, ಬಾಲವನ್ನೂ ಅರಗಿನ ಬಣ್ಣದಿಂದ ಅಲಂಕರಿಸಿದ್ದರು. ಎರಡೂ ಮಗ್ಗಲುಗಳಲ್ಲಿ ಬಿಳಿಯಬಣ್ಣದ ಚವರಿಗಳು ಬೀಸುತ್ತಲಿದ್ದವು. ಅದು ನಾಲ್ಕೂ ಖುರಗಳಿಂದ ಭೂಮಿಯನ್ನು ಘಾತಿಸುತ್ತಲಿತ್ತು. ಅದರ ದೇಹವು ಪುಷ್ಟ, ಮಾಂಸಮಯ, ಹುರಿಕಟ್ಟಿನದು, ರೇಶಿಮೆಯಹಾಗೆ ಮೃದುವಾದದ್ದು. ನುಣು ಗುಟ್ಟುವದು ಆಗಿತ್ತು. ಅದರ ಎದೆಯು ವಿಶಾಲವಾಗಿದ್ದು, ಛಪ್ಪೆಗಳು ಪುಷ್ಟವಾಗಿದ್ದವು. ಅದು ಮೂಗಿನ ಹೊರಳೆಗಳನ್ನು ಅರಳಿಸಿ ಮೇಲೆ ಮೇಲೆ ಹೇಕರಿಸುವದನ್ನು ನೋಡಿದರೆ, ಅದು ತನ್ನ ಭಾಷೆಯಿಂದ ತನ್ನನ್ನು ಬೇಗನೆ ಶತ್ರುಗಳ ಮೇಲೆ ಸಾಗಿಸಿಕೊಂಡು ಹೋಗಿ ರೆಂದು ತನ್ನ ಯಜಮಾನನಿಗೆ ಹೇಳುತ್ತಿರುವಂತೆ ತೋರುತ್ತಿತ್ತು! ವಿಶ್ವಾಸರಾಯನು ಮಡಿದ ವರ್ತ ಮಾನವು ಸೈನ್ಯದಲ್ಲಿ ಹಬ್ಬಿದಕೂಡಲೆ ಮರಾಟರು ಸಮರಭೂಮಿಯಿಂದ ಓಡಹತ್ತಿದರು. ಆಗ ಅವರನ್ನು ಧೈರ್ಯಗೊಳಿಸುವದಕ್ಕಾಗಿ ಭಾವುಸಾಹೇಬನು ಜಯವಾದ್ಯಗಳ ಧ್ವನಿಗೈಯುವಂತೆ ಆಜ್ಞಾಪಿಸಿ, ತಾನು ಸುಜಾಉದ್ದೌಲನ ಸೈನ್ಯದಮೇಲೆ ಕೃತಾಂತನಂತೆ ಸಾಗಿಹೋದನು. ಈ ವರೆಗೆ ಯುದ್ಧವರ್ಣನವನ್ನು ಬರೆದು ಸೋತುಹೋಗಿದ್ದ ನಮ್ಮ ಕೈಯು, ಈ ನರವೀರ ಭಾವುವಿನ ಶೌರ್ಯಾತಿಶಯವನ್ನು ವರ್ಣಿಸಲಿಕ್ಕೆ ಏಳಲೊಲ್ಲದು! ಭಾವುಸಾಹೇಬನು ಜಾತ್ಯಾಶೂರನು, ಮೇಲೆ ಮಾನಧನನು; ಅದರಲ್ಲಿ ಅಣ್ಣನ ಮುಂದೆ ಮಾಡಿದ ಘೋರಪ್ರತಿಜ್ಞೆಯಿಂದ ಪರಾಧೀನ ನಾದವನು; ಈ ಪರಾಧೀನತೆಗೆ ವಿಶ್ವಾಸರಾಯನ ಮರಣದ ಆಘಾತವಾದಬಳಿಕ ಕೇಳುವ ದೇನು? ಯಾವ ಆತಂಕವನ್ನೂ ಲೆಕ್ಕಿಸದೆ ಆತನು ವಿಶ್ವಾಸಘಾತಕಿಯಾದ ಸುಜಾಉದ್ದೌಲನ ಸೈನ್ಯವನ್ನು ತನ್ನ ಖಡ್ಗದಿಂದ ಸರಸರ ಸವರುತ್ತ ಆತನಲ್ಲಿ ದೃಷ್ಟಿಯನ್ನಿಟ್ಟು ಮುಂದಕ್ಕೆ ನಡೆದನು. ಜನಕೋಜಿಸಿಂದೆಯೂ, ಸಮಶೇರಬಹದ್ದರನೂ ತಮ್ಮ ಸ್ವಾಮಿಯ ಈ ರಣ ಸಾಹಸಕ್ಕೆ ಸಹಾಯಕರಾಗಿ ಸಾಗಿದ್ದರು. ಭಾವುವಿನ ಈ ಅಬ್ಬರದ ಹೊಡೆತಕ್ಕೆ ಸುಜಾನ ಸೈನ್ಯವು ತತ್ತರಿಸಿತು; ಆದರೆ ಸುಜಾನು ಬೇಗನೆ ಕೈಗೆ ಹತ್ತಲೊಲ್ಲನು. ಆಗ ಭಾವುಸಾಹೇಬನು ಕೈ ಯೊಳಗಿನ ಖಡ್ಗವನ್ನು ಬಿಸುಟಿ, ತುಂಬಿದ ಜೋಡುಲಳಿಗೆಯ ಪಿಸ್ತೂಲನ್ನು ಸುಜಾನಿಗೆ ಗುರಿ ಯಿಟ್ಟು—''ನೀಚನೇ, ನಿನ್ನ ವಿಶ್ವಾಸಘಾತದ ಈ ತೀಕ್ಷ್ಣಫಲವನ್ನು ಉಣ್ಣು'' ಎಂದು ನುಡಿದು, ಆತನ ಮೇಲೆ ಅದನ್ನು ಹಾರಿಸಿದನು; ಆದರೆ ಸುಜಾಉದ್ದೌಲನ ಆಯುಷ್ಯವು ತೀರದ್ದರಿಂದ ಭಾವುಸಾಹೇಬನ ಗುರಿತಪ್ಪಿ, ಆತನು ಪಾರಾದನು. ವಿಶ್ವಾಸರಾಯನ ಮರಣದಿಂದ ಭಾವುಸಾಹೇಬನ ಚಿತ್ತವು ಚಂಚಲವಾಗಿತ್ತು; ಆತನ ಅವಯವಗಳು ಶಿಥಿಲವಾಗಿದ್ದವು; ಆದ್ದರಿಂದ ಗುರಿಯು ತಪ್ಪಿ ಸುಜಾನು ಸುರಕ್ಷಿತವಾಗಿ ಉಳಿದನು. ಭಾವು ಸಾಹೇಬನು ನುಡಿದ ಶಬ್ದಗಳನ್ನು ಸುಜಾನು ಗುರುತಿಸಿದನು. ಅವನ್ನು ಸ್ಪಷ್ಟವಾಗಿಯೂ ಕೇಳಿದನು; ಅವನ್ನು ಆತನು ಒಪ್ಪಿಕೊಳ್ಳಲೇಬೇಕಾಗಿತ್ತು. ತನ್ನ ಪಿಸ್ತೂಲಿನ ಗುರಿಯು ತಪ್ಪಿದ್ದ ರಿಂದ ಭಾವುವು ತಿರಸ್ಕಾರದಿಂದ ಸುಜಾನನ್ನು ನೋಡಿ ಮತ್ತೊಂದು ಶಸ್ತ್ರಕ್ಕೆ ಕೈಹಾಕಿದನು. ಆತನ ನೈಸರ್ಗಿಕವಾದ ಪರಾಕ್ರಮವು ಇನ್ನೂ ಕುಗ್ಗಿದ್ದಿಲ್ಲ. ''ಧೀರಸ್ಯಾಪಿ ಶಿರಚ್ಛೇದೇ ವೀರತ್ವಂನೈವ ಮುಂಚತಿ'' ಅಂದರೆ ಧೀರಪುರುಷನ ಶಿರಚ್ಛೇದ ಮಾಡಿದರೂ ಆತನ ವೀರತ್ವವು ನಷ್ಟವಾಗು ವದಿಲ್ಲೆಂಬ ಕವಿ ವಚನವು ಭಾವುವಿನಲ್ಲಿ ಸ್ಪಷ್ಟವಾಗಿ ಅನುಭವಕ್ಕೆ ಬರುತ್ತಿತ್ತು.

ಭಾವುಸಾಹೇಬನು ನಿಶ್ಯಸ್ತ್ರನಾದದ್ದನ್ನು ನೋಡಿ ಸುಜಾಉದ್ದೌಲನು ತನ್ನ ಸೈನಿಕರಿಗೆ– ''ವೀರರೇ, ಬಹುಜೋಕೆ, ಭಾವುಸಾಹೇಬನ ಮೇಲೆ ಶಸ್ತ್ರವೆತ್ತಬೇಡಿರಿ; ಜೀವದಿಂದ ಆತನು ಕೈಗೆ ಹತ್ತುವ ಹಾಗೆ ಮಾಡಿರಿ. ಈತನು ನಮ್ಮ ಶತ್ರುವಾದರೂ, ಪ್ರತಾಪವಂತ ಶತ್ರು ವಾಗಿರುತ್ತಾನೆ. ಆತನ ಪ್ರಾಣಕ್ಕೆ ಅಪಾಯವಾಗಗೊಡಬೇಡಿರಿ.'' ಎಂದು ಕೂಗಿ–ಕೂಗಿ ಹೇಳಿದನು; ಆದರೆ ಗದ್ದಲದಲ್ಲಿ ಕೇಳುವವರಾರು? ಹೀಗೆ ಹೇಳುವದಕ್ಕಿಂತ ಮೊದಲೇ ವೇಣೀ ಮಾಧವಸಿಂಗನೆಂಬವನು, ಬಾಣ ಹೊಡೆದ ಹಾಗೆ ತನ್ನ ಕುದುರೆಯನ್ನು ಭಾವುವಿನಮೇಲೆ ನೂಕಿದ್ದನು. ಆತನು ತನ್ನ ಪ್ರಚಂಡವಾದ ಕೈಖಡ್ಗವನ್ನು ತನ್ನ ಸುತ್ತುಮುತ್ತು ಗರಗರ ತಿರುಗಿಸಿ, ಒಳ್ಳೇಸಾಮರ್ಥ್ಯದಿಂದ ಎದುರಿಗೆ ಎಸೆದನು. ಕೂಡಲೆ ಹಯಪಾನಕುದುರೆಯೂ, ಅದನ್ನೇರಿದ್ದ ವೀರನೂ ಕಾಣದಾದರು! ಅವರೇನು ಅಂತರ್ಧಾನ ಹೊಂದಿದರೋ, ಅಥವಾ ಭೂಮಿಯು ಇಬ್ಭಾಗವಾಗಿ ಆ ವೀರರನ್ನು ಕುದುರೆ ಸಹಿತವಾಗಿ ತನ್ನ ಹೊಟ್ಟೆಯಲ್ಲಿ ಹಾಕಿಕೊಂಡಳೋ ಏನಾಯಿತೋ ಯಾರಿಗೂ ತಿಳಿಯಲಿಲ್ಲ! ಎರಡೂ ಸೈನ್ಯಗಳ ಮೇಲೆ ಕ್ಷಣಮಾತ್ರ ಮೋಹಿನೀ ಮಂತ್ರವ ಪ್ರಯೋಗಿಸಿದಂತಾಗಿ, ಯುದ್ಧವು ಒಮ್ಮೆಲೆ ನಿಂತುಹೋಯಿತು! ಮರಾಟರ ಸೈನ್ಯ ದಲ್ಲಿ ''ಭಾವುಸಾಹೇಬರು ಮಡಿದರು!!! ಒಡೆಯರು ಹೋದರು!! ಶ್ರೇಷ್ಠ ಪುರುಷನು ಅದೃಶ್ಯ ನಾದನು!! ಇನ್ನು ಯಾತಕ್ಕೆ ಯಾರ ಸಲುವಾಗಿ ಕಾದುವಿರಿ? ಇನ್ನು ಹಿಂದಿನಹಾದಿಯ ಹಿಡಿಯಿರಿ! ಓಡಿರಿ! ಜೀವ ಉಳಿಸಿಕೊಳ್ಳಿರಿ'' ಎಂದು ಕೂಗಹತ್ತಿದರು. ಅಂದಬಳಿಕ ಕೇಳುವ ದೇನು? ಮಂತ್ರಗಾರನು ಮರಾಟರ ಮೇಲೆ ಮಂತ್ರವನ್ನು ಪ್ರಯೋಗಿಸಿದ ಹಾಗಾಯಿತು! ಅವರು ''ಹರಹರ ಮಹಾದೇವ'' ಎಂದು ಗರ್ಜಿಸಿ ಶಸ್ತ್ರ ಒಗೆದು ಮಡುವಿನಲ್ಲಿಸಮರ ಭೂಮಿ ಯಿಂದ ಕಾಲುದೆಗೆದರು! ದುರಾಣಿಗಳು ರಕ್ತಮಾಂಸದ ಮಡುವಿನಲ್ಲಿ ಬೀಳುತ್ತ ಏಳುತ್ತ ಅವರನ್ನು ಸಂತಾಪದಿಂದ ಬೆನ್ನಟ್ಟಿದರು! ಕೈಗೆ ಸಿಕ್ಕವರನ್ನು ಜೀವದಿಂದ ಬಿಡಲಿಕ್ಕಿಲ್ಲೆಂದು ಅವರು ಪ್ರತಿಜ್ಞೆಯನ್ನೇ ಮಾಡಿದಹಾಗೆ ತೋರಿತು. ಕೈಗೆಸಿಕ್ಕ ಮರಾಟರನ್ನು ಅವರು ಕುರಿ ಕೊಯ್ದಂತೆ ಚರಚರ ಕೊಯ್ದರು. ಹೀಗೆ ಹತ್ತು–ಹದಿನೈದು ಹರದಾರಿಗಳವರೆಗೆ ದುರಾಣಿಗಳು ಮರಾಟರ ಬೆನ್ನುಹತ್ತಿತುಂಡರಿಸುತ್ತ ಹೋದರು. ಮಲ್ಹಾರರಾವ ಹೋಳಕರನೂ, ದಮಾಜಿ ಗಾಯಕ ವಾಡನೂ ಮೊದಲೇ ದಕ್ಷಿಣದ ಹಾದಿಯನ್ನು ಹಿಡಿದು ಪಾರಾಗಿ ಹೋಗಿದ್ದರು. ಆ ಮೇಲೆ ವಿಠ್ಠಲಶಿವದೇವ ವಿಂಚೂರಕರು, ಮಹದಾಜಿಸಿಂದೆ, ನಾನಾಫಡಣವೀಸ, ಪಾರ್ವತೀ ಬಾಯಿ ಮೊದಲಾದವರು ಬಹುಕಷ್ಟದಿಂದ ಆ ಭಯಂಕರವಾದ ರಣಭೂಮಿಯಿಂದ ಪಾರಾಗಿ ದಕ್ಷಿಣದ ಹಾದಿಯನ್ನು ಹಿಡಿದರು. ಕೆಲವರು ವೇಷಾಂತರದಿಂದಲೂ ಸಾಗಿದರು. ತುಕೋಜಿ ಸಿಂದೆ, ಸೋನಜೀಭಾಪಕರ, ಸಮಸೇರಬಹದ್ದರ, ಜನಕೋಜಿಸಿಂದೆ ಮೊದಲಾದ ಎಷ್ಟೋ ಸರದಾರರು, ಭಾವುಸಾಹೇಬನು ಅಕಸ್ಮಾತ್ ಕಾಣದ ಹಾಗಾದ ಕೂಡಲೆ ತಮ್ಮ ಕುದುರೆಗಳ ಮೇಲಿಂದ ಹಾರಿ, ಕಾಲನಡಿಗೆಯಿಂದ ಶತ್ರುಗಳೊಡನೆ ಕಾದಹತ್ತಿದರು. ಅವರಿಗೆ ಶಸ್ತ್ರಗಳು ತಗಲಿ, ಗುಂಡುಗಳು ಬಡಿದು ಕೆಲವರು ರಣಭೂಮಿಯಲ್ಲಿ ಮರಣಹೊಂದಿದರು, ಕೆಲವರು ಗಾಯಪಟ್ಟು ಇಳೆಗೊರಗಿದರು. ಸಾರಾಂಶ, ಮರಾಟರ ಪೂರ್ಣಪರಾಭವವಾಗಿ, ದುರಾಣಿ

ಶಹನು ಪೂರ್ಣ ಜಯಶಾಲಿಯಾದನು. ರಣಪಟುವಾದ ಜನಕೋಜಿಯು ಗಾಯಹೊಂದಿ ಶತ್ರುಗಳ ಕೈಸೇರಿದನು; ಇಬ್ರಾಹಿಮಖಾನ ಗಾರಡಿಯ ಗತಿಯೂ ಹೀಗೆಯೇ ಆಯಿತು!

ಕುರುಕ್ಷೇತ್ರದ ಈ ಘನಘೋರಸಂಗ್ರಾಮದಲ್ಲಿ ಮರಾಟರ ಅತಿರಥಿ–ಮಹಾರಥಿಗಳಾದ ವೀರರು ಒಬ್ಬರ ಹಿಂದೊಬ್ಬರು ಪತನಹೊಂದಿದರು! ಒಬ್ಬಿಬ್ಬರ ಹೊರತು ಉಳಿದವರೆಲ್ಲರೂ ಸೈನ್ಯದ ಅಗ್ರಭಾಗದಲ್ಲಿ ಕಾದಿ, ಶತ್ರುಗಳಿಗೆ ತಮ್ಮ ಭುಜಪರಾಕ್ರಮವನ್ನು ತೋರಿಸಿ ಧಾರಾತೀರ್ಥದಲ್ಲಿ ದೇಹವಿಟ್ಟರು! ಈ ಮಾತು ಮರಾಟರು ಯಾವಾಗಲೂ ಗರ್ವಪಡತಕ್ಕಂತಹದೇ ಸರಿ. ಸ್ನಾನ–ಸಂಧ್ಯೆ, ಯಜ್ಞ–ಯಾಗ, ತಪಶ್ಚರ್ಯೆ ಇವು ಬ್ರಾಹ್ಮಣರ ಕೆಲಸಗಳೆಂದು ಹಿಂದೆಯೊಮ್ಮೆ ಹೇಳಿದ್ದೇವೆ. ತಮ್ಮ ಈ ಸಾತ್ವಿಕ ಕರ್ಮಗಳನ್ನು ಬಿಟ್ಟು ರಾಜಸಪ್ರಧಾನವಾದ ಕ್ಷಾತ್ರಕರ್ಮಗಳನ್ನು ಕೈಕೊಳ್ಳುವಂಥ ಪ್ರಸಂಗ ಒದಗಿದ್ದರಿಂದ, ಬ್ರಾಹ್ಮಣರು ತಮ್ಮ ದರ್ಭೆ, ಪವಿತ್ರಿಕಾ, ರುದ್ರಾಕ್ಷಮಾಲಾ, ಕಿವಿಟೊಪ್ಪಿಗೆ, ಗೋಮುಖ ಇವುಗಳನ್ನು ಚಲ್ಲಿ ಕೊಟ್ಟು ಕ್ಷತ್ರಿಯರ ಶಸ್ತ್ರಗಳನ್ನು ಕೈಯಲ್ಲಿ ಧರಿಸಿದರು. ಹೀಗೆ ಧರ್ಮಾಂತರಮಾಡಲಿಕ್ಕೆ ಮುಸಲ್ಮಾನರಿಂದೊದಗಿದ ಧರ್ಮಚ್ಛಲವೂ, ಸ್ವಾತಂತ್ರ್ಯನಾಶವೂ ಕಾರಣವಾದವು. ಆ ಕಾರಣಗಳ ನಿವಾರಣಕ್ಕಾಗಿ ಬ್ರಾಹ್ಮಣರು, ಮರಾಟರು, ಪ್ರಭುಜನರು ಕೂಡಿ ಮೊದಲು ಮಹಾರಾಷ್ಟ್ರ ರಾಜ್ಯದ ಪ್ರಾಣ ಪ್ರತಿಷ್ಠಾಪನೆಯನ್ನು ಮಾಡಿದರು. ಆಗ ಇಡಿಯ ಮಹಾರಾಷ್ಟ್ರದಲ್ಲೆಲ್ಲ ವೀರಶ್ರಿಯಸಂಚಾರವಾಗಿ, ಎಲ್ಲಕಡೆಯಲ್ಲಿ ಬ್ರಾಹ್ಮಣವೀರರು, ಪ್ರಭುವೀರರು, ಮರಾಠಾವೀರರು; ಬ್ರಾಹ್ಮಣಮುತ್ಸದ್ಧಿಗಳು, ಪ್ರಭುಮುತ್ಸದ್ಧಿಗಳು, ಮರಾಟಾಮುತ್ಸದ್ದಿಗಳು ಬೈಲಿಗೆ ಬಂದರು. ಈ ಪುರುಷವರ್ಗದಂತೆ ಆಯಾ ಜಾತಿಯ ಸ್ತ್ರೀವರ್ಗದಲ್ಲಿಯೂ ಆಗಿನ ಕಾಲದಲ್ಲಿ ಸ್ವಧರ್ಮಾಭಿಮಾನ, ಸ್ವದೇಶಾಭಿ ಮಾನ, ಸ್ವಕುಲಾಭಿಮಾನಗಳು ಜಾಗ್ರತವಾಗಿದ್ದವು. ಅವರು ಎಷ್ಟೋ ಪ್ರಸಂಗದಲ್ಲಿ ಉತ್ಸಾಹ ಜನಕವಾದ ಉಪದೇಶದಿಂದಲೂ, ತ್ವೇಷೋತ್ಪಾದಕ ಉಪಹಾಸದಿಂದಲೂ, ಅಂಗಲ ಸೂಚಕವಾದ ಅಪಮಾನದಿಂದಲೂ ತಮ್ಮ ಪತಿ–ಪುತ್ರಾದಿಕರ ಬಾಹುಗಳನ್ನು ಸ್ಫುರಣ ಗೊಳಿಸಿದರು! ಹೀಗೆ ವೀರರಸವು ಸಾಕ್ಷಾತ್ತಾಗಿ ಮಹಾರಾಷ್ಟ್ರದಲ್ಲಿ ಅವತರಿಸಿರುವಾಗ, ಮೇಲೆ ಹೇಳಿದ್ದ ಇಬ್ಬರು ಬ್ರಾಹ್ಮಣವೀರರು ಜನ್ಮವೆತ್ತಿದವರಾಗಿದ್ದರು. ಅವರು ತಮ್ಮ ತಂದೆ, ಅಜ್ಜ ಮುತ್ತಜ್ಜ ಕಕ್ಕ, ಬಂಧುಗಳು, ಬೇರೆ ಸರದಾರರು ಇವರ ಸಿಪಾಯಿಗಿರಿಯನ್ನು ಪ್ರತ್ಯಕ್ಷ ನೋಡಿದ್ದರು– ಕಿವಿಯಿಂದ ಕೇಳಿದ್ದರು–ಬಖರಗಳಲ್ಲಿ ಓದಿದ್ದರು; ಅಂದಬಳಿಕ ಅವರು ಸ್ವತಃ ರಣಶೂರ ರಾದದ್ದೇನಾಶ್ಚರ್ಯವು?

ಪ್ರತಿ ಒಬ್ಬ ರಾಷ್ಟ್ರಹಿತಕಾಂಕ್ಷಿಯು, ತನ್ನ ರಾಷ್ಟ್ರದ ಉದ್ಧಾರಕ್ಕಾಗಿಯೂ, ಅದರ ಗೌರವ ರಕ್ಷಣಕ್ಕಾಗಿಯೂ ಯಾವಾಗಲೂ ಯತ್ನಿಸುತ್ತಿರುವದು ತನ್ನ ಜನ್ಮದ ಅವಶ್ಯವಾದ ಕರ್ತವ್ಯವಾಗಿರುತ್ತದೆಂದು ತಿಳಿಯತಕ್ಕದ್ದು. ಅಂಥ ಪವಿತ್ರಕರ್ತವ್ಯವನ್ನು ನಮ್ಮ ಶ್ರೀಮಂತ ಸದಾಶಿವರಾವಭಾವುವೂ, ವಿಶ್ವಾಸರಾಯನೂ ಬಹುಮಟ್ಟಿಗೆ ಜರುಗಿಸಿದರೆಂದು ಹೇಳಬಹುದು. ಅವರು ಯುದ್ಧದಲ್ಲಿ ಅಪಜಯಪಟ್ಟರೂ, ಅವರ ಅಖಂಡವಾದ ವೀರಶ್ರೀಯೂ, ಪ್ರತಾಪವೂ ಜಯಶಾಲಿಯಾಗಿಯೇ ಉಳಿದಿರುವವು; ಆದ್ದರಿಂದಲೇ, ಅವನ್ನು ಕವಿ

ಗಳೂ, ಬಖರಕಾರರೂ, ಶಾಹಿರರೂ ತಮ್ಮ ಗ್ರಂಥಗಳಲ್ಲಿ ವರ್ಣಿಸಿರುತ್ತಾರೆ. ಅವುಗಳಲ್ಲಿ ಎರಡನ್ನು ಮಾತ್ರ ಇಲ್ಲಿ ಉಲ್ಲೇಖಿಸಿ ಈ ದುಃಖದಾಯಕವಾದರೂ, ಅಭಿಮಾನಾಸ್ಪದವಾದ ಪ್ರಕರಣವನ್ನು ಮುಗಿಸುವೆವು. ಈ ಇಬ್ಬರು ವೀರರ ಸಂಬಂಧದಿಂದ ಪುರುಷೋತ್ತಮ ಕವಿಯು ತನ್ನ ಶಿವಕಾವ್ಯವೆಂಬ ಗ್ರಂಥದ ಹದಿನಾಲ್ಕನೆಯ ಚಮತ್ಕಾರದಲ್ಲಿ ವರ್ಣಿಸಿದ್ದು ಹ್ಯಾಗಂದರೆ–''ವಿಶ್ವಾಸರಾಯನು ಗುಂಡುತಾಕಿ ಬಿದ್ದಾಗ, ಆತನು ಶ್ವಾಸರಹಿತನಾದನು ಕೂಡಲೆ ಎಲ್ಲರ ಶ್ವಾಸಗಳು ವ್ಯಥೆಗೊಂಡದ್ದರಿಂದ ಆ ವೀರನ ವಿಶ್ವಾಸವೆಂಬ ನಾಮ ಸಾರ್ಥಕವಾಯಿತು. ವಿಶ್ವಾಸನು ಗತಪ್ರಾಣನಾದಕೂಡಲೆ ಸುತ್ತಲಿನ ವೀರರು ಬದುಕಿದ್ದರೂ, ಚಿತ್ರಪಟದೊಳಗಿನ ವೀರರಂತೆ ನಿರ್ಜೀವರಾಗಿ ತೋರಹತ್ತಿದರು. ಕರ್ಣನಂತೆ ಪರಾಕ್ರಮಶಾಲಿಯಾದ ಭಾವು ಸಾಹೇಬನು ವಿಶ್ವಾಸರಾಯನ ಮರಣವಾರ್ತೆ ಯನ್ನು ಕೇಳಿದಕೂಡಲೆ ಮೂರ್ಛಿತನಾದನು. ಆತನಿಗಾದ ದುಃಖವನ್ನು ವರ್ಣಿಸುವ ಯೋಗ್ಯತೆಯು ಬ್ರಹ್ಮದೇವನಿಗೂ ಇಲ್ಲದಿರುವಾಗ, ನಾವೇನು ವರ್ಣಿಸುವೆವು? ವೀರಮಣಿ ಭಾವುಸಾಹೇಬನು ಮೂರ್ಛೆತಿಳಿದೆದ್ದು ಅಶ್ವಾರೂಢ ನಾಗಿ ಕೈಯಲ್ಲಿ ಖಡ್ಗಧರಿಸಿ ಮನಸ್ಸಿನಲ್ಲಿ–''ವಿಶ್ವಾಸನು ಚಿಕ್ಕವನಾದರೂ ಅಭಿಮನ್ಯುವಿನಂತೆ ಪ್ರೌಢಪ್ರತಾಪವನ್ನು ಪ್ರಕಟಿಸಿ ದೇವಲೋಕಕ್ಕೆ ತೆರಳಿದನು. ಈ ವರ್ತಮಾನವನ್ನು ಕೇಳಿ ಅತ್ತ ನಾನಾಸಾಹೇಬನೂ, ಗೋಪಿಕಾ ಅತ್ತಿಗೆಯೂ ದೇಹವಿಡುವರು; ಆದ್ದರಿಂದ ನಾನೂ ಆ ಹಾದಿ ಯನ್ನು ಹಿಡಿಯತಕ್ಕದ್ದು.'' ಎಂದು ವಿಚಾರಿಸಿ, ಶತ್ರುರೂಪವಾದ ಅಗ್ನಿಯಲ್ಲಿ ಪ್ರವೇಶಿ ಸಿದನು. ಆಗ ಆ ಧೀರವೀರನು ಸಮುದ್ರದಲ್ಲಿ ತಿಮಿಂಗಿಲವು ಸಂಚರಿಸುವಂತೆ ಅಶ್ವಾರೂಢ ನಾಗಿ ಶತ್ರುಸೈನ್ಯದಲ್ಲಿಸಂಚರಿಸಿ, ಶತ್ರುಗಳ ಶಿರಚ್ಛೇದ ಮಾಡುತ್ತ ಮಾಡುತ್ತ ದೇವಲೋಕಕ್ಕೆ ಹೊರಟುಹೋದನಂತೆ! ಆತನ ಬಳಿಯಲ್ಲಿಯೇ ನಿಂತು ಯುದ್ಧಮಾಡುವ ವೀರರಿಗೆ ಆತನ ದೇಹವು ಕಣ್ಣಿಗೆ ಬೀಳಲಿಲ್ಲವೆಂದ ಬಳಿಕ, ಅದು ಸುಳ್ಳೆಂದು ಹ್ಯಾಗೆ ಅನ್ನಬೇಕು?

ಸುಜಾಉದ್ದೌಲನ ಮುಖ್ಯದಿವಾಣನು ಕಾಶೀರಾಜಪಂಡಿತನೆಂಬದನ್ನು ವಾಚಕರು ಬಲ್ಲರು. ಆ ಪಂಡಿತನು ತನ್ನ ಫಾರಶೀಬಖರಿನಲ್ಲಿ ಈ ಪ್ರಸಂಗವನ್ನು ಹೀಗೆ ವರ್ಣಿಸಿ ರುವನು—''ಈ ಅತಿರಭಸದ ಕಾಳಗವು ಒಂದು ತಾಸಿನವರೆಗೆ ನಡೆಯಿತು. ಆಗ ಉಭಯ ದಳದವರೂ ಖಡ್ಗ–ಬರ್ಚಿ–ಭಾಲೆಗಳಿಂದ ಕಾದಿದರು. ಕಡೆಗೆ ಕಠಾರಿ, ಜಂಬಿಯಗಳನ್ನು ಸಹ ಉಪಯೋಗಿಸಿದರು. ಎಂಟುವರೆ ತಾಸಿನ ಸುಮಾರಿನಲ್ಲಿ ವಿಶ್ವಾಸರಾಯನಿಗೆ ಗಾಯ ವಾಗಲು, ಆತನು ಕುದುರೆಯಿಂದ ಇಳಿದನು. ಈ ಸುದ್ದಿಯನ್ನು ಕೇಳಿದಕೂಡಲೆ ಭಾವು ಸಾಹೇಬನು ವಿಶ್ವಾಸರಾಯನನ್ನು ಎತ್ತಿ ಆನೆಯಮೇಲೆ ಕುಳ್ಳಿರಿಸಲು ಆಜ್ಞಾಪಿಸಿದನು. ಮುಂದೆ ಅರ್ಧತಾಸಿನವರೆಗೆ ಭಾವುಸಾಹೇಬನು ನೆಲೆಯಿಲ್ಲದ ಪೌರುಷದಿಂದ ಕಾದಿದನು. ವಿಶ್ವಾಸ ರಾಯನ ಹೆಣವನ್ನು ಅಂಬಾರಿಯಿಂದ ಇಳಿಸಿ ಬಾದಶಹನು ನೋಡಿದನು. ಆಗ ಆತನ ಸೌಂದರ್ಯದಿಂದ ಪ್ರತಿ ಒಬ್ಬನಿಗೆ ಕೌತುಕವಾಯಿತು. ಹೆಣವು ಕುರೂಪವಾಗಿರದೆ ನಿದ್ದೆಹತ್ತಿದ ಮನುಷ್ಯನಂತೆ ತೋರುತ್ತಿತ್ತು, ಆತನ ಹೆಗಲಿಗೆ ಖಡ್ಗದ, ಹಾಗು ಕಣ್ಣಿನ ಮೇಲುಮಗ್ಗಲು ಬಾಣದ ಸಣ್ಣ ಗಾಯಗಳಾಗಿದ್ದವು. ಸದಾಶಿವರಾವಭಾವುವು ಚಿಕ್ಕಂದಿನಿಂದ ರಾಜ್ಯವ್ಯವಸ್ಥೆಯ

ಶಿಕ್ಷಣವನ್ನು ರಾಮಚಂದ್ರ ಬಾಬಾಶೇಣವಿ ಎಂಬವನಿಂದ ಪಡೆದಿದ್ದನು. ಬೆಳಗಿನಿಂದ ಮಧ್ಯರಾತ್ರಿಯವರೆಗೆ ಆತನು ಸರಕಾರಿಯ ಕೆಲಸಮಾಡುತ್ತಿದ್ದನು. ತಾರತಮ್ಯ, ಅನುಭವ, ಸಾಮರ್ಥ್ಯ ಈ ಗುಣಗಳಿಂದ ಭಾವುವು ಜನರನ್ನು ತನ್ನವರನ್ನಾಗಿ ಮಾಡಿಕೊಂಡಿದ್ದನು. ಆತನ ಸಾಮರ್ಥ್ಯದಲ್ಲಿಯೂ, ಜಾಣತನದಲ್ಲಿಯೂ ಜನರ ನಂಬಿಗೆಯಿತ್ತು ದಕ್ಷಿಣದೊಳಗಿನ ಎಷ್ಟೋ ಮಹತ್ವದ ಕೆಲಸಗಳು ಆತನಿಂದ ಕೊನೆಗೊಂಡಿದ್ದವು. ಈ ಪಾನಿಪತದ ಯುದ್ಧದ ಪೂರ್ವದಲ್ಲಿ ಭಾವೂಸಾಹೇಬನು ಯಾವಾಗಲೂ ಒಳ್ಳೆಯ ತಿಳುವಳಿಕೆಯುವನಾಗಿಯೂ, ಹೆಜ್ಜೆಹೆಜ್ಜೆಗೆ ಕಾರ್ಯದಕ್ಷನಾಗಿಯೂ ಇದ್ದದ್ದು ಕಂಡುಬರುತ್ತಿತ್ತು

## ಕ್ರೂರತನದ ಪರಮಾವಧಿಯು!

ಮರಾಟರ ಪರಾಜಯವಾದ ನಂತರ ಭಯಭೀತರಾಗಿ ಓಡಿಹೋದ ಕೆಲವರು ಪಾನಿ ಪತದೊಳಗಿನ ತಮ್ಮ ಭಾವಣಿಯನ್ನು ಪುನಃ ಹೊಕ್ಕರು. ಹಾಗೆ ಮಾಡದೆ ಅವರು ದಕ್ಷಿಣದ ಹಾದಿಯನ್ನು ಹಿಡಿದು ಹೋಗಿದ್ದರೆ, ಅವರಲ್ಲಿ ಕೆಲವರಾದರೂ ಜೀವದಿಂದ ಉಳಿಯಬಹು ದಾಗಿತ್ತು; ಆದರೆ ಹಾಗೆ ಮಾಡದೆ ಅವರು ಛಾವಣಿಯ ಹೊಕ್ಕದ್ದರಿಂದ ತೋಳಗಳ ಹಿಂಡಿಗೆ ಅನಾಯಾಸವಾಗಿ ಕುರಿಗಳನ್ನು ದಡ್ಡಿಯಲ್ಲಿ ತರುಬಿ ಇಟ್ಟಂತಾಯಿತು! ದುರಾಣಿಗಳು ಓಡುವ ಮರಾಟರನ್ನು ಬೆನ್ನಟ್ಟಿಹೋಗಿ ಛಾವಣಿಯನ್ನು ಮುತ್ತಿದರು. ಕಾದಿ ದಣಿದು ಹೆಣವಾದದ್ದ ರಿಂದ ಆಗ ರಾತ್ರಿ ಅವರು ಮರಾಟರ ಗೊಡವಿಗೆ ಹೋಗಲಿಲ್ಲ, ಬೆಳತನಕ ಸುಮ್ಮನೆಬಿಟ್ಟರು. ಒಳಗಿನ ಮರಾಟರು ಬೆದರಿ ಹೌಹಾರಿ ಹೋಗಿದ್ದರು. ಹೇಗಾದರೂ ರಾತ್ರಿಯು ಕಳೆದು ಹೋಗಿ ಬೆಳಗಾಯಿತು. ಸೂರ್ಯೋದಯವಾಗುತ್ತಿರಲು, ಶತ್ರುಗಳು ಒಳಗಿನವರನ್ನು ಸೆರೆ ಹಿಡಿದರು. ದುರಾಣಿಗಳಿಗೆ ಲಕ್ಷಾವಧಿ ರೂಪಾಯಿಗಳ ಸುಲಿಗೆಯು ಸಿಕ್ಕಿತು. ಶಸ್ತ್ರಗಳು, ವಸ್ತ್ರ ಗಳು, ವಾದ್ಯಗಳು, ಕುದುರೆಗಳು, ಆನೆಗಳು, ಅಮೌಲ್ಯವಾದ ಅಲಂಕಾರಗಳು, ಬೆಳ್ಳಿ–ಬಂಗಾರದ ಪಾತ್ರೆಗಳು ಮೊದಲಾದವುಗಳನ್ನು ನೆಗವಿ, ದುರಾಣಿಯ ದಂಡಾಳುಗಳು ಕುಬೇರ ರಾದರು. ಸೆರೆಸಿಕ್ಕವರಲ್ಲಿ ಸಾವಿರಾರು ಜನರು ಸಿಪಾಯಿಗಳಿದ್ದರು. ಬಾಜಾರುಬುಣಗಿನವರ ಸಂಖ್ಯೆಯು ವಿಶೇಷವಾಗಿತ್ತು, ತಮಗೆ ಬೇಕಾದ ದಾಸ–ದಾಸಿಯರನ್ನೂ, ಹೆಂಗಸರನ್ನೂ ತಮ್ಮೊಳಗೆ ಹಂಚಿಕೊಂಡು, ಉಳಿದವರನ್ನು ದನಗಳಡಾವಣಿಯಂತೆ ಸಾಲಾಗಿ ಡಾವಣಿ ಹೊಡೆದು ನಿಲ್ಲಿಸಿದರು. ಡಾವಣಿಯ ಸಾಲುಗಳು ಒಂದರಹಿಂದೊಂದರಂತೆ ನಿಂತಿದ್ದವು. ಆ ಬಳಿಕ ಕೇಳುವದೇನು? ಅಲ್ಲಿ ಅಂತಕನ ಕೋಲಾಹಲಕ್ಕೆ ಆರಂಭವಾಯಿತು. ದಯಾಶೂನ್ಯ ರಾದ ದುರಾಣಿಯ ದಂಡಾಳುಗಳು ತಮ್ಮ ತೀಕ್ಷ್ಣ ಖಡ್ಗಗಳಿಂದ ಸಾಲುಹಿಡಿದು ಮರಾಟರ ರುಂಡ ಗಳನ್ನು ಚಂಡಾಡುತ್ತ ಬಂದರು. ಹರ ಹರ! ಇದು ರಾಕ್ಷಸ ಕೃತಿಯಲ್ಲದೆ ಮನುಷ್ಯ ಕೃತಿಯೆ ನಿಸಬಹುದೇ? ಹೀಗೆ ಮೈಗೆಮುಳ್ಳುಬರುವ ಕ್ರೂರಕೃತ್ಯಗಳನ್ನು ಬರಿಯ ದಂಡಾಳುಗಳೇ

ಮಾಡಿದರೆಂತಲ್ಲ, ಸ್ವತಃ ಅಹಮ್ಮದಶಹನು ಅತ್ಯಂತ ಕ್ರೌರ್ಯವನ್ನು ಪ್ರಕಟಿಸಿ, ತನ್ನ ವಿಜಯವನ್ನು ಕಲಂಕಿತವಾಗಿ ಮಾಡಿಕೊಂಡನು! ಆತನು ತನ್ನ ಕೆಂಪುಡೇರೆಯ ಮುಂದೆ ತನ್ನ ಸರದಾರರೊಡನೆ ಪ್ರಶಸ್ತವಾಗಿ ಕುಳಿತುಕೊಂಡು, ಮರಾಟರ ತಲೆಗಳನ್ನು ತಂದವರಿಗೆ ಇನಾಮು ಕೊಡಹತ್ತಿದ್ದನು! ಮಟ್ಟಿಗೆ ಮಟ್ಟಿ ತಲೆಗಳು ಬಂದುಬಿದ್ದು ಅವುಗಳದೊಂದು ಪರ್ವತವೇ ಉಂಟಾಯಿತು! ಇನಾಮಿನ ಆಶೆಯಿಂದ ದುರಾಣಿಗಳು ರಣದಲ್ಲಿ ಮಡಿದು ಹೋಗಿದ್ದವರ ರುಂಡಗಳನ್ನೂ ಚಂಡಾಡಿ ತರಹತ್ತಿದರು!

ಹೀಗೆ ಅನರ್ಥವು ನಡೆದಿರುವಾಗ ಕೆಲವರು ದುರಾಣಿಸೈನಿಕರು ಒಂದು ಆನೆಯನ್ನು ಸಾಗಿಸಿಕೊಂಡ ಬಾದಶಹನ ಬಳಿಗೆಬಂದರು. ಅದರ ಅಂಬಾರಿಯಲ್ಲಿ ವಿಶ್ವಾಸರಾಯನ ಹೆಣವಿತ್ತು, ಅದರಮೇಲಿನ ವಸ್ತ್ರಾಭರಣಗಳು ಇದ್ದಕ್ಕಿದ್ದಹಾಗೆಯೇ ಇದ್ದವು. ಆ ಹೆಣವನ್ನು ಇಳಿಸಿಕೊಂಡು ಬಾದಶಹನಬಳಿಗೆ ಒಯ್ದರು. ಆಗ ಅದನ್ನು ನೋಡುವದಕ್ಕಾಗಿ ಡೇರೆಯ ಮುಂದುಗಡೆಯಲ್ಲಿ ಜನರ ಸಂದಣಿಯಾಯಿತು. ಆ ರಾಜಪಿಂಡದ ಮುಖದವರ್ಚಸ್ಸನ್ನೂ, ಸೌಂದರ್ಯವನ್ನೂ ನೋಡಿ ಬಾದಶಹನು ಮೊದಲಾಗಿ ಎಲ್ಲರು ಕೌತುಕಪಟ್ಟರು. ಸತ್ತು ಎರಡು ದಿನಗಳಾಗಿದ್ದರೂ ಹೆಣದವೋರೆ ಕೆಟ್ಟದ್ದಿಲ್ಲ! ನಿದ್ದೆಹೋದ ಪುರುಷನ ಮುಖದಂತೆ ಆ ಬಾಲರಾಜನ ಮುಖವು ಸತೇಜವಾಗಿ ಒಪ್ಪುತ್ತಿತ್ತು! ಹೆಗಲಿನ, ಹಾಗೂ ಕಣ್ಣು ಹತ್ತರದ ಗಾಯಗಳ ಹೊರತು ಬೇರೆಕಡೆಯಲ್ಲಿ ರಕ್ತದ ಹನಿಯುಕೂಡ ಬಿದ್ದಿದ್ದಿಲ್ಲ. ಆಗ ಬಾದಶಹನು ತನ್ನವರನ್ನು ಕುರಿತು ಈ ಕಾಫರರಾಜನ ಹೆಣವನ್ನು ಒಣಗಿಸಿ ಮಸಾಲೆತುಂಬಿ ಕಾಬೂಲಿಗೆ ತೆಗೆದುಕೊಂಡು ನಡೆಯಿರಿ;'' ಎಂದು ಹೇಳಿದನು; ಆದರೆ ಬಾದಶಹನ ಮುಖ್ಯವಜೀರನಾದ ಶಹಾವಲ್ಲೀಖಾನನೂ, ಸೂಜಾ ಉದ್ದೌಲನೂ, ನಜೀಬಉದ್ದೌಲನೂ ಅದಕ್ಕೆ ಸಮ್ಮತಿಸಲಿಲ್ಲ. ಸುಜಾನು ಮುಖ್ಯವಜೀರನ ಬೆಂಬಲದಿಂದ ಬಾದಶಹನನ್ನು ಕುರಿತು—''ಖಾವಿಂದ, ಶತ್ರುತ್ವದ ಮರ್ಯಾದೆಯು ಶತ್ರುವು ಮರಣ ಹೊಂದುವವರೆಗೆ ಇರತಕ್ಕದ್ದು. ಜಯವನ್ನು ಸಂಪಾದಿಸಿದ ಬಳಿಕ ಶತ್ರುವು ಯಾವಧರ್ಮ ದವನಿದ್ದರೂ ಅವನ ಧರ್ಮದಪ್ರಕಾರ ಅವನ ಶವದ ವ್ಯವಸ್ಥೆಮಾಡಿಸುವದು ನಮ್ಮ ಹಿಂದುಸ್ಥಾನದ ಜನರ ಸಂಪ್ರದಾಯವಿರುವದು. ಹೀಗೆ ಮಾಡದಿದ್ದರೆ ಜಯಶಾಲಿಗೆ ಅಪಕೀರ್ತಿಯು ಬರುವದು; ಆದ್ದರಿಂದ ಈ ಹೆಣವನ್ನು ಹಿಂದು ಜನರಿಗೆ ಒಪ್ಪಿಸತಕ್ಕದು ಎಂದು ಹೇಳಿಕೊಂಡನು ಕಡೆಗೆ ಎಲ್ಲರ ಹೇಳಿಕೆಯಿಂದ ಬಾದಶಹನು ಒಡಂಬಟ್ಟು, ವಿಶ್ವಾಸರಾಯನ ಶವವನ್ನು ಕಾಶೀರಾಜಪಂಡಿತನಿಗೆ ಒಪ್ಪಿಸಿದನು. ಆಗ ಕಾಶೀರಾಜನು ಹಿಂದೂಧರ್ಮದಂತೆ ಆ ಪ್ರೇತಕ್ಕೆ ಗಂಗೋದಕದ ಸ್ನಾನ ಮಾಡಿಸಿ ಗಂಧದ ಕಟ್ಟಿಗೆಗಳ ಚಿತೆಯಲ್ಲಿ ವಿದ್ಯುಕ್ತವಾಗಿ ಅದರ ದಹನಮಾಡಿಸಿದನು. ವಿಶ್ವಾಸರಾಯನ ಹೆಂಡತಿಯಾದ ಲಕ್ಷ್ಮೀಬಾಯಿಯ ಗತಿಯೇನಾಯಿತೆಂಬದನ್ನು ನಾವು ಹಿಂದಕ್ಕೆ ಹೇಳಿರುವೆವು. ಅಂಬಾರಿಯಿಂದ ಕೆಳಗೆ ಹಾರಿಕೊಂಡ ಆಕೆಯ ಗೊತ್ತು ಹತ್ತಲೇ ಇಲ್ಲ!

ಭಾವುಸಾಹೇಬನು ಶತ್ರುಸೈನ್ಯವನ್ನು ಹೊಕ್ಕಬಳಿಕ ಆತನ ಗತಿಯೇನಾಯಿತೆಂಬದು ನಿಶ್ಚಯಾತ್ಮಕವಾಗಿ ಯಾರಿಗೂ ಗೊತ್ತಾಗಲಿಲ್ಲ. ಒಬ್ಬ ದುರಾಣಿಯು ಆತನ ದಿಂಡವನ್ನು ತಂದು

ಬಾದಶಹನಿಗೆ ಒಪ್ಪಿಸಿದನೆಂದು ಕಾಶೀರಾಜಪಂಡಿತನು ತನ್ನ ಬಖರಿನಲ್ಲಿ ಬರೆದಿಟ್ಟಿರುವನು; ಆದರೆ ಆ ಬರೆದದ್ದನ್ನು ನಿಜವೆಂದು ನಂಬಲಾಗುವದಿಲ್ಲ; ಯಾಕಂದರೆ, ಉತ್ತಮಾಂಗವಾದ ಶಿರಸ್ಸು ಸಿಕ್ಕಿತೆಂದು ಯಾರೂ ಎಲ್ಲಿಯೂ ಹೇಳಿರುವದಿಲ್ಲ. ಅಂದಬಳಿಕ ರುಂಡವಿಲ್ಲದ ದಿಂಡ ವನ್ನು ನೋಡಿ ಅದು ಬಾವುಸಾಹೇಬನದೇ ಎಂದು ಹ್ಯಾಗೆ ನಿರ್ಧರಿಸಬೇಕು? ಈ ಸಂಬಂಧ ದಿಂದ ಕಾಶೀರಾಜಪಂಡಿತನು ಬರೆಯುವದೇನಂದರೆ ''ತಲೆಯಿಲ್ಲದ ಒಂದು ದಿಂಡವನ್ನು ಶ್ರೀಧರಪಂತ ವಕೀಲನಿಗೂ, ಬೇರೆ ಜನರಿಗೂ ತೋರಿಸಿದರು. ಅದರ ತೊಡೆಯಮೇಲೆ ಒಂದು ರೂಪಾಯಿ ಯಷ್ಟು ಅಗಲವಾದ ಒಂದು ಕಪ್ಪು ಕಲೆಯಿತ್ತು. ಅದರ ಬೆನ್ನಮೇಲೆ ಕಠಾರಿಯ ಗಾಯದ ಗುರುತು ಇತ್ತು, ಅದರ ಅಂಗಾಲಲ್ಲಿ ಪದ್ಮಾಕೃತಿಯಾದ ಸಾಮುದ್ರಿಕ ರೇಷೆಯಿತ್ತು, ಅದರ ವಯಸ್ಸು ೩೫ ವರ್ಷದ್ದಿದ್ದು, ಮೈಕಟ್ಟು ದಷ್ಟ-ಪುಷ್ಟವಾಗಿತ್ತು, ಅದರ ಮೊಣ ಕಾಲು, ಅಂಗೈ, ಹಣೆ ಇವುಗಳಿಗೆ ಸೂರ್ಯನಮಸ್ಕಾರದ ದಡ್ಡುಗಳು ಬಿದ್ದಿದ್ದವು. ದಿಂಡದ ಬಳಿಯಲ್ಲಿ ಕೆಲವು ದೊಡ್ಡ ದೊಡ್ಡ ಮುತ್ತುಗಳು ಬಿದ್ದಿದ್ದು, ಅವುಗಳ ಒಂದೊಂದರ ಬೆಲೆಯು ಐದುನೂರು ರೂಪಾಯಿಗಳಾಗ ಬಹುದು. ಈ ಯಾವತ್ತು ಗುರುತುಗಳನ್ನು ನೋಡಿ, ನೋಡುವವರ ಕಣ್ಣುಗಳಲ್ಲಿ ನೀರು ಬಂದವು.'' ಪಂಡಿತರಾಜನ ಈ ಲೇಖವು ಸುಳ್ಳೆನ್ನುವ ಸಾಹಸಕ್ಕೆ ನಾವು ಹೋಗುವದಿಲ್ಲ; ಆದರೆ ಶಿರಸ್ಸನ್ನು ನೋಡದೆ ಯಾವ ಮಾತನ್ನೂ ನಿಶ್ಚಯಿ ಸಲಾಗುವದಿಲ್ಲ. ಭಾವುಸಾಹೇಬನ ಶಿರಸ್ಸು ಸಿಕ್ಕಿತೆಂದು ಯಾವ ಬಖರಕಾರರೂ ಬರೆದಿರುವ ದಿಲ್ಲ. ಆಗಿನ ಮರಾಟರ ದಂಡಿನಲ್ಲಿ ಬೆಲೆಯುಳ್ಳ ಅಲಂಕಾರಗಳನ್ನು ಧರಿಸಿದವರೂ, ಕಠಾರಿಯ ಗಾಯದ ಗುರುತುಳ್ಳವರೂ, ಮೂವತ್ತೈದು ವರ್ಷದ ವಯಸ್ಸಿನವರೂ, ಕೈ-ಕಾಲುಗಳಲ್ಲಿ ಉತ್ತಮ ಸಾಮುದ್ರಿಕ ಉಳ್ಳವರೂ, ಸೂರ್ಯ ನಮಸ್ಕಾರದ, ಹಾಗೂ ತಾಲೀಮುಮಾಡಿದ ದಡ್ಡು ಬಿದ್ದವರೂ ಹಲವರು ಮರಾಠಾ ಬ್ರಾಹ್ಮಸರದಾರರು ರಣಭೂಮಿಯಲ್ಲಿ ಬಿದ್ದು ಮಣ್ಣು ತಿನ್ನುತ್ತಲಿದ್ದರು. ಅವರಲ್ಲಿ ಯಾರಾದ ರೊಬ್ಬರ ದಡವು ಯಾಕಾಗಿರಲಿಕ್ಕಿಲ್ಲ? ಭಾವು ಸಾಹೇಬನ ಹೆಣವು ಸಿಕ್ಕಿತೆಂದು ಮರಾಟರ ಕಡೆಯ ಸಾಕ್ಷಿಗಳಿಲ್ಲದ್ದರಿಂದ, ಭಾವುಸಾಹೇಬನು ರಣದಲ್ಲಿ ಮರಣಹೊಂದಲಿಲ್ಲವೆಂತಲೂ, ಎಲ್ಲಿಯಾದರೂ ಗುಪ್ತರೀತಿಯಿಂದ ಇದ್ದುಕೊಂಡು ಪುನಃ ಸೈನ್ಯಕೂಡಿಸಿಕೊಂಡು, ಗತವೈಭವವನ್ನೂ, ಕೀರ್ತಿಯನ್ನೂ ಪುನಃ ಸಂಪಾದಿಸುವನೆಂತಲೂ ಆಗಿನ ಜನರು ಅನ್ನುತ್ತಿದ್ದರು.

ಭಾವುಸಾಹೇಬನ ಹೆಂಡತಿಯಾದ ಪಾರ್ವತೀಬಾಯಿಯೂ, ನಾನಾಫಡಣವೀಸನ ಹೆಂಡತಿಯೂ, ತಾಯಿಯೂ ಸಮರಭೂಮಿಯಿಂದ ಬಹು ಪ್ರಯಾಸದಿಂದ ಜಾರಿಹೋಗಿ ಬೇರೆ ಬೇರೆ ಮಾರ್ಗಗಳಿಂದ ದಕ್ಷಿಣದ ಹಾದಿಯನ್ನು ಹಿಡಿದರು. ಭಾವುಸಾಹೇಬನು ಶತ್ರು ಸೈನ್ಯವನ್ನು ಹೊಕ್ಕಾಗ ಹೊತ್ತು ಮುಣುಗುತ್ತ ಬಂದಿತ್ತು, ಧೂಳಮುಸುಕಿ ಕತ್ತಲುಬಿದ್ದು ಒಬ್ಬರ ಮೋರೆಯು ಒಬ್ಬರಿಗೆ ಕಾಣದಾಯಿತು. ಮರಾಟರು ರಣಭೂಮಿಯಿಂದ ಓಡಹತ್ತಿದರು. ಆಗ ತಮ್ಮ ಪರಿಣಾಮವು ನೆಟ್ಟಗಾಗದೆಂದು ತಿಳಿದು ಈ ಮೂವರು ಸ್ತ್ರೀಯರೂ ಆನೆಯ ಮೇಲೆ ಹಾರಿ ಓಡಹತ್ತಿದರು. ಪಾಪ! ಪಾರ್ವತೀಬಾಯಿಯು ಅಗರ್ಭಶ್ರೀಮಂತಳು. ಗಂಡನ ಮನೆಯೂ ಶ್ರೀಮಂತರದು; ದೇವರಗುಡಿಗೆ ಹೋಗುವಾಗ ಆಕೆಗೆ ಪಲ್ಲಕ್ಕಿಬೇಕಾಗುತ್ತಿತ್ತು

ರೇಶಿಮೆಯಂಥ ಜೋಡು ಮೆಟ್ಟಿದ ಹೊರತು ಆಕೆಯು ನೆಲದಮೇಲೆ ಕಾಲು ಇಡುತ್ತಿದ್ದಿಲ್ಲ. ಇಂಥ ಹೆಣ್ಣುಮಗಳ ಗತಿಯು ಕಲ್ಲು-ಮುಳ್ಳುಗಳಲ್ಲಿ ಓಡಿಹೋಗಬೇಕಾದರೆ ಏನು ಆಗಿರಬಹುದೆಂಬದನ್ನು ವಾಚಕರೇ ತರ್ಕಿಸಬೇಕು. ಮೊದಲು ಆಕೆಯು ಕಾಲಲ್ಲಿ ಜೋಡು ಹಾಕಿಕೊಂಡು ಓಡಹತ್ತಿದಳು; ಆದರೆ ಅವು ಎಷ್ಟು ಹೊತ್ತು ತಡೆದಾವು? ಸ್ವಲ್ಪ ಹೊತ್ತಿನಲ್ಲಿ ಹರಿದು ಚೂರುಚೂರಾದವು. ಬಳಿಕ ಆ ಹೆಣ್ಣುಮಗಳು ತನ್ನ ಸೆಲ್ಲೆಹರಿದು ಕಾಲಿಗೆ ಸುತ್ತಿಕೊಂಡು ಓಡಹತ್ತಿದಳು. ದುಷ್ಟರ ಉಪದ್ರವವಾಗಬಾರದೆಂದು ಆಕೆಯು ತನ್ನ ಮೈಮೇಲಿನ ಅಲಂಕಾರಗಳನ್ನು ಬೀದಿಯಲ್ಲಿ ಚೆಲ್ಲಿಕೊಟ್ಟು, ಸೌಭಾಗ್ಯದ ಲಕ್ಷಣಗಳಾದ ಮಂಗಲಸೂತ್ರ ಸರಿಗೆಗಳನ್ನಷ್ಟು ಕೊರಳಲ್ಲಿ ಕಾದುಕೊಂಡಳು. ಹೀಗೆ ಅಗರ್ಭಶ್ರೀಮಂತಳು ಪರಿಪರಿಯಾಗಿ ಕಷ್ಟಪಡುತ್ತ ಹೋಗುತ್ತಿರಲು, ದೇವರಿಗೆ ಅಂತಃಕರಣ ಬಂದಂತೆ ತೋರಿತು; ಯಾಕಂದರೆ, ರಣಭೂಮಿಯಿಂದ ಜೀವ ಉಳಿಸಿಕೊಂಡು ಓಡಿಹೋಗುತ್ತಿದ್ದ ಜಾನುಭಿಂತಾಡ್ಯಾ, ಬಾರವೇಕರ, ಪಿರಾಜಿರಾವು ತಪುಣ ತಾಂಬೇಕರ ಎಂಬ ಮೂವರು ರಾವುತರು ಆಕೆಯ ಗುರುತುಹಿಡಿದು, ಸರತಿಯಂತೆ ಆಕೆಯನ್ನು ತಮ್ಮ ಕುದುರೆಯ ಹಿಂದೆ ಕುಳ್ಳಿರಿಸಿಕೊಂಡು ಕರಕೊಂಡುಹೋದರು. ಮುಂದೆ ಕೆಲವು ಮಾರ್ಗವನ್ನು ಕ್ರಮಿಸಿಹೋಗುತ್ತಿರಲು, ಅವರಿಗೆ ಮಲ್ಹಾರರಾವಹೋಳಕರ, ನಾನಾಪುರಂದರೆ ಮುಂತಾದ ಎಷ್ಟೋ ಸರದಾರರು ಬೆಟ್ಟಿಯಾದರು. ಅವರು ಆ ದುರ್ದೈವಿಯನ್ನು ಸುರಕ್ಷಿತವಾಗಿ ದಕ್ಷಿಣಕ್ಕೆ ಕರಕೊಂಡುಹೋದರು. ನಾನಾಫಡಣವೀಸನ ಹೆಂಡತಿಯೂ ಹಿಂದಿನಿಂದ ಬಂದಳು; ಆದರೆ ಆತನ ತಾಯಿಯ ಗತಿಯೇನಾಯಿತೆಂಬದು ತಿಳಿಯಲಿಲ್ಲ.

ಇನ್ನು ಇಬ್ರಾಹಿಮಖಾನಗಾರದಿಯು ಗಾಯಹೊಂದಿ ಶತ್ರುಗಳ ಕೈಸೇರಿದನೆಂದು ಹಿಂದೆ ಹೇಳಿದೆಯಷ್ಟೆ? ಆತನಿಗೆ ಜೀವದಾನಕೊಡಿಸಬೇಕೆಂದು ಸುಜಾಉದ್ದೌಲನೇ ಮೊದಲಾದ ಹಿಂದುಸ್ಥಾನದ ಮುಸಲ್ಮಾನರು ಬಹಳವಾಗಿ ಯತ್ನಿಸಿದರು; ಆದರೆ ಶಹಾನು ಕೇಳಲಿಲ್ಲ. ಇಬ್ರಾಹಿಮಖಾನನು ಕಾಫರರಾದ ಮರಾಟರ ಪಕ್ಷಕಟ್ಟಿ ಸ್ವಜಾತಿಯವರೊಡನೆ ಕಾದಿದ್ದು ಮಹಾಪರಾಧವೆಂದು ಬಾದಶಹನು ತಿಳಿದನು. ಹಿಂದುಸ್ಥಾನದಲ್ಲಿ ಮುಸಲ್ಮಾನರು ಹಿಂದೂಜನರ ಆಶ್ರಯವನ್ನೂ, ಹಿಂದೂಜನರು ಮುಸಲ್ಮಾನರ ಆಶ್ರಯವನ್ನೂ ಪಡೆದು ತಮ್ಮ ತಮ್ಮ ಜಾತಿ-ಬಾಂಧವರೊಡನೆ ಕಾದುವದು ಅಪರಾಧವೆಂದು ಎಣಿಸಲ್ಪಡುತ್ತಿದ್ದಿಲ್ಲ; ಆದ್ದರಿಂದ ಮುಸಲ್ಮಾನರ ದಂಡಿನಲ್ಲಿ ಎಷ್ಟೋ ಹಿಂದು ದಂಡಾಳುಗಳೂ, ಹಿಂದೂಜನರ ದಂಡಾಳುಗಳಲ್ಲಿ ಎಷ್ಟೋ ಮುಸಲ್ಮಾನ ದಂಡಾಳುಗಳೂ ಇರುತ್ತಿದ್ದರು. ಇದು ಧರ್ಮದ ಮರುಳುಹಿಡಿದ ವಿಲಾಯತಿಯ ಮುಸಲ್ಮಾನರಿಗೆ ತಡೆಯುತ್ತಿದ್ದಿಲ್ಲ. ಇಬ್ರಾಹಿಮಖಾನನು ಶೌರ್ಯದಿಂದ ಕಾದಿ ರಣಭೂಮಿಯಲ್ಲಿ ದೇಹವಿಡಬೇಕೆಂದು ಮಾಡಿದ್ದನು; ಆದರೆ ಅಂಥ ಪುಣ್ಯವನ್ನು ಆತನು ಮಾಡಿದ್ದಿಲ್ಲ. ಆತನ ದುರವಸ್ಥೆಗಾಗಿ ಸುಜಾಉದ್ದೌಲನ ಅಂತಃಕರಣವು ಕರಗಿತು. ಆ ದುರ್ದೈವಿಯಾದ ಶೂರಸರದಾರನನ್ನು ಆತನು ತನ್ನ ಬಳಿಯಲ್ಲಿ ಬಚ್ಚಿಟ್ಟುಕೊಂಡಿದ್ದನು. ಆದರೆ ಅದು ಯಾವ ಮುಖದಿಂದಲೋ ಹೊರಬಿದ್ದು, ಸುಜಾನು ಗಾರದಿಯನ್ನು ಅಬದಾಲಿಯ ಮುಂದೆ ತಂದು ನಿಲ್ಲಿಸಬೇಕಾಯಿತು. ಆಗ ಶಹಾನು ಸಿಟ್ಟಿನಿಂದ ಗಾರದಿಯನ್ನು ಕುರಿತು-

ಶಹಾ–ಸರದಾರ, ನಿಮ್ಮಂಥ ಶೂರರ ಗತಿಯು ಹೀಗಾಗಲಿಕ್ಕೆ ಕಾರಣವೇನು? ಕಾಫರರ ಪಕ್ಷವಹಿಸಿ ಸ್ವಜನರೊಡನೆ ಕಾದಿದ್ದರ ಪಶ್ಚಾತ್ತಾಪವು ಈಗ ನಿಮಗೆ ಚನ್ನಾಗಿ ಆಯಿತೆಂದು ನಾನು ತಿಳಿಯುವೆನು!

ಗಾರದಿ–ಹುಜೂರ, ನನ್ನ ದೈವದಲ್ಲಿ ಇದ್ದಂತಾಯಿತು. ಯಾವ ಯಜಮಾನನು ನನಗೆ ಆಶ್ರಯವಿತ್ತನೋ, ಯಾವನು ನನ್ನನ್ನು ಹೊಟ್ಟೆಯಮಗನಂತೆ ರಕ್ಷಿಸಿದನೋ ಆತನ ಹಿತಕ್ಕಾಗಿ ದೇಹತ್ಯಾಗಮಾಡುವದು ನನ್ನ ಕರ್ತವ್ಯವಾಗಿತ್ತು; ಆದರೆ ಅಂಥ ಸುಯೋಗವು ಒದಗಿಬರಲಿಲ್ಲ. ನನ್ನ ಶೌರ್ಯವೆಲ್ಲ ಮಣ್ಣುಗೂಡಿಹೋಗಿ, ನಾನು ತಮ್ಮ ಸೆರೆಯಾಳಾಗಿದ್ದೇನೆ. ಈಗ ತಮ್ಮ ಮನಸ್ಸಿಗೆ ಬಂದ ಶಿಕ್ಷೆಯನ್ನು ವಿಧಿಸಬೇಕು. ಯುದ್ಧದಲ್ಲಿ ಶತ್ರುಗಳ ಶಿರಚ್ಛೇದಮಾಡಿ, ತನ್ನ ಒಡೆಯನ ಸಲುವಾಗಿ ತನ್ನ ಶಿರಸ್ಸನ್ನು ಶತ್ರುಗಳಿಗೆ ಕೊಡುವ ಇಬ್ರಾಹಿಮಖಾನನು ಈಗ ನಾಯಿಯಹಾಗೆ ಸಾಯಬೇಕಾಗಿದೆ! ಹಾಯ್‌ರೇ ಅಲ್ಲಾ! ಹುಜೂರ, ಒಡೆಯನ ಅಪ್ಪಣೆಯಂತೆ ನಡೆಯುವದು ನನ್ನ ಕರ್ತವ್ಯವಷ್ಟೆ?

ಶಹಾ–ಸ್ವಜಾತಿಯಜನರ ಸಂಹಾರಕ್ಕಾಗಿ ಆದ ಅಪ್ಪಣೆಯನ್ನು ನಡಿಸುವದು ತೀರ ಅವಿಚಾರದ ಕೆಲಸವು. ಕಾಫರರ ವಿರುದ್ಧವಾಗಿ ಜಾತಿ–ಬಾಂಧವರ ಮೇಲೆ ಶಸ್ತ್ರವೆತ್ತುವ ನೀಚರು ಜಗತ್ತಿನಲ್ಲಿ ಹುಟ್ಟದಿರುವದು ಸುರಕ್ಷಿತವು. ಸರದಾರ, ನೀವು ಜಾತಿಬಾಂಧವರ ರುಂಡಗಳನ್ನು ತುಂಡರಿಸಿದಂತೆ, ಈಗ ನಿಮ್ಮ ರುಂಡವನ್ನು ತುಂಡರಿಸಲಾಗುವದು. (ಹತ್ತರನಿಂತಿದ್ದ ಒಬ್ಬ ಸರದಾರನನ್ನು ನೋಡಿ) ಸರದಾರ, ಏನು ನೋಡುವಿರಿ? ಈ ವಿಶ್ವಾಸಘಾತಕಿಯ ರುಂಡವನ್ನು ತುಂಡರಿಸಿರಿ!

ಗಾರದಿ–ಹುಜೂರ, ಅವಶ್ಯವಾಗಿ ತುಂಡರಿಸಬೇಕು ಸಾವಿಗೆ ನಾನು ಅಂಜುವದಿಲ್ಲ. ಇನ್ನೂ ನನ್ನ ಪರಾಕ್ರಮವನ್ನು ನೋಡುವಹಾಗಿದ್ದರೆ, ನಿಮ್ಮೊಳಗಿನ ಯಾವನಾದರೂ ವೀರನು ಎದುರಾಗಲಿ, ನನ್ನ ಕವಾಯತಿಯ ಕರಾಮತಿಯನ್ನು ತೋರಿಸುವೆನು. ಸರಕಾರ, ತಮಗೆ ಅಷ್ಟು ಶ್ರಮವೇಕೆ? ಇತ್ತ ನನಗೊಂದು ಖಡ್ಗವನ್ನು ಕೊಡಿರಿ. ನನ್ನ ಕೈಯಿಂದಲೇ ಶಿರಸ್ಸನ್ನು ತುಂಡರಿಸಿ ಚಲ್ಲುವೆನು. ಸ್ವಾಮಿಕಾರ್ಯಕ್ಕಾಗಿ ರಣಭೂಮಿಯಲ್ಲಿ ಬೀಳದೆಯಿದ್ದ ಆ ಶಿರಸ್ಸಿನ ಬೆಲೆ ಯಾದರೂ ಏನು? ಪ್ರಾಣಿಮಾತ್ರಗಳನ್ನು ಸಾವು ಬಿಟ್ಟಿಲ್ಲ; ಅಂದಬಳಿಕ ಅದಕ್ಕೆ ಅಂಜುವ ದೇಕೆ? ಹು! ಬೇಗನೆ ತುಂಡರಿಸಿರಿ. ಇಬ್ರಾಹಿಮಖಾನನನ್ನು ಬೇಗನೆ ಈ ಲೋಕದಿಂದ ಹೊರಡಿಸಿರಿ ಸಾಹೇಬ!

ಹೀಗೆ ಸ್ಪಷ್ಟವಾಗಿ ಮಾತಾಡಿದ್ದನ್ನು ಕೇಳಿ ಅಬದಾಲಿಯು ಸಂತಾಪಗೊಂಡನು. ದೊಡ್ಡ ಮನಸ್ಸಿನ ವೀರರು ಶತ್ರುಗಳ ನಿಜವಾದ ಗುಣಗಳನ್ನು ಅಭಿನಂದಿಸುವರು; ಆದರೆ ಅಷ್ಟು ದೊಡ್ಡಸ್ತನವು ಶಹಾನಿಗೆ ಈ ಕಾಲದಲ್ಲಿ ಬರಲಿಲ್ಲ. ಆ ಸ್ವಾಮಿನಿಷ್ಠ ಸರದಾರನ ವಿಷಯವಾಗಿ ಆತನಲ್ಲಿ ಎಳ್ಳಷ್ಟು ದಯವು ಉತ್ಪನ್ನವಾಗಲಿಲ್ಲ. ಆತನು ಕೂಡಲೆ ಗಾರದಿಯ ಶಿರಚ್ಛೇದ ಮಾಡಿಸಿದನು! ಖಡ್ಗಪಟುವಾದ ಜನಕೋಜಿಸಿಂದೆಯ ಗತಿಯೂ ಹೀಗೆಯೇ ಆಯಿತು. ಈ

ಇಪ್ಪತ್ತುವರ್ಷದ ತರುಣವೀರನನ್ನು ದಂಡದ ಹಣತುಂಬಿ ಉಳಿಸಿಕೊಳ್ಳಬೇಕೆಂದು ಕಾಶೀರಾಜ ಪಂಡಿತನೂ, ಸುಜಾಉದ್ದೌಲನೂ ಬೇಕಾದಷ್ಟು ಯತ್ನಿಸಿದರು; ಆದರೆ ಅದು ವ್ಯರ್ಥವಾಗಿ ದುರಾಣಿಗಳು ಆ ವೀರಾಗ್ರಣಿ ಸಿಂದೆಯ ಶಿರಚ್ಛೇದನವನ್ನೂ ಮಾಡಿದರು!

## ಶೋಕಸಾಗರ

ಭಾವುಸಾಹೇಬನು ಪಾನಿಪತದ ರಣಭೂಮಿಯಲ್ಲಿ ಸಿಕ್ಕುಬಿದ್ದ ಅನಿಷ್ಟದಾಯಕವಾದ ಸುದ್ದಿಗಳು ಒಂದರಹಿಂದೊಂದು ಪುಣೆಗೆ ಬರಹತ್ತಲು, ನಾನಾಸಾಹೇಬಪೇಶವೆಯು ಸುಮಾರು ಐವತ್ತುಸಾವಿರ ಸೈನ್ಯದೊಡನೆ ಸಹಾಯಾರ್ಥವಾಗಿ ಉತ್ತರಕ್ಕೆ ಸಾಗಿದ್ದನು. ಆತನ ಸೈನ್ಯದ ಬೀಡು ನರ್ಮದಾನದಿಯ ದಂಡೆಯಮೇಲೆ ಬಿಟ್ಟಿತು. ಆಗ ಪೌಷಮಾಸವಿದ್ದು, ಮಕರಸಂಕ್ರಮಣವು ಸಮೀಪಿಸಿದ್ದರಿಂದ, ನರ್ಮದಾತೀರದಲ್ಲಿಯೇ ಸಂಕ್ರಮಣ ಮಾಡಿಕೊಂಡು ಮುಂದಕ್ಕೆ ಹೋಗ ಬೇಕೆಂದು ನಾನಾಸಾಹೇಬನು ನಿಶ್ಚಯಿಸಿದನು. ಭೋಗಿ, ಸಂಕ್ರಮಣ, ಕರಿ ಎಂಬ ಮೂರು ದಿನಗಳು ಸಂಕ್ರಮಣದ ಹಬ್ಬದ ದಿನಗಳಾಗಿರುವಷ್ಟೆ? ಸಾಂಪ್ರದಾಯದಂತೆ ಭೋಗಿಯ ದಿವಸ ಪೇಶ್ವೆಯವರ ಮನೆಯ ಸ್ತ್ರೀಪುರುಷರು ಮಂಗಲಸ್ನಾನ ಮಾಡಿದರು. ಮಧ್ಯಾಹ್ನದಲ್ಲಿ ತುಪ್ಪ, ಹುಗ್ಗಿ, ಪಾಯಸ ಇವುಗಳ ಭೋಜನವಾಯಿತು. ಮರುದಿನ, ಅಂದರೆ ಮಕರ ಸಂಕ್ರಮಣದ ದಿವಸ ಎಲ್ಲರೂ ನರ್ಮದೆಯಲ್ಲಿ ಸ್ನಾನಮಾಡಿ ವಿಧ್ಯುಕ್ತ ದಾನ-ಧರ್ಮ ಗಳನ್ನು ಮಾಡಿದರು. ಮಧ್ಯಾಹ್ನದಲ್ಲಿ ದೊಡ್ಡ ಭೋಜನ ಸಮಾರಂಭವಾಯಿತು. ಆಗ ಆಶ್ರಿತರನ್ನೂ, ದರಕದಾರರನ್ನೂ, ಮಾನಕರಿಗಳನ್ನೂ, ಬೇರೆ ಸರದಾರರನ್ನೂ ಶ್ರೀಮಂತರು ಊಟಕ್ಕೆ ಕರೆದಿದ್ದರು. ಭೋಜ ನೋತ್ತರದಲ್ಲಿ ಒಂಬತ್ತು ತಾಸಿನ ಕಡೆಗೆ ಎಳ್ಳು-ಬೆಲ್ಲದ ದರ್ಬಾರವಾಯಿತು. ಸೇನಾಸಾಹೇಬ ಸುಭಾಜಾನೋಜಿಬೋಸಲೆ, ಬಾಬೂಜಿನಾಯಿಕ ಬಾರಾಮತೀಕರ, ಗೋಪಾಳರಾವ ಗೋವಿಂದ ಪಟವರ್ಧನ, ಸದಾಶಿವರಾಮಚಂದ್ರ, ವಿಠ್ಠಲವಿಶ್ರಾಮ, ಯಮಾಜಿಶಿವದೇವ, ಹರಿಅಪ್ಪಾ ಮೊದಲಾದ ಸರದಾರರು ದರ್ಬಾರಕ್ಕೆ ಬಂದಿದ್ದರು. ಪದ್ಧತಿಯಂತೆ ನಾಚು-ರಂಗು, ತಾಂಬೂಲ-ಪರಿಮಳ ಮೊದಲಾದವುಗಳ ಆನಂದೋತ್ಸವಾನಂತರ ದರ್ಬಾರದ ಕೆಲಸವಾಗಿ, ಸಂಕ್ರಮಣದ ಸಮಾರಂಭವು ಸಾಂಗ ವಾಯಿತು. ರಾತ್ರಿ ನಾನಾಸಾಹೇಬನೂ, ಗೋಪಿಕಾ ಬಾಯಿಯೂ ಸಾಂಪ್ರದಾಯದಂತೆ ಪರಸ್ಪರ ಎಳ್ಳುಬೆಲ್ಲ ಕೊಟ್ಟು ಶಯನಮಾಡಿದರು. ಅಂದಿನ ರಾತ್ರಿ ಇಬ್ಬರಿಗೂ ದುಸ್ವಪ್ನಗಳು ಬಿದ್ದವು. ನಾನಾಸಾಹೇಬನ ಸ್ವಪ್ನದಲ್ಲಿ, ಭಾವುರಾವ- ವಿಶ್ವಾಸರಾಯರನ್ನು ಯವನರು ಹೆಡಮುರಿಗೆ ಕಟ್ಟಿ ಹಿಡಿದೊಯ್ದು, ಅವರ ಚಂಡುಗಳನ್ನು ಹಾರಿಸಲು, ಅವು ನಾನಾಸಾಹೇಬನಮೇಲೆ ಬಿದ್ದಂತಾಯಿತು. ಕೂಡಲೆ ನಾನಾಸಾಹೇಬನು ಬೆದರಿ ಎಚ್ಚತ್ತನು. ಅತ್ತ ಗೋಪಿಕಾಬಾಯಿಯ ಸ್ವಪ್ನದಲ್ಲಿ ಒಬ್ಬ ವಿಧವೆಯು ಆಕೆಯ ಕೈಯೊಳಗಿನ ಬಳೆಗಳನ್ನು ಒಡೆದು, ಹುಡಿಯಿಂದ

ಆಕೆಯ ಉಡಿತುಂಬಿದ ಹಾಗಾಯಿತು! ಈ ಸ್ವಪ್ನಗಳು ಅನಿಷ್ಟಸೂಚಕಗಳಾದ್ದರಿಂದ ಎಲ್ಲರೂ ಅಸಮಾಧಾನಪಟ್ಟು ಪಾನಿಪತದ ಯುದ್ಧದ ವಿಷಯವಾಗಿ ಚಿಂತಿಸುತ್ತಲಿದ್ದರು. ದುಸ್ವಪ್ನದೋಷ ನಿವಾರಣಾರ್ಥವಾಗಿ ಹೋಮ-ಹವನ, ಅನುಷ್ಠಾನ ಮುಂತಾದವುಗಳನ್ನು ಮಾಡಬೇಕೆಂದು ಬ್ರಾಹ್ಮಣರು ಶ್ರೀಮಂತರಿಗೆ ಸೂಚಿಸಿ ಅವರನ್ನು ಸಮಾಧಾನಪಡಿಸಿದರು.

ಹೀಗೆ ಎಲ್ಲರೂ ಆಲೋಚಿಸುತ್ತಿರುವಾಗ ಮಾರ್ಗಾಯಾಸದಿಂದ ಬಹಳವಾಗಿ ದಣಿದು ಹೋಗಿದ್ದ ಒಬ್ಬ ಒಂಟೆಯ ಸವಾರನು ಬಂದು ನಾನಾಸಾಹೇಬರ ಕೈಯಲ್ಲಿ ಒಂದು ಲಕ್ಕೋಟಿ ಯನ್ನು ಕೊಟ್ಟನು. ಅದರಲ್ಲಿ-''ಎರಡುಮುತ್ತುಗಳು ಉದುರಿದವು; ಇಪ್ಪತ್ತೇಳು ಮೊಹರುಗಳು ಕಳೆದವು; ರೊಕ್ಕ-ರೂಪಾಯಿಗಳು ಎಷ್ಟು ಹೋದವೆಂಬದರ ಲೆಕ್ಕವಿಲ್ಲ'' ಎಂಬದಿಷ್ಟೇ ಸಂಗತಿಯು ಬರೆದಿತ್ತು, ರಣವಾರ್ತೆಯನ್ನು ಕುರಿತು ನಾನಾ ಸಾಹೇಬನು ಸವಾರನನ್ನು ವಿಚಾರಿಸಲು, ಅವನು ಸಾದ್ಯಂತವಾಗಿ ಎಲ್ಲವನ್ನು ಹೇಳಿದನು. ಆಗ ನಾನಾಸಾಹೇಬನ ಸ್ಥಿತಿಯು ಏನಾಗಿರಬಹುದೆಂಬದನ್ನು ವಾಚಕರೇ ತರ್ಕಿಸತಕ್ಕದ್ದು. ಅಂದು ಸಂಕ್ರಮಣದ ಕರಿದಿನವಿದ್ದು ಹಬ್ಬವು ಹಸಗೆಟ್ಟುಹೋಯಿತು. ಯಾವತ್ತು ಜನರು ಶೋಕಸಾಗರದಲ್ಲಿಮುಳುಗಿದರು. ಅಂದು ನಾನಾಸಾಹೇಬನು ಬಾಯಲ್ಲಿ ನೀರುಹಾಕಲಿಲ್ಲ, ಆತನು ಅನಿವಾರ್ಯವಾದ ಶೋಕಸಾಗರದಲ್ಲಿ ಮುಳುಗಿದನು. ರಾಜ್ಯತ್ಯಾಗಮಾಡಿ ಎಲ್ಲಿಯಾದರೂ ಅರಣ್ಯಕ್ಕೆ ಹೋಗಿ ಆತ್ಮಹತ್ಯಮಾಡಿಕೊಳ್ಳ ಬೇಕೆಂದು ಆತನು ಯೋಚಿಸಹತ್ತಿದನು. ಯಾವತ್ತೂ ರಮಣೀಯ ಪ್ರದೇಶಗಳು ಆತನಿಗೆ ಸ್ಮಶಾನದಂತೆ ತೋರಹತ್ತಿದವು. ಆತನಿಗೆ ಸಾಮ್ರಾಜ್ಯೋಪಭೋಗದಲ್ಲಿ ಬೇಸರವುಂಟಾಯಿತು. ತಾನು ಶ್ರೀಮಂತರ ಕುಲದಲ್ಲಿ ಹುಟ್ಟುವದಕ್ಕಿಂತ ಒಬ್ಬ ಜನ್ಮದರಿದ್ರನ ಹೊಟ್ಟೆಯಲ್ಲಿ ಹುಟ್ಟಿದ್ದರೆ ನೆಟ್ಟಗಾಗುತ್ತಿತ್ತೆಂದು ಆತನು ಭಾವಿಸಹತ್ತಿದನು. ''ದೇವರೇ, ಎಂಥ ಅನರ್ಥವಿದು! ನನ್ನ ದುರ್ದಶೆಯನ್ನು ಏನು ವರ್ಣಿಸಬೇಕು? ಹಾಯ್ ಹಾಯ್! ನಾನು ಇನ್ನು ಏನು ಮಾಡಲಿ! ಯಾರಕಡೆಗೆ ಹೋಗಲಿ! ಯಾರಸಂಗಡ ಮಾತಾಡಲಿ! ಯಾರಮೇಲೆ ನಂಬಿಗೆ ಯಿಡಲಿ! ಯಾರನ್ನು ಕರೆಯಲಿ! ಆಪ್ತಾಲೋಚನೆಯನ್ನು ಯಾರ ಸಂಗಡ ಮಾಡಲಿ! ಇನ್ನು ನಾನು ಬದುಕಿಯಾದರೂ ಮಾಡುವದೇನು! ನಿರ್ದಯದೈವವೇ ಇಂಥ ಅಮೂಲ್ಯರತ್ನಗಳನ್ನು ಹ್ಯಾಗೆ ಅಪಹರಿಸಿದೆ! ಅವು ಮತ್ತೆ ನನ್ನ ಕಣ್ಣಿಗೆ ಹ್ಯಾಗೆ ಬಿದ್ದಾವು! ಬಂಧುವಿಯೋಗ, ಪುತ್ರ ವಿಯೋಗ, ಅಸಂಖ್ಯ ಸೈನ್ಯವಿಯೋಗ, ಹಲವು ಸರದಾರರ ವಿಯೋಗ ಹೀಗೆ ಅನೇಕ ವಿಯೋಗಗಳ ಸಂಯೋಗವು ಒತ್ತಟ್ಟಿಗೆ ಹ್ಯಾಗಾಗಿದ್ದೀತು! ಒಂದೊಂದು ವಿಯೋಗದುಃಖ ಭಾರವೇ ನನಗೆ ದುಸ್ಸಹವಾಗಿರುವಾಗ, ಹಲವು ವಿಯೋಗಗಳ ಪ್ರಚಂಡಭಾರವು ನನ್ನ ತಲೆಯಮೇಲೆ ಬಿದ್ದಬಳಿಕ ನಾನು ಗಾಸಿಯಾಗದೆ ಹ್ಯಾಗೆ ಉಳಿಯುವೆನು! ಬಂಧುಶೋಕ, ಪುತ್ರಶೋಕ, ಪರಾಭವಶೋಕ ದಿಂದ ನನ್ನ ಮನಸ್ಸಿಗುಂಟಾಗಿದ್ದ ಗಾಯವನ್ನು ಮಾಯಿಸುವ ಮುಲಾಮು ಎಲ್ಲಿಯಾದರೂ ಸಿಗಬಹುದೆ?'' ಹೀಗೆ ನಾನಾಸಾಹೇಬನು ಶೋಕಸಾಗರದಲ್ಲಿ ಮುಣುಗಿ ಜರ್ಜರನಾದನು. ಆತನು ಹಾಯ ಭಾವುರಾಯಾ! ಹಾಯ ವಿಶ್ವಾಸರಾಯಾ! ಹಾಹಾ ದೈವವೇ? ಎಂದು ಒಂದೇಸವನೆ ಒರಲಹತ್ತಿದನು!

ಹೀಗೆ ನಾನಾಸಾಹೇಬನು ದುಃಖಿಸುತ್ತಿರುವಾಗ ಒಳಗೆ ಗೋಪಿಕಾಬಾಯಿಯು ಬೇರೆ ಸರದಾರರ ಹೆಂಡಿರೊಡನೆ ಬಚ್ಚಲಮನೆಯಲ್ಲಿದ್ದಳು. ಅಲ್ಲಿ ಕೆಲವು ಸ್ತ್ರೀಯರು ಎರ ಕೊಳ್ಳು ತ್ತಿದ್ದರು, ಕೆಲವರು ತಲೆಒರಿಸಿಕೊಳ್ಳುತ್ತಿದ್ದರು, ಕೆಲವರು ಕೂದಲುಗಳಿಗೂ, ಮೈಗೂ ಕೇಶರ-ಕಸ್ತೂರಿಗಳ ತಿಲಕವನ್ನು ಲೇಪಿಸುತ್ತಿದ್ದರು. ಗೋಪಿಕಾಬಾಯಿಯು ಎರಕೊಂಡು ಬಚ್ಚಲಮನೆ ಯಿಂದ ಹೊರಗೆಬಂದು ಬೆಳ್ಳಿಯಚೌರಂಗದ ಮೇಲೆ ನಿಂತುಕೊಂಡು ಅಚ್ಚ ಕರ್ರಗಿನ ತಪ ಗುಟ್ಟುವ ತನ್ನ ಉದ್ದಕೂದಲುಗಳನ್ನು ವಸ್ತ್ರದಮುರಿಗೆಸುತ್ತಿ ಹಿಂಡಿ ಒರಿಸಿಕೊಳ್ಳುತ್ತಿದ್ದಳು. ಮಂಜುಳಾ ಎಂಬ ದಾಸಿಯು ಆಕೆಯ ಕೊರಳೊಳಗಿನ ರತ್ನಖಚಿತವಾದ ಮಂಗಲಸೂತ್ರವನ್ನು ಒತ್ತಟ್ಟಿಗೆಮಾಡಿ ಆಕೆಯ ಮೈಯನ್ನು ಒರಿಸುತ್ತಲಿದ್ದಳು. ಅಷ್ಟರಲ್ಲಿ ನಾನಾಸಾಹೇಬನ ಮುಖ ದಿಂದ ಹೊರಟ—''ಹಾ ಭಾವುರಾಯಾ! ಹಾ ವಿಶ್ವಾಸರಾಯಾ!'' ಎಂಬ ಶಬ್ದಗಳು ಆಕೆಯ ಕಿವಿಗೆ ಬಿದ್ದವು. ಕೂಡಲೆ ಆಕೆಯು ನೆಲಕ್ಕೆಬಿದ್ದು ಪ್ರಜ್ಞಾಹೀನಳಾದಳು! ಕೆಲವು ಹೊತ್ತಿನಮೇಲೆ ಎಚ್ಚರವಾಗಲು, ಪುತ್ರಶೋಕದಿಂದ ವಿಹ್ವಲಳಾಗಿ ಆಕೆಯು ದೊಡ್ಡದನಿತೆಗೆದು ಅಳತೊಡಗಿ ದಳು—''ಬಾಳಾ, ನನ್ನಚಿನ್ನವೇ, ವಿಶ್ವಾಸಾ! ಎತ್ತಹೋದೆಯಪ್ಪಾ! ಇನ್ನು ನನ್ನ ಸಂಗಡ ಮಾತಾಡುವದಿಲ್ಲವೆ? ನಿನ್ನನ್ನು ದೂರಯುದ್ಧಕ್ಕೆ ಕಳಿಸಿದೆನೆಂದು ನನ್ನಮೇಲೆ ಸಿಟ್ಟಾದೆಯಾ? ಇನ್ನು ನಿನ್ನಮೋರೆಯನ್ನು ನಾನು ಹ್ಯಾಗೆ ನೋಡೇನು? ಭಾವುರಾಯರೇ, ನೀವೂ ನಮ್ಮನ್ನು ಅಗಲಿಹೋದಿರಾ! ನಿಮ್ಮನ್ನು ಅಗಲಿ ಇನ್ನು ಅವರು ಹ್ಯಾಗೆ ಸುಖಿಸುವರು? ನಿಮ್ಮಿಬ್ಬರ ಪರಸ್ಪರ ಪ್ರೇಮವೆಷ್ಟು-ವಿಶ್ವಾಸವೆಷ್ಟು! ನಿರ್ದಯದೈವವೇ, ನಿನಗೆ ಸ್ವಲ್ಪವಾದರೂ ದಯ ಬರಲಿಲ್ಲವೆ?'' ಎಂದು ಹಾಡಿ-ಹಾಡಿಕೊಂಡು ಅಳಹತ್ತಿ ಆಗಾಗ್ಗೆ ಮೂರ್ಛೆಹೋಗ ಹತ್ತಿದಳು. ಉಳಿದ ಸ್ತ್ರೀಯರು ಆಕೆಯನ್ನ ಸಮಾಧಾನ ಪಡಿಸುತ್ತ ಆಕೆಯನ್ನು ಮೆಲ್ಲಗೆ ಕರೆದೊಯ್ದು ಮಂಚದಮೇಲೆ ಮಲಗಿಸಿದಳು. ಅಂದಿನ ದಿನ ನೋಡಿದತ್ತೆಲ್ಲ ಅಮಂಗಲವೇ ಸುರಿಯುತ್ತಿತ್ತು. ಕುರುಕ್ಷೇತ್ರದ ಘೋರಸಂಗ್ರಾಮದಲ್ಲಿ ಲಕ್ಷಾವಧಿಜನರ ಸಂಹಾರವಾಗಿರಲು, ಅವರ ಸಂಬಂಧಿಕರು ನಾನಾಸಾಹೇಬನ ಪರಿವಾರದಲ್ಲಿದ್ದದ್ದರಿಂದ ಇಡಿಯ ಛಾವಣಿಯೇ ಶೋಕ ಗ್ರಸ್ತವಾಗಿ ಕಣ್ಣೀರು ಸುರಿಸಹತ್ತಿತು.

ಬಳಿಕ ನಾನಾಸಾಹೇಬನು ಕಣ್ಣೀರು ಸುರಿಸುತ್ತ ಪುಣೆಯಕಡೆಗೆ ಸಾಗಿದನು. ಗೋದಾವರಿಯ ತೀರದಲ್ಲಿ ಆತನ ಸೈನ್ಯದ ಬೀಡುಬಿಟ್ಟಿತು. ಅಲ್ಲಿ ವಿಠ್ಠಲರಾವವಿಂಚೂರ ಕರನು ಮೊದಲು ಶ್ರೀಮಂತರನ್ನು ಕಂಡನು. ಆತನು ಶ್ರೀಮಂತರಿಗೆ ಸಾಷ್ಟಾಂಗವಾಗಿ ವಂದಿಸಿ ಕಣ್ಣೀರು ಸುರಿಸುತ್ತ ಕೈಜೋಡಿಸಿ ಪ್ರಾರ್ಥಿಸಿದನೇನಂದರೆ—''ನಮ್ಮ ದುರ್ದೈವದಿಂದ ಪಾನಿಪತದಲ್ಲಾದ ನಮ್ಮ ನಾಶದ ವರ್ತಮಾನವು ಸನ್ನಿಧಿಗೆ ಶ್ರುತವಾಗಿರಬಹುದು. ನಾನು ಮಹಾಪಾತಕಿಯಾದದ್ದರಿಂದಲೇ ಹಲವು ದುಃಖಗಳನ್ನೂ, ಸಂಕಟಗಳನ್ನೂ ಅನುಭವಿಸಿ ಬದುಕಿ ಉಳಿದಿರುತ್ತೇನೆ! ಈಶ್ವರೇಚ್ಛೆಗೆ ಉಪಾಯವಿಲ್ಲ!'' ಹೀಗೆ ಮಾತಾಡುತ್ತಿರುವಾಗ ಶ್ರೀಮಂತರಿಗೆ ಬಹಳ ವ್ಯಸನವಾಯಿತು. ಪುಣೆಗೆ ಹೋಗುವವರೆಗೆ ವಿಂಚೂರಕರನು ಶ್ರೀಮಂತರ ಸವಾರಿಯ ಸಂಗಡಲೇ ಇದ್ದನು. ಪ್ರತಿದಿನ ಮಧ್ಯಾಹ್ನದ ಸಂಜೆಯ ಊಟದ

ಹೊತ್ತಿನಲ್ಲಿ ಕುರುಕ್ಷೇತ್ರದ ಸಂಗ್ರಾಮದ ಸುದ್ದಿಯು! ಯಾವ ಸರದಾರನು ಹ್ಯಾಗೆ ನಡೆದು ಕೊಂಡನು ಯಾವನು ಹ್ಯಾಗೆ ಪರಾಕ್ರಮ ತೋರಿಸಿದನು, ಯುದ್ಧದಲ್ಲಿ ಯಾವನು ಹಿಂದಿ ರುಗಿದನು ಮೊದಲಾದ ಸುದ್ದಿಗಳನ್ನು ನಾನಾ ಸಾಹೇಬನು ಯಾವಾಗಲೂ ವಿಂಚೂರಕರನನ್ನು ಕೇಳುತ್ತಲಿದ್ದನು. ಅದಕ್ಕೆ ವಿಂಚೂರಕರನು ಸರಿಯಾಗಿ ಉತ್ತರಕೊಡುತ್ತಿದ್ದನು. ಹೀಗೆ ಹಾದಿ ಯಲ್ಲಿ ನಿತ್ಯಕ್ರಮವು ನಡೆದಿತ್ತು. ಒಮ್ಮೆ ಶ್ರೀಮಂತರು ವಿಠ್ಠಲರಾಯನನ್ನು ಕುರಿತು—''ರಾವ, ಮಲ್ಹಾರರಾವಹೋಳಕರರ ವಿಷಯವಾಗಿ ನಾನು ಎಷ್ಟೋ ವಿರುದ್ಧ ಸಂಗತಿಗಳನ್ನು ಕೇಳಿದ್ದೇನೆ; ಆದರೆ ಸತ್ಯವಿದ್ದದ್ದನ್ನು ಪ್ರಮಾಣಪೂರ್ವಕವಾಗಿ ಹೇಳಿರಿ.'' ಎಂದು ಕೇಳಿದರು. ಅದಕ್ಕೆ ವಿಂಚೂರಕರನು ಶ್ರೀಮಂತರ ಚರಣಗಳ ಮೇಲೆ ಕೈಯಿಟ್ಟು—''ಮಲ್ಹಾರರಾಯರ ವಿಷಯ ವಾಗಿ ಶ್ರೀಮಂತರಿಗೆ ಬೇಕಾದವರು ಬೇಕಾದದ್ದು ಹೇಳಿರಲಿ; ಆದರೆ ಮಲ್ಹಾರ ರಾಯರು ಯಾವ ಬಗೆಯ ಅಪರಾಧಕ್ಕೂ ಪಾತ್ರರಿರುವದಿಲ್ಲ. ಅವರು ಯುದ್ಧಪ್ರಸಂಗದಲ್ಲಿ ಬೇಸರವನ್ನಾಗಲಿ, ಮರೆ-ಮೋಸವನ್ನಾಗಲಿ ಮಾಡಿರುವದಿಲ್ಲ. ಯಾವ ಬಗೆಯಿಂದಲೂ ಸರಕಾರದ ಅಹಿತವನ್ನು ಚಿಂತಿಸಿರುವದಿಲ್ಲ. ಅವರು ಭಾವುಸಾಹೇಬರಿಗೆ ಆಗಾಗ್ಗೆ ಹಿತದ ಮಾತುಗಳನ್ನು ಸೂಚಿಸಬೇಕು, ದುರ್ದೈವದಿಂದ ಅವನು ಭಾವುಸಾಹೇಬರು ನಿರಾಕರಿಸಬೇಕು, ಈ ಕ್ರಮವು ನಡೆದಿತ್ತು. ಭಾವುಸಾಹೇಬರು ಪುಣೆಯಲ್ಲಿ ಶ್ರೀಮಂತರ ಬಳಿಯಲ್ಲಿದ್ದು ರಾಜ್ಯ ಕಾರಭಾರವನ್ನು ಚನ್ನಾಗಿ ಮಾಡಿದರು. ಈ ಕುರುಕ್ಷೇತ್ರದ ಯುದ್ಧ ಪ್ರಸಂಗದ ಹೊರತು ಉಳಿದ ಯುದ್ಧ ಪ್ರಸಂಗಗಳಲ್ಲೆಲ್ಲ ಅವರಲ್ಲಿ ಯಾವಾಗಲೂ ಒಳ್ಳೆಯ ತಿಳುವಳಿಕೆಯೂ, ಕಾರ್ಯ ದಕ್ಷತೆಯೂ ಕಂಡುಬರುತ್ತಿದ್ದವು; ಆದರೆ ದುರ್ದೈವದಿಂದ ಈ ಪ್ರಸಂಗದಲ್ಲಿ ಮಾತ್ರ ಅವು ಭಾವು ಸಾಹೇಬರಲ್ಲಿ ಕಂಡುಬರಲಿಲ್ಲ. ವಿಲಕ್ಷಣ ಗರ್ವವೂ, ಹಟಮಾರಿತನವೂ ಅವರನ್ನು ಮುಸುಕಿ ಬಿಟ್ಟಿದ್ದವು. ಅದನ್ನು ನೋಡಿ ಅನುಭವಿಕರೂ, ಜಾಣರೂ ಆದವರು ಆಶ್ಚರ್ಯ ಪಡ ತೊಡಗಿದರು. ನಾನು ಎಷ್ಟೋಸಾರೆ ಅವರಿಗೆ ಹಿತಕರವಾದ ಸೂಚನೆಗಳನ್ನು ಮಾಡಿದೆನು; ಆದರೆ ಈತನು ಹೋಳಕರನ ಮೇಲುಗಟ್ಟಿಬರುವನೆಂದು ತಿಳಿದು ನನ್ನ ಸೂಚನೆಗಳನ್ನು ಅವರು ನಿರಾಕರಿಸುತ್ತಿದ್ದರು. ಈಶ್ವರೇಚ್ಛೆಯ ಮುಂದೆ ಯಾರ ಆಟವೂ ನಡೆಯದು. ಸರಕಾರ, ಒಟ್ಟಿನಮೇಲೆ ನನ್ನ ಅಭಿಪ್ರಾಯವೇನಂದರೆ, ಯಾವ ಮರಾಠಾ ಸರದಾರನೂ ತಪ್ಪುಗಾರ ನಿರುವದಿಲ್ಲ.

ಹೀಗೆ ಕುರುಕ್ಷೇತ್ರದ ಅನರ್ಥಪ್ರಸಂಗದ ಸುದ್ದಿಗಳನ್ನು ಕುರಿತು ಮಾತಾಡುತ್ತ ನಾನಾ ಸಾಹೇಬನು ಪುಣೆಗೆ ಬಂದನು. ಪುತ್ರವಿಯೋಗ-ಬಂಧುವಿಯೋಗಗಳ ಮರವು ಆತನಿಗಾಗ ಲೊಲ್ಲದು. ದಿನದಿನಕ್ಕೆ ಆ ದುಃಖಭಾರವನ್ನು ಸಹಿಸುವ ಶಕ್ತಿಯೂ ಆತನಲ್ಲಿ ಉಳಿಯದಾಯಿತು. ಆತನು ಶನಿವಾರ ವಾಡೆಯಲ್ಲಿ ಇರದೆ ಶ್ರೀಪರ್ವತಿಯ ಗುಡ್ಡದ ಮೇಲೆ ಇರತೊಡಗಿದನು. ಶ್ರೀರಾಮಚಂದ್ರನು ವನವಾಸಕ್ಕೆ ಹೋದಾಗ ದಶರಥನು-ರಾಮಾ! ರಾಮಾ! ಎಂದು ದುಃಖಿಸುತ್ತ ಮರಣಹೊಂದಿದಂತೆ, ನಾನಾಸಾಹೇಬನು ಮುಂದೆ ಐದೇ ತಿಂಗಳಿಗೆ ''ಭಾವೂ! ಭಾವೂ ವಿಶ್ವಾಸಾ! ವಿಶ್ವಾಸಾ!'' ಎಂದು ದುಃಖಿಸುತ್ತ ಶಕೆ ೧೬೮೩ ವಿಷುನಾಮಸಂವತ್ಸರದ

ಜ್ಯೇಷ್ಠವದ್ಯ ೭ ಮಂಗಳವಾರ ದಿವಸ ಪರ್ವತಿಯಮೇಲೆ ಕೈಲಾಸವಾಸಿಯಾದನು. ಈ ಕುರು ಕ್ಷೇತ್ರದ ಸಂಗ್ರಾಮದ ವಾರ್ತೆಯಿಂದ ಪುಣೆಯೊಳಗಿನ ಯಾವತ್ತು ಜನರು ಶೋಕಸಾಗರದಲ್ಲಿ ಮುಣುಗಿಹೋದರು. ಶ್ರೀಮಂತ ಬಾಳಾಜಿಬಾಜಿರಾವ ಉರ್ಫ ನಾನಾಸಾಹೇಬ ಪೇಶವೆಯ ಇಪ್ಪತ್ತು ವರ್ಷದ ಆಳಿಕೆಯಲ್ಲಿ ಮಹಾರಾಷ್ಟ್ರವು ಆನಂದಗಿರಿಯನ್ನೇರಿ ಮೆರೆಯುತ್ತಲಿತ್ತು; ಆದರೆ ಈ ಕುರುಕ್ಷೇತ್ರದ ದುಷ್ಟವಾರ್ತೆಯಿಂದ ಆ ಆನಂದಗಿರಿಯ ಮೇಲೆ ವಜ್ರಪ್ರಹಾರ ವಾಗಿ ಅದು ಚೂರುಚೂರಾಯಿತು! ಈ ಮಹಾ ಭಯಂಕರದ ಪ್ರಸಂಗದಿಂದ ದಕ್ಷಿಣ ದೊಳಗಿನ ಸುಮಾರು ಒಂದುವರೆ ಲಕ್ಷ ಸಧವೆಯರಾದ ಸ್ತ್ರೀಯರು ವಿಧವೆಯರಾದರು! ಈ ಘೋರ ಪ್ರಸಂಗದಿಂದ ಒಬ್ಬಳಾದರೂ ವಿಧವೆಯಾಗದೆಯಿದ್ದ ನಾಲ್ಕಾರು ಗುಡಿಸಲುಗಳಿದ್ದ ಸೊಟ್ಟಹಳ್ಳಿಯನ್ನು ಸಹ ಮಹಾರಾಷ್ಟ್ರದಲ್ಲಿ ಕಾಣುವಹಾಗಿದ್ದಿಲ್ಲ! ಯಾಕಂದರೆ, ಪ್ರತಿ ಒಂದು ಸಣ್ಣಪುಟ್ಟ ಹಳ್ಳಿಯಿಂದಲೂ ಯುದ್ಧಕ್ಕೋಸ್ಕರ ಯಾವನಾದರೊಬ್ಬನು ಹೋಗಿಯೇ ಇದ್ದನು. ಅಂದಬಳಿಕ ದೊಡ್ಡ ದೊಡ್ಡ ಊರುಗಳಲ್ಲಿ ಹಾಹಾಕಾರವೆಷ್ಟಾಗಿರಬಹುದೆಂಬದನ್ನು ವಾಚಕರೇ ತರ್ಕಿಸಬೇಕು! ಪಾನಿಪತದ ರಣಭೂಮಿಯಲ್ಲಿ ಸಾವಿರಾರು ಖಂಡಗ ರಕ್ತವು ಸುರಿಯಿತು! ಸಂಸಾರವು ಒಳ್ಳೆಯ ಭರಕ್ಕೆ ಬಂದ ಎಷ್ಟೋ ಪ್ರೌಢೆಯರೂ, ಅದೇ ಸಂಸಾರಸುಖವನ್ನ ನುಭವಿಸಹತ್ತಿದ ಎಷ್ಟೋ ಮುಗ್ಧೆಯರೂ, ಸಂಸಾರಸುಖವನ್ನು ಎದುರುನೋಡುತ್ತಿರುವ ಎಷ್ಟೋ ಬಾಲೆಯರೂ ಪತಿವಿಯೋಗ ಹೊಂದಿ ಶೋಕಸಾಗರದಲ್ಲಿ ಮುಣುಗಿದರು! ಎಷ್ಟೋ ಹುಡುಗರು ಪರದೇಶಿಗಳಾದರು; ಎಷ್ಟೋ ಮುಪ್ಪಿನ ತಾಯಿ-ತಂದೆಗಳು ಮಕ್ಕಳ ಹೊಟ್ಟೆ ಬೇನೆ ಹಚ್ಚಿಕೊಂಡರು ಹೀಗೆ ಸಾವಿರಾರು ಕುಟುಂಬಗಳ ಘಾತವಾಗಿ ಹೋಯಿತು ಈ ದುಃಖ ಪ್ರಸಂಗವನ್ನು ವರ್ಣಿಸುವ ಸಾಮರ್ಥ್ಯವು ನಮ್ಮ ಲೇಖಣಿಯಲ್ಲಿರುವದಿಲ್ಲ! ಅಲ್ಲಲ್ಲಿ ಅದು ಮುಗ್ಗರಿಸುತ್ತಿರುವದರಿಂದ, ಈ ಶೋಕಸಾಗರದ ಸಹವಾಸವನ್ನು ಇಲ್ಲಿಗೆ ಸಾಕುಮಾಡುವೆವು! ಪ್ರಿಯವಾಚಕರೇ, ವಿಶ್ವಭಕ್ಷಕನಾದ ಕಾಲನಿಗೆ ದಯವೆಲ್ಲಿಯದು? ಆತನಿಗೆ ಹಸಿವೆಯಾದರೆ ತೀರಿತು, ಪೇಶ್ವೆಯರಿರಲಿ, ದುರಾಣಿಗಳಿರಲಿ, ಬೇರೆ ಮತ್ತೆಯಾರಾದರೂ ಇರಲಿ ಬೇಕಾದವರನ್ನು ಬೇಕಾದಾಗ ಆತನು ಬಾಯಿಯಲ್ಲಿ ಹಾಕಿ ಕೊಳ್ಳುವವನು ! ಅದಕ್ಕೆ ಕಾರಣಗೀರಣಗಳ ಅವಶ್ಯ ವಿಲ್ಲ, ಆತನು ಸಣ್ಣವರೆನ್ನನು- ದೊಡ್ಡವರೆನ್ನನು, ಉಚ್ಚರೆನ್ನನು-ನೀಚರೆನ್ನನು, ಕಸಕಾಯಿ ಯೆನ್ನನು-ಹಣ್ಣೆನ್ನನ್ನು ಮನೆಯವರೆನ್ನನು- ಹೊರಗಿನವರೆನ್ನನು, ಬಿರುಸೆನ್ನನು-ಮಿದುವೆನ್ನನು, ಶ್ರೀಮಂತರೆನ್ನನು- ಬಡವರೆನ್ನನು ಆತನು ಇದಾವದನ್ನೂ ಎಣಿಸದೆ, ಇಂದು ನಾಳೆನ್ನದೆ ಮನಸ್ಸಿಗೆ ಬಂದಕೂಡಲೆ ನುಂಗಿ ನೀರು ಹಿಡಿಯುವನು! ಇಂಥ ಮಹಾಕಾಲನಿಗೆ ಕುರುಪಿತಾ ಮಹನಾದ ಭೀಷ್ಮಾಚಾರ್ಯನು ''ಸರ್ಗಪ್ರಲಯಯೋಃಕರ್ತಾ ತಸ್ಮೈ ಕಾಲಾತ್ಮನೇನಮಃ ಎಂದು ನಮಸ್ಕರಿಸಿರುವನು; ಆದ್ದರಿಂದ ನಾವೂ ವಾಚಕರೇ, ನೀವು ಆ ಕಾಲಾತ್ಮನಾದ ಪರಮಾತ್ಮನನ್ನು ಈಗ ನಮಸ್ಕರಿಸೋಣ!

# ಸುಖಸೂಚನೆ

ಮನುಷ್ಯಮಾತ್ರರನ್ನು ಅಭಿಮಾನವು ಬಿಟ್ಟಿಲ್ಲ. ಸ್ವಾಭಿಮಾನ, ಸ್ವಜನಾಭಿಮಾನ, ಸ್ವದೇಶಾಭಿಮಾನ, ಸ್ವಧರ್ಮಾಭಿಮಾನ ಇತ್ಯಾದಿ ಹೆಸರುಗಳಿಂದ ಅದು ಸರ್ವಶ್ರುತವಾಗಿರುವದು. ಪೇಶ್ವೆಯರು ನಮ್ಮ ಹಿಂದೂ ಜನರಿಗೆ ಸ್ವದೇಶಿಯರು, ಸ್ವಧರ್ಮದವರು. ಅಂಥವರ ದುರ್ದಶೆಯ ಪರಾಭವದಿಂದ ನಮ್ಮೆಲ್ಲರಿಗೆ ವ್ಯಸನವಾಗುವದೂ, ನಮ್ಮ ಮನಸ್ಸು ಚಡ ಪಡಿಸುವದೂ ಸ್ವಾಭಾವಿಕವೇ ಸರಿ. ಅದರಲ್ಲಿಯೂ ಬ್ರಾಹ್ಮಣರು, ತತ್ರಾಪಿ ಚಿತ್ಪಾವನ ಬ್ರಾಹ್ಮಣರು ಹೆಚ್ಚು ವ್ಯಸನಾಕ್ರಾಂತರಾದರೆ ಆಶ್ಚರ್ಯವಲ್ಲ; ಆದರೆ ಸೃಷ್ಟಿ–ಸ್ಥಿತಿ– ಲಯ ಕರ್ತೃತ್ವಾಧಿಕಾರವು ಈಶ್ವರನ ಕಡೆಗಿರುವದರಿಂದ, ಈಶ್ವರೇಚ್ಛೆಯ ಹೊರತು ಒಂದು ಕಡ್ಡಿಕೂಡ ಕದಲುವದಿಲ್ಲೆಂಬದನ್ನು ಮನಸ್ಸಿನಲ್ಲಿ ತಂದರೆ, ಹೀಗೆ ಅಭಿಮಾನದಿಂದ ವ್ಯಸನಪಡುವದು ಗೌಣವೇಸರಿ! ಆಯಾ ಜಾತಿಯವರು, ಆಯಾಧರ್ಮದವರು, ಆಯಾದೇಶದವರು ತಮ್ಮ ತಮ್ಮ ಜಾತಿ–ಧರ್ಮ– ದೇಶಗಳ ಹಿತವನ್ನು ಮಾತ್ರ ನೋಡಿಕೊಳ್ಳಬಹುದು; ಆದರೆ ವಿಶ್ವಪಾಲಕನು ವಿಶ್ವದೊಳಗಿನ ಎಲ್ಲ ಜಾತಿಯವರ, ಎಲ್ಲ ಧರ್ಮದವರ, ಎಲ್ಲ ದೇಶದವರ ಹಿತವನ್ನು ನೋಡಿಕೊಳ್ಳಬೇಕಾಗುವದು. ಅಂದಬಳಿಕ ಆತನ ತಂತ್ರದ ಜ್ಞಾನವು ನಮಗೇನು ಆಗುವದು? ನಾವು ದೀನರು, ಈಶ್ವರನು ಸಮಸ್ತಲೋಕಗಳಿಗೂ ಈಪ್ಸಿತಾರ್ಥಗಳನ್ನು ಕೊಡುವ ದಾತೃವು; ನಾವು ಅಲ್ಪಜ್ಞರು, ಈಶ್ವರನು ಸರ್ವಜ್ಞನು. ಆದ್ದರಿಂದಲೇ ಜಗತ್ತಿನ ಆಗು–ಹೋಗುಗಳೆಲ್ಲ ಆತನ ತಂತ್ರದಿಂದ ಜಗತ್ತಿನ ಹಿತಕ್ಕಾಗಿಯೇ ಆಗುತ್ತವೆಂತಲೂ, ಒದಗಿದ ಪ್ರಸಂಗಗಳೆಲ್ಲ ಈಶ್ವರ ಪ್ರಸಾದ ಗಳೆಂತಲೂ ನಾವು ತಿಳಿದು ತಪ್ಪುಗಳನ್ನು ತಿದ್ದಿಕೊಳ್ಳುತ್ತ ನಮ್ಮ ನಮ್ಮ ಕರ್ತವ್ಯಗಳನ್ನು ಮಾಡುತ್ತಿರಬೇಕು. ಮನೆಯ ಜಾಣನಾದ ಯಜಮಾನನು ಮನೆತನದ ಹಿತಕ್ಕಾಗಿ ಒಮ್ಮೆ ಮನೆಯ ಜನರನ್ನು ಅವರವರ ತಪ್ಪುಗಳಿಗಾಗಿ ದಂಡಿಸುವನು, ಒಮ್ಮೆ ಅವರ ಸೌಜನ್ಯಕ್ಕಾಗಿ ಅವರನ್ನು ಪ್ರೋತ್ಸಾಹಿಸುವನು. ಆತನ ಆ ಶಿಕ್ಷಾ–ಪ್ರೋತ್ಸಾಹಗಳು ಕುಟುಂಬದವರ ಹಿತಕ್ಕಾಗಿಯೇ ಇರುತ್ತವೆ. ಇದೇ ಮಾತು ಸ್ವಕುಟುಂಬಿಗೂ ಹತ್ತುವದು. ಸರ್ವಜ್ಞನೂ– ಸರ್ವಾಂತ ರ್ಯಾಮಿಯೂ ಆದ ಆ ವಿಶ್ವಚಾಲಕನು, ಒಮ್ಮೆ ಒಬ್ಬರನ್ನು ಹಿಂದಕ್ಕೆ ಸರಿಸಿದಂತೆ ಮಾಡುವನು, ಒಮ್ಮೆ ಒಬ್ಬರನ್ನು ಮುಂದಕ್ಕೆ ಕರೆದಂತೆ ಮಾಡುವನು. ಆತನು ಹ್ಯಾಗೆ ಮಾಡಿದರೂ ನಾವು ಆತನಲ್ಲಿ ದೃಢವಿಶ್ವಾಸ ವಿಟ್ಟು, ಆತನು, ಮಾಡುವದನ್ನೆಲ್ಲ ನಮ್ಮ ಹಿತಕ್ಕಾಗಿಯೇ ಮಾಡುವನೆಂದು ತಿಳಿದು, ಆತನ ವಿಷಯವಾಗಿ ಅಶ್ರದ್ಧೆಯನ್ನು ತಾಳದೆ, ನಿರುತ್ಸಾಹಿಗಳಾಗದೆ ವಿವೇಕತಾಳಿ ಕರ್ತವ್ಯಜಾಗರೂಕರಾಗಿರತಕ್ಕದ್ದು; ಯಾಕಂದರೆ, ಈಶ್ವರೀ ತಂತ್ರರೂಪವಾದ ರಾಜ್ಯಾದಿ ಲೌಕಿಕ ಸಣ್ಣ–ದೊಡ್ಡ ನಾಶವಂತ ವ್ಯವಹಾರಗಳೆಲ್ಲ, ನಮ್ಮ ಆತ್ಮೋನ್ನತಿಯ ಸಾಧನಗಳಾಗಿರುವವಲ್ಲದೆ, ನಾವು ಈಶ್ವರ ಕೃಪೆಯಿಂದ ಸಾಧಿಸತಕ್ಕ ಶಾಶ್ವತ ವಾದ ಆತ್ಮೋದ್ಧಾರರೂಪ ಸಾಧ್ಯವಲ್ಲೆಂಬದನ್ನು ಚನ್ನಾಗಿ ನೆನಪಿನಲ್ಲಿಡಬೇಕು. ನಾವು ಆ ಸಾಧನಗಳ ದುರುಪಯೋಗಮಾಡಿದರೆ, ಈಶ್ವರನ ಅವಕೃಪೆಯಿಂದ ನಮ್ಮ ಅಧಃಪತನವು ತಪ್ಪದೆ ಆಗುವದು.

ಈ ಜಗತ್ತಿನಲ್ಲಿ ಯಾವ ರಾಜ್ಯವು ಸ್ಥಿರವಾಗಿದೆ? ರಾಮರಾಜ್ಯವು ಈಗ ಉಳಿದಿರುವದಿಲ್ಲ; ಕೃಷ್ಣನ ರಾಜ್ಯವು ಕಣ್ಣಿಗೆ ಕಾಣುವದಿಲ್ಲ, ಕೌರವರ ರಾಜ್ಯವೆತ್ತ ಅಡಗಿರುವದೋ-ಪಾಂಡವರ ರಾಜ್ಯವೆತ್ತ ಹೋಗಿರುವದೋ? ಗ್ರೀಕ-ರೋಮರಾಜ್ಯಗಳು ಈಗಿನ ಗತಿಯನ್ನು ಹೊಂದಿಯಾವೆಂದು ಆಗ ಯಾರಾದರೂ ತಿಳಿದಿರಬಹುದೆ? ಅಶೋಕ ಚಕ್ರವನ್ನು ವೈಭವವು ಈಗೆಲ್ಲಿ ಉಳಿದದೆ? ಮುಸಲ್ಮಾನರ ಮೊದಲಿನ ಅಬ್ಬರವು ಈಗ ಯಾಕೆ ಕಾಣುವದಿಲ್ಲ! ಕನ್ನಡಿಗರ ಅಭಿಮಾನದ ವಿಜಯನಗರದ ರಾಜ್ಯವು ಈಗ ಸಡಗರದಿಂದ ಮೆರೆಯುತ್ತಿರುವದೋ? ಆ ರಾಜ್ಯವನ್ನು ಮಣ್ಣುಗೂಡಿಸಿದ ಮುಸಲ್ಮಾನ ಬಾದಶಾಹಿ ಆದರೂ ಈಗ ಉಳಿದಿರುವನೇ? ಶಿವಛತ್ರಪತಿಯ ಧರ್ಮೋದ್ಧಾರದ ರಾಜ್ಯದ ಗತಿಯು ಏನಾಯಿತು? ಜರ್ಮನಿಯ ಕೇಸರಬಾದಶಹನು ಪೃಥ್ವಿಯ ಜಯಿಸುವದನ್ನು ಬಿಟ್ಟು ಹೋದನು? ಪ್ರಿಯವಾಚಕರೇ, ಹೀಗೆ ಒಂದೇ ಎರಡೇ? ಅಸಂಖ್ಯಾತರಾಜ್ಯಗಳು ಸಾವಿನ ದವಡೆಯಲ್ಲಿ ನುರಿತು ನುಗ್ಗಾಗಿಹೋಗಿರುವವು! ಹೀಗೆ ಅವು ನುಗ್ಗಾಗುವಾಗ ಯಾವ ಯಾವ ದೇಶದವರು, ಯಾವ ಯಾವ ಜಾತಿಯವರು, ಯಾವ ಯಾವ ಪಂಥದವರು, ಯಾವ ಯಾವ ಪಂಗಡದವರು, ಯಾವ ಯಾವ ವ್ಯಕ್ತಿಗಳು ಎಷ್ಟು ಎಷ್ಟು ಕಣ್ಣೀರು ಸುರಿಸಿರಬಹುದೆಂಬದನ್ನು ಮನಸ್ಸಿನಲ್ಲಿ ತಂದರೆ, ಪೇಶ್ವೆಯವರ ಕುರುಕ್ಷೇತ್ರದ ಅಪಜಯಕ್ಕಾಗಿ ನಾವು ಯಾಕೆ ಮಿಡುಕಬೇಕೆನ್ನುವ ಹಾಗೆ ಆಗುವದಿಲ್ಲವೆ? ಹೌದು, ಯಾರಿಗಿಲ್ಲದ ವಿಪತ್ತು ನಮಗೇ ಬಂದಿದ್ದರೆ ಮಿಡುಕುವದು ಯೋಗ್ಯವು; ಆದರೆ ಎಲ್ಲರೂ ವಿಪತ್ತಿನ ಸೂತ್ರದಲ್ಲಿ ಪೋಣಿಸಿರುವಾಗ, ನಾವು ಮರಕಡಿದು ಮೈಮೇಲೆ ಹಾಕಿಕೊಂಡಂತೆ ಮಾಡಿಕೊಳ್ಳುವದು ಮೂರ್ಖತನವೇ ಸರಿ!

ಇನ್ನು, ಅಳುಬುರಕರ ದೃಷ್ಟಿಯಿಂದಲೂ ಕುರುಕ್ಷೇತ್ರದ ಅಪಜಯಕ್ಕಾಗಿ ನಾವು ಮಿಡಕುವ ಕಾರಣವಿಲ್ಲೆಂದು ಸ್ಪಷ್ಟವಾಗಿ ಹೇಳುವೆವು; ಯಾಕಂದರೆ, ಅದಕ್ಕೆ ಅಂಥ ಸ್ಪಷ್ಟ ಕಾರಣಗಳೂ ಉಂಟು. ಆ ಕಾರಣಗಳಲ್ಲಿ ಮುಖ್ಯ ಕಾರಣವೆಂದರೆ, ಈಶ್ವರೀ ತಂತ್ರದಿಂದಾದದಕ್ಕೆ ನಾವು ಹೆಸರಿಡಬಾರದೆಂಬದು! ಈ ಅನರ್ಥಕಾರಕ ಯುದ್ಧದಿಂದ ಪೇಶ್ವೆಯವರ ಸಾಮರ್ಥ್ಯವು ಕುಗ್ಗಿದರೂ, ಅವರ ರಾಜ್ಯವು ಮುಂದೆ ೫೭ ವರ್ಷ ಬಾಳಿರುವರೆಂಬದು ಎರಡನೆಯ ಕಾರಣವು. ಈ ಐವತ್ತೇಳು ವರ್ಷಗಳಲ್ಲಿ, ದೊಡ್ಡಮಾಧವರಾವ, ನಾನಾಫಡಣವೀಸ, ಮಹದಾಜಿಸಿಂದೆ, ಯಶವಂತರಾವಹೋಳಕರ, ರಾಮಶಾಸ್ತ್ರಿಗಳು ಮೊದಲಾದ ಪ್ರಸಿದ್ಧಪುರುಷರು ಆಗಿ ಹೋಗಿರುವರು. ಈಗಿನ ಪೇಶ್ವೆಯರ ಸಾಮರ್ಥ್ಯವು, ಹೈದರಲಿ, ಟೀಪ್ಪು, ನಿಜಾಮು ಮೊದಲಾದವರನ್ನು ನಡುಗಿಸಿತು. ನಮ್ಮ ಇಂಗ್ಲಿಷ ಸರಕಾರದ ರಾಜ್ಯವಿಸ್ತಾರದ ಕಾರ್ಯಕ್ಕೆ ಪ್ರಾಮುಖ್ಯವಾಗಿ ಈ ಪೇಶ್ವೆ ಸರಕಾರದ ಶಾಖೋಪಶಾಖೆಗಳಿಂದಲೇ ಹೆಚ್ಚು ತೊಂದರೆ ಯಾಯಿತೆಂದು ಇತಿಹಾಸವು ಹೇಳುತ್ತಿರುವದು. ಇರಲಿ. ಈ ಕಾಲದ ಪೇಶ್ವೆಯವರ ಸದ್ಗುಣವನ್ನು ಕುರಿತು ಒಂದು ಪ್ರಸಂಗವನ್ನು ಇಲ್ಲಿ ಸ್ವಲ್ಪದರಲ್ಲಿ ಉಲ್ಲೇಖಿಸುವೆವು; ಯಾಕಂದರೆ, ಸದ್ಗುಣದ ಸತ್ಕ್ರಿಯೆಯೇ ನಿಜವಾದ ಸಮಾಧಾನಕ್ಕೆ ಕಾರಣವಾಗುವದು.

ನಿಜಾಮನಿಂದ ಪೇಶ್ವೆಸರಕಾರಕ್ಕೆ ಬರುವ ವಾರ್ಷಿಕ ಖಂಡಣೆಯು ಹಾಗೇ ಉಳಿದಿತ್ತು. ಅದರ ಲೆಕ್ಕಮಾಡಿ ಕಳಿಸಲಿಕ್ಕೆ ನಿಜಾಮ ಸರಕಾರಕ್ಕೆ ತಿಳಿಸಬೇಕೆಂದು ನಾನಾ ಫಡಣವೀಸನು ಹೈದರಾಬಾದದಲ್ಲಿದ್ದ ತನ್ನ ವಕೀಲನಿಗೆ ಬರೆದನು. ಅದರಂತೆ ವಕೀಲನು ನಿಜಾಮಸರಕಾರಕ್ಕೆ ತಿಳಿಸಲು, ನಿಜಾಮನ ವಜೀರನಾದ ಮಶ್ರುಖಾನನು ನೆರೆದ ದರ್ಬಾರದಲ್ಲಿ ಪೇಶ್ವೆಯವರ ವಕೀಲನಿಗೆ—''ನಿಮ್ಮ ನಾನಾನಿಗೇ ಇಲ್ಲಿಯವರೆಗೆ ಬಂದು ಲೆಕ್ಕಮಾಡಿಕೊಡೆಂದು ತಿಳಿಸಿರಿ.'' ಎಂದು ಉದ್ಧಟತನದಿಂದ ನುಡಿದು, ನಾನಾ ಫಡಣವೀಸನ, ಅರ್ಥಾತ್ ಪೇಶ್ವೆಸರಕಾರದ ಅಪಮಾನಮಾಡಿದನು. ಈ ಸಂಗತಿಯನ್ನು ವಕೀಲನು ತನ್ನ ಯಜಮಾನರಾದ ಪೇಶ್ವೆಯ ವರಿಗೆ ತಿಳಿಸಲು, ನಾನಾಫಡಣವೀಸನು—''ಮಶ್ರುಖಾನನನ್ನು ಒತ್ತೀ ಇಟ್ಟುಕೊಳ್ಳದಿದ್ದರೆ ನಾನು ನಾನಾನೇ ಅಲ್ಲ''ವೆಂದು ಪ್ರತಿಜ್ಞೆಮಾಡಿ, ನಿಜಾಮನೊಡನೆ ದಂಡಯಾತ್ರೆಗೆ ಹೊರಡಲು ಸಿದ್ಧವಾಗುವದಕ್ಕಾಗಿ ಸೈನ್ಯಾಧಿಕಾರಿಗಳನ್ನು ಗುಪ್ತರೀತಿಯಿಂದ ಆಜ್ಞಾಪಿಸಿದನು. ಸಿಂದೆ, ಹೋಳಕರ, ಭೋಸಲೆ, ಗಾಯಕವಾಡ ಮೊದಲಾದ ಮಹಾರಾಷ್ಟ್ರ ಸರದಾರರಿಗೆ, ಇಂಥ-ಇಂಥ ಮುಕ್ಕಾಮಿಗೆ ಇಂಥ-ಇಂಥವರು ಸೈನ್ಯದೊಡನೆ ಇಂಥ-ಇಂಥ ದಿವಸ ಬಂದು ಕೂಡಬೇಕೆಂದು ಗುಪ್ತ ಆಜ್ಞಾಪತ್ರಗಳು ಹೋದವು. ಪುಣೆಯಲ್ಲಿ ವಿಶೇಷಗದ್ದಲ ವೇನು ಇದ್ದಿಲ್ಲ. ಇದನ್ನು ನೋಡಿ ಪುಣೆಯಲ್ಲಿದ್ದ ನಿಜಾಮನ ವಕೀಲನು ತನ್ನ ಒಡೆಯನಾದ ನಿಜಾಮನಿಗೆ—''ಇಲ್ಲಿ ಯುದ್ಧದ ವಿಶೇಷ ಸೌರಣೆಯೇನು ನಡೆದಿರುವದಿಲ್ಲ. ಬ್ರಾಹ್ಮಣರು ದಿನಕ್ಕೆ ಮೂರುಸಾರೆ ಸ್ನಾನಮಾಡುವರು, ಎರಡುಸಾರೆ ದೋತರ ಒಗೆಯುವರು; ಆದ್ದರಿಂದ ತಾವು ನಿಶ್ಚಿಂತರಾಗಿರ ಬೇಕು.'' ಎಂದು ಪತ್ರಬರೆದನು. ಇದರಿಂದ ನಿಜಾಮನು ಉಬ್ಬಿದನು. ಬುದ್ಧಿಪೂರ್ವಕವಾಗಿ ಆತನು ಶ್ರೀಮಂತರ ಅಪಮಾನವನ್ನು ಮಾಡಹತ್ತಿದನು. ಒಮ್ಮೆ ಆತನು ಪೇಶ್ವೆಯವರ ವಕೀಲನಾದ ಕಾಳೆ ಎಂಬವನನ್ನು ಕುರಿತು—''ವಕೀಲಸಾಹೇಬ, ನಿಮ್ಮ ಬಾಲಪೇಶ್ವೆಯವರಾದ ಸವಾಯಿಮಾಧವರಾಯರು ನಮ್ಮ ಈ ಚೋಪದಾರನ ಹುಡುಗ ನಷ್ಟು ಇರುವರೇ?'' ಎಂದು ಪ್ರಶ್ನಮಾಡಲು, ಚತುರನಾದ ಕಾಳೆಯು—''ಸರಕಾರ, ನಮ್ಮ ಶ್ರೀಮಂತರು ಸಿಂಹಾಸನದ ಮೇಲೆ ಕುಳಿತರೆ, ನಿಮಗಿಂತ ನಾಲ್ಕುಬೆರಳು ಎತ್ತರವಾಗ ಬಹುದು.'' ಎಂದು ಉತ್ತರಕೊಟ್ಟನು! ಮತ್ತೊಮ್ಮೆ ನಿಜಾಮನು ಪೇಶ್ವೆಯ ವಕೀಲನೊಡನೆ ಬರುತ್ತಿರುವಾಗ, ಅಪಮಾನಕ್ಕಾಗಿ ಸವಾಯಿಮಾಧವ ರಾಯರ ಚಿತ್ರವನ್ನು ಹಾದಿಯೊಳಗಿನ ದೊಂದು ಶೌಚಕೂಪದ ಮೇಲೆ ತೂಗಹಾಕಿದ್ದರು. ಆಗ ನಿಜಾಮನು ಕಾಳೇ ವಕೀಲನಿಗೆ—''ವಕೀಲಸಾಹೇಬ, ನಿಮ್ಮ ಶ್ರೀಮಂತರಿಗೆ ನಾವು ಯೋಗ್ಯ ಸ್ಥಳಕೊಟ್ಟಿರುವೆವಲ್ಲವೆ'' ಎಂದು ಕೇಳಲು, ಅದಕ್ಕೆ ವಕೀಲನು—''ಸರಕಾರ, ಅದರಲ್ಲಿ ಸಂಶಯವೇನು? ತಮ್ಮಲ್ಲಿ ಶೌಚಕ್ಕೆ ಸಾಫವಾಗದೆಯಿದ್ದ ಜನರು, ನಮ್ಮ ಶ್ರೀಮಂತರ ಚಿತ್ರವನ್ನು ನೋಡಿದರೆ ಸಾಕು, ಶೌಚ ವಾಗುವದು'' ಎಂದು ಸ್ಪಷ್ಟವಾಗಿ ಉತ್ತರಕೊಟ್ಟನಂತೆ!

ಹೀಗೆ ನಿಜಾಮನು ಕುಚೋದ್ಯತನ ನಡೆಸಿರುವಾಗ ಪುಣೆಯಿಂದ ನಾನಾಫಡಣವೀಸನು ಸ್ವಲ್ಪ ದಂಡಿನೊಡನೆ ಯುದ್ಧಕ್ಕೆ ಹೊರಟನು. ಈ ಅಲ್ಪ ಸೈನ್ಯವನ್ನು ನೋಡಿ ನಿಜಾಮನ

ವಕೀಲನು ಉಪಹಾಸದಿಂದಲೇ ನಿಜಾಮನಿಗೆ ಆ ಸುದ್ದಿಯನ್ನು ತಿಳಿಸಿದನು. ಪೇಶ್ವೆಯವರ ಸೈನ್ಯವು ಮುಂದಕ್ಕೆ ಹೋದಹೋದಂತೆ, ಅದಕ್ಕೆ ಬೇರೆ ಬೇರೆ ಸರದಾರರ ಸೈನ್ಯಗಳು ಬಂದು ಕೂಡಿ, ಅದು ಹೆಚ್ಚುತ್ತಹೋಯಿತು. ಖರಡೇ ಎಂಬಲ್ಲಿ ಪೇಶ್ವೆಯವರ ಪ್ರಚಂಡ ಸೈನ್ಯಕ್ಕೆ ನಿಜಾಮನ ದೊಡ್ಡಸೈನ್ಯವು ಎದುರಾಯಿತು. ೧೭೯೫ನೇ ಇಸವಿಯಲ್ಲಾದ ಈ ಯುದ್ಧದಲ್ಲಿ ನಿಜಾಮನು ಪೂರ್ಣವಾಗಿ ಸೋತು, ತನ್ನ ಜನಾನಖಾನೆಯ ಅರವಿಲ್ಲದೆ ಓಡಿಹೋದನು. ಆಗ ಮರಾಟರು ನಿಜಾಮನ ಜನಾನಖಾನೆಯನ್ನು ಸೆರೆಹಿಡಿದು ತಂದು ನಾನಾಫಡಣ ವೀಸನಿಗೆ ಒಪ್ಪಿಸಿದರು. ಆಗ ನಾನಾನು ತನ್ನವರಿಗೆ ಸಿಟ್ಟುಮಾಡಿ—''ನಮ್ಮ ಯುದ್ಧವು ನಿಜಾಮನ ಸಂಗಡ ನಡೆದಿರುವದಲ್ಲದೆ ಅವನ ಹೆಂಡಿರ ಸಂಗಡ ನಡೆದಿರುವದಿಲ್ಲ; ಅಂದಬಳಿಕ ಇವರನ್ನು ಸೆರೆಹಿಡಿದು ತಂದಕಾರಣವೇನು? ಎಂದು ನುಡಿದು, ನಿಜಾಮನ ಆ ಜನಾನಖಾನೆಯನ್ನು ಬಹುಮಾನಪೂರ್ವಕವಾಗಿ ಆತನ ಬಳಿಗೆ ಕಳಿಸಿಕೊಟ್ಟನು. ಆ ಸದ್ಗುಣಿಯಾದ ನಾನಾನು ಈ ಪ್ರಸಂಗದಲ್ಲಿ ನಿಜಾಮನಿಗೆ ಬರೆದ ಪತ್ರದಲ್ಲಿ—ತಾವು ಅವಸರದಲ್ಲಿ ಜನಾನಖಾನೆಯನ್ನು ಹಿಂದೆ ಬಿಟ್ಟು ಹೋಗಿದ್ದಿರಿ. ಅವರನ್ನು ಈಗ ಸುರಕ್ಷಿತವಾಗಿ ಕಳಿಸಿರುತ್ತದೆ, ಸ್ವೀಕರಿಸಬೇಕು, ಎಂದು ಬರೆದಿದ್ದನು. ಅದನ್ನು ಓದಿ ನಿಜಾಮನು ಅತ್ಯಂತ ಕೃತಜ್ಞತೆಯಿಂದ—''ನಾನಾನು ನನ್ನ ನಿಜವಾದ ಮಿತ್ರನಿರುತ್ತಾನೆ.'' ಎಂದು ನುಡಿದು, ತನ್ನ ಮೊಹರನ್ನೂ, ದೌತಿ–ಲೆಕ್ಕಣಿಕೆಗಳನ್ನೂ, ಕಾಗದವನ್ನೂ ನಾನಾನ ಬಳಿಗೆ ಕಳಿಸಿ, ನೀವು ಬೇಕಾದಷ್ಟು ರಕಮು ಕಾಣಿಸಿ ಮೊಹರುಮಾಡಿ ಕಳಿಸಿರಿ, ಅಷ್ಟು ಹಣ ಕಳಿಸುವೆನು'' ಎಂದು ತಿಳಿಸಿದನು. ಆಗ ನಾನಾನು ಆ ಮೊಹರು ಮೊದಲಾದವನ್ನು ತಿರುಗಿ ಕಳಿಸಿ''ನಾನು ತಿಳಿಸುವ ಕಾರಣವಿಲ್ಲ, ನಿಮ್ಮ ಲೆಕ್ಕನೋಡಿ ನೀವೇ ತಿಳಿಸಬೇಕು,'' ಎಂದು ಉತ್ತರ ಬರೆದು ಕಳಿಸಿದನು. ಪೇಶ್ವೆಯವರಿಗೆ ಕೊಡಬೇಕಾಗಿದ್ದಷ್ಟು ಹಣವು ನಿಜಾಮನ ಖಜಾನೆಯಲ್ಲಿ ಸಿಲಕು ಇದ್ದಿಲ್ಲ. ಆಗ ನಿಜಾಮನು ನಾನಾನ ಸೂಚನೆ ಯಂತೆ ಇದ್ದಷ್ಟು ಹಣಕೊಟ್ಟು, ಪೂರಾ ಹಣಮುಟ್ಟುವವರೆಗೆ ಮಶೂರ್‍ಖಾನನನ್ನು ಪುಣೆ ಯಲ್ಲಿ ಒತ್ತೀ ಇಟ್ಟನಂತೆ! ಪೇಶ್ವೆಯವರ ಈ ಪ್ರತಾಪಯುಕ್ತ ಸದ್ಗುಣವನ್ನು ಶತ್ರುಗಳೂ ವರ್ಣಿಸಿದ್ದು ಆಶ್ಚರ್ಯವಲ್ಲ. ಈ ಪ್ರತಾಪಶಾಲಿಗಳಾದ ಮರಾಟರು ಕುರುಕ್ಷೇತ್ರದ ಯುದ್ಧ ವಾದ ಸ್ವಲ್ಪ ದಿವಸದಲ್ಲಿಯೇ ದುರಾಣಿಯ ಸೇಡು ತೀರಿಸಿಕೊಂಡರೆಂದು ಕೇಳಿಕೆಯಲ್ಲಿರುವದು. ಸದಾಶಿವರಾವಭಾವುವಿನ ಚಿಕ್ಕ ಅಣ್ಣನಾದ ರಾಘೋಬಾದಾದಾ ಭರಾರಿಯು ಸೈನ್ಯದೊಡನೆ ದುರಾಣಿಯ ಬೆನ್ನಟ್ಟಿಹೋಗಿ ಹಾದಿಯಲ್ಲಿಯೇ ಆತನ ಗಂಟುಬಿದ್ದು, ಆತನ ಪ್ರಾಣವನ್ನು ಹಿಂಡಿದನೆಂದು ''ಪಾನಿಪತಚಿಮೋಬದಲಾ'' ಎಂಬ ನಾಟಕದಲ್ಲಿ ವರ್ಣಿಸಿರುವರು; ಆದರೆ ಐತಿಹಾಸಿಕ ಪ್ರಸಿದ್ಧ ಸಾಕ್ಷಿಗಳು ನಮ್ಮ ಕೇಳಿಕೆಯಲ್ಲಿ ಬಂದಿರುವದಿ ಲ್ಲಾದ್ದರಿಂದ, ಅದಕ್ಕೆ ನಾವು ಅಷ್ಟು ಮಹತ್ವ ಕೊಡುವದಿಲ್ಲ.

ಹೀಗೆ ಮಹಾರಾಷ್ಟ್ರರು ಎಷ್ಟು ಪ್ರತಾಪವಂತರಾಗಿದ್ದರೂ ಅವರನ್ನು ಜಾತಿ ಮತ್ಸರವು ಅಂತರಂಗದಲ್ಲಿ ಸುಡುತ್ತಿತ್ತು. ಈ ಅನರ್ಥಕಾರಕ ಸ್ಥಿತಿಯ ನಿವಾರಣಕ್ಕಾಗಿಯೇ ಪರಮೇಶ್ವರನು ಇಂಗ್ಲಿಷ ಸರಕಾರದ ಧರ್ಮೋದಾರ್ಯದ ಆಳಿಕೆಯನ್ನು ಒದಗಿಸಿಕೊಟ್ಟನು. ಈ ಆಳಿಕೆಯ ಪ್ರಾಪ್ತಿಗೆ ಕುರುಕ್ಷೇತ್ರದಲ್ಲಾದ ಪೇಶ್ವೆಯರ ಸೋಲೇ ಕಾರಣವಾಯಿತೆಂದು ಕೆಲವು ತಾರ್ಕಿಕರು

ತರ್ಕಿಸುತ್ತಿರುವದರಿಂದ, ಆ ಸೋಲನ್ನು ಕುರಿತು ನಾವು ಶೋಕಿಸದೆ, ಅದೊಂದು ಸುಖ ಸೂಚನೆ ಯೆಂದು ತಿಳಿಯಲಿಕ್ಕೆ ಅತಿ ಪ್ರಬಲವಾದ ಮೂರನೆಯ ಕಾರಣವಾಗಿರುತ್ತದೆಂದು ಹೇಳುವೆವು. ಕುರುಕ್ಷೇತ್ರದ ಘೋರ ಸಂಗ್ರಾಮದ ಶ್ರವಣದಿಂದ ನಾವು ಜಾಣರಾಗಿ, ಗರ್ವಕ್ಕೆ ಆಸ್ಪದಕೊಡದೆ, ಅತಿ ಪ್ರಸಂಗಗಳಿಗೆ ಹೋಗದೆ, ರಾಜನಿಷ್ಠಾ ಪೂರ್ವಕವಾದ ಸತ್ವವನ್ನು ತೋರಿಸಿ ನಮ್ಮ ಉದಾರ ಮತದ ಸಾರ್ವಭೌಮ ಸರಕಾರದಿಂದ ಆಂಗ್ಲ ಸಾಮ್ರಾಜ್ಯಾಂತ ರ್ಗತ ಸ್ವರಾಜ್ಯವ ಪಡೆಯುವ ಸುಯೋಗವನ್ನು ಬೇಗನೆ ತಂದುಕೊಡೆಂದು ಶ್ರೀ ಸದ್ಗುರುವನ್ನು ಪ್ರಾರ್ಥಿಸುವೆವು!

''ಸರ್ವೇಜನಾಃ ಸುಖಿನೋಭವಂತು''

ಶಾಂತಿಃ ಶಾಂತಿಃ ಶಾಂತಿಃ

**ಸಂಪೂರ್ಣ**

ಗಳಗನಾಥ ಸಮಗ್ರ ಸಾಹಿತ್ಯ

## ನಿಮ್ಮ ನೆನೆದಾಗಲೆ ಉದಯ

'ಗಳಗನಾಥ' ಹಾವೇರಿ ಜಿಲ್ಲೆಯ ಒಂದು ಹಳ್ಳಿ. ವೆಂಕಟೇಶ ತಿರಕೋ ಕುಲಕರ್ಣಿಯವರು ತಮ್ಮ ಈ ಹಳ್ಳಿಯ ಹೆಸರನ್ನು ಕಾವ್ಯನಾಮವಾಗಿ ಬಳಸುವ ಮೂಲಕ, ಅದನ್ನು ಸಾಹಿತ್ಯದಲ್ಲಿ ಚಿರಸ್ಥಾಯಿಗೊಳಿಸಿದರು.

ಧಾರವಾಡದ ಗಂಡುಮಕ್ಕಳ ಟ್ರೇನಿಂಗ್ ಕಾಲೇಜು ಇವರ ಸಾಹಿತ್ಯಿಕ ವ್ಯಕ್ತಿತ್ವವನ್ನು, ಅಗಡಿ ಆನಂದಾಶ್ರಮ ಇವರ ಆಧ್ಯಾತ್ಮಿಕ ವ್ಯಕ್ತಿತ್ವವನ್ನು ರೂಪಿಸಿದವು. ಈ ಎರಡೂ ಆಯಾಮಗಳಿ ಆಧಾರವಾದುದು ಅವರ ಕನ್ನಡ ಶಾಲೆಯ ಶಿಕ್ಷಕವೃತ್ತಿ. ಹೊಸಗನ್ನ ಸಾಹಿತ್ಯಿಕ ಪರಿಸರವನ್ನು ಮೈಸೂರು ಪ್ರದೇಶದಲ್ಲಿ ರಾಜರ ಆಸ್ಥಾ ವಿದ್ವಾಂಸರು ಸೃಷ್ಟಿಸಿದರೆ, ಉತ್ತರ ಕರ್ನಾಟಕದಲ್ಲಿ ಅಂತ ಪರಿಸರವನ್ನು ಕನ್ನಡ ಶಾಲೆಯ ಮಾಸ್ತರರು ಸೃಷ್ಟಿಸಿದರು. ಇವರ ಎದ್ದು ಕಾಣುವ ಹೆಸರು, ಗಳಗನಾಥ ಮಾಸ್ತರು.

೨೦ನೆಯ ಶತಮಾನದಲ್ಲಿ ಗದ್ಯಯುಗವನ್ನು ಆಳಿದುದ ಕಾದಂಬರಿ. ಹೀಗಾಗಿ ಈ ಶತಮಾನವನ್ನು "ಕಾದಂಬ ಪ್ರಧಾನಯುಗ" ವೆಂದು ಕರೆಯಬಹುದಾಗಿದೆ. ಇದು ನವೋದಯ ಪ್ರಗತಿಶೀಲ, ನವ್ಯವೆಂಬ ಮೂರು ಹಂತಗಳಲ್ಲಿ ಸಾಗಿ ಬಂದಿದ ಇವುಗಳಲ್ಲಿ ಪ್ರಗತಿಶೀಲವೆಂಬುದು ಒಂದು ಪ್ರಯೋಗವಾ ಉಳಿಯಿತೇ ಹೊರತು, ಪರಂಪರೆಯಾಗಿ ಬೆಳೆಯಲಿಲ್ಲ. ಇತ್ತೀಚೆ ನವ್ಯ ಕಾದಂಬರಿ ಬಂದು ಪರಂಪರೆಯಾಗಿ ಬೆಳೆಯುತ್ತಲಿದ್ದರೂ ಅದ ಸಂಖ್ಯೆ ಕಡಿಮೆ. ಆದುದರಿಂದ ಇಂದಿಗೂ ಕಾದಂಬರಿ ಕ್ಷೇತ್ರವನ ಬಹುಪಾಲು ವ್ಯಾಪಿಸಿದುದು ನವೋದಯಪ್ರಜ್ಞೆಯ ಕಾದಂಬರಿ. ಈ ಪ್ರಜ್ಞೆಯ ಮೂಲಪುರುಷರಲ್ಲಿ ಮುಖ್ಯವೆನಿಸಿದ್ದಾರೆ, ಕಾದಂಬ ಪಿತಾಮಹ ಗಳಗನಾಥರು.

ಸಾಹಿತ್ಯವನ್ನು ಸೃಷ್ಟಿಸುವವನು ಸಾಹಿತಿಯಾದರೂ ಅದ ವಾರಸುದಾರರು ಸಹೃದಯರು. ಈಗಿನಂತೆ ಪುಸ್ತಕದ ಉತ್ಪಾದನೆ ಅನುಕೂಲವಿಲ್ಲದ ಪ್ರಾಚೀನಕಾಲದಲ್ಲಿಯೂ ಇವರು ಉತ್ತಮ ಸಾಹಿ ಕೃತಿಗಳನ್ನು ತಲೆಮಾರಿನಿಂದ ತಲೆಮಾರಿಗೆ ಪ್ರತಿಮಾಡುತ್ತ ಮಾಡಿಸುತ್ತ ಬಂದಿದ್ದಾರೆ. ಹೀಗಿರುವಾಗ ಎಲ್ಲ ಬಗೆ ಅನುಕೂಲತೆಗಳನ್ನು ಹೊಂದಿರುವ ಇಂದಿನ ಕಾಲದವರಾದ ನಾ ಅವುಗಳ ಮರುಮುದ್ರಣ ವಿಷಯದಲ್ಲಿ ಹೆಚ್ಚು ಆಸಕ್ತಿವಹಿಸುವದು ತೀ ಸಹಜ. ಆದುದರಿಂದ, ಪ್ರಾಚೀನ ಹಸ್ತಪ್ರತಿಗಳ ಪರಿಷ್ಕರಣ - ಮುದ್ರಣ ಮರುಮುದ್ರಣದಂತೆ ನವೋದಯಕಾಲೀನ ಯಂತ್ರಪ್ರತಿಗಳನ್ನು ಮತ್ತೆ ಮತ್ತೆ ಅಚ್ಚಿಸಿ ಓದುಗರಿಗೆ ಒದಗಿಸುತ್ತಲಿದ್ದೇವೆ.

**ಎಂ. ಎಂ. ಕಲಬುರ್ಗಿ**
ಪ್ರಧಾನ ಸಂಪಾದಕ


ISBN 978-93-81822-41-8

Rs. 2000/- (Set of 6 Volumes)

ಗಳಗನಾಥರ ವರ್ಣಚಿತ್ರ ಕೃಪೆ : ಎಸ್.ಸಿ. ದೇಸಾಯಿ